ಮಹಾಕವಿ ಕಾಳಿದಾಸ ಪ್ರಣೀತ
ಮೂಲ ಶ್ಲೋಕಸಹಿತ

# ರಘುವಂಶ
# ಮಹಾಕಾವ್ಯ

(ಸಂಪೂರ್ಣ)

ಸಮಗ್ರ ಗದ್ಯಾನುವಾದ
ಸರ್ಗಗಳು : 1-19
ಶ್ಲೋಕ ಸಂಖ್ಯೆ : 1566

ಬಿ. ಗೋಪಾಲರಾವ್
ಎಂ.ಎ., ಬಿ.ಎಡ್.

ಶೈಲಶ್ರೀ ಸಾಹಿತ್ಯ ಪ್ರಕಾಶನ : ಮೈಸೂರು

ಓಂ

|| ಶ್ರೀಃ ||

ಓಂ ಶ್ರೀ ಮಹಾ ಗಣಪತಯೇ ನಮಃ
ಶ್ರೀ ದುರ್ಗಾಂಬಿಕಾ ದೇವಿಯೇ ನಮಃ
ಓಂ ಶ್ರೀ ರುಕ್ಮಿಣೀ ಪತಯೇ ನಮಃ
ಶ್ರೀ ಹರಿ ಓಂ ತತ್‌ಸತ್ ನಮಃ ಶಿವಾಯ

ಕಾಳಿದಾಸ ಪ್ರಣೀತ

# ರಘುವಂಶ ಮಹಾಕಾವ್ಯ ಕಥಾಮೃತ

## (ಸಂಸ್ಕೃತ ಮೂಲಶ್ಲೋಕ ಸಹಿತ)

ಸಮಗ್ರ ಗದ್ಯಾನುವಾದ ಪ್ರಾರಂಭಃ

## ಸಂಪೂರ್ಣ ಸರ್ಗ 1 ರಿಂದ 19 ಸರ್ಗಗಳು

**ಶ್ಲೋಕ ಸಂಖ್ಯೆ : 1566**

## ಪ್ರಥಮ ಸರ್ಗಃ
## ಮೊದಲನೆಯ ಸರ್ಗ

**1. ವಾಗಾರ್ಥಾವಿವ ಸಂಪ್ರಕ್ತೌ ವಾಗರ್ಥಪ್ರತಿಪತ್ತಯೇ |**
**ಜಗತಃ ಪಿತರೌವಂದೇ ಪಾರ್ವತೀ ಪರಮೇಶ್ವರೌ || ೧ ||**

ಜಗದ ಮಾತಾ ಪಿತರಾದ ಪಾರ್ವತೀ ಪರಮೇಶ್ವರರ ಪಾದಕಮಲಗಳಿಗೆ ನಾನು ನನ್ನ ಇಷ್ಟಸಿದ್ಧಿಗಾಗಿ ಎರಗುತ್ತೇನೆ. ಅವರು ನಿತ್ಯರು, ಸನಾತನರು, ಶಾಶ್ವತರು, ಆ ಶಿವ ಪಾರ್ವತಿಯರು ಮಾತಿನಲ್ಲಿ ಅರ್ಥವು ಬೆರೆತಿರುವಂತೆ, ಶಬ್ದದಲ್ಲಿ ಅರ್ಥವು ಸೇರಿರುವಂತೆ (ಶಬ್ದದಲ್ಲಿ ಧ್ವನಿಯು ಸೇರಿರುವಂತೆ) ಸಮ್ಮಿಳಿತರಾಗಿರುವರು. ವಾಕ್ಯದಲ್ಲಿ ವಾಕ್ಯಾರ್ಥವು (ವ್ಯಂಜಕಾರ್ಥವು ಸೇರಿರುವಂತೆ) ಹೊರಹೊಮ್ಮುವಂತೆ ಏಕೀಭಾವದಿಂದ ಐಕ್ಯವಾಗಿ ಬೆರೆತಿರುವರು. ಬಟ್ಟೆಯಲ್ಲಿ ದಾರವು ಓತಪ್ರೋತವಾಗಿ ಸೇರಿರುವಂತೆ ಜಗದ ತಾಯಿ ತಂದೆಯರು. ಅವರ ಸಂಬಂಧ ಎಡೆಬಿಡದೆ ನಿತ್ಯವಾಗಿದೆ. ಶಿವ ಮತ್ತು ಪಾರ್ವತಿಯರ ಅವರ ಅಂಶವೇ ಪ್ರತ್ಯಕ್ಷವಾಗಿ ಕಾಣುವ ಈ ಜಗತ್ತು. ಅದರ ಪಾಲನ ಕರ್ತೃಗಳೇ

ಅವರು. ಅವರೇ ಈ ಜಗತ್ತಿನ ಜನನೀ ಜನಕರು. ಅವರು ನನ್ನ ಮಾತಿಗೆ ವಿಶೇಷವಾದ ವಾಕ್‌ಪ್ರೌಢಿಮೆಯನ್ನು (ವಾಗ್ವಿಲಾಸವನ್ನು) ಕಾವ್ಯಶಕ್ತಿಯನ್ನು ಕೊಟ್ಟು ಹರಸುವಂತೆ ನಾನು ಶಿರಸಾಷ್ಟಾಂಗ ವಂದಿಸಿ ಬೇಡಿಕೊಳ್ಳುವೆನು (ರಾಗದಿಂದೆರಗುವೆನು). ಅವರು ನನ್ನ ಮಾನಸಶಕ್ತಿಯನ್ನು, ಬುದ್ಧಿಮತಿಯನ್ನು, ಧೀಶಕ್ತಿಯನ್ನು ಪ್ರಚೋದಿಸಿ ಅತಿಮಾನಸಕ್ಕೇರಿಸಲಿ.

ಈ ಸಗುಣರೂಪ ನಾಮಧೇಯವುಳ್ಳ, ಸಕಲ ಚರಚರಾತ್ಮಕವಾದ ಪ್ರಪಂಚವೆಲ್ಲವು ಪ್ರಕೃತಿ, ಪುರುಷರಾದ, ಅವ್ಯಯರಾದ ಶಿವಶಿವೆಯರ ಅಂಶವೆನ್ನುವುದು ಶಾಶ್ವತ ಸತ್ಯ. ಈ ಸತ್ಯ ವಚನಗಳ ತಿಳಿಬೆಳಕಿನಲ್ಲಿ, ಅಣುರೇಣು ತೃಣಕಾಷ್ಠಗಳಲ್ಲಿ ಶಿವಶಿವೆಯರ ದಿವ್ಯ ಸಾನಿಧ್ಯವು ಸಮರಸವಾಗಿ ಹರಡಿಕೊಂ(ವ್ಯಾಪಿಸಿಕೊಂಡು)ಡಿದೆ. ಹೀಗೆ ಸರ್ವವಸ್ತುಗಳ ಒಳಗೂ ಹೊರಗೂ ಹರಡಿಕೊಂಡಿರುತ್ತ ಅವರು ನಿತ್ಯವೂ ಶೋಭಿಸುತ್ತಿರುವರು.

ಅವರು ಈ ಕಣ್ಣಿಗೆ ಕಾಣುವ ಸಗುಣ ಬ್ರಹ್ಮದ, ಈ ಬ್ರಹ್ಮಾಂಡದ, ಜನನೀ ಜನಕರು, ಈ ಸಮಸ್ತ ಜೀವಕೋಟಿಯ ಮಾತಾಪಿತೃಗಳು. ಅವರು ಎಲ್ಲರನ್ನು ಪ್ರೇಮದಿಂದ ಸಲಹುವ ದಾತಾರರು, ರಕ್ಷಕರು, ಪಾಲಕರು.

**ವ್ಯಾಕರಣ ವಿಶೇಷ :** ಅನ್ವಯ : ವಾಗರ್ಥೌ ಇವ ಸಂಪೃಕ್ತೌ ಜಗತಃ ಪಿತರೌ ಪಾರ್ವತೀ ಪರಮೇಶ್ವರೌ ವಾಗರ್ಥ ಪ್ರತಿಪತ್ತಯೇ (ಅಹಂ) ವಂದೇ.

ವಾಕ್ಚ, ಅರ್ಥಶ್ಚ = ವಾಗರ್ಥೌ. ವಾಗರ್ಥೌಇವ = ವಾಗರ್ಥಾವಿವ. ವಾಗರ್ಥಯೋಃ ಪ್ರತಿಪತ್ತಿಃ ತಸ್ಯೈ। ವಾಗರ್ಥ ಪ್ರತಿಪತ್ತಯೇ। ಪಾರ್ವತೀ ಚ ಪರಮೇಶ್ವರಶ್ಚ— ಪಾರ್ವತೀ ಪರ। ಮೇಶ್ವರೌ॥ ವಂದತೇ—ವಂದೇತೇ—ವಂದಂತೇ। ವಂದಸೇ—ವಂದೇಥೇ—ವಂದಧ್ವೇ—ವಂದೇ—ವಂದಾವಹೇ—ವಂದಾಮಹೇ॥ ವದಿ = ಅಭಿವಾದನ ಸ್ತುತ್ಯೋ :—ಲಟ್—ಉತ್ತಮ ಪುರುಷೈಕವಚನರೂಪಮ್॥

ವಾಗರ್ಥಾವಿವ = ಶಬ್ದ ಮತ್ತು ಅರ್ಥಗಳಂತೆ. ಸಂಪೃಕ್ತೌ = ನಿತ್ಯವಾಗಿ ಕೂಡಿಕೊಂಡಿರುವ, ಜಗತಃ = ಲೋಕಕ್ಕೆ, ಪಿತರೌ = ತಂದೆತಾಯಿಗಳಾಗಿರುವ, ಪಾರ್ವತೀ ಪರಮೇಶ್ವರಾ = ಶಿವಪಾರ್ವತಿಯರನ್ನು, ವಾಗರ್ಥ ಪ್ರತಿಪತ್ತಯೇ = ಶಬ್ದಾರ್ಥಗಳ ತಿಳುವಳಿಕೆಗೋಸ್ಕರ (ತಿಳುವಳಿಕೆಗಾಗಿ) ವಂದೇ = ವಂದಿಸುತ್ತೇನೆ.

**2. ಕ್ವಸೂರ್ಯಪ್ರಭವೋ ವಂಶಃ ಕ್ವಚಾಲ್ಪ ವಿಷಯಾಮತಿಃ**
**ತಿ ತೀರ್ಷುರ್ದುಸ್ತರಂ ಮೋಹಾದುಡುಪೇನಾಸ್ಮಿ ಸಾಗರಮ್ ॥ ೨ ॥**

ಸೂರ್ಯನೇ ಆದಿಪುರುಷನಾಗಿರುವ ಜಗತ್ ಪ್ರಸಿದ್ಧವಾದ ಸೂರ್ಯವಂಶವು ಎಲ್ಲಿ (ಎಲ್ಲಿ ಸೂರ್ಯಪ್ರಭವ ವಂಶವಿದು) ಕೇವಲ ಅಲ್ಪವಿಷಯಗಳನ್ನು ತಿಳಿದಿರುವ ನನ್ನ ಧೀ ಶಕ್ತಿಯೆಲ್ಲಿ. (ಎಲ್ಲಿ ಕವಿಗಳ ಜನಪ ಬಯುಸಿ) ಕೇವಲ ಅಜ್ಞಾನದಿಂದ ದುಡುಕಿ, ದುಸ್ತರವಾದ ದಾಟಲು ಅಶಕ್ಯವಾದ ಮಹಾಸಾಗರವನ್ನು ಮರದ ದೋಣಿಯಲ್ಲಿ ಕುಳಿತು, ಮರದ ತೆಪ್ಪದಲ್ಲಿ ಕುಳಿತು ದಾಟಲು ಹೊರಟಿರುವ ಮಾನವನಂತೆ ದುಸ್ಸಾಹಸಕ್ಕೆ ಕೈಹಾಕಿರುವೆನು.

ಅವರ (ಇಕ್ಷ್ವಾಕು ವಂಶದ) ಮಹತ್ಕಾರ್ಯಗಳೇನು ? ಅದನ್ನು ವರ್ಣಿಸಲು ನನ್ನ ಪ್ರತಿಭೆ ತೀರಾ ಸಾಮಾನ್ಯವಾದುದು. ಸಣ್ಣ ದೋಣಿಯಲ್ಲಿ ಕುಳಿತು ವಿಸ್ತಾರವಾದ ಸಾಗರವನ್ನು ದಾಟಲು ಬಯಸಿದಂತೆ.

**ವ್ಯಾಕರಣ ವಿಶೇಷ :**(1) ಅನ್ವಯಃ ಸೂರ್ಯ ಪ್ರಭವಃ ವಂಶಃ ಕ್ವ ಅಲ್ಪ ವಿಷಯಾ-ಚ ಮೇ ಮತಿಃ ಕ್ವ। (ಅಹಂ)ದುಸ್ತರಂ ಸಾಗರಂ ಮೋಹಾತ್ ಉಡುಪೇನ ತಿತೀರ್ಷು ರಸ್ಮಿ॥

ಪ್ರಭವತಿ ಅಸ್ಮಾತ್ ಇತಿ ಪ್ರಭವಃ॥ ಸೂರ್ಯಃ ಪ್ರಭವಃ ಯಸ್ಯ ಸಃ ಸೂರ್ಯ ಪ್ರಭವಃ॥ ಅಲ್ಪಃ ವಿಷಯಃ ಯಸ್ಯಾಃ ಅಲ್ಪವಿಷಯಾ॥ ತರ್ತುಂ ಇಚ್ಛುಃ ತಿತೀರ್ಷುಃ॥ ದುಃಖೇನ ತರ್ತುಂ ಶಕ್ಯಃ, ದುಸ್ತರಃ ತಮ್॥ ಅಸ್ತಿ–ಸ್ತಃ—ಸಂತಿ॥ ಅಸಿ—ಸ್ಥಃ—ಸ್ಥ। ಅಸ್ಮಿ—ಸ್ವಃ—ಸ್ಮಃ॥ ಅಸ—ಭುವಿ—ಲಟ್—ಉ—ಪು—ಏಕವಚನಮ್॥

ಸೂರ್ಯಪ್ರಭವಃ = ಸೂರ್ಯನೇ ಆದಿಕಾರಣನಾಗಿರುವ ವಂಶಃ = ಕುಲವು. ಕ್ವ= ಎಲ್ಲಿ ಅಲ್ಪವಿಷಯಾ = ಅತ್ಯಲ್ಪವನ್ನು ತಿಳಿದಿರುವ, ಮತಿಃ = ನನ್ನ ಬುದ್ಧಿಯು, ಕ್ವ= ಎಲ್ಲಿ ದುಸ್ತರಂ = ದಾಟಲು ಅಸಾಧ್ಯವಾದ, ಸಾಗರಂ = ಸಮುದ್ರ, ಕಡಲು, ಮೋಹಾತ್ = ಅಜ್ಞಾನದಿಂದ, ಉಡುಪೇನ = ತೆಪ್ಪದಿಂದ, ತಿತೀರ್ಷು = ದಾಟಲು ಬಯಸುವವನು, ಅಸ್ಮಿ = ಆಗಿರುತ್ತೇನೆ, ಅಲಂಕಾರಃ ನಿದರ್ಶನಾಲಂಕಾರ.

**3. ಮಂದಃ ಕವಿಯಶಃ ಪ್ರಾರ್ಥೀ ಗಮಿಷ್ಯಾಮ್ಯುಪಹಾಸ್ಯತಾಮ್ ।**
**ಪ್ರಾಂಶುಲಭ್ಯೇ ಫಲೇ ಲೋಭಾದುದ್ಬಾಹುರಿವ ವಾಮನಃ ॥ ೩ ॥**

ಮಂದಬುದ್ಧಿಯುಳ್ಳವನಾದ ನಾನು ಕೀರ್ತಿಯನ್ನು ಬಯಸಿ, ಎತ್ತರದ ಪ್ರದೇಶದಲ್ಲಿರುವ ಫಲವನ್ನು ವಾಮನನು ಅಥವಾ ಕುಳ್ಳನಾದ ಓರ್ವ ವ್ಯಕ್ತಿ ತನ್ನ ಮೋಂಡು ಕೈಗಳಿಂದ ಕೀಳಲು ಪ್ರಯತ್ನಿಸಿದರೆ ನಗೆಗೆ ಈಡಾಗಲು ಸಾಧ್ಯವಿದೆ. ಅಂತೆಯೇ ನನ್ನ ಗತಿ, ಕಾವ್ಯ ರಚನೆಯ ಈ ಮಹತ್ಕಾರ್ಯದಲ್ಲಿ ನಾನು ಮಹಾಕವಿಗಳ ಅಪಹಾಸ್ಯಕ್ಕೆ ಒಳಗಾಗ ಬಹುದೆಂಬ ಶಂಕೆ ನನ್ನನ್ನು ಕಾಡಿಸುತ್ತಿದೆ. ಆದರೂ ನಾನು ನನ್ನ ಮನುಷ್ಯಪ್ರಯತ್ನವನ್ನು ಮುಂದುವರಿಸುವೆನು.

ಅನ್ವಯ :—ಮಂದಃ (ಅಪಿ) ಕವಿಯಶಃ ಪ್ರಾರ್ಥೀ ಅಹಂ ಪ್ರಾಂಶುಲಭ್ಯೇ ಲೋಭಾತ್ ಉದ್ಬಾಹುಃ ವಾಮನಃ ಇವ ಉಪಹಾಸ್ಯತಾಂಗಮಿಷ್ಯಾಮಿ॥

ಕವೇಃ ಯಶಃ। ಪ್ರಾರ್ಥಯಿತುಂ ಶೀಲಂ ಅಸ್ಯ ಪ್ರಾರ್ಥೀ। ಕವಿಯಶಸಃ ಪ್ರಾರ್ಥೀ॥ ಉಪಹಾಸ್ಯಸ್ಯ ಭಾವಃ। ಉಪಹಾಸ್ಯ ತಾ। ತಾಮ್॥ ಪ್ರಾಂಶುನಾ ಲಭ್ಯಃ। ತಸ್ಮಿನ್। ಉದ್ಗತೌ ಬಾಹೂ ಯಸ್ಯ ಸಃ ಉದ್ಬಾಹುಃ॥ ಗಮಿಷ್ಯತಿ—ಗಮಿಷ್ಯತಃ—ಗಮಿಷ್ಯಂತಿ। ಗಮಿಷ್ಯಸಿ—ಗಮಿಷಥಃ—ಗಮಿಷ್ಯಥ। ಗಮಿಷ್ಯಾಮಿ—ಗಮಿಷ್ಯಾವಃ—ಗಮಿಷ್ಯಾಮಃ॥ ಗಮ್ಲೃ—ಗತೌ—ಲೃಟ್—ಉ–ಪು–ಏಕವಚನಮ್—

ಮಂದಃ = ಮೂಢನಾದ ನಾನು—ಕವಿಯಶಃ ಪ್ರಾರ್ಥೀ = ಕವಿಯ ಕೀರ್ತಿಯನ್ನು ಬಯಸುವವನಾಗಿ ಪ್ರಾಂಶುಲಭ್ಯೇ = ಎತ್ತರವಾಗಿರುವ ವ್ಯಕ್ತಿಯಿಂದ ಹೊಂದಲು ಯೋಗ್ಯವಾದ, ಫಲೇ=ಹಣ್ಣಿನ ವಿಷಯದಲ್ಲಿ, ಲೋಭಾತ್=ಆಸೆಯಿಂದ, ಉದ್ಬಾಹುಃ=

ಕೆಳಲು ಎತ್ತಿದ ಕೈಯುಳ್ಳ, ವಾಮನ ಇವ = ಕುಳ್ಳನಂತೆ (ಕುಳ್ಳಯ್ಯನಂತೆ) ಉಪಹಾಸ್ಯ ತಾಂ = ಹಾಸ್ಯಕ್ಕೆ ಗುರಿಯಾಗು, ಗಮಿಷ್ಯಾಮಿ = ಹೊಂದುವೆನು.

**4. ಅಥವಾ ಕೃತವಾಗ್ದ್ವಾರೇ ವಂಶೇಸ್ಮಿನ್ ಪೂರ್ವ ಸೂರಿಭಿಃ ।**
**ಮಣೌ ವಜ್ರಸಮುತ್ಕೀರ್ಣೇ ಸೂತ್ರಸ್ಯೇ ವಾಸ್ತಿ ಮೇ ಗತಿಃ ॥**

ಆದರೆ ಒಂದು ವಿಷಯವು ಮೇದ್ಯವೆನಿಸುವುದು. ಈ ಮಹತ್ಕಾರ್ಯದ ಆದ್ಯ ಪ್ರವರ್ತಕರಾಗಿ ವಾಲ್ಮೀಕಿಯೇ ಮೊದಲಾದ ಆದಿಕವಿ ಕುಲತಿಲಕರು ಆದಿ ಕಾವ್ಯವಾದ ರಾಮಾಯಣ ಮಹಾಕಾವ್ಯವನ್ನು ಬರೆದು ಮಾರ್ಗವನ್ನು ಸುಗಮಗೊಳಿಸಿರುವರು. ರತ್ನವು ಅತಿ ಕಠಿಣವಿರುವುದು. ಆದರೆ ವಜ್ರದಿಂದ ಅದನ್ನು ಕೊರೆದು ವಾಗ್ದ್ವಾರ ವನ್ನು ವಿರಚಿಸಿರುವರು. ನಾನಾದರೋ ಈ ಮೊದಲೇ ಕೊರೆದಿಟ್ಟಿರುವ ರಂಧ್ರದಲ್ಲಿ ದಾರವನ್ನು ಪೋಣಿಸುವೆನು, ಸೂರ್ಯವಂಶವನ್ನು ವರ್ಣಿಸುತ್ತಾ ಅವರ ಮಾರ್ಗ ದರ್ಶನದಲ್ಲಿ ಮುನ್ನಡೆದು ಗುರಿ ಸೇರುವ ಹೆಬ್ಬಯಕೆಯನ್ನು ಹೊಂದಿರುವೆನು. ಹಿಂದಿನ ಪೂರ್ವಸೂರಿಗಳು ಆ ದಿಶೆಯಲ್ಲಿ ಬೆಳಕನ್ನು ಚೆಲ್ಲಿರುವರು. ಆದರಿಂದ ಬಾಗಿಲು ತೆರೆದಂತಾಗಿದೆ. ಅವರು ಹಾಕಿಕೊಟ್ಟ ಮಾರ್ಗದಲ್ಲಿ ಅವರ ಮಾರ್ಗದರ್ಶನದ ಬೆಳಕಿನಲ್ಲಿ ಮುಂದುವರಿಯುವೆನು. (ಸೆಗಣಿ ಸಾರಿಸಿದ ಮೇಲೆ ರಂಗೋಲೆ ಹಾಕಿದಂತೆ) ಆ ರತ್ನ ಗಳನ್ನು ದಾರದ ಸಹಾಯದಿಂದ ಪೋಣಿಸುತ್ತಾ ಹೋಗುವೆನು. ನಾನೀಗಲೇ ವಿಶ್ವ ವಿಖ್ಯಾತವಾದ ಸೂರ್ಯವಂಶವನ್ನು ಅಭಿವರ್ಣಿಸಲು ಆರಂಭಿಸುವೆನು.

ವಾಗೇವ ದ್ವಾರಂ/ಕೃತಂ ವಾಗ್ದ್ವಾರಂ ಯಸ್ಯಸಃ/ತಸ್ಮಿನ್ ॥ ಪೂರ್ವಾಶ್ಚತೇ ಸೂರಯಶ್ಚತ್ಯೈಃ ॥ ವಜ್ರೇಣ ಸಮುತ್ಕೀರ್ಣಃ ತಸ್ಮಿನ್ ॥ ಅಸ್ತಿ—ಅಸ—ಭುವಿ—ಲಟ್ ॥

ಪೂರ್ವಸೂರಿಭಿಃ = ಹಿಂದಿನ ಕವಿಗಳಾದ ವಾಲ್ಮೀಕಿ ಮೊದಲಾದವರಿಂದ ಕೃತವಾಗ್ ದ್ವಾರೇ = ಕಾವ್ಯದಲ್ಲಿರುವ ವಾಕ್ಯಗಳ ಮೂಲಕ ಅಸ್ಮಿನ್‌ವಂಶೇ = ಈ ಸೂರ್ಯ ನಿಂದುಂಟಾದ ಕುಲದಲ್ಲಿ. ವಜ್ರ. ಸಮುತ್ಕೀರ್ಣ = ವಜ್ರದಿಂದ ಕೊರೆಯಲ್ಪಟ್ಟ ಮಣೌ = ರತ್ನದಲ್ಲಿ. ಸೂತ್ರಸ್ಯ, ಇವ = ದಾರದಂತೆ, ಮೇ = ನನ್ನ ಗತಿಃ = ಪ್ರವೇಶವು, ಅಸ್ತಿ= ಇರುತ್ತದೆ.

**5. ಸೋsಹಮಾಜನ್ಮ ಶುದ್ಧಾನಾಂ ಅಫಲೋದಯ ಕರ್ಮಣಾಮ್ ।**
**ಆ ಸಮುದ್ರಕ್ಷಿತೀಶಾನಾಂ ಅನಾಕರಥವರ್ತ್ಮನಾಮ್ ॥ ೫ ॥**

ಅವರು ಹುಟ್ಟುವಿಕೆಯಿಂದಲೇ (ಜನ್ಮದಾರಭ್ಯ) ಪರಿಶುದ್ಧರು. ಎಲ್ಲಾ ಉತ್ತಮ ಸಂಸ್ಕಾರಗಳನ್ನು ಹೊಂದಿ ಆಜನ್ಮ ಶುದ್ಧರಾಗಿ ಬಾಳಿಬೆಳಗಿದ ಮಹಾಪುರುಷರವರು. ಎಷ್ಟೇ ಕಷ್ಟ ಬರಲಿ. ಅದೆಲ್ಲವನ್ನು ಸಹಿಷ್ಣುಗಳಾಗಿ ಸಹಿಸಿ ಫಲ ಸಿಗುವ ತನಕ ಕಾರ್ಯದಲ್ಲಿ ಮುನ್ನುಗ್ಗಿ ಕಾರ್ಯತತ್ಪರರಾಗಿ ವಾಂಛಿತ ಫಲವನ್ನು ಅನುಭೋಗಿಸಿದ ಮಹಾತ್ಮರು. ಸಕಲ ಪೃಥ್ವಿಗೆ ಒಡೆಯರಾಗಿ ಮೆರೆದ ಸಾರ್ವಭೌಮರು. ಅಮರಾಧಿಪತಿಯಾದ ಇಂದ್ರನ ಸಹಾಯಕ್ಕೆಂದು ಸ್ವರ್ಗಲೋಕದ ತನಕ ರಥ ಸಂಚಾರ ಮಾಡಿದವರು. ಅವರ ರಥದಿಂದೆದ್ದ

ಗಾಳಿ ಸ್ವರ್ಗದ ಬಾಗಿಲನ್ನು ತಟ್ಟುತ್ತಿತ್ತು. ಅವರು ಮಹೇಂದ್ರನ ಯುದ್ಧ ಹಾಗೂ ಶಾಂತಿಯ ಕಾರ್ಯದಲ್ಲಿ ವಿಶ್ವಕಲ್ಯಾಣದಲ್ಲಿ ಪಾಲ್ಗೊಂಡವರು. ಲೋಕಪಾಲಕರೊಂದಿಗೆ ಸಹಜೀವನ ನಡೆಸಿದವರು. ಸಹಬಾಳ್ವೆ ನಡೆಸಿದ ವಿಖ್ಯಾತರು. ಅವರ ಕೀರ್ತಿಯ ದುಂದುಭಿ ದಿಗ್‌ದಿಗಂತದಲ್ಲಿ ಮೊಳಗುತ್ತಿತ್ತು. ಅವರ ರಥ ಸಂಚಾರದವ್ಯಾಪ್ತಿ ಸ್ವರ್ಗಲೋಕದ ವರೆಗೆ ವ್ಯಾಪಿಸಿತ್ತು. ಸಮುದ್ರದಿಂದ ಆವರಿಸಿದ ವಸುಂಧರೆಯಲ್ಲಿ ಮಾತ್ರವಲ್ಲ, ಆಕಾಶ ಮಾರ್ಗದಲ್ಲಿ ಸಂಚರಿಸುತ್ತ ನಡೆದವರು. ಅವರ ಕಾರ್ಯವ್ಯಾಪ್ತಿ ಮರ್ತ್ಯಲೋಕ ಹಾಗೂ ಸ್ವರ್ಗಲೋಕದ ತನಕ ವ್ಯಾಪಿಸಿತು. ಅಂತಹ ಮಹಾವೀರರ ಚರಿತ್ರೆಯನ್ನು ಈ ರಘುವಂಶ ಕಾವ್ಯದಲ್ಲಿ ವರ್ಣಿಸಲು ಶಾರದೆಯ ಕರುಣೆಯಿಂದ ಹೊರಟಿರುವೆನು.

ಆಜನ್ಮನಃ = ಆಜನ್ಮ ॥ ಆಜನ್ಮ ಶುದ್ಧಾಃ । ತೇಷಾಮ್ ॥ ಫಲಸ್ಯ ಉದಯಃ । ಫಲೋದಯಮಭಿವ್ಯಾಪ್ಯ—ಅಫಲೋದಯಮ್ । ಅಫಲೋದಯಂ ಕರ್ಮಯೇಷಾಂ ತೇ—ಅಫಲೋದಯ ಕರ್ಮಾಣಃ । ತೇಷಾಮ್ । ಸಮುದ್ರಮಭಿ ವ್ಯಾಪ್ಯ ಅಸಮುದ್ರಮ್ । ಅಸಮುದ್ರಕ್ಷಿತಿಃ । ಆಸತೇಃ ಈಶಾಃ । ತೇಷಾಮ್ । ನಾಕಮಭಿವ್ಯಾಪ್ಯ । ಅನಾಕಮ್ । ರಥಸ್ಯವರ್ತ್ಮ ಅನಾಕಂರಥವರ್ತ್ಮಯೇಷಾಂ । ತೇ । ಅನಾಕರಥ ವರ್ತ್ಮಾನಃ । ತೇಷಾಂ ಅನಾ—ನಾಮ್ ॥

ಸಃ ಅಹಂ = ಆ ನಾನು. ಆಜನ್ಮ ಶುದ್ಧಾನಾಂ = ಹುಟ್ಟಿದಂದಿನಿಂದ ಪವಿತ್ರರಾದ, ಅಫಲೋದಯ ಕರ್ಮಣಾಂ = ಫಲಸಿದ್ಧಿಯಾಗುವವರೆಗೆ ಕಾರ್ಯಮಾಡುವ, ಆ ಸಮುದ್ರ ಕ್ಷಿತೀಶಾನಾಂ = ಸಮುದ್ರ ಪರ್ಯಂತವಿರುವ ಭೂಮಿಗೆ ಒಡೆಯರಾದ, ಅನಾಥಕರ ವರ್ತ್ಮನಾಂ = ಸ್ವರ್ಗದ ವರೆಗೆ ರಥ ಸಂಚಾರವುಳ್ಳ.

**6. ಯಥಾವಿಧಿಹುತಾಗ್ನೀ ನಾಂ ಯಥಾಕಾಮಾರ್ಚಿತಾರ್ಥಿನಾಮ್ ।**
**ಯಥಾಪರಾಧ ದಂಡಾನಾಂ ಯಥಾಕಾಲ ಪ್ರಬೋಧಿನಾಮ್ ॥**

ರಘುಕುಲದ ರಾಜರು ಆರ್ಯರ ಶಾಸ್ತ್ರವಿಹಿತವಾದ ಮಾರ್ಗಗಳಿಂದ ಯಜ್ಞಯಾಗಾದಿಗಳನ್ನು ಕಾಲದಲ್ಲಿ ವಿದ್ಯುಕ್ತವಾಗಿ ಮಾಡುತ್ತಿದ್ದರು. ದಕ್ಷಿಣಾಗ್ನಿ, ಗಾರ್ಹಪತ್ಯ, ಆಹವನೀಯವೆಂಬ ಮೂರು ವಿಧದ ಅಗ್ನಿಗಳು ಯಾಗದಲ್ಲಿ ಉಪಯೋಗಿಸಲ್ಪಡುತ್ತವೆ. ಇದರಿಂದ ತೃಪ್ತರಾದ ದೇವತೆಗಳು ಕಾಲಕಾಲದಲ್ಲಿ, ಋತುಋತುಗಳಲ್ಲಿ ಮಳೆಯನ್ನು ಸುರಿಸಿ ಕಾಪಾಡುತ್ತಿದ್ದರು. ಅದು ಸುಭಿಕ್ಷೆಯ ಕಾಲ, ಬರದ, ಕ್ಷೋಭೆಯ ಸುಳಿವಿಲ್ಲ. ಸಾಮಾಜಿಕ, ಆರ್ಥಿಕ, ಶೋಷಣೆಯಿರದ ಭವ್ಯಕಾಲ, ಭಯ, ಕೊಲೆ, ಸುಲಿಗೆಗಳ ಸುಳಿವಿರಲಿಲ್ಲ. ಎಲ್ಲೆಲ್ಲಿಯೂ ಶಾಂತಿ, ಭದ್ರತೆ ನೆಲೆಸಿತ್ತು. ಅತಿಥಿಗಳ ಮನಸರಿತು ಯಜಮಾನರು ಸೇವೆಮಾಡಿ ಸತ್ಕರಿಸುತ್ತಿದ್ದರು. ರಾಜನೀತಿ, ದಂಡನೀತಿಯನ್ನು ಸಮದೃಷ್ಟಿಯಿಂದ ರಾಜನು ನಿರ್ವಹಿಸುತ್ತಿದ್ದನು. ಭೇದಭಾವವಿಲ್ಲದೆ ತಪ್ಪಿಗೆ ತಕ್ಕ ಶಿಕ್ಷೆಯನ್ನು ವಿಧಿಸುತ್ತಿದ್ದನು. ಭ್ರಷ್ಟಾಚಾರ, ಲಂಚಗಳ ಹೆಸರೇ ಇರಲಿಲ್ಲ. ರಾಜನು ಬ್ರಾಹ್ಮಿಮುಹೂರ್ತದಲ್ಲಿ ಎದ್ದು ಜಾಗ್ರತನಾಗಿ ಪ್ರಜಾಪಾಲನೆಯನ್ನು ತನ್ನ ಕರ್ತವ್ಯವೆಂದು ತಿಳಿದು ಮಾಡುತ್ತಿದ್ದನು. ಶತ್ರುಗಳ ದಮನ ಕಾರ್ಯದಲ್ಲಿ ಬಹಳ ಜಾಗರೂಕ

ನಾಗಿದ್ದನು. ನೀತಿನಿಯಮವನ್ನು ಪ್ರಜೆಗಳು ಅತಿಕ್ರಮಿಸದೆ ನೆಮ್ಮದಿಯಿಂದ ಜೀವಿಸು ತ್ತಿದ್ದರು.

ವಿಧಿಂ ಅನತಿಕ್ರಮ್ಯ—ಯಥಾವಿಧಿ। ಯಥಾವಿಧಿ ಹುತಾಃ। ಯಥಾವಿಧಿ ಹುತಾಃ ಅಗ್ನಯಃ ಯೈಸ್ತೇ। ತೇಷಾಮ್। ಕಾಮಂ ಅನತಿಕ್ರಮ್ಯ—ಯಥಾಕಾಮಂ। ಯಥಾ ಕಾಮಂ ಅರ್ಚಿತಾಃ ಅರ್ಥಿನಃ ಯೈಸ್ತೇ। ತೇಷಾಮ್। ಅಪರಾಧಂ ಅನತಿಕ್ರಮ್ಯ— ಯಥಾಪರಾಧಂ। ಯಥಾಪರಾಧಂ ದಂಡಃ ಯೇಷಾಂತೇ। ಯ————ಡಾಃ। ತೇಷಾಮ್। ಕಾಲಂ ಅನತಿಕ್ರಮ್ಯ—ಯಥಾಕಾಲಂ। ಯಥಾಕಾಲಂ ಪ್ರಬೋಧಿನಃ। ತೇಷಾಮ್। ಪ್ರಬೋಧಃ ಏಷಾ ಮಸ್ತೀತಿ ಪ್ರಬೋಧಿನಃ॥

ಯಥಾವಿಧಿ ಹುತಾಗ್ನೀನಾಂ = ಶಾಸ್ತ್ರೋಕ್ತರೀತಿಯಿಂದ ಹೋಮಿಸಿದ ಅಗ್ನಿವುಳ್ಳ, ಯಥಾಕಾಮಾರ್ಚಿತಾರ್ಥಿನಾಮ್ = ಅವರವರ ಇಚ್ಛೆಯನ್ನು ಅನುಸರಿಸಿ ಪೂರೈಸಿದ ಮನೋರಥವುಳ್ಳ ಯಾಚಕರಿರುವ, ಯಥಾಪರಾಧಮ್ ದಂಡಾನಾಮ್ = ಅವರವರ ಅಪರಾಧಕ್ಕೆ ಅನುಗುಣವಾದ ಶಿಕ್ಷೆಯುಳ್ಳ, ಯಥಾಕಾಲ ಪ್ರಬೋಧಿನಾಂ = ಕಾಲಾನುಗುಣ ವಾದ ಜಾಗೃತಿಯಿರುವ.

**7. ತ್ಯಾಗಾಯ ಸಂಭೃತಾರ್ಥಾನಾಂ ಸತ್ಯಾಯ ಮಿತಭಾಷಿಣಾಮ್।**
**ಯಶಸೇ ವಿಜಿಗೀಷೂಣಾಂ ಪ್ರಜಾಯೈ ಗೃಹಮೇಧಿನಾಮ್॥**

ಆ ರಘುಕುಲದ ರಾಜರ ಚರಿತ್ರ್ಯ ಈ ತೆರನಾಗಿದೆ. ಅವರು ಸತ್ಪಾತ್ರರಿಗೆ ದಾನ ಮಾಡಲು ಧನವನ್ನು ಸಂಪಾದಿಸುತ್ತಿದ್ದರು. ಅವರು ಸ್ವಾರ್ಥಚಿಂತಕರಲ್ಲ. ಲೋಭಿಗಳಲ್ಲ. ಪರಹಿತವೇ ಅವರ ಧರ್ಮ. ತ್ಯಾಗಕ್ಕಾಗಿಯೆ ಧನವನ್ನು ಗಳಿಸುವ ಯಶೋವಂತರು. ಸತ್ಯವಚನರಾಗಬೇಕೆಂದು ಮಿತಭಾಷಿಗಳಾಗಿದ್ದರು. ಅಧಿಕಪ್ರಸಂಗಿಗಳಲ್ಲ, ಅಧಿಕವಾಗಿ ಮಾತನಾಡಿ ಕಾರ್ಯ ನೆರವೇರಿಸಲು ಅಸಮರ್ಥರಾಗಿ ಕೊನೆಗೆ ಮಿಥ್ಯಾಭಾಷಿಗಳೆಂಬ ಕೆಟ್ಟ ಹೆಸರಿಗೆ ಒಳಿಯಾಗುತ್ತಿರಲಿಲ್ಲ. ಅವರು ನುಡಿದಂತೆ ನಡೆಯುವವರು. ಅವರು ಕೀರ್ತಿ ಯನ್ನು ಬಯಸಿ ದಿಗ್ವಿಜಯಕ್ಕೆ ಹೊರಟು ಸಾಮ್ರಾಜ್ಯವನ್ನು ವಿಸ್ತರಿಸುತ್ತಿದ್ದರು. ಪಿತೃಋಣದ ನಿವೃತ್ತಿಗೋಸ್ಕರ ಅವರು ಗೃಹಸ್ಥರಾಗಿ, ಸಂತಾನವನ್ನು ಬಯಸುತ್ತಿದ್ದ ಸಂಸಾರಿಗಳು, ಕೇವಲ ಕಾಮ ತೃಪ್ತಿಗಾಗಿ ಮದುವೆಯಾಗುವ ವಿಷಯಲಂಪಟರಲ್ಲ, ಪರಸ್ತ್ರೀಯರನ್ನು ತಾಯಿಯಂತೆ, ಅಕ್ಕತಂಗಿಯರಂತೆ ಕಾಣುವ ಮನೋಬುದ್ಧಿಯುಳ್ಳ ಸಂಯಮಿಗಳು.

ಸಂಭೃತಾಃ ಅರ್ಥಾಃ ಯೈಸ್ತೇ। ತೇಷಾಮ್। ಮಿತಂ ಭಾಷಿತುಂ। ಶೀಲಂ ಯೇಷಾಂ। ಮಿತಭಾಷಿಣಃ। ತೇಷಾಮ್॥ ವಿಜೇತುಂ ಇಚ್ಛವಃ ವಿಜಿಗೀಷವಃ। ತೇಷಾಮ್। ಗೃಹೈಃ ಮೇಧಂತೇ ಇತಿ ಗೃಹ ಮೇಧಿನಃ। ತೇಷಾಮ್॥

ತ್ಯಾಗಾಯ = ಸತ್ಪಾತ್ರದಲ್ಲಿ ದಾನಮಾಡುವುದಕ್ಕಾಗಿ, ಸಂಭೃತಾರ್ಥಾನಾಂ = ಸಂಪಾದಿ ಸಿದ ಧನವುಳ್ಳ, ಸತ್ಯಾಯ = ಸತ್ಯಕ್ಕಾಗಿ. ಮಿತ ಭಾಷಿಣಾಂ = ಅಲ್ಪವಾಗಿ ಮಾತನಾಡುವ ಯಶಸೇ = ಕೀರ್ತಿಗೋಸ್ಕರ ವಿಜಿಗೀಷೂಣಾಂ = ದಿಗ್ವಿಜಯ ಮಾಡಲು ಬಯಸುವ ಪ್ರಜಾಯೈ = ಸಂತಾನಕ್ಕಾಗಿ, ಗೃಹಮೇಧಿನಾಂ = ಪತ್ನಿಯನ್ನು ಸ್ವೀಕರಿಸುವ.

**8. ಶೈಶವೇಽಭ್ಯಸ್ತ ಯೌವನೇ ವಿಷಯೈಷಿಣಾಮ್ |**
**ವಾರ್ಧಕೇ ಮುನಿವೃತ್ತೀನಾಂ ಯೋಗೇನಾಂತೇ ತನುತ್ಯಜಾಮ್ || ೮ ||**

ಶೈಶವ, ಬಾಲ್ಯ, ಕೌಮಾರ್ಯ, ಯೌವನ, ವಾರ್ಧಕ್ಯ ಅಥವಾ ಮುಪ್ಪು ಇವು ಪ್ರತಿಯೊಬ್ಬ ಮಾನವನ ಆಯುರ್ಮಾನದ ವಿಶಿಷ್ಟ ಅವಸ್ಥೆಗಳು. ಆ ರಘುನೃಪಾಲರು ಬಾಲ್ಯ ಮತ್ತು ಕೌಮಾರ್ಯದಲ್ಲಿ ರಾಗದಿಂದ ವಿದ್ಯೆಯನ್ನೋದಿ ಸಕಲ ವಿದ್ಯಾಪಾರಂಗತರಾಗುತ್ತಿದ್ದರು. ಅನಂತರ ಯೌವನದ ಹೊಸ್ತಿಲಲ್ಲಿ ಅನುರೂಪಳಾದ ಸತಿಯ ಕೈಹಿಡಿದು ಸಂಸಾರಕ್ಕೆ ಪದಾರ್ಪಣ ಮಾಡಿ ಗೃಹಸ್ಥಾಶ್ರಮ ಧರ್ಮವನ್ನು ಸಾರ್ಥಕ್ಯ ಮಾಡುತ್ತಾ ಯೋಗ್ಯ ಸಂತಾನವನ್ನು ಪಡೆದು ಪೃಥ್ವಿಗೆ ಆಧಾರಸ್ತಂಭಗಳಂತಿರುವ ಪುತ್ರರತ್ನರನ್ನು, ಪುತ್ರಿಯರನ್ನು ಪಡೆದು ಸುಖದ ಸುಪ್ಪತ್ತಿಗೆಯಲ್ಲಿ ತೇಲಾಡುವರು. ಅವರು ಸಂಸಾರ ಸಾರೋದಯರು. ಮಾನವ ಧರ್ಮವನ್ನು ಜಗತ್ತಿಗೆ ಸಾರಬಲ್ಲ ಧರ್ಮನಿಷ್ಠರು. ಭಾರತ ಜ್ಯೇಷ್ಠರು. ವ್ಯಕ್ತಿತ್ವದಲ್ಲಿ ಮೇರುಸದೃಶರು. ಮುಪ್ಪು, ಕಾಣಿಸಿಕೊಂಡಾಗ ವಾನಪ್ರಸ್ಥಾಶ್ರಮವನ್ನು (ತುರೀಯ ಆಶ್ರಮ) ತಾವಾಗಿ ಸ್ವೀಕರಿಸಿ ಕಾಡಿಗೆ ತೆರಳಿ ಅಲ್ಲಿ ಮುನಿವೃತ್ತಿಯನ್ನು ಕೈಹಿಡಿದು ತಪಸ್ಸು ಮಾಡುವರು. ಕಡೆಗೆ ಯೋಗದಿಂದ ಮೃಣ್ಮಯವಾದ ದೇಹವನ್ನು ತ್ಯಜಿಸಿ ಪರಶಿವನ ಸಾನಿಧ್ಯವನ್ನು ಪಡೆಯುವ ಪುನೀತರು. ಅವರು ವಾನಪ್ರಸ್ಥರಾದಾಗ ಅಷ್ಟಾಂಗ ಯೋಗದ ನಿಯಮವನ್ನು ಅಭ್ಯಾಸ ಮಾಡುವರು (ಪ್ರಾಣಾಯಾಮವನ್ನು) ರಾಜಯೋಗವನ್ನು ಅರಿತ ರಾಜಯೋಗಿಗಳಾದ ರಾಜರ್ಷಿಗಳವರು.

ಶಿಶೋರ್ಭಾವಮ್ ಶೈಶವಂ । ತಸ್ಮಿನ್ । ಅಭ್ಯಸ್ತಾಃ ವಿದ್ಯಾಃ ಯೈಸ್ತೇ । ತೇಷಾಮ್ । ಯೂನಃ ಭಾವಃ ಯೌವನಂ । ತಸ್ಮಿನ್ । ವಿಷಯಾನ್ ಏಷಿತುಂ ಶೀಲಮೇಷಾಮ್ । ತೇಷಾಂ । ವೃದ್ಧಸ್ಯಭಾವಃ ವಾರ್ಧಕಂ । ತಸ್ಮಿನ್ । ಮುನೀನಾಂ ವೃತ್ತಯಃ ಯೇಷಾಂತೇ ಮುನಿವೃತ್ತಯಃ—ತೇಷಾಮ್ । ತನುಂತ್ಯಜಂತೀತಿ ತನುತ್ಯಜಃ । ತೇಷಾಮ್ ॥

ಶೈಶವಾ = ಬಾಲ್ಯದಲ್ಲಿ, ಅಭ್ಯಸ್ತ ವಿದ್ಯಾನಾಂ = ಅಭ್ಯಾಸಮಾಡಿದ ವಿದ್ಯೆಗಳುಳ್ಳ, ಯೌವನೇ = ತಾರುಣ್ಯದಲ್ಲಿ ವಿಷಯೈಷಿಣಾಂ = ಭೋಗಾಭಿಲಾಷಿಗಳಾದ, ವಾರ್ಧಕೇ = ವೃದ್ಧಾಪ್ಯದಲ್ಲಿ, ಮುನಿವೃತ್ತೀನಾಂ = ಆ ಮುನಿಗಳ ಆ ಚರಣೆಯಂತೆ ಆಚರಣೆಯುಳ್ಳ, ಅಂತೇ = ಅಂತ್ಯಕಾಲದಲ್ಲಿ, ಯೋಗೇನ=ಪರಮಾತ್ಮ ಧ್ಯಾನದಿಂದ, ತನುತ್ಯಜಾಂ=ಶರೀರವನ್ನು ಬಿಡುವ.

**9. ರಘೂಣಾಮನ್ವಯಂ ವಕ್ಷ್ಯೇ ತನುವಾಗ್ವಿಭವೋಽಪಿಸನ್ |**
**ತದ್ಗುಣೈಃ ಕರ್ಣಮಾಗತ್ಯ ಚಾಪಲಾಯ ಪ್ರಚೋದಿತಃ || || ೯ ||**

ನಾನು ಅಲ್ಪಮತಿ. ಅಲ್ಪವಾದ ವಾಗ್ವಿಭವ ಹೊಂದಿರುವವನು. ಕಾವ್ಯ ನಿರ್ಮಾಣದ ಹಾದಿಯಲ್ಲಿ ಪ್ರವೃತ್ತನಾದರೂ ವಾಕ್‌ಸರಣಿಗಳ ವಾಗ್ಜಾಲವುಳ್ಳವನಲ್ಲ. ಆದರೂ ಆ ರಘುಕುಲದ ರಾಯರ ಉತ್ತಮ ಗುಣಗಳು ನನ್ನ ಕಿವಿವರೆಗೆ ಬಂದು ಈ ಚಪಲ ಕರ್ಮವನ್ನು ಮಾಡೆಂದು ಪ್ರೇರೇಪಿಸುತ್ತಲಿವೆ. ಅವರ ಶ್ರೇಷ್ಠವಾದ, ಉದಾತ್ತವಾದ ಚರಿತ್ರೆಯಗುಣ ಶ್ರವಣದಿಂದ ಆಕರ್ಷಿತನಾಗಿ, ವಿಷಯಪ್ರಚೋದಿತನಾಗಿ ಅತಿ ಉತ್ಸಾಹ

ದಿಂದ ರಘುವಂಶಜರ ಚರಿತೆಯನ್ನು ಹೇಳಲು ಹೊರಟಿರುವೆನು. ಅದನ್ನೀಗ ಪ್ರಾರಂಭಿಸುತ್ತೇನೆ

ಅನ್ವಯ :—ಸಃ ಅಹಮ್ ಆಜನ್ಮ——— ತನುತ್ಯಜಾಂ ರಘೂಣಾಮ್ ಅನ್ವಯಂ ತನುವಾಗ್ವಿಭವಃ ಅಪಿಸನ್ ವಕ್ಷ್ಯೇ ತದ್‌ಗುಣೈಃ (ಏವ) ಕರ್ಣಮ್ ಆಗತ್ಯ (ಅಹಂ) ಚಾಪಲಾಯ ಪ್ರಚೋದಿತಃ ॥

ವಕ್ಷ್ಯತೇ = ವಕ್ಷ್ಯೇತೇ—ವಕ್ಷ್ಯಂತೇ ಇತ್ಯಾದಿ. ವಚಪರಿಭಾಷಣೇ—ಲೃಟ್ । ಉ—ಪು—ಏ । ವಾಚಾಂವಿಭವಃ । ತನುಃ ವಾಗ್ವಿಭವಃ ಯಸ್ಯಸಃ । ತೇಷಾಂಗುಣಾಂ—ತದ್ಗುಣಾಃ, ತೈಃ ।

ಸೋಽಹಂ = ಆ ನಾನು. ತನುವಾಗ್ವಿಭವೋಽಪಿ = ಅತ್ಯಲ್ಪವಾದ ವಾಕ್ಸರಣಿಯುಳ್ಳವನು ಆದರೂ, ತದ್ಗುಣೈಃ = ಆ ರಘುವಂಶದವರ ಶ್ರೇಷ್ಠಗುಣಗಳಿಂದ ಕರ್ಣಂ ಆಗತ್ಯ= ಕಿವಿಯ ಸಮೀಪಕ್ಕೆ ಬಂದು, ಚಾಪಲಾಯ = ವಿಚಾರಿಸದೇ ಮಾಡುವ ಚಪಲಕಾರ್ಯಕ್ಕೆ, ಪ್ರಚೋದಿತಃ = ಪ್ರೇರಿತನಾಗಿ, ರಘೂಣಾಂ = ರಘುಕುಲದವರ, ಅನ್ವಯಂ = ವಂಶ ಚರಿತ್ರೆಯನ್ನು, ವಕ್ಷ್ಯೇ = ವಿವರಿಸಿ ಹೇಳುವೆನು.

**10. ತಂ ಸಂತಃಶ್ರೋತುಮರ್ಹಂತಿ ಸದ ಸದ್ವ್ಯಕ್ತಿ ಹೇತವಃ ।**
**ಹೇಮ್ನಃ ಸಂಲಕ್ಷ್ಯತೇ ಹ್ಯಗ್ನೌವಿಶುದ್ಧಿಃ ಶ್ಯಾಮಿಕಾಪಿ ವಾ ॥ ॥ ೧೦ ॥**

ಸಜ್ಜನರಾದ, ಗುಣದೋಷಗಳನ್ನು ವಿಮರ್ಶೆಮಾಡಿ ತಿಳಿಯಬಲ್ಲ ವಿದ್ವಾಂಸರು ನನ್ನ ಈ ರಘುವಂಶ ಕಾವ್ಯವನ್ನು ಕೇಳಲು ಸಮರ್ಥರಾದ ಅಧಿಕಾರಿಗಳು. ಇದಕ್ಕೆ ಅಗ್ನಿಯೇ ದೃಷ್ಟಾಂತ. ಚಿನ್ನವು ಅತ್ಯಂತ ಶ್ರೇಷ್ಠವಾದ ಲೋಹ. ಆದರೆ ಅದರಲ್ಲಿ ಮಿಶ್ರ ಲೋಹಗಳು ಸೇರಿವೆಯೋ, ಶುದ್ಧವಾಗಿರುವುದೋ ಏನೆಂದು ತಿಳಿಯಲು ಅಗ್ನಿಯಲ್ಲಿಟ್ಟು ಪುಟಹಾಕಿ ತಿಳಿಯುವರು. ಆಗ ಅದು ಅಪ್ಪಟ ಚಿನ್ನವೋ, ಬೆಟ್ಟೆಚಿನ್ನವೋ ಏನೆಂದು ತಿಳಿಯಲು ಅಗ್ನಿಪರೀಕ್ಷೆಯ ಮೂಲಕ ಸಮರ್ಥರಾಗುತ್ತಾರೆ. ಅಂತೆಯೇ ಸಜ್ಜನರಾದ ವಿದ್ಯಾಪಕ್ಷಪಾತಿಗಳು, ನಿಷ್ಪಕ್ಷಪಾತ ದೃಷ್ಟಿಯಿಂದ ಪರಿಶೀಲಿಸಿ ದೋಷಾ ದೋಷಗಳನ್ನು, ಗುಣಾವಗುಣಗಳನ್ನು ಹೊರಗೆಡಹಲಿ.

ಅನ್ವಯ : ಸದ ಸದ್ವ್ಯಕ್ತಿ ಹೇತವಃ ಸಂತಃ ತಂ ಶ್ರೋತುಮರ್ಹನ್ತಿ । ಹೇಮ್ನಃ ಹಿ ವಿಶುದ್ಧಿಃ ಅಪಿವಾ ಶ್ಯಾಮಿಕಾ ಅಗ್ನೌಸಂಲಕ್ಷ್ಯತೇ ॥ ಸಚ್ಚ, ಅಸಚ್ಚ, ಸದಸತ್ । ಸದಸತಃ ವ್ಯಕ್ತಿಃ ತಸ್ಯಾಃ ಹೇತವಃ । ಅರ್ಹಂತಿ—ಅರ್ಹ— ಪೂಜಾಯಾಂ—ಲಟ್—ಪ್ರ—ಪು—ಬ ॥ ಸಮ್ ಉಪಸರ್ಗ, ಲಕ್ಷ್ಯತೇ—ಲಕ್ಷ— ದರ್ಶನಾಂಕನಯೋ—ಕರ್ಮಣಿ—ಲಟ್—ಪ್ರ. ಪು. ಏ ॥

ಸದಸದ್ವ್ಯಕ್ತಿ ಹೇತವಃ = ಒಳ್ಳೆಯದು, ಕೆಟ್ಟುದು ಇವನ್ನು ತಿಳಿದುಕೊಳ್ಳುವ ಸಾಮರ್ಥ್ಯವಿರುವ, ಸಂತಃ = ಸಜ್ಜನರು, ಸಾಧು ಜನರು, ತಂ = ಈ ಕಾವ್ಯವನ್ನು ಶ್ರೋತುಂ=ಕೇಳಲು, ಅರ್ಹಂತಿ = ಯೋಗ್ಯರಾಗುತ್ತಾರೆ, ಹೇಮ್ನಃ = ಚಿನ್ನದ, ವಿಶುದ್ಧಿಃ = ದೋಷರಹಿತವಾದ ಸ್ವರೂಪವಾಗಲಿ, ಶ್ಯಾಮಿಕಪಿವಾ = ಇತರ ಲೋಹದ ಮಿಶ್ರಣ ವಾಗಲಿ, ಅಗ್ನೌ= ಬೆಂಕಿಯಲ್ಲಿ, ಸಂಲಕ್ಷ್ಯತೇ = ತೋರುತ್ತದೆ.

**11. ವೈವಸ್ವತೋ ಮನುರ್ನಾಮಮಾನನೀಯೋ ಮನೀಷಿಣಾಂ ।**
**ಆಸೀನ್ಮಹೀಕ್ಷಿತಾಮಾದ್ಯಃ ಪ್ರಣವಶ್ಛಂದಸಾಮಿವ ॥ ॥ ೧೧ ॥**

ನಾಲ್ಕು ವೇದಗಳಿಗೆ ಎಲ್ಲಾ ಬ್ರಹ್ಮೋಕ್ತಿಗಳಿಗೆ ಮೊದಲ ಶುಭಕರವಾದ ಮಂಗಲಕರವಾದ, ಅತ್ಯಂತ ಪ್ರಶಸ್ತವಾದ ಬೀಜಾಕ್ಷರವೇ ಓಂಕಾರವು. ಹೀಗೆ ಅ, ಉ, ಮಕಾರಗಳಿಂದ ಕೂಡಿದ ಓಂಕಾರದಿಂದ ಮಾನವರಿಗೆ ಮಂಗಳಕರವಾದ ಚತುರ್ವೇದಗಳು ಪ್ರಾರಂಭವಾಗುವಂತೆ ಈ ವಸುಂಧರೆಯನ್ನು ಆಳಿದ ಮೊದಲ ಚಕ್ರವರ್ತಿಯೆಂದರೆ ವೈವಸ್ವತ ಮನುಚಕ್ರವರ್ತಿಯು. ಅವನು ಜಗತ್ತನ್ನು ಬೆಳಗುವ ಆದಿತ್ಯನಿಂದ ಲೋಕದಲ್ಲಿ ಉದಿಸಿದನು. ಅವನು ಅಖಿಲ ವಿಶ್ವಕ್ಕೇ ಮೊದಲಿಗನಾದ ಪ್ರಥಮ ಮಾನವ ಚಕ್ರವರ್ತಿ. ಅವನು ಮಹಾನ್ ಜ್ಞಾನನಿಧಿ. ಜ್ಞಾನಿಗಳ ಮಧ್ಯೆ ಮಹಾಜ್ಞಾನಿಯಾಗಿ, ಜ್ಞಾನಿಗಳಿಂದ, ಬುಧಜನರಿಂದ, ವಿದ್ವಾಂಸರಿಂದ ಸೇವಿತನಾಗಿ ಭೂತಲಾಗ್ರದಲ್ಲಿ ರಾರಾಜಿಸುತ್ತಿದ್ದನು. ಅವನು ಜ್ಞಾನ ಸೂರ್ಯನು. ವಿಶ್ವದ ಎಲ್ಲಾ ರಾಜರಿಗೂ ಮೊದಲಿಗನಾಗಿ ಆದಿಮನುವೆನಿಸಿರ್ದನು. ಅವನು ಮನುಕುಲಕ್ಕೆ ಭೂಷಣಪ್ರಾಯನು. ಸೂರ್ಯವಂಶದ ಮೂಲಪುರುಷನು ಸೂರ್ಯದೇವನು. ಆ ವಂಶದಲ್ಲಿ ಹುಟ್ಟಿ ಭಾರತದೇಶವನ್ನು ಆಳಿ ಆದರ ಕೀರ್ತಿ ಸೌರಭವನ್ನು ವಿಶ್ವದ ಎಲ್ಲೆಲ್ಲಿಗಳಲ್ಲಿ ಪಸರಿಸಿ ಭಾರತ ಜ್ಯೇಷ್ಠನೆಂದು ವಿಖ್ಯಾತನಾದ ಮಹಾನುಭಾವನು ವೈವಸ್ವತ ಮನುವೆಂದು ಪ್ರಸಿದ್ಧಿ ಪಡೆದವನು.

ವಿವಸ್ವತಃ ಅಪತ್ಯಂ, ಪುಮಾನ್ = ವೈವಸ್ವತಃ । ಮನಸಃ ಈ ಷಿಣಃ = ಮನೀಷಿಣಃ । ತೇಷಾಂ । ಆಸೀತ್—ಆಸ್ತಾಂ—ಆಸನ್ । ಆಸೀಃ—ಆಸ್ತಂ—ಆಸ್ತ ॥ ಆಸಂ—ಆಸ್ವ—ಆಸ್ಮ—। ಅಸ—ಭುವಿ—ಲಟ್—ಪ್ರ—ಪು—ಏ—। ಮಹೀಂಕ್ಷಯಂತಿ ಇತಿ ಮಹೀಕ್ಷಿತಃ । ತೇಷಾಮ್ ॥

ಮನೀಷಿಣಾಂ = ವಿದ್ವಾಂಸರಿಗೆ, ಮಾನನೀಯಃ = ಪೂಜ್ಯನಾದ, ಛಂದಸಾಂ = ವೇದಗಳಿಗೆ (ಛಂದಃಪದ್ಯೇಚವೇದೇಚ ಎಂದು ಕೋಶ) ಪ್ರಣವಃ ಇವ = ಓಂಕಾರದಂತೆ, ಮಹೀಕ್ಷಿತಾಂ = ರಾಜರಿಗೆ, ಆದ್ಯಃ = ಮೊದಲನೆಯವನಾದ, ವೈವಸ್ವತೋನಾಮ = ಸೂರ್ಯನ ಮಗನಾದ ವೈವಸ್ವತನೆಂದು ಪ್ರಸಿದ್ಧನಾಗಿರುವ, ಮನುಃ = ಮನು ಎಂಬವನು, ಆಸೀತ್ = ಇದ್ದನು.

ಪ್ರಾಚೀನ ಭಾರತೀಯ ಇತಿಹಾಸದಲ್ಲಿ ಕೇಳಿಬರುವ ಒಟ್ಟು 14 ಮಂದಿ ಮನುಗಳ ಹೆಸರುಗಳು: 1 ಸ್ವಾಯಂಭು. 2 ಸ್ವಾರೋಚಿಷ. 3 ಔತ್ತಮಿ. 4 ತಾಪಸ. 5 ರೈವತ. 6 ಚಾಕ್ಷುಷ. 7 ವೈವಸ್ವತಸಾವರ್ಣ. 8 ದಕ್ಷಸಾವರ್ಣ. 9 ಬ್ರಹ್ಮಸಾವರ್ಣ. 10 ಧರ್ಮಸಾವರ್ಣ. 11 ರುದ್ರಸಾವರ್ಣ. 12 ರೌಪ್ಯಸಾವರ್ಣ. 13 ದೈವಸಾವರ್ಣ. 14 ಇಂದ್ರಸಾವರ್ಣಮನು. (ವಿವಸ್ವತ = ಸೂರ್ಯ)

**12. ತದನ್ವಯೇ ಶುದ್ಧಿಮತಿ ಪ್ರಸೂತಃ ಶುದ್ಧಿಮತ್ತರಃ ।**
**ದಿಲೀಪ ಇತಿ ರಾಜೇಂದುರಿಂದುಃ ಕ್ಷೀರನಿಧಾವಿವ ॥ ॥ ೧೨ ॥**

ಆ ನಿರ್ಮಲವಾದ, ಅತಿ ಪವಿತ್ರವಾದ, ಆ ಮನುಕುಲದಲ್ಲಿ ಅತ್ಯಂತ ಶುದ್ಧ ಚಾರಿತ್ರ್ಯವುಳ್ಳ ದಿಲೀಪನೆಂಬ ರಾಜನು ಕ್ಷೀರಸಾಗರದಲ್ಲಿ ಚಂದ್ರನು ಉದಿಸಿ ಪ್ರಕಾಶಿತನಾದಂತೆ ಹುಟ್ಟಿ ಇಳೆಯಲ್ಲಿ ಶೋಭಿಸಿದನು. ಈ ಹಿಂದೆ ಮಂದರ ಪರ್ವತವನ್ನು ಕಡೆಗೋಲಾಗಿ ಮಾಡಿ ವಾಸುಕಿಯೆಂಬ ಸರ್ಪವನ್ನು ಹಗ್ಗವನ್ನಾಗಿ ಮಾಡಿ ದೇವಾಸುರರು ಕ್ಷೀರಸಾಗರವನ್ನು ಕಡೆದರು. ಆಗ ಹೊಳೆ ಹೊಳೆಯುತ್ತ ಬೆಳಗುತ್ತಿರುವ ಅಮೃತಕಿರಣನಾದ, ಪ್ರಕಾಶಮಾನನಾದ, ಲೋಕವನ್ನು ಬೆಳಗುವ ಚಂದ್ರಮನು ಉದಿಸಿದನು. ಅವನಂತೆಯೇ ತೇಜಸ್ವಿಯಾದ ದಿಲೀಪ ಸಾರ್ವಭೌಮನು ರಾಜವಂಶಕ್ಕೆ ಭೂಷಣಪ್ರಾಯನಾಗಿ ಇಳೆಯಲ್ಲಿ (ಪೃಥ್ವಿಯಲ್ಲಿ) ಶೋಭಿಸಿದನು.

ಅನ್ವಯಃ—ಶುದ್ಧಿಮತಿ ತದನ್ವಯೇ ಶುದ್ಧಿಮತ್ತರಃ ದಿಲೀಪಇತಿ ರಾಜೇಂದುಃ ಕ್ಷೀರನಿಧೌ ಇಂದುಃ ಇವ ಪ್ರಸೂತಃ ॥

ತಸ್ಯ ಅನ್ವಯಃ, ತದನ್ವಯಃ, ತಸ್ಮಿನ್ । ಶುದ್ಧಿಃ ಅಸ್ಯಾಸ್ತೀತಿ ಶುದ್ಧಿಮಾನ್, ತಸ್ಮಿನ್ । ಅತಿಶಯೇನ ಶುದ್ಧಿಮಾನ್, ಶುದ್ಧಿಮತ್ತರಃ । ರಾಜಾ ಇಂದುರಿವ, ರಾಜೇಂದುಃ ।

ಶುದ್ಧಿಮತಿ = ಅತಿ ಪವಿತ್ರವಾದ, ತದನ್ವಯೇ = ಆ ಮನುವಿನ ವಂಶದಲ್ಲಿ ಶುದ್ಧಿಮತ್ತರಃ = ಅತ್ಯಂತ ಶುದ್ಧಿಯುಳ್ಳ, ದಿಲೀಪ ಇತಿ = ದಿಲೀಪನೆಂಬ ರಾಜೇಂದುಃ = ರಾಜಶ್ರೇಷ್ಠನು, ಕ್ಷೀರನಿಧೌ = ಕ್ಷೀರಸಮುದ್ರದಲ್ಲಿ, ಇಂದುರಿವ = ಚಂದ್ರನಂತೆ, ಪ್ರಸೂತಃ = ಹುಟ್ಟಿದನು.

**13. ವ್ಯೂಢೋರಸ್ಕೋ ವೃಷಸ್ಕಂಧಃ ಶಾಲಪ್ರಾಂಶುರ್ಮಹಾಭುಜಃ ।**
**ಆತ್ಮಕರ್ಮಕ್ಷಮಂ ದೇಹಂ ಕ್ಷಾತ್ರೋ ಧರ್ಮ ಇವಾಶ್ರಿತಃ ॥ ೧೩ ॥**

ಆ ದಿಲೀಪ ಚಕ್ರವರ್ತಿಯು ಕೋಮಲಗಾತ್ರನು. ಮಹಾಪುರುಷರ ಸಕಲ ಲಕ್ಷಣಗಳನ್ನು ಪರಿಪೂರ್ಣವಾಗಿ ಪಡೆದ ಮಹಾನುಭಾವನು. ವಿಶಾಲವಾದ ಎದೆ, ಎತ್ತಿನ ಭುಜದಂತೆ ಎತ್ತರವಾದ ಭುಜಗಳು ಸಾಲವೃಕ್ಷದ ದಿಂಡಿನಂತೆ (ಕಾಂಡದಂತೆ). ಉನ್ನತವಾದ ಶರೀರ. ಬಲು ನೀಳವಾದ ಬಾಹುಯುಗಗಳಿಂದ ಸೊಗಯಿಸುವ ದೇಹವನ್ನು ಹೊಂದಿ ರಾರಾಜಿಸುತ್ತಿದ್ದನು. ಅವನು ಸಾಕ್ಷಾತ್ ಕ್ಷತ್ರಿಯಧರ್ಮವೇ ಮೂರ್ತಿಮತ್ತಾಗಿ ಎದ್ದು ಬಂದಂತೆ ಬಲದಿಂದ ಪ್ರವರ್ಧಮಾನನಾಗಿ ಶೋಭಿಸುತ್ತಿದ್ದನು (ರಾರಾಜಿಸುತ್ತಿದ್ದನು).

ಅನ್ವಯಃ (ದಿಲೀಪಃ) ವ್ಯೂಢೋರಸ್ಕಃ ವೃಷಸ್ಕಂಧ ಶಾಲಪ್ರಾಂಶುಃ ಮಹಾಭುಜಃ ಆತ್ಮಕರ್ಮ ಕ್ಷಮಂ ದೇಹಂ ಕ್ಷಾತ್ರಃ ಧರ್ಮಃ ಇವ ಆಶ್ರಿತಃ ॥

ವ್ಯೂಢಂ ವಿರಃ ಯಸ್ಯಸಃ ವ್ಯೂಢೋರಸ್ಕಃ । ವೃಷಸ್ಯಸ್ಕಂಧ ಇವ, ಸ್ಕಂಧಯಸ್ಯಸಃ ವೃಷಸ್ಕಂಧಃ । ಶಾಲ ಇವ ಪ್ರಾಂಶುಃ ಶಾಲ ಪ್ರಾಂಶುಃ । ಮಹಾಂತೌ ಭುಜೌಯಸ್ಯಸಃ । ಆತ್ಮನಃ ಕರ್ಮ, ತಸ್ಯ ಕ್ಷಮಃ, ತಮ್ । ಕ್ಷತ್ರಸ್ಯ ಅಯಂಕ್ಷಾತ್ರಃ ॥

ವ್ಯೂಢೋರಸ್ಕಃ = ವಿಶಾಲವಾದ ಎದೆಯುಳ್ಳ, ವೃಷಸ್ಕಂಧಃ = ಎತ್ತಿನ ಭುಜದಂತೆ ಎತ್ತರವಾದ ಭುಜವುಳ್ಳ, ಶಾಲಪ್ರಾಂಶುಃ = ಮರದಂತೆ ಎತ್ತರನಾದ, ಮಹಾಭುಜಃ =

ನಿಡಿದಾದ ತೋಳುಳ್ಳ, ಆಜಾನುಬಾಹು, ಆತ್ಮಕರ್ಮಕ್ಷಮಂ = ತನ್ನ ಕಾರ್ಯಗಳಿಗೆ ಅನುರೂಪವಾದ, ದೇಹಂ = ದೇಹವನ್ನು, ಆಶ್ರಿತಃ = ಹೊಂದಿರುವ, ಕ್ಷಾತ್ರಃ = ಕ್ಷತ್ರಿಯ ಸಂಬಂಧಿಯಾದ ಧರ್ಮ, ಇವ = ಧರ್ಮಸ್ವರೂಪನಾಗಿ.

**14. ಸರ್ವಾತಿರಿಕ್ತ ಸಾರೇಣ ಸರ್ವತೇಜೋಭಿ ಭಾವಿನಾ ।**
**ಸ್ಥಿತಃ ಸರ್ವೋನ್ನ ತೇನೋರ್ವೀಂ ಕ್ರಾನ್ತ್ವಾಮೇರುರಿವಾತ್ಮನಾ ॥ ೧೪ ॥**

ಇಂದ್ರ, ಅಗ್ನಿ, ವರುಣ, ಯಮ, ಕುಬೇರರೇ ಮೊದಲಾದ ಅಷ್ಟದಿಕ್ಪಾಲಕರೆಲ್ಲರವ ವಿಶಿಷ್ಟವಾದ ತೇಜೋವಿಶೇಷವನ್ನು ಪಡೆದು. ಸರ್ವೋನ್ನತ ಶರೀರದಿಂದ ಭೂಮಂಡಲ ವನ್ನು ಅತಿಕ್ರಮಿಸಿದ್ದನು. ರೂಪಕೊಪ್ಪುವ ಬುದ್ಧಿ ವಿಶೇಷತೆ, ಆ ಬುದ್ಧಿಗೆ ಅನುಗುಣ ವಾಗಿ ಶಾಸ್ತ್ರಾಗಮಗಳನ್ನು ತಿಳಿದುಕೊಳ್ಳುವ ಬುದ್ಧಿ ಸಾಮರ್ಥ್ಯವುಳ್ಳ ಸ್ಥಿತಪ್ರಜ್ಞನು ಸ್ವರ್ಣಮಯವಾದ ಮೇರು ಪರ್ವತದಂತೆ ಎದ್ದುಕಾಣುವ ವ್ಯಕ್ತಿತ್ವವುಳ್ಳ, ದೇಹ ಸೌಂದರ್ಯವುಳ್ಳ ಆ ದಿಲೀಪ ನರಸಾರ್ವಭೌಮನು ತನ್ನ ತೇಜೋವಿಲಾಸದಿಂದ ಎಲ್ಲಾ ಮಾನವರನ್ನು, ಪಂಚಭೂತಗಳನ್ನು, ಸಕಲಚರಾಚರ ವಸ್ತುಗಳನ್ನು ನಾಚಿಸುತ್ತ ವಸುಂಧರೆಯಲ್ಲಿ ಮೆರೆಯುತ್ತಿದ್ದನು.

ಅನ್ವಯ : ಸರ್ವಾ——ಸಾರೇಣ ಸರ್ವ— —ಭಾವಿನಾ ಸರ್ವೋನ್ನತೇನ ಆತ್ಮನಾ ಮೇರುರಿವ ಉರ್ವೀಂ ಕ್ರಾನ್ತ್ವಾಸ್ಥಿತಃ ॥ ಸರ್ವೇಭ್ಯಃ ಅತಿರಿಕ್ತಃ ಸಾರಃ ಯಸ್ಯಸಃ ತೇನ। ಸರ್ವಾಣಿ ತೇಜಸಾ ಅಭಿಭವತಿ ಇತಿ ಸರ್ವ ತೇಜೋಭಿಭಾವೀತೇನ। ಸರ್ವೇಭ್ಯಃ ಉನ್ನತಃ ತೇನ ॥

ಸರ್ವಾತಿರಿಕ್ತಸಾರೇಣ = ಸಕಲ ಭೂತಗಳಿಂದಲೂ ಅಧಿಕ ಬಲವುಳ್ಳ, ಸರ್ವತೇಜೋಭಿ ಭಾವನಾ = ಸಕಲ ಭೂತಗಳನ್ನು ತನ್ನ ತೇಜಸ್ಸಿನಿಂದ ತಿರಸ್ಕರಿಸುವ, ಸರ್ವೋನ್ನತೇನ = ಎಲ್ಲಾ ವಿಷಯಗಳಲ್ಲೂ ಶ್ರೇಷ್ಠವಾದ, ಆತ್ಮನಾ = ಶರೀರದಿಂದ. ಮೇರುರಿವ = ಮೇರು ಪರ್ವತದಂತೆ, ಉರ್ವೀಂ = ಭೂಮಿಯನ್ನು, ಕ್ರಾಂತ್ವಾ= ಅತಿಕ್ರಮಿಸಿ,ಸ್ಥಿತಃ = ಇದ್ದನು.

**15. ಆಕಾರಸದೃಶಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ ।**
**ಆಗಮೈಃ ಸದೃಶಾರಂಭಃ ಆರಂಭ ಸದೃಶೋದಯಃ ॥ ॥ ೧೫ ॥**

ಆ ರಾಜನು ಸಮುದ್ರಸದೃಶನು. ಮಹಾಸಾಗರವು ಮೊಸಳೆ, ತಿಮಿಂಗಿಲ, ಶಾರ್ಕ್ ಮೊದಲಾದ ಕ್ರೂರ ಜಲಚರಗಳಿಂದ ತುಂಬಿಕೊಂಡು ಪ್ರವೇಶಿಸಲು ಬಂದವರಿಗೆ ಭಯ ವನ್ನು ಹುಟ್ಟಿಸುವುದು. ಪರ್ವತೆಗಳು, ಅಂತರ್ಜಲ ಪ್ರವಾಹಗಳು ಇರುವುದರಿಂದ ಪ್ರವೇಶಿಸಲು ದುರ್ಗಮವಾಗಿದೆ. ಆದರೂ ಬೆಸ್ತರು, ನಾವಿಕರು, ಸಾರ್ವಜನಿಕರು, ಪ್ರವಾಸಿಗಳು ಹೇರಳವಾಗಿ ಮುತ್ತು ರತ್ನಾದಿಗಳು, ವಜ್ರ, ವೈಡೂರ್ಯ, ಮೀನು, ಲವಣಗಳು, ನವನಿಧಿಗಳು ಇರುವುದರಿಂದ ಆಸಕ್ತಿಯಿಂದ ಹೋಗುತ್ತಾರೆ. ಅದರಂತೆ ಗುಣ ಸಮುದ್ರನಾದ ದಿಲೀಪನಲ್ಲಿ ರಾಜರಲ್ಲಿರಬೇಕಾದ ಸಮಗ್ರ ಗುಣಗಳಿದ್ದುದರಿಂದ ಅವನು ಪ್ರೀತಿಪಾತ್ರನೂ ಹೌದು. ಭಯಜನಕನೂ ಹೌದು. ತೇಜಃ ಪ್ರತಾಪಾದಿ ಗುಣ

ಗಳಿಂದ ಅವನ ಸಮೀಪಕ್ಕೆ ಸಲುಗೆಯಿಂದ ಹೋಗಲು ಆಶ್ರಿತರು ಭಯಪಡುತ್ತಿದ್ದರು. ಸುಶೀಲ, ದಾಕ್ಷಿಣ್ಯ, ಧರ್ಮನಿಷ್ಠೆ, ಕಾರುಣ್ಯಾದಿ ಗುಣಗಳಿಂದ ಬಹುಜನ ಪ್ರಿಯನೆನಿಸಿ, ಪ್ರೀತಿ ಜನಕನಾಗಿ, ಆದರ್ಶ ಬಂಧುವಾಗಿ, ಸೇವಿಸಲು ಯೋಗ್ಯನಾಗಿದ್ದನು.

ಅನ್ವಯ : (ದಿಲೀಪಃ) ಆಕಾರ ಸದೃಶಪ್ರಜ್ಞಃ ಪ್ರಜ್ಞಯಾ ಸದೃಶಾಗಮಃ ಆಗಮೇ ಸದೃಶಾರಂಭ, ಆರಂಭ ಸದೃಶೋದಯಃ ॥

ಆಕಾರೇಣ ಸದೃಶೀಪ್ರಜ್ಞಾಯಸ್ಯಸಃ ಆಕಾರ ಸದೃಶಃ ಪ್ರಜ್ಞಃ। ಸದೃಶಃ ಆಗಮಃ ಯಸ್ಯಸಃ। ಸದೃಶಃ ಆರಂಭಃ ಯಸ್ಯಸಃ। ಆರಂಭೇಣ ಸದೃಶಃ ಉದಯಃ ಯಸ್ಯಸಃ ಆರಂಭಃ ಪ್ರಾರಂಭ ಸದೃಶೋದಯಃ ॥

ಆಕಾರ ಸದೃಶ ಪ್ರಜ್ಞಃ = ಶರೀರಾಕೃತಿಗೆ ಸಮಾನವಾದ ಚುರುಕು ಬುದ್ಧಿಯುಳ್ಳ, ಪ್ರಜ್ಞಯಾ=ಚತುರಬುದ್ಧಿಯು. ಸದೃಶಾಗಮಃ = ಸಮಾನವಾದ ಶಾಸ್ತ್ರವುಳ್ಳ. ಆಗಮೈಃ = ಶಾಸ್ತ್ರಗಳಿಂದ, ಸದೃಶಾರಂಭಃ = ಸಮಾನವಾದ ಕಾರ್ಯಗಳುಳ್ಳ. ಪ್ರಾರಂಭ ಸದೃಶೋದಯಃ = ಕರ್ಮಕ್ಕೆ ಸಮಾನವಾದ ಫಲಸಿದ್ಧಿಯುಳ್ಳವನು.

**16. ಭೀಮಕಾನ್ತೈರ್ನೃಪಗುಣೈಃ ಸಬಭೂವೋಪಜೀವಿನಾಮ್ ।**
**ಅಧೃಶ್ಯಶ್ಚಾಭಿಗಮ್ಯಶ್ಚ ಯಾದೋರತ್ನೈರಿವಾರ್ಣವಃ ॥ ॥ ೧೬ ॥**

ಅಂದಿನ ಆ ಯುಗದ ಆ ರಾಜನ ಪ್ರಜೆಗಳು ಮನುಮಹಾರಾಜನು ಬೋಧಿಸಿದ ಮನು ಸಂಹಿತೆಯ ಆಚಾರ, ವಿಚಾರಗಳನ್ನು ಅತಿಕ್ರಮಿಸದೆ ಅನುಸರಿಸುತ್ತಾ, ಸಚ್ಚಾರಿತ್ರ್ಯ ಉಳ್ಳವರಾಗಿ ಸುಖವಾಗಿದ್ದರು. ಹೇಗೆ ನುರಿತ ಸಾರಥಿಯು ರಥವನ್ನು ಅಡ್ಡದಾರಿಯಲ್ಲಿ ನಡೆಸದೆ ನಡೆಸುವಾಗ ಅತಿದಕ್ಷತೆಯಿಂದ ಚಕ್ರದಪಟ್ಟಿಯು ಸರಿಯಾದ ದಾರಿಯಲ್ಲೇ ಹೋಗುವಂತೆ, ಅಭ್ಯಾಸವಿರುವ ಕೈಯು ನುರಿತ ದಾರಿಯಲ್ಲಿ ಸುಗಮವಾಗಿ ಕೊಂಡೊಯ್ಯುವಂತೆ ದಿಲೀಪನೃಪಾಲನು ರಾಜಸೂತ್ರವನ್ನು ಕೈಯಲ್ಲಿ ಹಿಡಿದುಕೊಂಡು ಕ್ಷೇಮದಿಂದ ರಕ್ಷಿಸುತ್ತಾ, ಮುನ್ನಡೆಸುತ್ತಾ ಪ್ರಜೆಗಳನ್ನು ಕಾಪಾಡುವುದರಲ್ಲಿ ದಕ್ಷನಾಗಿದ್ದನು. ಆಚಾರ, ವಿಚಾರಗಳು, ವ್ಯವಹಾರಗಳು, ಮಾನವನ ಆರ್ಥಿಕ (ವ್ಯಾವಹಾರಿಕ) ಸಾಮಾಜಿಕ, ನೈತಿಕ, ಆಧ್ಯಾತ್ಮಿಕ (ಪಾರಮಾರ್ಥಿಕ) ಉನ್ನತಿಗೆ ಪೂರಕಗಳಾಗಿದ್ದು ಜನರು ಸುಖವಾಗಿದ್ದರು.

ಅನ್ವಯ :—ಭೀಮಕಾನ್ತೈಃ ನೃಪಗುಣೈಃ ಸ (ದಿಲೀಪಃ) ಉಪಜೀವಿನಾಮ್ ಯಾದೋರತ್ನೈಃ ಅರ್ಣವಃ ಇವ ಅಧೃಶ್ಯಃ ಚ ಅಭಿಗಮ್ಯಃ ಚ ಬಭೂವ ॥

ಭೀಮಾಶ್ಚ ಕಾಂತಾಶ್ಚ ಭೀಮಕಾಂತಾಃ, ತೈಃ। ಭೂ—ಸತ್ತಾಯಾಂ—ಲಿಟ್ ಬಭೂವ। ಯಾದಾಂಸಿ ಚರತ್ನಾನಿಚ—ಯಾದೋರತ್ನಾನಿ—ತೈಃ ॥

ಭೀಮಕಾಂತೈಃ = ತೇಜಸ್ಸು, ಪ್ರತಾಪಾದಿಗಳಿಂದ, ನೃಪಗುಣೈಃ = ರಾಜಗುಣಗಳಿಂದ ಸಃ = ಆ ದಿಲೀಪನು ಉಪಜೀವಿನಾಂ = ಆಶ್ರಿತ ಜನರಿಗೆ. ಯಾದೋರತ್ನೈಃ = ಶ್ರೇಷ್ಠ ರತ್ನಗಳಿಂದ. ಅರ್ಣವ ಇವ = ಸಮುದ್ರದಂತೆ. ಅಧೃಷ್ಯಃ = ವಶೀಕರಿಸಲು ಸಾಧ್ಯನೂ ಆದವನು. ಅಭಿಗಮ್ಯಶ್ಚ = ಆಶ್ರಯಿಸಲು ಯೋಗ್ಯನೂ (ದಾತಾರ) ಬಭೂವ = ಆದನು.

**17. ರೇಖಾಮಾತ್ರ ಮಪಿಕ್ಷುಣ್ಣಾದಾಮನೋರ್ವರ್ತ್ಮನಃ ಪರಮ್ ।**
**ನವ್ಯತೀ ಯುಃಪ್ರಜಾಸ್ತಸ್ಯ ನಿಯಂತುರ್ನೇಮಿ ವೃತ್ತಯಃ ॥ ೧೭ ॥**

ಪ್ರಜಾರಂಜಕನಾದ ಆ ದಿಲೀಪರಾಜೇಂದ್ರನು ಪ್ರಜೆಗಳ ಆದಾಯದ ⅙ ಭಾಗವನ್ನು ಕಂದಾಯರೂಪವಾಗಿ ವಸೂಲುಮಾಡುತ್ತಿದ್ದನು. ಈ ತೆರಿಗೆಯ ಹಣವನ್ನು ಅವನು ತನ್ನ ಭೋಗಕ್ಕೆಂದು ಉಪಯೋಗಿಸದೆ ಸಮಾಜಕಲ್ಯಾಣ ಯೋಜನೆಗೆಂದೇ ಮೀಸಲಾಗಿಟ್ಟು ಪ್ರಜೆಗಳಿಗೆ ಸುಖದಾಯಕಗಳಾದ, ಅಭಿವೃದ್ಧಿ ಕಾರ್ಯಗಳಿಗೆ ವಿನಿಯೋಗಿಸುತ್ತಿದ್ದನು. ಹೇಗೆ ಸೂರ್ಯದೇವನು ತನ್ನ ಸಹಸ್ರ ಕಿರಣಗಳಿಂದ ಸಾಗರ, ನದಿ, ಸರೋವರ, ಕೆರೆ, ಬಾವಿ ಮೊದಲಾದ ಜಲಾಶಯಗಳ ನೀರನ್ನು ಹೀರಿ, ಕಾಲಾನುರೂಪದಲ್ಲಿ ಮೇಘಗಳ ಮೂಲಕ ಮಳೆಯಾಗಿ ಸುರಿಸಿ ಸಸ್ಯಾದಿಗಳ ಅಭಿವೃದ್ಧಿಯನ್ನು ಸಾಧಿಸುವಂತೆ ದಿಲೀಪ ಮಹೀಪತಿಯು ಪ್ರಜೆಗಳನ್ನು ಮಕ್ಕಳಂತೆ ಪಾಲಿಸುತ್ತ ರಾಜ್ಯವಾಳುತ್ತಿದ್ದನು. ಅವನ ರಾಜ್ಯ ಸುಖೀರಾಜ್ಯ. ಹಗಲಿನ ರಾಜನಾದ ಸೂರ್ಯನು ಸ್ಥಾವರ ಜಂಗಮದಿಂದ ಎಲ್ಲಾ ರಸವನ್ನು ಹೀರಿ ಹಾಗೆಯೇ ಮಳೆಯರೂಪದಿಂದ ಸಹಸ್ರಧಾರೆಯಾಗಿ ಹಿಂದಿರುಗಿಸುತ್ತಾನೆ. ಆ ದಿವಾಕರನಂತೆಯೇ ದಿಲೀಪನು ಪ್ರಜಾಪಾಲನೆಯ ಕಾರ್ಯದಲ್ಲಿ ಸತತ ಮಗ್ನನಾಗಿದ್ದನು.

ಅನ್ವಯಃ—ನಿಯಂತುಃ ತಸ್ಯ ನೇಮಿ ವೃತ್ತಯಃ ಪ್ರಜಾಃ ಆ ಮನೋಃ ಕ್ಷುಣ್ಣಾದ್ ವರ್ತ್ಮನಃ ರೇಖಾಮಾತ್ರಮ್ ಅಪಿ ನ ವ್ಯತೀಯುಃ ॥ ರೇಖಾಪ್ರಮಾಣಂ ಅಸ್ಯ ರೇಖಾಮಾತ್ರಮ್ । ನೇಮೀನಾಂ ವೃತ್ತಿರಿವ ವೃತ್ತಿಃ ಯಾಸಾಂತಾಃ, ನೇಮಿವೃತ್ತಯಃ । (ವಿ, ಅತಿ) ಇಯಾಯ—ಈಯತುಃ—ಈಯುಃ । ಇಯಯಿಥ, ಇಯೇಥ, ಈಯಥುಃ—ಈಯ । ಇಯಾಯ, ಇಯಯ—ಈಯಿವ—ಈಯಿಮ । ಇಣ್—ಗತೌ—ಲಿಟ್—ಪ್ರ—ಪು—ಬ ।

ನಿಯಂತುಃ = ಶಿಕ್ಷಕನಾದ (ಸಾರಥಿಯ), ತಸ್ಯ = ಆ ದಿಲೀಪನ ಸಂಬಂಧಿಯಾದ, ನೇಮಿ ವೃತ್ತಯಃ = ರಥಚಕ್ರದ ಕಬ್ಬಿಣದ ಪಟ್ಟಿಯಂತೆ ನಡತೆಯುಳ್ಳ—ಪ್ರಜಾಃ = ಪ್ರಜೆಗಳು, ಆಮನೋಃ = ಮನುವಿನಿಂದ ಮೊದಲ್ಗೊಂಡು, ಕ್ಷುಣ್ಣಾತ್ = ತುಳಿದು ಹದವಾದ, ಪರಿಪಕ್ವವಾದ, ವರ್ತ್ಮನಃ = ಆಚಾರ ವಿಚಾರಗಳಂತೆ, ಪರಂ = ಅಧಿಕವಾಗಿ, ರೇಖಾಮಾತ್ರಮಪಿ = ಒಂದು ಗೆರೆಯನ್ನೂ ಸಹ (ಸ್ವಲ್ಪವೂ) ನವ್ಯತೀಯುಃ = ಅತಿಕ್ರಮಿಸಲಿಲ್ಲ.

**18. ಪ್ರಜಾನಾಮೇವ ಭೂತ್ಯರ್ಥಂ ಸತಾಭ್ಯೋ ಬಲಿಮಗ್ರಹೀತ್ ।**
**ಸಹಸ್ರ ಗುಣಮುತ್ಸ್ರಷ್ಟುಂ ಆದತ್ತೇ ಹಿರಸಂರವಿಃ ॥ ॥ ೧೮ ॥**

ಆ ದಿಲೀಪ ನರಸಾರ್ವಭೌಮನು ಏಕಾಂಗವೀರನು, ಮಹಾರಥನು. ಮಹಾಧನ್ವಿ (ಮಹಾ ಧನುರ್ಧರ). ಅವನು ಯಾರ ಸಹಾಯವಿಲ್ಲದೆ ವೈರಿದಳದೊಂದಿಗೆ ಒಬ್ಬನೇ ನಿಂತು ಹೋರಾಡಬಲ್ಲ ಪುರುಷವ್ಯಾಘ್ರನು. ಅಸಹಾಯ ಶೂರನು. ಇಂತಹ ಲೋಕೈಕ ವೀರನಿಗೆ ಚತುರಂಗಸೇನೆಯೂ ಬರೇ ಭೂಷಣಪ್ರಾಯ ಮಾತ್ರ. ಅವುಗಳ ಅಗತ್ಯವೇ

ಅವನಿಗೆ ಇರಲಿಲ್ಲ. ಛತ್ರ ಚಾಮರಗಳಂತೆ, ಆನೆ, ಕುದುರೆ, ರಥ ಪದಾತಿಗಳಿಂದ ಮೆರೆಯುವ ಸೇನಾವಾಹಿನಿ ಅಲಂಕಾರಕ್ಕೆ ಬೇಕಾದ ವಸ್ತುಗಳೆನಿಸಿದುವು. ಅವುಗಳ ಆವಶ್ಯಕತೆಯೇ ಅವನಿಗಿರಲಿಲ್ಲ. ಅಂತೆಯೇ ಅವನು ವಿದ್ಯಾಭೂಷಣನು. ವಾಚಸ್ಪತಿ, ಚತುರ್ವೇದಿ, ಸಕಲ ಶಾಸ್ತ್ರಕೋವಿದನು, ತಜ್ಞನು, ವಿದ್ಯಾವೇತ್ತನು. ಅವನು ನೀತಿಶಾಸ್ತ್ರವನ್ನು ಅನುಸರಿಸಿ, ಹೆದೆಯೇರಿಸಿದ ಬಿಲ್ಲಿನೊಂದಿಗೆ ನಡೆದು ಶೌರ್ಯಾದಿಗಳನ್ನು ಪ್ರಕಟಿಸುತ್ತಿದ್ದ ಮಹಾಬಾಹು. ಪ್ರಜಾಪಾಲನೆ ಮತ್ತು ಶತ್ರುಮರ್ದನಕ್ಕೆ ಅವನಿಗಿದ್ದ ಎರಡು ಸಾಧನೆಯೆಂದರೆ ಅವನ ಧನುರ್ವೇದ ಸಾಧನೆ ಮತ್ತು ಸಮಸ್ತ ಶಾಸ್ತ್ರಗಳ ಅಧ್ಯಯನ ಹಾಗೂ ಪಾಂಡಿತ್ಯ. ಅವನು ದಿಗ್ವಿಜಯಕ್ಕೆ ಹೊರಟನೆಂದರೆ ಗೆಲವು ಖಚಿತ. ಅಂತೆಯೇ ಪ್ರಜಾರಂಜಕನಾಗಿ ಸಕಲ ಜನರ (ಸಕಲ ಪ್ರಜೆಗಳ) ಕಲ್ಯಾಣ ಅಭಿವೃದ್ಧಿಗಾಗಿ (ಅಶನ, ವಸನ, ವಸತಿ, ವಿದ್ಯೆ ಉದ್ಯೋಗ ಎಲ್ಲಾ ಸಂಪನ್ಮೂಲಗಳನ್ನು ಕ್ರೋಢೀಕರಿಸಿ (ಒಟ್ಟು ಮಾಡಿ) ಒಂದುಗೂಡಿಸಿ ಕಾರ್ಯವನ್ನು ಕೈಗೂಡಿಸುವ ಮಹಾಮಹಿಮನವನು.

ಅನ್ವಯಃ—ಸಃ ಪ್ರಜಾನಾಂ ಭೂತ್ಯರ್ಥಂ ಏವತಾಭ್ಯಃ ಬಲಿಮ್ ಅಗ್ರಹೀತ್. । ರವಿಃ ಹಿಸಹಸ್ರಗುಣಮ್ ಉತ್ಸ್ರಷ್ಟುಂ ರಸಂ ಆದತ್ತೇ ॥ ಅಗ್ರಹೀತ್—ಅಗ್ರಹೀಷ್ಟಾಂ—ಅಗ್ರಹೀಷುಃ । ಅಗ್ರಹೀಃ—ಅಗ್ರಹೀಷ್ಟಂ—ಅಗ್ರಹೀಷ್ಟ ॥ ಅಗ್ರಹೀಷಂ—ಅಗ್ರಹೀಷ್ವ—ಅಗ್ರಹೀಷ್ಮ—॥ ಗ್ರಹ—ಉಪಾದಾನೇ—ಲುಙ್ । ಆಙ್ ದತ್ತೇ ದದಾತೇ—ದದತೇ—ದತ್ಸೇ—ದದಾಥೇ—ದಧ್ವೇ । ದದೇ—ದದ್ವಹೇ—ದದ್ಮಹೇ ॥ ಡುದಾಞ್—ದಾನೇ—ಲಟ್ ॥

ಸಃ = ಆ ರಾಜನು, ಪ್ರಜಾನಾಂ = ಪ್ರಜೆಗಳ, ಭೂತ್ಯರ್ಥಮೇವ = ವೃದ್ಧಿಗೋಸ್ಕರವೇ ತಾಭ್ಯಃ = ಅವರಿಂದಲೇ. ಬಲಿಂ = ಕಂದಾಯವನ್ನು. ಅಗ್ರಹೀತ್ = ಸ್ವೀಕರಿಸಿದನು. ರವಿಃ = ಸೂರ್ಯನು, ಸಹಸ್ರ ಗುಣಂ = ಸಾವಿರಪಟ್ಟು ಅಧಿಕವಾಗಿ, ಉತ್ಸ್ರಷ್ಟುಂ = ಕೊಡಲು, ರಸಂ = ನೀರನ್ನು—ಆದತ್ತೇಹಿ = ಸೆಳೆಯುತ್ತಾನಷ್ಟೆ.

**19. ಸೇನಾ ಪರಿಚ್ಛದಸ್ತಸ್ಯದ್ವಯಮೇವಾರ್ಥ ಸಾಧನಮ್ ।**
**ಶಾಸ್ತ್ರೇಷ್ವಕುಂಠಿತಾ ಬುದ್ಧಿಃ ಮೌರ್ವೀಧನುಷಿ ಚಾತತಾ ॥ ॥ ೧೯ ॥**

ಆ ನರೇಂದ್ರನು ಸಾಮ್ರಾಜ್ಯದ ಹಿತಸಾಧನೆಗಳಿಗಾಗಿ ಗೂಢವಾದ ಮಂತ್ರಾಲೋಚನೆಯನ್ನು ನಡೆಸುತ್ತಿದ್ದನು. ಹೀಗಿದ್ದರೂ ಗುಪ್ತವಾದ ಮಂತ್ರಾಲೋಚನೆಯು ಇಂಗಿತವನ್ನು ಮುಖರಾಗಾದಿ ಲಕ್ಷಣಗಳಿಂದ, ಬಾಹ್ಯವರ್ತನೆಯಿಂದ ಯಾವೊಬ್ಬನೂ ತಿಳಿಯಲಾರನು. ಹಿಂದಿನ ಜನ್ಮದಲ್ಲಿ ಗಳಿಸಿದ ಸಂಸ್ಕಾರಗಳು ಮನಸ್ಯನಲ್ಲಿ ರೂಢವಾಗಿರುತ್ತವೆ. ರಕ್ತಗತವಾಗಿರುತ್ತವೆ. ಮಂತ್ರಾಲೋಚನೆ ನಡೆದಮೇಲೆ ಅವನ ಅವಯವಗಳಲ್ಲಿ ಯಾವ ವಿಕಾರವೂ ತೋರಿಬರದು. ಮನೋವಿಕಾರ ಕಾಣಿಸದು, ಅಂತಹ ಸ್ಥಿತಪ್ರಜ್ಞನವ. ಮಾನವನಲ್ಲಿ ರೂಢವಾದ ಸಂಸ್ಕಾರಗಳು ಹುಟ್ಟಿನಲ್ಲಿಯೇ ವ್ಯಕ್ತಿಯಲ್ಲಿ ಗುಟ್ಟಾಗಿ ಅಂಕುರಿಸಿತ್ತು ಆ ಮಹಾ ಜಗಜಟ್ಟಿಯಲ್ಲಿ. ಆಮೇಲೆ ಕಾರ್ಯಗತವಾದ ಮೇಲೆ ಫಲಗಳಿಂದ ಮಂತ್ರಾಲೋಚನೆಯ ಮಾರ್ಗವನ್ನು ತಿಳಿಯಲು ಸಾಧ್ಯವೆನಿಸಿತ್ತು. ಹೀಗೆ

ಗೂಢವಾದ ಮಂತ್ರಾಲೋಚನೆಯಿಂದ ತನ್ನ ರಾಜ್ಯವೆಂಬ ತೇರನ್ನು (ರಥವನ್ನು) ನಡೆಸುತ್ತಾ, ರಕ್ಷಿಸುತ್ತಾ, ಪಾಲಿಸುತ್ತಿದ್ದ ಮಹಾತ್ಮನವ.

ಅನ್ವಯಃ—ತಸ್ಯ ಸೇನಾ ಪರಿಚ್ಛದಃ (ಏವ)। ಅರ್ಥಸ್ಯ ಸಾಧನಮ್ ದ್ವಯಮ್ ಏವ। ಶಾಸ್ತ್ರೇಷು ಅಕುಂಠಿತಾ ಬುದ್ಧಿಃ ಧನುಷಿ ಚಾತತಾಮೌರ್ವೀ॥

ಅರ್ಥಸ್ಯ ಸಾಧನಮ್। ನ ಕುಂಠಿತಾ, ಅಕುಂಠಿತಾ॥ ತಸ್ಯ= ಆ ದಿಲೀಪನಿಗೆ, ಸೇನಾ = ಚತುರಂಗಸೈನ್ಯವು, ಪರಿಚ್ಛದಃ = ಉಪಕರಣವು (ಬಭೂವ = ಆಯಿತು), ಅರ್ಥ ಸಾಧನಂ = ರಾಜ್ಯಾದಿಫಲ ಸಾಧಕವು, ಶಾಸ್ತ್ರೇಷು = ಅರ್ಥಶಾಸ್ತ್ರಾದಿಗಳಲ್ಲಿ ಅಕುಂಠಿತಾ = ಅಡೆತಡೆಗಳಿಲ್ಲದ, ಬುದ್ಧಿಃ = ಜ್ಞಾನವೂ, ಧನುಷಿ = ಬಿಲ್ಲಿನಲ್ಲಿ (ಬಿಲ್ಲಾಳು), ಆತತಾ = ಏರಿಸಲ್ಪಟ್ಟ, ಮೌರ್ವೀಚ = ಹೆದೆಯೂ, ದ್ವಯಮೇವ = ಇವೆರಡೇ ಆಗಿದ್ದವು.

**20. ತಸ್ಯ ಸಂವೃತ ಮಂತ್ರಸ್ಯ ಗೂಢಾಕಾರೇಂಗಿ ತಸ್ಯ ಚ।**
**ಫಲಾನುಮೇಯಾಃ ಪ್ರಾರಂಭಾಃ ಸಂಸ್ಕಾರಾಃ ಪ್ರಾಕ್ತ ನಾ ಇವ॥**
**॥ ೨೦ ॥**

ಸಾಮಾದಿ ತಂತ್ರೋಪಾಯಗಳ ಪ್ರಯೋಗವಿಲ್ಲದೆಯೇ ಅವನು ತನ್ನ ಆತ್ಮರಕ್ಷಣೆ ಮಾಡಿಕೊಳ್ಳುತ್ತಿದ್ದನು. ಅವನು ಯಾರ ಭಯಕ್ಕೊಳಗಾಗದೆಯೇ ಆತ್ಮರಕ್ಷಣೆ ಮಾಡಿಕೊಳ್ಳುತ್ತಿದ್ದನು. ರೋಗಾದಿಗಳ ಬಾಧೆಗಳಿರುವಾಗ ದೇವತಾರಾಧನೆ ಮೊದಲಾದ ಧರ್ಮ ಕಾರ್ಯಗಳನ್ನು ನಡೆಸಿ ರೋಗರುಜೆಗಳ ಬಾಧೆಯನ್ನು ಹೋಗಲಾಡಿಸಿಕೊಳ್ಳುವನು. ಆಸೆಯಿಲ್ಲದೆಯೇ ಲೋಭತ್ವವಿಲ್ಲದೆಯೆ ಧನವನ್ನು ಸಂಚಯಿಸುವನು (ಒಟ್ಟುಗೂಡಿಸುವನು) ಅಂತಹ ನಿರ್ಲೋಭನವನು (ಶರೀರ ಮಾಧ್ಯಮ್ ಖಲುಧರ್ಮಸಾಧನಮ್). ಅನಾಸಕ್ತನಾಗಿಯೇ ಇದ್ದು ಸುಖಭೋಗಗಳನ್ನು ಅನುಭವಿಸುವನು. ಯಾವ ವ್ಯಥೆಗಳಿಲ್ಲದಿದ್ದರೂ ಕರ್ತವ್ಯವೆಂದು ಧರ್ಮಕಾರ್ಯಗಳನ್ನು ನಡೆಸುತ್ತಿದ್ದನು. ತನ್ನ ಸ್ವಾರ್ಥಕ್ಕಾಗಿ ಹಣವನ್ನು ಉಪಯೋಗಿಸದೆ, ಪರಾರ್ಥಕ್ಕಾಗಿ ಪ್ರಜೆಗಳ ಅಭಿವೃದ್ಧಿಗಾಗಿ ದ್ರವ್ಯವನ್ನು ಸಂಪಾದಿಸಿ ವಿನಿಯೋಗಿಸುತ್ತಿದ್ದನು. ತಾನಾಗಿ ಒದಗಿಬರುತ್ತಿರುವ ಸುಖವನ್ನು ಆಸಕ್ತಿಯಿಲ್ಲದೆಯೇ ಅನುಭವಿಸುತ್ತಿದ್ದನು.

ಅನ್ವಯಃ—ಸಂವೃತಮಂತ್ರಸ್ಯ ಗೂಢಾಕಾರೇಂಗಿತಸ್ಯ ತಸ್ಯಪ್ರಾರಂಭಾಃ ಪ್ರಾಕ್ತನಾಃ ಸಂಸ್ಕಾರಾಃ ಇವ ಫಲಾನುಮೇಯಾಃ (ಆಸನ್) ಸಂವೃತಃ ಮಂತ್ರಃ ಯಸ್ಯಸಃ। ತಸ್ಯ॥ ಆಕಾರಶ್ಚ ಇಂಗಿತಂಚ ಆಕಾರೇಂಗಿತೇ ಗೂಢೇ ಆಕಾರೇಂಗಿತೇ ಯಸ್ಯಸಃ। ತಸ್ಯ॥ ಫಲೈಃ ಅನುಮೇಯಾ। ಪ್ರಾರಭ್ಯಂತೇ॥ ಇತಿಪ್ರಾರಂಭಾಃ॥

ಸಂವೃತ ಮಂತ್ರಸ್ಯ= ಗುಟ್ಟಾದ ಮಂತ್ರಾಲೋಚನೆ ಮಾಡುವ, ಗೂಢಾ ಕಾರೇಂಗಿ ತಸ್ಯಚ = ಗುಪ್ತವಾಗಿರುವ ಮುಖರಾಗಾದಿ ಆಕಾರವೂ, ಅಂಗಚೇಷ್ಟೆಯೂ ಇರುವ ತಸ್ಯ= ಆ ಅರಸನ, ಪ್ರಾರಂಭಾಃ = ಸಾಮಾದ್ಯುಪಾಯ ಪ್ರಯೋಗಗಳು, ಪ್ರಾಕ್ತನಾ = ಹಿಂದಿನ ಜನ್ಮದಲ್ಲಿ ಗಳಿಸಿದ ಸಂಸ್ಕಾರಾಃ, ಇವ = ಕರ್ಮವಾಸನೆಗಳು, ಫಲಾನುಮೇಯಾ (ಆಸನ್) = ಕಾರ್ಯಸಿದ್ಧಿಯಿಂದ ಅನುಮಾನ ಮಾಡಲು ಯೋಗ್ಯವಾದ.

**21. ಜುಗೋಪಾತ್ಮಾನಮತ್ರಸ್ತೋ ಭೇಜೇ ಧರ್ಮಮನಾತುರಃ ।**
**ಅಗೃಧ್ನುರಾದದೇ ಸೋಽರ್ಥಮಸಕ್ತಃ ಸುಖಮನ್ವಭೂತ್ ॥ ೨೧ ॥**

ಅವನು ಮಹಾಜ್ಞಾನಿಯೂ, ಪ್ರಾಜ್ಞನೂ ಎಂದೆನಿಸಿದ್ದನು. ಆದರೆ ಜ್ಞಾನಿಯಾಗಿದ್ದರೂ, ಮೌನಿಯಾಗಿದ್ದನು. ಅಗತ್ಯವಿದ್ದಷ್ಟೇ ಮಾತಾಡುವ ಸ್ವಭಾವದವನು. ಬಾಯಿಬಡುಕನಲ್ಲ. ಡಾಂಭಿಕನಲ್ಲ. ಜ್ಞಾನನಿಧಿಯಾಗಿದ್ದರೂ ಇತರರನ್ನು ಟೀಕಿಸದೆ ಮೌನವಾಗಿರುತ್ತಿದ್ದನು. ಶಕ್ತನಾದರೂ, ಪ್ರತೀಕಾರ ಮಾಡುವ ಸಾಮರ್ಥ್ಯವಿದ್ದರೂ ಕ್ಷಮಾಗುಣ ಪರಿಪೂರ್ಣನು. ಕ್ಷಮಿಸುವ, ಸಹಿಸಿಕೊಳ್ಳುವ ಸ್ವಭಾವದವನು. (ಶಕ್ತಾನಾಂ ಭೂಷಣಂ ಕ್ಷಮಾ) ಸಹನಾಗುಣ ಪರಿಪೂರ್ಣನು. ಅಧಿಕವಾಗಿ ಸತ್ಪಾತ್ರರಿಗೆ ದಾನ ಮಾಡುವ ಮಹಾತ್ಯಾಗಿಯೂ ತಾನಾಗಿದ್ದನು. ತನ್ನನ್ನು ತಾನು ಶ್ಲಾಘಿಸಿಕೊಳ್ಳುವುದಾಗಲೀ, ಹೊಗಳಿಕೊಳ್ಳುವ, ಆತ್ಮಪ್ರತಿಷ್ಠೆ ಪ್ರದರ್ಶಿಸುವ ಗೋಜಿಗೆ ಹೋದವನಲ್ಲ. ವಿನೀತಗುಣ ಸಂಪನ್ನನು, ದೇವಸದೃಶಾತ್ಮನು. ತುಂಬಿದಕೊಡ ತುಳುಕುವುದಿಲ್ಲ ಎಂಬಂತೆ. ಹೀಗೆ ಪರಸ್ಪರ ವಿರುದ್ಧವಾದ ಗುಣಗಳು ಅವನಲ್ಲಿದ್ದರೂ ಸಹೋದರಭಾವದಿಂದ, ಐಕ್ಯಮತ್ಯದಿಂದ ಇದ್ದುವು. ಒಂದೇ ತಾಯಿಯ ಹೊಟ್ಟೆಯಲ್ಲಿ ಹುಟ್ಟಿದ ಹೊಕ್ಕಳ ಸಂಬಂಧವಿರುವ ಮಕ್ಕಳಂತೆ ಒಡಹುಟ್ಟಿದವರಾದರೂ ವಿರುದ್ಧ ಗುಣಗಳಿದ್ದರೂ ಸಾಮರಸ್ಯದಿಂದ, ಅನ್ಯೋನ್ಯ ಭಾವದಿಂದ, ಅವಿರೋಧವಾಗಿ ಹೊಂದಾಣಿಕೆಯಿಂದ ಅವನಲ್ಲಿ ನೆಲೆಯಾಗಿ, ಮನೆಮಾಡಿಕೊಂಡಿದ್ದುವು (ವಿವಿಧತೆಯಲ್ಲಿ ಏಕತೆ), ಹೀಗೆ ಅವನು ಅನಂತ ಕಲ್ಯಾಣಗುಣನಿಧಿಯಾದ, ಸರ್ವರ ಬಂಧುವೆನಿಸಿದ ಮಾನವಾಗ್ರಣಿ. ಅವನ ಸುಗುಣಾವಳಿಗಳನ್ನು ಬೇರೆ ರೀತಿಯಲ್ಲಿ ಹೇಳಬೇಕಾದುದಿಲ್ಲ.

ಅನ್ವಯಃ—(ಸಃ) ಅತ್ರಸ್ತ (ಸನ್) ಆತ್ಮಾನಂ ಜುಗೋಪ ಅನಾತುರಃ (ಏವಚ) ಧರ್ಮಂ ಭೇಜೇ । ಸಃ ಅಗೃಧ್ನುಃ ಅರ್ಥಮ್ ಆದದೇ ಅಸಕ್ತಃ (ಚ) ಸುಖಮನ್ವಭೂತ್ ॥

ಜುಗೋಪ–ಜುಗುಪತುಃ–ಜುಗುಪುಃ । ಜುಗೋಪಿಥ—ಜುಗೋಪ್ಥ—ಜುಗುಪಥುಃ—ಜುಗುಪ—। ಜುಗೋಪ—ಜುಗುಪಿವ—ಜುಗುಪ್ವ—ಜುಗುಪಿಮ—ಜುಗುಪ್ಮ ॥ ಗುಪೂ—ರಕ್ಷಣೇ—ಲಿಟ್—॥ ಭೇಜೇ—ಭೇಜಾತೇ–ಭೇಜಿರೇ । ಭೇಜಿಷೇ–ಭೇಜಾಥೇ–ಭೇಜಿಧ್ವೇ । ಭೇಜೇ—ಭೇಜಿವಹೇ—ಭೇಜಿಮಹೇ । ಭಜಸೇವಾಯಾಮ್—ಲಿಟ್ । (ಅಜ್) ದದೇ—ಡುದಾಞ್—ದಾನೇ—ಲಿಟ್—॥ (ಅನು) ಅಭೂತ್—ಭೂ—ಸತ್ತಾಯಾಂ—ಲುಙ್ ॥ ನಸಕ್ತಃ ಅಸಕ್ತಃ—ಇತ್ಯಾದಿ ॥

**22. ಜ್ಞಾನೇ ಮೌನಂ ಕ್ಷಮಾ ಶಕ್ತೌ ತ್ಯಾಗೇ ಶ್ಲಾಘಾವಿಪರ್ಯಯಃ ।**
**ಗುಣಾ ಗುಣಾನುಬಂಧಿತ್ವಾತ್ತಸ್ಯ ಸಪ್ರಸವಾ ಇವ ॥ ॥ ೨೨ ॥**

ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ವಿಷಯಗಳಿಂದ ಅವುಗಳ ವಶವರ್ತಿಯಾಗದೆ, ಅವುಗಳಿಂದ ಸೆಳೆಯಲ್ಪಡದೆ ದೂರವಾಗಿದ್ದನು. ಅವನು ತನ್ನ ತಾರುಣ್ಯದಲ್ಲೇ ಜ್ಞಾನವೃದ್ಧನಾಗಿದ್ದನು. ಇಂದ್ರಿಯ ನಿಗ್ರಹವಿರುವುದರಿಂದ ರೂಪಾದಿ ವಿಷಯಗಳಿಗೆ

ಅಧೀನನಾಗದೆ ಆತ್ಮಸಂಯಮಿಯಾಗಿದ್ದನು. ಸಕಲವಿದ್ಯಾಪಾರಂಗತನಾಗಿ, ವಯಸ್ಸಿನಲ್ಲಿ ವೃದ್ಧನಲ್ಲದಿದ್ದರೂ ಜ್ಞಾನವೃದ್ಧನೆನಿಸಿದನು. ವೇದ, ವೇದಾಂಗ, ಆಗಮ, ಶಿಕ್ಷಾ, ಜ್ಯೋತಿಷ್ಯ, ಆಯುರ್ವೇದ ಮೊದಲಾದ ವಿದ್ಯೆಗಳನ್ನು ಅಲ್ಲದೆ ಸಕಲಧರ್ಮಶಾಸ್ತ್ರಗಳನ್ನು ಸಂಪೂರ್ಣವಾಗಿ ತಿಳಿದಿದ್ದನು. ವಿದ್ಯೆಯ ಇನ್ನೊಂದು ದಡವನ್ನು ಕಂಡ ವಿದ್ಯಾ ಪಾರಾವಾರನವನು (ಶಾಸ್ತ್ರಜ್ಞ).

ಅನ್ವಯ :—ಜ್ಞಾನೇ (ಸತ್ಯಪಿ) ಮೌನಂ ಶಕ್ತೌ ಕ್ಷಮಾ ತ್ಯಾಗೇ (ಚ) ಶ್ಲಾಘಾ ವಿಪರ್ಯಯಃ । ತಸ್ಯ ಗುಣಾಗುಣಾನುಬಂಧಿತ್ವಾತ್ । ಸಪ್ರಸವಾ ಇವ (ಅಭೂವನ್) ॥

ಶ್ಲಾಘಾಯಾಃ ವಿಪರ್ಯಯಃ ॥ ಗುಣೈಃ ಅನುಬಂಧಿನಃ, ತೇಷಾಂ ಭಾವಃ ಗುಣಾನು ಬಂಧಿತ್ವಂ, ತಸ್ಮಾತ್ ॥ ಸಹಪ್ರಸವಃ ಯೇಷಾಂ ತೇ ಸಪ್ರಸವಾಃ ॥

ಜ್ಞಾನೇ = ಪರವೃತ್ತಾಂತಾದಿ ಜ್ಞಾನವಿದ್ದರೂ, ಮೌನಂ = ವಾಙ್ನಿಯಮವೂ, ಶಕ್ತೌ= ಪ್ರತೀಕಾರಸಾಮರ್ಥ್ಯವಿದ್ದರೂ, ಕ್ಷಮಾ = ಅಪಕಾರಸಹನೆಯೂ, ತ್ಯಾಗೇ = ಅಧಿಕದಾನ ಮಾಡಿದ್ದರೂ, ಶ್ಲಾಘಾವಿಪರ್ಯಯಃ = ಹೊಗಳಿಕೊಳ್ಳದಿರುವುದೂ, ತಸ್ಯ = ಆ ದಿಲೀಪನ, ಗುಣಾಃ = ಜ್ಞಾನಾದಿಗುಣಗಳು, ಗುಣಾನುಬಂಧಿತ್ವಾತ್ = ಮೌನಸಹನಾದಿ ಗುಣಗಳ ಸಂಬಂಧದಿಂದ, ಸಪ್ರಸವಾ ಇವ = ಸಹೋದರರಂತೆ, ಅಭೂವನ್=ಇದ್ದವು.

23. ಅನಾಕೃಷ್ಟಸ್ಯ ವಿಷಯೈರ್ವಿದ್ಯಾನಾಂ ಪಾರದೃಶ್ವನಃ ।
ತಸ್ಯ ಧರ್ಮರತೇರಾಸೀತ್ ವೃದ್ಧತ್ವಂ ಜರಸಾ ವಿನಾ ॥ ೨೩ ॥

ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ವಿಷಯಗಳಿಂದ ಸೆಳೆಯಲ್ಪಡದಿರುವ, ಇಂದ್ರಿಯನಿಗ್ರಹವಿರುವ ಮಹಾನ್ ವ್ಯಕ್ತಿ ದಿಲೀಪನು. ಅವನು ವೇದ, ವೇದಾಂಗ, ಧರ್ಮಶಾಸ್ತ್ರಗಳನ್ನು ಸಂಪೂರ್ಣವಾಗಿ ತಿಳಿದು, ಧರ್ಮದಲ್ಲಿ ಆಸಕ್ತಿ ತಳೆದಿದ್ದನು. ತಾರುಣ್ಯದಲ್ಲೇ ಮಹಾಪ್ರಾಜ್ಞನೆನಿಸಿ ಜ್ಞಾನವೃದ್ಧನೆನಿಸಿದ್ದನು. ಜ್ಞಾನಸಾಗರನಾದ ದಿಲೀಪನು ತನ್ನ ವಿದ್ಯಾಮಹಿಮೆಯಿಂದ ವಿದ್ಯಾಪಾರಾವಾರ(ವಿದ್ಯಾಪಾರಗ)ನೆನಿಸಿ, ವಿದ್ಯಾ ಸಾಗರದ ಆಚೆಯ ದಡವನ್ನು ಕಂಡವನೆನಿಸಿದನು. ಅವನು ಸುಸಂಸ್ಕೃತನು. ಮಾನವೀಯ ಗುಣವುಳ್ಳ ಮಹಾತ್ಮನು. ಸದ್ಧರ್ಮದಲ್ಲಿ ನಿರತನಾಗಿ ಸತ್ಕಾರ್ಯಗಳನ್ನು ಮಾನವ ಕಲ್ಯಾಣಕ್ಕಾಗಿ, ಪ್ರಜೆಗಳ ಶ್ರೇಯೋಭಿವೃದ್ಧಿಗೆ ನಿರಂತರವಾಗಿ ಕೈಗೊಳ್ಳುತ್ತಿದ್ದನು. ಪರಿಪಕ್ವವಾದ ಬುದ್ಧಿಯುಳ್ಳವನಾಗಿ, ಸರ್ವರ ರಕ್ಷಕನಾಗಿ ಪೃಥ್ವೀವಲಯದಲ್ಲಿ ಆ ರವಿಕುಲಸಾರ್ವಭೌಮನು ಮೆರೆಯುತ್ತಿದ್ದನು. ಆ ನರಪುಂಗವನು ಲೋಕಕಲ್ಯಾಣದಿಂದ ತನ್ನ ಆತ್ಮಕಲ್ಯಾಣವನ್ನು ಸಾಧಿಸುತ್ತಿದ್ದನು.

ಅನ್ವಯ :—ವಿಷಯೈಃ ಅನಾಕೃಷ್ಟಸ್ಯ ವಿದ್ಯಾನಾಂ (ಚ) ಪಾರದೃಶ್ವನಃ ತಸ್ಯ ಧರ್ಮರತೇಃ ಜರಸಾ ವಿನಾ (ಅಪಿ) ವೃದ್ಧತ್ವಮ್ ಆಸೀತ್ ॥

ನ ಆಕೃಷ್ಟಃ =ಅನಾಕೃಷ್ಟಃ ತಸ್ಯ॥ ಪಾರಂ ದೃಷ್ಟವಾನ್—ಪಾರದೃಶ್ವಾ॥ ಧರ್ಮೇ ರತಿಃ ಯಸ್ಯ ಧರ್ಮರತಿಃ, ತಸ್ಯ॥ ವೃದ್ಧಸ್ಯ ಭಾವಃ ವೃದ್ಧತ್ವಂ॥

ವಿಷಯೈಃ = ರೂಪ, ರಸ, ಗಂಧ, ಸ್ಪರ್ಶ, ಶಬ್ದಗಳೆಂಬ ವಿಷಯಗಳಿಂದ, ಅನಾ

ಕೃಷ್ಟಸ್ಯ= ಸೆಳೆಯಲ್ಪಡದಿರುವ, ವಿದ್ಯಾನಾಂ = ವೇದವೇದಾಂಗಾದಿ ವಿದ್ಯೆಗಳ ಬಲುಮೆಯಿಂದ, ಪಾರದೃಶ್ವನಃ = ಅಂತ್ಯವನ್ನು ಕಂಡ, ಸಂಪೂರ್ಣ ತಿಳಿದ, ಧರ್ಮರತೇಃ = ಧರ್ಮದಲ್ಲಿ ಆಸಕ್ತಿಯಿರುವ, ತಸ್ಯ = ಆ ರಾಯನಿಗೆ, ಜರಸಾ ವಿನಾ = ಮುಪ್ಪಿಲ್ಲದೆ, ವೃದ್ಧತ್ವಂ = ವಾರ್ಧಿಕ್ಯವು, ಆಸೀತ್ = ಉಂಟಾಯಿತು.

**24. ಪ್ರಜಾನಾಂ ವಿನಯಧಾನಾದ್ರಕ್ಷಣಾದ್ಭರಣಾದಪಿ ।**
**ಸ ಪಿತಾ ಪಿತರಸ್ತಾಸಾಂ ಕೇವಲಂ ಜನ್ಮಹೇತವಃ ॥ ೨೪ ॥**

ಆ ನೃಪತಿಯು ಪ್ರಜೆಗಳನ್ನು ತನ್ನ ಮಕ್ಕಳಂತೆ ಪೋಷಿಸುತ್ತಿದ್ದನು. ತನ್ನ ಪ್ರಜೆಗಳಿಗೆ ಬಾಲ್ಯಾವಸ್ಥೆಯಲ್ಲಿ ಯೋಗ್ಯವಾದ ಕಡ್ಡಾಯ ಪ್ರಾಥಮಿಕ ಶಿಕ್ಷಣವನ್ನು ಕೊಟ್ಟು ಸುಜ್ಞಾನಿಗಳಾದ ಸತ್ಪ್ರಜೆಗಳನ್ನಾಗಿ ಮಾಡಿದನು. ತನ್ನ ರಾಜ್ಯಭಾರದ ಅವಧಿಯಲ್ಲಿ ಯೋಗಕ್ಷೇಮವನ್ನು ನೋಡಿಕೊಳ್ಳುತ್ತಿದ್ದನು. ದೇಶದಾದ್ಯಂತ ಉತ್ತಮ ವೈದ್ಯರನ್ನು ನೇಮಿಸಿ ಜನರ ಆರೋಗ್ಯರಕ್ಷಣೆಯ ಭಾರವನ್ನು ಹೊತ್ತಿದ್ದನು. ಶತ್ರುಗಳಿಂದ ಪ್ರಜೆಗಳ ಆತ್ಮರಕ್ಷಣೆ (ಜೀವರಕ್ಷಣೆ), ಆಸ್ತಿಪಾಸ್ತಿಗಳ ರಕ್ಷಣೆ, ಶರೀರಪೋಷಣೆಯ ಭಾರ ಎಲ್ಲವನ್ನು ನಿರ್ವಹಿಸುತ್ತಾ, ಸ್ವತಃ ತಂದೆಯು ಮಕ್ಕಳನ್ನು ಪೊರೆಯುವಂತೆ ಪೊರೆಯುತ್ತಾ (ಸಲಹುತ್ತಾ) ಪ್ರಜಾವತ್ಸಲನಾಗಿ ಸಕಲರಿಗೆ ತಂದೆಯಾಗಿದ್ದನು (ಲೋಕಪಿತ). ಆದುದರಿಂದ ಜನರು ಜನ್ಮಕೊಟ್ಟ ತಂದೆತಾಯಿಗಳಾಗಿದ್ದರು ಮಾತ್ರ. ಅವರು ಮಾಡಬೇಕಾದ ಕೆಲಸಗಳನ್ನು (ರಕ್ಷಣೆ, ಪಾಲನೆ, ಮತ್ತು ಪೋಷಣೆಯ ಕಾರ್ಯಭಾರ) ತಾನೇ ನಿರ್ವಹಿಸುತ್ತಲಿದ್ದನು.

ಅನ್ವಯ :—ಪ್ರಜಾನಾಂ ವಿನಯಾದಾನಾತ್ ರಕ್ಷಣಾತ್ ಭರಣಾತ್ ಅಪಿ ಸಃ (ಏವ) ಪಿತಾ । ತಾಸಾಂ ಪಿತರಃ ಕೇವಲಂ ಜನ್ಮಹೇತವಃ (ಏವ) ॥ ವಿನಯಸ್ಯ ಆದಾನಂ, ತಸ್ಮಾತ್ ॥ ಜನ್ಮನಃ ಹೇತವಃ ॥

ಪ್ರಜಾನಾಂ = ತನ್ನ ಪ್ರಜೆಗಳಿಗೆ, ವಿನಯಾದಾನಾತ್ = ಶಿಕ್ಷಣ ಕೊಡುವುದರಿಂದ, ರಕ್ಷಣಾತ್ = ರಕ್ಷಿಸುವುದರಿಂದ, ಭರಣಾದಪಿ = ಪೋಷಿಸುವುದರಿಂದ, ಸಃ = ಆ ರಾಜನು, ಪಿತಾ = ತಂದೆಯಾದನು, ತಾಸಾಂ = ಆ ಪ್ರಜೆಗಳ, ಪಿತರಃ = ನಿಜವಾದ ತಂದೆಯಾದವನು (ಅಪ್ಪನೆನಿಸಿಕೊಳ್ಳುವವನು), ಜನ್ಮಹೇತವಃ = ಹುಟ್ಟಿಸಲು ಮಾತ್ರ ಕಾರಣ.

**25. ಸ್ಥಿತ್ಯೈ ದಂಡಯತೋ ದಂಡ್ಯಾನ್ ಪರಿಣೇತುಃ ಪ್ರಸೂತಯೇ ।**
**ಅಪ್ಯರ್ಥಕಾಮೌ ತಸ್ಯಾಸ್ತಾಂ ಧರ್ಮ ಏವ ಮನೀಷಿಣಃ ॥ ೨೫ ॥**

ಅವನು ಭೋಗಕಾಮನೆಯಿಂದ ಸ್ತ್ರೀಯರನ್ನು ಲಗ್ನವಾದುದಲ್ಲ. ಗೃಹಸ್ಥಾಶ್ರಮ ಧರ್ಮಪರಿಪಾಲನೆಗಾಗಿ ಮತ್ತು ಸಂತಾನದ ಅಪೇಕ್ಷೆಯಿಂದ ಲಗ್ನವಾಗಿ ಗೃಹಸ್ಥನಾದನು (ಸದ್‌ಗೃಹಸ್ಥ). ಗೃಹಸ್ಥಾಶ್ರಮದ ಧರ್ಮವನ್ನು (ಧರ್ಮದ ಎಲ್ಲೆಯನ್ನು) ಎಂದೂ ಮೀರಿದವನಲ್ಲ. ಅವನು ಧರ್ಮಪರಿಪಾಲನೆಗಾಗಿ ತಾನು ರಾಜನಾಗಿ ಮಾಡಬೇಕಾದ ಕರ್ತವ್ಯಗಳ ನಿರ್ವಹಣೆಗಾಗಿ ಧನಸಂಪಾದನೆ ಮಾಡಿ (ಆರ್ಥಿಕ ನೆರವು) ಹಣವನ್ನು ಸಂಗ್ರಹಿಸುತ್ತಿದ್ದನು. ಆ ಹಣವನ್ನು ದುಂದುವ್ಯಯಮಾಡದೆ ಲೋಕಕಲ್ಯಾಣಕ್ಕೆ

ವಿನಿಯೋಗಿಸುತ್ತಿದ್ದನು. ಲೋಕದಲ್ಲಿ ನ್ಯಾಯ, ದಂಡಾರ್ಹರನ್ನು ದಂಡಿಸುತ್ತಿದ್ದನು (ಶಿಕ್ಷಿಸು). ಶಿಕ್ಷಾರ್ಹರು ತನ್ನ ರಕ್ತಬಂಧುಗಳಾದರೂ ಶಿಕ್ಷಿಸುತ್ತಿದ್ದನು. ಇದರಿಂದ ಅರ್ಥ, ಕಾಮಗಳು ಧರ್ಮವಾಗಿ ಪರಿಣಮಿಸುತ್ತಿದ್ದವು. ಹೀಗೆ ಅರ್ಥ, ಕಾಮಸಾಧನಗಳನ್ನು ಧರ್ಮಕ್ಕೋಸ್ಕರ ಅನುಷ್ಠಾನ ಮಾಡುವುದರಿಂದ ಅವು ಧರ್ಮಾಚರಣೆಗಳೇ ಆದುವು (ನಿತ್ಯಧರ್ಮಪರಿಪಾಲನೆ).

ಅನ್ವಯ :—ದಂಡ್ಯಾನ್ ಸ್ಥಿತ್ಯೈ ದಂಡಯತಃ ಪ್ರಸೂತಯೇ ಪರಿಣೇತುಃ ತಸ್ಯ ಮನೀಷಿಣಃ ಅರ್ಥಕಾಮೌ ಅಪಿ ಧರ್ಮೋ ಆಸ್ತಾಮ್ ॥ ದಂಡಯತಿ ಇತಿ ದಂಡಯನ್ ತಸ್ಯ। ದಂಡಮರ್ಹಂತೀತಿ ದಂಡ್ಯಾಃ ತಾನ್। ಅರ್ಥಶ್ಚ, ಕಾಮಶ್ಚ—ಅರ್ಥಕಾಮೌ। ಆಸೀತ್—ಆಸ್ತಾಂ—ಆಸನ್। ಆಸೀ—ಆಸ್ತಂ—ಆಸ್ತ। ಆಸಂ—ಆಸ್ವ—ಆಸ್ಮ—ಅಸ—ಭುವಿ—ಲಙ್—ಪ್ರ—ಪು—ದ್ವಿ—ಆಸ್ತಾಮ್.

ದಂಡ್ಯಾನ್ = ದಂಡಿಸಲು ಯೋಗ್ಯರಾದವರನ್ನೇ, ಸ್ಥಿತ್ಯೈ = ಲೋಕಮರ್ಯಾದೆಗೋಸ್ಕರ, ದಂಡಯತಃ = ಶಿಕ್ಷಿಸುವ, ಪ್ರಸೂತಯೇ = ಸಂತಾನಕ್ಕೋಸ್ಕರವೇ. ಪರಿಣೇತುಃ = ವಿವಾಹ ಮಾಡಿಕೊಂಡಿರುವ, ಮನೀಷಿಣಃ = ವಿದ್ವಾಂಸನಾದ. ತಸ್ಯ = ಆ ದಿಲೀಪನಿಗೆ, ಅರ್ಥಕಾಮೌ ಅಪಿ = ಅರ್ಥಕಾಮಗಳೂ ಕೂಡ, ಧರ್ಮ ಏವ = ಧರ್ಮಕಾರ್ಯಗಳಿಗಾಗಿಯೇ (ಧರ್ಮಕಾರ್ಯವಾಗಿಯೇ), ಆಸ್ತಾಂ = ಪರಿಣತವಾದುವು.

## 26. ದುದೋಹ ಗಾಂ ಸ ಯಜ್ಞಾಯ ಸಸ್ಯಾಯ ಮಘವಾ ದಿವಮ್ ।
## ಸಂಪದ್ವಿನಿಮಯೇನೋಭೌ ದಧತುರ್ಭುವನದ್ವಯಮ್ ॥ ೨೬ ॥

ಮರ್ತ್ಯಲೋಕದ ರಾಜನಾದ ದಿಲೀಪನು, ಗೋಪಾಲನು ಹಸುವನ್ನು ಕರೆದು ಕ್ಷೀರವನ್ನು (ಹಾಲನ್ನು) ಪಡೆಯುವಂತೆ, ಭೂಮಿಯನ್ನು ಕರೆದು (ಹಿಂಡಿ) ಕಂದಾಯವನ್ನು (ತೆರಿಗೆಯನ್ನು) ವಸೂಲುಮಾಡಿ ಹೇರಳ ಹಣವನ್ನು ಸಂಗ್ರಹಿಸುತ್ತಿದ್ದನು. ಆದರೆ ಪೂರ್ಣವಾಗಿ ಹಿಂಡದೆ ಸ್ವಲ್ಪ ಅಂಶವನ್ನು ಕರುವಿಗೆ ಬಿಡುವಂತೆ ಪ್ರಜೆಗಳಿಗೆ ಬಿಡುತ್ತಿದ್ದನು. ಆ ದ್ರವ್ಯರಾಶಿಯನ್ನು ವಿನಿಯೋಗಿಸಿ ಯಜ್ಞಯಾಗಾದಿಗಳನ್ನು (ಹೋಮ ನೇಮಾದಿಗಳನ್ನು) ನಡೆಸಿ ಇಂದ್ರಾದಿದೇವತೆಗಳನ್ನು ತೃಪ್ತಿಗೊಳಿಸಿದನು. ಇದರಿಂದ ತೃಪ್ತನಾದ ಮಹೇಂದ್ರನು (ಸ್ವರ್ಗಾಧಿಪತಿ) ಭೂಮಿಯಲ್ಲಿ ಸಸ್ಯಾದಿಗಳ ಅಭಿವೃದ್ಧಿಗಾಗಿ ಕಾಲಕಾಲಕ್ಕೆ ಸರಿಯಾಗಿ ಮಳೆಗರೆಯುತ್ತಿದ್ದನು. ಹೀಗೆ ಮರ್ತ್ಯಾಧಿಪತಿಯಾದ ದಿಲೀಪನೂ, ಸ್ವರ್ಗಾಧಿಪತಿಯಾದ ಸುರೇಂದ್ರನೂ ತಮ್ಮ ಸಂಪತ್ತನ್ನು ವಿನಿಯೋಗಿಸಿ ಪರಸ್ಪರ ವಿನಿಮಯ ಮಾಡಿಕೊಂಡು (ಕೊಡುವ ಮತ್ತು ಕೊಳ್ಳುವ) (ಅನ್ಯೋನ್ಯ) (ನೀಡುವ ಮತ್ತು ಪಡೆಯುವ ಪದ್ಧತಿ) ಭೂಮಿ-ಸ್ವರ್ಗಗಳನ್ನು ಪೋಷಿಸಿದರು.

ಅನ್ವಯ :—ಸಃ (ದಿಲೀಪಃ) ಯಜ್ಞಾಯ ಗಾಂ ದುದೋಹ ಮಘವಾ (ಚ) ಸಸ್ಯಾಯ ದಿವಂ (ದುದೋಹ)। (ಏವಂ) ಉಭೌ ಸಂಪದ್ವಿನಿಮಯೇನ ಭುವನದ್ವಯಂ ದಧತುಃ ॥

ದುದೋಹ—ದುದುಹತುಃ—ದುದುಹುಃ। ದುದೋಹಿಥ, ದುದೋಗ್ಧ—ದುದುಹಥುಃ—ದುದುಹ। ದುದೋಹ—ದುದುಹಿವ—ದುದುಹಿಮ। ದುಹ—ಪ್ರಪೂರಣೇ

—ಲಿಟ್ ॥ ಸಂಪದಃ ವಿನಿಮಯಃ ತೇನ। ಭುವನಯೋಃ ದ್ವಯಮ್। ದಧೌ—ದಧತುಃ—ದದುಃ। ದಧಿಥ—ದಧಾಥ—ದದಥುಃ—ದಧ। ದಧೌ—ದಧಿವ—ದಧಿಮ॥ ಡುಧಾಞ್—ಧಾರಣಪೋಷಣಯೋಃ—ಲಿಟ್—ಪ್ರ—ಪು—ದ್ವಿ॥

ಸಃ = ಆ ದಿಲೀಪರಾಜನು, ಯಜ್ಞಾಯ = ಯಜ್ಞ ಮಾಡಲು. ಗಾಂ = ಭೂಮಿಯನ್ನು, ದುದೋಹ = ಕರೆದನು, ಮಘವಾ = ಇಂದ್ರ, ಸಸ್ಯಾಯ = ಸಸ್ಯವನ್ನು ಬೆಳೆಸಲು, ದಿವಂ = ಸ್ವರ್ಗವನ್ನು, ದುದೋಹ = ಕರೆದನು (ಮಳೆ ಸುರಿಸಿದನು), ಉಭೌ = ಈ ಇಬ್ಬರು, ಸಂಪದ್ವಿನಿಮಯೇನ = ಪರಸ್ಪರ ತಮ್ಮ ಸಂಪತ್ತನ್ನು ವಿನಿಮಯ ಮಾಡಿಕೊಳ್ಳುವುದರಿಂದ, ಭುವನದ್ವಯಂ = ಎರಡು ಲೋಕಗಳನ್ನು (ಲೋಕ, ಅಲೋಕ), ದಧತುಃ = ಪೋಷಿಸಿದರು.

**27.** ನ ಕಿಲಾನುಯಯುಸ್ತಸ್ಯ ರಾಜಾನೋ ರಕ್ಷಿತುರ್ಯಶಃ।
ವ್ಯಾವೃತ್ತಾ ಯತ್ಪರಸ್ವೇಭ್ಯಃ ಶ್ರುತೌ ತಸ್ಕರತಾ ಸ್ಥಿತಾ ॥ ೨೭ ॥

ಪ್ರಜಾಪರಿಪಾಲನೆಯಲ್ಲಿ ತತ್ಪರನಾದ ದಿಲೀಪನು, ತನ್ನ ಕರ್ತವ್ಯನಿಷ್ಠೆಯಿಂದ ಅಪಾರ ಕೀರ್ತಿಯನ್ನು ಸಂಪಾದಿಸಿದನು. ಇತರ ಅರಸರು ಪ್ರಜಾರಕ್ಷಣೆಯಲ್ಲಿ ಅವನಂತೆ ಹೆಸರು ಗಳಿಸಲಾರದೆ ಹೋದರು. ಒಂದು ವೇಳೆ ಅವನಂತೆ ಕೀರ್ತಿಗಳಿಸಿದ್ದರೆ ಅವನಿಂದ ಕದ್ದಂತೆ ಆಗುವುದು. ಅವನ ರಾಜ್ಯದಲ್ಲಿ ತಸ್ಕರತೆ ಅಥವಾ ಕಳವು, ಪುಂಡಾಟಿಕೆ (ಪುಂಡು ಪೋಕರಿತನ) ಮೊದಲಾದ ಪದಗಳ ಉಪಯೋಗವೇ ಇರಲಿಲ್ಲ. ಆ ಶಬ್ದವು ಪದಕೋಶದಲ್ಲಿ ಅಥವಾ ಶ್ರುತಿಯಲ್ಲಿ ಮಾತ್ರ ಆಶ್ರಯಪಡೆಯಿತು. ಶ್ರುತಿಯಲ್ಲಿ ಓಂ ತಸ್ಕರಾಣಾಂ ಪತಯೇ ನಮಃ ಎಂದಿದೆ. ಅವನ ರಾಷ್ಟ್ರದಲ್ಲಿ ಪರರ ದ್ರವ್ಯವನ್ನು ಅಪಹರಿಸತಕ್ಕ ಒಬ್ಬನೇ ಒಬ್ಬ ಕಳ್ಳನೂ ಇರಲಿಲ್ಲ. ಕದಿಯಬೇಕೆಂಬ ಭಾವನೆಯಾಗಲೀ, ಅವಶ್ಯಕತೆಯಾಗಲೀ ಅವರಲ್ಲಿ ಇರಲಿಲ್ಲ. ಪರರ ವಸ್ತುವನ್ನು ಬಯಸದ ನಿರ್ಮಲಚಿತ್ತದ, ಮುಗ್ಧ ಜನರು ಅವನ ರಾಜ್ಯದ ಪ್ರಜೆಗಳಾಗಿದ್ದರು. ಜನರು ಕಳ್ಳಕಾಕರ, (ಕಳ್ಳಖದೀಮರ, ಡಕಾಯಿತರ, ಠಕ್ಕರ ಮತ್ತು ಲಫಂಗರ) ಭೀತಿಯಿಂದ ಮುಕ್ತರಾಗಿದ್ದರು. ಅವರಿಗೆ ದೇವರ ಭಯವೂ ಇತ್ತು.

ಅನ್ವಯ :—ರಾಜಾನಃ ತಸ್ಯ ರಕ್ಷಿತುಃ ಯಶಃ ನ ಅನುಯಯುಃ ಕಿಲ। ಯತ್ ತಸ್ಕರತಾ ಪರಸ್ವೇಭ್ಯಃ ವ್ಯಾವೃತ್ತಾ (ಸತೀ) ಶ್ರುತೌ (ಏವ) ಸ್ಥಿತಾ॥

ಯಯೌ — ಯಯತುಃ—ಯಯುಃ। ಯಯಿಥ—ಯಯಾಥ—ಯಯಥುಃ—ಯಯ। ಯಯೌ—ಯಯಿವ—ಯಯಿಮ॥ ಯಾ—ಪ್ರಾಪಣೇ—ಲಿಟ್॥ ಪರೇಷಾಂ ಸ್ವಾನಿ। ತೇಭ್ಯಃ॥ ತಸ್ಕರಸ್ಯ ಭಾವಃ—ತಸ್ಕರತಾ॥

ರಾಜಾನಃ = ಇತರ ರಾಜರು, ರಕ್ಷಿತುಃ = ಪ್ರಜಾರಕ್ಷನಾದ, ತಸ್ಯ = ಆ ದಿಲೀಪನ, ಯಶಃ = ಕೀರ್ತಿಯನ್ನು, ನ ಅನುಯಯುಃ ಕಿಲ = ಅನುಸರಿಸಲಿಲ್ಲ, ಯತ್ = ಯಾವ ಕಾರಣದಿಂದ, ತಸ್ಕರತಾ = ಚೋರತನವು, ಪರಸ್ವೇಭ್ಯಃ = ತನ್ನ ವಿಷಯವಾದ, ಇತರರ ಧನದಿಂದ, ವ್ಯಾವೃತ್ತಾ = ಅದನ್ನು ಹೊಂದದೆ, ಶ್ರುತೌ = ವಾಚಕ ಶಬ್ದದಲ್ಲಿ ಮಾತ್ರ, ಸ್ಥಿತಾ = ಇದ್ದಿತು.

**28. ದ್ವೇಷ್ಯೋಽಪಿ ಸಂಮತಃ ಶಿಷ್ಟಃ ತಸ್ಯಾರ್ತಸ್ಯ ಯಥೌಷಧಮ್ ।**
**ತ್ಯಾಜ್ಯೋ ದುಷ್ಟಃ ಪ್ರಿಯೋಽಪ್ಯಾಸೀದಂಗುಲೀವೋರಗಕ್ಷತಾ ॥ ೨೮ ॥**

ದಿಲೀಪನ ನ್ಯಾಯನಿಷ್ಠೆಯು (ರಾಜಧರ್ಮವು) ಅಸದೃಶವಾದುದು. ಆ ಇಳಾಧಿಪತಿಯು, ಹಗೆಯಾದರೂ ಸರಿಯೆ, ಸತ್ಕರ್ಮಗಳ ಆದ್ಯಪ್ರವರ್ತಕನಾದ ಅವನು, ತಾನು ಧರ್ಮನಿಷ್ಠನೂ ಸಜ್ಜನನೂ ಆದುದರಿಂದ ಸತ್ಕಾರ್ಯಗಳಿಂದ ಹಗೆಯ ಮನವೊಲಿಸಿ ಅವರನ್ನು ಆಸಕ್ತಿಯಿಂದ ಮಿತ್ರರನ್ನಾಗಿ ಪರಿವರ್ತಿಸಲು ಯತ್ನಿಸುತ್ತಿದ್ದನು. ಇದರಲ್ಲಿ ಅವನು ಯಶಸ್ಸನ್ನು ಕಾಣುತ್ತಿದ್ದನು. ದಮನ ಒಂದೇ ಮಾರ್ಗವಲ್ಲ, ಮರ್ಯಾದೆ ತೋರಿ ಪ್ರೀತಿಯಿಂದ ಹಗೆಗಳನ್ನು ದಾರಿಗೆ ತರುತ್ತಿದ್ದನು. ರೋಗಿಗೆ ಔಷಧಿಯು ಪಥ್ಯವೆನಿಸದು. ಆದರೂ ರೋಗಪೀಡಿತನು ಕಹಿಯಾದ ಔಷಧವನ್ನು ಸೇವಿಸಿ ಆರೋಗ್ಯವಂತನಾಗುವನು. ಪರಿಣಾಮವು ಸುಖದಾಯಕವಾಗುವ ಇಚ್ಛೆಯಿಂದ ಕಟುವಾದ ಔಷಧವನ್ನು ಸೇವಿಸಿ ಗುಣಮುಖನಾಗುವನು. ಅದರಂತೆ ಬಂಧುವಾದರೂ ಸರಿಯೆ, ಮಿತ್ರನಾದರೂ ಸರಿಯೆ, ದುರ್ಮಾರ್ಗಪ್ರವೃತ್ತನಾದರೆ ನ್ಯಾಯನಿಷ್ಠುರನಾದ, ನ್ಯಾಯಮೂರ್ತಿಯಾದ ದೊರೆಯು ಅವನನ್ನು ದ್ವೇಷಿಸಿ ಹಾವು ಅಗಿದ (ಉರಗಕ್ಷತಾ) ಬೆರಳನ್ನು ಕತ್ತರಿಸಿ ತೆಗೆಯುವಂತೆ, ಮಮತೆಯಿಲ್ಲದೆ, ರಕ್ತವಾಹಿನಿಯನ್ನು ಸೀಳಿ ವಿಷರಕ್ತವನ್ನು ಹೊರಬಿಡುವಂತೆ ದೂರೀಕರಿಸುತ್ತಿದ್ದನು, ಅವನನ್ನು ಶಿಕ್ಷಿಸುತ್ತಿದ್ದನು. ಹೀಗಾಗಿ ಯಾರೇ ಆಗಿರಲಿ, ಶಿಷ್ಟನೇ ಅವನ ಬಂಧು, ದುಷ್ಟನೇ ಅವನ ಶತ್ರು. ದುಷ್ಟರೂ ಅವನನ್ನು ಕಂಡರೆ ಭಯಪಡುತ್ತಿದ್ದರು. ಸಾರ್ವಭೌಮನಾದ ಅವನು ಎಲ್ಲರನ್ನೂ ತನ್ನ ಹತೋಟಿಯಲ್ಲಿಟ್ಟು ಜಾಣತನದಿಂದ ಆಳುತ್ತಿದ್ದನು.

ಅನ್ವಯ :—ಶಿಷ್ಟಃ (ಜನಃ) ದ್ವೇಷ್ಯಃ ಅಪಿ ಆರ್ತಸ್ಯ ಯಥಾ ಔಷಧಂ (ತಥಾ) ತಸ್ಯ ಸಮ್ಮತಃ (ಆಸೀತ್) । ದುಷ್ಟಃ (ತು) ಪ್ರಿಯಃ ಅಪಿ ಉರಗಕ್ಷತಾ ಅಂಗುಲೀ ಇವ ತ್ಯಾಜ್ಯಃ (ಆಸೀತ್) ॥

ಉರಸಾ ಗಚ್ಛತೀತಿ ಉರಗಃ । ಉರಗೇಣ ಕ್ಷತಾ । ಆಸೀತ್—ಆಸ್ತಾಂ—ಆಸನ್—ಇತ್ಯಾದಿ । ಅಸ—ಭುವಿ—ಲಙ್ ॥

ಶಿಷ್ಟಃ = ಸಜ್ಜನರು, ದ್ವೇಷ್ಯಃ ಅಪಿ = ಶತ್ರುವಾದರೂ, ಆರ್ತಸ್ಯ = ರೋಗಪೀಡಿತನಿಗೆ. ಔಷಧಯಥಾ = ಔಷಧದಂತೆ, ತಸ್ಯ = ಆ ದಿಲೀಪನಿಗೆ, ಸಮ್ಮತಃ = ಇಷ್ಟನು, ಆಸೀತ್ = ಆದನು, ದುಷ್ಟಃ = ದುಷ್ಟನು, ಪ್ರಿಯೋಽಪಿ = ಪ್ರೇಮಪಾತ್ರನಾಗಿದ್ದರೂ, ಉರಗಕ್ಷತಾ = ಸರ್ಪ ಕಚ್ಚಿದ, ಅಂಗುಲೀ ಇವ = ಬೆರಳಿನಂತೆ, ತ್ಯಾಜ್ಯಃ = ಬಿಡಲು ಯೋಗ್ಯನು, ಆಸೀತ್ = ಆದನು.

**29. ತಂ ವೇಧಾ ವಿದಧೇ ನೂನಂ ಮಹಾಭೂತಸಮಾಧಿನಾ ।**
**ತಥಾ ಹಿ ಸರ್ವೇ ತಸ್ಯಾಸನ್ ಪರಾರ್ಥೈಕಫಲಾ ಗುಣಾಃ ॥ ೨೯ ॥**

ವಿಧಾತನು (ವೇಧಸ) ಪೃಥ್ವಿ, ಆಪ, ತೇಜಸ್ಸು, ವಾಯು, ಆಕಾಶಗಳೆಂಬ ಪಂಚಭೂತಗಳನ್ನು ಸೃಷ್ಟಿಸಿದನಷ್ಟೆ. ಈ ಪಂಚಮಹಾಭೂತಗಳಿಗೆ ಶಬ್ದ, ಸ್ಪರ್ಶ, ರೂಪ, ರಸ,

ಗಂಧಗಳೆಂಬ ಪಂಚತನ್ಮಾತ್ರಗಳು ಕಾರಣವಾಗಿವೆ. ಅವು ಪರಪ್ರಯೋಜನಾರ್ಥವಾಗಿವೆ ಎಂದು ಶಾಸ್ತ್ರಗಳು ಸಾರುತ್ತಿವೆ (ಪರಾರ್ಥೈಕಫಲಾಃ). ಹೀಗಿರುವುದರಿಂದಲೇ ಬ್ರಹ್ಮ ದೇವನು (ಪಿತಾಮಹನು) ದಿಲೀಪನನ್ನು ಸೃಷ್ಟಿಸುವಾಗ ಪರಹಿತಾರ್ಥವೇ ಮುಖ್ಯ ಗುಣವಾಗಿರುವ ಮೂಲವಸ್ತುಗಳಿಂದ ಸೃಷ್ಟಿಸಿರಬೇಕು. ಇದರಿಂದಾಗಿ ಕಾರಣವು ಪರಪ್ರಯೋಜಕವೆಂದಮೇಲೆ ಕಾರ್ಯವೂ ಆಗಿರುವುದು ಲೋಕಪ್ರಸಿದ್ಧವಾಗಿದೆ. ಹೀಗಾಗಿ ದಿಲೀಪನ ಸ್ವಭಾವವೇ ಪರೋಪಕಾರದ ಗುಣಧರ್ಮವನ್ನು ಪಡೆದಿತ್ತು. ಅವನು ಉದಾತ್ತಭಾವನೆಗಳಿಂದ ಕೂಡಿದ ಅಸಾಧಾರಣ ವ್ಯಕ್ತಿ. ಉದಾತ್ತಪುರುಷೋತ್ತಮ. ಪರೋಪಕಾರಮಾಡುವ ಗುಣಧರ್ಮವನ್ನು ಹೊಂದಿದ್ದ ಮಾನವಶ್ರೇಷ್ಠನು. ಅವನು ಎಸಗುತ್ತಿರುವ ಪ್ರತಿಯೊಂದು ಕಾರ್ಯದಲ್ಲಿಯೂ ಅವನ ಪರಹಿತಗುಣವು ಸ್ಫುಟವಾಗಿ ಎದ್ದುಕಾಣುತ್ತಿತ್ತು.

ಅನ್ವಯ :—ವೇಧಾಃ ತಂ ಮಹಾಭೂತಸಮಾಧಿನಾ ನೂನಂ ವಿದಧೇ। ತಥಾ ಹಿ ತಸ್ಯ ಸರ್ವೇ ಗುಣಾಃ ಪರಾರ್ಥೈಕಫಲಾಃ ಆಸನ್ ॥

ಸಮಾಧೀಯತೇ ಅನೇನ ಇತಿ ಸಮಾಧಿಃ—ಕಾರಣಸಾಮಗ್ರೀಮಹಾಭೂತಾನಾಂ ಸಮಾಧಿಃ ॥ ಪರೇಷಾಂ ಅರ್ಥಃ—ಪರಾರ್ಥಃ ಏಕಃ ಫಲಂ ಯೇಷಾಂ ತೇ ಪರಾರ್ಥೈಕ ಫಲಾಃ । (ವಿ)ದಧೇ — ದಧಾತೇ — ದಧಿರೇ — ಇತ್ಯಾದಿ — ಡುಧಾಞ್ — ಧಾರಣ ಪೋಷಣಯೋಃ—ಲಿಟ್—ಆಸನ್ ॥

ವೇಧಾ = ಬ್ರಹ್ಮನು, ತಂ = ಆ ದಿಲೀಪನನ್ನು, ಮಹಾಭೂತಸಮಾಧಿನಾ = ಪಂಚ ಮಹಾಭೂತಗಳ ಕಾರಣಸಾಮಗ್ರಿಗಳಿಂದ, ವಿಧಧೇ ನೂನಂ = ನಿಶ್ಚಯವಾಗಿಯೂ ಸೃಷ್ಟಿಸಿದನು, ತಥಾ ಹಿ = ಇದು ನಿಶ್ಚಯವಾಗಿದೆ, ತಸ್ಯ= ಆ ದಿಲೀಪನ, ಸರ್ವೇ ಗುಣಾಃ = ಎಲ್ಲಾ ಗುಣಗಳೂ, ಪರಾರ್ಥೈಕಫಲಾಃ = ಪರಪ್ರಯೋಜನವೊಂದೇ ಮುಖ್ಯ ಫಲವಾಗಿರುವವುಗಳು, ಆಸನ್ = ಆದವು.

**30. ಸ ವೇಲಾವಪ್ರವಲಯಾಂ ಪರಿಖೀಕೃತಸಾಗರಾಮ್ ।**
**ಅನನ್ಯಶಾಸನಾಮುರ್ವೀಂ ಶಶಾಸೈಕಪುರೀಮಿವ ॥ ೩೦ ॥**

ಸಕಲ ಭೂಮಂಡಲವನ್ನು ಏಕಚಕ್ರಾಧಿಪತ್ಯವನ್ನಾಗಿ ಮಾಡಿಕೊಂಡು, ಅನಾಯಾಸ ವಾಗಿ ರಕ್ಷಿಸುತ್ತ ರಾಜ್ಯಭಾರವನ್ನು ಮಾಡುತ್ತಿದ್ದನು. ಅವನ ಸಾಮ್ರಾಜ್ಯಕ್ಕೆ ಸಪ್ತ ಸಾಗರಗಳೇ ಗಡಿಗಳು. ಅವುಗಳೇ ಕಂದಕಗಳು. ಸಮುದ್ರದ ದಂಡೆಗಳೇ ಪ್ರಾಕಾರಗಳು ಅಥವಾ ಕೋಟೆಗಳು. ನಾಲ್ಕು ಸಮುದ್ರಗಳಿಂದ ಆವೃತವಾಗಿರುವ ವಿಶಾಲವಾದ ಭೂಮಂಡಲವನ್ನು ಒಂದು ಪಟ್ಟಣವೆಂಬಂತೆ (ಒಂದೇ ನಗರವೆಂಬಂತೆ) ತನ್ನ ಶಾಸನಕ್ಕೆ ಒಳಪಡಿಸಿ ಆಳುತ್ತಿದ್ದನು. ಇತರ ರಾಜರು ಅವನಿಗೆ ಅಧೀನರಾಗಿದ್ದರು. ಅವನು ಅಧಿರಾಜ. ಅವನು ವಿಶ್ವವಿಜೇತನಾದ ಸಾರ್ವಭೌಮನು. ವಿಶ್ವವಿಭು, ವಿಶ್ವಪ್ರಭು.

ಅನ್ವಯ :—ಸಃ ವೇಲಾವಪ್ರವಲಯಾಂ ಪರಿಖೀಕೃತ ಸಾಗರಾಮ್ ಅನನ್ಯಶಾಸನಾಂ (ಚ) ಉರ್ವೀಮ್ ಏಕಪುರೀಮಿವ ಶಶಾಸ ॥

ವಪ್ರಾಃ ವಲಯಾ ಇವ, ವಪ್ರವಲಯಾಃ ವೇಲಾ ಏವ ವಪ್ರವಲಯಾಃ ಯಸ್ಯಾಃ ಸಾ ವೇ—ಯಾತಾಮ್॥ ಅಪರಿಖಾಃ ಪರಿಖಾಃ ಸಂಪದ್ಯಮಾನಾಃ ಕೃತಾಃ ಪರಿಖೀಕೃತಾಃ। ಪರಿಖೀಕೃತಾಃ ಸಾಗರಾಃ ಯಸ್ಯಾಃ ಸಾ, ತಾಮ್ ॥ ಅನ್ಯಸ್ಯ ಶಾಸನಂ। ಅವಿದ್ಯಮಾನಂ ಅನ್ಯಶಾಸನಂ ಯಸ್ಯಾಃ ಸಾ, ತಾಮ್ । ಏಕಾ ಚ ಸಾ ಪುರೀ ಚ, ತಾಮ್ ॥ ಶಶಾಸ—ಶಶಾಸತುಃ— ಶಶಾಸುಃ । ಶಶಾಸಿಥ—ಶಶಾಸಥುಃ—ಶಶಾಸ । ಶಶಾಸ—ಶಶಾಸಿವ—ಶಶಾಸಿಮ ॥ ಶಾಸು—ಅನುಶಿಷ್ಟೌ—ಲಿಟ್ ॥

ಸಃ = ಆ ಮಹಾರಾಜನು, ವೇಲಾವಪ್ರವಲಯಾಂ = ವೇಲಾ = ಸಮುದ್ರದಡವೇ ಸುತ್ತಲಿನ ಗೋಡೆಯಾಗಿರುವ, ಪರಿಖೀಕೃತ ಸಾಗರಾಂ = ಕಂದಕವಾಗಿ ಮಾಡಲ್ಪಟ್ಟ ಸಮುದ್ರಗಳುಳ್ಳ, ಅನ್ಯಶಾಸನಾಂ = ಇತರರ ರಕ್ಷಣೆ ಇಲ್ಲದಿರುವ, ಉರ್ವೀಂ = ಭೂಮಂಡಲವನ್ನು, ಏಕಪುರೀಮಿವ = ಒಂದೇ ಪಟ್ಟಣವನ್ನು ಎನ್ನುವಂತೆ, ಶಶಾಸ = ಆಳಿದನು.

**31.** **ತಸ್ಯ ದಾಕ್ಷಿಣ್ಯರೂಢೇನ ನಾಮ್ನಾ ಮಗಧವಂಶಜಾ।**
**ಪತ್ನೀ ಸುದಕ್ಷಿಣೇತ್ಯಾಸೀತ್ ಅಧ್ವರಸ್ಯೇವ ದಕ್ಷಿಣಾ ॥ ೩೦ ॥**

ಸುದಕ್ಷಿಣಾದೇವಿಯು ಮಗಧರಾಜನಸುತೆ. ರಾಜನ ಪಟ್ಟಮಹಿಷಿ, ಪಟ್ಟದರಸಿ. ತನ್ನ ಹೆಸರಿಗೆ ತಕ್ಕಂತೆ ದಾಕ್ಷಿಣ್ಯಾದಿ ಮಾನವೀಯ ಗುಣಸಂಪನ್ನೆ. ಆ ಜಗನ್ಮೋಹಿನಿಯು ಯಜ್ಞದೇವನ ಯಜ್ಞವನ್ನು ಬೆಳಗಿಸುತ್ತಿರುವ ಸತಿಯಾದ ದಕ್ಷಿಣಾದೇವಿಯಂತೆ (ದಕ್ಷಿಣೆಯಂತೆ) ಋತ್ವಿಜರಿಗೆ ದಕ್ಷಿಣೆಯನ್ನು ಕೊಡಿಸುವವಳು. ಸುದಕ್ಷಿಣೆ ಎಂಬ ನಾಮಧೇಯಕ್ಕೆ ಅರ್ಹಳಾದವಳು. ಸಕಲಗುಣಸಂಪನ್ನೆಯಾದ ಭಾಗ್ಯಲಕ್ಷ್ಮಿ, ಸಾಮ್ರಾಟ ದಿಲೀಪನಿಗೆ ಅನುರೂಪಳಾದ, ಅನುಕೂಲಳಾದ, ದೃಢನಡತೆಯುಳ್ಳ ಸಾಧ್ವೀ ಸ್ತ್ರೀರತ್ನ. ಆ ಸತಿ ಪ್ರಖ್ಯಾತವಾದ ಮಗಧರಾಜವಂಶದಲ್ಲಿ (ಮಾಗಧವಂಶದಲ್ಲಿ) ಹುಟ್ಟಿದವಳು. ಪುನೀತೆ, ಸತ್ಯಸಂಧೆ, ಪ್ರಫುಲ್ಲವದನೆ, ತೇಜಸ್ವಿನಿ, ನಿತ್ಯಶೋಭಿತೆ.

ಅನ್ವಯ :—ಸಃ ವೇಲಾವಪ್ರವಲಯಾಂ ಪರಿಖೀಕೃತ ಸಾಗರಾಮ್ ಅನನ್ಯಶಾಸನಾಂ (ಚ) ಉರ್ವೀಮ್ ಏಕಪುರೀಮಿವ ಶಶಾಸ॥ ದಕ್ಷಿಣಸ್ಯ ಭಾವಃ ದಾಕ್ಷಿಣ್ಯಂ। ತೇನ ರೂಢಂ ದಾಕ್ಷಿಣ್ಯರೂಢಂ। ತೇನ॥ ಮಗಧಾನಾಂ ರಾಜಾನಃ ಮಗಧಾಃ, ತೇಷಾಂ ವಂಶಃ ಮಗಧವಂಶೇ ಜಾತಃ, ಮಗಧವಂಶಜಾ। ಆಸೀತ್—ಲಙ್.

ತಸ್ಯ= ಆ ನರೇಂದ್ರನಿಗೆ, ಮಗಧವಂಶಜಾ = ಮಗಧ ದೇಶದ ಅರಸರ ವಂಶದಲ್ಲಿ ಹುಟ್ಟಿದ, ದಾಕ್ಷಿಣ್ಯರೂಢೇನ (ಯುಕ್ತೇನ) = ಇತರಾಭಿಪ್ರಾಯದ ಸರಣಿಯಲ್ಲಿ ಪ್ರಸಿದ್ಧವಾದ, ನಾಮ್ನಾ= ಹೆಸರಿನಿಂದ, ಅಧ್ವರಸ್ಯ=ಯಾಗದ, ದಕ್ಷಿಣಾ ಇವ = ದಕ್ಷಿಣಾ ಎಂಬ ಪತ್ನಿಯಂತೆ, ಸುದಕ್ಷಿಣಾ ಇತಿ = ಸುದಕ್ಷಿಣಾ ಎಂಬ, ಪತ್ನೀ = ಹೆಂಡತಿ, ಆಸೀತ್ = ಇದ್ದಳು.

**32.** **ಕಲತ್ರವನ್ತಮಾತ್ಮಾನಮವರೋಧೇ ಮಹತ್ಯಪಿ।**
**ತಯಾ ಮೇನೇ ಮನಸ್ವಿನ್ಯಾ ಲಕ್ಷ್ಮ್ಯಾ ಚ ವಸುಧಾಧಿಪಃ ॥ ೩೧ ॥**

ಪಟ್ಟಾಭಿಷಿಕ್ತನಾಗಿ, ರಾಜ್ಯವೆಂಬ ರಾಜ್ಯಲಕ್ಷ್ಮಿಯನ್ನು ಈ ಮೊದಲೇ ಪಡೆದ ವಸುಧಾಧಿಪ ದಿಲೀಪನಿಗೆ ವಿಶಾಲ ಬುದ್ಧಿ, ಗುಣಸಂಪನ್ನೆ, ತನ್ನ ಮನವೊಲಿಸುವ, ಮನಾನುಕೂಲೆಯಾದ, ಭಾಗ್ಯಲಕ್ಷ್ಮಿಯಾದ ಪತ್ನಿಯನ್ನು ಹೊಂದಿ ಸುಖಿಯಾಗಿದ್ದನು. ಹೀಗೆ ರಾಜ್ಯಲಕ್ಷ್ಮಿಯೊಂದಿಗೆ, ಭಾಗ್ಯಲಕ್ಷ್ಮಿಯಾದ (ಶ್ರೀಲಕ್ಷ್ಮಿ) ಸತಿಯೂ ಸೇರಿ ರಾಜನು ಸಪತ್ನೀಕನಾಗಿ ರಾರಾಜಿಸಿದನು. ಅವನು ಈ ಎರಡು ಮಂದಿ ಪತ್ನಿಯರಿಗೆ ಸ್ವಾಮಿಯಾಗಿದ್ದನು. ಅವನ ಅಂತಃಪುರದಲ್ಲಿ ಅನೇಕ ಮಂದಿ ರಾಣಿಯರಿದ್ದರೂ (ಬಹುಪತ್ನಿತ್ವ) (ಕಲತ್ರವಾನ್) (ಉಪಪತ್ನಿಯರು) ಈ ಪಟ್ಟಮಹಿಷಿಯು ಎಲ್ಲರಿಗಿಂತಲೂ ಅಧಿಕ ಪ್ರಿಯಳು, ಮನಾನುಕೂಲೆಪ್ರಿಯೆ, ಮಧುರಭಾಷಿಣಿ, ಆತ್ಮಾನುಕೂಲೆ.

ಅನ್ವಯ :—ವಸುಧಾಧಿಪಃ ಅವರೋಧೇ ಮಹತಿ ಸತ್ಯಪಿ ಮನಸ್ವಿನ್ಯಾ ತಯಾ ಲಕ್ಷ್ಮ್ಯಾ ಚ ಆತ್ಮಾನಂ ಕಲತ್ರವಂತಂ ಮೇನೇ ॥

ಕಲತ್ರಂ ಅಸ್ಯ ಅಸ್ತೀತಿ ಕಲತ್ರವಾನ್ ತಂ ॥ ವಸುಧಾಯಾಃ ಅಧಿಪಃ = ವಸುಧಾಧಿಪಃ ॥ ಮೇನೇ—ಮೇನಾತೇ—ಮೇನಿರೇ । ಮೇನಿಷೇ—ಮೇನಾಥೇ—ಮೇನಿಧ್ವೇ । ಮೇನೇ—ಮೇನಿವಹೇ—ಮೇನಿಮಹೇ ॥ ಮನ—ಜ್ಞಾನೇ—ಲಿಟ್ ॥.

ವಸುಧಾಧಿಪಃ = ದಿಲೀಪ ಚಕ್ರವರ್ತಿಯು—ಅವರೋಧೇ = ಅಂತಃಪುರದವರು, ಮಹತಿ (ಸತ್ಯಪಿ) = ಅಧಿಕವಾಗಿದ್ದರೂ, ಮನಸ್ವಿನ್ಯಾ = ದೃಢಚಿತ್ತಳಾದ. ತಯಾ = ಆ ಸುದಕ್ಷಿಣೆಯಿಂದ, ಲಕ್ಷ್ಮ್ಯಾ ಚ = ರಾಜ್ಯಲಕ್ಷ್ಮಿಯಿಂದಲೂ, ಆತ್ಮಾನಂ = ತನ್ನನ್ನು, ಕಲತ್ರವಂತಂ = ಪತ್ನಿಯಿಂದ ಒಡಗೂಡಿದವನನ್ನಾಗಿ, ಮೇನೇ = ತಿಳಿದನು.

**33. ತಸ್ಯಾಮಾತ್ಮಾನುರೂಪಾಯಾಂ ಆತ್ಮಜನ್ಮಸಮುತ್ಸುಕಃ ।**
**ವಿಲಂಬಿತಫಲೈಃ ಕಾಲಂ ಸ ನಿನಾಯ ಮನೋರಥೈಃ ॥ ೩೩ ॥**

"ಆತ್ಮಾ ವೈ ಪುತ್ರ ನಾಮಾಸಿ" ಎಂಬ ಶ್ರುತಿವಚನದಂತೆ ತಂದೆಯು ತಾನೇ ಪುತ್ರ ರೂಪದಿಂದ ಜನಿಸುತ್ತಾನೆಯೆಂದು ಪ್ರತೀತಿ. ದಿಲೀಪರಾಜೇಂದ್ರ ಆತ್ಮಾನುರೂಪಳಾದ, ಉತ್ತಮ ಗುಣಗಳಿಂದ ರಾಜನಿಗೆ ಪ್ರೀತಿಪಾತ್ರಳಾದ ಹುಣ್ಣಿಮೆಯ ಚಂದ್ರನಂತೆ ಪ್ರಕಾಶ ಮಾನಳಾದ ಪಟ್ಟಮಹಿಷಿಯಲ್ಲಿ (ಜಾಯಾ) ಪುತ್ರೋತ್ಪತ್ತಿಯನ್ನು ಆಸಕ್ತಿಯಿಂದ ನಿರೀಕ್ಷಿಸುತ್ತಾ ಬಹುಕಾಲವನ್ನು ಕಳೆದನು. ಕಾಲಚಕ್ರ ಉರುಳುತ್ತಿದ್ದರೂ ತನ್ನ ಆತ್ಮಜನ (ತನ್ನ ಮಗನ) (ಪುತ್ರನ, ಪುತ್ರಿಯ) ಜನನವಾಗಲೇ ಇಲ್ಲ. ಪುತ್ರರೂಪವಾದ (ಆತ್ಮಜಃ) ಫಲವು ವಿಲಂಬಿತವಾಗಿ (ವಿಲಂಬಿತಫಲೈಃ) ಮನೋರಥವು ಈಡೇರದೇ ಇತ್ತು. ಹಾಗಿದ್ದರೂ ಪುತ್ರೋತ್ಪತ್ತಿಯಾಗುವುದೆಂದು ಆ ಸಾರ್ವಭೌಮನು ವಿಶೇಷವಾದ ಆಸಕ್ತಿಯಿಂದ (ಸಮುತ್ಸುಕಃ) ನಿರೀಕ್ಷಿಸುತ್ತಾ ಕಾಲಕಳೆಯುತ್ತಿದ್ದನು.

ಅನ್ವಯ :—ಸ (ದಿಲೀಪಃ) ಆತ್ಮಾನುರೂಪಾಯಾಂ ತಸ್ಯಾಂ (ಸುದಕ್ಷಿಣಾಯಾಂ) ಆತ್ಮಜನ್ಮಸಮುತ್ಸುಕಃ (ಸನ್) ವಿಲಂಬಿತಫಲೈಃ ಮನೋರಥೈಃ ಕಾಲಂ ನಿನಾಯ ॥

ಆತ್ಮನಃ ಅನುರೂಪಾ, ತಸ್ಯಾಮ್ ॥ ಆತ್ಮನಃ ಜನ್ಮ । ಆತ್ಮಜನ್ಮನಿ ಸಮುತ್ಸುಕಃ ॥ ವಿಲಂಬಿತಂ ಫಲಂ ಯೇಷಾಂ ತೇ, ವಿಲಂಬಿತಫಲಾಃ, ತೈಃ ॥ ನಿನಾಯ—ನಿನ್ಯತುಃ—

ನಿನ್ಯುಃ ॥ ನಿನಯಿಥ, ನಿನೇಥ—ನಿನ್ಯಥುಃ—ನಿನ್ಯ। ನಿನಾಯ, ನಿನಯ—ನಿನ್ಯಿವ—ನಿನ್ಯಿಮ ॥ ಣೀಞ್—ಪ್ರಾಪಣೇ—ಲಿಟ್ ॥

ಸಃ = ಆ ದಿಲೀಪನು, ಆತ್ಮಾನುರೂಪಾಯಾಂ = ತನಗೆ ಅನುರೂಪಳಾದ, ತಸ್ಯಾಂ = ಆ ಸುದಕ್ಷಿಣಾದೇವಿಯಲ್ಲಿ. ಆತ್ಮಜನ್ಮಸಮುತ್ಸುಕಃ = ಪುತ್ರೋತ್ಪತ್ತಿಯಲ್ಲಿ ಅತ್ಯಂತ ಆಸಕ್ತನಾಗಿ, ವಿಲಂಬಿತಫಲೈಃ = ಬಹುಕಾಲದಿಂದ ಆಗದೆ ವಿಲಂಬಿತವಾದ ಪುತ್ರಪ್ರಾಪ್ತಿ ರೂಪ ಫಲವುಳ್ಳ, ಮನೋರಥೈಃ = ಆಶಾಪರಂಪರೆಗಳಿಂದ, ಕಾಲಂ = ಸಮಯವನ್ನು, ನಿನಾಯ = ಕಳೆದನು.

**೩೪. ಸಂತಾನಾರ್ಥಾಯ ವಿಧಯೇ ಸ್ವಭುಜಾದವತಾರಿತಾ ।**
**ತೇನ ಧೂರ್ಜಗತೋ ಗುರ್ವೀ ಸಚಿವೇಷು ನಿಚಿಕ್ಷಿಪೇ ॥ ೩೪ ॥**

ಬಹುಕಾಲದಿಂದ ತನ್ನ ಪ್ರಿಯಪತ್ನಿಯಲ್ಲಿ ಪುತ್ರೋತ್ಪತ್ತಿಯಾಗದೇ ಇರುವುದರಿಂದ ಪುತ್ರಕಾಮನೆಗಾಗಿ ಭಗವಂತನನ್ನು ಅರ್ಚಿಸಿ ಪೂಜಿಸಲು ಶಾಸ್ತ್ರೋಕ್ತವಾದ ಕಾರ್ಯಗಳನ್ನು ಶ್ರದ್ಧೆಯಿಂದ ಮಾಡಲು ಯೋಚಿಸಿ ಗುರುತರವಾದ ರಾಜ್ಯಭಾರದ ಹೊರೆಯನ್ನು ಶಕ್ತಿಯುತವಾದ ತನ್ನ ಕೈಗಳಿಂದ ಮೆಲ್ಲನೆ ಕೆಳಗಿಳಿಸಿ, ವಿಶ್ವಾಸಕ್ಕೆ ಪಾತ್ರರಾದ ಮಂತ್ರಿಗಳಿಗೆ ಹಸ್ತಾಂತರಿಸಿದನು. ತಾನು ಹೋಮಾದಿಕಾರ್ಯವನ್ನು ಶ್ರದ್ಧೆಯಿಂದ ನಿರ್ವಹಿಸಲು ನಿರ್ಧರಿಸಿ, ತಾನೇ ನಿರ್ವಹಿಸುತ್ತಿದ್ದ ಗುರುತರವಾದ ರಾಜ್ಯಾಡಳಿತದ ಕಾರ್ಯವನ್ನು ನೋಡಿಕೊಳ್ಳಲು ಯೋಗ್ಯರಾದ ಮಂತ್ರಿಪುಂಗವರನ್ನು ನೇಮಿಸಿದನು. ಮಹತ್ವಾದ ರಾಜಕಾರ್ಯಗಳನ್ನು ಮಂತ್ರಿಗಳು ನಿರ್ವಹಿಸಿಕೊಂಡರು.

ಅನ್ವಯ :—ತೇನ ಸಂತಾನಾರ್ಥಾಯ ವಿಧಯೇ ಸ್ವಭುಜಾದವತಾರಿತಾ ಜಗತೋ ಗುರ್ವೀ ಧೂಃ ಸಚಿವೇಷು ನಿಚಿಕ್ಷಿಪೇ ॥

ಸಂತಾನಃ ಅರ್ಥಃ ಯಸ್ಯ ಸಃ, ಸಂತಾನಾರ್ಥಃ ತಸ್ಮೈ ॥ ಸ್ವಸ್ಯ ಭುಜಃ ತಸ್ಮಾತ್। (ನಿ)ಚಿಕ್ಷಿಪೇ—ಚಿಕ್ಷಿಪಾತೇ—ಚಿಕ್ಷಿಪಿರೇ ಇತ್ಯಾದಿ ॥ ಕ್ಷಿಪ—ಪ್ರೇರಣೇ ಕರ್ಮಣಿ—ಲಿಟ್ ॥ ತೇ = ಆ ದಿಲೀಪನಿಂದ, ಸಂತಾನಾರ್ಥಾಯ = ಪುತ್ರ ಪ್ರಾಪ್ತಿಯೇ ಪ್ರಯೋಜನವಾಗಿರುವ, ವಿಧಯೇ = ಅನುಷ್ಠಾನಕ್ಕೋಸ್ಕರ, ಸ್ವಭುಜಾತ್ = ತನ್ನ ತೋಳ್ಬಲದಿಂದ, ಅವತಾರಿತಾ = ಕೆಳಗೆ ಇಳಿಸಲ್ಪಟ್ಟ, ಜಗತಃ = ಭೂಮಿಯ, ಗುರ್ವೀ = ಮಹತ್ವಾದ, ಧೂಃ = ಭಾರವು, ಸಚಿವೇಷು = ಮಂತ್ರಿಗಳಲ್ಲಿ, ನಿಚಿಕ್ಷಿಪೇ = ಇಡಲ್ಪಟ್ಟಿತು.

**೩೫. ಅಥಾಭ್ಯರ್ಚ್ಯ ವಿಧಾತಾರಂ ಪ್ರಯತೌ ಪುತ್ರಕಾಮ್ಯಯಾ ।**
**ತೌ ದಂಪತೀ ವಸಿಷ್ಠಸ್ಯ ಗುರೋರ್ಜಗ್ಮತುರಾಶ್ರಮಮ್ ॥ ೩೫ ॥**

ಮಗನನ್ನು ಪಡೆಯಬೇಕೆಂಬ ಘನವಾದ ಸದುದ್ದೇಶದಿಂದ ಆ ದಂಪತಿಗಳು ನಿತ್ಯಾಹ್ನಿಕಗಳನ್ನು ನಡೆಸಿ ಪರಿಶುದ್ಧರಾದರು. ಆ ಬಳಿಕ ಲೋಕಪಿತಾಮಹನಾದ ಬ್ರಹ್ಮದೇವನನ್ನು (ವಿಧಾತಾ, ಪ್ರಜಾಪತಿ) ಆ ದಂಪತಿಗಳು ಬಹುಶ್ರದ್ಧೆಯಿಂದ ಪೂಜಿಸಿ ಅರ್ಚಿಸಿದರು. ಹೀಗೆ ಆತ್ಮಶುದ್ಧರಾಗಿ ತಮ್ಮ ಇಷ್ಟಾರ್ಥಸಿದ್ಧಿಗಾಗಿ ಕುಲಗುರುಗಳಾದ ವಸಿಷ್ಠರ ಋಷ್ಯಾಶ್ರಮಕ್ಕೆ ತೆರಳಿದರು.

ಅನ್ವಯಃ:—ಅಥ ಪುತ್ರಕಾಮ್ಯಯಾ ತೌ ಪ್ರಯತೌ ದಂಪತೀ ವಿಧಾತಾರಮ್ ಅಭ್ಯರ್ಚ್ಯ ಗುರೋಃ ವಸಿಷ್ಠಸ್ಯ ಆಶ್ರಮಂ ಜಗ್ಮತುಃ ॥

ಇಚ್ಛಾರ್ಥದಲ್ಲಿ ಪುತ್ರಶಬ್ದದ ಮೇಲೆ ಕಾಮ್ಯ (ಚ್) ಪ್ರತ್ಯಯ. ಅದರ ಮೇಲೆ 'ಅ' ಪ್ರತ್ಯಯ ಬಂದರೆ ಪುತ್ರಕಾಮ್ಯ ಎಂದಾಗುತ್ತದೆ. ಸ್ತ್ರೀತ್ವದಲ್ಲಿ ಅದರ ಮೇಲೆ ಟಾಪ್ ಪುತ್ರಕಾಮ್ಯಾ.

ಜಾಯಾ ಚ ಪತಿಶ್ಚ—ದಂಪತೀ ॥ ಜಗಾಮ—ಜಗ್ಮತುಃ—ಜಗ್ಮುಃ ॥ ಜಗಮಿಥ, ಜಗನ್ಥ—ಜಗ್ಮಥುಃ—ಜಗ್ಮ ॥ ಜಗಾಮ, ಜಗಮ—ಜಗ್ಮಿವ—ಜಗ್ಮಿಮ ॥ ಗಮ್ಲೃ—ಗತೌ—ಲಿಟ್ ॥

ಅಥ = ಆಮೇಲೆ, ಪುತ್ರಕಾಮ್ಯಯಾ = ಮಗನು ಬೇಕೆಂಬ ಇಚ್ಛೆಯಿಂದ, ತೌ ದಂಪತೀ = ಆ ದಂಪತಿಯರು, ಪ್ರಯತೌ = ಪವಿತ್ರರಾಗಿ, ವಿಧಾತಾರಂ = ಬ್ರಹ್ಮದೇವರನ್ನು, ಅಭ್ಯರ್ಚ್ಯ = ಪೂಜಿಸಿ, ಗುರೋಃ = ಕುಲಗುರುಗಳಾದ, ವಸಿಷ್ಠಸ್ಯ = ವಸಿಷ್ಠಮಹರ್ಷಿಗಳ ಆಶ್ರಮಂ = ಆಶ್ರಮವನ್ನು ಕುರಿತು, ಜಗ್ಮಥುಃ = ಹೋದರು.

**36. ಸ್ನಿಗ್ಧಗಂಭೀರನಿರ್ಘೋಷಮೇಕಂ ಸ್ಯಂದನಮಾಶ್ರಿತೌ ।**
**ಪ್ರಾವೃಷೇಣ್ಯಂ ಪಯೋವಾಹಂ ವಿದ್ಯುದೈರಾವತಾವಿವ ॥ ೩೬ ॥**

ಆ ಸತಿಪತಿಗಳು ಸುಂದರವಾದೊಂದು ರಥವನ್ನೇರಿ ತಮ್ಮ ಪಯಣವನ್ನು ಮುಂದುವರಿಸಿದರು. ಆ ರಥದ ಚಕ್ರಗಳು ಗಂಭೀರವಾದ ಮತ್ತು ಮಧುರವಾಗಿ ಜನಾಕರ್ಷಕ ಶಬ್ದವನ್ನು ಮಾಡುತ್ತಾ ಮಾರ್ಗವನ್ನು ಉಪಕ್ರಮಿಸುತ್ತಿದ್ದುವು. ಸುಂದರಮೂರ್ತಿಗಳಾದ ಆ ಇಬ್ಬರು ತೇಜೋಮೂರ್ತಿಗಳು ಒಂದೇ ರಥದಲ್ಲಿ ಉಪಸ್ಥಿತರಾಗಿದ್ದು ಮಳೆಗಾಲದ ಕಪ್ಪಾದ ಮೋಡಗಳ ಮಧ್ಯೆ ಬೆಳಬೆಳಗುವ ಕೋಲ್ಮಿಂಚು ಮತ್ತು ಬಿಳಿಯ ಬಣ್ಣದ ಐರಾವತವೆಂಬ ಇಂದ್ರನ ಸರ್ವಶ್ರೇಷ್ಠ ಗಜವು ಸುಳಿವಂತೆ ಆ ದಂಪತಿಗಳು ಶೋಭಿಸಿದರು. ಇಂದ್ರನ ಐರಾವತವು ಕ್ಷೀರಸಾಗರದಲ್ಲಿ ಸಮುದ್ರಮಥನಕಾಲದಲ್ಲಿ ಹುಟ್ಟಿದ ಆಕಾಶಗಾಮಿಯಾದ (ಆಕಾಶಸಂಚಾರಿಯಾದ) ಗಜೇಂದ್ರ (ಗಜರಾಜ). ಅದು ಆಕಾಶಯಾನ ಮಾಡುವುದರಿಂದ ಮೇಘದಲ್ಲಿದ್ದು ಮಿಂಚಿನ ಸಮೀಪದಲ್ಲಿರುವುದು ಸಹಜವೇ ಆಗಿದೆ.

ಅನ್ವಯಃ:—ಸ್ನಿಗ್ಧಗಂಭೀರನಿರ್ಘೋಷಮ್ ಏಕಂ ಸ್ಯಂದನಮ್ ಆಶ್ರಿತೌ (ಜಗ್ಮತುಃ) ಪ್ರಾವೃಷೇಣ್ಯಮ್ ಪಯೋವಾಹಂ ವಿದ್ಯುದೈರಾವತಾವಿವ ॥

ಸ್ನಿಗ್ಧಶ್ಚಾಸೌ ಗಂಭೀರಶ್ಚ । ಸ್ನಿಗ್ಧಗಂಭೀರಃ ನಿರ್ಘೋಷಃ ಯಸ್ಯ ಸಃ । ತಮ್ ॥ ಪ್ರಾವೃಷಿ ಭವಃ—ಪ್ರಾವೃಷೇಣ್ಯಃ । ತಮ್ ॥ ವಿದ್ಯುಚ್ಚ ಐರಾವತಶ್ಚ = ವಿದ್ಯುದೈರಾವತೌ ॥

ಸ್ನಿಗ್ಧಗಂಭೀರನಿರ್ಘೋಷಂ = ಮಧುರವಾಗಿಯೂ ಗಂಭೀರವೂ ಆಗಿರುವ ಶಬ್ದವುಳ್ಳ, ಏಕಂ = ಒಂದಾದ, ಸ್ಯಂದನಂ = ರಥವನ್ನು, ಪ್ರಾವೃಷೇಣ್ಯಂ = ವರ್ಷಾಕಾಲದಲ್ಲಿ ಉಂಟಾದ, ಪಯೋವಾಹಂ = ಮೇಘವನ್ನು, ವಿದ್ಯುದೈರಾವತೌ ಇವ = ಮಿಂಚು

ಮತ್ತು ಇಂದ್ರನ ಐರಾವತ ಮಹಾಗಜದಂತೆ, ಆಶ್ರಿತೌ = ಏರಿದವರಾಗಿ, ಜಗ್ಮತುಃ = ಹೋದರು.

37. ಮಾ ಭೂದಾಶ್ರಮಪೀಡೇತಿ ಪರಿಮೇಯಪುರಃಸರೌ ।
ಅನುಭಾವವಿಶೇಷಾತ್ತು ಸೇನಾಪರಿವೃತಾವಿವ ॥ ೩೭ ॥

ಆ ದಂಪತಿಗಳು ಆಶ್ರಮವಾಸಿಗಳಿಗೆ ಯಾವ ತೊಂದರೆಯೂ ಆಗದಂತೆ, ಮಿತವಾದ ಪರಿವಾರದಿಂದ ಹೊರಟರು. ಆದರೂ ಅವರು ತಮ್ಮ ಅನುಭಾವದ ವಿಶೇಷದಿಂದ ತಮ್ಮ ತಮ್ಮ ದೇಹಕಾಂತಿ ಮತ್ತು ತೇಜೋವಿಶೇಷದಿಂದ ಮಹಾರೂಪವಿಗ್ರಹರಾದ ಅವರು ಸಕಲಸೇನಾಸಮೇತರಾಗಿ, ವಿಪುಲಸರಂಜಾಮುಗಳೊಂದಿಗೆ ವಿಜೃಂಭಣೆಯಿಂದ ಹೊರಟರೋ ಎಂಬಂತೆ ಭಾಸವಾಗುತ್ತಿತ್ತು.

ಅನ್ವಯ :—ಆಶ್ರಮಪೀಡಾ ಮಾ ಭೂತ್ ಇತಿ ಪರಿಮೇಯಪುರಃಸರೌ । ಅನುಭಾವ ವಿಶೇಷಾತ್ ತು ಸೇನಾಪರಿವೃತೌ ಇವ (ಸ್ಥಿತೌ) ॥ ಮಾ (ಙ್) ಎಂಬ ನಿಷೇಧಾರ್ಥಕ ಅವ್ಯಯದ ಯೋಗವಿರುವಾಗಲು ಜಾದಿಗಳಲ್ಲಿ ಅಡಾಗಮ ಬರುವುದಿಲ್ಲ. ॥ ಭೂತ್ ॥ ಎಂದು ಲುಙ್ ಪ್ರಥಮಪುರುಷ ಏಕವಚನ ಆಶ್ರಮಸ್ಯ ಪೀಡಾ ॥ ಪರಿಮೇಯಃ ಪುರಃ ಸರಃ ಯಯೋಃಸ್ತೌ, ಪರಿಮೇಯಪುರಃಸರೌ ॥ ಅನುಭಾವಸ್ಯ ವಿಶೇಷಃ, ತಸ್ಮಾತ್ ॥ ಸೇನಯಾ ಪರಿವೃತೌ ಸೇನಾಪರಿವೃತೌ ॥

ಆಶ್ರಮಪೀಡಾ = ಆಶ್ರಮಕ್ಕೆ ಹಾನಿಯು, ಮಾ ಭೂತ್ ಇತಿ = ಆಗದಿರಲೆಂದು, ಪರಿಮೇಯಪುರಃಸರೌ = ಅತ್ಯಲ್ಪಸೇವಕರಿಂದ ಒಡಗೂಡಿ, ಅನುಭಾವವಿಶೇಷಾತ್ತು= ತೇಜೋವಿಶೇಷದಿಂದ, ಸೇನಾಪರಿವೃತೌ ಇವ = ಸೇನೆಯಿಂದ ಕೂಡಿಕೊಂಡರೋ ಎಂಬಂತೆ.

38. ಸೇವ್ಯಮಾನಾ ಸುಖಸ್ಪರ್ಶೈಃ ಶಾಲನಿರ್ಯಾಸಗಂಧಿಭಿಃ ।
ಪುಷ್ಪರೇಣೂತ್ಕಿರೈರ್ವಾತೈಃ ಆಧೂತವನರಾಜಿಭಿಃ ॥ ೩೮ ॥

ನಗರವಾಸಿಗಳಾದ ಆ ರಾಜರಾಣಿಯರು ವನಭೂಮಿಗೆ ಕಾಲಿಟ್ಟು ತಮ್ಮ ಪಯಣ ವನ್ನು ಮುಂದುವರಿಸಿದರು. ಆಗ ಹರ್ಷಗೊಂಡ ಪ್ರಕೃತಿಮಾತೆಯು ಅವರನ್ನು ಸ್ವಾಗತಿಸಲು ಬಯಸಿ ಕರೆಯುವಳೋ ಎಂಬಂತೆ, ತನ್ನ ತೆರೆಕೈಗಳಾದ ಮಂದಮಾರುತನ ಮೂಲಕ ಚೆಲುವಾಗಿ ಬೀಸಿ ಅವರಿಗೆ ಸುಖಸ್ಪರ್ಶನದ ಸುಖವನ್ನಿತ್ತಳು. ಸಾಲವೃಕ್ಷಗಳ ಮೂಲಕ ಬೀಸಿಬರುತ್ತಿದ್ದ ತಂಪಾದ ತಣ್ಣನೆಯ ತೆಳುಗಾಳಿ ಸಾಲವೃಕ್ಷದ ಗಂಧವನ್ನು ಹೊತ್ತು ತರುತ್ತಲಿತ್ತು. ಪರಿಮಳಯುಕ್ತವಾದ ಸಾಲವೃಕ್ಷದ ಸುಗಂಧವು ಮೂಗಿಗೆ ಬಡಿದು ಮನಸ್ಸಿಗೆ ಆಹ್ಲಾದವನ್ನುಂಟುಮಾಡುತ್ತಿತ್ತು. ಆ ಮಾರುತವು ವನರಾಜಿಯ ಹೂಗೊಂಚಲುಗಳ ಮೂಲಕ ಹಾದುಬರುತ್ತಿರಲು ಹೂವಿನ ಪರಾಗರೇಣು(ಪುಷ್ಪರೇಣು) ಗಳನ್ನು ಸುತ್ತಲೂ ಹರಡಿಸುತ್ತಾ ಆ ದಂಪತಿಗಳಿಗೆ ಭೂದೇವಿಯು ಅರಶಿನ-ಕುಂಕುಮ ಬೆರಸಿದ ಅಕ್ಷತೆಯನ್ನು ತಲೆಯ ಮೇಲೆ ಎರಚುವಂತೆ ತೋರಿತು (ಸೇವ್ಯಮಾನೌ).

ಅನ್ವಯಃ :—ಸುಖಸ್ಪರ್ಶೈಃ ಶಾಲನಿರ್ಯಾಸಗಂಧಿಭಿಃ ಪುಷ್ಪರೇಣೂತ್ಕಿರೈರ್ವಾತೈಃ ಆಧೂತವನರಾಜಿಭಿಃ ವಾತೈಃ ಸೇವ್ಯಮಾನೌ (ಸ್ಥಿತೌ).

ಸುಖಸ್ಪರ್ಶಾಃ ಯೇಷಾಂ ತೇ ಸುಖಸ್ಪರ್ಶಾಃ॥ ಶಾಲೇಭ್ಯಃ ನಿರ್ಯಾಸಃ ಶಾಲನಿರ್ಯಾಸಃ ಗಂಧಃ ಯೇಷಾಂ ತೇ. ಶಾಲನಿರ್ಯಾಸಗಂಧಿನಃ ತೈಃ॥ ಉತ್ಕಿರಂತೀತಿ ಉತ್ಕಿರಾಃ ಪುಷ್ಪ ರೇಣೂನಾಂ ಉತ್ಕಿರಾಃ, ತೈಃ॥ ವನಾನಾಂ ರಾಜಯಃ। ಆಧೂತಾಃ ವನರಾಜಯಃ ಯೈಸ್ತೇ—ಆಧೂತವನರಾಜಯಃ। ತೈಃ॥

ಸುಖಸ್ಪರ್ಶೈಃ = ಶೈತ್ಯಾದಿಗಳಿಂದ ಹಿತವಾದ ಸ್ಪರ್ಶವುಳ್ಳ, ಶಾಲನಿರ್ಯಾಸಗಂಧಿಭಿಃ = ಸರ್ಜವೃಕ್ಷಗಳಿಂದ ಹೊರಡುವ ಪರಿಮಳಗಂಧದಿಂದ ಕೂಡಿದ, ಪುಷ್ಪರೇಣೂತ್ಕಿರೈಃ = ಕುಸುಮಪರಾಗಗಳನ್ನು ಎರಚುವ, ಆಧೂತವನರಾಜಿಭಿಃ = ಮೆಲ್ಲನೆ ಅಲ್ಲಾಡುವ ಮರ ಗಿಡಗಳ ಸಾಲುಳ್ಳ ಕಾಡುಗಳ, ವಾತೈಃ = ಗಾಳಿಯಿಂದ, ಸೇವ್ಯಮಾನೌ = ಸೇವಿಸಲ್ಪ ಡುತ್ತಾ.

39. ಮನೋಽಭಿರಾಮಾಃ ಶೃಣ್ವಂತೌ ರಥನೇಮಿಸ್ವನೋನ್ಮುಖೈಃ।
ಷಡ್ಜಸಂವಾದಿನೀಃ ಕೇಕಾಃ ದ್ವಿಧಾ ಭಿನ್ನಾಃ ಶಿಖಂಡಿಭಿಃ ॥ ೩೯ ॥

ಅವರ ರಥಚಕ್ರದ ನೇಮಿಗಳು ದಾರಿ ಸಾಗುತ್ತಿರುವಾಗ ಮೇಘಧ್ವನಿಯನ್ನು ಹೋಲುವ ಮಧುರ ಗಂಭೀರನಾದವನ್ನು ಎಬ್ಬಿಸಿದುವು. ಆ ಧ್ವನಿಯನ್ನು ಕೇಳಿದ ನವಿಲುಗಳು ಅದು ಮೇಘಧ್ವನಿಯೆಂಬ ಶಂಕೆಯಿಂದ ಹರ್ಷದಿಂದ ಮುಖವನ್ನು ಮೇಲೆತ್ತಿ ಕೊಂಡು ಧ್ವನಿಗೈದವು. ಸಂಗೀತಶಾಸ್ತ್ರದಲ್ಲಿ ಹೇಳಿರುವ ಏಳು ಸ್ವರಗಳಲ್ಲಿ ಷಡ್ಜಧ್ವನಿಯೂ ಒಂದು. ಷಡ್ಜಧ್ವನಿಯು ಶುದ್ಧ ಮತ್ತು ವಿಕೃತಿಭೇದದಿಂದ ಆವಿಷ್ಕೃತವಾದ ದನಿಯೆಂಬ ಎರಡು ರೀತಿಯದಾಗಿರುತ್ತದೆ. ಗಂಡುನವಿಲಿನ ಕೇಕಾಧ್ವನಿಯು ಒಂದು ತೆರನಾದರೆ ಹೆಣ್ಣು ನವಿಲಿನ ಕೇಕಾಧ್ವನಿಯು ಇನ್ನೊಂದು ತೆರ. ಹೀಗೆ ಎರಡು ರೀತಿ ಕೇಕಾಧ್ವನಿ ಯನ್ನು ಕೇಳಿದ ಆ ರಾಜದಂಪತಿಗಳ ಮನಸ್ಸಿಗೆ ಅತೀವ ಆನಂದವಾಯಿತು. ಆ ಮಧುರ ಧ್ವನಿಯನ್ನು ಆನಂದದಿಂದ ಕೇಳುತ್ತ ಆ ಸತಿಪತಿಯರು ಸ್ವರ್ಗೀಯವಾದ ಆ ವನಭೂಮಿ ಯಲ್ಲಿ ಹಾದುಹೋಗುತ್ತಿದ್ದರು.

ಅನ್ವಯ :—ರಥನೇಮಿಸ್ವನೋನ್ಮುಖೈಃ ಶಿಖಂಡಿಭಿಃ ದ್ವಿಧಾ ಭಿನ್ನಾಃ ಷಡ್ಜಸಂವಾ ದಿನೀಃ ಮನೋಽಭಿರಾಮಾಃ ಕೇಕಾಃ ಶೃಣ್ವಂತೌ (ಆಸ್ಥಿತೌ).

ಮನಸಃ ಅಭಿರಾಮಾಃ॥ ರಥಸ್ಯ ನೇಮಿಃ। ರಥನೇಮ್ಯೋಃ ಸ್ವನಃ। ರಥನೇಮಿ— ಉನ್ಮುಖಾಃ ತೈಃ॥ ಷಡ್ಜೇನ ಸಂವಾದಿನ್ಯಃ॥ ತಾಃ। ಷಡ್ಜಸಂವಾದಿನೀಃ॥ ಶಿಖಂಡಾಃ ಯೇಷಾಂ ಸಂತೀತಿ ಶಿಖಂಡಿನಃ। ತೈಃ॥

ರಥನೇಮಿಸ್ವನೋನ್ಮುಖೈಃ = ರಥಚಕ್ರಪಟ್ಟಿಯ ಧ್ವನಿಯಿಂದ ಮೇಲ್ಮುಖಗಳಾದ, ಶಿಖಂಡಿಭಿಃ = ನವಿಲುಗಳಿಂದ, ದ್ವಿಧಾಭಿನ್ನಾಃ = ಎರಡು ರೀತಿಯಾದ, ಷಡ್ಜಸಂವಾದಿನೀಃ = ಷಡ್ಜಸ್ವರಕ್ಕೆ ಸಮಾನವಾದ, ಮನೋಽಭಿರಾಮಾಃ = ಅತಿಮಧುರವಾದ, ಕೇಕಾಃ = ನವಿಲುಗಳ ಸ್ವರವನ್ನು, ಶೃಣ್ವಂತೌ = ಕೇಳುತ್ತಾ, ಸಪ್ತಸ್ವರಗಳು = ಷಡ್ಜ, ಋಷಭ, ಮಧ್ಯಮ, ಪಂಚಮ, ಗಾಂಧಾರ, ಧೈವತ, ನಿಷಾದ.

**40. ಪರಸ್ಪರಾಕ್ಷಿಸಾದೃಶ್ಯಮದೂರೋಜ್ಝಿತವರ್ತ್ಮಸು।**
**ಮೃಗದ್ವಂದ್ವೇಷು ಪಶ್ಯಂತೌ ಸ್ಯಂದನಾಬದ್ಧದೃಷ್ಟಿಷು ॥ ೪೦ ॥**

ಹೀಗೆ ಆ ಚಕ್ರೇಶ್ವರನು ತನ್ನ ಸಹಧರ್ಮಿಣಿಯೊಂದಿಗೆ ದಾರಿಸಾಗುತ್ತಿದ್ದಾಗ ಜಿಂಕೆಗಳ ತಂಡವೊಂದನ್ನು ಕಂಡನು. ಗಂಡು-ಹೆಣ್ಣು ಹರಿಣಗಳು ವೇಗದಿಂದ ಧ್ವನಿಗೈಯುತ್ತಾ, ಸಾಗಿಬರುತ್ತಿರುವ ತೇರು ಬಳಿಗೆ ಬರಲು ದಾರಿ ಬಿಟ್ಟು ಅತ್ತ ಸರಿದು ಕಣ್ಣರಳಿಸಿ ಅವರನ್ನು ನೋಡುತ್ತಾ ನಿಂದುವು. ಹಿಂಸೆಯನ್ನು ಎಂದೂ ಕಾಣದ (ನೋಡದ) ಆ ಎರಳೆಗಳು ಹೆದರಿ ಓಡದೆ ಕೊಲ್ಲುವುದಿಲ್ಲೆಂಬ ಆತ್ಮವಿಶ್ವಾಸದಿಂದ ಅತ್ತ ಸರಿದು ನಿಂದು ಕೌತುಕದಿಂದ ರಥವನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿರುವುದನ್ನು ಕಂಡು ಆ ದಂಪತಿಗಳು ಮನದಲ್ಲಿ ಸಂತಸತಳೆದರು. ಮುಗ್ಧಪ್ರಾಣಿಗಳ ಆ ರಮ್ಯಮನೋಹರ, ಮನಮೋಹಕ ನೋಟ. ಹೆಣ್ಣುಜಿಂಕೆಗಳು ನೋಡುತ್ತಿರಲು ದಿಲೀಪನ ಕಣ್ಣಿಗೆ ವಿಶಾಲಾಕ್ಷಿಯಾದ, ಮೃಗನಯನೆ ಸುದಕ್ಷಿಣೆಯ ಕಣ್ಣಿನ ಸಾದೃಶ್ಯವನ್ನು ಕಂಡು ಪುಲಕಿತನಾದನು (ಪೊಂಪುಳಿವೋದನು) ಗಂಡುಜಿಂಕೆಗಳ ನೋಟ ದಿಲೀಪಸಾರ್ವಭೌಮನ ತೀಕ್ಷ್ಣವಾದ ಕಣ್ಣಿನ ಸೌಂದರ್ಯ ಸಾದೃಶ್ಯವನ್ನು ಕಂಡು ಹರ್ಷಗೊಂಡಳಾ ಭಾಮಿನಿ ಸುದಕ್ಷಿಣಾದೇವಿ. .

ಅನ್ವಯ :—ಅದೂರೋಜ್ಝಿತವರ್ತ್ಮಸು ಸ್ಯಂದನಾಬದ್ಧ ದೃಷ್ಟಿಷು ಮೃಗ ದ್ವಂದ್ವೇಷು ಪರಸ್ಪರಾಕ್ಷಿಸಾದೃಶ್ಯಮ್ ಪಶ್ಯಂತೌ ॥

ಅಕ್ಷ್ಣಾಂ ಸಾದೃಶ್ಯಂ, ಅಕ್ಷಿಸಾದೃಶ್ಯಂ, ಪರಸ್ಪರಯೋಃ ಅಕ್ಷಿಸಾದೃಶ್ಯಮ್ ॥ ಅದೂರಂ ಯಥಾ ತಥಾ ಉಜ್ಝಿತಂ, ಅದೂರೋಜ್ಝಿತಂ ವರ್ತ್ಮ ಯೈಃ ತಾನಿ ಅದೂರೋಜ್ಝಿತ ವರ್ತ್ಮಾನಿ, ತೇಷು ॥ ಮೃಗಾಣಾಂ ದ್ವಂದ್ವಾನಿ। ತೇಷು ॥ ಸ್ಯಂದನೇ ಆಬದ್ಧಾ ದೃಷ್ಟಯಃ ಯೈಸ್ತಾನಿ। ಸ್ಯಂದನಾಬದ್ಧದೃಷ್ಟೀನಿ। ತೇಷು ॥

ಅದೂರೋಜ್ಝಿತವರ್ತ್ಮಸು = ಸಮೀಪದಲ್ಲಿ ಬಿಟ್ಟ ಮಾರ್ಗವುಳ್ಳ, ಸ್ಯಂದನಾಬದ್ಧ ದೃಷ್ಟಿಷು = ರಥದಲ್ಲಿಯೇ ನೆಟ್ಟನೋಟವುಳ್ಳ, ಮೃಗದ್ವಂದ್ವೇಷು = ಜಿಂಕೆಗಳ ಮಿಥುನ ದಲ್ಲಿ, ಪರಸ್ಪರಾಕ್ಷಿಸಾದೃಶ್ಯಂ = ಅನ್ಯೋನ್ಯವಾಗಿ ನೇತ್ರಸಾಮ್ಯವನ್ನು, ಪಶ್ಯಂತೌ = ನೋಡುತ್ತಾ.

**41. ಶ್ರೇಣೀಬಂಧಾದ್ವಿತನ್ವದ್ಭಿರಸ್ತಂಭಾಂ ತೋರಣಸ್ರಜಮ್।**
**ಸಾರಸೈಃ ಕಲನಿರ್ಹ್ರಾದೈಃ ಕ್ವಚಿದುನ್ನಮಿತಾನನೌ ॥ ೪೧ ॥**

ಹೀಗೆ ಮುಂದೆ ಮುಂದೆ ಸಾಗುತ್ತಿರಲು (ಉಪಕ್ರಮಿಸುತ್ತಿರಲು) ಬೇರೊಂದು ಪ್ರದೇಶದಲ್ಲಿ (ಭೂವಲಯದಲ್ಲಿ) ಸಾರಸಪಕ್ಷಿಗಳ ಅಚ್ಚಬಿಳಿಯ ಬಣ್ಣದ (ಧವಳವರ್ಣದ) ನಿರ್ಮಲವಾದ ನಿಕುರುಂಬವನ್ನು ಕಂಡು ಮುದಗೊಂಡರು. ಆ ನೀರು ಹಕ್ಕಿಗಳು ಇವರನ್ನು ಕಂಡೊಡನೆ ಪುರ್ರೆಂದು. ದಿರ್ರೆಂದು. ಕಲಕಲರವಗೈಯುತ್ತ ಆಕಾಶಕ್ಕೆ ಲಗ್ಗೆ ಇಕ್ಕಿದುವು. ಒಟ್ಟಿಗೆ ಮೇಲಕ್ಕೆ ಸಾಲಾಗಿ ಹಾರಿಹೋದುವು. ಆಗ ಅವು ಬಾನ ಮಾರ್ಗ ದಲ್ಲಿ ಹಾರುತ್ತ, ಕಂಬವಿಲ್ಲದಿರುವ ತೋರಣದ ಹೂಮಾಲೆಯಂತೆ, ಮಾಲಾಕಾರವಾಗಿ ತೋರಿದುವು (ಶ್ರೇಣೀಬಂಧಾತ್) ಆ ಸುಂದರದಾದ ಬಿಳಿಯ ಬಣ್ಣದ ಕ್ರೌಂಚ ಪಕ್ಷಿಗಳ

ಸಾಲುಮಲ್ಲಿಗೆಯ ಹೂವಮಾಲೆಯಂತೆ ಬಾನೆಂಬ ಅಂಗಳದಲ್ಲಿ ಉದ್ದಕ್ಕೆ ಹರಡಿದಂತೆ ಕಂಡು ಸಂತಸಗೊಂಡರು. ಅವುಗಳ ಕಲಕಲದನಿ ಕೇಳಿ ಆನಂದವರ್ಧನರಾದರು. ಆಗಾಗ ಕತ್ತನ್ನು ಎತ್ತಿ, ಮೊಗವೆತ್ತಿ ನೋಡುತ್ತಾ ಆನಂದದಿಂದ ಆ ದೃಶ್ಯವನ್ನು ನೋಡುತ್ತಾ ಮುಂದೆ ಮುಂದೆ ಸಾಗಿದರು.

ಅನ್ವಯ :—ಶ್ರೇಣೀಬಂಧಾತ್ ಅಸ್ತಂಭಾಂ ತೋರಣಸ್ರಜಂ ವಿತನ್ವದ್ಭಿಃ ಕಲನಿರ್ಹ್ರಾದೈಃ ಸಾರಸೈಃ ಕ್ವಚಿನ್ನಮಿತಾನನೌ ॥

ಶ್ರೇಣೀನಾಂ ಬಂಧಃ ತಸ್ಮಾತ್ ॥ ನ ವಿದ್ಯತೇ ಸ್ತಂಭಃ ಯಸ್ಯಾಃ ಸಾ, ಅಸ್ತಂಭಾ, ತಾಮ್ ॥ ತೋರಣಸ್ಯ ಸ್ರಕ್, ತಾಮ್ ॥ ಕಲಃ ನಿರ್ಹ್ರಾದಃ ಯೇಷಾಂ ತೇ ॥ ತೈಃ ॥ ಉನ್ನಮಿತಂ ಆನನಂ ಯಯೋಃ ತೌ ॥

ಶ್ರೇಣೀಬಂಧಾತ್ = ಸಾಲು ಕಟ್ಟುವುದರಿಂದ, ಅಸ್ತಂಭಾಂ = ಕಂಬವಿಲ್ಲದೇ ಇರುವ, ತೋರಣಸ್ರಜಂ = ತೋರಣಮಾಲಿಕೆಯನ್ನು, ವಿತನ್ವದ್ಭಿಃ = ರಚಿಸುವ, ಕಲನಿರ್ಹ್ರಾದೈಃ = ಅವ್ಯಕ್ತವಾದ ಮಧುರಧ್ವನಿಯುಳ್ಳ, ಸಾರಸೈಃ = ಸಾರಸವೆಂಬ (ನೀರುಹಕ್ಕಿ) ಪಕ್ಷಿಗಳಿಂದ, ಕ್ವಚಿತ್ = ಕೆಲವು ಕಡೆ, ಉನ್ನಮಿತಾನನೌ = ಎತ್ತಿದ ಮುಖವುಳ್ಳವರಾಗಿ.

42. ಪವನಸ್ಯಾನುಕೂಲತ್ವಾತ್ ಪ್ರಾರ್ಥನಾಸಿದ್ಧಿಶಂಸಿನಃ ।
ರಜೋಭಿಸ್ತುರಗೋತ್ಕೀರ್ಣೈರಸ್ಪೃಷ್ಟಾಲಕವೇಷ್ಟನೌ ॥ ೪೨ ॥

ಅವರ ಸುಖಪ್ರಯಾಣವು ಹಾಗೆಯೇ ಮುಂದುವರಿಯುತ್ತಿದ್ದಾಗ ಅವರ ಪ್ರಾರ್ಥನಾಸಿದ್ಧಿಯನ್ನು ಅಥವಾ ಇಷ್ಟಾರ್ಥಸಿದ್ಧಿಯನ್ನು ಸೂಚಿಸುವಂತೆ ಗಾಳಿಯು ಅಭಿಮುಖವಾಗಿ ಪ್ರಶಸ್ತವಾಗಿ, ಮಂಗಳಕರವಾಗಿ, ಹಿತಕರವಾಗಿ ಬೀಸತೊಡಗಿತು. ಕುದುರೆಗಳ ಓಡಾಟದಿಂದ, ಅವುಗಳ ಕಾಲ್ತುಳಿತದಿಂದ ಮೇಲಕ್ಕೆದ್ದ ಧೂಳು ಹಾಗೆಯೇ ಹಿಂದಕ್ಕೆ, ಹಿಂದಕ್ಕೆ ರಥದ ಹಿಂಭಾಗಕ್ಕೆ ಹೋಗುತ್ತಿತ್ತು. ಸುದಕ್ಷಿಣಾದೇವಿಯ ಹಾರುತ್ತಿರುವ ಮುಂಗುರುಳಿಗಾಗಲೀ, ಚಂದ್ರನಂತಹ ಮುಖಕಮಲಕ್ಕಾಗಲೀ ಧೂಳು ಮುತ್ತುತ್ತಿರಲಿಲ್ಲ (ಮುಸುಕುತ್ತಿರಲಿಲ್ಲ). ಹಾಗೆಯೇ ಆ ರಾಜನ ಪೇಟವನ್ನೂ ತಗಲುತ್ತಿರಲಿಲ್ಲ. ಹೀಗೆ ಶುಭಕರವಾದ ಗಾಳಿಯಿಂದಲೂ ಉತ್ತೇಜಿತರಾಗಿ ಅವರು ಸಾಗಿದರು.

ಅನ್ವಯ :—ಪ್ರಾರ್ಥನಾಸಿದ್ಧಿಶಂಸಿನಃ ಪವನಸ್ಯ ಅನುಕೂಲತ್ವಾತ್ ತುರಗೋತ್ಕೀರ್ಣೈಃ ರಜೋಭಿಃ ಅಸ್ಪೃಷ್ಟಾಲಕವೇಷ್ಟನೌ ॥ ಪ್ರಾರ್ಥನಾಯಾಃ ಸಿದ್ಧಿಃ । ಪ್ರಾರ್ಥನಾಸಿದ್ಧಿಂ ಶಂಸಿತುಂ ಶೀಲಮಸ್ಯ ॥ ಪ್ರಾರ್ಥನಾಸಿದ್ಧಿಶಂಸೀ—ತಸ್ಯ ॥ ತುರಗೇಭ್ಯಃ ಉತ್ಕೀರ್ಣಾನಿ । ತೈಃ ॥ ಅಸ್ಪೃಷ್ಟಾಃ ಅಲಕಾಃ ವೇಷ್ಟನಂ ಯಯೋಃ ತೌ, ಅಲಕಾಃ ವೇಷ್ಟನೌ ॥

ಪ್ರಾರ್ಥನಾಸಿದ್ಧಿಶಂಸಿನಃ = ಇಷ್ಟಾರ್ಥಪ್ರಾಪ್ತಿಯನ್ನು ಸೂಚಿಸುವ, ಪವನಸ್ಯ = ಗಾಳಿಯು. ಅನುಕೂಲತ್ವಾತ್ = ಅನುಕೂಲಕರವಾಗಿ ಬೀಸುವುದರಿಂದ, ತುರಗೋತ್ಕೀರ್ಣೈಃ = ಕುದುರೆಗಳಿಂದ ಮೇಲಕ್ಕೆ ಹಾರುವ, ರಜೋಭಿಃ = ಧೂಳಿನಿಂದ, ಅಸ್ಪೃಷ್ಟಾಲಕವೇಷ್ಟನೌ = ಮುಟ್ಟದಿರುವ (ದೇವಿಯ) ಮುಂಗುರುಳು (ರಾಜನ) ರುಮಾಲುಗಳುಳ್ಳ (ಅವರಿಬ್ಬರು).

**43. ಸರಸೀಷ್ವರವಿಂದಾನಾಂ ವೀಚಿವಿಕ್ಷೋಭಶೀತಲಮ್ ।**
**ಆಮೋದಮುಪಜಿಘ್ರಂತೌ ಸ್ವನಿಃಶ್ವಾಸಾನುಕಾರಿಣಮ್ ॥೪೩॥**

ಆ ವನಭೂಮಿಯಲ್ಲಿ ಅಲ್ಲಲ್ಲಿ, ದಾರಿಯುದ್ದಕ್ಕೂ ಕೆರೆ, ತಟಾಕಗಳು, ನಿರ್ಮಲೋದಕದ ಜಲಾಶಯಗಳ ಮೇಲಿಂದ, ಸುಳಿಸುಳಿಯಾದ ತೆರೆಯ ಮೇಲ್ಗಡೆಯಿಂದ ಬೀಸುತ್ತಿದ್ದ ತುಂತುರು ನೀರಹನಿಗಳಿಂದ ಕೂಡಿದ ತಂಪಾದ ಗಾಳಿಯು, ತಾವರೆಯ ಸುಮಗಳ (ಅರವಿಂದಗಳ) ಮಧುರವಾದ ಸುಗಂಧವನ್ನು ಹೊತ್ತು ತರುತ್ತಲಿತ್ತು. ಹೀಗೆ ಸುಳಿವ ಸುವಾಸನೆಯುಕ್ತವಾದ ತಂಬೆಲರನು ಆ ನೂತನ ದಂಪತಿಗಳು ಸವಿದು ನಲಿದು ಮುಂದುವರಿದರು. ಆ ಸುವಾಸನೆಭರಿತವಾದ ಮಂದಮಾರುತವು ಶ್ವಾಸೋಚ್ಛ್ವಾಸಕ್ಕೆ ಅನುಕೂಲವಾದ ತಮ್ಮ ಉಸಿರಿಗೆ ಎಣೆಯಾದ ತಾವರೆಯ ಸುಗಂಧವನು ಪಡೆದಿರುವು ದನ್ನು ಅರಿತುಕೊಂಡು ಸುಖಿಸಿದರು. ಸುಖಿಸಿ ಆನಂದಿಸಿದರು. ಆನಂದಿಸಿ ಹಸನ್ಮುಖಿ ಗಳಾದರು. ಆ ಅರಸ-ಅರಸಿಯರ ಮುಖಕಮಲದಿಂದ ಪೊರಮಡುವ ಬೆವರಹನಿಗಳನ್ನು ಶೀತಲವಾಗಿ ಬೀಡುವ ಮಂದಾನಿಲನು ತಂಪಾಗಿಸುತ್ತಿದ್ದನು.

ಅನ್ವಯ :—ಸರಸೀಷು ವೀಚಿವಿಕ್ಷೋಭಶೀತಲಂ ಸ್ವನಿಃ ಶ್ವಾಸಾನುಕಾರಿಣಂ ಅರವಿಂದಾ ನಾಮಾಮೋದಮ್ ಉಪಜಿಘ್ರಂತೌ॥ ವೀಚೀನಾಂ ವಿಕ್ಷೋಭಃ । ವಿಕ್ಷೋಭಶೀತಲಃ । ತಮ್ ॥ ಸ್ವಯೋಃ ನಿಃಶ್ವಾಸಾಃ । ತಾನ್ ಅನುಕರ್ತುಂ ಶೀಲಂ ಅಸ್ಯ । ಸ್ವನಿಃ ಶ್ವಾಸಾನು ಕಾರೀ । ತಮ್ ॥

ಸರಸೀಷು = ಕಮಲಗಳ ಕೊಳಗಳಲ್ಲಿ, ವೀಚಿವಿಕ್ಷೋಭ ಶೀತಲಂ = ಅಲೆಗಳ ಸಂಮರ್ದ ದಿಂದ ತಣ್ಣಗಾಗಿರುವ, ಸ್ವನಿಃ ಶ್ವಾಸಾನುಕಾರಿಣಂ = ತಮ್ಮ ಉಸಿರಿನ ಗಾಳಿಯನ್ನೇ ಹೋಲುವ, ಅರವಿಂದಾನಾಂ = ಕಮಲಗಳ, ಆಮೋದವನ್ನು = ಪರಿಮಳವನು. ಉಪ ಜಿಘ್ರಂತೌ = ಸೇವಿಸಿ ಆಸ್ವಾದಿಸುತ್ತಾ.

**44. ಗ್ರಾಮೇಷ್ವಾತ್ಮವಿಸೃಷ್ಟೇಷು ಯೂಪಚಿಹ್ನೇಷು ಯಜ್ವನಾಮ್ ।**
**ಅಮೋಘಾಃ ಪ್ರತಿಗೃಹ್ಣಂತಾವರ್ಘ್ಯಾನುಪದಮಾಶಿಷಃ ॥೪೪॥**

ವಿಧಿವತ್ತಾಗಿ ಯಾಗಮಾಡುವ ಋತ್ವಿಜರಿಗೆ ದಿಲೀಪನು ತನ್ನ ಆತ್ಮಸಾಕ್ಷಿಯಾಗಿ ಗ್ರಾಮಗಳನ್ನೇ ದಾನಮಾಡಿದ್ದನು. ಅಂತಹ ಸಮೃದ್ಧವಾದ ಹಸುರೆಲೆಗಳಿಂದ ಕಂಗೊಳಿಸುವ ಸಸ್ಯಶ್ಯಾಮಲವಿರಾಜಿತ ಹಳ್ಳಿಗಳ ಮಧ್ಯದಿಂದ ರಾಜದಂಪತಿಗಳು ಹೋಗುತ್ತ ಅಲ್ಲಲ್ಲಿ ಯಾಗಮಾಡಿದ ಚಿಹ್ನೆಗಳನ್ನು ಕಂಡರು. ಯಜ್ಞಕಾಲದಲ್ಲಿ ಪಶು ಬಂಧನಕ್ಕಾಗಿ ಎತ್ತರವಾಗಿ ನೆಟ್ಟಿರುವ ಯೂಪಸ್ತಂಭಗಳು ಅಲ್ಲಲ್ಲಿ ಹಾಗೆಯೇ ಗುರುತಾಗಿ ಉಳಿದಿದ್ದುವು. ಯಾಜಕರು, ವೈದಿಕ ಪುರೋಹಿತರು, ಪೂಜಾರಿಗಳು, ಅರ್ಚಕರು ಭಟ್ಟಾರಕರು ರಾಜನನ್ನು ಇದಿರುಗೊಂಡು ಅರ್ಘ್ಯಾದಿಗಳನ್ನು, ಫಲತಾಂಬೂಲಗಳನ್ನು ಸಮರ್ಪಿಸಿ ಆಶೀರ್ವದಿಸಿದರು. ಹೀಗೆ ಅವರಿತ್ತ ಅರ್ಘ್ಯಾದಿಗಳನ್ನು ಮೊದಲು ಸ್ವೀಕರಿಸಿ ಆಮೇಲೆ ಸಫಲವಾದ ಆಶೀರ್ವಾದವನ್ನು ಹೊಂದಿ ಆ ರಾಜದಂಪತಿಗಳು ಮುಂದೆ ಮುಂದೆ ಸಾಗಿಹೋದರು.

ಅನ್ವಯ :—ಆತ್ಮವಿಸೃಷ್ಟೇಷು ಯೂಪಚಿಹ್ನೇಷು ಆವೇಷು ಅರ್ಘ್ಯಾನುಪದಂ ಯಜ್ವನಾಮ್ ಅಮೋಘಾಃ ಆಶಿಷಃ ಪ್ರತಿಗೃಹ್ಣಂತೌ ॥

ಆತ್ಮನಾ ವಿಸೃಷ್ಟಾಃ, ತೇಷು ॥ ಯೂಪಾಃ ಚಿಹ್ನಾನಿ ಯೇಷಾಂ ತೇ । ತೇಷು । ಯಜ್ವಾತು ವಿಧಿನೇಷ್ಟವಾನ್ (ಅಮರಕೋಶ) ಪದಸ್ಯ ಪಶ್ಚಾತ್—ಅನುಪದಂ ॥

ಆತ್ಮವಿಸೃಷ್ಟೇಷು = ತನ್ನಿಂದ ದಾನಮಾಡಲ್ಪಟ್ಟ, ಯೂಪಚಿಹ್ನೇಷು = ಯೂಪ ಸ್ತಂಭದ ಚಿಹ್ನೆಯುಳ್ಳ, ಗ್ರಾಮೇಷು = ಹಳ್ಳಿಗಳಲ್ಲಿ, ಯಜ್ವನಾಂ = ವಿಧಿವತ್ತಾಗಿ ಯಾಗ ಮಾಡಿದವರ, ಅಮೋಘಾಃ = ಸಫಲವಾದ, ಆಶಿಷಃ = ಆಶೀರ್ವಾದಗಳನ್ನು, ಅರ್ಘ್ಯಾನು ಪದಂ = ಅರ್ಘ್ಯವನ್ನು ಸ್ವೀಕರಿಸಿದಮೇಲೆ, ಪ್ರತಿಗೃಹ್ಣಂತೌ = ಸ್ವೀಕರಿಸುತ್ತಾ.

45. ಹೈಯಂಗವೀನಮಾದಾಯ ಘೋಷವೃದ್ಧಾನುಪಸ್ಥಿತಾನ್ ।
ನಾಮಧೇಯಾನಿ ಪೃಚ್ಛಂತೌ ವನ್ಯಾನಾಂ ಮಾರ್ಗಶಾಖಿನಾಂ ॥ ೪೫ ॥

ರಾಜನು ಬರುತ್ತಿರುವುದನ್ನು ಕೇಳಿದ ಗ್ರಾಮದ ಹಿರಿಯರು, ಗೊಲ್ಲರು ಬಂದು ಸಂತಸ ದಿಂದ ಇದಿರ್ಗೊಂಡರು. ಅವರಾರೂ ಖಾಲಿ ಕೈಯಲ್ಲಿ ಬಂದಿರಲಿಲ್ಲ. ಗೊಲ್ಲರು ಆಗತಾನೇ ಕಾಯಿಸಿದ ಹಸನಾದ ತುಪ್ಪವನ್ನು ರಾಜನಿಗೆ ಕಾಣಿಕೆಯಾಗಿ ನೀಡಲು ಇದಿರಾದರು. ಪರಿಮಳ ಬೀರುವ ಅಪ್ಪಟ ತುಪ್ಪದ ಸುವಾಸನೆಯು ಸುತ್ತಲೂ ಹರಡಿತು. ರಾಜನು ಆನಂದದಿಂದ ಸಂದರ್ಶನವಿತ್ತುದಲ್ಲದೆ ಸಾಮಾನ್ಯ ಜನರೊಂದಿಗೆ ಮಾತುಕತೆ ನಡೆಸಿದನು. ಹಳ್ಳಿಯ ಮುಖ್ಯಸ್ಥರ ಜೊತೆಯಲ್ಲಿ ದಾರಿಯ ಅಕ್ಕಪಕ್ಕದಲ್ಲಿ ಬೆಳೆದಿರುವ ಕಾಡುಮರಗಳ ಹೆಸರನ್ನು ವಿಚಾರಿಸಿ ಅವರೊಡನೆ ಸಂಭಾಷಿಸುತ್ತಾ ಮುಂದೆ ನಡೆದನು.

ಅನ್ವಯ :—ಹೈಯಂಗವೀನಮ್ ಆದಾಯ ಉಪಸ್ಥಿತಾನ್ ಘೋಷವೃದ್ಧಾನ್ ವನ್ಯಾನಾಂ ಮಾರ್ಗಶಾಖಿನಾಂ ನಾಮಧೇಯಾನಿ ಪೃಚ್ಛಂತೌ ॥

ಘೋಷಾಣಾಂ ವೃದ್ಧಾಃ । ತಾನ್॥ ವನೇ ಭವಾಃ ವನ್ಯಾಃ । ತೇಷಾಮ್ । ಮಾರ್ಗೇ ವಿದ್ಯಮಾನಾಃ ಶಾಖಿನಃ । ತೇಷಾನ್ ॥

ಹೈಯಂಗವೀನಂ = ಹೊಸತಾದ ತುಪ್ಪವನ್ನು, ಆದಾಯ = ಹಿಡಿದುಕೊಂಡು, ಉಪಸ್ಥಿತಾನ್ = ಸಮೀಪಕ್ಕೆ ಬಂದಿರುವ, ಘೋಷವೃದ್ಧಾನ್ = ಹಳ್ಳಿಯ ಹಿರಿಯರನ್ನು (ಪಟೇಲರನ್ನು), ವನ್ಯಾನಾಂ = ಕಾಡಿನಲ್ಲಿರುವ, ಮಾರ್ಗಶಾಖಿನಾಂ = ಮಾರ್ಗದ ಬದಿಯಲ್ಲಿರುವ ಮರಗಳ, ನಾಮಧೇಯಾನಿ = ಹೆಸರುಗಳನ್ನು, ಪೃಚ್ಛಂತೌ = ಕೇಳುತ್ತಾ.

46. ಕಾಪ್ಯಭಿಖ್ಯಾ ತಯೋರಾಸೀತ್ ವ್ರಜತೋಃ ಶುದ್ಧವೇಷಯೋಃ ।
ಹಿಮನಿರ್ಮುಕ್ತಯೋರ್ಯೋಗೇ ಚಿತ್ರಾಚಂದ್ರಮಸೋರಿವ ॥ ೪೬ ॥

ಪರಿಶುದ್ಧರೂಪವಿಗ್ರಹರಾದ, ಆ ಇಬ್ಬರು ತೇಜೋಮೂರ್ತಿಗಳು, ಅಧಿಕವಾದ ಶೋಭೆಯಿಂದ ಪ್ರಕಾಶಿಸುತ್ತ, ಚಿತ್ರಾ ನಕ್ಷತ್ರದಿಂದೊಡಗೂಡಿದ ಚಂದ್ರಮನಂತೆ ಕಂಡರು. ಶಿಶಿರ ಋತುವಿನ ತೆರೆಯು ಸರಿಯಲು ಹಿಮವು ಅಡಗುವುದು. ಮಾಘಮಾಸದ ಬಳಿಕ ಬರುವ ಚೈತ್ರಮಾಸದಲ್ಲಿ ಚಂದ್ರಮನ ಕಾಂತಿಯು ಅಧಿಕಗೊಳ್ಳುವುದು. ಚಿತ್ರಾ ನಕ್ಷತ್ರ

ದಿಂದ ಪರಿವೇಷ್ಟಿತನಾದ ಚಂದ್ರಮನು ಹುಣ್ಣಿಮೆಯ ದಿನದಂದು ಅಧಿಕ ಕಾಂತಿಯಿಂದ ಕಂಗೊಳಿಸುತ್ತಿರುವಂತೆ ಆ ಉಜ್ವಲರೂಪಧರರು ಅನಿರ್ವಚನೀಯವಾದ ಶೋಭಾ ವಿಶೇಷವನ್ನು ಹೊಂದಿ, ಬಹುಕಾಂತಿ ಬೀರುತ್ತ ತಮ್ಮ ಪಯಣವನ್ನು ಮುಂದುವರಿಸಿದರು.

ಅನ್ವಯಃ :—ವ್ರಜತೋಃ ಶುದ್ಧವೇಷಯೋಃ ಹಿಮನಿರ್ಮುಕ್ತಯೋಃ ಚಿತ್ರಾಚಂದ್ರಮಸೋಃ ಇವ ಯೋಗೇ ಕಾಪಿ ಅಭಿಖ್ಯಾ ಆಸೀತ್ ॥

ಅಸ—ಭುವಿ—ಲಙ್—ಆಸೀತ್ ॥ ಶುದ್ಧಃ ವೇಷಃ ಯಯೋಃ ತೌ ಶುದ್ಧವೇಷೌ, ತಯೋಃ ॥ ಹಿಮಾತ್ ನಿರ್ಮುಕ್ತೌ, ತಯೋಃ ॥ ಚಿತ್ರಾ ಚ ಚಂದ್ರಮಾಶ್ಚ, ಚಿತ್ರಾ ಚಂದ್ರಮಸೌ, ತಯೋಃ ॥

ವ್ರಜತೋಃ = ಪ್ರಯಾಣ ಮಾಡುತ್ತಿರುವ, ಶುದ್ಧವೇಷಯೋಃ = ಉಜ್ವಲವಾದ, ಪವಿತ್ರವಾದ ವೇಷವುಳ್ಳ, ರೂಪಧರರಾದ, ತಯೋಃ = ಆ ಸುದಕ್ಷಿಣಾದೇವಿ, ದಿಲೀಪರಿಗೆ, ಹಿಮನಿರ್ಮುಕ್ತಯೋಃ = ಹಿಮದಿಂದ ಬಿಡುಗಡೆಹೊಂದಿದ, ಚಿತ್ರಾಚಂದ್ರಮಸೋಃ ಇವ = ಚಿತ್ರಾ ನಕ್ಷತ್ರ ಚಂದ್ರಮರಂತೆ, ಯೋಗೇ = ಸೇರಿರುವಾಗ, ಕಾಪಿ = ಅನಿರ್ವಚನೀಯವಾದ, ಅಭಿಖ್ಯಾ = ಶೋಭೆಯು, ಆಸೀತ್ = ಉಂಟಾಯಿತು.

47. ತತ್ತದ್ಭೂಮಿಪತಿಃ ಪತ್ನ್ಯೈ ದರ್ಶಯನ್ ಪ್ರಿಯದರ್ಶನಃ ।
ಅಪಿ ಲಂಘಿತಮಧ್ವಾನಂ ಬುಬುಧೇ ನ ಬುಧೋಪಮಃ ॥ ೪೭ ॥

ನೆಲದೊಡೆಯರಾದ ಆ ಚೆಲುವ ದಂಪತಿಗಳು ತನ್ನ ಒಲುಮೆಯ ಸತಿಗೆ ಕಾನನದ ಅಂದವನ್ನು ತೋರಿಸುತ್ತ, ಒಣ್ಣಿಸುತ್ತ ಹೊರಟನು. ದಾರಿಯುದ್ದಕ್ಕೂ ಸುತ್ತಲೂ ಹರಡಿರುವ ವನಭೂಮಿಯ ವಿಶೇಷಗಳನ್ನು, ವಿಚಿತ್ರಗಳನ್ನು ನೋಡಿ ಸುದಕ್ಷಿಣಾದೇವಿಯು ಕುತೂಹಲಭರಿತಳಾಗಿದ್ದಳು. ಆ ಸೌಮ್ಯರೂಪನು, ಯಶೋಮತಿಯು ಸಕಲ ಶಾಸ್ತ್ರಗಳನ್ನು ತಿಳಿದವನಾದುದರಿಂದ ಬುಧಸಮಾನನು. ಅವುಗಳ ಪರಿಚಯವನ್ನು ಮಾಡಿಕೊಡುತ್ತಾ ಹೋದನು. ಹೀಗೆ ಉತ್ಸಾಹದಿಂದ ತಿಳಿಸುತ್ತಾ ಹೋದುದರಿಂದ ಅವನಿಗೆ ಮಾರ್ಗ ಕಳೆದುಹೋದುದೇ ತಿಳಿಯಲಿಲ್ಲ. ಬುಧನಾದರೂ ಬೋಧ ಹೊಂದಲಿಲ್ಲ. ನಿಸರ್ಗದ ದೃಶ್ಯಗಳನ್ನು ನೋಡುವುದರಲ್ಲಿ ಮತ್ತು ವಿವರಿಸಿ ಹೇಳುವುದರಲ್ಲಿ ತಲ್ಲೀನನಾದನು. ಮಾರ್ಗ ಕಳೆದುದು ಅವನ ಗಮನಕ್ಕೆ ಬರಲಿಲ್ಲ.

ಅನ್ವಯಃ :—ಬುಧೋಪಮಃ ಪ್ರಿಯದರ್ಶನಃ (ಚಸ) ಭೂಮಿಪತಿಃ ಪತ್ನ್ಯೈ ತತ್ತದ್ ದರ್ಶಯನ್ ಲಂಘಿತಮ್ ಅಪಿ ಅಧ್ವಾನಂ ನ ಬುಬುಧೇ ॥

ಭೂಮೇಃ ಪತಿಃ ॥ ಪ್ರಿಯಂ ದರ್ಶನಂ ಯಸ್ಯ ಸಃ, ಪ್ರಿಯದರ್ಶನಃ ॥ ಬುಧಃ ಉಪಮಾ ಯಸ್ಯ ಸಃ ಬುಧೋಪಮಃ ॥ ಬುಬುಧೇ—ಬುಬುಧಾತೇ—ಬುಬುಧಿರೇ । ಬುಬುಧಿಷೇ—ಬುಬುಧಾಥೇ—ಬುಬುಧಿಧ್ವೇ ॥ ಬುಬುಧೇ—ಬುಬುಧಿವಹೇ ॥ ಬುಧ—ಅವಗಮನೇ—ಲಿಟ್ ॥

ಪ್ರಿಯದರ್ಶನಃ = ಅತಿ ಸುಂದರನಾದ, ಬುಧೋಪಮಃ = ಬುಧನಿಗೆ ಸಮಾನವಾದ, ಭೂಮಿಪತಿಃ = ದಿಲೀಪರಾಜನು, ಪತ್ನ್ಯೈ = ಸುದಕ್ಷಿಣಾದೇವಿಗೆ, ತತ್ತತ್ = ಆಯಾಯ

ಅದ್ಭುತ ವಸ್ತುಗಳನ್ನು, ದರ್ಶಯನ್ = ತೋರಿಸುತ್ತಾ, ಲಂಘಿತಂ ಅಪಿ = ಕಳೆದು ಹೋದರೂ, ಅಧ್ವಾನಂ = ಮಾರ್ಗವನ್ನು, ನ ಬುಬುಧೇ = ತಿಳಿಯಲಿಲ್ಲ.

**48. ಸ ದುಷ್ಪ್ರಾಪಯಶಾಃ ಪ್ರಾಪದಾಶ್ರಮಂ ಶ್ರಾಂತವಾಹನಃ ।**
**ಸಾಯಂ ಸಂಯಮಿನಸ್ತಸ್ಯ ಮಹರ್ಷೇರ್ಮಹಿಷೀಸಖಃ ॥ ೪೮ ॥**

ಇತರರಿಂದ ಗಳಿಸಲು ಅಸಾಧ್ಯವಾದ ಕೀರ್ತಿಯನ್ನು ಸಂಪಾದಿಸಿರುವ ದಿಲೀಪನು ಪತ್ನೀಸಮೇತನಾಗಿ (ಮಹಿಷೀಸಖಃ) ಸುಖದಿಂದ ಮಾರ್ಗವನ್ನು ಉಪಕ್ರಮಿಸಿ ಸಾಯಂಕಾಲದ ಹೊತ್ತಿಗೆ ಸರಿಯಾಗಿ ಮಹಾತಪಸ್ವಿಯಾದ ಮಹರ್ಷಿ ವಸಿಷ್ಠನ ಪುಣ್ಯಾಶ್ರಮಕ್ಕೆ ಬಿಜಯಂಗೈದನು. ಅವನು ಕಾನನಾಂತರಭೂಮಿಯಲ್ಲಿ ಬಹುದೂರ ಪಯಣಿಸಿದುದರಿಂದ ಅವನ ರಥಾಶ್ವಗಳು ದಣಿದಿದ್ದುವು. ಯಮನಿಯಮಾದಿಗಳಿಂದ ಆತ್ಮಸಂಯಮಿಯಾದ, ಲೋಕಪ್ರಸಿದ್ಧರಾದ, ಮಂತ್ರದ್ರಷ್ಟಾರರಾದ, ಕುಲಗುರು ವಸಿಷ್ಠಮಹರ್ಷಿಗಳನ್ನು ಬೈಗುಹೊತ್ತಿನಲ್ಲಿ ಪಟ್ಟಮಹಿಷಿಸಹಿತ ಸಂದರ್ಶಿಸಿದನು.

ಅನ್ವಯ :—ದುಷ್ಪ್ರಾಪಯಶಾಃ ಶ್ರಾಂತವಾಹನಃ ಮಹಿಷೀ ಸಖಃ ಸ (ರಾಜಾ) ಸಾಯಂ ಸಂಯಮಿನಃ ತಸ್ಯ ಮಹರ್ಷೇಃ ಆಶ್ರಮಂ ಪ್ರಾಪತ್ ॥

ದುಷ್ಪ್ರಾಪಂ ಯಶಃ ಯಸ್ಯ ಸಃ, ದುಷ್ಪ್ರಾಪಯಶಾಃ ॥ ಶ್ರಾಂತಾಃ ವಾಹನಾಃ ಯಸ್ಯ ಸಃ, ಶ್ರಾಂತವಾಹನಃ ॥ ಸಂಯಮಃ ಅಸ್ಯಾಸ್ತೀತಿ ಸಂಯಮೀ, ತಸ್ಯ ॥ ಮಹಾಂಶ್ಚಾಸೌ ಋಷಿಶ್ಚ, ಮಹರ್ಷಿಃ ತಸ್ಯ ॥ ಮಹಿಷ್ಯಾಃ ಸಖಾ ॥ ಅಥವಾ ಮಹಿಷೀ ಸಖಾ ಯಸ್ಯ ಸಃ, ಮಹಿಷೀಸಖಃ । ಸಮಾಸಾಂತದಲ್ಲಿ ಸಖಿ ಶಬ್ದಕ್ಕೆ ಟಚ್ ಪ್ರತ್ಯಯ ಬಂದು ಅಕಾರಾಂತ ವಾಗುತ್ತದೆ. ಆಪತ್—ಆಪತಾಂ—ಆಪನ್ ॥ ಆಪಃ—ಆಪತಂ—ಆಪತ । ಆಪಂ—ಆಪಾವ—ಆಪಾಮ ॥ (ಪ) ಆಪಲೃ—ವ್ಯಾಪ್ತೌ—ಲುಙ್ ॥

ದುಷ್ಪ್ರಾಪಯಶಾಃ = ಇತರರಿಂದ ಹೊಂದಲಸಾಧ್ಯವಾದ ಕೀರ್ತಿಯುಳ್ಳ, ಶ್ರಾಂತ ವಾಹನ = ಬಳಲಿದ ಕುದುರೆಗಳುಳ್ಳ, ಮಹಿಷೀಸಖಃ = ಪಟ್ಟಮಹಿಷಿಯೇ ಸಖಿಯಾಗಿ ಇರುವ, ಸಃ = ಆ ದಿಲೀಪನು, ಸಾಯಂ = ಸಾಯಂಕಾಲದಲ್ಲಿ, ಸಂಯಮಿನಃ = ನಿಯಮ ದಿಂದ ಕೂಡಿರುವ, ತಸ್ಯ = ಪ್ರಸಿದ್ಧನಾದ, ಮಹರ್ಷೇಃ = ವಸಿಷ್ಠಮಹರ್ಷಿಯ, ಆಶ್ರಮಂ = ನಿವಾಸಸ್ಥಳವನ್ನು, ಪ್ರಾಪತ್ = ಹೊಂದಿದನು.

**49. ವನಾಂತರಾದುಪಾವೃತ್ತೈಃ ಸಮಿತ್ಕುಶಫಲಾಹರೈಃ ।**
**ಪೂರ್ಯಮಾಣಮದೃಶ್ಯಾಗ್ನಿಪ್ರತ್ಯುದ್ಯಾತೈಸ್ತಪಸ್ವಿಭಿಃ ॥ ೪೯ ॥**

ದಿಲೀಪನು ಆಶ್ರಮಕ್ಕೆ ಬಂದ ಸಮಯದಲ್ಲಿ ಅನೇಕ ತಪಸ್ವಿಗಳು ನೆರೆಹೊರೆಯ ಕಾಡುಗಳಲ್ಲಿ ತಿರುಗಿ ಪಲಾಶ, ಅಶ್ವತ್ಥದ ಸಮಿತ್ತುಗಳನ್ನು, ದರ್ಭೆ, ಹೂ, ಹಣ್ಣು ಹಂಪಲುಗಳನ್ನು ಹೊತ್ತು ಆಗತಾನೆ ಬಂದಿದ್ದರು. ಅವರು ಆಶ್ರಮವನ್ನು ಪ್ರವೇಶಿಸು ತ್ತಿದ್ದಂತೆ ಪವಿತ್ರವಾದ ಆಹಿತಾಗ್ನಿ, ವಿತಾನಾಗ್ನಿಗಳೆಂಬ ಅದೃಶ್ಯಾಗ್ನಿಗಳು ಆಗಂತುಕ ರಾದ ಅವರನ್ನು ಮಕ್ಕಳಂತೆ ಎದುರ್ಗೊಂಡು ಸ್ವಾಗತಿಸಿದುವು. ಹೀಗೆ ಪೂರ್ಣವಾಗಿ

ತಪಸ್ವಿಗಳಿಂದ ತುಂಬಿರುವ ಆ ಋಷ್ಯಾಶ್ರಮವನ್ನು ದಿಲೀಪರಾಜೇಂದ್ರಶೇಖರನ್ನು ಸೂರ್ಯಾಸ್ತಮಾನದ ಹೊತ್ತಿಗೆ ಸರಿಯಾಗಿ ಸೇರಿದನು.

ಅನ್ವಯ :—ವನಾಂತರಾತ್ ಉಪಾವೃತ್ತೈಃ ಸಮಿತ್ಕುಶಫಲಾಹರೈಃ ಅದೃಶ್ಯಾಗ್ನಿ ಪ್ರತ್ಯುದ್ಯಾತೈಃ ತಪಸ್ವಿಭಿಃ ಪೂರ್ಯಮಾಣಮ್ (ಆಶ್ರಮಮ್) ॥ ಅನ್ಯತ್ ವನಂ, ವನಾಂತರಂ, ತಸ್ಮಾತ್ ॥ ವನಾಗಾರಾತ್ ಎಂದು ಪಾಠಾಂತರ ॥ ಸಮಿಧಶ್ಚ, ಕುಶಾಶ್ಚ, ಫಲಾನಿ ಚ—ಸಮಿತ್ಕುಶಫಲಾನಿ ॥ ತಾನಿ ಆಹರ್ತುಂ ಶೀಲಂ ಯೇಷಾಂ ತೇ—ಸಮಿತ್ಕುಶ ಫಲಾಹರಾಃ ತೈಃ ॥ ಅದೃಶ್ಯಾಶ್ಚ ತೇ ಅಗ್ನಯಶ್ಚ ॥ ಅದೃಶ್ಯಾಗ್ನಿಭಿಃ ಪ್ರತ್ಯುದ್ಯಾತಾಃ । ತೈಃ ॥

ವನಾಂತರಾತ್ = ಇತರ ಕಾಡಿನಿಂದ, ಉಪಾವೃತ್ತೈಃ = ಹಿಂದಿರುಗಿ ಬಂದಿರುವ, ಸಮಿತ್ಕುಶಫಲಾಹರೈಃ = ಸಮಿತ್ತು, ದರ್ಭೆ, ಹಣ್ಣು ಇವುಗಳನ್ನು ಹೊತ್ತು ತಂದಿರುವ, ಅದೃಶ್ಯಾಗ್ನಿಪ್ರತ್ಯುದ್ಯಾತೈಃ = ಕಣ್ಣಿಗೆ ಕಾಣಿಸದಿರುವ, ಯಜ್ಞಾಗ್ನಿಗಳಿಂದ ಸ್ವಾಗತಿಸಲ್ಪಟ್ಟು, ತಪಸ್ವಿಭಿಃ = ಮುನಿಗಳಿಂದ, ಪೂರ್ಯಮಾಣಂ = ತುಂಬಿರುವ, ಆಶ್ರಮಂ ಪ್ರಾಪತ್ = ಆಶ್ರಮವನ್ನು ಸೇರಿ, ಅಗ್ನಿಪ್ರತ್ಯುದ್ಗಮಾತ್ ಪೂತೈಃ—ಪಾ—ಅಗ್ನಿಯು ಎದುರುಗೊಳ್ಳುವಿಕೆಯಿಂದ (ದರ್ಶನದಿಂದ) ಪವಿತ್ರರಾದ.

50. ಆಕೀರ್ಣಂ ಋಷಿಪತ್ನೀನಾಮುಟಜದ್ವಾರರೋಧಿಭಿಃ ।
ಅಪತ್ಯೈರಿವ ನೀವಾರಭಾಗಧೇಯೋಚಿತೈರ್ಮೃಗೈಃ ॥ ೫೦ ॥

ನೀವಾರ ಧಾನ್ಯಗಳನ್ನು ಉಪಯೋಗಿಸುವಾಗ ಋಷಿಪತ್ನಿಯರು ಅಕ್ಕರೆಯಿಂದ ತಮ್ಮ ಬೊಗಸೆಕೈಗಳಲ್ಲಿ ತೆಗೆದು ಒಂದು ಹಿಡಿಕಾಳನ್ನು ಜಿಂಕೆಗಳಿಗೆ ಹಾಕುವರು. ಹೀಗೆ ಅಭ್ಯಾಸಬಲದಿಂದ ಅದು ತಮಗೆ ಸಲ್ಲಬೇಕಾದ ಭಾಗವೆಂದೇ ತಿಳಿದು ಹರಿಣಗಳ ಹಿಂಡು ಗುಂಪುಸೇರಿ ಎಲೆಮನೆಯ ಅಂಗಳದಲ್ಲಿ ವಿಶ್ವಾಸದಿಂದ, ಧೈರ್ಯಯುತವಾಗಿ ಕಲೆತಿದ್ದುವು. ಸಾಯಂಕಾಲದ ವೇಳೆ ಅವು ಅಡ್ಡೈಸಿ ತಾಪಸಿಯರ ಮುಂದೆ ಮಕ್ಕಳಂತೆ ನಿಂತಿರುವುದನ್ನು ಆ ಮನುಕುಲದ ರಾಜೇಂದ್ರನು ತನ್ನ ಪಟ್ಟಮಹಿಷಿಯೊಂದಿಗೆ ಕಂಡು ಮುದಗೊಂಡನು. ಹೀಗೆ ಸಾಧುಜೀವಿಗಳಾದ ಜಿಂಕೆಗಳಿಂದ ತುಂಬಿರುವ ಋಷ್ಯಾಶ್ರಮವನ್ನು ಆ ಶ್ರೇಷ್ಠ ದಂಪತಿಗಳು ಸೇರಿದರು.

ಅನ್ವಯ :—ನೀವಾರಭಾಗಧೇಯೋಚಿತೈಃ ಉಟಜದ್ವಾರರೋಧಿಭಿಃ ಮೃಗೈಃ ಋಷಿಪತ್ನೀನಾಮ್ ಅಪತ್ಯೈಃ ಇವ ಆಕೀರ್ಣಮ್ ॥

ಋಷೀಣಾಂ ಪತ್ನ್ಯಃ ॥ ತಾಸಾಂ ॥ ಉಟಜಾನಾಂ ದ್ವಾರಾಣಿ ॥ ಉಟಜ ದ್ವಾರಾಣಿ ರೋಧಿತುಂ ಶೀಲಮೇಷಾಂ ತೇ ಉಟಜದ್ವಾರರೋಧಿನಃ ತೈಃ ॥ ನೀವಾರಾಣಾಂ ಭಾಗಧೇಯಾಃ । ನೀವಾರಭಾಗಧೇಯಾನಾಂ ಉಚಿತಾಃ, ತೈಃ ॥

ನೀವಾರಭಾಗಧೇಯೋಚಿತೈಃ = ನವಣೆಧಾನ್ಯದ ಅಂಶವನ್ನು ಹೊಂದಲು ಯೋಗ್ಯರಾದ, ಉಟಜರೋಧಿಭಿಃ = ಪರ್ಣಶಾಲೆಗಳ ಬಾಗಿಲನ್ನು ತಡೆಯುವ, ಋಷಿಪತ್ನೀನಾಂ = ಋಷಿಪತ್ನಿಯರ, ಅಪತ್ಯೈರಿವ = ಮಕ್ಕಳುಗಳಂತಿರುವ, ಮೃಗೈಃ = ಜಿಂಕೆಗಳಿಂದ ಆಕೀರ್ಣಂ = ವ್ಯಾಪಿಸಿರುವ (ಆಶ್ರಮವನ್ನು).

51. ಸೇಕಾಂತೇ ಮುನಿಕನ್ಯಾಭಿಃ ತತ್ಕ್ಷಣೋಜ್ಝಿತವೃಕ್ಷಕಮ್ ।
ವಿಶ್ವಾಸಾಯ ವಿಹಂಗನಾಮಾಲವಾಲಾಂಬುಪಾಯಿನಾಮ್ ॥ ೫೧ ॥

ಸಾಯಂಕಾಲದ ವೇಳೆ ಮುನಿಕನ್ಯೆಯರು (ಮುನಿಪುತ್ರಿಯರು) ರಮಣೀಯವಾದ ಆ ಆಶ್ರಮದಲ್ಲಿರುವ ಮರಗಿಡಗಳಿಗೆ ಕೆರೆಗಳಿಂದ ಕೊಡಗಳಲ್ಲಿ ನೀರನ್ನು ತುಂಬಿ ಎರೆಯುತ್ತಿದ್ದರು. ಆಗ ಗಿಡಮರಗಳ ಬುಡದಲ್ಲಿರುವ ಪಾತಿಗಳಲ್ಲಿರುವ ನೀರನ್ನು ಕುಡಿಯಲು ಪಕ್ಷಿಸಂಕುಲವು ಧರೆಗಿಳಿಯಿತು. ಆ ಹಕ್ಕಿಗಳು ಪಾತಿಗಳ ಸಮೀಪಕ್ಕೆ ಬರಲು, ಅವು ನಿರ್ಭಯವಾಗಿ ನೀರು ಕುಡಿವಂತೆ, ಅವುಗಳಿಗೆ ಅನುಕೂಲವಾಗುವಂತೆ, ಆ ಋಷಿ ಕನ್ನಿಕೆಯರು ಶಂಕಿಸಿ, ಕೂಡಲೇ ದೂರ ಸರಿದು ಗಿಡಮರಗಳ ಮರೆಯಲ್ಲಿ ನಿಂತುಕೊಂಡರು. ಪಕ್ಷಿಗಳ ದಂಡು ನಿರ್ಭಯವಾಗಿ ಒಂದೊಂದೇ ತೊಟ್ಟು ನೀರನ್ನು ಕುಡಿಯತೊಡಗಿತು. ಆ ರಮಣೀಯವಾದ ದೃಶ್ಯವನ್ನು ನೋಡುತ್ತ ಆ ಭೂವಲ್ಲಭನು, ತನ್ನ ವಲ್ಲಭೆಸಮೇತ ಆಶ್ರಮವನ್ನು ಪ್ರವೇಶಿಸಿದನು.

ಅನ್ವಯ :—ಸೇಕಾಂತೇ ಮುನಿಕನ್ಯಾಭಿಃ ಆಲವಾಲಾಂಬುಪಾಯಿನಾಂ ವಿಹಂಗನಾಂ ವಿಶ್ವಾಸಾಯ ತತ್ಕ್ಷಣೋಜ್ಝಿತವೃಕ್ಷಕಮ್ (ಆಶ್ರಮಮ್) ॥ ಸೇಕಸ್ಯ ಅಂತಃ ಸೇಕಾಂತಃ ತಸ್ಮಿನ್ ॥ ಮುನೀನಾಂ ಕನ್ಯಾಃ ತಾಭಿಃ । ಸಃ ಕ್ಷಣಃ ತತ್‌ಕ್ಷಣಃ । ತತ್‌ಕ್ಷಣೇ ಉಜ್ಝಿತಾಃ ವೃಕ್ಷಕಾಃ ಯಸ್ಮಿನ್ ಸಃ ॥ ತಮ್ ॥ ಆಲವಾಲಾನಾಂ ಅಂಬು । ಆಲವಾಲಾಂಬು ಪಾತುಂ ಶೀಲ ಮೇಷಾಂ । ಆಲವಾಲಾಂಬುಪಾಯಿನಃ । ತೇಷಾಮ್ ॥

ಸೇಕಾಂತೇ = ಮರಗಳಿಗೆ ನೀರು ಎರೆದಮೇಲೆ, ಮುನಿಕನ್ಯಾಭಿಃ = ಋಷಿಪುತ್ರಿಯರಿಂದ ಆಲವಾಲಾಂಬುಪಾಯಿನಾಂ = ಪಾತಿಗಳಲ್ಲಿ ನೀರನ್ನು ಕುಡಿಯಲು ಬಯಸುವ, ವಿಹಂಗಾನಾಂ = ಪಕ್ಷಿಗಳ, ವಿಶ್ವಾಸಾಯ = ನಂಬಿಕೆ ಹುಟ್ಟಿಸಲು, ತತ್‌ಕ್ಷಣೋಜ್ಝಿತ, ವೃಕ್ಷಕಂ = ಆ ಕ್ಷಣವೇ ವೃಕ್ಷಗಳಿಂದ ದೂರಕ್ಕೆ ಸರಿದು.

52. ಆತಪಾತ್ಯಯಸಂಕ್ಷಿಪ್ತನೀವಾರಾಸು ನಿಷಾದಿಭಿಃ ।
ಮೃಗೈರ್ವರ್ತಿತರೋಮಂಥಮುಟಜಾಂಗನಭೂಮಿಷು ॥ ೫೨ ॥

ಆ ಪವಿತ್ರವಾದ, ಪರ್ಣಶಾಲೆಗಳ ಅಂಗಳಗಳಲ್ಲಿ ನೀವಾರಧಾನ್ಯವನ್ನು ಬಿಸಿಲಿನಲ್ಲಿ ಒಣಗಿಸುವ ಸಲುವಾಗಿ ಅಲ್ಲಲ್ಲಿ ಹರವಿದ್ದರು. ಧಾನ್ಯಗಳ ರಾಶಿಗಳ ಪಕ್ಕದಲ್ಲಿಯೇ ಜಿಂಕೆಗಳು ನಿರ್ಭಯವಾಗಿ ಮಲಗಿ, ತಾವು ತಿಂದ ವಸ್ತುಗಳನ್ನು ಮೆಲುಕುಹಾಕುತ್ತ ಅತ್ತಿತ್ತ ಸುತ್ತಲೂ ನೋಡುತ್ತಾ ನೆರೆದಿದ್ದುವು. ಆ ಎಲೆಮನೆಯನ್ನು ಪ್ರವೇಶಿಸುತ್ತಿದ್ದ ಕ್ಷಿತಿಪತಿಯು ಆ ಸುಂದರ ದೃಶ್ಯಗಳನ್ನು ಮನದಣಿಯೆ ನೋಡುತ್ತ ತನ್ನ ಪ್ರಿಯ ಸತಿಗೆ ತೋರಿಸುತ್ತ ಋಷ್ಯಾಶ್ರಮವನ್ನು ಪ್ರವೇಶಿಸಿದನು (ಒಳಹೊಕ್ಕನು).

ಅನ್ವಯ :—ಆತಪಾತ್ಯಯ ಸಂಕ್ಷಿಪ್ತ ನೀವಾರಾಸು ಉಟಜಾಂಗನ ಭೂಮಿಷು ನಿಷಾದಿಭಿಃ ಮೃಗೈಃ ವರ್ತಿತರೋಮನ್ಥಮ್ (ಆಶ್ರಮಮ್) ॥

ಆತಪಸ್ಯ ಅತ್ಯಯಃ, ಆತಪಾತ್ಯಯೇ ಸಂಕ್ಷಿಪ್ತಾಃ, ಆತಪಾತ್ಯಯಸಂಕ್ಷಿಪ್ತಾ ನೀವಾರಾಃ ಯಾಸು ತಾಃ ॥ ಆತಪಾತ್ಯಯಸಂಕ್ಷಿಪ್ತನೀವಾರಾಃ ತಾಸು ॥ ವರ್ತಿತಃ ರೋಮಂಥಃ ಯಸ್ಮಿನ್‌ಸಃ ತಮ್ ॥ ಉಟಜಾನಾಂ ಅಂಗನಭೂಮಯಃ, ತಾಸು.

ಆತಪಾತ್ಯಯಸಂಕ್ಷಿಪ್ತನೀವಾರಾಸು=ಬಿಸಿಲು ಹೋದುದರಿಂದ ರಾಶಿಮಾಡಿದ ನವಣೆ ಧಾನ್ಯವುಳ್ಳ, ಉಟಜಾಂಗನಭೂಮಿಷು = ಪರ್ಣಶಾಲೆಗಳ ಅಂಗಳಗಳಲ್ಲಿ, ನಿಷಾದಿಭಿಃ = ಮಲಗಿರುವ, ಮೃಗೈಃ = ಜಿಂಕೆಗಳಿಂದ, ವರ್ತಿತರೋಮಂಥಂ = ಮೆಲುಕುಹಾಕುವ ಕ್ರಿಯೆಯುಳ್ಳ.

**53.** **ಅಭ್ಯುತ್ಥಿತಾಗ್ನಿಪಿಶುನೈರತಿಥೀನಾಶ್ರಮೋನ್ಮುಖಾನ್ ।**
**ಪುನಾನಂ ಪವನೋದ್ಧೂತೈರ್ಧೂಮೈರಾಹುತಿಗಂಧಿಭಿಃ ॥ ೫೩ ॥**

ಅಂದಿನ ಆ ಸಾಯಂಸಂಧ್ಯಾವೇಳೆ ಆಶ್ರಮದಲ್ಲಿ ಪವಿತ್ರವಾದ ಹೋಮಾಗ್ನಿಗಳು ಪ್ರಜ್ವಲಿಸುತ್ತಿದ್ದುವು. ಘೃತ, ಪುರೋಡಾಶ ಮೊದಲಾದ ಹವಿಸ್ಸುಗಳನ್ನು ಹೋಮಾಗ್ನಿಗೆ ಸುರಿಯುತ್ತಿರಲು ಹೋಮಾಗ್ನಿಯ ಹೊಗೆಯು ಸುಳಿಸುಳಿಯಾಗಿ (ಸುರುಳಿಯಾಗಿ) ಮೇಲಕ್ಕೆದ್ದು ಸುತ್ತಲೂ ವ್ಯಾಪಿಸುತ್ತಿತ್ತು. ಆಗ ತಂಪಾದ ಗಾಳಿಯು ಬೀಸುತ್ತಾ ಆಜ್ಯಾದಿಪುರೋಡಾಶಗಳ ಆಹುತಿಗಳ ಸುವಾಸನೆಯನ್ನು ಹೊತ್ತು ತರುತ್ತಲಿತ್ತು. ಹೀಗೆ ಕಂಪೊಗೆವ ಹೊಗೆಯು ಆಶ್ರಮವನ್ನು ಪ್ರವೇಶಿಸುವ ಅತಿಥಿಗಳನ್ನು ಪವಿತ್ರರನ್ನಾಗಿ ಮಾಡುತ್ತಿತ್ತು. ಅಂತಹ ಪವಿತ್ರವಾದ ಪರಿಮಳಿತ ಗಾಳಿಯನ್ನು ಆಘ್ರಾಣಿಸುತ್ತ ಆ ರಾಜಕುಲತಿಲಕನು ಆಶ್ರಮದ ಒಳಕ್ಕೆ ಬಂದನು.

ಅನ್ವಯ :—ಅಭ್ಯುತ್ಥಿತಾಗ್ನಿಪಿಶುನೈಃ ಪವನೋದ್ಧೂತೈಃ ಆಹುತಿಗಂಧಿಭಿಃ ಧೂಮೈಃ ಆಶ್ರಮೋನ್ಮುಖಾನ್ ಅತಿಥೀನ್ ಪುನಾನಂ (ಆಶ್ರಮಂ ಪ್)॥ ಅಭ್ಯುತ್ಥಾಶ್ಚ ತೇ ಅಗ್ನಯಶ್ಚ ಅಭ್ಯುತ್ಥಾಗ್ನಯಃ । ಅಭ್ಯುತ್ಥಿತಾಗ್ನೀನಾಂ ಪಿಶುನಾಃ ತೈಃ ॥ ಆಶ್ರಮಸ್ಯ ಉನ್ಮುಖಾಃ ತಾನ್ ॥ ಪವನೇನ ಉದ್ಧೂತಾಃ । ತೈಃ ॥ ಆಹುತೀನಾಂ ಗಂಧಃ । ಆಹುತಿಗಂಧಃ ಯೇಷಾಂ ಅಸ್ತೀತಿ ಆಹುತಿಗಂಧಿನಃ । ತೈಃ ॥

ಅಭ್ಯುತ್ಥಿತಾಗ್ನಿಪಿಶುನೈಃ = ಪ್ರಜ್ವಲಿತವಾದ ಹೋಮಾಗ್ನಿಗಳಿಗೆ ಸೂಚಕಗಳಾದ, ಪವನೋದ್ಧೂತೈಃ = ಗಾಳಿಯಿಂದ ಮೇಲಕ್ಕೆ ಎದ್ದಿರುವ, ಆಹುತಿಗಂಧಿಭಿಃ = ಹವಿಸ್ಸಿನ ಆಹುತಿಯ ಪರಿಮಳವುಳ್ಳ, ಧೂಮೈಃ = ಹೊಗೆಗಳಿಂದ, ಆಶ್ರಮೋನ್ಮುಖಾನ್ = ಆಶ್ರಮವನ್ನು ಕುರಿತು ಬಂದಿರುವ, ಅತಿಥೀನ್ = ಅತಿಥಿಗಳನ್ನು, ಪುನಾನಂ = ಪವಿತ್ರಗೊಳಿಸುವ.

**54.** **ಅಥ ಯಂತಾರಮಾದಿಶ್ಯ ಧುರ್ಯಾನ್ ವಿಶ್ರಾಮಯೇತಿ ಸಃ ।**
**ತಾಮವರೋಹಯತ್ ಪತ್ನೀಂ ರಥಾದವತತಾರ ಚ ॥ ೫೪ ॥**

ರಾಜಕುಲಗುರುಗಳಾದ ವಸಿಷ್ಠರ ಪುಣ್ಯಾಶ್ರಮಕ್ಕೆ ಬಂದೊಡನೆಯೇ ಸಾರಥಿಯು ರಥವನ್ನು ನಿಲ್ಲಿಸಿದನು. ರಾಜರಾಜನಾದ ದಿಲೀಪನು ತನ್ನ ಒಲುಮೆಯ ಜೀವನಸಂಗಾತಿಯನ್ನು ತಾನೇ ಕೈಗೊಟ್ಟು ರಥದಿಂದ ಕೆಳಕ್ಕೆ ಇಳಿಸಿ ಆ ಬಳಿಕ ತಾನು ರಥದಿಂದ ಕೆಳಗಿಳಿದನು. ಒಡನೆಯೇ ದಿನದ ಪಯಣದಿಂದ ಬಳಲಿದ ರಥಾಶ್ವಗಳಿಗೆ ಮೇವನಿತ್ತು ಬಳಲಿಕೆಯನ್ನು ಕಳೆಯುವಂತೆ ಸಾರಥಿಗೆ ಆದೇಶವಿತ್ತನು.

ಅನ್ವಯ :—ಅಥ ಸಃ ಯಂತಾರಂ ಧುರ್ಯಾನ್ ವಿಶ್ರಾಮಯ ಇತಿ ಆದಿಶ್ಯ ತಾಂ ಪತ್ನೀಂ ರಥಾದ್ ಅವಾರೋಹಯತ್ ಅವತತಾರ ಚ ॥

ಧುರಂ ವಹಂತೀತಿ ಧುರ್ಯಾಃ, ತಾನ್ ॥ (ವಿ)ಶ್ರಾಮಯತು ಶ್ರಾಮಯತಾತ್—ಇತ್ಯಾದಿ (ಭವತು ಎಂಬಂತೆ), ಶ್ರಮು—ತಪಸಿ ಖೇದೇ ಚ—ಣಿಜಂತಾತ್ ಲೋಟ್ । ಮ-ಪು-ಏ ॥ (ಅವಆಟ್) ಅರೋಹತ್ (ಅಭವತ್ ಎಂಬಂತೆ) ರುಹ—ಬೀಜಜನ್ಮನಿ ಪ್ರಾದುರ್ಭಾವೇ ಣಿಜಂತಾತ್ ಲಙ್ ॥ (ಅವ) ತೄ—ಪ್ಲವನತರಣಯೋಃ—ಲಿಟ್ ॥ ಪ್ರ. ಪು. ಏ ॥

ಅಥ = ಆಶ್ರಮವನ್ನು ಸೇರಿದ ಬಳಿಕ, ಸಃ = ಆ ರಾಜನು, ಯಂತಾರಂ = ಸಾರಥಿಯನ್ನು, ಧುರ್ಯಾನ್ = ಕುದುರೆಗಳನ್ನು, ವಿಶ್ರಾಮಯ = ಆಯಾಸರಹಿತಗಳನ್ನಾಗಿ ಮಾಡಿ, ಇತಿ = ಹೀಗೆ, ಆದಿಶ್ಯ = ಅಪ್ಪಣೆಮಾಡಿ, ತಾಂ ಪತ್ನೀಂ = ಪತ್ನಿಯಾದ ಸುದಕ್ಷಿಣೆ ಸಹಿತ, ರಥಾತ್ = ರಥದಿಂದ, ಅವರೋಹತ್ = ಇಳಿಸು ಚ = ಮತ್ತು ಅವತತಾರ = ಇಳಿಯಿತು.

**55. ತಸ್ಮೈ ಸಭ್ಯಾಃ ಸಭಾರ್ಯಾಯ ಗೋಪ್ತ್ರೇ ಗುಪ್ತತಮೇಂದ್ರಿಯಾಃ ।**
**ಅರ್ಹಣಾಮರ್ಹತೇ ಚಕ್ರುರ್ಮುನಯೋ ನಯಚಕ್ಷುಷೇ ॥ ೫೫ ॥**

ಮಡದಿಯೊಂದಿಗೆ ತಮ್ಮ ಬಳಿಗೆ ಬಂದಿರುವ ಆ ಘನ ಅತಿಥಿಯನ್ನು, ಆ ಪರಮ ಸುಪೂಜ್ಯನನ್ನು. ಭಾರತದ ಚಕ್ರವರ್ತಿಯನ್ನು, ನೀತಿಶಾಸ್ತ್ರ, ಧರ್ಮಶಾಸ್ತ್ರಗಳೇ ಕಣ್ಣಾಗಿರುವ, ಪ್ರಜಾರಕ್ಷಣೆಯ ಹೊಣೆಗಾರಿಕೆಯನ್ನು ಹೊತ್ತಿರುವ, ಪತ್ನೀಸಹಿತನಾದ ತಮ್ಮ ಅತಿಥಿಯನ್ನು ಆ ಜಿತೇಂದ್ರಿಯರಾದ ಸಾಧುಸಂತರು ಅರ್ಘ್ಯಾದಿಗಳಿಂದ ಪೂಜಿಸಿದರು. ಆತನಲ್ಲವೆ ಜಗತ್ತಿನ ಆರಕ್ಷಕನು. ಜಗತ್ತಿನ ಮಹಾಸಿದರ್ಶಕನು. ನ್ಯಾಯರಕ್ಷಣೆಗಾಗಿ ಹಗಲಿರುಳು ದುಡಿಯುತ್ತಿರುವ ಮಹಾಸೇನಾನಿಯಾದ ಯಶಸ್ತಿಲಕನು. ನೀತಿಶಾಸ್ತ್ರ, ಮಾನವ ಧರ್ಮಶಾಸ್ತ್ರಗಳನ್ನು ಎಂದೂ ಮೀರದ ವಿಶ್ವಮಾನವತತ್ವಾಭಿಮಾನಿ. ಆತನಿಗೆ ಧರ್ಮಶಾಸ್ತ್ರಗಳೇ ಚಕ್ಷುಗಳು (ಕಣ್ಣುಗಳಾಗಿದ್ದುವು).

ಅನ್ವಯ :—ಸಭ್ಯಾಃ ಗುಪ್ತತಮೇಂದ್ರಿಯಾಃ ಮುನಯಃ ಸಭಾರ್ಯಾಯ ಗೋಪ್ತ್ರೇ ನಯಚಕ್ಷುಷೇ ಅರ್ಹತೇ ತಸ್ಮೈ ಅರ್ಹಣಾಂ ಚಕ್ರುಃ ॥

ಸಭಾಯಾಂ ಸಾಧವಃ ಸಭ್ಯಾಃ । ಭಾರ್ಯಯಾ ಸಹಿತಃ ಸಭಾರ್ಯಃ, ತಸ್ಮೈ ॥ ಗುಪ್ತತಮಾನಿ, ಇಂದ್ರಿಯಾಣಿ ಯೇಷಾಂತೇ ॥ ಗುಪ್ತತಮೇಂದ್ರಿಯಾಃ ॥ ನಯಃ ಚಕ್ಷುಃ ಯಸ್ಯಸಃ, ನಯಚಕ್ಷುಃ ತಸ್ಮೈ ॥ ಚಕ್ರುಃ—ಡುಕೃಞ್—ಕರಣೇ—ಲಿಟ್—ಪ್ರ. ಪು. ಬಹುವಚನಮ್ ॥

ಸಭ್ಯಾಃ = ಸಾಧುಗಳಾದ, ಗುಪ್ತತಮೇಂದ್ರಿಯಾಃ = ಇಂದ್ರಿಯನಿಗ್ರಹಶಾಲಿಗಳಾದ, ಮುನಯಃ = ಆಶ್ರಮವಾಸಿಗಳಾದ ಋಷಿಮುನಿಗಳು, ಸ ಭಾರ್ಯಾಯ = ಪತ್ನಿಯಿಂದ ಕೂಡಿದ, ಗೋಪ್ತ್ರೇ = ರಕ್ಷಕನಾದ, ನಯಚಕ್ಷುಷೇ = ಶಾಸ್ತ್ರವೇ ಕಣ್ಣಾಗಿರುವ, ಅರ್ಹತೇ = ಪೂಜ್ಯನಾದ ತಸ್ಮೈ = ಆ ದಿಲೀಪನಿಗೆ, ಅರ್ಹಣಾಂ = ಪೂಜೆಯನ್ನು, ಚಕ್ರುಃ = ಮಾಡಿದರು.

**56. ವಿಧೇಃ ಸಾಯಂತನಸ್ಯಾಂತೇ ಸ ದದರ್ಶ ತಪೋನಿಧಿವ್ !**
**ಅನ್ವಾಸಿತಮರುಂಧತ್ಯಾ ಸ್ವಾಹಯೇವ ಹವಿರ್ಭುಜವ್ ॥ ೫೬ ॥**

ಸಂಜೆಯ ಅನುಷ್ಠಾನಗಳಾದ ಯಜನ, ಯಾಜನ, ಪೂಜೆ, ಜಪ, ತಪ, ಹೋಮ, ನೇಮ ಮೊದಲಾದ ನಿತ್ಯವಿಧಿಗಳು ಮುಗಿದ ಬಳಿಕವೇ ತಪೋನಿಧಿಯಾದ ವಸಿಷ್ಠರನ್ನು ಭವ್ಯಭಾರತದ ಚಕ್ರವರ್ತಿ ದಿಲೀಪನು ಸುದರ್ಶಿಸಿದನು. ಪೂಜಾವಿಧಿಗಳ ಕೈಗೊಂಡಾಗ ಮಧ್ಯದಲ್ಲಿ ತಾನು ಸಾರ್ವಭೌಮನಾದರೂ ಕಾಣಿಸಿಗೊಳ್ಳಲಿಲ್ಲ. ಪೂಜಾವಿಧಿಗಳಿಗೆ ಅಡ್ಡಿ ಪಡಿಸದೆ, ಅವುಗಳು ಮುಗಿದ ಬಳಿಕವೇ ಆ ಜಗದ್ಗುರುವಿನ ದರ್ಶನವನ್ನು ಪಡೆದನು. ಆ ಬಳಿಕ ಅಗ್ನಿದೇವನು ಸ್ವಾಹಾದೇವಿಯೊಂದಿಗೆ ಸೇರಿರುವಂತೆ, ಸ್ವಾಹಾದೇವಿಯಂತೆ ಪರಮಪವಿತ್ರಳಾದ, ಸತೀಶಿರೋಮಣಿ ಅರುಂಧತಿಯೊಡನೆ, ಅಗ್ನಿಯಂತೆ ಮಹಾ ಪ್ರತಾಪಶಾಲಿಗಳಾದ, ಮಹಾತ್ಮರಾದ ವಾಸಿಷ್ಠರನ್ನು ಆ ಸತಿಪತಿಗಳು ಕಂಡರು. ವಸಿಷ್ಠ ಮಹರ್ಷಿಗಳು ಚತುರ್ವೇದ, ವೇದವೇದಾಂಗ ಪಾರಂಗತರು, ಅದ್ವೈತ ತತ್ತ್ವದೃಷ್ಟಾ ರರಾದ, ಸೂರ್ಯನಂತೆ ತೇಜಸ್ವಿಗಳಾದ, ಚಂದ್ರನಂತೆ ಶಾಂತಮೂರ್ತಿಗಳಾದ, ಪರಮ ಹಂಸರು, ಸರ್ವಜ್ಞರಾದ ಯೋಗಮೂರ್ತಿಗಳು. ಅಗ್ನಿ ಮತ್ತು ಸ್ವಾಹಾದೇವಿಯಂತೆ ಆ ಋಷಿದಂಪತಿಗಳು ಸ್ವಯಂಪ್ರಕಾಶಿತರು ತತ್ತ್ವವೇತ್ತರು. ಅವರೀರ್ವರು ಹೋಮಾಗ್ನಿ ಯಂತೆ ಉಪಸ್ಥಿತರಾಗಿದ್ದರು. ಸ್ವಲ್ಪ ಮುಂದೆ ವಸಿಷ್ಠರೂ, ತುಸು ಹಿಂದೆ, ಅವರ ಪಕ್ಕಗೆ ಸ್ವಲ್ಪ ತಾಗಿ ಪತಿವ್ರತಾಶಿರೋಮಣಿಯೆನಿಸಿದ ಅರುಂಧತೀದೇವಿಯೂ ಸುಖಾಸೀನರಾಗಿ ಕುಳಿತಿದ್ದರು. ಅವರೀರ್ವರೂ ಜಗತ್ತಿನ ಸಾಕ್ಷಿದೈವಗಳಾದ ಸೂರ್ಯಚಂದ್ರರಂತೆ ಶೋಭಿಸುತ್ತಿದ್ದರು. ಸತಿಯಾದ ಅರುಂಧತಿಯು ಯಾರನ್ನು ಹಗಲಿರುಳು ಸೇವಿಸುತ್ತಿರು ವಳೋ ಅಂತಹ ಮಹಾತ್ಮನನ್ನು ಆ ದಿಲೀಪರಾಜಮೌಳಿಯು ಅವಲೋಕಿಸಿದನು.

ಅನ್ವಯ :—ಸಃ ಸಾಯಂತನಸ್ಯ ವಿಧೇಃ ಅಂತೇ ಅರುಂಧತ್ಯಾ ಅನ್ವಾಸಿತಂ ತಪೋ ನಿಧಿ (ವಸಿಷ್ಠಂ) ಸ್ವಾಹಯಾ (ಅನ್ವಾಸಿತಂ) ಹವಿರ್ಭುಜಮ್ ಇವ ದದರ್ಶ ॥

ದದರ್ಶ–ದದೃಶತುಃ—ದದೃಶುಃ । ದದರ್ಶಿಥ, ದದ್ರಷ್ಠ—ದದೃಶಥುಃ—ದದೃಶ । ದದರ್ಶ—ದದೃಶಿವ—ದದೃಶಿಮ ॥ ದೃಶಿರ್—ಪ್ರೇಕ್ಷಣೇ—ಲಿಟ್—ಪ್ರ.ಪು.ಏ. ॥ "ಸ್ವಾಹಾ ಚ ಹುತಭುಕ್‌ಪ್ರಿಯಾ" ಅಮರಕೋಶ.

ಸಃ=ಆ ಅರಸನು. ಸಾಯಂತನಸ್ಯ=ಸಾಯಂಕಾಲದ, ವಿಧೇಃ=ಅನುಷ್ಠಾನದ, ಅಂತೇ= ಕೊನೆಯಲ್ಲಿ, ಅರುಂಧತ್ಯಾ=ಪತ್ನಿಯಾದ, ಅರುಂಧತಿದೇವಿಯಿಂದ, ಅನ್ವಾಸಿತಂ=ಸೇವಿಸ ಲ್ಪಟ್ಟ, ತಪೋನಿಧಿಂ=ತಪೋನಿಧಿಗಳಾದ, ಸ್ವಾಹಯಾ=ಸ್ವಾಹಾದೇವಿಯಿಂದ, ಅನ್ವಾಸಿತಂ =ಸೇವಿತನಾದ ಹವಿರ್ಭುಜಂ ಇವ=ಸಾಕ್ಷಾತ್ ಅಗ್ನಿದೇವನು ಇವನು ಎಂಬಂತೆ, ದದರ್ಶ =ನೋಡಿದನು.

**57. ತಯೋರ್ಜಗೃಹತುಃ ಪಾದಾನ್ ರಾಜಾರಾಜ್ಞೀ ಚ ಮಾಗಧೀ !**
**ತೌ ಗುರುರ್ಗುರುಪತ್ನೀ ಚ ಪ್ರೀತ್ಯಾ ಪ್ರತಿನನಂದತುಃ ॥ ೫೭ ॥**

ಆ ಕ್ಷಣವೇ ಆ ಭೂಮಿಪತಿಯು ಮಗಧರಾಜಕುಮಾರಿ, ಸುದಕ್ಷಿಣಾದೇವಿಯೊಂದಿಗೆ ಆ ಜಗದ್ಗುರು ಮತ್ತು ಗುರುಪತ್ನಿಯ ಪಾದಪದ್ಮಗಳಿಗೆ ಭಕ್ತಿಯಿಂದ ಶಿರಬಾಗಿ ವಂದಿಸಿ

ದನು. ಹೀಗೆ ತಮ್ಮ ಪಾದದ್ವಯಗಳಿಗೆ (ಅಡಿದಾವರೆಗೆ) ವಂದಿಸುತ್ತಿರುವ ಆ ದಂಪತಿಗಳನ್ನು ಆ ಮುನಿದಂಪತಿಗಳು, ಗುರುತರವಾದ ಆಶೀರ್ವಾದಗಳಿಂದಲೂ, ಹರ್ಷಾತಿರೇಕದಿಂದಲೂ ಪ್ರೀತಿಯಾಗಿ ಹರಸಿದರು.

ಅನ್ವಯ :—ಮಾಗಧೀ ರಾಜ್ಞೀ ರಾಜಾ ಚ ತಯೋಃ ಪಾದಾನ್ ಜಗೃಹತುಃ । ಗುರುಪತ್ನೀ ಗುರುಶ್ಚ ತೌ ಪ್ರೀತ್ಯಾ ಪ್ರತಿನಿನಂದತುಃ ॥ ಜಗ್ರಾಹ—ಜಗೃಹತುಃ । ಜಗೃಹಿಥ—ಜಗೃಹಥುಃ । ಜಗೃಹ । ಜಗ್ರಾಹ, ಜಗ್ರಹ, ಜಗೃಹಿವ—ಜಗೃಹಿಮ ॥ ಗ್ರಹ—ಉಪಾದಾನೇ—ಲಿಟ್ ॥ ಗುರೋಃ ಪತ್ನೀ=ಗುರುಪತ್ನೀ ॥ (ಪ್ರತಿ)ನನಂದ—ಹಿಂದಿನಂತೆ, ರೂಪ—ಟುನದಿ—ಸಮೃದ್ಧೌ—ಲಿಟ್ ॥

ಮಾಗಧಿ=ಮಗಧರಾಜಪುತ್ರಿಯಾದ. ರಾಜ್ಞೀ=ಸುದಕ್ಷಿಣಾದೇವಿಯೂ, ರಾಜಾ ಚ=ದಿಲೀಪನೂ, ತಯೋಃ=ಆ ಅರುಂಧತೀವಸಿಷ್ಠರ, ಪಾದಾನ್=ಪಾದಗಳನ್ನು, ಜಗೃಹತುಃ=ನಮಸ್ಕರಿಸಿದರು, ಗುರುಪತ್ನೀ=ಅರುಂಧತಿಯೂ, ಗುರುಶ್ಚ=ಗುರುಗಳಾದ ವಸಿಷ್ಠರೂ—ತೌ=ಆ ದಂಪತಿಗಳನ್ನು, ಪ್ರೀತ್ಯಾ=ಹರ್ಷದಿಂದ, ಪ್ರತಿನಂದತುಃ=ಆಶೀರ್ವಾದಗಳಿಂದ. ಗೌರವಿಸಿದರು.

**58. ತಮಾತಿಥ್ಯ ಕ್ರಿಯಾಶಾಂತ ರಥಕ್ಷೋಭಪರಿಶ್ರಮಮ್ ।**
**ಪಪ್ರಚ್ಛ ಕುಶಲಂ ರಾಜ್ಯೇ ರಾಜ್ಯಾಶ್ರಮಮುನಿಂ ಮುನಿಃ ॥ ೫೮ ॥**

ಅವನು ಮಾರ್ಗಾಯಾಸದಿಂದಲೂ, ತೇರ ಕುಲುಕಾಟದಿಂದಲೂ ಒಳಲಿದ್ದನು. ಅಂತಹ ಭೂಮಿಪತಿಯು ಋಷಿ, ಮುನಿಗಳ, ಋತ್ವಿಜರ, ದ್ವಿಜರ ಸಾತ್ವಿಕವಾದ ಅತಿಥಿಸತ್ಕಾರದಿಂದ ತನ್ನ ಪರಿಶ್ರಮವನ್ನು ಕಳೆದು ನವ ಉತ್ಸಾಹವನ್ನು ತಳೆದನು. ಆ ರಾಜಋಷಿಯಾದ ಭೂಪೋತ್ತಮನು ಅವರೆಲ್ಲರ ಕುಶಲವನ್ನು ಕೇಳಿದನು. ವಸಿಷ್ಠಮುನಿಕುಲಸಾರ್ವಭೌಮನು ರಾಜನ ಹಾಗೂ ರಾಜ್ಯದ ಕ್ಷೇಮಾಭಿವೃದ್ಧಿಯನ್ನು ವಿಚಾರಿಸಿದನು. ಧರ್ಮಪ್ರಭುವಾದ ದಿಲೀಪನು ಸ್ವತಃ ರಾಜಋಷಿಯೂ ಹೌದು. ಆತನ ಸಾಮ್ರಾಜ್ಯವೇ ಒಂದು ಋಷ್ಯಾಶ್ರಮ. ಸಂಪೂರ್ಣ ಹತೋಟಿಯಲ್ಲಿರುವ ತನ್ನ ಇಂದ್ರಿಯಗಳ ಸಹಾಯದಿಂದ, ಸಾಮ್ರಾಜ್ಯವೆಂಬ ಆಶ್ರಮವನ್ನು ಪವಿತ್ರತೆಯಿಂದ, ಧರ್ಮಕಾರ್ಯಧುರಂಧರವಾಗಿ, ಕಷ್ಟಸಹಿಷ್ಣುವಾಗಿ, ಕರ್ತವ್ಯಪರನಾಗಿ, ಆದರ್ಶ ರಾಜನಾಗಿ, ರಾಜಋಷಿಯಂತೆ (ಧರ್ಮದರ್ಶಿಯಂತೆ) ರಾಜ್ಯವಾಳುತ್ತಿದ್ದನು. ಅವನ ರಾಜ್ಯವು ಸುಖೀರಾಜ್ಯವಾಗಿತ್ತು. ಇತರರಿಗೆ ಆದರ್ಶಪ್ರಾಯವಾಗಿತ್ತು. ಸ್ವರ್ಗವೇ (ನಾಕವೇ) ಭೂಮಿಗಿಳಿದಂತೆ ಇತ್ತು ಅಂದಿನ ಭಾರತವರ್ಷ.

ಅನ್ವಯ :—ಮುನಿಃ ಆತಿಥ್ಯಕ್ರಿಯಾ ಶಾಂತರಥ ಕ್ಷೋಭಪರಿಶ್ರಮಮ್ ರಾಜ್ಯಾಶ್ರಮಮುನಿಂ ತಂ ತಂ ರಾಜ್ಯೇ ಕುಶಲಂ ಪಪ್ರಚ್ಛ ॥ ಪ್ರಚ್ಛ ಧಾತು ದ್ವಿಕರ್ಮಕ. ರಾಜನನ್ನು ಕುಶಲವನ್ನು ಕೇಳಿದನೆಂದು ಹೇಳಿದೆ. ಅತಿಥ್ಯರ್ಥಂ ಆತಿಥ್ಯಂ । ತಸ್ಯ ಕ್ರಿಯಾ । ಆಯಾಯಾಶಾಂತಃ ॥ ರಥಸ್ಯ ಕ್ಷೋಭಃ । ರಥಕ್ಷೋಭೇಣಪರಿಶ್ರಮಃ ॥ ಆತಿಥ್ಯಕ್ರಿಯಾಶಾಂತಃ ರಥಕ್ಷೋಭಪರಿಶ್ರಮಃ ಯಸ್ಯ ಸಃ । ತಮ್ ॥ ಪ್ರಚ್ಛ—ಜ್ಞೀಪ್ಸಾಯಾಂ ವಾಚಿ

—ಲಿಟ್ । ಪಪ್ರಚ್ಛ—ಪಪ್ರಚ್ಛತುಃ—ಪಪ್ರಚ್ಛುಃ—ಇತ್ಯಾದಿ. ರಾಜ್ಯಮೇವ ಆಶ್ರಮಃ । ರಾಜ್ಯಾಶ್ರಮೇ ಮುನಿಃ । ತಮ್ ॥

ಮುನಿಃ=ಮಹರ್ಷಿ ವಸಿಷ್ಠರು, ಆತಿಥ್ಯ...ಶ್ರಮಮ್=ಅತಿಥಿಸತ್ಕಾರಕ್ರಿಯೆಯಿಂದ ಶಾಂತನಾದ, ರಥಸಂಚಾರದಿಂದ ಒಳಲಿದ; ರಾಜ್ಯಾಶ್ರಮಮುನಿಂ=ರಾಜ್ಯವೆಂಬ ಆಶ್ರಮದಲ್ಲಿ ಋಷಿಯಂತಿರುವ (ಯೋಗಿಯಂತಿರುವ), ತಂ=ಆ ದಿಲೀಪನು, ರಾಜ್ಯೇ=ಸಪ್ತಾಂಗಗಳಲ್ಲಿ ಒಂದು. ಕುಶಲಂ=ಕ್ಷೇಮವನ್ನು, ಪಪ್ರಚ್ಛ=ವಿಚಾರಿಸಿದನು.

59. ಅಥಾಥರ್ವನಿಧೇಸ್ತಸ್ಯ ವಿಜಿತಾರಿಪುರಃ ಪುರಃ ।
ಅರ್ಥ್ಯಾಮರ್ಥಪತಿರ್ವಾಚಮಾದದೇ ವದತಾಂ ವರಃ ॥ ೫೯ ॥

ಮಂತ್ರೋಚಿತರಾದ ಅಥರ್ವವೇದವಿದ್ಯಾನಿಧಿಯಾದ (ಅಥರ್ವನಿಧಿ) ಶಾಂತಿ, ಇಷ್ಟ್ಯಾದಿಗಳನ್ನು ಕಾಲಕಾಲಕ್ಕೆ ನಡೆಸುವುದರಲ್ಲಿ ಆದರ್ಶಪ್ರಾಯರಾದ ಭಾನುವಂಶದ ಕುಲಪುರೋಹಿತರಾದ ವಸಿಷ್ಠರೊಡನೆ, ಧನಾಧಿಪತಿಯಾದ ಮಾತುಕೋವಿದನಾದ ದಿಲೀಪಸಾಮ್ರಾಟನು ಅರ್ಥಗರ್ಭಿತವಾದ ರೀತಿಯಲ್ಲಿ ಮಾತನಾಡಿದನು. ದಿಲೀಪನಾದರೋ ಪ್ರಪಂಚದ ಎಲ್ಲಾ ವೈರಿನಗರಗಳನ್ನು ಗೆದ್ದಿರುವ ಒಲಾಢ್ಯನಾದ ಚಕ್ರವರ್ತಿ, ಪ್ರಪಂಚದ ಎಲ್ಲಾ ಐಶ್ವರ್ಯಕ್ಕೆ ಕುಬೇರನಂತೆ (ಅರ್ಥಪತಿ) ಆತನೇ ಅಧಿಪತಿ. ಆವನು ತನ್ನ ಕುಲಗುರುಗಳ ಸನ್ನಿಧಿಯಲ್ಲಿ, ಅವರು ಕುಶಲವನ್ನು ವಿಚಾರಿಸಿದ ಒಳಿಕ ಅರ್ಥವತ್ತಾಗಿ ಮಾತನಾಡಿದನು. ಅವನು ವಾಗ್ಜಿತರನು, ಮಾತು ಒಲ್ಲವನು. (ಮಾತು ಒಲ್ಲವನಿಗೆ ಜಗಳವಿಲ್ಲ, ಊಟ ಒಲ್ಲವನಿಗೆ ರೋಗವಿಲ್ಲ—ಗಾದೆ, ಲೋಕೋಕ್ತಿ).

ಅನ್ವಯಃ :—ಅಥ ವಿಜಿತಾರಿಪುರಃ ಪುರಃವದತಾಂ ವರಃ ಅರ್ಥಪತಿಃ ಅಥರ್ವನಿಧೇಃ ತಸ್ಯ (ಮುನೇಃ) ಪುರಾ ಅರ್ಥ್ಯಾವಾಚಮ್ ಆದದೇ ॥

ಅಥರ್ವಣಃ ನಿಧಿಃ ತಸ್ಯ ಅಥರ್ವನಿಧೇಃ । ಅರೀಣಾಂಪುರಃ, ವಿಜಿತಾಃ ಅರಿಪುರಃ ಯೇನ ಸಃ ॥ ಅರ್ಥಾತ್ ಅನಪೇತಾ ಅರ್ಥ್ಯಾ, ತಾಮ್ ॥ ಅರ್ಥಸ್ಯ ಪತಿಃ ॥ (ಆಙ್) ದದೇ—ದದಾತೇ—ದದಿರೇ ॥ ಇತ್ಯಾದಿ ॥ ಡುದಾಞ್—ದಾನೇ—ಉಭಯಪದೀ ॥ ಲಿಟ್ ॥

ಅಥ=ಕುಶಲಪ್ರಶ್ನೆ ಮಾಡಿದಮೇಲೆ—ವಿಜಿತಾರಿಪುರಃ=ಶತ್ರುನಗರಳನ್ನು ಗೆದ್ದಿರುವ, ವದತಾಂ ವರಃ=ಮಾತನಾಡುವವರಲ್ಲಿ ಚತುರನಾದ, ವಾಗ್ಮಿ—ಅರ್ಥಪತಿಃ=ರಾಜನು, ಅಥರ್ವನಿಧೇಃ=ಅಥರ್ವಣವೇದನಿಷ್ಣಾತ, ತಸ್ಯ=ಆ ವಸಿಷ್ಠನ, ಪುರಃ=ಮುಂಭಾಗದಲ್ಲಿ, ಅರ್ಥ್ಯಾಂ=ಅರ್ಥಗಂಭೀರವಾದ, ವಾಚಂಆದದೇ=ಮಾತನಾಡಲು ಪ್ರಾರಂಭಿಸಿದನು.

60. ಉಪಪನ್ನಂ ನನು ಶಿವಂ ಸಪ್ತಸ್ವಂಗೇಷು ಯಸ್ಯ ಮೇ ।
ದೈವೀನಾಂ ಮಾನುಷೀಣಾಂ ಚ ಪ್ರತಿಹರ್ತಾತ್ವಮಾಪದಾಂ ॥ ೬೦ ॥

ಎಲೈ ವಿದ್ಯಾಗುರುವೇ, ಕ್ಷೇಮನಿಧಿಯೇ, ಹೇ ಸರ್ವಜ್ಞಮೂರ್ತಿ, ತ್ರಿಕಾಲಜ್ಞಾನಿ, ಗುಣನಿಧಿ, ನಿಸ್ಸಂತಹ ತಪಸ್ವಿಯು, ಲೋಕಗುರುವು ನನಗೆ ವಿದ್ಯಾಗುರುವಾಗಿ, ಪುರೋಹಿತನಾಗಿ ಲಭಿಸಿರುವಾಗ ನನ್ನ ಈ ಸಪ್ತರಾಜ್ಯಾಂಗದಲ್ಲಿ, ಮಾನುಷಭಯವಾಗಲೀ

ದೈವದ ಭಯವಾಗಲೀ ಪ್ರವೇಶಿಸಲು ಸಾಧ್ಯವಿಲ್ಲದೆ ಅವೆಲ್ಲವೂ ಮಂಗಳಕರವಾಗಿಯೇ ಬೆಳಗುತ್ತಿವೆ. ಹೇ ಮಹಾತ್ಮ, ನೀನು ನನ್ನ ಉಪದೇಶಕನಾಗಿರುವುದರಿಂದ ನಿನ್ನ ಯೋಗ ಮತ್ತು ತಪೋಬಲದ ಮಹಿಮೆಯಿಂದ, ಕಾಲಕಾಲಕ್ಕೆ ಉದ್ಭವಿಸುವ ದೈವಿಕ(ಆಮುಷ್ಮಿಕ) ಮತ್ತು ಪ್ರಾಪಂಚಿಕವಾದ ಎಲ್ಲಾ ತೊಂದರೆಗಳನ್ನು ತಡೆದು ನಿವಾರಿಸುತ್ತಿರುವೆ (ಪ್ರತಿಹರ್ತಾ). ಇದರಿಂದ ನನ್ನ ಪ್ರಜೆಗಳಿಗೆ ಬೆಂಕಿ, ನೀರು, ರೋಗ, ದುರ್ಭಿಕ್ಷ, ಮರಣ, ಮಾರಣ (ಮಾಟ, ತಂತ್ರ, ಮಂತ್ರ, ಪೀಡೆ, ಪಿಶಾಚಿ, ಭೂತಚೇಷ್ಟೆ, ಸೋಂಕು) ಭಯಗಳೆಂಬ ದೈವಿಕ ತೊಂದರೆಗಳಾಗಲಿ, ಮಾನವರಿಂದ ಸಂಭವಿಸಬಹುದಾದ ಚೋರಭಯ, ವೈರಿರಾಜರ ದಂಡಯಾತ್ರೆಗಳ ತೊಂದರೆಯಾಗಲಿ ಇಲ್ಲದೆ ಸಾಮ್ರಾಜ್ಯದ ಎಲ್ಲೆಡೆ ಶಾಂತಿ ಸುಭಿಕ್ಷೆ ನೆಲೆಸಿ ಸುಖೀರಾಜ್ಯವೆನಿಸಿದೆ.

ಅನ್ವಯ :—ಯಸ್ಯ ಮೇ ದೈವೀನಾಂ ಮಾನುಷೀಣಾಂ ಚ ಆಪದಾಮ್ ತ್ವಂ ಪ್ರತಿಹರ್ತಾ ತಸ್ಯ ಸಪ್ತಸು ಅಂಗೇಷು ಶಿವಮ್ ಉಪಪನ್ನಂ ನನು ॥

ದೇವೇಭ್ಯಃ ಆಗತಾಃ, ದೈವ್ಯಃ, ತಾಸಾಮ್ ॥ ಮನುಷ್ಯೇಭ್ಯಃ, ಆಗತಾಃ ಮಾನುಷ್ಯಃ ತಾಸಾಮ್ ॥

ಸಪ್ತಸ್ವಂಗೇಷು=ಸ್ವಾಮ್ಯಾದಿ ಸಪ್ತಾಂಗಗಳಲ್ಲಿಯೂ, ಶಿವಂ=ಮಂಗಲವು. ಉಪಪನ್ನಂ ನನು=ಸಂಗತವಾಗಿರುವುದಷ್ಟೆ (ಹೊಂದಿರುವುದು). ಯಸ್ಯ ಮೇ=ಯಾವ ನನಗೆ, ದೈವೀನಾಂ=ದೇವತಾಸಂಬಂಧವಾದ. ಮಾನುಷೀಣಾಂಚ=ಮಾನವರಿಂದಾಗುವ ತೊಂದರೆಗಳು, ಆಪದಾಂ=ವಿಪತ್ತುಗಳಿಗೆ, ತ್ವಂ=ನೀನು, ಪ್ರತಿಹರ್ತಾ=ನಿವಾರಕನಷ್ಟೆ.

**61. ತವ ಮಂತ್ರಕೃತೋ ಮಂತ್ರೈರ್ದೂರಾತ್ ಪ್ರಶಮಿತಾರಿಭಿಃ ।**
**ಪ್ರತ್ಯಾದಿಶ್ಯಂತ ಇವ ಮೇ ದೃಷ್ಟಲಕ್ಷ್ಯಭಿದಃ ಶರಾಃ ॥ ೬೧ ॥**

ಹೇ ಮಂತ್ರಗಳನ್ನು ಸೃಷ್ಟಿಸಿದ ಮಂತ್ರಕರ್ತಾರನೆ, ಮಂತ್ರಸೃಷ್ಟಾರನೆ, ಮಂತ್ರದ್ರಷ್ಟಾರನೆ, ಮಂತ್ರವೇತ್ತಾರನೆ, ಮಂತ್ರಾಯುಧಸಮನ್ವಿತನೆ, ನಿನ್ನ ಮಂತ್ರಗಳ ಪ್ರಭಾವದಿಂದ ಕಣ್ಣಿಗೆ ಕಾಣಿಸದ (ಅಪ್ರತ್ಯಕ್ಷ) ಬಹುದೂರದಲ್ಲಿರುವ ಶತ್ರುಗಳನ್ನೂ, ಅವರ ತಂತ್ರಗಳನ್ನೂ, ಷಡ್ಯಂತ್ರಗಳನ್ನೂ, ಕುತಂತ್ರಗಳು ಹಾಗೂ ಕೇಡಿಗತನವನ್ನು ನಾಶಮಾಡಿ ನನಗೆ ಕ್ಷೇಮಾಭ್ಯುದಯವನ್ನು ಉಂಟುಮಾಡುತ್ತಿರುವೆ. ನನ್ನ ಶಾಸ್ತ್ರಗಳು ಪ್ರತ್ಯಕ್ಷಲಕ್ಷ್ಯಗಳನ್ನು ಭೇದಿಸುವ ಸಾಮರ್ಥ್ಯವನ್ನು ಮಾತ್ರ ಹೊಂದಿರುವುದರಿಂದ ಅವುಗಳ ಅಗತ್ಯವಾದರೂ ಏಕೆ. (ದೃಷ್ಟಲಕ್ಷ್ಯಭಿದಃ) ಅವುಗಳು ತೋರುವಿಕೆಗೆ ಮಾತ್ರ ಆಭರಣಗಳಂತೆ.

ಮಂತ್ರಾನ್ ಕೃತವಾನ್—ಮಂತ್ರಕೃತವಾನ್ । ತಸ್ಯ ॥ ದೂರಾತ್ ಪ್ರಶಮಿತಾಃ ಅರಯಃ ಯೈಸ್ತೈಃ । ತೈಃ ॥ ದೃಷ್ಟಾನಿ ಚ ತಾನಿ ಲಕ್ಷ್ಯಾನಿ ಚ । ದೃಷ್ಟಲಕ್ಷ್ಯಾನಿ ಭಿಂದಂತಿ ಇತಿ ॥ ದೃಷ್ಟಲಕ್ಷ್ಯಭಿದಃ ॥ (ಪ್ರತಿ ಆಜ್) ದಿಶ್ಯಂತೇ—ದಿಶ—ಅತಿಸರ್ಜನೇ— ಕರ್ಮಣಿ ಲಟ್ । ಪ್ರ. ಪು. ಬ. ॥

ದೂರಾತ್=ಪರೋಕ್ಷದಲ್ಲಿಯೇ. ಪ್ರಶಮಿತಾರಿಭಿಃ=ನಾಶಗೊಳಿಸಿದ ಶತ್ರುಗಳುಳ್ಳ. ಮಂತ್ರಕೃತಃ=ಮಂತ್ರಸೃಷ್ಟಿಕರ್ತನಾದ, ತವ=ನಿನ್ನ, ಮಂತ್ರೈಃ=ಮಂತ್ರಗಳಿಂದ, ದೃಷ್ಟಿ

ಲಕ್ಷ್ಯಭಿದಃ=ಪ್ರತ್ಯಕ್ಷವಾದ ಗುರಿಯನ್ನೇ ಹೊಡೆಯುವ, ಮೇ=ನನ್ನ, ಶರಾಃ=ಬಾಣಗಳು ಪ್ರತ್ಯಾದಿಶ್ಯಂತ ಇವ=ನಿರಾಕರಿಸಲ್ಪಡುವುವೋ ಎಂಬಂತಿವೆ (ಉತ್ಪ್ರೇಕ್ಷಾಲಂಕಾರ.)

**62. ಹವಿರಾವರ್ಜಿತಂ ಹೋತಸ್ತ್ವಯಾ ವಿಧವದಗ್ನಿಷು ।**
**ವೃಷ್ಟಿರ್ಭವತಿ ಸಸ್ಯಾನಾಮ್ ಅವಗ್ರಹ ವಿ ಶೋಷಿಣಾವ್ ॥ ೬೨ ॥**

ಎಲೈ ವರಗುರುವೆ, ನೀನು ಕಾಲಕಾಲಕ್ಕೆ ಸರಿಯಾಗಿ ಮೂರು ತರದ ಅಗ್ನಿಗಳಲ್ಲಿ ವಿಧಿವತ್ತಾಗಿ ಆಜ್ಯಾದಿ ಆಹುತಿಗಳನ್ನು ಸಲ್ಲಿಸಿ ದೇವಪೂಜೆ ಮಾಡುತ್ತಿರುವೆ, ಇದರಿಂದ ತೃಪ್ತರಾದ ಸೂರ್ಯಾದಿನವಗ್ರಹಗಳೂ, ಇಂದ್ರಾದಿದೇವತೆಗಳು ಫಲರೂಪವಾದ ಮಳೆಯನ್ನು ಸುರಿಸಿ ಪ್ರಕೃತಿಯು ಸಸ್ಯಗಳಿಂದ ಶೋಭಿಸುವಂತೆ (ಸಸ್ಯಶ್ಯಾಮಲ ಮಾತರಂ) ಮಾಡುವರು. (ಕರ್ಮಸಮುದ್ಭವಃ). ಕಾಲಕಾಲದಲ್ಲಿ ಮಳೆಯಾಗುವುದರಿಂದ ಸಸ್ಯಸಮೃದ್ಧಿಯಾಗಿ ಪ್ರಜೆಗಳು ಸಂತೋಷಭರಿತರಾಗಿರುವರು. ನಿನ್ನ ತಪಃಪ್ರಭಾವದಿಂದ ನನ್ನ ಸಾಮ್ರಾಜ್ಯವು ಬರ ಮೊದಲಾದ ಕ್ಷೋಭೆಗಳಿಂದ ದೂರವಾಗಿದೆ. ಕ್ಷೋಭೆಗಳು ತಲೆದೋರದೆ ಸುಭಿಕ್ಷೆಯ ಸುಖೀರಾಜ್ಯವೆನಿಸಿದೆ.

ಅನ್ವಯ :—ಹೋತಃ, ತ್ವಯಾ ವಿಧಿವದ್ ಅಗ್ನಿಷು ಆವರ್ಜಿತಮ್ ಹವಿಃ ಅವಶೋಷಿಣಾಂ ಸಸ್ಯಾನಾಂ ವೃಷ್ಟಿಃ ಭವತಿ ॥ ವಿಧಿಂ ಅತಿಕ್ರಮ್ಯ ವಿಧಿವತ್ ॥ ಅವಗ್ರಹೇಣ ವಿಶೋಷಿಣಃ, ತೇಷಾಮ್ ॥

ಹೇ ಹೋತ=ಎಲೈ ಅಗ್ನಿಹೋತ್ರವಾದ ಗುರುವರನೇ, ತ್ವಯಾ=ನಿನ್ನಿಂದ, ವಿಧಿವತ್=ಶಾಸ್ತ್ರೋಕ್ತವಾದ ರೀತಿಯಿಂದ ಅಗ್ನಿಷು=ಅಗ್ನಿತ್ರಯದಲ್ಲಿ, ಆವರ್ಜಿತಂ=ಹಾಕಲ್ಪಟ್ಟ, ಹವಿಃ=ಆಜ್ಯಾದಿಹವಿಸ್ಸು. ಅವಗ್ರಹವಿಶೋಷಿಣಾಂ=ಮಳೆ ಇಲ್ಲದಿರುವುದರಿಂದ ಒಣಗುವ, ಸಸ್ಯಾನಾಂ=ಭತ್ತ ಮುಂತಾದ ಸಸ್ಯಗಳಿಗೆ, ವೃಷ್ಟಿಃ=ಮಳೆಯು, ಭವತಿ=ಆಗುತ್ತದೆ.

**63. ಪುರುಷಾಯುಷಜೀವಿನ್ಯೋ ನಿರಾತಂಕಾ ನಿರೀತಯಃ ।**
**ಯನ್ಮದೀಯಾಃ ಪ್ರಜಾಸ್ತಸ್ಯ ಹೇತುಃ ತ್ವತ್ ಬ್ರಹ್ಮವರ್ಚಸಮ್ ॥ ೬೩ ॥**

ಹೇ ದಯಾಸಾಗರಾ, ನಿನ್ನ ಬ್ರಹ್ಮವರ್ಚಸ್ಸಿನಿಂದ (ಬ್ರಹ್ಮತೇಜದಿಂದ) ಜನರು ಪ್ರಜೆಗಳು ಅಕಾಲಮೃತ್ಯುವಿಗೆ ವಶರಾಗದೆ ಶತಾಯುಷಿಗಳಾಗಿ (ದೀರ್ಘಾಯುಷಿಗಳಾಗಿ) ರುವರು. ಹೇ ಪರಮಗುರುವೇ, ಅದು ನೀನು ಆರಾಧಿಸುವ, ಪೂಜಿಸುವ, ಪೋಷಿಸುವ ಬ್ರಹ್ಮಜ್ಯೋತಿಯ ಫಲವಾಗಿ. ನಾನು ಆಳುವ ಭರತಖಂಡದಲ್ಲಿ (ಭಾರತವರ್ಷದಲ್ಲಿ) ಅತಿವೃಷ್ಟಿ- ಅನಾವೃಷ್ಟಿಗಳು ಇಲ್ಲದೆ ಜನರು ಭಯವರ್ಜಿತರಾಗಿದ್ದಾರೆ. ಇದಕ್ಕೆ ಕಾರಣ ನಿನ್ನ ವ್ರತ, ಅಧ್ಯಯನ, ಯೋಗ, ಕಠಿಣತಪಸ್ಸುಗಳ ಅತೀಂದ್ರಿಯಶಕ್ತಿಗಳು. ಅತಿ ವೃಷ್ಟಿ, ಅನಾವೃಷ್ಟಿ, ಇಲಿಗಳ ಬಾಧ, ಮಿಡತೆಗಳ ಹಾವಳಿ, ಅತ್ಯಾಚಾರ. ಕಳವು, ದರೋಡೆ, ಪರರಾಜರ ಆಕ್ರಮಣದ ಭೀತಿ. ಈತಿ ಬಾಧೆಗಳು ನಾಮಾವಶೇಷವಾಗಿವೆ. ಹೇ ಮಮ ಗುರುವೆ, ಜನರು ಪೂರ್ಣಾಯುಷ್ಯಹೊಂದಿ ಸಂತಸಭರಿತರಾಗಿರುವರು. ಇದಕ್ಕೆ ನಿನ್ನ ಬ್ರಹ್ಮಯಜ್ಞವೇ ಕಾರಣ."

ಅನ್ವಯ :—ಮದೀಯಾಃ ಪ್ರಜಾಃ ಪುರುಷಾಯುಷಜೀವಿನ್ಯಃ ನಿರಾತಂಕಾಃ ನಿರೀತಯಃ ಯತ್ ತಸ್ಯ ತ್ವದ್ ಬ್ರಹ್ಮವರ್ಚಸಂ ಹೇತುಃ ॥

ಪುರುಷಸ್ಯ ಆಯುಃ = ಪುರುಷಾಯುಷಂ — ಪುರುಷಾಯುಷಜೀವಂತೀತಿ ಪುರುಷಾಯುಷ್‌ಜೀವಿನ್ಯಃ—ನಿರ್ಗತಾಃ ಆತಂಕಾಃ ಯಾಭ್ಯಸ್ತಾಃ ನಿರಾತಂಕಾಃ । ನಿರ್ಗತಾಃ ಈತಯಃ ಯಾಭ್ಯಸ್ತಾಃ ॥ ಮಮ ಇಮಾಃ ಮದೀಯಾಃ ॥ ಬ್ರಹ್ಮಣಃ ವರ್ಚಃ ಬ್ರಹ್ಮವರ್ಚಸಂ, ತವ ಬ್ರ...ಸಂ...ತ್ವದ್.. ಸಮ್ ॥

ಪುರುಷಾಯುಷಜೀವಿನ್ಯಃ=ನೂರು ವರ್ಷ ಜೀವಿಸುವ. ಮದೀಯಾ=ನನ್ನ. ಪ್ರಜಾಃ= ಪ್ರಜೆಗಳು. ನಿರಾತಂಕಾಃ=ಯಾವ ಭಯಭೀತಿಯಿಲ್ಲದೆ. ನಿರೀತಯಃ=ಅತಿವೃಷ್ಟಿ, ಅನಾವೃಷ್ಟಿಗಳಿಲ್ಲದೆ. ಇತಿಯತ್=ಇದ್ದಾರೆ. ತಸ್ಯ=ಅವೆಲ್ಲದಕ್ಕೂ. ತ್ವದ್ ಬ್ರಹ್ಮವರ್ಚಸಂ= ನಿಮ್ಮ ವ್ರತ, ಅಧ್ಯಯನ, ತಪಸ್ಸುಗಳು, ಹೇತುಃ=ಕಾರಣವು.

64. ತ್ವಯ್ಯೈವಂ ಚಿಂತ್ಯಮಾನಸ್ಯ ಗುರುಣಾಂ ಬ್ರಹ್ಮಯೋನಿನಾ ।
ಸಾನುಬಂಧಾಃ ಕಥಂ ನ ಸ್ಯುಃ ಸಂಪದೋ ಮೇ ನಿರಾಪದ ॥ ೬೪ ॥

ಲೋಕಪಿತಾಮಹನ ಮಾನಸಪುತ್ರರಾದ ನೀವು (ಬ್ರಹ್ಮಯೋನಿನಾ) ನನ್ನ ಗುರುಗಳಾಗಿರಲು, ನನ್ನ ಶುಭಚಿಂತನೆಯಲ್ಲಿರುತ್ತಿರಲು, ನನ್ನ ರಾಜ್ಯಾದಿ ಸಂಪತ್ತುಗಳು, ಅಡೆತಡೆಗಳಿಲ್ಲದೆ ಬೆಳೆಯುತ್ತಲೇ ಇವೆ. ತಮ್ಮ ಮಂಗಳಕರವಾದ ತಪಸ್ಸು ಸ್ವಾಧ್ಯಾಯಗಳ ಸಾಮರ್ಥ್ಯದಿಂದ ಯಾವ ಅಶುಭವೂ ತಲೆದೋರದು. ಸಕಲ ಸಮೃದ್ಧಿಯು ಅಡಿಗಡಿಗೆ (ಹೆಜ್ಜೆಹೆಜ್ಜೆಗೆ) ಹೆಚ್ಚುತ್ತಲೇ ಇದೆ.

ಅನ್ವಯ :—ಬ್ರಹ್ಮಯೋನಿನಾ ಗುರುಣಾ ತ್ವಯಾ ಏವಂ ಚಿಂತ್ಯಮಾನಸ್ಯ ನಿರಾಪದಃ ಮೇ ಸಂಪದಃ ಸಾನುಬಂಧಾಃ ಕಥಂ ನಸ್ಯುಃ ॥

ಬ್ರಹ್ಮಯೋನಿಃ ಯಸ್ಯ ಸಃ । ತೇನ ॥ ಅನುಬಂಧೇನ ಸಹಿತಾಃ ಸಾನುಬಂಧಾಃ ॥ ನಿರ್ಗತಾಃ ಆಪದಃ ಯಸ್ಮಾತ್ ಸಃ । ನಿರಾಪತ್ । ತಸ್ಯ ॥ ಅಸ—ಭುವಿ—ವಿಧಿಲಿಙ್— ಪ್ರ.ಪು.ಪ ॥

ಬ್ರಹ್ಮಯೋನಿನಾ=ಬ್ರಹ್ಮಮಾನಸಪುತ್ರರಾದ. ಗುರುಣಾ=ಗುರುಗಳಾದ, ತ್ವಯಾ— ನಿನ್ನಿಂದ, ಏವಂ=ಈ ರೀತಿಯಾಗಿ, ಚಿಂತ್ಯಮಾನಸ್ಯ=ವಿಚಾರಿಸಲ್ಪಡುತ್ತಿರುವ. ನಿರಾಪದಃ =ಯಾವ ತೊಂದರೆಯೂ ಇಲ್ಲದ. ಮೇ=ನನ್ನ, ಸಂಪದಃ=ಐಶ್ವರ್ಯ, ಸಾನುಬಂಧಾ= ನಾಶವಿಲ್ಲದೆ, ಅವಿಚ್ಛಿನ್ನವಾಗಿ.

65. ಕಿಂತು ವಧ್ವಾಂ ತವೈತಸ್ಯಾಮ್ ಅದೃಷ್ಟಸದೃಶಪ್ರಜಮ್ ।
ನ ಮಾಮವತಿ ಸದ್ವೀಪಾ ರತ್ನಸೂರಪಿ ಮೇದಿನೀ ॥ ೬೫ ॥

ಎಲೈ ಪೂಜ್ಯನೇ, ಎಲೈ ಲೋಕಗುರುವೇ, ಎಲೈ ತಂದೆಯೇ ನಿನ್ನ ಅನುಗ್ರಹದಿಂದ ನಾನು ಇಷ್ಟು ಸಮೃದ್ಧಿಯನ್ನು ಪಡೆದಿರುವೆನಾದರೂ ನನಗೆ ಕೊರತೆಯೊಂದು ಬಾಧಿಸುತ್ತಲಿದೆ (ಪ್ರೀತಿಸುತ್ತಲಿದೆ). ಈ ನಿನ್ನ ಸೊಸೆಯಾದ (ಈ ನಿನ್ನ ಮಗಳಾದ) ಸುದಕ್ಷಿಣಾ

ದೇವಿಯಲ್ಲಿ ನನಗೆ ಪುತ್ರಸಂತಾನವಾಗಿರುವುದಿಲ್ಲ. ಈ ಒಂದೇ ಒಂದು ವ್ಯಥೆಯಿಂದ ಸಕಲ ಭೂಮಂಡಲದ ಒಡೆಯನಾದರೂ ನನಗೆ ಸುಖಶಾಂತಿಯಿಲ್ಲ. ರತ್ನಪ್ರಸವಿಯಾದ, ರತ್ನವೇ ಮೊದಲಾದ ಸಂಪತ್ತುಗಳನ್ನು ತನ್ನ ಗರ್ಭದಲ್ಲಿ ಧರಿಸಿರುವ, ಆ ಸಂಪತ್ತುಗಳನ್ನೇ ಜನೋಪಕಾರಾರ್ಥವಾಗಿ, ದಾನರೂಪವಾಗಿ ಕೊಡುತ್ತಿರುವ ಈ ಭೂಮಾತೆಯು (ಈ ಭಾರತಮಾತೆಯು) ಸಹ ನನಗೆ ಹರ್ಷವನ್ನು ಒದಗಿಸಲಾರಳು. ನಾನು ಜಂಬು, ಪ್ಲಕ್ಷ, ಶಾಲ್ಮಲಿ, ಕುಶ, ಕ್ರೌಂಚ, ಶಾಕ, ಪುಷ್ಕರಗಳೆಂಬ ಏಳುಖಂಡಗಳಿಂದ ಒಡಗೂಡಿದ ಈ ಜಗತ್ತಿಗೆ (ಈ ಭೂಮಂಡಲಕ್ಕೆ, ಈ ಪೃಥ್ವಿಗೆ), ಈಶನಾಗಿದ್ದರೂ ವಿಶ್ವಾಧಿಪತಿ, ವಿಶ್ವಸಾಮ್ರಾಟ, ವಿಶ್ವನಾಥನೆನಿಸಿಕೊಂಡರೂ ಆನಂದರಹಿತನಾಗಿ ದಿನ ಕಳೆಯುತ್ತಿರುವೆನು. ಈ ಸುಖಸಂಪತ್ತಿನ ನಿಧಿಯಾದ, ರತ್ನಧಾತ್ರಿಯು ನನ್ನ ಪಾಲಿಗೆ ಸಂತಸ ಶೂನ್ಯಳು.

ಅನ್ವಯ :— ಕಿಂತು ತವೈತಸ್ಯಾಂ ವಧ್ವಾಮ್ ಅದೃಷ್ಟ ಸದೃಶಪ್ರಜಂ ಸದ್ವೀಪಾ ರತ್ನಸೂಃ ಅಪಿ ಮೇದಿನೀ ನ ಅವತಿ ॥

ಸದೃಶಾ ಚ ಸಾ ಪ್ರಜಾ ಚ। ಅದೃಷ್ಟಸದೃಶಪ್ರಜಾಯೇನ ಸಃ, ಅದೃಷ್ಟ ಸದೃಶ ಪ್ರಜಃ. ತಮ್। ದ್ವೀಪೈಃ ಸಹಿತಾ, ಸದ್ವೀಪಾ ॥ ರತ್ನಾನಿ ಸೂತೇ ಇತಿ ರತ್ನಸೂಃ ॥ ಅವ—ರಕ್ಷಣಾದಿಷು—ರಕ್ಷಣ ಮುಂತಾದ 20 ಅರ್ಥಗಳಲ್ಲಿ ಪ್ರೀಣನವೂ ಸೇರಿದೆ—ಲಟ್ ॥

ಕಿಂತು=ಆದರೆ, ತವ=ನಿನ್ನ, ಏತಸ್ಯಾಂ=ಈ, ವಧ್ವಾಂ=ಸೊಸೆಯಲ್ಲಿ, ಅದೃಷ್ಟ ಸದೃಶಪ್ರಜಂ=ನೋಡದಿರುವ, ಅನುರೂಪನಾದ ಪುತ್ರನುಳ್ಳ, ಮಾಂ=ನನ್ನನ್ನು, ಸದ್ವೀಪಾ (ಅಪಿ) ಸಪ್ತದ್ವೀಗಳಿಂದ ಕೂಡಿರುವ ಈ. ರತ್ನಸೂರಪಿ=ನವರತ್ನಾದಿಗಳನ್ನು ಕೊಡುವ ಈ, ಮೇದಿನೀ=ಭೂಮಿ, ನ ಅವತಿ=ತೃಪ್ತಿಗೊಳಿಸುವುದಿಲ್ಲ.

66. ನೂನಂ ಮತ್ತಃ ಪರಂ ವಂಶ್ಯಾಃ ಪಿಂಡವಿಚ್ಛೇದ ದರ್ಶಿನಃ ।
ನ ಪ್ರಕಾಮಭುಜಃ ಶ್ರಾದ್ಧೇ ಸ್ವಧಾಸಂಗ್ರಹತತ್ಪರಾಃ ॥ ೬೬ ॥

ಹೇ ಪರಬ್ರಹ್ಮ ಸ್ವರೂಪಾ (ಹೇ ಬ್ರಹ್ಮನ್), ಹೇ ವಿಧಾತಾ, ಹೇ ಗುರುಸಾರ್ವಭೌಮಾ, ಪುತ್ರಸಂತಾನವಿಲ್ಲದ ನನ್ನನ್ನು ಪಿತೃಲೋಕದಲ್ಲಿರುವ ನನ್ನ ಪೂರ್ವಜರು ಬಹಳ ದುಃಖದಿಂದ ನನ್ನನ್ನು ನೋಡುತ್ತಿರುವರು. ಮುಂದೆ ನನ್ನ ಸಂತತಿಯಿಂದ ಪಿಂಡ ಪ್ರಧಾನ ಕಾರ್ಯವು, ಶ್ರಾದ್ಧಾದಿ ಶ್ರೌತಕರ್ಮಗಳ ವಿಧಿವಿಧಾನಗಳು ನಿಂತುಹೋಗುವುದೆಂದು ತಿಳಿದು ದುಃಖಿಸುತ್ತಿರುವರು. ಅವನ್ನು ನಾನು ನೀಡುತ್ತಿರುವ ಪಿಂಡಾದಿಗಳಲ್ಲಿ ಸ್ವಲ್ಪಾಂಶವನ್ನು ಭವಿಷ್ಯ ನಿಧಿಯಂತೆ (ಉಳಿತಾಯ ಮಾಡಿ) ಸಂಗ್ರಹಿಸಿಟ್ಟುಕೊಳ್ಳುತ್ತಿರುವರು. ಹಾಗೆಯೇ ದುಃಖಪೀಡಿತರಾದ ಆ ನನ್ನ ಪಿತೃದೇವತೆಗಳು, ಪಿತೃಕರ್ಮದಲ್ಲಿ, ನಾನು ನೀಡುತ್ತಿರುವ, ತರ್ಪಣಾದಿಗಳನ್ನು ಕೊಡುತ್ತಿದ್ದರೂ ಅದನ್ನು ಆನಂದರಹಿತರಾಗಿ ಸ್ವೀಕರಿಸುತ್ತಿರುವರು. ಮುಂದೆ ಪುತ್ರಸಂತಾನವಿಹೀನನಾದ ನನ್ನನ್ನು ಪಿಂಡವಿಚ್ಛೇದನ (ವಿಚ್ಛೇದ) ಶತಸ್ಸಿದ್ಧವೆಂದು ಅರಿತಿರುವರು. ನಾನು ತರ್ಪಣಕಾಲದಲ್ಲಿ ಕೊಡುತ್ತಿರುವ ಗಂಗೋದಕವನ್ನು ಅವರು ಸಂತೋಷದಿಂದ ಸ್ವೀಕರಿಸುತ್ತಿಲ್ಲ.

ಅನ್ವಯ :—ನೂನಂ ಮತ್ತಃ ಪರಂ ಪಿಂಡವಿಚ್ಛೇದದರ್ಶಿನಃ, ವಂಶ್ಯಾಃ ಸ್ವಧಾಃ ಸಂಗ್ರಹತತ್ಪರಾಃ ಶ್ರಾದ್ಧೇ ಪ್ರಕಾಮಭುಜಃ ನ (ಭವಂತಿ) ॥

ವಂಶೇ ಭವಾಃ ವಂಶ್ಯಾಃ ॥ ಪಿಂಡಸ್ಯ ವಿಚ್ಛೇದಃ, ಪಿಂಡವಿಚ್ಛೇದಂ—ಪಶ್ಯಂತೀತಿ ಪಿಂಡವಿಚ್ಛೇದದರ್ಶಿನಃ (ದೃಷ್ಟ್ವಾಂ ಶೀಲಮೇಷಾಂ ದರ್ಶಿನಃ ಪಿಂಡವಿಚ್ಛೇದಸ್ಯ ದರ್ಶಿನಃ) —ಪ್ರಕಾಮಂ ಭುಂಜತೇ ಇತಿ ಪ್ರಕಾಮಭುಜಃ ॥ ಸ್ವಧಾ ಸಂಗ್ರಹೇ ತತ್ಪರಾಃ ॥

ಮತ್ತಃ ಪರಂ=ನನ್ನ ನಂತರ, ಪಿಂಡವಿಚ್ಛೇದದರ್ಶಿನಃ=ಪಿಂಡದಾನವು ನಿಂತು ಹೋಗಿ, ವಂಶ್ಯಾಃ=ಪಿತೃಗಳು, ಸ್ವಧಾಸಂಗ್ರಹತತ್ಪರಾಃ=ಪಿತೃಭೋಗ್ಯವಾದ ಕವ್ಯ ಸಂಪಾದನೆಯಲ್ಲಿ ಆಸಕ್ತರಾದ, ಶ್ರಾದ್ಧೇ=ಪಿತೃಕರ್ಮಗಳಲ್ಲಿ, ಪ್ರಕಾಮಭುಜಃ=ಬೇಕಾದಷ್ಟು ತಿನ್ನುವವರು, ನಭವಂತಿ=ಆಗುವುದಿಲ್ಲ.

**67. ಮತ್ಪರಂ ದುರ್ಲಭಂ ಮತ್ವಾ ನೂನಮಾವರ್ಜಿತಂ ಮಯಾ ।**
**ಪಯಃ ಪೂರ್ವೈಃ ಸ್ವನಿಃಶ್ವಾಸೈಃ ಕವೋಷ್ಣಮುಪಭುಜ್ಯತೇ ॥ ೬೭ ॥**

ನನ್ನನಂತರ ಪಿಂಡ ಪ್ರಧಾನಾದಿ ಕಾರ್ಯಗಳು ನಿಂತುಹೋಗುವುದೆಂಬುದನ್ನು, ಶ್ರಾದ್ಧಕ್ರಿಯೆಗಳು ವಿಚ್ಛೇದನಹೊಂದುವುದೆಂದು ತಿಳಿದಿರುವ ಆ ನನ್ನ ಪಿತೃದೇವತೆಗಳು ನಾನು ಅರ್ಪಿಸುತ್ತಿರುವ ತಿಲ, ತಂಡುಲ, ತರ್ಪಣಾದಿಗಳನ್ನು ದುಃಖಿತವಾದ ಹೃದಯದಿಂದ ಸೇವಿಸುತ್ತಿರುವರು. ಹೀಗೆ ಸೇವಿಸುತ್ತಿರುವಾಗ ದುಃಖದಿಂದ ಬಿಸಿಯಾದ ಅವರ ಉಸಿರು ನಾನು ತರ್ಪಣಕಾಲದಲ್ಲಿ ಕೊಡುವ ಪವಿತ್ರವಾದ ಗಂಗೋದಕವನ್ನು ಸೇರಿ ಅದರ ಕಾವನ್ನು (ಉಷ್ಣಾಂಶವನ್ನು) ಏರಿಸುವುದು (ಕವೋಷ್ಣಮ್=ಕಿಂಚಿದುಷ್ಣಮ್). ಹೀಗೆ ಅವರು ಶ್ರಾದ್ಧಕಾಲದಲ್ಲಿ ತಂಪಾದ ಗಂಗೋದಕದ ಬದಲು ಬಿಸಿಯಾದ ತರ್ಪಣ ಜಲವನ್ನು ದುಃಖಪೀಡಿತಹೃದಯದಿಂದ ಅರೆಮನಸ್ಸಿನಿಂದ, ಬೇಕೋ ಬೇಡವೋ ಎಂಬಂತೆ (ಒತ್ತಾಯಕ್ಕೆ ಸಿಕ್ಕಿಬಿದ್ದವನ ರೀತಿ ಎಂಬಂತೆ) ಸೇವಿಸುತ್ತಿರುವರು. ಅವರು ದುಃಖದಿಂದ ಭೋಗಿಸುತ್ತಿರುವರೋ ಇಲ್ಲವೋ ಎಂಬುದನ್ನು ನನ್ನ ಕುಲೋದ್ಧಾರಕರಾದ ತಾವೇ ನಿರ್ಣಯಿಸಿ ಹೇಳಬೇಕು.''

ಅನ್ವಯ :—ಮತ್ಪರಂ ದುರ್ಲಭಂ ಮತ್ವಾ ಮಯಾ ಆವರ್ಜಿತಂ ಪಯಃ ಪೂರ್ವೈಃ ಸ್ವನಿಃಶ್ವಾಸೈಃ ಕವೋಷ್ಣಮ್ ಉಪಭುಜ್ಯತೇ ನೂನಮ್ ॥ ಮತ್‌ಪರಂ, ಮತ್ಪರಂ ॥ ಸ್ವೇಷಾಂ ನಿಶ್ವಾಸಾಃ. ತೈಃ ॥ ಕು ಶಬ್ದಕ್ಕೆ ಕವಾದೇಶ ಬಂದು ಕವೋಷ್ಣ ಎಂದಾಗಿದೆ. (ಉಪ)ಭುಂಕ್ತೇ—ಭುಂಜಾತೇ ॥ ಭುಂಕ್ಷೆ—ಭುಂಜಾಥೇ—ಭುಂಗ್ಧ್ವೇ ॥ ಭುಂಜೇ—ಭುಂಜ್ವಹೇ—ಭುಂಜ್ಮಹೇ॥ ಭುಜ—ಪಾಲನಾಭ್ಯವಹಾರಯೋಃ—ಲಟ್—ಪ್ರ.ಪು.ಬ.॥

ಮತ್ಪರಂ=ನನ್ನ ನಂತರ. ದುರ್ಲಭಂ=ಸಿಗುವುದು ಕಷ್ಟವೆಂದು. ಮತ್ವಾ=ತಿಳಿದು. ಮಯಾ ಆವರ್ಜಿತ=ನನ್ನಿಂದ ಕೊಡಲ್ಪಟ್ಟ. ಪಯಃ=ತರ್ಪಣದ ಉದಕ. ಪೂರ್ವೈಃ= ಪಿತೃಗಳಿಂದ. ಸ್ವನಿಃಶ್ವಾಸೈಃ=ತಮ್ಮ ನಿಟ್ಟುಸಿರಿನಿಂದ. ಕವೋಷ್ಣಂ=ಸ್ವಲ್ಪ ಬಿಸಿಯಾಗಿ. ಉಪಭುಜ್ಯತೇ=ಸೇವಿಸಲ್ಪಡುತ್ತದೆ, ನೂನಂ=ನಿಶ್ಚಯವು.

**68. ಸೋಽಹಮಿಜ್ಯಾವಿಶುದ್ಧಾತ್ಮಾ ಪ್ರಜಾಲೋಪನಿಮೀಲಿತಃ ।**
**ಪ್ರಕಾಶಶ್ಚಾಪ್ರಕಾಶಶ್ಚ ಲೋಕಾಲೋಕ ಇವಾಚಲ ॥ ೬೮ ॥**

ಹೀಗೆ ಯಜ್ಞದಾನಾದಿ ಪುಣ್ಯಕರ್ಮಗಳಿಂದ ನಾನು ಶುದ್ಧಾತ್ಮನಾಗಿದ್ದರೂ ಸಂತಾನ ಲೋಪದಿಂದ ದುಃಖಾರ್ತನಾಗಿರುವೆನು. ನನ್ನ ಈಗಿನ ಸ್ಥಿತಿಗತಿಯನ್ನು ನೋಡಿದರೆ ಬೆಳಕು-ಕತ್ತಲೆಗಳ ಮಧ್ಯದಲ್ಲಿ ಸೂರ್ಯಲೋಕಕ್ಕೆ ಮೇರೆಯಾಗಿ ನಿಂತಿರುವ ಲೋಕಾಲೋಕಪರ್ವತಶ್ರೇಣಿಯಂತಿದೆ. ಸೂರ್ಯನ ಬೆಳಕು ಬಿದ್ದ ಆ ಕುಲಪರ್ವತದ ಒಂದು ಬದಿಯು ಬೆಳಕಾಗಿದ್ದರೆ. ಇನ್ನೊಂದು ಭಾಗವು ಗಾಢಾಂಧಕಾರದಲ್ಲಿ ಮುಳುಗಿದೆ. (ಪ್ರಕಾಶಶ್ಚ, ಅಪ್ರಕಾಶಶ್ಚ). ನನ್ನ ಸಮಸ್ಯೆಗೆ ಬೆಳಕು ಚೆಲ್ಲು ಗುರುವೆ (ಪರಿಹಾರ ಸೂಚಿಸು ಗುರುವೆ). ಮಕ್ಕಳಿಲ್ಲವೆಂಬ ಚಿಂತೆಯು ನನ್ನನ್ನು ಹಗಲುರಾತ್ರಿ ಪೀಡಿಸುತ್ತಿದೆ. ದುಃಖವೆಂಬ ಕತ್ತಲೆಯಲ್ಲಿ ತೊಳಲಾಡುತ್ತಿದ್ದೇನೆ (ನಿಮೀಲಿತ). ನನಗೆ ಗ್ರಹಣ ಹಿಡಿದಂತಿದೆ. ಇದನ್ನು ನೀನು ತಿಳಿದಿರುವೆಯಲ್ಲವೆ.

ಅನ್ವಯಃ :—ಇಜ್ಯಾವಿಶುದ್ಧಾತ್ಮಾ ಪ್ರಜಾಲೋಪ ನಿಮೀಲಿತಃ ಸಃ ಅಹಂ ಲೋಕಾಲೋಕಃ ಅಚಲಃ ಇವ ಪ್ರಕಾಶಶ್ಚ ಅಪ್ರಕಾಶಶ್ಚ ॥ ಇಜ್ಯಯಾ ವಿಶುದ್ಧಃ ಆತ್ಮಾ ಯಸ್ಯ ಸಃ ॥ ಪ್ರಜಾಯಾಃ ಲೋಪಃ । ತೇನ ನಿಮೀಲಿತಃ ॥

ಇಜ್ಯಾವಿಶುದ್ಧಾತ್ಮಾ=ಯಾಗದಿಂದ ಪವಿತ್ರವಾದ ಚೇತನವುಳ್ಳವನೂ. ಪ್ರಜಾಲೋಪ ನಿಮೀಲಿತಃ=ಪುತ್ರಸಂತಾನವಿಲ್ಲದೆ ದುಃಖದಿಂದ ಮುಚ್ಚಿದವನೂ (ಸಂಕೋಚಗೊಂಡವನೂ) ಸೋಹಂ=ಆದ ನಾನು, ಲೋಕಾಲೋಕಃ ಅಚಲಃ ಇವ=ಉದಯಾಸ್ತಪರ್ವತದಂತೆ, ಪ್ರಕಾಶಶ್ಚ=ದೇವಋಣವಿಮೋಚನದಿಂದ ಲೋಕದಲ್ಲಿ ಪ್ರಕಾಶಿಸುವವನೂ, ಅಪ್ರಕಾಶಶ್ಚ=ಪ್ರಕಾಶ ರಹಿತನಾಗಿ.

**69. ಲೋಕಾಂತರಸುಖಂ ಪುಣ್ಯಂ ತಪೋದಾನಸಮುದ್ಭವಮ್ ।**
**ಸಂತತಿಃ ಶುದ್ಧವಂಶ್ಯಾ ಹಿ ಪರತ್ರೇಹ ಚ ಶರ್ಮಣೇ ॥ ೬೯ ॥**

"ಹೇ ವಿಧಾತನೇ (ಹೇ ಗುರುದೇವಾ), ಶ್ರೇಷ್ಠವಾದ ತಪಸ್ಸು, ದಾನಾದಿ ಸತ್ಕರ್ಮಗಳಿಂದ ಸ್ವರ್ಗಜನ್ಯವಾದ ಪಾರಲೌಕಿಕ ಸುಖವು ಮಾತ್ರ ದೊರೆಯುವುದು. ಆದರೆ ಗೋತ್ರೋದ್ಭವನಾದ ಶುದ್ಧವಂಶದಲ್ಲಿ ಜನಿಸಿದ ಸುಪುತ್ರನಿಂದ. ವಂಶವೂ ಮುಂದು ವರಿಯುವುದು. ಪ್ರಜಾಪಾಲನೆಯು ಕಾರ್ಯವು ಅನುವಂಶಿಕವಾಗಿ ಮುಂದುವರಿಯುವುದು. ಇದರ ಜೊತೆಗೆ ಪಿತೃದೇವತೆಗಳ ಋಣದಿಂದಲೂ ನಾನು ಮುಕ್ತನಾಗುವೆನು. ಹೀಗಾಗಿ ಸತ್ಪುತ್ರನಿಂದ ಇಹಪರಗಳೆರಡರ ಸುಖಕ್ಕೂ ಪಾತ್ರನಾಗಿರುವೆನು. ನನ್ನ ಕಾಡಿಸುತ್ತಿರುವ ದುಃಖವು ಇದೊಂದೇ ಆಗಿದೆ. ಇದಕ್ಕೆ ಪರಿಹಾರಮಾರ್ಗವನ್ನು ತೋರಿಸೈ ಕುಲಗುರುವೆ (ಗುರುದೇವ)" ಎಂದು ದಿಲೀಪನು ನುಡಿದನು.

ಅನ್ವಯ :—ತಪೋದಾನಸಮುದ್ಭವಮ್ ಪುಣ್ಯಂ ಲೋಕಾಂತರಸುಖಮ್ । ಶುದ್ಧವಂಶ್ಯಾ ಸಂತತಿಃ ಹಿ ಪರತ್ರ ಇಹ ಚ ಶರ್ಮಣೇ (ಭವತಿ) ॥

ಅನ್ಯೋಲೋಕಃ=ಲೋಕಾಂತರಂ. ತಸ್ಮಿನ್ ಸುಖಂ ॥ ತಪಶ್ಚದಾನಂಚ ತಪೋದಾನೇ। ಸಮುದ್ಭವತಿ ಅಸ್ಮಾತ್ ಇತಿ ಸಮುದ್ಭವಃ ॥ ತಪೋದಾನೇ ಸಮುದ್ಭವಃ ಯಸ್ಯ ತತ್ । ತ—ತಮ್ ॥ ವಂಶೇಭವಾ—ವಂಶ್ಯಾ । ಶುದ್ಧಾ ಚ ಸಾ ವಂಶ್ಯಾ ಚ । ಶುದ್ಧವಂಶ್ಯಾ ॥

ತಪೋದಾನಸಮುದ್ಭವಂ=ತಪಸ್ಸು, ದಾನಗಳಿಂದ ಉಂಟಾದ. ಪುಣ್ಯಂ=ಪುಣ್ಯಫಲವು, ಲೋಕಾಂತರ ಸುಖಂ=ಪರಲೋಕದ ಸುಖ. ಶುದ್ಧವಂಶ್ಯಾ=ಪವಿತ್ರವಾದ ಕುಲದಲ್ಲಿ ಹುಟ್ಟಿದ, ಸಂತತಿಃ=ಪುತ್ರಸಂತತಿ, ಪರತ್ರ=ಪರಲೋಕದಲ್ಲಿ, ಇಹ ಚ=ಈ ಲೋಕದಲ್ಲೂ, ಶರ್ಮಣೇ=ಸುಖಕ್ಕೋಸ್ಕರ.

**70.** **ತಯಾ ಹೀನಂ ವಿಧಾತರ್ಮಾಂ ಕಥಂ ಪಶ್ಯನ್ನ ದೂಯಸೇ ।**
**ಸಿಕ್ತಂ ಸ್ವಯಮಿವ ಸ್ನೇಹಾದ್ವಂಧ್ಯಮಾಶ್ರಮವೃಕ್ಷಕಮ್ ॥ ೭೦ ॥**

"ಹೇ ಸದ್ಗುರುವೇ, ನೀನು ಸಕಲಸಾಮರ್ಥ್ಯದಿಂದ ಸೂರ್ಯನಂತೆ ವಿರಾಜಿಸುತ್ತಿರುವೆ. ತಂಪಾದ, ಸೊಂಪಾದ ತೋಟದಲ್ಲಿ (ನಿನ್ನ ತಪೋಭೂಮಿಯಲ್ಲಿ) ನೀನು ನೀರೆರೆದು ಬೆಳೆಸಿದ ಗಿಡಬಳ್ಳಿಯು ಫಲಶೂನ್ಯವಾದರೆ ನಿನಗೆ ವ್ಯಥೆಯಾಗುವುದು ಸಹಜವಲ್ಲವೆ ? ಹೇ ಭಗವಾನ್, ಅಂತೆಯೇ ಸಂತಾನಹೀನನಾದ (ನಿನ್ನ ಶಿಷ್ಯನಾದ) ನನ್ನನ್ನು ನೋಡುವಾಗ ನಿಮ್ಮ ಮನ ಕರಗುವುದಿಲ್ಲವೆ ? ನಿಮಗೆ ವ್ಯಥೆಯಾಗುವುದಿಲ್ಲವೇ ? ಹೇ ಬ್ರಹ್ಮಸ್ವರೂಪನೇ, ಸರ್ವಸಮರ್ಥರಾದ ನೀವು ಉಪೇಕ್ಷಿಸಿದರೆ ನನ್ನನ್ನು ಕಾಯುವವರು ಬೇರೆ ಯಾರು ಇರುವರು ?"

ಅನ್ವಯ :—ವಿಧಾತಃ ತಯಾ ಹೀನಂ ಮಾಂ ಸ್ನೇಹಾತ್ ಸ್ವಯಂ ಸಿಕ್ತಂ ವಂಧ್ಯಂ ಆಶ್ರಮವೃಕ್ಷಕಂ ಇವ ಪಶ್ಯನ್ ಕಥಂ ನ ದೂಯಸೇ ॥

ದೂಙ್—ಉಪತಾಪೇ—ಲಟ್—ಮ.ಪು.ಏ. ॥ ಆಶ್ರಮಸ್ಯ ವೃಕ್ಷಕಃ ॥ ತಮ್ ॥ ಅಲ್ಪಃ ವೃಕ್ಷಃ ವೃಕ್ಷಕಃ ॥

ಹೇ ವಿಧಾತಃ=ಎಲೈ ಬ್ರಹ್ಮನೇ, ಬ್ರಹ್ಮಸ್ವರೂಪನೇ, ತಯಾ=ಆ ಸಂತತಿಯಿಂದ, ಹೀನಂ=ವಿರಹಿತನಾದ, ಮಾಂ=ನನ್ನನ್ನು, ಸ್ನೇಹಾತ್=ಪ್ರೀತಿಯಿಂದ, ಸ್ವಯಂಏವ=ತಾನಾಗಿಯೇ, ಸಿಕ್ತಂ=ನೀರೆರೆದ, ವಂಧ್ಯಂ=ಫಲರಹಿತವಾದ, ಆಶ್ರಮವೃಕ್ಷಕಂ ಇವ=ತಪೋವನದ ಗಿಡವೆಂಬಂತೆ, ಪಶ್ಯನ್=ನೋಡುತ್ತಾ, ಕಥಂ ನ ದೂಯಸೇ=ಹೇಗೆ ತಾನೆ ವ್ಯಥೆಪಡುವುದಿಲ್ಲವೆ ? ವ್ಯಥೆಯಾಗದೆ ?

**71.** **ಅಸಹ್ಯಪೀಡಂ ಭಗವನ್ನೃಣಮಂತ್ಯಮವೇಹಿ ಮೇ ।**
**ಅರುಂತುದಮಿವಾಲಾನಂ ಅನಿರ್ವಾಣಸ್ಯ ದಂತಿನಃ ॥ ೭೧ ॥**

ಎಲೈ ಗುರುದೇವಾ, ಧರ್ಮಶಾಸ್ತ್ರಗಳು ಮಾನವನಿಗೆ ಮೂರು ವಿಧದ ಋಣಗಳನ್ನು ತೀರಿಸಬೇಕೆಂದು ಉದ್ಘೋಷಿಸುತ್ತಿವೆ. ಅವು ಯಾವುವೆಂದರೆ ದೇವಋಣ, ಋಷಿಋಣ ಮತ್ತು ಪಿತೃಋಣ. ವೇದಾಭ್ಯಾಸದಿಂದ ಋಷಿಋಣವೂ, ಪೂಜಾದಿಕೈಂಕರ್ಯದಿಂದ ದೇವಋಣವೂ ಪರಿಹಾರವಾಗುವುದು. ಸಂತಾನೋತ್ಪತ್ತಿಯಿಲ್ಲದ ಕಾರಣ ಮೂರನೆಯ ಮತ್ತು ಕೊನೆಯದಾದ ಪಿತೃಋಣವು ಭಾರವಾಗಿಯೇ ಉಳಿದಿದೆ. ಆಗತಾನೇ ಹಿಡಿದು ಕಟ್ಟಿಹಾಕಿದ ಕಾಡಾನೆಯು ಸ್ನಾನ, ನೀರಾಟ, ಓಡಾಟವಿಲ್ಲದೆ, ಮನಃಶಾಂತಿಯಿಲ್ಲದೆ ತೊಳಲಾಡುತ್ತಿರುವಾಗ ಅದನ್ನು ಕಟ್ಟಿಹಾಕಿದ ಕಂಬವೇ ಅದಕ್ಕೆ ಅಸಹ್ಯವೇದನೆಯುಂಟು ಮಾಡುವಂತೆ ನನ್ನ ಸ್ಥಿತಿಯಾಗಿದೆ. ಪುತ್ರಸಂತಾನವಿಲ್ಲದ ಈ ಚಿಂತೆಯು ನನಗೆ ಸಹಿಸ

ಲಾರದ ಅತಿವ್ಯಥೆಯನ್ನುಂಟುಮಾಡಿ, ನನ್ನ ಆನಂದವನ್ನು ಶೂನ್ಯಗೊಳಿಸುತ್ತಿದೆ (ಅಡಗಿಸುತ್ತಿದೆ). ಹೇ ಮುನಿವರ, ಹೇ ವಿಶ್ವಗುರುವೆ, ನನ್ನ ಈ ಮಹಾದುಃಖವನ್ನು ನೀವು ತಿಳಿದು ಪರಿಹಾರವನ್ನು ಸೂಚಿಸಬೇಕು.

ಅನ್ವಯ :—ಭಗವನ್, ಮೇ ಅಂತ್ಯಂ ಋಣಂ ಅನಿರ್ವಾಣಸ್ಯ ದಂತಿನಃ ಅರುಂತುದಂ ಆಲಾನಂ ಇವ ಅಸಹ್ಯಪೀಡಂ ಅವೇಹಿ ನ ಸಹ್ಯಾ। ಅಸಹ್ಯಾ ಪೀಡಾ ಯಸ್ಮಿನ್ ತತ್—ಅಸಹ್ಯಪೀಡಂ—ಅರುಂತುದತೀತಿ—ಅರುಂತುದಂ॥ ಅರುಂತುದಂ ಮರ್ಮಸ್ಪೃಕ್॥ ನವಿದ್ಯತೇ ನಿರ್ವಾಣಂ ಯಸ್ಯ ಸಃ—ಅನಿರ್ವಾಣಃ ತಸ್ಯ॥ ದಂತೌ ಅಸ್ಯಸ್ತ ಇತಿದಂತೀ—ತಸ್ಯ॥ (ಅವ) ಏತು, ಇತಾತ್—ಇತಾಂ—ಯಂತು। ಇಹಿ, ಇತಾತ್—ಇತಂ—ಇತ॥ ಅಯಾನಿ—ಅಯಾವ—ಅಯಾಮ॥ ಇಣ್—ಗತೌ ಲೋಟ್—ಮ.ಪು.ಏ.॥

ಭಗವನ್=ಪೂಜ್ಯರೇ, ಮೇ=ನನ್ನ, ಅಂತ್ಯಋಣಂ=ಪಿತೃಋಣವನ್ನು, (ಋಣಬಂಧ) ಅನಿರ್ವಾಣಸ್ಯ=ಸ್ನಾನಾದಿಗಳಿಲ್ಲದ, ನವಬದ್ಧಸ್ಯ=ಹೊಸದಾಗಿ ಕಟ್ಟಿದ, ದಂತಿನಃ=ಆನೆಗೆ ಅರುಂತುದಂ=ದುಃಖಕರವಾದ, ಆಲಾನಂ ಇವ=ಆನೆಯನ್ನು ಕಟ್ಟುವ ಕಂಬದಂತೆ, ಅಸಹ್ಯಪೀಡಂ=ಸಹಿಸಲಾರದ ದುಃಖವಾಗಿ, ಅವೇಹಿ=ತಿಳಿ.

**72. ತಸ್ಮಾನ್ಮುಚ್ಯೇ ಯಥಾ ತಾತ ಸಂವಿಧಾತುಂ ತಥಾರ್ಹಸಿ ।**
**ಇಕ್ಷ್ವಾಕೂಣಾಂ ದುರಾಪೇಽರ್ಥೇ ತ್ವದಧೀನಾ ಹಿ ಸಿದ್ಧಯಃ ॥ ೭೨ ॥**

ಎಲೈ ತಾತನೇ, ಈ ಋಣವಿಮೋಚನೆಯ ಮಾರ್ಗವನ್ನು ನನಗೆ ಉಪದೇಶಿಸಲು ನೀವೊಬ್ಬರೆ ಸಮರ್ಥರು. ಇಕ್ಷ್ವಾಕುವಂಶದ ರಾಜರು ಇಕ್ಕಟ್ಟಿಗೆ ಸಿಕ್ಕಿದಾಗ,ಸಂದಿಗ್ಧವಾದ ಕಷ್ಟದ ಸಮಯದಲ್ಲಿ ತಮಗೇ ಮೊರೆಯಿಡುವರು. ತಮ್ಮ ಕೈಯಿಂದ ನಿವಾರಿಸಲು ಅಸಾಧ್ಯವೆಂದಾಗ, ತಮಗೆ ಮೀರಿದಂತಹ ವಿಚಾರದಲ್ಲಿ ಇಕ್ಷ್ವಾಕುವಂಶಜರನ್ನು ನೆಲೆಗೊಳಿಸುವ. ಭೂಮಿಯಲ್ಲಿ ಭದ್ರಪಡಿಸುವ ಕಾರ್ಯವು. ನಿಮ್ಮೊಬ್ಬರಿಂದ ಮಾತ್ರಸಾಧ್ಯ. ಈ ವಿಚಾರದಿಂದ ನನ್ನನ್ನು ಬಂಧವಿಮೋಚನೆಮಾಡಿ, ಉದ್ಧರಿಸಿ ಕಾಪಾಡಿರಿ, ಪರಮ ಗುರುವೇ.

ಅನ್ವಯ :—ತಾತ ತಸ್ಮಾದ್ ಯಥಾ ಮುಚ್ಯೇ ತಥಾ ಸಂವಿಧಾತುಮ್ ಅರ್ಹಸಿ। ಇಕ್ಷ್ವಾಕೂಣಾಂ ದುರಾಪೇ ಅರ್ಥೇ ಸಿದ್ಧಯಃ ತ್ವದಧೀನಾಃ॥ ಮುಚ್ಲೃ=ಮೋಕ್ಷಣೇ—ಕರ್ಮಣಿ—ಲಟ್—ಉ.ಪು.ಏ.॥ ಅರ್ಹಸಿ—ಪೂಜಾಯಾಂ—ಲಟ್—ಮ.ಪು.ಏ॥ ಇಕ್ಷ್ವಾಕೋಃ—ಅಪತ್ಯಾನಿ ಪುಮಾಂಸಃ—ಇಕ್ಷ್ವಾಕವಃ—ಐಕ್ಷ್ವಾಕವಃ—ಐಕ್ಷ್ವಾಕವೌ—ಇಕ್ಷ್ವಾಕವಃ)॥ ದುಃಖೇನ ಆಪ್ತುಂ ಶಕ್ಯಃ ದುರಾಪಃ ತಸ್ಮಿನ್॥ ತವ ಅಧೀನಾಃ—ತ್ವದಧೀನಾಃ॥ ಹೇ ತಾತ=ಎಲೈ ತಂದೆಯೆ. ಆ ಪಿತೃಋಣದಿಂದ, ಯಥಾ=ಯಾವ ರೀತಿಯಿಂದ, ಮುಚ್ಯೇ=ಮುಕ್ತನಾಗುವೆನೋ, (ಯಥಾ ವಿಮುಚ್ಯೇಽಹಂ—ಪಾ—), ತಥಾ=ಆ ರೀತಿಯಿಂದ, ಸಂವಿಧಾತುಂ=ಮಾಡಲು, ಅರ್ಹಸಿ=ಯೋಗ್ಯನಾಗಿರುವಿ. ಹಿ=ಯಾವ ಕಾರಣದಿಂದ ಇಕ್ಷ್ವಾಕೂಣಾಂ=ಇಕ್ಷ್ವಾಕುವಂಶೀಯನಾದ. ದುರಾಪೇ=ಹೊಂದಲು ಅಸಾಧ್ಯವಾದ ಅರ್ಥೇ=ವಸ್ತುವಿನಲ್ಲಿ, ಸಿದ್ಧಯಃ=ಕಾರ್ಯಸಿದ್ಧಿಗಳು, ತ್ವದಧೀನಾಃ=ತಮ್ಮ ಅಧೀನವಾಗಿರುತ್ತವೆಯಷ್ಟೆ.

**73.** ಇತಿ ವಿಜ್ಞಾಪಿತೋ ರಾಜ್ಞಾ ಧ್ಯಾನಸ್ತಿಮಿತಲೋಚನಃ ।
ಕ್ಷಣಮಾತ್ರಮೃಷಿಸ್ತಸ್ಥೌ ಸುಪ್ತಮೀನ ಇವ ಹ್ರದಃ ॥ ೭೩ ॥

ಈ ರೀತಿಯಾಗಿ ದಿಲೀಪನು ನಿವೇದಿಸಿಕೊಂಡನು. ಕೂಡಲೇ ವಸಿಷ್ಠ ಋಷಿಗಳು ಅದರ ಕಾರಣವನ್ನು ತಿಳಿಯಲು ಧ್ಯಾನಾಸಕ್ತರಾದರು. ಕೂಡಲೇ ಕಣ್ಣಿಬೊಂಬೆಯು (ಕಣ್ಮಣಿಯು) ಚಲಿಸದೆ ಸ್ಥಿರವಾಯಿತು. ಅಲ್ಪಕಾಲ ಅವರು ಸಮಾಧಿಸ್ಥರಾದರು. ವಿಶಾಲವಾದ ಮಡುವಿನಲ್ಲಿ ಸ್ವಲ್ಪವೂ ಚಲಿಸದ ಮಲಗಿಕೊಂಡಿರುವ ಮೀನಿನಂತೆ ಆ ಮಹಾತ್ಮರು ಕಂಗೊಳಿಸಿದರು. ವಿಶಾಲವಾದ ಕೊಳದಲ್ಲಿ ಚಲಿಸದ್ದೆ, ನಿಶ್ಚಲವಾಗಿ ಮಲಗಿರುವ ಮೀನಿನಂತೆ ಕಂಡಿತು ಅವರ ನಿಮೀಲಿತ ನಿಶ್ಚಲ ನಯನ. ಇಂತಹ ಮೀನಂಗಳಿಂದ ಕೂಡಿದ ಭವ್ಯಸರೋವರವೋ ಎಂಬಂತೆ ಒಂದು ಅಂಗವನ್ನು ತೋರುತ್ತ ಆ ಮುನಿಮೌಳಿ ವಿರಾಜಿಸಿದರು.

ಅನ್ವಯ :—ಇತಿ ರಾಜ್ಞಾ ವಿಜ್ಞಾಪಿತಃ ಋಷಿಃ ಧ್ಯಾನಸ್ತಿಮಿತಲೋಚನಃ ಕ್ಷಣಮಾತ್ರಂ ಸುಪ್ತಮೀನಃ ಇವ ತಸ್ಥೌ ॥

ಧ್ಯಾನೇನ ಸ್ತಿಮಿತೇ ಲೋಚನೇ ಯಸ್ಯ ಸಃ—ಧ್ಯಾನಸ್ತಿಮಿತಲೋಚನಃ ॥ ಸುಪ್ತಾಃ ಮೀನಾಃ ಯಸ್ಮಿನ್ ಸಃ ಸುಪ್ತಮೀನಃ ॥ ತಸ್ಥೌ—ತಸ್ಥತುಃ—ತಸ್ಥುಃ ಇತ್ಯಾದಿ । ಷ್ಠಾ—ಗತಿನಿವೃತ್ತೌ—ಲಿಟ್—ಪ್ರ.ಪು.ಏ. ॥

ಇತಿ = ಈ ರೀತಿಯಾಗಿ, ರಾಜ್ಞಾ = ದಿಲೀಪನಿಂದ, ವಿಜ್ಞಾಪಿತಃ = ವಿಜ್ಞಾಪನೆಮಾಡಿ, ಋಷಿಃ = ವಸಿಷ್ಠಮಹರ್ಷಿಯು ಧ್ಯಾನಸ್ತಿಮಿತಲೋಚನಃ = ಧ್ಯಾನದಿಂದ ನಿಶ್ಚಲವಾದ ಕಣ್ಣುಳ್ಳ, ಕ್ಷಣಮಾತ್ರಂ = ಅಲ್ಪಸಮಯದಲ್ಲಿ, ಸುಪ್ತಮೀನಃ = ಚಲಿಸದಿರುವ ಮೀನುಗಳುಳ್ಳ. ಹ್ರದ ಇವ = ಕೊಳದಂತೆ, ತಸ್ಥೌ = ಇದ್ದನು.

**74.** ಸೋಽಪಶ್ಯತ್ ಪ್ರಣಿಧಾನೇನ ಸಂತತೇಃ ಸ್ತಂಭಕಾರಣಮ್ ।
ಭಾವಿತಾತ್ಮಾ ಭುವೋ ಭರ್ತುಃ ಅಥೈನಂ ಪ್ರತ್ಯಬೋಧಯತ್ ॥ ೭೪ ॥

ಆ ಬಳಿಕ ವಸಿಷ್ಠಮಹರ್ಷಿಯು ಭೂಮೀಪತಿಯ ಸಂತತಿಪ್ರತಿಬಂಧಕ್ಕೆ ಕಾರಣವೇನೆಂದು ತಿಳಿದನು. ಏಕಾಗ್ರಚಿತ್ತನಾದ (ಪ್ರಣಿಧಾನ) ಶುದ್ಧಾಂತಃಕರಣವುಳ್ಳ ಆ ಮುನಿಶ್ರೇಷ್ಠನ ಪ್ರಜೋತ್ಪತ್ತಿಯ ತಡೆಗೆ ಕಾರಣವನ್ನು ಕೂಡಲೇ ತಿಳಿದು ಅದನ್ನು ದಿಲೀಪನಿಗೆ ಯಥಾವತ್ತಾಗಿ ತಿಳಿಸಲು ಅನುವಾದನು.

ಅನ್ವಯ :—ಸ ಪ್ರಣಿಧಾನೇನ ಭಾವಿತಾತ್ಮಾ ಭುವೋಃ ಭರ್ತುಃ ಸಂತತೇಃ ಸ್ತಂಭಕಾರಣಮ್ ಅಪಶ್ಯತ್ । ಅಥ ಏನಂ ಪ್ರತ್ಯಬೋಧಯತ್ ॥ ಅಪಶ್ಯತ್—ದೃಶಿರ್—ಪ್ರೇಕ್ಷಣೇ—ಲಙ್ ॥ ಸ್ತಂಭಸ್ಯ ಕಾರಣಮ್ ಸ್ತಂಭಕಾರಣಮ್ ॥ ಭಾವಿತಃ ಆತ್ಮಾ ಯಸ್ಯ ಸಃ । ಭಾವಿತಾತ್ಮಾ ॥ (ಪ್ರತಿ)—ಅಬೋಧಯತ್—ಬುಧ—ಅವಗಮನೇ—ಣಿಜಂತದ ಮೇಲೆ ಲಙ್ ॥ ಬುದ್ಧ್ಯರ್ಥಕಧಾತುಯೋಗದಿಂದ ಕರ್ತೃವಾದ ದಿಲೀಪನಿಗೆ ಕರ್ಮಸಂಜ್ಞಾ ಬಂದು "ಏನಂ" ಎಂದಾಗಿದೆ.

ಸಃ = ಆ ಮಹರ್ಷಿಯು. ಪ್ರಣಿಧಾನೇನ = ಏಕಾಗ್ರಮನಸ್ಸಿನಿಂದ, ಭಾವಿತಾತ್ಮಾ =

ಶುದ್ಧಾಂತಃಕರಣವುಳ್ಳವನಾಗಿ, ಭುವಃ = ಭೂಮಿಯ, ಭರ್ತುಃ = ಪಾಲಕನಾದ ದಿಲೀಪನಿಗೆ, ಸಂತತೇಃ = ಪುತ್ರೋತ್ಪತ್ತಿಯ, ಸ್ತಂಭಂ = ತಡೆಗೆ ಕಾರಣವನ್ನು, ಅಪಶ್ಯತ್ = ಕಂಡುಹಿಡಿದನು. ಅಥ = ಅನಂತರ, ಏನಂ = ಈ ರಾಜನನ್ನು ಕುರಿತು, ಪ್ರತ್ಯಬೋಧಯತ್ = ತಿಳಿಸಿದನು.

**75. ಪುರಾ ಶಕ್ರಮುಪಸ್ಥಾಯ ತವೋರ್ವೀಂ ಪ್ರತಿ ಯಾಸ್ಯತಃ ।**
**ಆಸೀತ್ ಕಲ್ಪತರುಚ್ಛಾಯಾಂ ಆಶ್ರಿತಾ ಸುರಭಿಃ ಪಥಿ ॥ ೭೫ ॥**

ಅಂದು ನೀನು ಸ್ವರ್ಗಲೋಕಕ್ಕೆ (ದಿವಿಜಲೋಕಕ್ಕೆ) ವಾಸವನ ಸೇವೆಗೆಂದು ಹೋಗಿದ್ದೆ. ದೇವೇಂದ್ರನಿಗೆ ಬೇಕಾದ ಸೈನಿಕ ಸೇವೆಯನ್ನು ಸಲ್ಲಿಸಿ ಹಿಂದಿರುಗಿ ಬರುತ್ತಿದ್ದ ವೇಳೆ ಇಂದ್ರನ ನಂದನವನದ ಮಾರ್ಗವಾಗಿ ಬರುತ್ತಿದ್ದೆ. ಅಲ್ಲಿ ಆ ನಂದನವನದಲ್ಲಿರುವ ಕಲ್ಪತರುವಿನ ನೆರಳಲ್ಲಿ ಕಾಮಧೇನುವು ಹಾಯಾಗಿ ಮಲಗಿ ವಿರಮಿಸಿರುವುದನ್ನು ಕಂಡೆ. ಆ ಸುರಭಿಮಾತೆಯನ್ನು ವಂದಿಸದೆ, ಕಂಡೂ ಕಾಣಿಸದಂತೆ ನೇರವಾಗಿ ನಿನ್ನ ಧರ್ಮಪತ್ನಿಯನ್ನು ಕಾಣಲು ಭುವಿಗೆ ಬಹುಬೇಗನೇ ಇಳಿದುಬಂದೆ.

ಅನ್ವಯ :—ಪುರಾ ಶಕ್ರಮ್ ಉಪಸ್ಥಾಯ ಉರ್ವೀಂ ಪ್ರತಿ ಯಾಸ್ಯತಃ ತವ ಪಥಿ ಕಲ್ಪತರುಚ್ಛಾಯಾಮ್ ಆಶ್ರಿತಾ ಸುರಭಿಃ ಆಸೀತ್ ॥

ಆಸೀತ್ = ಅಸ—ಭುವಿ—ಲಙ್ ॥ ಕಲ್ಪತರೋಃ ಛಾಯಾ । ತಾಮ್ ॥

ಪುರಾ = ಪೂರ್ವದಲ್ಲಿ, ಶಕ್ರಂ = ಇಂದ್ರನನ್ನು, ಉಪಸ್ಥಾಯ = ಸೇವಿಸಿ, ಉರ್ವೀಂ ಪ್ರತಿ = ಭೂಮಿಗಭಿಮುಖವಾಗಿ ಯಾಸ್ಯತಃ = ಹೋಗುತ್ತಲಿರುವ, ತವ = ನಿನಗೆ, ಪಥಿ = ದಾರಿಯಲ್ಲಿ, ಕಲ್ಪತರುಚ್ಛಾಯಾ = ಕಲ್ಪವೃಕ್ಷದ ನೆರಳನ್ನು, ಆಶ್ರಿತಾ = ಆಶ್ರಯಿಸಿರುವ, ಸುರಭಿ = ಕಾಮಧೇನುವು, ಆಸೀತ್ = ಇದ್ದಿತು. 

**76. ಧರ್ಮಲೋಪಭಯಾದ್ರಾಜ್ಞೀಂ ಋತುಸ್ನಾತಾಮಿಮಾಂ ಸ್ಮರನ್ ।**
**ಪ್ರದಕ್ಷಿಣಾಕ್ರಿಯಾರ್ಹಾಯಾಂ ತಸ್ಯಾಂ ತ್ವಂ ಸಾಧು ನಾಚರಃ ॥ ೭೬ ॥**

ನೀನು ಧರ್ಮಲೋಪವಾಗುವ ಇನ್ನೊಂದು ಭಯದಿಂದಲೇ ಬಂದೆ. ಕಾರಣ ನಿನ್ನ ಸಹಧರ್ಮಿಣಿಯು ಋತುಸ್ನಾತೆಯಾಗಿರುವಳೆಂದು ತಿಳಿದು ಅವಳನ್ನು ಕ್ಲಪ್ತಕಾಲದಲ್ಲಿ ಸೇರಬೇಕೆಂಬ ಹಬ್ಬಯಕೆಯಿಂದ ರಾಜಧಾನಿಗೆ ಧಾವಿಸಿದೆ (ಹೊರಟೆ). ಇದು ಧರ್ಮಸಮ್ಮತವೂ ಹೌದು. ಮನು ಹಾಗೂ ಪರಾಶರಧರ್ಮಶಾಸ್ತ್ರಗಳು ಹಾಗೆಂದು ಸಾರುತ್ತಿವೆ. ಈ ಒಂದೇ ಒಂದು ಚಿಂತೆಯು ನಿನ್ನನ್ನು ಅಂದು ಬಲವಾಗಿ ಕಾಡಿಸಿತು. ಆದರಿಂದ ನೀನು ಉಪೇಕ್ಷಿಸುವಂತಾಯಿತು. ಹೀಗಿದ್ದರೂ ಕಾಮಧೇನುವನ್ನು ವಂದಿಸದೆ ಬಂದುದು ಒಂದು ದೊಡ್ಡ ಪ್ರಮಾದವೇ ಸರಿ. ವಂದನಾರ್ಹಳಾದ ಸುರಭಿಮಾತೆಯನ್ನು ನೀನು ವಂದಿಸದೆ, ಪ್ರದಕ್ಷಿಣೆಗೈಯದೆ, ಪೂಜಿಸದೆ ಬಂದುದು ಇಂದಿನ ದುರ್ದಶೆಗೆ ಹೇತುವಾಯಿತು. (ನಾಂದಿಯಾಯಿತು).

ಅನ್ವಯ :—ಋತುಸ್ನಾತಾಮ್, ಇಮಾಮ್ ರಾಜ್ಞೀಂ ಧರ್ಮಲೋಪಭಯಾತ್ ಸ್ಮರನ್ ಪ್ರದಕ್ಷಿಣಾಕ್ರಿಯಾರ್ಹಾಯಾಂ ತಸ್ಯಾಂ ತ್ವಂ ಸಾಧು ನ ಆಚರಃ ॥

ಧರ್ಮಸ್ಯ ಲೋಪಃ । ತಸ್ಮಾತ್ ಭಯಂ । ತಸ್ಮಾತ್ ॥ ಋತುನಾ ಸ್ನಾತಾ, ತಾವ್। ಪ್ರದಕ್ಷಿಣಸ್ಯ ಕ್ರಿಯಾ, ಪ್ರದಕ್ಷಿಣಕ್ರಿಯಾಯಾಃ ಅರ್ಹಾ, ತಸ್ಯಾಮ್ ॥ ಅಚರತ್—ಅಚರತಾಂ—ಅಚರನ್ ಇತ್ಯಾದಿ, ಚರ—ಗತಿಭಕ್ಷಣಯೋಃ—ಮ. ಪು. ಏ. ॥

ಋತುಸ್ನಾತಾಂ = ಋತುನಿಮಿತ್ತವಾಗಿ ಸ್ನಾನಮಾಡಿದ, ಇಮಾಂ = ಈ, ರಾಜ್ಞೀಂ = ಸುದಕ್ಷಿಣೆಯನ್ನು, ಧರ್ಮಲೋಪಭಯಾತ್ = ಋತುಕಾಲದಲ್ಲಿ ಸೇರಬೇಕಾದ ಧರ್ಮ ನಾಶದ ಭಯದಿಂದ, ಸ್ಮರನ್ = ಯೋಚಿಸುತ್ತಾ, ಪ್ರದಕ್ಷಿಣಕ್ರಿಯಾರ್ಹಾಯಾಂ = ಪ್ರದಕ್ಷಿಣೆಮಾಡಿ ಕೈಮುಗಿಯಲು ಯೋಗ್ಯವಾದ, ತಸ್ಯಾಂ = ಆ ಕಾಮಧೇನುವಿನಲ್ಲಿ, ತ್ವಂ = ನೀನು, ಸಾಧು = ಸತ್ಕಾರ್ಯವನ್ನು, ನಾಚರಃ=ಮಾಡಲಿಲ್ಲ.

77. ಅವಜಾನಾಸಿ ಮಾಂ ಯಸ್ಮಾದತಸ್ತೇ ನ ಭವಿಷ್ಯತಿ ।
ಮತ್ಪ್ರಸೂತಿಮನಾರಾಧ್ಯ ಪ್ರಜೇತಿ ತ್ವಾಂ ಶಶಾಪ ಸಾ ॥ ೭೭ ॥

ನೀನು ಬುದ್ಧಿಪೂರ್ವಕವಾಗಿ, ನಮಸ್ಕರಿಸದೆ, ತೀವ್ರಗತಿಯಿಂದ ಹೋಗುವುದನ್ನು ಲೋಕಮಾತೆಯಾದ ಕಾಮಧೇನುವು ಕಂಡು ಕುಪಿತಳಾದಳು. ಇಕ್ಷ್ವಾಕುಸಾರ್ವಭೌಮನಾದ ನೀನು ತನಗೆ ಅವಮಾನ ಮಾಡಿರುವಿ ಎಂದು ತಿಳಿದುಕೊಂಡಳು. ಎಲ್ಲಿಯವರೆಗೆ ನೀನು ಪಶ್ಚಾತ್ತಾಪಗೊಂಡು ನನ್ನ ಸಂತತಿಯನ್ನು ಪೂಜಿಸುವುದಿಲ್ಲವೋ ಅಲ್ಲಿಯತನಕ ನಿನಗೆ ಸಂತಾನವಾಗದಿರಲಿ, ನೀನು ಸಂತಾನಬಾಹಿರನಾಗಿರುವಂತೆ ಆ ಸುರಭಿಮಾತೆ ಅಂದು ಕ್ರುದ್ಧಳಾಗಿ ಶಪಿಸಿದಳು.

ಅನ್ವಯ :—"ಯಸ್ಮಾತ್ ಮಾಮ್ ಅವಜಾನಾಸಿ ಅತಃ ಮತ್ಪ್ರಸೂತಿಮ್ ಅನಾರಾಧ್ಯ ತೇ ಪ್ರಜಾ ನ ಭವಿಷ್ಯತಿ" ಇತಿ ಸಾ ತ್ವಾಂ ಶಶಾಪ ॥

(ಅವ)—ಜಾನಾತಿ—ಜಾನೀತಃ—ಜಾನಂತಿ । ಜಾನಾಸಿ—ಜಾನೀಥಃ—ಜಾನೀಥ । ಜಾನಾಮಿ—ಜಾನೀವಃ—ಜಾನೀಮಃ ॥ ಜ್ಞಾ—ಅವಬೋಧನೇ—ಲಟ್—ಮ.ಪು. ಏ ॥ ಭೂ—ಸತ್ತಾಯಾಂ—ಲೃಟ್—ಭವಿಷ್ಯತಿ ॥ ಮಮ ಪ್ರಸೂತಿಃ—ಮತ್ಪ್ರಸೂತಿಃ ॥ ಶಪ—ಆಕ್ರೋಶೇ—ಲಿಟ್—ಶಶಾಪ—ಶೇಪತುಃ—ಶೇಪುಃ । ಶೇಪಿಥ, ಶಶಪ್ಥ—ಶೇಪಥುಃ—ಶೇಪ । ಶಶಾಪ, ಶಶಪ—ಶೇಪಿವ—ಶೇಪಿಮ ॥

ಯಸ್ಮಾತ್ = ಯಾವ ಕಾರಣದಿಂದ, ಮಾಂ = ನನ್ನನ್ನು, ಅವಜಾನಾಸಿ = ತಿರಸ್ಕರಿಸಿರುವೆಯೋ, ಅತಃ = ಆ ಕಾರಣದಿಂದ, ಮತ್ಪ್ರಸೂತಿಂ = ನನ್ನ ಸಂತತಿಯನ್ನು, ಅನಾರಾಧ್ಯ = ಸೇವಿಸದೇ, ತೇ = ನಿನಗೆ, ಪ್ರಜಾ = ಸಂತತಿಯು, ನ ಭವಿಷ್ಯತಿ = ಆಗಲಾರದು, ಇತಿ = ಹೀಗೆಂದು, ಸಾ = ಆ ಕಾಮಧೇನುವು, ತ್ವಾಂ = ನಿನ್ನನ್ನು, ಶಶಾಪ = ಶಪಿಸಿತು.

78. ಸ ಶಾಪೋ ನ ತ್ವಯಾ ರಾಜನ್ ನ ಚ ಸಾರಥಿನಾ ಶ್ರುತಃ ।
ನದತ್ಯಾಕಾಶಗಂಗಾಯಾಃ ಸ್ರೋತಸ್ಯುದ್ದಾಮದಿಗ್ಗಜೇ ॥ ೭೮ ॥

ಆದರೆ ಅದು ಶಪಿಸಿದ ಮಾತುಗಳನ್ನು ನೀನಾಗಲೀ, ನಿನ್ನ ಸಾರಥಿಯಾಗಲೀ ಕೇಳಲೇ ಇಲ್ಲ. ಆ ಸಮಯದಲ್ಲಿ ಮದಿಸಿದ ತೇಜಸ್ವಿಗಳಾದ ದಿಗ್ಗಜಗಳು ಆಕಾಶಗಂಗೆಯಲ್ಲಿ

ನೀರಾಟವಾಡುತ್ತ ಉದ್ದಾಮ ಶಬ್ದವನ್ನು ಮಾಡುತ್ತ ಕ್ರೀಳಿಡುತ್ತಿದ್ದುವು. ಆದ್ದರಿಂದ ನೀವಾರೂ ಆ ಶಾಪವಚನವನ್ನು ಕೇಳಲೇ ಇಲ್ಲ. ರಭಸದಿಂದ ಹರಿಯುತ್ತಿರುವ ಆಕಾಶಗಂಗಾಪ್ರವಾಹದ ಅಧಿಕಶಬ್ದವು ಎಲ್ಲೆಡೆಗೂ ವ್ಯಾಪಿಸಿತ್ತು. ಆಕಾಶಗಂಗೆಯ ಭೋರ್ಗರೆವ ನಾದದಿಂದ ಆ ಶಾಪವಚನವು ನಿನಗೆ ಕೇಳಿಸದಾಯಿತು.

ಅನ್ವಯಃ:—ರಾಜನ್ ಆಕಾಶಗಂಗಾಯಾಃ ಉದ್ದಾಮದಿಗ್ಗಜೇ ಸ್ರೋತಸಿ ನದತಿ, ಸಶಾಪಃ ತ್ವಯಾ ನ ಶ್ರುತಃ, ಸಾರಥಿನಾ ಚ ನ ಶ್ರುತಃ ॥ ಆಕಾಶಸ್ಯ ಗಂಗಾ, ತಸ್ಯಾಃ ॥ ಉದ್ದಾಮಾಃ ದಿಗ್ಗಜಾಃ ಯಸ್ಮಿನ್ ತತ್ । ತಸ್ಮಿನ್ ॥

ಉದ್ದಾಮದಿಗ್ಗಜೇ = ಮದಭರಿತಗಳಾದ ದಿಗ್ಗಜಗಳುಳ್ಳ, ಆಕಾಶಗಂಗಾಯಾಃ = ಆಕಾಶಗಂಗೆಯ, ಸ್ರೋತಸಿ = ಪ್ರವಾಹವು, ನದತಿ = ಶಬ್ದ ಮಾಡುತ್ತಿರಲು, ಸ ಶಾಪಃ = ಆ ಶಾಪವಚನವು, ತ್ವಯಾ = ನಿನ್ನಿಂದ, ನ ಶ್ರುತಃ=ನಿನಗೆ ಕೇಳಿಸಲಿಲ್ಲ, ಸಾರಥಿನಾಚ = ನಿನ್ನ ಸಾರಥಿಯಿಂದಲೂ ಕೇಳಿಸಲ್ಪಡಲಿಲ್ಲ.

**79.** **ಈಪ್ಸಿತಂ ತದವಜ್ಞಾನಾತ್ ವಿದ್ಧಿ ಸಾರ್ಗಲಮಾತ್ಮನಃ ।**
**ಪ್ರತಿಬಧ್ನಾತಿ ಹಿ ಶ್ರೇಯಃ ಪೂಜ್ಯಪೂಜಾವ್ಯತಿಕ್ರಮಃ ॥ ೭೯ ॥**

ಪೂಜ್ಯರನ್ನು ಪೂಜಿಸದೆಯಿದ್ದರೆ, ಗೌರವವಸ್ಥರನ್ನು ಕಡೆಗಣಿಸಿದುದರಿಂದ ನಿನ್ನ ಶ್ರೇಯಸ್ಸಿಗೆ ಎಡರಾಯಿತು. ಜಗದ ಪೂಜನೀಯವಾದ ಕಾಮಧೇನುವನ್ನು ನೀನಂದು ಸತ್ಕರಿಸದೆ ಉಪೇಕ್ಷಿಸಿದೆ (ಪೂಜ್ಯಪೂಜಾವ್ಯತಿಕ್ರಮಃ). ಇದರಿಂದ ಅದರ ಶಾಪದ ನಿಮಿತ್ತ ನಿನ್ನ ಇಷ್ಟಪ್ರಾಪ್ತಿಗೆ ಮುಳುವಾಗಿದೆ. ಆದುದರಿಂದ ಸಂತತಿಯಿಲ್ಲವೆಂದು ನೀನು ಇಂದು ಕೊರಗುವಂತಾಯಿತು.

ಅನ್ವಯಃ:—ತದವಜ್ಞಾನಾತ್ ಆತ್ಮನಃ ಈಪ್ಸಿತಂ ಸಾರ್ಗಲಂ ವಿದ್ಧಿ। ಪೂಜ್ಯಪೂಜಾ ವ್ಯತಿಕ್ರಮಃ ಹಿ ಶ್ರೇಯಃ ಪ್ರತಿಬಧ್ನಾತಿ ॥ ತಸ್ಯ ಅವಜ್ಞಾನಂ, ತಸ್ಮಾತ್ ॥ ವೇತ್ತು, ವಿತ್ತಾತ್—ವಿತ್ತಾಂ—ವಿದಂತು ॥ ವಿದ್ಧಿ ॥ ವಿತ್ತಾತ್—ವಿತ್ತಂ—ವಿತ್ತ । ವೇದಾನಿ—ವೇದಾವ—ವೇದಾಮ ॥ ವಿದ—ಜ್ಞಾನೇ—ಲೋಟ್—ಮ.ಪು. ಏ. ॥ (ಪ್ರತಿ) ಬಧ್ನಾತಿ —ಬಧ್ನೀತಃ—ಬಧ್ನಂತಿ—। ಬಧ್ನಾಸಿ—ಬಧ್ನೀಥಃ—ಬಧ್ನೀಥ । ಬಧ್ನಾಮಿ—ಬಧ್ನೀವಃ—ಬಧ್ನೀಮಃ ॥ ಬಧ—ಬಂಧನೇ—ಲಟ್ ॥ ಪೂಜ್ಯಸ್ಯ ಪೂಜಾ, ಪೂಜ್ಯ ಪೂಜಾಯಾಃ ವ್ಯತಿಕ್ರಮಃ ॥

ತದವಜ್ಞಾನಾತ್ = ಆ ಕಾಮಧೇನುವಿನ ಅಪಮಾನದಿಂದ—ಆತ್ಮನಃ = ನಿನ್ನ, ಈಪ್ಸಿತಂ = ಮನೋರಥ, ಸಾರ್ಗಲಂ = ತಡೆಯುಳ್ಳದ್ದನ್ನಾಗಿ, ವಿದ್ಧಿ = ತಿಳಿ, ಪೂಜ್ಯ ಪೂಜಾವ್ಯತಿಕ್ರಮಃ = ಅವಶ್ಯ ಪೂಜೆಮಾಡಬೇಕಾದವರಿಗೆ ಪೂಜೆಮಾಡದಿರುವುದರಿಂದ, ಶ್ರೇಯಃ = ಒಳ್ಳೇದನ್ನು, ಪ್ರತಿ ಬಧ್ನಾತಿ = ಆಗದಂತೆ ತಡೆಯುತ್ತದೆ,

**80.** **ಹವಿಷೇ ದೀರ್ಘಸತ್ರಸ್ಯ ಸಾ ಚೇದಾನೀಂ ಪ್ರಚೇತಸಃ ।**
**ಭುಜಂಗಪಿಹಿತದ್ವಾರಂ ಪಾತಾಲಮಧಿತಿಷ್ಠತಿ ॥ ೮೦ ॥**

ಹಾಗಾದರೆ ತಾನು ಈಗಲೇ ನಾಕಲೋಕಕ್ಕೆ ತೆರಳಿ ಅದರ ಸೇವೆಮಾಡಿ ಸಂತೋಷ ಪಡಿಸುತ್ತೇನೆಂದು ಹೇಳುವನೆಂದು ವಸಿಷ್ಠರು ತಿಳಿದು "ಎಲೈ ರಾಜೇಂದ್ರ, ಆ ಸುರ ಕಾಮಧೇನುವು ಈಗ ಸ್ವರ್ಗಲೋಕದಲ್ಲಿಲ್ಲ. ವರುಣಲೋಕದಲ್ಲಿ ವರುಣದೇವನು ಬಹುದಿನಗಳ ತನಕ ಆಚರಿಸುವ ಸತ್ರಯಾಗವನ್ನು ಕೈಗೊಂಡಿರುವನು. ಅವನ ಯಾಗ ಕರ್ಮಗಳಿಗೆ ಬೇಕಾದ ಹಾಲು, ಮೊಸರು, ಬೆಣ್ಣೆ, ತುಪ್ಪಗಳೇ ಮೊದಲಾದ ಹವಿರ್ದ್ರವ್ಯ ಗಳನ್ನು ಒದಗಿಸಲು ಸುರಭಿಯು ಪಾತಾಳಲೋಕಕ್ಕೆ ಹೋಗಿರುವುದು. ಅದು ಅಲ್ಲದೆ ಪಾತಾಳಮಾರ್ಗವೂ ಸುಗಮವಿಲ್ಲ. ಅದು ಸರ್ಪಗಳಿಂದ ಪೂರ್ಣವಾಗಿ ಮುಚ್ಚಿ ಹೋಗಿರುವ ಕಾರಣ ಈಗ ಪಾತಾಳಕ್ಕೂ ಹೋಗಲಾರೆ. ಸರ್ಪಗಳು (ಭುಜಂಗ) ಬಹಳ ಎಚ್ಚರಿಕೆಯಿಂದ ಕಾವಲು ಮಾಡುತ್ತ ಆ ಸುರಭಿಯನ್ನು ರಕ್ಷಿಸುತ್ತಿವೆ.

ಅನ್ವಯಃ :—ಸಾ ಚ ಇದಾನೀಂ ದೀರ್ಘಸತ್ರಸ್ಯ ಪ್ರಚೇತಸಃ ಹವಿಷೇ ಭುಜಂಗಪಿಹಿತ ದ್ವಾರಂ ಪಾತಾಲಮ್ ಅಧಿತಿಷ್ಠತಿ ॥

ದೀರ್ಘಂ ಸತ್ರಂ ಯಸ್ಯ ಸಃ—ದೀರ್ಘಸತ್ರಃ, ತಸ್ಯ ॥ ಭುಜಂಗೈಃ ಪಿಹಿತಂ ದ್ವಾರಂ ಯಸ್ಯ ತತ್ ॥ (ಅಧಿ)ಷ್ಠಾ—ಗತಿನಿವೃತ್ತೌ—ಲಟ್ ಅಧಿ ಉಪಸರ್ಗದಿಂದ ಕೂಡಿದ ಷ್ಠಾ ಧಾತುಯೋಗವಿರುವುದರಿಂದ ಪಾತಾಲಂ ಎಂದು ಅಧಿಕರಣಕ್ಕೆ ಕರ್ಮಸಂಜ್ಞಾ ಬಂದು ದ್ವಿತೀಯಾ ಬಂದಿದೆ.

ಸಾ ಚ = ಆ ಕಾಮಧೇನುವು, ಇದಾನೀಂ = ಈಗ, ದೀರ್ಘಸತ್ರಸ್ಯ = ಬಹುಕಾಲ ಮಾಡಲ್ಪಡುವ ಯಾಗವಿಶೇಷವುಳ್ಳ, ಪ್ರಚೇತಸ = ವರುಣನ ಹವಿಷೇ = ದಧಿ ಆಜ್ಯಾದಿ ಹವಿಸ್ಸಿಗೋಸ್ಕರ, ಭುಜಂಗಪಿಹಿತದ್ವಾರಂ = ಸರ್ಪಗಳಿಂದ ಮುಚ್ಚಿದ ಬಾಗಿಲುಗಳುಳ್ಳ, ಪಾತಾಲ = ಪಾತಾಳದಲ್ಲಿ ಅಧಿತಿಷ್ಠತಿ = ಇರುತ್ತದೆ.

**81. ಸುತಾಂ ತದೀಯಾಂ ಸುರಭೇಃ ಕೃತ್ವಾ ಪ್ರತಿನಿಧಿಂ ಶುಚಿಃ ।**
**ಆರಾಧಯ ಸಪತ್ನೀಕಃ ಪ್ರೀತಾ ಕಾಮದುಘಾ ಹಿ ಸಾ ॥ ೮೧ ॥**

ಆ ಕಾಮಧೇನುವು (ಸುರಭಿಯು) ಪ್ರಕೃತ ಇಲ್ಲವಾದರೂ, ಅವರ ಮಗಳಾದ ನಂದಿನಿಯು ನನ್ನ ಆಶ್ರಮದಲ್ಲಿ ಇರುವಳು. ಕಾಮಧೇನುವಿನ ಸ್ಥಾನದಲ್ಲಿ ಅದನ್ನೇ ಪ್ರತಿ ನಿಧಿಯಾಗಿರಿಸಿ (ಸ್ವೀಕರಿಸಿ) ನೀನು ದೇಹಶುದ್ಧಿಯನ್ನು ಮಾಡಿಕೊಂಡು, ಪವಿತ್ರ ಭಾವನೆಯಿಂದ (ಆತ್ಮಶುದ್ಧಿಯಿಂದ) ಸಪತ್ನೀಕನಾಗಿ ನಂದಿನಿಯನ್ನು ಆರಾಧಿಸು. ಆ ನಂದಿನಿಯು ಸಂಪ್ರೀತಳಾಗಿ ನಿನ್ನ ಇಷ್ಟಾರ್ಥಗಳನ್ನು (ಕಾಮಿತಾರ್ಥವನ್ನು) (ಕಾಮದುಘಾ) ಅನುಗ್ರಹಿಸುವಳು.

ಅನ್ವಯ :—ತದೀಯಾಂ ಸುತಾಂ ಸುರಭೇಃ ಪ್ರತಿನಿಧಿಂ ಕೃತ್ವಾ ಶುಚಿಃ ಸಪತ್ನೀಕಃ ಆರಾಧಯ । ಸಾ ಹಿ ಪ್ರೀತಾ ಕಾಮದುಘಾ (ಭವತಿ)

ತಸ್ಯಾಃ ಇಯಂ—ತದೀಯಾ—ಟಾಪ್ ॥ ಪತ್ನ್ಯಾ ಸಹ ವರ್ತತೇ ಇತಿ ಸಪತ್ನೀಕಃ ಕಾಮಂ ದೋಗ್ಧಿ ಇತಿ—ಕಾಮದುಘಾ ॥ (ಆಜ್) ರಾಧ—ಸಂಸಿದ್ಧೌ—ಲೋಟ್—ಮಧ್ಯಮ ಪುರುಷ ಏಕವಚನಮ್ ॥

ತದೀಯಾಂ = ಆ ಕಾಮಧೇನುವಿನ, ಸುತಾಂ = ಮಗಳಾದ ನಂದಿನಿಯನ್ನು, ಸುರಭೇಃ = ಆ ಕಾಮಧೇನುವಿಗೆ, ಪ್ರತಿನಿಧಿಕೃತ್ವಾ = ಪ್ರತಿನಿಧಿಯನ್ನಾಗಿ ಮಾಡಿಕೊಂಡು, ಶುಚಿಃ = ಪವಿತ್ರನಾಗಿ ಸಪತ್ನೀಕಃ = ಪತ್ನೀಸಹಿತನಾಗಿ, ಆರಾಧಯ=ಆರಾಧಿಸು, (ಸೇವಿಸು), ಓ–ಯಾವ ಕಾರಣದಿಂದ, ಸಾ=ಆ ನಂದಿನಿಯು, ಪ್ರೀತಾ=ಸಂತುಷ್ಟಳಾಗಿ, ಕಾಮದುಘಾ = ಇಷ್ಟವನ್ನು ಕೊಡುವ.

**82. ಇತಿ ವಾದಿನ ಏವಾಸ್ಯ ಹೋತುರಾಹುತಿಸಾಧನಮ್ ।**
**ಅನಿಂದ್ಯಾ ನಂದಿನೀನಾಮ ಧೇನುರಾವವೃತೇ ವನಾತ್ ॥ ೮೨ ॥**

ಈ ರೀತಿಯಾಗಿ ಹೋತೃವರ್ಯನಾದ (ಋತ್ವಿಜನಾದ) ಅಗ್ನಿಯನ್ನು ಯಜ್ಞ ಯಾಗಾದಿಗಳಿಂದ ಬೆಳಗಿಸುವ ಆ ಮಹಾಮುನಿಯು ಹೇಳುತ್ತಿದ್ದಾಗ, ಅದೇ ವೇಳೆಗೆ ಸರಿಯಾಗಿ ಸರ್ವಜನರನ್ನು ಸಂತುಷ್ಟಿಗೊಳಿಸಬಲ್ಲ (ಅನಿಂದ್ಯಾ) ಸರ್ವಹೋಮದ ಆಜ್ಯಾದಿಹವಿಸ್ಸಿಗೆ ಕಾರಣಭೂತಳಾದ ನಂದಿನೀ ಎಂಬ ಹಸುವು ಕಾಡಿನಿಂದ ವಸಿಷ್ಠಾಶ್ರಮಕ್ಕೆ ಆಗಮಿಸಿತು. ಆ ಪ್ರಶಸ್ತವಾದ, ಸರ್ವಶುಭಲಕ್ಷಣಗಳಿಂದ ಶೋಭಿಸುವ ಆ ಕಾಮಧೇನುವು ತನ್ನ ಮೇವನ್ನು ಮುಗಿಸಿ ಆಶ್ರಮಕ್ಕೆ ಆಗತಾನೇ ಹಿಂದಿರುಗಿತು.

ಅನ್ವಯ :—ಇತಿ ವಾದಿನಃ ಏವ ಹೋತುಃ ಅಸ್ಯ ಆಹುತಿಸಾಧನಂ ನಂದಿನೀನಾಮ ಅನಿಂದ್ಯಾಧೇನುಃ ವನಾತ್ ಆವವೃತೇ ॥

ಆಹುತೀನಾಂ ಸಾಧನಮ್ ॥ ನನಿಂದ್ಯಾ—ಅನಿಂದ್ಯಾ ॥ ನಂದಯತಿ ಇತಿ ನಂದಿನೀ । (ಆಜ್) ವವೃತೇ—ವವೃತಾತೇ—ವವೃತಿರೇ । ಇತ್ಯಾದಿ । ವೃತು—ವರ್ತನೇ—ಲಿಟ್ ॥

ಇತಿ = ಈ ತೆರನಾಗಿ, ವಾದಿನ ಏವ = ಹೇಳುತ್ತಿರುವ, ಹೋತುಃ = ಹೋಮಿಸುವ ಸ್ವಭಾವವುಳ್ಳ, ಅಸ್ಯ = ಆ ವಸಿಷ್ಠನ, ಆಹುತಿಸಾಧನಂ = ಹೋಮದ ಆಜ್ಯಾದಿ ಹವಿಸ್ಸಿಗೆ ಕಾರಣವಾದ. ನಂದಿನೀನಾಮ = ನಂದಿನೀ ಎಂಬ ಹೆಸರಿನ, ಅನಿಂದ್ಯಾ=ಪ್ರಶಸ್ತವಾದ, ಧೇನುಃ = ಹಸುವು, ವನಾತ್ = ಕಾಡಿನಿಂದ, ಆವವೃತೇ = ತಿರುಗಿ ಬಂದಿತು.

**83. ಲಲಾಟೋದಯಮಾಭುಗ್ನಂ ಪಲ್ಲವ ಸ್ನಿಗ್ಧಪಾಟಲಾ ।**
**ಬಿಭ್ರತೀ ಶ್ವೇತರೋಮಾಂಕಂ ಸಂಧ್ಯೇವಶಶಿನಂ ನವಮ್ ॥ ೮೩ ॥**

ಅದು ಎಳೆಗೆಂಪಿನ ಗೆಂಪೆಹಸು. ಅದರ ನುಣುಪಾದ ಹಣೆಯಲ್ಲಿ ಬಿಳಿಯ ಕೂದಲಿನ ಸುಳಿಯು ತುಸು ಬಾಗಿ ಬಿದಿಗೆಯ ಚಂದ್ರನಾಕಾರದಲ್ಲಿ ಶುಭ್ರವಾಗಿ ಹೊಳೆಯುತ್ತಿತ್ತು. ಎಳೆಯ ಮಾವಿನ ಚಿಗುರಿನಂತೆ (ಪಾಟಲಾ) ನಸುಗೆಂಪು ಮೈಯ ಹಸುವು ಕೆಂಪಾದ ಸಂಧ್ಯಾಕಾಲದ ಆಗಸವನ್ನು ಹೋಲುತ್ತಿತ್ತು. ಹಣೆಯಲ್ಲಿ ರಾರಾಜಿಸುವ ಬಿಳಿ ಕೂದಲಿನ ಸುಳಿಯು ಸಂಜೆಯ ಬಾನಲ್ಲಿ ಕೆಂಪಾಗಿ ತೋರುವ ಬಿದಿಗೆಯ ಚಂದ್ರನಂತೆ ಸುಂದರವಾಗಿ, ಸ್ಫುಟವಾಗಿ, ಸುಸ್ಪಷ್ಟವಾಗಿ, ಎದ್ದುಕಾಣುತ್ತಿತ್ತು.

ಅನ್ವಯ :—ಪಲ್ಲವಸ್ನಿಗ್ಧಪಾಟಲಾಲಲಾಟೋದಯಮ್ ಆಭುಗ್ನಂ ಶ್ವೇತರೋಮಾಂಕಂ ನವಂ ಶಶಿನಂ ಸಂಧ್ಯಾ ಇವ ಬಿಭ್ರತೀ (ಧೇನುಃ) ॥ ಲಲಾಟೇ ಉದಯಃ ಯಸ್ಯ ಸಃ ಲಲಾಟೋದಯಃ,ತಮ್ ॥ ಈಷತ್ ಭುಗ್ನಃ, ಆಭುಗ್ನಃ,ತಮ್ ॥ ಪಲ್ಲವವತ್

ಸ್ನಿಗ್ಧಾ, ಪಲ್ಲವಸ್ನಿಗ್ಧಾ। ಚ ಸಾ ಪಾಟಲಾ ಚ। ಶ್ವೇತಾನಿ ಚ ತಾನಿರೋಮಾಣಿ। ಶ್ವೇತ ರೋಮಾಣ್ಯೇವ ಅಂಕಃ, ತಮ್ ॥

ಪಲ್ಲವಸ್ನಿಗ್ಧಪಾಟಲಾ = ಚಿಗುರಿನಂತೆ ಹೊಳಪುಳ್ಳ, ಎಳೆಗೆಂಪು ಬಣ್ಣದ (ಗೆಂದೆ ಬಣ್ಣದ), ಲಲಾಟೋದಯ = ಹಣೆಯಲ್ಲಿ ಉದ್ಭವಿಸಿದ, ಆಭುಗ್ನಂ = ಸ್ವಲ್ಪ ವಕ್ರವಾಗಿರುವ, ಶ್ವೇತರೋಮಾಂಕಂ=ಬಿಳಿಯ ಕೂದಲಿನ ಗುರುತುಳ್ಳ, ಬಿಭ್ರತೀ = ಧರಿಸಿರುವುದಾಗಿ, ನವಂ = ನೂತನ (ಬಿದಿಗೆಯ), ಶಶಿನಂ = ಚಂದ್ರನನ್ನು, (ಬಿಭ್ರತೀ) ಸಂಧ್ಯಾ ಇವ = ಚಿಗುರಿನಂತೆ ಹೊಳೆಪುಳ್ಳ, ಎಳಗೆಂಪು ಬಣ್ಣದ (ಸಂಧ್ಯಾಕಾಲದಂತೆ).

**೮೪. ಭುವಂ ಕೋಷ್ಣೇನ ಕುಂಡೋಧ್ನೀ ಮೇಧ್ಯೇನಾವಭೃಥಾದಪಿ।**
**ಪ್ರಸ್ರವೇಣಾಭಿವರ್ಷಂತೀ ವತ್ಸಾಲೋಕಪ್ರವರ್ತಿನಾ ॥ ೮೪ ॥**

ತುಂಬಿದ ಕೊಡವನ್ನು ಹೋಲುವ ದೊಡ್ಡ ಕೆಚ್ಚಲುಳ್ಳ (ಕುಂಡೋಧ್ನಿ) ಆ ಹಸುವು ತನ್ನ ಎಳೆಕರುವನ್ನು ಕಂಡೊಡನೆಯೇ ಪಾವನಕ್ಷೀರವನ್ನು ತಕ್ಷಣವೇ ಸುರಿಸಿ ಆಶ್ರಮದ ನೆಲವನ್ನು ಒದ್ದೆಮಾಡಿತು. ಯಜ್ಞಯಾಗಾದಿ ಕಾರ್ಯಗಳನ್ನು ವಿಧಿವತ್ತಾಗಿ ಮುಗಿಸಿ ಪವಿತ್ರವಾದ ಅವಭೃತಸ್ನಾನವನ್ನು ಮಾಡುವುದುಂಟು. ನಂದಿನಿಯ ಕ್ಷೀರವಾದರೋ ಆ ಪವಿತ್ರಸ್ನಾನಕ್ಕಿಂತಲೂ ಅಧಿಕಪವಿತ್ರವೆನಿಸಿತ್ತು, ಅದರ ದೊಡ್ಡ ಕೆಚ್ಚಲಿನಿಂದ ಸ್ವಲ್ಪ ಬಿಸಿಯಾದ (ಕವೋಷ್ಣ) ಹಾಲು ಎಳೆಗರುವಿನ ದರ್ಶನಮಾತ್ರದಿಂದ ಸುರಿಯಲಾರಂಭಿಸಿತು, ಅದು ಹಾಲನ್ನು ಸುರಿಸುತ್ತಾ ಕರುವಿನ ಬಳಿಗೆ ಬಂತು. ಆ ಪಾವನಕ್ಷೀರದಿಂದ ಆಶ್ರಮ ಭೂಮಿಯೂ ನನೆದು ಪವಿತ್ರವಾಯಿತು.

ಅನ್ವಯ :—ಕೋಷ್ಣೇನ ಅವಭೃಥಾದ್ ಅಪಿ ಮೇಧ್ಯೇನ ವತ್ಸಾಲೋಕಪ್ರವರ್ತಿನಾ ಪ್ರಸ್ನವೇನ ಭುವಮ್ ಅಭಿವರ್ಷಂತೀ ಕುಂಡೋಧ್ನೀ (ಧೇನುಃ) ॥

ಕುಂಡಮಿವ ಊಧಃ ಯಸ್ಯಾಃ ಸಾ—ಕುಂಡೋಧ್ನೀ-ಸ ಊಧಸ್ ಶಬ್ದಕ್ಕೆ ಅನಙ್ ಬಂದು ಸ್ತ್ರೀತ್ವದಲ್ಲಿ ಙೀಷ್ ಬಂದಿದೆ ॥ ವತ್ಸಸ್ಯ ಆಲೋಕಃ। ತೇನ ಪ್ರವರ್ತತೆ ಇತಿ—ವತ್ಸಾಲೋಕಪ್ರವರ್ತೀ, ತೇನ ॥

ಕೋಷ್ಣೇನ = ಸ್ವಲ್ಪ ಬಿಸಿಯಾದ, ಅವಭೃಥಾದಪಿ = ಅವಭೃಥ ಸ್ನಾನಕ್ಕಿಂತಲೂ, ಮೇಧ್ಯೇನ = ಪವಿತ್ರವಾದ, ವತ್ಸಾಲೋಕ ಪ್ರವರ್ತಿನಾ = ಕರುವನ್ನು ನೋಡುವುದರಿಂದ ಉಂಟಾದ ಪ್ರಸ್ರವೇಣ = ಹಾಲು ಸುರಿಸುವಿಕೆಯಿಂದ, ಭುವಂ = ಭೂಮಿಯನ್ನು, ಅಭಿವರ್ಷಂತೀ = ಅಭಿಷೇಚನಮಾಡುವ, ಕುಂಡೋಧ್ನೀ = ದೊಡ್ಡ ಕೆಚ್ಚಲುಳ್ಳ.

**೮೫. ರಜಃಕಣೈಃ ಖುರೋದ್ಧೂತೈಃ ಸ್ಪೃಶದ್ಭಿರ್ಗಾತ್ರ ಮಂತಿಕಾತ್।**
**ತೀರ್ಥಾಭಿಷೇಕಜಾಂ ಶುದ್ಧಿಮಾದದಾನಾ ಮಹೀಕ್ಷಿತಃ ॥ ೮೫ ॥**

ವೇದದಲ್ಲಿ ನಾಲ್ಕು ತರದ ತೀರ್ಥ ಸ್ನಾನಗಳನ್ನು ಹೇಳುತ್ತಾರೆ. ಭಸ್ಮದಿಂದ ಆಗ್ನೇಯಸ್ನಾನ, ನೀರಿನಲ್ಲಿ ಮುಳುಗುವುದರಿಂದ ವಾರುಣಸ್ನಾನ, ಆಪೋಹಿಷ್ಠಾ ಮಹಾಮಂತ್ರದಿಂದ ಬ್ರಾಹ್ಮಸ್ನಾನ, ಗೋಧೂಳಿಯಿಂದ ವಾಯವ್ಯಸ್ನಾನ ಎಂಬ ನಾಲ್ಕು ತರದ ಪವಿತ್ರ ಸ್ನಾನಗಳು ಮಾನವರಿಗೆ ಹೇಳಲ್ಪಟ್ಟಿದೆ. ಹಸುವು ರಾಜನ ಸಮೀಪಕ್ಕೆ

ಆ ದಾರಿಯಾಗಿ ಬರುತ್ತಿರಲು ಅದರ ಗೊರಸುಗಳಿಂದ ಎದ್ದ ಪವಿತ್ರವಾದ ಧೂಳು ರಾಜನ ದೇಹವನ್ನು ಆವರಿಸಿ ಸೋಂಕಿತು. ಆ ಸುರನಂದಿನಿಯ ಪವಿತ್ರವಾದ ಪಾದ ಧೂಳಿಯ ತೀರ್ಥಾಭಿಷೇಕದಿಂದ ದೊರೆಯು ಪರಿಶುದ್ಧನಾದನು, ಪಾವನನಾದನು, ಪುನೀತನಾದನು.

ಅನ್ವಯಃ:—ಖುರೋದ್ಧೂತೈಃ ಅಂತಿಕಾತ್ ಗಾತ್ರಂ ಸ್ಪೃಶದ್ಭಿಃ ರಜಃಕಣೈಃ ಮಹೀಕ್ಷಿತಃ ತೀರ್ಥಾಭಿಷೇಕಜಾಂ ಶುದ್ಧಿಂ ಆದದಾನಾ (ಧೇನುಃ) ॥

ರಜಸಾಂ ಕಣಾಃ । ತೈಃ, ಖುರೇಭ್ಯಃ ಉದ್ಧೂತಾಃ. ತೈಃ ॥ ತೀರ್ಥೇಷು ಅಭಿಷೇಕಃ । ತೀರ್ಥಾಭಿಷೇಕಾತ್ ಜಾತಾ—ತೀ...ಜಾ, ತಾಮ್ ॥

ಖುರೋದ್ಧೂತೈಃ=ಗೊರಸುಗಳಿಂದ ಮೇಲಕ್ಕೆದ್ದು ಹಾರುವ, ಅಂತಿಕಾತ್ = ಸಮೀಪದಲ್ಲಿ, ಗಾತ್ರಂ = ದೇಹವನ್ನು, ಸ್ಪೃಶದ್ಭಿಃ=ಮುಟ್ಟುತ್ತಿರುವ, ರಜಃಕಣೈಃ = ಧೂಳಿನಿಂದ ಮಹೀಕ್ಷಿತಃ ರಾಜನಿಗೆ ತೀರ್ಥಾಭಿಷೇಕಜಾಂ = ತೀರ್ಥಸ್ನಾನದಿಂದ ಉಂಟಾಗುವ, ಶುದ್ಧಿಂ = ಪವಿತ್ರತೆಯನ್ನು, ಆದದಾನಾ=ಉಂಟುಮಾಡುತ್ತಾ.

**86. ತಾಂ ಪುಣ್ಯದರ್ಶನಾಂ ದೃಷ್ಟ್ವಾ ನಿಮಿತ್ತಜ್ಞಸ್ತಪೋನಿಧಿಃ ।**
**ಯಾಜ್ಯಮಾಶಂಸಿತಾವಂಧ್ಯಪ್ರಾರ್ಥನಂ ಪುನರಬ್ರವೀತ್ ॥ ೮೬ ॥**

ಮಹಾತಪಸ್ವಿಗಳಾದ ವಸಿಷ್ಠರು ಸಕಲ ಶಾಸ್ತ್ರಗಳನ್ನು ತಿಳಿದವರು. ಅವರು ಶಕುನ ಶಾಸ್ತ್ರಚತುರರು. ಪ್ರಶ್ನಜ್ಯೋತಿಷ್ಯನಿಪುಣರು. ಪ್ರಕೃತ ಪುಣ್ಯಜನಕಳಾದ ನಂದಿನಿಯ ವಿಚಾರ ಹೇಳುತ್ತಿದ್ದಾಗ, ಮಂಗಳಕರಳಾದ (ಮಂಗಳಕಾರಕಳಾದ) ಕಾಮಧೇನು ನಂದಿನಿಯೇ ಅಲ್ಲಿ ಸುಳಿದಳು. ಆ ಪುಣ್ಯದರ್ಶನೆಯನ್ನು, ರವಿಕುಲ ಉದ್ಧಾರಕಳನ್ನು ಕಂಡು ದೈವಜ್ಞರಾದ, ಮಂತ್ರದೃಷ್ಟಾರರಾದ ವಾಸಿಷ್ಠರು ರಾಜನು ಸಫಲಮನೋರಥನಾಗುವನೆಂದು ತಿಳಿದು ಹೀಗೆಂದರು.

ಅನ್ವಯಃ :—ನಿಮಿತ್ತಜ್ಞಃ ತಪೋನಿಧಿಃ ಪುಣ್ಯದರ್ಶನಾಂ ತಾಂ ದೃಷ್ಟ್ವಾ ಆಶಂಸಿತಾವಂಧ್ಯಪ್ರಾರ್ಥನಮ್, ಯಾಜ್ಯಂ ಪುನಃ ಅಬ್ರವೀತ್ ॥

ಪುಣ್ಯಂ ದರ್ಶನಂ ಯಸ್ಯಾಃ ಸಾ—ಪುಣ್ಯದರ್ಶನಾ, ತಾಮ್ ॥ ನಿಮಿತ್ತಾಂ ಜಾನಾತೀತಿ—ನಿಮಿತ್ತಜ್ಞಃ ॥ ತಪಸಾಂ ನಿಧಿಃ ॥ ಆಶಂಸಿತಂ ಅವಂಧ್ಯಂ ಪ್ರಾರ್ಥನಂ ಯಸ್ಯ ಸಃ—ಆಶಂಸಿತಂ ಅವಂಧ್ಯಂ ಪ್ರಾರ್ಥನಃ ತಮ್ ॥ ಅಬ್ರವೀತ್—ಅಬ್ರೂತಾಂ—ಅಬ್ರುವನ್ ॥ ಅಬ್ರವೀಃ—ಅಬ್ರೂತಂ—ಅಬ್ರೂತ । ಅಬ್ರವಂ—ಅಬ್ರೂವ—ಅಬ್ರೂಮ । ಬ್ರೂಞ್—ವ್ಯಕ್ತಾಯಾಂ ವಾಚಿ—ಲಙ್ ॥

ನಿಮಿತ್ತಜ್ಞಃ = ಶಕುನವನ್ನು ತಿಳಿದಿರುವ, ತಪೋನಿಧಿ = ತಪಸ್ಸೇ ನಿಧಿಯಾಗಿರುವ, ಪುಣ್ಯದರ್ಶನಾಂ = ಮಂಗಳಕರಳಾದ ದೃಷ್ಟ್ವಾ = ನೋಡಿ, ಆಶಂಸಿತಾವಂಧ್ಯಪ್ರಾರ್ಥನಂ =ಇಷ್ಟಾರ್ಥಗಳನ್ನು ನೀಡಬಲ್ಲ, ಅನುಗ್ರಹಿಸಬಲ್ಲ ಶಕ್ತಿಯುಳ್ಳ, ಯಾಜ್ಯಂ=ದಿಲೀಪ ಮಹಾರಾಜನನ್ನು ಕುರಿತು, ಪುನಃ = ಮರಳಿ, ಅಬ್ರವೀತ್ = ಹೇಳಿದನು.

**87. ಅದೂರವರ್ತಿನೀಂ ಸಿದ್ಧಿಂ ರಾಜನ್ ವಿಗಣಯಾತ್ಮನಃ ।**
**ಉಪಸ್ಥಿತೇಯಂ ಕಲ್ಯಾಣೀನಾಮ್ನಿ ಕೀರ್ತಿತ ಏವ ಯತ್ ॥ ೮೭ ॥**

"ಎಲೈ ರಾಜಶ್ರೇಷ್ಠನೆ, ನಿನ್ನ ಮನದಿಷ್ಟಾರ್ಥ ಬೇಗನೆ ಸಿದ್ಧಿಸುವುದು. ಇದರಲ್ಲಿ ಎಳ್ಳನಿತು ಸಂಶಯವಿಲ್ಲ, ಏಕೆಂದರೆ ಆ ತುರುವಿನ ಹೆಸರನ್ನು ಹೇಳುವಷ್ಟರಲ್ಲಿ ಆ ಸರ್ವ ಮಂಗಳೆಯೂ, ಇಷ್ಟಾರ್ಥಪ್ರದಾಯಿನಿ (ಕಲ್ಯಾಣಮಯಿ, ಕಲ್ಯಾಣಿ) ನಿನ್ನ ಎದುರಲ್ಲಿ ಸಾಕ್ಷಾತ್ತಾಗಿ (ಪ್ರತ್ಯಕ್ಷವಾಗಿ) ನಿಂತಿರುವಳು. ಇದರಿಂದ ನಿನ್ನ ಬಯಕೆಯು ನಿಜವಾಗು ವುದು. ಇದನ್ನು ನೀನು ನಂಬಬಹುದು" ಎಂದರು ತತ್ತ್ವವೇತ್ತರಾದ ರಾಜಗುರು ವಾಸಿಷ್ಠರು.

ಅನ್ವಯ :—ರಾಜನ್ ಆತ್ಮನಃ ಸಿದ್ಧಿಮ್, ಅದೂರವರ್ತಿನೀಂ ವಿಗಣ್ಯಯಂದ್ ಇಯಂ ಕಲ್ಯಾಣೀನಾಮ್ನಿ ಕೀರ್ತಿತೇ ಏವ ಉಪಸ್ಥಿತಾ ॥

ಅದೂರಂ ವರ್ತತ ಇತಿ ಅದೂರವರ್ತಿನೀ, ತಾಮ್ । (ವಿ) ಗಣಯಂತು, ಗಣಯ ತಾತ್—ಗಣಯಂತಾಂ—ಗಣಯುತು । ಗಣಯ, ಗಣಯತಾತ್—ಗಣಯತಂ—ಗಣ ಯತ । ಗಣಯಾನಿ—ಗಣಯಾವ—ಗಣಯಾಮ— । ಗಣ —ಸಂಖ್ಯಾನೇ—ಲೋಟ್ —ಮ.ಪು.ಏ. ॥

ಹೇ ರಾಜನ್ = ಎಲೈ ಅರಸನೇ, ಆತ್ಮನಃ = ನಿನ್ನ ಕಾರ್ಯದ, ಸಿದ್ಧಿಂ = ಪೂರ್ಣ ಸಿದ್ಧಿಯನ್ನು, ಅದೂರವರ್ತಿನೀಂ = ಶೀಘ್ರವಾಗಿ ನೆರವೇರುವುದೆಂದು, ವಿಗಣಯ = ತಿಳಿ, ನಂಬು, ಯತ್ = ಯಾವ ಕಾರಣದಿಂದ, ಕಲ್ಯಾಣೀ = ಮಂಗಲಕರಳಾದ, ಶುಭಪ್ರದ ಳಾದ, ಇಯಂ = ಈ ಹಸುವು, ನಾಮ್ನಿ = ಹೆಸರು, ಕೀರ್ತಿತ ಏವ = ಹೇಳಿದೊಡನೆಯೇ, ಉಪಸ್ಥಿತಾ = ಸಮೀಪಿಸಿತು.

## 88. ವನ್ಯವೃತ್ತಿರಿಮಾಂ ಶಶ್ವದಾತ್ಮಾನುಗಮನೇನ ಗಾಮ್ ।
## ವಿದ್ಯಾಮಭ್ಯಸನೇನೈವ ಪ್ರಸಾದಯಿತು ಮರ್ಹಸಿ ॥ ೮೮ ॥

ಈ ಹಸುವನ್ನು (ಈ ಕಾಮಧೇನುವನ್ನು) ನೀನು ಈ ತೆರನಾಗಿ ಒಲಿಸಿಕೊಳ್ಳಬಹುದು. ಈ ತುರುವನ್ನು ನೀನು ಬೆಂಬಿಡದೆ ಅನುಸರಿಸುತ್ತಾ, ಕಂದ ಮೂಲ ಮೊದಲಾದ ಸಾತ್ವಿಕ ಆಹಾರಗಳನ್ನುಂಡು ದಿನವನ್ನು ಕಳೆಯುವುದು. ಯಾವ ರೀತಿ ಓರ್ವ ನಿಷ್ಠಾವಂತನಾದ ವಿದ್ಯಾರ್ಥಿಯು ತನ್ನ ಅಭ್ಯಾಸಬಲದಿಂದ ಶ್ರೇಷ್ಠವಾದ ವಿದ್ಯಾಧನವನ್ನು ಸಂಪಾದಿಸು ವಂತೆ ನೀನು ಈ ನಂದಿನಿ ಧೇನುವನ್ನು ಅನುಕರಿಸಿ (ಆತ್ಮಾನುಗಮನೇನ) ಪ್ರಸನ್ನೀಕರಿಸಿ ಕೊಳ್ಳುವುದು.

ಅನ್ವಯ :—ವನ್ಯವೃತ್ತಿ(ತ್ವಮ್) ಇಮಾಂ ಗಾಂ ಶಶ್ವತ್ ಆತ್ಮಾನುಗಮನೇನ ವಿದ್ಯಾಂ ಇವ ಅಭ್ಯಸನೇನ ಪ್ರಸಾದಯಿತುಂ ಅರ್ಹಸಿ ॥

ವನೇ ಭವಂ—ವನ್ಯಂ । ವನ್ಯಂ ವೃತ್ತಿಃ ಯಸ್ಯ ಸಃ—ವನ್ಯವೃತ್ತಿಃ ॥ ಆತ್ಮನಃ ಅನು ಗಮನಂ—ತೇನ । ಅರ್ಹಪೂಜಾಯಾಮ್, ಲಟ್ ॥

ವನ್ಯವೃತ್ತಿಯು = ಕಂದ ಮೂಲಗಳೇ ಆಹಾರವುಳ್ಳವನಾಗಿ, ಇಮಾಂ = ಈ, ಗಾಂ = ಧೇನುವನ್ನು, ಶಶ್ವತ್ = ಯಾವಾಗಲೂ, ಆತ್ಮಾನುಗಮನೇನ=ನೀನು ಅದನ್ನು ಅನುಸರಿ ಸುತ್ತಾ, ಹಿಂಬಾಲಿಸುತ್ತಾ, ಅಭ್ಯಸನೇನ = ಅಭ್ಯಾಸಬಲದಿಂದ. ವಿದ್ಯಾಂ ಇವ = ವಿದ್ಯೆಯೋ ಇದು ಎಂಬಂತೆ, ಪ್ರಸಾದಯಿತು = ಸಂತೋಷಪಡಿಸಲು, ಅರ್ಹಸಿ=ಯೋಗ್ಯನಾಗಿರುವೆ.

**89. ಪ್ರಸ್ಥಿತಾಯಾಂ ಪ್ರತಿಷ್ಠೇಥಾಃ ಸ್ಥಿತಾಯಾಂ ಸ್ಥಿತಿಮಾಚರೇಃ ।**
**ನಿಷಣ್ಣಾಯಾಂ ನಿಷೀದಾಸ್ಯಾಂ ಪೀತಾಂಭಸಿ ಪಿಬೇರಪಃ ॥ ೮೯ ॥**

ಆ ನಂದಿನಿಯು ಹೋಗೆ ಹೋಗು (ಹೋದಾಗ ಹೋಗು), ನಿಂದೊಡೆ ನಿಲ್ಲು. ತಾನು ಕುಳಿತುಕೊಂಡೊಡೆ ನೀನೂ ಕುಳಿತುಕೊಳ್ಳು (ನೀನು ವಿರಮಿಸು). ಹೇ ಧರಾಭಾಮಿನೀಪ್ರಾಣಕಾಂತನೆ (ಎಲೈ ಭೂಕಾಂತನೆ), ನೀನು ನಿನ್ನಯಾಪ್ರಾಣಕಾಂತೆಸಹಿತ ಅರ್ಚಿಸಿ, ಪೂಜಿಸಿ, ರಕ್ಷಿಸುವುದು. ಆ ತುರುವು ನೀರು ಕುಡಿಯಲು, ನೀನೂ ನೀರನ್ನು ಆನಂದದಿಂದ ಕುಡಿಯುವುದು.

ಅನ್ವಯ : ಅಸ್ಯಾಂ ಪ್ರಸ್ಥಿತಾಯಾಂ ಪ್ರತಿಷ್ಠೇಥಾಃ । ಸ್ಥಿತಾಯಾಂ ಸ್ಥಿತಿಂ ಆಚರೇಃ । ನಿಷಣ್ಣಾಯಾಂ ನಿಷೀದ । ಪೀತಾಂಭಸಿ (ಅಸ್ಯಾಮ್) ಅಪಃ ಪಿಬೇಃ ॥

(ಪ್ರ)ತಿಷ್ಠೇತ—ತಿಷ್ಠೇಯಾತಾಂ—ತಿಷ್ಠೇರನ್ । ತಿಷ್ಠೇಥಾಃ—ತಿಷ್ಠೇಯಾಥಾಂ—ತಿಷ್ಠೇಧ್ವಂ । ತಿಷ್ಠೇಯ—ತಿಷ್ಠೇವಹಿ—ತಿಷ್ಠೇಮಹಿ। 'ಸಮವಪ್ರವಿಭ್ಯಃ ಸ್ಥಃ' ಸೂತ್ರದಿಂದ ಪ್ರ ಉಪಸರ್ಗಯೋಗದಿಂದ ಷ್ಠಾ ಧಾತುವಿಗೆ ಆತ್ಮನೇ ಪದ ಬಂದಿದೆ.

ಷ್ಠಾ—ಗತಿನಿವೃತ್ತೌ—ವಿಧಿಲಿಙ್ (ಆಙ್) ಚರೇತ್—ಚರೇತಾಂ—ಚರೇಯುಃ । ಚರೇಃ—ಚರೇತಂ—ಚರೇತ । ಚರೇಯಂ—ಚರೇವ—ಚರೇಮ । ಚರ—ಗತಿಭಕ್ಷಣಯೋಃ—ವಿಧಿಲಿಙ್ । (ನಿ)ಸೀದತು, ಸೀದತಾತ್—ಸೀದಾಂ—ಸೀದಂತು—ಇತ್ಯಾದಿ ಷಡಲ್ಮ—ವಿಶರಣಗತ್ಯವಸಾದನೇಷು—ಲೋಟ್—ಮ.ಪು.ಏ. ॥ ಪಿಬೇತ್—ಪಿಬೇತಾಂ—ಪಿಬೇಯುಃ—ಇತ್ಯಾದಿ—ಪಾ—ಪಾನೇ—ವಿಧಿಲಿಙ್ ॥

ಅಸ್ಯಾಂ = ಈ ಧೇನುವು, ಪ್ರಸ್ಥಿತಾಯಾ = ಹೊರಟಾಗ, ಪ್ರತಿಷ್ಠೇಥಾಃ = ಹೊರಡು, ಸ್ಥಿತಾಯಾಂ = ಒಂದು ಕಡೆ ನಿಂತಿರುವಾಗ, ಸ್ಥಿತಿಂ ಆಚರೇಃ = ನೀನೂ ನಿಂತಿರು; ನಿಷಣ್ಣಾಯಾಂ = ಮಲಗಿರುವಾಗ, ನಿಷೀದ = ನೀನೂ ಕುಳಿತಿರು, ಪೀತಾಂಭಸಿ = ನೀರು ಕುಡಿದಾಗ, ಅಪಃ = ನೀರನ್ನು, ಪಿಬೇಃ = ಕುಡಿ.

**90. ವಧೂರ್ಭಕ್ತಿಮತೀ ಚೈನಾಮರ್ಚಿತಾಮಾತಪೋವನಾತ್ ।**
**ಪ್ರಯತಾ ಪ್ರಾತರನ್ವೇತು ಸಾಯಂ ಪ್ರತ್ಯುದ್ವ್ರಜೇದಪಿ ॥ ೯೦ ॥**

ಎಲೈ ವಸುಮತೀಶನೇ, ನಮ್ಮ ಸೊಸೆಯಾದ ಸುದಕ್ಷಿಣಾದೇವಿಯು ಕಟ್ಟೆರಕದಿಂದ ಆ ಧೇನುವನ್ನು ಅರ್ಚಿಸಲಿ, ಪೂಜಿಸಲಿ, ಉಪಚರಿಸುತ್ತ, ಉಪಾಸನೆ ಮಾಡಲಿ. ಆ ಸುರಧೇನುವನ್ನು ಪ್ರಾತಃಕಾಲದಲ್ಲಿ ಎದ್ದು ಶುಚಿರ್ಭೂತಳಾಗಿ ನಿತ್ಯಾಹ್ನಿಕಗಳನ್ನು ತೀರಿಸಿ ಭಕ್ತಿಯಿಂದ ಗಂಧಮಾಲ್ಯಾದಿಗಳಿಂದ ಪೂಜಿಸಿ ಆ ಸುರಧೇನುವನ್ನು ಎಲೆಮನೆಯ ಪ್ರದೇಶದ ಎಲ್ಲೆಯತನಕ ತೆರಳಿ ಬೀಳ್ಕೊಂಡು ಬರಲಿ. ಸಂಧ್ಯಾಕಾಲದ ವೇಳೆಗೆ ಸರಿಯಾಗಿ ಆಶ್ರಮ ಗಡಿಯವರೆಗೆ ಹೋಗಿ ಆ ಧೇನುವನ್ನು ಇದಿರ್ಗೊಂಡು ಗೋಶಾಲೆಗೆ ಆನಂದದಿಂದ ಕರೆತರಲಿ.

ಅನ್ವಯ :—ವಧೂ ಚ ಭಕ್ತಿಮತೀ ಪ್ರಯತಾ (ಸತೀ) ಅರ್ಚಿತಾಮ್ ಏನಾಮ್ ಪ್ರಾತಃ ಆ ತಪೋವನಾತ್ ಅನ್ವೇತು ಸಾಯಂ ಅಪಿ ಪ್ರತ್ಯುದ್ವ್ರಜೇತ್ ॥

ಭಕ್ತಿ ಅಸ್ಯಾಃ ಅಸ್ತಿ ಇತಿ ಭಕ್ತಿಮತೀ ॥ ಆಙ್—ಮರ್ಯಾದಾರ್ಥದಲ್ಲಿ ಹೇಳಿದೆ, (ಆಸು) ಏತು=ಹಿಂದೆ ರೂಪವಿಸ್ತಾರ ಕೊಟ್ಟಿದೆ. ಲೋಟ್ (ಪ್ರತಿ, ಉತ್) ವ್ರಜೇತ್—ವ್ರಜ—ಗತೌ—ವಿಧಿಲಿಙ್.

ವಧೂಃ ಚ=ನಿನ್ನ ಸತಿಯೂ, ಭಕ್ತಿಮತೀ=ಭಕ್ತಿಯಿಂದ,ಪ್ರಯತಾ ಚ=ಶುಚಿನಿಯಮವುಳ್ಳವಳಾಗಿ, ಅರ್ಚಿತಾಂ = ಗಂಧಮಾಲ್ಯಾದಿಗಳಿಂದ ಪೂಜಿಸಿ, ಏನಾಂ = ಆ ನಂದಿನಿಯನ್ನು, ಪ್ರಾತಃ = ಬೆಳಗ್ಗೆ, ಆತಪೋವನಾತ್ = ತಪೋವನದವರೆಗೂ, ಅನ್ವೇತು= ಅನುಸರಿಸಲಿ, ಸಾಯಮಪಿ=ಸಾಯಂಕಾಲವೂ, ಪ್ರತ್ಯುದ್ವ್ರಜೇತ್=ಅದು ಬರುವುದನ್ನು ಎದುರುಗೊಳ್ಳಲಿ.

91. ಇತ್ಯಾಪ್ರಸಾದಾದಸ್ಯಾಸ್ತ್ವಂ ಪರಿಚರ್ಯಾಪರೋ ಭವ ।
ಅವಿಘ್ನಮಸ್ತು ತೇ ಸ್ಥೇಯಾಃ ಪಿತೇವ ಧುರಿ ಪುತ್ರಿಣಾಮ್ ॥ ೯೧ ॥

ಎಲೈ ರಾಜಕುಲತಿಲಕನೇ, ಆ ಧೇನುವು ನಿನಗೊಲಿದು ಅನುಗ್ರಹಿಸುವ ತನಕ ಭಕ್ತಿಯಿಂದ ಸೇವೆಮಾಡು. ಈ ಸೇವಾಕಾರ್ಯದ ಅವಧಿಯಲ್ಲಿ ನಿನ್ನನ್ನು ಯಾವ ವಿಘ್ನವೂ ಸೋಂಕದಿರಲಿ. ನಿನ್ನ ಪ್ರಾರ್ಥನೆಯು ಸಫಲವಾಗಲಿ. ನೀನು ಸತ್ಪುತ್ರನ ಪಿತನಾಗು. ಸತ್ಪುತ್ರನು ಇಹಲೋಕದಲ್ಲಿ ಆನಂದದಾಯಕನು. ನಿನ್ನ ವಂಶವೃಕ್ಷವು ಅಬಾಧಿತವಾಗಿ ಮುಂದುವರಿಯಲಿ, ನೀನು ಅಕ್ಷಯನಾಗು.

ಅನ್ವಯ :—ಇತಿ ತ್ವಮ್ ಆ ಪ್ರಸಾದಾತ್ ಅಸ್ಯಾಃ ಪರಿಚರ್ಯಾಪರಃ ಭವ । ತೇ ಅವಿಘ್ನಮ್ ಅಸ್ತು ಪಿತಾ ಇವ (ತ್ವಂ) ಪುತ್ರಿಣಾಂ ಧುರಿ ಸ್ಥೇಯಾಃ ॥

ಪರಿಚರ್ಯಾಯಾ ಪರಃ ॥ ವಿಘ್ನಸ್ಯಾಭಾವಃ ಅವಿಘ್ನಮ್(ಅವ್ಯಯೀಭಾವ ಸಮಾಸ)। ಪುತ್ರಃ ಅಸ್ಯ ಅಸ್ತಿ ಇತಿ ಪುತ್ರೀ ॥ ತೇಷಾಮ್ ॥ ಅಸ್ತುಸ್ತಾತ್—ಸ್ತಾಂ—ಸಂತು । ಏಧಿ, ಸ್ತಾತ್—ಸ್ತಂ—ಸ್ತ। ಅಸಾನಿ—ಅಸಾವ—ಅಸಾಮ ॥ ಅಸ—ಭುವಿ—ಲೋಟ್—ಪ್ರ.ಪು.ಏ.॥ ಸ್ಥೇಯಾತ್—ಸ್ಥೇಯಾಸ್ತಾಂ—ಸ್ಥೇಯಾಸುಃ । ಸ್ಥೇಯಾಃ—ಸ್ಥೇಯಾಸ್ತಂ—ಸ್ಥೇಯಾಸ್ತ । ಸ್ಥೇಯಾಸಂ—ಸ್ಥೇಯಾಸ್ವ—ಸ್ಥೇಯಾಸ್ಮ। ಷ್ಠಾ—ಗತಿ ನಿವೃತ್ತೌ—ಆಶೀರ್ಲಿಙ್—ಮ.ಪು.ಏ.—(ಭೂಸತ್ತಾಯಾಂ—ಲೋಟ್—ಮ.ಪು.ಏ.। ಭವ ॥)

ಇತಿ = ಈ ರೀತಿಯಾಗಿ, ತ್ವಂ = ನೀನು, ಆಪ್ರಸಾದಾತ್ = ಅನುಗ್ರಹವಾಗುವವರೆಗೂ, ಅಸ್ಯಾಃ = ಈ ಹಸುವಿನ, ಪರಿಚರ್ಯಾಪರಃ = ಸೇವಾಸಕ್ತನು, ಭವ = ಆಗು, ತೇ = ನಿನಗೆ, ಅವಿಘ್ನಂ = ಯಾವ ವಿಘ್ನವೂ ಆಗದಿರಲಿ, ಅಸ್ತು= ಆಗಲಿ, ಪಿತಾ ಇವ = ತಂದೆಯಂತೆ, ಪುತ್ರಿಣಾಂ = ಸತ್ಪುತ್ರರುಳ್ಳವರ, ಧುರಿ = ಅಗ್ರಸ್ಥಾನದಲ್ಲಿ, ಸ್ಥೇಯಾಃ = ಇರು.

92. ತಥೇತಿ ಪ್ರತಿಜಗ್ರಾಹ ಪ್ರೀತಿಮಾನ್ ಸಪರಿಗ್ರಹಃ ।
ಆದೇಶಂ ದೇಶಕಾಲಜ್ಞಃ ಶಿಷ್ಯಃ ಶಾಸಿತುರಾನತಃ ॥ ೯೨ ॥

ರವಿಕುಲತಿಲಕನಾದ ದಿಲೀಪನು ದೇಶ ಮತ್ತು ಕಾಲಜ್ಞಾನವನ್ನು ತಿಳಿದ ಮಹಾ ಪ್ರಾಜ್ಞನು. ಯಾವ ಕೆಲಸವನ್ನು ಎಲ್ಲಿ, ಯಾವ ಸಮಯದಲ್ಲಿ (ಯಾವ ಸಂದರ್ಭದಲ್ಲಿ),

ಹೇಗೆ ಮಾಡಬೇಕು ಎಂಬ ಪರಿಪೂರ್ಣ ವಿಷಯವನ್ನು ತಿಳಿದ (ದೇಶಕಾಲಜ್ಞಃ) ಗುರುವಿನ ಪ್ರೀತಿಪಾತ್ರನಾದ ಅತಿಶಯ ಆನಂದವುಳ್ಳ ಶಿಷ್ಯೋತ್ತಮನು, ಮಹಾಪಾತ್ರನು, ಮಹಾಭಾಗನು. ಸಾಯಂಕಾಲದ ಅಗ್ನಿಹೋತ್ರಾದಿ ದೈವಪೂಜೆಗಳು ಮುಗಿದ ಆ ಸಂದರ್ಭದಲ್ಲಿ ಅಗ್ನಿಯಸನ್ನಿಧಿಯಲ್ಲಿ ಗುರುವಿನ ಆಜ್ಞೆಯನ್ನು ಪತ್ನಿಸಹಿತ ಅವನು ಶಿರಸಾವಹಿಸಿದನು. ವಿನಯಶೀಲವಾದ ಆ ರಾಜೇಂದ್ರನು ಗುರುವಿನಡಿಗೆ ತಲೆಬಾಗಿ ವಂದಿಸಿ, ಹಾಗೆಯೇ ಆಗಲೆಂದು ಒಪ್ಪಿ, ಆಜ್ಞೆಯನ್ನು ತ್ರಿಕರಣಪೂರ್ವಕವಾಗಿ ಸ್ವೀಕರಿಸಿದನು. ಹೀಗೆ ಸ್ವೀಕರಿಸಿ ತಾನು ಧನ್ಯನಾದೆನೆಂದು ಭಾವಿಸಿದನು.

ಅನ್ವಯ :—ದೇಶಕಾಲಜ್ಞಃ ಪ್ರೀತಿಮಾನ್ ಶಿಷ್ಯಃ ಸಪರಿಗ್ರಹಃ ಆನತಶಾಸಿತುಃ ಆದೇಶಂ ತಥಾ ಇತಿ ಪ್ರತಿಜಗ್ರಾಹ ॥

(ಪ್ರತಿ) ಜಗ್ರಾಹ—ಜಗೃಹತುಃ—ಜಗೃಹುಃ । ಜಗೃಹಿಥ—ಜಗೃಹಥುಃ—ಜಗೃಹ । ಜಗ್ರಾಹ, ಜಗ್ರಹ—ಜಗೃಹಿವ—ಜಗೃಹಿಮ ॥ ಗ್ರಹ—ಉಪಾದಾನೇ—ಲಿಟ್ ॥ ಪ್ರೀತಿಃ ಅಸ್ಯ ಅಸ್ತೀತಿ—ಪ್ರೀತಿಮಾನ್ ॥ ಪರಿಗ್ರಹೇಣ ಸಹಿತಃ—ಸಪರಿಗ್ರಹಃ । ದೇಶಶ್ಚ ಕಾಲಶ್ಚ—ದೇಶಕಾಲೌ । ತೌಜಾನಾತಿ ಇತಿ ದೇಶಕಾಲಜ್ಞಃ ॥

ದೇಶಕಾಲಜ್ಞಃ = ದೇಶಕಾಲಗಳನ್ನು ಚೆನ್ನಾಗಿ ಅರಿತಿರುವ, ಪ್ರೀತಿಮಾನ್ = ಅತಿಶಯ ಆನಂದವುಳ್ಳ, ಶಿಷ್ಯಃ = ಶಿಷ್ಯನಾದ ದಿಲೀಪರಾಜನು, ಸಪರಿಗ್ರಹಃ = ಪತ್ನೀಸಮೇತ, ಆನತಃ = ವಿನಯದಿಂದ ನಮ್ರನಾಗಿ, ಶಾಸಿತುಃ = ಗುರುವಾದ ವಸಿಷ್ಠನ—ಆದೇಶವನ್ನು = ಆಜ್ಞೆಯನ್ನು, ತಥಾ ಇತಿ = ಹಾಗೆಯೇ ಆಗಲೆಂದು, ಪ್ರತಿಜಗ್ರಾಹ = ಸ್ವೀಕರಿಸಿದನು.

**93. ಅಥ ಪ್ರದೋಷೇ ದೋಷಜ್ಞಃ ಸಂವೇಶಾಯ ವಿಶಾಂಪತಿಮ್ ।**
**ಸೂನುಃ ಸೂನೃತವಾಕ್‌ಸ್ರಷ್ಟುಃ ವಿಸಸರ್ಜೋರ್ಜಿತಶ್ರಿಯಮ್ ॥ ೯೩ ॥**

ಮಹಾಜ್ಞಾನಿಗಳಿಗೆ ತಿಲಕಪ್ರಾಯರಾದ ವಸಿಷ್ಠಮಹರ್ಷಿಗಳು ತನ್ನ ಶಿಷ್ಯನೊಡನೆ ಉಲ್ಲಸಿತರಾಗಿ, ಉಚಿತವಾದ ಸಂತಸದ ಮಾತನಾಡಿದರು. ಇರುಳು ಕವಿಯುತ್ತಿರುವುದನ್ನು, ರಾತ್ರಿ ಮುಂದುವರಿಯುವುದನ್ನು ಕಂಡು (ಪ್ರದೋಷೇ) ಎಲ್ಲಾ ಬಗೆಯ ಐಶ್ವರ್ಯಕ್ಕೆ ಪಾತ್ರನಾದ ತನ್ನ ಸಚ್ಛಿಷ್ಯನಿಗೆ ಸುಖನಿದ್ರೆಗೆಯ್ಯುವಂತೆ ಅನುಜ್ಞೆಯಿತ್ತರು. ಆ ದಂಪತಿಗಳು ಪರಿತುಷ್ಟರಾಗಿ ವಿರಮಿಸಲು ತೆರಳಿದರು.

ಅನ್ವಯ :—ಅಥ ಪ್ರದೋಷೇ ದೋಷಜ್ಞಃ ಸೂನೃತವಾಕ್ ಸ್ರಷ್ಟುಃ ಸೂನುಃ ಊರ್ಜಿತಶ್ರಿಯಂ ವಿಶಾಂಪತಿಂ ಸಂವೇಶಾಯ ವಿಸಸರ್ಜ ॥

ದೋಷಂ ಜಾನಾತಿ ಇತಿ ದೋಷಜ್ಞಃ ॥ ಸೂನೃತಂ ವಾಕ್ ಯಸ್ಯ ಸಃ—ಸೂನೃತವಾಕ್ ॥ ಉದಿತಾ ಶ್ರೀಃ ಯಸ್ಯ ಸಃ—ಉದಿತಶ್ರೀಃ, ತಮ್ ॥ (ವಿ)ಸಸರ್ಜ—ಸಸೃಜತುಃ ಸಸೃಜುಃ—ಇತ್ಯಾದಿ । ಸೃಜ—ವಿಸರ್ಗೇ—ಲಿಟ್ ॥

ಅಥ = ಆಮೇಲೆ, ಪ್ರದೋಷೇ = ರಾತ್ರಿಕಾಲದಲ್ಲಿ, ದೋಷಜ್ಞಃ = ವಿದ್ವಾಂಸನಾದ, ಸೂನೃತವಾಕ್ = ಪ್ರಿಯವಾಗಿಯೂ, ಸತ್ಯವಾಗಿಯೂ ಇರುವ ಮಾತು, ಸ್ರಷ್ಟುಃ = ಬ್ರಹ್ಮನ, ಸೂನುಃ = ಮಗನಾದ ವಸಿಷ್ಠನು, ಉದಿತಶ್ರಿಯಂ = ಕಾಂತಿಸಮೃದ್ಧನಾದ, ವಿಶಾಂಪತಿಂ = ನರಪತಿಯಾದ ದಿಲೀಪನನ್ನು, ಸಂವೇಶಾಯ = ನಿದ್ರೆಗೋಸ್ಕರ, ವಿಸಸರ್ಜ = ಕಳುಹಿಸು.

**94. ಸತ್ಯಾಮಪಿ ತಪಃ ಸಿದ್ಧೌ ನಿಯಮಾಪೇಕ್ಷಯಾ ಮುನಿಃ ।**
**ಕಲ್ಪವಿತ್ಕಲ್ಪಯಾಮಾಸ ವನ್ಯಾಮೇವಾಸ್ಯ ಸಂವಿಧಾಮ್ ॥ ೯೪ ॥**

ಹಂಸತೂಲಿಕಾತಲ್ಪದಲ್ಲಿ ಮಲಗಿ ನಿದ್ರೆಹೋಗುವ ರಾಜನು ಅಂದು ಕಾಡಿನಲ್ಲಿ ದೊರೆಯುವ ಕುಶಾದಿಗಳಿಂದ ರಚಿಸಿದ ದರ್ಭೆಯ ಹಾಸಿನಲ್ಲಿ ಮಲಗಿ ನಿದ್ರೆಹೋದನು. ಮಹಾತಪಸ್ವಿಗಳಾದ ವಸಿಷ್ಠರು ತಮ್ಮ ತಪಃಶಕ್ತಿಯಿಂದ ಅರಸನು ಇಚ್ಛಿಸಿದ ಹಾಸನ್ನು ಸೃಷ್ಟಿಸಲು ಸಮರ್ಥರು. ಆದರೆ ಅದು ಉಚಿತವಲ್ಲವೆಂದು ಬಗೆದು, ಅಂದೇ ವ್ರತಾನುಷ್ಠಾನ ಪ್ರಾರಂಭವಾಗಲೆಂದು ಬಗೆದು ಯೋಗ್ಯವಾದ ದರ್ಭೆಯ ಹಾಸನ್ನು ಒದಗಿಸಿ ಕೊಟ್ಟರು.

ಅನ್ವಯ :—ಕಲ್ಪವಿತ್ ಮುನಿಃ ತಪಃ ಸಿದ್ಧೌ ಸತ್ಯಾಮ್ ಅಪಿ ನಿಯಮಾಪೇಕ್ಷಯಾ ಅಸ್ಯ (ರಾಜ್ಞಃ) ವನ್ಯಾಮ್ ಏವ ಸಂವಿಧಾಮ್ ಕಲ್ಪಯಾಮಾಸ ॥

ತಪಸಃ ಸಿದ್ಧಿಃ—ತಸ್ಯಾಮ್ ॥ ನಿಯಮಸ್ಯ ಅಪೇಕ್ಷಾ—ತಯಾ ॥ ಕಲ್ಪಂ ವೇತ್ತಿ ಇತಿ ಕಲ್ಪವಿತ್ ॥ ವನೇ ಭವಾ—ವನ್ಯಾ । ಕಲ್ಪಯಾಮಾಸ—ಕ್ಲೃಪೂ—ಸಾಮರ್ಥ್ಯೇ—ಣಿಜಂತದ ಮೇಲೆ ಲಿಟ್ । ಮಾಸ—ಮಾಸತುಃ—ಮಾಸುಃ—ಇತ್ಯಾದಿ.

ಕಲ್ಪವಿತ್ = ವ್ರತನಿಯಮಾದಿಗಳನ್ನು ಅರಿತ, ತಪಃಸಿದ್ಧೌ ಸತ್ಯಾಮಪಿ = ತಪಸ್ಸಿನಿಂದ ಎಲ್ಲವನ್ನು ಸೃಷ್ಟಿಸುವ ಸಾಮರ್ಥ್ಯವುಳ್ಳ, ನಿಯಮಾಪೇಕ್ಷಯಾ = ವ್ರತಾಚರಣೆಗೆ ಬದ್ಧ ಕಂಕಣನಾಗಿ, ಅಸ್ಯ= ಆ ರಾಜನಿಗೆ, ವನ್ಯಾಮೇವ = ಕಾಡಿನಲ್ಲಿ ಸಿಗುವ, ಸಂವಿಧಾಂ = ಕುಶದಿಂದ ನಿರ್ಮಿತವಾದ ಶಯನಸಾಮಗ್ರಿ (ಚಾಪೆ), ಕಲ್ಪಯಾಮಾಸ = ಅಣಿ ಮಾಡಿಸಿದನು.

**95. ನಿರ್ದಿಷ್ಟಾಂ ಕುಲಪತಿನಾ ಸಪರ್ಣಶಾಲಾಂ ।**
**ಅಧ್ಯಾಸ್ಯ ಪ್ರಯತಪರಿಗ್ರಹದ್ವಿತೀಯಃ ॥**
**ತಚ್ಛಿಷ್ಯಾಧ್ಯಯನ ನಿವೇದಿತಾವಸಾನಾಂ ।**
**ಸಂವಿಷ್ಟಃ ಕುಶಶಯನೇ ನಿಶಾಂ ನಿನಾಯ ॥ ೯೫ ॥**

ವಿದ್ಯೆಗೆ ಆಶ್ರಯಸ್ಥಾನವಾಗಿರುವ ಅನೇಕ ಮಂದಿ ವಿದ್ಯಾರ್ಥಿಗಳಿಂದ ಪರಿವೃತನಾದ ಕುಲಪತಿ ವಸಿಷ್ಠನು ತೋರಿಸಿದ ಪರ್ಣಕುಟೀರವನ್ನು ದಿಲೀಪ ಮಹಾರಾಜನೂ, ಪತಿವ್ರತಾಶಿರೋಮಣಿಯಾದ ಸುದಕ್ಷಿಣಾದೇವಿಯೂ ಪ್ರವೇಶಿಸಿದರು. ಅಲ್ಲಿ ಆ ದಂಪತಿಗಳು ತಮ್ಮ ವಂಶದ ಉದ್ಧಾರಕ್ಕಾಗಿ ವ್ರತವನ್ನಾಚರಿಸಲು ನಿರ್ಧರಿಸಿದರು. ಆಪರ್ಣಕುಟೀರವನ್ನು (ಎಲೆ ಮನೆಯನ್ನು) ಹೊಕ್ಕು ಅಲ್ಲಿ ದರ್ಭೆ ಹುಲ್ಲಿನ ಹಾಸಿನಲ್ಲಿ ಮಲಗಿ ವ್ರತಶೀಲರಾದ ಅವರು ನಿರ್ಮಲಭಾವನೆಯಿಂದ ಇರುಳನ್ನು ಕಳೆದರು. ಬ್ರಾಹ್ಮಿ ಮುಹೂರ್ತದಲ್ಲಿ ಶಿಷ್ಯರ ವೇದ ಘೋಷವನ್ನು ಕೇಳಿ ಎಚ್ಚೆತ್ತರು. ರಾಜನು ತನ್ನ ಅರಮನೆಯಲ್ಲಿ ಉದ್ಘೋಷಕರ ಪ್ರಾತಃಕಾಲದ ಉದ್ಘೋಷಗಳನ್ನು ಕೇಳಿ, ಬಹಳ ಮುದದಿಂದ ಸತಿಯೊಡನೆ ಎಚ್ಚೆತ್ತು ದಿಲೀಪನು ತನ್ನ ಪ್ರಿಯೆಯೊಂದಿಗೆ ಸೂರ್ಯೋದಯ ಕಾಲಕ್ಕೆ ಸರಿಯಾಗಿ ಮುಂದಿನ ಕಾರ್ಯಕ್ಕೆ ಅಣಿಯಾದನು.

ಅನ್ವಯ :—ಸಃ ಕುಲಪತಿನಾ ನಿರ್ದಿಷ್ಟಾಂ ಪರ್ಣಶಾಲಾಂ ಅಧ್ಯಾಸ್ಯ ಪ್ರಯತಪರಿಗ್ರಹದ್ವಿತೀಯಃ ಕುಶಶಯನೇ ಸಂವಿಷ್ಟಃ ತಚ್ಛಿಷ್ಯಾಧ್ಯಯನನಿವೇದಿತಾವಸಾನಾಂ ನಿಶಾಂ ನಿನಾಯ ॥

ಪ್ರಯತಶ್ಚಾಸೌ ಪರಿಗ್ರಹಶ್ಚ। ಪ್ರಯತಪರಿಗ್ರಹಃ ದ್ವಿತೀಯಃ ಯಸ್ಯ ಸಃ। ಪ್ರ———ತೀಯಃ ॥ ತಸ್ಯ ಶಿಷ್ಯಾಃ। ತಚ್ಛಿಷ್ಯಾಣಾಂ ಅಧ್ಯಯನಂ। ತ ——ಯನೇನ ನಿವೇದಿತಂ ಅವಸಾನಂ ಯಸ್ಯಾಃ ಸಾ। ತಚ್ಛಿ———ಸಾನಾ—ತಾಮ್ ॥ ಕುಶಾನಾಂ ಶಯನಮ್ ॥ ನಿನಾಯ—ನಿನ್ಯತುಃ—ನಿನ್ಯುಃ। ನಿನಯಿಥ, ನಿನೇಥ—ನಿನ್ಯಥುಃ—ನಿನ್ಯ। ನಿನಾಯ, ನಿನಯ—ನಿನ್ಯಿವ—ನಿನ್ಯಿಮ ॥ ಣೀಞ್—ಪ್ರಾಪಣೇ—ಲಿಟ್—ಮ್ನೌ ಜ್ರೌ—ಗಸ್ತ್ರಿದಶಯತಿಃ ಪ್ರಹರ್ಷಣೀಯಮ್ ॥ ವೃತ್ತಲಕ್ಷಣ ॥

ಸಃ = ಆ ದಿಲೀಪನು, ಕುಲಪತಿನಾ = ಮುನಿಕುಲಕ್ಕೆ ಒಡೆಯನಾದ, ವಸಿಷ್ಠನಿಂದ, ನಿರ್ದಿಷ್ಟಾಂ = ತೋರಿಸಿದ, ಪರ್ಣಶಾಲಾಂ = ಪರ್ಣಶಾಲೆಯನ್ನು, ಅಧ್ಯಾಸ್ಯ = ಹೊಂದಿ, ಪ್ರಯತಪರಿಗ್ರಹದ್ವಿತೀಯಃ = ನಿಯಮಶುದ್ಧಳಾದ ಪತ್ನಿಯೇ ಎರಡನೆಯವಳಾಗಿ ಇರುವ, ಕುಶಶಯನೇ = ದರ್ಭೆಯ ಹಾಸಿಗೆಯಲ್ಲಿ, ಸಂವಿಷ್ಟಃ = ಮಲಗಿದವನಾಗಿ, ತಚ್ಛಿಷ್ಯಾಧ್ಯಯನನಿವೇದಿತಾವಸಾನಾಂ = ಆ ವಸಿಷ್ಠಶಿಷ್ಯರ ವೇದಾಧ್ಯಯನದಿಂದ ತಿಳಿಸಿದ ಕೊನೆಯ ಭಾಗವುಳ್ಳ, ನಿಶಾಂ = ರಾತ್ರಿಯನ್ನು, ನಿನಾಯ = ಕಳೆದನು.

— ಶ್ರೀಃ —

# ದ್ವಿತೀಯ ಸರ್ಗಃ

## ಎರಡನೆಯ ಸರ್ಗ

**1. ಅಥ ಪ್ರಜಾನಾಮಧಿಪಃ ಪ್ರಭಾತೇ ।**
**ಜಾಯಾಪ್ರತಿಗ್ರಾಹಿತಗಂಧಮಾಲ್ಯಾಮ್ ॥**
**ವನಾಯ ಪೀತಪ್ರತಿಬದ್ಧವತ್ಸಾಂ ।**
**ಯಶೋಧನೋ ಧೇನುಮೃಷೇರ್ಮುಮೋಚ** ॥ ೧ ॥

ನರಪತಿಯಾದ ದಿಲೀಪನು ನಿಯಮದಿಂದ ರಾತ್ರಿಯನ್ನು ಕಳೆದಮೇಲೆ ಪ್ರಾತಃಕಾಲದಲ್ಲಿ ತನ್ನ ಜಾಯೆ ಸುದಕ್ಷಿಣಾದೇವಿಯೊಡನೆ ಕರ್ತವ್ಯಪರನಾದನು. ಕೀರ್ತಿಯೇ ತನ್ನ ಐಶ್ವರ್ಯವಾಗಿರುವ, ಯಶೋಧನನಾದ (ಅಥ ಯಶೋಧನಃ) ಆ ಮಹೀಪತಿಯು ತನ್ನ ಸತಿಯೊಂದಿಗೆ ಗೋಪೂಜೆಯನ್ನು ಮಾಡಿದನು. ಸುದಕ್ಷಿಣಾದೇವಿಯು ಕುಂಕುಮ ಗಂಧಮಾಲೆಯನ್ನು ತಂದು ಧೇನುವನ್ನು ಅಲಂಕರಿಸಿದಳು. ಕರುವು ಹಾಲುಂಡು ಸಂತೃಪ್ತವಾದಮೇಲೆ ಕರುವನ್ನು ಕಟ್ಟಿಹಾಕಿ, ವಸಿಷ್ಠರ ಅಪ್ಪಣೆಯಂತೆ ಹಸುವನ್ನು ಮೇಯಲು ಕಾಡಿಗೆ ಅಟ್ಟಿದರು.

ಅನ್ವಯ:—ಅಥ ಯಶೋಧನಃ ಪ್ರಜಾನಾಮ್ ಅಧಿಪಃ ಪ್ರಭಾತೇ ಜಾಯಾಪ್ರತಿಗ್ರಾಹಿತಗಂಧಮಾಲ್ಯಾಮ್ ಪೀತಪ್ರತಿಬದ್ಧವತ್ಸಾಂ ಋಷೇಃ ಧೇನುಃ ವನಾಯ ಮುಮೋಚ ॥

ಗಂಧಶ್ಚ ಮಾಲ್ಯಂ ಚ ಗಂಧಮಾಲ್ಯೇ । ಜಾಯಯಾ ಪ್ರತಿಗ್ರಾಹಿತೇ । ಜಾಯಯಾಪ್ರತಿಗ್ರಾಹಿತೇ ಗಂಧಮಾಲ್ಯೇ ಯಯಾ ಸಾ—ಜಾಯಾಪ್ರತಿಗ್ರಾಹಿತಗಂಧಮಾಲ್ಯಾ। ತಾಮ್ । ಪೀತಮಸ್ಯಾಸ್ತೀತಿ ಪೀತಃ। ಪೀತಶ್ಚಾಸೌಪ್ರತಿಬದ್ಧಶ್ಚ । ಪೀತಪ್ರತಿಬದ್ಧಃ ವತ್ಸಃ ಯಸ್ಯಾಃ ಸಾ—ಪೀತಪ್ರತಿಬದ್ಧವತ್ಸಾ—ತಾಮ್ । ಯಶಃ ಧನಂ ಯಸ್ಯ ಸಃ ಯಶೋಧನಃ । ಮುಮೋಚ—ಮುಮುಚತುಃ—ಮುಮುಚುಃ । ಮುಮೋಚಿಥ, ಮುಮೋಕ್ಥ—ಮುಮುಚಥುಃ—ಮುಮುಚ । ಮುಮೋಚ—ಮುಮುಚಿವ—ಮುಮುಚಿಮ । ಮುಚ್ಲೃ—ಮೋಕ್ಷಣೇ—ಲಿಟ್—ಪ್ರ.ಪು.ಏ । ಪೀತ ಎಂಬಲ್ಲಿ ಮತ್ವರ್ಥದಲ್ಲಿ ಅಚ್ ಪ್ರತ್ಯಯ ಬಂದಿದೆ, ವನಾಯ ಎಂಬಲ್ಲಿ ಕ್ರಿಯಾರ್ಥೋಪಪಸ್ಯ—ಸೂತ್ರದಿಂದ ಚತುರ್ಥೀ—ಬಂದಿದೆ, "ಅನಂತರೋದೀರಿತಲಕ್ಷ್ಮಭಾಜೌ ಪಾದೌ ಯದೀಯಾವುಪಜಾತಯಸ್ತಾಃ" ಎಂಬ ಲಕ್ಷಣದಿಂದ ಕೂಡಿದ ಉಪಜಾತಿ ವೃತ್ತ.

ಅಥ = ರಾತ್ರಿ ಕಳೆದ ಮೇಲೆ, ಯಶೋಧನಃ = ಕೀರ್ತಿಯೇ ಧನವಾಗಿರುವ, ಪ್ರಜಾನಾಮಧಿಪಃ = ನರಪತಿಯಾದ ದಿಲೀಪನು, ಪ್ರಭಾತೇ = ಪ್ರಾತಃಕಾಲದಲ್ಲಿ, ಜಾಯಯಾ = ಪತ್ನಿಯಾದ ಸುದಕ್ಷಿಣೆಯಿಂದ, ಪ್ರತಿಗ್ರಾಹಿತ = ಅಲಂಕರಿಸಲ್ಪಟ್ಟ, ಗಂಧಮಾಲ್ಯಾಂ = ಗಂಧವೂ, ಹೂಮಾಲೆಯೂ ಸೇರಿರುವ, ಪೀತಪ್ರತಿಬದ್ಧವತ್ಸಾಂ = ಹಾಲುಕುಡಿದು

ಕಟ್ಟಿಹಾಕಿರುವ ಕರುವುಳ್ಳ. ಋಷೇಃ = ವಸಿಷ್ಠಮಹರ್ಷಿಗಳ, ಧೇನುಂ = ಹಸುವಾದ ನಂದಿನಿಯನ್ನು, ವನಾಯ = ಕಾಡಿಗೆ ಹೋಗಲು, ಮುಮೋಚ = ಬಿಟ್ಟನು.

**2. ತಸ್ಯಾಃ ಖುರನ್ಯಾಸಪವಿತ್ರಪಾಂಸುಂ ।**
**ಅಪಾಂಸುಲಾನಾಂ ಧುರಿಕೀರ್ತನೀಯಾ ॥**
**ಮಾರ್ಗಂ ಮನುಷ್ಯೇಶ್ವರಧರ್ಮಪತ್ನೀ ।**
**ಶ್ರುತೇರಿವಾರ್ಥಂ ಸ್ಮೃತಿರನ್ವಗಚ್ಛತ್ ॥ ೨ ॥**

ಪತಿವ್ರತಾಸ್ತ್ರೀಯರಲ್ಲಿ ಅಗ್ರಮಾನ್ಯಳಾದ (ಚೂಡಾಮಣಿಯೆನಿಸಿದ) ದಿಲೀಪನ ರಾಣಿಯಾದ ಸುದಕ್ಷಿಣಾದೇವಿಯು ಸುರಧೇನು ನಂದಿನಿಯು ಹೋದ ಹಾದಿಯಲ್ಲೇ ನಡೆದುಹೋದಳು. ಆಗ ಅವಳ ದೇಹವು ಆ ಹಸುವಿನ ಗೊರಸುಗಳಿಂದ ಎದ್ದ ಪವಿತ್ರವಾದ ಧೂಳು ಸ್ಪರ್ಶಿಸಿತು. ಆದರಿಂದ ಆ ಮನುಜೇಶ್ವರನ ಸತಿಯು ಪವಿತ್ರಳಾಗಿ ಆನಂದಹೊಂದಿದಳು. ಹೇಗೆ ಸ್ಮೃತಿಗಳೇ ಮೊದಲಾದ ಧರ್ಮಶಾಸ್ತ್ರಗಳು ವೇದಗಳು (ಶ್ರುತಿಗಳು) ಹೇಳಿದ (ಪ್ರತಿಪಾದಿಸಿದ) ವಿಚಾರಧಾರೆಗಳ ಸರಣಿಯನ್ನೇ ಅನುಸರಿಸಿ ಹೋಗುವಂತೆ, ಆ ಮಹಾಸಾಧ್ವಿಯು, ಹಸುವಿನ ಖುರಪುಟದಿಂದೇಳ್ವ ವಿಮಲವಾದ ಧೂಳಿನಿಂದ ಕೂಡಿದ ಹಾದಿಯನ್ನೇ ಪಿಂಬಳಿದು ಮುಂದೆ ನಡೆದಳು. ಗೋವು ನಡೆದು ಹೋಗುವ ಮಾರ್ಗವನ್ನೇ ಅನುಸರಿಸುತ್ತ ಹೋದಳು. ಯಾಜ್ಞವಲ್ಕ್ಯಸ್ಮೃತಿ, ಮನುಸ್ಮೃತಿ ಮೊದಲಾದ ಧರ್ಮಶಾಸ್ತ್ರಗಳು ಶ್ರುತಿಗಳು ಪ್ರತಿಪಾದಿಸಿದ ವಿಷಯವನ್ನು ಗಮನದಲ್ಲಿಟ್ಟು ಕೊಂಡು ಬರೆದ ಧರ್ಮಗ್ರಂಥಗಳು.

ಅನ್ವಯ :—ಅಪಾಂಸುಲಾನಾಂ ಧುರಿ ಕೀರ್ತನೀಯಾ ಮನುಷ್ಯೇಶ್ವರಧರ್ಮಪತ್ನೀ ಖುರನ್ಯಾಸಪವಿತ್ರಪಾಂಸುಂ ತಸ್ಯಾಃ ಮಾರ್ಗಂ ಸ್ಮೃತಿಃ ಶ್ರುತೇಃ ಅರ್ಥಮ್ ಇವ ಅನ್ವಗಚ್ಛತ್ ॥

ಖುರಾಣಾಂ ನ್ಯಾಸಾಃ । ತೇನ ಪವಿತ್ರಾಃ । ಖುರನ್ಯಾಸಪವಿತ್ರಾಃ ಪಾಂಸವಃ ಯಸ್ಮಿನ್ ಸಃ —ಖುರನ್ಯಾಸಪವಿತ್ರಪಾಂಸುಃ, ತಮ್ । ನ ಪಾಂಸುಲಾಃ, ತಾಸಾಮ್ । ಮನುಷ್ಯಾಣಾಂ ಈಸ್ವರಃ । ಮನುಷ್ಯೇಶ್ವರಸ್ಯ ಧರ್ಮಪತ್ನೀ । ಧರ್ಮಾಯ ಪತ್ನೀ—ಧರ್ಮಪತ್ನೀ ॥ (ಅನು)ಅಗಚ್ಛತ್—ಅಗಚ್ಛತಾಂ—ಅಗಚ್ಛನ್ ಃ ಅಗಚ್ಛಃ—ಅಗಚ್ಛತಂ—ಅಗಚ್ಛತ । ಅಗಚ್ಛಂ—ಅಗಚ್ಛಾವ—ಅಗಚ್ಛಾಮ—। ಗಮ್ಲೃ—ಗತೌ—ಲಜ್—ಪ್ರ.ಪು.ಏ. ॥

ಅಪಾಂಸುಲಾನಾಂ = ಪತಿವ್ರತಾವನಿತೆಯರ, ಧುರಿ = ಅಗ್ರಸ್ಥಾನದಲ್ಲಿ, ಕೀರ್ತನೀಯಾ = ಪರಿಗಣಿಸಲು ಯೋಗ್ಯಳಾದ, ಮನುಷ್ಯೇಷ್ವರ ಧರ್ಮಪತ್ನೀ = ದಿಲೀಪರಾಜನ ಧರ್ಮಪತ್ನಿಯಾದ ಸುದಕ್ಷಿಣೆಯು, ಖುರನ್ಯಾಸಪವಿತ್ರಪಾಂಸುಂ=ಗೊರಸುಗಳ ಇಡುವಿಕೆಯಿಂದ ಉಂಟಾದ ಪವತ್ರವಾದ ಧೂಳಿಯುಳ್ಳ, ತಸ್ಯಾಃ = ಆ ನಂದಿನಿಯ, ಮಾರ್ಗಂ = ಹೋದ ದಾರಿಯನ್ನು, ಸ್ಮೃತಿಃ = ಮನ್ವಾದಿಸ್ಮೃತಿಯು, ಶ್ರುತೇಃ = ವೇದದ, ಅರ್ಥಂ ಇವ = ಅರ್ಥವನ್ನು ಎಂಬಂತೆ, ಅನ್ವಗಚ್ಛತ್ = ಅನುಸರಿಸಿ ಹೋದಳು.

**3. ನಿವರ್ತ್ಯ ರಾಜಾ ದಯಿತಾಂ ದಯಾಲುಃ ।**
**ತಾಂ ಸೌರಭೇಯೀಂ ಸುರಭಿರ್ಯಶೋಭಿಃ ॥**

**ಪಯೋಧರೀಭೂತಚತುಸ್ಸಮುದ್ರಾಂ**
**ಜುಗೋಪ ಗೋರೂಪಧರಾಮಿವೋರ್ವೀಂ** ॥ ೩ ॥

ಆ ಗೋಮಾತೆಯು ಧರ್ಮಸ್ವರೂಪಿಣಿಯು (ಧರ್ಮದೇವತೆ) ಹೇಗೋ ಹಾಗೆಯೇ ಭೂಮಾತೆಯೂ ಆಗಿರುವಳು. (ಭೂಮಾತೆಯ ಪ್ರತೀಕ) ವಸುಂಧರೆಯನ್ನು ಆವರಿಸಿರುವ ನಾಲ್ಕು ಸಾಗರಗಳು ಗೋಮಾತೆಯ ಕೆಚ್ಚಲಲ್ಲಿ ಉದ್ಭವಿಸಿರುವ ಹಾಲನ್ನೀವ ನಾಲ್ಕು ಮೊಲೆಗಳಂತೆ. ಆ ಸುರಭಿಸುತೆ ನಂದಿನಿಯು ಗೋರೂಪದ ಧಾರಿಣಿಯು. ಗೋವಿನ ರೂಪವಲ್ಲಿರುವ ಭೂಮಾತೆ ಅಥವಾ ಭೂಮಿಯ ರೂಪದಲ್ಲಿರುವ ಗೋಮಾತೆ. ಇದರಿಂದಾಗಿ ಭೂಮಿಯ ರಕ್ಷಕನಾಗಿ (ಪಾಲಕನಾಗಿ) ರಾಜ್ಯಭಾರ ಮಾಡುತ್ತಿರುವ ದೊರೆಯು ಆ ಸುರಧೇನು ನಂದಿನಿಯನ್ನು ಕಾಪಾಡಲು ಕಾರ್ಯೋನ್ಮುಖನಾದನು. ಹೀಗೆ ಕಾರ್ಯೋನ್ಮುಖನಾದುದು ಸ್ವಾಭಾವಿಕವೆ. ತನ್ನ ಸಹಧರ್ಮಿಣಿಯನ್ನು ಹಿಂದಕ್ಕೆ ಸರಿಯಲು (ನಿಲ್ಲಲು ಹೇಳಿ) ಅದನ್ನು ಪೊರೆಯಲು (ರಕ್ಷಿಸಲು) ಉಜ್ಜುಗಿಸಿದನು. ಸ್ವಭಾವದಿಂದಲೇ ಕರುಣಾಳುವಾದ ಮಹಾರಾಜನು ಗೋಮಾತೆಯ ರಕ್ಷಣೆಗೆ ಮುಂದಾದನು.

ಅನ್ವಯ :—ದಯಾಲುಃ ಯಶೋಭಿಃ ಸುರಭಿಃ ರಾಜಾ ತಾಂ ದಯಿತಾಂ ನಿವರ್ತ್ಯ ಸೌರಭೇಯೀಂ ಪಯೋಧರೀಭೂತಚತುಃಸಮುದ್ರಾಂ ಗೋರೂಪಧರಾಮ್ ಉರ್ವೀಂ ಇವ ಜುಗೋಪ ॥

ಧರಂತೀತಿ ಧರಾಃ। ಪಯಸಾಂ ಧರಾಃ, ಪಯೋಧರಾಃ। ಅಪಯೋಧರಾಃ ಪಯೋಧರಾಃ ಸಂಪದ್ಯಮಾನಾಃ ಕೃತಾಃ (ಭೂತಾ) ಪಯೋಧರೀಭೂತಾಃ। ಪಯೋಧರೀಭೂತಾಃ ಚತುಃಸಮುದ್ರಾಃ ಯಸ್ಯಾಃ ಸಾ, ಪಯೋಧರೀಭೂತಚತುಃಸಮುದ್ರಾ, ತಾಮ್। ಪಯಸಾ ಆಧರಿಭೂತಾಃ ಚತುಃಸಮುದ್ರಾಃ ಯಸ್ಯಾಃ ಸಾ। ಚತ್ವಾರಃ ಸಮುದ್ರಾಃ, ಚತುಃಸಮುದ್ರಾಃ। ಗೋಃ ರೂಪಂ ಗೋರೂಪಸ್ಯ ಧರಾ, ತಾಂ। ಜುಗೋಪ—ಗುಪೂ—ರಕ್ಷಣೇ—ಲಿಟ್॥ ಜುಗೋಪ—ಜುಗುಪತುಃ—ಜುಗುಪುಃ। ಜುಗೋಪಿಥ, ಜುಗೋಪ್ಥ— ಜುಗುಪಥುಃ—ಜುಗುಪ। ಜುಗೋಪ—ಜುಗುಪಿವ, ಜುಗುಪ್ವ—ಜುಗುಪಿಮ, ಜುಗುಪ್ಮ॥

ದಯಾಲುಃ = ಕರುಣಾಳು, ಯಶೋಭಿಃ = ಕೀರ್ತಿಯಿಂದ, ಸುರಭಿಃ = ಸುಂದರನಾದ, ತಾಂ = ಅನುಸರಿಸುವ ಆ ದಯಿತಾಂ = ಪ್ರಿಯಳನ್ನು, ನಿವರ್ತ್ಯ = ಹಿಂತಿರುಗಿಸಿ. ಪಯೋಧರೀಭೂತಚತುಃಸಮುದ್ರಾಂ = ಸ್ತನಗಳೇ ನಾಲ್ಕು ಸಮುದ್ರಗಳಾಗಿರುವ, ಗೋರೂಪಧರಾಂ = ಪಸುವಿನ ರೂಪವನ್ನು ಧರಿಸಿರುವ, ಉರ್ವೀಮಿವ = ಭೂಮಿಯನ್ನು ಎಂಬಂತೆ, ಜುಗೋಪ = ರಕ್ಷಿಸಿದನು—ಉಪಮಾಲಂಕಾರ.

**4.** **ವ್ರತಾಯ ತೇನಾನುಚರೇಣ ಧೇನೋಃ ।**
**ನ್ಯಷೇಧಿ ಶೇಷೋಽಪ್ಯನುಯಾಯಿವರ್ಗಃ ॥**
**ನ ಚಾನ್ಯತಸ್ತಸ್ಯ ಶರೀರರಕ್ಷಾ ।**
**ಸ್ವವೀರ್ಯಗುಪ್ತಾ ಹಿ ಮನೋಃ ಪ್ರಸೂತಿಃ** ॥ ೪ ॥

ಇಕ್ಷ್ವಾಕುಮನುವಿನ ವಂಶದಲ್ಲಿ ಜನಿಸಿದ ಆ ರಾಜೇಂದ್ರನು ಸ್ವತಃ ವೀರ್ಯವಂತನು. (ನ ಚಾನ್ಯತಸ್ತಸ್ಯ ಶರೀರರಕ್ಷಾ) ಆತನ ಮೈಗಾವಲಿಗೆ ಅಂಗರಕ್ಷಕರ ಅಗತ್ಯವಿರಲಿಲ್ಲ (ಸ್ವವೀರ್ಯಗುಪ್ತಾ). ಅಂಗರಕ್ಷಕರು ಅನುಸರಿಸಬೇಕಾಗಿರಲಿಲ್ಲ. ವ್ರತಧಾರಿಯಾದ ಆ ಮಾನವಕುಲಸಾರ್ವಭೌಮನು ನೋಂಪಿಯ ಆಕಳನ್ನು ಧನುರ್ಧಾರಿಯಾಗಿ ತಾನೊಬ್ಬನೇ (ಏಕಾಂಗಿಯಾಗಿ) ಅನುಸರಿಸಿದನು. ಅನುಯಾಯಿವರ್ಗದವರನ್ನು ಹಿಂದಿರುಗಲು ಹೇಳಿ ತಾನು ಏಕಾಂಗಿಯಾಗಿಯೇ ಹೊರಟನು. ಅದರ ಬೆನ್ನಹಿಂದೆಯೇ ನಡೆದನು.

ಅನ್ವಯ :—ವ್ರತಾಯ ಧೇನೋರನುಚರೇಣ ತೇನ ಶೇಷೋಽಪ್ಯನುಯಾಯಿವರ್ಗೋ ನ್ಯಷೇಧಿ। ತಸ್ಯ ಚ ಶರೀರರಕ್ಷಾ ಅನ್ಯತಃ ನ। ಮನೋ ಹಿ ಪ್ರಸೂತಿಃ ಸ್ವವೀರ್ಯಗುಪ್ತಾ ॥

(ನಿ)ಅಸೇಧಿ—ಅಸೇಧಿಷಾತಾಂ—ಅಸೇಧಿಷತ। ಅಸೇಧಿಷ್ಠಾಃ—ಅಸೇಧಿಷಾಥಾಂ—ಅಸೇಧಿಥಿಧ್ವಂ। ಅಸೇಧಿಷಿ—ಅಸೇಧಿಷ್ವಹಿ ಅಸೇಧಿಷ್ಮಹಿ। ಷಿಧ—ಗತ್ಯಾಂ—ಕರ್ಮಣಿ ಲುಜ್। ಅನುಯಾಯಿನಾಂ ವರ್ಗಃ। ಶರೀರಸ್ಯ ರಕ್ಷಾ। ಸ್ವಸ್ಯಂ ವೀರ್ಯಂ। ಸ್ವವೀರ್ಯೇಣ ಗುಪ್ತಾ ॥

ವ್ರತಾಯ = ವ್ರತನಿಯಮಕ್ಕೋಸ್ಕರ, ಧೇನೋಃ = ನಂದಿನಿಯ, ಅನುಚರೇಣ = ಸೇವಕನಾದ, ತೇನ = ಆ ದಿಲೀಪನಿಂದ, ಶೇಷಃ = ಉಳಿದಿರುವ, ಅನುಯಾಯಿವರ್ಗಃ = ಸೇವಕಸಮುದಾಯ, ನ್ಯಷೇಧಿ = ನಿಷೇಧಿಸಲ್ಪಟ್ಟಿತು, ತಸ್ಯ= ಆ ದಿಲೀಪನ, ಶರೀರರಕ್ಷಾ = ದೇಹರಕ್ಷಣೆಯು, ನ ಚ ಅನ್ಯತಃ = ಇತರರಿಂದ ಅಲ್ಲವಷ್ಟೆ, ಹಿ = ಯಾವ ಕಾರಣದಿಂದ, ಮನೋಃ = ಮನುಚಕ್ರವರ್ತಿಯ, ಪ್ರಸೂತಿಃ = ಸಂತತಿಯು, ಸ್ವವೀರ್ಯಗುಪ್ತಾಹಿ = ತನ್ನ ಸ್ವಪರಾಕ್ರಮದಿಂದಲೇ—

5. ಆಸ್ವಾದಯದ್ಭಿಃ ಕವಲೈಃ ತೃಣಾನಾಂ।
ಕಂಡೂಯನೈಃ ದಂಶನಿವಾರಣೈಶ್ಚ॥
ಅವ್ಯಾಹತೈಃ ಸ್ವೈರಗತೈಃ ಸ ತಸ್ಯಾಃ।
ಸಮ್ರಾಟ್ ಸಮಾರಾಧನತತ್ಪರೋಽಭೂತ್ ॥ ೫ ॥

ರಸವತ್ತಾದ, ಹಸುರಾದ ಕೆನೆಹುಲ್ಲುಗಳನ್ನು ಕೊಯ್ದು ಪಿಂಡಿಮಾಡಿ ಆ ಸಾಮ್ರಾಟನು ಸಲಹಿದ ಆ ಆಕಳ ಬಾಯಿಗೆ ಕೊಟ್ಟನು. ಬಹಳ ಉತ್ಸಾಹದಿಂದ ಅದರ ಸೇವಾವೃತ್ತಿಯನ್ನು ಕೈಗೊಂಡನು. ಆಕಳ ಮೈಯನ್ನು ಉಜ್ಜುವುದು, ನವೆಯನ್ನು ಹೋಗಲಾಡಿಸುವುದು. ಕಾಡುನೊಣಗಳ ಬಾಧೆಯಿಂದ ಸುರಕ್ಷಿಸುವುದು, ಹೊತ್ತುಹೊತ್ತಿಗೆ ಸರಿಯಾಗಿ ಕುಡಿಯಲು ನಿರ್ಮಲವಾದ, ಶುದ್ಧ ಜಲವನ್ನು ಒದಗಿಸುವುದು— ಈ ಎಲ್ಲ ಕೈಂಕರ್ಯವನ್ನು ಸ್ವತಃ ತಾನೇ ಆಸ್ಥೆಯಿಂದ ನೋಡಿಕೊಳ್ಳುತ್ತಿದ್ದನು. ಆ ಹಸುವಾದರೋ ಆ ಆಶ್ರಮದ ಅರಣ್ಯಪ್ರದೇಶದಲ್ಲಿ ಯಾವ ಎಡೆತಡೆಗಳಿಲ್ಲದೆ ಓಡಾಡುತ್ತಿತ್ತು (ಅವ್ಯಾಹತೈಃ ಸ್ವೈರಗತೈಃ). ರಾಜನು ನಂದಿನಿಯ ಸೇವೆಯಲ್ಲಿ ಅತ್ಯಾಸಕ್ತನಾಗಿ ಇತರ ಪ್ರಾಪಂಚಿಕ ಯೋಚನೆಗಳನ್ನು ಮರೆತುಬಿಟ್ಟನು.

ಅನ್ವಯ :—ಸ ಸಮ್ರಾಟ್ ಆಸ್ವಾದವದ್ಭಿಃ ತೃಣಾನಾಂ ಕವಲೈಃ ಕಂಡೂಯನೈಃ ದಂಶನಿವಾರಣೈಃ ಅವ್ಯಾಹತೈಃ ಸ್ವೈರಗತೈಶ್ಚ ತಸ್ಯಾಃ ಸಮಾರಾಧನತತ್ಪರೋಽಭೂತ್ ॥

ದಂಶಾನಾಂ ನಿವಾರಣಾನಿ, ತೈಃ । ಸ್ವೈರೇಣ ಗತಾನಿ, ತೈಃ । ಸಮಾರಾಧನೇ ತತ್ಪರಃ । ಅಭೂತ್—ಭೂ—ಸತ್ತಾಯಾಂ—ಲುಙ್ ಪ್ರ.ಪು.ಏ. ॥

ಸಮ್ರಾಟ್ = ಚಕ್ರವರ್ತಿಯಾದ. ಸಃ = ಆ ದಿಲೀಪನು, ಆಸ್ವಾದಯದ್ಭಿಃ = ರಸವತ್ತಾದ, ತೃಣಾನಾಂ = ಹುಲ್ಲುಗಳ, ಕವಲೈಃ = ಹಿಡಿತುತ್ತು(ಕವಳ)ಗಳಿಂದ, ಕಂಡೂಯನೈಃ = ನವೆ ತುರಿಸುವಿಕೆಯಿಂದ, ದಂಶನಿವಾರಣೈಶ್ಚ = ಕಾಡುನೊಣಗಳನ್ನು ಓಡಿಸುವುದರಿಂದ, ಅವ್ಯಾಹತೈಃ = ಯಾವ ಅಡೆತಡೆಗಳಿಲ್ಲದೆ, ನಿರಂತರ, ಸ್ವೈರಗತಿಃ = ಸ್ವಚ್ಛಂದನಡಿಗೆಗಳಿಂದ, ತಸ್ಯಾಃ = ಆ ನಂದಿನಿಯ, ಸಮಾರಾಧನತತ್ಪರಃ = ಸೇವಾಸಕ್ತನು, ಅಭೂತ್ = ಆದನು.

6\. ಸ್ಥಿತಃ ಸ್ಥಿತಾಮುಚ್ಚಲಿತಃ ಪ್ರಯಾತಾಂ ।
ನಿಷೇದುಷೀಮಾಸನಬಂಧಧೀರಃ ॥
ಜಲಾಭಿಲಾಷೀ ಜಲಮಾದದಾನಾಂ ।
ಛಾಯೇವ ತಾಂ ಭೂಪತಿರನ್ವಗಚ್ಛತ್ ॥ ೬ ॥

ವಸಿಷ್ಠರು ಉಪದೇಶಿಸಿದಂತೆ ಆ ದಿಲೀಪನು ನಂದಿನಿಯ ಸೇವೆಯನ್ನು ದಕ್ಷತೆಯಿಂದ ಪರಿಪೂರ್ಣವಾಗಿ ಮಾಡುತ್ತಿದ್ದನು. ಆ ಗೋಮಾತೆಯು ನಿಂತಾಗ ತಾನೂ ನಿಲ್ಲುತ್ತ, ಅದು ಹೊರಟಾಗ ತಾನೂ ಹೊರಡುತ್ತ, ಅದು ಮಲಗಿದಾಗ ಪದ್ಮಾಸನದಲ್ಲಿ ಸುಖಾಸೀನನಾಗಿ ಕುಳಿತುಕೊಳ್ಳುತ್ತ (ಆಸನಬಂಧಧೀರಃ), ಅದರ ನೆರಳಿನಂತೆ ಭಕ್ತಿಯಿಂದ ಅನುಸರಿಸುತ್ತಿದ್ದನು. ಆ ಹಸುವು ಬಾಯಾರಿ, ನೀರನ್ನು ಸ್ವೀಕರಿಸಿದಾಗ, ಅದು ನೀರು ಕುಡಿದಮೇಲೆಯೇ ತಾನೂ ನೀರು ಕುಡಿದು ತನ್ನ ತೃಷೆಯನ್ನು (ಬಾಯಾರಿಕೆಯನ್ನು) ಹೋಗಲಾಡಿಸಿಕೊಳ್ಳುತ್ತಿದ್ದನು. ಹೀಗೆ ಆ ಮನುಜೇಂದ್ರನು ಆ ಹಸುವಿನ ಛಾಯೆಯಂತೆ (ಛಾಯೇವ ತಾಂ) (ನೆರಳಿನಂತೆ) ಅನುಸರಿಸಿ ಉಪಚರಿಸುತ್ತಿದ್ದನು. ಉಪಚರಿಸುತ್ತ ಸೇವೆ ಮಾಡುತ್ತಿದ್ದನು (ದಾಸ್ಯ).

ಅನ್ವಯ :—ಭೂಪತಿಃ ತಾಂ ಸ್ಥಿತಾಂ ಸ್ಥಿತಃ ಪ್ರಯಾತಾಮ್ ಉಚ್ಚಲಿತಃ ನಿಷೇದುಷೀಂ ಆಸನಬಂಧಧೀರಃ ಜಲಮಾದದಾನಾಂ ಜಲಾಭಿಲಾಷೀ (ಇತ್ಥಂ) ಛಾಯೇವ ಅನ್ವಗಚ್ಛತ್ ॥

ಆಸನಬಂಧೇ ಧೀರಃ । ಜಲಸ್ಯ ಅಭಿಲಾಷೀ । (ಅನು) ಆಗಚ್ಛತ್ (ಅಭವತ್ ಅಂತೆ ರೂಪ) ಗಮ್‌ಲೃ—ಗತೌ—ಲಙ್—ಪ್ರ.ಪು.ಏ. ॥

ಭೂಪತಿಃ = ರಾಜನು, ತಾಂ = ಆ ನಂದಿನಿಯನ್ನು, ಸ್ಥಿತಾಂ (ಸತೀಂ)= ನಿಂತಿರುವಾಗ, ಸ್ಥಿತಃ= ನಿಂತವನಾಗಿ, ಪ್ರಯಾತಾಂ = ಹೊರಟಿರುವಾಗ, ಉಚ್ಚಲಿತ = ತಾನು ಹೊರಟವನಾಗಿ, ನಿಷೇದುಷೀಂ = ಮಲಗಿರುವಾಗ, ಆಸನಬಂಧಧೀರಃ = ಕುಳಿತವನಾಗಿ, ಜಲಂ

ಆದದಾನಾಂ = ನೀರನ್ನು ಸ್ವೀಕರಿಸುವಾಗ, ಜಲಾಭಿಲಾಷೀ = ತಾನೂ ನೀರು ಕುಡಿದು, ಛಾಯಾ ಇವ = ನೆರಳಿನಂತೆ, ಅನ್ವಗಚ್ಛತ್ = ಅನುಸರಿಸಿದನು.

**7. ಸನ್ಯಸ್ತ ಚಿಹ್ನಾಮಪಿ ರಾಜಲಕ್ಷ್ಮೀಂ ।**
**ತೇಜೋ ವಿಶೇಷಾನುಮಿತಾಂ ದಧಾನಃ ॥**
**ಆಸೀದನಾವಿಷ್ಕೃತದಾನರಾಜಿಃ ।**
**ಅಂತರ್ಮದಾವಸ್ಥ ಇವ ದ್ವಿಪೇಂದ್ರಃ ॥ ೭ ॥**

ಆನೆಗಳಲ್ಲಿ ಭದ್ರ ಎಂಬ ಉತ್ತಮ ಜಾತಿಗೆ ಸೇರಿದ ಮದಗಜವು ತನ್ನಲ್ಲಿ ಉತ್ಪತ್ತಿಯಾದ ಅತಿಶಯವಾದ ಮದಜಲವನ್ನು ತನ್ನ ದೇಹದೊಳಗೇ ಲಯಗೊಳಿಸಿ ಅಡಗಿಸಿ ಕೊಳ್ಳುವುದು. ಆ ಆನೆಯ ಮದಜಲವು ಕಪೋಲಗಳಲ್ಲಿ ಹರಿದು ಹೊರಗೆ ಪ್ರಕಟವಾಗದು. ಆದರೂ ಮದಾವಸ್ಥೆಯನ್ನು ಹೊಂದಿದ ಎಲ್ಲಾ ಲಕ್ಷಣವನ್ನು ಆ ಶ್ರೇಷ್ಠವಾದ ಮದ್ದಾನೆಯು (ಗಜರಾಜನು) ಪಡೆದಿರುವಂತೆ ದಿಲೀಪಮಹಾರಾಜನು ರಾಜಚಿಹ್ನೆಗಳಾದ ಛತ್ರ, ಚಾಮರ ಮೊದಲಾದುವುಗಳಿಂದ ವಿರಹಿತನಾದಾಗ್ಯೂ, ತನ್ನ ತೇಜೋವಿಶೇಷದಿಂದ ಧೀಮಂತನಾದ ರಾಜನಂತೆ ರಾಜಗಾಂಭೀರ್ಯದಿಂದ ರಾಜಿಸುತ್ತಿದ್ದನು. ಸ್ವಭಾವದಿಂದಲೇ (ಹುಟ್ಟಿನಿಂದಲೇ) ಆ ನರೇಂದ್ರನು ಎಲ್ಲಾ ರಾಜಲಕ್ಷಣಗಳನ್ನು ಹೊಂದಿದ್ದನು. ತನ್ನ ತೇಜೋವಿಶೇಷದಿಂದಲೇ ತನ್ನಲ್ಲಿ ರಾಜ್ಯಲಕ್ಷ್ಮಿಯನ್ನು, ರಾಜಕಳೆಯನ್ನು ಹೊಂದಿದ್ದುದರ ದೆಸೆಯಿಂದ ಹಸುವಿನ ಸೇವೆಯಲ್ಲಿ ನಿರತನಾಗಿದ್ದರೂ ಅವನ ದರ್ಶನ ಮಾತ್ರದಿಂದ ಮಹಾರಾಜನೆಂದೇ ತಿಳಿಯಬಹುದಾಗಿತ್ತು.

ಅನ್ವಯ :—ಸನ್ಯಸ್ತಚಿಹ್ನಾಮ್ ಅಪಿ ತೇಜೋವಿಶೇಷಾನುಮಿತಾಂ ರಾಜಲಕ್ಷ್ಮೀಂ ದಧಾನಃ ಅನಾವಿಷ್ಕೃತದಾನರಾಜಿಃ ಅಂತರ್ಮದಾವಸ್ಥಃ ದ್ವಿಪೇಂದ್ರಃ ಇವ ಆಸೀತ್ ॥

ನ್ಯಸ್ತಾನಿ ಚಿಹ್ನಾನಿಯಸ್ಯಾಃ ಸಾ, ತಾಮ್ । ರಾಜ್ಞಃ ಲಕ್ಷ್ಮೀಃ ತಾಮ್ । ತೇಜಸಾಂ ವಿಶೇಷಃ । ತೇನ ಅನುಮಿತಾ ತಾಮ್ । ದಾನಸ್ಯ ರಾಜಿಃ, ಅನಾವಿಷ್ಕೃತಾ ದಾನರಾಜಿಃ ಯಸ್ಯ ಸಃ । ಅಂತಃ ಮದಾವಸ್ಥಾ ಯಸ್ಯ ಸಃ । ದ್ವಿಪಾನಾಂ ಇಂದ್ರಃ । ಅಸ—ಭುವಿ—ಲಙ್॥ ಆಸೀತ್—ಆಸ್ತಾಂ—ಆಸನ್। ಆಸೀಃ—ಆಸ್ತಂ—ಆಸ್ತ। ಆಸಂ—ಆಸ್ವ—ಆಸ್ಮ॥

ನ್ಯಸ್ತಚಿಹ್ನಾಮಪಿ = ತ್ಯಜಿಸಿದ ಛತ್ರಚಾಮರಾದಿ ರಾಜಚಿಹ್ನೆಯುಳ್ಳ, ತೇಜೋ ವಿಶೇಷೇಣಾನುಮಿತಾಂ = ಪ್ರಭಾವಾತಿಶಯದಿಂದ ರಾಜನೆಂದು ಊಹಿಸಲ್ಪಟ್ಟ, ರಾಜ ಲಕ್ಷ್ಮೀಂ = ರಾಜಲಕ್ಷ್ಮಿಯನ್ನು, ದಧಾನಃ = ಧರಿಸಿರುವ, ಅನಾವಿಷ್ಕೃತಧನರಾಜಿಃ = ಹೊರಗೆ ಪ್ರಕಟವಾಗದಿರುವ ಮದಜಲದ ರೇಖೆಯಿರುವ, ಅಂತರ್ಮದಾವಸ್ಥಃ = ಒಳಗಡೆಯೇ ಇರುವ ಮದಾವಸ್ಥೆ ಇರುವ, ದ್ವಿಪೇಂದ್ರ ಇವ = ಗಜರಾಜನಂತೆ, ಆಸೀತ್ = ಆದನು.

**8. ಲತಾಪ್ರತಾನೋದ್ಗ್ರಥಿತೈಃ ಸ ಕೇಶೈಃ ।**
**ಅಧಿಜ್ಯಧನ್ವಾ ವಿಚಚಾರ ದಾವಮ್ ॥**

**ರಕ್ಷಾಪದೇಶಾನ್ಮುನಿಹೋಮಧೇನೋಃ ।**
**ವನ್ಯಾನ್ವಿನೇಷ್ಯನ್ನಿವ ದುಷ್ಟಸತ್ವಾನ್ ॥ ೮ ॥**

ಆ ನರಪುಂಗವನು ಮುನಿಯ ಹೋಮಧೇನುವನ್ನು ರಕ್ಷಿಸುವ ನಿಮಿತ್ತ ಹೆದೆಯೇರಿಸಿದ ಧನುಸ್ಸನ್ನು ಕೈಯಲ್ಲಿ ಧರಿಸಿ ಹೊರಟನು. ಕಾಡಿನ ಕುಡಿಬಳ್ಳಿಗಳಿಂದ (ಲತಾಲತಿಕೆಗಳಿಂದ) ತನ್ನ ನೀಳವಾದ ತಲೆಕೂದಲನ್ನು ಮೇಲಕ್ಕೆ ಬಿಗಿದು ಕಟ್ಟಿದನು. ನಂದಿನಿಯು ರಕ್ಷಣೆಯ ನೆಪದಿಂದ ಕಾಡಿನಲ್ಲಿರುವ ದುಷ್ಟಪ್ರಾಣಿಗಳನ್ನು ದಮನಮಾಡುವನೋ ಎಂಬಂತೆ (ವಿನೇಷ್ಯನ್ನಿವ). ಧನುರ್ಧರನಾಗಿ ಆ ವೀರೋತ್ತಮನು ಕಾರ್ಯಾಸಕ್ತನಾಗಿ ಆ ವನ ಭೂಮಿಯಲ್ಲಿ ಸಂಚರಿಸಿದನು.

ಅನ್ವಯ :—ಲತಾಪ್ರತಾನೋದ್ಗ್ರಥಿತೈಃ ಕೇಶೈಃ (ಉಪಲಕ್ಷಿತಃ) ಸ ಅಧಿಜ್ಯಧನ್ವಾ ಮುನಿಹೋಮಧೇನೋಃ ರಕ್ಷಾಪದೇಶಾತ್ ವನ್ಯಾನ್ ದುಷ್ಟಸತ್ವಾನ್ ವಿನೇಷ್ಯನ್ನಿವ ದಾವಮ್ ವಿಚಚಾರ ॥ ಲತಾಯಾಃ ಪ್ರತಾನಾನಿ, ತೈಃ ಉದ್ಗ್ರಥಿತಾಃ, ತೈಃ । ಅಧಿಜ್ಯಂ ಧನುಃ ಯಸ್ಯ ಸಃ ಅಧಿಜ್ಯಧನ್ವಾ। ಅನಜಾದೇಶ ಬಂದು ನಾಂತವಾಗಿದೆ. (ವಿ)ಚರ—ಗತಿ ಭಕ್ಷಣಯೋಃ—ಲಿಟ್ । ಚಚಾರ—ಚೇರತುಃ—ಚೇರುಃ । ಚೇರಿಥ—ಚೇರಥುಃ—ಚೇರ । ಚಚಾರ, ಚಚರ—ಚೇರಿವ—ಚೇರಿಮ । ರಕ್ಷಾಯಾಃ ಅಪದೇಶಃ, ತಸ್ಮಾತ್ । ಮುನೇಃ ಹೋಮಧೇನುಃ । ಹೋಮಾರ್ಥಂ ಧೇನುಃ । ವನೇ ಭವಾಃ ವನ್ಯಾಃ, ತಾನ್ । ದುಷ್ಟಾಶ್ಚ ತೇ ಸತ್ವಾಶ್ಚ, ತಾನ್ ॥

ಲತಾಪ್ರತಾನೋದ್ಗ್ರಥಿತೈಃ = ಬಳ್ಳಿಗಳ ಕುಟಿಲತಂತುಗಳಿಂದ ಮೇಲಕ್ಕೆ ಎತ್ತಿ ಕಟ್ಟಿದ, ಕೇಶೈಃ = ಕೂದಲ ಗಂಟಿನಿಂದ ಕೂಡಿದ, ಸಃ = ಆ, ಅಧಿಜ್ಯಧನ್ವಾ = ಹೆದೆಯೇರಿಸಿದ ಧನುಸ್ಸುಳ್ಳ ದಿಲೀಪನು, ಮುನಿಹೋಮಧೇನೋಃ = ವಸಿಷ್ಠನ ಹೋಮ ಧೇನು ನಂದಿನಿಯ, ರಕ್ಷಾಪದೇಶಾತ್ = ರಕ್ಷಣೆಯ ನೆಪದಿಂದ, ವನ್ಯಾನ್ = ಕಾಡಿನಲ್ಲಿ ಹುಟ್ಟಿರುವ, ದುಷ್ಟಸತ್ವಾನ್ = ದುಷ್ಟಪ್ರಾಣಿಗಳನ್ನು, ವಿನೇಷ್ಯನ್ನಿವ = ಶಿಕ್ಷಿಸುವವನೋ ಎಂಬಂತೆ, ದಾವಮ್ = ಆ ವನವನ್ನು, ವಿಚಚಾರ = ತಿರುಗಿದನು.

೯. ವಿಸೃಷ್ಟಪಾರ್ಶ್ವಾನುಚರಸ್ಯ ತಸ್ಯ ।
**ಪಾರ್ಶ್ವದ್ರುಮಾಃ ಪಾಶಭೃತಾ ಸಮಸ್ಯ ॥**
**ಉದೀರಯಾಮಾಸುರಿವೋನ್ಮದಾನಾಂ ।**
**ಆಲೋಕಶಬ್ದಂ ವಯಸಾಂ ವಿರಾವೈಃ ॥ ೯ ॥**

ವ್ರತನಿಯಮಕ್ಕೋಸ್ಕರ ತನ್ನ ಭೃತ್ಯರನ್ನು ಹಿಂದಿಕ್ಕಿ ಆ ನರಶ್ರೇಷ್ಠನು (ನರೋತ್ತಮನು) ತಾನೊರ್ವನೇ ಆ ಕಾನನಾಂತರಭೂಮಿಯಲ್ಲಿ ಮುಂದುವರಿಯುತ್ತಿದ್ದನು. ಅವನು ಧೈರ್ಯಸ್ಥೈರ್ಯದಲ್ಲಿ, ಬಲಪರಾಕ್ರಮದಲ್ಲಿ ಪಾಶಾಯುಧವನ್ನು ಧರಿಸಿದ (ಪಾಶಭೃತಾ) ವರುಣದೇವನಿಗೆ ಸಮನಾದವನು. ಅವನು ತನ್ನ ಎರಡು ಬದಿಗಳ (ಪಾರ್ಶ್ವಗಳ) ಮಧ್ಯದಲ್ಲಿ ಬೆಳೆದ ಮರಗಳ ನಡುವೆ ಸಾಗಿಹೋಗುತ್ತಿದ್ದಾಗ ಅವನನ್ನು ಕಂಡು ಮುದಿಸಿ ಕೊಬ್ಬಿದ ಹಕ್ಕಿಗಳು (ವಿಹಗಸಂತತಿ) ಸಂತೋಷದಿಂದ ಇಂಚರಗಾನ

ಮಾಡಿದವು. ರಾಜದೂತರು (ವಂದಿಮಾಗಧರು, ಸ್ತುತಿಘೋಷಕರು, ಪಾಟಾಳಿಗಳು, ಹೊಗಳುಭಟ್ಟರು) ಅರಮನೆಗಳಲ್ಲಿ ಹಾಡುವ ರಾಜನ ಪರವಾದ ಆಲೋಕಶಬ್ದವನ್ನೇ ನುಡಿದು, ನಲಿದು, ಉಲಿದು, ಒಲಿದು ಹಾಡಿದುವು. "ರಾಜನಿಗೆ ಜಯವಾಗಲಿ" "ಜಯ ಜಯ ಮಹಾರಾಜ" ಎಂಬ ಅಕ್ಷರಘೋಷವನ್ನು ಮಾಡಿದುವು. ಅವುಗಳ ಕಲಕಲ ದನಿಯು ಅರಮನೆಯ ಆಲೋಕಶಬ್ದವೇ ಆಗಿತ್ತು. (ಪ್ರಭೋ ಸ್ವಾಮಿ, ಬಹುಪರಾಕ್, ಪಾದವುವಧಾರ್ಯತಾಂ" ವಲ್ಲಭದೇವ (ಆಲೋಕಶಬ್ದಂ) (ಜಯ ಹೇ ಭಾರತಮಾತಾ, ವಂದೇ ಮಾತರಂ, ಜನಗಣಮನ) ತರುಗಿಡಲತೆಗಳು ಪಕ್ಷಿಗಳೆಂಬ ವಂದಿಮಾಗಧರನ್ನು ತನ್ನ ತಲೆಯಲ್ಲಿ ಹೊತ್ತುನಿಂತಂತೆ, ಆಲೋಕಶಬ್ದವನ್ನು ಅವನಿಗೆ ಗಾನಮಾಡಿ ಹೇಳು ವಂತೆ ಅವು ರಂಜಿಸಿದುವು, ಮನೋರಂಜನೆ ಒದಗಿಸಿದುವು.

ಅನ್ವಯ :—ವಿಸೃಷ್ಟಪಾರ್ಶ್ವಾನುಚರಸ್ಯ ಪಾಶಭೃತಾಸಮಸ್ಯ ತಸ್ಯ ಪಾರ್ಶ್ವದ್ರುಮಾಃ ಉನ್ಮದಾನಾಂ ವಯಸಾಂ ವಿರಾವೈಃ ಆಲೋಕಶಬ್ದಂ ಉದೀರಯಾಮಾಸುಃ ಇವ ॥

ವಿಸೃಷ್ಟಾಃ ಪಾರ್ಶ್ವಾನುಚರಾಃ ಯೇನ ಸಃ । ತಸ್ಯ । ಪಾರ್ಶ್ವಯೋಃ ದ್ರುಮಾಃ । ಪಾಶಂ ಬಿಭರ್ತಿ ಇತಿ ಪಾಶಭೃತ್ ತೇನ । (ಉತ್) ಈರಯಾಮಾಸುಃ—ಈರ—ಕ್ಷೇಪೇ —ಲಿಟ್—ಪ್ರ.ಪು.ಬಹು. । ಆಲೋಕಸ್ಯ ಶಬ್ದಃ, ತಮ್ ॥

ವಿಸೃಷ್ಟಪಾರ್ಶ್ವಾನುಚರಸ್ಯ= ಸೇವಕರನ್ನು ಬಿಟ್ಟುಳಿದ, ಪಾಶಭೃತಾ = ಪಾಶಾಯುಧ ಧರಿಸಿರುವ ವರುಣದೇವ, ಸಮಸ್ಯ= ಸಮಾನನಾದ, ತಸ್ಯ= ಆ ದಿಲೀಪನಿಗೆ, ಪಾರ್ಶ್ವ ದ್ರುಮಾ = ಸಮೀಪದಲ್ಲಿರುವ, ಅಕ್ಕಪಕ್ಕದಲ್ಲಿರುವ ಮರಗಳು, ಉನ್ಮದಾನಾಂ = ಉದ್ರೇಕ ಗೊಂಡ, ಮದವುಳ್ಳ, ಸೊಕ್ಕಿದ, ವಯಸಾಂ = ಹಕ್ಕಿಗಳ, ವಿರಾವೈಃ = ಶಬ್ದಗಳಿಂದ, ಆಲೋಕಶಬ್ದಂ = ಜಯಶಬ್ದವನ್ನು, ಜಯಗೀತವನ್ನು, ಉದೀರಯಾಮಾಸುರಿವ = ಹೇಳಿದವೋ ಎಂಬಂತೆ.

**10. ಮರುತ್ಪ್ರಯುಕ್ತಾಶ್ಚ ಮರುತ್ಸಖಾಭಂ ।**
**ತಮರ್ಚ್ಯಮಾರಾದಭಿವರ್ತಮಾನಮ್ ॥**
**ಅವಾಕಿರನ್ಬಾಲಲತಾಃ ಪ್ರಸೂನೈಃ ।**
**ಆಚಾರಲಾಜೈರಿವ ಪೌರಕನ್ಯಾಃ** ॥ ೧೦ ॥

ಪರಮಪೂಜ್ಯನು, ವಾಯುವಿನ ಮಿತ್ರನಾದ ಅಗ್ನಿಯಂತೆ ತೇಜಃಪುಂಜನಾಗಿ ಮೆರೆಯುತ್ತಿರುವ ಭೂಪಾಲನು ಆ ದಾರಿಯಲ್ಲಿ ಬರುತ್ತಿರುವುದನ್ನು ಕಂಡು ಬಾಲ ಲತೆಗಳು ಪುಲಕಿತಗೊಂಡುವು. ಅವು ವಾಯುವಿನಿಂದ ಪ್ರಚೋದಿಸಲ್ಪಟ್ಟು (ಪವನ ಚೋದಿತ ಬಾಲಲತೆಗಳು, ಬಾಲಲತಾಪ್ರಸೂನೈಃ), ಚಾರುಪುರಕನ್ನಿಕೆಯರು ನಗರ ಪ್ರದೇಶಗಳಲ್ಲಿ, ರಾಜನು ರಾಜವೀಥಿಯಲ್ಲಿ ಬರುತ್ತಿರಲು ಅರಳು-ಅಕ್ಷತೆಗಳನ್ನು ರಾಜನ ಶಿರದ ಮೇಲೆ ಸುರಿವಂತೆ, ಅವನಿಪಾಲನ ಮೇಲೆ ಗಿಡಮರಬಳ್ಳಿಗಳು ಹೂಗಳ ಮಳೆ ಯನ್ನು ಸುರಿಸಿದುವು. ಆ ರಾಜನು ರಾಜಮರ್ಯಾದೆಯನ್ನು ತಾನು ಕಾಡಿನಲ್ಲಿದ್ದರೂ ಪಡೆದನು.

ಅನ್ವಯ :—ಮರುತ್ ಪ್ರಯುಕ್ತಾಶ್ಚ ಬಾಲಲತಾಃ ಆರಾತ್ ಅಭಿವರ್ತಮಾನಂ ಮರುತ್ಸ

...ಭಮ್ ಅರ್ಚ್ಯಂ ತಂ ಪ್ರಸೂನೈಃ ಪೌರಕನ್ಯಾಃ ಆಚಾರಲಾಜೈರಿವ ಅವಾಕಿರನ್ ॥

ಮರುತಾ ಪ್ರಯುಕ್ತಾಃ । ಮರುತಃ ಸಖಾ, ಮರುತ್ಸಖಿಃ, ಮರುತ್ಸಖಿಸ್ಯೇವ ಆಭಾಯಸ್ಯ ಸಃ, ಮರುತ್ಸಖಾಭಃ । ತಮ್ ಅರ್ಚಿತುಂ ಯೋಗ್ಯಃ ಅರ್ಚ್ಯಃ, ತಮ್ । ಬಾಲಾಶ್ಚ ತಾಃ ಲತಾಶ್ಚ, ಬಾಲಲತಾಃ । ಆಚಾರಾರ್ಥಲಾಜಾಃ, ತೈಃ ಪೌರಾಶ್ಚ ತಾಃ ಕನ್ಯಾಶ್ಚ ಪೌರಕನ್ಯಾಃ । (ಅವ)ಅಕಿರತ್—ಅಕಿರತಾಂ—ಅಕಿರನ್ । ಇತ್ಯಾದಿ । ಕೄ—ವಿಕ್ಷೇಪೇ—ಲಙ್—ಪ್ರ.ಪು.ಬ. ॥

ಮರುತ್ಪ್ರಯುಕ್ತಾಃ = ಗಾಳಿಯಿಂದ ಪ್ರೇರೇಪಿಸಲ್ಪಟ್ಟ, ಬಾಲಲತಾಃ = ಚಿಕ್ಕಬಳ್ಳಿಗಳು ಆರಾತ್ = ಸಮೀಪದಲ್ಲಿ, ಅಭಿಲತಾಃ = ಚಿಕ್ಕ ಬಳ್ಳಿಗಳು, ಅಭಿವರ್ತಮಾನಂ = ಇರುವ, ಮರುತ್ಸಖಾಭಂ = ಅಗ್ನಿಗೆ ಸಮನಾದ, ಅರ್ಚ್ಯ = ಪೂಜಾಯೋಗ್ಯನಾದ, ತಂ = ಆ ದಿಲೀಪನನ್ನು, ಪ್ರಸೂನೈಃ = ಹೂವುಗಳಿಂದ, ಪೌರಕನ್ಯಾಃ = ಪಟ್ಟಣದ ಹೆಂಗಸರು, ಆಚಾರಲಾಜೈರಿವ = ಆಚಾರಕ್ಕೋಸ್ಕರ ಅರಳುಗಳಿಂದ ಎಂಬಂತೆ, ಅವಾಕಿರನ್ = ಅವನ ಮೇಲೆ ಸುರಿದುವು.

**11. ಧನುರ್ಭೃತೋಽಪ್ಯಸ್ಯ ದಯಾರ್ದ್ರಭಾವಂ ।**
**ಆಖ್ಯಾತಮಂತಃಕರಣೈರ್ವಿಶಂಕೈಃ ॥**
**ವಿಲೋಕಯಂತ್ಯೋವ ಪುರಾಪುರಕ್ಷ್ಣಾಂ ।**
**ಪ್ರಕಾಮವಿಸ್ತಾರಫಲಂ ಹರಿಣ್ಯಃ ॥ ೧೧ ॥**

"ಈತನು ಚಾಪವನ್ನು ಧರಿಸಿದ್ದರೂ (ಚಾಪಧರ) ಪರಮಕರುಣಾಳುವಾದ ದಯಾರ್ದ್ರಹೃದಯನು (ದಯಾರ್ದ್ರಭಾವಂ) ನಮಗೆಂದಿಗೂ ಹಾನಿಮಾಡುವವನಲ್ಲ." ಎಂದು ಆ ದಿವ್ಯದೇಹಿಯನ್ನು (ತೇಜೋಗಾತ್ರನನ್ನು) ಕಂಡೊಡನೆಯೇ ಹೆಣ್ಣುಜಿಂಕೆಗಳು ತಿಳಿದುಕೊಂಡುವು. ಆ ಹರಿಣಿಗಳು ಭಯರಹಿತವಾಗಿ ತಮ್ಮ ಅರಳಿದ ಕಣ್ಣುಗಳಿಂದ ಆ ಕಾರುಣ್ಯಸಿಂಧುವೆನಿಸಿದ ತೇಜೋಮಹಿಮನನ್ನು ದಿಟ್ಟಿಸಿ ನೋಡುತ್ತಾ ನಿಂತಿದ್ದುವು. ಹೀಗೆ ನೋಡುತ್ತ, ನೋಡುತ್ತ ತಮ್ಮ ವಿಶಾಲವಾದ ಕಣ್ಣುಗಳ ಸಾರ್ಥಕ್ಯಪಡೆದುವು (ಪ್ರಕಾಮವಿಸ್ತಾರಫಲಂ).

ಅನ್ವಯಃ:—ಧನುರ್ಭೃತೋಽಪ್ಯಸ್ಯ ವಿಶಂಕೈಃ ಅಂತಃಕರಣೈಃ ದಯಾರ್ದ್ರಭಾವಂ (ಇತಿ) ಆಖ್ಯಾತಂ ವಪುಃ ವಿಲೋಕಯಂತ್ಯಃ ಹರಿಣ್ಯಃ ಅಕ್ಷ್ಣಾಂ ಪ್ರಕಾಮವಿಸ್ತಾರಫಲಮ್ ಆಪುಃ ॥

ಧನುಃ ಬಿಭೃತಿ ಇತಿ ಧನುರ್ಭೃತ್, ತಸ್ಯ । ದಯಯಾ ಆರ್ದ್ರಭಾವಃ ತಮ್ । ವಿಗತಾ ಶಂಕಾ ಯೇಭ್ಯಸ್ತಾನಿ—ವಿಶಂಕಾನಿ, ತೈಃ । ಪ್ರಕಾಮಶ್ಚಾಸೌ ವಿಸ್ತಾರಶ್ಚ । ಪ್ರಕಾಮವಿಸ್ತಾರಸ್ಯ ಫಲಂ । ಅಪ—ಅಪತುಃ—ಅಪುಃ । ಆಪಥ—ಆಪಥುಃ—ಆಪ । ಆಪ—ಆಪಿವ—ಆಪಿಮ । ಆಪ್ಲೃ—ವ್ಯಾಪ್ತೌ—ಲಿಟ್—ಪ್ರ.ಪು.ಬ.॥

ಧನುರ್ಭೃತಃ ಅಪಿ = ಬಿಲ್ಲನ್ನು ಧರಿಸಿದವನಾದರೂ, ಅಸ್ಯ = ಈ ದಿಲೀಪನ, ವಿಶಂಕೈಃ = ಭೀತಿಯಿಲ್ಲದ, ಅಂತಃಕರಣೈಃ = (ಮನಸ್ಸು) ಅಂತಃಕರಣಗಳಿಂದ, ದಯಾರ್ದ್ರಭಾವಂ = ದಯಾಳುತನ, ಸಾಧುಸ್ವಭಾವ, ಆಖ್ಯಾತಂ = ಹೇಳುವ, ವಪುಃ =

ಶರೀರವನ್ನು, ವಿಲೋಕಯಂತ್ಯಃ = ನೋಡುತ್ತಿರುವ, ಹರಿಣ್ಯಃ = ಹೆಣ್ಣುಜಿಂಕೆಗಳು, ಅಕ್ಷ್ಣಾಂ=ಕಣ್ಣುಗಳ, ಪ್ರಕಾಮವಿಸ್ತಾರಫಲಂ=ಅತ್ಯಂತ ವಿಶಾಲವಾದುದರ ಪ್ರಯೋಜನವನ್ನು, ಆಪುಃ = ಹೊಂದಿದುವು.

**12.** **ಸ ಕೀಚಕೈರ್ಮಾರುತಪೂರ್ಣರಂಧ್ರೈಃ ।**
**ಕೂಜದ್ಭಿರಾಪಾದಿತವಂಶಕೃತ್ಯಮ್ ॥**
**ಶುಶ್ರಾವ ಕುಂಜೇಷು ಯಶಃ ಸ್ವಮುಚ್ಚೈಃ ।**
**ಉದ್ಗೀಯಮಾನಂ ವನದೇವತಾಭಿಃ** ॥ ೧೨ ॥

ಆ ಕಾಡಿನಲ್ಲಿ ವನದೇವತೆಗಳು ತನ್ನ ಕೀರ್ತಿಗಾನಮಾಡುತ್ತಿರುವುದನ್ನು ಆ ನರೇಶನು ಕೇಳುತ್ತಾ ಸಾಗಿದನು. ಕಾಡಿನಲ್ಲಿ ಒತ್ತೊತ್ತಾಗಿ ಬೆಳೆದಿರುವ ಬಿದಿರುಮೆಳೆಗಳ ಮೂಲಕ ಗಾಳಿಯು ಸಾಗಿಹೋಗುವಾಗ ಕೊಳಲ ದನಿಯನ್ನು ಕೇಳಿದನು. ಬಿದಿರುಗಳನ್ನು ತುಂಬಿಗಳು, ಮರಕುಟ್ಟಿಗನ ಹಕ್ಕಿಗಳು ಕೊರೆದು ಮಾಡಿದ ತೂತುಗಳ ಮೂಲಕ ರಭಸದಿಂದ ಗಾಳಿಯು ಹಾದುಹೋಗುವಾಗ ಕೊಳಲಧ್ವನಿಯೇ (ವೇಣುಧ್ವನಿ, ವೇಣುಗಾನ) ಉಂಟಾಗುವುದು ಸಹಜ. ಆ ರಾಜನು ತಾನು ಆ ದಾರಿಯಾಗಿ ಹೋಗುವಾಗ ಅನಾಯಾಸವಾಗಿ ಕೊಳಲಿನ ಮಧುರಧ್ವನಿ(ಕೊಳಲಿನ ಗುಂಗುಂಗಾನ)ಯನ್ನು ಕೇಳಿ ಸಂತಸಗೊಂಡನು. ಆ ಮಹಾಮಹಿಮನ ಕೀರ್ತಿಗಾನವನ್ನು ಲತಾಕುಂಜಗಳಲ್ಲಿ ಕುಳಿತಿದ್ದ ವನದೇವತೆಗಳು ಗಾನಮಾಡಿದುವು, ಹಾಡಿ ಘೋಷಿಸಿದುವು (ಉದ್ಗೀಯಮಾನಂ). ಆಸ್ಥಾನದ ಎಲ್ಲಾ ವೈಭವವನ್ನು ಅವನು ಪ್ರಕೃತಿಮಾತೆಯ ಪರಿಸರದಲ್ಲಿ ಪಡೆದು ಮುದಪಡೆದನು.

ಅನ್ವಯಃ:—ಸ ಮಾರುತಪೂರ್ಣರಂಧ್ರೈಃ ಕೂಜದ್ಭಿಃ ಕೀಚಕೈಃ ಆಪಾದಿತವಂಶಕೃತ್ಯಮ್ ಕುಂಜೇಷು ವನದೇವತಾಭಿಃ ಉದ್ಗೀಯಮಾನಂ ಸ್ವಂ ಯಶಃ ಶುಶ್ರಾವ ॥

ಮಾರುತೇನ ಪೂರ್ಣಾನಿ ರಂಧ್ರಾಣಿ ಯೇಷಾಂ ತೇ—ಮಾರುತಪೂರ್ಣರಂಧ್ರಾಃ, ತೈಃ । ವಂಶಸ್ಯ ಕೃತ್ಯಂ । ಆಪಾದಿತಂ ವಂಶಕೃತ್ಯಂ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ—ಆಪಾದಿತವಂಶಕೃತ್ಯಮ್ । ವನಸ್ಯ ದೇವತಾಃ ವನದೇವತಾಃ ತಾಭಿಃ । ಶುಶ್ರಾವ—ಶುಶ್ರುವತುಃ—ಶುಶ್ರುವುಃ । ಶುಶ್ರುವಿಥ, ಶುಶ್ರೋಥ—ಶುಶ್ರುವಥುಃ—ಶುಶ್ರುವ। ಶುಶ್ರಾವ, ಶುಶ್ರವ—ಶುಶ್ರುವಿವ—ಶುಶ್ರುವಿಮ । ಶ್ರು—ಶ್ರವಣೇ—ಲಿಟ್ ಪ್ರ.ಪು.ಏ.॥

ಸಃ=ಆ ರಾಜನು, ಮಾರುತಪೂರ್ಣರಂಧ್ರೈಃ=ಗಾಳಿಯಿಂದ ತುಂಬಿದ ರಂಧ್ರಗಳುಳ್ಳ (ತೂತುಗಳುಳ್ಳ), ಕೂಜದ್ಭಿಃ=ಶಬ್ದಮಾಡುವ, ಕೀಚಕೈಃ=ಬಿದಿರುಮೆಳೆಗಳಿಂದ, ಆಪಾದಿತ ವಂಶಕೃತ್ಯಂ=ಸಂಪಾದಿಸಲ್ಪಟ್ಟ ಕೊಳಲುವಾದ್ಯವುಳ್ಳ, ಕುಂಜೇಷು=ಲತಾಗೃಹಗಳಲ್ಲಿ, ವನದೇವತಾಭಿಃ=ವನದೇವತೆಗಳಿಂದ, ಉಚ್ಚೈಃ=ಗಟ್ಟಿಯಾಗಿ, ಉದ್ಗೀಯಮಾನಂ= ಹಾಡುತ್ತಿರುವ, ಸ್ವ=ತನ್ನ, ಯಶಃ=ಕೀರ್ತಿಯನ್ನು, ಶುಶ್ರಾವ=ಕೇಳಿದನು.

**13.** **ಪೃಕ್ತಸ್ತುಷಾರೈರ್ಗಿರಿನಿರ್ಝರಾಣಾಂ ।**
**ಅನೋಕಹಾಕಂಪಿತಪುಷ್ಪಗಂಧೀ ॥**
**ತಮಾತಪಕ್ಲಾಂತಮನಾತಪತ್ರಂ ।**
**ಆಚಾರಪೂತಂ ಪವನಸ್ಸಿಷೇವೇ** ॥ ೧೩ ॥

ವ್ರತನಿಯಮದಿಂದ ಬದ್ಧನಾಗಿ ಚಕ್ರವರ್ತಿಚಿಹ್ನೆಯಾದ ಶ್ವೇತಚ್ಛತ್ರವನ್ನು ತ್ಯಜಿಸಿ ಬಿಸಿಲಿನಲ್ಲಿಯೇ ಸಂಚರಿಸುತ್ತಿದ್ದ ಪರಿಶುದ್ಧನಾದ ಆ ದಿಲೀಪಸಾರ್ವಭೌಮನನ್ನು ವಾಯುವು ಈ ತೆರನಾಗಿ ಉಪಚರಿಸಿತು. ಶುದ್ಧವಾದ ಗಾಳಿಯು ಶೈತ್ಯ, ಮಾಂದ್ಯ, ಸೌರಭ್ಯ ಎಂಬ ಮೂರು ಉತ್ಕೃಷ್ಟವಾದ ಗುಣಗಳನ್ನು ಹೊಂದಿದ್ದರೆ ಎಂತಹ ಆಯಾಸವನ್ನಾದರೂ ಹೋಗಲಾಡಿಸಬಲ್ಲುದು. ಇದೀಗ ಮಂದಮಾರುತವು ಬೆಟ್ಟಗುಡ್ಡಗಳ ಕಡೆಯಿಂದ ಬೀಸುತ್ತಿದೆ. ಅದು ಪರ್ವತದಲ್ಲಿ ಧುಮುಕುತ್ತಿರುವ ಝರಿಗಳನ್ನು, ಜಲಪಾತ, ಅಬ್ಬಿಗಳನ್ನು ಸ್ಪರ್ಶಿಸಿ ತುಂತುರುನೀರಹನಿಗಳನ್ನು ಒಳಗೊಂಡು ಅತಿಶೀತವಾಗಿ ಬೀಸಲಾರಂಭಿಸುತ್ತಿದೆ. ಹೀಗೆ ಮಂದವಾಗಿ ಮರದ ಮೇಲಿನಿಂದ ಬೀಸುತ್ತಾ ಬರುತ್ತಿರಲು ಕಾನನಪುಷ್ಪಗಳ ಸುವಾಸನೆಭರಿತವಾಗಿ ಪರಿಮಳಯುಕ್ತವಾಗಿ ಬೀಸುತ್ತಾ ಬರುತ್ತಿದೆ. ಇವೆರಡು ಗುಣಗಳ ಜೊತೆಗೆ ಮಾಂದ್ಯವೂ ಸೇರಿರುವುದು ಸಹಜವೇ. ಇದರಿಂದ ಕೊಡೆ ಅಥವಾ ಛತ್ರಿಯನ್ನು (ಶ್ವೇತಚ್ಛತ್ರ) ತಲೆಯ ಮೇಲೆ ಹಿಡಿದಷ್ಟೆ ಲಾಭ. ಹೀಗೆ ದಿಲೀಪ ಮಹಾರಾಜನಿಗೆ ಉಂಟಾದ ಬಿಸಿಲಿನ ತಾಪವನ್ನು ಹೋಗಲಾಡಿಸಿ ವಾಯುದೇವನು ಸುಖೋಲ್ಲಾಸವನ್ನು ಉಂಟುಮಾಡಿದನು.

ಅನ್ವಯ :—ಗಿರಿನಿರ್ಝರಾಣಾಂ ತುಷಾರೈಃ ಪೃಕ್ತಃ ಅನೋಕಹಾಕಂಪಿತಪುಷ್ಪಗಂಧೀ ಪವನಃ ಆತಪಕ್ಲಾಂತಮ್ ಅನಾತಪತ್ರಂ ಆಚಾರಪೂತಂ ತಂ ಸಿಷೇವೇ ॥

ಗಿರಿಷು ನಿರ್ಝರಾಃ, ತೇಷಾಮ್ । ಅಕಂಪಿತಾನಿ ಚ ತಾನಿ ಪುಷ್ಪಾಣಿ, ಅಕಂಪಿತಪುಷ್ಪಾಣಿ । ಅನೋಕಹಾನಾಂ ಆ—ಣಿ—ಅನೋ—ಣಿ । ಅನೋ—ಷ್ಪಾಣಾಂ ಗಂಧಃ ಅಸ್ಯ ಅಸ್ತೀತಿ=ಅನೋಕಹಾಕಂಪಿತಪುಷ್ಪಗಂಧೀ । ಆತಪೇನ ಕ್ಲಾಂತಃ ತಮ್ । ನ ವಿದ್ಯತೇ ಆತಪತ್ರಂ ಯಸ್ಯ ಸಃ ಅನಾತಪತ್ರಃ ತಮ್ । ಸಿಷೇವೇ—ಸಿಷಾವಾತೇ—ಸಿಷೇವಿರೇ ಇತ್ಯಾದಿ । ಷೇವೃ—ಸೇವನೇ ಲಿಟ್—ಪ್ರ,ಪು.ಏ. ॥

ಗಿರಿನಿರ್ಝರಾಣಾಂ=ಪರ್ವತದ ನೀರಿನ ಝರಿಗಳು, ತುಷಾರೈಃ=ತುಂತುರುನೀರ ಹನಿಗಳಿಂದ, ಪೃಕ್ತಃ=ಸಂಪರ್ಕಹೊಂದಿದ, ಅನೋಕಹಾಕಂಪಿತಪುಷ್ಪಗಂಧೀ=ಮರಗಳಲ್ಲಿ ಅಲ್ಪವಾಗಿ ಅಲ್ಲಾಡಿಸಲ್ಪಟ್ಟಿರುವ ಹೂವಿನ ಗಂಧವುಳ್ಳ, ಪವನ=ಗಾಳಿಯು, ಅನಾತಪತ್ರಂ=ಶ್ವೇತಚ್ಛತ್ರ ಇಲ್ಲದಿರುವ, ಆತಪಕ್ಲಾಂತಂ=ಬಿಸಿಲಿನಿಂದ ಬಳಲಿದ, ಆಚಾರಪೂತಂ =ಶುದ್ಧನಡತೆಯಿಂದ ಪವಿತ್ರನಾದ, ತಂ=ಆ ದಿಲೀಪನನ್ನು, ಸಿಷೇವೇ=ಸೇವಿಸಿತು.

**14. ಶಶಾಮವೃಷ್ಟ್ಯಾಪಿ ವಿನಾ ದವಾಗ್ನಿಃ ।**
**ಆಸೀದ್ವಿಶೇಷಾಫಲಪುಷ್ಪವೃದ್ಧಿಃ ॥**
**ಊನಂ ನ ಸತ್ತ್ವೇಷ್ವಧಿಕೋ ಬಬಾಧೇ ।**
**ತಸ್ಮಿನ್ವನಂ ಗೋಪ್ತರಿಗಾಹಮಾನೇ** ॥ ೧೪ ॥

ಭೂಮಿಯ ರಕ್ಷಕನಾದ, ಮಂಗಳಮೂರ್ತಿ ಇಕ್ಷ್ವಾಕುವಂಶಕುಲಲಲಾಮನು ಹೋಗುತ್ತಿದ್ದ ಎಡೆಗಳಲ್ಲಿ, ಅವನ ದರ್ಶನಮಾತ್ರದಿಂದ ಮಳೆಯು ಬಾರದೆಯೆ ಕಾಡುಕಿಚ್ಚು ಇದ್ದಕ್ಕಿದ್ದಂತೆ ಆರಿಹೋಯಿತು. ಮಳೆಯ ಹನಿ ಹುಯ್ಯದೆಯೆ ಅಡವಿಕಿಚ್ಚು ನಂದಿತು. ಅವನು ಕಾಲಿಟ್ಟೆಡೆ ಮರ, ಗಿಡ, ಬಳ್ಳಿಗಳು ಹೆಚ್ಚು ಹೆಚ್ಚು ಹೂ ಹಣ್ಣು, ಕಾಯಿಗಳನ್ನು

ಬಿಟ್ಟುವು. ಅವುಗಳ ಭಾರ ಹೆಚ್ಚಿತು. ಆ ಪುಣ್ಯಮೂರ್ತಿಯು ಪ್ರಿಯದರ್ಶನಮಾತ್ರ ದಿಂದ ವನಲಕ್ಷ್ಮಿಯು ಬೆಳೆಯಿಂದ ಪೆರ್ಚಿದಳು. ಆ ಶಾಂತಮೂರ್ತಿಯನ್ನು ಕಂಡೊಡನೆ ದುಷ್ಟಮೃಗಪಕ್ಷಿಗಳ ಸ್ವಾಭಾವಿಕವಾದ ಕ್ರೂರಗುಣ ಅಡಗಿತು. ಅವು ತಮ್ಮ ಭೇದ ಭಾವವನ್ನು ಮರೆತು ಅನ್ಯೋನ್ಯಮೈತ್ರಿಯಿಂದ ಬಾಳಿದುವು.

ಅನ್ವಯ:--ಗೋಪ್ತರಿ ತಸ್ಮಿನ್ ವನಂ ಗಾಹಮಾನೇ ವೃಷ್ಟ್ಯಾ ವಿನಾಪಿ ದಾವಾಗ್ನಿಃ ಶಶಾಮ. ಫಲಪುಷ್ಪವೃದ್ಧಿಃ ವಿಶೇಷಾ ಆಸೀತ್, ಸತ್ವೇಷು ಅಧಿಕಃ ಊನಂ ನ ಬಬಾಧೇ॥

ಶಮು—ಉಪಶಮೇ—ಲಿಟ್—ಪ್ರ.ಪು.ಏ. । ಶಶಾಮ—ಶೇಮತುಃ—ಶೇಮುಃ । ಶೇಮಿಥ—ಶೇಮಥುಃ—ಶೇಮ । ಶಶಾಮ, ಶಶಮ—ಶೇಮಿವ—ಶೇಮಿಮ । ಆಸೀತ್—ಅಸ—ಭುವಿ—ಲಙ್—ಪ್ರ.ಪು.ಏ.॥ ಫಲಾನಿ ಚ ಪುಷ್ಪಾಣಿ ಚ ತೇಷಾಂ ಸಮಾಹಾರಃ—ಫಲಪುಷ್ಪಂ ತಸ್ಯ ವೃದ್ಧಿಃ । ಬಾಧೃ—ವಿಲೋಡನೇ—ಬಬಾಧೇ—ಬಬಾಧಾತೇ—ಬಬಾಧಿರೇ—ಇತ್ಯಾದಿ । ಪ್ರ.ಪು.ಏ. ॥

ಗೋಪ್ತರಿ=ರಕ್ಷಕನಾದ, ತಸ್ಮಿನ್=ಆ ರಾಜನು, ವನಂ=ಕಾಡನ್ನು, ಗಾಹಮಾನೇ=(ಸತಿ) =ಪ್ರವೇಶಿಸುತ್ತಿರಲು,ವೃಷ್ಟ್ಯಾ ವಿನಾ ಅಪಿ=ಮಳೆ ಇಲ್ಲದಿದ್ದರೂ, ದವಾಗ್ನಿ—ಕಾಡ್ಗಿಚ್ಚು, ಶಶಾಮ=ಶಾಂತವಾಯಿತು, ಫಲಪುಷ್ಪವೃದ್ಧಿ=ಹಣ್ಣು ಹೂವುಗಳ ಸಮೃದ್ಧಿಯು, ವಿಶೇಷಾ=ಅಧಿಕವೂ, ಆಸೀತ್=ಆಯಿತು, ಸತ್ವೇಷು=ಪ್ರಾಣಿಗಳಲ್ಲಿ, ಅಧಿಕಃ—ಪ್ರಬಲ ವಾದ, ಊನಂ=ದುರ್ಬಲವಾದ ಜಿಂಕೆ ಇತ್ಯಾದಿ, ನ ಬಬಾಧೇ=ಪೀಡಿಸಲಿಲ್ಲ.

**15.** **ಸಂಚಾರಪೂತಾನಿ ದಿಗಂತರಾಣಿ।**
**ಕೃತ್ವಾ ದಿನಾಂತೇ ನಿಲಯಾಯ ಗಂತುಮ್ ॥**
**ಪ್ರಚಕ್ರಮೇ ಪಲ್ಲವರಾಗತಾಮ್ರಾ ।**
**ಪ್ರಭಾ ಪತಂಗಸ್ಯ ಮುನೇಶ್ಚ ಧೇನುಃ** ॥ ೧೫ ॥

ಸಾಯಂಕಾಲದ ವೇಳೆ ಬಾನು ಕೆಂಪಡರಿ, ಕೆಂಬಣ್ಣದಿಂದ ನೆರೆ ಬೆಳಗುತ್ತಿತ್ತು. ಆ ಸುರಧೇನು ಅದು ಕಾಡಿನ ನಾನಾ ಭಾಗದಲ್ಲಿ ಸಂಚರಿಸುತ್ತ ದಿಕ್ಕುದಿಕ್ಕುಗಳನ್ನು ಸೂರ್ಯನ ಬೆಳಕಿನಂತೆ ಪವಿತ್ರಗೊಳಿಸಿ ಸಾಯಂಕಾಲದ ವೇಳೆಗೆ ತನ್ನ ಮನೆಯನ್ನು ನೆನೆದು ಮರಳಿತು. ಅದರ ಹೊಳೆಯುವ ತನುಕಾಂತಿಯಿಂದ ದಿಗ್‌ದಿಗಂತವನ್ನು ಶುಚಿಗೈದು ಮರಳಲು ಉಜ್ವಗಿಸಿತು. ಸೂರ್ಯದೇವನು ಪ್ರಾತಃಕಾಲದಿಂದ ಪ್ರಾರಂಭಿಸಿ ದಿನದ ಅವಸಾನಕಾಲ ವಾದ ಸಾಯಂಕಾಲದ ತನಕ ತನ್ನ ಕಿರಣಮಾಲೆಯನ್ನು ಪಸರಿಸಿ ಪ್ರಪಂಚದ ಎಲ್ಲಾ ದಿಕ್ಕುಗಳಲ್ಲೂ ಪಸರಿಸಿ, ಉಜ್ವಲಗೊಳಿಸುವಂತೆ ಆ ಮುನಿಯ ಧೇನು ಆ ವನಭೂಮಿಯ ನಾನಾ ದಿಕ್ಕುಗಳಲ್ಲಿ ಮೇವಿಗಾಗಿ ತಿರುಗಿ ಸುತ್ತಾಡಿ ಆ ಪ್ರದೇಶವನ್ನು ಪವಿತ್ರಗೊಳಿಸಿತು. ಸೂರ್ಯನು ಪಶ್ಚಿಮದ ಗಿರಿಗೆ ತೆರಳಿದರೆ, ನಂದಿನಿಯು ತನ್ನ ವಾಸಸ್ಥಾನವಾದ ಮುನಿಯ ಕುಟೀರಕ್ಕೆ (ನಿಲಯಕ್ಕೆ) ತೆರಳಿತು.

ಅನ್ವಯ :—ಪಲ್ಲವರಾಗತಾಮ್ರಾ ಪತಂಗಸ್ಯ ಪ್ರಭಾ ಮುನೇಶ್ಚ ಧೇನುಃ ದಿಗಂತರಾಣಿ ಸಂಚಾರಪೂತಾನಿ ಕೃತ್ವಾ ದಿನಾಂತೇ ನಿಲಯಾಯ ಗಂತುಂ ಪ್ರಚಕ್ರಮೇ ॥

ಸಂಚಾರೇಣ ಪೂತಾನಿ । ದಿಶಾಂ ಅಂತರಾಣಿ । ದಿನಸ್ಯ ಅಂತಃ, ತಸ್ಮಿನ್ । ಪಲ್ಲವಸ್ಯ

ರಾಗಃ, ಪಲ್ಲವರಾಗಃ ಇವ ತಾಮ್ರಾ, ಪಲ್ಲವರಾಗತಾಮ್ರಾ। (ಪ್ರ)ಕ್ರಮು—ಪಾದ ವಿಕ್ಷೇಪೇ—ಲಿಟ್—ಪ್ರ.ಪು.ಏ.। ಚಕ್ರಮೇ—ಚಕ್ರಮಾತೇ—ಚಕ್ರಮಿರೇ ಇತ್ಯಾದಿ.

**16. ತಾಂ ದೇವತಾಪಿತ್ರತಿಥಿಕ್ರಿಯಾರ್ಥಾಂ।**
**ಅನ್ವಗ್ಯಯೌ ಮಧ್ಯಮಲೋಕಪಾಲಃ॥**
**ಬಭೌ ಚ ಸಾ ತೇನ ಸತಾಂ ಮತೇನ।**
**ಶ್ರದ್ಧೇವ ಸಾಕ್ಷಾದ್ವಿಧಿನೋಪಪನ್ನಾ ॥ ೧೬ ॥**

ಭೂಮಿಪತಿಯಾದ, ಮಧ್ಯಮ ಲೋಕಪಾಲನಾದ ದಿಲೀಪಮಹಾರಾಜನು (ಮಧ್ಯಮ ಲೋಕಪಾಲಃ) ಆ ನಂದಿನಿಯನ್ನು ಹೆಜ್ಜೆಹೆಜ್ಜೆಗೂ ಅನುಸರಿಸುತ್ತಾ ನಡೆದನು. ಆ ಗೋಮಾತೆಯೋ ದೇವ, ಪಿತೃ, ಅತಿಥಿಗಳ ಸೇವೆಗೆ ಬೇಕಾದ ದ್ರವ್ಯಗಳನ್ನು, ಪವಿತ್ರ ವಸ್ತುಗಳನ್ನು ಒದಗಿಸುವ ಮಹಾಮಹಿಮಳಾದ ಕಾರುಣ್ಯಮಯಿ ಕಾಮಧೇನು. ಆ ರಾಜಮೌಳಿಯು ಆ ಧೇನುವನ್ನು ಅತ್ಯಂತಶ್ರದ್ಧೆಯಿಂದ ಎಡೆಬಿಡದೆ ಭಕ್ತಿಯಿಂದ ಅನುಸರಿಸುತ್ತಿದ್ದನು. ಆಸ್ತಿಕ್ಯಬುದ್ಧಿಯಿಲ್ಲದೆ ಮಾಡಿದ ಸತ್ಕಾರ್ಯವು ಎಂದೂ ಶೋಭಿಸ ಲಾರದು. ಮಹಿಮಾಸಂಪನ್ನಳಾದ ಆ ಗೋಮಾತೆಯು ಕ್ಷೀರಾದಿ ಉತ್ತಮ ದ್ರವ್ಯಗಳನ್ನು ಕಾಲಕಾಲಕ್ಕೆ ಒದಗಿಸುವುದರಿಂದ ಆ ಮಹಾಮುನಿಯ ಯಾಗಾದಿಕ್ರಿಯೆಗಳು, ಹವನ, ಹೋಮಾದಿಗಳು, ಪಿತೃಗಳ ಶ್ರಾದ್ಧಾದಿ ಅಪರಕಾರ್ಯಗಳು, ಅತಿಥಿಸತ್ಕಾರಗಳು, ದಾನಾದಿ ಪುಣ್ಯಕಾರ್ಯಗಳು ಯಥಾವತ್ತಾಗಿ ನಡೆಯುತ್ತಿದ್ದುವು. ಪ್ರತ್ಯಕ್ಷಳಾದ ವಿಧಿ ಯನ್ನು, ಶ್ರದ್ಧೆಯು ಅನುಸರಿಸಿ ನಡೆದಂತೆ, ಅವೆರಡೂ ಒಮ್ಮತದಿಂದಿರುವಂತೆ ಆಸ್ತಿಕ್ಯ ಬುದ್ಧಿಯುಳ್ಳ ದಿಲೀಪಸಾಮ್ರಾಟನು ಆ ನಂದಿನಿಯನ್ನು ಜೊತೆಗೂಡಿ ನಡೆಯುತ್ತಿದ್ದನು.

ಅನ್ವಯ :—ಮಧ್ಯಮಲೋಕಪಾಲಃ ದೇವತಾಪಿತೃತಿಥಿಕ್ರಿಯಾರ್ಥಾಂ ತಾಮ್ ಅನ್ವಗ್ಯಯೌ। ಸತಾಂ ಮತೇನ ತೇನ ಸಾ ಸಾಕ್ಷಾತ್ ವಿಧಿನೋಪಪನ್ನಾ ಶ್ರದ್ಧೇವ ಚ ಬಭೌ॥

ದೇವತಾಶ್ಚ, ಪಿತರಶ್ಚ, ಅತಿಥಯಶ್ಚ—ದೇವತಾಪಿತ್ರತಿಥಯಃ। ದೇವತಾಪಿತ್ರ ತಿಥೀನಾಂ ಕ್ರಿಯಾ ಏವ ಅರ್ಥಃ ಯಸ್ಯಾಃ ಸಾ। ತಾಂ ದೇವಪಿತ್ರತಿಥಿಕ್ರಿಯಾರ್ಥಾ। ತಾಮ್। ಯಯೌ ಯಯತುಃ—ಯಯುಃ। ಯಯಿಥ, ಯಯಾಥ—ಯಯಥುಃ—ಯಯ।ಯಯೌ—ಯಯಿವ—ಯಯಿಮ। ಯಾ—ಪ್ರಾಪಣೇ—ಲಿಟ್—ಪ್ರ.ಪು.ಏ.। ಮಧ್ಯಮಶ್ಚಾಸೌ ಲೋಕಶ್ಚ। ಮಧ್ಯಮಲೋಕಸ್ಯ ಪಾಲಃ। ಬಭೌ—ಬಭತುಃ—ಬಭುಃ। ಇತ್ಯಾದಿ। ಭಾ—ದೀಪ್ತೌ—ಲಿಟ್—ಪ್ರ.ಪು.ಏ.॥

ಮಧ್ಯಮಲೋಕಪಾಲಃ=ಭೂಮೀಪತಿ,ದೇವತಾಪಿತ್ರತಿಥಿಕ್ರಿಯಾರ್ಥಾಂ=ದೇವ, ಪಿತೃ, ಅತಿಥಿಗಳ ಯಾಗಾದಿಗಳಿಗೋಸ್ಕರ, ತಾಂ=ಆನಂದಿನಿಯನ್ನು, ಅನ್ವಗ್ಯಯೌ=ಪ್ರತಿಹೆಜ್ಜೆ ಯಿಂದಲೂ ಅನುಸರಿಸಿದನು, ತೇನ=ಆ ದಿಲೀಪನಿಂದ, ಉಪಪನ್ನಾ=ಕೂಡಿದ, ಸಾ= ಆಹಸುವು, ಸತಾಂ ಮತೇನ=ಸಜ್ಜನರಿಗೆ ಸಮ್ಮತವಾದ, ವಿಧಿನಾ=ಅನುಷ್ಠಾನದಿಂದ, ಉಪಪನ್ನಾ=ಕೂಡಿದ, ಸಾಕ್ಷಾತ್=ಪ್ರತ್ಯಕ್ಷವಾದ, ಶ್ರದ್ಧಾ ಇವ=ಆಸ್ತಿಕ್ಯಬುದ್ಧಿಯುಳ್ಳ ಬಭೌ ಚ=ಶೋಭಿಸಿತು.

17. ಸಪಲ್ವಲೋತ್ತೀರ್ಣವರಾಹಯೂಥಾ ।
ನ್ಯಾವಾಸ ವೃಕ್ಷೋನ್ಮುಖಬರ್ಹಿಣಾನಿ ॥
ಯಯೌ ಮೃಗಾಧ್ಯಾಸಿತ ಶಾದ್ವಲಾನಿ ।
ಶ್ಯಾಮಾಯಮಾನಾನಿ ವನಾನಿ ಪಶ್ಯನ್ ॥ ೧೭ ॥

( ಪ್ರಕೃತಿಯ (ನಿಸರ್ಗದ) ಸೊಬಗನ್ನು ನೋಡುತ್ತಾ ಆ ರಾಜೇಂದ್ರನು ಆ ಕಾಡು ದಾರಿಯಾಗಿ ಬರುತ್ತಿದ್ದನು. ಅಲ್ಲಲ್ಲಿ ಚಿಕ್ಕ ಚಿಕ್ಕ ಜಲಾಶಯಗಳಲ್ಲಿ ಮುಲಗಿ, ಹೊರಳಾಡಿ ಕೆಸರಿನಿಂದ ಮೇಲೆದ್ದು ಬರುತ್ತಿರುವ ಕರಿಬಣ್ಣ, ಬೂದುಬಣ್ಣ ಮಿಶ್ರಿತ ಕಾಡುಹಂದಿಗಳ ಹಿಂಡನ್ನು ಕಂಡು ಸಂತಸಗೊಂಡನು. ನವಿಲುಗಳು (ಕೇಕಿಗಳು) ತಮ್ಮ ಆವಾಸಸ್ಥಾನಗಳಾದ ಮರಗಳ ಮೇಲೆ, ಮೇಲ್ಮುಖಮಾಡಿ ಕುಳಿತು ತಮ್ಮ ಕಡುನೀಲಬಣ್ಣದ ಗರಿಗಳನ್ನು ಕೆಳಕ್ಕೆ ಬಿಟ್ಟು ಅಂದವಾಗಿ ಕುಳಿತಿರುವುದನ್ನು ಕಂಡು ಆ ಮನುಜೇಂದ್ರನು ಮುದಗೊಂಡನು!(ಮೊದಲೇ ನೀಲವಾಗಿ ಕಾಣುತ್ತಿದ್ದ ವನಗಳು, ನವಿಲುಗಳ (ಮಯೂರಗಳ) ಕಡುನೀಲಿಬಣ್ಣವನ್ನೂ ಜೊತೆಯಲ್ಲಿಯೇ ಕಂಡಾಗ ಕಪ್ಪು ಬಣ್ಣವು ಕಪ್ಪು ಬಣ್ಣಕ್ಕೆ ಅಂಟಿದಂತೆ ನಯನಮನೋಹರವಾಗಿ ಕಂಡಿತು. ಕಪ್ಪು ಬಣ್ಣದಿಂದ (ಕರಿಬಣ್ಣ) ರಾಜಿಸುವ (ಶ್ಯಾಮಾಯಮಾನಾನಿ) ವನಗಳನ್ನು ನೋಡುತ್ತಾ ಆನಂದದಿಂದ ನಂದಿನಿಯ (ಗೋವಿನ) ಜೊತೆಯಲ್ಲಿ ನಡೆದನು. ಅದು ಅಲ್ಲದೆ ಅಲ್ಲಲ್ಲಿ ಹಸುರಾದ ಹುಲ್ಲುಗಾವಲಲ್ಲಿ ಜಿಂಕೆಗಳ ಹಿಂಡು ಹೊಂಬಣ್ಣದಿಂದ ಪ್ರಕಾಶಿಸುತ್ತ, ದಿಕ್ಕೆಲ್ಲವನ್ನು ಹೊಂಬಣ್ಣದಿಂದ ಬೆಳಗಿಸುತ್ತ ಓಡಾಡುವ ದೃಶ್ಯವನ್ನು ಕಂಡು ಆನಂದದಿಂದ ಅವನ ಭೂಮಿಯಲ್ಲಿ ಮುನ್ನಡೆದನು. ಪ್ರಕೃತಿಮಾತೆಯ ವೈಮಾಟದ ರಸದೂಟವನ್ನು ಸವಿಯುತ್ತ ಆ ರವಿಕುಲಸಾರ್ವಭೌಮನು ಮುಂದೆ ಮುಂದೆ ಹೋದನು. )

ಅನ್ವಯ :—ಸಪಲ್ವಲೋತ್ತೀರ್ಣವರಾಹಯೂಥಾನಿ ಆವಾಸವೃಕ್ಷೋನ್ಮುಖಬರ್ಹಿಣಾನಿ ಮೃಗಾಧ್ಯಾಸಿತ ಶಾದ್ವಲಾನಿ ಶ್ಯಾಮಾಯಮಾನಾನಿ ವನಾನಿ ಪಶ್ಯನ್ ಯಯೌ ॥

ಪಲ್ವಲೇಭ್ಯಃ ಉತ್ತೀರ್ಣಾಃ । ಪಲ್ವಲೋತ್ತೀರ್ಣಾಶ್ಚ ತೇ ವರಾಹಾಶ್ಚ । ಪ... ಹಾಣಾಂ ಯೂಥಾನಿ ಯೇಷು ತಾನಿ—ಪಲ್ವ...ಥಾನಿ । ಆವಾಸಸ್ಯ ವೃಕ್ಷಾಃ । ಆವಾ...—ಕ್ಷೇಷು ಉನ್ಮುಖಾಃ ಬರ್ಹಿಣಃ ಯೇಷು ತಾನಿ ॥ ಆ...ಣಾನಿಮೃಗೈಃ ಅಧ್ಯಾಸಿತಾಃ ಶಾದ್ವಲಾಃ ಯೇಷು ತಾನೀ ಮೃಗಾ...ದ್ವಲಾನಿ । ಶಾದಾಃ ಏಷು ಸಂತಿ ಇತಿ ಶಾದ್ವಲಾಃ । ಶ್ಯಾಮಾನಿ ಭವಂತಿ ಇತಿ ಶ್ಯಾಮಾಯಮಾನಾನಿ । ಯಯೌ—ಯಾ—ಪ್ರಾಪಣೇ—ಪ್ರ.ಪು.ಏ. ॥

ಸಃ=ಆ ರಾಜನು, ಪಲ್ವಲೋತ್ತೀರ್ಣವರಾಹಯೂಥಾನಿ=ಅತ್ಯಲ್ಪನೀರಿರುವ ಹೊಂಡದಿಂದ ಮೇಲೆದ್ದು ಬರುವ ಕಾಡುಹಂದಿಗಳ ಸಮೂಹವನ್ನು, ಆವಾಸವೃಕ್ಷೋನ್ಮುಖಬರ್ಹಿಣಾನಿ=ವಾಸವಾಗಿರುವ ಮರದಲ್ಲಿ ಮೇಲ್ಮುಖ ಮಾಡಿ ಕುಳಿತಿರುವ ನವಿಲುಗಳಿರುವ, ಶ್ಯಾಮಾಯಮಾನಾನಿ = ನೀಲಬಣ್ಣದಂತೆ ತೋರುವ, ಮೃಗಾಧ್ಯಾಸಿತ ಶಾದ್ವಲಾನಿ = ಜಿಂಕೆಗಳಿಂದ ಆಶ್ರಯಿಸಿದ ಹುಲ್ಲುಗಾವಲಿರುವ, ವನಾನಿ = ಕಾಡುಗಳನ್ನು, ಪಶ್ಯನ್ = ನೋಡುತ್ತ, ಯಯೌ = ಹೋದನು.

**18. ಆಪೀನಭಾರೋದ್ವಹನಪ್ರಯತ್ನಾತ್ ।**
**ಗೃಷ್ಟಿರ್ಗುರುತ್ವಾದ್ವಪುಷೋ ನರೇಂದ್ರಃ ॥**
**ಉಭಾವಲಂ ಚಕ್ರತುರಂಚಿತಾಭ್ಯಾಂ ।**
**ತಪೋವನಾವೃತ್ತಿಪಥಂ ಗತಾಭ್ಯಾಮ್ ॥ ೧೮ ॥**

ನಂದಿನೀ ಧೇನುವು ಒಂದು ಕರುಹಾಕಿದ, ತುಂಬಿದ ದೊಡ್ಡ ಕೆಚ್ಚಲಿನ ಹಸು. ಅದು ಕೆಚ್ಚಲಿನ ಭಾರದಿಂದ ನಿಧಾನವಾಗಿಯೇ (ಮಂದಗಮನದಿಂದ) ಬರುತ್ತಿತ್ತು. ಅದನ್ನು ಅನುಸರಿಸಿ ಮಾನವಾಧೀಶ ದಿಲೀಪಸಾಮ್ರಾಟನು ಪುರುಷಸಿಂಹನಂತೆ, ಗಜರಾಜನಂತೆ, ಸರ್ವಶ್ರೇಷ್ಠವಾದ ಪುರುಷಲಕ್ಷಣಗಳಿಂದ, ವೈಭವೋಪೇತನಾಗಿ ಆ ಉದಾತ್ತ ಪುರುಷೋತ್ತಮನು ಬರುತ್ತಿದ್ದನು.) ಅವನ ಮೇರೊಡಲು. ಘನತೆ ತುಂಬಿದ ಗಂಭೀರ ನಡಿಗೆ (ಸಿಂಹದ ನಡಿಗೆ, ಗಾಂಭೀರ್ಯದ ನಡಿಗೆ), ಹಸುವಿನ ಬಹುಸುಂದರವಾದ ಮಂದ ನಡಿಗೆ ಆಶ್ರಮದ ಆ ಕಾಡುದಾರಿಗೆ ಅತೀವ ಶೋಭೆಯನ್ನು ನೀಡಿತು. ಅವರ ನಡಿಗೆಯಿಂದ ಆ ಮಾರ್ಗವೇ (ತಪೋವನೇ ಆವೃತ್ತಿಪಥು) ಅಲಂಕೃತವಾದಂತೆ ತೋರಿತು.

ಅನ್ವಯ:—ಗೃಷ್ಟಿ ನರೇಂದ್ರಶ್ಚ ಉಭೌ (ಯಥಾ ಕ್ರಮಮ್) ಆಪೀನಭಾರೋದ್ವಹನ ಪ್ರಯತ್ನಾತ್ ವಪುಷೋ ಗುರುತ್ವಾಚ್ಚ ಅಂಚಿತಾಭ್ಯಾಂ ಗತಾಭ್ಯಾಂ ತಪೋವನಾವೃತ್ತಿ ಪಥಮ್ ಅಲಂ ಚಕ್ರತುಃ ॥

ಆಪೀನಸ್ಯ ಭಾರಃ, ತಸ್ಯ ಉದ್ವಹನಂ, ಆಪೀನಭಾರೋದ್ವಹನೇ ಪ್ರಯತ್ನಃ, ತಸ್ಮಾತ್ । ಗುರೋರ್ಭಾವಃ ಗುರುತ್ವಮ್ ॥ ನರಾಣಾಂ ಇಂದ್ರಃ । ತಪೋವನಾತ್ ಆವೃತ್ತಿಃ । ತಪೋವನಾ ಆವೃತ್ತೇಃ ಪನ್ಥಾಃ—ತಪೋವನಾವೃತ್ತಿಪಥಃ—ಸಮಾಸಾಂತ್ಯದಲ್ಲಿ ಪಥಿನ್ ಶಬ್ದಕ್ಕೆ "ಅ" ಪ್ರತ್ಯಯ ಬಂದಿದೆ. ಅಲಂ ಉಪಪದ. ಚಕಾರ—ಚಕ್ರತುಃ—ಚಕ್ರುಃ ಇತ್ಯಾದಿ । ಡುಕೃಞ್—ಕರಣೇ—ಲಿಟ್—ಪ್ರ.ಪು.ದ್ವಿ. ॥

ಗೃಷ್ಟಿಃ = ಒಂದು ಸಲ ಕರುಹಾಕಿದ ಹಸು—ಗೃಷ್ಟಿಃ ಸಕೃತ್ಪ್ರಸೂತಾ ಗೌಃ (ಅಮರ ಕೋಶ) ಆಪೀನಭಾರೋದ್ವಹನಪ್ರಯತ್ನಾತ್ = ಕೆಚ್ಚಲಿನ ಭಾರವನ್ನು ಹೊರುವುದರಿಂದಾಗುವ ಪ್ರಯಾಸದಿಂದ (ಊಧಸ್ಸು, ಕ್ಲೀಬಮಾಪೀನಂ), ನರೇಂದ್ರಶ್ಚ = ರಾಜಾ ದಿಲೀಪನು, ವಪುಷಃ = ಶರೀರದ, ಗುರುತ್ವಾತ್ = ಆಧಿಕ್ಯದಿಂದಲೂ, ಉಭೌ = ಆ ಇಬ್ಬರು, ಅಂಚಿತಾಭ್ಯಾಂ=ಮನೋಹರವಾದ, ಗತಾಭ್ಯಾಂ=ಗಮನಗಳಿಂದ, ತಪೋವನಾವೃತ್ತಿಪಥಃ = ತಪೋವನಕ್ಕೆ ಹಿಂದಕ್ಕೆ ಬರುವ ದಾರಿ, ಅಲಂಚಕ್ರತುಃ = ಅಲಂಕರಿಸಿದರು.

**19. ವಸಿಷ್ಠಧೇನೋರನುಯಾಯಿನಂ ತಂ ।**
**ಆವರ್ತಮಾನಮ್ ವನಿತಾ ವನಾಂತಾತ್ ॥**
**ಪಪೌ ನಿಮೇಷಾಲಸಪಕ್ಷ್ಮಪಂಕ್ತಿಃ ।**
**ಉಪೋಷಿತಾಭ್ಯಾಮಿವಲೋಚನಾಭ್ಯಾಮ್ ॥ ೧೯ ॥**

ಸಾಯಂಕಾಲದ ವೇಳೆಗೆ ಹಸುವಿನೊಂದಿಗೆ ಹಿಂದಿರುಗುತ್ತಿರುವ ತನ್ನ ಪತಿಯನ್ನು ಸಂದರ್ಶನಾಪೇಕ್ಷಿಯು ಬಹಳ ಕಾತುರಳಾಗಿ, ಉತ್ಸುಕತೆಯಿಂದ, ಎವೆಯಿಕ್ಕದ ಕಣ್ಣುಗಳಿಂದ ನೋಡಿದಳು. ಅವಳು ದಿನವಿಡೀ ನೋಡದೆ, ಯಾವಾಗ ನೋಡುವೆನೆಂಬ

ಕುತೂಹಲಭರಿತಳಾಗಿದ್ದಳು (ಜನಿತರಾಗಾತಿಶಯದೊಳು). ಅವಳು ನೋಡುತ್ತಿದ್ದ ರೀತಿಯು ಬಹಳ ಚೆಲುವಾಗಿತ್ತು. ವ್ರತೋಪವಾಸ ಮಾಡಿದವರು, ತಮ್ಮ ಬಾಯಾರಿಕೆಯನ್ನು ಹೋಗಲಾಡಿಸಲು ಬಹಳ ವೇಗವಾಗಿ ನೀರನ್ನು ಕುಡಿಯುವಂತೆ, ಆ ಸತಿಯು ಎವೆಮಿಡುಕದ ಅಗಲವಾದ ಕಣ್ಣುಗಳಿಂದ ನೋಡುತ್ತ, ತನ್ನ ಕಣ್ಣುಗಳ ತೃಷೆಯನ್ನು ಹೋಗಲಾಡಿಸುವಂತೆ ಕಣ್ತುಂಬ ನೋಡಿ ಸಂತಸಗೊಂಡಳು.

ಅನ್ವಯ :—ವಸಿಷ್ಠಧೇನೋಃ ಅನುಯಾಯಿನಂ ವನಾಂತಾತ್ ಆವರ್ತಮಾನಂ ತಂ ವನಿತಾ ನಿಮೇಷಾಲಸಪಕ್ಷ್ಮಪಂಕ್ತಿಃ ಉಪೋಷಿತಾಭ್ಯಾಮಿವ ಲೋಚನಾಭ್ಯಾಮ್ ಪಪೌ ॥

ವಸಿಷ್ಠಸ್ಯ ಧೇನುಃ, ತಸ್ಯ । ವನಸ್ಯ ಅಂತಃ ತಸ್ಮಾತ್ । ಪಕ್ಷ್ಮಣಾಂ ಪಂಕ್ತಿಃ, ನಿಮೇಷೈಃ ಅಲಸಾ । ನಿಮೇಷಾಲಸಾ ಪಕ್ಷ್ಮಪಂಕ್ತಿಃ ಯಸ್ಯಾಃ ಸಾ । ಪಪೌ—ಪಪತುಃ—ಪಪುಃ । ಪಪಿಥ, ಪಪಾಥ—ಪಪಥುಃ—ಪಪ । ಪಪೌ—ಪಪಿವ—ಪಪಿಮ । ಪಾ—ಪಾನೇ—ಲಿಟ್—ಪ್ರ.ಪು.ಏ. ॥

ವಸಿಷ್ಠಧೇನೋಃ = ನಂದಿನಿಯ, ಅನುಯಾಯಿನಂ = ಅನುಚರನಾದ, ವನಾಂತಾತ್ = ಕಾಡಿನಿಂದ, ಆವರ್ತಮಾನಂ = ಹಿಂದಿರುಗಿ ಬರುವ, ತಂ = ಆ ದಿಲೀಪನನ್ನು, ನಿಮೇಷಾಲಸಪಕ್ಷ್ಮಪಂಕ್ತಿಃ = ನಿಮೇಷರಹಿತವಾದ ರೆಪ್ಪೆಗಳ (ಎವೆಗಳ) ಕೂದಲ ಸಾಲುಗಳುಳ್ಳ, ವನಿತಾ = ಸ್ತ್ರೀ, ಲೋಚನಾಭ್ಯಾಂ = ಕಣ್ಣುಗಳಿಂದ, ಉಪೋಷಿತಾಭ್ಯಾಮಿವ = ಉಪವಾಸ ಮಾಡಿರುವಂತೆ ಇರುವ, ಪಪೌ = ನೋಡಿದಳು.

20. ಪುರಸ್ಕೃತಾ ವರ್ತ್ಮನಿ ಪಾರ್ಥಿವೇನ ।
ಪ್ರತ್ಯುದ್ಗತಾ ಪಾರ್ಥಿವಧರ್ಮಪತ್ನ್ಯಾ ॥
ತದಂತರೇ ಸಾ ವಿರರಾಜ ಧೇನುಃ ।
ದಿನಕ್ಷಪಾಮಧ್ಯಗತೇವ ಸಂಧ್ಯಾ ॥ ೨೦ ॥

ಆಕಳು ಮುಂದಿನಿಂದ ನಡೆಯುತ್ತಿರಲು ಅರಸನು ಹಿಂದಿನಿಂದ ಅನುಸರಿಸುತ್ತಾ ಬರುತ್ತಿರುವುದನ್ನು ಕಂಡು ಇದಿರುಗೊಳ್ಳಲು ಆ ರಾಜನ ಧರ್ಮಪತ್ನಿಯಾದ ಸತೀಶಿರೋಮಣಿಯಾದ ಸುದಕ್ಷಿಣಾದೇವಿಯು ಬಂದಳು. ಆಗ ಗೋವು ಹಗಲು ಮತ್ತು ರಾತ್ರಿಕಾಲದ ಮಧ್ಯೆ ಶೋಭಿಸುವ ಸಂಧ್ಯಾಕಾಲದಂತೆ (ಸಂಜೆಯಂತೆ) (ದಿನಕ್ಷಪಾಮಧ್ಯಗತೇವ ಸಂಧ್ಯಾ) ಆ ದಂಪತಿಗಳ ಮಧ್ಯೆ ರಾರಾಜಿಸುತ್ತಿತ್ತು.)

ಅನ್ವಯ :—ವರ್ತ್ಮನಿ ಪಾರ್ಥಿವೇನ ಪುರಸ್ಕೃತಾ ಪಾರ್ಥಿವಧರ್ಮಪತ್ನ್ಯಾ ಪ್ರತ್ಯುದ್ಗತಾ ಸಾ ಧೇನುಃ ತದಂತರೇ ದಿನಕ್ಷಪಾಮಧ್ಯಗತಾ ಸಂಧ್ಯಾ ಇವ ವಿರರಾಜ ॥

ಧರ್ಮಾರ್ಥಂ ಪತ್ನೀ । ಪಾರ್ಥಿವಸ್ಯ ಧರ್ಮಪತ್ನೀ । ತಯಾ । ತಯೋಃ ಅಂತರೇ । ದಿನಂ ಚ ಕ್ಷಪಾ ಚ । ದಿನಕ್ಷಪೇ । ದಿನಕ್ಷಪಯೋಃ ಮಧ್ಯಂ । ದಿನಕ್ಷಪಾಮಧ್ಯಂಗತಾ । ವಿ—ಉಪಸರ್ಗ । ರರಾಜ—ರೇಜತುಃ—ರೇಜುಃ । ರೇಜಿಥ—ರೇಜಥುಃ—ರೇಜ । ರರಾಜ—ರೇಜಿವ—ರೇಜಿಮ । ರಾಜೃ—ದೀಪ್ತೌ—ಲಿಟ್ ॥

ವರ್ತ್ಮನಿ = ಮಾರ್ಗದಲ್ಲಿ, ಪಾರ್ಥಿವೇನ = ದಿಲೀಪರಾಜನಿಂದ, ಪುರಸ್ಕೃತಾ = ಮುಂದೆ ಮಾಡಲ್ಪಟ್ಟ, ಪಾರ್ಥಿವಧರ್ಮಪತ್ನ್ಯಾ = ರಾಜನ ಸಹಧರ್ಮಿಣಿಯಾದ, ಪ್ರತ್ಯುದ್ಗತಾ

= ಎದುರುಗೊಳ್ಳಲ್ಪಟ್ಟ, ಸಾ ಧೇನುಃ=ಆ ಹಸುವು, ತದಂತರೇ=ಆ ದಂಪತಿಗಳ ಮಧ್ಯದಲ್ಲಿ, ದಿನಕ್ಷಪಾಮಧ್ಯಗತಾ = ದಿನರಾತ್ರಿಗಳ ಮಧ್ಯದಲ್ಲಿರುವ, ಸಂಧ್ಯಾ ಇವ = ಸಂಧ್ಯಾಕಾಲದಂತೆ, ವಿರರಾಜ = ಶೋಭಿಸಿತು.

21. ಪ್ರದಕ್ಷಿಣೀಕೃತ್ಯ ಪಯಸ್ವಿನೀಂ ತಾಂ ।
ಸುದಕ್ಷಿಣಾ ಸಾಕ್ಷತಪಾತ್ರಹಸ್ತಾ ॥
ಪ್ರಣಮ್ಯ ಚಾನರ್ಚ ವಿಶಾಲಮಸ್ಯಾಃ ।
ಶೃಂಗಾಂತರಂ ದ್ವಾರಮಿವಾರ್ಥಸಿದ್ಧೇಃ ॥ ೨೧ ॥

ಅಕ್ಷತೆಯ ಪಾತ್ರೆಯನ್ನು ಹಿಡಿದುಕೊಂಡು ಬಂದು ಸುದಕ್ಷಿಣೆಯು ಅನುಲಭಕ್ತಿಯಿಂದ ಕ್ಷೀರನಿಧಿಯಾಗಿರುವ ನಂದಿನಿ ಧೇನುವನ್ನು ಪ್ರದಕ್ಷಿಣೆಮಾಡಿ (ಬಲವಂದು) ಮಣಿದು ಶಿರಬಾಗಿ ವಂದಿಸಿದಳು (ನಮಿಸಿದಳು). ತಕ್ಷಣವೇ ಎದ್ದುನಿಂತು ಲಕ್ಷಣವಾದ ಕೋಡುಗಳ (ಶೃಂಗಾಂತರಂ) ಮಧ್ಯೆ ಎಸೆವ ವಿಶಾಲವಾದ ಹಣೆಯ ಭಾಗವನ್ನು ಕುಂಕುಮಾಕ್ಷತೆಗಳಿಂದ (ಅಕ್ಷತಾಃ ನ ಕ್ಷತಂ ಯೇಷಾಂ ತೇ) ಅರ್ಚಿಸಿದಳು. ಅರ್ಚಿಸಿ ಪೂಜಿಸಿದಳು. ಆ ವಿಶಾಲವಾದ ಗೋವಿನ ಹಣೆಯಾದರೋ ಬಾಗಿದ ಕೊಂಬುಗಳಿಂದ ಅಲಂಕೃತವಾದುದು. ಆ ಮಹಿಳೆಯ ಇಷ್ಟಾರ್ಥಸಿದ್ಧಿಯ ದ್ವಾರದಂತೆ (ಅರ್ಥಸಿದ್ಧಿದ್ವಾರದಂತಿರುವ) ಅಥವಾ ಬಾಗಿಲುಗಳಂತೆ (ಹೆಬ್ಬಾಗಿಲುಗಳಂತೆ) ಇತ್ತು.

ಅನ್ವಯ :—ಸಾಕ್ಷತಪಾತ್ರ ಹಸ್ತಾಸುದಕ್ಷಿಣಾ ಪಯಸ್ವಿನೀಂ ತಾಂ ಪ್ರದಕ್ಷಿಣೀಕೃತ್ಯ ಪ್ರಣಮ್ಯ ಚ ತಸ್ಯಾಃ ವಿಶಾಲಂ ಶೃಂಗಾಂತರಮ್ ಅರ್ಥಸಿದ್ಧೇಃ ದ್ವಾರಮಿವ ಆನರ್ಚ ॥

ಅಕ್ಷತೇನ ಸಹಿತಂ ಪಾತ್ರಂ, ಅಕ್ಷತಪಾತ್ರಂ, ಅಕ್ಷತಪಾತ್ರೇಣ ಸಹ ವರ್ತೇತೇ ಇತಿ ಸಾಕ್ಷತಪಾತ್ರೌ। ಸಾಕ್ಷತಪಾತ್ರೌ ಹಸ್ತೌ ಯಸ್ಯಾಃ ಸಾ—ಸಾಕ್ಷತಪಾತ್ರಹಸ್ತಾ ॥ ಶೃಂಗಯೋಃ ಅಂತರಂ। ಅರ್ಥಸ್ಯ ಸಿದ್ಧಿಃ। ತಸ್ಯಾಃ। ಆನರ್ಚ—ಆನರ್ಚತುಃ—ಆನರ್ಚುಃ, ಆನರ್ಚಿಮ। ಅರ್ಚ—ಪೂಜಾಯಾಂ—ಲಿಟ್ ॥

ಸಾಕ್ಷತಪಾತ್ರಹಸ್ತಾ = ಅಕ್ಷತೆಯ ಪಾತ್ರವನ್ನು ಕೈಯಲ್ಲಿ ಹಿಡಿದಿರುವ, ಸುದಕ್ಷಿಣಾ= ಸುದಕ್ಷಿಣಾದೇವಿ, ಪಯಸ್ವಿನೀ = ಪ್ರಶಸ್ತವಾದ ಹಾಲುಳ್ಳ, ತಾಂ = ನಂದಿನಿಯನ್ನು, ಪ್ರದಕ್ಷಿಣೀಕೃತ್ಯ = ಪ್ರದಕ್ಷಿಣೆ ಮಾಡಿ, ಪ್ರಣಮ್ಯ = ನಮಸ್ಕಾರ ಮಾಡಿ, ಅಸ್ಯಾಃ = ಆ ಧೇನುವಿನ, ವಿಶಾಲಂ=ವಿಸ್ತೃತವಾದ, ಶೃಂಗಾಂತರಂ = ಕೊಂಬುಗಳ ಮಧ್ಯಪ್ರದೇಶವನ್ನು, ಅರ್ಥಸಿದ್ಧೇಃ = ಕಾರ್ಯಸಿದ್ಧಿಯ, ದ್ವಾರಂ ಇವ = ಪ್ರವೇಶಮಾರ್ಗವನ್ನು ಎಂಬಂತೆ, ಆನರ್ಚ = ಪೂಜಿಸಿದಳು.

22. ವತ್ಸೋತ್ಸುಕಾಪಿ ಸ್ತಿಮಿತಾ ಸಪರ್ಯಾಂ।
ಪ್ರತ್ಯಗ್ರಹೀತ್ಸೇತಿ ನನಂದತುಸ್ತೌ ॥
ಭಕ್ತ್ಯೋಪಪನ್ನೇಷು ಹಿ ತದ್ವಿಧಾನಾಂ।
ಪ್ರಸಾದಚಿಹ್ನಾನಿ ಪುರಃ ಫಲಾನಿ ॥ ೨೨ ॥

ಅವರೀರ್ವರೂ ಆಧೇನುವಿನ ಪೂಜೆಯಿಂದ ಸಲಿದರು. ಆ ಧೇನುವು ತನ್ನ ಕರುವನ್ನು ಕಾಣುವ ತವಕದಲ್ಲಿದ್ದರೂ ಅಂತಹ ಉನ್ನತವ್ಯಕ್ತಿಗಳು ಪರಮಭಕ್ತಿಯಿಂದ ತನ್ನನ್ನು ಪುತ್ರಭಿಕ್ಷೆಯ ಬಗ್ಗೆ ಅರ್ಚಿಸುವುದನ್ನು ಕಂಡು ನಿಶ್ಚಲವಾಗಿದ್ದು, ತೃಪ್ತಳಾಗಿ, ಪ್ರಸನ್ನತೆಯಿಂದ ಅವರ ಸೇವೆಯನ್ನು ಸ್ವೀಕರಿಸಿತು. ಏಕೆಂದರೆ ಆ ಹಸುವು ಸಾಮಾನ್ಯ ಹಸುವಾಗಿರಲಿಲ್ಲ. ಮಹಾತ್ಮರ ಎಲ್ಲಾ ಕಲ್ಯಾಣಗುಣಗಳನ್ನು ಪಡೆದ ಸುರಭಿಸುತೆ, ಕಾಮಧೇನು ಮಹಾಧೇನು, ಮಹಿಮೋನ್ವಿತದೈವಸದೃಶ ಮಹಾವಿಭೂತಿ. ಹಸುವಿನ ಪ್ರಸನ್ನತೆಯನ್ನು ಕಂಡ ಆ ರಾಜ ದಂಪತಿಗಳು ತಮ್ಮ ಸೇವೆಯು ಸಾರ್ಥಕವಾಗುವುದೆಂದು, ಪುತ್ರಲಾಭವಾಗುವುದೆಂದು ಮನದಲ್ಲಿ ಸಂತಸಗೊಂಡರು (ಪ್ರಸಾದಚಿಹ್ನಾನಿ ಪುರಃ ಫಲಾನಿ).

ಅನ್ವಯ :—ವತ್ಸೋತ್ಸುಕಾ ಅಪಿ ಸಾ ಸ್ತಿಮಿತಾ ಸಪರ್ಯಾಂ ಪ್ರತ್ಯಗ್ರಹೀತ್ ಇತಿ ತೌ ನನಂದತುಃ । ಭಕ್ತ್ಯೋಪಪನ್ನೇಷು ತದ್ವಿಧಾನಾಂ ಪ್ರಸಾದಚಿಹ್ನಾನಿ ಪುರಃ ಫಲಾನಿ ಹಿ ॥

ವತ್ಸೇ ಉತ್ಸುಕಾ = ವತ್ಸೋತ್ಸುಕಾ । ಭಕ್ತ್ಯಾ ಉಪಪನ್ನಾಃ—ತೇಷು । ತಸ್ಯಾಃ ವಿಧಾ ಇವ ವಿಧಾ ಯೇಷಾಂ ತೇ—ತದ್ವಿಧಾಃ ತೇಷಾಮ್ । ಪ್ರಸಾದಸ್ಯ ಚಿಹ್ನಾನಿ । ಪುರಃ (ಗತಾನಿ) ಫಲಾನಿ ಯೇಷಾಂತಾನಿ—ಪುರಃಫಲಾನಿ । ಪ್ರತಿ ಉಪಸರ್ಗಃ— ಅಗ್ರಹೀತ್ —ಅಗ್ರಹೀಷ್ಟಾಂ—ಅಗ್ರಹೀಷುಃ । ಅಗ್ರಹೀಃ—ಅಗ್ರಹೀಷ್ಟಂ—ಅಗ್ರಹೀಷ್ಟ । ಅಗ್ರಹೀಷಂ—ಅಗ್ರಹೀಷ್ವ—ಅಗ್ರಹೀಷ್ಮ—ಗ್ರಹ—ಉಪಾದಾನೇ—ಲುಙ್ । ನನಂದ—ನನಂದತುಃ—ನನಂದುಃ । ನನಂದಿಥ—ನನಂದಥುಃ—ನನಂದ । ನನಂದ—ನನಂದಿವ —ನನಂದಿಮ । ಟುನದಿ—ಸಮೃದ್ಧೌ—ಲಿಟ್—ಪ್ರ.ಪು.ದ್ವಿ. ॥

ಸಾ = ಆಹಸುವು, ವತ್ಸೋತ್ಸುಕಾ ಅಪಿ = ಕರುವನ್ನು ನೋಡಲು ತವಕಪಡುವುದಾದರೂ, ಸ್ತಿಮಿತಾ = ನಿಶ್ಚಲವಾದ, ಸಪರ್ಯಾಂ = ಪೂಜೆಯನ್ನು, ಪ್ರತ್ಯಗ್ರಹೀತ್ ಇತಿ = ಸ್ವೀಕರಿಸಿತು ಎಂಬ ಕಾರಣದಿಂದ, ತೌ = ಆ ದಂಪತಿಗಳು, ನನಂದತುಃ = ಸಂತೋಷಪಟ್ಟರು, ಭಕ್ತ್ಯೋಪಪನ್ನೇಷು = ಅತಿಶಯ ಭಕ್ತಿಯಿಂದ ಕೂಡಿ, ತದ್ವಿಧಾನಾಂ = ಮಹಿಮೆಯನ್ನು ಪಡೆದ ಆ ಹಸುವಿನಂತೆ (ವಿಭೂತಿ) ಮಹಾತ್ಮರಾಗಿ, ಪ್ರಸಾದಚಿಹ್ನಾನಿ = ಅನುಗ್ರಹದ ಚಿಹ್ನೆಗಳು, ಪುರಃ ಫಲಾನಿ = ಪೂರ್ವದಲ್ಲಿಯೇ (ಅತಿಸಮೀಪದಲ್ಲಿ ಫಲದಾಯಕವಾಗುವ).

**23. ಗುರೋಃ ಸದಾರಸ್ಯ ನಿಪೀಡ್ಯ ಪಾದೌ ।**
**ಸಮಾಪ್ಯ ಸಾಂಧ್ಯಂ ಚ ವಿಧಿಂದಿಲೀಪಃ ॥**
**ದೋಹಾವಸಾನೇ ಪುನರೇವ ದೋಗ್ಧ್ರೀಂ ।**
**ಭೇಜೇ ಭುಜೋಚ್ಛಿನ್ನರಿಪುರ್ನಿಷಣ್ಣಾಮ್** ॥ ೨೩ ॥

ವೈರಿಗಳನ್ನು ತನ್ನ ಭುಜಬಲಸಾಮರ್ಥ್ಯದಿಂದ (ಭೇಜೇ ಭುಜೋಚ್ಛಿನ್ನ) ಅಳಿಸಿದ ಕೀರ್ತಿಯನ್ನು ಪಡೆದ ದಿಲೀಪಭೂವರನು ಪತ್ನಿಯೊಡನಿರುವ (ಕುಳಿತಿರುವ) ಗುರು ವಸಿಷ್ಠರ ಶ್ರೀಪಾದಗಳನ್ನು ಒತ್ತಿ, ಗುರುಶುಶ್ರೂಷೆ ಮಾಡಿದನು. ಆ ಬಳಿಕ ಗುರುವಿನ ಆಶೀರ್ವಾದವನ್ನು ತಲೆಯಲ್ಲಿ ತಳೆದು ಸಂಧ್ಯಾಕಾಲವು ಸನ್ನಿಹಿತವಾಗಲು ಸಂಧ್ಯಾದಿ

ನಿತ್ಯಾಹ್ನಿಕಗಳನ್ನು ವಿಧಿವತ್ತಾಗಿ ಮಾಡಿ ಮುಗಿಸಿದನು. ಹಾಲು ಕರೆವ ಕೆಲಸಗಳೆಲ್ಲವೂ ಮುಗಿದ ಬಳಿಕ ಮಲಗಿರುವ ಕಪಿಲೆಯು ಬಳಿಗೆ ಬಂದು ಅದರ ಸೇವೆಯಲ್ಲಿ ಆ ರಾಜ ಮೌಳಿಯು ನಿರತನಾದನು.

ಅನ್ವಯ :—ಭುಜೋಚ್ಛಿನ್ನರಿಪುಃ ದಿಲೀಪಃ ಸದಾರಸ್ಯ ಗುರೋಃ ಪಾದೌ ನಿಪೀಡ್ಯ ಸಾಂಧ್ಯಂ ಚ ವಿಧಿಂ ಸಮಾಪ್ಯ ದೋಹಾವಸಾನೇ ನಿಷಣ್ಣಾಂ ದೋಗ್ಧ್ರೀಂ ಪುನರೇವ ಭೇಜೇ ॥

ದಾರೈಃ ಸಹವರ್ತತ ಇತಿ ಸದಾರಃ ತಸ್ಯ । ಸಂಧ್ಯಾಯಾಂ ಭವಂ ಸಾಂಧ್ಯಮ್ । ದೋಹಸ್ಯ ಅವಸಾನಂ, ತಸ್ಮಿನ್ । ಭುಜಾಭ್ಯಾಂ ಉಚ್ಛಿನ್ನಾಃ. ಭುಜೋಚ್ಛಿನ್ನಾಃ ರಿಪವಃ ಯೇನ ಸಃ—ಭುಜೋಚ್ಛಿನ್ನರಿಪುಃ—ಭೇಜೇ—ಭೇಜಾತೇ—ಭೇಜಿರೇ । ಭೇಜಿಷೇ—ಭೇಜಾಥೇ—ಭೇಜಿಧ್ವೇ । ಭೇಜೇ—ಭೇಜಿವಹೇ—ಭೇಜಿಮಹೇ— । ಭಜ—ಸೇವಾಯಾಂ—ಲಿಟ್ ॥

ಭುಜೋಚ್ಛಿನ್ನರಿಪುಃ = ತೋಳ್‌ಬಲದಿಂದಲೇ ನಿಗ್ರಹಿಸಿದ ಶತ್ರುಗಳುಳ್ಳ, ಸದಾರಸ್ಯ = ಪತ್ನಿಯಿಂದ ಕೂಡಿರುವ, ಗುರೋಃ = ವಸಿಷ್ಠಋಷಿಯ, ಪಾದೌ = ಪಾದಗಳನ್ನು, ನಿಪೀಡ್ಯ = ನಮಸ್ಕರಿಸಿ, ಸಾಂಧ್ಯಂ = ಸಾಯಂಕಾಲದ, ವಿಧಿಂ = ಅನುಷ್ಠಾನವನ್ನು, ಸಮಾಪ್ಯ = ಪೂರೈಸಿ, ದೋಹಾವಸಾನೇ = ಹಾಲುಕರೆದಮೇಲೆ, ನಿಷಣ್ಣಾಂ = ಮಲಗಿರುವ, ದೋಗ್ಧ್ರೀಂ = ಆ ನಂದಿನಿಯೆನ್ನೇ, ಪುನಃ = ತಿರುಗಿ, ಭೇಜೇ = ಸೇವಿಸಿದನು.

24. ತಾಮಂತಿಕನ್ಯಸ್ತಬಲಿಪ್ರದೀಪಾ ।
ಮನ್ವಾಸ್ಯಗೋಪ್ತಾಗೃಹಿಣೀಸಹಾಯಃ ॥
ಕ್ರಮೇಣ ಸುಪ್ತಾಮನುಸಂವಿವೇಶ ।
ಸಪ್ತೋತ್ಥಿತಾಂ ಪ್ರಾತರನೂದತಿಷ್ಠತ್ ॥ ೨೪ ॥

ತನ್ನ ಜೀವನಸಂಗಾತಿಯೊಡಗೂಡಿ ಆ ಕ್ಷಿತಿಪತಿಯು ಹೂ ಹಣ್ಣು, ಧೂಪದೀಪಗಳಿಂದ (ಹೂ ಹಣ್ಣು ಧೂಪದೀಪಾದಿಗಳ ಸನಿಹದೊಳು) ಆ ಧೇನುವನ್ನು ಅರ್ಚಿಸಿದನು. ಆ ಬಳಿಕ ಆ ಪಸುವಿನ ಬಳಿಯಲ್ಲೇ ಕುಳಿತು, ಆಧೇನುವು ನಿದ್ದೆಗೈದ ಬಳಿಕ ತಾನೂ ಅಲ್ಲಿಯೇ ನಿದ್ದೆಗೈದನು. ಅನಂತರ ಪ್ರಾತಃಕಾಲದ ವೇಳೆ ಅದು ಎದ್ದಬಳಿಕ ತಾನೂ ಎದ್ದು ಕಾರ್ಯೋನ್ಮುಖನಾದನು (ಅನ್ವಾಸ್ಯಗೋಪ್ತಾ).

ಅನ್ವಯ :—ಗೋಪ್ತಾಗೃಹಿಣೀಸಹಾಯಃ ಅಂತಿಕನ್ಯಸ್ತಬಲಿಪ್ರದೀಪಾಂ ತಾಮ್ ಅನ್ವಾಸ್ಯ ಕ್ರಮೇಣ ಸುಪ್ತಾಮನು ಸಂವಿವೇಶ ಪ್ರಾತಃ ಸುಪ್ತೋತ್ಥಿತಾಂ ಅನು ಉದತಿಷ್ಠತ್ ॥

ಅಂತಿಕೇ ನ್ಯಸ್ತಾಃ, ಅಂತಿಕನ್ಯಸ್ತಾಃ ಬಲಯಃ ದೀಪಾಃ ಯಸ್ಯಾಃ ಸಾ—ಅಂತಿಕನ್ಯಸ್ತಬಲಿಪ್ರದೀಪಾ, ತಾಮ್ । ಗೃಹಿಣೀ ಸಹಾಯಃ ಯಸ್ಯ ಸಃ । ಸುಪ್ತಾಚ ಸಾ ಉತ್ಥಿತಾ ಚ ತಾಮ್ । ಸಮ್—ಉಪಸರ್ಗ—ವಿವೇಶ—ವಿವಿಶತುಃ—ವಿವಿಶುಃ । ವಿವೇಶಿಥ—ಇತ್ಯಾದಿ—ವಿಶ—ಪ್ರವೇಶನೇ—ಲಿಟ್। ಉತ್—ಉಪಸರ್ಗ—ಅತಿಷ್ಠತ್—ಅತಿಷ್ಠತಾಂ—ಅತಿಷ್ಠನ್ । ಅತಿಷ್ಠಃ—ಇತ್ಯಾದಿ—ಷ್ಠಾ—ಗತಿನಿವೃತ್ತೌ—ಲಙ್ ॥

ಗೋಪ್ತಾ = ರಕ್ಷಕನಾದ, ಗೃಹಿಣೀಸಹಾಯಃ = ಪತ್ನಿಯೊಡಗೂಡಿದವನಾಗಿ, ಅಂತಿಕ ನ್ಯಸ್ತಬಲಿಪ್ರದೀಪಾಂ = ಸಮೀಪದಲ್ಲಿ ಇಡಲ್ಪಟ್ಟ ಬಲಿ, ದೀಪ ಇತ್ಯಾದಿ, ತಾಂ = ಆ ನಂದಿನಿಯನ್ನು, ಅನ್ವಾಸ್ಯ = ಸಮೀಪಿಸಿಯೇ ಕುಳಿತು, ಕ್ರಮೇಣ = ಹೊತ್ತುಕಳೆದಂತೆ, ಸುಪ್ತಾಮನುಃ = ಮಲಗಿದ ಮೇಲೆ, ಸಂವಿವೇಶ = ಮಲಗಿ, ಪ್ರಾತಃ = ಬೆಳಿಗ್ಗೆ, ಸುಪ್ತೋತ್ಥಿತಾಂ ಅನು=ಮಲಗಿ ಎದ್ದಿರುವ ಆ ಧೇನುವನ್ನು ಅನುಸರಿಸಿ, ಉದತಿಷ್ಠತ್= ಎದ್ದನು.

25. ಇತ್ಥಂ ವ್ರತಂ ಧಾರಯತಃ ಪ್ರಜಾರ್ಥಂ ।
ಸಮಂ ಮಹಿಷ್ಯಾಮಹನೀಯಕೀರ್ತೇಃ ॥
ಸಪ್ತವ್ಯತೀಯುಃ ತ್ರಿಗುಣಾನಿ ತಸ್ಯ ।
ದಿನಾನಿ ದೀನೋದ್ಧರಣೋಚಿತಸ್ಯ ॥ ೨೫ ॥

ಆ ರಾಜಕುಲತಿಲಕನು (ಭಾರತಸಾಮ್ರಾಟನು) ತನ್ನ ಪಟ್ಟಮಹಿಷಿಯ ಜೊತೆಯಲ್ಲಿ ಗೋಸೇವಾನಿರತನಾಗಿ ಪುತ್ರಾರ್ಥಿಯಾಗಿ ನೋಂಪಿಯನ್ನು ನಡೆಸುತ್ತಾ 21 ದಿನಗಳನ್ನು ಕಳೆದನು. ಅಪಾರಕೀರ್ತಿಯುತನೂ (ಮಹನೀಯಕೀರ್ತೇಃ) ದೀನ, ದಲಿತರ, ಶೋಷಿತರ, ತುಳಿತಕ್ಕೊಳಗಾದವರ ಉದ್ಧಾರಕ್ಕಾಗಿ ಜನ್ಮತಳೆದವನೂ, ರಾಜ್ಯ ಹಾಗೂ ಪ್ರಜೆಗಳ ರಕ್ಷಣೆಯಲ್ಲಿ, ಪ್ರಜಾಪರಿಪಾಲನೆ, ಲೋಕಕಲ್ಯಾಣಕಾರ್ಯದಲ್ಲಿ ದಕ್ಷನಾಗಿದ್ದ, ನಿಷ್ಠನೆನಿಸಿದ ಆ ಮಹಾವ್ರತಿಯು (ಧಾರಯತಃ) ಗುರುವಿನ ಆಜ್ಞೆಯಂತೆ ನಿಷ್ಠಾವಂತ ನಾಗಿ ಭಕ್ತಿಯಿಂದ ಆ ಕಾಮಧೇನುವಿನ ಸೇವೆಯಲ್ಲಿ ದಿನಕಳೆಯುತ್ತಲಿದ್ದನು.

ಅನ್ವಯ :—ಇತ್ಥಂ ಪ್ರಜಾರ್ಥಂ ಮಹಿಷ್ಯಾ ಸಮಂ ವ್ರತಂ ಧಾರಯತಃ ಮಹನೀಯ ಕೀರ್ತೇಃ ದೀನೋದ್ಧರಣೋಚಿತಸ್ಯ ತ್ರಿಗುಣಾನಿ ಸಪ್ತದಿನಾನಿ ವ್ಯತೀಯುಃ ॥

ಪ್ರಜಾಯೈ = ಪ್ರಜಾರ್ಥಮ್ । ಮಹನೀಯಾ ಕೀರ್ತಿಃ ಯಸ್ಯ ಸಃ = ಮಹನೀಯ ಕೀರ್ತಿಃ—ತಸ್ಯ । ತ್ರಯೋ ಗುಣಾಃ ಯೇಷಾಂ ತಾನಿ—ತ್ರಿಗುಣಾನಿ । ದೀನಾನಾಂ ಉದ್ಧರಣಂ, ದೀನೋದ್ಧರಣೇ ಉಚಿತಃ, ತಸ್ಯ। ವಿ, ಅತಿ—ಉಪಸರ್ಗ—ಇಯಾಯ— ಈಯತುಃ—ಈಯುಃ । ಇಯಯಿಥ—ಈಯಥುಃ—ಈಯ । ಇಯಾಯ, ಇಯಯ —ಈಯಿವ—ಈಯಿಮ । ಇಣ್—ಗತೌ—ಲಿಟ್ । ಪ್ರ.ಪು.ಬ. ॥

ಇತ್ಥಂ = ಈ ರೀತಿಯಾಗಿ, ಪ್ರಜಾರ್ಥಂ = ಸಂತಾನಪ್ರಾಪ್ತಿಗಾಗಿ, ಮಹಿಷ್ಯಾಸಮಂ = ಪಟ್ಟ ಮಹಿಷಿಯೊಂದಿಗೆ, ವ್ರತಂ = ಗೋಸೇವಾವ್ರತವನ್ನು, ಧಾರಯತಃ = ಅನುಸರಿಸು ತ್ತಿರುವ, ಮಹನೀಯಕೀರ್ತೇಃ = ಅಪಾರ ಸತ್ಕೀರ್ತಿಯನ್ನು ಗಳಿಸಿರುವ, ದೀನೋ ದ್ಧರಣೋಚಿತಸ್ಯ = ದಲಿತರನ್ನು ರಕ್ಷಿಸುವುದರಲ್ಲಿ ದಕ್ಷನಾದ, ತಸ್ಯ= ಆ ರಾಜನಿಗೆ, ತ್ರಿಗುಣಾನಿ = ಮೂರರಿಂದ ಗುಣಿಸಿದ. ಸಪ್ತ= ಏಳು (21), ದಿನಾನಿ = ದಿನಗಳು, ವ್ಯತೀಯುಃ = ಕಳೆದುವು.

26. ಅನ್ಯೇದ್ಯುರಾತ್ಮಾನುಚರಸ್ಯ ಭಾವಂ ।
ಜಿಜ್ಞಾಸಮಾನಾ ಮುನಿಹೋಮಧೇನುಃ ॥

**ಗಂಗಾ ಪ್ರಪಾತಾಂತವಿರೂಢಶಷ್ಪಂ ।**
**ಗೌರೀಗುರೋರ್ಗಹ್ವರಮಾವಿವೇಶ ॥ ೨೬ ॥**

ಮಾರನೆಯ ದಿನ ಆ ವಸಿಷ್ಠರ ಹೋಮಧೇನು ನಂದಿನಿಯು ತನ್ನನ್ನು ಆತ್ಮದಂತೆ (ನೆರಳಂತೆ) ಅನುಸರಿಸುತ್ತಿರುವ ಸೂರ್ಯಕುಲತಿಲಕನ ಸತ್ವಪರೀಕ್ಷೆ ಮಾಡುವೆನೆಂದು ಬಗೆದು ತನ್ನ ಪಯಣವನ್ನು ಮುಂದುವರಿಸಿತು. ಅದು ಗಂಗಾನದಿಯ (ಅಮರನದಿ, ದೇವಗಂಗಾನದಿ, ಭಾಗೀರಥಿ) ಜಲಪ್ರದೇಶದಲ್ಲಿ ಮುನ್ನಡೆದು, ಜಲಪಾತಗಳ (ಗಂಗಾ ಪ್ರಪಾತಾ) (ಝರಿಗಳ) ಸುಂದರ ಪ್ರದೇಶಗಳನ್ನು ದಾಟುತ್ತಾ ಹುಲ್ಲುಗಾವಲಲ್ಲಿ ವಿಹರಿಸುತ್ತಾ, ಉಮೆಯ ಪಿತನಾದ ಹಿಮವಂತನ ಆವಾಸಸ್ಥಾನವಾದ ಹಿಮಾಲಯದ ಹಸುರು ಪಂಕ್ತಿಯಿಂದ ತುಂಬಿ ಶೋಭಿಸುತ್ತಿರುವ ಗಿರಿಶ್ರೇಣಿಯ ಕಡೆಗೆ ನಡೆಯಿತು. ಅನಂತರ ಆ ಗೋವು ಹಿಮಾಲಯದ ದೊಡ್ಡದಾದ ಗುಹೆಯೊಂದನ್ನು ಪ್ರವೇಶಿಸಿತು.

ಅನ್ವಯ :—ಅನ್ಯೇದ್ಯುಃ ಮುನಿಹೋಮಧೇನುಃ ಆತ್ಮಾನುಚರಸ್ಯ ಭಾವಂ ಜಿಜ್ಞಾಸಮಾನಾ ಗಂಗಾಪ್ರಪಾತಾಂತ ವಿರೂಢಶಷ್ಪಂ ಗೌರೀಗುರೋಃ ಗಹ್ವರಮ್ ಆವಿವೇಶ ॥

ಆತ್ಮನಃ ಅನುಚರಃ ತಸ್ಯ । ಜ್ಞಾತುಂ ಇಚ್ಛಂತೀ—ಜಿಜ್ಞಾಸಮಾನಾ । ಮುನೇಃ ಹೋಮಃ । ಮುನಿಹೋಮಾರ್ಥಂ ಧೇನುಃ ಮುನಿಹೋಮಧೇನುಃ । ಗಂಗಾಯಾಃ ಪ್ರಪಾತಃ । ಪ್ರಪತತಿ ಅಸ್ಮಿನ್ ಇತಿ ಪ್ರಪಾತಃ । ಗಂಗಾಪ್ರಪಾತಾಂತಸ್ಯ ಅಂತಃ । ಗಂಗಾಪ್ರಪಾತಾಂತೇ ವಿರೂಢಾನಿ । ಗಂಗಾಪ್ರಪಾತಾಂತವಿರೂಢಾನಿ ಶಷ್ಪಾಣಿ ಯಸ್ಮಿನ್ ತತ್—ಗಂಗಾ ಪ್ರಪಾತಾಂತವಿರೂಢಾಶಷ್ಪಮ್ । ಗೌರ್ಯಾಃ ಗುರುಃ ತಸ್ಯ । ಆಙ್—ಉಪಸರ್ಗ । ವಿವೇಶ—ವಿವಿಶತುಃ—ವಿವಿಶುಃ । ವಿವೇಶಿಥ—ಇತ್ಯಾದಿ । ವಿಶ—ಪ್ರವೇಶನೇ—ಲಿಟ್ ॥

ಅನ್ಯೇದ್ಯುಃ = ಮರುದಿವಸ, ಮುನಿಹೋಮಧೇನುಃ = ವಸಿಷ್ಠರ ಹೋಮಸಾಧನವಾದ ನಂದಿನಿಯು, ಆತ್ಮಾನುಚರಸ್ಯ=ತನ್ನನ್ನು ಅನುಸರಿಸಿಬರುವ, ಭಾವಂ=ಅಭಿಪ್ರಾಯವನ್ನು, ಜಿಜ್ಞಾಸಮಾನಾ = ತಿಳಿಯಲು ಬಯಸಿ, ಗಂಗಾಪ್ರಪಾತಾಂ = ಪರ್ವತದಿಂದ ಕೆಳಗೆ ಇಳಿಯುವ, ತವಿರೂಢಶಷ್ಪಂ = ಸಮೀಪದಲ್ಲಿ ಬೆಳೆದ ಹುಲ್ಲುಗಳಿರುವ, ಗೌರೀಗುರೋಃ = ಹಿಮಾಲಯದ, ಗಹ್ವರಂ = ಗುಹೆಯನ್ನು, ವಿವೇಶ = ಪ್ರವೇಶಿಸಿತು.

**27. ಸಾ ದುಷ್ಪ್ರಧರ್ಷಾ ಮನಸಾಪಿ ಹಿಂಸ್ರೈ ।**
**ರಿತ್ಯದ್ರಿಶೋಭಾಪ್ರಹಿತೇ ಕ್ಷಣೇನ ॥**
**ಅಲಕ್ಷಿತಾಭ್ಯುತ್ಪತನೋ ನೃಪೇಣ ।**
**ಪ್ರಸಹ್ಯಸಿಂಹಃ ಕಿಲ ತಾಂ ಚಕರ್ಷ ॥ ೨೭ ॥**

ಆಗ ದಿಲೀಪನಾದರೋ ಹಿಮಾಚ್ಛಾದಿತ (ಮಂಜುಮುಸುಕಿದ) ಧವಳವರ್ಣದಿಂದ ರಾರಾಜಿಸುವ ಹಿಮವತ್ ಪರ್ವತದ ಸೌಂದರ್ಯವನ್ನು ನೋಡುವುದರಲ್ಲಿಯೇ ಮಗ್ನನಾದನು. ಮಹಾಮಹಿಮಳಾದ ಈ ಧೇನುವನ್ನು (ತುರುವನ್ನು) ಪ್ರಪಂಚದ ಯಾವ ಕ್ರೂರಪ್ರಾಣಿಯೂ ಮುಟ್ಟಲಾರದು ಎಂದು ಒಂದು ಬಗೆಯ ಆತ್ಮವಿಶ್ವಾಸದಿಂದ ಆ ನರಪತಿಯು ಒಂದು ಅರೆಗಳಿಗೆ ಅಲಕ್ಷ್ಯನಾಗಿ ನಿಸರ್ಗದ ಸವಿಯನ್ನು ಉಣ್ಣುವುದ

ರಲ್ಲಿಯೇ ಮಗ್ನನಾದನು. ಆದರೆ ಅದೇ ಸಮಯದಲ್ಲಿ ನಂದಿನಿಯು ತನ್ನ ಯೋಗ ಮಹಿಮೆಯಿಂದ ಒಂದು ಕೃತ್ರಿಮ ಸಿಂಹವನ್ನು ಸೃಷ್ಟಿಸಿತು. ಆ ಮೃಗೇಂದ್ರನು (ಪ್ರಸಹ್ಯ ಸಿಂಹ) ರಾಜನು ಬೇರೆಡೆ ನೋಡುತ್ತಿದ್ದಾಗ ಅವನಿಗೆ ಅರಿವಿಲ್ಲದಂತೆಯೇ ಆ ಧೇನುವಿನ ಮೇಲೆ ಎರಗಿ ಗೋವನ್ನು ಮುರಿದು ಬಲಾತ್ಕಾರದಿಂದ ಎಳೆದುಕೊಂಡು ಹೋಯಿತು.

ಅನ್ವಯ:—ಸಾ ಹಿಂಸ್ರೈಃ ಮನಸಾಪಿ ದುಷ್ಪ್ರಧರ್ಷಾ ಇತಿ ಅದ್ರಿಶೋಭಾಪ್ರಹಿತೇಕ್ಷಣೇನ ನೃಪೇಣ ಅಲಕ್ಷಿತಾಭ್ಯುತ್ಪತನಃ ಸಿಂಹಃ ತಾಂ ಪ್ರಸಹ್ಯ ಚಕರ್ಷ ಕಿಲ ॥

ದುಃಖೇನ ಪ್ರಧರ್ಷಿತುಂ ಶಕ್ಯಾ—ದುಷ್ಪ್ರಧರ್ಷಾ । ಅದ್ರೇಃ ಶೋಭಾ । ಅದ್ರಿಶೋಭಾಯಾಂ—ಪ್ರಹಿತೇ ಕ್ಷಣಃ । ಅಲಕ್ಷಿತಾಭ್ಯುತ್ಪತನೋ ನೃಪೇಣ—ತೇನ ॥ ಪ್ರಹಿತೇ ಈಕ್ಷಣೇ ಯೇನ ಸಃ ಪ್ರಹಿತೇಕ್ಷಣಃ । ಅಲಕ್ಷಿತಂ ಅಭ್ಯುತ್ಪತನಂ ಯಸ್ಯ ಸಃ । । ಅಲಕ್ಷಿತಾಭ್ಯುತ್ಪತನಃ । ಚಕರ್ಷ—ಚಕೃಷತುಃ—ಚಕೃಷುಃ । ಚಕರ್ಷಿಥ—ಚಕೃಷಥುಃ—ಚಕೃಷ । ಚಕರ್ಷ—ಚಕೃಷಿವ—ಚಕೃಷಿಮ । ಕೃಷ—ವಿಲೇಖನೇ—ಲಿಟ್—ಪ್ರ.ಪು.ಏ. ॥

ಸಾ = ಆ ಗೋವು, ಹಿಂಸ್ರೈಃ = ಕ್ರೂರವಾದ ಕಾಡು ಪ್ರಾಣಿಗಳಿಂದ ಮನಸಾ ಅಪಿ = ಮನಸ್ಸಿನಿಂದಲೂ, ದುಷ್ಪ್ರಧರ್ಷಾ ಇತಿ = ಹಿಂಸಿಸಲು ಅಶಕ್ಯನೆಂದು, ಅದ್ರಿಶೋಭಾಪ್ರಹಿತೇಕ್ಷಣೇನ = ಹಿಮಾಲಯದ ಪ್ರಕೃತಿಸೌಂದರ್ಯವನ್ನು, ನೃಪೇಣ = ರಾಜನಿಂದ, ಅಲಕ್ಷಿತಾಭ್ಯುತ್ಪ ನಃ = ನೋಡದಿರುವಾಗ ಎರಗಿರುವ, ಸಿಂಹಃ = ಸಿಂಹವು, ತಾಂ = ಆ ಹಸುವನ್ನು, ಪ್ರಸಹ್ಯ= ಬಲಾತ್ಕಾರದಿಂದ, ಚಕರ್ಷ ಕಿಲ=ಎಳೆದೊಯ್ದಿತು.

**28. ತದೀಯಮಾಕ್ರಂದಿತಮಾರ್ತಸಾಧೋಃ ।**
**ಗುಹಾನಿಬದ್ಧಪ್ರತಿಶಬ್ದ ದೀರ್ಘಮ್ ॥**
**ರಶ್ಮಿಷ್ವಿವಾದಾಯ ನಗೇಂದ್ರಸಕ್ತಾಂ ।**
**ನಿವರ್ತಯಾಮಾಸ ನೃಪಸ್ಯ ದೃಷ್ಟಿಮ್ ॥ ೨೮ ॥**

ಸಿಂಹದ (ಕ್ರೂರ ಉಗುರುಗಳ) ಎಳೆತದ ಭಯದಿಂದ ನಂದಿನಿ ಹಸುವು ಗಟ್ಟಿಯಾಗಿ ಭೂಮಿಯು ನಡುಗುವಂತೆ ಚೀರಿತು. ಅವರ ಧ್ವನಿ ಹಿಮಾಲಯದ ಗವಿಗಳಲ್ಲಿ, ಕಂದರ ಶ್ರೇಣಿಗಳಲ್ಲಿ, ಕಣಿವೆಗಳಲ್ಲಿ ಪ್ರತಿಧ್ವನಿಯಾಗಿ ಮತ್ತಷ್ಟು ದೀರ್ಘವಾಗಿ ಅಧಿಕವಾಗಿ ರಣರಣಿಸಿ ಕೇಳಿಸಿತು. ಆಗ ಹಿಮಾಲಯದ ಪ್ರಕೃತಿಸೌಂದರ್ಯದಲ್ಲಿ ಆಸಕ್ತನಾಗಿ ಪ್ರಪಂಚವನ್ನೇ ಒಂದು ಗಳಿಗೆ ಮರೆತಿದ್ದ ನೆಟ್ಟನೋಟವುಳ್ಳ ಆರ್ತರಕ್ಷಕನಾದ (ಆರ್ತಸಾಧೋಃ) ದಿಲೀಪನ ದೃಷ್ಟಿಯನ್ನು ಹಗ್ಗದಿಂದ ಕಟ್ಟಿ ಬೇರೆಡೆಗೆ ಸೆಳೆದಂತಾಯಿತು. ಥಟ್ಟನೆ ಆ ನರೇಶನು ಹಿಮಾಚ್ಛಾದಿತ ಹಿಮಾಲಯದ ಗೌರೀಶಂಕರ, ಕಾಂಚನಗಂಗಾ ಮೊದಲಾದ ಗಗನಚುಂಬಿ ಭವ್ಯಶಿಖರಗಳನ್ನು ನೋಡುವುದನ್ನು ಬಿಟ್ಟು ನಂದಿನಿಯ ಕಡೆಗೆ ದೃಷ್ಟಿಹರಿಸಿ ನೋಡಿದನು. ತನ್ನ ದಯಾರ್ದ್ರದೃಷ್ಟಿಯನ್ನು ಗುಹೆಯ ಒಳಕ್ಕೆ ಹರಿಸಿದನು.

ಅನ್ವಯ:—ಗುಹಾನಿಬದ್ಧಪ್ರತಿಶಬ್ದ ದೀರ್ಘಮ್ ಆಕ್ರಂದಮ್ ಆರ್ತಸಾಧೋಃ ನೃಪಸ್ಯ ನಗೇಂದ್ರ ಸಕ್ತಾಂ ದೃಷ್ಟಿಂ ರಶ್ಮಿಷು ಆದಾಯೇವ ನಿವರ್ತಯಾಮಾಸ ॥

ತಸ್ಯಾಃ ಇದಂ = ತದೀಯಮ್ । ಆರ್ತೇಷು ಸಾಧುಃ—ತಸ್ಯಃ ಗುಹಾಯಾಂ ನಿಬದ್ಧಃ,

ಗುಹಾನಿಬದ್ಧಶ್ಚಾಸೌ ಪ್ರತಿಶಬ್ದಶ್ಚ, ಗುಹಾನಿಬದ್ಧಪ್ರತಿಶಬ್ದೇನ ದೀರ್ಘಮ್ । ನಗಾನಾಂ ಇಂದ್ರಃ ।ನಗೇಂದ್ರೇ ಸಕ್ತಾ, ತಾಮ್ । ನಿ—ಉಪಸರ್ಗ—ವರ್ತಯಾಮಾಸ —ವರ್ತಯಾಮಾಸತುಃ — ವರ್ತಯಾಮಾಸುಃ — ಇತ್ಯಾದಿ, ವೃತು—ವರ್ತನೇ—ಣಿಜಂತಾತ್—ಲಿಟ್—ಪ್ರ.ಪು.ಏ. ॥

ಗುಹಾನಿಬದ್ಧಪ್ರತಿಶಬ್ದದೀರ್ಘಂ = ಗುಹೆಯಲ್ಲಿ ಪ್ರಸರಿಸಿದ ಪ್ರತಿಧ್ವನಿಯಿಂದ ಅಧಿಕವಾದ, ತದೀಯಂ = ಆ ನಂದಿನಿಯ, ಆಕ್ರಂದಿತಂ = ಆರ್ತಧ್ವನಿಯು, ಆರ್ತಸಾಧೋಃ = ಪೀಡಿತರನ್ನು ರಕ್ಷಿಸುವ, ನೃಪಸ್ಯ=ದಿಲೀಪಭೂಪಾಲನ, ನಗೇಂದ್ರಸಕ್ತಾಂ = ಹಿಮಾಲಯವನ್ನು ನೋಡುವುದರಲ್ಲಿಯೇ ಮಗ್ನವಾದ, ದೃಷ್ಟಿಂ = ನೋಟವನ್ನು, ರಶ್ಮಿಷು = ಹಗ್ಗಗಳಲ್ಲಿ, ಆದಾಯ ಇವ = ಹಿಡಿದು ಸೆಳೆದಂತೆ, ನಿವರ್ತಯಾಮಾಸ = ಹಿಂತಿರುಗಿಸಿತು.

29. ಸಪಾಟಲಾಯಾಮ್ ಗವಿ ತಸ್ಥಿವಾಂಸಂ ।
ಧನುರ್ಧರಃ ಕೇಸರಿಣಂ ದದರ್ಶ ॥
ಅಧಿತ್ಯಕಾಯಾ ಮಿವಧಾತುಮಯ್ಯಾಂ ।
ಲೋಧ್ರದ್ರುಮಂ ಸಾನುಮತಃ ಪ್ರಫುಲ್ಲಮ್ ॥ ೨೯ ॥

ಸಜ್ಜುಗೊಳಿಸಿದ ಬಿಲ್ಲನ್ನು ಧರಿಸಿರುವ (ಹೆದೆಯೇರಿಸಿರುವ ಬಿಲ್ಲನ್ನು ಧರಿಸಿರುವ) ದಿಲೀಪಚಕ್ರೇಶ್ವರನು ಕೆಂಬಣ್ಣದ ಹಸುವಿನ ಮೇಲೆ ಸಿಂಹವು (ಕೇಸರಿಯು) ಎರಗಿನಿಂತ ಬಗೆಯನ್ನು ಕಂಡನು. ಆ ಕೇಸರಿಯು ತನ್ನ ಕ್ರೂರಾದ ಉಗುರುಗಳಿಂದ ನಂದಿನಿಯನ್ನು ಗಾಯಗೊಳಿಸಿ ರಕ್ತವು ಧಾರೆಧಾರೆಯಾಗಿ ಹರಿಯುವಂತೆ ಮಾಡಿತ್ತು. ಆಗ ಆ ಇಕ್ಷ್ವಾಕು ಕುಲತಿಲಕನಿಗೆ ಆ ಗೋವಿನ ಬೆನ್ನಮೇಲಿನಿಂದ ಕೇಸರಿಯು ಕೆಂಪಾದ ಖನಿಜಗಳಿಂದ, ಕೆಂಪಾದ ಮಣ್ಣಿನಿಂದ, ಗೈರಿಕಾದಿ ಧಾತುಗಳಿಂದ, ಕಲ್ಲುಬಂಡೆಗಳಿಂದ ಕೆಂಪಾಗಿ ಕಂಗೊಳಿಸುವ ಪರ್ವತಪ್ರದೇಶದ ಮಧ್ಯಭಾಗದಲ್ಲಿ ಕೆಂಪಾದ ಪುಷ್ಪಗಳಿಂದ ನಳನಳಿಸಿ ಅರಳಿ ಕಂಗೊಳಿಸುವ ಲೋಧ್ರವೃಕ್ಷವೋ ಎಂಬಂತೆ ತೋರಿತು. ಗೋವಿನ ಮೇಲೆ ಎರಗಿನಿಂತ ಕೇಸರಿಯು ಕೆಂಪಾದ ಕೆಂಡದಂತೆ ತೋರುವ ಹೂಬಿಟ್ಟ ಲೋಧ್ರದ ತರುವಿಗೆ ಎಣೆಯಾಗಿತ್ತು.

ಅನ್ವಯ :—ಧನುರ್ಧರಃ ಸ ಪಾಟಲಾಯಾಂ ಗವಿ ತಸ್ಥಿವಾಂಸಂ ಕೇಸರಿಣಂ ಸಾನುಮತಃ ಧಾತುಮಯ್ಯಾಮ್ ಅಧಿತ್ಯಕಾಯಾಮ್ ಪ್ರಫುಲ್ಲಮ್ ಲೋಧ್ರದ್ರುಮಮ್ ಇವ ದದರ್ಶ ॥

ಧನುಃ ಧರತಿ ಇತಿ ಧನುರ್ಧರಃ । ಕೇಸರಾಃ ಅಸ್ಯ ಸಂತಿ ಇತಿ ಕೇಸರೀ ತಮ್ । ಧಾತೋಃ ವಿಕಾರಃ—ಧಾತುಮಯೀ, ತಸ್ಯಾಮ್, ಲೋಧ್ರ ಇತಿ ದ್ರುಮಃ, ತಮ್ । ಸಾನುಃ ಅಸ್ಯ ಅಸ್ತಿ ಇತಿ—ಸಾನುಮಾನ್—ತಸ್ಯ। ದದರ್ಶ, ದದೃಶತುಃ—ದದೃಶುಃ । ದದರ್ಶಿಥ. ದದ್ರಷ್ಠ, ದದೃಶಥುಃ—ದದೃಶ । ದದರ್ಶ. ದದೃಶಿವ—ದದೃಶಿಮ । ದೃಶಿರ್—ಪ್ರೇಕ್ಷಣೇ—ಲಿಟ್ ॥

ಧನುರ್ಧರಃ—ಬಿಲ್ಲನ್ನು ಧರಿಸಿರುವ, ಸಃ = ಆ ದಿಲೀಪನು, ಪಾಟಲಾಯಾಂ =

ಪಾಟಲವರ್ಣವುಳ್ಳ, ಗವಿ = ನಂದಿನಿಯ ಮೇಲೆ, ತಸ್ಥಿವಾಸು = ಕುಳಿತಿರುವ ಕೇಸರಿಣಂ = ಸಿಂಹವನ್ನು, ಸಾನುಮಂತಃ = ಪರ್ವತದ, ಧಾತುಮಯ್ಯಾಂ = ಗೈರಿಕಾದಿ ಧಾತುಗಳಿಂದ ಕೂಡಿದ, ಅಧಿತ್ಯಕಾಯಾಂ = ಮೇಲಿನ ಪ್ರದೇಶದಲ್ಲಿ, ಪ್ರಫುಲ್ಲಂ = ಅರಳಿದ, ಲೋಧ್ರದ್ರುಮಂ ಇವ = ಲೋಧ್ರವೃಕ್ಷದಂತೆ, ದದರ್ಶ = ನೋಡಿದನು.

**30. ತತೋ ಮೃಗೇಂದ್ರಸ್ಯ ಮೃಗೇಂದ್ರಗಾಮೀ ।**
**ವಧಾಯ ವಧ್ಯಸ್ಯ ಶರಂ ಶರಣ್ಯಃ ॥**
**ಜಾತಾಭಿಷಂಗೋ ನೃಪತಿರ್ನಿಷಂಗಾ ।**
**ದುದ್ಧರ್ತುಮೈಚ್ಛತ್ಪ್ರಸಭೋದ್ಧೃತಾರಿಃ ॥ ೩೦ ॥**

ಸಿಂಹದ ನಡಿಗೆಯುವನೂ (ಮೃಗೇಂದ್ರಗಾಮೀ), ಶರಣಾಗತರಕ್ಷಕನೂ, ಯುದ್ಧದಲ್ಲಿ ವೈರಿಗಳ ಕೈಯಿಂದ ಎಂದೂ ಸೋಲನ್ನು ಅನುಭವಿಸದ ಮಹಾವೀರನಾದ (ಲೋಕೈಕವೀರನಾದ) ಆ ದಿಲೀಪನಿಗೆ ಈಗ ಸಾಮಾನ್ಯವಾದೊಂದು ಸಿಂಹವು ತನ್ನನ್ನು ಲೆಕ್ಕಿಸದೆ ಇದಿರಿಸಿ ನಿಂದಿದೆ. ಹಗೆಗಳನ್ನು ಬೇರುಸಹಿತ ನಿರ್ಮೂಲನಮಾಡಬಲ್ಲ (ಹುಟ್ಟಡಗಿಸಬಲ್ಲ) ಸಾಮರ್ಥ್ಯಹೊಂದಿದ ಆ ಮಹಾಪುರುಷನು ತನಗೆ ಎದುರು ನಿಂತು ತನ್ನನ್ನು ತೃಣಕ್ಕೆ ಬಗೆದು (ಹುಲ್ಲುಕಡ್ಡಿಗೆ ಸಾಟಿಯೆಂದು) (ಜಾತಾಭಿಷಂಗೋ) ಅಟ್ಟಹಾಸದಿಂದ ಮೆರೆಯುತ್ತಿರುವ ಸಿಂಹವನ್ನು ಕಂಡು ರೋಷದಿಂದ ಕಿಡಿಕಿಡಿಯಾಗಿ ಅದರ ಸೊಕ್ಕನ್ನು ಮುರಿಯಲು ದಿವ್ಯಬಾಣವನ್ನು ತೆಗೆಯಲು ಬತ್ತಳಿಕೆಗೆ ಕೈಯಿಕ್ಕಿದನು.

ಅನ್ವಯ :—ತತಃ ಮೃಗೇಂದ್ರಗಾಮೀ ಶರಣ್ಯಃ ಪ್ರಸಭೋದ್ಧೃತಾರಿಃ ಜಾತಾಭಿಷಂಗಃ ನೃಪತಿಃ ವಧ್ಯಸ್ಯ ಮೃಗೇಂದ್ರಸ್ಯ ವಧಾಯ ನಿಷಂಗಾತ್ ಶರಮ್ ಉದ್ಧರ್ತುಮ್ ಐಚ್ಛತ್ ॥

ಮೃಗಾಣಾಂ ಇಂದ್ರಃ । ತಸ್ಯ । ಮೃಗೇಂದ್ರ ಇವ ಗಂತುಂ ಶೀಲಂ ಅಸ್ಯ—ಮೃಗೇಂದ್ರಗಾಮೀ । ವಧಾಯ ಅರ್ಹಃ—ವಧ್ಯಃ । ತಸ್ಯ ! ಶರಣೇ ಸಾಧು—ಶರಣ್ಯಃ । ಜಾತಃ ಅಭಿಷಂಗಃ ಯಸ್ಯ ಸಃ । ನೃಣಾಂ ಪತಿಃ । ಪ್ರಸಭೇನ ಉದ್ಧೃತಾಃ ಅರಯಃ ಯೇನ ಸಃ। ಐಚ್ಛತ್ಐಚ್ಛತಾಂ—ಐಚ್ಛನ್ । ಐಚ್ಛಃ—ಐಚ್ಛತಂ—ಐಚ್ಛತ । ಐಚ್ಛಂ—ಐಚ್ಛಾವ—ಐಚ್ಛಾಮ । ಇಷು—ಇಚ್ಛಾ ಯಾಮ್— ಲಙ್—ಪ್ರ.ಪು.ಏ. ॥

ತತಃ = ಆ ಮೇಲೆ, ಮೃಗೇಂದ್ರಗಾಮೀ = ಸಿಂಹನಡಿಗೆಯ, ಶರಣ್ಯಃ = ಸಾಧುಜನರ ರಕ್ಷಕನಾದ, ಪ್ರಸಭೋದ್ಧೃತಾರಿಃ = ಬಲಾತ್ಕಾರದಿಂದ ನಾಶಪಡಿಸಿದ ಶತ್ರುವುಳ್ಳ, ಸಃ ನೃಪತಿಃ = ಆ ನೃಪನು, ಜಾತಾಭಿಷಂಗಃ = ಉಂಟಾದ ಸೋಲಿನಿಂದ (ಅಭಿಷಂಗಃ = ಪರಾಭವಃ) ವಧ್ಯಸ್ಯ = ಕೊಲ್ಲಲು ಯೋಗ್ಯವಾದ, ಮೃಗೇಂದ್ರಸ್ಯ = ಸಿಂಹದ, ವಧಾಯ = ನಾಶಕ್ಕಾಗಿ, ನಿಷಂಗಾತ್ = ಬತ್ತಳಿಕೆಯಿಂದ, ಶರಂ = ಬಾಣವನ್ನು, ಉದ್ಧರ್ತುಂ = ಹೊರತೆಗೆಯಲು, ಐಚ್ಛತ್ = ಅಪೇಕ್ಷಿಸಿದನು.

**31. ವಾಮೇತರಸ್ತಸ್ಯ ಕರಃ ಪ್ರಹರ್ತು ।**
**ರ್ನಖಪ್ರಭಾಭೂಷಿತಕಂಕಪತ್ರೇ ॥**

**ಸಕ್ತಾಂಗುಲಿಃ ಸಾಯಕಪುಂಖ ಏವ ।**
**ಚಿತ್ರಾರ್ಪಿತಾರಂಭ ಇವಾವತಸ್ಥೇ** ॥ ೩೧ ॥

ಆ ಮಹಾಧನ್ವಿಯು ಬಾಣವನ್ನು ತೊಡಲು ಬತ್ತಳಿಕೆಗೆ ಕೈಹಾಕಿದನು. ಒಂದು ಬಾಣವನ್ನು ಸೆಳೆಯಲು (ಹೂಡಲು) ತನ್ನ ಬಲಗೈಯನ್ನು ಎತ್ತಿದನು. ಆಗ ಆತನ ಬೆರಳುಗಳ ಉಗುರುಗಳ ಕೆಂಪಾದ ಕಾಂತಿಯು ಬಾಣಗಳಿಗೆ ಕಟ್ಟಿದ ಕಂಕಪತ್ರದ ಅಥವಾ ಹದ್ದಿನ ಗರಿಗಳಲ್ಲಿ ಪ್ರಕಾಶಿಸಿ ಅವು ಅತಿಮನೋಹರವಾಗಿ ತೋರಿದುವು. ಬಲಗೈಯ ಅಂಗುಲಿಗಳ ಮಧ್ಯೆ ಬಾಣವನ್ನು ಹಿಡಿದುಕೊಂಡಾಗ ಕಂಕಪತ್ರಗಳಲ್ಲಿ ನಖ ಪ್ರಭೆಯು ವ್ಯಾಪಿಸಿ ನಯನಮನೋಹರವಾಗಿ ಕಂಡಿತು. ಆದರೆ ಆತನ ಕೈಯು ಚಲನೆರಹಿತವಾಗಿ ಅಲ್ಲಿಗೇ ನಿಂತಿತು. ತಟಸ್ಥವಾಯಿತು, ನಿಶ್ಚಲವಾಯಿತು, ಚಿತ್ರದಲ್ಲಿ ಬರೆದಂತೆ. ಪುಂಖಾನುಪುಂಖವಾಗಿ ಬಾಣಪ್ರಯೋಗಮಾಡಬಲ್ಲ ಮಹಾಧನ್ವಿಯಾದ ಆತನ ಸಾಮರ್ಥ್ಯವು ಸಂಪೂರ್ಣವಾಗಿ ಉಡುಗಿಹೋಗಿತ್ತು. ಸಿಂಹವನ್ನು ಕೊಲ್ಲಬೇಕೆಂದು ಬಗೆದು ಬತ್ತಳಿಕೆಗಿಟ್ಟ ಬಲಗೈಯು ಅಂದು ಚಿತ್ರಪಟದಲ್ಲಿ ಬರೆದಂತೆ ಚಲಿಸಲಾರದೆ, ನಿಶ್ಚಲವಾಗಿ ತಾನಿರ್ದುದು (ಚಿತ್ರಾರ್ಪಿತಾರಂಭ).

ಅನ್ವಯ :— ಪ್ರಹರ್ತುಃ ತಸ್ಯ ವಾಮೇತರಃ ಕರಃ ನಖಪ್ರಭಾಭೂಷಿತಕಂಕಪತ್ರೇ ಸಾಯಕಪುಂಖೇ ಏವ ಸಕ್ತಾಂಗುಲಿಃ ಚಿತ್ರಾರ್ಪಿತಾರಂಭಃ ಇವಾವತಸ್ಥೇ ॥

ಸಮವಪ್ರವಿಭ್ಯಃ ಸ್ಥಃ ॥ ಸೂತ್ರದಿಂದ ಅವ ಉಪಸರ್ಗದ ಯೋಗವಿರುವುದರಿಂದ ಸ್ಥಾ ಧಾತುವು ಆತ್ಮನೇಪದವಾಗಿದೆ. ತಸ್ಥೇ—ತಸ್ಥಾತೇ—ತಸ್ಥಿರೇ । ತಸ್ಥಿಷೇ—ತಸ್ಥಾಥೇ—ತಸ್ಥಿಧ್ವೇ । ತಸ್ಥೇ—ತಸ್ಥಿವಹೇ—ತಸ್ಥಿಮಹೇ । ಷ್ಠಾ—ಗತಿನಿವೃತ್ತೌ—ಲಿಟ್—ಪ್ರ.ಪು.ಏ.॥ ವಾಮಾತ್ ಇತರಃ—ವಾಮೇತರಃ । ನಖಾನಾಂ ಪ್ರಭಾಃ । ನಖಪ್ರಭಾಭಿಃ ಭೂಷಿತಾನಿ । ಕಂಕಸ್ಯ ಪತ್ರಾಣಿ । ನಖಪ್ರಭಾ ಭೂಷಿತಾನಿ ಕಂಕಪತ್ರಾಣಿ ಯಸ್ಯ ಸಃ ತಸ್ಮಿನ್ । ನಖಪ್ರಭಾಭೂಷಿತಕಂಕಪತ್ರೇ ಸಕ್ತಾಃ ಅಂಗುಲಯಃ ಯಸ್ಯ ಸಃ ಸಾಯಕಸ್ಯ ಪುಂಖಃ । ಚಿತ್ರೇ ಅರ್ಪಿತಃ । ಚಿತ್ರಾರ್ಪಿತಶ್ಚಾಸೌ ಆರಂಭಶ್ಚ ॥

ಪ್ರಹರ್ತುಃ = ಬಾಣವನ್ನು ಹೊಡೆಯುವ, ತಸ್ಯ = ಆ ದಿಲೀಪನ, ವಾಮೇತರಃ = ದಕ್ಷಿಣ ಭಾಗ (ಬಲಭಾಗ), ಕರಃ = ಕೈಯು, ನಖಪ್ರಭಾಭೂಷಿತಕಂಕಪತ್ರೇ = ಉಗುರಿನ ಕಾಂತಿಯಿಂದ ಉಜ್ವಲವಾದ ಹದ್ದಿನ ಗರಿಯುಳ್ಳ, ಸಾಯಕಪುಂಖೇ ಏವ = ಬಾಣದ ಮೂಲಪ್ರದೇಶದಲ್ಲಿಯೇ, ಸಕ್ತಾಂಗುಲಿಃ = ಸಂಬದ್ಧವಾದ ಬೆರಳುಗಳುಳ್ಳ, ಚಿತ್ರಾರ್ಪಿತಾರಂಭಃ ಇವ = ಚಿತ್ರದಲ್ಲಿ ಬರೆದಂತೆ, ಅವತಸ್ಥೇ = ಇದ್ದಿತು.

32. **ಬಾಹುಪ್ರತಿಷ್ಟಂಭವಿವೃದ್ಧಮನ್ಯು ।**
**ರಭ್ಯರ್ಣಮಾಗಸ್ಕೃತಮಸ್ಪೃಶದ್ಭಿಃ ॥**
**ರಾಜಾ ಸ್ವತೇಜೋಭಿರದಹ್ಯತಾಂತ ।**
**ಭೋಗೀವ ಮಂತ್ರೌಷಧಿರುದ್ಧವೀರ್ಯಃ** ॥ ೩೨ ॥

ತೋಳಿನ ಚಲನೆ ಸ್ತಬ್ಧವಾದುದನ್ನು ನೆನೆದು ದಿಲೀಪನು ಅಧಿಕ ಕೋಪಗೊಂಡನು. ಅಪರಾಧಿಯು ಎದುರುಗಡೆಯಲ್ಲಿದ್ದರೂ ಶಿಕ್ಷಿಸಲಾರದೆ ಮಂತ್ರೌಷಧಗಳ ಪ್ರಯೋಗ

ದಿಂದ ಮಂತ್ರ ಮುಗ್ಧನಾದ, ನಿರ್ವೀರ್ಯನಾಗಿ ತಡೆಯಲ್ಪಟ್ಟ ಸರ್ಪರಾಜನಂತೆ (ಫಣಿ ರಾಜನಂತೆ) ಆ ರಾಜನ ಸ್ಥಿತಿಯಾಯಿತು. ಹೀಗೆ ಇಷ್ಟರ ತನಕ ಸೋಲರಿಯದ, ಪರಾಭವ ಗೊಂಡ ಮಹಾವೀರ್ಯನಾದ ರಾಜನು ತನ್ನ ತೇಜಸ್ಸಿನಿಂದ ಒಳಗೊಳಗೇ ಬೆಂದು ಬೇಗುದಿಗೊಂಡನು. ಅಪರಾಧವೆಸಗಿದ ಶತ್ರುವನ್ನು ಮುಟ್ಟಲಾರದೆ, ತಿರಸ್ಕಾರ ಹೊಂದಿ ನಿಜತೇಜೋಜ್ವಾಲೆ ಒಳಗೊಳಗೇ ಬೇಯಿಸಿತು (ಒಳಗೊಳಗೆ ನಿಜತೇಜದಿಂದುರಿದನು).

ಅನ್ವಯ :—ಬಾಹುಪ್ರತಿಷ್ಟಂಭವಿವೃದ್ಧ ಮನ್ಯುಃ ರಾಜಾ ಮಂತ್ರೌಷಧಿರುದ್ಧ ವೀರ್ಯಃ ಭೋಗೀವ ಅಭ್ಯರ್ಣಮ್ ಆಗಸ್ಕೃತಮ್ ಅಸ್ಪೃಶದ್ಭಿಃ ಸ್ವತೇಜೋಭಿರಂತರ ಅದಹ್ಯತ ॥ ಬಾಹ್ವೋಃ ಪ್ರತಿಷ್ಟಂಭಃ । ಬಾಹುಪ್ರತಿಷ್ಟಂಭೇನವಿವೃದ್ಧಃ ಮನ್ಯುಃ ಯಸ್ಯ ಸಃ । ಆಗಃ ಕರೋತೀತಿ—ಆಗಸ್ಕೃತ್, ತಮ್ । ನ ಸ್ಪೃಶಂತಃ ಅಸ್ಪೃಶಂತಃ, ತೈಃ ಅಸ್ಪೃಶದ್ಭಿಃ । ಸ್ವ ತೇಜಾಂಸಿ, ತೈಃ । ಮಂತ್ರಶ್ಚ ಔಷಧಿಶ್ಚ—ಮಂತ್ರೌಷಧೀ । ಮಂತ್ರೌಷಧಿಭ್ಯಾಂ ರುದ್ಧಂ ವೀರ್ಯಂ ಯಸ್ಯ ಸಃ । ಮಂತ್ರೌಷಧಿರುದ್ಧ ವೀರ್ಯಃ । ಅದವ್ಯತ—ಅದಹ್ಯೇತಾಂ—ಅದಹ್ಯಂತ । ಇತ್ಯಾದಿ । ದಹ—ಭಸ್ಮೀಕರಣೇ—ಕರ್ಮಣಿ —ಲಙ್ ॥

ಬಾಹು ಪ್ರತಿಷ್ಟಂಭವಿವೃದ್ಧಮನ್ಯುಃ = ತೋಳಿನ ಚಲನೆ ನಿಂತುದರಿಂದ ಅಧಿಕಕೋಪ ಗೊಂಡು. ಮಂತ್ರೌಷಧಿರುದ್ಧ ವೀರ್ಯಃ = ಮಂತ್ರ ಮತ್ತು ಔಷಧಿಗಳಿಂದ ತಡೆಯಲ್ಪಟ್ಟ ಶಕ್ತಿಯುಳ್ಳ, ಭೋಗೀ ಇವ = ಸರ್ಪದಂತೆ, ಅಭ್ಯರ್ಣಂ = ಸಮೀಪದಲ್ಲಿ, ಆಗಸ್ಕೃತಂ = ಅಪರಾಧಮಾಡಿದವನನ್ನು, ಅಸ್ಪೃಶದ್ಭಿಃ = ಮುಟ್ಟದಿರುವ, ಸ್ವತೇಜೋಭಿಃ = ತನ್ನ ಶಕ್ತಿಯಿಂದ, ಅಂತಃ ಅದಹ್ಯತ =ಒಳಗಡೆಯೆ ಬೆಂದು ಹೋದನು.

33. ತಮಾರ್ಯಗೃಹ್ಯಂ ನಿಗೃಹಿತಧೇನು ।
ರ್ಮನುಷ್ಯವಾಚಾ ಮನುವಂಶಕೇತುಮ್ ॥
ವಿಸ್ಮಾಯಯನ್ವಿಸ್ಮಿತಮಾತ್ಮವೃತ್ತೌ ।
ಸಿಂಹೋರು ಸತ್ತ್ವಂ ನಿಜಗಾದ ಸಿಂಹಃ ॥ ೩೨ ॥

ಆ ಭಾನುವಂಶಲಲಾಮನು ಸಾಧುಜನರಿಗೆ ಆಶ್ರಯದಾತನು. ಮನುವಂಶಕ್ಕೆ ತಿಲಕ ಪ್ರಾಯನು. ಮನುವಂಶಕ್ಕೆ, ಮಾನವಕುಲಕ್ಕೆ ಧ್ವಜದಂತೆ ಸರ್ವಶ್ರೇಷ್ಠನಾದವನು. ಸಿಂಹ ದಂತೆ ಮಹಾಸತ್ವನಾದ (ಮಹಾಸತ್ತ್ವಶಾಲಿಯಾದ, ಮಹಾವೀರ್ಯನಾದ) ದಿಲೀಪ ಸಾರ್ವಭೌಮನು (ನಿಜವಾದ ಸಿಂಹ) ತನ್ನ ತೋಳು (ಮಹಾಬಾಹು) ಚಲನೆಯಿಲ್ಲದ ಸ್ಥಿತಿಯನ್ನು ನೆನೆದು ವಿಸ್ಮಿತನಾದನು (ವಿಸ್ಮಿತಮಾತ್ಮವೃತ್ತೌ). (ಮನುವಂಶಕೇತುವನು, ಸಿಂಹೋರುಸತ್ವನನು, ವಿಸ್ಮಿತನನು) ಅಷ್ಟರಲ್ಲಿ ತನ್ನ ಎದುರಿಗೇ ನಿಂತು ತನ್ನ ವ್ರತಧೇನು ವನ್ನು ಹಿಡಿಸುತ್ತಿರುವ ಸಿಂಹವನ್ನು ಕಂಡು ನಾಚಿಕೊಂಡನು (ವಿಸ್ಮಿತ ಆತ್ಮವೃತ್ತಾ). ಆಗ ಆ ಮೃಗರಾಜನು ನರರಂತೆ, ಮನುಷ್ಯಭಾಷೆಯಲ್ಲಿ ರಾಜನೊಂದಿಗೆ ಮಾತಾಡಲು ಪ್ರಾರಂಭಿಸಿತು (ಮನುಷ್ಯವಾಚಾಮನುವಂಶಕೇತುಂ). ಅದನ್ನು ಕಂಡು ಆ ಮನುವಂಶ ಲಲಾಮನು ಅಧಿಕ ಆಶ್ಚರ್ಯಗೊಂಡನು, ಖೇದಗೊಂಡನು.

ಅನ್ವಯ :—ನಿಗೃಹೀತಧೇನುಃ ಸಿಂಹಃ ಆರ್ಯಗೃಹ್ಯಂ ಮನುಷ್ಯವಾಚಾಮನು

ವಂಶಕೇತುಂ ಸಿಂಹೋರುಸತ್ತ್ವಂ ಆತ್ಮವೃತ್ತೌ ವಿಸ್ಮಿತಂ ಮನುಷ್ಯವಾಚಾ ವಿಸ್ಮಾಯಯನ್ ಇವ ನಿಜಗಾದ ॥ ಆರ್ಯಾಣಾಂ ಗೃಹ್ಯಃ ತಮ್ । ನಿಗ್ರಹೀತಾ ಧೇನುಃ ಯೇನ ಸಃ, ತಮ್ । ಮನುಷ್ಯ ವಾಕ್—ತಯಾ । ಮನೋಃ ವಂಶಃ । ಮನುವಂಶಸ್ಯ ಕೇತುಃ, ತಂ । ಆತ್ಮನಃ ವೃತ್ತಿಃ, ತಸ್ಯಾಮ್ । ಸಿಂಹ ಇವ ಉರುಸತ್ತ್ವಂ ಯಸ್ಯ ಸಃ, ಸಿಂಹೋರುಸತ್ತ್ವಃ, ತಮ್ । ನಿ—ಉಪಸರ್ಗ । ಜಗಾದ—ಜಗದತುಃ—ಜಗದುಃ । ಜಗದಿಥ—ಜಗದಥುಃ—ಜಗದ । ಜಗಾದ, ಜಗದ—ಜಗದಿವ—ಜಗದಿಮ । ಗದ—ವ್ಯಕ್ತಾಯಾಂ ವಾಚಿ ಲಿಟ್ । ಪ್ರ.ಪು.ಏ. ॥

ನಿಗ್ರಹೀತಧೇನುಂ = ಹಿಡಿದಿರುವ ಹಸುವುಳ್ಳ, ಸಿಂಹಃ = ಸಿಂಹವು, ಆರ್ಯಗೃಹ್ಯಂ =ಸಜ್ಜನರಿಗೆ ಆಶ್ರಯನಾದ, ಮನುವಂಶಕೇತುಂ = ಮನುವಂಶದಲ್ಲಿ ಶ್ರೇಷ್ಠನಾದ, ಸಿಂಹೋರುಸತ್ತ್ವಂ = ಸಿಂಹದಂತೆ ಬಲಿಷ್ಠನಾದ, ಆತ್ಮವೃತ್ತೌ = ತನ್ನ ತೋಳಿನ ಹಿಡಿತ ರೂಪವಾದ ವ್ಯಾಪಾರದಲ್ಲಿ, ವಿಸ್ಮಿತ = ಆಶ್ಚರ್ಯಗೊಂಡಿರುವ, ತಂ = ಆ ದಿಲೀಪನನ್ನು. ಮನುಷ್ಯವಾಚಾ = ಮನುಷ್ಯ ವಚನದಲ್ಲಿ, ವಿಸ್ಮಾಯಯನ್ = ಆಶ್ಚರ್ಯವನ್ನುಂಟು ಮಾಡುತ್ತಾ, ನಿಜಗಾದ = ಹೇಳಿತು.

34. ಅಲಂ ಮಹೀಪಾಲ ತವ ಶ್ರಮೇಣ ।
ಪ್ರಯುಕ್ತಮಪ್ಯಸ್ತ್ರಮಿತೋ ವೃಥಾ ಸ್ಯಾತ್ ॥
ನ ಪಾದಪೋನ್ಮೂಲನಶಕ್ತಿ ರಂಹಃ ।
ಶಿಲೋಚ್ಚಯೇ ಮೂರ್ಛತಿ ಮಾರುತಸ್ಯ ॥ ೩೪ ॥

ಆಗ ಸಿಂಹವು "ಎಲೈ ಮನುಜೇಂದ್ರಾ, ಏಕೆ ವ್ಯಥಾಶ್ರಮಪಡುವೆ ? ನಿನ್ನ ಶ್ರಮವು ವ್ಯರ್ಥ (ತವ ಶ್ರಮೇಣ ಅಲಂ). ನಿನ್ನ ಕಣೆಗಳು ನನ್ನನ್ನು ಮುಟ್ಟಲಾರವು. ಅವು ಬತ್ತಳಿಕೆ ಯಲ್ಲೇ ಇರಲಿ. ವ್ಯರ್ಥಶ್ರಮಪಡದಿರು. ಮಹಾಶಕ್ತಿಯುತವಾದ ಚಂಡಮಾರುತವು ಮಹಾವೃಕ್ಷಗಳನ್ನು ಬುಡಸಹಿತ ಕಿತ್ತು, ಬುಡಮೇಲುಮಾಡಿ ಎಸೆಯಬಹುದು. ಆದರೆ ಅಂತಹ ಮಾರುತನ ವೇಗವು ಪರ್ವತವನ್ನು ಭೇದಿಸಿಕೊಂಡು ಹೋಗಲಾರದು, ತಿಳಿಯಿತೇ"

ಅನ್ವಯಃ—ಹೇ ಮಹೀಪಾಲ ತವ ಶ್ರಮೇಣ ಅಲಮ್ ಇತಃ ಪ್ರಯುಕ್ತಮಪಿ ಅಸ್ತ್ರಂ ವೃಥಾ ಸ್ಯಾತ್ । ಪಾದಪೋನ್ಮೂಲನಶಕ್ತಿ ಮಾರುತಸ್ಯ ರಂಹಃ ಶಿಲೋಚ್ಚಯೇ ನ ಮೂರ್ಛತಿ ॥

ಮಹ್ಯಾಃ ಪಾಲಃ । ಪಾದೈಃ ಪಿಬತಿ ಇತಿ ಪಾದಪಃ, ತಸ್ಯ ಉನ್ಮೂಲನಂ ಪಾದ ಪೋನ್ಮೂಲನೇ ಶಕ್ತಿಃ ಯಸ್ಯ ತತ್, ಪಾದಪೋನ್ಮೂಲನಶಕ್ತಿ । ಶಿಲಾನಾಂ ಉಚ್ಚಯಃ ಯಸ್ಮಿನ್ ಸಃ ತಸ್ಮಿನ್ । ಸ್ಯಾತ್—ಸ್ಯಾತಾಂ—ಸ್ಯುಃ । ಸ್ಯಾಃ—ಸ್ಯಾತಂ—ಸ್ಯಾತ್ । ಸ್ಯಾಂ —ಸ್ಯಾವ—ಸ್ಯಾಮ । ಅಸ—ಭುವಿ—ವಿಧಿಲಿಙ್ । ಮೂರ್ಛತಿ—ಮೂರ್ಛಾ—ಮೋಹನ ಸಮುಚ್ಛ್ರಾಯಯೋಃ—ಲಟ್ ॥

ಹೇ ಮಹೀಪಾಲ = ಎಲೈ ರಾಜನೇ, ತವ = ನಿನ್ನ, ಶ್ರಮೇಣ = ಆಯಾಸದಿಂದ, ಅಲಂ = ಸಾಕು, ಇತಃ = ನನ್ನಲ್ಲಿ (ಸಾರ್ವವಿಭಕ್ತಿಕ ತಸ್ಯಸಿಃ) ಪ್ರಯುಕ್ತಮಪಿ = ಪ್ರಯೋಗಿ ಸಲ್ಪಟ್ಟ, ಅಸ್ತ್ರಂ = ಬಾಣವು, ವೃಥಾ ಸ್ಯಾತ್ = ವ್ಯರ್ಥವಾದೀತು. ಪಾದಪೋನ್ಮೂಲನ

ಶಕ್ತಿ= ಮರವನ್ನು ಕೀಳಬಲ್ಲ ಶಕ್ತಿಯುಳ್ಳ, ಮಾರುತಸ್ಯ= ವಾಯುವಿನ, ರಂಹಃ = ವೇಗವು, ಶಿಲೋಚ್ಚಯೇ = ಪರ್ವತದಲ್ಲಿ. ನ ಮೂರ್ಛತಿ = ಪ್ರಸರಿಸುವುದಿಲ್ಲ.

**35. ಕೈಲಾಸಗೌರಂ ವೃಷಮಾರುರುಕ್ಷೋಃ ।**
**ಪಾದಾರ್ಪಣಾನುಗ್ರಹಪೂತಪೃಷ್ಠಮ್ ॥**
**ಅವೇಹಿ ಮಾಂ ಕಿಂಕರಮಷ್ಟಮೂರ್ತೇಃ ।**
**ಕುಂಭೋದರಂ ನಾಮ ನಿಕುಂಭಮಿತ್ರಮ್ ॥ ೩೫ ॥**

"ಎಲೈ ಅರಸನೇ, ನಾನೇ ಕುಂಬೋಧರನು, ಜಗನ್ಮಾತೆಯಾದ ಪಾರ್ವತಿಯ ವಾಹನ ವಾದ ನಿಕುಂಭನೆಂಬ ಕೇಸರಿಯ ಮಿತ್ರನು ನಾನು. ಕೈಲಾಸದಂತೆ ಶುಭ್ರವಾದ ಬಿಳಿಯ ಮೈಯಿಂದ ಶೋಭಿಸುವ ಬಸವರಾಜನಾದ ನಂದೀಶನನ್ನು ಏರುವಾಗ ಪರಮೇಶ್ವರನು ನನ್ನ ಮೇಲೆ ಒಂದು ಹೆಜ್ಜೆಯನ್ನಿಟ್ಟು ಏರುವನು. ಇದರಿಂದ ಪವಿತ್ರವಾದ ಬೆನ್ನುಳ್ಳ ನನ್ನನ್ನು ಶಿವನ ಸೇವಕನೆಂದು ತಿಳಿ. ಆ ಪರಶಿವನ 8 ರೂಪಗಳೇ ಪೃಥ್ವಿ, ಜಲ, ತೇಜಸ್ಸು, ವಾಯು, ಆಕಾಶ, ಸೂರ್ಯ, ಚಂದ್ರ, ಸೋಮರೆಂದು ತಿಳಿ" ಎಂದಿತು.

ಅನ್ವಯ:—ಕೈಲಾಸಗೌರಂ ವೃಷಮಾರುರುಕ್ಷೋಃ ಅಷ್ಟಮೂರ್ತೇಃ ಪಾದಾರ್ಪಣಾನುಗ್ರಹಂ ಪೂತದೃಷ್ಟಮ್ ನಿಕುಂಭಮಿತ್ರಮ್ ಕುಂಭೋದರಂ ನಾಮ ಕಿಂಕರಂ ಮಾಮವೇಹಿ ॥

ಕೈಲಾಸಃ ಇವ ಗೌರಃ, ತಮ್ । ಆರೋಢುಂ ಇಚ್ಛುಃ ಆರುರುಕ್ಷುಃ, ತಸ್ಯ । ಪಾದಸ್ಯ ಅರ್ಪಣಂ, ಪಾದಾರ್ಪಣಮೇವ ಅನುಗ್ರಹಃ ಃ ಪಾದಾರ್ಪಣಾನುಗ್ರಹೇಣ ಪೂತಂ ಪೃಷ್ಠಂ ಯಸ್ಯ ಸಃ ಪಾದಾರ್ಪಣಾನುಗ್ರಹ ಪೂತಪೃಷ್ಠಃ, ತಮ್ । ಅಷ್ಟಮೂರ್ತಯಃ ಯಸ್ಯ ಸಃ. ಅಷ್ಟಮೂರ್ತಿಃ, ತಸ್ಯ । ನಿಕುಂಭಸ್ಯ ಮಿತ್ರಂ । ಅವ—ಉಪಸರ್ಗ, ಏತು, ಇತಾತ್—ಇತಾಂ—ಯುತು । ಇಹಿ, ಇತಾತ್—ಇತಂ—ಇತ । ಅಯಾನಿ—ಅಯಾವ —ಅಯಾಮ । ಇಣ್—ಗತೌ—ಲೋಟ್—ಮ.ಪು.ಏ. ॥

ಕೈಲಾಸಗೌರಂ = ಕೈಲಾಸಪರ್ವತದಂತೆ ಬೆಳ್ಳಗಾದ, ವೃಷಂ = ಎತ್ತನ್ನು, ಆರುರುಕ್ಷೋಃ = ಏರಲು ಬಯಸುವ, ಅಷ್ಟಮೂರ್ತೇಃ = ಶಿವನ, ಪಾದಾರ್ಪಣಾನುಗ್ರಹ ಪೂತಪೃಷ್ಠ = ಪಾದಾರ್ಪಣ, ಪಾದನ್ಯಾಸಾದುವುದು, ರೂಪವಾದ, ಅನುಗ್ರಹ = ಪ್ರಸಾದದಿಂದ, ಪೂತಪೃಷ್ಠಂ = ಪವಿತ್ರವಾದ ಬೆನ್ನುಳ್ಳ, ನಿಕುಂಭಮಿತ್ರಂ = ನಿಕುಂಭನಿಗೆ ಸ್ನೇಹಿತನಾದ, ಕುಂಭೋದರಂ ನಾಮ = ಕುಂಭೋದರನೆಂಬ ಹೆಸರುಳ್ಳ, ಕಿಂಕರಂ = ಸೇವಕನನ್ನಾಗಿ, ಮಾಂ = ನನ್ನನ್ನು. ಅವೇಹಿ = ಹಾಗೆಂದು ತಿಳಿ.

**36. ಅಮುಂ ಪುರಃ ಪಶ್ಯಸಿ ದೇವದಾರುಂ ।**
**ಪುತ್ರೀಕೃತೋಽಸಾ ವೃಷಭಧ್ವಜೇನ ॥**
**ಯೋ ಹೇಮಕುಂಭಸ್ತನನಿಃಸೃತಾನಾಂ ।**
**ಸ್ಕಂದಸ್ಯ ಮಾತುಃ ಪಯಸಾಂ ರಸಜ್ಞಃ ॥ ೩೬ ॥**

ಎಲೈ ರಾಜೇಂದ್ರನೇ, ಈ ಗವಿಯ ಮುಂದೆ ಇರುವ ಆ ದೇವದಾರು ವೃಕ್ಷವನ್ನು

ನೋಡು. ಅದನ್ನು ಜಗನ್ಮಾತೆಯಾದ, ಕಾರ್ತಿಕೇಯ ಸ್ವಾಮಿಯ ಜನನಿಯಾದ ಪಾರ್ವತೀ ದೇವಿಯು ಸ್ವತಃ ತನ್ನ ಕೈಯಿಂದಲೇ ಕೊಡದಿಂದ ನೀರೆರೆದು ಬೆಳೆಸಿರುವಳು, ಹೇಗೆ ಸ್ಕಂದನು ಈ ಹಿಂದೆ ತನ್ನ ಜನನಿ ಮಾಹೇಶ್ವರಿಯಾದ ಹೈಮವತೀದೇವಿಯ ಚಿನ್ನದ ಕಲಶಗಳಂತಹ ಸ್ತನಗಳಿಂದ (ಹೇಮಕುಂಭಸ್ತನೀ) ಧಾರೆಯಾಗಿ ಹರಿಯುತ್ತಿರುವ ಹಾಲನ್ನು ಹೀರಿ ಬೆಳೆದನೋ ಅಂತೆಯೇ ಆ ವಿಶ್ವಜನನಿಯು ಎರೆದ ನೀರನ್ನು ಸವಿಸವಿದು ಕುಮಾರನಂತೆಯೇ ಈ ಮರವು ಬೆಳೆಯಿತು. ಅದನ್ನು ಆ ಮಾತೆಯು ತನ್ನ ಪುತ್ರ ನಂತೆಯೇ ಕಾಣುವಳು. ಜಗದ್ ರಕ್ಷಕನಾದ ನಂದಿವಾಹನನಾದ ಪರಶಿವನೂ ಅದನ್ನು (ಆ ವೃಕ್ಷವನ್ನು) ತನ್ನ ಮಗನಂತೆಯೇ ಕಾಣುತ್ತಿರುವನು.

ಅನ್ವಯ :—ಪುರಃ ಅಮುಂ ದೇವದಾರುಂ ಪಶ್ಯಸಿ । ಅಸೌ ವೃಷಭಧ್ವಜೇನ ಪುತ್ರೀಕೃತಃ। ಯಃ ಸ್ಕಂದಸ್ಯ ಮಾತುಃ ಹೇಮಕುಂಭಸ್ತನ ನಿಃಸ್ಸೃತಾನಾಂ ಪಯಸಾಂ ರಸಜ್ಞಃ ॥

ಅಪುತ್ರಃ ಪುತ್ರತ್ವೇನ ಸಂಪದ್ಯಮಾನಃ ಕೃತಃ—ಪುತ್ರೀಕೃತಃ । ವೃಷಭಃ ಧ್ವಜಃ ಯಸ್ಯ ಸಃ, ತೇನ । ಹೇಮ್ನಃ ಕುಂಭೌ, ಹೇಮಕುಂಭೌ ಸ್ತನೌ ಇವ, ಹೇಮಕುಂಭಸ್ತನೌ, ಹೇಮಕುಂಭಸ್ತನಾಭ್ಯಾಂ ನಿಃಸ್ಸೃತಾನಿ, ಹೇಮಕುಂಭ ಸ್ತನ ನಿಃಸ್ಸೃತಾನಿ, ತೇಷಾಂ । (ಹೇಮಕುಂಭೌ ಇವ ಸ್ತನೌ) । ರಸಂ ಜಾನಾತಿ ಇತಿ ರಸಜ್ಞಃ । ಪಶ್ಯಸಿ—ದೃಶಿರ್—ಪ್ರೇಕ್ಷಣೇ—ಲಟ್—ಮ.ಪು.ಏ. ॥

ಪುರಃ = ಮುಂಭಾಗದಲ್ಲಿ, ಅಮುಂ= ಈ, ದೇವದಾರುಂ = ದೇವದಾರು ವೃಕ್ಷವನ್ನು, ಪಶ್ಯಸಿ = ನೋಡುತ್ತಿರುವೆ, ಅಸೌ = ಈ ಮರವು, ವೃಷಭಧ್ವಜೇನ = ಪರಮೇಶ್ವರ ನಿಂದ, ಪುತ್ರೀಕೃತಃ = ಪುತ್ರನಂತೆ ಅಂಗೀಕೃತವಾಗಿರು, ಯಃ = ಯಾವ, ಸ್ಕಂದಸ್ಯ= ಷಣ್ಮುಖನ, ಮಾತುಃ = ತಾಯಿಯಾದ, ಹೇಮಕುಂಭಸ್ತನನಿಃ ಸ್ಸೃತಾನಾಂ = ಚಿನ್ನದ ಕೊಡದಂತಿರುವ ಸ್ತನದಿಂದ ಸುರಿಯುವ, ಪಯಸಾಂ = ನೀರಿನ, ರಸಜ್ಞಃ = ರುಚಿಯನ್ನು ತಿಳಿದಿರುವ.

37\. ಕಂಡೂಯಮಾನೇನ ಕಟಂ ಕದಾಚಿತ್ ।
ವನ್ಯದ್ವಿಪೇ ನೋನ್ಮಥಿತಾ ತ್ವಗಸ್ಯ॥
ಅಥೈನಮದ್ರೇಸ್ತನಯಾ ಶುಶೋಚ ।
ಸೇನಾನ್ಯಮಾಲೀಢ ಮಿವಾ ಸುರಾಸ್ತ್ರೈಃ ॥ ೩೭ ॥

ಒಂದಾನೊಂದು ದಿನ ಒಂದು ಕಾಡಾನೆಯು ಈ ದೇವದಾರು ವೃಕ್ಷದ ಬಳಿಗೆ ಬಂದು ತನ್ನ ಕೆನ್ನೆಯ ತುರಿಕೆಯನ್ನು ಹೋಗಲಾಡಿಸಲು ತನ್ನ ಗಂಡಸ್ಥಲವನ್ನು ಚೆನ್ನಾಗಿ ಮರಕ್ಕೆ ಉಜ್ಜಿತು. ಆಗ ಅತಿಮೃದುವಾದ ಅದರ ತೊಗಟೆಯು ಕಿತ್ತುಹೋಯಿತು. ಅದನ್ನು ನೋಡಿದ ಹಿಮವಂತನ ಪುತ್ರಿಯಾದ ಪಾರ್ವತೀದೇವಿಯು (ಅದ್ರಿತನಯೆ) ಅತ್ಯಂತ ವ್ಯಸನಪಟ್ಟು ಮರುಗಿದಳು. ಈ ಹಿಂದೆ ಅವಳ ಕುಮಾರನಾದ, ದೇವತೆಗಳ ಸೇನಾ ನಾಯಕನಾದ (ದೇವಸೇನಾನೀ) ಕುಮಾರಸ್ವಾಮಿಯು (ಷಣ್ಮುಖನು) ದೇವಾಸುರರ ಯುದ್ಧದಲ್ಲಿ ರಾಕ್ಷಸರ ಬಾಣಗಳಿಂದ ಗಾಯಗೊಂಡುದನ್ನು ಕಂಡು, ಮಗನ ದೇಹದ ಗಾಯಗಳನ್ನು ಕಂಡು ತೀವ್ರವಾಗಿ ದುಃಖಿಸಿದಂತೆ ಮರುಗಿದಳು.

ಅನ್ವಯಃ : ಕದಾಚಿತ್ ಕಟಂ ಕಂಡೂಯಮಾನೇನ ವನ್ಯದ್ವಿಪೇನ ಅಸ್ಯ ತ್ವಗುನ್ಮಥಿತಾ । ಅಥಾದ್ರೇಸ್ತನಯಾ ಅಸುರಾಸ್ತ್ರೈರಾಲೀಢಂ ಸೇನಾನ್ಯಮಿವ ಏನಂ ಶುಶೋಚ ॥

ವನೇ ಭವಃ ವನ್ಯಃ । ವನ್ಯಶ್ಚಾಸೌ ದ್ವಿಪಶ್ಚ । ತೇನ—ವನ್ಯದ್ವಿಪೇನ । ಅಸುರಾಣಾಂ ಅಸ್ತ್ರಾಣಿ । ತೈಃ । ಶುಶೋಚ—ಶುಶುಚತುಃ—ಶುಶುಚುಃ । ಶುಶೋಚಿಥ—ಇತ್ಯಾದಿ । ಶುಚ—ಅವ್ಯಕ್ತೇ ಶಬ್ದೇ—ಲಿಟ್—ಪ್ರ.ಪು.ಏ ॥

ಕದಾಚಿತ್ = ಒಂದಾನೊಂದು ಕಾಲದಲ್ಲಿ, ಕಟಂ = ಕಪೋಲಸ್ಥಲವನ್ನು, ಕಂಡೂಯಮಾನೇನ = ನವೆ ತುರಿಸಿಕೊಳ್ಳುವ ಸಲುವಾಗಿ, ವನ್ಯದ್ವಿಪೇನ = ಕಾಡಾನೆಯಿಂದ, ಅಸ್ಯ= ಈ ದೇವದಾರು ವೃಕ್ಷದ, ತ್ವಕ್ = ತೊಗಟೆಯು, ಉನ್ಮಥಿತಾ = ಕೀಳಲ್ಪಟ್ಟಿತು. ಅಥ = ಆಮೇಲೆ. ಅದ್ರೇಃ ತನಯಾ = ಪಾರ್ವತೀದೇವಿಯು, ಅಸುರಾಸ್ತ್ರೈಃ = ರಾಕ್ಷಸರ ಬಾಣಗಳಿಂದ, ಆಲೀಢಂ = ಗಾಯಗೊಂಡ, ಸೇನಾನ್ಯಂ ಇವ = ಷಣ್ಮುಖನು ಇವನು ಎಂಬಂತೆ, ಏನಂ = ಈ ವೃಕ್ಷವನ್ನು, ಶುಶೋಚ = ವ್ಯಥೆಪಡು.

**38.** **ತದಾ ಪ್ರಭೃತ್ಯೇವ ವನದ್ವಿಪಾನಾಂ ।**
**ತ್ರಾಸಾರ್ಥಮಸ್ಮಿನ್ನಹಮದ್ರಿಕುಕ್ಷೌ ॥**
**ವ್ಯಾಸಾರಿತಃ ಶೂಲಭೃತಾ ವಿಧಾಯ ।**
**ಸಿಂಹತ್ವಮಂಕಾಗತ ಸತ್ತ್ವವೃತ್ತಿ** || ೩೮ ||

"ಎಲೈ ನೃಪವರ, ಈ ಪರ್ವತ ವಲಯದಲ್ಲಿ ಸುತ್ತುತ್ತಿರುವ ಕಾಡಾನೆಗಳ ಕಾಟದಿಂದ, ತನ್ನ ಪ್ರಿಯಳಿಗೆ ಪ್ರಿಯವಾದ, ಆ ದೇವದಾರು ವೃಕ್ಷವನ್ನು (ಮರವನ್ನು) ಉಳಿಸಲು ಎನಗೆ ಸಿಂಹರೂಪವನ್ನು ಕರುಣಿಸಿ, ನನ್ನನ್ನು ಈ ಗವಿಯಲ್ಲಿ ವಾಸಿಸಿರುವಂತೆ ಶೂಲಧರನಾದ ಶಿವನು ನೇಮಿಸಿರುವನು. ನನ್ನ ಬಳಿಗೆ ಬರುವ ಯಾವ ಪ್ರಾಣಿಯೇ ಆಗಲಿ ಅದು ನನ್ನ ಆಹಾರ (ಉಪಾಹಾರ). ಅದನ್ನು ನಾನು ಅತ್ಯಂತಪ್ರೀತಿಯಿಂದ (ಸುಪ್ರೀತಿಯಿಂದ) ಭುಂಜಿಸುತ್ತಿರುವೆನು.

ಅನ್ವಯಃ :—ತದಾ ಪ್ರಭೃತ್ಯೇವ ವನದ್ವಿಪಾನಾಂ ತ್ರಾಸಾರ್ಥಂ ಶೂಲಭೂತಾ ಅಂಕಾಗತ ಸತ್ತ್ವವೃತ್ತಿ ಸಿಂಹತ್ವಂ ವಿಧಾಯ ಅಸ್ಮಿನ್ನದ್ರಿಕುಕ್ಷೌ ಅಹಂ ವ್ಯಾಪಾರಿತಃ ॥

ತದಾಪ್ರಭೃತಿಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ—ತದಾಪ್ರಭೃತಿಃ । ವನಸ್ಯ ದ್ವಿಪಾಃ, ತೇಷಾಮ್ । ತ್ರಾಸಾಯ—ತ್ರಾಸಾರ್ಥಂ । ಅದ್ರೇಃ ಕುಕ್ಷಿಃ, ತಸ್ಮಿನ್ । ಶೂಲಂ ಬಿಭರ್ತಿ ಇತಿ ಶೂಲಭೃತ್ । ಸಿಂಹಸ್ಯಭಾವಃ—ಸಿಂಹತ್ವಮ್ । ಅಂಕೇ ಆಗತಂ । ಅಂಕಾಗತಂ ಚ ತತ್ ಸತ್ತ್ವಂ ಚ । ಅಂಕಾಗತಸತ್ತ್ವಂ ವೃತ್ತಿಃ ಯಸ್ಯ ತತ್ । ಅಂಕಾಗತ ಸತ್ತ್ವಂ ವೃತ್ತಿ॥

ತದಾಪ್ರಭೃತಿ ಏವ = ಅಂದಿನಿಂದಲೇ, ವನದ್ವಿಪಾನಾಂ = ಕಾಡಾನೆಗಳ, ತ್ರಾಸಾರ್ಥಂ = ಭಯಂ ಹುಟ್ಟಿಸುವುದಕ್ಕೋಸ್ಕರವೇ. ಶೂಲಭೃತಾ = ಶಿವನಿಂದ, ಅಂಕಾಗತಸತ್ತ್ವ ವೃತ್ತಿ= ಸಮೀಪಕ್ಕೆ ಬಂದಿರುವ, ಪ್ರಾಣಿಗಳೇ ಆಹಾರವಾಗಿರುವ, (ಅಂಕಃ ಸಮೀಪ ಉತ್ಸಂಗೇ ಚಿಹ್ನೇ ಸ್ಥಾನಾಪರಾಧಯೋಃ—ಕೋಶ) ಸಿಂಹತ್ವಂ=ಸಿಂಹದ ಸ್ವರೂಪವನ್ನು, ವಿಧಾಯ = ಮಾಡಿ. ಅಸ್ಮಿನ್ = ಈ, ಅದ್ರಿಕುಕ್ಷೌ = ಪರ್ವತದ ಗುಹೆಯಲ್ಲಿ, ಅಹಂ = ನಾನು, ವ್ಯಾಪಾರಿತಃ = ನಿಯೋಗಿಸಲ್ಪಟ್ಟಿರುವೆ.

**39. ತಸ್ಯಾಲಮೇಷಾ ಕ್ಷುಧಿತಸ್ಯ ತೃಪ್ತ್ಯೈ।**
**ಪ್ರದಿಷ್ಟಕಾಲಾ ಪರಮೇಶ್ವರೇಣ ॥**
**ಉಪಸ್ಥಿತಾ ಶೋಣಿತಪಾರಣಾ ಮೇ।**
**ಸುರದ್ವಿಷಶ್ಚಾಂದ್ರಮಸೀ ಸುಧೇವ ॥ ೩೯ ॥**

ಎಲೈ ವಸುಂಧಾಧಿಪತಿಯೆ (ವಸುಂಧರೆಯ ಒಡೆಯನೆ), ಸಮಸ್ತ ಸೃಷ್ಟಿಯ ನಿಯಾಮಕನಾದ ಪರಮೇಶ್ವರನ ಇಚ್ಛೆಯಂತೆ, ಕಾಲನ ಪ್ರೇರೇಪಣೆಯಂತೆ ಈ ಗೋವು ನನ್ನ ಆಹಾರವಾಗಿ (ಕವಳ, ತುತ್ತು) ನನ್ನತ್ತ ಸುಳಿದಿದೆ. ಉಪವಾಸವ್ರತ ಮುಗಿದು ಜನರು ಪಾರಣೆಯನ್ನು ಮಾಡುವಂತೆ ಇದರ ರಕ್ತವನ್ನು ಹೀರಿ ನನ್ನ ಹಸಿವುಬಾಯಾರಿಕೆಯನ್ನು ತಣಿಸಿಕೊಳ್ಳುವೆನು. ಹೇಗೆ ದೇವತೆಗಳ ವೈರಿಯಾದ ರಾಹುವು ಗ್ರಹಣ ಕಾಲದಲ್ಲಿ ಅಮೃತಸಮಾನವಾದ ಚಂದ್ರನ ಶೀತಕಿರಣಗಳನ್ನು ಹೀರಿ ತನ್ನನ್ನು ಪೋಷಿಸಿಕೊಳ್ಳುವಂತೆ ನಾನು ಈ ಸುರಧೇನು ನಂದಿನಿಯ ಶೋಣಿತದಿಂದ ಪಾರಣೆ (ಆರೋಗಣೆ) (ಶೋಣಿತಪಾರಣಾಮೇ) ಮಾಡುವೆನು.

ಅನ್ವಯ:—ತಸ್ಯ ಕ್ಷುಧಿತಸ್ಯ ಮಮ ತೃಪ್ತ್ಯೈ ಪರಮೇಶ್ವರೇಣ ಪ್ರದಿಷ್ಟಕಾಲಾ ಏಷಾ ಅಲಮ್ । ಸುರಾದ್ವಿಷಶ್ಚಾಂದ್ರಮಸೀ ಸುಧೇವಮೇ ಶೋಣಿತಪಾರಣಾ ಉಪಸ್ಥಿತಾ ॥

ಪರಮಶ್ಚಾಸೌ ಈಶ್ವರಶ್ಚ । ಪ್ರದಿಷ್ಟಃ ಕಾಲಃ ಯಸ್ಯಾಃ ಸಾ—ಪ್ರದಿಷ್ಟಕಾಲಾ । ಶೋಣಿತಂ ಪಾರಣಂ ಯಸ್ಯಾಃ ಸಾ । ಸುರಾಣಾಂ ದ್ವಿಟ್—ತಸ್ಯ। ಚಂದ್ರಮಸಃ ಇಯಂ—ಚಾಂದ್ರಮಸೀ ॥

ಪರಮೇಶ್ವರೇಣ = ಶಿವನಿಂದ. ಪ್ರದಿಷ್ಟಕಾಲಾ = ತೋರಿಸ್ಪಟ್ಟ ಭೋಜನದ ಸಮಯವುಳ್ಳ, ಉಪಸ್ಥಿತಾ = ಸಮೀಪಕ್ಕೆ ಬಂದಿರುವ, ಏಷಾ = ಈ ಗೋವು, ಶೋಣಿತ ಪಾರಣಾ = ರಕ್ತವೇ ಭೋಜನವಾಗಿರುವ, ಸುರದ್ವಿಷಃ = ರಾಹುವಿಗೆ, ಚಾಂದ್ರಮಸೀ = ಚಂದ್ರನ ಸಂಬಂಧಿಯಾದ, ಇವ = ಅಮೃತದಂತೆ, ಕ್ಷುಧಿತಸ್ಯ = ಹಸಿದಿರುವ, ತಸ್ಯ = ಸಮೀಪಕ್ಕೆ ಬಂದ, ಪ್ರಾಣಿಯೇ ಜೀವನವಾಗಿರುವ, ಮೇ = ನನಗೆ ತೃಪ್ತ್ಯೈ=ತೃಪ್ತಿಪಡಿಸಲು, ಅಲಂ = ಸಮರ್ಥವಾಗಿದೆ.

**40. ಸತ್ವಂ ನಿವರ್ತಸ್ವ ವಿಹಾಯ ಲಜ್ಜಾಂ।**
**ಗುರೋರ್ಭವಾನ್ ದರ್ಶಿತ ಶಿಷ್ಯಭಕ್ತಿಃ ॥**
**ಶಸ್ತ್ರೇಣ ರಕ್ಷ್ಯಂ ಯದಶಕ್ಯರಕ್ಷಂ।**
**ನ ತದ್ಯಶಃ ಶಸ್ತ್ರಭೃತಾಂ ಕ್ಷಿಣೋತಿ ॥ ೪೦ ॥**

"ಎಲೈ, ರಾಜಕುಠೀರವನೇ, ನನ್ನನ್ನು ನಿಗ್ರಹಿಸಲು ನಿನ್ನಲ್ಲಿ ಯಾವ ಉಪಾಯವೂ ತಲೆದೋರದೆ ಚಿಂತಿಸದಿರು. ಅದಕ್ಕಾಗಿ ನಾಚಿಕೆಪಡದಿರು (ವಿಹಾಯಲಜ್ಜಾಂ). ನೀನು ಸಮಯ ಕಳೆಯದೆ ಹೊರಟುಹೋಗು. ನೀನು ಇಷ್ಟರ ತನಕ ನಿನ್ನ ಶಿಷ್ಯಭಕ್ತಿಯನ್ನು ತೋರಿರುವೆ. ಗುರುವಿನ ವಸ್ತುವನ್ನು ಬಿಟ್ಟುಹೋಗಿ ಆ ಗುರುವನ್ನು ಹೇಗೆ ನೋಡಲಿ ಎಂದು ಶಂಕಿಸದಿರು. ಏಕೆಂದರೆ ರಕ್ಷಿಸಲ್ಪಡುವ ವಸ್ತು ಶಸ್ತ್ರಾಸ್ತ್ರಗಳ ಶಕ್ತಿಗೆ ಮೀರಿದುದು (ಅಶಕ್ಯರಕ್ಷಂ) ಎಂದಿರುವಾಗ ಶಸ್ತ್ರವನ್ನು ಧರಿಸಿದ ಶಸ್ತ್ರಧರನಿಗೆ ಯಾವ ಕುಂದೂ ಬಾರದು.

ಇದರಿಂದ ಶ್ರೇಷ್ಠವಾದ ಶಸ್ತ್ರಾಸ್ತ್ರಗಳನ್ನು ಧರಿಸಿರುವ ನಿನ್ನಂತಹ ಮಹಾವೀರನ ಕೀರ್ತಿಗೆ ಯಾವ ಕೊರತೆಯೂ ಇರದು. ಇದು ಸತ್ಯ (ಪರಮ ಸತ್ಯ)'' ಎಂದಿತು.

ಅನ್ವಯ :—ಸತ್ವ ಲಜ್ಜಾಂ ವಿಹಾಯ ನಿವರ್ತಸ್ವ, ಭವಾನ್ ಗುರೋಃ ದರ್ಶಿತಶಿಷ್ಯ ಭಕ್ತಿಃ । ಯದ್ರಕ್ಷ್ಯಂ ಶಸ್ತ್ರೇಣ ಅಶಕ್ಯರಕ್ಷ ತತ್ । (ನಷ್ಟಮಪಿ) ಶಸ್ತ್ರಭೃತಾಂ ಯಶಃ ನ ಕ್ಷಿಣೋತಿ ॥

ನಿ ಉಪಸರ್ಗ । ವರ್ತತಾಂ—ವರ್ತೇತಾಂ—ವರ್ತಂತಾಂ । ವರ್ತಸ್ವ—ವರ್ತೇಥಾಂ—ವರ್ತಧ್ವಂ । ವರ್ತೈ—ವರ್ತಾವಹೈ—ವರ್ತಾಮಹೈ । ವೃತು—ವರ್ತನೇ—ಲೋಟ್—ಮ.ಪು.ಏ. । ಶಿಷ್ಯಸ್ಯ ಭಕ್ತಿಃ । ದರ್ಶಿತಾ ಶಿಷ್ಯಭಕ್ತಿಃ ಯೇನ ಸಃ–ದ–ಕ್ತಿಃ । ನ ಶಕ್ಯಾ, ಅಶಕ್ಯಾ, ಅಶಕ್ಯಾ ರಕ್ಷಾ ಯಸ್ಯ ತತ್–ಅ–ಕ್ಷಮ್ । ಶಸ್ತ್ರಂ ಬಿಭರ್ತಿ ಇತಿ, ಶಸ್ತ್ರಭೃತಃ, ತೇಷಾಮ್ । ಕ್ಷಿಣೋತಿ—ಕ್ಷಿಣುತಃ—ಕ್ಷಿಣ್ವಂತಿ । ಕ್ಷಿಣೋಷಿ—ಕ್ಷಿಣುಥಃ—ಕ್ಷಿಣುಥ । ಕ್ಷಿಣೋಮಿ—ಕ್ಷಿಣುವಃ—ಕ್ಷಿಣುಮಃ । ಕ್ಷಿ ಕ್ಷಯೇ—ಲಟ್—ಪ್ರ.ಪು.ಏ. ॥

ಸಃ ತ್ವಂ = ಉಪಾಯ ತೋರದ ನೀನು, ಲಜ್ಜಾಂ = ನಾಚಿಕೆಯನ್ನು, ವಿಹಾಯ = ತೊರೆದು, ನಿವರ್ತಸ್ವ = ಹಿಂದಿರುಗು, ಭವಾನ್ = ನೀನು, ಗುರೋಃ = ಗುರುಗಳಿಗೆ, ದರ್ಶಿತಶಿಷ್ಯಭಕ್ತಿಃ = ತೋರಿಸಲ್ಪಟ್ಟ ಶಿಷ್ಯಭಕ್ತಿಯುಳ್ಳವನಾಗಿ, ಯತ್ = ಯಾವುದು, ರಕ್ಷ್ಯಂ = ರಕ್ಷಣೆಗೆ ಯೋಗ್ಯವಾಗಿ, ಶಸ್ತ್ರೇಣ = ಆಯುಧದಿಂದ, ಅಶಕ್ಯರಕ್ಷಂ = ರಕ್ಷಿಸಲು ಅಸಾಧ್ಯವಾಗಿ, ತತ್ =ಅದು, ಶಸ್ತ್ರಭೃತಾಂ = ಆಯುಧ ಧರಿಸಿದವರ, ಯಶಃ = ಕೀರ್ತಿಯನ್ನು, ನಕ್ಷಿಣೋತಿ = ನಾಶಮಾಡುವುದಿಲ್ಲ.

**41. ಇತಿ ಪ್ರಗಲ್ಭಂ ಪುರುಷಾಧಿರಾಜೋ ।**
**ಮೃಗಾಧಿರಾಜಸ್ಯ ವಚೋ ನಿಶಮ್ಯ ॥**
**ಪ್ರತ್ಯಾಹತಾಸ್ತ್ರೋ ಗಿರಿಶಪ್ರಭಾವಾತ್ ।**
**ಆತ್ಮನ್ಯವಜ್ಞಾಂ ಶಿಥಿಲೀಚಕಾರ ॥ ೪೧ ॥**

ಮಾನವ ಸಾಮ್ರಾಟನಾದ ದಿಲೀಪನು (ಪ್ರಗಲ್ಭಂ) ಮೃಗಗಳ ರಾಜನಾದ ಆ ಕೇಸರಿಯ ಪ್ರೌಢ ಹಾಗೂ ಗಂಭೀರ ವಚನಗಳನ್ನು ಕೇಳಿ ತನಗಾದ ಅವಮರ್ಯಾದೆಯನ್ನು ಮರೆಗೊಳಿಸಿಕೊಂಡನು. ತನ್ನ ಅಸ್ತ್ರವು ಕುಂಠಿತವಾಗಲು, ತಾನು ಜಡನಂತೆ ನಿಷ್ಕ್ರಿಯನಾಗಲು ಸಮಸ್ತವಿಷಯಕ್ಕೊಡೆಯನಾದ ವಿಶ್ವೇಶ್ವರನ ಪ್ರಭಾವವೆಂದು ಇದೀಗ ಮನಗಂಡನು. ಹೀಗಾಗಿ, ಇದೀಗ ಶಿಥಿಲಗೊಂಡ ಆ ಮಾನಧನನ ಆತ್ಮಗೌರವವು ಕೂಡಲೇ ಕುದುರಿತು (ಸ್ಫುರಿಸಿತು). ತನಗಾದ ಅಪಮಾನದ ಕಹಿಯನ್ನು ಸಹಿಸಲು ಆ ಮಹಾವೀರನಿಗೆ ಇದೀಗ ಸಾಧ್ಯವಾಯಿತು.

ಅನ್ವಯ :—ಪುರುಷಾಧಿರಾಜಃ ಇತಿ ಪ್ರಗಲ್ಭಂ ಮೃಗಾಧಿರಾಜಸ್ಯ ವಚಃ ನಿಶಮ್ಯ ಗಿರಿಶಪ್ರಭಾವಾತ್ ಪ್ರತ್ಯಾಹತಾಸ್ತ್ರಃ ಆತ್ಮನಿ ಅವಜ್ಞಾಂ ಶಿಥಿಲೀಚಕಾರ ॥

ಪುರುಷಾಣಾಂ ಅಧಿರಾಜಃ + /ಮೃಗಾಣಾಂ ಅಧಿರಾಜಃ ತಸ್ಯ । ಪ್ರತ್ಯಾಹತಂ ಅಸ್ತ್ರಂ ಯಸ್ಯ ಸಃ । ಗಿರಿ ಶೇತೇ ಇತಿ ಗಿರಿಶಃ । ಗಿರಿಶಸ್ಯ ಪ್ರಭಾವಃ ತಸ್ಮಾತ್ । ಶಿಥಿಲೋಪಪದ, ಕರಣಾರ್ಥಕ, ಡುಕೃಞ್ ಧಾತೋಃ ಲಿಟಃ ಪ್ರಥಮೈಕವಚನ ರೂಪಂ—ಶಿಥಿಲೀಚಕಾರ ॥

ಪುರುಷಾಧಿರಾಜಃ = ಪುರುಷಶ್ರೇಷ್ಠನಾದ, ಇತಿ = ಈ ತೆರನಾದ, ಪ್ರಗಲ್ಭಂ = ಪ್ರೌಢವಾದ, ಮೃಗಾಧಿರಾಜಸ್ಯ = ಸಿಂಹರಾಜನ, ವಚಃ = ಮಾತನ್ನು, ನಿಶಮ್ಯ = ಕೇಳಿ, ಗಿರಿಶಪ್ರಭಾವಾತ್ = ಈಶ್ವರನ ಮಹಿಮೆಯಿಂದ, ಪ್ರತ್ಯಾಹತಾಸ್ತ್ರಃ = ತಡೆಯಲ್ಪಟ್ಟ ಬಾಣವುಳ್ಳವನಾಗಿ, ಆತ್ಮನಿ = ತನ್ನಲ್ಲಿ, ಅವಜ್ಞಾಂ = ಅಪಮಾನವನ್ನು, ಶಿಲೀಚಕಾರ = ಕಡಿಮೆಮಾಡಿಕೊಳ್ಳು.

42. ಪ್ರತ್ಯಬ್ರವೀಚ್ಚೈನಮಿಷುಪ್ರಯೋಗೇ ।
ತತ್ಪೂರ್ವಭಂಗೇ ವಿತಥಪ್ರಯತ್ನಃ ।
ಜಡೀಕೃತಸ್ತ್ರ್ಯಂಬಕವೀಕ್ಷಣೇನ ॥
ವಜ್ರಂ ಮುಮುಕ್ಷನ್ನಿವ ವಜ್ರಪಾಣಿಃ ॥ ೪೨ ॥

ಬಾಣಪ್ರಯೋಗದಲ್ಲಿ ಎಂದೂ ಸೋಲು ಅನುಭವಿಸದ ಆ ಇಕ್ಷ್ವಾಕುವಂಶದೀಪನಿಗೆ ಇದು ಮೊದಲ ಸೋಲು. ಅವನು ಅಂದು ಮೊದಲ ಸೋಲನ್ನು ಅನುಭವಿಸಿದನು. ಈ ಹಿಂದೆ ದೇವತೆಗಳ ಒಡೆಯನಾದ ಪುರಂದರನು (ಮಹೇಂದ್ರನು) ತಾನು ಹಿಡಿದ ತನ್ನ ಕೈಯಲ್ಲಿರುವ ವಜ್ರಾಯುಧವನ್ನು ಸರ್ವೇಶ್ವರನಾದ (ಮುಕ್ಕಣ್ಣನಾದ) (ತ್ರೀಣಿ ಅಂಬಕಾನಿ ಯಸ್ಯ = ತ್ರ್ಯಂಬಕ) ಶಿವನ ಮೇಲೆ ಎಸೆಯಲು ಎತ್ತಿದನು. ಆಗ ಆ ಕೃತ್ತಿವಾಸನು ಆ ಇಂದ್ರನನ್ನು ನೋಡಿದಾಕ್ಷಣವೇ ಇಂದ್ರನು ಸ್ತಬ್ಧನಾದನು. ಅವನ ವಜ್ರಪಾಣಿಯೂ (ವಜ್ರಪಾಣಿಃ) ವಜ್ರಾಯುಧವೂ ಚಲಿಸಲಾರದೆ ಸ್ತಬ್ಧವಾಗಿ ಅಲ್ಲಿಗೇ ನಿಂತಿತು. ಅದರಂತೆಯೇ ಆ ಮನುಕುಲಸಾರ್ವಭೌಮನ (ಮೌಳಿಯ) ಪ್ರಯತ್ನವು ಭಂಗವಾಯಿತು. ಸಾಮರ್ಥ್ಯವು ವ್ಯರ್ಥವಾಯಿತು.

ಅನ್ವಯ:—ತತ್ಪೂರ್ವಭಂಗೇ ಇಷು ಪ್ರಯೋಗೇ ವಿತಥಪ್ರಯತ್ನಃ ವಜ್ರಂ ಮುಮುಕ್ಷನ್ ತ್ರ್ಯಂಬಕವೀಕ್ಷಣೇನ ಜಡೀ ಕೃತಃ ವಜ್ರಪಾಣಿರಿವ ಏನಂ ಪ್ರತ್ಯಬ್ರವೀತ್ ॥

ಇಷೋಃ ಪ್ರಯೋಗಃ, ತಸ್ಮಿನ್ । ಸಃ ಪೂರ್ವಃ ಭಂಗಃ ಯಸ್ಯ ಸಃ ತತ್ಪೂರ್ವಭಂಗಃ, ತಸ್ಮಿನ್ । ವಿತಥಃ ಪ್ರಯತ್ನಃ ಯಸ್ಯ ಸಃ । ಅಜಡಃ ಜಡತ್ವೇನ ಸಂಪದ್ಯಮಾನಃ ಕೃತಃ—ಜಡೀ ಕೃತಃ । ತ್ರೀಣಿ ಅಂಬಕಾನಿ ಯಸ್ಯ ಸಃ—ತ್ರ್ಯಂಬಕಃ, ತಸ್ಯ ವೀಕ್ಷಣಂ—ತೇನ । ಮೋಕ್ತುಂ ಇಚ್ಛನ್—ಮುಮುಕ್ಷನ್—ವಜ್ರಪಾಣೌಯಸ್ಯ ಸಃ ವಜ್ರಪಾಣಿಃ । ಪ್ರತಿ—ಉಪಸರ್ಗ, ಅಬ್ರವೀತ್—ಅಬ್ರೂತಾಂ—ಅಬ್ರುವನ್ । ಅಬ್ರವೀಃ—ಅಬ್ರೂತಂ—ಅಬ್ರೂತ । ಅಬ್ರವಂ—ಅಬ್ರೂವ—ಅಬ್ರೂಮ । ಬ್ರೂಞ್—ವ್ಯಕ್ತಾಯಾಂವಾಚಿ—ಲಙ್—ಪ್ರ.ಪು.ಏ. ॥

ತತ್ಪೂರ್ವಭಂಗೇ = ಪ್ರತಿಬಂಧವಾಗಿರುವ, ತಡೆಯಾಗಿರುವ. ಇಷುಪ್ರಯೋಗೇ = ಬಾಣಪ್ರಯೋಗದಲ್ಲಿ, ವಿತಥ ಪ್ರಯತ್ನಃ = ವಿಫಲವಾದ ಪ್ರಯತ್ನವುಳ್ಳವನಾಗಿ, ವಜ್ರಂ = ವಜ್ರಾಯುಧವನ್ನು, ಮುಮುಕ್ಷನ್ = ಬಿಡಲು ಇಚ್ಛಿಸುತ್ತಿರುವ, ತ್ರ್ಯಂಬಕ ವೀಕ್ಷಣೇನ = ಈಶ್ವರನ ಕಟಾಕ್ಷದಿಂದ, ಜಡೀಕೃತಃ = ಚಲನೆ ಶೂನ್ಯನಾಗಿ, ವಜ್ರಪಾಣಿರಿವ = ದೇವೇಂದ್ರನಂತೆ, ಏನಂ = ಸಿಂಹವನ್ನು ಕುರಿತು, ಪ್ರತ್ಯಬ್ರವೀತ್ = ತಿರುಗಿ ಹೇಳಿದನು.

**43. ಸಂರುದ್ಧಚೇಷ್ಟಸ್ಯ ಮೃಗೇಂದ್ರ ಕಾಮಂ ।**
**ಹಾಸ್ಯಂ ವಚಸ್ತದ್ಯದಹಂ ವಿವಕ್ಷುಃ ॥**
**ಅಂತರ್ಗತಂ ಪ್ರಾಣಭೃತಾಂ ಹಿ ವೇದ ।**
**ಸರ್ವಂ ಭವಾನ್ ಭಾವಮತೋಽಭಿಧಾಸ್ಯೇ ॥ ೪೩ ॥**

ಎಲೈ ಮೃಗೇಂದ್ರನೇ (ಮೃಗರಾಜನೇ), ನನ್ನ ಚಟುವಟಿಕೆಗಳು ಇದೀಗ ನಿನ್ನಿಂದ ತಡೆಯಲ್ಪಟ್ಟು ನಿಷ್ಕ್ರಿಯಗೊಂಡಿವೆ. ನಾನೀಗ ಪರಾಜಿತಗೊಂಡಿರುವೆನು (ಸೋತಿರುವೆನು). ಹೀಗೆ ಸೋತು ಮಾತನಾಡುತ್ತಿರುವ ನನ್ನ ಮಾತುಗಳು ನಿನಗೆ ಹಾಸ್ಯಾಸ್ಪದವಾಗಿ ತೋರಬಹುದು. ಆದರೂ ಸಕಲಪ್ರಾಣಿಗಳ (ಜೀವರಾಶಿಗಳ) ಹೃದ್ಗತಿಯನ್ನು ನೀನು ಅರಿತಿರುವೆ. ಸಕಲ ಪ್ರಾಣಿಗಳ ಹೃದಯದಲ್ಲಿರುವ ಭಾವವನ್ನು, ಆವೇಗವನ್ನು ತಿಳಿದಿರುವ ನಿನ್ನೊಡನೆ ನನ್ನ ಹೃದ್ಗತವಾದ (ಸ್ವಂತ) ಅಭಿಪ್ರಾಯವನ್ನು ಒರೆಯುವೆನು ಹೇಳಬೇಕೆಂದಿರುವುದನ್ನು ಒಂದೊಂದಾಗಿ ಹೇಳುವೆನು. ದಯವಿಟ್ಟು ಕೇಳು" ಎಂದನು.

ಅನ್ವಯ :—(ಹೇ) ಮೃಗೇಂದ್ರ ಸಂರುದ್ಧಚೇಷ್ಟಸ್ಯ ತದ್ವಚಃ ಕಾಮಂ ಹಾಸ್ಯಂ ಯದಹಂ ವಿವಕ್ಷುಃ । (ಯತಃ) ಭವಾನ್ ಪ್ರಾಣಭೃತಾಮ್ ಅಂತರ್ಗತಂ ಸರ್ವಭಾವಂ ವೇದ ಅತಃ ಹಿ ಅಭಿಧಾಸ್ಯೇ ॥

ಸಂರುದ್ಧಾ ಚೇಷ್ಟಾ ಯಸ್ಯ ಸಃ—ಸಂರುದ್ಧಚೇಷ್ಟಃ, ತಸ್ಯ। ಮೃಗಾಣಾಂ ಇಂದ್ರಃ ಮೃಗೇಂದ್ರಃ । ವಕ್ತುಂ ಇಚ್ಛುಃ—ವಿವಕ್ಷುಃ । ಪ್ರಾಣಾನ್ ಬಿಭ್ರತಿ ಇತಿ ಪ್ರಾಣಭೃತಃ, ತೇಷಾಮ್ । ವೇದಃ ವಿದತುಃ—ವಿದುಃ । ವೇತ್ಥ—ವಿದಥುಃ—ವಿದ । ವೇದ—ವಿದ್ವ—ವಿದ್ಮ। ವಿದ—ಜ್ಞಾನೇ—ಲಟ್—ಪ್ರ.ಪು.ಏ. । ಅಭಿ—ಉಪಸರ್ಗ—ಧಾಸ್ಯತೇ—ಧಾಸ್ಯೇತೇ—ಧಾಸ್ಯಂತೇ । ಧಾಸ್ಯಸೇ—ಧಾಸ್ಯೇಥೇ—ಧಾಸ್ಯಧ್ವೇ । ಧಾಸ್ಯೇ—ಧಾಸ್ಯಾವಹೇ—ಧಾಸ್ಯಾಮಹೇ । ಡುಧಾಞ್—ಧಾರಣಪೋಷಣಯೋಃ—ಲೃಟ್-ಉ.ಪು.ಏ. ॥

ಸಂರುದ್ಧಚೇಷ್ಟಸ್ಯ = ತಡೆಯಲ್ಪಟ್ಟ ವ್ಯಾಪಾರವುಳ್ಳ, ತತ್ ವಚಃ = ಆ ನನ್ನ ಮಾತು, ಕಾಮಂ = ಯಥೇಚ್ಛವಾಗಿ, ಹಾಸ್ಯಂ = ಹಾಸ್ಯಾಸ್ಪದವಾಗಿ, ಯತ್ = ಯಾವ ಮಾತನ್ನು ಅಹಂ = ನಾನು, ವಿವಕ್ಷುಃ = ಹೇಳಲು ಬಯಸುವ, ಹಿ = ಯಾವ ಕಾರಣದಿಂದ, ಭವಾನ್ = ನೀನು, ಪ್ರಾಣಭೃತಾಂ = ಜೀವಿಗಳ, ಅಂತರ್ಗತಂ = ಹೃದಯದಲ್ಲಿರುವ, ಸರ್ವಂ = ಎಲ್ಲಾ, ಭಾವಂ = ಅಭಿಪ್ರಾಯವನ್ನು, ವೇದ = ತಿಳಿಯು, ಅತಃ = ಆದುದರಿಂದ, ಅಭಿಧಾಸ್ಯೇ = ಹೇಳು.

**44. ಮಾನ್ಯಃ ಸ ಮೇ ಸ್ಥಾವರಜಂಗಮಾನಾಂ ।**
**ಸರ್ಗಸ್ಥಿತಿಪ್ರತ್ಯವಹಾರಹೇತುಃ ॥**
**ಗುರೋರಪೀದಂ ಧನಮಾಹಿತಾಗ್ನೇಃ ।**
**ನಶ್ಯತ್ಪುರಸ್ತಾದನುಪೇಕ್ಷಣೀಯಮ್ ॥ ೪೪ ॥**

ಆ ವಿಶ್ವೇಶ್ವರನಾದ ಸದಾಶಿವನು ಸ್ಥಾವರಜಂಗಮಾತ್ಮಕವಾದ, ಈ ಚರಾಚರ ಜಗತ್ತಿನ ಸಕಲ ಜೀವರಾಶಿಗಳ ಸೃಷ್ಟಿ, ಸ್ಥಿತಿ, ಲಯಗಳಿಗೆ ಮೂಲಕಾರಣನು. ಅಂತಹ

ಆಥವನು ಸರ್ವರಿಗೂ ಮಾನ್ಯನು. ಸರ್ವಶ್ರೇಷ್ಠನು, ಅವನನ್ನು ನಾನು ನಿತ್ಯವೂ ಧ್ಯಾನಿಸುವೆನು. ಆದರೆ ನಾನು ನನ್ನ ಪರಮ ಗುರುವಿನ ಧನವಾದ ಈ ಗೋವು ನನ್ನ ಕಣ್ಣೆದುರಲ್ಲಿ ನಾಶವಾಗುವುದನ್ನು ನಪುಂಸಕನಂತೆ ನೋಡಲಾರೆ, ಆ ಧೇನು ಆ ಪೂಜ್ಯನ ಆಯತಾಗ್ನಿಗೆ ಹವಿಸನ್ನು ಒದಗಿಸುವ ಸಂಪತ್ತಾಗಿದೆ. ಅದರ ರಕ್ಷಣೆಯಲ್ಲಿ ನಾನು ಉದಾಸೀನನಾಗಿರಲು ಸಾಧ್ಯವಿಲ್ಲ. ಸರ್ವಪ್ರಯತ್ನದಿಂದ ಅದನ್ನು ರಕ್ಷಿಸುವುದು ಕ್ಷತ್ರಿಯ ನಾದ ನನ್ನ ಆದ್ಯಕರ್ತವ್ಯವಾಗಿದೆ."

ಅನ್ವಯ :—ಸ್ಥಾವರಜಂಗಮಾನಾಂ ಸರ್ಗಸ್ಥಿತಿಪ್ರತ್ಯವಹಾರಹೇತುಃ ಸಃ ಮೇ ಮಾನ್ಯಃ। ಆಹಿತಾಗ್ನೇಃ ಗುರೋಃ ಅಪಿ ಪುರಸ್ತಾತ್ ನಶ್ಯತ್ ಇದಂ ಧನಂ ಅನುಪೇಕ್ಷಣೀಯಂ ॥

ಸ್ಥಾವರಾಣಿ ಚ ಜಂಗಮಾಶ್ಚ। ತೇಷಾಮ್। ಸರ್ಗಶ್ಚ, ಸ್ಥಿತಿಶ್ಚ, ಪ್ರತ್ಯವಹಾರಶ್ಚ ಸರ್ಗಸ್ಥಿತಿಪ್ರತ್ಯವಹಾರಾಃ, ತೇಷಾಂ ಹೇತುಃ ಸರ್ಗಶ್ಚ ಸ್ಥಿತಿಪ್ರತ್ಯವಹಾರಹೇತುಃ। ಅಗ್ನಿಃ ಆಹಿತಃ ಯೇನ, ಆಹಿತಾಗ್ನಿಃ ತಸ್ಯ। ನ ಉಪೇಕ್ಷಣೀಯಮ್ ಅನುಪೇಕ್ಷಣೀಯಮ್ ॥

ಜಂಗಮಃ = ಜಂಗಮ್ಯತೇ ವಕ್ರಂ ಗಚ್ಛತೀತಿ, ಸ್ಥಾವರಜಂಗಮಾನಾಂ ಮರಗಿಡ ಮುಂತಾದ ಸ್ಥಾವರಗಳಿಗೂ ಪ್ರಾಣಿ ಮೊದಲಾದ ಜಂಗಮಗಳಿಗೂ, ಸರ್ಗಸ್ಥಿತಿಪ್ರತ್ಯ ವಹಾರಹೇತುಃ = ಸೃಷ್ಟಿ, ಸ್ಥಿತಿ, ಲಯಗಳಿಗೆ ಕಾರಣಕರ್ತನಾದ, ಸಃ = ಆ ಈಶ್ವರನು (ಮಹೇಶ್ವರನು, ಪರಮೇಶ್ವರನು), ಮೇ=ನನಗೆ, ಮಾನ್ಯಃ=ಪೂಜ್ಯನು (ಪೂಜಾರ್ಹನು), ಪುರಸ್ತಾತ್ = ಮುಂಭಾಗದಲ್ಲಿ, ನಶ್ಯತ್ = ನಾಶಹೊಂದುವ, ಆಹಿತಾಗ್ನೇಃ = ಅಗ್ನಿಯ ಆರಾಧನೆ ಮಾಡುವ, ಗುರೋಃ = ಗುರುಗಳ, ಇದಂ = ಈ, ಧನಮಪಿ = ಗೋರೂಪ ಧನವೂ, ಅನುಪೇಕ್ಷಣೀಯಮ್ = ಉಪೇಕ್ಷಿಸಬಾರದು (ಅಲಕ್ಷಿಸಬಾರದು).

45. **ಸತ್ವಂ ಮದೀಯೇನ ಶರೀರವೃತ್ತಿಂ।**
**ದೇಹೇನ ನಿರ್ವರ್ತಯಿತುಂ ಪ್ರಸೀದ ॥**
**ದಿನಾವಸಾನೋತ್ಸುಕಬಾಲವತ್ಸಾ।**
**ವಿಸೃಜ್ಯತಾಂ ಧೇನುರಿಯಂ ಮಹರ್ಷೇಃ** ॥ ೪೫ ॥

ಎಲೈ ಮೃಗರಾಜನೇ, ನನ್ನ ಮೇಲೆ ಒಂದು ಅನುಗ್ರಹವನ್ನು ತೋರು. ನಾನೀಗ ನಿನ್ನ ಬಳಿಗೇ ಬಂದಿರುವೆನು. ನಿನ್ನ ದೇಹವನ್ನು ಪೋಷಿಸಲು, ಈ ಮಹರ್ಷಿಯ ಧೇನುವಿನ ಬದಲಾಗಿ ಸ್ವೀಕರಿಸಿ, ಉಂಡುತಿಂದು ಸಂತಸದಿಂದಿರು. ಇದೀಗ ಸಾಯಂಕಾಲದ ವೇಳೆ. ಕತ್ತಲಾಗುತ್ತಬಂತು (ದಿನಾವಸಾನ). ಆದರ ಎಳೆಗರುವು ತಾಯಿಯು ಬರುವ ದಿಕ್ಕನ್ನೇ ನೋಡುತ್ತಾ, ಅದರ ಆಗಮನವನ್ನು ನಿರೀಕ್ಷಿಸುತ್ತಾ ಉತ್ಸಾಹದಿಂದ ಇರುವುದು. ಆದುದ ರಿಂದ ನಿನ್ನ ವ್ರತನಿಯಮದಂತೆ, ನಿನ್ನ ಬಳಿಗೆ ಬಂದಿರುವ ನನ್ನನ್ನು ನಿನ್ನ ಆಹಾರವಾಗಿ ಸ್ವೀಕರಿಸಿ ಪಾರಣೆಮಾಡು. ಆ ಮುನಿಯ ಧೇನುವನ್ನು ಬಿಟ್ಟುಕೊಟ್ಟು ನನ್ನನ್ನು ಕೃತಾರ್ಥನನ್ನಾಗಿ ಮಾಡು.

ಅನ್ವಯ :—ಸತ್ವಂ ಮದೀಯೇನ ದೇಹೇನ ಶರೀರವೃತ್ತಿಂ ನಿರ್ವರ್ತಯಿತುಂ ಪ್ರಸೀದ। ದಿನಾವಸಾನೋತ್ಸುಕಬಾಲವತ್ಸಾ ಇಯಂ ಮಹರ್ಷೇಃ ಧೇನುಃ ವಿಸೃಜ್ಯತಾಮ್ ॥

ಪಂಮಂ ಇದಂ—ಮಂದೀಯಂ—ತೇನ। ಶರೀರಸ್ಯ ವೃತ್ತಿಃ ತಾಮ್। ಪ್ರ—ಉಪಸರ್ಗ—ಸೀದತು. ಸೀದತಾತ್—ಸೀದತಾಂ, ಸೀದಂತು। ಸೀದ—ಸೀದತಾತ್—ಸೀದತಂ—ಸೀದತ। ಸೀದಾನಿ—ಸೀದಾವ—ಸೀದಾಮ। ಷದ್‌ಲೃ—ವಿಶರಣಗತ್ಯವಸಾದನೇಷು—ಲೋಟ್—ಮ.ಪು.ಏ.। ದಿನಸ್ಯ ಅವಸಾನಂ—ದಿನಾವಸಾನೇ—ಉತ್ಸುಕಃ, ಬಾಲಶ್ಚಾಸೌ ವತ್ಸಸ್ಚ—ಬಾಲವತ್ಸಃ, ದಿನಾವಸಾನೋತ್ಸುಕಃ ಬಾಲವತ್ಸಃ ಯಸ್ಯಾಃ ಸಾ—ದಿನಾವ ಸಾನೋತ್ಸುಕ ಬಾಲವತ್ಸಾ ವಿಸೃಜ್ಯತಾಂ। ಮಹಾಂಶ್ಚಾಸೌ ಋಷಿಶ್ಚ ತಸ್ಯ। ವಿ ಉಪಸರ್ಗ—ಸೃಜ್ಯತಾಂ—ಸೃಜ್ಯೇತಾಂ—ಸೃಜ್ಯಂತಾಂ। ಸೃಜ್ಯಸ್ವ—ಸೃಜ್ಯೇಥಾ—ಸೃಜ್ಯಧ್ವಂ। ಸೃಜ್ಯೈ—ಸೃಜ್ಯಾವಹೈ—ಸೃಜ್ಯಾಮಹೈ—ಸೃಜ—ವಿಸರ್ಗೇ—ಕರ್ಮಣಿ—ಲೋಟ್—ಪ್ರ.ಪು.ಏ.॥

ಸಃ = ಸಮೀಪಕ್ಕೆ ಬಂದ ಪ್ರಾಣಿಯೋ ಆಹಾರವಾಗಿರುವ, ತ್ವಂ = ನೀನು, ಮಂದೀಯೇನ = ನನ್ನ, ದೇಹೇನ = ಶರೀರದಿಂದ, ಶರೀರವೃತ್ತಿಂ = ಆಹಾರಸ್ವೀಕಾರರೂಪ ಜೀವನವನ್ನು, ನಿರ್ವರ್ತಯಿತುಂ = ಮಾಡಿಕೊಳ್ಳಲು, ಪ್ರಸೀದ = ಅನುಗ್ರಹಿಸು, ದಿನಾವಸಾನೋತ್ಸುಕ ಬಾಲವತ್ಸಾ ವಿಸೃಜ್ಯತಾಂ = ಸಾಯಂಕಾಲದಲ್ಲಿ ತಾಯಿಹಸುವು ಬರುವಳೆಂಬ ಉತ್ಸಾಹದಿಂದ ಕೂಡಿದ ಎಳೆಯ ಕರುವುಳ್ಳ, ಮಹರ್ಷೇಃ = ವಸಿಷ್ಠ ಮಹರ್ಷಿಯ, ಇಯಂ = ಈ, ಧೇನುಃ = ಹಸುವು, ವಿಸೃಜ್ಯತಾಂ = ಬಿಡಲ್ಪಡಲಿ.

**46. ಅಥಾಂಧಕಾರಂ ಗಿರಿಗಹ್ವರಾಣಾಂ।**
**ದಂಷ್ಟ್ರಾಮಯೂಖೈಃ ಶಕಲಾನಿ ಕುರ್ವನ್॥**
**ಭೂಯಃ ಸ ಭೂತೇಶ್ವರಪಾರ್ಶ್ವವರ್ತೀ।**
**ಕಿಂಚಿದ್ವಿಹಸ್ಯಾರ್ಥಪತಿಂ ಬಭಾಷೇ ॥ ೪೬ ॥**

ಆಮೇಲೆ ಭೂತನಾಥನಾದ ಪಶುಪತಿಯ (ಭೂತೇಶ್ವರನ) ಕಿಂಕರನಾದ (ಭೂತೇಶ್ವರ ಪಾರ್ಶ್ವವರ್ತಿ) ಆ ಸಿಂಹರಾಜನು ಸ್ವಲ್ಪ ನಕ್ಕು, ಸಕಲ ರಾಜ್ಯ ಐಶ್ವರ್ಯಗಳಿಗೆ ಪತಿಯಾದ ಆ ರಾಜಸಿಂಹನೊಡನೆ ಹೀಗೆಂದಿತು. ಅದು ಬಾಯ್ದೆರೆದು ನುಡಿದಾಗ, ಆ ಕೇಸರಿಯ ಕೋರೆಹಲ್ಲುಗಳ ಕಾಂತಿಯಿಂದ ಆ ಗುಹೆಯಲ್ಲಿ ಅಡಗಿದ್ದ ಗಾಢಾಂಧಕಾರ (ಅಥಾಂಧಕಾರಂ) ಹೋಗಲಾಡಿಸಿತು. ಸ್ವಲ್ಪಸ್ವಲ್ಪವೇ ಹೊರಗೆ ಅಟ್ಟಿತು. ಅದು ಮಾನವಭಾಷೆಯಲ್ಲಿ ತನ್ನ ಭಾರೀ ತಲೆಯನ್ನು ತಿರುಗಿಸುತ್ತಾ ಮಾನವಾಧಿಪನೊಡನೆ ನಗುನಗುತ್ತಾ ಹೀಗೆಂದಿತು.

ಅನ್ವಯ :—ಅಥ ಭೂತೇಶ್ವರಪಾರ್ಶ್ವವರ್ತೀ ಸ ಗಿರಿಗಹ್ವರಾಣಾಮ್ ಅಂಧಕಾರಂ ದಂಷ್ಟ್ರಮಯೂಖೈಃ ಶಕಲಾನಿ ಕುರ್ವನ್ ಕಿಂಚಿದ್ವಿಹಸ್ಯ ಅರ್ಥಪತಿಂ ಭೂಯೋ ಬಭಾಷೇ॥

ಗಿರೇಃ ಗಹ್ವರಾಣಿ, ತೇಷಾಮ್! ದಂಷ್ಟ್ರಾಣಾಂ ಮಯೂಖಾಃ, ತೈಃ। ಭೂತಾನಾಂ ಈಶ್ವರಃ। ಭೂತೇಶ್ವರಸ್ಯ ಪಾರ್ಶ್ವವರ್ತೀ। ಅರ್ಥಾನಾಂಪತಿಃ, ತಮ್। ಬಭಾಷೇ—ಬಭಾಷಾತೇ—ಬಭಾಷಿರೇ। ಬಭಾಷಿಷೇ—ಇತ್ಯಾದಿ। ಭಾಷಾ—ವ್ಯಕ್ತಾಯಾಂ ವಾಚಿ। ಲಿಟ್—ಪ್ರ.ಪು.ಏ.॥

ಅಥ = ಅಮೇಲೆ. ಭೂತೇಶ್ವರಪಾರ್ಶ್ವವರ್ತೀ = ಪರಮೇಶ್ವರನ ಸೇವಕನಾದ, ಸಃ = ಆ ಸಿಂಹವು. ಗಿರಿಗಹ್ವರಾಣಾಂ = ಪರ್ವತದ ಗುಹೆಗಳ, ಅಂಧಕಾರಂ = ಕತ್ತಲೆಯನ್ನು, ದಂಷ್ಟ್ರಾಮಯೂಖೈಃ = ಕೋರೆಹಲ್ಲುಗಳ ಕಾಂತಿಗಳಿಂದ, ಶಕಲಾನಿ = ತುಂಡುತುಂಡಾಗಿ, ಕುರ್ವನ್ = ಮಾಡುತ್ತಾ, ಕಿಂಚಿತ್ ವಿಹಸ್ಯ = ಸ್ವಲ್ಪ ನಕ್ಕು, ಅರ್ಥಪತಿಂ = ರಾಜನನ್ನು ಕುರಿತು, ಭೂಯಃ = ತಿರುಗಿ. ಮರಳಿ, ಬಭಾಷೇ = ಹೇಳಿತು.

**47. ಏಕಾತಪತ್ರಂ ಜಗತಃ ಪ್ರಭುತ್ವಂ ।**
**ನವಂ ವಯಃ ಕಾಂತಮಿದಂ ವಪುಶ್ಚ ॥**
**ಅಲ್ಪಸ್ಯ ಹೇತೋರ್ಬಹು ಹಾತುಮಿಚ್ಛನ್ ।**
**ವಿಚಾರಮೂಢಃ ಪ್ರತಿಭಾಸಿ ಮೇ ತ್ವಮ್** ॥ ೪೭ ॥

ಎಲೈ ರಾಜಶೇಖರನೇ, ನೀನು ಈ ವಿಶಾಲವಾದ ಜಗತ್ತಿಗೆ ಏಕಮಾತ್ರ ಪ್ರಭು (ಆತಪಾತ್ ತ್ರಾಯತೇ ಇತಿ ಆತಪತ್ರಮ್). ಏಕಚ್ಛತ್ರಾಧಿಪತ್ಯದಿಂದ ಭೂಮಂಡಲಕ್ಕೆ ಒಡೆಯನಾಗಿರುವಿ. ಅದಲ್ಲದೆ ನೀನು ನಳನಳಿಸುವ ಸುಂದರಶರೀರದಿಂದ ಕಂಗೊಳಿಸುತ್ತ ನವತಾರುಣ್ಯದ ಹೊಸ್ತಿಲಲ್ಲಿರುವ ನವಯುವಕನಾಗಿರುವಿ. ಹೀಗಿರುತ್ತ ಕೇವಲ ಒಂದು ಧೇನುವಿಗಾಗಿ ನಿನ್ನ ದೇಹವನ್ನು ತ್ಯಜಿಸುವುದಾದರೂ ಏಕೆ ? ಇದು ಬರಿಯ ಹುಚ್ಚುತನ, ನಿನಗೆ ಕಾರ್ಯಾಕಾರ್ಯಗಳ ವಿವೇಕಜ್ಞಾನವಿಲ್ಲವೆಂದೇ ಹೇಳಬೇಕಾಗುತ್ತದೆ. ಒಂದೇ ಅಲ್ಪವಾದ ಕಾರಣಕ್ಕಾಗಿ ಜ್ಞಾನಿಗಳು ಎಲ್ಲಾ ಉತ್ತಮ ವಿಷಯಗಳನ್ನು ಬಿಡಲು ಬಯಸುವರೆ ? ಸರ್ವಥಾ ಬಯಸುವುದಿಲ್ಲ, ಬಯಸಲಾರರು ಎಂಬುದನ್ನು ತಿಳಿ. ವಿಚಾರವಂತನಾಗಿ ವಿವೇಚಿಸು. ಮಂದಬುದ್ಧಿಯವನಾಗದಿರು.

ಅನ್ವಯ :—ಏಕಾತಪತ್ರಂ ಜಗತಃ ಪ್ರಭುತ್ವಂ ನವಂ ವಯಃ ಇದಂ ಕಾಂತಂ ವಪುಃ ಚ ಅಲ್ಪಸ್ಯ ಹೇತೋಃ ಬಹುಹಾತುಮಿಚ್ಛನ್ ತ್ವಮ್ ಮೇ ವಿಚಾರಮೂಢಃ ಪ್ರತಿಭಾಸಿ ॥

ಏಕಂ ಚ ತತ್ ಆತಪತ್ರಂ ಚ । ವಿಚಾರೇ ಮೂಢಃ । ಪ್ರತಿ—ಉಪಸರ್ಗಭಾಸಿ—ಭಾ—ದೀಪ್ತೌ—ಲಟ್—ಮ.ಪು.ಏ. ॥

ಏಕಾತಪತ್ರಂ = ಏಕಚ್ಛತ್ರಾಧಿಪತ್ಯವು, ಜಗತಃ = ಲೋಕದ, ಪ್ರಭುತ್ವಂ = ಸ್ವಾಮಿತನವು (ಸಾರ್ವಭೌಮತ್ವವು), ನವಂ = ನೂತನವಾದ, ವಯಃ = ವಯಸ್ಸು, ತಾರುಣ್ಯ, ಇದಂ = ಈ, ಕಾಂತಂ=ಮನೋಹರವಾದ, ವಪುಃ ಚ=ಶರೀರವೂ, ಬಹು = ಉತ್ತಮವಾದ ಅನೇಕ, ಅಲ್ಪಸ್ಯ ಹೇತೋಃ = ಅಲ್ಪವಾದ ಕಾರಣದಿಂದ, ಹಾತುಂ = ಬಿಡಲು, ಇಚ್ಛನ್ = ಬಯಸುವ, ತ್ವಂ = ನೀನು, ವಿಚಾರಮೂಢಃ = ವಿವೇಕಜ್ಞಾನವಿಲ್ಲದ ಮೂಢಾತ್ಮ, ಮಂಕುದಿಣ್ಣೆ, ಗಾಂಪರೊಡೆಯ, ಮೇ = ನನಗೆ, ಪ್ರತಿಭಾಸಿ = ತೋರುವಿ.

**48. ಭೂತಾನುಕಂಪಾ ತವ ಚೇದಿಯಂ ಗೌ ।**
**ಏಕಾಭವೇತ್ ಸ್ವಸ್ತಿಮತೀ ತ್ವದಂತೇ ॥**
**ಜೀವನ್ಪುನಃ ಶಶ್ವದುಪಪ್ಲವೇಭ್ಯಃ ।**
**ಪ್ರಜಾಃ ಪ್ರಜಾನಾಥ ! ಪಿತೇವ ಪಾಸಿ** ॥ ೪೮ ॥

ಎಲೈ, ಪ್ರಜೆಗಳನ್ನು ತಂದೆಯಂತೆ ಪಾಲಿಸುವ ಪ್ರಜಾಧಿಪತಿಯೇ (ಪ್ರಜಾವಲ್ಲಭ, ಪ್ರಜಾನಾಥ), ನಿನ್ನ ಪ್ರಾಣಿದಯೆಯಿಂದ (ಭೂತಾನುಕಂಪದಿಂದ) ಸುರಕ್ಷಿತವಾಗಿ ಉಳಿಯುವುದಾದರೂ ಒಂದೇ ಒಂದು ಹಸು. ಅದಕ್ಕೆ ಬದಲಾಗಿ ಅಖಿಲ ವಿಶ್ವದ (ಸುಂದರವಾದ ಈ ವಸುಂಧರೆಯ)ಒಡೆಯನಾದ ನೀನು ಬಲಿಪಶುವಾಗುವುದು ಸರಿಯೇ? ನೀನು ಜೀವಂತನಾಗಿದ್ದು ರಾಜಾಧಿರಾಜನಾಗಿ ನಿನ್ನ ಕರ್ತವ್ಯವನ್ನು ನಿರ್ವಹಿಸುವುದು ಮೇಲು. ಪ್ರಜೆಗಳನ್ನು ವಾತ್ಸಲ್ಯದಿಂದ ಪಾಲಿಸುತ್ತ, ಪ್ರಜೆಗಳ ಯೋಗಕ್ಷೇಮವನ್ನು ತಂದೆಯಂತೆ ನೋಡುತ್ತಲಿರುವುದು ಸಾಮ್ರಾಟನಾದ ನಿನಗೆ ಭೂಷಣವಲ್ಲವೆ. ಪ್ರಜಾ ಕೋಟಿಯನ್ನು ರಕ್ಷಿಸುತ್ತ ಅಖಿಲ ವಿಶ್ವವನ್ನು ಪೊರೆಯಬೇಕಾದವನು ಕೇವಲ ಒಂದು ಕ್ಷುಲ್ಲಕ (ಅಲ್ಪ) ಪ್ರಾಣಿಗಾಗಿ, ಲೋಕಕಲ್ಯಾಣ (ಸಮಾಜಕಲ್ಯಾಣ, ವಿಶ್ವಕಲ್ಯಾಣ) ಮಾಡಬೇಕಾದವನು ಪ್ರಾಣತ್ಯಾಗಮಾಡುವುದು ಇತರ ನ್ಯಾಯ (ಆತ್ಮವಂಚನೆಯಲ್ಲವೆ, ಆತ್ಮಹತ್ಯೆಯಲ್ಲವೆ) ?

ಅನ್ವಯ :—ತವ ಭೂತಾನುಕಂಪಾ ಚೇತ್ ತ್ವದಂತೇ ಇಯಂ ಏಕಾ ಗೌಃ ಸ್ವಸ್ತಿಮತೀ ಭವೇತ್ । (ಹೇ) ಪ್ರಜಾನಾಥ ಜೀವನ್ ಪುನಃ ಪಿತೇವ ಪ್ರಜಾಃ ಶಶ್ವತ್ ಉಪ ಪ್ಲವೇಭ್ಯಃ ಪಾಸಿ ॥

ಭೂತೇಷು ಅನುಕಂಪಾ । ಸ್ವಸ್ತಿ ಅಸ್ಯಾಃ ಅಸ್ತೀತಿ ಸ್ವಸ್ತಿಮತೀ । ತವ ಅಂತಃ ತ್ವದಂತಃ, ತಸ್ಮಿನ್ । ಪ್ರಜಾನಾಂ ನಾಥಃ । ತತ್ಸಂಬುದ್ಧಿಃ—ಪ್ರಜಾನಾಥ । ಭವೇತ್— ಭೂ—ಸತ್ತಾಯಾಂ—ವಿಧಿಲಿಙ್ । ಪಾತಿ—ಪಾತಃ—ಪಾಂತಿ । ಪಾಸಿ—ಇತ್ಯಾದಿ—ಪಾ —ರಕ್ಷಣೇ—ಲಟ್—ಮ.ಪು.ಏ. ॥

ತವ = ನಿನಗೆ, ಭೂತಾನುಕಂಪಾ ಚೇತ್ = ಪ್ರಾಣಿದಯಾ ಉಂಟಾಗುವುದಾದರೆ, ತ್ವದಂತೇ = ನಿನ್ನ ನಾಶವಾದರೆ, ಇಯಂ = ಈ, ಏಕಾ ಗೌಃ = ಒಂದೇ ಹಸುವು, ಸ್ವಸ್ತಿ ಮತೀ = ಸುರಕ್ಷಿತವಾಗಿ, ಭವೇತ್=ಆದೀತು. ಹೇ ಪ್ರಜಾನಾಥ = ಎಲೈ ರಾಜೇಂದ್ರನೇ, ಜೀವನ್ಪುನಃ = ಬದುಕಿದ್ದೇ ಆದರೆ, ಪಿತೇವ = ತಂದೆಯಂತೆ, ಪ್ರಜಾಃ = ಪ್ರಜೆಗಳನ್ನು, ಉಪಪ್ಲವೇಭ್ಯಃ = ವಿಪತ್ತುಗಳಿಂದ, ಶಶ್ವತ್ = ಯಾವಾಗಲೂ, ಪಾಸಿ = ರಕ್ಷಿಸುವಿ. ಭೂತಾನುಕಂಪಾಚೇತ್ = ಭೂತೇಷು ಅನುಕಂಪಾ.

**49. ಅಥೈಕಧೇನೋರಪರಾಧಚಂಡಾತ್ ।**
**ಗುರೋಃ ಕೃಶಾನುಪ್ರತಿಮಾದ್ಬಿಭೇಷಿ ॥**
**ಶಕ್ಯೋಽಸ್ಯಮನ್ಯುರ್ಭವತಾ ವಿನೇತುಂ ।**
**ಗಾಃ ಕೋಟಿಶಃ ಸ್ಪರ್ಶಯತಾ ಘಟೋಧ್ನೀಃ ॥ ೪೯ ॥**

ನಿನ್ನ ಗುರುವಿನ ಹೋಮಸಾಧನವಾದ ಈ ಪಸುವನ್ನು ನಿನ್ನ ಅಜಾಗ್ರತೆಯಿಂದ ಕಳೆದುಕೊಂಡಿರುವುದನ್ನು ಅಗ್ನಿಸಮಾನರಾದ, ಮಹಾತಪೋಧನರಾದ, ನಿನ್ನ ಗುರು ವಸಿಷ್ಠಮಹರ್ಷಿಗಳು ತಿಳಿದು ಸಿಟ್ಟಾಗಿ ನಿನ್ನ ಮೇಲೆ ಉರಿದೇಳಬಹುದು. ಆದರೆ ಅವರ ಕೋಪವನ್ನು ಹೋಗಲಾಡಿಸಲು (ತಣಿಸಲು) ಮಹಾರಾಜಾಧಿರಾಜನಾದ ನೀನು ಅವರ ಒಂದು ಗೋವಿನ ಬದಲು ಸಹಸ್ರಾರು ಕೊಡ ಕೆಚ್ಚಲಿನ ಹಸುಗಳನ್ನು ದಾನವಾಗಿ ಕೊಟ್ಟು

ಅವರ ಮನಸ್ಸನ್ನು ತಣಿಸಬಹುದು. ಇದರಿಂದ ಅವರ ಕೋಪತಾಪವು ಉಪಶಮನವಾಗಿ ಅವರು ಸುಪ್ರೀತರಾಗುವರು ಎಂದು ತಿಳಿ.

ಅನ್ವಯ :—ಅಥ ಏಕಧೇನೋಃ ಅಪರಾಧಚಂಡಾತ್ ಕೃಶಾನುಪ್ರತಿಮಾತ್ ಗುರೋಃ ಬಿಭೇಷಿ ಘಟೋಧ್ನೀಃ ಗಾಃ ಸ್ಪರ್ಶಯತಾ ಭವತಾ ಅಸ್ಯ ಮನ್ಯುಃ ವಿನೇತುಂ ಶಕ್ಯಃ ॥

ಏಕಾ ಧೇನುಃ ಯಸ್ಯ ಸಃ—ಏಕಧೇನುಃ, ತಸ್ಮಾತ್ । ಅಪರಾಧೇನ ಚಂಡಃ ತಸ್ಮಾತ್ । ಕೃಶಾನುಃ ಪ್ರತಿಮಾ ಯಸ್ಯ ಸಃ—ತಸ್ಮಾತ್ । ಘಟಾ ಇವ ಊಧಾಂಸಿ ಯಾಸಾಂ ತಾಃ ಕುಂಡೋಧ್ನ್ಯಃ, ತಾಃ । ಬಿಭೇತಿ—ಬಿಭಿತಃ, ಬಿಭೀತಃ—ಬಿಭ್ಯತಿ । ಬಿಭೇಷಿ—ಬಿಭೀಥಃ, ಬಿಭಿಥಃ—ಬಿಭಿಥ, ಬಿಭೀಥ । ಬಿಭೇಮಿ—ಬಿಭಿವಃ ಬಿಭೀವಃ,—ಬಿಭಿಮಃ, ಬಿಭೀಮಃ । ಞಿ ಭೀ ಭಯೇ—ಲಟ್—ಮ.ಪು.ಏ. ॥

ಅಥ = ಒಂದು ವೇಳೆ, ಏಕಧೇನೋಃ = ಒಂದೇ ಹಸುವಿರುವ, ಅಪರಾಧಚಂಡಾತ್ = ಅಪರಾಧನಿಮಿತ್ತ ಅಧಿಕ ಕೋಪಗೊಂಡ, ಕೃಶಾನುಪ್ರತಿಮಾತ್ = ಅಗ್ನಿಯ ಸಾದೃಶ್ಯವುಳ್ಳ, ಅಗ್ನಿಯಂತೆ ಕಂಗೊಳಿಸುವ, ಅಗ್ನಿಸಮಾನರಾದ, ಗುರೋಃ = ಗುರು ವಸಿಷ್ಠರಿಂದ, ಬಿಭೇಷಿ = ಭಯಪಡುವುದಾದರೆ, ಅಸ್ಯ=ಈ ಗುರುವಿನ, ಮನ್ಯುಃ = ಕೋಪವು, ಘಟೋಧ್ನೀಃ = ಕೊಡದಂತೆ ದಪ್ಪ ಕೆಚ್ಚಲುಳ್ಳ, ಕೋಟಿಶಃ = ಸಾವಿರಾರು ಗಾಃ = ಗೋವುಗಳನ್ನು, ಸ್ಪರ್ಶಯತಾ = ದಾನಮಾಡುವ, ಭವತಾ = ನಿನ್ನಿಂದ, ವಿನೇತುಂ = ಹೋಗಲಾಡಿಸಲು, ಶಕ್ಯಃ = ಸಾಧ್ಯವು.

ಕೃಶಾನುಪ್ರತಿಮಾತ್ = ಕೃಶಾನುಃ ಪ್ರತಿಮಾ ಯಸ್ಯ ಸಃ ॥

50. ತದ್ರಕ್ಷ ಕಲ್ಯಾಣಪರಂಪರಾಣಾಂ ।
ಭೋಕ್ತಾರಮೂರ್ಜಸ್ವಲಮಾತ್ಮದೇಹಮ್ ॥
ಮಹೀತಲಸ್ಪರ್ಶನಮಾತ್ರಭಿನ್ನಮೃದ್ಧಂ ।
ಹಿ ರಾಜ್ಯಂಪದಮೈಂದ್ರಮಾಹುಃ ॥ ೫೦ ॥

"ಆದುದರಿಂದ ಮಂಗಳಕಾರ್ಯಪರಂಪರೆಯನ್ನು ಭೋಗಿಸುವ ಮಹಾಬಲಶಾಲಿಯಾದ ನಿನ್ನ ದೇಹವನ್ನು (ಪವಿತ್ರ ವಪುವನ್ನು) ಮೊದಲು ರಕ್ಷಿಸು. ಸಂಪತ್ಸಮೃದ್ಧವಾದ ರಾಜ್ಯವು ಕೇವಲ ಭೂಸ್ಪರ್ಶದಿಂದ ಮಾತ್ರ ಇಂದ್ರನ ಸ್ವರ್ಗಲೋಕಕ್ಕಿಂತ ಭಿನ್ನವಾಗಿದ್ದರೂ ಅಲ್ಲಿ ಇರುವ ಸಮಸ್ತಭೋಗಭಾಗ್ಯಗಳು ಇಲ್ಲಿಯೇ ಈ ಲೋಕದಲ್ಲಿಯೇ (ಇಹಲೋಕದಲ್ಲಿ, ಮರ್ತ್ಯಲೋಕದಲ್ಲಿ) ಇದೆಯಲ್ಲವೆ ? ಇದನ್ನು ತಿಳಿದೂ ತಿಳಿಯೂ ಈ ಲೋಕದ (ಐಹಿಕ) ಫಲಾನುಭವಗಳನ್ನು ಅನುಭವಿಸಲು ಮನಸ್ಸುಮಾಡದೆ, ತ್ಯಾಗ ಮಾಡಿ ಏನು ಫಲ ? ಇದರಿಂದ ನಿನ್ನ ಶ್ರೇಯೋಭಿವೃದ್ಧಿಯಾಗುವುದು ಎಂದು ತಿಳಿ" ಎಂದಿತು.

ಅನ್ವಯ :—ತತ್ ಕಲ್ಯಾಣಪರಂಪರಾಣಾಂ ಭೋಕ್ತಾರಮ್ ಊರ್ಜಸ್ವಲಮ್ ಆತ್ಮದೇಹಂ ರಕ್ಷ । ಮಹೀತಲಸ್ಪರ್ಶನಮಾತ್ರಭಿನ್ನಮ್ ಋದ್ಧಂರಾಜ್ಯಂ ಹಿ ಐಂದ್ರಮ್ ಪದಮ್ ಆಹುಃ ॥

ರಕ್ಷತು, ರಕ್ಷತಾತ್—ರಕ್ಷತಾಂ—ರಕ್ಷಂತು । ರಕ್ಷ, ರಕ್ಷತಾತ್—ರಕ್ಷತಂ—ರಕ್ಷತ । ರಕ್ಷಾನಿ—ರಕ್ಷಾವ—ರಕ್ಷಾಮ । ರಕ್ಷ—ಪಾಲನೇ—ಲೋಟ್—ಮ.ಪು.ಏ. । ಕಲ್ಯಾಣಾನಾಂ ಪರಂಪರಾಃ, ತಾಸಾಮ್ । ಆತ್ಮನಃ ದೇಹಃ, ತಮ್ ! ಮಹ್ಯಾಃ ತಲಂ, ಮಹೀತಲಸ್ಯ ಸ್ಪರ್ಶನಂ, ಮಹೀತಲಸ್ಪರ್ಶನಮೇವ—ಮಹೀತಲಸ್ಪರ್ಶನಮಾತ್ರಂ । ಮಹೀತಲ ಸ್ಪರ್ಶನಮಾತ್ರೇಣ ಭಿನ್ನಂ—ಮಹೀತಲಸ್ಪರ್ಶನಮಾತ್ರಭಿನ್ನಂ । ಇಂದ್ರಸ್ಯ ಇದಂ—ಐಂದ್ರಮ್ । ಆಹ—ಆಹತುಃ—ಆಹುಃ । ಆತ್ಥ—ಆಹಥುಃ—ಬ್ರೂಥ । ಬ್ರವೀಮಿ—ಬ್ರೂವಃ—ಬ್ರೂಮಃ । ಬ್ರೂಞ್—ವ್ಯಕ್ತಾಯಾಂ ವಾಚಿ । ಲಟ್—ಪ್ರ.ಪು.ಬ. ॥ ಮಹ್ಯಾಃ ತಲಂ = ಮಹೀತಲಸ್ಯ ॥

ತತ್ = ಆದುದರಿಂದ, ಕಲ್ಯಾಣಪರಂಪರಾಣಾಂ = ಮಂಗಳಕಾರ್ಯಪರಂಪರೆಯನ್ನು, ಭೋಕ್ತಾರಂ = ಅನುಭವಿಸುವ, ಊರ್ಜಸ್ವಲಂ = ಬಲಶಾಲಿಯಾದ, ಆತ್ಮದೇಹಂ = ನಿನ್ನ ಶರೀರವನ್ನು, ರಕ್ಷ = ರಕ್ಷಿಸಲು, ಋದ್ಧಂ = ಸಂಪತ್ತುಸಮೃದ್ಧವಾದ, ರಾಜ್ಯಂ = ಈ ರಾಜ್ಯವು, ಮಹೀತಲಸ್ಪರ್ಶನಮಾತ್ರಭಿನ್ನಂ = ಕೇವಲ ಭೂಸ್ಪರ್ಶದಿಂದ ಮಾತ್ರ ಬೇರೆಯಾದ, ಐಂದ್ರಂ = ಇಂದ್ರಸಂಬಂಧಿಯಾದ, ಪದಂ = ಸ್ವರ್ಗಸ್ಥಾನವನ್ನು, ಆಹುಃ = ಹೇಳುತ್ತಾರೆ.

**51. ಏತಾವದುಕ್ತ್ವಾ ವಿರತೇ ಮೃಗೇಂದ್ರೇ ।**
**ಪ್ರತಿಸ್ವನೇನಾಸ್ಯ ಗುಹಾಗತೇನ ॥**
**ಶಿಲೋಚ್ಚಯೋಽಪಿ ಕ್ಷಿತಿಪಾಲಮುಚ್ಚೈಃ ।**
**ಪ್ರೀತ್ಯಾ ತಮೇವಾರ್ಥಮಭಾಷತೇವ ॥ ೫೧ ॥**

ಈ ತೆರದಿ ನುಡಿದು (ಏತಾವತ್ ಉಕ್ತ್ವಾ) ಆ ಮೃಗರಾಜನು ವಿರಮಿಸಿದನು. ಆಗ ಅದು ನುಡಿದ ಹಿತವಚನಗಳು ಆ ಪರ್ವತಪ್ರಾಂತ್ಯದಲ್ಲಿರುವ ಅನೇಕಾನೇಕ ಗುಹೆಗಳಲ್ಲಿ ಮಾರ್ದನಿಯಾಗಿ, ರಣರಣಿಸಿ ಪ್ರತಿಧ್ವನಿಯಾಗಿ ಮೊಳಗಿತು. ಪರ್ವತರಾಜನು (ಶಿಲಾನಾಂ ಉಚ್ಚಯ) ರಾಜನ ಮೇಲಣ ಅಕ್ಕರೆಯಿಂದ ಸಿಂಹವು ಹೇಳಿದ ಮಾತುಗಳನ್ನೇ ಪ್ರತಿಧ್ವನಿ ಮಾಡಿದನು.

ಅನ್ವಯ :—ಮೃಗೇಂದ್ರೇ ಏತಾವದುಕ್ತ್ವಾ ವಿರತೇಸತಿ ಗುಹಾಗತೇನ ಅಸ್ಯಪ್ರತಿಸ್ವನೇನ ಶಿಲೋಚ್ಚಯಃ ಅಪಿಪ್ರೀತ್ಯಾ ತಮೇವ ಅರ್ಥಂ ಕ್ಷಿತಿಪಾಲಮ್ ಉಚ್ಚೈರ ಭಾಷತೇವ ॥

ಮೃಗಾಣಾಂ ಇಂದ್ರಃ, ತಸ್ಮಿನ್ । ಗುಹಾಂ ಗತಃ, ತೇನ । ಶಿಲಾನಾಂ ಉಚ್ಚಯಃ ಶಿಲೋಚ್ಚಯಃ । ಕ್ಷಿತಿಂ ಪಾಲಯತೀತಿ ಕ್ಷಿತಿಪಾಲಃ ತಮ್ । ಅಭಾಷತ—ಅಭಾಷೇತಾಂ —ಅಭಾಷಂತ । ಅಭಾಷಥಾಃ—ಅಭಾಷೇಥಾಂ—ಅಭಾಷಧ್ವಮ್ । ಅಭಾಷೇ—ಅಭಾಷಾವಹಿ—ಅಭಾಷಾಮಹಿ । ಭಾಷ—ವ್ಯಕ್ತಾಯಾಂ ವಾಚಿ—ಲಙ್—ಪ್ರ.ಪು.ಏ. ॥

ಮೃಗೇಂದ್ರೇ = ಕೇಸರಿಯು, ಏತಾವತ್ ಉಕ್ತ್ವಾ = ಇಷ್ಟನ್ನು ಹೇಳಿ, ವಿರತೇ ಸತಿ = ಸುಮ್ಮನಾಗಲು, ಗುಹಾಗತೇನ = ಗುಹೆಯಲ್ಲಿ ಪಸರಿಸಿದ, ಅಸ್ಯ = ಆ ಸಿಂಹದ ಮಾತಿನ, ಪ್ರತಿಸ್ವನೇನ = ಪ್ರತಿಧ್ವನಿಯಿಂದ, ಶಿಲೋಚ್ಚಯಃ ಅಪಿ = ಆ ಪರ್ವತವೂ ಕೂಡಾ.

ಪ್ರೀತ್ಯಾ = ಪ್ರೀತಿಯಿಂದ, ತಪೋವ = ಅದೇ. ಅರ್ಥಂ = ಮಾತಿನ ಅರ್ಥವನ್ನು, ಕ್ಷಿತಿಪಾಲಂ = ರಾಜನನ್ನು ಕುರಿತು, ಉಚ್ಚೈಃ = ಗಟ್ಟಿಯಾಗಿ. ಅಭಾಷತ ಇವ = ಮಾತನಾಡಿತೋ ಎಂಬಂತೆ.

**52. ನಿಶಮ್ಯ ದೇವಾನುಚರಸ್ಯ ವಾಚಂ ।**
**ಮನುಷ್ಯದೇವಃ ಪುನರಪ್ಯುವಾಚ ॥**
**ಧೇನ್ವಾ ತದಧ್ಯಾಸಿತಕಾತರಾಕ್ಷ್ಯಾ ।**
**ನಿರೀಕ್ಷ್ಯಮಾಣಃ ಸುತರಾಂ ದಯಾಲುಃ** ॥ ೫೨ ॥

ಪರಶಿವನ ಸೇವಕನಾದ ಕೇಸರಿಯು ಹಿಡಿತದಲ್ಲಿ ನವೆಯುತ್ತಿರುವ ಹಸುವನ್ನು ಆ ಮನುಜೇಶ್ವರನು ಕರುಣಾರ್ದ್ರದೃಷ್ಟಿಯಿಂದ ನೋಡಿದನು. ಅಸಹಾಯಕ ಸ್ಥಿತಿಯಲ್ಲಿದ್ದು ತನ್ನನ್ನು ತಾನು ಬಿಡಿಸಿಕೊಳ್ಳಲಾರದೆ ತನ್ನನ್ನು ಆಕ್ರಮಣದಿಂದ ಮುಕ್ತಗೊಳಿಸಲು ಪ್ರಾರ್ಥಿಸುವಂತೆ ಕರುಣೆಯಿಂದ ಭಯಚಕಿತ ಕಣ್ಣುಗಳಿಂದ ನೋಡುತ್ತಿರಲು ರಾಜನ ಹೃದಯವು ಕರಗಿತು. ಕೂಡಲೇ ಆ ರಾಜೇಂದ್ರನು ಸಿಂಹದ ನುಡಿಯನ್ನು ಆಲಿಸುತ್ತ ಹೀಗೆಂದು ಮಾರುತ್ತರವಿತ್ತನು.

ಅನ್ವಯ :—ದೇವಾನುಚರಸ್ಯ ವಾಚಂ ನಿಶಮ್ಯ ಮನುಷ್ಯದೇವಃ ತದಧ್ಯಾಸಿತಕಾತರಾಕ್ಷ್ಯಾ ಧೇನ್ವಾ ನಿರೀಕ್ಷ್ಯಮಾಣಃ ಸುತರಾಂ ದಯಾಲುಃ (ಸನ್) ಪುನರಪ್ಯುವಾಚ ॥

ದೇವಸ್ಯ ಅನುಚರಃ, ತಸ್ಯ । ಮನುಷ್ಯಾಣಾಂ ದೇವಃ । ತೇನ ಅಧ್ಯಾಸಿತಂ । ತದಧ್ಯಾಸಿತಂ । ತದಧ್ಯಾಸಿತೇನ ಕಾತರೇ ಅಕ್ಷಿಣೀ ಯಸ್ಯಾಃ ಸಾ—ತದಧ್ಯಾಸಿತಕಾತರಾಕ್ಷೀ, ತಯಾ । ಉವಾಚ—ಊಚತುಃ—ಊಚುಃ । ಇತ್ಯಾದಿ । ಬ್ರೂಞ್—ವ್ಯಕ್ತಾಯಾಂ ವಾಚಿ—ಲಿಟ್—ಪ್ರ.ಪು.ಏ. ॥

ದೇವಾನುಚರಸ್ಯ = ಶಿವನ ಸೇವಕನಾದ, ಸಿಂಹದ, ವಾಚಂ = ಮಾತನ್ನು, ನಿಶಮ್ಯ = ಕೇಳಿ, ಮನುಷ್ಯದೇವಃ = ರಾಜನು, ತದಧ್ಯಾಸಿತಕಾತರಾಕ್ಷ್ಯಾ = ಸಿಂಹದ ಆಕ್ರಮಣದಿಂದ ಭಯಚಕಿತವಾದ ಕಣ್ಣುಳ್ಳ, ಧೇನ್ವಾ = ಹಸುವಿನಿಂದ, ನಿರೀಕ್ಷ್ಯಮಾಣಃ = ನೋಡಲ್ಪಡಂ, ಸುತರಾಂ = ಅಧಿಕವಾಗಿ, ದಯಾಲುಃ = ಕರುಣಾಳು, ಪುನರಪಿ = ತಿರುಗಿ, ಉವಾಚ = ಹೇಳಿದನು.

**53. ಕ್ಷತಾತ್ ಕಿಲ ತ್ರಾಯತ ಇತ್ಯುದಗ್ರಃ ।**
**ಕ್ಷತ್ರಸ್ಯ ಶಬ್ದೋ ಭುವನೇಷು ರೂಢಃ ॥**
**ರಾಜ್ಯೇನ ಕಿಂ ತದ್ವಿಪರೀತವೃತ್ತೇಃ ।**
**ಪ್ರಾಣೈರುಪಕ್ರೋಶಮಲೀಮಸೈರ್ವಾ** ॥ ೫೩ ॥

ಎಲೈ ಮೃಗೇಂದ್ರನೇ, ನಾನು ಕ್ಷತ್ರಿಯನು. ಕ್ಷತ್ರಿಯಧರ್ಮವನ್ನು ಪಾಲಿಸಬೇಕಾದವನು. ಕ್ಷತ್ರಿಯನು ತನ್ನ ಕ್ಷತ್ರಿಯವೃತ್ತಿಯಲ್ಲಿ ಯೋಗಾರೂಢನಾಗಿ ತನ್ನ ಉನ್ನತಿಯನ್ನು ಸಾಧಿಸುತ್ತಿರುವನು. ಮನಸಾ, ವಾಚಾ, ಕಾಯಾ, ತನ್ನ ಧರ್ಮದಲ್ಲಿ ವ್ರತಶೀಲನಾಗಿರುವನು. ಕ್ಷತಾತ್ ತ್ರಾಯತೇ ಇತಿ ಕ್ಷತ್ರಃ । ಹಿಂಸೆಯಿಂದ ಜೀವರನ್ನು, ಶರಣಾಗತ

ರನ್ನು ರಕ್ಷಿಸುವವನೇ ನಿಜವಾದ ಕ್ಷತ್ರಿಯನು. ಕ್ಷತ್ರಿಯನಾದವನು(ಕ್ಷಾತ್ರಕುಲೋದ್ಭವನು) ಆಯುಧಜೀವಿ. ಕ್ಷತಾತ್-ಆಯುಧದಿಂದ ಶಿಕ್ಷಿಸಬಲ್ಲವನು. ಅವನು ಪ್ರಪಂಚದಲ್ಲಿ ಹಿಂಸೆಯಾಗುತ್ತಿರುವುದನ್ನು ಕಣ್ಣಾರೆ ನೋಡಿ, ಹೇಡಿಯಂತೆ ಸಹಿಸಲಾರನು. ತನ್ನ ಪ್ರಾಣಾದಿಗಳನ್ನು ತ್ಯಾಗಮಾಡಿಯಾದರೂ ರಕ್ಷಿಸಬೇಕಾದುದು ಅವನ ಆದ್ಯಕರ್ತವ್ಯ. ಪ್ರಕೃತ ನಾನು ಸರ್ವಶ್ರೇಷ್ಠನಾದ ಕ್ಷತ್ರಿಯನಾಗಿ ಈ ಧೇನುವನ್ನು ರಕ್ಷಿಸದೆ ಹೋದರೆ, ಈ ಸಾಮ್ರಾಜ್ಯದಿಂದ ಆಗುವ ಪ್ರಯೋಜನವೇನು? ಕ್ಷತ್ರಿಯನಾಗಿ ಕ್ಷತ್ರಿಯರ ಕರ್ತವ್ಯವನ್ನು ನಿರ್ವಹಿಸದೆ ಜನಾಪವಾದಕ್ಕೆ ಗುರಿಯಾಗಬೇಕಾಗುವುದು. ಜನರ ದೂಷಣೆಯಿಂದ, ಜನಾಪವಾದದಿಂದ, ಅವಹೇಳನದ ಮಾತುಗಳಿಂದ, ಮಲಿನವಾದ ಈ ದೇಹವನ್ನು ಧರಿಸಿಯೂ ಚಿಂತೆಯಿಂದ ಜೀವಿಸುವುದು ವ್ಯರ್ಥವೇ. ಜೀವನವೇ ಪುರುಷಾರ್ಥರಹಿತವೆನಿಸುವುದು (ಬರಡುಜೀವನವೆನಿಸುವುದು).

ಅನ್ವಯ :—ಕ್ಷತಾತ್ ತ್ರಾಯತೇ ಇತಿ ಉದಗ್ರಃ ಕ್ಷತ್ರಸ್ಯ ಶಬ್ದಃ ಭುವನೇಷು ರೂಢಃ ಕಿಲ । ತದ್ವಿಪರೀತವೃತ್ತೇಃ ರಾಜ್ಯೇನ ಕಿಮ್ ಉಪಕ್ರೋಶಮಲೀಮಸೈಃ ಪ್ರಾಣೈರ್ವಾ ಕಿಮ್ ॥

ತ್ರಾಯತೇ—ತ್ರಾಯೇತೇ—ತ್ರಾಯಂತೇ—ಇತ್ಯಾದಿ । ತ್ರೈಙ್—ಪಾಲನೇ—ಲಟ್—ಪ್ರ.ಪು.ಏ. । ತಸ್ಯ ವಿಪರೀತಾ । ತದ್ವಿಪರೀತಾ ವೃತ್ತಿಃ ಯಸ್ಯ ಸಃ । ತದ್ವಿಪರೀತವೃತ್ತಿಃ, ತಸ್ಯ । ಉಪಕ್ರೋಶೇನ ಮಲೀಮಸಾಃ, ತೈಃ ॥

ಉದಗ್ರಃ = ಉನ್ನತವಾದ, ಕ್ಷತ್ರಸ್ಯ = ಕ್ಷತ್ರವರ್ಣದ, ಶಬ್ದಃ = ವಾಚಕವಾದ "ಕ್ಷತ್ರ" ಎಂಬ ಶಬ್ದವು, ಕ್ಷತಾತ್ = ಹಿಂಸೆಯಿಂದ, ತ್ರಾಯತ ಇತಿ = ಕಾಪಾಡು, ಭುವನೇಷು = ಲೋಕಗಳಲ್ಲಿ, ರೂಢಃ ಕಿಲ = ಪ್ರಸಿದ್ಧವಾಗು, ತದ್ವಿಪರೀತವೃತ್ತೇಃ ತಸ್ಯ = ಕ್ಷತ್ರ ಶಬ್ದಾರ್ಥದಿಂದ ವಿಪರೀತವಾದ ವ್ಯಾಪಾರವುಳ್ಳ, ರಾಜ್ಯೇನ = ರಾಜ್ಯದಿಂದ, ಕಿಂ= ಏನು ಫಲ, ಉಪಕ್ರೋಶಮಲೀಮಸೈಃ = ನಿಂದೆಯಿಂದ ಮಲಿನವಾದ, ಪ್ರಾಣೈಃ ವಾ= ಪ್ರಾಣಗಳಿಂದಾದರೂ, ಕಿಂ = ಏನು ಲಾಭ ?

**54. ಕಥಂ ನು ಶಕ್ಯೋಽನುನಯೋ ।**
**ಮಹರ್ಷೇರ್ವಿಶ್ರಾಣನಾಚ್ಚಾನ್ಯಪಯಸ್ವಿನೀನಾಮ್ ॥**
**ಇಮಾಮನೂನಾಂ ಸುರಭೇರವೇಹಿ ।**
**ರುದ್ರೌಜಸಾತು ಪ್ರಹೃತಂ ತ್ವಯಾ ಸ್ಯಾಮ್** ॥ ೫೪ ॥

ಎಲೈ ವ್ಯಾಗರಾಜನೇ, ನೀನು ಶಿವಶಕ್ತಿಯಿಂದ ಆ ಧೇನುವನ್ನು ಹಿಡಿದಿರುವೆ. ಅದು ಸಾಮಾನ್ಯವಾದ ಧೇನುವೇನಲ್ಲ, ಕೇಳಿದ್ದನ್ನು ಕೊಡಬಲ್ಲ, ಸುರಲೋಕದಲ್ಲಿರುವ ಕಾಮಧೇನುವಾದ ಸುರಭಿಗೋಮಾತೆಯ ತನಯೆಯಾದ ಈ ನಂದಿನಿಗೋಮಾತೆ ಸಾಮಾನ್ಯ ಧೇನುವೇನಲ್ಲ. ಅವರ ಮಹಿಮೆ ಅದ್ಭುತವಾದುದೇ. ನೀನು ಶಿವನ ಸತ್ವದಿಂದ, ಶಿವನ ದಿವ್ಯತೇಜಸ್ಸಿನಿಂದ ಅವನ್ನು ವಶಪಡಿಸಲು ನಿನಗೆ ಸಾಧ್ಯವಾಯಿತೇ ವಿನಹ ಅದನ್ನು ನಿನ್ನಿಂದ ಮುಟ್ಟಲೂ ಆಗುತ್ತಿರಲಿಲ್ಲ. ಈಗ ಗುರುವರೆನಿಗಾದ ನಷ್ಟವೂ ಅಪಾರ. ನಾನು

ಸಹಸ್ರಾರು ಗೋವುಗಳನ್ನು ದಾನವಾಗಿ ಕೊಟ್ಟರೂ ಆತನ ಉಗ್ರಕೋಪವು ತಣಿಯದು. ಆತನ ರೌದ್ರವನ್ನು ನಾನು ಸಹಿಸಲಾರೆನು. ಇದನ್ನು ನಾನು ಚೆನ್ನಾಗಿ ಬಲ್ಲೆನು.

ಅನ್ವಯ :—ಮಹರ್ಷೇರನುನಯಃ ಚ ಅನ್ಯಪಯಸ್ವಿನೀನಾಮ್ ವಿಶ್ರಾಣನಾತ್, ಕಥಂ ನು ಶಕ್ಯಃ । ಇಮಾಂ ಸುರಭೇಃ ಅನೂನಾಂ ಅವೇಹಿ । ತ್ವಯಾ ತು ಅಸ್ಯಾಂ ರುದ್ರೌಜಸಾ ಪ್ರಹೃತಮ್ ॥ ಮಹಾಂಶ್ಚಾಸೌ ಋಷಿಶ್ಚ, ತಸ್ಯ । ಅನ್ಯಾಶ್ಚ ತಾಃ ಪಯಸ್ವಿನ್ಯಶ್ಚ ಅನ್ಯಪಯಸ್ವಿನ್ಯಃ, ತಾಸಾಮ್ ॥ ನ ಊನಾ ಅನೂನಾತಾಮ್ । ರುದ್ರಸ್ಯ ಓಜಃ । ತೇನ —ರುದ್ರೌಜಸಾ । ಅವ—ಉಪಸರ್ಗ । ಏತು, ಇತಾತ್—ಇತಾಂ—ಯಂತು । ಇಹಿ, ಇತಾತ್—ಇತಂ—ಇತ । ಅಯಾನಿ—ಅಯಾವ—ಅಯಾಮ । ಇಣ್—ಗತೌ—ಲೋಟ್–ಮ.ಪು.ಏ. ॥

ಮಹರ್ಷೇಃ = ವಸಿಷ್ಠಮಹರ್ಷಿಗಳ, ಅನುನಯಃ ಚ = ಕೋಪವನ್ನು ಹೋಗಲಾಡಿ ಪುದಾದರೂ, ಪಯಸ್ವಿನೀನಾಂ = ಹಸುಗಳ, ವಿಶ್ರಾಣನಾತ್ = ದಾನದಿಂದ, ಕಥಂ ನು ಶಕ್ಯಃ = ಹೇಗೆ ಸಾಧ್ಯ. ಇಮಾಂ = ಈ ಹಸುವನ್ನು. ಸುರಭೇಃ = ಕಾಮಧೇನುವಿನಿಂದ, ಅನೂನಾಂ = ನ್ಯೂನತೆಯಿಲ್ಲದಿರುವುದಾಗಿ, ಅವೇಹಿ = ತಿಳಿ. ಅಸ್ಯಾಂ = ಈ ಹಸುವಿನಲ್ಲಿ, ತ್ವಯಾ = ನಿನ್ನಿಂದ, ಪ್ರಹೃತಂತು = ಹೊಡೆದು, ರುದ್ರೌಜಸಾ = ಈಶ್ವರನ ದಿವ್ಯತೇಜಸ್ಸಿನಿಂದ (ವಿಭೂತಿಯಿಂದ).

**55. ಸೇಯಂ ಸ್ವದೇಹಾರ್ಪಣನಿಷ್ಕ್ರಯೇಣ ।**
**ನ್ಯಾಯ್ಯಾ ಮಯಾ ಮೋಚಯಿತುಂ ಭವತ್ತಃ ॥**
**ನ ಪಾರಣಾಸ್ಯಾದ್ವಿಹತಾ ತವೈವಂ ।**
**ಭವೇದಲುಪ್ತಶ್ಚ ಮುನೇಃ ಕ್ರಿಯಾರ್ಥಃ** || ೫೫ ||

ಆದುದರಿಂದ ಅದರ ಬದಲಿಗೆ ನನ್ನ ದೇಹವನ್ನು ಭಕ್ತಿಯಿಂದ ನಿನಗೆ ಅರ್ಪಿಸುವೆನು. ನೀನು ನನ್ನನ್ನು ನಿನ್ನ ಆಹಾರವಾಗಿ ಸ್ವೀಕರಿಸಿ ಗುರುವಿನ ಧೇನುವನ್ನು ಉಳಿಸಬೇಕೆಂದು ಕೃಪೆಯಿಂದ ಯಾಚಿಸುವೆನು. ಇದು ಯುಕ್ತವಾದುದೇ. ನೀನು ನಿನ್ನ ಪಾರಣೆಯನ್ನು ಹಿಂದಿನಂತೆ ಮಾಡಿ, ಗುರುವಿನ ಹೋಮವಿಧಿಗೆ ಸಹಕಾರಿಯಾದ ಈ ಗೋಮಾತೆಯನ್ನು ಉಳಿಸಿಕೊಡು. ಗುರುವಿನ ಹೋಮಾದಿ ಮಹತ್ಕಾರ್ಯಗಳು ಲೋಪವಿಲ್ಲದೆ ಸಾಗಲಿ, ಸಾಂಗವಾಗಿ ನೆರವೇರಲಿ.

ಅನ್ವಯ : ಸೇಯಂ ಸ್ವದೇಹಾರ್ಪಣನಿಷ್ಕ್ರಯೇಣ ಮಯಾ ಭವತಃ ಮೋಚಯಿತುಂ ನ್ಯಾಯ್ಯಾ । ಏವಂ ತವ ಪಾರಣಾ ವಿಹತಾ ನ ಸ್ಯಾತ್ ಮುನೇಃ ಕ್ರಿಯಾರ್ಥಶ್ಚ ಅಲುಪ್ತಃ ಭವೇತ್ ॥

ಸ್ವಸ್ಯ ದೇಹಃ । ಸ್ವದೇಹಸ್ಯ ಅರ್ಪಣಂ, ಸ್ವದೇಹಾರ್ಪಣಮೇವ ನಿಷ್ಕ್ರಯಃ, ತೇನ । ನ್ಯಾಯಾದನಪೇತಾ ನ್ಯಾಯ್ಯಾ । ನ ಲುಪ್ತಃ ಅಲುಪ್ತಃ । ಕ್ರಿಯಾ ಏವ ಅರ್ಥಃ—ಕ್ರಿಯಾರ್ಥಃ । ಸ್ಯಾತ್—ಸ್ಯಾತಾಂ—ಸ್ಯುಃ । ಸ್ಯಾಃ—ಸ್ಯಾತಂ—ಸ್ಯಾತ । ಸ್ಯಾಂ—ಸ್ಯಾವ—ಸ್ಯಾಮ । ಅಸ—ಭುವಿ—ವಿಧಿಲಿಙ್—ಪ್ರ.ಪು.ಏ. । ಭವೇತ್—ಭವೇತಾಂ—ಭವೇಯುಃ ।

ಭವೇಃ—ಭವೇತಂ—ಭವೇತ । ಭವೇಯಂ—ಭವೇವ—ಭವೇಮ । ಭೂ—ಸತ್ತಾಯಾಂ—ವಿಧಿಲಿಙ್—ಪ್ರ.ಪು.ಏ. ॥

ಸಾ ಇಯಂ = ಈ ಹಸುವು, ಸ್ವದೇಹಾರ್ಪಣನಿಷ್ಕ್ರಯೇಣ = ನನ್ನ ದೇಹವನ್ನು ಅರ್ಪಿಸಿಕೊಳ್ಳುವುದರಿಂದ, ಮಯಾ = ನನ್ನಿಂದ, ಭವತ್ತಃ = ನಿನ್ನ ದೆಸೆಯಿಂದ, ಮೋಚಯಿತುಂ = ಬಿಡಿಸಲು, ಏವಂ = ಹೀಗೆ ಮಾಡುವುದರಿಂದ, ಕ್ರಿಯಾರ್ಥಃ = ಹೋಮಾದಿ ಪ್ರಯೋಜನವೂ, ಅಲುಪ್ತಃ = ಲೋಪವಿಲ್ಲದಿರುವುದು, ಭವೇತ್ = ಆದೀತು, ನ್ಯಾಯ್ಯಾ = ಯೋಗ್ಯವಾಗಿದೆ, ತವ = ನಿನ್ನ, ಪಾರಣಾ = ಭೋಜನವು, ನ ವಿಹತಾ ಸ್ಯಾತ್ = ನಷ್ಟವಾಗಲಾರದು.

56. ಭವಾನಪೀದಂ ಪರವಾನವೈತಿ ।
ಮಹಾನ್ ಹಿ ಯತ್ನಸ್ತವ ದೇವದಾರೌ ॥
ಸ್ಥಾತುಂ ನಿಯೋಕ್ತುರ್ನ ಹಿ ಶಕ್ಯ ।
ಮಗ್ರೇ ವಿನಾಶ್ಯ ರಕ್ಷ್ಯಂ ಸ್ವಯಮಕ್ಷತೇನ ॥ ೫೬ ॥

ಸ್ವಾಮಿಪರಾಧೀನನಾದ ನೀನು, ಸ್ವಾಮಿಭಕ್ತನಾದ ನೀನು ಸೇವಕನ ಕರ್ತವ್ಯವನ್ನು ಚೆನ್ನಾಗಿ ತಿಳಿದಿರುವೆ. ಸೇವಕನ ಕಷ್ಟವನ್ನು, ಹೊಣೆಗಾರಿಕೆಯನ್ನು, ಜವಾಬ್ದಾರಿಯನ್ನು ಚೆನ್ನಾಗಿ ಅರಿತಿರುವೆ. ಆದುದರಿಂದಲೇ ಈ ದೇವದಾರು ಮಹಾವೃಕ್ಷವನ್ನು ಬಹಳ ಜತನದಿಂದ ರಕ್ಷಿಸುತ್ತಿರುವೆ. ನಾನೂ ಸಹ ನಿನ್ನಂತೆಯೆ ಈ ಗೋಸೇವೆಯಲ್ಲಿ ನಿಯುಕ್ತನಾದವನು. ಏನೊಂದು ಗಾಯವನ್ನು ಹೊಂದದೆ ಅಥವಾ ಒಂದಿಷ್ಟು ಪರಿಶ್ರಮಪಡದೆ, ನನ್ನ ರಕ್ಷಣೆಯಲ್ಲಿರುವ ವಸ್ತುವನ್ನು ಕಳೆದುಕೊಂಡು ನನ್ನ ಸ್ವಾಮಿಯ ದರ್ಶನವನ್ನು ಹೇಗೆ ಮಾಡಲಿ ? ಅವನನ್ನು ನೋಡುವುದಾದರೂ ಹೇಗೆ ? ಈಗ ಅವನ ಬಳಿಗೆ ಹೋಗಿ ಈ ನನ್ನ ಮುಖವನ್ನು ಹೇಗೆ ತೋರಿಸಲಿ ? ಅವನ ಸಮೀಪಕ್ಕೆ ಹೋಗುವುದೂ ಕಷ್ಟವೆನಿಸುತ್ತಿದೆ.

ಅನ್ವಯ :—ಪರವಾನ್ ಭವಾನ್ ಅಪಿ ಇದಮ್ ಅವೈತಿ—ತವ ಹಿ ದೇವದಾರೌ ಮಹಾನ್ ಪ್ರಯತ್ನಃ । ಸ್ವಯಮಕ್ಷತೇನ ರಕ್ಷ್ಯಂ ವಿನಾಶ್ಯ ನಿಯೋಕ್ತುಃ ಅಗ್ರೇ ಸ್ಥಾತುಂ ಶಕ್ಯಂ ನ ಹಿ ॥

ನ ಕ್ಷತಃ ಅಕ್ಷತಃ । ತೇನ । ಅವ—ಉಪಸರ್ಗ, ಏತಿ—ಇತಃ—ಯಂತಿ । ಏಷಿ—ಇಥಃ—ಇಥ । ಏಮಿ—ಇವಃ—ಇಮಃ । ಇಣ್—ಗತೌ—ಲಟ್—ಪ್ರ.ಪು.ಏ. ॥

ಅವ = ಉಪಸರ್ಗ, ನ ಕ್ಷತಃ = ಅಕ್ಷತಃ, ಸ್ವಯಂ = ಆತ್ಮನಾ, ಪರವಾನ್ = ಪರಾಧೀನನಾದ, ಭವಾನಪಿ = ನೀನು ಕೂಡ, ಇದಂ = ಈ ವಿಷಯವನ್ನು, ಅವೈತಿ = ತಿಳಿಯುತ್ತಿ, ಹಿ = ಯಾವ ಕಾರಣದಿಂದ, ತವ = ನಿನ್ನ, ದೇವದಾರೌ = ದೇವದಾರು ಮರದ ವಿಷಯದಲ್ಲಿ, ಮಹಾನ್ ಯತ್ನಃ = ಅಧಿಕಪ್ರಯತ್ನ, ರಕ್ಷ್ಯಂ = ಕಾಪಾಡಬೇಕಾದ ವಸ್ತುವನ್ನು, ವಿನಾಶ್ಯ = ನಾಶಪಡಿಸಿ, ಸ್ವಯಂ = ತಾನು, ಅಕ್ಷತೇನ = ವ್ಯಥೆಪಡದೆ, ಗಾಯಗೊಳ್ಳದೆ, ನಿಯೋಕ್ತುಃ = ಸ್ವಾಮಿಯ, ಅಗ್ರೇ = ಮುಂಭಾಗದಲ್ಲಿ, ಸ್ಥಾತುಂ = ಇರಲು, ನ ಶಕ್ಯಂ ಹಿ = ಸಾಧ್ಯವಿಲ್ಲವಷ್ಟೆ.

**57. ಕಿಮಪ್ಯಹಿಂಸ್ಯಸ್ತವ ಚೇನ್ಮತೋಽಹಂ ।**
**ಯಶಃಶರೀರೇ ಭವ ಮೇ ದಯಾಲುಃ ॥**
**ಏಕಾಂತವಿಧ್ವಂಸಿಷು ಮದ್ವಿಧಾನಾಂ ।**
**ಪಿಂಡೇಷ್ವನಾಸ್ಥಾ ಖಲು ಭೌತಿಕೇಷು** ॥ ೫೭ ॥

ಎಲೈ ಸಿಂಹರಾಜನೇ (ಮೃಗರಾಜನೇ). ಇವನು ಮನುಕುಲಚಕ್ರವರ್ತಿ ಎಂಬ ಮಮಕಾರದಿಂದ ನನ್ನನ್ನು ಕೊಲ್ಲಬಾರದೆಂಬ ಒಂದು ನಿರ್ಧಾರಕ್ಕೆ ಬಾರದಿರು. ಏಕೆಂದರೆ ನಾನು ಈ ದೇಹವನ್ನು ದಾನವಾಗಿ ನಿನಗರ್ಪಿಸುವುದರಿಂದ ನನಗೆ ಕೀರ್ತಿಯೆಂಬ ಶರೀರವು (ಯಶಃಶರೀರೇ = ಯಶಃ ಏವ ಶರೀರಂ) ಪ್ರಾಪ್ತವಾಗುವುದೆಂಬುದನ್ನು ನಾನು ಬಲ್ಲೆನು. ಈ ಪಾಂಚಭೌತಿಕವಾದ ಶರೀರವು ಎಂದಾದರೊಂದು ದಿನ ನಶಿಸಿಹೋಗುವುದಂತೂ ಖಂಡಿತವಲ್ಲವೆ ? ನಿನ್ನ ಅನುಗ್ರಹದಿಂದ ಶಾಶ್ವತವಾದ ಕೀರ್ತಿಯೆಂಬ ಶರೀರವನ್ನು ಪಡೆವೆನು. ಅಷ್ಟನ್ನೇ ನನಗೆ ದಯವಿಟ್ಟು ಅನುಗ್ರಹಿಸು.

ಅನ್ವಯ :—ಕಿಮಪಿ ಅಹಂ ತವಾಹಿಂಸ್ಯಃ ಮತಃ ಚೇತ್ ಮೇ ಯಶಃ ಶರೀರೇ ದಯಾಲುಃ ಭವ । ಮದ್ವಿಧಾನಾಂ ಏಕಾಂತವಿಧ್ವಂಸಿಷು ಭೌತಿಕೇಷು ಪಿಂಡೇಷು ಅನಾಸ್ಥಾ ಖಲು ॥

ನ ಹಿಂಸ್ಯ, ಅಹಿಂಸ್ಯಃ । ಯಶಃ ಏವ ಶರೀರಂ, ತಸ್ಮಿನ್ । ಏಕಾಂತೇನ ವಿಧ್ವಂಸಿನಃ, ತೇಷು । ಮಮ ಸದೃಶಾಃ—ಮದ್ವಿಧಾಃ. ತೇಷಾಮ್ । ನ ಆಸ್ಥಾ ಅನಾಸ್ಥಾ । ಭವ—ಭೂ ಸತ್ತಾಯಾಂ—ಲೋಟ್—ಮ.ಪು.ಏ. ॥

ಕಿಮಪಿ = ಕಿಂ ವಾ = ಏನಾದರೊಂದು ಕಾರಣದಿಂದ, ಅಹಂ = ನಾನು, ತವ = ನಿನಗೆ, ಅಹಿಂಸ್ಯಃ = ಕೊಲ್ಲಲ್ಪಡಬಾರದು, ಮತಃ ಚೇತ್ = ಇಷ್ಟವಾದರೆ, ಮೇ = ನನ್ನ, ಯಶಃ ಶರೀರೇ = ಕೀರ್ತಿಯೆಂಬ ದೇಹದಲ್ಲಿ, ದಯಾಲುಃ = ಕರುಣಾಳುವು, ಭವ = ಆಗು. ಏಕಾಂತ ವಿಧ್ವಂಸಿಷು=ಅವಶ್ಯವು ವಿನಾಶಹೊಂದುವ, ಭೌತಿಕೇಷು=ಪಂಚಭೂತಗಳಿಂದ ಉಂಟಾಗುವ ಪಾರ್ಥಿವದೇಹ, ಪಿಂಡೇಷು=ಶರೀರಗಳಲ್ಲಿ. ಮದ್ವಿಧಾನಾಂ=ನಮ್ಮಂತಹ ವಿವೇಕಿಗಳಿಗೆ, ಅನಾಸ್ಥಾ ಖಲು=ಉಪೇಕ್ಷೆಯುಷ್ಟೆ.

**58. ಸಂಬಂಧಮಾಭಾಷಣಪೂರ್ವಮಾಹುಃ ।**
**ವೃತ್ತಃ ಸ ನೌ ಸಂಗತಯೋರ್ವನಾಂತೇ ॥**
**ತದ್ಭೂತನಾಥಾನುಗ ! ನಾರ್ಹಸಿ ತ್ವಂ ।**
**ಸಂಬಂಧಿನೋ ಮೇ ಪ್ರಣಯಂ ವಿಹಂತುಮ್** ॥ ೫೮ ॥

ಎಲೈ ಭೂತನಾಥನಾದ, ವಿಶ್ವೇಶ್ವರನಾದ, ವಿಶ್ವಕುಟುಂಬಿಯಾದ ಪಶುಪತಿಯ (ಪಾಶುಪತಿಯ) ಅನುಚರನೇ, ನನ್ನದೊಂದು ಕೋರಿಕೆಯ ಮಾತನ್ನು ನೆರವೇರಿಸು, ಕರುಣೆಯಿಂದ ಅನುಗ್ರಹಿಸುವಂತೆ ಕರಜೋಡಿಸಿ ನಿನ್ನನ್ನು ಪ್ರಾರ್ಥಿಸುವೆನು. ಗೆಳೆತನವು ಪರಸ್ಪರ ಮಾತನಾಡುವುದರಿಂದಲೇ ಉಂಟಾಗುವುದೆಂದು (ಪ್ರಾರಂಭವಾಗುವುದೆಂದು) ಹೇಳುವರು. ನಾವೀಗ ಈ ಕಾಡಿನಲ್ಲಿ ಒಂದುಗೂಡಿ ಮಾತನಾಡಿದೆವು. ಆದರಿಂದ ನಮ್ಮಲ್ಲಿ ಮೈತ್ರಿಯುಂಟಾಯಿತು (ಸ್ಫುರಿಸಿತು). ನಿನ್ನ ಮಿತ್ರನಾದ ನನ್ನ ಪ್ರಾರ್ಥನೆಯನ್ನು ಮಿತ್ರ

ಬಂಧುವಾದ ನೀನು ಇಂದು ನಡೆಸಿಕೊಡು. ಅಲ್ಲಗಳೆಯಬಾರದೆಂದು ನಮ್ರತೆಯಿಂದ (ವಿನಯದಿಂದ) ಅರಿಕೆಮಾಡುವೆನು.

ಅನ್ವಯ :—ಸಂಬಂಧಮಾಭಾಷಣಪೂರ್ವಮ್ ಆಹುಃ । ವನಾಂತೇ ಸಂಗತಯೋಃ ನೌ ಸ ವೃತ್ತಃ । ತದ್ ಹೇ ಭೂತನಾಥಾನುಗಸಂಬಂಧಿನಃ ಮೇ ಪ್ರಣಯಂ ವಿಹಂತುಂ ನಾರ್ಹಸಿ ॥

ಆಭಾಷಣಪೂರ್ವಂ ಯಸ್ಯ ಸಃ, ತಮ್ । ವನಸ್ಯ ಅಂತಃ, ತಸ್ಮಿನ್ । ಭೂತಾನಾಂ ನಾಥಃ, ಭೂತನಾಥಸ್ಯ ಅನುಗಃ, ತತ್ಸಂಬುದ್ಧಿಃ । ಸಂಬಂಧಃ ಅಸ್ಯ ಅಸ್ತಿ ಇತಿ ಸಂಬಂಧೀ, ತಸ್ಯ । ಅರ್ಹಸಿ—ಅರ್ಹ—ಪೂಜಾಯಾಂ—ಲಟ್—ಮ.ಪು.ಏ. ॥

ಸಂಬಂಧಂ=ಗೆಳೆತನ, ಸಖ್ಯ, ಆಭಾಷಣಪೂರ್ವಂ=ಪರಸ್ಪರ ಮಾತನಾಡುವುದರಿಂದಲೇ, ಆಹುಃ = ಹೇಳುವರು. ಸಃ = ಆ ಸಂಬಂಧವು, ಮೇ = ನನ್ನ, ವನಾಂತೇ = ಕಾಡಿನ ಮಧ್ಯದಲ್ಲಿ, ಸಂಗತಯೋಃ = ಕಲೆತಿರುವ. ನೌ = ನಮ್ಮಿಬ್ಬರಿಗೆ, ವೃತ್ತಃ = ಉಂಟಾಗಿದೆ, ತತ್ = ಆದುದರಿಂದ, ಹೇ ಭೂತನಾಥಾನುಗ = ಶಿವಸೇವಕನೇ, ಸಂಬಂಧಿನಃ = ಮಿತ್ರನಾದ, ಪ್ರಣಯಂ = ಪ್ರಾರ್ಥನೆಯನ್ನು, ವಿಹಂತುಂ = ಅಲ್ಲಗಳೆಯಲು, ನಾರ್ಹಸಿ = ಯೋಗ್ಯವಾಗುವುದಿಲ್ಲ, ಭೂತಾನಾಂ ನಾಥಃ = ಭೂತನಾಥಸ್ಯ.

**59. ತಥೇತಿ ಗಾಮುಕ್ತವತೇ ದಿಲೀಪಃ ।**
**ಸದ್ಯಃ ಪ್ರತಿಷ್ಟಂಭವಿಮುಕ್ತಬಾಹುಃ ॥**
**ಸನ್ನ್ಯಸ್ತಶಸ್ತ್ರೋ ಹರಯೇ ಸ್ವದೇಹಂ ।**
**ಉಪಾನಯತ್ಪಿಂಡಮಿವಾಮಿಷಸ್ಯ ॥ ೫೯ ॥**

ರಾಜನ ಮಾತನ್ನು ಕೇಳಿ ಆ ಮೃಗೇಂದ್ರನು ಹಾಗೆಯೇ ಆಗಲೆಂದು ಒಪ್ಪಿಕೊಂಡಿತು. ಅದುವರೆಗೆ ಚಿತ್ರಪಟದಲ್ಲಿ ಬರೆದಂತೆ ಬಾಣವನ್ನು ತೆಗೆಯಲು ಎತ್ತಿದ ಬಾಹು ಹಾಗೆಯೇ ಕಟ್ಟು ಸಡಿಲವಾದಂತೆ ಕೆಳಕ್ಕೆ ಸರಿಯಿತು. ತಾನು ಇಷ್ಟರತನಕ ಧರಿಸಿದ ಶಸ್ತ್ರಾಸ್ತ್ರಗಳನ್ನು ಕೆಳಕ್ಕೆ ಹಾಕಿ ಶಸ್ತ್ರಸಂನ್ಯಾಸವನ್ನು ಮಾಡಿ ಮುಕ್ತಹಸ್ತನಾದನು. ತನ್ನ ಶೋಭಿತವಾದ ದೀರ್ಘದೇಹವನ್ನು ಮಾಂಸದ ಮುದ್ದೆಯಾಗಿ ಮಾಡಿ ತಾನು ಮುಂದೀಡಿ ಸಿಂಹದ ಮುಂದೆ ಕುಳಿತನು. ಬೇರೆ ಯಾವ ಯೋಚನೆಯೂ ಇಲ್ಲದೆ, ಮನದಲ್ಲಿ ಆಸೆಯೂ ಇಲ್ಲದೆ, ಅರ್ಪಣಾಮನೋಭಾವದಿಂದ (ಹುತಾತ್ಮ) ಆ ಮನುಕುಲತಿಲಕನು (ಮನುಕುಲ ಪ್ರದೀಪನು) ತನ್ನ ದೇಹವನ್ನು ಸಂಕುಚಿತಗೊಳಿಸಿ ಸಿಂಹದ ಆಹಾರಕ್ಕೆಂದು ದೃಢ ನಿರ್ಧಾರದಿಂದ ತನ್ನನ್ನು ತಾನು ಸಮರ್ಪಿಸಿದನು.

ಅನ್ವಯ :—ತಥೇತಿ ಗಾಮುಕ್ತವತೇ ಹರಯೇ ಸನ್ನ್ಯಸ್ತಶಸ್ತ್ರಃ ಸದ್ಯಃ ಪ್ರತಿಷ್ಟಂಭ ವಿಮುಕ್ತಬಾಹುಃ ದಿಲೀಪಃ ಸ್ವದೇಹಮ್ ಆಮಿಷಸ್ಯ ಪಿಂಡಮ್ ಇವ ಉಪಾನಯತ್ ।

ಪ್ರತಿಷ್ಟಂಭಾತ್ ವಿಮುಕ್ತಃ । ಪ್ರತಿಷ್ಟಂಭವಿಮುಕ್ತಃ ಬಾಹುಃ ಯಸ್ಯ ಸಃ । ಪ್ರತಿಷ್ಟಂಭ ಮುಕ್ತಬಾಹುಃ । ಸನ್ನ್ಯಸ್ತಂ ಶಸ್ತ್ರಂ ಯೇನ ಸಃ । ಸನ್ನ್ಯಸ್ತಶಸ್ತ್ರಃ । ಸ್ವಸ್ಯ ದೇಹಃ । ತಮ್ । ಉಪ—ಉಪಸರ್ಗ । ಅನಯತ್—ಅನಯತಾಂ—ಅನಯನ್ । ಅನಯಃ— ಇತ್ಯಾದಿ । ಣೀಞ್—ಪ್ರಾಪಣೇ—ಲಙ್—ಪ್ರ.ಪು.ಏ. ॥

ತಥಾ ಇತಿ = ಹಾಗೆಯೇ ಆಗಲೆಂದು, ಉಕ್ತವತೇ = ಹೇಳಿದ, ಉಪಾನಯತ್ = ಸಮರ್ಪಿಸಿದನು, ಪ್ರತಿಷ್ಟಂಭವಿಮುಕ್ತಬಾಹುಃ=ಪ್ರತಿಬಂಧದಿಂದ ಬಿಡಲ್ಪಟ್ಟ ತೋಳುಳ್ಳ = ಪ್ರತಿಷ್ಟಂಭಾತ್ ವಿಮುಕ್ತಃ—ಗಾಂ = ಮಾತನ್ನು, ಹರಯೇ = ಆ ಸಿಂಹಕ್ಕಾಗಿ, ಸದ್ಯಃ = ತತ್‌ಕ್ಷಣದಲ್ಲಿ, ಸನ್ನ್ಯಸ್ತಶಸ್ತ್ರಃ = ಕೆಳಗೆ ಹಾಕಿದ ಆಯುಧವುಳ್ಳವನಾಗಿ, ಸ್ವದೇಹಂ = ತನ್ನ ದೇಹವನ್ನು, ಆಮಿಷಸ್ಯ = ಮಾಂಸದ, ಪಿಂಡಮಿವ = ಮುದ್ದೆಯಾಗಿ, ಉಪಾನಯತ್ = ಸಮರ್ಪಿಸಿದನು.

60. ತಸ್ಮಿನ್ ಕ್ಷಣೇ ಪಾಲಯಿತುಃ ಪ್ರಜಾನಾಂ ।
ಉತ್ಪಶ್ಯತಃ ಸಿಂಹನಿಪಾತಮುಗ್ರಮ್ ॥
ಅವಾಙ್ಮುಖಸ್ಯೋಪರಿ ಪುಷ್ಪವೃಷ್ಟಿಃ ।
ಪಪಾತ ವಿದ್ಯಾಧರಹಸ್ತಮುಕ್ತಾ ॥ ೬೦ ॥

ಆ ಕ್ಷಣವೇ ಆ ಸಿಂಹವು ರೌದ್ರಭಯಂಕರವಾಗಿ ಸಿಡಿಲಿನಂತೆ ತನ್ನ ಮೇಲೆ ಎರಗುವುದೆಂದು ಊಹಿಸುತ್ತ ತಾನು ಮೊಗಬಾಗಿ ತನ್ನ ಮೃತ್ಯುವನ್ನು ಎದುರುನೋಡುತ್ತಾ ಆ ಮಾನವಾಗ್ರಣಿ ಕುಳಿತಿದ್ದನು. ಹೀಗೆ ತಲೆಬಾಗಿ ಕುಳಿತಿರುವ ಪ್ರಜಾರಂಜಕನಾದ ಆ ದಿಲೀಪನ ಶಿರದ ಮೇಲೆ, ಆಕಾಶಮಾರ್ಗದಲ್ಲಿ ನಿಂತು ವಿದ್ಯಾಧರರೆಂಬ ದೇವತೆಗಳು ಹೂಮಳೆಗರೆದರು. ತಮ್ಮ ಬೊಗಸೆಕೈಗಳಿಂದ ವಿದ್ಯಾಧರರು ಪುಷ್ಪವೃಷ್ಟಿಗರೆದರು. ಪುಷ್ಪಗುಚ್ಛಗಳಿಂದ ಹೂಮಳೆಗರೆದರು.

ಅನ್ವಯ :—ತಸ್ಮಿನ್ ಕ್ಷಣೇ ಉಗ್ರಂ ಸಿಂಹನಿಪಾತಮ್ ಉತ್ಪಶ್ಯತಃ ಅವಾಙ್ ಮುಖಸ್ಯ ಪ್ರಜಾನಾಂ ಪಾಲಯಿತುಃ ವಿದ್ಯಾಧರಹಸ್ತಮುಕ್ತಾ ಪುಷ್ಪವೃಷ್ಟಿಃ ಪಪಾತ ॥

ಸಿಂಹಸ್ಯ ನಿಪಾತಃ, ತಮ್ । ಅವಾಙ್ ಮುಖಂ ಯಸ್ಯ ಸಃ, ಅವಾಙ್ಮುಖಃ ತಸ್ಯ । ಪುಷ್ಪಾಣಾಂ ವೃಷ್ಟಿಃ । ವಿದ್ಯಾಧರಾಣಾಂ ಹಸ್ತಾಃ । ವಿದ್ಯಾಧರಾಣಾಂ ಹಸ್ತೇಭ್ಯಃ ಮುಕ್ತಾ । ಪಪಾತ—ಪೇತತುಃ—ಪೇತುಃ । ಪೇತಿಥ—ಪೇತಥುಃ—ಪೇತ । ಪಪಾತ, ಪಪತ—ಪೇತಿವ—ಪೇತಿಮ । ಪತ್ಲೃ—ಗತೌ—ಲಿಟ್—ಪ್ರ ಪು ಏ. ॥

ತಸ್ಮಿನ್ ಕ್ಷಣೇ = ಆ ಸಮಯದಲ್ಲಿ, ಸಿಂಹನಿಪಾತಮ್ = ಸಿಂಹದ ಎರಗುವಿಕೆಯನ್ನು, ಉತ್ಪಶ್ಯತ = ಊಹಿಸುತ್ತಲಿರುವ, ಅವಾಙ್ಮುಖಸ್ಯ = ಕೆಳಮುಖ ಮಾಡಿಕೊಂಡಿರುವ, ಪ್ರಜಾನಾಂ = ಪ್ರಜೆಗಳ, ಪಾಲಯಿತುಃ = ರಕ್ಷಿಸುವ, ಉಪರಿ = ಮೈಮೇಲೆ, ವಿದ್ಯಾಧರ ಹಸ್ತಮುಕ್ತಾ= ವಿದ್ಯಾಧರರೆಂಬ ದೇವತೆಗಳ ಕೈಯಿಂದ ಹೊರಟ, ಪುಷ್ಪವೃಷ್ಟಿಃ= ಹೂವಿನ ಮಳೆ, ಪಪಾತ = ಬಿದ್ದಿತು.

61. ಉತ್ತಿಷ್ಠ ವತ್ಸೇತ್ಯಮೃತಾಯಮಾನಂ ।
ವಚೋ ನಿಶಮ್ಯೋತ್ಥಿತಮುತ್ಥಿತಃ ಸನ್ ॥
ದದರ್ಶ ರಾಜಾ ಜನನೀಮಿವ ಸ್ವಾಂ ।
ಗಾಮಗ್ರತಃ ಪ್ರಸ್ರವಿಣೀಂ ನ ಸಿಂಹಮ್ ॥ ೬೧ ॥

"ಏಳು ಮಗನೇ, ಏದ್ದೇಳು ಕಂದಾ" ಎಂಬ ವಾಕ್ಯದು ಮಧುರವಾದ, ಅಮೃತದಂತೆ ಹಿತಕರವಾದ, ಪ್ರೀತಿಯುಕ್ತವಾದ ಮಾತನ್ನು ಆ ನೃಪಾಲನು ಕೇಳಿದನು. ಒಡನೆಯೇ

ಆ ರಾಜಮೌಳಿಯು ಮೇಲಕ್ಕೆದ್ದು ನೋಡುತ್ತಿರಲು ಅಲ್ಲಿ ಸಿಂಹವು ಇರಲಿಲ್ಲ. ಆ ಕೇಸರಿಯ ಬದಲು ತನ್ನ ಹೆತ್ತ ತಾಯಿಯನ್ನೇ ಕಂಡಂತೆ ಅವನಿಗೆ ಭಾಸವಾಯಿತು. ಮಂಗಳಕರಳಾದ, ಶುಭಲಕ್ಷಣದಿಂದ ಕೂಡಿದ ಆ ಸುರಧೇನು ನಂದಿನಿಯು (ಸುರಭಿಸುತೆ) ಹಾಲನ್ನು ಸುರಿಸುತ್ತಾ ಅಲ್ಲಿ ನಿಂತಿರುವುದನ್ನು ಕಂಡು, ತನ್ನ ಜನನಿಯನ್ನು ಕಂಡಂತೆಯೇ ಹರ್ಷಗೊಂಡು ಪುಲಕಿತನಾದನು, ಆನಂದಪರವಶನಾದನು.

ಅನ್ವಯ :—ಉತ್ತಿಷ್ಠ ವತ್ಸ ಇತಿ ಅಮೃತಾಯಮಾನಸ ಉತ್ಥಿತಂ ವಚಃ ನಿಶಮ್ಯ ಉತ್ಥಿತಃ ಸನ್ ರಾಜಾ ಅಗ್ರತಃ ಪ್ರಸವಿಣೀಂ ಗಾಂ ಸ್ವಾಂ ಜನನೀಮ್ ಇವ ದದರ್ಶ ಸಿಂಹಮ್‌ನ ॥

ಉತ್—ಉಪಸರ್ಗ, ತಿಷ್ಠತು, ತಿಷ್ಠತಾತ್—ತಿಷ್ಠತಾಂ—ತಿಷ್ಠಂತು । ತಿಷ್ಠ, ತಿಷ್ಠತಾತ್—ತಿಷ್ಠತಂ—ತಿಷ್ಠತ । ತಿಷ್ಠಾನಿ—ತಿಷ್ಠಾವ—ತಿಷ್ಠಾಮ । ಷ್ಠಾ—ಗತಿವೃತ್ತೌ—ಲೋಟ್—ಮ.ಪು.ಏ. । ಅಮೃತವತ್ ಆಚರತೀತಿ ಅಮೃತಾಯಮಾನಮ್ । ಅಮೃತಮಿವ ಆಚರತಿ ಇತಿ—ದದರ್ಶ—ದದೃಶತುಃ—ದದೃಶುಃ । ದದರ್ಶಿಥ, ದದ್ರಷ್ಠ—ದದೃಶಥುಃ—ದದೃಶ । ದದರ್ಶ—ದದೃಶಿವ—ದದೃಶಿಮ । ದೃಶಿರ್—ಪ್ರೇಕ್ಷಣೇ—ಲಿಟ್—ಪ್ರ.ಪು.ಏ. ॥

ಉತ್ತಿಷ್ಠ = ಏಳು, ನಿಶಮ್ಯ = ಕೇಳಿ, ಉತ್ಥಿತಃ ಸನ್ = ಎದ್ದವನಾಗಿ, ಅಗ್ರತಃ = ಎದುರಿನಲ್ಲಿ, ಸ್ವಾಂ = ತನ್ನ, ಪ್ರಸ್ರವಿಣೀಂ = ಹಾಲು ಸುರಿಸುತ್ತಿರುವ, ಅಮೃತಾಯಮಾನಂ = ಅಮೃತದಂತೆ ಆಚರಿಸುವ, ಉತ್ಥಿತಂ = ಉಂಟಾದ, ಹೇ ವತ್ಸ = ಎಲೈ ಮಗನೇ, ಇತಿ = ಈ ತೆರನಾಗಿ, ವಚಃ = ಮಾತನ್ನು, ನಿಶಮ್ಯ = ಕೇಳಿ, ಜನನೀಂ ಇವ = ತಾಯಿಯನ್ನು ಎಂಬಂತೆ, ಗಾಂ = ಹಸುವನ್ನು, ದದರ್ಶ = ನೋಡಿದನು. ನ ದದರ್ಶ = ನೋಡಲಿಲ್ಲ.

62. ತಂ ವಿಸ್ಮಿತಂ ಧೇನುರುವಾಚ ಸಾಧೋ ।
ಮಾಯಾಂ ಮಯೋದ್ಭಾವ್ಯ ಪರೀಕ್ಷಿತೋಽಸಿ ॥
ಋಷಿಪ್ರಭಾವಾನ್ಮಯಿ ನಾಂತಕೋಽಪಿ ।
ಪ್ರಭುಃಪ್ರಹರ್ತುಂ ಕಿಮುತಾನ್ಯಹಿಂಸ್ರಾಃ ॥ ೬೨ ॥

"ಹೇ ಮಗನೇ, ಆಶ್ಚರ್ಯಪಡದಿರು. ಹೇ ಲೋಕಬಂಧು, ಸಜ್ಜನರ ಸಿಂಧು, ಸಚ್ಚರಿತ್ರನಾದ ವಸುಧಾಧಿಪತಿಯೇ, ಸಾವಧಾನದಿಂದ ಕೇಳು. ನಿನ್ನನ್ನು ಪರೀಕ್ಷಿಸಲು ನಾನು ಈ ಮಾಯಾತಂತ್ರವನ್ನು ವಿರಚಿಸಿದೆನು. ಗೋಮಾತೆಯ ಅಮೃತವಚನಗಳನ್ನು ಕೇಳಿ ಆ ರಾಜಮೌಳಿಯು ವಿಸ್ಮಿತನಾದನು ನಂದಿನಿ ಧೇನುವು ತನ್ನ ಮಾತನ್ನು ಮುಂದುವರಿಸಿ ನುಡಿಯಿತು. "ನಾನಿಂದು ನಿನ್ನ ವಿಶಿಷ್ಟವಾದ ಗುಣಧರ್ಮಗಳಿಗೆ ಮೆಚ್ಚಿದೆನು. ಗುರು ವಸಿಷ್ಠರ ಯೋಗಮಹಿಮೆಯಿಂದ, ತಪಸ್ಸಿನ ಅಪಾರಮಹಿಮೆಯಿಂದ ನಾನು ಯಮನಿಗಾದರೂ ಅಂಜೆನು. ಧರ್ಮದೇವತೆಯೂ (ಮೃತ್ಯುದೇವತೆಯೂ) ನನ್ನನ್ನು ಮುಟ್ಟಲಾರ. ಹೀಗಿರುತ್ತ, ನನ್ನನ್ನು ಮುಟ್ಟಿ ಹಿಂಸಿಸಲು ಲೋಕದ ಯಾವ ದುಷ್ಟ ಪ್ರಾಣಿಯಾದರೂ ಶಕ್ತವಾಗಲಾರದು."

ಅನ್ವಯ :—ವಿಸ್ಮಿತಂ ತಂ ಧೇನುರುವಾಚ । (ಹೇ) ಸಾಧೋ ಮಯಾ ಮಾಯಾಮ್ ಉದ್ಭಾವ್ಯ ಪರೀಕ್ಷಿತೋಽಸಿ ಋಷಿಪ್ರಭಾವಾತ್ ಅಂತಕೋಽಪಿ ಮಯಿ ಪ್ರಹರ್ತುಂ ನ ಪ್ರಭುಃ ಕಿಮುತ ಅನ್ಯಹಿಂಸ್ರಾಃ ॥

ಋಷೇಃ ಪ್ರಭಾವಃ. ತಸ್ಮಾತ್ । ಅನ್ಯೇ ಚ ತೇ ಹಿಂಸ್ರಾಶ್ಚ—ಅನ್ಯಹಿಂಸ್ರಾಃ । ಉವಾಚ-ಊಚತುಃ-ಊಚುಃ । ಉವಚಿಥ, ಉವಕ್ಥ—ಊಚಥುಃ—ಊಚ । ಉವಾಚ, ಉವಚ—ಊಚಿವ—ಊಚಿಮ । ಬ್ರೂಞ್—ವ್ಯಕ್ತಾಯಾಂ ವಾಚಿ-ಲಿಟ್-ಪ್ರ.ಪು.ಏ. ॥

ಋಷೇಃ ಪ್ರಭಾವಃ—ವಿಸ್ಮಿತಂ = ಆಶ್ಚರ್ಯಗೊಂಡ, ಉವಾಚ= ಹೇಳಿತು, ಉದ್ಭಾವ್ಯ = ಸೃಷ್ಟಿ ಮಾಡಿ, ಮಯಿ = ನನ್ನಲ್ಲಿ, ಪ್ರಹರ್ತುಂ = ಪೀಡಿಸಲು, ತಂ = ಆ ಅರಸನನ್ನು, ಹೇ ಸಾಧೋ = ಎಲೈ ಸಜ್ಜನನೇ, ಮಯಾ = ನನ್ನಿಂದ, ಮಾಯಾಂ = ಮಾಯೆಯನ್ನು ಉದ್ಭಾವ್ಯ= ಸೃಷ್ಟಿಮಾಡಿ. ಪರೀಕ್ಷಿತಂ ಅಸಿ = ಪರೀಕ್ಷಿಸುವ ಸಲುವಾಗಿ, ಋಷಿಪ್ರಭಾವಾತ್ = ಋಷಿಗಳ ಮಹಿಮೆಯಿಂದ, ಅಂತಕೋಽಪಿ = ಅಂತಕ, ಯಮನೂ ಕೂಡ, ನ ಪ್ರಭುಃ = ಸಮರ್ಥನಾಗಲಾರ. ಅನ್ಯಹಿಂಸ್ರಾಃ= ಇತರ ಕ್ರೂರಪ್ರಾಣಿಗಳು, ಕಿಮುತ = ಏನು ಹೇಳಲಿ.

63\. ಭಕ್ತ್ಯಾ ಗುರೌ ಮಯ್ಯನುಕಂಪಯಾಚ ।
ಪ್ರೀತಾ ಸ್ಮಿತೇ ಪುತ್ರವರಂ ವೃಣೀಷ್ವ ॥
ನ ಕೇವಲಾನಾಂ ಪಯಸಾಂ ಪ್ರಸೂತಿಂ ।
ಅವೇಹಿ ಮಾಂ ಕಾಮದುಘಾಂ ಪ್ರಸನ್ನಾಮ್ ॥ ೬೩ ॥

ನೀನು ಗುರು ವಸಿಷ್ಠರಲ್ಲಿ ವಿಮಲಭಕ್ತಿಯನ್ನು ಹೊಂದಿರುವೆ, ಹೇ ವೀರಾಗ್ರಣಿ, ನೀನು ನನ್ನಲ್ಲಿ ಅನುಕಂಪ ಕರುಣೆ, ದಯೆ, ಪ್ರೀತಿಯನ್ನು ಮೆರೆದಿರುವಿ. ನಿನಗೆ ನಾನು ಒಲಿದಿರುವೆನು. ನಾನು ಪ್ರಸನ್ನಳಾದರೆ ಬೇಕಾದ ವರಗಳನ್ನು ಕೊಡಬಲ್ಲ, ಇಷ್ಟಾರ್ಥ ಸಿದ್ಧಿಯನ್ನು (ಕಾಮಿತಾರ್ಥಪ್ರದಾಯಿನಿ) ಪೂರೈಸಬಲ್ಲ ಸುರಕಾಮಧೇನು. ಸಾಮಾನ್ಯ ಹಸುಗಳಂತೆ ಬರೇ ಹಾಲನ್ನು ಮಾತ್ರ ಸುರಿಸಬಲ್ಲವಳಲ್ಲ. ಬೇಕಾದ್ದನ್ನು ಕೊಡಬಲ್ಲ ವರದೆ.

ಅಸಿ—ಸ್ಥಃ—ಸಂತಿ । ಅಸಿ—ಸ್ಥಃ—ಸ್ಥ । ಅಸ್ಮಿ—ಸ್ವಃ—ಸ್ಮಃ । ಅಸ—ಭುವಿ—ಲಟ್—ಉ.ಪು.ಏ. । ವೃಣೀತಾಂ—ವೃಣಾತಾಂ—ವೃಣತಾಂ । ವೃಣೀಷ್ವ—ವೃಣಾಥಾಂ—ವೃಣೀಧ್ವಂ । ವೃಣೈ—ವೃಣಾವಹೈ—ವೃಣಾಮಹೈ । ವೃಞ್—ವರಣೇ—ಲೋಟ್—ಮ.ಪು.ಏ. । ಅವ—ಉಪಸರ್ಗ—ಇಹಿ—ಇಣ್—ಗತೌ—ಲೋಟ್—ಮ.ಪು.ಏ. । ಕಾಮಾನ್ ದೋಗ್ಧಿ ಇತಿ—ಕಾಮದುಘಾ, ತಾಮ್ ॥

ಮಯಿ = ನನ್ನಲ್ಲಿ, ಅನುಕಂಪಯಾ ಚ = ಕರುಣೆಯಿಂದಲೂ, ತೇ = ನಿನಗೆ, ಪ್ರೀತಾ ಅಸ್ಮಿ= ಸಂತುಷ್ಟಳಾಗಿರುವೆನು, ನ ಅವೇಹಿ = ತಿಳಿಯಬೇಡ, ಕಾಮದುಘಾಂ=ಇಷ್ಟಾರ್ಥ ಕೊಡುವವಳೆಂದು, ಅವೇಹಿ = ತಿಳಿ, ಕಾಮಾನ್ ದೋಗ್ಧಿ ಇತಿ ಕಾಮದುಘಾ, ತಾಮ್ ॥ ಮಾಂ = ನನ್ನನ್ನು, ಕೇವಲಾನಾಂ = ಬರೇ, ಸಾಮಾನ್ಯವಾಗಿ, ಪಯಸಾಂ = ಹಾಲಿಗೆ, ಪ್ರಸೂತಿಂ = ಕಾರಣಳೆಂದು, ಪ್ರಸನ್ನಾಂ = ಪ್ರೀತಳಾದ.

64. ತತಃ ಸಮಾನೀಯ ಸಮಾನಿತಾರ್ಥೀ ।
ಹಸ್ತೌ ಸ್ವಹಸ್ತಾರ್ಜಿತವೀರಶಬ್ದಃ ॥
ವಂಶಸ್ಯ ಕರ್ತಾರಮನಂತಕೀರ್ತಿಂ ।
ಸುದಕ್ಷಿಣಾಯಾಂ ತನಯಂ ಯಯಾಚೇ ॥ ೬೪ ॥

ಇತರರಿಗೆ ದಾನಮಾಡತಕ್ಕ ಸನ್ಮಾನಗಳನ್ನು ಮಾಡಬಲ್ಲ ಮಹಾದಾನಿಯಾದ, ದಾನಶೂರನಾದ, ಮಾನಿತಾರ್ಥಿಯಾದ ಮಹಾರಾಜನು ಇಂದು ಪುತ್ರಭಿಕ್ಷೆಯನ್ನು ಬೇಡಲು ಕೈಜೋಡಿಸಿ ಪ್ರಾರ್ಥಿಸಿದನು. ಅವನು ಅಸಹಾಯಶೂರನು. ಯಾರ ಸಹಾಯವೂ ಇಲ್ಲದೆ, ತನ್ನ ಕೈಯಿಂದಲೇ ಸಂಪಾದಿಸಿದ ವೀರಶಬ್ದಸಂಶೋಭಿತನು. ಸ್ವತಃ ವೀರಪುಂಗವನಾದ, ತ್ರಿಲೋಕವೀರನೆನಿಸಿದ ಆ ದಿಲೀಪಸಾಮ್ರಾಟನು ಅಂಜಲಿಬದ್ಧ ಹಸ್ತಗಳಿಂದ ತನ್ನ ವಂಶವನ್ನು ಮುನ್ನಡೆಸಿಕೊಂಡು ಹೋಗಬಲ್ಲ, ಅನಂತಕೀರ್ತಿಗೆ ಪಾತ್ರನಾದ ಓರ್ವ ಪುತ್ರರತ್ನನನ್ನು ಸುದಕ್ಷಿಣಾದೇವಿಯಲ್ಲಿ (ಧರ್ಮಪತ್ನಿಯಲ್ಲಿ) ಅನುಗ್ರಹಿಸಬೇಕೆಂದು ಬೇಡಿಕೊಂಡನು.

ಅನ್ವಯ :—ತತೋ ಮಾನಿತಾರ್ಥೀ ಸ್ವಹಸ್ತಾರ್ಜಿತವೀರಶಬ್ದಃ ಸ್ವಹಸ್ತೌ ಸಮಾನೀಯ ವಂಶಸ್ಯ। ಕರ್ತಾರಮ್ ಅನಂತಕೀರ್ತಿಮ್ ತನಯಂ ಸುದಕ್ಷಿಣಾಯಾಂ ಯಯಾಚೇ ॥

ಮಾನಿತಃ ಅರ್ಥೀ ಯೇನ ಸಃ—ಮಾನಿತಾರ್ಥೀ । ಸ್ವಸ್ಯ ಹಸ್ತೌ। ಸ್ವಹಸ್ತಾಭ್ಯಾಂ ಅರ್ಜಿತಃ । ಸ್ವಹಸ್ತಾರ್ಜಿತವೀರಶಬ್ದಃ—ವೀರ ಇತಿ ಶಬ್ದಃ—ವೀರಶಬ್ದಃ—ಯೇನ ಸಃ ಸ್ವಹಸ್ತಾರ್ಜಿತವೀರಶಬ್ದಃ । ಅನಂತಾ ಕೀರ್ತಿಃ ಯಸ್ಯ ಸಃ—ಅನಂತಕೀರ್ತಿಃ, ತಮ್ । ಯಯಾಚೇ—ಯಯಾಚಾತೇ—ಯಯಾಚಿರೇ ಇತ್ಯಾದಿ । ಯಾಚ್ಯಾ—ಯಾಚ್ಯಾಯಾಂ—ಲಿಟ್—ಪ್ರ.ಪು.ಏ. ॥

ಸಮಾನಿತಾರ್ಥೀ=ಮಾನಿತಃ ಅರ್ಥೀ ಯೇನ ಸಃ=ಸಮ್ಮಾನಿತರಾದ ಯಾಚಕಜನವುಳ್ಳ, ಯಯಾಚೇ = ಬೇಡಿದನು, ವಂಶಸ್ಯ ಕರ್ತಾರಂ = ವಂಶವನ್ನು ತಡೆಯಿಲ್ಲದೆ ನಡೆಸಿಕೊಂಡು ಹೋಗಬಲ್ಲ, ವೀರ ಇತಿ ಶಬ್ದಃ=ವೀರಶಬ್ದಃ, ತತಃ=ಅಮೇಲೆ, ಸ್ವಹಸ್ತಾರ್ಜಿತವೀರಶಬ್ದಃ = ತನ್ನ ಕೈಯಿಂದಲೇ ಸಂಪಾದಿಸಿದ ವೀರಶಬ್ದವುಳ್ಳ, ಸಃ = ಆ ದಿಲೀಪನು, ಹಸ್ತೌ= ಕೈಗಳನ್ನು, ಸಮಾನೀಯ = ಅಂಜಲಿಯಾಗಿ, ಜೋಡಿಸಿಕೊಂಡು, ಅನಂತಕೀರ್ತಿಂ = ಸ್ಥಿರವಾದ ಕೀರ್ತಿಯುಳ್ಳ, ತನಯ = ಪುತ್ರ, ಸುದಕ್ಷಿಣಾಯಾಂ = ಪತ್ನಿಯಲ್ಲಿ, ಯಯಾಚೇ = ಬೇಡಿಕೊಂಡನು.

65. ಸಂತಾನಕಾಮಾಯ ತಥೇತಿ ಕಾಮಂ ।
ರಾಜ್ಞೇ ಪ್ರತಿಶ್ರುತ್ಯ ಪಯಸ್ವಿನೀ ಸಾ ॥
ದುಗ್ಧ್ವಾ ಪಯಃ ಪತ್ರಪುಟೇ ಮದೀಯಂ ।
ಪುತ್ರೋಪಭುಂಕ್ಷ್ವೇತಿ ತಮಾದಿದೇಶ ॥ ೬೫ ॥

ಸಂತಾನಕಾಮನೆಯಿಂದ ಸುತನನ್ನು (ಪುತ್ರಭಿಕ್ಷೆ) ಬಯಸುವ ಅರಸನ ಕೋರಿಕೆಯನ್ನು ಅಂತಾಗಲೆಂದು ಆ ಸುರಭಿತನಯೆ ವರವನಿತ್ತು, ಹರಸಿ ಸಂತೈಸಿತು. ಆ ಬಳಿಕ ಆ ನಂದಿನಿ

ಗೋಮಾತೆಯು ರಾಜನನ್ನು ಸಂಬೋಧಿಸುತ್ತಾ "ಎಲೈ ಮಗನೆ, ನಾನು ಸುರಿಸುವ ಅಮೃತಸದೃಶವಾದ ಈ ಕ್ಷೀರಧಾರೆಯನ್ನು ನೀನು ಒಂದು ದೊನ್ನೆಯಲ್ಲಿ ಸಂಗ್ರಹಿಸಿ ಕುಡಿದುಬಿಡು. ಇದರಿಂದ ನಿನ್ನ ಇಷ್ಟಾರ್ಥವು ಸಿದ್ಧಿಯಾಗುವುದು (ಕೈಗೂಡುವುದು)" ಎಂದು ಆಜ್ಞಾಪಿಸಿತು.

ಅನ್ವಯ:—ಸಾ ಪಯಸ್ವಿನೀ ಸಂತಾನಕಾಮಾಯ ರಾಜ್ಞೇ ತಥೇತಿ ಕಾಮಂ ಪ್ರತಿಶ್ರುತ್ಯ "(ಹೇ) ಪುತ್ರ, ಮದೀಯಂ ಪಯಃ ಪತ್ರಪುಟೇ ದುಗ್ಧ್ವಾ ಉಪಭುಂಕ್ಷ್ವ" ಇತಿ ಆದಿದೇಶ ॥

ಸಂತಾನಂ ಕಾಮಯಂತೇ ಇತಿ ಸಂತಾನಕಾಮಃ, ತಸ್ಮೈ। ಪಯಃ ಅಸ್ಯಾಃ ಅಸ್ತಿ ಇತಿ ಪಯಸ್ವಿನೀ। ಪತ್ರಸ್ಯ ಪುಟಂ ತಸ್ಮಿನ್। ಮಮ ಇದಂ—ಮದೀಯಃ। ಉಪ—ಉಪಸರ್ಗ। ಭುಂಕ್ತಾಂ—ಭುಂಜಾತಾಂ—ಭುಂಜತಾಂ। ಭುಂಕ್ಷ್ವ—ಭುಂಜಾಥಾಂ—ಭುಂಗ್ಧ್ವಮ್। ಭುಂಜೈ—ಭುಂಜಾವಹೈ—ಭುಂಜಾಮಹೈ। ಭುಜ—ಪಾಲನಾಭ್ಯವಹಾರಯೋಃ—ಲೋಟ್—ಮ.ಪು.ಏ.। ಆಙ್—ಉಪಸರ್ಗ। ದಿದೇಶ—ದಿದಿಶತುಃ—ದಿದಿಶುಃ। ದಿದೇಶಿಥ—ಇತ್ಯಾದಿ। ದಿಶ—ಅಸರ್ಜನೇ—ಲಿಟ್—ಪ್ರ.ಪು ಏ. ॥

ಸಾ ಪಯಸ್ವಿನೀ = ಆ ಹಸುವು, ಪತ್ರಪುಟೇ = ದೊನ್ನೆಯಲ್ಲಿ, ಉಪಭುಂಕ್ಷ್ವ = ಕುಡಿಯುವುದು, ಸಂತಾನಂ ಕಾಮಯಂತೇ ಇತಿ ಸಂತಾನಕಾಮಃ—ಪಯಃ ಅಸ್ಯಾಃ ಅಸ್ತಿ ಇತಿ ಪಯಸ್ವಿನೀ, ಸಂತಾನಕಾಮಾಯ = ಪುತ್ರನನ್ನು ಅಪೇಕ್ಷಿಸುವ, ರಾಜ್ಞೇ=ಅರಸನಿಗೆ, ತಥಾ ಇತಿ = ಹಾಗೆಯೇ ಆಗಲೆಂದು, ಕಾಮಂ = ವರವನ್ನು ಪ್ರತಿಶ್ರುತ್ಯ = ಪ್ರತಿಜ್ಞೆ ಮಾಡಿ, ಮದೀಯಂ = ನನ್ನ, ಪಯಃ = ಹಾಲನ್ನು, ದುಗ್ಧ್ವಾ = ಕರೆದು, ಇತಿ = ಹೀಗೆಂದು, ತಂ = ಅವನನ್ನು, ಆದಿದೇಶ = ಅಪ್ಪಣೆಮಾಡಿತು.

66. ವತ್ಸಸ್ಯ ಹೋಮಾರ್ಥವಿಧೇಶ್ಚ ಶೇಷಂ ।
ಋಷೇರನುಜ್ಞಾಮಧಿಗಮ್ಯ ಮಾತಃ ॥
ಊಧಸ್ಯಮಿಚ್ಛಾಮಿ ತವೋಪಭೋಕ್ತುಂ ।
ಷಷ್ಠಾಂಶಮುರ್ವ್ಯಾ ಇವ ರಕ್ಷಿತಾಯಾಃ ॥ ೬೬ ॥

ಆ ಇಳಾಧಿಪತಿಯು, ಗೋಮಾತೆಯೊಡನೆ ಹೀಗೆಂದನು: "ಎಲೈ ತಾಯೆ, (ಎಲೈ ಮಾತೆ, ಎಲೈ ಅಪ್ಪೆ) (ಅಪ್ಪೆ= ತೌಳವ ಭಾಷೆ) ಇಳಾಧೀಶನು ಭೂಮಿಯ ಉತ್ಪತ್ತಿಯ $\frac{1}{6}$ ಅಂಶವನ್ನು ಪಡೆಯುವಂತೆ ನಾನು ನಿನ್ನ ಹಾಲನ್ನು ಈ ತೆರನಾಗಿ ಕುಡಿಯಲು ಬಯಸುವೆನು. ಅಮ್ಮಾ, ನೀನು ನಿನ್ನ ಎಳೆಕರುವು ಹಾಲನ್ನು ಕುಡಿದ ಬಳಿಕ, ಗುರು ವಸಿಷ್ಠರ ಹೋಮವಿಧಿಗಳ ಸಾಧನೆ ಬಳಿಕ, ಉಳಿಯುವ ಹಾಲನ್ನು ಸದ್ಗುರುವಿನ ಸಮ್ಮತಿಯನ್ನು ಪಡೆದ ಬಳಿಕವೆ ನಾನು ಕುಡಿಯುವಂತೆ ಆಶಿಸುವೆನು. ಇದು ನನ್ನ ಸ್ವಯಿಚ್ಛೆ. ಇದಕ್ಕೆ ನೀನು ನಿನ್ನ ಸಮ್ಮತಿಯನ್ನು ನೀಡು, ಮಾತೆ. ಏಕೆಂದರೆ ಸೃಷ್ಟಿಯ ಅಧಿಪತಿಯಾದ ರಾಜನು ತನ್ನ ಪ್ರಜಾಸಮುದಾಯದ (ಪ್ರಜಾಕೋಟಿಯ) ಒಟ್ಟು ಉತ್ಪತ್ತಿಯ (ಸಂಪಾದಿತ ಸಂಪಾದನೆಯ) ಷಷ್ಠಾಂಶವನ್ನು ಮಾತ್ರ ಸ್ವೀಕರಿಸುವನಲ್ಲೆ.

ಅನ್ವಯಃ:—ಹೇ ಮಾತಃ ವತ್ಸಸ್ಯ ಹೋಮಾರ್ಥವಿಧೇಃ ಚ ಶೇಷಂ ತವ ಊಧಸ್ಯಮ್ ರಕ್ಷಿತಾಯಾಃ ಉರ್ವ್ಯಾಃ ಷಷ್ಠಾಂಶಮಿವ ಋಷೇರನುಜ್ಞಾಮಧಿಗಮ್ಯ ಉಪಭೋಕ್ತುಮ್ ಇಚ್ಛಾಮಿ ॥

ಹೋಮಾರ್ಥವಿಧೇಶ್ಚ = ಹೋಮಾನುಷ್ಠಾನದ, ಊಧಸ್ಯಂ = ಹಾಲನ್ನು, ಉಪಭೋಕ್ತುಂ = ಸೇವಿಸಲು, ಇಚ್ಛಾಮಿ = ಇಚ್ಛಿಸುತ್ತೇನೆ, ಹೋಮಃ ಏವ ಅರ್ಥಃ। ಹೋಮಾರ್ಥಸ್ಯ ವಿಧಿಃ, ತಸ್ಯ। ಊಧಸಿ ಭವಂ = ಊಧಸ್ಯಮ್। ಇಚ್ಛಾಮಿ—ಇಷು—ಇಚ್ಛಾಯಾಂ। ಲಟ್—ಉ.ಪು.ಏ.॥ ಷಷ್ಠಶ್ಚಾಸೌ ಅಂಶಶ್ಚ।

ಹೇ ಮಾತಃ = ಎಲೈ ತಾಯೇ, ವತ್ಸಸ್ಯ = ಕರುವಿನ, ಹೋಮಾರ್ಥವಿಧೇಶ್ಚ = ಹೋಮಾನುಷ್ಠಾನದ, ಶೇಷಂ = ವಿನಿಯೋಗವಾಗಿ ಉಳಿದಿರುವ, ತವ = ನಿನ್ನ, ಊಧಸ್ಯಂ=ಹಾಲನ್ನು, ರಕ್ಷಿತಾಯಾಃ=ಭೂಮಿಯ, ಷಷ್ಠಾಂಶಂ ಇವ = ಆರನೆಯ ಒಂದು ಭಾಗವನ್ನು ಎಂಬಂತೆ, ಅಧಿಗಮ್ಯ= ಹೊಂದಿ, ಉಪಭೋಕ್ತುಂ= ಸೇವಿಸಲು, ಇಚ್ಛಾಮಿ = ಅಪೇಕ್ಷಿಸುತ್ತೇನೆ.

67. ಇತ್ಥಂ ಕ್ಷಿತೀಶೇನ ವಸಿಷ್ಠಧೇನುಃ ।
ವಿಜ್ಞಾಪಿತಾ ಪ್ರೀತತರಾ ಬಭೂವ ॥
ತದನ್ವಿತಾ ಹೈಮವತಾಚ್ಚ ಕುಕ್ಷೇಃ ।
ಪ್ರತ್ಯಾಯಯಾವಾಶ್ರಮಮಶ್ರಮೇಣ ॥ ೬೭ ॥

ಆ ಕ್ಷಿತಿಪಾಲನು (ನರೇಂದ್ರನು) ಹೀಗೆ ವಿನಯದಿಂದ ಕೇಳಲು, ಈ ಮೊದಲೇ ಕಾರ್ಯಗಳಿಂದ (ಕಾರ್ಯಪ್ರವೃತ್ತಿಗಳಿಂದ) ಸಂತೋಷಗೊಂಡ ಗುರು ವಸಿಷ್ಠರ ಹೋಮಧೇನುವಾದ ಸುರಭಿಸುತೆ ನಂದಿನಿಯು ಮತ್ತಷ್ಟು ಸಂತಸಗೊಂಡಿತು. ಆ ಬಳಿಕ ಅದು ಹಿಮವತ್ ಪರ್ವತದ ಗುಹೆಯಿಂದ ಹೊರಹೊರಟು (ಹೊರಟು) ಮುನಿಯ ಆಶ್ರಮದ ಕಡೆಗೆ (ತನ್ನ ಕೊಟ್ಟಿಗೆಗೆ, ದೊಡ್ಡಿಗೆ, ಹಟ್ಟಿಗೆ) ನೇರವಾಗಿ ತೆರಳಿತು.

ಅನ್ವಯಃ:—ಇತ್ಥಂ ಕ್ಷಿತೀಶೇನ ವಿಜ್ಞಾಪಿತಾ ವಸಿಷ್ಠಧೇನುಃ ಪ್ರೀತತರಾ ಬಭೂವ। ತದನ್ವಿತಾ ಚ ಹೈಮವತಾತ್ ಕುಕ್ಷೇಃ ಅಶ್ರಮೇಣ ಆಶ್ರಮಂ ಪ್ರತ್ಯಾಯಯೌ ॥

ವಸಿಷ್ಠಸ್ಯ ಧೇನುಃ। ಅತಿಶಯೇನ ಪ್ರೀತಾ—ಪ್ರೀತತರಾ! ಬಭೂವ—ಭೂ ಸತ್ತಾಯಾಂ। ಲಿಟ್—ಪ್ರ.ಪು.ಏ.। ತೇನ ಅನ್ವಿತಾ—ತದನ್ವಿತಾ। ಹಿಮವತಃ ಅಯಂ—ಹೈಮವತಃ—ತಸ್ಮಾತ್। ನ ಶ್ರಮಃ ಅಶ್ರಮಃ, ತೇನ। ಪ್ರತಿ, ಆಙ್—ಉಪಸರ್ಗಗಳು. ಯಯೌ—ಯಾ—ಪ್ರಾಪಣೇ—ಲಿಟ್—ಪ್ರ.ಪು.ಏ. ॥

ಇತ್ಥಂ = ಈ ರೀತಿಯಾಗಿ, ಪ್ರೀತತರಾ = ಅತ್ಯಂತ ಸಂತೋಷಗೊಂಡ, ಹೈಮವತಾಚ್ಚ = ಹಿಮವತ್ಪರ್ವತದ, ಕುಕ್ಷೇಃ = ಗುಹೆಯಿಂದ (ಹೈಮವತಾತ್ ಕುಕ್ಷೇಃ), ಪ್ರತ್ಯಾಯಯೌ = ಬಂದಿತು, ಕ್ಷಿತೀಶೇನ = ರಾಜನಿಂದ, ವಿಜ್ಞಾಪಿತಾ = ವಿಜ್ಞಾಪಿಸಲ್ಪಟ್ಟ, ವಸಿಷ್ಠಧೇನುಃ = ವಸಿಷ್ಠಋಷಿಗಳ ಹಸು (ದನ), ಬಭೂವ = ಆಯಿತು, ತದನ್ವಿತಾ = ಆ ದಿಲೀಪನನ್ನು ಕೂಡಿಕೊಂಡು, ಅಶ್ರಮೇಣ = ಅನಾಯಾಸವಾಗಿ.

**68. ತಸ್ಯಾಃ ಪ್ರಸನ್ನೇಂದುಮುಖಃ ಪ್ರಸಾದಂ।**
**ಗುರುರ್ನೃಪಾಣಾಂ ಗುರವೇ ನಿವೇದ್ಯ॥**
**ಪ್ರಹರ್ಷಚಿಹ್ನಾನುಮಿತಂ ಪ್ರಿಯಾಯೈ।**
**ಶಶಂಸ ವಾಚಾ ಪುನರುಕ್ತಯೇವ ॥ ೬೮ ॥**

ನಂದಿನಿಯು ಪೂರ್ಣಾನುಗ್ರಹಕ್ಕೆ ಪಾತ್ರನಾದ ರಾಜಶ್ರೇಷ್ಠನಾದ ದಿಲೀಪಸಾರ್ವಭೌಮನ ಮುಖವು ಪೂರ್ಣಚಂದ್ರನಂತೆ ವಿಕಾಸಗೊಂಡಿತ್ತು. ಮಹರ್ಷಿಗಳಾದ ವಸಿಷ್ಠರು ಅವನ ಮುಖಭಾವದಿಂದಲೇ ವಿಷಯವನ್ನು ಅರಿತುಕೊಂಡಿದ್ದರು. ಹೀಗಿದ್ದರೂ ಅದನ್ನೇ ಹೇಳಿದರೆ ಪುನರುಕ್ತಿಯಾಗುವುದೆಂದು ತಿಳಿದಿದ್ದರೂ ಸಂತೋಷಾತಿರೇಕದಿಂದ ಆ ರಘುಕುಲ ತಿಲಕನು ಎಲ್ಲಾ ವಿಷಯವನ್ನು ನಿವೇದಿಸಿದನು. ಆ ಬಳಿಕ ತನ್ನ ನಿಜಸತಿಗೂ ಒಲಿದು ಎಲ್ಲಾ ವಿಷಯವನ್ನು ವಿವರವಾಗಿ ಅರುಹಿದನು. ಅರುಹಿ ಮೋದಗೊಂಡನು (ಮುದವಡೆದನು).

ಪ್ರಸನ್ನಶ್ಚಾಸೌ ಇಂದುಶ್ಚ। ಪ್ರಸನ್ನೇಂದುರಿವ ಮುಖಂ ಯಸ್ಯ ಸಃ ಪ್ರಸನ್ನೇಂದುಮುಖಃ। ನೄನ್ ಪಾಂತಿ ಇತಿ ನೃಪಾಃ, ತೇಷಾಮ್। ಪ್ರಹರ್ಷಣಾಂ ಚಿಹ್ನಾನಿ, ಪ್ರಹರ್ಷಚಿಹ್ನೈಃ ಅನುಮಿತಃ, ತಮ್। ಶಶಂಸ—ಶಶಂಸತುಃ—ಶಶಂಸುಃ, ಇತ್ಯಾದಿ। ಶಂಸು—ಸ್ತುತೌ—ಲಿಟ್—ಪ್ರ.ಪು.ಏ.॥

ಪ್ರಸನ್ನೇಂದುಮುಖಃ = ನಿರ್ಮಲವಾದ ಚಂದ್ರನಂತೆ ಮುಖವುಳ್ಳ, ನೃಪಾಣಾಂ = ರಾಜರಿಗೆ, ಪ್ರಹರ್ಷಚಿಹ್ನಾನುಮಿತಂ = ಸಂತೋಷದ ಚಿಹ್ನೆಗಳಿಂದ (ಚಹರೆಗಳಿಂದ) ಊಹಿಸಲ್ಪಟ್ಟ, ತಸ್ಯಾಃ = ಆ ನಂದಿನಿಯು, ಶಶಂಸ = ಹೇಳಿದನು, ತಸ್ಯಾಃ = ಆ ನಂದಿನಿಯು, ಪ್ರಸಾದಂ = ಅನುಗ್ರಹ, ಪುನರುಕ್ತಯಾ ಇವ = ಪುನಃ ಹೇಳುವುದರಿಂದ, ವಾಚಾ = ಮಾತಿನಿಂದ, ನಿವೇದ = ತಿಳಿಸಿ, ಪ್ರಿಯಾಯೈ = ಪ್ರಿಯಳಾದ ಸುದಕ್ಷಿಣೆಗೆ, ಶಶಂಸ = ಹೇಳಿದನು.

**69. ಸ ನಂದಿನೀ ಸ್ತನ್ಯಮನಿಂದಿತಾತ್ಮಾ।**
**ಸದ್ವತ್ಸಲೋ ವತ್ಸಹುತಾವಶೇಷಮ್ ॥**
**ಪಪೌ ವಸಿಷ್ಠೇನ ಕೃತಾಭ್ಯನುಜ್ಞಃ।**
**ಶುಭ್ರಂ ಯಶೋಮೂರ್ತಮಿವಾತಿ ತೃಷ್ಣಃ ॥ ೬೯ ॥**

ದಿಲೀಪನು ಸಾಧುಜನವತ್ಸಲನು ಅಮಿತತೇಜನು. ಕೀರ್ತಿಶಾಲಿಯಾದ ಆ ನೃಪವರನು, ಸಾಯಂಕಾಲದ ವೇಳೆಯಲ್ಲಿ, ಕರು ಕುಡಿದ ಬಳಿಕ, ಹೋಮಯಾಗಗಳಿಗೆ ಉಪಯೋಗಿಸಿ ಮಿಕ್ಕ ನಂದಿನಿಯ ಹಾಲನ್ನು ಗುರುವಿನ ಒಪ್ಪಿಗೆಪಡೆದು, ನಿರ್ಮಲಾಂತಃಕರಣದಿಂದ ಕುಡಿದನು. ನಿರ್ಮಲವಾದ ತನ್ನ ಕೀರ್ತಿಯೇ ಮೂರ್ತಿಮತ್ತಾಗಿ ಎದ್ದು ಬಂದಂತಿರುವ (ಸಾಕಾರವಾಗಿ) ಬಂದಂತಿರುವ ಶುಭ್ರವಾದ ನಂದಿನಿಯ ನೊರೆಹಾಲನ್ನು ಪುತ್ರೋತ್ಪತ್ತಿಯಾಗುವುದೆಂಬ ಭರವಸೆಯಿಂದ (ಮುಕ್ತಶಂಕಾ) ಕುಡಿದನು.

ಅನ್ವಯ :—ಅನಿಂದಿತಾತ್ಮಾ ಸದ್ವತ್ಸಲಃ ವಸಿಷ್ಠೇನ ಕೃತಾಭ್ಯನುಜ್ಞಃ ವತ್ಸಹುತಾವ

ಶೇಷವತ್ ನಂದಿನೀಸ್ತನ್ಯಂ ಮೂರ್ತಮ್ ಶುಭ್ರಂ ಯಶ ಇವ ಅತಿತೃಷ್ಣಾಃ ಸನ್ ಪಪೌ ॥

ನಂದಿನ್ಯಾಃ ಸ್ತನ್ಯಂ । ಅನಿಂದಿತಃ ಆತ್ಮಾ ಯಸ್ಯ ಸಃ—ಅನಿಂದಿತಾತ್ಮಾ । ಸತ್ಸುವತ್ಸಲಃ—ಸದ್ವತ್ಸಲಃ । ವತ್ಸಹುತಯೋಃ ಅವಶೇಷಃ, ತವತ್ । ಕೃತಾ ಅಭ್ಯನುಜ್ಞಾ ಯಸ್ಯ ಸಃ, ಕೃತಾಭ್ಯನುಜ್ಞಃ । ಪಪೌ—ಪಪತುಃ—ಪಪುಃ । ಪಪಿಥ, ಪಪಾಥ—ಪಪಥುಃ—ಪಪ । ಪಪೌ—ಪಪಿವ—ಪಪಿಮ । ಪಾ—ಪಾಲನೇ—ಲಿಟ್—ಪ್ರ.ಪು.ಏ. ॥

ಅನಿಂದಿತಾತ್ಮಾ= ಪವಿತ್ರಾಂತಃಕರಣವುಳ್ಳ, ಕೃತಾಭ್ಯನುಜ್ಞಃ = ಅಪ್ಪಣೆಮಾಡಿ, ನಂದಿನೀಸ್ತನ್ಯಂ= ನಂದಿನಿಯ ಹಾಲನ್ನು (ಸಂಧೆಯನ್ನು), ಮೂರ್ತಂ = ರೂಪಹೊಂದಿದ, ಯಶಃ ಇವ = ಕೀರ್ತಿಯನ್ನು, ಸದ್ವತ್ಸಲಃ = ಸಜ್ಜನರಲ್ಲಿ ಪ್ರೀತಿಯುಳ್ಳ, ವಸಿಷ್ಠೇನ = ವಸಿಷ್ಠರಿಂದ, ಸಃ = ಆತನು, ವತ್ಸಾಹುತಾವಶೇಷಂ = ಕರು ಕುಡಿದು ಹೋಮಿಸಿ ಉಳಿದಿರುವ, ಶುಭ್ರಂ = ನಿರ್ಮಲವಾದ (ಪವಿತ್ರ, ಪಾವನ, ಅಮಲ), ಅತಿತೃಷ್ಣಃ = ಅತ್ಯಾಸಕ್ತಿಯಿಂದ, ಪಪೌ = ಕುಡಿದನು.

70. ಪ್ರಾತರ್ಯಥೋಕ್ತವ್ರತಪಾರಣಾಂತೇ ।
ಪ್ರಾಸ್ಥಾನಿಕಂ ಸ್ವಸ್ತ್ಯಯನಂ ಪ್ರಯುಜ್ಯ ॥
ತೌ ದಂಪತೀ ಸ್ವಾಂ ಪ್ರತಿರಾಜಧಾನೀಂ ।
ಪ್ರಸ್ಥಾಪಯಾಮಾಸ ವಶೀವಸಿಷ್ಠಃ ॥ ೭೦ ॥

ಮರುದಿನ ಪ್ರಾತಃಕಾಲದ ವೇಳೆಗೆ ಸರಿಯಾಗಿ ಇಂದ್ರಿಯನಿಗ್ರಹವುಳ್ಳ (ಪಂಚೇಂದ್ರಿಯಗಳ ನಿಗ್ರಹವುಳ್ಳ) ವಸಿಷ್ಠಮಹರ್ಷಿಗಳು ಗೋಸೇವಾವ್ರತದ ಪಾರಣೆಯನ್ನು ನಡೆಸಿ ರಾಜಧಾನಿಗೆ ತೆರಳಲು ಅನುಮತಿಕೊಟ್ಟರು. ಕೊನೆಗೆ ಆ ರಾಜದಂಪತಿಗಳನ್ನು ಶುಭಾಶೀರ್ವಾದ ಮಾಡಿ ಪ್ರಾಸ್ಥಾವಿಕ ನುಡಿಗಳನ್ನು ನುಡಿದು ನಲವಿಂದ ಅವರನ್ನು ಕಳುಹಿಸಿ ಕೊಡಲು (ಬೀಳ್ಕೊಡಲು) ಸನ್ನದ್ಧರಾದರು.

ಅನ್ವಯ :—ವಶೀವಸಿಷ್ಠಃ ಪ್ರಾತಃ ಯಥೋಕ್ತವ್ರತಪಾರಣಾಂತೇ ಪ್ರಾಸ್ಥಾನಿಕಂ ಸ್ವಸ್ತ್ಯಯನಂ ಪ್ರಯುಜ್ಯ ತೌ ದಂಪತೀ ಸ್ವಾಂ ರಾಜಧಾನೀಂ ಪ್ರತಿ ಪ್ರಸ್ಥಾಪಯಾಮಾಸ ॥

ವಶೀವಸಿಷ್ಠಃ—ಪ್ರಾಸ್ಥಾನಿಕಂ ಸ್ವಸ್ತ್ಯಯನಂ ಪ್ರಯುಜ್ಯ= ಪ್ರಸ್ಥಾನದಾಶಿಷಂಗಳನು ನುಡಿದು—ಭೂರಿಮಂಗಳದ ಆಶಿಷಂಗಳ ಬೀರುತಲಿ.

71. ಪ್ರದಕ್ಷಿಣೀಕೃತ್ಯ ಹುತಂ ಹುತಾಶಂ ।
ಅನಂತರಂ ಭರ್ತುರರುಂಧತೀಂ ಚ ॥
ಧೇನುಂ ಸವತ್ಸಾಂಚ ನೃಪಃ ಪ್ರತಸ್ಥೇ ।
ಸನ್ಮಂಗಲೋದಗ್ರತರಪ್ರಭಾವಃ ॥ ೭೧ ॥

ಪರಮಾತ್ಮನ ಸಾಕ್ಷಿರೂಪವಾದ ಪವಿತ್ರಾಗ್ನಿಯನ್ನು ಆಹುತಿಯಿಂದ ತೃಪ್ತಿಗೊಳಿಸಿ ಆ ರಾಜದಂಪತಿಗಳು ಪ್ರದಕ್ಷಿಣೆಮಾಡಿದರು. ಅನಂತರ ಆ ಸತಿಪತಿಯರಿಬ್ಬರೂ ಗುರುವಸಿಷ್ಠ

ರನ್ನು, ಗುರುಪತ್ನಿಯಾದ ಪರಮಸಾಧ್ವಿಸ್ತ್ರೀರತ್ನವೆನಿಸಿದ ಅರುಂಧತೀದೇವಿಯನ್ನು ಬಲವಂದು ಆಶೀರ್ವಾದಪಡೆದು ರಾಜಧಾನಿಗೆ ಹೊರಡಲುದ್ಯುಕ್ತರಾದರು. ಗುರು ಮತ್ತು ಗುರುಪತ್ನಿಯಿಂದ ಅನುಮತಿಪಡೆದು ಆ ಇಕ್ಷ್ವಾಕುಕುಲತಿಲಕನು ತನ್ನ ಸತಿಯೊಡನೆ ಆ ಭಾಗ್ಯಧೇನು. ಸುರಭಿತನಯೆ ನಂದಿನಿಯನ್ನು ಅದರ ಕರುವಿನೊಂದಿಗೆ ಪ್ರದಕ್ಷಿಣೆಮಾಡಿದನು. ಹೀಗೆ ಸದಾಚಾರದಿಂದ ವ್ರತನೇಮಗಳ ಪಾಲನೆಯಿಂದ ಅಧಿಕವಾದ ಪ್ರಭಾವ ಮತ್ತು ತೇಜಸ್ಸುಗಳಿಂದ ಬಲಗೊಂಡು ಕಂಗೊಳಿಸುವ ದಿಲೀಪನು ಮಂಗಳಗಳಿಗೆಯಲ್ಲಿ ಪ್ರಯಾಣಮಾಡಿದನು. ಋಷಿಯ ಆಶ್ರಮದಿಂದ ಹೊರಪಟ್ಟನು.

ಅನ್ವಯಃ :—ಹುತಂ ಹುತಾಶಂ, ಭರ್ತುಃ ಅನಂತರಂ ಅರುಂಧತೀಂ ಚ, ಸವತ್ಸಾಂ ಧೇನುಂ ಚ ಪ್ರದಕ್ಷಿಣೀಕೃತ್ಯ ಸನ್ಮಂಗಲೋದಗ್ರತರಪ್ರಭಾವಃ ನೃಪಃ ಪ್ರತಸ್ಥೇ ॥

ಸ ವತ್ಸಾಂ ಧೇನುಂ ಚ ಪ್ರದಕ್ಷಿಣೀಕೃತ್ಯ—ಸನ್ಮಂಗಲ = ಸನ್ಮಂಗಲಕರವಾದ ಶುಭ ಶಕುನಗಳು, ಸದ್ಭಿಃ ಮಂಗಲೈಃ ಉದಗ್ರತರಃ ಪ್ರಭಾವಃ ಯಸ್ಯಾಸೌ—

**72. ಶ್ರೋತ್ರಾಭಿರಾಮಧ್ವನಿನಾ ರಥೇನ ।**
**ಸಧರ್ಮಪತ್ನೀಸಹಿತಃ ಸಹಿಷ್ಣುಃ ॥**
**ಯಯಾವನುದ್ಘಾತಸುಖೇನ ಮಾರ್ಗಂ ।**
**ಸ್ವೇನೇವ ಪೂರ್ಣೇನ ಮನೋರಥೇನ ॥ ೭೨ ॥**

ಸುಂದರವಾದ ತಮ್ಮ ರಥದಲ್ಲಿ ಕುಳಿತು ಅವರೀರ್ವರು ಪಯಣಿಸಿದರು (ತೆರಳಿದನು ಸತಿವೆರಸು). ರಥವು ಚೀತ್ಕಾರಮಾಡುತ್ತಾ ದಾರಿ ಸಾಗುತ್ತಿತ್ತು. ಅದರ ಸವಿಯಾದ ಧ್ವನಿಯೂ ಕಿವಿಗೆ ಸುಖಕರವಾಗಿತ್ತು, ಕಲ್ಲು ಮುಂತಾದುವುಗಳ ಪ್ರತಿಬಂಧವಿಲ್ಲದೆ, ರಥದ ಅಲುಗಾಟವಿಲ್ಲದೆ, ಏಳುಬೀಳುಗಳಿಲ್ಲದೆ ಒಂದೇ ತೆರನಾಗಿ ತೇರು ಮುಂಬರಿಯಿತು. ಅವರ ಅಭಿಲಾಷೆ ಕೈಗೂಡಿತ್ತು. ಹೀಗಾಗಿ ತಮ್ಮ ಪರಿಪೂರ್ಣಮನೋರಥವನ್ನೇರಿ ಸಮಾಧಾನ ಚಿತ್ತರಾಗಿ ಹೊರಟರೋ ಎಂಬಂತೆ ಅವರು ಉತ್ಸಾಹದಿಂದ ತೆರಳಿದರು (ಫಲಿಸಿದ ಮನೋರಥವನು ಏರಿದ ಬಲು).

ಅನ್ವಯಃ :—ಧರ್ಮಪತ್ನೀಸಹಿತಃ ಸಹಿಷ್ಣುಃ ಸ ನೃಪಃ ಶ್ರೋತ್ರಾಭಿರಾಮಧ್ವನಿನಾ, ಅನುದ್ಘಾತಸುಖೇನ ರಥೇನ ಸ್ವೇನ ಪೂರ್ಣೇನ ಮನೋರಥೇನ ಇವ ಮಾರ್ಗಂ ಯಯೌ ॥

**73. ತಮಾಹಿತೌತ್ಸುಕ್ಯಮದರ್ಶನೇನ ।**
**ಪ್ರಜಾಃ ಪ್ರಜಾರ್ಥವ್ರತಕರ್ಶಿತಾಂಗಮ್ ॥**
**ನೇತ್ರೈಃ ಪಪುಸ್ತೃಪ್ತಿಮನಾಪ್ನುವದ್ಭಿಃ ।**
**ನವೋದಯಂ ನಾಥಮಿವೌಷಧೀನಾಮ್ ॥ ೭೩ ॥**

ಆ ಜನಪತಿಯು ಅನೇಕ ದಿನಗಳಿಂದ ಕಾಣದ ಜನತೆಗೆ ಕಾಣಬೇಕೆಂಬ ಆಸೆಯನ್ನು ಹುಟ್ಟಿಸಿದ್ದನು. ನಿಜಸುತನನ್ನು ಪಡೆಯಲು ನಿಯಮಬದ್ಧನಾಗಿ, ವ್ರತಶೀಲನಾಗಿ ಸೊರಗಿಹೋದ ರಾಜನನ್ನು (ನಿಜತನುವು ಸವೆದಿರಲು) ಆಗತಾನೆ ಬಾನಲ್ಲಿ ಮೂಡಿ

ತೇಲಿಬರುತ್ತಿರುವ ಅಮೃತಕಿರಣಗಳನ್ನು ಸುರಿಸುತ್ತಿರುವ ಅದೇ ಆಗತಾನೇ ಹುಟ್ಟಿ ಬರುತ್ತಿರುವ ಇಂದುವನು ನೋಳ್ಪಂತೆ ಪುರಜನರು (ಉದಿತಾಯ ಬಾಲಚಂದ್ರಃ) (ಓಷಧಿಪತಿಯಾದ ಬಾಲಚಂದ್ರಮನನ್ನು ಕಾಣುವಂತೆ ಪುರಜನರು) ತಮ್ಮ ಮನತಣಿಯುವಂತೆ ಸಡಗರದಿಂದ ಈಕ್ಷಿಸಿ ಸಂತಸಗೊಂಡರು.

ಅನ್ವಯಃ:—ಅದರ್ಶನೇನ ಆಹಿತೌತ್ಸುಕ್ಯಂ ಪ್ರಜಾಪ್ರಜಾರ್ಥವ್ರತಕರ್ಶಿತಾಂಗಮ್ ನವೋದಯಂ ಪ್ರಜಾಃ ತೃಪ್ತಿಮ್ ಅನಾಪ್ನುವದ್ಭಿಃ ನೇತ್ರೈಃ ಓಷಧೀನಾಂ ನಾಥಮಿವ ತಂ ಪಪುಃ ॥

74. **ಪುರಂದರಶ್ರೀಃ ಪುರಮುತ್ಪತಾಕಂ ।**
**ಪ್ರವಿಶ್ಯ ಪೌರೈರಭಿನಂದ್ಯಮಾನಃ ॥**
**ಭುಜೇ ಭುಜಂಗೇಂದ್ರಸಮಾನಸಾರೇ ।**
**ಭೂಯಃ ಸ ಭೂಮೇರ್ಧುರಮಾಸಸಂಜ** ॥ ೭೪ ॥

ರಾಜನು ವಿಜಯಿಯಾಗಿ ಪುತ್ರಭಿಕ್ಷೆಯನು ಪಡೆದುಬರುವನೆಂದು ಪುರಜನರು ತಿಳಿದು ಸಾಕೇತನಗರವನ್ನು ಗುಡಿತೋರಣಗಳಿಂದ, ಗುಡಿಗೋಪುಗಳಿಂದ, ಧ್ವಜಪತಾಕೆಗಳಿಂದ ಅಲಂಕರಿಸಿ ಸಿದ್ಧರಾಗಿ ರಾಜನ ಬರವನ್ನು ನಿರೀಕ್ಷಿಸುತ್ತ ನಿಂತಿದ್ದರು. ಇಂದ್ರನ ಸಮಾನವಾದ ಕಾಂತಿ, ಸಾಮರ್ಥ್ಯಗಳನ್ನು ಹೊಂದಿರುವ (ಸುರಪವಿಭವಶ್ರೀಯೊಲೆಸೆವ) (ಪುರಂದರಶ್ರೀಃ) ದಿಲೀಪಭೂಭುಜನು ಪುರಪ್ರವೇಶಿಸಿದಾಗ ಪ್ರಜೆಗಳು ಹರ್ಷದಿಂದ ಜಯಜಯಕಾರಮಾಡಿ ಸ್ತುತಿಸಿದರು. ಅವರ ಹರ್ಷೋದ್ಗಾರ ಸಾಗರದ ತೆರೆಯ ರವದಂತೆ ಬಹುದೂರ ಕೇಳಿಸಿತು. ಪುರವನ್ನು ಪ್ರವೇಶಿಸಿ ಹಿಂದೆ ಮಂತ್ರಿಗಳಿಗೆ ಅರ್ಪಿಸಿದ ರಾಜ್ಯಭಾರವನ್ನು, ಸರ್ಪರಾಜನಾದ ವಾಸುಕಿಯನ್ನು ಹೋಲುವ ಬಲವಾದ ತನ್ನ ತೋಳುಗಳಲ್ಲಿ (ಭುಜಗೇಂದ್ರಸಮಾನಸಾರೇ) (ಶೇಷಸಮಭುಜಬಲನು) ಧರಿಸಿ ವಿರಾಜಿಸಿದನು (ವಿಜೃಂಭಿಸಿದನು).

ಅನ್ವಯಃ:—ಪುರಂದರಶ್ರೀಃ ಪೌರೈಃ ಅಭಿನಂದ್ಯಮಾನಃ ಉತ್ಪತಾಕಂ ಪುರಂ ಪ್ರವಿಶ್ಯ ಭುಜಗೇಂದ್ರಸಮಾನಸಾರೇ ಭುಜೇ ಭೂಯಃ ಸ ಭೂಮೇಃ ಧುರಮಾಸಸಂಜ ॥

ಪುರಃ ಪುರೀಃ ಅಸುರಾಣಾಂ ಧಾರಯತೀತಿ ಪುರಂದರಃ ॥

75. **ಅಥ ನಯನಸಮುತ್ಥಂ ಜ್ಯೋತಿರತ್ರೇರಿವ ದ್ಯೌಃ ।**
**ಸುರಸರಿದಿವ ತೇಜೋವಹ್ನಿನಿಷ್ಠ್ಯೂತಮೈಶಮ್ ॥**
**ನರಪತಿಕುಲಭೂತ್ಯೈ ಗರ್ಭಮಾಧತ್ತ ರಾಜ್ಞೀ ।**
**ಗುರುಭಿರಭಿನಿವಿಷ್ಟಂ ಲೋಕಪಾಲಾನುಭಾವೈಃ** ॥ ೭೫ ॥

ಈ ಹಿಂದೆ ಅತ್ರಿಮಹರ್ಷಿಗಳ ಕಣ್ಣಿನಿಂದ ಚಂದ್ರಮನು ಉದ್ಭವಿಸಿದನು. ಆ ತೇಜಃಪುಂಜನಾದ ಚಂದ್ರಮನನ್ನು ಆಕಾಶವು ಧರಿಸಿದಂತೆ (ಅತ್ರಿನೇತ್ರೋದ್ಭೂತತೇಜವನಂಬರವು ತಳೆದಂತೆ) ಗುಣವತಿಯಾದ ಸುದಕ್ಷಿಣಾದೇವಿಯು ಅಷ್ಟದಿಕ್ಪಾಲಕರ ಅಂಶದಿಂದ ಕೂಡಿರುವ ದಿವ್ಯತೇಜಃಪುಂಜವಾಗಿರುವ ಗರ್ಭವನ್ನು ಧಾರಣೆಮಾಡಿದಳು. ಅದೂ

**ಅಲ್ಲದೆ ಈಶ್ವರನ ಷಣ್ಮುಖರೂಪಗರ್ಭವನ್ನು ಅಗ್ನಿಯು ಕೊಂಡೊಯ್ದು ಗಂಗಾನದಿಯಲ್ಲಿ ಇಟ್ಟಾಗ ಗಂಗಾನದಿಯು (ಸುರಸರಿತ) ಅದನ್ನು ಧರಿಸಿ ಜಗತ್ತಿಗೆ ಕಲ್ಯಾಣವನ್ನು ಮಾಡಿದಳು. ಅಂತಹ ವೀರ್ಯವತ್ತಾದ, ಕಾಂತಿಪುಂಜವಾದ ಗರ್ಭವನ್ನು ತನ್ನಲ್ಲಿ ಧಾರಣೆ ಮಾಡಿ ಸುದಕ್ಷಿಣಾದೇವಿಯು ದೇವಗಂಗಾನದಿಯಂತೆ ಕಾಂತಿಮತಿಯಾಗಿ ರಾರಾಜಿಸಿದಳು.**

ಅನ್ವಯ:—ಅಥ ದ್ಯೌಃ ಅತ್ರೇಃ ನಯನಸಮುತ್ಥಮ್ ಜ್ಯೋತಿರಿವ, ಸುರಸರಿತ್ ವಹ್ನಿನಿಷ್ಠ್ಯೂತಮ್ ಐಶಮ್ ತೇಜಃ ಇವ ರಾಜ್ಞೀ ನರಪತಿಕುಲಭೂತ್ಯೈ ಗುರುಭಿಃ ಲೋಕಪಾಲಾನುಭಾವೈಃ ಅಭಿನಿವಿಷ್ಟಂ ಗರ್ಭಮಾಧತ್ತ॥

ಇಲ್ಲಿಗೆ 'ನಂದಿನೀವರಪ್ರಸಾದ'ವೆಂಬ ಎರಡನೆಯ ಸರ್ಗವು ಮುಗಿಯಿತು.

## ತೃತೀಯ ಸರ್ಗಃ
## ಮೂರನೆಯ ಸರ್ಗ

1. ಅಥೇಪ್ಸಿತಂ ಭರ್ತುರುಪಸ್ಥಿತೋದಯಂ ।
ಸಖೀಜನೋದ್ವೀಕ್ಷಣಕೌಮುದೀಮುಖಮ್ ॥
ನಿದಾನಮಿಕ್ಷ್ವಾಕುಕುಲಸ್ಯ ಸಂತತೇಃ ।
ಸುದಕ್ಷಿಣಾ ದೌಹೃದಲಕ್ಷಣಂ ದಧೌ ॥ ೧ ॥

ಸುದಕ್ಷಿಣೆಯು ಇದೀಗ ಗರ್ಭಿಣಿಸ್ತ್ರೀಯ ಲಕ್ಷಣವನ್ನು ಪಡೆದು ಶೋಭಿಸಿದಳು. ಪತಿಯ ಕೋರಿಕೆಯನುಸ ವಂಶೋದ್ಧಾರಕನಾದ ಪುತ್ರನನ್ನು ಕೊಟ್ಟು ಮನೋರಥವನ್ನು ಈಡೇರಿಸುವ ಬಹುಕಾಲದ ಹಂಬಲವನ್ನು ಪೂರೈಸುವ ಏಳಿಗೆಯ ಹೊಸ ಗಿಡವನ್ನು ಪಡೆದಂತೆ ಇಕ್ಷ್ವಾಕುವಂಶಕ್ಕೆ ಸಂತತಿಯೆಂಬ ನಿಧಿಯನ್ನು (ಇಕ್ಷ್ವಾಕುಸಂತತಿ ನಿದಾನವೆಂದೆನುವ) ಹೊಂದಿದ ಕಡವರವನ್ನು ಪಡೆದ ಗರ್ಭಲಕ್ಷಣದಿಂದ ಆ ವನಿತೆ ರಾರಾಜಿಸಿದಳು. ಇಕ್ಷ್ವಾಕುವಂಶವು ಕವಲೊಡೆದು ಸಂತತಿಯು ನಿರಂತರ ಸಾಗುವುದು ಇದೀಗ ಖಚಿತವಾಯಿತು (ಸತ್ಯವೆನಿಸಿತು). ಆವಳ ಸಖಿಯರ ಕಣ್ಣುಗಳಿಗೆ ಬೆಳದಿಂಗಳ ಹಬ್ಬವಾದ ಕೌಮುದಿ ಹಬ್ಬದ ದಿನದಂದು (ಕೌಮುದೀಮಹೋತ್ಸವಮ್) ಮೊದಲಿಗೆ ಕಾಣುವ ಚಂದ್ರನ ಮಂಗಳಕರವಾದ ಕಿರಣದಂತೆ ಮಂಗಳಕರಳಾಗಿ ಕಂಡಳು.

ಅನ್ವಯ :— ಅಥ ಸುದಕ್ಷಿಣಾ ಉಪಸ್ಥಿತೋದಯಂ ಭರ್ತುಃ ಈಪ್ಸಿತಂ ಸಖೀಜನೋದ್ವೀಕ್ಷಣಕೌಮುದೀಮುಖಂ ಇಕ್ಷ್ವಾಕುಕುಲಸ್ಯ ಸಂತತೇಃ ನಿದಾನದೌಹೃದಲಕ್ಷಣಂ ದಧೌ ॥

ಕೌಮುದೀಮುಖಮ್ = ಚಂದ್ರಿಕಾ ಪ್ರಾದುರ್ಭಾವಮ್—ಯದ್ವಾ ಕೌಮುದೀನಾಮ ದೀಪೋತ್ಸವತಿಥಿಃ—ಇಕ್ಷ್ವಾಕುಕುಲಸ್ಯ ಸಂತತೇರವಿಚ್ಛೇದಸ್ಯ—ನಿದಾನಮ್ = ಮೂಲ ಕಾರಣಮ್—"ನಿದಾನಂತ್ವಾದಿ ಕಾರಣಮ್" ಇತ್ಯಮರಃ—ದೌಹೃದಲಕ್ಷಣಂ = ಗರ್ಭ ಚಿಹ್ನಮ್—ಉಪಸ್ಥಿತೋದಯಂಮ್ ಭರ್ತುರೀಪ್ಸಿತಮ್ = ದೌಹೃದಲಕ್ಷಣಮ್— ಈಪ್ಸಿತಮ್ ಭರ್ತುರಿಷ್ಟಮ್—ಕೌಮುದೀಮಹೋತ್ಸವ = ಬೆಳದಿಂಗಳ ಹಬ್ಬ— ಕೌಮುದೀನಾಮ ದೀಪೋತ್ಸವ—ದೌಹೃದಲಕ್ಷಣಂ = ಏವಂ ವಿಧಂ ದೌಹೃದಲಕ್ಷಣಂ ಗರ್ಭಚಿಹ್ನಂ ವಕ್ಷ್ಯಮಾಣಂ ದಗೌ—ದ್ವಿಹೃದಯೇನ ಗರ್ಭಹೃದಯೇನ ಚ ದ್ವಿಹೃದಯಾ ಗರ್ಭಿಣೀ—ಯಥಾಹ ವಾಗ್ಭಟಃ = ಎರಡು ಹೃದಯಗಳ ಬಯಕೆ ಸಂಕಟ.

2. ಶರೀರಸಾದಾದಸಮಗ್ರಭೂಷಣಾ ।
ಮುಖೇನ ಸಾಲಕ್ಷ್ಯತ ಲೋಧ್ರಪಾಂಡುನಾ ॥
ತನುಪ್ರಕಾಶೇನ ವಿಚೇಯತಾರಕಾ ।
ಪ್ರಭಾತಕಲ್ಪಾ ಶಶಿನೇವ ಶರ್ವರೀ ॥ ೨ ॥

ಆಕೆ ಗರ್ಭಲಕ್ಷಣಗಳನ್ನು ಹೊಂದಿ ಸೂರ್ಯೋದಯದ ಕಾಲದಲ್ಲಿ ಬಾನಂಚಿನಲ್ಲಿ ಕಾಣಿಸುವ ಚಂದ್ರನಂತೆ (ಹೊಗರೆಸೆವ ಪೆರೆಯು) ಆ ಚಂದ್ರಮುಖಿ ಎಸೆವಳು. ಆಕೆಯು ಮೈ ಕುಂದಿ ಸೊರಗಿತ್ತು. ಆ ಸುದತಿ ಅಲ್ಪಭೂಷಣಗಳನ್ನು ಧರಿಸಿ ಲೋಧ್ರದ ಬಿಳಿಯ ಹೂವಿನಂತೆ ತೋರುವ ಬೆಳ್ಪಡರಿದ ಮೊಗದಿಂದ ವಿರಾಜಿಸಿದಳು. ಲೋಧ್ರದರಲ ಪೋಲು ಬೆಳ್ಪುಮೊಗದವಳು. ಮುಂಜಾವದ ಹೊತ್ತಿನಲ್ಲಿ ಹಲಕೆಲವು ನಕ್ಷತ್ರಗಳು ಮಿನುಗುತ್ತಲಿದ್ದಾಗ ತೋರುವ ರಾತ್ರಿಯಂತೆ ಆ ದೇವಿ ಎಸೆದಿದ್ದಳು (ತನುಪ್ರಕಾಶತ್ವ). ಆ ಚಂದ್ರನನ್ನು, ಸರಿಯಾಗಿ ನಕ್ಷತ್ರಗಳ ಕಾಂತಿಯನ್ನು ಪಡೆದಿರುವ ನಿಶಾದೇವಿಯೋ ಎಂಬಂತೆ ವಿಶಾಲಾಕ್ಷಿಯು ರಾಜಿಸುತ್ತಿದ್ದಳು (ಪೊಳ್ತರೆಯ ಶರ್ವರಿಯ ಪೋಲ್ತಳಾ ಪರಿಯ).

ಬಿಂಬಪ್ರತಿಬಿಂಬಭಾವಾಪನ್ನ—ಉಪಮಾಲಂಕಾರ.

ಅನ್ವಯ :—ಶರೀರಸಾದಾದಸಮಗ್ರಭೂಷಣಾ ಲೋಧ್ರಪಾಂಡುನಾ ಮುಖೇನ (ಉಪಲಕ್ಷಿತಾ) ಸಾ ವಿಜೇಯತಾರಕಾ ಪ್ರಭಾತಕಲ್ಪಾ ತನುಪ್ರಕಾಶೇನ ಶಶಿನಾ (ಉಪ ಲಕ್ಷಿತಾ) ಶರ್ವರೀ ಇವ ಅಲಕ್ಷ್ಯತ ॥

ಲೋಧ್ರಪುಷ್ಪಮ್ ಪಾಂಡುನಾ ಮುಖೇನೋಪಲಕ್ಷಿತಾ ಸಾ ಸುದಕ್ಷಿಣಾ—ಶರ್ವರೀ = ರಾತ್ರಿರಿವ—ದೋಹದಲಕ್ಷಣಮ್ ಮೃದ್‌ಭಕ್ಷಣೇ ಹೇತ್ವಂತರಮುತ್ಪ್ರೇಕ್ಷತೇ— ವಿಜೇಯತಾರಕಾ = ವಿಜೇಯಾಃ ತಾರಕಾಃ ಯಸ್ಯಾಂ ಸಾ ಉಪಮಾಲಂಕಾರ—ಬಿಂಬ ಪ್ರತಿಬಿಂಬಭಾವಾಪನ್ನ.

3. ತದಾನನಂ ಮೃತ್ಸುರಭಿ ಕ್ಷಿತೀಶ್ವರೋ ।
ರಹಸ್ಯುಪಾಘ್ರಾಯ ನ ತೃಪ್ತಿಮಾಯಯೌ ॥
ಕರೀವ ಸಿಕ್ತಂ ಪೃಷತೈಃ ಪಯೋಮುಚಾಂ ।
ಶುಚಿವ್ಯಪಾಯೇ ವನರಾಜಿಪಲ್ವಲಮ್ ॥ ೩ ॥

ದೋಹದದ ಕಾಲದಲ್ಲಿ (ಗರ್ಭಿಣಿಸ್ತ್ರೀಯರು) ಮಣ್ಣನ್ನು ತಿಂದು ಮಣ್ಣಿನ ಕಂಪು ಹೊರಸೂಸುತ್ತಿರುವ ತನ್ನ ಸತಿಯ ಬಾಯನ್ನು ಮುದ್ದಿಸಲು ಬಯಸಿ ನಸುಸೋಂಕಿದಾಗ ಸಂಪೂರ್ಣ ತೃಪ್ತಿಯನ್ನು ಪಡೆಯದೆ ಅಲ್ಲಿಗೆ ಆ ರಾಜಮೌಳಿಯು ಸುಮ್ಮಗಾದನು. ಮಳೆಗಾಲದ ಆರಂಭದ ಕಾಲದಲ್ಲಿ ಮಳೆಯ ಹನಿಗಳಿಂದ ತೊಯ್ದಿರುವ ಅಡವಿಹೊಂಡ ವನ್ನು ಗಂಡಾನೆಯು ಆಘ್ರಾಣಿಸಿ ತುಸು ಸಂತಸಪಡುವಂತೆ ಆ ರಾಜೇಂದ್ರನು ಏಕಾಂತದಲ್ಲಿ ಪತ್ನಿಯ ಮೊಗದ ಮಣ್ಣಿನ ಸುವಾಸನೆಯನ್ನು ಸವಿದು ಅಲ್ಪತೃಪ್ತಿಯನ್ನು ಪಡೆದನು.

ಅನ್ವಯ :—ಕ್ಷಿತೀಶ್ವರಃ ರಹಸಿ ಮೃತ್ಸುರಭಿ ತದಾನನಮ್ ಉಪಾಘ್ರಾಯ ಶುಚಿವ್ಯಪಾಯೇ ಪಯೋಮುಚಾಂ ಪೃಷತೈಃ ಸಿಕ್ತಂ ವನರಾಜಿಪಲ್ವಲಂ (ಉಪಾಘ್ರಾಯ) ಕರೀವ ನ ತೃಪ್ತಿಮ್ ಆಯಯೌ ॥

ಕ್ಷಿತೀಶ್ವರೋ ರಹಸಿ ಮೃತ್ಸುರಭಿ=ಮೃದಾ ಸುಗಂಧಿ ತಸ್ಯಾ ಆನನಂ—ಶುಚಿವ್ಯಪಾಯೇ =ಗ್ರೀಷ್ಮಾವಸಾನೇ—ಪಯೋಮುಚಾಂ=ಮೇಘಾನಾಂ ಪೃಷತೈರ್ಬಿಂದುಭಿಃ—"ಪೃಷಂತಿ ಬಿಂದು ಪೃಷತಾಃ" ಇತ್ಯಮರಃ । ಮೃತ್ಸುರಭಿ = ಮಣ್ಣಿನ ಕಂಪು, ಸುವಾಸನೆ.

4. ದಿವಾಂ ಮರುತ್ವಾನಿವ ಭೋಕ್ಷ್ಯತೇ ಭುವಂ ।
ದಿಗಂತವಿಶ್ರಾಂತರಥೋ ಹಿ ತತ್ಸುತಃ ॥
ಅತೋಽಭಿಲಾಷೇ ಪ್ರಥಮಂ ತಥಾವಿಧೇ ।
ಮನೋ ಬಬಂಧಾನ್ಯರಸಾನ್ವಿಲಂಘ್ಯ ಸಾ ॥ ೪ ॥

ಆಕೆ ದೋಹದದ ಕಾಲದಲ್ಲಿ ಇತರ ಎಲ್ಲಾ ವಸ್ತುಗಳಿಗಿಂತಲೂ ಮಣ್ಣನ್ನು ತಿನ್ನುವ ಆಸೆಯನ್ನೇ ಹೆಚ್ಚಾಗಿ ತೋರಿದಳು. ಇದರಿಂದಾಗಿ ಇವಳ ಗರ್ಭಸಂಜಾತನು ಮುಂದೆ ದಿಗ್ವಿಜಯದ ಕಾಲದಲ್ಲಿ ದಿಗಂತವಿಶ್ರಾಂತವಾದ ರಥದಲ್ಲಿ ಕುಳಿತು ನಾಲ್ಕು ದಿಕ್ಕುಗಳಿಗೂ ಸಂಚರಿಸಿ ಸಮಸ್ತಭೂಮಂಡಲವನ್ನು ಗೆದ್ದು ಪೃಥ್ವೀವಲ್ಲಭ(ಸಾಮ್ರಾಟ, ಚಕ್ರವರ್ತಿ, ಸಾರ್ವಭೌಮ)ನೆನಿಸಿದನು. ಹೇಗೆ ಶಕ್ತಿಯುತರಾದ ಮರುತ್ತುಗಳಿಗೆ ದೇವರಾಜನಾದ ಇಂದ್ರನು (ಮಹೇಂದ್ರನು) ಅಧಿಪತಿಯೋ ಅದೇ ರೀತಿ ಪೃಥ್ವಿಯ ಕೊನೆಯ ತನಕ ತೆರಳಿ ಪೃಥ್ವೀಪತಿ(ವಿಶ್ವವಿಭು, ವಿಶ್ವಪತಿ, ವಿಶ್ವಜಿತ್)ಯೆನಿಸಿದನು. ಅವನ ತಾಯಿ ತನ್ನ ಬಯಕೆಯ ಕಾಲದಲ್ಲಿ (ದೋಹದದ ಕಾಲದಲ್ಲಿ) ಮಣ್ಣಿನ ಬಯಕೆ ತೋರಿದುದು ಇದೀಗ ಸಾರ್ಥಕವಾಯಿತು.

ಅನ್ವಯಃ:—ದಿಗಂತವಿಶ್ರಾಂತರಥಃ ಹಿ ತತ್ಸುತಃ ಮರುತ್ವಾನ್ ದಿವಮ್ ಇವ ಭುವಂ ಭೋಕ್ಷ್ಯತೇ ಅತಃ ಸಾ ಅನ್ಯರಸಾನ್ ವಿಲಂಘ್ಯ ಪ್ರಥಮಂ ತಥಾ ವಿಧೇ ಅಭಿಲಾಷೇ ಮನಃ ಬಬಂಧ । ದಿಗಂತವಿಶ್ರಾಂತರಥಃ = ದಿಗಂತೇ ವಿಶ್ರಾಂತಃ ರಥಃ ಯಸ್ಯ ॥

ದಿಗಂತವಿಶ್ರಾಂತರಥ = ಚಕ್ರವರ್ತೀ ತಸ್ಯಾಃ—ಮರುತ್ವಾನಿಂದ್ರಃ—"ಇಂದ್ರೋ ಮರುತ್ವಾನ್ ಮಘವಾ" ಇತ್ಯಮರಃ—ಅಭಿಲಷ್ಯತ ಇತ್ಯಭಿಲಾಷೋ ಭೋಗ್ಯವಸ್ತು—ದಿವಂ = ಸ್ವರ್ಗಮಿವ—ದೋಹದಹೇತುಕಸ್ಯ ಮೃದ್ಭಕ್ಷಣಸ್ಯ ಪುತ್ರಭೂಭೋಗ ಸೂಚನಾರ್ಥತ್ವಮುತ್ಪ್ರೇಕ್ಷತೇ—ದಿಗಂತವಿಶ್ರಾಂತರಥಃ = ದಿಗಂತೇ ವಿಶ್ರಾಂತಃ ರಥಃ ಯಸ್ಯ=ದಿಗಂತವಿಶ್ರಾಂತರಥನು=ಪೃಥ್ವೀಪತಿ—ಗಂಡುಶಿಶುಜನನವಾಗುವ ಶುಭಲಕ್ಷಣ.

5. ನ ಮೇ ಹ್ರಿಯಾ ಶಂಸತಿ ಕಿಂಚಿದೀಪ್ಸಿತಂ ।
ಸ್ಪೃಹಾವತೀ ವಸ್ತುಷು ಕೇಷು ಮಾಗಧೀ ॥
ಇತಿ ಸ್ಮ ಪೃಚ್ಛತ್ಯನುವೇಲಮಾದೃತಃ ।
ಪ್ರಿಯಾಸಖೀರುತ್ತರಕೋಸಲೇಶ್ವರಃ ॥ ೫ ॥

ಗರ್ಭಿಣಿಯಾದ ಆ ಕಾಲದಲ್ಲಿ ಆ ಮಾಗಧಕನ್ಯೆ ನಾಚಿಕೆಯಿಂದ ತನ್ನ ಬಯಕೆಯನ್ನು ಸರಿಯಾಗಿ ಹೇಳುತ್ತಿರಲಿಲ್ಲ. ಕೋಸಲಾಧಿಪತಿಯಾದ ದಿಲೀಪನು ತನ್ನ ಸತಿಯು ಅವುದನ್ನು ಬಯಸಿರುವಳೋ ಎಂದು ಕೇಳುತ್ತಲೇ ಇರುತ್ತಿದ್ದನು. ಅವಳು ನಾಚಿಕೆಯಿಂದ ಹೇಳದಿದ್ದಾಗ, ಆ ಮನುಕುಲವತಂಸನು (ಮನುಕುಲಚಕ್ರೇಶ್ವರನು) (ಉತ್ತರಕೋಸಲೇಶ್ವರನು) ಪ್ರತಿನಿಮಿಷನಿಮಿಷಕ್ಕೂ ತನ್ನ ರಾಣಿಯ ಪ್ರಿಯಸಖಿಯರನ್ನು ವಿಚಾರಿಸುತ್ತಲೇ ಇದ್ದನು. (ಇಂತಾ ದಿಲೀಪನ್ನು ನಿಮಿಷನಿಮಿಷದೊಳು ಕೇಳುತಿಹ ನಾರಿಯರ ತಾನಾದರದೊಳು.)

ಅನ್ವಯಃ: ಮಾಗಧೀಪ್ರಿಯಾ ಕಿಂಚಿತ್ ಈಪ್ಸಿತಂವೇನ ಶಂಸತಿ, ಕೇಷು ವಸ್ತುಷು ಸ್ಪೃಹಾವತೀ ಇತಿ ಅನುವೇಲಮ್ ಆದೃತಃ ಉತ್ತರಕೋಸಲೇಶ್ವರಪ್ರಿಯಾಸಖೀಃ ಪೃಚ್ಛತಿಸ್ಮ ॥ ಆದೃತಃ = ಸಾದರ :

ಮಗಧಸ್ಯ ರಾಜ್ಞೋಽಪತ್ಯಂ ಸ್ತ್ರೀ ಮಾಗಧೀ = ಸುದಕ್ಷಿಣಾ, ಆದೃತ = ಆದೃತವಾನ್ —ಕರ್ತರಿಕ್ತಃ—"ಆದೃತೌ ಸಾದರಾರ್ಚಿತೌ" ಇತ್ಯಮರಃ—ಪ್ರಿಯಾಯಾಃ ಸಖೀಃ ಸಹಚರೀ—ಉತ್ತರಕೋಸಲೇಶ್ವರೋ = ದಿಲೀಪಃ—ಅನುವೇಲಮ್ = ವೇಲಾಯಾಂ —ವೇಲಾಯಾಮ್, ಅನುವೇಲಂ = ಅನುಕ್ಷಣಮ್—ಆದೃತಃ = ಆದರಃ ॥

6. ಉಪೇತ್ಯ ಸಾ ದೋಹದದುಃಖಶೀಲತಾಂ ।
ಯದೇವ ವವ್ರೇ ತದಪಶ್ಯದಾಹೃತಮ್ ॥
ನ ಹೀಷ್ಟಮಸ್ಯ ತ್ರಿದಿವೇಽಪಿ ಭೂಪತೇಃ ।
ಅಭೂದನಾಸಾದ್ಯಮಧಿಜ್ಯಧನ್ವನಃ ॥ ೬ ॥

ಬಳಿಕ ದಿಲೀಪನ ಫಲೋನ್ಮುಖಮನೋರಥವ, ಕೆಳದಿಯರ ಕಣ್ಗೆ ಕೌಮುದಿ ಉತ್ಸವವ, ದಿನಪಕುಲಸಂತತಿಯ ನಿಧಾನವ, ಗರ್ಭಲಕ್ಷಣವ ಪಡೆದು ಎಸೆದಳು ಅರಸಿ ಮತ್ತಂ.ತಳೆದು ಸೊರಗಿದ ತನುಗೆ ತಕ್ಕ ಮಿತಭೂಷಣವ, ಲಲನೆ ತಾಂ ಲೋಧ್ರಸಿತವದನೆ ಯೊಪ್ಪಿದಳು, ನಸುಪೊಳೆವ ಸಸಿಯಿಂ ವಿರಳತಾರಕೆಗಳಿಂ ತಳ್ತ ಪೊಳ್ತರೆಯ ರಾತ್ರಿಯಂತೆ. ಬಸುರಿನ ಬಯಕೆಯಿಂದ (ಸಾ ದೋಹದದುಃಖಶೀಲತಾಮ್ ಉಪೇತ್ಯ) ಉಬ್ಬೆಗವ ನವಳಾಂತು ಆಕೆ ಬಯಸಿದುದನ್ನು ಒಡನೆ ಒಡನೆ (ಆ ಕ್ಷಣವೇ) ಪಡೆದಳು ನವಮಿತು, ಹೆದೆಯನೇರಿಸಿದ ಬಿಲ್ಲಿರಲು ಕೈಯಲ್ಲಿ (ಅಸ್ಯ ಭೂಪತೇಃ ಹಿ ಅಧಿಜ್ಯಧನ್ವನಃ) ದಿಲೀಪನೃಪನು ನಾಕದಿಂದಾದರೂ (ತ್ರಿದಿವ) ಬಯಸಿದುದನ್ನು ತರುವ ತಾಕತ್ತು (ಶಕ್ತಿ ಸಾಮರ್ಥ್ಯ) ಅವನಲ್ಲಿತ್ತು. ನಾಕದಿಂದಾದರೂ ಬಯಸಿದುದ ತಪನು. (ತ್ರಿದಿವೇಽಪಿ ಇಷ್ಟಮ್ ಅನಾಸಾಧ್ಯಂ ನಾಭೂತ್)

ಅನ್ವಯಃ—ಸಾದೋಹದ ದುಃಖಶೀಲ ತಾಮ್ ಉಪೇತ್ಯಯದೇವ ವವ್ರೇತ ದಾಹೃತಮ್ ಪಶ್ಯತ್ । ಅಸ್ಯಭೂಪತೇಃ ಹಿ ಅಧಿಜ್ಯಧನ್ವನಃ ತ್ರಿದಿವೇಪಿ ಇಷ್ಟಮ್ ಅನಾಸಾಧ್ಯಂ ನಾಭೂತ್॥ ತ್ರಿದಿವ=ತ್ರಿವಿಧದೀವ್ಯತಿ ವ್ಯವಹರತಿ ಇತಿ ॥

ದೋಹದಂ = ಗರ್ಭಿಣೀಮನೋರಥಂ—ದೋಹದಂ "ದೌರ್ಹೃದಂ ಶ್ರದ್ಧಾ ಲಾಲಸು ಚ ಸಮಂ ಸ್ಮೃತಮ್" ಇತಿ ಹಲಾಯುಧಃ—ದೋಹದೇನ = ಗರ್ಭಿಣೀ ಮನೋರಥೇನ—ದೋಹದಮ್= ಗರ್ಭಿಣೀಸ್ತ್ರೀಯರ ಬಯಕೆ, ಬಸುರಿನ ಬಯಕ್ಕೆ.

7. ಕ್ರಮೇಣ ನಿಸ್ತೀರ್ಯ ಚ ದೋಹದವ್ಯಥಾಂ ।
ಪ್ರಚೀಯ ಮಾನಾವಯವಾ ರರಾಜ ಸಾ ॥
ಪುರಾಣಪತ್ರಾಪಗಮಾದನಂತರಂ ।
ಲತೇವ ಸಂನದ್ಧಮನೋಜ್ಞಪಲ್ಲವಾ ॥ ೭ ॥

ಗರ್ಭಲಕ್ಷಣಗಳನ್ನು ತಳೆದು ಮಗಧರಾಜಪುತ್ರಿ ಮನೋಜ್ಞವಾಗಿ ರಾರಾಜಿಸಿದಳು. ದಿನಗಳು ಕಳೆದಂತೆ (ದಿನಗಳು ಉರುಳಿದಂತೆ) ಆಕೆಯು ದೋಹದದ ಬಯಕೆ ಕಡಿಮೆಯಾದುವು. ಅಂಗಾಂಗಗಳು ದಟ್ಟಪುಷ್ಟವಾಗಿ ಬಲಿತು ಆ ವನಿತೆ ಆರೋಗ್ಯಲಕ್ಷ್ಮಿಯಂತೆ ತೋರ್ದಳು. ಹಳೆಯ ಎಲೆಗಳು ಹಣ್ಣಾಗಿ ಉದುರಿ ಹೊಸ ಹಸಿರು ಚಿಗುರು ಎಲೆಗಳನ್ನು ತಳೆದು ವಿರಾಜಿಸುವ ಬಳ್ಳಿಯಂತೆ (ಪಲ್ಲವಲತೇವ ರರಾಜ) ಜನರ ಕಣ್ಗೆ ಅತಿರಮ್ಯವಾಗಿ, ರಮಣೀಯವಾಗಿ ಆ ರಮಣೀಮಣಿ ಕಂಗೊಳಿಸಿದಳು. ಅಂದವಾಗಿ, ಚಂದವಾಗಿ, ಸೊಬಗಿನ ಕಣಿಯಾಗಿ ಮೈಸಿರಿಸೊಬಗಿಂದ ರಂಜಿಸಿದಳು.

ಅನ್ವಯ :—ಸಾ ಕ್ರಮೇಣ ದೋಹದವ್ಯಥಾಂ ವಿಸ್ತೀರ್ಯ ಪ್ರಚೀಯಮಾನಾವಯವಾ ಪುರಾಣಪತ್ರಾಪಗಮಾತ್ ಅನಂತರಂ ಸಂನದ್ಧಮನೋಜ್ಞಪಲ್ಲವಾ ಲತೇವ ರರಾಜ ॥

8. ದಿನೇಷು ಗಚ್ಛತ್ಸು ನಿತಾಂತಪೀವರಂ ।
 ತದೀಯಮಾನೀಲಮುಖಂ ಸ್ತನದ್ವಯಮ್ ॥
 ತಿರಶ್ಚಕಾರ ಭ್ರಮರಾಭಿನೀಲಯೋಃ ।
 ಸುಜಾತಯೋಃ ಪಂಕಜಕೋಶಯೋಃ ಶ್ರಿಯಮ್ ॥ ೮ ॥

ದಿನದಿನಕ್ಕೆ ಕಡುಬಡವಾಗಿದ್ದ ದೇಹವು, ದೇಹದ ಅಂಗಾಂಗಗಳು (ಅವಯವಗಳು) ದಪ್ಪನಾದುವು (ನಿತಂಬಪೀವರಮ್). ಹೀಗೆ ಉಬ್ಬಿ ಬೆಳೆದುನಿಂತ ದೇಹದ ಎದೆಯ ಭಾಗವು ಬಹುಮನೋಜ್ಞವಾಗಿ ದಪ್ಪನಾದ ವಕ್ಷಃಸ್ಥಲದಿಂದ (ಕುಚಲಕ್ಷ್ಮಿಯಿಂದ) ಶೋಭಿಸಿದುದು. ಕುಚದ್ವಯಗಳ ತುದಿಯು ತಾವರೆಮೊಗ್ಗಿನ ಮೇಲೆ ಕುಳಿತಿರುವ ಎರಡು ತುಂಬಿಗಳಂತೆ ಕಪ್ಪಾಗಿ, ಅಂದವಾಗಿ ತೋರಿದುವು (ಅಳಿಮುತ್ತಿದ ಅಬ್ಜಕೋಶದ್ವಯದ ಸಿರಿಯು).

ಅನ್ವಯ :—ದಿನೇಷು ಗಚ್ಛತ್ಸು ತದೀಯನಿತಾಂತಪೀವರಮ್ ಆನೀಲಮುಖಂ ಸ್ತನದ್ವಯಮ್ ಭ್ರಮರಾಭಿನೀಲಯೋಃ ಸುಜಾತಯೋಃ ಪಂಕಜಕೋಶಯೋಃ ಶ್ರಿಯಮ್ ತಿರಶ್ಚಕಾರ ॥

ಭ್ರಮರೈರಭಿಲೀನಯೋರಭಿವ್ಯಾಪ್ತಯೋಃ—ಸುಜಾತಯೋಃ = ಸುಂದರಯೋಃ—ಪಂಕಜಕೋಶಯೋಃ = ಪದ್ಮಮುಕುಲಯೋಃ ॥

9. ನಿಧಾನಗರ್ಭಾಮಿವ ಸಾಗರಾಂಬರಾಂ ।
 ಶಮೀಮಿವಾಭ್ಯಂತರಲೀನಪಾವಕಾಮ್ ॥
 ನದೀಮಿವಾಂತಃಸಲಿಲಾಂ ಸರಸ್ವತೀಂ ।
 ನೃಪಃ ಸಸತ್ವಾಂ ಮಹಿಷೀಮಮನ್ಯತ ॥ ೯ ॥

ನೃಪನು ಗರ್ಭಿಣಿಯಾದ ತನ್ನ ಸತಿಯ ಕುರಿತು ಈ ತೆರನಾಗಿ ಯೋಚಿಸಿದನು. "ಗರ್ಭಿಣಿಯಾಗಿರುವ ಈ ನನ್ನ ಸತೀಮಣಿಯು ಅನೇಕ ತರದ ನಿಕ್ಷೇಪಗಳನ್ನು, ನವರತ್ನ

ಗಳನ್ನು (ಕೆಂಪು. ಪಚ್ಚೆ. ವಜ್ರ, ವೈಡೂರ್ಯ, ಗೋಮೇಧಿಕ, ಹವಳ, ಮುತ್ತು, ರತ್ನ) ತನ್ನ ಗರ್ಭದಲ್ಲಿ ಧರಿಸಿ ಸಾಗರದಿಂದ ಆವರಿಸಿರುವ ವಸುಂಧರೆಗೆ (ಭೂಮಿಗೆ, ಪೃಥ್ವಿಗೆ) ಎಣೆಯಾಗಿರುವಳು. ಇವಳು ಅಗ್ನಿಯನ್ನು ತನ್ನಲ್ಲಿ ಲೀನವಾಗಿಸಿರುವ ಶಮೀವೃಕ್ಷಕ್ಕೆ ಸಮನಾಗಿರುವಳು. ಇವಳು ಹೊರಗೆ ತೋರದೆ (ಯಾರಿಗೂ ಕಾಣಿಸದೆ ಗೋಪ್ಯವಾಗಿ) ಭೂಮಿಯ ಒಳಗೊಳಗೇ ಹರಿಯುವ (ಪ್ರವಹಿಸುವ) ಪಾವನವಾದ ಸರಸ್ವತೀನದಿಗೆ ಸಮನಾಗಿ, ಪುತ್ರರತ್ನವನ್ನು ತನ್ನ ಗರ್ಭದಲ್ಲಿರಿಸಿ ಕಾಂತಿವಂತಿಯಾಗಿ, ಶಾಂತಿಮತಿಯಾಗಿ ಶೋಭಿಸುತ್ತಿರುವಳು" ಎಂದು ಇಳಾಧಿಪತಿಯು ಭಾವಿಸುತ್ತ ಹರ್ಷಸಾಗರದಲ್ಲಿ ಓಲಾಡು ತ್ತಿದ್ದನು. (ಪಾರ್ವತನು ಮಧ್ಯೆ ತಾನಡಗಿರುವ ಶಮಿಯು ಒಳಗೊಳಗೆ ಜಲಪರಿಯುವಾ ಸರಸ್ವತಿಯು (ತೇಲಾಡುತ್ತಿದ್ದನು) (ಎಣೆಯೆಂದು ಎಣಿಸಿದನು ನೃಪನು ಗರ್ಭಿಣಿಯು).

ಸಾಗರಾಂಬರಾಮ್ = ಸಮುದ್ರವಸನಾ—ಮಾಲೋಪಮಾಲಂಕಾರ.

"ಆಪನ್ನಸತ್ತ್ವಾ ಸ್ಯಾದ್ಗುರ್ವಿಣ್ಯಂತರ್ವತ್ನೀ ಚ ಗರ್ಭಿಣೀ" ಇತ್ಯಮರಃ—ಮಹೀಮ್—ನಿಧಾನಂ = ನಿಧಿ ಗರ್ಭೇ ಯಸ್ಯಾಸ್ತಾಂ—ಸಾಗರಾಂಬರಾಂ = ಸಮುದ್ರ ವಸನಾಮ್—ಭೂಮಿಮಿವೇತ್ಯರ್ಥಃ—"ಭೂತಧಾತ್ರೀ ರತ್ನಗರ್ಭಾ ವಿಪುಲಾ ಸಾಗರಾಂ ಬರಾ" ಇತಿ ಕೋಶಃ—ಅಂತಃ ಸಲಿಲಾಮಂತರ್ಗತಜಲಾಂ ಸರಸ್ವತೀಂ ನದೀಮಿವ—ಸಾಗರಾಂಬರಾಂ = ಸಮುದ್ರವಸನಾ ಉರ್ವೀ—ಅಂತರ್ಗತಜಲಾಂ ಸರಸ್ವತೀನದೀಮಿವ ॥

10. ಪ್ರಿಯಾನುರಾಗಸ್ಯ ಮನಃ ಸಮುನ್ನತೇಃ ।
ಭುಜಾರ್ಜಿತಾನಾಂ ಚ ದಿಗಂತಸಂಪದಾಮ್ ॥
ಯಥಾ ಕ್ರಮಂ ಪುಂಸವನಾದಿಕಾಃ ಕ್ರಿಯಾ ।
ಧೃತೇಶ್ಚ ಧೀರಃ ಸದೃಶೀರ್ವ್ಯಧತ್ತ ಸಃ ॥ ೧೦ ॥

ತನ್ನ ಸತಿಯು (ಪ್ರೇಯಸಿಯು) ಪುತ್ರವತಿಯಾಗುವಳೆಂಬ ಅನುರಾಗದಿಂದ ಆ ನೃಪತಿಯು ತನ್ನ ಪ್ರಿಯೆಗೆ ಗರ್ಭಿಣಿಸ್ತ್ರೀಯರಿಗೆ ಕಾಲಕಾಲಕ್ಕೆ ಮಾಡಬೇಕಾದ ಪುಂಸವನಾದಿಕ್ರಿಯೆಗಳನ್ನು (ಪುಂಸವನ ಸಂಸ್ಕಾರ) ಪುರೋಹಿತರಿಂದ ತನ್ನ ಪ್ರೀತಿಗೆ (ಅನುರಾಗಕ್ಕೆ) ಉಚಿತವಾದ ರೀತಿಯಲ್ಲಿ ಮಾಡಿಸಿದನು ಮತ್ತು ತನ್ನ ಭುಜಬಲದ ಸಾಮರ್ಥ್ಯದಿಂದ ಆರ್ಜಿಸಿದ ಸಂಪತ್ತಿಗೆ ಒಪ್ಪುವ ಹೃದಯವೈಶಾಲ್ಯವನ್ನು ಹೊಂದಿ ಪ್ರಸಿದ್ಧಿ ಪಡೆದ ಆ ರಾಜೇಂದ್ರನು ತನ್ನ ಸುದತಿಯು (ತಳೋದರಿಯು) ತನ್ನ ವಂಶವನ್ನು ಪ್ರಕಾಶಮಾನವಾಗಿ ಬೆಳಗುವ ಪುತ್ರವರೇಣ್ಯನನ್ನು ಪಡೆಯುವಳೆಂಬ ಗಾಢವಾದ ಸಂತಸ ದಿಂದ ತನ್ನ ಧಾತೃತ್ವಕ್ಕೆ ಸರಿಯಾದ (ಯುಕ್ತವಾದ) ರೀತಿಯಲ್ಲಿ ಸಲ್ಲಬೇಕಾದ ಎಲ್ಲಾ ಕೆಲಸಕಾರ್ಯಗಳನ್ನು ನಡೆಸಿದನು. ಪುಂಸವನವೆಸಗಿದನು ದಾತೃತ್ವಕೆಣೆಯು.

ಅನ್ವಯ :—ಧೀರಃ ಸ ಪ್ರಿಯಾನುರಾಗಸ್ಯ ಮನಃ ಸಮುನ್ನತೇಃ ಭುಜಾರ್ಜಿತಾನಾಂ ದಿಗಂತಸಂಪದಾಂ ಧೃತೇಶ್ಚ ಸದೃಶೀಃ ಪುಂಸವನಾದಿಕಾಃ ಕ್ರಿಯಾಃ ಯಥಾಕ್ರಮಂ ವ್ಯಧತ್ತ ॥

ಮನಃಸಮುನ್ನತಿಃ=ಔದಾರ್ಯಮ್—ಪ್ರಿಯಾಯಾಮನುರಾಗಸ್ಯ ಸ್ನೇಹಸ್ಯ—ಮನಸಃ ಸಮುನ್ನತೇರೌದಾರ್ಯಸ್ಯ—ಭುಜೇನ ಭುಜಬಲೇನ—ದಿಗಂತೇಷು ಸಂಪದಾಮ್—

ಧೃತೇಃ ಪ್ರತ್ರೋ ಮೇ ಭವಿಷ್ಯತೀತಿ ಸಂತೋಷಸ್ಯ ಚ—"ಧೃತಿರ್ಯೋಗಾಂತರೇ ಧೈರ್ಯೇ ಧಾರಣಾಧ್ವರತುಷ್ಟಿಷು" ಇತಿ ವಿಶ್ವಃ—ಪುಮಾನ್ ಸೂಯತೇಽನೇನೇತಿ ಪುಂಸವನಮ್—ಪುಂಸವನ = ಮೊದಲಿನ ಸಂಸ್ಕಾರ (ಗರ್ಭಿಣಿಸ್ತ್ರೀಯ). ಸ್ತ್ರೀಯು ಗರ್ಭವತಿಯಾದ ಲಕ್ಷಣಗಳು ಕಂಡಾಗ ಪ್ರಪ್ರಥಮವಾಗಿ ಮಾಡತಕ್ಕ ಸಂಸ್ಕಾರಕ್ರಿಯೆಗಳು, ಔದಾರ್ಯಮ್=ಉದಾರಶೀಲತೆ—"ಯದಹಃ ಪುಂಸಾನಕ್ಷತ್ರೇಣ ಚಂದ್ರಮಾ ಯುಕ್ತಃ ಸ್ಯಾತ್" ಇತಿ ಪಾರಸ್ಕರಃ—"ಚತುರ್ಥೇ ನವಲೋಭನಮ್" ಇತ್ಯಾಶ್ವಲಾಯನಃ—"ಷಷ್ಠೇಽಷ್ಟಮೇ ವಾ ಸೀಮಂತೋನ್ನಯನಂ" ಇತಿ ಯಾಜ್ಞವಲ್ಕ್ಯಃ" ॥

11. ಸುರೇಂದ್ರಮಾತ್ರಾಶ್ರಿತಗರ್ಭಗೌರವಾತ್ ।
ಪ್ರಯತ್ನಮುಕ್ತಾಸನಯಾ ಗೃಹಾಗತಃ ॥
ತಯೋಪಚಾರಾಂಜಲಿಖಿನ್ನಹಸ್ತಯಾ ।
ನನಂದ ಪಾರಿಪ್ಲವನೇತ್ರಯಾ ನೃಪಃ ॥ ೧೧ ॥

ಇಂದ್ರಾದಿ ಅಷ್ಟದಿಕ್ಪಾಲಕರ ಅಂಶಗಳಿಂದ ಪರಿಪೋಷಕವಾಗಿ, ಪುಷ್ಟಿಗೊಂಡ ಗರ್ಭವು (ಭ್ರೂಣವು) ಬಸಿರಲ್ಲಿ ಬಳೆಯುತ್ತಿರಲು ಅದರ ಭಾರದಿಂದ ಮೆಲ್ಲನೆ ಏಳುವವಳು. ಕಾಣಲು ರಾಜನು ಅರಮನೆಗೆ ನೇರವಾಗಿ, ಸುರೇಂದ್ರನು ಶಚೀದೇವಿಯನ್ನು ಕಾಣಲು ಬರುವಂತೆ, ಬಂದನು (ಅಮರಾಧಿಲೋಕದಲ್ಲಿ). ಅವನನ್ನು ಕಂಡೊಡನೆಯೆ ಸುದಕ್ಷಿಣಾ ದೇವಿಯು ಪ್ರಯತ್ನಪೂರ್ವಕವಾಗಿ ಮೆಲ್ಲನೆ ಎದ್ದು ನಿಂತು ಬೊಗಸೆಕೈಗಳಿಂದ ಕೈಮುಗಿದು ನಿಲ್ಲುವಳು. ತನ್ನ ಕೂಡಿನೋಟದಿಂದ ಅರಮನೆಗೆ ಬಂದ ಅರಸನನ್ನು ಸಂತೈಸಿದಳು. ಹೀಗೆ ದೇಹಾಲಸ್ಯದಿಂದ ಕಡುಬಳಲಿದ ತನ್ನ ಸತಿಯನ್ನು ಸಂತಸದಿಂದ ಆ ನೃಪತಿಯು ಈಕ್ಷಿಸಿದನು.

ಅನ್ವಯ :—ಗೃಹಾಗತಃ ನೃಪಃ ಸುರೇಂದ್ರಮಾತ್ರಾಶ್ರಿತಗರ್ಭಗೌರವಾತ್ ಪ್ರಯತ್ನ ಮುಕ್ತಾಸನಯಾ ಉಪಚಾರಾಂಜಲಿಖಿನ್ನಹಸ್ತಯಾ ಪಾರಿಪ್ಲವನೇತ್ರಯಾ ತಯಾ ನನಂದ ॥

ಗೃಹಾಗತಃ ನೃಪಃ—ಉಪಚಾರಾಂಜಲಿ = ಬೊಗಸೆಕೈ ಮುಗಿವುದು—ಪಾರಿಪ್ಲವ—ತರಲ—ಚಂಚಲಂ = ತರಲಂ ಚೈವ ಪಾರಿಪ್ಲವ ಪರಿಪ್ಲವೇ.

ಸುರೇಂದ್ರಾಣಾಂ = ಲೋಕಪಾಲಾನಾಂ—ಖಿನ್ನಹಸ್ತಯಾ ಪಾರಿಪ್ಲವನೇತ್ರಯಾ ತರಲಾಕ್ಷ್ಯಾ—ಪಾರಿಪ್ಲವ = ತರಲ, ಚಂಚಲ—"ಚಂಚಲಂ ತರಲಂ ಚೈವ ಪಾರಿಪ್ಲವ ಪರಿಪ್ಲವೇ" ಇತ್ಯಮರಃ—ಪಾರಿಪ್ಲವನೇತ್ರಯಾ = ತರಲಾಕ್ಷ್ಯಾ ॥

12. ಕುಮಾರಭೃತ್ಯಾಕುಶಲೈರನುಷ್ಠಿತೇ ।
ಭಿಷಗ್ಭಿರಾಪ್ತೈರಥಗರ್ಭಭರ್ಮಣಿ ॥
ಪತಿಃ ಪ್ರತೀತಃ ಪ್ರಸವೋನ್ಮುಖೀಂ ಪ್ರಿಯಾಂ ।
ದದರ್ಶ ಕಾಲೇ ದಿವಮಭ್ರಿತಾಮಿವ ॥ ೧೨ ॥

ಸ್ತ್ರೀವೈದ್ಯರು, ಶಿಶುವೈದ್ಯರತ್ನರು, ಭಿಷಗ್ರತ್ನರು ಇವರುಗಳನ್ನು ಕರೆಸಿ ಗರ್ಭ ಸಂರಕ್ಷಣೆಯ ಕಾರ್ಯಕ್ಕೆ ನಿಯೋಜಿಸಲು ಅವರು ಅತ್ಯಂತ ಹಿತರಾಗಿ (ಉತ್ಸುಕರಾಗಿ) ಕಾರ್ಯದಲ್ಲಿ ನಿರತರಾದರು. ರಾಣಿಯು ತುಂಬುಗರ್ಭಿಣಿಯಾಗಿ, ಪ್ರಸವಕಾಲವು ಸಮೀಪಿಸುತ್ತಾಬರುತ್ತಿರುವುದನ್ನು ಕಂಡು ಆ ಮೇದಿನೀಪತಿಯು ರೈತಾಪಿಜನರು ಮಳೆಗಾಗಿ ಕಾಯುತ್ತಿರುವ ಬಾನನ್ನು ನೋಡಿ ಹೊಸ ಮಳೆಯನ್ನು ನಿರೀಕ್ಷಿಸುವಂತೆ, ಸತಿಯ ಪ್ರಸವಕಾಲವನ್ನು ಇದಿರುನೋಡುತ್ತಿದ್ದನು (ನೋಡಿದನು ಮುಗಿಲಿರುವ ಬಾನನೆಂತಂತು).

ಅನ್ವಯ :—ಅಥ ಕುಮಾರಭೃತ್ಯಾಕುಶಲೈಃ ಭಿಷಗ್ಭಿಃ ಗರ್ಭಭರ್ಮಣಿ ಅನುಷ್ಠಿತೇ ಕಾಲೇ ಪ್ರಸವೋನ್ಮುಖೀಂ ಪ್ರಿಯಾಮ್ ಅಭ್ರಿತಾಂ ದಿವಮಿವ ಪತಿಃ ಪ್ರತೀತಃ ಸನ್ ದದರ್ಶ ॥

ಕುಮಾರಭೃತ್ಯ= ಬಾಲಚಿಕಿತ್ಸಾ, ಅಭ್ರಿತಾಮ್ = ಅಭ್ರಾಣಿ ಸಂಜಾತಾನಿ ಅಸ್ಯಾಃ— "ಭಿಷಗ್ವೈದ್ಯೌ ಚಿಕಿತ್ಸಕೌ" ಇತ್ಯಮರಃ—ಗರ್ಭಸ್ಯ ಭರ್ಮಣಿ ಭರಣೇ—ಭರಣೇ ಪೋಷಣೇ ಭರ್ಮ" ಇತಿ ಹೈಮಃ—"ಭೃತಿರ್ಭರ್ಮ" ಇತಿ ಶಾಶ್ವತಃ—ಪ್ರಸವಸ್ಯ ಗರ್ಭಮೋಚನಸ್ಯೋನ್ಮುಖೀಮ್—ಆಸನ್ನಪ್ರಸವಾಮಿತ್ಯರ್ಥಃ—"ಸ್ಯಾದುತ್ಪಾದೇ ಫಲೇ ಪುಷ್ಪೇ ಪ್ರಸವೋ ಗರ್ಭಮೋಚನೇ" "ಇತ್ಯಮರಃ—ಪತಿರ್ಭರ್ತಾ ಪ್ರತೀತೋ ಹೃಷ್ಟಃ ಸನ್—"ದಿವಃ ಖ್ಯಾತೇ ಹೃಷ್ಟೇ ಪ್ರತೀತಃ" ಇತ್ಯಮರಃ—ದದರ್ಶ=ದೃಷ್ಟವಾನ್.

**13. ಗ್ರಹೈಸ್ತತಃ ಪಂಚಭಿರುಚ್ಚಸಂಶ್ರಯೈಃ ।**
**ಅಸೂರ್ಯಗೈಃ ಸೂಚಿತಭಾಗ್ಯಸಂಪದಮ್ ॥**
**ಅಸೂತಪುತ್ರಂ ಸಮಯೇ ಶಚೀಸಮಾ ।**
**ತ್ರಿಸಾಧನಾಶಕ್ತಿರಿವಾರ್ಥಮಕ್ಷಯಮ್ ॥ ೧೩ ॥**

ಪ್ರಸವಕಾಲವು ಸನ್ನಿಹಿತವಾಗಿ ಶುಭಸಮಯ ಪ್ರಾಪ್ತವಾಯಿತು. ಐದು ಗ್ರಹಗಳು ಉದಯಿಸಿ ಉಚ್ಚದೆಸೆಯಲ್ಲಿದ್ದು ಭಾಗ್ಯಸಂಪತ್ತನ್ನು ಸೂಚಿಸುತ್ತಲಿದ್ದುವು. ಜನ್ಮನಕ್ಷತ್ರವು ಉಚ್ಚಸ್ಥಾನದಲ್ಲಿ ಪರಿಶೋಭಿಸುತ್ತಾ ಹುಟ್ಟುವ ಮಗುವಿಗೆ ಸಾರ್ವಭೌಮನಲ್ಲಿರಬೇಕಾದ ಸಾಧನತ್ರಯಶಕ್ತಿಗಳು, ಮೂರು ತರದ ಅಕ್ಷಯಶಕ್ತಿಗಳು ಪ್ರಾಪ್ತವಾದುವು. ಇಂದ್ರನ ರಾಣಿ, ಇಂದ್ರಾಣಿಯಾದ ಶಚೀದೇವಿಯು ಪುತ್ರನಾದ ಜಯಂತನನ್ನು ಪಡೆವಂತೆ ಸುದಕ್ಷಿಣಾದೇವಿಯು ಭಾರತದ ಭಾವೀಸಾಮ್ರಾಟನಾಗಿ ಮೆರೆಯುವ (ಪೆರ್ಚುವ) ಪುತ್ರ ರತ್ನನನ್ನು ಪೆತ್ತಳು ಆ ಹದಿಬದೆ. (ಸಾಧನತ್ರಯಶಕ್ತಿಯಕ್ಷಯಾರ್ಥವನು ಪಡೆವಂತೆ ಪಡೆದಳವಳಂದು ಪುತ್ರನನು.)

ಅನ್ವಯ :—ತತಃ ಶಚೀಸಮಾ ಸಮಯೇ ಉಚ್ಚಸಂಶ್ರಯಃ ಅಸೂರ್ಯಗೈಃ ಪಂಚಭಿಃ ಗ್ರಹೈಃ ಸೂಚಿತಭಾಗ್ಯಸಂಪದಮ್ ಪುತ್ರಂ ತ್ರಿಸಾಧನಾಶಕ್ತಿಃ ಅಕ್ಷಯಮ್ ಅರ್ಥಮಿವ ಅಸೂತ ॥

ಏಳು ಗ್ರಹಗಳು :—ರವಿ, ಸೋಮ, ಮಂಗಳ, ಬುಧ, ಬೃಹಸ್ಪತಿ, ಶುಕ್ರ ಮತ್ತು ಶನಿ —ಉಚ್ಚಸಂಶ್ರಯಂಮಿರುವ = ಅವು ಪ್ರವೇಶಿಸುವ—ಉತ್ತಮ ರಾಶಿಗಳು : ಮೇಷ,

ವೃಷಭ, ಅಂಗನಾ (ಕನ್ಯಾ), ಕರ್ಕ, ಮೀನ, ತುಲಾ—ತ್ರಿಸಾಧನಾಶಕ್ತಿಃ = ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ.

ಗ್ರಹೈರಿತಿ ॥ ತತಃ "ಶಚ್ಯೇಂದ್ರಾಣ್ಯಾಸಮಾ । "ದಶಮೇ ಮಾಸಿ ಜಾಯತೇ" ಇತಿ ಶ್ರುತಿಃ—ತ್ರಿಸಾಧನಾಶಕ್ತಿಃ—"ಶಕ್ತಯಸ್ತಿಸ್ರಃ ಪ್ರಭಾವೋತ್ಸಾಹಮಂತ್ರಜಾಃ" ಇತ್ಯಮರಃ ॥

ಸಪ್ತಗ್ರಹಗಳು = ರವಿ, ಸೋಮ, ಮಂಗಲ, ಬುಧ, ಬೃಹಸ್ಪತಿ, ಶುಕ್ರ ಮತ್ತು ಶನಿ—"ಪುಲೋಮಜಾಶಚೀಂದ್ರಾಣೀ" ಇತ್ಯಮರಃ—ಉತ್ತುಂಗಸ್ಥಾನೇ = ಉಚ್ಚಸ್ಥಾನಾನಿ = ಭಾಗ್ಯಸಂಪದ್ಯಸ್ಯ ತಂ ಪುತ್ರಮ್ ॥

14. ದಿಶಃ ಪ್ರಸೇದುಃ ಮರುತೋ ವವುಃ ಸುಖಾಃ ।
ಪ್ರದಕ್ಷಿಣಾರ್ಚಿರ್ಹವಿರಗ್ನಿರಾದದೇ ॥
ಬಭೂವ ಸರ್ವಂ ಶುಭಶಂಸಿತತ್ಕ್ಷಣಂ ।
ಭವೋ ಹಿ ಲೋಕಾಭ್ಯುದಯಾಯ ತಾದೃಶಾಮ್ ॥ ೧೪ ॥

ಆ ಪುತ್ರೋದಯದ ಶುಭಮುಹೂರ್ತದಲ್ಲಿ ದಶದಿಕ್ಕುಗಳು ಪ್ರಸನ್ನತೆಯಿಂದ ಮಂಗಲಕರವಾಗಿ, ಶುಭಪ್ರದವಾಗಿ ಕಂಡುವು. ಸೊಗಸಾದ ಮಾರುತವು ಮಂದಮಂದವಾಗಿ ಸುಳಿದಾಗ, ಆ ಶುಭಕಾಲದಲ್ಲಿ ಯಜ್ಞಾಗ್ನಿಯು ಬಹಳ ಶುಭ್ರತೆಯಿಂದ ಪ್ರಜ್ವಲಿಸುತ್ತ, ಯಜ್ಞಕುಂಡದ ಬಲಭಾಗದಲ್ಲಿ, ಆಹುತಿ ಅಗ್ನಿಯ ಬಲಭಾಗದಲ್ಲಿ ಬಂದು ಸುದರ್ಶನ ಚಕ್ರದಂತಿರುವ ಒಂದು ಜ್ಯೋತಿಯ ಉಂಗುರವು ಪ್ರಕಾಶಮಾನವಾಗಿ ಕಾಣಿಸಿಕೊಂಡಿತು (ಪ್ರದಕ್ಷಿಣಾರ್ಚಿಃ). ಆ ಜ್ಯೋತಿಮಯ ಜ್ವಾಲೆಯು ಯಜ್ಞಾಹುತಿಯನ್ನು ಸ್ವೀಕರಿಸಿತು. ಲೋಕದ ಅಭ್ಯುದಯಕ್ಕಾಗಿ, ಲೋಕೋಪಕಾರಾರ್ಥವಾಗಿ. (ಲೋಕಕಲ್ಯಾಣಕ್ಕಾಗಿ, ಮಾನವಕಲ್ಯಾಣಕ್ಕಾಗಿ) ಹುಟ್ಟುವ ಮಗುವಿಗೆ (ಅರ್ಭಕನಿಗೆ) ಪ್ರಕೃತಿಮಾತೆಯು, ದೇವಾದಿದೇವತೆಗಳು, ನವಗ್ರಹಗಳು, ಋಷಿಮುನಿಗಳು ಶುಭವನ್ನೇ ಕೋರಿದರು. ಗ್ರಹಗಳು ಉಚ್ಚಸ್ಥಾನದಲ್ಲಿದ್ದು ಸುಪ್ರಸನ್ನತೆಯನ್ನು ಪ್ರಕಟಿಸಿದುವು.

ತತ್‌ಕ್ಷಣಂ = ತಸ್ಮಿನ್ ಕ್ಷಣೇ—ದಿಶಃ ಪ್ರಸೇದುಃ = ಪ್ರಸನ್ನಾ ಬಭೂವುಃ—ಮರುತೋ = ವಾತಾಃ—ಸುಖಾ = ಮನೋಹರಾ—ಶುಭಶಂಸಿ = ಶುಭಸೂಚಕಂ ॥

15. ಅರಿಷ್ಟಶಯ್ಯಾಂ ಪರಿತೋವಿಸಾರಿಣಾ ।
ಸುಜನ್ಮನಸ್ತಸ್ಯ ನಿಜೇನ ತೇಜಸಾ ॥
ನಿಶೀಥದೀಪಾಃ ಸಹಸಾ ಹತತ್ವಿಷೋ ।
ಬಭೂವುರಾಲೇಖ್ಯಸಮರ್ಪಿತಾ ಇವ ॥ ೧೫ ॥

ಸೂತಿಕಾಗೃಹದಲ್ಲಿ ಜನಿಸಿದ ಶಿಶುವಿನ ನಿಜತೇಜದಿಂದ ಆ ಕೋಣೆಯಲ್ಲಿ ಮಧ್ಯರಾತ್ರಿಯಲ್ಲಿ ಉರಿಯುತ್ತಿದ್ದ ದೀಪಗಳು (ನಿಶೀಥದೀಪಾಃ) ತಮ್ಮ ಕಾಂತಿಯನ್ನು ಕಳೆದುಕೊಂಡು ಚಿತ್ರಪಟದಲ್ಲಿ ಚಿತ್ರಿಸಿದ ದೀಪಮಾಲೆಗಳೋ ಎಂಬಂತೆ ತೋರಿದುವು, ಸೂತಿಕಾಗೃಹವು

ಆ ಅರ್ಭಕನ (ಸುಜನ್ಮನಾ) (ಪುಟಾಣಿಯು, ಕಣ್ಮಣಿಯು, ಚಿಣ್ಣನ, ಕಂದಮ್ಮನ, ಪಾಪುವಿನ) ಕಾಂತಿಯಿಂದ ರಘುಗ್ಗನೆ ಬೆಳಕಿನ ಹೊನಲು ಎಲ್ಲಿಂದಲೋ ಹರಿದಂತೆ ಪ್ರಕಾಶಮಾನವಾಗಿ ಶೋಭಿಸಿತು, ಕಣ್ಮನಗಳನ್ನು ಸೆಳೆಯಿತು. (ಆ ಸುಜನ್ಮದೊಂದು ನಿಜತೇಜವೆಂಸೆಯೆ— ತೋರಿದುವು ಚಿತ್ರಾರ್ಪಿತಂಗಳೆನುವಂತೆ.)

ಅನ್ವಯ :—ಸುಜನ್ಮನಃ ತಸ್ಯ ಅರಿಷ್ಟಶಯ್ಯಾಂ ಪರಿತೋ ವಿಸಾರಿಣಾ ನಿಜೇನ ತೇಜಸಾ ಸಹಸಾ ಹತತ್ವಿಷಃ ನಿಶೀಥದೀಪಾಃ ಆಲೇಖ್ಯಸಮರ್ಪಿತಾಃ ಇವ ಬಭೂವುಃ ॥

ಅರಿಷ್ಟೇತಿ—"ಅರಿಷ್ಟಂ ಸೂತಿಕಾಗೃಹಮ್" ಇತ್ಯಮರಃ—ಅರಿಷ್ಟೇ ಸೂತಿಕಾಗೃಹೇ ಶಯ್ಯಾಂ ತಲ್ಪಂ ಪರಿತಃ ಸರ್ವತಃ—ಸುಜನ್ಮನಃ ಶೋಭನೋತ್ಪತ್ತೇಃ—"ಜನುರ್ಜನನ ಜನ್ಮಾನಿ ಜನಿರುತ್ಪತ್ತಿರುದ್ಭವಃ" ಇತ್ಯಮರಃ—ತಸ್ಯ ಶಿಶೋರ್ನಿಜೇನ ನೈಸರ್ಗಿಕೇಣ ತೇಜಸಾ—ನಿಶೀಥದೀಪಾ=ಅರ್ಧರಾತ್ರಪ್ರದೀಪಾಃ—"ಅರ್ಧರಾತ್ರನಿಶೀಥೌ ದ್ವೌ" ಇತ್ಯಮರಃ ॥

16. ಜನಾಯ ಶುದ್ಧಾಂತಚರಾಯ ಶಂಸತೇ ।
ಕುಮಾರಜನ್ಮಾಮೃತಸಂಮಿತಾಕ್ಷರಮ್ ॥
ಅದೇಯಮಾಸೀತ್ತ್ರಯಮೇವ ಭೂಪತೇಃ ।
ಶಶಿಪ್ರಭಂ ಛತ್ರಮುಭೇ ಚ ಚಾಮರೇ ॥ ೧೬ ॥

ಪುತ್ರನು ಜನಿಸಿದ ಅಮೃತವಾಕ್ಯವು (ಸುವಾರ್ತೆ) ಪೃಥ್ವೀಪತಿಯು ಕಿವಿದೆರೆಗೆ ಬಿದ್ದೊಡನೆಯೇ, ತನ್ನ ರಾಣಿಯನ್ನು ಅಂತಃಪುರದಲ್ಲಿ ಉಪಚರಿಸುತ್ತಿದ್ದ ಸಖಿಯರಿಗೆ ಉಡುಗೊರೆಯಾಗಿ ಕೊಡಲಾರದೆ ಉಳಿದುದೆಂದರೆ ಅವನ ಸಾಮ್ರಾಜ್ಯದಲ್ಲಿ, ಚಂದ್ರಮನನ್ನು ಹೋಲುವ ಬೆಳ್ಗೊಡೆ ಮತ್ತು ಬಿಳಿಯ ಚಾಮರಗಳೆರಡು ಮಾತ್ರ. ಮಹಾದಾನಿಯೆನಿಸಿದ (ದಾನಚಿಂತಾಮಣಿ) ಆ ರವಿಕುಲಸಾರ್ವಭೌಮನು ಅಷ್ಟೈಶ್ವರ್ಯಗಳನ್ನು ಕೊಡುಗೈಯಿಂದ ತನ್ನ ಪ್ರಜೆಗಳಿಗೆ ದಾನಮಾಡಿ ತೃಪ್ತಿಪಡೆದನು.

ಅನ್ವಯ :—ಭೂಪತೇಃ ಅಮೃತಸಂಮಿತಾಕ್ಷರಮ್ ಕುಮಾರಜನ್ಮ ಶಂಸತೇ ಶುದ್ಧಾಂತಚರಾಯ ಶಶಿಪ್ರಭಂ ಛತ್ರಮ್ ಉಭೇ ಚ ಚಾಮರೇ (ಇತಿ) ತ್ರಯಮೇವ ಅದೇಯಮಾಸೀತ್ ॥

ಅಮೃತ = ಅಮೃತಸ್ಯ ಸಮ್ಮಿತಾನಿ ಅಕ್ಷರಾಣಿ ಯಸ್ಯ ತತ್ ॥ ಕುಮಾರಜನ್ಮ= ಪುತ್ರೋತ್ಪತ್ತಿ, ಕುಮಾರನ ಜನನ—ಶಂಸತೇ = ಕಥಯತೇ, ಶುದ್ಧಾಂತಚರಾಯ = ಶುದ್ಧಾಂತಪುರಚಾರಿಣೇ ॥

17. ನಿವಾತಪದ್ಮಸ್ತಿಮಿತೇನ ಚಕ್ಷುಷಾ ।
ನೃಪಸ್ಯ ಕಾಂತಂ ಪಿಬತಃ ಸುತಾನನಮ್ ॥
ಮಹೋದಧೇಃ ಪೂರ ಇವೇಂದುದರ್ಶನಾತ್ ।
ಗುರುಃ ಪ್ರಹರ್ಷಃ ಪ್ರಬಭೂವನಾತ್ಮನಿ ॥ ೧೭ ॥

ತನ್ನ ಹಾಲುಗಲ್ಲದ ಶಿಶುವಿನ ಮುದ್ದಾದ ಮುಖವನ್ನು (ಮುಖಚಂದ್ರಮನನ್ನು) ಕಂಡೊಡನೆಯೇ ಆ ರಾಜೇಂದ್ರನ ಹೃದಯದಲ್ಲಿ ಅಡಗಿದ್ದ ಸಂತಸವು ಮೇರೆವರಿದು ಉಕ್ಕಿಬಂತು. ಗಾಳಿಯು ಸುಳಿಯದಿದ್ದಾಗ ಅಲುಗದೆ ತೋರುವ ಎರಡು ತಾವರೆ ಹೂಗಳಂತೆ (ಪುಷ್ಪಗಳಂತೆ) ಆ ಕಂದಮ್ಮನ (ಕಣ್ಮಣಿಯ) ಎರಡು ಕಣ್ಣುಗಳು ಶೋಭಿಸುತ್ತಿದ್ದುವು. ಮಗನ ಮುದ್ದಾದ ಮೊಗವನ್ನು ಒಲುಮೆಯಿಂದ ನೋಡುತ್ತಿದ್ದಂತೆ ಹೃದಯವು (ಹೃದಯಮಂದಾರವು) ಚಂದ್ರಮನ ಉದಯದಲ್ಲಿ ಉಕ್ಕಿ ಮೇರೆವರಿಯುವ ಕಡಲ ನೀರಂತೆ (ಸಾಗರದಂತೆ) ಉಕ್ಕಿಹರಿದುದು ಆಗ. ಒಲುಮೆ ಉಕ್ಕಿದುದು ಮೊರೆದು, ಕಡಲ ನೀರುಕ್ಕುವೊಲು ಕಾಣಲೊಡನಿಂದು.

ಅನ್ವಯ :—ನಿವಾತಪದ್ಮಸ್ತಿಮಿತೇನ ಚಕ್ಷುಷಾ ನೃಪಸ್ಯ ಕಾಂತಂ ಸುತಾನನಂ ಪಿಬತಃ ಇಂದುದರ್ಶನಾತ್ ಮಹೋದಧೇ ಪೂರಃ ಇವ ಗುರುಃ ಪ್ರಹರ್ಷಃ ಆತ್ಮನಿ ನ ಪ್ರಬಭೂವ॥ ನಿವಾತಃ = ವಾತಸ್ಯಾಭಾವೋ ನಿರ್ವಾತಮ್ ॥

ನಿವಾತೋ = ನಿರ್ವಾತಪ್ರದೇಶಃ—"ನಿವಾತಾವಾಶ್ರಯಾವಾತೌ" ಇತ್ಯಮರಃ—ಚಕ್ಷುಷಾ = ನೇತ್ರೇಣ—ಕಾಂತಂ = ಸುಂದರಂ—ಸುತಾನನಂ = ಪುತ್ರಮುಖಂ—ಪಿಬತಸ್ತೃಷ್ಣಯಾ ಪಶ್ಯತೋ—ನೃಪಸ್ಯ = ಗುರುರುತ್ಕಟಃ—ಪ್ರಹರ್ಷಃ = ಕರ್ತಾ—ಇಂದುದರ್ಶನಾದ್ಗುರುರ್ಮಹೋದಧೇ ಪೂರೋ = ಜಲೌಘ ಇವ—ಆತ್ಮನಿ = ಶರೀರೇ—ನಿವಾತಃ = ನಿವೃತ್ತೋ ವಾತೋ ಯಸ್ಮಾತ್, ವಾತಸ್ಯ ಭಾವೋ ನಿರ್ವಾತಮ್—ಜಾತಕರ್ಮ = ಮಗುವಿನ ಜನನವಾದಬಳಿಕ ಹೊಕ್ಕಳು ಕತ್ತರಿಸುವ ಮೊದಲು ಮಗುವಿನ ಆರೋಗ್ಯ, ದೀರ್ಘಾಯುಷ್ಯ, ಕ್ಷೇಮಾಭಿವೃದ್ಧಿಗೆ ಮಾಡತಕ್ಕ ಮೊದಲ ಸಂಸ್ಕಾರ (ಸಂಸ್ಕಾರಕರ್ಮ)—ಸಂಸ್ಕಾರಕ್ರಿಯೆ.

**18. ಸ ಜಾತಕರ್ಮಣ್ಯಖಿಲೇ ತಪಸ್ವಿನಾ ।**
**ತಪೋವನಾದೇತ್ಯ ಪುರೋಧಸಾ ಕೃತೇ ॥**
**ದಿಲೀಪಸೂನುರ್ಮಣಿರಾಕರೋದ್ಭವಃ ।**
**ಪ್ರಯುಕ್ತಸಂಸ್ಕಾರ ಇವಾಧಿಕಂ ಬಭೌ ॥ ೧೮ ॥**

ಕುಲಗುರುಗಳಾದ ವಸಿಷ್ಠರು ರಾಜಪುತ್ರನ ಜನನವನ್ನು ತಿಳಿದು ತಮ್ಮ ಪುಣ್ಯಾಶ್ರಮದಿಂದ ಸಾಕೇತಮಹಾನಗರಿಗೆ ಬಂದು ಮಗುವಿನ ಜಾತಕರ್ಮಾದಿ ಕ್ರಿಯೆಗಳನ್ನು ಸಾಂಗವಾಗಿ ನೆರವೇರಿಸಿದರು. ಆಗ ಸಂತಸವಾಂತ ದಿಲೀಪಸಾಮ್ರಾಟನು ಇನ್ನೂ ಹೆಚ್ಚಿನ ತೇಜದಿಂದ ವಿರಾಜಿಸಿದನು. ಆಗತಾನೇ ಗಣಿಯಿಂದ ಅಗೆದು ಹೊರತೆಗೆದ ನವರತ್ನದ ಮಣಿಯನ್ನು ಸಾಣೆಗೆ ಕೊಟ್ಟು, ಹೆಚ್ಚಿನ ಶೋಭೆಯಿಂದ ಅದು ಪ್ರಕಾಶಿಸುವಂತೆ ದಿಲೀಪಸುತನು ಜಾತಕರ್ಮಾದಿ ಸಂಸ್ಕಾರದಿಂದ ರಾರಾಜಿಸಿದನು (ಸಂಸ್ಕಾರವು ಗೈದ ಗಣಿಯ ಮಣಿಯಂತೆ).

ಅನ್ವಯ :—ಸ ದಿಲೀಪಸೂನುಃ ತಪಸ್ವಿನಾ ಪುರೋಧಸಾ ತಪೋವನದೇತ್ಯ ಅಖಿಲೇ ಜಾತಕರ್ಮಣಿ ಕೃತೇ ಪ್ರಯುಕ್ತಸಂಸ್ಕಾರಃ ಆಕರೋದ್ಭವಃ ಮಣಿರಿವ ಅಧಿಕ ಬಭೌ ॥

ಪುರೋಧಸಾ = ಪುರೋಹಿತೇನ—''ಪುರೋಧಾಸ್ತು ಪುರೋಹಿತಃ'' ಇತ್ಯಮರಃ—ಅಖಿಲೇ = ಸಮಗ್ರೇ—ಜಾತಕರ್ಮಣಿ = ಜಾತಸ್ಯ ಕರ್ತವ್ಯಸಂಸ್ಕಾರವಿಶೇಷೇ ಕೃತೇ ಸತಿ.

**19. ಸುಖಶ್ರವಾ ಮಂಗಲತೂರ್ಯನಿಸ್ವನಾಃ ।**
**ಪ್ರಮೋದನೃತ್ಯೈಃ ಸಹ ವಾರಯೋಷಿತಾಮ್ ॥**
**ನ ಕೇವಲಂ ಸದ್ಮನಿ ಮಾಗಧೀಪತೇಃ ।**
**ಪಥಿ ವ್ಯಜೃಂಭಂತ ದಿವೌಕಸಾಮಪಿ ॥ ೧೯ ॥**

ಮಾಗಧಸುತೆಯ ಪತಿಯ ಗೃಹದಲ್ಲಿ (ಮಾಗಧೀಪತೇಃ) ಮಂಗಳಕರವಾದ ವಾದ್ಯ ಧ್ವನಿಯು ಕೇಳಿಸಿತು. ಆಮೋದಗೊಳಿಸುವ ನರ್ತನಾದಿಗಳನ್ನು ಗಣಿಕೆಯರು ನರಪತಿಯ ಸದ್ಮದಲ್ಲಿ ವಿಜೃಂಭಿಸಿದರು. ಎಲ್ಲೆಡೆಯಲ್ಲೂ ಉತ್ಸವದ ವಾತಾವರಣ, ನವಚೈತನ್ಯ ಆವರಿಸಿಬಿಟ್ಟಿತು. ಇದು ನರಪತಿಯ ನರಲೋಕದಲ್ಲಿ ಮಾತ್ರವಲ್ಲ, ಅಮರಲೋಕದಲ್ಲಿ ಲೋಕಾಧಿಪತಿಗಳ ಅರಮನೆಗಳಲ್ಲೂ ಮಂಜುಳಗಾನ, ಮಧುರಸಂಗೀತ, ಶುಭತೂರ್ಯಗಳ ನಿಃಸ್ವನ ವಿಜೃಂಭಿಸಿತು ದಿಲೀಪನೃಪೋತ್ತಮನ ಸಂತನ ಪುತ್ರೋತ್ಸವದ ನಿಮಿತ್ತ.

ಅನ್ವಯ :—ಸುಖಶ್ರವಾಃ ಮಂಗಲತೂರ್ಯನಿಃಸ್ವನಾಃ ವಾರಯೋಷಿತಾಮ್ ಪ್ರಮೋದನೃತ್ಯೈಃ ಸಹ ನ ಕೇವಲಂ ಮಾಗಧೀಪತೇಃ ಸದ್ಮನಿ ದಿವೌಕಸಾಮಪಿ ಪಥಿ ವ್ಯಜೃಂಭಂತ ॥

ದಿವೌಕಸಾಂ = ದ್ಯೌಃ ಒಕಃ ಯೇಷಾಂ ತೇ ದಿವೌಕಸಃ ॥ ಸುಖಃ ಸುಖಕರಃ ಶ್ರವಃ ಶ್ರವಣಂ ಯೇಷಾಂ ತೇ ಸುಖಶ್ರವಾಃ—ಶ್ರುತಿಸುಖಾಃ ಇತ್ಯರ್ಥಃ—ಮಂಗಲತೂರ್ಯ ನಿಃಸ್ವನಾ = ಮಂಗಲವಾದ್ಯಧ್ವನಯೋ—ವಾರಯೋಷಿತಾಂ = ವೇಶ್ಯಾನಾಮ್—''ವಾರ ಸ್ತ್ರೀ ಗಣಿಕಾವೇಶ್ಯಾರೂಪಜೀವಾ'' ಇತ್ಯಮರಃ—ಪ್ರಮೋದನೃತ್ಯೈ = ಹರ್ಷನರ್ತನೈಃ—ದಿವೌಕಸೋ = ದೇವಾಃ—ದೇವದಂಡಂಭಯೋಽಪಿ—ದಿವೌಕಸಾಂ = ದಿವಿ ಓಕಃ ಯೇಷಾಮ್—ಗಣಿಕಾ = ರೂಪಜೀವ = ವೇಶ್ಯೆಯರು.

**20. ನ ಸಂಯತಸ್ತಸ್ಯ ಬಭೂವ ರಕ್ಷಿತುಃ ।**
**ವಿಸರ್ಜಯೇದ್ಯಂ ಸುತಜನ್ಮಹರ್ಷಿತಃ ॥**
**ಋಣಾಭಿಧಾನಾತ್ ಸ್ವಯಮೇವ ಕೇವಲಂ ।**
**ತದಾ ಪಿತೄಣಾಂ ಮುಮುಚೇ ಸ ಬಂಧನಾತ್ ॥ ೨೦ ॥**

ಸುತಜನ್ಮಹರ್ಷಿತನಾಗಿ ಆ ಭೂಧರಾಧಿಪನು ಸೆರೆಮನೆಯಲ್ಲಿದ್ದ ಕೈದಿಗಳೆಲ್ಲರನ್ನು ಬಿಡುಗಡೆಮಾಡಿ ಸ್ವತಂತ್ರಗೊಳಿಸಲು ಮನಮಾಡಿದನು. ಆದರೆ ಆ ರಾಜೇಂದ್ರನ ಬಂಧನ ಶಾಲೆಗಳಲ್ಲಿ (ಸೆರೆಮನೆಗಳಲ್ಲಿ) ಬಂಧಿತರಾಗಿ ಕೈದಿಗಳೇ ಇರಲಿಲ್ಲ. ಅವನ ನಾಡಿನಲ್ಲಿ ಕಳವು, ಕೊಲೆ, ಸುಲಿಗೆಗಳೇ ಇರಲಿಲ್ಲ. ಜನರು ಧರ್ಮಿಷ್ಠರಾಗಿದ್ದರು. ಈಗ ಆ ವಸುಂಧಾಧಿಪತಿಯು ಪುತ್ರಜನನದಿಂದ ಪಿತೃಋಣದಿಂದ ಮುಕ್ತನಾಗಿದ್ದನು.

ಅನ್ವಯ :—ರಕ್ಷಿತುಃ ತಸ್ಯ ನ ಸಂಯತಃ ಬಭೂವ ಯಂ ಸುತಜನ್ಮಹರ್ಷಿತಃ

ವಿಸರ್ಜಯೇತ್ । ತದಾಪಿತೃಣಾಮ್ ಋಣಾಭಿಧಾನಾತ್ ಬಂಧನಾತ್ ಸ ಸ್ವಯಮ್ ಏವ ಕೇವಲಂ ಮುಮುಚೇ ॥

ಸಂತಜನ್ಮಹರ್ಷಿತ = ಸ್ರೋಷಿತಃ — ವಿಸರ್ಜಯೇದ್ವಿಮೋಚಯೇತ್ — "ಕೇವಲಃ ಕೃತ್ಸ್ನ ಏಕಶ್ಚ ಕೇವಲಸ್ತ್ವವಧೀರಿತಃ" ಇತಿ ಶಾಶ್ವತಃ — ಮುಮುಚೇ = ಸ್ವಯಮೇವ ಮುಕ್ತ ಇತ್ಯರ್ಥಃ—ಸ್ವಯಮೇವ=ಏಕ ಏವೇತ್ಯರ್ಥಃ—ದೇವಋಣ ॥

**21. ಶ್ರುತಸ್ಯ ಯಾಯಾದಯಮಂತಮರ್ಭಕಃ ।**
**ತಥಾ ಪರೇಷಾಂ ಯುಧಿ ಚೇತಿ ಪಾರ್ಥಿವಃ ॥**
**ಅವೇಕ್ಷ್ಯ ಧಾತೋರ್ಗಮನಾರ್ಥಮರ್ಥವತ್ ।**
**ಚಕಾರ ನಾಮ್ನಾ ರಘುಮಾತ್ಮಸಂಭವಮ್ ॥ ೨೧ ॥**

ತನ್ನ ಆತ್ಮಸಂಭವನು ಧನುರ್ವೇದವೇ ಮೊದಲಾದ ಸಮಸ್ತವಿದ್ಯೆಗಳ ಪಾರವನ್ನು (ಅಂತ್ಯವನ್ನು, ವಿದ್ಯಾಪಾರಾವಾರ, ವಿದ್ಯಾವಿಶಾರದ) ಕಂಡನೆಂದು ಮನದಲ್ಲಿ ಸಂತಸ ಗೊಂಡನು. ವಿದ್ಯೆಯಲ್ಲಿ ಹೇಗೋ ಹಾಗೆ ಶತ್ರುಗಳಿಗೂ ಪರಂತಪನೆನಿಸಿ ಯುದ್ಧದಲ್ಲಿ ಅವನನ್ನು ಎದುರಿಸುವ ಸಾಮರ್ಥ್ಯವುಳ್ಳ ರಾಜರು ಪೃಥ್ವೀವಲಯದಲ್ಲಿ ಇರಲಿಲ್ಲ (ಜಗದೇಕವೀರ). ಇಂತಹ ಸಮಸ್ತವಿದ್ಯಾಪಾರಂಗತನಾದ, ಲೋಕೈಕವೀರನಾದ ಸತ್ಪುತ್ರನಿಗೆ ಶಬ್ದಗಳ (ಪದಗಳ) ಅರ್ಥವನ್ನು ತಿಳಿದ ಆ ದಿಲೀಪ ಮಹಾರಾಜನು ''ಗಮಿಸು'', ''ಹೋಗು'', ''ಜಯಿಸು'' ಎಂಬ ವ್ಯಾಪಕ ಅರ್ಥವಾದ ''ರಘು'' ಎಂಬ ಪರಮಪವಿತ್ರವಾದ ನಾಮಧೇಯದಿಂದ ಕರೆದನು. ಇಂತು ಧಾತುವಿನ ಗಮನಾರ್ಥವನು ಒಗೆದು ಅವನು ''ರಘು'' ಎಂಬ ನಾಮಧೇಯದಿಂದಲೇ ಲೋಕವಿಖ್ಯಾತನಾದನು. ಅವನಿಂದ ಇಕ್ಷ್ವಾಕು ಎಂಬ ವಂಶವು ರಘುವಂಶವೆಂದೇ ಮುಂದೆ ಜನಜನಿತವಾಯಿತು.

ಅನ್ವಯ:—ಅರ್ಥವಿತ್ ಪಾರ್ಥಿವಃ ಅಯಮರ್ಭಕಃ ಶ್ರುತಸ್ಯ ಅನ್ತಂ ತಥಾ ಯುಧಿ ಪರೇಷಾಂ (ಅನ್ತಂ) ಯಾಯಾತ್ ಇತಿ ಧಾತೋಃ ಗಮನಾರ್ಥಮವೇಕ್ಷ್ಯ ಆತ್ಮಸಂಭವಂ ನಾಮ್ನಾ ರಘುಂ ಚಕಾರ ॥ (ಲಘ್, ರಘ್, ರಘುಃ).

ಶ್ರುತಸ್ಯೇತಿ—ಅರ್ಥವಿಚ್ಛಬ್ದಾರ್ಥಜ್ಞ—ಪಾರ್ಥಿವಃ = ಪೃಥ್ವೀಶ್ವರೋ ದಿಲೀಪಃ—ಶ್ರುತಸ್ಯ = ಶಾಸ್ತ್ರಸ್ಯ—ಅನ್ತಂ = ಪಾರಂ—ಆತ್ಮಸಂಭವಂ = ಪುತ್ರಂ—ರಘು = ಲಘ್ (ರಘ್) = ಲಘುವಾಗಿ ಮುಂದಕ್ಕೆ ಹೋಗು = ಶತ್ರುಗಳನ್ನು ಆಕ್ರಮಿಸಿ ಗೆಲ್ಲು = ವಿಶ್ವ ವಿಜಯಿಯಾಗು = ಆದುದರಿಂದ ''ರಘು''ವೆನಿಸು— ದಿಗಂತಪರ್ಯಂತ ಹೋಗು.

**22. ಪಿತುಃ ಪ್ರಯತ್ನಾತ್ಸಸಮಗ್ರಸಂಪದಃ ।**
**ಶುಭೈಃ ಶರೀರಾವಯವೈರ್ದಿನೇದಿನೇ ॥**
**ಪುಪೋಷ ವೃದ್ಧಿಂ ಹರಿದಶ್ವದೀಧಿತೇಃ ।**
**ಅನುಪ್ರವೇಶಾದಿವ ಬಾಲಚಂದ್ರಮಾಃ ॥ ೨೨ ॥**

ಸೂರ್ಯನ ರಶ್ಮಿಗಳಿಂದ ಬಾಲಚಂದ್ರಮನು ದಿನದಿಂದ ದಿನಕ್ಕೆ ಪ್ರವರ್ಧಮಾನನಾಗಿ ಬೆಳೆಯುವಂತೆ ಆ ಬಾಲಕನ ಅಂಗಾಂಗಗಳು ಸರ್ವಾಂಗೀಣ ಬೆಳವಣಿಗೆಯನ್ನು (ಪೂರ್ಣತೆ

ಯನ್ನು) ಪಡೆದುವು. ಸಮಸ್ತಸಂಪದಗಳಿಗೆ (ಸಮಗ್ರಸಂಪದಃ) ಅಣಿಮಾದಿ ಅಷ್ಟೈಶ್ವರ್ಯ ಗಳಿಗೆ ಅಧಿಪತಿಯಾದ ಆ ನರೇಂದ್ರನ (ಮಾನವೇಂದ್ರನ) ಮೇಲ್ವಿಚಾರದಲ್ಲಿ ಆ ಬಾಲಕನು ಶುಕ್ಲಪಕ್ಷದ (ಪೌರ್ಣಿಮಿಯ) ಚಂದ್ರಮನಂತೆ ಪೂರ್ಣತೇಜಃಪುಂಜನಾಗಿ ಅಭಿವರ್ಧಿಸಿ ದನು. ಪೂರ್ಣಚಂದ್ರತೇಜಸ್ವಿಯಾಗಿ ದಿನದಿನಕೆ ಬೆಳೆಬೆಳೆದು ನೋಡುವ ಕಂಗಳ ಭಾಗ್ಯ ನಿಧಿ(ತವನಿಧಿ)ಯೆನಿಸಿದನು. ದಿನದಿನಕೆ ಬೆಳೆಬೆಳೆಯುತಿರ್ದನವನಂತು.

ಅನ್ವಯ :—ಸ ಸಮಗ್ರಸಂಪದಃ ಪಿತುಃ ಪ್ರಯತ್ನಾತ್ ಶುಭ್ರೈಃ ಶರೀರಾವಯವೈ ಹರಿದಶ್ವದೀಧಿತೇಃ ಅನುಪ್ರವೇಶಾತ್ ಬಾಲಚಂದ್ರಮಾಃ ಇವ ವೃದ್ಧಿಂ ಪುಪೋಷ ॥

ಸಮಗ್ರಸಂಪದಃ = ಪೂರ್ಣಲಕ್ಷ್ಮೀಕಸ್ಯ — ಪ್ರಯತ್ನಾಚ್ಛುಭ್ರೈರ್ಮನೋಹರೈಃ — ಹರಿದಶ್ವದೀಧಿತೇಃ = ಸೂರ್ಯಸ್ಯ ರಶ್ಮೇಃ—ದಿನೇ ದಿನೇ = ಪ್ರತಿದಿನಮ್—ವೃದ್ಧಿಂ ಪುಪೋಷ ॥

**23. ಉಮಾವೃಷಾಂಕೌ ಶರಜನ್ಮನಾ ಯಥಾ ।**
**ಯಥಾ ಜಯಂತೇನ ಶಚೀಪುರಂದರೌ ॥**
**ತಥಾ ನೃಪಃ ಸಾ ಚ ಸುತೇನ ಮಾಗಧೀ ।**
**ನನಂದತುಃ ತತ್ ಸದೃಶೇನ ತತ್ಸಮೌ** ॥ ೨೩ ॥

ನಂದೀಶ್ವರನ (ಬಸವೇಶ್ವರನ, ಬಸವರಾಜನ, ಬಸವಣ್ಣನ) ಮೇಲೇರಿ ಕುಳಿತ ಶಿವಪಾರ್ವತಿಯರ ತೊಡೆಯ ಮೇಲೆ ಕುಳಿತು (ಉಮಾವೃಷಾಂಕೌ) ಆ ಮಾತಾಪಿತರಿಗೆ ಸಂತಸಕೊಡುವ ಕಾರ್ತಿಕೇಯ ಸ್ವಾಮಿಯಂತೆ, ಚಂದ್ರನನ್ನು ಸೂರ್ಯಪ್ರಕಾಶವು ಪ್ರವೇಶಿಸಿ ಸ್ವಲ್ಪಸ್ವಲ್ಪವೇ ಅಭಿವರ್ಧಿಸುವಂತೆ ಆ ರಘುಕುಮಾರನು ತನ್ನ ಮಾತಾಪಿತೃ ಗಳಿಗೆ ಅತೀವ ಸಂತಸವಿತ್ತನು. ಪರ್ವತದ ರೆಕ್ಕೆಗಳನ್ನು ತನ್ನ ವಜ್ರಾಯುಧದಿಂದ ಪುಡಿಗೈವ ಪುರಂದರನು, ತನ್ನ ಸತಿಯಾದ ಶಚೀದೇವಿಯೊಂದಿಗೆ ಪುತ್ರನಾದ ಜಯಂತ ನಿಂದ ಪರಿಶೋಭಿಸುವಂತೆ (ವಿಜೃಂಭಿಸು) ಅವರಿಗೆ ಸಮನಾಗಿ ಭೂತಳದಲ್ಲಿ ಮಾಗಧ ಪುತ್ರಿಯೊಡನೆ ಕೂಡಿರುವ ದಿಲೀಪನರಸಾರ್ವಭೌಮನು ತನ್ನ ಸುಪುತ್ರನೊಂದಿಗೆ ಅವರಿಗೆ ಆ ಪುರಾಣಪುರುಷರಿಗೆ ಸಮನಾಗಿ, ಯಶೋವಿರಾಜಿತನಾಗಿ, ಚೇತೋವಿಹಾರಿಯಾಗಿ, ಅಮಿತೋತ್ಸಾಹದಿಂದ ಶೋಭಿಸಿದನು. ಆ ಎಣೆಯ ಅಣಾಂಗನಿಂದೆಸೆದರು ಸಮಂತು.

ಅನ್ವಯ :—ಯಥಾ ಉಮಾವೃಷಾಂಕೌ ಶರಜನ್ಮನಾ ಯಥಾ ಶಚೀಪುರಂದರೌ ಜಯಂತೇನ ತಥಾ ತತ್ಸಮೌ ನೃಪಃ ಸಾ ಮಾಗಧೀ ಚ ತತ್ಸದೃಶೇನ ಸುತೇನ ನನಂದತುಃ ॥

ಉಮಾವೃಷಾಂಕೌ = ಪಾರ್ವತೀವೃಷಭಧ್ವಜೌ — ಶರಜನ್ಮನಾ = ಕಾರ್ತಿಕೇಯೇನ— "ಕಾರ್ತಿಕೇಯೋ ಮಹಾಸೇನಃ ಶರಜನ್ಮಾ ಷಡಾನನಃ" ಇತ್ಯಮರಃ—ಶಚೀಪುರಂದರೌ ಜಯಂತೇನ ಜಯಂತಾಖ್ಯೇನ ಸುತೇನ—"ಜಯಂತಃ ಪಾಕಶಾಸನಿಃ" ಇತ್ಯಮರಃ— ತಥಾ ತತ್ ಸಮೌ = ತಾಭ್ಯಾಮುಭೌ ವೃಷಾಂಕಾಭ್ಯಾಂ ಶಚೀಪುರಂದರಾಭ್ಯಾಂ ಚ ಸಮೌ ಸಮಾನೌ—ಸಾ ಮಾಗಧೀನೃಪಶ್ಚ ತತ್ ಸದೃಶೇನ = ತಾಭ್ಯಾಂ ಕುಮಾರಜಯಂತಾಭ್ಯಾಂ ಸದೃಶೇನ—ರೂಪಸೌಂದರ್ಯದಲ್ಲಿ ಪಾಕಶಾಸನನ ಪುತ್ರನಾದ ಜಯಂತನಿಗೆ ಸಾಟಿ ಯಾಗಿದ್ದನು.

ಶರಜನ್ಮನಾ = ಶರಜನ್ಮಾ, ತತ್ ಸಮೌ ನೃಪಃ = ಅವರಿಗೆ ಸಮಾನನಾಗಿದ್ದನು.

24. ರಥಾಂಗನಾಮ್ನೋರಿವ ಭಾವಬಂಧನಂ ।
ಬಭೂವ ಯತ್ಪ್ರೇಮಪರಸ್ಪರಾಶ್ರಯಮ್ ॥
ವಿಭಕ್ತಮಪ್ಯೇಕಸುತೇನ ತತ್ತಯೋಃ ।
ಪರಸ್ಪರಸ್ಯೋಪರಿ ಪರ್ಯಚೀಯತ ॥ ೨೪ ॥

ಚಕ್ರವಾಕಪಕ್ಷಿಗಳಂತೆ ಅವರೀರ್ವರ (ಆ ಸತಿಪತಿಯರ) ಪ್ರೇಮವು ಪರಸ್ಪರ ಆಶ್ರಿತವಾಗಿತ್ತು. ಇದೀಗ ಪುತ್ರನ ಜನನದಿಂದ ಅನುರಾಗವು ಇನ್ನೂ ಹೆಚ್ಚಿತು. ಅವರೊಲುಮೆ ಪಡೆದ ಪುತ್ರನಿಗೆ ಈಗ ಅವರ ಪ್ರೀತಿ, ಅನುರಾಗವು ಹಂಚಿಹೋದರೂ ಆ ಸತಿಪತಿಯರ ರಾಗ, ಮೋಹ, ಅನ್ಯೋನ್ಯಪ್ರೀತಿ, ಅಮರಪ್ರೇಮವು ಇನ್ನೂ ಅಧಿಕಗೊಂಡಿತು, ಸ್ಥಿರವಾಗಿ ನೆಲೆಗೊಂಡಿತು (ಯತ್ಪ್ರೇಮಪರಸ್ಪರಾಶ್ರಯಮ್). ಜಕ್ಕವಕ್ಕಿಗಳಂತೆ ಮನವ ನೆಳಿದೆಸೆವ, ಅವರೊಳು.

ಅನ್ವಯ :—ರಥಾಂಗನಾಮ್ನೋರಿವ ತಯೋಃ ಭಾವಬಂಧನಂ ಪರಸ್ಪರಾಶ್ರಯಂ ಯತ್ಪ್ರೇಮ ಬಭೂವ ತತ್ ಏಕಸುತೇನ ವಿಭಕ್ತಮಪಿ ಪರಸ್ಪರಸ್ಯೋಪರಿ ಪರ್ಯಚೀಯತ ॥

ರಥಾಂಗನಾಮ್ನೋ=ಚಕ್ರವಾಕ (ಹೃದಯಾಕರ್ಷಕದಾಂಪತ್ಯಪ್ರೇಮ) (ಭಾವಬಂಧನ) (ಬಾಹುಬಂಧನ), ರಥಾಂಗನಾಮಾ ಚ ರಥಾಂಗನಾಮಾ ಚ ರಥಾಂಗನಾಮಾನೌ ಚಕ್ರವಾಕೌ—ತಯೋರಿವ ತಯೋರ್ದಂಪತ್ಯೋರ್ಭಾವಬಂಧನಂ ಹೃದಯಾಕರ್ಷಕಂ ಪರಸ್ಪರಾಶ್ರಯಮನ್ಯೋನ್ಯವಿಷಯಂ—"ಏಕೇ ಮುಖ್ಯಾನ್ಯಕೇವಲಾಃ" ಇತ್ಯಮರಃ—ರಥಾಂಗನಾಮಾನ್ = ಚಕ್ರವಾಕ = ಹೃದಯಾಕರ್ಷಕ ಪ್ರೇಮ.

25. ಉವಾಚ ಧಾತ್ರ್ಯಾ ಪ್ರಥಮೋದಿತಂ ವಚೋ ।
ಯಯೌ ತದೀಯಾಮವಲಂಬ್ಯ ಚಾಂಗುಲಿಮ್ ॥
ಅಭೂಚ್ಚ ನಮ್ರಃ ಪ್ರಣಿಪಾತಶಿಕ್ಷಯಾ ॥
ಪಿತುರ್ಮುದಂ ತೇನ ತತಾನ ಸೋಽರ್ಭಕಃ ॥ ೨೫ ॥

ದಾದಿಯು ರಾಜಕುಮಾರನಿಗೆ ಮಾತು, ನುಡಿಗಳನ್ನು ಒಂದೊಂದಾಗಿ ಕಲಿಸಿದಳು. ಆ ಸುಕುಮಾರನು ಒಂದೊಂದೇ ಅಕ್ಷರಗಳನ್ನು ಉಚ್ಚರಿಸುತ್ತಾ ಮನೋಜ್ಞವಾಗಿ ಮಾತನಾಡುತ್ತಾ ತಾಯಿತಂದೆಗಳಿಗೆ ಹರ್ಷದ ಹೊನಲನ್ನು ತಂದಿತ್ತನು. ದಾದಿಯು ಕೈಯನ್ನು ಹಿಡಿದು ನಡೆಕಲಿಸಲು ಆರಂಭಿಸಿದಳು. ಆ ಅರ್ಭಕನು ನಡೆಕಲಿಯಲು ಆರಂಭಿಸಿದನು. ಹೀಗೆ ಆರಂಭಿಸಿದಾಗ ಮಗುವು ಮೊದಲು ಶಿರಬಾಗಿ (ತಲೆಬಾಗಿ) ಹಿರಿಯರಿಗೆ ವಂದನೆಯನ್ನು ಸಲ್ಲಿಸಿ ಆ ಬಳಿಕವೇ ಪುಟ್ಟಪುಟ್ಟ ಹೆಜ್ಜೆಯಿಟ್ಟು ನಡೆಕಲಿಯುವಂತೆ ಅಭ್ಯಾಸವಾಯಿತು. ಅವಳ ಕೈಯನು ಹಿಡಿದು ನಡೆಗಲಿತನವನು. ಕ್ರಮೇಣ ಆ ಮಗುವು ದಿಟ್ಟಹೆಜ್ಜೆಗಳನ್ನಿಟ್ಟು ಅಂತಃಪುರದಲ್ಲಿ ಓತಪ್ರೋತವಾಗಿ ಓಡಾಡಿತು.

ಸೋಽರ್ಭಕಃ ಶಿಶುಃ—"ಪೋತಃ ಪಾಕೋಽರ್ಭಕೋ ಡಿಂಭಃ ಪೃಥುಕಃ ಶಾಬಕಃ

ಶಿಶುಃ'' ಇತ್ಯಮರಃ—ಧಾತ್ರ್ಯೋಪಪಾಠಾತ್—ಧಾತ್ರೀಜನಸ್ಯಾಮಲಕೀವಸಂವತ್ಯೋಪಪಾ ತ್ರಷಂ ಇತಿ ವಿಶ್ವಃ—ಪ್ರಣಿಪಾತಸ್ಯ= ಶಿಕ್ಷಯೋಪದೇಶೇನ ॥

**26. ತಮಂಕಮಾರೋಪ್ಯ ಶರೀರಯೋಗಜೈಃ ।**
**ಸುಖೈರ್ನಿಷಿಂಚಂ ತಮಿವಾಮೃತಂ ತ್ವಚಿ ॥**
**ಉಪಾಂತಸಮ್ಮೀಲಿತಲೋಚನೋ ನೃಪಃ ।**
**ಚಿರಾತ್ ಸುತಸ್ಪರ್ಶರಸಜ್ಞತಾಂ ಯಯೌ ॥ ೨೬ ॥**

ಆ ಭೂಪಾಲನು ಮಗನು ತನ್ನ ತೊಡೆಯ ಮೇಲೇರಿ ಕುಳಿತಾಗ ಅಮೃತದ ಮಳೆಯನ್ನು ತನ್ನ ಮಗನು ಸುರಿಸಿದಂತೆ ಸ್ಪರ್ಶಸುಖವನ್ನು ಹೊಂದಿದನು. ಆ ಶಿಶುವಿನ ದೇಹದಲ್ಲಿ ಅಮೃತದ ಮಳೆಗರೆಯುವ ಶಕ್ತಿಯನ್ನು ಆ ಪರಂತಪನು ಕಂಡನು. ಸುತಸೋಂಕಿನೊಳಾದ ಸ್ಪರ್ಶಸುಖಕ್ಕೆ ಸೋತು ಆ ನೃಪತಿಯು ತನ್ನ ಪುತ್ರನನ್ನು ಬಿಗಿಯಾಗಿ ಅಪ್ಪಿ ಮುದ್ದಾಡಿದನು. ಕೊನೆಗಣ್ಣು ಸಮುಚ್ಚಿತೋಲಿಯುವನು ಭರದೆ ಮುದ್ದಾಡಿ ಮೈಮರೆತನು. ಸ್ಪರ್ಶಸುಖಸಾಗರದ ರಸಜ್ಞತೆಯನ್ನು ಅನುಭವಿಸಿ ಧನ್ಯನಾದನು. ಸಂಸಾರವು ಸುಖಸಾಗರವೆನಿಸಿತು. ಅಂತಹ ತನುಯೋಗಸುಖದೆ ಮುಳುಗಿದನು. ಮುಳುಗಿ ತೇಂಕಾಡಿದನು ಆ ರಸಜ್ಞನು (ಆ ರಸನುಂಡಿಯು).

ಅನ್ವಯ :—ಶರೀರಯೋಗಜೈಃ ಸುಖೈಸ್ತ್ವಚಿ ಅಮೃತನಿಷೇಕ್ಷ್ವ ತಮ್ ಇವ ತಮ್ ಅಂಕಮಾರೋಪ್ಯ ಉಪಾಂತಸಮ್ಮೀಲಿತಲೋಚನಃ ನೃಪಃ ಚಿರಾತ್ ಸುತಸ್ಪರ್ಶ ರಸಜ್ಞತಾಂ ಯಯೌ ॥

ರಸಃಸ್ವಾದಃ = ರಸಜ್ಞತಾಂ. ತನ್ನ ಇಂದ್ರಿಯಂಗಳಿಗೆ ಅಮೃತಸುಖದ ಆನಂದವನ್ನು ಕೊಡುವ ಪುತ್ರನನ್ನು ಪಡೆದನು.

**27. ಅಮಂಸ್ತ ಚಾನೇನ ಪರಾರ್ಧ್ಯಜನ್ಮನಾ ।**
**ಸ್ಥಿತೇರಭೇತ್ತಾ ಸ್ಥಿತಿಮಂತಮನ್ವಯಮ್ ॥**
**ಸ್ವಮೂರ್ತಿಭೇದೇನ ಗುಣಾಗ್ರ್ಯವರ್ತಿನಾ ।**
**ಪತಿಃ ಪ್ರಜಾನಾಮಿವ ಸರ್ಗಮಾತ್ಮನಃ ॥ ೨೭ ॥**

ಸದ್ಗುಣಗಳ ನಿಜಮೂರ್ತಿಯಾದ (ಸಾಕಾರಮೂರ್ತಿಯಾದ) ಅಜನು ತನ್ನ ಪ್ರತಿಬಿಂಬದಂತಿರುವ (ಬಿಂಬ, ಪ್ರತಿಬಿಂಬ—ವಸ್ತು, ನೆಳಲು (ನೆರಳು) (ಛಾಯೆ) ಆತ್ಮ ಪುತ್ರನಲ್ಲಿ ತನ್ನ ಪ್ರಖ್ಯಾತವಾದ ರವಿವಂಶವು (ಖದ್ಯೋತ, ಭಾನು) ಸ್ಥಿರವಾಗಿ ಇಳೆಯಲ್ಲಿ ಮುಂದುವರಿಯುವುದೆಂಬ ಆತ್ಮವಿಶ್ವಾಸವನ್ನು ತಳೆದನು. ಪರಮಾತ್ಮನಾದ, ಸ್ವಯಂಭುವಾದ ಮಹಾವಿಷ್ಣುವು ಪೃಥ್ವಿಯಲ್ಲಿ ಅವತರಿಸಿದಾಗ ತನ್ನ ಎಲ್ಲಾ ಗುಣಗಳಿಂದ (ಅನಂತ ಕಲ್ಯಾಣನಿಧಿಯೋ, ನಿಧಿಯೋ) ತನ್ನ ಅಂಶದಿಂದ ಜನಿಸಿದ ಪುತ್ರನು ಸದ್ಗುಣಗಳ ನಿಧಿಯಾಗಿದ್ದನು (ಮೇರುಸದೃಶ). ತನ್ನ ಎಲ್ಲಾ ಗುಣಗಳನ್ನು ವಿಭಜಿಸಿ ಬಂದಂತೆ, ಅಚ್ಚೊತ್ತಿದಂತೆ (ಪಡಿಯಚ್ಚು) ಇರುವುದನ್ನು ಕಂಡು ಸಂತೃಪ್ತಿಗೊಂಡನು.

ಅನ್ವಯಃ:—ಸ್ಥಿತೇರಭೇತ್ತಾ ಪರಾರ್ಧ್ಯಜನ್ಮನಾ ಅನೇನ ಅನ್ವಂ ಪ್ರಜಾನಾಂ ಪತಿಃ ಗುಣಾಗ್ರ್ಯವರ್ತಿನಾ ಸ್ವಮೂರ್ತಿಭೇದೇನ ಆತ್ಮನಃ ಸರ್ಗಮಿವ ಸ್ಥಿತಿಮಂತಮ್ ಅಮಂಸ್ತ ॥

ಸ್ಥಿತೇರಭೇತ್ತಾ = ಮರ್ಯಾದಾಪಾಲಕಃ ಸ ನೃಪಃ—ಗುಣಾಃ ಸತ್ವಾದಯಃ—ತೇನ ಸ್ವಸ್ಯ ಮೂರ್ತಿಭೇದೇನಾವತಾರವಿಶೇಷೇಣ ವಿಷ್ಣುನಾಽಽತ್ಮನಃ ಸರ್ಗಂ ಸೃಷ್ಟಿಮಿವ—ಸ್ಥಿತಿಮಂತಂ = ಪ್ರತಿಷ್ಠಾವಂತ—ರಘುಣಾ ಅನ್ವಯಂ = ವಂಶಮ್ ॥

**28. ಸ ವೃತ್ತಚೂಲಶ್ಚಲಕಾಕಪಕ್ಷಕೈಃ ।**
**ಅಮಾತ್ಯಪುತ್ರೈಃ ಸವಯೋಭಿರನ್ವಿತಃ ॥**
**ಲಿಪೇರ್ಯಥಾವದ್ಗ್ರಹಣೇನ ವಾಙ್ಮಯಂ ।**
**ನದೀಮುಖೇನೇವ ಸಮುದ್ರಮಾವಿಶತ್ ॥ ೨೮ ॥**

ಆ ಮಾನವಾಧೀಶನು ಮಗುವು ಮೂರನೆಯ ವರ್ಷಕ್ಕೆ ಕಾಲಿಟ್ಟಾಗ ಚೌಲಾದಿ ಚೂಡಾಕರ್ಮಗಳನ್ನು (ಜುಟ್ಟು) ಮುಗಿಸಿದನು. ಐದನೆಯ ವರ್ಷವು ಪದಾರ್ಪಣ ಮಾಡಿದಾಗ (ಅಡಿಯಿಟ್ಟಾಗ) ಕಾಕಪಕ್ಷದಂತೆ ಜುಟ್ಟನ್ನಿಟ್ಟು (ಕಾಕಪಕ್ಷಧರ) ವಿದ್ಯಾ ಗುರುಗಳಿಂದ ವಿದ್ಯಾರಂಭವ ಮಾಡಿಸಿದನು ಆ ರಾಜಮೌಳಿ. ತನ್ನ ಜೊತೆಯ (ಸಹಪಾಠಿಗಳಾದ) ಮಂತ್ರೀಪುತ್ರರೊಂದಿಗೆ ಸೇರಿ ಅಕ್ಷರಾಭ್ಯಾಸದೊಂದಿಗೆ ವಿದ್ಯೆಯನ್ನು ಪ್ರಾರಂಭಿಸಿ, ವರ್ಣಾಕ್ಷರಗಳನ್ನು ಕಲಿಯುತ್ತಾ ಸಮಸ್ತವಾಙ್ಮಯವನ್ನೇ ರಘುವು ಸೇರಿದನು (ತಿರುವಿ ಹಾಕಿದನು). ಹೇಗೆ ಸಣ್ಣಸಣ್ಣ ತೊರೆಗಳು ಒಂದೊಂದಾಗಿ ಸೇರಿ ಕೊನೆಗೆ ವಿಶಾಲವಾದ ನದಿಯಾಗಿ ಹರಿದು ಕಟ್ಟಕಡೆಗೆ ಸಾಗರವನ್ನು ಸೇರುವಂತೆ ರಘುವು ವಿದ್ಯೆಯ ಸಾಗರವನ್ನೇ ಪ್ರವೇಶಿಸಿ ವಿದ್ಯಾಸಾಗರನೆನಿಸಿದನು. (ವರ್ಣಗಳನೋರಂತೆ ಕಲಿತು ವಾಙ್ಮಯವ, ಸೇರಿದನು ಸೇರುವೊಲು ತೊರೆಯಿನಂಬುಧಿಯು) (ವಿದ್ಯಾಪಾರಾವಾರ, ವಿದ್ಯಾವಾರಿನಿಧಿ, ವಿದ್ಯಾಭೂಷಣ, ವಿದ್ಯಾಮೇರು) (ನದೀಮುಖೇನೇವ ಸಮುದ್ರಮಾವಿಶತ್).

ಅನ್ವಯಃ:—ವೃತ್ತಚೂಲಃ ಸ ಸವಯೋಭಿಃ ಚಲಕಾಕಪಕ್ಷಕೈಃ ಅಮಾತ್ಯಪುತ್ರೈಃ ಅನ್ವಿತಃ ಲಿಪೇರ್ಯಥಾವದ್ ಗ್ರಹಣೇನ ನದೀಮುಖೇನ ಸಮುದ್ರಮಿವ ವಾಙ್ಮಯಮ್ ಆವಿಶತ್ ॥

ಯಥಾವತ್ ಗ್ರಹಣೇನ = ಯಥಾ ಅರ್ಹತಿ ಇತಿ ಯಥಾವತ್ । "ಚೂಡಾಕರ್ಮ ದ್ವಿಜಾತೀನಾಂ ಸರ್ವೇಷಾಮೇವ ಧರ್ಮತಃ—ಪ್ರಥಮೇ ಅಬ್ದೇ ತೃತೀಯೇ ವಾ ಕರ್ತವ್ಯಂ ಶ್ರುತಿಚೋದನಾತ್" ಇತಿ ಮನುಸ್ಮೃತಿಃ—"ಪ್ರಾಪ್ತೇ ತು ಪಂಚಮೇ ವರ್ಷೇ ವಿದ್ಯಾರಂಭಂ ಚಕಾರಯೇತ್"—ಚಲಕಾಕಪಕ್ಷಕೈಶ್ಚಂಚಲಶಿಖಂಡಕೈಃ—"ಬಾಲಾನಾಂ ತು ಶಿಖಾ ಪ್ರೋಕ್ತಾ ಕಾಕಪಕ್ಷಃ ಶಿಖಂಡಕಃ"—ಇತಿ ಹಲಾಯುಧಃ—ಸವಯೋಭಿಃ = ಸ್ನಿಗ್ಧೈಃ—"ವಯಸ್ಯಃ ಸ್ನಿಗ್ಧಃ ಸವಯಾಃ" ಇತ್ಯಮರಃ ॥

ವಾಙ್ಮಯಂ = ಶಬ್ದಜಾತಮ್—ನದ್ಯಾಮುಖಂ = ದ್ವಾರಂ—"ಮುಖಂ ತು ವದನೇ ಮುಖ್ಯಾರಂಭೇ ದ್ವಾರಾಭ್ಯುಪಾಯಯೋಃ" ಇತಿ ಯಾದವಃ—ತೇನ ಕಶ್ಚಿನ್ಮಕರಾದಿಃ

ಸಮುದ್ರಮಿವ—ಅವಿಶತ್ ಪ್ರವಿಷ್ಟಃ = ಜ್ಞಾತವಾನಿತ್ಯರ್ಥಃ—ವಾಙ್ಮಯಮ್ = ಶಬ್ದ ಶಾಸ್ತ್ರಮ್—ಕಾಕಪಕ್ಷ = ಕಾಕಪಕ್ಷದಂತೆ ಜುಟ್ಟು.

**29. ಅಥೋಪನೀತಂ ವಿಧಿವದ್ವಿಪಶ್ಚಿತೋ ।**
**ವಿನಿನ್ಯುರೇನಂ ಗುರವೋ ಗುರುಪ್ರಿಯಮ್ ॥**
**ಅವಂಧ್ಯಯತ್ನಾಶ್ಚ ಬಭೂವುರತ್ರ ತೇ ।**
**ಕ್ರಿಯಾ ಹಿ ವಸ್ತೂಪಹಿತಾ ಪ್ರಸೀದತಿ ॥ ೨೯ ॥**

ಆ ಕುಮಾರನಿಗೆ ಬ್ರಹ್ಮೋಪದೇಶವನ್ನು ಉಪದೇಶಿಸಿ ಪುರೋಹಿತರಿಂದ ಉಪನಯನವನ್ನು ಮಾಡಿಸಿ ವಿದ್ಯೆಯನ್ನು ಕಲಿಸಿದನು. ರಘುವು ಹಿರಿಯರನ್ನು, ಗುರುಜನರನ್ನು ಅತ್ಯಂತ ಭಕ್ತಿಯಿಂದ, ಆದರದಿಂದ, ಪ್ರೀತಿವಿಶ್ವಾಸದಿಂದ ಕಾಣುತ್ತಿದ್ದನು. ಅಂತಹ ಗುರುಜನಪ್ರೀತನನ್ನು ಬಂಧುಜನರು, ವಿದ್ಯಾಗುರುಗಳು, ಋಷಿಗಳು, ಪುರೋಹಿತರು, ಶಾಸ್ತ್ರಜ್ಞರು, ಸಿದ್ಧಾಂತಿಗಳು, ತತ್ತ್ವಶಾಸ್ತ್ರಜ್ಞರು ಕಷ್ಟಪಟ್ಟು ಹೇಳಿಕೊಟ್ಟ ವಿದ್ಯೆಯು ಸಾರ್ಥಕವಾಯಿತು. ಆ ಪ್ರಾಚಾರ್ಯರು, ವೇದವೇದ್ಯರು ತಮ್ಮ ಶ್ರಮವು ಸಾರ್ಥಕವಾಯಿತೆಂದು ಹೇಳಿದರು. ಏಕೆಂದರೆ ಯೋಗ್ಯನಾದ ಶಿಷ್ಯನಿಂದ ಶಿಕ್ಷಣವು ಭೂಷಣಪ್ರಾಯವಾಗುವುದಲ್ಲವೆ, ಲೋಕದಲ್ಲಿ (ಸಫಲವಲ್ತೆ, ಸಚ್ಛಿಷ್ಯಗೆರೆದ ಶಿಕ್ಷಣವು) (ಕ್ರಿಯಾ= ಶಿಕ್ಷಾ) ಅಲಂಕಾರ : ಅರ್ಥಾಂತರನ್ಯಾಸ ಅಲಂಕಾರ.

ಅನ್ವಯಃ:—ಅಥ ವಿಧಿವದುಪನೀತಂ ಗುರುಪ್ರಿಯಮ್ ಏನಂ ವಿಪಶ್ಚಿತಃ ಗುರವಃ ವಿನಿನ್ಯುಃ। ಅತ್ರ ಚ ತೇ ಅವಂಧ್ಯಯತ್ನಾಃ ಬಭೂವುಃ । ಕ್ರಿಯಾ ಹಿ ವಸ್ತೂಪಹಿತಾ ಪ್ರಸೀದತಿ ॥

ಗರ್ಭಾಷ್ಟಮೇಽಬ್ದೇ ಕುರ್ವಂತಿ ಬ್ರಾಹ್ಮಣಸ್ಯೋಪನಾಯನಮ್—"ಗರ್ಭಾದೇಕಾದಶೇ ರಾಜ್ಞೋ ಗರ್ಭಾಚ್ಚ ದ್ವಾದಶೇ ವಿಶಃ" ಇತಿ ಮನುಸ್ಮರಣಾತ್—ವಿಪಶ್ಚಿತೋ= ವಿದ್ವಾಂಸೋ—ಗುರವೋ ವಿನಿನ್ಯುಃ=ಶಿಕ್ಷಿತವಂತಃ—ತಥಾ ಹಿ ಕ್ರಿಯಾಶಿಕ್ಷಾ—"ಕ್ರಿಯಾ ತು ನಿಷ್ಕೃತೌ ಶಿಕ್ಷಾ ಚಿಕಿತ್ಸೋಪಾಯ ಕರ್ಮಸು—" ಇತಿ ಯಾದವಃ—ವಸ್ತುನಿ = ಪಾತ್ರಭೂತ—ಉಪಹಿತಾ=ಪ್ರಯುಕ್ತಾ—ಪ್ರಸೀದತಿ = ಫಲತಿ—"ಕ್ರಿಯಾ ಹಿ ದ್ರವ್ಯಂ ವಿನಯತಿ ನಾದ್ರವ್ಯಮ್" ಇತಿ ಕೌಟಿಲ್ಯಃ—ವಿನಿನ್ಯುಃ = ವಿನಯಂಕರ್ಮಃ = ವಿದ್ಯೆ ಕಲಿಸು—ಅರ್ಥಾಂತರನ್ಯಾಸ ಅಲಂಕಾರ.

**30. ಧಿಯಃ ಸಮಗ್ರೈಃ ಸ ಗುಣೈರುದಾರಧೀಃ ।**
**ಕ್ರಮಾಚ್ಚತಸ್ರಶ್ಚತುರರ್ಣವೋಪಮಾಃ ॥**
**ತತಾರ ವಿದ್ಯಾಃ ಪವನಾತಿಪಾತಿಭಿಃ ।**
**ದಿಶೋ ಹರಿದ್ಭಿಃ ಹರಿತಾಮಿವೇಶ್ವರಃ ॥ ೩೦ ॥**

ಬಹಳ ಬುದ್ಧಿಶಾಲಿಯೂ (ಪ್ರಾಜ್ಞನೂ) ವಿವೇಕಿಯೂ ಆದ ರಘುವು ಮಹತ್ತಾದ ಧೀಃಶಕ್ತಿಯನ್ನು ಪಡೆದಿದ್ದನು. ವಿಶೇಷವಾದ ಧಾರಣಶಕ್ತಿ (ಮೇಧಾಶಕ್ತಿ), ಶ್ರವಣಶಕ್ತಿ, ವಾಕ್‌ಶಕ್ತಿ, ಆತ್ಮಶಕ್ತಿ ಮೊದಲಾದ ಅಂತಃಶಕ್ತಿಗಳನ್ನು ಪಡೆದು ಅತ್ಯಂತ ಪ್ರತಿಭಾಶಾಲಿ

ಯಾದ ಸಚ್ಛಿಷ್ಯನೆನಿಸಿದನು. ಇಂತಹ ನವುರಾದ, ದೃಢವಾದ ಮಾನಸಿಕ ಗುಣಗಳನ್ನು (ಚಿತ್ತವೃತ್ತಿಗಳನ್ನು) ಪಡೆದು ನಾಲ್ಕು ಕಡಲಂತಿರುವ ನಾಲ್ಕು ವಿದ್ಯೆಗಳನ್ನು ಸೂರ್ಯ ದೇವನು, ವಾಯುವೇಗವನ್ನು ಮೀರುವ ವೇಗಶಕ್ತಿಯುಳ್ಳ ತನ್ನ ಅಶ್ವಗಳಿಂದ ಸಮಸ್ತ ವಿಶ್ವದ ನಾಲ್ಕು ದಿಕ್ಕುಗಳನ್ನು (ಎಲ್ಲೆಗಳನ್ನು) ದಾಂಟುವಂತೆ ದಾಟಿ ವಿದ್ಯಾಪಾರಗನೆನಿಸಿ ಮೆರೆದನು (ನಾಲ್ಕು ಕಡಲಂತಿರುವ ನಾಲ್ಬಿಜ್ಜೆಗಳನು) (ನಾಲ್ದೆಸೆಯ ದಾಂಟುವೊಲು ದಾಂಟಿದನು ಸುತನು).

ಅನ್ವಯ :—ಉದಾರಧೀಃ ಸ ಸಮಗ್ರೈಃ ಧಿಯಃ ಗುಣೈಃ ಚತುರರ್ಣವೋಪಮಾಃ ಚತಸ್ರಃವಿದ್ಯಾಃ ಪವನಾತಿಪಾತಿಭಿಃ ಹರಿದ್ಭಿಃ ಹರಿತಾಮ್‌ಈಶ್ವರಃ (ಚತಸ್ರಃ) ದಿಶಃ ಇವಃ ಕ್ರಮಾತ್ ತತಾರ ॥

ಚತುರರ್ಣವೋಪಮಾ—ಚತಸ್ರಃ ವಿದ್ಯಾಃ ॥ ಅನ್ವೀಕ್ಷಿಕೀ = ತ್ರಯೀ (ಮೂರು ವೇದಗಳು), ವಾರ್ತಾ (ಕೃಷಿ, ವಾಣಿಜ್ಯ, ವೈದ್ಯ ಇತ್ಯಾದಿ, ದಂಡನೀತಿ.) ಹರಿದ್ಭಿಃ = ಸೂರ್ಯನ ಏಳು ಕುದುರೆಗಳು—ಹರಿತಾಮ್ ಈಶ್ವರಃ = ಸೂರ್ಯದೇವ.

ಧಿಯಃ ಇತಿ—ಅತ್ರ ಕಾಮಂದಕಃ—ಶುಶ್ರೂಷಾ, ಶ್ರವಣಂ ಚೈವ ಧಾರಣಂ ತಥಾ—ಊಹಾಪೋಹೋಽರ್ಥವಿಜ್ಞಾನಂ ತತ್ತ್ವಜ್ಞಾನಂ ಚ ಧೀಗುಣಾಃ ॥ ಇತಿ—ಉದಾರಧೀಃ= ಉತ್ಕೃಷ್ಟಬುದ್ಧಿಃ—ಸಮಗ್ರೈರ್ಧಿಯೋ ಗುಣೈಃ—ಚತ್ವಾರೋಽರ್ಣವಾ ಉಪಮಾಃ ಯಾಸಾಂ ತಾಶ್ಚತುರರ್ಣವೋಪಮಾಃ—ಚತಸ್ರೋ ವಿದ್ಯಾಃ—ಹರಿತಾಂ=ದಿಶಾಮೀಶ್ವರಃ = ಸೂರ್ಯಃ—ಪವನಾತಿಭಿರ್ಹರಿದ್ಭಿರ್ನಿಜಾಶ್ವಃ—"ಹರಿತ್‌ಕುಕುಭಿವರ್ಣೇ ಚ ತೃಣವಾಜಿ ವಿಶೇಷಯೋಃ" ಇತಿ ವಿಶ್ವಃ—ಚತಸ್ರೋ ದಿಶಾ ಇವ—ಚತುರಾರ್ಣವೋಪಮತ್ವಂ ದಿಶಾಮಪಿ ದೃಷ್ಟವ್ಯಮ್ ॥

**31. ತ್ವಚಂ ಸಮೇಧ್ಯಾಂ ಪರಿಧಾಯ ರೌರವೀಂ ।**
**ಅಶಿಕ್ಷತಾಸ್ತ್ರಂ ಪಿತುರೇವ ಮಂತ್ರವತ್ ॥**
**ನ ಕೇವಲಂ ತದ್ಗುರುರೇಕಪಾರ್ಥಿವಃ ।**
**ಕ್ಷಿತಾವಭೂದೇಕಧನುರ್ಧರೋಽಪಿ ಸಃ ॥ ೩೧ ॥**

ರಘುವು ಶುದ್ಧವಾದ, ಪರಮಪಾವನವಾದ, ಅತ್ಯಂತಶ್ರೇಷ್ಠವಾದ ಕೃಷ್ಣಾಜಿನವನ್ನು ಹೊದೆದುಕೊಂಡು ತನ್ನ ತಂದೆಯಿಂದ ಧನುರ್ವೇದವನ್ನು ಕಲಿತುಕೊಂಡನು. ಸಮಸ್ತ ಮಂತ್ರಾಸ್ತ್ರಗಳಲ್ಲಿ ನಿಷ್ಣಾತನಾದ, ಧನುರ್ವೇದಪಾರಂಗತನಾದ ಧನುರ್ಧರನಾದನು. ಅವನ ತಂದೆಯು ನೃಪನು ಮಾತ್ರವಲ್ಲ ಜಗದೇಕಧನುರ್ಧರನಾದ (ಏಕೈಕ ಧನ್ವಿಯು ಜಗದೊಳವನಹುದು) ವಿದ್ಯಾಗುರುವೂ (ಅಸ್ತ್ರವಿದ್ಯಾಗುರುವೂ) ಹೌದು. ಅಂತಹ ಬಿಲ್ಲೋಜನಿಂದ, ಧನುರ್ವೇದಪಾರಗನಿಂದ ಶಸ್ತ್ರಾಭ್ಯಾಸವನ್ನು ಕಲಿತು ಬಿಲ್ಜಾಣನೆನಿಸಿದನು (ಏಕೈಕಧನ್ವಿಯು ಜಗದೊಳವನಹುದು).

ಅನ್ವಯ :—ಸ ಮೇಧ್ಯಾಂ ರೌರವೀಂ ತ್ವಚಂ ಪರಿಧಾಯ ಮಂತ್ರವತ್ ಅಸ್ತ್ರಂ ಪಿತುರೇವ ಅಶಿಕ್ಷತ । ತದ್ಗುರುಃ ಕೇವಲಂ ಏಕಪಾರ್ಥಿವ ನ ಭೂತ್ (ಕಿಂತು) ಕ್ಷಿತೌ ಏಕಧನುರ್ಧರೋಽಪಿ ಸಃ ಅಭೂತ್ ॥

ತ್ವಚಮಿತಿ—ಸ ರಘುಃ—"ಕಾರ್ಷ್ಣರೌರವಬಾಸ್ತಾನಿ ಚರ್ಮಾಣಿ ಬ್ರಹ್ಮಚಾರಿಣಃ—ವಸೀರನ್ನಾನುಪೂರ್ವ್ಯೇಣ ಶಾಣಕ್ಷೌಮಾದಿಕಾನಿ ಚ" ಇತಿ ಮನುಸ್ಮರಣಾನ್—ಮೇಧ್ಯಾಂ ಶುದ್ಧಾಂ ರೌರವೀಂ ರುರುಸಂಬಂಧಿನೀಮ್—"ರುರುರ್ಮಹಾಕೃಷ್ಣಸಾರಃ" ಇತಿ ಯಾದವಃ—ತ್ವಚಂ = ಚರ್ಮ—ಪರಿಧಾಯ=ವಸಿತ್ವಾ—ಮಂತ್ರವತ್ = ಸಮಂತ್ರಕವತ್—ಪಿತುರೇವೋಪಾಧ್ಯಾಯಾದಶಿಕ್ಷತ್ಯಾಭ್ಯಸ್ತವಾನ್.

32. ಮಹೋಕ್ಷತಾಂ ವತ್ಸತರಃ ಸ್ಪೃಶನ್ನಿವ ।
ದ್ವಿಪೇಂದ್ರಭಾವಂ ಕಲಭಃ ಶ್ರಯನ್ನಿವ ॥
ರಘುಃ ಕ್ರಮಾದ್ಯೌವನಭಿನ್ನಶೈಶವಃ ।
ಪುಪೋಷ ಗಾಂಭೀರ್ಯಮನೋಹರಂ ವಪುಃ ॥ ೩೨ ॥

ಆ ಕುಮಾರನು, ರವಿವಂಶಲಲಾಮನು ಪ್ರವರ್ಧಮಾನನಾಗಿ ಬೆಳೆಯುತ್ತ (ಕಲಭಗಾಂಭೀರ್ಯಮನೋಹರವಪುವೋ) ಇದೀಗ ಶೈಶವವು ಕಳೆಯಿತು. ಎಳೆಯ ಹೋರಿ ಕರುವು ಮುಂದೆ ತಾನಾಗುವ ಹಿರಿದಾದ ಎತ್ತಿನಂತೆ ಅಥವಾ ಆನೆಯ ಮರಿಯು (ಕಲಭ) ಬೆಳೆದು ಮುಂದೆ ತಾನಾಗುವ ದೊಡ್ಡ ಗಂಡಾನೆಯಂತೆ (ಒಂಟಿಸಲಗ, ಮೇರಾನೆಯಂತೆ) ಗಾಂಭೀರ್ಯಮನೋಹರವಾದ ಅಂಗಸೌಷ್ಠವವನ್ನು ಹೊಂದಿ ಬೆಳೆದನು (ಮೇರಾನೆಯಾಗಲಿರುವ ಆನೆಮರಿಯಂತೆ). ಅವನೀಗ ಬಾಲ್ಯವನ್ನು ಕಳೆದು ಯೌವನಕ್ಕೆ ಕಾಲಿಟ್ಟನು, ಎಳೆಹರೆಯದಲ್ಲಿ ಚೆಲುವಾದ ಮೈಸಿರಿಯನ್ನು ತಳೆದು ರಾರಾಜಿಸಿದನು.

ಭಿನ್ನಶೈಶವೋ = ನಿರಸ್ತಶಿಶುಭಾವಃ ಸನ್—ಮಹಾನುಕ್ಷಾ = ಮಹೋಕ್ಷೋಮಹರ್ಷಭಃ—"ದಮ್ಯವತ್ಸತರೌ ಸಮೌ" ಇತ್ಯಮರಃ—ದ್ವಿಪೇಂದ್ರಭಾವಂ = ಮಹಾಗಜತ್ವಂ—ಕಲಭಃ = ಕರಿಪೋತ ಇವ—ಗಾಂಭೀರ್ಯೇಣಾಚಾಪಲೇನ ॥

33. ಅಥಾಸ್ಯ ಗೋದಾನವಿಧೇರನಂತರಂ ।
ವಿವಾಹದೀಕ್ಷಾಂ ನಿರವರ್ತಯದ್ಗುರುಃ ॥
ನರೇಂದ್ರಕನ್ಯಾಸ್ತಮವಾಪ್ಯ ಸತ್ಪತಿಂ ।
ತಮೋನುದಂ ದಕ್ಷಸುತಾ ಇವಾಬಭುಃ ॥ ೩೩ ॥

ರಘುವರನ ಪಿತನು ರಘುವಿಗೆ ಕೇಶಖಂಡನವನ್ನು ಮಾಡಿಸಿ (ಗೋದಾನವಿಧಿ) ವೈವಾಹದೀಕ್ಷೆಯನ್ನು ನೆರವೇರಿಸಿದನು. ರಘುವು ಅನೇಕಮಂದಿ ರಾಜಪುತ್ರಿಯರನ್ನು ಲಗ್ನವಾಗಿ (ವಿವಾಹದೀಕ್ಷಾವಾನ್) ಚಂದ್ರನಂತೆ ಪರಿಶೋಭಿಸಿದನು. ಆ ರಾಜಸುತೆಯರು (ರಾಜಪುತ್ರಿಯರು) ರಘುವಿನಲ್ಲಿ ಯೋಗ್ಯನಾದ ವರನನ್ನು ಕಂಡರು. ಆ ರಾಜಕನ್ಯೆಯರು ಈ ಹಿಂದೆ, ದಕ್ಷಪುತ್ರಿಯರು ಕತ್ತಲೆಯನ್ನು ಪರಿದೋಡಿಸುವ (ಒದ್ದು ಓಡಿಸುವ), ಬೆಳದಿಂಗಳ ರಾಜನಾದ, ಸುಖಕಾರಕನಾದ ಚಂದ್ರನನ್ನು ಪತಿಯಾಗಿ ಪಡೆದಂತೆ, ಉತ್ತಮನಾದ ರಘುವನ್ನು ತಮ್ಮ ಪ್ರಾಣಪತಿಯನ್ನಾಗಿಸಿಕೊಂಡು ಲೋಕೋತ್ತರರಾಗಿ ರಾರಾಜಿಸುತ್ತಾ ವೈಭವದಿಂದ ಮೆರೆದರು.

ಅನ್ವಯ :—ಅಥ ಗೋದಾನವಿಧೇಃ ಅನಂತರಂ ಗುರುಃ ಅಸ್ಯ ವಿವಾಹದೀಕ್ಷಾಂ

ನಿರವರ್ತಯತ್ । ನರೇಂದ್ರಕನ್ಯಾಃ ದಕ್ಷಸುತಾಃ ತಮೋನುದಂ ಇವ ತಂ ಸತ್ಪತಿಮ್ ಅವಾಪ್ಯ ಆಬಭುಃ ॥

ಗೋದಾನವಿಧಿ = ಗವಾಂ ದಾನಂ ಖಂಡನಂ ಯತ್ರ, ಇತಿ (ಕ್ಷತ್ರಿಯಾಣಾಮಾಚಾರ ವಿಶೇಷಃ), ದಕ್ಷಸುತಾಃ = ದಕ್ಷಪ್ರಜಾಪತಿಯ ೨೮ ಮಂದಿ ಪುತ್ರಿಯರು, ೨೭ ನಕ್ಷತ್ರ ಪುಂಜಗಳು ಮತ್ತು ಉಮೆ (ಉಮಾದೇವಿ, ದಾಕ್ಷಾಯಿಣಿ) ಹೀಗೆ ಒಟ್ಟು ೨೮ ಮಂದಿ ದಕ್ಷಜೆಯರು, ತಮೋನುದ = ತಮಸ್ + ನುದ.

ಕೇಶಾಂತಃ ಷೋಡಶೇ ವರ್ಷೇ ಬ್ರಾಹ್ಮಣಸ್ಯ ವಿಧೀಯತೇ–ರಾಜನ್ಯಬಂಧೋರ್ದ್ವಾವಿಂಶೇವೈಶ್ಯಸ್ಯ ಹ್ಯಧಿಕೇ ತತಃ'' ಇತಿ—ಅಥ ಗುರುಃ = ಪಿತಾ—''ಗುರುರ್ಗೀಷ್ಪತಿಪಿತ್ರಾದೌ''ಇತ್ಯಮರಃ—ಅಸ್ಯ ಗೋದಾನವಿಧೇರನಂತರಂ ವಿವಾಹದೀಕ್ಷಾಂ ನಿರವರ್ತಯತ್—ಕೃತವಾನಿತ್ಯರ್ಥಃ—ದಕ್ಷಸ್ಯ ಸುತಾ ರೋಹಿಣ್ಯಾದಯಸ್ತಮೋನುದಂ ಚಂದ್ರಮಿವ—''ತಮೋನುದೋಽಗ್ನಿಚಂದ್ರಾರ್ಕಾಃ'' ಇತಿ ವಿಶ್ವಃ—ತಮೋನುದ = ಚಂದ್ರ= ತಮಸ್ + ನುದ = ಕತ್ತಲೆಯನ್ನು ಓಡಿಸುವವ—ದಕ್ಷಸುತಾಃ = ದಕ್ಷಬ್ರಹ್ಮನು ಪ್ರಜಾಪತಿಗಳಲ್ಲಿ ಒಬ್ಬನು, ಇವನಿಗೆ ೨೭ ಮಂದಿ ನಕ್ಷತ್ರಪುತ್ರಿಯರು, ಅಲ್ಲದೆ ಸತೀ ಎಂಬ ಸುತೆ ಸಹಿತ ಒಟ್ಟು ೨೮ ಮಂದಿ ಹೆಣ್ಣುಮಕ್ಕಳು. ಇವರಲ್ಲಿ ಸತಿಯನ್ನು ಶಿವನಿಗೂ, ನಕ್ಷತ್ರಪುತ್ರಿಯರನ್ನು ಚಂದ್ರನಿಗೂ ಕೊಟ್ಟು ದಕ್ಷನು ಲಗ್ನಮಾಡಿಸುತ್ತಾನೆ. ಗೋದಾನವಿಧೇರನಂತರಂ ವಿವಾಹದೀಕ್ಷಾಂ ನಿರವರ್ತಯತ್—ಬ್ರಹ್ಮಚರ್ಯಾಶ್ರಮದನಂತರ ಗೃಹಸ್ಥಾಶ್ರಮ—ಶಾಸ್ತ್ರಾಭ್ಯಾಸದಿಂದ ಮಾನವನು ವಿನೀತನಾಗುವನು—''ದ್ವಿವಿಧೋ ವಿನಯಃ ಸ್ವಾಭಾವಿಕಃ ಕೃತ್ರಿಮಶ್ಚ'' ಇತಿ ಕೌಟಿಲ್ಯಃ ॥

34. ಯುವಾಯುಗವ್ಯಾಯತಬಾಹುರಂಸಲಃ ।
ಕಪಾಟವಕ್ಷಾಃ ಪರಿಣದ್ಧಕಂದರಃ ॥
ವಪುಃ ಪ್ರಕರ್ಷಾದ ಜಯದ್ಗುರುಂ ರಘುಃ ।
ತಥಾಽಪಿ ನೀಚೈಃ ವಿನಯಾದದೃಶ್ಯತ ॥ ೩೪ ॥

ರಥಕ್ಕೆ ಬಿಗಿದ ಉದ್ದವಾದ ನೊಗಕ್ಕೆ ಎಣೆಯಾದ ದೀರ್ಘವಾದ ಬಾಹುದಂಡಗಳು (ಬಾಹುಯುಗ), ಅಗಲವಾದ, ಅತ್ಯಂತ ವಿಶಾಲವಾದ ದೃಢವಾದ, ಹಲಗೆಯಂತಹ ಎದೆ (ತಿಗಲೆ, ತೆಗಲೆ—ತೌಳವಭಾಷೆ), ಎತ್ತರವಾದ ಹೆಗಲು, ದಪ್ಪನಾದ ಹೆಗ್ಗೊರಳು, ಇಂತಹ ಆಕರ್ಷಕವಾದ ದೇಹವೆಂಬ ಭಾಗ್ಯಶ್ರೀಯನ್ನು (ವಪುಶ್ರೀ, ತನುಶ್ರೀ) ಪಡೆದು, ದೇಹ ದಾರ್ಢ್ಯದಲ್ಲಿ ತಂದೆಯನ್ನು ಮೀರಿಸಿದ್ದರೂ ಅತ್ಯಂತ ವಿನಮ್ರನಾಗಿ, ವಿನಯಗುಣಸಂಪನ್ನನಾಗಿ, ಆದರ್ಶಪುತ್ರನಾಗಿ ಸಾಮಾನ್ಯನಂತೆ ಇರುತ್ತಿದ್ದನು. ಪಿತೃಭಕ್ತಿಪರಾಯಣನಾದ ಅವನು ಗುಣಾಢ್ಯನೆನಿಸಿದ್ದನು (ಹೆಗ್ಗೊರಳ ರಘು ಬೆಳೆದು ತನ್ನ ತಂದೆಯನು ಗೆಲಿದರೂ ತಗ್ಗಿದೊಲು ವಿನಯಪರನಿಹನು.)

ಅಂಸಲಃ = ಅಂಸೌ ಅಸ್ಯ ಸ್ತಃ ಇತಿ ಅಂಸಲೋ ಬಲವಾನ್—ಕಪಾಟವಕ್ಷಾಃ = ಕಪಾಟ ಇವ (ವಿಸ್ತೀರ್ಣ) ವಕ್ಷಃ ಯಸ್ಯ—ಪರಿಣದ್ಧಾ (ವಿಶಾಲಾ) ಗ್ರೀವಾ ಯಸ್ಯ—ವಿಶಾಲ

ಗ್ರೀವಃ = ಹೆಗ್ಗೊರಳಿನವನು; "ಯೂನಾದ್ಯಂಗೇ ಯುಗಃ ಮುಂಸಿ ಯುಗ್ಮೇ ಕೃತಾದಿಷು" ಇತ್ಯಮರಃ—ಅಂಸವಾನ್ಯಸ್ಯ ಇತ್ಯಂಸಲೋ ಬಲವಾನ್—ಮಾಂಸಲಶ್ಚೇತಿ ವೃತ್ತಿಕಾರಃ—"ಬಲವಾನ್ ಮಾಂಸಲೋಂಸಲಃ" ಇತ್ಯಮರಃ—ವತ್ಸಾಂ ಸಾಭ್ಯಾಂ ಕಾಮಬಲೇ (ಪಾಣಿನಿ) ಇತಿ ಲಚ್ ಪ್ರತ್ಯಯಃ—"ಕಪಾಟವಕ್ಷಾಃ (ಬೀರುಪಿನಂತಹ ಅಗಲವಾದ ಎದೆ) "ಪರಿಣದ್ಧಕಂಧರೋ, ವಿಶಾಲಗ್ರೀವಃ "ಪರಿಣಾಹೋ ವಿಶಾಲತೋ" ಇತ್ಯಮರಃ ॥

**35. ತತಃ ಪ್ರಜಾನಾಂ ಚಿರಮಾತ್ಮನಾ ಧೃತಾಂ ।**
**ನಿತಾಂತಗುರ್ವೀಂ ಲಂಘಯಿಷ್ಯತಾ ಧುರಮ್ ॥**
**ನಿಸರ್ಗಸಂಸ್ಕಾರವಿನೀತ ಇತ್ಯಸೌ ।**
**ನೃಪೇಣ ಚಕ್ರೇ ಯುವರಾಜಶಬ್ದಭಾಕ್ ॥ ೩೫ ॥**

ಅನಂತರ ಪ್ರಜಾರಂಜಕನಾದ ಆ ಸಾರ್ವಭೌಮನು ಸಾಮ್ರಾಜ್ಯವನ್ನು ಆಳುವ ಬಹು ದೊಡ್ಡ ಹೊರೆಯನ್ನು ಹಗುರಮಾಡಿಕೊಳ್ಳಲು ಬಗೆದನು. ಸಹಜವಾದ, ಪ್ರಕೃತಿದತ್ತವಾದ ಗುಣಗಳಿಂದಲೂ, ವಿದ್ಯಾಮಹಿಮೆಯಿಂದಲೂ ತಂದೆಯ ರಾಜ್ಯಭಾರದ (ಆಡಳಿತೆಯ) ಬಹುದೊಡ್ಡ ಹೊರೆಯನ್ನು ಹೊರಲು ಆ ಕುಮಾರನು ತಕ್ಕವನಾಗಿದ್ದನು. ಇದನ್ನು ಮನಗಂಡ ಮಹಾರಾಜನು ತನ್ನ ಮಗನಿಗೆ ಯುವರಾಜಪಟ್ಟಾಭಿಷೇಕವನ್ನು ಮಾಡಿ ನೆಮ್ಮದಿಯನ್ನು ಪಡೆದನು. ಅರಸನ ಬಹುದಿನಗಳ ಆಶೆಯಿಂದು ಫಲಿಸಿತು. ಆಶಾಲತೆ ಪುಷ್ಪಿಸಿದಂತೆ (ಹೂಬಿಟ್ಟಂತೆ) ಶಿಸ್ತಿನಿಂದ ಮೆರೆಯುವ ತೇಜೋವಂತನಾದ ಪುತ್ರನಲ್ಲಿ ಯುವರಾಜಪದವಿಯು ಸಂಶೋಭಿಸಿತು.

ಅನ್ವಯ :—ತತಃ ಆತ್ಮನಾ ಚಿರಂ ಧೃತಾಂ ನಿತಾಂತಗುರ್ವೀಂ ಪ್ರಜಾನಾಂ ಧುರಂ ಲಂಘಯಿಷ್ಯತಾ ನೃಪೇಣ ನಿಸರ್ಗಸಂಸ್ಕಾರವಿನೀತ ಇತ್ಯಸೌ ಯುವರಾಜಶಬ್ದಭಾಕ್ ಚಕ್ರೇ ॥

ನಿಸರ್ಗಸಂಸ್ಕಾರವಿನೀತಃ = ವಿನೀತಃ—೧. ನಿಸರ್ಗ, ೨. ಸಂಸ್ಕಾರ, ದ್ವಿವಿಧೋ ವಿನಯಃ = ಸ್ವಾಭಾವಿಕಃ ಕೃತ್ರಿಮಶ್ಚ—ಪ್ರಜಾನಾಂ ಧುರಂ ಪಾಲನಪ್ರಯಾಸಂ—ಲಘಯಿಷ್ಯತಾ = ಲಘುಂ ಕರಿಷ್ಯತಾ—ನಿಸರ್ಗೇಣ = ಸ್ವಭಾವೇನ—ಸಂಸ್ಕಾರೇಣ = ಶಾಸ್ತ್ರಾಭ್ಯಾಸಜನಿತವಾಸನಯಾ—ವಿನೀತೋ = ನಮ್ರಃ—ಚಕ್ರೇ = ಕೃತಃ ॥

**36. ನರೇಂದ್ರಮೂಲಾಯತನಾದನಂತರಂ ।**
**ತದಾಸ್ಪದಂ ಶ್ರೀರ್ಯುವರಾಜಸಂಜ್ಞಿತಮ್ ॥**
**ಅಗಚ್ಛದಂಶೇನ ಗುಣಾಭಿಲಾಷಿಣೀ ।**
**ನವಾವತಾರಂ ಕಮಲಾದಿವೋತ್ಪಲಮ್ ॥ ೩೬ ॥**

ಸಕಲಸಂಪದಗಳ ಅಧಿದೇವತೆಯಾದ ರಾಜ್ಯಲಕ್ಷ್ಮಿಯು ಈ ಹಿಂದೆ ದಿಲೀಪರಾಜನಲ್ಲಿ ನೆಲಸಿದ್ದಳು. ಇದೀಗ ಯುವರಾಜನಾದ ರಘುವು ಅಭಿಷಿಕ್ತನಾದ ಬಳಿಕ ಆ ಭಾಗ್ಯಲಕ್ಷ್ಮಿಯು, ಯಶಸ್ ಲಕ್ಷ್ಮಿಯು (ಯಶೋಲಕ್ಷ್ಮಿಯು) ತನ್ನ ಮೂಲದಾಲಯವನ್ನು

ತೊರೆದು ಹತ್ತಿರದಲ್ಲೇ ಇರುವ ಯುವರಾಜನ (ಭಾವೀರಾಜನ) ಹೊಸ ಸಿಂಹಾಸನಕ್ಕೆ ಆಗಮಿಸಿದಳು. ಆ ಕನಕಲಕ್ಷ್ಮಿಯು ತಾನು ನೆಲೆನಿಂತಿರುವ ಹಳೆಯ ತಾವರೆಹೂವಿನಿಂದ ಆಗತಾನೆ ಅರಳಿದ ಹೊಸ ಕೆಂದಾವರೆಗೆ ಆಗಮಿಸಿ ನೆಲೆನಿಂತಂತೆ, ಈ ತನಕ ಆಳುತ್ತಿದ್ದ ಹಿರಿಯ ಮಹಾರಾಜನ ಸಿಂಹಾಸನದಿಂದ ನಿರ್ಗಮಿಸಿ ಯುವರಾಜನ ರಾಜಸಿಂಹಾಸನಕ್ಕೆ ಭರದಿಂದ ಆಗಮಿಸಿ ಅಲ್ಲಿ ಸ್ಥಿರವಾಗಿ ನೆಲೆನಿಂತಳು (ಪ್ರಿಯಂವೆನುವ ಯುವರಾಜನಾಲಯಕೆ ಬಂದು, ಗುಣಗಣದೊಳಭಿಲಷಿತೆ ಸಿರಿ ನಿಂದಳಲ್ತೆ, ಕಂಜದಿಂ ನೈದಿಲೆಯ ತಾನೈದುವಂತೆ).

ಅನ್ವಯ :—ಗುಣಾಭಿಲಾಷಿಣೀ ಶ್ರೀಃ ನರೇಂದ್ರಮೂಲಾಯತನಾದನಂತರಂ ಯುವ ರಾಜಸಂಜ್ಞಿತಂ ತದಾಸ್ಪದಂ ಕಮಲಾತ್ ನವಾವತಾರಮ್ ಉತ್ಪಲಮಿವ ಅಂಶೇನ ಆಗಚ್ಛತ್ ॥ —ನವಾವತಾರಮ್ ಉತ್ಪಲಮ್ ॥

ಅಭಿಲಾಷಾಃ ಅಸ್ಯಾಃ ಅಸ್ತಿ ಇತಿ ಅಭಿಲಾಷಿಣೀ—ಗುಣೇಷು ಅಭಿಲಾಷಿಣೀ = ಗುಣಾಭಿಲಾಷಿಣೀ ॥ ಗುಣಾನ್ವಿನಯಾದೀನ್ ಸೌರಭ್ಯಾದೀಂಶ್ಚಾಭಿಲಷತೀತಿ = ಗುಣಾಭಿ ಲಾಷಿಣೀ—ಶ್ರೀಃ = ರಾಜ್ಯಲಕ್ಷ್ಮೀಃ—ಮೂಲಾಯತನಂ = ಪ್ರಧಾನಸ್ಥಾನಂ, ತಸ್ಮಾತ್ —ಅಪಾದಾನಾತ್ = ಅನಂತರಂ, ಅನಂತರಮ್ = ಸನ್ನಿಹಿತಮ್—''ಆತ್ಮಾ ವೈ ಪುತ್ರ ನಾಮಾಸಿ ಸ ಜೀವ ಶರದಃ ಶತಮ್''—ಗುಣಾಭಿಲಾಷಿಣೀ = ಅಭಿಲಾಷಃ ಅಸ್ಯಾ ಅಸ್ತಿ ಇತಿ ಅಭಿಲಾಷಿಣೀ, ಗುಣೇಷು ಅಭಿಲಾಷಿಣೀ ಗುಣಾಭಿಲಾಷಿಣೀ ॥

**37. ವಿಭಾವಸುಃ ಸಾರಥಿನೇವ ವಾಯುನಾ ।**
**ಘನವ್ಯಪಾಯೇನ ಗಭಸ್ತಿಮಾನಿವ ॥**
**ಬಭೂವ ತೇನಾತಿತರಾಂ ಸುದುಃ ಸಹಃ ।**
**ಕಟಪ್ರಭೇದೇನ ಕರೀವ ಪಾರ್ಥಿವಃ ॥ ೩೭ ॥**

ವಿಭಾವಸು ಎಂದು ಕರೆಯಲ್ಪಡುವ ಅಗ್ನಿದೇವನು ತನ್ನ ಸಾರಥಿಯಾದ ವಾಯುವಿನಿಂದ ಪ್ರಜ್ವಲಿಸುವಂತೆ ದಿಲೀಪನು ತನ್ನ ಪುತ್ರನ ಸಹಕಾರದಿಂದ ವಿಶ್ವವಿಜೇತನೆನಿಸಿದನು. ಶರದ್ ಋತುವಿನ ಕಾಲದಲ್ಲಿ ಆಕಾಶವು ಮೋಡಗಳಿಂದ ವಿರಹಿತವಾಗಿ ಸೂರ್ಯ ಕಿರಣಗಳು ಅಡೆತಡೆಗಳಿಲ್ಲದೆ ಎಲ್ಲಾ ದಿಕ್ಕುಗಳಲ್ಲಿ ತೀಕ್ಷ್ಣವಾದ ಕಿರಣಗಳನ್ನು ಪಸರಿಸುತ್ತಾ, ದಶದಿಶೆಗಳನ್ನು ಬೆಳಗಿಸುತ್ತಾ ಅತ್ಯಂತ ಕಾಂತಿಯುಕ್ತನಾಗಿ ಸೂರ್ಯದೇವನು ಪ್ರಕಾಶಿಸುತ್ತಿರುವನು. ಗಜೇಂದ್ರನು ಕೆನ್ನೆಗಳಲ್ಲಿರುವ ಕಟಪ್ರೊಡೆದು ಮದಧಾರೆ ಸುರಿಯಲು ಪ್ರಚಂಡನಾದ ಮಂದ್ರಾನೆಯೆಂಬ ಹೆಸರಿನಿಂದ (ನಾಮಧೇಯದಿಂದ) ಮೆರೆಯುವನು (ಕಟವೊಡೆದು ಮಂದವೊದಗಲಾನೆ ತಾನೆಂತು). ಮೆರೆಯುತ್ತ ದುಸ್ಸಾಧ್ಯನಾಗುವನು. (ಸುಳಿವೆಲರ ನೆರವಿನಿಂದುರಿವಗ್ನಿಯೆಂತು) ಅದೇ ರೀತಿಯಲ್ಲಿ ಅಲಘುಪರಾಕ್ರಮಿಯಾದ ಯುವರಾಜ ರಘುವಿನ ನೆರವಿನಿಂದ ದಿಲೀಪ ಭೂಮಿಪನು ಅಸಾಧ್ಯನೆನಿಸಿ, ಸಾಮ್ರಾಟರಲ್ಲಿ ಮೊದಲಿಗನೆನಿಸಿ ವಿಶ್ವವಿಖ್ಯಾತನಾದನು.

ಅನ್ವಯ :—ಸಾರಥಿನಾ ವಾಯುನಾ ವಿಭಾವಸುಃ ಘನವ್ಯಪಾಯೇನ ಗಭಸ್ತಿಮಾನ್ ಇವ ಕಟಪ್ರಭೇದೇನ ಕರೀವ ತೇನ ಪಾರ್ಥಿವಃ ಅತಿತರಾಂ ಸುದುಃಸಹಃ ಬಭೂವ ॥

ವಿಭಾವಸುಃ = ವಿಭಾವಸು ಯಸ್ಯ ಸಃ—ಗಭಸ್ತಿಮಾನ್ = ಗಭಸ್ತಿಃ = ಸೂರ್ಯ—ವಾಯುನಾ ವಿಭಾವಸು = ವಹ್ನಿರಿವ—"ಸೂರ್ಯವಹ್ನೀ ವಿಭಾವಸೂ" ಇತ್ಯಮರಃ—ಘನವ್ಯಪಾಯೇನ = ಶರತ್‌ಸಮಯೇನ—ಗಭಸ್ತಿಮಾನ್ = ಸೂರ್ಯ ಇವ—ಕಟೋ = ಗಂಡಃ—"ಗಂಡಃ ಕಟೋ ಮದೋದಾನಮ್" ಇತ್ಯಮರಃ—ಸುದಂಸಹಃ = ಸಂಪ್ರಸಹ್ಯೋ ಬಭೂವ.

ಸಾರಥಿಃ=ಸಹಾಯಕ, ವಿಭಾವಸುಃ=ವಿಭಾವಸು ಯಸ್ಯ ಸಃ=ಯಾವನ ಐಶ್ವರ್ಯವೇ ಕಿರಣ(ಬೆಳಕು, ಅಗ್ನಿ)ಗಳಾಗಿವೆಯೋ ಅವನು—ಗಭಸ್ತಿಮಾನ್=ಕಿರಣಗಳನ್ನು ಹೊಂದಿರುವವ, ಕಿರಣಗಳ ಒಡೆಯ (ಗಭಸ್ತಿ) ಸೂರ್ಯಕಟಪ್ರಭೇದಃ = ಕಪೋಲಗಳು ಒಡೆದು (ಸ್ಫೋಟಗೊಂಡು).

38. ನಿಯುಜ್ಯ ತಂ ಹೋಮತುರಂಗರಕ್ಷಣೇ ।
ಧನುರ್ಧರಂ ರಾಜಸುತೈರನುದ್ರುತಮ್ ॥
ಅಪೂರ್ಣಮೇಕೇನ ಶತಕ್ರತೂಪಮಃ ।
ಶತಂ ಕ್ರತೂನಾಮಪವಿಘ್ನಮಾಪ ಸಃ ॥ ೩೮ ॥

ಮಹಾಧನುರ್ಧರನಾದ, ಜಗದೇಕಧನುರ್ಧರನೆನಿಸಿದ, ರಘುವನ್ನು ದಿಗ್ವಿಜಯಕ್ಕೆ ಕಳುಹಿಸಿ ದಿಲೀಪಸಾರ್ವಭೌಮನು ನೂರು ಅಶ್ವಮೇಧಯಾಗಗಳನ್ನು ಮಾಡಲು ನಿರ್ಯೋಜಿಸಿದನು. ಪವಿತ್ರವಾದ ಸರಯೂನದೀತೀರದಲ್ಲಿ ಯೂಪಗಳನ್ನು ನೆಡಿಸಿ ಅಶ್ವಮೇಧಯಾಗದೀಕ್ಷಿತನಾದನು. ರಘುವು ಹೋಮತುರಂಗದೊಡನೆ (ಹೋಮತುರಂಗ ರಕ್ಷಣೇ ನಿಯುಜ್ಯ) ದಿಗ್ವಿಜಯಕ್ಕೆ ಚತುರ್ದಿಕ್ಕುಗಳಿಗೆ ತೆರಳಿ ರಾಜಪುತ್ರರೊಡನೆ ಯುದ್ಧ ಸಾರಿದನು. ಈ ತೆರನಾಗಿ ೯೯ ಅಶ್ವಮೇಧಯಾಗವನ್ನು ಪೂರ್ಣಮಾಡಿದ ಕೀರ್ತಿಗೆ ಅರ್ಹನಾಗಿ ಮೆರೆಯುತ್ತಿದ್ದನು. ಶತಕ್ರತು ಎಂಬ ದೇವೇಂದ್ರನ (ಮಹೇಂದ್ರನ) ಹೆಸರಿಗೆ ಪಾತ್ರನಾಗಲು (ಸರಿಸಾಟಿಯಾಗಲು) ಒಂದೇ ಒಂದು ಯಾಗವು ಮಾತ್ರ ಉಳಿದಿತ್ತು.

ಅಪವಿಘ್ನಮ್ = ಅಪಗತ ವಿಘ್ನಮ್, ಶತಕ್ರತೂಪಮಃ = ದೇವೇಂದ್ರನ ಪ್ರತಿಸ್ಪರ್ಧಿಯಾಗಿ, ಅನರ್ಗಲಂ = ಅವಿದ್ಧಮಾನಮ್ ಅರ್ಗಲಂ ಯಸ್ಯ.

ಅನ್ವಯಃ:—ರಾಜಸುತೈಃ ಅನುದ್ರುತಂ ಧನುರ್ಧರಂ ತಂ ಹೋಮತುರಂಗರಕ್ಷಣೇ ನಿಯುಜ್ಯ ಶತಕ್ರತೂಪಮಃ ಸಃ ಏಕೇನ ಅಪೂರ್ಣ ಕ್ರತೂನಾಂ ಶತಮ್ ಅಪವಿಘ್ನಮ್ ಆಪ ॥

ಶತಕ್ರತು = ಇಂದ್ರ, ರಾಜಸುತೈರನುದ್ರುತ = ಅನುಗತಂ, ಹೋಮತುರಂಗಾಣಾಂ ರಕ್ಷಣೇ ನಿಯುಜ್ಯ—ಕ್ರತೂನಾಂ = ಅಶ್ವಮೇಧಾನಾಂ—ಶತಮಪವಿಘ್ನಂ = ಅಪಗತ ವಿಘ್ನಂ—ಉತ್ಸೃಷ್ಟಂ = ಮುಕ್ತಂ—ಅನರ್ಗಲಮ್ = ಪ್ರತಿಬಂಧಮ್ ॥

39. ತತಃ ಪರಂ ತೇನ ಮಖಾಯ ಯಜ್ವನಾ ।
ತುರಂಗಮುತ್ಸೃಷ್ಟಮನರ್ಗಲಂ ಪುನಃ ॥
ಧನುರ್ಭೃತಾಮಗ್ರತ ಏವ ರಕ್ಷಿಣಾಂ ।
ಜಹಾರ ಶಕ್ರಃ ಕಿಲ ಗೂಢವಿಗ್ರಹಃ ॥ ೩೯ ॥

ವಿಧ್ಯುಕ್ತ ರೀತಿಯಲ್ಲಿ ಯಾಗವನ್ನು ನಡೆಸುತ್ತಾ ಇದೀಗ ಇಂದ್ರಪದವಿಯನ್ನು ಪಡೆಯಲು ಅರ್ಹನಾಗುವಂತೆ ದಿಲೀಪನು ನೂರನೆಯ ಯಾಗವನ್ನು ಪ್ರಾರಂಭಿಸಿದನು (ವಿಧ್ಯುಕ್ತರೀತಿಯೊಳು ಯಾಗಗೈದವನು). ತಂದೆಯು ಯಜ್ಞದೀಕ್ಷಿತನಾಗಿ ಕುಳಿತಿದ್ದನು. ಪುತ್ರಶ್ರೇಷ್ಠನಾದ ದಿಲೀಪನು ಮುಖದ ಅಶ್ವರಕ್ಷಣೆಗೆ ಬಿಲ್ಬಿಡಿದು ನಿಂತಿದ್ದನು. ಆಗ ಅಸೂಯೆಯಿಂದ ಅಮರಾಧಿಪನಾದ ಶಕ್ರನು ಯಾರಿಗೂ ಕಾಣದಂತೆ ಮಾಯೆಯನ್ನು ಒಡ್ಡಿ ರಘುವಿನ ಅಶ್ವಮೇಧದ ತುರಗವನ್ನು ದೇವಲೋಕಕ್ಕೆ ಕೊಂಡೊಯ್ದನು.

ಅನ್ವಯ :— ತತಃ ಪರಂ ಯಜ್ವನಾ ತೇನ ಮಖಾಯ ಪುನಃ ಅನರ್ಗಲಮ್ ಉತ್ಸೃಷ್ಟಂ ತುರಂಗಂ ರಕ್ಷಿಣಾಂ ಧನುರ್ಭೃತಾಮ್ ಅಗ್ರತಃ ಏವ ಗೂಢವಿಗ್ರಹಃ ಶಕ್ರಃ ಜಹಾರ ಕಿಲ ॥

ಜಹಾರಶಕ್ರಃ = ಹೊಟ್ಟೆಕಿಚ್ಚಿನ ಸ್ವಭಾವದ, ಅಸೂಯಾಪರನಾದ, ಮತ್ಸರದ ಸುರೇಂದ್ರನು—ಗೂಢವಿಗ್ರಹ = ಗೂಢಃ ವಿಗ್ರಹಃ ಯಸ್ಯ = ಗುಪ್ತಕಾಯಃ—ಅನರ್ಗಲಮ್ = ಅವಿದ್ಯಮಾನಮ್ ಅರ್ಗಲಂ ಯಸ್ಯ ॥

**40. ವಿಷಾದಲುಪ್ತಪ್ರತಿಪತ್ತಿವಿಸ್ಮಿತಂ ।**
**ಕುಮಾರಸೈನ್ಯಂ ಸಪದಿ ಸ್ಥಿತಂ ಚ ತತ್ ॥**
**ವಸಿಷ್ಠಧೇನುಶ್ಚ ಯದೃಚ್ಛಯಾ ಗತಾ ।**
**ಶ್ರುತಪ್ರಭಾವಾ ದದೃಶೇಽಥ ನಂದಿನೀ ॥ ೪೦ ॥**

ಅಶ್ವಮೇಧ ತುರಗವನ್ನು ಕಳೆದುಕೊಂಡು ರಘುಸೇನೆಯು ಅಚ್ಚರಿಗೊಂಡು ಮುಂದಿನ ದಾರಿ ತಿಳಿಯದೆ ಖೇದದಿಂದ ಮೈಮರೆಯಿತು. ರಘುಸೈನಿಕರು ವಿಸ್ಮಯಗೊಂಡು ದಿಙ್ಮೂಢರಾದರು. ಆಗ ಅವರ ಪಾಲಿಗೆ ಭಾಗ್ಯೋದಯವಾದಂತೆ ವಸಿಷ್ಠರ ಸುರಧೇನು ನಂದಿನಿಯು ನೃಪಾಲನ ವಾಹಿನಿಯ ಮುಂದೆ ಗೋಚರಿಸಿತು.

ಅನ್ವಯ :—ತತ್ ಕುಮಾರಸೈನ್ಯಂ ಸಪದಿ ವಿಷಾದಲುಪ್ತಪ್ರತಿಪತ್ತಿವಿಸ್ಮಿತಂ ಸ್ಥಿತಂ ಚ ಅಥ ಶ್ರುತಪ್ರಭಾವಾ ಯದೃಚ್ಛಯಾಗತಾ ವಸಿಷ್ಠಧೇನುಃ ನಂದಿನೀ ದದೃಶೇ ॥

ವಿಷಾದ = ವಿಷಾದೇನ ಲುಪ್ತಾ ಪ್ರತಿಪತ್ತಿಃ (ಕರ್ತವ್ಯಜ್ಞಾನಂ) ಯಸ್ಯ ತತ್—ಶ್ರುತಃ ಪ್ರಭಾವಃ ಯಸ್ಯಾಃ ಸಾ—ಯದೃಚ್ಛಯಾಗತಾ = ಸ್ವೇಚ್ಛೆಯಿಂದೈತಂದ, ಸೈನ್ಯಂ = ಸೇನಾ—ವಿಷಾದ=ಇಷ್ಟನಾಶಕೃತೋ, ಮನೋಭಂಗಃ—ಶ್ರುತಪ್ರಭಾವಾ ಯದೃಚ್ಛಯಾ = ಸ್ವೇಚ್ಛಯಾ ಗತಾ—ವಿಷಾದ = ವಿಷಾದೇನ ಲುಪ್ತಾ ಪ್ರತಿಪತ್ತಿಃ (ಕರ್ತವ್ಯಜ್ಞಾನಂ) ಯಸ್ಯ ತತ್ ॥

**41. ತದಂಗನಿಸ್ಯಂದ ಜಲೇನ ಲೋಚನೇ ।**
**ಪ್ರಮೃಜ್ಯ ಪುಣ್ಯೇನ ಪುರಸ್ಕೃತಃ ಸತಾಮ್ ॥**
**ಅತೀಂದ್ರಿಯೇಷ್ವಪ್ಯುಪಪನ್ನದರ್ಶನೋ ।**
**ಬಭೂವ ಭಾವೇಷು ದಿಲೀಪನಂದನಃ ॥ ೪೧ ॥**

ಸಜ್ಜನರಿಂದ ಸ್ತುತಿಸಲ್ಪಡುವ ದಿಲೀಪನ ಸುತನು (ದಿಲೀಪನಂದನಃ) ಆ ಪುಣ್ಯಮಯ ಸುರಧೇನು ನಂದಿನಿಯ ಕೃಪಾವಲೋಕನಕ್ಕೆ ಪಾತ್ರನಾಗಿ ದಿವ್ಯದೃಷ್ಟಿಯನ್ನು ಅತೀಂದ್ರಿಯ

ಶಕ್ತಿಯನ್ನು ಪಡೆದನು. ಆ ಗೋಮಾತೆಯು ಮಮತೆಯಿಂದ ತನ್ನ ದೇಹದಿಂದ ಅಮೃತ ಸದೃಶವಾದ ಗೋಮೂತ್ರವೆಂಬ ಜಲವನ್ನು ಸುರಿಸಲು, ಆ ದೇಹಜನ್ಯಜಲದಿಂದ ಅವನ ಕಣ್ಣಾಲಿಗಳು ತೊಯ್ದುಹೋದುವು. ಸುರಧೇನುವಿನ ಪವಿತ್ರವಾದ ಗೋಮೂತ್ರದ ಪ್ರೋಕ್ಷಣೆಯಿಂದ ಕಣ್ಣುಗಳು ತೊಳೆಯಲಾಗಿ ದಿಲೀಪನು ಇಂದ್ರಿಯಾತೀತಶಕ್ತಿಯನ್ನು ಪಡೆದನು (ಕಣ್ತೊಳೆಯಲಿಂದ್ರಿಯಾತೀತಭಾವವನು, ನೋಳ್ಪ ಶಕ್ತಿಯನು). ಅವನು ದೇವತೆಗಳು ಪಡೆದಿರುವ ದಿವ್ಯದೃಷ್ಟಿಯನ್ನು ಪಡೆದು ಅದರ ಪ್ರಭಾವದಿಂದ ಯಾಗ ತುರಂಗವೆಲ್ಲಿದೆ ಎಂಬುದನ್ನು ಕೂಡಲೇ ತಿಳಿದುಕೊಂಡನು (ಅರಿತುಕೊಂಡನು).

ಅನ್ವಯ :—ಸತಾಂ ಪುರಸ್ಕೃತಃ ದಿಲೀಪನಂದನಃ ಪುಣ್ಯೇನ ತದಂಗನಿಸ್ಯಂದಜಲೇನ ಲೋಚನೇ ಪ್ರಮೃಜ್ಯ ಅತೀಂದ್ರಿಯೇಷು ಅಪಿ ಭಾವೇಷು ಉಪಪನ್ನದರ್ಶನೋ ಬಭೂವ ॥

ನಿಸ್ಯಂದ = ದ್ರವಃ—ಪುರಸ್ಕೃತಃ=ಪೂಜಿತೋ—ನಿಸ್ಯಂದೋ ದ್ರವಃ ಸ ಏವ ಜಲವತ್—ತೇನ ಲೋಚನೇ ಸಮೃಜ್ಯ = ಶೋಧಯಿತ್ವಾ—ಅತೀಂದ್ರಿಯೇಷ್ವಿಂದ್ರಿಯಾಣ್ಯತಿಕ್ರಾಂತೇಷು—ನಿಸ್ಯಂದ = ದ್ರವ—ಸ್ವೇದ = ಬೆವರು, ಇಂದ್ರ (ಗೂಢವಿಗ್ರಹ) = ಕಣ್ಣಿಗೆ ಕಾಣಿಸದಂತೆ ಅಡಗಿರು, ಸತಾಂ ಪುರಸ್ಕೃತಂ = ಉತ್ತಮ ಜನರಿಂದ ಗೌರವಿಸ್ಪಡುವ.

**42. ಸ ಪೂರ್ವತಃ ಪರ್ವತಪಕ್ಷಶಾತನಂ ।**
**ದದರ್ಶ ದೇವಂ ನರದೇವಸಂಭವಃ ॥**
**ಪುನಃಪುನಃ ಸೂತನಿಷಿದ್ಧಚಾಪಲಂ ।**
**ಹರಂತಮಶ್ವಂ ರಥರಶ್ಮಿಸಂಯತಮ್** ॥ ೪೨ ॥

ದೇವರಾಜನಾದ (ಪಾಕಶಾಸನನ, ಪುರುಹೂತನ) ಇಂದ್ರನ ರಥಕ್ಕೆ ಕಡಿವಾಣಗಳನ್ನು ಸಪೂರವಾದ ದಾರಗಳಿಂದ ಕಟ್ಟಿ ಹೋಮದ ತುರಗವನ್ನು ಎಳೆದೊಯ್ಯುವುದನ್ನು ಆ ಮಾನವಾಧಿಪನ ಸೂನು ಕೂಡಲೇ ಕಂಡುಕೊಂಡನು. ಪರ್ವತಗಳನ್ನು ವಜ್ರಾಯುಧದಿಂದ ಕಾದರೆಯನ್ನು ಪುಡಿಗೆಯ್ಯುವ ಇಂದ್ರನು ಕೊಂಡೊಯ್ಯುತ್ತಿದ್ದಾಗ ಅಶ್ವಮೇಧದ ತುರಗವು ತನ್ನ ತಲೆಯನ್ನು ಅಲ್ಲಾಡಿಸುತ್ತ, ಕೊಡಹುತ್ತ, ಮನಸ್ಸಿಲ್ಲದ ಮನಸ್ಸಿನಿಂದ ಅನುಸರಿಸುತ್ತಿತ್ತು. ದೇವಸಾರಥಿಯಾದ ಮಾತಲಿಯು ಚಾಕಚಕ್ಯತೆಯಿಂದ ಆ ಯಜ್ಞ ತುರಗವನ್ನು ಮುನ್ನಡೆಸುತ್ತ ಒಯ್ಯುತ್ತಿದ್ದನು.

ಅನ್ವಯ :—ನರದೇವಸಂಭವಃ ಸಃ ಪುನಃಪುನಃ ಸೂತನಿಷಿದ್ಧಚಾಪಲಂ ರಥರಶ್ಮಿ ಸಂಯತಮ್ ಅಶ್ವಂ ಹರಂತಂ ಪರ್ವತಪಕ್ಷಶಾತನಂ ದೇವಂ ಪೂರ್ವತಃ ದದರ್ಶ ॥

ನರದೇವಸಂಭವಃ = ನರದೇವಸಂಭವನು, ಪೂರ್ವತಃ = ಪೂರ್ವದಿಶಾಭಾಗದಲ್ಲಿ, ಪರ್ವತಪಕ್ಷಶಾತನಮ್ = ಶಾತಯತಿ, ನಾಶಯತೀತಿ ಶಾತನಃ, ಪರ್ವತಪಕ್ಷಾಣಾಂ ಶಾತನಃ, ಛೇದಕಃ—ನಿಷಿದ್ಧಚಾಪಲ=ನಿವಾರಿತ ಔದ್ಧತ್ಯಂ—"ಕಿರಣಪ್ರಗ್ರಹೌ ರಶ್ಮೀ" ಇತ್ಯಮರಃ—ಪರ್ವತಪಕ್ಷಾಣಾಂ ಶಾತನಂ = ಛೇದಕಂ—ಪೂರ್ವತಃ = ಪೂರ್ವಸ್ಯಾಂ ದಿಶಿ ದದರ್ಶ ॥

43. ಶತೈಸ್ತಮಕ್ಷ್ಣಾಮನಿಮೇಷವೃತ್ತಿಭಿಃ ।
ಹರಿಂ ವಿದಿತ್ವಾ ಹರಿಭಿಶ್ಚ ವಾಜಿಭಿಃ ॥
ಅವೋಚದೇನಂ ಗಗನಸ್ಪೃಶಾ ರಘುಃ ।
ಸ್ವರೇಣ ಧೀರೇಣ ನಿವರ್ತಯನ್ನಿವ ॥ ೪೩ ॥

ಎವೆಮಿಡುಕದ ಸಹಸ್ರಕಣ್ಣುಗಳಿಂದ ಕಂಗೊಳಿಸುವ ಸಹಸ್ರಾಕ್ಷನಾದ ಮಹೇಂದ್ರನನ್ನು ರಘುವು ಕಂಡನು. ಆ ವಜ್ರಿಯು ತನ್ನ ದಿವ್ಯರಥಕ್ಕೆ 7 ಹಸುರು ಬಣ್ಣದ ಅಶ್ವಗಳನ್ನು ರಥಕ್ಕೆ ಕಟ್ಟಿ ಯಜ್ಞಾಶ್ವವನ್ನು ದೇವನಗರಿಗೆ (ಅಮರಾವತಿಗೆ) ಭರದಿಂದ ಕೊಂಡೊಯ್ಯುತ್ತಿದ್ದನು (ಹಸಿರು ಬಣ್ಣದ ಏಳು ಅಶ್ವಗಳಿಂದೆ). ಆಗ ಜಗಜಟ್ಟಿಯಾದ ಸಾಹಸವೀರುವೆನಿಸಿದ (ಧೈರ್ಯವೀರುವೆನಿಸಿದ) ರಘುವುಉಚ್ಚಸ್ವರದಿಂದ ತುರಗಚೋರನಾದ ಇಂದ್ರನನ್ನು ಕೂಗಿ ಕರೆದನು. ಆ ಧ್ವನಿಯು ಬಾನಲ್ಲಿ ಮೊಳಗಿತು. ಮೊಳಗುತ್ತ ರಣರಣಿಸಿತು. ಆ ದಿಟ್ಟ, ಸ್ಪಷ್ಟಧ್ವನಿಯನ್ನು ಕೇಳಿ ಮಹೇಂದ್ರನು ಕೂಡಲೇ ಹಿಂದಿರುಗಿ ನೋಡಿದನು; ತನ್ನ ವೇಗವನ್ನು ಯಾರೋ ತಡೆದಂತೆ ಆಗಿ ಮುಗಿಲೇರಿಬರುತ್ತಿರುವ ಆ ದನಿಯನ್ನು ಕಿವಿಗೊಟ್ಟು ಆಲಿಸಿದನು.

ಅನ್ವಯ :—ರಘುಃ ಅನಿಮೇಷವೃತ್ತಿಭಿಃ ಅಕ್ಷ್ಣಾಂ ಶತೈಃ ಹರಿಭಿಶ್ಚ ವಾಜಿಭಿಃ ತಂ ಹರಿಂ ವಿದಿತ್ವಾ ಗಗನಸ್ಪೃಶಾ ಧೀರೇಣ ಸ್ವರೇಣ ಏನಂ ನಿವರ್ತಯನ್ ಇವ ಅವೋಚತ್ ॥

ಗಗನಸ್ಪೃಶಾ ಧೀರೇಣ ಸ್ವರೇಣ = ಗಗನಸ್ಪೃಶಾಧೀರತ್ವೇನ—ಇವ ಅವೋಚತ್—ಹರಿಭಿಃ = ಹರಿದ್‌ವರ್ಣಾಃ = ನೀಲವರ್ಣದ, ಹಸುರುಬಣ್ಣದ—ಸಹಸ್ರಾಕ್ಷ—ವಾಜಿಭಿಃ = ಕುದುರೆಗಳು, ಅನಿಮೇಷವೃತ್ತಿಭಿಃ = ರೆಪ್ಪೆಬಡಿಯದ ಕಣ್ಣುಳಿಂದ, "ಹರಿರ್ವಾಚ್ಯವದಾಖ್ಯಾತೊ ಹರಿತ್ಕಪಿಲವರ್ಣಯೋಃ" ಇತಿ ವಿಶ್ವಃ—ವಾಜಿಭಿಃ=ಅಶ್ವೈಶ್ಚ—ಹರಿಂ = ಇಂದ್ರಂ—"ಹರಿರ್ವಾತಾರ್ಕಚಂದ್ರೇನ್ದ್ರಯಮೋಪೇಂದ್ರಮರೀಚಿಷು ಇತಿ ವಿಶ್ವಃ—ಗಗನಸ್ಪೃಶಾ = ವ್ಯೋಮವ್ಯಾಪಿನಾ, ಧೀರೇಣ = ಗಭೀರೇಣ, ಸ್ವರೇಣ = ಧ್ವನಿನೈವ ॥

44. ಮಖಾಂಶಭಾಜಾಂ ಪ್ರಥಮೋ ಮನೀಷಿಭಿಃ ।
ತ್ವಮೇವ ದೇವೇಂದ್ರ ಸದಾ ನಿಗದ್ಯಸೇ ॥
ಅಜಸ್ರದೀಕ್ಷಾಪ್ರಯತಸ್ಯ ಮದ್ಗುರೋಃ ।
ಕ್ರಿಯಾವಿಘಾತಾಯ ಕಥಂ ಪ್ರವರ್ತಸೇ ॥ ೪೪ ॥

"ಓ ಲೋಕಾಧಿಪತಿಯೇ (ತ್ರಿಲೋಕಾಧಿಪತಿಯೆ). ನೀನೇಯೋ ಯಾಗಹೋಮಗಳ ಹವಿಸ್ಸನ್ನು ಸ್ವೀಕರಿಸುವ ಶತಕೃತುः (ಮಘವಂತ, ಮಘವಾನ್) ಎಂಬವನು ? ಬುಧ ಜನರು, ಮಂತ್ರಿಜರು ನಿನಗೆ ಒಲಿದು ನಿನ್ನನ್ನು ಪ್ರಪ್ರಥಮ ಯಾಗರಕ್ಷಕನೆಂದು ಘೋಷಿಸುತ್ತಿರುವರು. ಹೀಗಿರುತ್ತ ನೀನು. ನನ್ನ ಪಿತನು ಎಸಗುತ್ತಿರುವ ಮಹಾಯಜ್ಞವನ್ನು ಕೆಡಿಸುವುದು ಯುಕ್ತವೆ ? ನಿನಗೆ ಇದು ಭೂಷಣವೆ ? ಯಜ್ಞದೀಕ್ಷಿತನಾಗಿ, (ದೀಕ್ಷಾಬದ್ಧನಾಗಿ) ವ್ರತನಿಷ್ಠನಾಗಿ ನನ್ನ ಪ್ರಿಯಪಿತನು ಯಜ್ಞಕುಂಡದ ಬಳಿ ಕುಳಿತಿರುವನು. ಇಂತಹ ಲೋಕೋತ್ತರವಾದ ಕೆಲಸಕ್ಕೆ ಅಡ್ಡಿಪಡಿಸುವುದು ಯೋಗ್ಯವೆ ?

ಅನ್ವಯ :—ಹೇ ದೇವೇಂದ್ರ ಮುನೀಷಿಭಿಃ ತ್ವಮೇವ ಮಖಾಂಶಭಾಜಾಂ ಪ್ರಥಮಃ ಸದಾ ನಿಗದ್ಯಸೇ ಅಜಸ್ರದೀಕ್ಷಾಪ್ರಯತಸ್ಯ ಮದ್ ಗುರೋಃ ಕ್ರಿಯಾವಿಘಾತಾಯ ಕಥಂ ಪ್ರವರ್ತಸೇ ॥

ಹೇ ದೇವೇಂದ್ರ ಮುನೀಷಿಭಿಃ ತ್ವಮೇವ ಮಖಾಂಶಭಾಜಾಂ ಪ್ರಥಮಃ ಸದಾ ನಿಗದ್ಯತೇ ॥ ಅಜಸ್ರದೀಕ್ಷಾ = ನಿತ್ಯದೀಕ್ಷಾ—ಕಥಂ ಪ್ರವರ್ತಸೇ—ಮುನೀಷಿಭಿಸ್ತ್ವಮೇವ ಮಖಾಂಶಭಾಜಾಂ = ನಿತ್ಯದೀಕ್ಷಾಯಾಂ—ಕ್ರಿಯಾವಿಘಾತಾಯ = ಕ್ರತುವಿಘಾತಾಯ—ಕ್ರಿಯಾಂ ವಿಹಂತುಮಿತ್ಯರ್ಥಃ—ಅಜಸ್ರದೀಕ್ಷಾ = ನಿತ್ಯದೀಕ್ಷಾ ॥

**45. ತ್ರಿಲೋಕನಾಥೇನ ಸದಾ ಮಖದ್ವಿಷಃ ।**
**ತ್ವಯಾ ನಿಯಮ್ಯಾ ನನು ದಿವ್ಯಚಕ್ಷುಷಾ ॥**
**ಸ ಚೇತ್ ಸ್ವಯಂ ಕರ್ಮಸು ಧರ್ಮಚಾರಿಣಾಂ ।**
**ತ್ವಮಂತರಾಯೋ ಭವಸಿ ಚ್ಯುತೋ ವಿಧಿಃ ॥ ೪೫ ॥**

"ಹೇ ತ್ರಿಲೋಕಾಧಿಪ (ತ್ರಿಲೋಕನಾಥ), ನೀನು ದಿವ್ಯದೃಷ್ಟಿಯನ್ನು ಪಡೆದವನು (ದಿವ್ಯಚಕ್ಷುಷಾ), ನೀನು ಧರ್ಮಚರನು. ಧರ್ಮಕಾರ್ಯಗಳನ್ನು, ಯಾಗಾದಿಸತ್ಕರ್ಮಗಳನ್ನು. ಯಜ್ಞಕಾರ್ಯಗಳನ್ನು ನಡೆಸಬೇಕಾದವನು. ಲೋಕಗುರುವಾದ ನೀನೇ ಅವುಗಳನ್ನು ಕೆಡಿಸಿದರೆ, ಅವುಗಳನ್ನು ನಡೆಸುವವರಾರು ? (ನೀನೆ ದಲ್ ಕೆಡಿಸಿದರೆ ನಿಲಿಪರಾರ್ ಸತ್ಕರ್ಮಗಳನು) ದೀಕ್ಷಾಬದ್ಧನಾಗಿ ಕುಳಿತಿರುವ ಧರ್ಮಾತ್ಮನಾದ, ಧರ್ಮರತನಾದ, ಧರ್ಮಸಹಿಷ್ಣುವಾದ ನನ್ನ ತಂದೆಯನ್ನು ಕಾಪಾಡು, ಮಹಾತ್ಮಾ. ಹೇ ಲೋಕಪಾಲಾ, ಧರ್ಮಚಾರಿಗಳನ್ನು ಸಂರಕ್ಷಿಸು.

ಅನ್ವಯ :—ತ್ರಿಲೋಕನಾಥೇನ ದಿವ್ಯಚಕ್ಷುಷಾ ತ್ವಯಾ ಮಖದ್ವಿಷಃ ಸದಾ ನಿಯಮ್ಯಾ ನನು ! ಸ ತ್ವಂ ಧರ್ಮಚಾರಿಣಾಂ ಕರ್ಮಸು ಸ್ವಯಮ್ ಅಂತರಾಯಃ ಭವಸಿ ಚೇತ್ ವಿಧಿಃ ಚ್ಯುತಃ ॥

ತ್ರಯಾಣಾಂ ಲೋಕಾನಾಂ ನಾಥೇನ = ತ್ರಿಲೋಕನಾಥ, ಅಮರಾಧಿಪ ತ್ರಿಲೋಕೇತಿ =ತ್ರಯಾಣಾಂ ಲೋಕಾನಾಂ—ನಾಥ=ತ್ರಿಲೋಕನಾಥಃ—ತ್ವಯಾ ಮಖದ್ವಿಷಃ=ಕ್ರತುವಿಘಾತಕಾಃ, ಸ ತ್ವಂ ಧರ್ಮಚಾರಿಣಾಂ ಕರ್ಮಸು=ಕ್ರತುಷು—ಸ್ವಯಮಂತರಾಯೋ = ವಿಘ್ನೋ—ವಿಧಿರನುಷ್ಠಾನಂ—ಚ್ಯುತಃ = ಕ್ಷತಃ ॥

**46. ತದಂಗಮಗ್ರ್ಯಂ ಮಘವನ್ ಮಹಾಕ್ರತೋಃ ।**
**ಅಮುಂ ತುರಂಗಂ ಪ್ರತಿಮೋಕ್ತುಮರ್ಹಸಿ ॥**
**ಪಥಃ ಶ್ರುತೇಃ ದರ್ಶಯಿತಾರ ಈಶ್ವರಾಃ ।**
**ಮಲೀಮಸಾಮಾದದತೇ ನ ಪದ್ಧತಿಮ್ ॥ ೪೬ ॥**

ಹೇ ಲೋಕಬಂಧು, ಹೇ ವಿಶ್ವಬಂಧು, ಪಿತನು ನಡೆಸುವ ಮಹಾಯಜ್ಞಕಾರ್ಯಕ್ಕೆ ಅತಿಮುಖ್ಯವಾಗಿರುವ ಈ ಹಯವನ್ನು, ಬೇರೆ ಏನನ್ನೂ ಯೋಚಿಸದೆ, ಹಿಂದಿರುಗಿಸಿ

ಕೃಪೆಮಾಡು. ಎಲೈ ವೇದಬಂಧು, ಹೇ ಮಘವನ್, ವೇದಮಾರ್ಗದಲ್ಲಿ ನಡೆಯುವ ಮಹಾಜನರು ದುಷ್ಟಪದ್ಧತಿಗಳನ್ನು ಮಲಿನಮಾರ್ಗವನ್ನು ಒಪ್ಪದಿರುವರು ಎಂಬುದನ್ನು ನೀನು ತಿಳಿದಿರುವ ಮಹಾನುಭಾವನಲ್ಲವೆ ? ನೀನು ಸರ್ವಜ್ಞನಲ್ಲವೆ, ಮಹಾಮತಿಯಲ್ಲವೆ, ಧರ್ಮರಕ್ಷಕನಲ್ಲವೆ ?

ಅನ್ವಯ :—ಹೇ ಮಘವನ್ ತತ್ ಮಹಾಕ್ರತೋಃ ಅಗ್ರ್ಯಂ ಅಂಗಮ್ ಅಮುಂ ತುರಂಗಂ ಪ್ರತಿಮೋಕ್ತುಂ ಅರ್ಹಸಿ। ಶ್ರುತೇಃ ಪಥಃ ದರ್ಶಯಿತಾರಃ ಈಶ್ವರಾಃ ಮಲೀಮಸಾಂ ಪದ್ಧತಿ ನಾದದತೇ ॥—ಶ್ರುತಿಃ=ವೇದವು. ಶ್ರುತೇಃ ಪಥೋ ದರ್ಶಯಿತಾರಃ=ಸನ್ಮಾರ್ಗ ಪ್ರದರ್ಶಕಾ—ಈಶ್ವರಾಃ = ಮಹಾಂತೋ—''ಮಲೀಮಸಂ ತು ಮಲಿನಂ ಕಚ್ಚರಂ ಮಲ ದೂಷಿತಮ್'' ಇತ್ಯಮರಃ—ಶ್ರುತಿಃ = ವೇದಃ

**47.** **ಇತಿ ಪ್ರಗಲ್ಭಂ ರಘುಣಾ ಸಮೀರಿತಂ ।**
**ವಚೋ ನಿಶಮ್ಯಾಧಿಪತಿರ್ದಿವೌಕಸಾಮ್ ॥**
**ನಿವರ್ತಯಾಮಾಸ ರಥಂ ಸ ವಿಸ್ಮಯಃ ।**
**ಪ್ರಚಕ್ರಮೇ ಚ ಪ್ರತಿವಕ್ತುಮುತ್ತರಮ್** ॥ ೪೭ ॥

ರಘುವು ಹೇಳಿದ ಅರ್ಥವತ್ತಾದ (ಅರ್ಥಗರ್ಭಿತವಾದ), ಘನವತ್ತಾದ, ರಸವತ್ತಾದ ವಾಕ್ಯಗಳನ್ನು ಕೇಳಿ ಇಂದ್ರನು ರಥವನ್ನು ಕೂಡಲೇ ನಿಲ್ಲಿಸಿ ಅಚ್ಚರಿಗೊಂಡು ಆಲಿಸಿದನು. ತಕ್ಷಣವೇ ತನ್ನ ದಿವ್ಯರಥವನ್ನು ಅಂಬರಮಾರ್ಗದಲ್ಲಿ ಹಿಂದಿರುಗಿಸಿ, ಮರುನುಡಿಯನ್ನು ಹೇಳಲು (ಉತ್ತರಿಸಲು) ಸಜ್ಜಾಗಿ ನಿಂತನು. (ಮರುನುಡಿಯನೊರೆಯಲುಜ್ಜುಗಿಸಿದನು ನಿಂದು).

ಅನ್ವಯ :—ಇತಿ ರಘುಣಾ ಸಮೀರಿತಂ ಪ್ರಗಲ್ಭಂ ವಚಃ ನಿಶಮ್ಯ ದಿವೌಕಸಾಂ ಅಧಿಪತಿಃ ಸ ವಿಸ್ಮಯಃ (ಸನ್) ರಥಂ ನಿವರ್ತಯಾಮಾಸ ಉತ್ತರಂ ಪ್ರತಿವಕ್ತುಂ ಪ್ರಚಕ್ರಮೇ ಚ ॥

ಪ್ರಗಲ್ಭಂ ವಚಃ = ಸುಪ್ರೌಢವಾಕ್ಯಗಳನು, ದಿವೌಕಸಃ = ಸ್ವರ್ಗೌಕಸಃ—''ದಿವಂ ಸ್ವರ್ಗೇಽನ್ತರಿಕ್ಷೇ ಚ'' ಇತಿ ವಿಶ್ವಃ—ಉತ್ತರ ಪ್ರತಿವಕ್ತುಂ ಪ್ರಚಕ್ರಮೇ ಚ—ಪ್ರಗಲ್ಭಮ್ = ಧೈರ್ಯ ಹಾಗೂ ದೃಢಚಿತ್ತನಾದ (ದೃಢಮನಸ್ಕನಾದ)—ಹೇ ರಾಜನ್ಯಕುಮಾರ.

**48.** **ಯದಾತ್ಥ ರಾಜನ್ಯಕುಮಾರ ತತ್ತಥಾ ।**
**ಯಶಸ್ತು ರಕ್ಷ್ಯಂ ಪರತೋ ಯಶೋಧನೈಃ ॥**
**ಜಗತ್ಪ್ರಕಾಶಂ ತದಶೇಷಮಿಜ್ಯಯಾ ।**
**ಭವದ್ಗುರುರ್ಲಂಘಯಿತುಂ ಮಮೋದ್ಯತಃ** ॥ ೪೮ ॥

ಎಲೈ ರಾಜಕುಮಾರನೆ (ದೊರೆಮಗನೆ, ಅರಸುಕುವರನೆ), ನೀನು ಹೇಳಿದ ವಿಷಯಗಳೆಲ್ಲವೂ ಸತ್ಯವೂ ಸ್ತುತ್ಯವಾದವುಗಳೇ (ದಿಟಪಾದವುಗಳೇ). ಯಶಸ್ಸು, ಕೀರ್ತಿ ಇವುಗಳನ್ನು ಯಶೋಧನರು (ಯಶೋಧನರಾದ ಮಾನವರು) ಮನಸಾರೆ ಇಚ್ಛಿಸಿ ಅದನ್ನೇ ಪೊರೆಯುವರು, ಇದನ್ನು ನಾನು ಅಲ್ಲಗಳೆಯಲಾರೆ. ಈ ಯಜ್ಞದಿಂದ ಇದೀಗ

ನಿನ್ನ ತಂದೆಯು ನನ್ನನ್ನು ಮೀರಲುದ್ಯುಕ್ತನಾಗಿರುವನು. ನನ್ನ ಕೀರ್ತಿಗೆ ಗ್ರಹಣಪ್ರಾಯನಾಗಿರುವನು. ನನಗೆ ಸವಾಲಾಗಿರುವನು. ನನಗೆ ಮುಳುವಾಗಿರುವನು. ಅದನ್ನು ನಾನು ಸುಮ್ಮನೆ ನೋಡುತ್ತ, ತಟಸ್ಥನಾಗಿ, ಕ್ರಿಯಾಹೀನನಾಗಿ ನಿಂದಿರಲಾರೆ. ನನ್ನ ಗೌರವವನ್ನು ರಕ್ಷಿಸಲು ನಾನಿಂದು ಕಟಿಬದ್ಧನಾಗಿ ನಿಂದಿರುವೆನು (ಅವನ ಗ್ರಹಚಾರವನ್ನು ಬಿಡಿಸುವೆನು).

ರಾಜನ್ಯ = ಕ್ಷತ್ರಿಯ, ರಾಜನ್ಯಕುಮಾರ = ಕ್ಷತ್ರಿಯಕುಮಾರ—"ಮೂರ್ಧಾಭಿಷಿಕ್ತೋ ರಾಜನ್ಯೋ ಬಾಹುಜಃ ಕ್ಷತ್ರಿಯೋ ವಿರಾಟ್" ಇತ್ಯಮರಃ—ಯದ್ವಾಕ್ಯಮಾತ್ಥ = ಬ್ರವೀಷಿ—ತತ್ತಥಾ = ಸತ್ಯಮ್—ಕಿಂತು ಯಶೋಧನೈರಸ್ಮಾದೃಶೈಃ ಪರತಃ = ಶತ್ರುತೋ ಯಶೋ ರಕ್ಷ್ಯಮ್—ಜಗತ್ಪ್ರಕಾಶಂ = ಲೋಕಪ್ರಸಿದ್ಧಂ—ಅಶೇಷಂ = ಸರ್ವಂ—ಲುಂಪಯಿತುಂ = ತಿರಸ್ಕರ್ತುಂ—ಉದ್ಯತಃ = ಉದ್ಯುಕ್ತಃ ॥

**49.** **ಹರಿರ್ಯಥೈಕಃ ಪುರುಷೋತ್ತಮಃ ಸ್ಮೃತೋ ।**
**ಮಹೇಶ್ವರಸ್ತ್ರ್ಯಂಬಕ ಏವ ನಾಪರಃ**
**ತಥಾ ವಿದುರ್ಮಾಂ ಮುನಯಃ ಶತಕ್ರತುಂ ।**
**ದ್ವಿತೀಯಗಾಮೀ ನ ಹಿ ಶಬ್ದ ಏಷ ನಃ** ॥ ೪೯ ॥

"ಎಲೈ ದಿಲೀಪನಂದನಾ (ರಘುವೇ), ಎಂತು ಶ್ರೀಹರಿಯೊಬ್ಬನೇ ತಾನು ಪುರುಷೋತ್ತಮನೋ, ಎಂತು ಮುಕ್ಕಣ್ಣನಾದ (ತ್ರ್ಯಂಬಕ) ಶಿವನು ಓರ್ವನೇ ಮಹೇಶ್ವರನೋ, ಅಂತೆಯೇ ಶತಕ್ರತು, ನೂರು ಯಾಗಗಳನ್ನು ಮಾಡಿದ ಶತಮಖನೆಂದು ಸ್ವರ್ಗ, ಮರ್ತ್ಯ, ಪಾತಾಳಗಳೆಂಬ ಮೂರು ಲೋಕಗಳಲ್ಲಿ ಪ್ರಖ್ಯಾತನಾಗಿರುವೆನು. ಹಾಗೆಂದು ಮಹಾಮುನಿಗಳು, ಋಷಿಗಳು, ಮಹರ್ಷಿಗಳು. ಮಹಾತ್ಮರು. ವಿಭೂತಿಪುರುಷರು, ಜನಸ್ತೋಮ ಕರೆಯುತ್ತಿರುವರು. ಈ ಬಿರುದು ಅನ್ಯರನ್ನು ಸೇರುವಂತಿಲ್ಲ. (ಈ ನುಡಿಗಳನ್ಯರೊಳು ಸಲ್ಲವೆಂದರಿಯುದಪ್) ನನಗೊಬ್ಬನಿಗೇ ಇದು ಮೀಸಲು. ಅನ್ಯರಿಗೆ ಇದು ಸಲ್ಲದು. ನಾನು ಇದನ್ನು ಸಹಿಸೆನು. ಅಂತಿರುವ ಕಾರಣ (ಈ ಒಂದೇ ಒಂದು ಕಾರಣದಿಂದ) ನಾನು ನಿನ್ನ ಪಿತನ ಈ ನೂರನೆಯ ಯಾಗದ ತುರಗವನ್ನು ತಡೆದಿರುವೆನು. ನನ್ನ ಹೆಸರನ್ನು (ಬಿರುದನ್ನು) ಅಪಹರಿಸುವ ಶತ್ರುಗಳ ಕೈಯಿಂದ ರಕ್ಷಿಸಲು ಬದ್ಧಕಂಕಣನಾಗಿ, ಶಸ್ತ್ರಧಾರಿಯಾಗಿ ನಿಂತಿರುವೆನು.

ತ್ರ್ಯಂಬಕ = ಮುಕ್ಕಣ್ಣ (ಬಹುವ್ರೀಹಿ ಸಮಾಸ).

ಯಥಾ ಹರಿರ್ವಿಷ್ಣುರೇಕ ಏವ ಪುರುಷೋತ್ತಮಃ ಸ್ಮೃತಃ—ಯಥಾ ಚ ತ್ರ್ಯಂಬಕ ಶಿವ ಏವ ಮಹೇಶ್ವರಃ ಸ್ಮೃತಃ—ನಾಪರೋಽಪರಃ ಪುಮಾನ್—ಶತಕ್ರತುಂ ವಿದುರ್ವದಂತಿ—ಪೂಜ್ಯಮಾನ್ಯೈಃ ॥

**50.** **ಅತೋಽಯಮಶ್ವಃ ಕಪಿಲಾನುಕಾರಿಣಾ ।**
**ಪಿತುಸ್ತ್ವದೀಯಸ್ಯ ಮಯಾಪಹಾರಿತಃ ॥**
**ಅಲಂ ಪ್ರಯತ್ನೇನ ತವಾತ್ರ ಮಾ ನಿಧಾಃ ।**
**ಪದಂ ಪದವ್ಯಾಂ ಸಗರಸ್ಯ ಸಂತತೇಃ** ॥ ೫೦ ॥

ಆದುದರಿಂದ ನೀನು ಈ ಕಾರ್ಯದಲ್ಲಿ ಸಗರಪುತ್ರರಂತೆ ಪೂರ್ವಾಪರ ಯೋಚಿಸದೆ ವೃಥಾ ಮುಂದಡಿಯಿಡದಿರು. ಈ ಹಿಂದೆ ಕಪಿಲಮುನಿಯು ಸಗರಪುತ್ರರ ಯಜ್ಞಕುದುರೆಯನ್ನು (ಯಜ್ಞಾಶ್ವವನ್ನು) ಕೊಂಡೊಯ್ದಂತೆ ಒಯ್ದಿರುವೆನು. ಆ ದೃಷ್ಟಾಂತವನ್ನು ನಾನು ಅನುಕರಿಸಿರುವೆನು. ಎಲೈ ಕ್ಷತ್ರಿಯಕುಮಾರನೇ, ಈ ದಿಶೆಯಲ್ಲಿ ನೀನು ಪ್ರಯತ್ನ ಮಾಡದೆ ನಿನ್ನ ಯತ್ನವನ್ನು ಅರ್ಧಕ್ಕೇ ನಿಲ್ಲಿಸಿಬಿಡು. ಮೊಂಡುಬುದ್ಧಿಯ ಸಗರ ಕುಮಾರರಂತೆ ನೀನು ಎಡವಿಬೀಳದಿರು. ನನ್ನ ಹಿತವಚನಗಳನ್ನು ಲಾಲಿಸಿ ಕೇಳು, ದುಡುಕದಿರು. ಸಗರಕುವರರ ಎಡೆಯೊಳು (ಮಾರ್ಗದಲ್ಲಿ, ದಾರಿಯಲ್ಲಿ) ಅಡಿಯಿಡದಿರು. ಅವರಿಗಾದ ಗತಿಯು ನಿನಗೂ ಆಗಬಹುದು. ಎಚ್ಚರಿಕೆ (ಇದಕ್ಕಾಗಿ ಯತ್ನವನು ಬಿಟ್ಟುಬಿಡು ನೋಡ, ಸಗರಕುವರರ ಎಡೆಯೊಳಡಿಯನಿಡಬೇಡ ನೋಡ) ಎಂದನು.

ಅನ್ವಯ :—ಅತಃ ಕಪಿಲಾನುಕಾರಿಣಾ ಮಯಾ ತ್ವದೀಯಸ್ಯ ಪಿತುಃ ಅಯಂ ಅಶ್ವಃ ಅಪಹಾರಿತಃ। ತವ ಅತ್ರ ಪ್ರಯತ್ನೇನ ಅಲಮ್। ಸಗರಸ್ಯ ಸಂತತೇಃ ಪದವ್ಯಯಾಂ ಪದಂ ಮಾ ನಿಧಾಃ ॥

ಕಪಿಲಮುನಿಗಳು ಸಾಂಖ್ಯಸಿದ್ಧಾಂತದ (ಸಾಂಖ್ಯತತ್ವ, ಶಾಸ್ತ್ರದ) ಅನ್ವೇಷಕರು (ಜನಕರು. ಪ್ರತಿಪಾದಕರು, ಪ್ರತಿಷ್ಠಾಪನಾಚಾರ್ಯರು)

ಕಪಿಲಾನುಕಾರಿಣಾ= ಕಪಿಲಮುನಿತುಲ್ಯೇನ–ಮಯಾಽಪಹಾರಿತೋಽಪಹೃತಃ–ಸಗರಸ್ಯ ರಾಜ್ಞಃ—ಸಂತತೇ = ಸಂತಾನಸ್ಯ—ಪದವ್ಯಾರಿ ಪದಂ ಮಾ ನಿಧಾನ ನಿಧೇಹಿ—ವಿನಾಶ ಮೂಲಂ ಭವೇದಿತಿ ಭಾವಃ ॥

51. ತತ್ ಪ್ರಹಸ್ಯಾಪಭಯಃ ಪುರಂದರಂ।
ಪುನರ್ಬಭಾಷೇ ತುರಗಸ್ಯ ರಕ್ಷಿತಾ ॥
ಗೃಹಾಣ ಶಸ್ತ್ರಂ ಯದಿ ಸರ್ಗ ಏಷ ತೇ।
ನ ಖಲ್ವನಿರ್ಜಿತ್ಯ ರಘುಂ ಕೃತೀಭವಾನ್ ॥ ೫೧ ॥

ಆ ಮಾತುಗಳನ್ನು ಕೇಳಿ ತುರಗರಕ್ಷಕನಾದ ರಘುವು ನಕ್ಕು ಹೀಗೆಂದು ನುಡಿದನು : "ಎಲೈ ಪುರಂದರನೆ, ನಿನ್ನ ನಿಲುವು ಇಂತಾದರೆ ನೀನು ಕೂಡಲೇ ಅಸ್ತ್ರವನ್ನು ಧರಿಸು. ರಘುವನ್ನು ಗೆಲ್ಲದೆಯೆ ನೀನು ನಿನ್ನ ಕಾರ್ಯದಲ್ಲಿ ಕೃತಕೃತ್ಯನಾಗಲಾರೆ."

ಕೃತೀ = ಕೃತಿಮ್ ಅಸ್ಯ ಅಸ್ತಿ ಇತಿ.

ಪುನಃ ಪುರಂದರಂ—ಬಭಾಷೇ—"ಸರ್ಗಃ ಸ್ವಭಾವನಿರ್ಮೋಕ್ಷಾನಿಶ್ಚಯಾಧ್ಯಾಯ ಸೃಷ್ಟಿಷು" ಇತ್ಯಮರಃ—ಭವಾನ್ ರಘುಂ ಮಾಮನಿರ್ಜಿತ್ಯ—ಕೃತಿಮಾನೇನೇತಿ ಕೃತೀ—ಕೃತಕೃತ್ಯೋ ನ ಖಲು ॥

52. ಸ ಏವಮುಕ್ತ್ವಾ ಮಘವಂತಮುನ್ಮುಖಃ।
ಕರಿಷ್ಯಮಾಣಃ ಸಶರಂ ಶರಾಸನಮ್ ॥
ಅತಿಷ್ಠದಾಲೀಢವಿಶೇಷಶೋಭಿನಾ।
ವಪುಃಪ್ರಕರ್ಷೇಣ ವಿಡಂಬಿತೇಶ್ವರಃ ॥ ೫೨ ॥

ಈ ಹಿಂದೆ ಭಗೀರಥನ ತಪಸ್ಸಿಗೆ ಮೆಚ್ಚಿ ದೇವಗಂಗೆಯು ಭೂಮಿಗಿಳಿಯುತ್ತಿದ್ದಾಗ ಅದನ್ನು ತಲೆಯಲ್ಲಿ ಧರಿಸಲು, ತನ್ನ ಕೇಶರಾಶಿಯನ್ನು ಬಿಚ್ಚಿ ನಿಂದಿರ್ದ ಶಂಭುವಿನಂತೆ ತನ್ನ ದೃಷ್ಟಿಯನ್ನು ಮೇಲೆ ಮಾಡಿ ರಘುವು ನಿಂತಿರ್ದನು. ಆ ಮಹಾಧನುರ್ಧರನು ಹೆದೆ ಏರಿದ ಬಿಲ್ಲಿನಿಂದ ಶೋಭಿಸಿದನು. ಹರಿತವಾದ ಬಾಣವನ್ನು ಬಿಲ್ಲಿಗೆ ಜೋಡಿಸಿ ಆಲೀಢ ಭಂಗಿಯಲ್ಲಿ ಯುದ್ಧೋತ್ಸುಕನಾಗಿ ಅತುಳಶೋಭೆಯಿಂದ ಪ್ರಕಾಶಿಸುತ್ತಾ ಮೈನಿಮಿರಿ ನಿಂತಿದ್ದನು. ಆ ಮಹಾವೀರನು ಮೇಲ್ಮುಖಮಾಡಿ ಮಘವಂತನನ್ನು ನೋಡುತ್ತಾ ನಿಂದಿರಲು ಜಟಾವಲ್ಕಲಧಾರಿಯಾದ, ಕಾಮಾರಿಯಾದ ಶಂಭುವನ್ನೇ ಹೋಲುತ್ತಿದ್ದನು. (ಆಲೀಢದಿಂದತುಳಶೋಭೆಪಡೆದವನು, ಶಂಭುವೊಲು ನಿಂತೆಸೆವನವನು).

ಅನ್ವಯ:—ಸ ಉನ್ಮುಖಃ (ಸನ್) ಮಘವಂತಮ್ ಏವಮ್ ಉಕ್ತ್ವಾ ಸಶರಂ ಶರಾಸನಕರಿಷ್ಯಮಾಣಃ ಆಲೀಢವಿಶೇಷಶೋಭಿನಾ ವಪುಃ ಪ್ರಕರ್ಷೇಣ ವಿಡಂಬಿತೇಶ್ವರಃ ಅತಿಷ್ಠತ್ ॥

ಸ ಉನ್ಮುಖಃ—ಮಘವಂತಮ್ = ದೇವೇಂದ್ರ, ಶರಾಸನಮ್ = ಶರಾಃ ಅಸ್ಯಂತೇ ಅನೇನ—ಆಲೀಢವಿಶೇಷಶೋಭಿನಾ—ವಪುಃ ಪ್ರಕರ್ಷೇಣ—ದೇಹೌನ್ನತ್ಯೇನ—ವಿಡಂಬಿತೇಶ್ವರಃ ॥

ಮಘವಂತ = ಇಂದ್ರ—ಶರಾಸನಂ=ಚಾಪ—ಆಲೀಢನಾಲೀಢಾಖ್ಯೇನ ಸ್ಥಾನಭೇದೇನ —ವಿಶೇಷಶೋಭಿನಾಽತಿಶಯಶೋಭಿನಾ—ವಪುಃ ಪ್ರಕರ್ಷೇಣ = ದೇಹೌನ್ನತ್ಯೇನ— ವಿಡಂಬಿತೇಶ್ವರೋಽನುಸ್ಕೃತ ಪಿನಾಕೀ ಸನ್—ಶರಾಸನಮ್ = ಶರಾಃ ಅಸ್ಯಂತೇ ಅನೇನ —ಆಲೀಢವಿಶೇಷಶೋಭಿನಾ = ವೈಶಾಖ, ಮಂಡಲ, ಸಮಪದ, ಆಲೀಢ, ಪ್ರತ್ಯಾಲೀಢ ಮೊದಲಾದ ಐದು ವಿಧದ ಯುದ್ಧವೀರರ (ಬಿಲ್ಲಾಳುಗಳ) ಬಾಣ ಹೂಡುವ ಭಂಗಿಗಳು—ವಿಡಂಬಿತೇಶ್ವರಃ = ಶಿವನನ್ನು ಹೋಲು, ಅನುಕರಿಸು—ಶರಾಸನಂ ಚಾಪಂ ಸಶರಂ ಕರಿಷ್ಯಮಾಣಃ ॥

**53.** ರಘೋರವಷ್ಟಂಭಮಯೇನ ಪತ್ರಿಣಾ ।
ಹೃದಿ ಕ್ಷತೋ ಗೋತ್ರಭಿದಪ್ಯಮರ್ಷಣಃ ॥
ನವಾಂಬುದಾನೀಕ ಮುಹೂರ್ತಲಾಂಛನೇ ।
ಧನುಷ್ಯಮೋಘಂ ಸಮಧತ್ತ ಸಾಯಕಮ್ ॥ ೫೩ ॥

ರಘುವಿನ ಸಾಯಕವು ನೇರವಾಗಿ ಬಂದು ಮಹೇಂದ್ರನ (ಪುರಂದರನ, ಮಘವಂತನ) ಎದೆಯ ಒಳಹೊಗಲು, ಪರ್ವತಗಳನ್ನು ನಾಶಗೈಯಬಲ್ಲ ವಜ್ರಿಯು ಮುನಿಸುಗೊಂಡು ಒಂದು ದಿವ್ಯಸಾಯಕವನ್ನು ಮೂಡಿಗೆಯಿಂದ ತೆಗೆದನು. ಆ ದಿವ್ಯಬಾಣವು ಕಾಮನಬಿಲ್ಲು ಬಾನಲ್ಲಿ ಮೂಡಿದಾಗ ಹೊಸ ಮೋಡಗಳು ಆಕಾಶದಲ್ಲಿ ಕಾಣಿಸುವಂತೆ ಕಂಡಿತು. ಆ ದಿವ್ಯಾಸ್ತ್ರವು ತನ್ನ ಗುರಿಯನ್ನು ಸೇರುವುದಂತೂ ವಿದಿತವೆ; ಹೊಸ ಮೋಡರಾಶಿಯಲ್ಲಿ ಒಂದು ಅರೆಗಳಿಗೆ ಹೊಳೆವ ಕಾಮನಬಿಲ್ಲಿನಂತೆ (ಇಂದ್ರಚಾಪದಂತೆ) ಆ ಸಾಯಕವು ಪ್ರಕಾಶಮಾನವಾಗಿ ಶೋಭಿಸುತ್ತಾ ತನ್ನ ಗುರಿ ಸೇರಿತು (ಅಮೋಘಸಾಯಕವ). ವೀರ ರಘುವು

ಸಹಸ್ರಾಕ್ಷನನ್ನು ಪ್ರತಿಭಟಿಸಿ ವೀರಭಂಗಿಯಲ್ಲಿ ನೆಲದ ಮೇಲೆ (ಭೂಮಿಯ ಮೇಲೆ) ದೃಢವಾಗಿ ನಿಂತಿದ್ದನು.

ಅನ್ವಯ :—ರಘೋಃ ಅವಷ್ಟಂಭಮಯೇನ ಪತ್ರಿಣಾ ಹೃದಿ ಕ್ಷತಃ (ಅತ ಏವ) ಅಮರ್ಷಣಃ ಗೋತ್ರಭಿದ್ ಅಪಿ ನವಾಂಬುದಾನೀಕ ಮುಹೂರ್ತ ಲಾಂಛನೇ ಧನುಷಿ ಅಮೋಘಸಾಯಕಂ ಸಮಧತ್ತ ॥

(ಅಮೋಘಸಾಯಕವ—)

ರಘೋಃ : ಅವಷ್ಟಂಭಮಯೇನ = ಪತ್ರಿಣಾ ಹೃದಿ ಕ್ಷತಃ—ಅವಷ್ಟಂಭಮಯೇನ = ಸ್ತಂಭರೂಪೇಣ = ಗಾತ್ರಸ್ತಂಭ ಗೋತ್ರಭಿದ್ = ಪರ್ವತಭೇದಕ, ಗೋತ್ರ = ಗಾಂ ಪೃಥ್ವೀಂ ತ್ರಾಯಂತೇ ಇತಿ ಗೋತ್ರ :—ನವಾಂಬುದಾ = ನವಾಂಬುದಾನಾಮ್—

ರಘೋಃರವಷ್ಟಂಭಮಯೇನ = ಸ್ತಂಭರೂಪೇಣ—"ಅವಷ್ಟಂಭಃ ಸುವರ್ಣೇ ಚ ಸ್ತಂಭಪ್ರಾರಂಭಯೋರಪಿ" ಇತಿ ವಿಶ್ವಃ—ಪತ್ರಿಣಾ = ಬಾಣೇನ—ಹೃದಿ = ಹೃದಯೇ —ಕ್ಷತೋ=ವಿದ್ಧಃ—ಅತ ಏವಾಮರ್ಷಣೋಽಸಹನಃ—ಕ್ರುದ್ಧ ಇತ್ಯರ್ಥಃ—ಗೋತ್ರಾಭಿ ದಿಂದ್ರೋಽಪಿ—"ಸಂಭಾವನೀಯೇ ಚೌರೇಽಪಿ ಗೋತ್ರಃ ಕ್ಷೋಣೀಧರೇ ಮತಃ" ಇತಿ ವಿಶ್ವಃ—ಮುಹೂರ್ತಂ = ಕ್ಷಣಮಾತ್ರಂ—ಲಾಂಛನೇ = ಚಿಹ್ನಭೂತೇ—ಅಮೋಘಮ ಮಂದ್ಯ—ಸಾಯಕಂ = ಬಾಣಂ ॥

ಗೋತ್ರಭಿದ್ = ಗೋತ್ರ = ಗಾಂ ಪೃಥ್ವೀಂ ತ್ರಾಯಂತೇ ಇತಿ ಗೋತ್ರಃ = ಪರ್ವತ ಬೇಧಕ—ನವಾಭ್ಯುದಾ=ನವಾಭ್ಯುದಾನಾಮ್ (ದ್ವಂದ್ವಸ್ಯ)—ಲಾಂಛನೇ ಚಿಹ್ನಭೂತೇ —ಇಂದ್ರಧನು = ಇಂದ್ರನ ಬಿಲ್ಲು (ಚಾಪ).

**54. ದಿಲೀಪಸೂನೋಃ ಸ ಬೃಹದ್ಭುಜಾಂತರಂ ।**
**ಪ್ರವಿಶ್ಯ ಭೀಮಾಸುರಶೋಣಿತೋಚಿತಃ ॥**
**ಪಪಾವನಾಸ್ವಾದಿತ ಪೂರ್ವಮಾಶುಗಃ ।**
**ಕುತೂಹಲೇನೇವ ಮನುಷ್ಯಶೋಣಿತಂ ॥ ೫೪ ॥**

ಭೀಮಬಲದ, ಭಯಂಕರಾಕಾರದ, ಅದ್ಭುತಕಾಯರಾದ ರಾಕ್ಷಸರ ನ್ಯೆಯ ನೆತ್ತರಿನ ಸವಿಯನ್ನು ಕಂಡ ಆ ದಿವ್ಯಕಣೆಯು ರಘುವಿನ (ದಿಲೀಪಸೂನೋಃ) ವಿಶಾಲವಾದ ಎದೆಯನ್ನು ನಾಂಟಿ (ಒಳಹೊಕ್ಕು. ದಾಂಟಿ) ಒಳಹೊಕ್ಕಿತು. ಆ ದಿವ್ಯಸಾಯಕವು ಈ ತನಕ ಮಾನವನೆತ್ತರನ್ನು ಕಂಡಿದಿರಲಿಲ್ಲ. ಇದೀಗ ಕುತೂಲಹಲದಿಂದ ನರನೆತ್ತರನ್ನು ಕಂಡಿದು, ನರನೆತ್ತರಿನ ಸವಿಯನ್ನು (ರುಚಿಯನ್ನು) ಅನುಭವಿಸಿತು.

ಅನ್ವಯ :—ಭೀಮಾಸುರ ಶೋಣಿತೋಚಿತ ಸ ಆಶುಗಃ ದಿಲೀಪಸೂನೋಃ ಬೃಹತ್ ಭುಜಾಂತರಂ ಪ್ರವಿಶ್ಯ ಅನಾಸ್ವಾದಿತ ಪೂರ್ವಂ ಮನುಷ್ಯಶೋಣಿತಕುತೂಹಲೇನ್ಯೆವ ಪಪೌ ॥

ಭೀಮಾನಾಂ=ಭಯಂಕರಾಣಾಮ್—ಅಸುರಾಣಾಂ ಶೋಣಿತಂ=ರುಧಿರೇ—ಆಶುಗಃ = ಸಾಯಕೋ—ರಘೋಃ ಬೃಹತ್ = ವಿಶಾಲಂ—ಭುಜಾಂತರಂ = ವಕ್ಷಃ—ಮನುಜ ಶೋಣಿತೇನ ಕುತೂಹಲೇನ ಪಪೌ—ಶೋಣಿತೇ = ರುಧಿರೇ ॥

**55. ಹರೇಃ ಕುಮಾರೋಽಪಿ ಕುಮಾರವಿಕ್ರಮಃ ।**
**ಸುರದ್ವಿಪಾಸ್ಫಾಲನಕರ್ಕಶಾಂಗುಲೌ ॥**
**ಭುಜೇ ಶಚೀಪತ್ರವಿಶೇಷಕಾಂಕಿತೇ ।**
**ಸ್ವನಾಮಚಿಹ್ನಂ ನಿಚಖಾನ ಸಾಯಕಮ್ ॥ ೫೫ ॥**

ರಘುವಾದರೋ ಧೀಮಂತದೇವಸೇನಾನಿಯಾದ ಷಣ್ಮುಖನಂತೆ ಅಮಿತವಿಕ್ರಮಾಗ್ನಿಯಿಂದ ಮೆರೆಯುತ್ತಾ, ಸುರರ ಜಗಜಟ್ಟಿಯನ್ನು ಎದುರಿಸಿ ಖಾಡಾಖಾಡಿ ಸಂಗ್ರಾಮಕ್ಕೆ ಸನ್ನದ್ಧವಾಗಿ ನಿಂತಿದ್ದನು. ತನ್ನ ಹೆಸರಿರುವ ಪೆರತೊಂದು ನವಿಲುಗರಿಯಿಂದ ಅಲಂಕೃತವಾಗಿರುವ ಅಮೋಘವಾದ ಒಂದು ಸಾಯಕವನ್ನು ಇಂದ್ರನ ಬಲತೋಳಿಗೆ ಗುರಿಯಿಟ್ಟು ಹೊಡೆದನು. ಆ ಶರವು ಐರಾವತವೆಂಬ ಆನೆಯನ್ನು ತಟ್ಟುವ ಇಂದ್ರನ ಕಡುಬೆಟ್ಟಿತಾಗಿರುವ (ದಡ್ಡುಕಟ್ಟಿರುವ) ಬೆರಳುಗಳೆಂದೆಸೆಯುವ ಮಹಾಬಾಹುವನ್ನು ಒಳಹೊಕ್ಕಿತು. ಇಂದ್ರಪತ್ನಿಯಾದ ಶಚೀದೇವಿಯು ಪ್ರೇಮದಿಂದ ರಚಿಸಿದ ಪವುಸೆಲತೆಗಳು ಅಂಟಿಕೊಂಡಿರುವ (ಅಚ್ಚೊತ್ತಿರುವ) ನಾನಾ ಬಣ್ಣದಿಂದ ಅಲಂಕೃತಗೊಂಡಿರುವ ಬಾಹುಲತೆಗಳಲ್ಲಿ ಕೂರಂಬುಗಳನ್ನು ನಾಟಿಸಿ ತನ್ನ ಎದೆಗಾರಿಕೆಯನ್ನು ತೋರಿದನು, ಪೌರುಷವನ್ನು ಮೆರೆದನು, ವಿಕ್ರಮಾಗ್ನಿಯನ್ನು ಪ್ರಜ್ವಲಿಸಿದನು.

ಅನ್ವಯ :—ಕುಮಾರವಿಕ್ರಮಃ ಕುಮಾರಃ ಅಪಿ ಹರೇಃ ಸುರದ್ವಿಪಾಸ್ಫಾಲನಕರ್ಕಶಾಂಗುಲೌ ಶಚೀಪತ್ರವಿಶೇಷಕಾಂಕಿತೇ ಸ್ವನಾಮಚಿಹ್ನಂ ಸಾಯಕಂ ನಿಚಖಾನ ॥

ಕುಮಾರಸ್ಯ = ಸ್ಕಂದಸ್ಯ—ವಿಕ್ರಮಃ ಇವ = ವಿಕ್ರಮೋ ಯಸ್ಯ ಸ ತಥೋಕ್ತಃ—ಸುರದ್ವಿಪಸ್ಯೈರಾವತಸ್ಯಾಸ್ಫಾಲನೇನ ಕರ್ಕಶಾ ಅಂಗುಲಯೋ ಯಸ್ಯ ಸಃ—ಶಚ್ಯಾಃ ಪತ್ರವಿಶೇಷಕೈರಂಕಿತೇ—ಹರೇರಿಂದ್ರಸ್ಯ. ಭುಜೇ ಸ್ವನಾಮಚಿಹ್ನಂ = ಸ್ವನಾಮಾಂಕಿತಂ—ನಿಚಖಾನ = ನಿಖಾತವಾನ ॥

**56. ಜಹಾರ ಚಾನ್ಯೇನ ಮಯೂರಪತ್ರಿಣಾ ।**
**ಶರೇಣ ಶಕ್ರಸ್ಯ ಮಹಾಶನಿಧ್ವಜಮ್ ॥**
**ಚುಕೋಪ ತಸ್ಮೈ ಸ ಭೃಶಂ ಸುರಶ್ರಿಯಃ ।**
**ಪ್ರಸಹ್ಯ ಕೇಶವ್ಯಪರೋಪಣಾದಿವ ॥ ೫೬ ॥**

ರಘುವು ತನ್ನ ಧನುರ್ವಿದ್ಯಾಮಹಿಮೆಯನ್ನು ಇಂದ್ರನಿಗೆ ತೋರಿಸುವನೋ ಎಂಬಂತೆ ಬೇರೊಂದು ನವಿಲುಗರಿಯಿಂದ ಅಲಂಕೃತವಾಗಿರುವ ದಿವ್ಯಮಾರ್ಗಣವನ್ನು ಬೇಗನೇ ಬಿಲ್ಲಿಗೆ ಹೂಡಿ ಜೇಗೈದನು. ಆ ದಿವ್ಯಾಸ್ತ್ರವು ಇಂದ್ರನ ಸಿಡಿಲೇ ಧ್ವಜವಾಗಿರುವ ಆ ಮಹಾ ಅಶನಿಧ್ವಜವನ್ನು ಇಕ್ಕಡಿಗೆಯ್ದಿತು. ಆ ಮಹಾಸಿಡಿಲಿನ ಧ್ವಜವು ಕಡಿದು ಉರುಳಿಬಿದ್ದಾಗ ದೇವರಾಜ್ಯಶ್ರೀಯು ಶ್ರೀಮುಡಿಯನ್ನು ಕೈಯಿಂದ ಬಲಾತ್ಕಾರವಾಗಿ ಎಳೆದಂತೆ, ಜುಟ್ಟನ್ನು ಸೆಳೆದಂತೆ ಕಂಡಿತು (ದೇವರಾಜ್ಯಶ್ರೀಯ ಮುಡಿಯನೆಳೆದಂತೆ). ಇದರಿಂದ ಕೋಪವಾಂತ (ಕೆಂಡವಾದ) ಇಂದ್ರನು ಘಟಸರ್ಪದಂತೆ, ಕೋಪದಿಂದ ಉರಿದೆದ್ದನು, ಸಿಡಿದೆದ್ದನು.

ಅನ್ವಯ :—ಅನ್ಯೇನ ಮಯೂರಪತ್ರಿಣಾ ಶರೇಣ ಚ ಶಕ್ರಸ್ಯ ಮಹಾಶನಿಧ್ವಜಂ ಜಹಾರ। ಸ ಸುರಶ್ರಿಯಃ ಪ್ರಸಹ್ಯ ಕೇಶವ್ಯಪರೋಪಣಾದಿವ ತಸ್ಮೈ ಭೃಶಂ ಚುಕೋಪ ॥

ಮಯೂರಪತ್ರಿಣಾ—ಸುರಶ್ರಿಯಃ—ಕೇಶವ್ಯಪರೋಪಣಾದಿವ=ಸುರರಮೆಯ ತಲೆ ಕೂದಲು ಕೊಯ್ದುದಕೆ ಮುಳಿವೊಲ್—ಮಹಾ + ಅಶನಿಧ್ವಜಮ್—ಮಯೂರಪತ್ರಿಣಾ = ಶರೇಣ——ಮಹಾಶನಿಧ್ವಜಂ = ಮಹಾಂತಮಶನಿರೂಪಂ ಧ್ವಜಂ—ಜಹಾರ=ಚಿಚ್ಛೇದ —ಸಶಕ್ರಃ—ಸುರಶ್ರಿಯಃ ಪ್ರಸಹ್ಯ= ಬಲಾತ್ ಕೃತ್ಯ—ಕೇಶಾನಾಂ ವ್ಯಪರೋಪಣಾದವತಾರಣಾಚ್ಛೇದನಾದಿವ ।

**57.** **ತಯೋರುಪಾಂತಸ್ಥಿತಸಿದ್ಧಸೈನಿಕಂ ।**
**ಗರುತ್ಮದಾಶೀ ವಿಷಭೀಮದರ್ಶನೈಃ ॥**
**ಬಭೂವ ಯುದ್ಧಂ ತುಮುಲಂ ಜಯೈಷಿಣೋಃ ।**
**ಅಧೋಮುಖೈರೂರ್ಧ್ವಮುಖೈಶ್ಚ ಪತ್ರಿಭಿಃ ॥ ೫೭ ॥**

ವಿಜಯಕಾಂಕ್ಷಿತರಾಗಿ ಇಂದ್ರರಘುವರರು ದಿಟ್ಟತನದಿಂದ ವಾಸುಕಿ ಮತ್ತು ಗರುಡದಂತೆ ಭೀಕರವಾಗಿ ಹೋರಾಡಿದರು. ರಘುವು ಧರಿತ್ರಿಯ ಮೇಲೆ ಮೇಲ್ಮುಖನಾಗಿ ನಿಂತಿದ್ದರೆ, ವಾಸವನು ಕೆಳಮುಖನಾಗಿ ಕ್ಷತ್ರಿಯಕುಮಾರನನ್ನು ನೋಡುತ್ತ ಆಕಾಶಪಥದಲ್ಲಿ ನಿಂತಿದ್ದನು. ಅವರಿಬ್ಬರು ಕೆಳಗಿನಿಂದ ಮೇಲಕ್ಕೂ, ಮೇಲಿಸಿಂದ ಕೆಳಕ್ಕೂ ಸಿಡಿಲಿನಂತೆ ಹಾರಾಡುತ್ತಿರುವ ಕ್ಷಿಪಣಿಗಳಂತೆ ಅಥವಾ ರೆಕ್ಕೆಗಳಿರುವ ಉರಗಗಳಂತೆ ಬಾಣಗಳನ್ನು ಉಭಯರೂ ಮಸಗಿ ಎಸೆಯುತ್ತಿದ್ದರು. ಅವರ ಈ ಖಾಡಾಖಾಡಿ ಸಂಗ್ರಾಮವನ್ನು ಉಭಯಬಲದವರು ನೋಡುತ್ತಿದ್ದರು (ಗರುಡಸರ್ಪಗಳಂತೆ ನೋಡೆ ಭೀಕರರು—ನೋಡುತಿರೆ ಮಸಗಿ).

ಅನ್ವಯ :—ಜಯೈಷಿಣೋಃ ತಯೋಃ ಗರುತ್ಮದಾಶೀವಿಷಭೀಮದರ್ಶನೈಃ ಅಧೋಮುಖೈಃ ಊರ್ಧ್ವಮುಖೈಶ್ಚ ಪತ್ರಿಭಿಃ ಉಪಾಂತಸ್ಥಿತಸಿದ್ಧಸೈನಿಕಂ ತುಮುಲಂ ಯುದ್ಧಂ ಬಭೂವ ॥

ಅಧೋಮುಖೈಃ=ಕೆಳಮುಖವಾಗಿ—ಊರ್ಧ್ವಮುಖೈಶ್ಚ=ಮೇಲ್ಮುಖವಾಗಿ, ಗರುತ್‌ಮಂದಾ—ಗರುತ್—ಗರುತ್‌ಮಂತಃ = ಪಕ್ಷವಂತಃ—ಆಶೀವಿಷಾಃ = ಸರ್ಪಾ—ಆಶೀವಿಷ = ಆಶೀಷಿ ದಂಷ್ಟ್ರಾಯಾಂ ವಿಷಂ ಏಷಾಂ ತೇ ಆಶೀವಿಷಾಃ ತೇ ಇವ ಭೀಮದರ್ಶನಾಃ = ರೆಕ್ಕೆಗಳುಳ್ಳ ಸರ್ಪಗಳಂತೆ ಕ್ರೂರತಮವಾಗಿ.

ಗರುತ್ಮಂತಃ = ಪಕ್ಷವಂತಃ—“ಗರುತ್ ಪಕ್ಷಚ್ಛದಾಃ ಪತ್ರಮ್” ಇತ್ಯಮರಃ—“ಆಶೀರುರಗದಂಷ್ಟ್ರಾಯಾಂ” ಇತ್ಯಮರಃ—ಸ ಇವ ಭೀಮದರ್ಶನಾಃ = ಸಪಕ್ಷಾ ಸರ್ಪಾ ಇವ—ಸಿದ್ಧಾ = ದೇವಾ ಇಂದ್ರಸ್ಯ—ತುಮುಲಂ = ಸಂಕುಲಂ ಯುದ್ಧಂ ಬಭೂವ —ಸಿದ್ಧ = ಸಿದ್ಧರು (ದೇವಗಣ), ಅರೆದೇವತೆಗಳು, ಗರುತ್‌ಮಂದಾ—ಗರುತ್ = ರೆಕ್ಕೆ —ಗರುತ್‌ಮಂತಃ = ಪಕ್ಷವಂತಃ—ಆಶೀವಿಷಾಃ = ಸರ್ಪಾಃ—ತೇ ಇವ ಭೀಮದರ್ಶನಾಃ = ಕ್ರೂರವಾಗಿ ನೋಡು = ರೆಕ್ಕೆಯಿದ್ದ ಹಾವಿನಂತೆ.

**58.** **ಅತಿಪ್ರಬಂಧಪ್ರಹಿತಾಸ್ತ್ರವೃಷ್ಟಿಭಿಃ ।**
**ತಮಾಶ್ರಯಂ ದುಷ್ಪ್ರಸಹಸ್ಯ ತೇಜಸಃ ॥**

**ಶಶಾಕ ನಿರ್ವಾಪಯಿತುಂ ನ ವಾಸವಃ ।**
**ಸ್ವತಶ್ಚ್ಯುತಂ ವಹ್ನಿಮಿವಾದ್ಭಿರಂಬುಧಃ** ॥ ೫೮ ॥

ವಾಸವನು ನಿರಂತರ ಸುರಿಸಿದ ಬಾಣಗಳ ಮಳೆಯು ಅಪಾರವೀರ್ಯನಾದ ರಘುವಿನ ತೇಜಸ್ಸನ್ನು ನಂದಿಸಲಾರದೇ ಹೋಯಿತು. ಮಹಾಮೇಘವು ಸುರಿಸುವ ಸುರಿಮಳೆಯಾದರೂ, ಮೇಘದಿಂದ ಹೊರಹೊಮ್ಮುವ ವಿದ್ಯುತ್ತಿನ ಮತ್ತೊಂದು ರೂಪವಾದ ಮಿಂಚಿನ ಧಾರೆಯನ್ನು ನಂದಿಸಲಾರದೇ ಇರುವಂತೆ (ಆತ್ಮಜನಿತಾಗ್ನಿಯು ಜಲದಿಂದೆ ಮುಗಿಸಲಾರದ ಮಾಳ್ಕೆಯಿಂ) (ಆತ್ಮಾಂಶದ ಅಶನಿಯನ್ನೆ ಮುಗಿಲು ಗೆಲದಂತೆ) ರಘುವಿನ ತೇಜಸ್ಸನ್ನು ಕಡಿಮೆ ಮಾಡಲಾರದೇ ಹೋದನು. ಮಿಂಚು-ವಿದ್ಯುತ್ತು ಅಗ್ನಿಯು ಬೇರೆ ಬೇರೆ ರೂಪಗಳು. ಮೋಡದಲ್ಲಿ ಹೊರಹೊಮ್ಮುವ ಮಿಂಚು ಮೋಡದಿಂದ ಸುರಿದ ನೀರನ್ನು ನಂದಿಸಲು ಶಕ್ಯವಾಗದಿರುವಂತೆ ರಘುವು ತೇಜಸ್ಸಿನಿಂದ ಬೆಳಗುತ್ತಲೇ ಇದ್ದನು.

ಅನ್ವಯ :—ವಾಸವಃ ಅತಿಪ್ರಬಂಧಪ್ರಹಿತಾಸ್ತ್ರವೃಷ್ಟಿಭಿಃ ದುಷ್ಪ್ರಸಹಸ್ಯ ತೇಜಸಃ ಆಶ್ರಯಂ ತಮ್ ಅಂಬುಧಃ ಅದ್ಭಿಃ ಸ್ವತಶ್ಚ್ಯುತಂ ವಹ್ನಿಮಿವ ನಿರ್ವಾಪಯಿತುಂ ನ ಶಶಾಕ ॥

ವಾಸವಃ ಅತಿಪ್ರಬಂಧ—ವೃಷ್ಟಿಭಿಃ ದುಷ್ಪ್ರಸಹಸ್ಯತೇಜಸಃ ಆಶ್ರಯಂ ತಮ್ ಅಂಬುಧಃ ಅದ್ಭಿಃ ಸ್ವತಶ್ಚ್ಯುವಹ್ನಿಮಿವ ನಿರ್ವಾಪಯಿತುಂ ನ ಶಶಾಕ । ಅತಿಪ್ರಬಂಧೇನ ಪ್ರಹಿತಾಭಿಃ ಅಸ್ತ್ರವೃಷ್ಟಿಭಿಃ—ಅತಿಪ್ರಬಂಧ = ಅತಿಶಯಿತಃ ಪ್ರಬಂಧಃ—ತೇಜಃ = ತೇಜಸ್ಸು—ವಾಸವೋಽತಿಪ್ರಬಂಧೇನಾತಿ ಸಾತತ್ಯೇನ ಪ್ರಹಿತಾಭಿಃ ಪ್ರಯುಕ್ತಾಭಿರಸ್ತ್ರವೃಷ್ಟಿಭಿರ್ದುಷ್ಪ್ರಸಹಸ್ಯ= ದುಃಖೇನ ಸಹ್ಯತ ಇತಿ ದುಷ್ಪ್ರಸಹಂ ತಸ್ಯ—ತೇಜಸಃ = ಪ್ರತಾಪಸ್ಯಾಶ್ರಯಂ ತಂ ರಘುಮ್—ಅಂಬುದೋಽದ್ಭಿಃ ಸ್ವತಶ್ಚ್ಯುತಂ= ನಿರ್ಗತಂ—ವಹ್ನಿಮಿವನಿರ್ವಾಪಯಿತುಂನ ಶಶಾಕ—ಅತಿಪ್ರಬಂಧೇನ ಪ್ರಹಿತಾಭಿಃ = ಅಸ್ತ್ರಗಳ ಸುರಿಮಳೆ—ಅತಿಪ್ರಬಂಧ ಅತಿಶಯಿತಃ ಪ್ರಬಂಧಃ = ಎಡೆಬಿಡದ, ಅಡೆತಡೆಗಳಿಲ್ಲದ ನಿರಂತರ ಸುರಿಯುವ.

59. **ತತಃ ಪ್ರಕೋಷ್ಠೇ ಹರಿಚಂದನಾಂಕಿತೇ ।**
**ಪ್ರಮಥ್ಯಮಾನಾರ್ಣವಧೀರನಾದಿನೀಮ್ ॥**
**ರಘುಃಶಶಾಂಕಾರ್ಧಮುಖೇನ ಪತ್ರಿಣಾ ।**
**ಶರಾಸನಜ್ಯಾಮಲುನಾದ್ಬಿಡೌಜಸಃ** ॥ ೫೯ ॥

ದೇವಲೋಕದ ಅರಶಿನಗಂಧಲೇಪನದಿಂದ ಶೋಭಿಸುವ ತನ್ನ ಹಸ್ತದಲ್ಲಿ ದೇವೇಂದ್ರನು ಘನವಾದ ಮಹಾಧನುಸ್ಸನ್ನು ಧರಿಸಿದ್ದನು. ಆ ಧನುಷ್ಟಂಕಾರದ ಧ್ವನಿಯು, ಸಮುದ್ರ ಮಥನಕಾಲದಲ್ಲಿ ಮೇರುಪರ್ವತವನ್ನು ಕಡೆದಾಗ ಕೇಳಿಸಿದ ಧ್ವನಿಯಂತೆ, ಬಲುದೂರದ ತನಕ ಕೇಳಿಸುತ್ತಿತ್ತು. ಆ ಮಹಾರವದಿಂದ ಕೆರಳಿದ ವೀರರಘುವು ಒಂದು ನೂತನ ಅರ್ಧಚಂದ್ರಾಕೃತಿಯ ಬಾಣವನ್ನು ಗುರಿಯಿಟ್ಟು ಹೂಡಿ ಇಂದ್ರನ ಕಣಕ್ಕೆಯೊಳೆಸೆವ, ಸಮುದ್ರದ ಘರ್ಜನೆಯಂತೆ ರವಗೈಯುತ್ತಿರುವ (ಘನರವದೆ ಮೊರೆವ) ಇಂದ್ರಚಾಪದ ಸಿಂಜಿನಿಯನ್ನು(ನಾರಿಯನ್ನು) (ಹರಿಯ ಬಿಲ್ಲಿಗೆ ಬಿಗಿದ ಆ ಹುರಿಯು) ಇಕ್ಕಡಿಗೈದು ತನ್ನ ವೀರಶ್ರೀಯನ್ನು ಮೆರೆದನು (ಇಂದ್ರನ ಕುಂಕುಮಾಂಕಿತದ ಮಣಿಬಂಧದೊಳಗೈದ

ಶೋಭಿಸುವ ಸಿಂಜಿನಿಯು) (ಹೆದೆಯು ಆ ಹುರಿಯು ಕಡಿದಿಟ್ಟ ರಘುವೆಸೆದು ಕಂಡುವೆರೆಯು ಕಣೆಯು).

ಅನ್ವಯ :—ತತಃ ರಘುಃ ಹರಿಚಂದನಾಂಕಿತೇ ಪ್ರಕೋಷ್ಠೇ ಪ್ರಮಂಥ್ಯಮಾನಾರ್ಣವ ಧೀರನಾದಿನೀಮ್ ಬಿಡೌಜಸಃ ಶರಾಸನಜ್ಯಾಂ ಶಶಾಂಕಾರ್ಧಮುಖೇನ ಪತ್ರಿಣಾ ಅಲುನಾತ್ ॥

ಬಿಡೌಜಸಃ = ವಿಟ್ (ವ್ಯಾಪಕಮ್)—ಓಜಃ ಯಸ್ಯ ಸ ತಸ್ಯ ಇಂದ್ರಸ್ಯ=ದೇವೇಂದ್ರ —ಪ್ರಮಥ್ಯ ಮಾನಾರ್ಣವ ಇವ ಧೀರಂ ನದತೀತಿ ತಾಮ್ ॥

ತತೋ ರಘುರ್ಹರಿಚಂದನಾಂಕಿತೇ ಪ್ರಕೋಷ್ಠೇ ಮಣಿಬಂಧೇ—ಅರ್ಣವಧೀರ ನಾದಿನೀಂ = ಪ್ರಮಂಥ್ಯಮಾನಾರ್ಣವ ಇವ ಧೀರಂ ಗಂಭೀರಂ ನದತೀತಿ ತಾಂ ತಥೋಕ್ತಮ್—ವೇವೇಷ್ಟಿವ್ಯಾಪ್ನೋತೀತಿ ವಿಟ್ ವ್ಯಾಪಕಮೋಜೋ ಯಸ್ಯ ಸ ತಸ್ಯ— ಬಿಡೌಜಸ = ಇಂದ್ರಸ್ಯ—ಪೃಷೋದರಾದಿತ್ವಾತ್ಸಾಧುಃ—ಶರಾಸನಜ್ಯಾಂ = ಧನುವರ್ಣೌ ರ್ವೀಮ್—ಶಶಾಂಕಸ್ಯಾರ್ಧಃ = ಖಂಡ ಇವ—ಪ್ರಮಥ್ಯಮಾನಾ = ಸಮುದ್ರ ಮಥನ ವಾದಾಗ ಘೋ ರ್ಗರೆವ ಸಾಗರದ ನಾದ(ರವ)ದಂತೆ = ಪ್ರಮಂಥ್ಯಮಾನಾರ್ಣವ ಇವ ಧೀರಂ ನದತೀತಿ ತಾಮ್ ॥

60. ಸಚಾಪಮುತ್ಸೃಜ್ಯ ವಿವೃದ್ಧಮತ್ಸರಃ ।
ಪ್ರಣಾಶನಾಯ ಪ್ರಬಲಸ್ಯ ವಿದ್ವಿಷಃ ॥
ಮಹೀಧ್ರಪಕ್ಷವ್ಯಪರೋಪಣೋಚಿತಂ ।
ಸ್ಫುರತ್ಪ್ರಭಾಮಂಡಲಮಸ್ತ್ರಮಾದದೇ ॥ ೬೦ ॥

ಕೂಡಲೇ ಕೋಪಗೊಂಡ (ಕನಲಿದ) ಮಹೇಂದ್ರನು ತನ್ನ ಚಾಪವನ್ನು ತೊರೆದು ಅತಿಶಯನಾದ ವೈರಿಯನ್ನು ಕೊಲ್ಲಬೇಕೆಂಬ ಪ್ರಬಲವಾದ ಆಕಾಂಕ್ಷೆಯಿಂದ (ಇಚ್ಛೆ, ಚಿತ್ತವೃತ್ತಿ) ಕೂಡಲೇ ವಜ್ರಾಯುಧಕ್ಕೆ ಕೈಯಿಕ್ಕಿದನು. ಆ ದಿವ್ಯಾಸ್ತ್ರವು ಹೊಗರಕಾಂತಿ ಯಿಂದ (ಮಿಂಚಿನ ಕಾಂತಿಯಿಂದ) ಸ್ಫುರಿಸುತ್ತಿರುವ ಪ್ರಭಾಮಂಡಲದಿಂದ ಹೊಳೆಯುತ್ತ (ಕೊಂಡನದೊ ಹೊಗರಬಳೆ ಹೊಳೆವ ಕೈದುವನು) ಇಂದ್ರನ ಕೈಸೇರಿತು. ಗಿರಿಶಿಖರಗಳ, ಪರ್ವತಾವಳಿಗಳ ರೆಕ್ಕೆಗಳನ್ನು ನಿಮಿಷಮಾತ್ರದಲ್ಲಿ ಕತ್ತರಿಸಬಲ್ಲ, ಧ್ವಂಸಮಾಡಬಲ್ಲ ಮಹತ್ತಾದ ದಿವ್ಯಾಯುಧವನ್ನು ಕೈಕೊಂಡು (ಕೈಯಲ್ಲಿ ಧರಿಸಿ) ಪ್ರಬಲನಾದ ಶತ್ರುವನ್ನು ಮರ್ದಿಸಿ ತಾನು ಜಯಶೀಲನಾಗಬೇಕೆಂದು ಬಗೆದನು (ಕಡುಕನಲಿ ಹರಿ ತನ್ನ ಚಾಪವನು ತೊರೆದು ಕೊಂಡನದೊ ಹೊಗರಬಳೆ ಹೊಳೆವ ಕೈದುವನು), (ಸಂಕಲ್ಪಿಸಿದನು).

ಅನ್ವಯ :—ವಿವೃದ್ಧಮತ್ಸರಃ ಸಃ ಚಾಪಮುತ್ಸೃಜ್ಯ ಪ್ರಬಲಸ್ಯ ವಿದ್ವಿಷಃ ಪ್ರಣಾಶನಾಯ ಮಹೀಧ್ರ ಪಕ್ಷವ್ಯಪರೋಪಣೋ ಚಿತಂ ಸ್ಫುರತ್ ಪ್ರಭಾ ಮಂಡಲಮ್ ಅಸ್ತ್ರಮ್ ಆದದೇ ॥ ಮಹೀಧ್ರಾಃ=ಮಹೀಂ ಧಾರಯಂತೀತಿ ಮಹೀಧ್ರಾಃ=ಪರ್ವತಾಃ— ಪ್ರಬಲಸ್ಯ — ವಿದ್ವಿಷಃ = ಶತ್ರೋಃ—ವಿವೃದ್ಧಮತ್ಸರಃ = ಪ್ರವೃದ್ಧವೈರಃ —ಪ್ರಣಾಶ ನಾಯ = ವಧಾಯ—ಮಹೀಂ ಧಾರಯಂತೀತಿ = ಮಹೀಧ್ರಾಃ= ಪರ್ವತಾಃ— ತೇಷಾಂ

ಪಕ್ಷವ್ಯಪರೋಪಣೇ = ಪಕ್ಷಚ್ಛೇದ — ಸ್ಫುರತ್‌ಪ್ರಭಾಮಂಡಲಮಸ್ತ್ರಂ =ವಜ್ರಾಯುಧ ಮಾದದೇ ಜಗ್ರಾಹ ॥

**61. ರಘುರ್ಭೃಶಂ ವಕ್ಷಸಿ ತೇನ ತಾಡಿತಃ ।**
**ಪಪಾತ ಭೂಮೌ ಸಹಸೈನಿಕಾಶ್ರುಭಿಃ ॥**
**ನಿಮೇಷಮಾತ್ರಾದವಧೂಯ ತದ್ವ್ಯಥಾಂ ।**
**ಸಹೋತ್ಥಿತಃ ಸೈನಿಕಹರ್ಷನಿಃಸ್ವನೈಃ ॥ ೬೧ ॥**

ವಜ್ರಿಯು ವಜ್ರಾಯುಧದಿಂದ ರಘುವಿನ ವಿಶಾಲವಾದ ಎದೆಗೆ ಗುರಿಯಿಟ್ಟು ಪ್ರಹರಿಸಲು ಆ ಕುಲಿಶದ ಬಲವಾದ ಏಟಿನಿಂದ ರಘುವು ಕಡುನೊಂದು ರಥದಿಂದ ಧರೆಗೆ ಉರುಳಿ ಮೈಮರೆದನು. ಆಗ ಆ ಮಹಾವೀರನ ಪತನವನ್ನು ಕಂಡ ಅವನ ಬಲದ ಸೈನಿಕರು ಕಣ್ಣೀರುಗರೆದರು. ಆದರೆ ರಘುವು ಕಣ್ಣರೆಪ್ಪೆ ಬಡಿವಷ್ಟು ಸಮಯ ಆ ನೋವನ್ನು ಅನುಭವಿಸಿ ಪುನಃ ವೀರ್ಯಾತಿಶಯದಿಂದ ಎದ್ದುನಿಂತನು. ಅವನು ಕೂಡಲೇ ಚೇತರಿಸಿಕೊಂಡು ಸೈನಿಕರ ಜಯಜಯನಿನಾದದೊಂದಿಗೆ ಮೇಲೆದ್ದುನಿಂತು, ಯುದ್ಧೋನ್ಮುಖನಾದನು (ಎದೆಗೂರಿದಾ ಕುಲಿಶದೇಟಿನೊಳು ನೊಂದು—ಬಿದ್ದ ಮರುಗಳಿಗೆಯಲಿ ಆ ನೋವ ಕಳೆದು—ಮೇಲೆಳ್ದನಾ ಬಲದ ಜಯದ ರವ ಬೆರೆದೂ)

ಸಹೋಕ್ತಿ ಅಲಂಕಾರ. ಪತಿತ = ನೆಲಕ್ಕುರುಳಿದ, ಉತ್ಥಿತ = ಮೇಲೇಳ್ದ —ಸಹೋಕ್ತಿಃ ಸಹಾರ್ಥಸ್ಯ ಬಲಾದೇಕಂ ದ್ವಿವಾಚಕಮ್—ಜನರ ಕಣ್ಣೀರು, ರಘುವಿನ ಪತನ ಒಟ್ಟಿಗೇ ಜನರ ಸಂತೋಷದ ಬೊಬ್ಬೆ, ರಘುವು ಮೇಲೆದ್ದುನಿಂದುದು ಒಮ್ಮೆಯೇ—ಸೈನಿಕಾನಾಮಶ್ರುಭಿಃ ಸಹ ಭೂಮೌ ಪಪಾತ—ಸೈನಿಕಾನಾಮ್ ಹರ್ಷೇಣ ಯೇ ನಿಃಸ್ವನಾಃ—ಸಹೋತ್ಥಿತಶ್ಚ—ರಘುವು ಪತನಹೊಂದಿದುದು (ಭೂಮಿಗೆ ಸಭದಿಂದಬಿದ್ದುದು)—ರಘು ಪರಿವಾರದವರ ಕಣ್ಣೀರು ನೆಲಕ್ಕೆ ಬಿದ್ದುದು ಏಕಕಾಲದಲ್ಲಿ (ಒಂದೇವೇಳೆಗೆ) ಎಂಬುದಾಗಿ ವರ್ಣಿಸಲಾಗಿದೆ.

ವಕ್ಷಸಿ ತಾಡಿತಃ = ಎದೆಗೆ ಬಂದು ಬಡಿಯಿತು—ಸೈನಿಕರು ರಘುವು ಮೇಲೆ ಎದ್ದಾಗ ಸಿಂಹನಾದ ಮಾಡಿದರು,

**62. ತಥಾಽಪಿ ಶಸ್ತ್ರವ್ಯವಹಾರನಿಷ್ಠುರೇ ।**
**ವಿಪಕ್ಷಭಾವೇ ಚಿರಮಸ್ಯ ತಸ್ಥುಷಃ ॥**
**ತುತೋಷ ವೀರ್ಯಾತಿಶಯೇನ ವೃತ್ರಹಾ ।**
**ಪದಂ ಹಿ ಸರ್ವತ್ರ ಗುಣೈರ್ನಿಧೀಯತೇ ॥ ೬೨ ॥**

ಪ್ರಬಲವಾದ ಶಸ್ತ್ರಾಸ್ತ್ರಗಳುಳ್ಳ ಇಂದ್ರನು ವೀರ್ಯಾತಿಶಯದಿಂದ ಮೆರೆಯುತ್ತಿರುವ ರಘುವಿನ ಪರಾಕ್ರಮವನ್ನು ಕಂಡು ತನ್ನ ಮನದಲ್ಲಿ ಮೆಚ್ಚಿಕೊಂಡನು. ತನ್ನ ಕೈದುವಿನ (ಮಹಾಸ್ತ್ರದ) ತಾಡನದಿಂದ ಕಡುನೊಂದನಾದರೂ ಅವನ ಕೆಚ್ಚು, ಅಘಟು, ಪರಾಕ್ರಮ ಕುಂದಿರಲಿಲ್ಲ. ಪುನಃ ವೃತ್ರಹರನಾದ ಇಂದ್ರನೊಡನೆ ಸೆಣಸಲು (ಸೆಣಸಿ ಹೋರಾಡಲು), ವೀರಾವೇಶದಿಂದ ಸೆಟೆದುನಿಂತನು. ಉತ್ತಮನಾದ ವೀರನಲ್ಲಿರಬೇಕಾದ ಎಲ್ಲಾ ಗುಣ

ಧರ್ಮಗಳಿಂದ ಪ್ರಕಾಶಿಸುತ್ತಿರುವ, ಅವನ ದೃಢತೆಗೆ, ಕಾರ್ಯತತ್ಪರತೆಗೆ ಮಹೇಂದ್ರನು ಮೆಚ್ಚಿ ತಲೆದೂಗಿದನು. ಶಸ್ತ್ರಗಳ ಪ್ರಯೋಗದಲ್ಲಿ, ಪೈಪೋಟಿಯಲ್ಲಿ ಅವನು ತೋರಿದ ಕೈವಾಡ ಅದ್ವಿತೀಯವಾದುದು. ಅವನು ಸಿದ್ಧಹಸ್ತನು (ವರದಹಸ್ತನು), ಧನುರ್ವೇದ ಪಾರಂಗತನು. ಅಚಲನಾಗಿ, ತಲೆಬಾಗದೆ, ಕೊನೆಯತನಕ ಹೋರಾಡಬೇಕೆಂಬ ಮನೋ ಭಾವನೆ ವೀರನಲ್ಲಿರಬೇಕಾದ ಅತ್ಯಂತ ಶ್ರೇಷ್ಠವಾದ ಗುಣಧರ್ಮ. ಈ ಗುಣಧರ್ಮಗಳೇ ಮೂರ್ತಿವೆತ್ತಾಗಿರುವ, ಮೂರ್ತಸ್ವರೂಪವಾಗಿರುವ ರಘುಪುಂಗವನಲ್ಲಿ ಪ್ರೀತಿಯನ್ನು ತಳೆದನು. ಏಕೆಂದರೆ ಗುಣಕ್ಕೆ ಮತ್ಸರವುಂಟೆ ? ಮಹಾತ್ಮರು ಗುಣವನ್ನು ಮೆಚ್ಚಿಯೇ ಮೆಚ್ಚುತ್ತಾರೆ. ಇನ್ನೊಬ್ಬರ ಗುಣಧರ್ಮಗಳನ್ನು ಮೆಚ್ಚುವುದು ಮಹಾತ್ಮರಾದವರ ದೊಡ್ಡ ಗುಣವಲ್ತೆ (ಗುಣವಲ್ಲವೆ) (ಎಲ್ಲ ಕಡೆ ಗುಣವೆ ದಲ್ ಪೂಜೆಗೊಂಡಪುದು).

ಅನ್ವಯ :—ತಥಾಽಪಿ ಶಸ್ತ್ರವ್ಯವಹಾರನಿಷ್ಠುರೇ ವಿಪಕ್ಷಭಾವೇ ಚಿರಂ ತಸ್ಥುಷಃ ಅಸ್ಯ ವೀರ್ಯಾತಿಶಯೇನ ವೃತ್ರಹಾ ತುತೋಷ । ಗುಣೈಃ ಹಿ ಸರ್ವತ್ರ ಪದಂ ನಿಧೀಯತೇ ॥

ಶಸ್ತ್ರವ್ಯವಹಾರ = ಕೈದುವಿನ ಹರಿಬದೊಳು, ವಿಪಕ್ಷಭಾವ = ಪಗೆತನ, ವೈರಭಾವ, ವೃತ್ರಹಾ = ಇಂದ್ರ. ಅಲಂಕಾರ : ಅರ್ಥಾಂತರನ್ಯಾಸ ಅಲಂಕಾರ.

ತಥಾಽಪಿ= ವಜ್ರಘಾತೇಽಪಿ—ವ್ಯವಹಾರೇಣ=ವ್ಯಾಪಾರೇಣ—ನಿಷ್ಠುರೇ=ಕ್ರೂರೇ—ವಿಪಕ್ಷಭಾವೇ = ಶಾತ್ರವೇ—ಸ್ಥಿತವತೋಽಸ್ಯ—ರಘೋರ್ವೀರ್ಯಾತಿಶಯೇನ—ವೃತ್ರಂ ಹತವಾನ್ ಇತಿ = ವೃತ್ರಹಾ—ಸ್ವಯಂ ವೀರಂ ಏವ ವೀರಂ ಜಾನಾತೀತಿ ಭಾವಃ—ಸರ್ವತ್ರ ಶತ್ರುಮಿತ್ರೋದಾಸೀನೇಷು ।

ಅರ್ಥಾಂತರನ್ಯಾಸ ಅಲಂಕಾರ—ಸರ್ವತ್ರ ಗುಣೈರ್ನಿಧೀಯಂತೇ=ಎಲ್ಲೆಡೆ ದಲ್ ಗುಣವೇ ತಾನು ಪೂಜೆಗೊಂಬುದು = ಗುಣಂ ಸರ್ವತ್ರ ಸಂಕ್ರಮಂತ ಇತ್ಯರ್ಥಃ ॥

63. **ಅಸಂಗಮದ್ರಿಷ್ವಪಿ ಸಾರವತ್ತಯಾ ।**
**ನ ಮೇ ತ್ವದನ್ಯೇನ ವಿಸೋಢಮಾಯುಧಮ್ ॥**
**ಅವೇಹಿ ಮಾಂ ಪ್ರೀತಮೃತೇ ತುರಂಗಮಾತ್ ।**
**ಕಿಮಿಚ್ಛಸೀತಿ ಸ್ಫುಟಮಾಹ ವಾಸವಃ** ॥ ೬೩ ॥

ವಾಸವನು ಔದಾರ್ಯದಿಂದ "ಎಲೈ ಮಹಾವೀರನೆ, ಸಾರವತ್ತಾದ ಈ ಶಸ್ತ್ರವು ಪರ್ವತಗಳನ್ನು ಭೇದಿಸಬಲ್ಲುದು. ಅಂತಹ ಮಹತ್ತಾದ, ಲೋಕವಿಖ್ಯಾತವಾದ ಮಹಾಸ್ತ್ರ ವನ್ನು ತಡೆಯಬಲ್ಲ ಕಲಿ (ಲೋಕದಲ್ಲಿ ನೀನಲ್ಲದೆ) ಮತ್ತಾವನಿರುವನು (ನೀಂ ತಡೆದ ಕತದೆ) ನೀನೊಬ್ಬನೇ ಅದನ್ನು ತಡೆದಿರುವೆ, ತಡೆಯಲು ಶಕ್ತನಾಗಿರುವೆ. ನೀನು ವೀರ ಶ್ರೇಷ್ಠನು. ಆ ಕಾರಣದಿಂದ ನಿನ್ನ ಮೇಲೆ ನಾನು ಸುಪ್ರೀತನಾಗಿರುವೆನು (ಸುಪ್ರೀತನಾದೆ). ನಿನ್ನ ವೀರತ್ವಕ್ಕೆ ಕಲಿತನಕ್ಕೆ ಸಾಹಸಗುಣಗಳಿಗೆ ಮೆಚ್ಚಿರುವೆನು (ಗುಣಮ್ ಎಲ್ಲರೊಳು ಗ್ರಾಹ್ಯಮಲ್ತೆ). ಯಜ್ಞಾಶ್ವವನ್ನು ಬಿಟ್ಟು ಬೇರೆ ವರಗಳನ್ನು ಕೇಳು, ನಾನು ದಯ ಪಾಲಿಸುವೆನು" ಎಂದು ಪುರಂದರನು (ಹರಿ, ವಾಸವ, ಮಘವನ್) ಹೇಳಿದನು (ಘೋಷಿಸಿದನು).

ಅನ್ವಯ :—ಸಾರವತ್ತಯಾ ಅದ್ರಿಷು ಅಪಿ ಅಸಂಗಮೇ ಆಯುಧಂ ತ್ವದನ್ಯೇನ ನ ವಿಸೋಢಮ್ । (ಅತಃ) ಮಾಂ ಪ್ರೀತಮ್ ಅವೇಹಿ ತುರಂಗಮಾತ್ ಋತೇ ಕಿಮಿಚ್ಛಸಿ ಇತಿ ವಾಸವಃ ಸ್ಫುಟಮ್ ಆಹ ॥

ಅಸಂಗಮ್ = ಅಪ್ರತಿಬಂಧಮ್—ಅಭಂಗಮ್ = ಅಡೆತಡೆಗಳಿಲ್ಲದೆ.

ಸಾರವತ್ತಯಾಽದ್ರಿಷ್ವಸಂಗಮಪ್ರತಿಬಂಧಂ ಮೇ ಆಯುಧಂ ವಜ್ರಂ ತ್ವದನ್ಯೇನ ನ ವಿಸೋಢಮ್—ಅತೋ ಮಾ ಪ್ರೀತಂ ಸಂತುಷ್ಟಮವೇಹಿ—ತುರಂಗಮಾದೃತೇ ತುರಂಗಂ ವರ್ಜಯಿತ್ವಾ॥

ಅಸಂಗಮ್=ಅಪ್ರತಿಬಂಧಮ್=ಅಂಟಿಕೊಳ್ಳದೆ ಇರು—ತುರಂಗಮಾದನ್ಯದದೇಯಂ ನಾಸ್ತೀತಿ ಭಾವಃ ॥

64. ತತೋ ನಿಷಂಗಾತ್ ಅಸಮಗ್ರಮುದ್ಧೃತಂ ।
ಸುವರ್ಣಪುಂಖದ್ಯುತಿರಂಜಿತಾಂಗುಲಿಮ್ ॥
ನರೇಂದ್ರಸೂನುಃ ಪ್ರತಿಸಂಹರನ್ನಿಷುಂ ।
ಪ್ರಿಯಂವದಃ ಪ್ರತ್ಯವದತ್ ಸುರೇಶ್ವರಮ್ ॥ ೬೪ ॥

ಹೊಂಗರಿಗಳಿಂದ (ಸುವರ್ಣಪುಂಖದ್ಯುತಿ) ಅಲಂಕೃತವಾದ ಕಣೆಯನ್ನು ಮೂಡಿಗೆಗೆ ಕೈಯಿಕ್ಕಿ ಮೇಲೆತ್ತುತ್ತಿದ್ದಾಗ ರಘುವಿನ ಕೈಬೆರಳುಗಳು ಹೊನ್ನಕಾಂತಿಯಿಂದ ಪ್ರಕಾಶಿಸುತ್ತಿದ್ದವು (ಹೊಂಗರಿನ ಹೊಗರಿನೊಳು ಬೆರಳು ಬೆಳಗಿರುವ). ಹಾಗೆಯೇ ಅರ್ಧಕ್ಕೆತ್ತಿದ ಕಣೆಗಳನ್ನು ದೊಣೆಯಲ್ಲಿ ಹಿಂದಿರಿಸಿ (ದೊಣೆಯಿಂದ ಅರೆ ಎಳೆದು) ಮನುಜೇಂದ್ರಸೂನುವು ಸುರರ ಒಡೆಯನಾದ ಸುರೇಂದ್ರನಿಗೆ ಪ್ರಿಯಮಧುರವಚನಗಳಿಂದ ಈ ತೆರನಾಗಿ ಪ್ರತ್ಯುತ್ತರವಿತ್ತನು.

ಅನ್ವಯ :—ತತೋ ನಿಷಂಗಾದ್ ಅಸಮಗ್ರಮ್ ಉದ್ಧೃತಂ ಸುವರ್ಣಪುಂಖದ್ಯುತಿ ರಂಜಿತಾಂಗುಲಿಮ್ ಇಷುಂ ಪ್ರತಿಸಂಹರನ್ ಪ್ರಿಯಂವದಃ ನರೇಂದ್ರಸೂನುಃ ಸುರೇಶ್ವರಂ ಪ್ರತ್ಯವದತ್ ॥

ಸುವರ್ಣಪುಂಖ = ನಖಪ್ರಭಾಭೂಷಿತ ಕಂಕಪತ್ರೇ—ಸುವರ್ಣ = ಚಿನ್ನದ ಕಾಂತಿ, ಹೊಂಬಣ್ಣ—ಪುಂಖ=ಬಾಣ. ಸುವರ್ಣಪುಂಖದ್ಯುತಿನೀ ರಂಜಿತಾ ಅಂಗುಲಯೋಃ—ಪ್ರತಿಸಂಹರನ್ನಿವರ್ತಯನ್—ಪ್ರಿಯಂ ವದತೀತಿ ಪ್ರಿಯಂವದಃ—ನರೇಂದ್ರಸೂನುಃ ರಘುಃ. ಸುವರ್ಣಪುಂಖ = ನಖಪ್ರಭಾಭೂಷಿತ ಕಂಕಪತ್ರೇ = ಬಾಣದ ಹೊನ್ನಗರಿಗಳು=ಸುವರ್ಣಪುಂಖದ್ಯುತಿಭಿರಂಜಿತಾ ಅಂಗುಲ್ಯೋ ॥

65. ಅಮೋಚ್ಯಮಶ್ವಂ ಯದಿ ಮನ್ಯಸೇ ಪ್ರಭೋ ।
ತತಃ ಸಮಾಪ್ತೇ ವಿಧಿನೈವ ಕರ್ಮಣಿ ॥
ಅಜಸ್ರದೀಕ್ಷಾಪ್ರಯತಃ ಸಮದ್ಗುರುಃ ।
ಕ್ರತೋರಶೇಷೇಣ ಫಲೇನ ಯುಜ್ಯತಾಮ್ ॥ ೬೫ ॥

"ಮಹಾಪ್ರಭೋ, ನೀನು ಯಾಗದ ವಾಜಿಯನ್ನು ಬಿಡದಿರುವುದೇ ನಿನ್ನ ಮನದಣಿಕೆಯಾಗಿದ್ದರೆ, ವ್ರತಸಿದ್ಧನಾಗಿ ದೀಕ್ಷಾಬದ್ಧನಾಗಿ ಕುಳಿತಿರುವ ನನ್ನ ತಂದೆಯು ವಿಧಿಯುಕ್ತ

ವಾದ ರೀತಿಯಲ್ಲಿ (ವಿಧ್ಯುಕ್ತ ರೀತಿಯಲ್ಲಿ ಮುಗಿಸಿ ಕರ್ಮವನ್ನು) ಯಾಗವನ್ನು ಪೂರೈಸು ಮತ್ತೆ ಕೃಪೆಮಾಡು. ಹೀಗೆ ನನ್ನ ಪಿತನು ವಿಧಿವಿಧಾನಗಳಿಂದ ಯಜ್ಞವನ್ನು ಸಮಾಪ್ತಿಗೊಳಿಸಿ ಆ ಕ್ರತುವಿನ ಎಲ್ಲಾ ಫಲಾಫಲಗಳನ್ನು ಪಡೆಯುವಂತೆ (ಹೊಂದುವಂತೆ) ಅನುಗ್ರಹಿಸಿ ವರ ನೀಡು" ಎಂದು ರಘುವು ಲೋಕಾಧಿಪತಿಯಾದ (ತ್ರಿಲೋಕಾಧಿಪ) ಮಘವಂತನನ್ನು ಪ್ರಾರ್ಥಿಸಿದನು.

ಅನ್ವಯ :—(ಹೇ) ಪ್ರಭೋ ಯದಿ ಅಶ್ವಂ ಅಮೋಚ್ಯಂ ಮನ್ಯಸೇ ತತಃ ಅಜಸ್ರ ದೀಕ್ಷಾಪ್ರಯತಃ ಸ ಮದ್ಗುರುಃ ವಿಧಿನಾ ಏವ ಕರ್ಮಣಃ ಸಮಾಪ್ತೌ (ಯಂತ್ ಫಲಂ ತೇನ) ಅಶೇಷೇಣ ಫಲೇನ ಯುಜ್ಯತಾಮ್ ॥

ಅಜಸ್ರದೀಕ್ಷಾಪ್ರಯತಃ ಪ್ರಯತಃ ಶುಚಿಃ—ಹೇ ಪ್ರಭೋ ಇಂದ್ರ—ಅಜಸ್ರ ದೀಕ್ಷಾಯಾಂ ಪ್ರಯತಃ—ತೇನ ಫಲೇನಾಶೇಷೇಣ ಕೃತ್ಸ್ನೇನ ಯುಜ್ಯತಾಂ ಯುಂಕ್ತೋsಸ್ತು ॥

66. ಯಥಾ ಚ ವೃತ್ತಾಂತಮಿಮಂ ಸದೋಗತಃ ।
ತ್ರಿಲೋಚನೈಕಾಂಶತಯಾ ದುರಾಸದಃ ॥
ತವೈವ ಸಂದೇಶಹರಾದ್ವಿಶಾಂಪತಿಃ ।
ಶೃಣೋತಿ ಲೋಕೇಶ ತಥಾ ವಿಧೀಯತಾಮ್ ॥ ೬೬ ॥

ಮುಕ್ಕಣ್ಣನಾದ ಹರನ ಅಂಶನಾಗಿ ರಂಜಿಸುತ್ತಿರುವ ರಾಜಶ್ರೇಷ್ಠನಾದ ನನ್ನ ತಂದೆಯು ಇತರರಾರೂ ಪ್ರವೇಶಿಸಲು ಸಾಧ್ಯವಿಲ್ಲದ ಯಜ್ಞಶಾಲೆಯಲ್ಲಿ (ಯಜ್ಞಸಭೆಯಲ್ಲಿ) ಪ್ರತಿಷ್ಠನಾಗಿ ಕುಳಿತಿರುವನು (ಹರನಂಶನೆನಿಸಿರುವ ಹದಿಗಲಷ್ಕ್ಷ್ಮಿಪನೆನಿಸು ಯಜ್ಞಸಭೆಯೊಳಗಿರುವ). ಹೇ ಲೋಕೇಶನೇ (ಹೇ ಲೋಕಪತೇ), ಅಂತಹ ಆ ಮಹಾ ಗುರುವೆನಿಸಿದ, ರಾಜಋಷಿಯು (ರಾಜಯೋಗಿಯು) ಬಳಿಗೆ ನಿನ್ನ ಓರ್ವ ಸೇವಕನನ್ನು (ಭೃತ್ಯನನ್ನು) ಕಳುಹಿಸು ನೀನು ಹೇಳುವ ಈ ಸಂದೇಶವನ್ನು ವಿಶದವಾಗಿ (ಕೂಲಂಕಷವಾಗಿ) ತಿಳಿಸಿ ಬರುವಂತಾಗಲಿ."

ಅನ್ವಯ :—ಯಥಾ ಚ ಸದೋಗತಃ ತ್ರಿಲೋಚನೈಕಾಂಶತಯಾ ದುರಾಸದಃ ವಿಶಾಂಪತಿಃ ತವೈವ ಸಂದೇಶಹರಾತ್ ಇಮಂ ವೃತ್ತಾಂತಂ ಶೃಣೋತಿ ತಥಾ (ಹೇ) ಲೋಕೇಶ ವಿಧೀಯತಾಮ್ ॥

ಸದೋಗತಃ = ಸದಃ = ಸದೋ ಗೃಹಂ ಗತಃ = ಯಜ್ಞಸಭೆಯೊಳು, ತ್ರಿಲೋಚನೈಕಾಂಶತಯಾ = (ಪ್ರತ್ಯಕ್ಷತನು) (ಈಶ)—ಯಾ ಚ ಹೋತ್ರೀ—ಹರನ ಅಂಶನೆನಿಸಿರುವ—ಸದೋಗೃಹಂ ಗತಸ್ತ್ರಿಲೋಚನಸ್ಯೇಶ್ವರಸ್ಯೈಕಾಂಶತಯಾ ಅಷ್ಟಾನಾಮನ್ಯತಮಮೂರ್ತಿತ್ವಾತ್—ದುರಾಸದೋಮಾದೃಶೈರ್ದುರ್ಧರ್ಷಃ ಪ್ರಾಪ್ತೋ—ಹೇ ಲೋಕೇಶೇಂದ್ರ, ತಥಾ ವಿಧೀಯತಾಮ್—ತ್ರಿಲೋಚನೈಕಾಂಶತಯಾ = ಹೋತೃವು ತ್ರಿಲೋಚನನಾದ ಶಿವನ ಅಂಶವೇ ಆಗಿರುವನು—(ಈಶನ ಪ್ರತ್ಯಕ್ಷ ತನು) ದೇವ ಶೃಣೋತಿ ॥

67. ತಥೇತಿ ಕಾಮಂ ಪ್ರತಿಶುಶ್ರುವಾನ್ ರಘೋಃ ।
ಯಥಾಗತಂ ಮಾತಲಿಸಾರಥಿರ್ಯಯೌ ॥

**ನೃಪಸ್ಯ ನಾತಿಪ್ರಮನಾಃ ಸದೋಗೃಹಂ।**
**ಸುದಕ್ಷಿಣಾಸೂನುರಪಿ ನ್ಯವರ್ತತ || ೬೭ ||**

ರಘುವರನ ಮನೋರಥವನ್ನು ಅಂಗೀಕರಿಸಿದ ದಿಗಂತಗಳ ಒಡೆಯನಾದ, ದೇವತೆಗಳ ಯಜಮಾನನಾದ ಮಘವಂತನು "ತಥಾಸ್ತು" ಎಂದು ನುಡಿದು ಮಾತಲಿಯಿಂದ ನಡೆಸಲ್ಪಡುವ ದೇವರಥದಲ್ಲಿ ದೇವಲೋಕಕ್ಕೆ ಯಾನವಮಾಡಿದನು. ಇತ್ತ ಸುದಕ್ಷಿಣೆಯ ಪುತ್ರರತ್ನನಾದ (ಅಣುಗನಾದ) ರಘುವು ನೃಪಸಭೆಗೆ ಪೂರ್ಣವಲ್ಲದ ಸಂತೋಷದಿಂದ ತೆರಳಿದನು (ತೆರಳಿದನು ಆ ಸುದಕ್ಷಿಣೆಯಣುಗನಂದು).

ಅನ್ವಯ :—ಮಾತಲಿಸಾರಥಿಃ ರಘೋಃಕಾಮಂ ತಥೇತಿ ಪ್ರತಿಶುಶ್ರುವಾನ್ ಯಥಾಗತಂ ಯಯೌ। ಸುದಕ್ಷಿಣಾಸೂನುಃ ಅಪಿ ನ ಅತಿಪ್ರಮನಾಃ ನೃಪಸ್ಯ ಸದೋಗೃಹಂ ನ್ಯವರ್ತತ॥

ಯಥಾಗತಮ್ = ಆಗತಸ್ಯ ಯೋಗ್ಯಂ—ಅವ್ಯಯೀಭಾವಸಮಾಸ—ನಾತಿಪ್ರಮನಾಃ = ವಿಜಯಲಾಭೇಽಪಿ ಅಶ್ವನಾಶಾತ್ ಅತೀವ ತುಷ್ಟಃ। ಪ್ರಹೃಷ್ಟಂ ಯಸ್ಯ ಅಸೌ ಪ್ರಮನಾಃ। ಕಾಮಂ ಮನೋರಥಂ—"ತಥಾಸ್ತು" ಇತಿ ಪ್ರತಿಶುಶ್ರುವಾನ್—ಯಥಾಗತಂ ಯಯೌ ಸುದಕ್ಷಿಣಾಸೂನೂ ರಘುರಪಿ ನಾತಿಪ್ರಮನಾವಿಜಯಲಾಭೇಽಪ್ಯಶ್ವನಾಶಾನ್ನಾತೀವ ತುಷ್ಟಃ। ನೃಪಸ್ಯ ಸದೋಗೃಹಂ ಪ್ರತಿ ನ್ಯವರ್ತತ॥

**68. ತಮಭ್ಯನಂದತ್ಪ್ರಥಮಂ ಪ್ರಬೋಧಿತಃ।**
**ಪ್ರಜೇಶ್ವರಃ ಶಾಸನಹಾರಿಣಾ ಹರೇಃ॥**
**ಪರಾಮೃಶನ್ ಹರ್ಷಜಡೇನ ಪಾಣಿನಾ।**
**ತದೀಯಮಂಗಂ ಕುಲಿಶವ್ರಣಾಂಕಿತಮ್ || ೬೮ ||**

ಲೋಕಾಧಿಪನಾದ ಇಂದ್ರನು ಕಳುಹಿಸಿದ ದೇವದೂತನು ಬಂದು ದಿಲೀಪನಿಗೆ ಇಂದ್ರನ ಶಾಸನವನ್ನು (ಸಂದೇಶವನ್ನು) ಅರುಹಿದನು. ಆಗ ಜನಪನು ಮೊದವನ್ನು ತಳೆದು, ತನ್ನ ಧೀರಪುತ್ರನು ಬಳಿಗೆ ಬಂದಾಗ ಅವನನ್ನು ತನ್ನ ತಂಪಾದ ಕೈಗಳಿಂದ ತಬ್ಬಿಕೊಂಡನು. ತನ್ನ ಅಣುಗನ ವಿಶಾಲವಾದ ಎದೆಯಲ್ಲಿ ವಜ್ರಾಯುಧದ ಆಘಾತದಿಂದ ಉಂಟಾದ ಗಾಯಗಳನ್ನು ತನ್ನ ಶೀತಲವಾದ ಕೈಗಳಿಂದ ತಡವರಿಸಿ ಸವರುತ್ತ ಆನಂದಾಶ್ರುಗಳನ್ನು ಸುರಿಸಿದನು (ಮುದದ ತಣ್ಗೈಗಳಿಂದೆ, ಕುಲಿಶದೇರಂಗಳ ಅಣುಗನೊಡಲ ತಡವುತ್ತೆ). ನರಾಧಿಪತಿಯ ಸೂನು ದಿವಿಜರೊಡೆಯನ ಮೇಲೆ, ಅಂಜದೆ, ಅಳುಕದೆ ಹೋರಾಡಿ ಸಂಗ್ರಾಮಕ್ಕೆ ನಿಂತ ಲೋಕೈಕಮಹಾವೀರನಲ್ಲವೆ ? ಪೌರುಶೌರ್ಯನಿಧಿ ತಾನಲ್ಲವೆ ?

ಅನ್ವಯ :—ಹರೇಃ ಶಾಸನಹಾರಿಣಾ ಪ್ರಥಮಂ ಪ್ರಬೋಧಿತಃ ಪ್ರಜೇಶ್ವರಃ ಹರ್ಷ ಜಡೇನ ಪಾಣಿನಾ ಕುಲಿಶವ್ರಣಾಂಕಿತಮ್ ತದೀಯಮ್ ಅಂಗಂ ಪರಾಮೃಶನ್ ತಮ್ ಅಭ್ಯನಂದತ್॥

ಹರೇರಿಂದ್ರಸ್ಯ ಶಾಸನಹಾರಿಣಾ ಪುರುಷೇಣ ಪ್ರಥಮಂ ಪ್ರಬೋಧಿತೋ ಜ್ಞಾಪಿತಃ—ಪ್ರಜೇಶ್ವರೋ ದಿಲೀಪೋ ಹರ್ಷಜಡೇನ, ಹರ್ಷಶಿಶಿರೇಣ ಪಾಣಿನಾ ಕುಲಿಶವ್ರಣಾಂಕಿತಂ। ಅಂಗಂ ಶರೀರ—ಕುಲಿಶ=ವಜ್ರಾಯುಧ—ಹರ್ಷಜಡೇನ=ಹರ್ಷಜಲೇನ=ಆನಂದಾಶ್ರು.

ಗಳನ್ನು ಸುರಿಸುತ್ತ—ಪ್ರಜೇಶ್ವರೋ ದಿಲೀಪೋ—ಕುಲಿಶವ್ರಣಾಂಕಿತಂ = ವಜ್ರಾಯುಧದ ಗಾಯಂಗಳನ್ನು.

**69. ಇತಿ ಕ್ಷಿತೀಶೋ ನವತಿಂ ನವಾಧಿಕಾಂ ।**
**ಮಹಾಕ್ರತೂನಾಂ ಮಹನೀಯಶಾಸನಃ ॥**
**ಸಮಾರುರುಕ್ಷುಃ ದಿವಮಾಯುಷಃ ಕ್ಷಯೇ ।**
**ತತಾನ ಸೋಪಾನಪರಂ ಪರಾಮಿವ ॥ ೬೯ ॥**

ಮಹನೀಯಶಾಸನನಾದ ದಿಲೀಪಭೂಪಾಲನು ಅಂದು ತನ್ನ ಆಯುಷ್ಯದ ಕೊನೆಯ ಭಾಗದಲ್ಲಿ ಸ್ವರ್ಗವನ್ನು ಏರಲು ತೊಂಬತ್ತರ ಮೇಲೆ ಮತ್ತೆ ಒಂಬತ್ತು ಮೆಟ್ಟಿಲುಗಳನ್ನು ರಚಿಸಿದಂತೆ ೯೯ ಮಹಾಕ್ರತುಗಳನ್ನು ಕೈಕೊಂಡು ನಿರ್ವಿಘ್ನವಾಗಿ ನೆರವೇರಿಸಿ ಕೃತಕೃತ್ಯನಾದನು. ಆ ಕ್ರತುಗಳ ಮಹಿಮಾವಿಶೇಷದಿಂದ ಆ ಮೆಟ್ಟಿಲುಗಳ (ಸೋಪಾನಗಳ) ಮೂಲಕ ಸ್ವರ್ಗಲೋಕವನ್ನು ಏರಿ ಸ್ವರ್ಗಾಧಿಪತಿಯೊಂದಿಗೆ ನಾಕಲೋಕದ ಅರ್ಧ ಸಿಂಹಾಸನವನ್ನೇರುವ ಅರ್ಹತೆಯನ್ನು (ಮಹಾಭಾಗ್ಯವನ್ನು) ಪಡೆದು ಪವಿತ್ರಾತ್ಮನಾದನು (ಆಯು ಕೊನೆಗೊಳ್ಳುವಂದು ದಿವಿಯೇರಲೆಂದು ಮೆಟ್ಟಿಲನು ಹರಹಿದನು ಯಜ್ಞಗಳ ನೈದು).

ಅನ್ವಯ :—ಮಹನೀಯಶಾಸನಃ ಕ್ಷಿತೀಶಃ ಇತಿ ಮಹಾಕ್ರತೂನಾಂ ನವಾಧಿಕಾಂ ನವತಿಂ ಆಯುಷಃ ಕ್ಷಯೇ (ಸತಿ) ದಿವಂ ಸಮಾರುರುಕ್ಷುಃ ಸೋಪಾನಪರಂ ಪರಾಮ್ ಇವ ತತಾನ ॥

ಸಮಾರುರುಕ್ಷುಃ = ಸಮಾರೋಢುಮ್ ಇಚ್ಛುಃ । ಮಹನೀಯಶಾಸನಃ = ಪೂಜನೀಯಾಜ್ಞಃ—"ಇತಿ ಹೇತುಪ್ರಕರ್ಷಾದ್ ಸಮಾಪ್ತಿಷು" ಇತ್ಯಮರಃ—ದಿವಂ ಸ್ವರ್ಗಂ ಸಮಾರುರುಕ್ಷುರಾರೋಢುಮಿಚ್ಛುಃಸೋಪಾನಾನಾಂ ಪರಂಪರಾಂ ಪಂಕ್ತಿಮಿವ ತತಾನ— ಸೋಪಾನಪರಂಪರಾಮ್ = ಸೋಪಾನಪಂಕ್ತಿಗಳು, ಮೆಟ್ಟಿಲುಗಳ ಸಾಲು ಏರಲು— ಸಮಾರೋಢುಮ್ ಇಚ್ಛುಃ = ಸಮಾರುರುಕ್ಷುಃ—ಸೋಪಾನಾನಾಂ ಪರಂಪರಾಂ ಪಂಕ್ತಿಮಿವ ತತಾನ ॥

**70. ಅಥ ಸ ವಿಷಯವ್ಯಾವೃತ್ತಾತ್ಮಾ ಯಥಾ ವಿಧಿ ಸೂನವೇ ।**
**ನೃಪತಿ ಕಕುದಂ ಧತ್ವಾ ಯೂನೇ ಸಿತಾತಪವಾರಣಮ್ ॥**
**ಮುನಿವನತರುಚ್ಛಾಯಾಂ ದೇವ್ಯಾ ತಯಾ ಸಹ ಶಿಶ್ರಿಯೇ ।**
**ಗಲಿತವಯಸಾಮಿಕ್ಷ್ವಾಕೂಣಾಂ ಇದಂ ಹಿ ಕುಲವ್ರತಮ್ ॥ ೭೦ ॥**

ಆ ಬಳಿಕ ವಿಷಯಸುಖಪರಾಙ್ಮುಖನಾದ ದಿಲೀಪನು ಅರಸುತನದ ಕುರುಹಾದ ಬೆಳ್ಗೊಡೆಯನ್ನು ತನ್ನ ಯೌವಕಪುತ್ರನ ಕೈಗೆ ಹಸ್ತಾಂತರಿಸಿದನು. ರಾಜ್ಯಲಕ್ಷ್ಮಿಯನ್ನು [illegible] ತನ್ನ ಹೃದಯೇಶ್ವರಿಯೊಂದಿಗೆ (ದೇವಿಯೊಂದಿಗೆ) ನಿಸರ್ಗದ ತಾಣ [illegible] ವಿಚಿತ್ರರಾಗಿರುವ ಋಷಿಮುನಿಗಳಿರುವ ವನ

[illegible] ಪಡೆದನು (ಭೋಗ ವಿಷಯಸುಖಪರಾಙ್ಮುಖನು). ಅಲ್ಲಿ ಮರದ ನೆರಳಲ್ಲಿ ಎಲೆಮನೆಯನ್ನು ಕಟ್ಟಿ ಆಶ್ರಮಜೀವನವನ್ನು ನಡೆಸತೊಡಗಿದನು. ಹೀಗೆ ತನ್ನ ಇಳಿವಯಸ್ಸಿನಲ್ಲಿ ವಾನಪ್ರಸ್ಥಾಶ್ರಮವನ್ನು ಕೈಕೊಂಡು ಮುಂದಿನ ಕುಲದ ರಾಜರು (ಇಕ್ಷ್ವಾಕು ವಂಶಜರು) ಅನುಸರಿಸಬೇಕಾದ ಕುಲವ್ರತವನ್ನು ಆಚರಿಸಿ ಮಾನವಜನ್ಮದ ಸಾರ್ಥಕ್ಯವನ್ನು ಪಡೆದನು. ಅಮರತ್ವವನ್ನು ಪಡೆದನು.

ಅನ್ವಯಃ :—ಅಥ ವಿಷಯವ್ಯಾವೃತ್ತಾತ್ಮಾ ದಿಲೀಪಃ ಯಥಾವಿಧಿ ಯೂನೇ ಸೂನವೇ ನೃಪತಿ ಕಕುದಂ ಸಿತಾತಪವಾರಣಂ ದತ್ತ್ವಾ ತಯಾ ದೇವ್ಯಾ ಸಹ ಮುನಿವನತರುಚ್ಛಾಯಾಂ ಶಿಶ್ರಿಯೇ। ಇದಂ ಹಿ ಗಲಿತವಯಸಾಮ್ ಇಕ್ಷ್ವಾಕೂಣಾಂ ಕುಲವ್ರತಮ್ ॥

ಅಲಂಕಾರಃ ಅರ್ಥಾಂತರನ್ಯಾಸ ಅಲಂಕಾರ.

ಅಥ ವಿಷಯೇಭ್ಯೋ ವ್ಯಾವೃತ್ತಾತ್ಮಾ ನಿವೃತ್ತಚಿತ್ತಃ—ಯಥಾವಿಧಿ=ಯಥಾಶಾಸ್ತ್ರಂ—ಯೂನೇ ಸೂನವೇ ನೃಪತಿ ಕಕುದಂ=ರಾಜಚಿಹ್ನಮ್—"ಕಕುದ್ಮತ್ ಕಕುದಂ ಶ್ರೇಷ್ಠೇ ವೃಷಾಂಕೇ ರಾಜಲಕ್ಷ್ಮಣಿ" ಇತಿ ವಿಶ್ವಃ—ಸಿತಾತಪವಾರಣಂ ಶ್ವೇತಚ್ಛತ್ರಂ—ಗಲಿತವಯಸಾಂ=ವೃದ್ಧಾನಾಂ—ನೃಪತಿ ಕಕುದಂ=ರಾಜಚಿಹ್ನಮ್ (ಸಿತ+ಆತೆ+ಛತ್ರಮ್=ಬೆಳ್ಗೊಡೆ) (ಸಿತ+ಆತಪವಾರಣಮ್) ವಿಷಯವ್ಯಾವೃತ್ತಾತ್ಮಾ= ವಿಷಯಾದಿಭೋಗಗಳಲ್ಲಿ ಮುಳುಗಿರುವ ಮಾನವಜೀವಿ—ಮುನಿವನತರೋಃ ಛಾಯಾಮ್=ವನದ (ಆಶ್ರಮದ) ಮರಗಳ ನೆರಳಿಗೆ ಸಾರ್ದು—ಇದಂ ಹಿ ಕುಲವ್ರತಮ್—ನಿವೃತ್ತಚಿತ್ತಃ ಅಥ ವಿಷಯೇಭ್ಯೋ ವ್ಯಾವೃತ್ತಾತ್ಮಾ—ಇದು ವನಗಮನವ್ ಕುಲವ್ರತಮ್॥

# ಚತುರ್ಥ ಸರ್ಗಃ

# ನಾಲ್ಕನೆಯ ಸರ್ಗ

**1. ಸ ರಾಜ್ಯಂ ಗುರುಣಾ ದತ್ತಂ ಪ್ರತಿಪದ್ಯಾಧಿಕಂ ಬಭೌ ।**
**ದಿನಾಂತೇ ನಿಹಿತಂ ತೇಜಃ ಸವಿತ್ರೇವ ಹುತಾಶನಃ ॥ ೧ ॥**

ರಘುವು ಆನುವಂಶಿಕವಾಗಿ ಬಂದ ತನ್ನ ಪಿತೃಸಾಮ್ರಾಜ್ಯವನ್ನು ತನ್ನ ತಂದೆಯಿಂದ ಪಡೆದುಕೊಂಡು ವಿರಾಜಮಾನನಾಗಿ ವಿಜೃಂಭಿಸಿದನು. ಸಾಯಂಕಾಲದ ಸಮಯದಲ್ಲಿ ಹುತಾಶನನಾದ ಸೂರ್ಯನಿಂದ (ಸವಿತೃ, ಸವಿತಾರ) ಬರುವ ಅಧಿಕತೇಜದಿಂದ ಪ್ರಜ್ವಲಿಸುವಂತೆ, ರಘುವು ರಾಜ್ಯವನ್ನು ಸ್ವತಂತ್ರವಾಗಿ, ಅಧಿಕತೇಜದಿಂದ ಆಳತೊಡಗಿದನು. ಸೂರ್ಯದೇವನಾದ ಸವಿತೃವು ಸುಷುಮ್ನಾ, ಪರಿಕೇಶ, ವಿಶ್ವಕಾರ್ಮ, ವಿಶ್ವಕರ್ಮ, ಸಂಪದ್ವಸು, ಅರ್ವಾವಸು, ಸ್ವರಾಜ್ ಇವೇ ಮೊದಲಾದ ಏಳು ತರದ ರಶ್ಮಿಗಳಿಂದ ಗ್ರಹಗಳಾದ ಭೂಮಿ, ಚಂದ್ರ, ಬುಧ, ಗುರು, ಶುಕ್ರ, ಶನಿ ಹಾಗೂ ನಕ್ಷತ್ರಗಳನ್ನು ಬೆಳಗಿಸುತ್ತಿರುವನು. ರಾತ್ರಿಕಾಲದಲ್ಲಿ ನಿಂತುಹೋದ, ಪುನರ್ನಿರ್ಮಾಣದ ಸೃಷ್ಟಿಕಾರ್ಯವನ್ನು ರವಿಯು ಉದಯಿಸಿ ಪುನರಾರಂಭಿಸುವನು. ಅದೇ ರೀತಿಯಲ್ಲಿ ರಾಜತೇಜದಿಂದ ಮೆರೆಯುವ ರಘುವು ಕತ್ತಲೆಯ ರೂಪದಲ್ಲಿರುವ ವೈರಿರಾಜರ ದುರಾಕ್ರಮಣವನ್ನು ಹಿಮ್ಮೆಟ್ಟಿಸಿ ತಾನು ಮಾಡಬೇಕಾದ ಪ್ರಜಾಪ್ರಭುತ್ವವನ್ನು, ಪ್ರಜಾಹಿತದ ಕಾರ್ಯಗಳನ್ನು ನಿಷ್ಕಂಟಕವಾಗಿ ನಡೆಸುತ್ತಾ ಪ್ರಜಾರಂಜಕನಾಗಿ ಮುನ್ನಡೆಯನು.

ಅನ್ವಯಂ :—ಸ ಗುರುಣಾ ದತ್ತ ರಾಜ್ಯಂ ಪ್ರತಿಪದ್ಯ ದಿನಾಂತೇ ಸವಿತ್ರಾ ನಿಹಿತಂ ತೇಜಃ (ಪ್ರತಿಪದ್ಯ) ಹುತಾಶನಃ ಇವ ಅಧಿಕಂ ಬಭೌ ॥

ಸಃ = ಆ ರಘುರಾಜನು, ಗುರುಣಾ = ತಂದೆಯಾದ ದಿಲೀಪ ಮಹಾರಾಜನಿಂದ ದತ್ತಂ = ಕೊಡಲ್ಪಟ್ಟ, ಪ್ರತಿಪದ್ಯ = ಹೊಂದಿ, ದಿನಾಂತೇ = ಸಾಯಂಕಾಲದ ಹೊತ್ತಿನಲ್ಲಿ, ರಾಜ್ಞಃ ಕರ್ಮ = ರಾಜ್ಯಮ್, ದಿನಸ್ಯ ಅಂತಃ ತಸ್ಮಿನ್ ದಿನಾಂತೇ—ಹುತಂ ಅಶ್ನಾತಿ ಇತಿ ಹುತಾಶನಃ—ಭಾ = ದೀಪ್ತೌ—ಸವಿತ್ರಾ (ಸವಿತಾರ) = ಸೂರ್ಯನಿಂದ—ನಿಹಿತಂ = ಇಡಲ್ಪಟ್ಟ—ತೇಜಃ = ಕಾಂತ್ಯತಿಶಯವನ್ನು, ಹುತಾಶನಃ ಇವ = ಅಗ್ನಿಯಂತೆ, ಬಭೌ = ಶೋಭಿಸಿದನು. ಅಗ್ನಿಮ್ ವಾ ಆದಿತ್ಯಃ ಸಾಯಂ ಪ್ರವಿಶತಿ—ಸವಿತಾ = ಸುವತಿ ಪ್ರೇರಯತಿ ಕರ್ಮಸು ಪ್ರಾಣಿನಃ ಇತಿ ॥ ಅಲಂಕಾರ : ಉಪಮಾಲಂಕಾರ.

**2. ದಿಲೀಪಾನಂತರಂ ರಾಜ್ಯೇ ತಂ ನಿಶಮ್ಯ ಪ್ರತಿಷ್ಠಿತಮ್ ।**
**ಪೂರ್ವಂ ಪ್ರಧೂಮಿತೋ ರಾಜ್ಞಾಂ ಹೃದಯೇಽಗ್ನಿರಿವೋತ್ಥಿತಃ ॥ ೨ ॥**

ದಿಲೀಪನ ನಂತರ ಕೋಸಲ ರಾಜ್ಯವು ರಘುವಿನಲ್ಲಿ ಪ್ರತಿಷ್ಠಿತವಾಯಿತು. ರಘುವು ಇದೀಗ ಸಾರ್ವಭೌಮನಾಗಿ ರಾಜ್ಯಸೂತ್ರವನ್ನು ಕೈಯಲ್ಲಿ ಧರಿಸಿ ಆಳತೊಡಗಿದನು.

ಆಗ ಆಳರಸರ ಎದೆಯಲ್ಲಿ ಈ ಮೊದಲು ರಘುವಿನ ತಂದೆಯ ಕಾಲದಲ್ಲಿ ಹೊಗೆಯಿಂದ ಕೂಡಿ ಉರಿಯುತ್ತಿದ್ದ ಅಗ್ನಿಯು ಇನ್ನೂ ಹೆಚ್ಚಾಗಿ ಧಗಧಗನೇ ಉರಿಯತೊಡಗಿತು. ಹೊಟ್ಟೆಕಿಚ್ಚು, ಅಸೂಯೆ, ಈರ್ಷ್ಯೆ, ಮತ್ಸರ, ಸಂಜು, ತಾತ್ಸಾರ ಪ್ರಜ್ವಲಿಸತೊಡಗಿತು. ಬೆಂಕಿಯು ಕೆನ್ನಾಲಿಗೆ ಹೊರಚಾಚಿತು. ಘರ್ಷಣೆಗೆ ನಾಂದಿಯಾಯಿತು.

ಅನ್ವಯ :—ದಿಲೀಪಾನಂತರಂ ರಾಜ್ಯೇ ಪ್ರತಿಷ್ಠಿತಂ ತಂ ನಿಶಮ್ಯ ಪೂರ್ವಂ ರಾಜ್ಞಾಂ ಹೃದಯೇ ಪ್ರಧೂಮಿತಃ ಅಗ್ನಿಃ ಉತ್ಥಿತಃ ಇವ ॥

ರಾಜ್ಯೇ = ರಾಜ್ಯದಲ್ಲಿ, ಪ್ರತಿಷ್ಠಿತಂ = ಪ್ರತಿಷ್ಠೆಹೊಂದಿದ, ಪಟ್ಟವೇರಿದ, ತಂ = ಆ ರಘುರಾಜನನ್ನು, ನಿಶಮ್ಯ = ಕೇಳಿ, ರಾಜ್ಞಾಂ = ಸಾಮಂತರಾಜರ, ಪ್ರಧೂಮಿತಃ = ಅಧಿಕ ಹೊಗೆ ಹೊಂದಿದ, ಉತ್ಥಿತ ಇವ = ಪ್ರಜ್ವಲಿಸಿತೋ ಎಂಬಂತೆ. ದಿಲೀಪಾನಂತರಂ ದಿಲೀಪಸ್ಯ ಅನಂತರಂ. ಅಲಂಕಾರ : ಉತ್ಪ್ರೇಕ್ಷಾಲಂಕಾರ.

ಪ್ರಧೂಮಿತಃ = ಪ್ರಕರ್ಷೇಣ ಧೂಮಃ ಅಸ್ಯ ಸಂಜಾತಃ ಪ್ರಧೂಮ + ಇತ (ಚ್) ನಿಶಮ್ಯ ॥

3. ಪುರುಹೂತಧ್ವಜಸ್ಯೇವ ತಸ್ಯೋನ್ನಯನಪಂಕ್ತಯಃ ।
ನವಾಭ್ಯುತ್ಥಾನದರ್ಶಿನ್ಯೋ ನನಂದುಃ ಸಪ್ರಜಾಃ ಪ್ರಜಾಃ ॥ ೩ ॥

ಸಾಮ್ರಾಜ್ಯದ ಮಹಾಜನರು ರಘುವಿನ ಆಳ್ವಿಕೆಯಲ್ಲಿ ನೆಮ್ಮದಿಯನ್ನು, ಶಾಂತಿಯನ್ನು, ಒಳಿತನ್ನು ಕಂಡರು. ಆಕಾಶದಲ್ಲಿ ಕಾಮನಬಿಲ್ಲು ಮೂಡಿದಾಗ, ಜನರು ತಮ್ಮ ಮಕ್ಕಳುಮರಿಗಳೊಂದಿಗೆ ಕತ್ತೆತ್ತಿ ಮೇಲಕ್ಕೆ ನೋಡುತ್ತಾ, ಕಂಗಳನ್ನು ಮೇಲಕ್ಕೆ ತಿರುಗಿಸಿ, ಮೇಲಕ್ಕೆ ದೃಷ್ಟಿಹರಿಸಿ ನೋಡಿ ನಲಿವಂತೆ ಪ್ರಜೆಗಳು ರಘುವಿನ ರಾಜ್ಯಭಾರ ಕ್ರಮದಲ್ಲಿ ಹೊಸತಾದ ಏಳಿಗೆಯನ್ನು ಕಂಡರು, ಅದೊಂದು ಸುಖೀರಾಜ್ಯವಾಗಿತ್ತು. ಕಾಮನಬಿಲ್ಲು ಇಂದ್ರನ ಧ್ವಜವು ಎಂಬುದು ಸರ್ವವಿದಿತ. ಅದು ಬಾನಲ್ಲಿ ಎಸೆದಾಗ ಮಳೆಯು ಬರುವುದಂತೂ ಖಚಿತ. ಅದು ಮಳೆಯ ಚಿಹ್ನೆ. ಮಳೆಯಿಂದ ಬೆಳೆ, ಬೆಳೆಯಿಂದ ಸರ್ವಸಂಪದ, ಸಿರಿಸಂಪದ, ಎಲ್ಲವೂ.

ಅನ್ವಯ :—ಪುರುಹೂತಧ್ವಜಸ್ಯೇವ ತಸ್ಯ ನವಾಭ್ಯುತ್ಥಾನದರ್ಶಿನ್ಯಃ ಉನ್ನಯನ ಪಂಕ್ತಯಃ ಸಪ್ರಜಾಃ ಪ್ರಜಾಃ ನನಂದುಃ ॥

ಪುರುಭಿಃ ಬಹುಭಿಃ ಹೂಯತೇ=ಪುರುಹೂತಃ—ಪುರುಹೂತಧ್ವಜಸ್ಯ ಇವ = ಇಂದ್ರ ಧ್ವಜದಂತೆ, ತಸ್ಯ = ಆ ರಘುರಾಜನ—ನವಾಭ್ಯುತ್ಥಾದರ್ಶಿನ್ಯಃ = ನೂತನವಾದ ಅಭ್ಯುದಯವನ್ನು ನೋಡುತ್ತಲಿರುವ—ಪುರುಹೂತಧ್ವಜಸ್ಯ ಇವ = ಇಂದ್ರಧ್ವಜದಂತೆ, ತಸ್ಯ = ಆ ರಘುರಾಜನ, ನವಾಭ್ಯುತ್ಥಾನದರ್ಶಿನ್ಯಃ = ನೂತನವಾದ ಅಭ್ಯುದಯವನ್ನು ನೋಡುತ್ತಲಿರುವ, ಉನ್ನಯನಪಂಕ್ತಯಃ = ಉಲ್ಲಾಸಗೊಂಡ ಕಣ್ಣುಗಳುಳ್ಳ, ಸಪ್ರಜಾಃ = ಮಕ್ಕಳಿಂದ ಕೂಡಿದ, ಪ್ರಜಾಃ = ಪ್ರಜಾಜನರು, ನನಂದುಃ = ಸಂತೋಷಗೊಂಡರು.

ಹಿಂದಿನ ಕಾಲದಲ್ಲಿ ಮಳೆ ಮುಂತಾದವುಗಳಿಂದ ಸುಭಿಕ್ಷೆಯುಂಟಾಗಲು ರಾಜದ್ವಾರದಲ್ಲಿ ಧ್ವಜಾಕಾರದ ಉನ್ನತಮರವನ್ನು ನೆಟ್ಟು ಪೂಜಿಸುತ್ತಿದ್ದರು. ಇದಕ್ಕೆ ಇಂದ್ರಧ್ವಜ

ವೆಂದು ಕರೆಯುವರು. (ಇತರ ಪವಿತ್ರ ಧ್ವಜಗಳು–ನಂದಿಧ್ವಜ, ಗರುಡಧ್ವಜ ಇತ್ಯಾದಿ) ಉನ್ನತವಾದ ಆ ಇಂದ್ರಧ್ವಜವನ್ನು ನೋಡಿ ಪ್ರಜೆಗಳು ಸಕುಟುಂಬರಾಗಿ ಆನಂದ ಪಡುವರು.

**4. ಸಮಮೇವ ಸಮಾಕ್ರಾಂತಂ ದ್ವಯಂ ದ್ವಿರದಗಾಮಿನಾ ।**
**ತೇನ ಸಿಂಹಾಸನಂ ಪಿತ್ರ್ಯಮಖಿಲಂ ಚಾರಿಮಂಡಲಮ್ ॥ ೪ ॥**

ಸರ್ವಶ್ರೇಷ್ಠ ಪುರುಷಲಕ್ಷಣಗಳಿಂದ ಶೋಭಿಸುವ ರಘುನೃಪನು ಮದಿಸಿದ ಮದ್ದಾನೆಯ ಅಂದವಾದ ನಡಿಗೆಯುಳ್ಳವನು. ತನ್ನ ತಂದೆಯಿಂದ ಬಂದ ಪಿತ್ರಾರ್ಜಿತವಾದ ರಾಜ್ಯಸಿಂಹಾಸನವನ್ನೂ ಅಖಿಲ ವೈರಿರಾಜರ ಚಕ್ರಾಧಿಪತ್ಯಗಳನ್ನೂ ಏಕಕಾಲದಲ್ಲಿ ಆಕ್ರಮಿಸಿಕೊಂಡನು. ವೈರಿರಾಜರ ದರ್ಪ, ಅಹಂಕಾರ ಧೂಳೀಪಟವಾಯಿತು.

ದ್ವೌ ರದೌ ಯಸ್ಯ ಸಃ = ದ್ವಿರದಃ, ದ್ವಿರದವತ್ ಗಂತುಂ ಶೀಲಂ ಅಸ್ಯ = ದ್ವಿರದಗಾಮೀ। ದ್ವಿರದ ಇವ ಗಚ್ಛತೀತಿ = ದ್ವಿರದಗಾಮೀ। ತೇನ ಪಿತುಃ ಆಗತಮ್— ಪಿತ್ರ್ಯಮ್। ಅರೀಣಾಂ ಮಂಡಲಂ = ಅರಿಮಂಡಲಮ್ ॥

ದ್ವಿರದಗಾಮಿನಾ = ಆನೆಯಂತೆ ನಡಿಗೆ ಉಳ್ಳ, ತೇನ = ಆ ರಘುರಾಜನ, ಪಿತ್ರ್ಯಂ = ತಂದೆಯಿಂದ ಬಂದಿರುವ, ಸಮಾಕ್ರಾಂತಂ = ಸ್ವಾಧೀನಗೊಳಿಸು, ಸಮಮೇವ = ಏಕಕಾಲದಲ್ಲಿ. ಅಲಂಕಾರ : ಅತಿಶಯೋಕ್ತಿ ಅಲಂಕಾರ.

**5. ಛಾಯಾಮಂಡಲಲಕ್ಷ್ಯೇಣ ತಮದೃಶ್ಯಾ ಕಿಲ ಸ್ವಯಮ್ ।**
**ಪದ್ಮಾ ಪದ್ಮಾತಪತ್ರೇಣ ಭೇಜೇ ಸಾಮ್ರಾಜ್ಯದೀಕ್ಷಿತಮ್ ॥ ೫ ॥**

ದೇವತೆಯಾಗಿರುವ, ತಾವರೆಯೇ ತನ್ನ ಆಸನವಾಗಿರುವ ರಾಜ್ಯಲಕ್ಷ್ಮಿಯು ತಾನು ಅಗೋಚರಳಾದರೂ ಸಾಮ್ರಾಜ್ಯದೀಕ್ಷಿತನಾದ ಆ ರಾಜರಾಜೇಶ್ವರನನ್ನು ಸೇವಿಸಿಕೊಂಡಿರುತ್ತಿದ್ದಳು. ಆ ರಾಜೇಂದ್ರನ ಬೆಳ್ಗೊಡೆಯನ್ನೇ ತನ್ನ ವರದಹಸ್ತದಿಂದ ಅದೃಶ್ಯಳಾಗಿಯೇ ಹಿಡಿದುಕೊಂಡು ಪದ್ಮೆ, ಕನಕಲಕ್ಷ್ಮಿ, ಭಾಗ್ಯಲಕ್ಷ್ಮಿ, ರಾಜ್ಯಲಕ್ಷ್ಮಿಗಳೆಂಬ ತನ್ನ ಅನರ್ಘ್ಯನಾಮಂಗಳನ್ನು ಸಾರ್ಥಕಗೊಳಿಸಿ ಅನಂತಭಾಗ್ಯಗಳನ್ನು ಸುರಿಸುತ್ತಿದ್ದಳು. ತಾವರೆಯೇ ತನ್ನ ಆವಾಸಸ್ಥಾನವಾಗಿರುವ, ತಾವರೆಯೇ ತನ್ನ ಪೀಠಸ್ಥಾನವಾಗಿರುವ ಆ ಪದ್ಮೆ, ಪದ್ಮಾತಪತ್ರೆ ತನ್ನ ಕೈಯಲ್ಲಿರುವ ದಿವ್ಯಕಮಲಪುಷ್ಪವನ್ನೇ ಶ್ವೇತಚ್ಛತ್ರವನ್ನಾಗಿ ಕಲ್ಪಿಸಿಕೊಂಡು ರಾಜಶೇಖರನಾಗಿ ಸಾಮ್ರಾಜ್ಯದ ಭಾರವನ್ನು ನಿರ್ವಹಿಸುತ್ತಿರುವ ಅವನನ್ನು ಸೇವಿಸುತ್ತಿದ್ದಳು. ಶೋಭಾಭಿಮಾನಿಯಾದ ಮಹಾಲಕ್ಷ್ಮಿಯೇ (ಅಧಿಷ್ಠಾತೃದೇವತೆ, ಅಭಿಮಾನಿದೇವತೆ) ಸಾಕ್ಷಾತ್ತಾಗಿ ಇವನಿಗೆ ಶ್ವೇತಚ್ಛತ್ರವನ್ನು (ಬೆಳ್ಗೊಡೆಯನ್ನು) ಎತ್ತಿಹಿಡಿದು ವಸುಂಧರಾಧೀಶನಾದ ಇವನ ಸಮೀಪದಲ್ಲಿ ಅದೃಶ್ಯರೂಪಳಾಗಿ ಇರುತ್ತಿದ್ದಳು. ಆ ರಾಜಕುಲತಿಲಕನ ಮುಖಮಂಡಲದ ಸುತ್ತಲೂ ಒಂದು ಪ್ರಭಾಮಂಡಲವು ಅವಳ ದ್ಯೋತಕವಾಗಿ ಕಂಗೊಳಿಸುತ್ತಿತ್ತು.

ಅನ್ವಯ :—ಪದ್ಮಾ ಸ್ವಯಮ್ ಅದೃಶ್ಯಾ ಕಿಲ ಛಾಯಾಮಂಡಲಲಕ್ಷ್ಯೇಣ ಪದ್ಮಾತಪತ್ರೇಣ ಸಾಮ್ರಾಜ್ಯದೀಕ್ಷಿತಂ ತಂ ಭೇಜೇ ॥

ಛಾಯಾನಾಂ ಮಂಡಲಮ್ = ಛಾಯಾಮಂಡಲೇನ ಲಕ್ಷ್ಯಮ್ ತೇನ । ನ ದೃಶ್ಯಾ= ಅದೃಶ್ಯಾ । ಪದ್ಮಮೇವಾತಪತ್ರಂ, ತೇನ । ಸಾಮ್ರಾಜ್ಯೇ ದೀಕ್ಷಿತಃ, ತಮ್ । ಭೇಜೇ— ಭೇಜಾತೇ—ಭೇಜಿರೇ । ಭೇಜಿಷೇ—ಭೇಜಾಥೇ—ಭೇಜಿಧ್ವೇ । ಭೇಜೇ—ಭೇಜಿವಹೇ— ಭೇಜಿಮಹೇ । ಭಜ = ಸೇವಾಯಾಮ್—ಲಿಟ್—ಪ್ರ.ಪು.ಏ. ॥

ಪದ್ಮಾ = ಲಕ್ಷ್ಮಿಯು, ಸ್ವಯಂ = ತಾನೇತಾನಾಗಿ, ಅದೃಶ್ಯಾ ಕಿಲ = ಇತರರಿಗೆ ತೋರದವಳಾಗಿ. ಛಾಯಾಮಂಡಲಲಕ್ಷ್ಯೇಣ = ಕಾಂತಿಸಮೂಹದಿಂದ ಊಹಿಸಲ್ಪಡುವ, ಪದ್ಮಾತಪತ್ರೇಣ = ಕಮಲವೆಂಬ ಶ್ವೇತಚ್ಛತ್ರದಿಂದ, ಸಾಮ್ರಾಜ್ಯದೀಕ್ಷಿತಂ = ಸಾಮ್ರಾಜ್ಯ ಕಾರ್ಯದಲ್ಲಿ ನಿತ್ಯದ ವ್ಯವಹಾರದಲ್ಲಿ ಅಭಿಷಿಕ್ತನಾದ, ತಂ = ಆ ರಘುರಾಜನನ್ನು, ಭೇಜೇ = ಸಂಸೇವಿಸಿದಳು.

6. ಪರಿಕಲ್ಪಿತಸಾಂನಿಧ್ಯಾ ಕಾಲೇ ಕಾಲೇ ಚ ವಂದಿಷು ।
ಸ್ತುತ್ಯಂ ಸ್ತುತಿಭಿರರ್ಥ್ಯಾಭಿರುಪತಸ್ಥೇ ಸರಸ್ವತೀ ॥ ೬ ॥

ಸೃಷ್ಟಿಕರ್ತನಾದ ಬ್ರಹ್ಮನ ರಾಣಿ, ಸಕಲಕಲಾವೇಣಿ, ಆದಿನಾರಾಯಣಿ, ನಾದಮಯಿ ಯಾದ ವಾಗ್ದೇವಿಯು ಆ ನರೇಂದ್ರನನ್ನು ದೇವನೆಂದೇ ತಿಳಿದು ಸೇವಿಸುತ್ತಿದ್ದಳು, ಕಾಲಕಾಲಕ್ಕೆ ಬಂದು ರಾಜನ ಸನ್ನಿಧಿಯಲ್ಲಿ ನಿಂದ ವಂದಿಜನರು, ವಂದಿಮಾಗಧರು, ವೈತಾಲಿಕರು, ಪಾಟಾಳಿಗಳು ಸ್ತುತಿವಾಕ್ಯಘೋಷಣೆಗಳನ್ನು ಘೋಷಿಸುತ್ತಿದ್ದರು. ಅರ್ಥವತ್ತಾದ ವಚನಗಳಿಂದ, ಚೂರ್ಣಿಕೆಗಳಿಂದ, ಮಹಾವಾಕ್ಯಗಳಿಂದ, ಚುಟುಕು ಪದ ಲಹರಿಗಳಿಂದ ಅವನ ಕೀರ್ತಿವೈಭವವನ್ನು, ಪರಂಪರೆಗಳನ್ನು, ವಂಶಗೌರವಗಳನ್ನು, ಹಾಡಿ ದಣಿಯುರು. ಆ ಶಬ್ದಬ್ರಹ್ಮ, ವಾಕ್‌ಸ್ವರೂಪಳು, ವಾಗ್‌ಲಹರಿಯಿಂದ ಆ ವಾಣಿಯು ಜನರ ನಾಲಗೆಯಲ್ಲಿ (ರಸನೆಯಲ್ಲಿ) ಕುಣಿದಾಡುತ್ತಾ ಸ್ಥಿರವಾಗಿ ನಿಂದು ಸೂರ್ಯಕುಲತಿಲಕನಾದ ರಘುರಾಜನನ್ನು ಸೇವಿಸುತ್ತಿದ್ದಳು.

ಅನ್ವಯ :—ಕಾಲೇ ಕಾಲೇ ಚ ವಂದಿಷು ಪರಿಕಲ್ಪಿತಸಾಂನಿಧ್ಯಾ ಸರಸ್ವತೀ ಸ್ತುತ್ಯಂ (ತಂ) ಅರ್ಥ್ಯಾಭಿಸ್ತುತಿಭಿಃ ಉಪತಸ್ಥೇ ॥

ಉಪಾದ್ದೇವ ಪೂಜಾಸಂಗತಿಕರಣ ಮಿತ್ರಕರಣ ಪಥಿಷು—(ಪಾಣಿನಿಃ ಉಪಾನ್ ಮಂತ್ರಕರಣೇ)

ಸರಸ್ವತೀ ಚ = ವಿದ್ಯಾಸರಸ್ವತಿಯೂ ಕೂಡ, ಕಾಲೇ ಕಾಲೇ = ಯೋಗ್ಯಕಾಲದಲ್ಲಿ, ವಂದಿಷು=ಸ್ತುತಿಪಾಠಕರಲ್ಲಿ, ಪರಿಕಲ್ಪಿತಸಾಂನಿಧ್ಯಾ=ಹೊಂದಿದ ಸನ್ನಿಧಾನವುಳ್ಳವಳಾಗಿ. ಸ್ತುತ್ಯಂ = ಸ್ತೋತ್ರಮಾಡಲು ಯೋಗ್ಯನಾದ, ಅರ್ಥ್ಯಾಭಿಃ = ಅರ್ಥವತ್ತಾಗಿರುವ, ಸ್ತುತಿಭಿಃ = ಸ್ತೋತ್ರಗಳಿಂದ, ಉಪತಸ್ಥೇ = ಪೂಜಿಸಿದಳು.

7. ಮನುಪ್ರಭೃತಿಭಿರ್ಮಾನ್ಯೈರ್ಭುಕ್ತಾ ಯದ್ಯಪಿ ರಾಜಭಿಃ ।
ತಥಾಽಪ್ಯನನ್ಯಪೂರ್ವೇವ ತಸ್ಮಿನ್ನಾಸೀದ್ವಸುಂಧರಾ ॥ ೭ ॥

ಆ ಪೃಥ್ವೀವಲ್ಲಭನ ಸಾಮ್ರಾಜ್ಯವು ಈ ಹಿಂದೆ ಮನು ಮೊದಲಾದ ಚಕ್ರವರ್ತಿ ಗಳಿಂದ, ಮಹಾಪ್ರಭೃತಿಗಳಿಂದ ಅನುಭೋಗಿಸಲ್ಪಟ್ಟಿದ್ದುದು ನಿಜವಾದರೂ ಆ ವಸುಂಧರಾ ದೇವಿಯು (ಭೂದೇವಿಯು) ಈ ಹಿಂದೆ ಯಾರಿಂದಲೂ ಅನುಭವಿಸಲ್ಪಡದೆ ಇರ್ದಳು.

ಇವನೇ ತನ್ನ ಮೊದಲನೆಯ ಪತಿಯೋ ಎಂಬಂತೆ ಗಾಢವಾದ ಪ್ರೀತಿಯಿಂದ ಅನುರಕ್ತಳಾಗಿ ಹೇರಳವಾದ ಸುವರ್ಣಾದಿಗಳನ್ನು ಸಸ್ಯಸಮೃದ್ಧಿಯನ್ನಿತ್ತು ಸಂಭಿಕ್ಷೆಯನ್ನುಂಟುಮಾಡಿದಳು, ಕ್ಷೇತ್ರಾಭಿವೃದ್ಧಿಯ ಸನ್ಮಂಗಳವನ್ನುಂಟುಮಾಡಿ ಉತ್ಕರ್ಷದಿಂದ ಮೆರೆಯುವಂತೆ ಮಾಡಿದಳು (ಸಂವರ್ಣಾಯುಗ) (ಜೇನಂ ಸುರಿವ, ಹಾಲಂ ಹರಿವ ದಿವಂ ಭೂಮಿಗಿಳಿದುಂದೋ, ಎಂಬಂತೆ).

ಮನುಃ ಪ್ರಭೃತಿಃ ಯೇಷಾಂ ತೇ ಮನುಪ್ರಭೃತಯಃ, ತೈಃ । ಅನ್ಯಃ ಪೂರ್ವಃ ಯಸ್ಯಾಃ ಸಾ, ಅನ್ಯಪೂರ್ವಾ, ಅನ್ಯಪೂರ್ವಾ ನ ಭವತಿ ಇತಿ ಅನನ್ಯಪೂರ್ವಾ । ಆಸೀತ್—ಆಸ್ತಾಂ—ಆಸನ್ । ಆಸೀಃ—ಆಸ್ತಂ—ಆಸ್ತ । ಆಸಂ—ಆಸ್ವ—ಆಸ್ಮ । ಆಸ—ಭುವಿ—ಲಟ್ ॥

ವಸುಂಧರಾ = ಭೂಮಿಯು, ಮನುಪ್ರಭೃತಿಭಿಃ = ಮನು ಮುಂತಾದ, ಮಾನ್ಯೈಃ= ಪೂಜ್ಯರಾದ ರಾಜರಿಂದ, ಭುಕ್ತಾ ಯದ್ಯಪಿ = ಭೋಗಿಸಲ್ಪಟ್ಟವಳು, ತಥಾಽಪಿ = ಹಾಗಾದರೂ, ತಸ್ಮಿನ್ = ಆ ರಘುರಾಜನಲ್ಲಿ, ಅನನ್ಯಪೂರ್ವಾ ಇವ = ಇತರರಿಂದ ಭೋಗಿಸಲ್ಪಡದವಳಂತೆ, ಆಸೀತ್ = ಆಗಿದ್ದಳು.

**8. ಸ ಹಿ ಸರ್ವಸ್ಯ ಲೋಕಸ್ಯ ಯುಕ್ತದಂಡತಯಾ ಮನಃ ।**
**ಆದದೇ ನಾತಿಶೀತೋಷ್ಣೋ ನಭಸ್ವಾನಿವ ದಕ್ಷಿಣಃ ॥ ೮ ॥**

ಅವನು ಲೋಕಧರ್ಮವನ್ನು ಅರಿತವನು, ಧರ್ಮಸಹಿಷ್ಣು, ನ್ಯಾಯಪಕ್ಷಪಾತಿ. ಅವನ ಕೈಯಲ್ಲಿ ದಂಡನೀತಿಯು ಯುಕ್ತವಾಗಿ ಶೋಭಿಸುತ್ತಿತ್ತು. ಸಕಲ ನೀತಿಶಾಸ್ತ್ರ, ಧರ್ಮಶಾಸ್ತ್ರಗಳ ಮರ್ಮವನ್ನು ಅರಿತ ನ್ಯಾಯಾಧೀಶನಾಗಿದ್ದನು. ಯುಕ್ತದಂಡನೆಯಿಂದ ಸರ್ವಲೋಕದ ಜನರ ಮನಸ್ಸನ್ನು ಸೆಳೆದಿದ್ದು, ದಕ್ಷಿಣ ದಿಕ್ಕಿನಿಂದ ಬೀಸುವ ಮಲಯಮಾರುತದಂತೆ ಹಿತಕರನೆನಿಸಿದ್ದನು. ಮಲಯಮಾರುತವು ಹೆಚ್ಚು ಶೀತವೂ ಅಲ್ಲ, ಉಷ್ಣವೂ ಅಲ್ಲ. ಸಮನಾದ ಶೀತೋಷ್ಣ ಎಲ್ಲರಿಗೂ ಹಿತಕಾರಿಯೆನಿಸಿದಂತೆ ಆ ರಾಜಕುಲತಿಲಕನಲ್ಲಿ ದಂಡಾಯುಧವು ಶೋಭಿಸಿತು.

ಯುಕ್ತಃ ದಂಡಃ ಯಸ್ಯ ಸಃ, ಯುಕ್ತದಂಡಸ್ಯ ಭಾವಃ ಯುಕ್ತದಂಡತಾ, ತಯಾ । ಶೀತಶ್ಚಾಸೌ ಉಷ್ಣಶ್ಚ । ಅತ್ಯಂತಂ ಶೀತೋಷ್ಣಃ । ಆಙ್ ಉಪಸರ್ಗ । ದದೇ—ದದಾತೇ—ದದಿರೇ ಇತ್ಯಾದಿ । ಡುದಾಞ್—ದಾನೇ—ಲಿಟ್—ಪ್ರ.ಪು.ಏ. ॥

ನ ಅತಿಶೀತೋಷ್ಣಃ = ಅತಿ ತಣ್ಣಗೂ, ಬಿಸಿಯೂ ಆಗದಿರುವ, ದಕ್ಷಿಣಃ = ದಕ್ಷಿಣ ದಿಕ್ಕಿನಿಂದ ಬೀಸುವ, ನಭಸ್ವಾನ್ ಇವ = ಗಾಳಿಯಂತೆ, ಹಿ = ಯಾವ ಕಾರಣದಿಂದ, ಸಃ= ಆ ರಘುವು, ಯುಕ್ತದಂಡತಯಾ = ಅಪರಾಧಕ್ಕೆ ತಕ್ಕಂತೆ ಶಿಕ್ಷೆಕೊಡುವುದರಿಂದ, ಸರ್ವಸ್ಯ = ಎಲ್ಲಾ, ಲೋಕಸ್ಯ = ಜನರ, ಮನಃ = ಮನಸ್ಸನ್ನು, ಆದದೇ = ಸೆಳೆದನು.

**9. ಮಂದೋತ್ಕಂಠಾಃ ಕೃತಾಸ್ತೇನ ಗುಣಾಧಿಕತಯಾ ಗುರೌ ।**
**ಫಲೇನ ಸಹಕಾರಸ್ಯ ಪುಷ್ಪೋದ್ಗಮ ಇವ ಪ್ರಜಾಃ ॥ ೯ ॥**

ಅತ್ಯಂತ ಉನ್ನತವಾದ ಗುಣನಡತೆಗಳಿಂದ, ಮಾನಸಿಕ ಹಾಗೂ ಶಾರೀರಿಕ ಗುಣ ಧರ್ಮಗಳಿಂದ ಆ ರಾಜತನೂಭವನು ತನ್ನ ಪಿತನನ್ನು ಮೀರಿಸಿದ್ದನು. ಹೀಗಾಗಿ ಅವನಲ್ಲಿ ಅನುರಕ್ತರಾದ ಪ್ರಜಾಕೋಟಿಯು ಮಾವು ಫಲ ಬಿಟ್ಟಾಗ, ಅದು ಈ ಹಿಂದೆ ಮಾವು ಪುಷ್ಪಿಸಿದಾಗ, ಮರವು ಹೂಬಿಟ್ಟಾಗ ಇದ್ದ ಆನಂದಕ್ಕಿಂತಲೂ ಅಧಿಕವಾಗಿ ಹರ್ಷಿಸುವಂತೆ ಹರ್ಷಗೊಂಡರು.

ಅನ್ವಯಃ :—ತೇನ ಗುರೌ ಸಹಕಾರಸ್ಯ ಫಲೇನ ಪುಷ್ಪೋದ್ಗಮೇ ಇವ ಗುಣಾಧಿಕ ತಯಾ ಪ್ರಜಾಃ ಮಂದೋತ್ಕಂಠಾಃ ಕೃತಾಃ ॥

ಮಂದಾ ಉತ್ಕಂಠಾ ಯಾಸಾಂ ತಾಃ, ಮಂದೋತ್ಕಂಠಾಃ । ಗುಣೇಭ್ಯಃ ಅಧಿಕಃ ಗುಣಾಧಿಕಃ ತಸ್ಯ ಭಾವಃ, ಗುಣಾಧಿಕತಾ. ತಯಾ । ಪುಷ್ಪಾಣಾಂ ಉದ್ಗಮಃ ॥

ತೇನ = ಆ ರಘುನೃಪನಿಂದ, ಪ್ರಜಾಃ = ಪ್ರಜಾಕೋಟಿ, ಗುರೌ = ತಂದೆಯಾದ ದಿಲೀಪನ ವಿಷಯದಲ್ಲಿ, ಸಹಕಾರಸ್ಯ = ಕಸಿಮಾವಿನ, ಫಲೇನ = ಹಣ್ಣಿನಿಂದ, ಪುಷ್ಪೋ ದ್ಗಮೇ ಇವ = ಹೂವಿನ ಉತ್ಪತ್ತಿಯಲ್ಲಿ ಎಂಬಂತೆ, ಗುಣಾಧಿಕತಯಾ = ದಿಲೀಪನಿ ಗಿಂತಲೂ ಅಧಿಕವಾದ ಗುಣಗಳಿರುವುದರಿಂದ, ಮಂದೋತ್ಕಂಠಾ = ಅಲ್ಪವಾದ ಉತ್ಸು ಕತೆಯುಳ್ಳವರು, ಕೃತಾಃ = ಮಾಡಲ್ಪಟ್ಟವರು,

**10. ನಯವಿದ್ಭಿರ್ನವೇ ರಾಜ್ಞಿ ಸದಸಚ್ಚೋಪದರ್ಶಿತಮ್ ।**
**ಪೂರ್ವ ಏವಾಭವತ್ಪಕ್ಷಸ್ತಸ್ಮಿನ್ನಾಭವದುತ್ತರಃ ॥ ೧೦ ॥**

ರಾಜನ ಆಸ್ಥಾನದಲ್ಲಿ (ರಾಜಾಸ್ಥಾನದಲ್ಲಿ) ರಾಜನೀತಿಶಾಸ್ತ್ರಕೋವಿದರು, ನಯ ಶಾಸ್ತ್ರಜ್ಞರು, ನೀತಿಶಾಸ್ತ್ರವಿಶಾರದರಾದ ಸಚಿವರು ನೃಪವರನಿಗೆ ರಣನೀತಿಗಳನ್ನು ಬೋಧಿ ಸಿದರು. ಸತ್ಯಮಾರ್ಗವನ್ನೂ, ಅಸತ್ಯದ ಮಾರ್ಗಗಳನ್ನೂ, ಷಡ್ಯಂತ್ರ, ಕುಟಿಲನೀತಿ ಗಳನ್ನೂ, ಪಾಪಮಾರ್ಗಗಳನ್ನೂ ವಿವರಿಸಿದರು. ಧರ್ಮಯುದ್ಧಾದಿ ಸದ್ವರ್ತನವನ್ನೂ ಕೂಟಯುದ್ಧಾದಿ ಅಸದ್ವರ್ತನೆಗಳನ್ನೂ ತಿಳಿಸಿದರು. ಧರ್ಮಸಾಮ್ರಾಟನಾದ ರಘುವು ಸತ್‌ಮಾರ್ಗವನ್ನೇ ಆರಿಸಿದನು. ಉತ್ತರಪಕ್ಷವನ್ನು ತಳ್ಳಿಹಾಕಿದನು.

ನಯಂ ವಿಂದಂತಿ ಇತಿ ನಯವಿದ್ಭಿಃ—ತೈಃ ನಯವಿದ್ಭಿಃ । ಅಭವತ್—ಅಭವತಾಂ—ಅಭವನ್ ಇತ್ಯಾದಿ । ಭೂ—ಸತ್ತಾಯಾಂ—ಲಙ್—ಪ್ರ.ಪು.ಏ.॥

ನಯವಿದ್ಭಿಃ = ನೀತಿಶಾಸ್ತ್ರವನ್ನು ತಿಳಿದ ನೀತಿಕೋವಿದರು, ನವೇ = ನೂತನವಾದ, ಹೊಸತಾದ, ರಾಜ್ಞಿ = ಆ ರಘುರಾಜನಲ್ಲಿ, ಸತ್ = ಧರ್ಮಯುದ್ಧಾದಿಗಳು, ಅಸತ್ = ಕೂಟಯುದ್ಧಾದಿಗಳು, ಉಪದರ್ಶಿತಮ್ = ತೋರಿಸಲ್ಪಟ್ಟ, ತಸ್ಮಿನ್ = ಆ ರಘುಮಹೀ ಪತಿಯಲ್ಲಿ, ಪೂರ್ವ ಏವ = ಮೊದಲಿನದ್ದೇ ಆದ, ಪಕ್ಷಃ = ವಿಷಯವು, ಅಭವತ್ = ಸಾಧನಯೋಗ್ಯವಾಯಿತು, ಉತ್ತರಪಕ್ಷಃ = ಎರಡನೆಯ ವಿಷಯವು. ನ ಅಭವತ್ = ಸಂಕ್ರಾಂತವಾಗಲಿಲ್ಲ, ಸ್ವೀಕಾರಾರ್ಹವೆನಿಸಲಿಲ್ಲ.

**11. ಪಂಚಾನಾಮಪಿ ಭೂತಾನಾಮುತ್ಕರ್ಷಂ ಪುಪುಷುರ್ಗುಣಾಃ ।**
**ನವೇ ತಸ್ಮಿನ್ ಮಹೀಪಾಲೇ ಸರ್ವಂ ನವಮಿವಾಭವತ್ ॥ ೧೧ ॥**

ಪೃಥ್ವಿ, ಆಪ, ತೇಜ, ವಾಯು, ಆಕಾಶಗಳೆಂಬ ಪಂಚಮಹಾಭೂತಗಳು ಹೊಸತಾಗಿ ರಘುರಾಜನು ರಾಜನಾಗಿ, ರಾಜ್ಯಾಡಳಿತದ ಸೂತ್ರಗಳನ್ನು ತನ್ನ ಕೈಯಲ್ಲಿ ಧರಿಸಿದಾಗ ಆ ಮಹೋದಯನಿಗೆ ಶುಭವಾಗಲೆಂದು ನಿಜಗುಣೋತ್ಕರ್ಷವನ್ನು ಹೊಂದಿದುವು ಮುದದೆ. ಪಂಚಭೂತಗಳು ಪ್ರಸನ್ನತೆಯಿಂದ ತಮ್ಮಲ್ಲಿರುವ ಗಂಧ, ರಸ, ಸ್ಪರ್ಶ, ರೂಪ ಶಬ್ದಗಳೆಂಬ ಐದು ಉತ್ತಮಗುಣಗಳ ಪರಾಕಾಷ್ಠೆಯಿಂದ ಮೆರೆಯತೊಡಗಿದುವು. ಆಗ ಪೃಥ್ವೀಮಂಡಲವು ಹೊಸತಾದ ತೆರದಿಂದ ರಂಜಿಸಿತು. ನವೋದಯದ ಗಾಳಿ ಬೀಸಿತು.

ಪಂಚಭೂತಗಳು=೧. ಪೃಥ್ವಿ, ೨. ಆಪ. ೩. ತೇಜ, ೪. ಮರುತ್, ೫. ವ್ಯೋಮ. ಗುಣಧರ್ಮಗಳು : ೧. ವ್ಯೋಮ = ಆಕಾಶ (ಶಬ್ದ), ೨. ಮರುತ್ = ವಾಯು (ಸ್ಪರ್ಶ), ೩. ತೇಜಸ್ = ಬೆಳಕು (ರೂಪ), ೪. ಆಪ = ನೀರು = (ರಸ), ೫. ಪೃಥ್ವಿ = ಭೂಮಿ (ಗಂಧ), ಗುಣಗಳು : ೧. ಶಬ್ದ, ೨. ಸ್ಪರ್ಶ, ೩. ರೂಪ, ೪. ರಸ, ೫. ಗಂಧ. ಪುಪೋಷ—ಪುಪುಷತುಃ—ಪುಪುಷುಃ । ಪುಪೋಷಿತ—ಪುಪುಷಥುಃ—ಪುಪುಷ । ಪುಪೋಷ —ಪುಪುಷಿವ—ಪುಪುಷಿಮ । ಪುಷ—ಪುಷ್ಪೌ—ಲಿಟ್—ಪ್ರ.ಪು.ಬ. । ಮಹ್ಯಾಃ ಪಾಲಃ = ಮಹೀಪಾಲಃ ॥

ಪಂಚಾನಾಂ = ಐದಾದ, ಭೂತಾನಾಮಪಿ = ಪೃಥಿವ್ಯಾದಿ ಭೂತಗಳ (ಮೂಲ ಪ್ರಕೃತಿಗಳ). ಗುಣಾಃ = ಗಂಧಾದಿಗುಣಗಳು, ಉತ್ಕರ್ಷಂ = ಆಧಿಕ್ಯವನ್ನು, ಪುಪುಷುಃ = ಹೊಂದಿದವು, ತಸ್ಮಿನ್ = ಆ, ನವೇ = ನೂತನವಾದ, ಮಹೀಪಾಲೇ = ರಘುರಾಜನಲ್ಲಿ, ಸರ್ವಂ = ಎಲ್ಲಾ ವಸ್ತುಗಳೂ, ನವಮಿವ = ಹೊಸದೋ ಎಂಬಂತೆ, ಅಭವತ್ = ಆಯಿತು.

**12. ಯಥಾ ಪ್ರಹ್ಲಾದನಾಚ್ಚಂದ್ರಃ ಪ್ರತಾಪಾತ್ತಪನೋ ಯಥಾ ।**
**ತಥೈವ ಸೋಽಭೂದನ್ವರ್ಥೋ ರಾಜಾ ಪ್ರಕೃತಿರಂಜನಾತ್ ॥ ೧೨ ॥**

ಹೇಗೆ ಚಂದ್ರಮನು (ಶಶಿಯು) ತನ್ನ ಹೆಸರಿಗೆ ತಕ್ಕಂತೆ ಆಹ್ಲಾದಕರನಾಗಿ ಸುಖಕರನಾಗಿ ಪ್ರಕೃತಿರಂಜಕನಾಗಿರುವನೋ, ಸಸ್ಯಕೋಟಿಗೆ ಜೀವರಾಶಿಗೆ ಹಿತಕರನಾಗಿ ಇರುವನೋ (ಚಂದಯತಿ ಇತಿ ಚಂದ್ರಃ), ಅಂತೆಯೇ ರಘುವು ರಾಜನೆಂಬ ಪದವಿಗೆ (ಹೆಸರಿಗೆ) ತಕ್ಕವನಾಗಿ, ಪೃಥ್ವಿಗೇ ಭೂಷಣಪ್ರಾಯನಾಗಿ (ರಂಜಯತಿ ಪ್ರಕೃತೀಃ ಇತಿ ರಾಜಾ) ಪ್ರಜಾರಂಜಕನಾಗಿದ್ದನು (ಪ್ರಜಾಭಂಜಕನಾಗಿ ಅಲ್ಲ). ಆ ಸೂರ್ಯವಂಶದ ಮಣಿದೀಪನು ಸೂರ್ಯನಂತೆಯೇ ತೇಜಸ್ವಿ ಮತ್ತು ತಾಪದಾಯಕನು (ತಪತೀತಿ ತಪನಃ); ಸೂರ್ಯನ ಪ್ರಭಾವವೇ ತಪಿಸುವಂತಹದು. ಉಷ್ಣವನ್ನು, ಶಾಖವನ್ನು, ಉರಿಯನ್ನು ಪ್ರವಹಿಸುವುದು ಸೂರ್ಯನ ಗುಣಧರ್ಮ. ಅಂತೆಯೇ ರಘುವು ಶತ್ರುಗಳಿಗೆ ತಾಪದಾಯಕನು. ಆದ್ದರಿಂದ ಆ ರಾಜಕುಲಮೌಳಿಯು ಸೂರ್ಯಚಂದ್ರರ ಗುಣಸ್ವಭಾವಗಳಿಂದ ಮೆರೆಯುತ್ತ ರಘುವೆಂಬ ತನ್ನ ನಾಮಧೇಯಕ್ಕೆ ತಕ್ಕವನಾಗಿದ್ದನು.

ಅನುಗತಃ ಅರ್ಥಃ ಯಸ್ಯ ಸಃ—ಅನ್ವರ್ಥಃ । ಪ್ರಕೃತೀನಾಂ ರಂಜನಂ—ಪ್ರಕೃತಿರಂಜನಮ್ । ಅಭೂತ್—ಭೂ—ಸತ್ತಾಯಾಂ—ಲುಙ್—ಪ್ರ.ಪು.ಏ.॥ ರಾಜಾ ಪ್ರಕೃತಿರಂಜನಾತ್ ॥

ಯಥಾ = ಹೇಗೆ, ಚಂದ್ರಃ = ಚಂದ್ರನು, ಪ್ರಹ್ಲಾದನಾತ್ = ಸಂತೋಷವನ್ನು, ಆನಂದವನ್ನುಂಟುಮಾಡುವುದರಿಂದ, ಅನ್ವರ್ಥಃ = ಯುಕ್ತ ಅರ್ಥವುಳ್ಳ ಹೆಸರುಳ್ಳವನು, ಅಭೂತ್ = ಆದನೋ, ಯಥಾ = ಹೇಗೆ, ತಪನಃ = ಸೂರ್ಯನು, ಪ್ರತಾಪಾತ್ = ಸಂತಾಪವನ್ನು ಉಂಟುಮಾಡುವುದರಿಂದ. ಅನ್ವರ್ಥಃ=ಯಥಾರ್ಥವಾದ ಹೆಸರುಳ್ಳವನು, ಅಭೂತ್ = ಆದನೋ, ತಥೈವ = ಹಾಗೆಯೇ, ಸಃ ರಾಜಾ = ಆ ರಾಜನು, ಪ್ರಕೃತಿ ರಂಜನಾತ್= ಪ್ರಜೆಗಳಿಗೆ ಅನುರಾಗವನ್ನುಂಟುಮಾಡುವುದರಿಂದ, ಅನ್ವರ್ಥಃ = ಸಾರ್ಥಕ ವಾದ ಹೆಸರುಳ್ಳವನು, ಅಭೂತ್ = ಆದನು.

13. ಕಾಮಂ ಕರ್ಣಾಂತವಿಶ್ರಾಂತೇ ವಿಶಾಲೇ ತಸ್ಯ ಲೋಚನೇ।
ಚಕ್ಷುಷ್ಮತ್ತಾ ತು ಶಾಸ್ತ್ರೇಣ ಸೂಕ್ಷ್ಮಕಾರ್ಯಾರ್ಥದರ್ಶಿನಾ ॥ ೧೩ ॥

ರಘುವು ವಿಶಾಲನೇತ್ರನು, (ವಿಶಾಲಾಕ್ಷನು). ಕಿವಿಯವರೆಗೆ ಕಣ್ಣುಗಳ ಕೊನೆಗಳು ಹರಡಿದ್ದರೂ ಶಾಸ್ತ್ರವಿಚಾರಗಳನ್ನು, ರಾಜ್ಯಾಡಳಿತದ ಸೂಕ್ಷ್ಮ ವಿಚಾರಗಳನ್ನು ಅಂತಃಶ್ಚಕ್ಷು ಅಥವಾ ಒಳಗಣ್ಣುಗಳಿಂದ ನೋಡಿ ಅವುಗಳ ಯಥಾರ್ಥತೆಯನ್ನು ತಿಳಿದುಕೊಂಡು ತೀರ್ಮಾನಗಳನ್ನು ಕೈಕೊಳ್ಳುವ ವಿಶ್ವಮಾನವನು, ಧರ್ಮಸ್ವರೂಪನು. ಶಾಸ್ತ್ರಲೋಚನ ದಿಂದ (ಶಾಸ್ತ್ರಗಳೇ ಕಣ್ಣುಗಳು) ಪರಾಮರ್ಶಿಸುವ ದೊರೆ. ಒರೇ ಸಾಂಪ್ರದಾಯಿಕರಿಗೆ ಅಥವಾ ಮೂಢನಂಬಿಕೆಗಳಿಗೆ ಶರಣುಹೋಗದೆ ವಿಶ್ವಬಂಧುವೆನಿಸಿದ, ಶ್ರೀಮಂತಬುದ್ಧಿ ಮಾನ್ ಚಕ್ರೇಶ್ವರನು. ಧೀಮಂತನಾದ ಮೇಧಾಶಕ್ತಿಯುಳ್ಳ ನಾಯಕ, ವಿಷಯಗಳ ಒಳನೋಟವಿರುವ ಕ್ರಿಯಾತ್ಮಕ ಕಾಯಕಜ್ಞಾನವಿರುವ ಶ್ರೀಮಂತಮನೋಧರ್ಮದ ವೈಭವಪೂರ್ಣ ವ್ಯಕ್ತಿತ್ವದ ಪ್ರತೀಕನೆನಿಸಿದ ರಘುಮಹಾರಾಜ.

ಕರ್ಣಯೋಃ ಅಂತೌ। ಕರ್ಣಾಂತಯೋಃ ವಿಶ್ರಾಂತೇ। ಚಕ್ಷುಷೀ ಅಸ್ಯ ಅಸ್ತೀತಿ ಚಕ್ಷುಷ್ಮತ್ತಾ। ಸೂಕ್ಷ್ಮಶ್ಚಾಸೌ ಕಾರ್ಯಾರ್ಥಶ್ಚ। ಸೂಕ್ಷ್ಮಕಾರ್ಯಾರ್ಥಂ ದರ್ಶಯತೀತಿ—ಸೂಕ್ಷ್ಮಕಾರ್ಯಾರ್ಥದರ್ಶಿ—ತೇನ॥

ವಿಶಾಲೇ = ದೀರ್ಘವಾದ, ತಸ್ಯ = ಆ ರಘುರಾಜನ, ಲೋಚನೇ = ಕಣ್ಣುಗಳೇ, ಕಾಮಂ = ಯಥೇಚ್ಛವಾಗಿ, ಕರ್ಣಾಂತವಿಶ್ರಾಂತೇ = ಕಿವಿಯ ತುದಿಯವರೆಗೆ ಹೋಗಿರು ತ್ತವೆ, ತು = ಆದರೆ, ಚಕ್ಷುಷ್ಮತ್ತಾ = ಕಣ್ಣುಳ್ಳವನೆಂಬುದು, ಸೂಕ್ಷ್ಮಕಾರ್ಯಾರ್ಥ ದರ್ಶಿನಾ = ಅತಿಸೂಕ್ಷ್ಮವಾಗಿರುವ ಕರ್ತವ್ಯವನ್ನು ತಿಳಿಸುವ, ಶಾಸ್ತ್ರೇಣ = ಶಾಸ್ತ್ರ ದಿಂದಲೇ.

14. ಲಬ್ಧಪ್ರಶಮನಸ್ವಸ್ಥಮಥೈನಂ ಸಮುಪಸ್ಥಿತಾ।
ಪಾರ್ಥಿವಶ್ರೀರ್ದ್ವಿತೀಯೇವ ಶರತ್ಪಂಕಜಲಕ್ಷಣಾ ॥ ೧೪ ॥

ಆವನ ವೈಸಿರಿ ಹಾಗೂ ವೀರಶ್ರೀಯು ವಿಜಯಶ್ರೀಗೆ ಆವಾಸಸ್ಥಾನವಾಗಿತ್ತು. ಆವನ ಸಾಮ್ರಾಜ್ಯದಲ್ಲಿ ಶಾಂತಿ, ಸಮೃದ್ಧಿ, ಸುವ್ಯವಸ್ಥೆ ನೆಲೆಗೊಂಡಿತ್ತು. ಸಾಮೋ ಪಾಯದಿಂದ ರಾಜಾಧಿರಾಜರನ್ನು ಸಾಮಂತರಾಜರನ್ನು ವಶಪಡಿಕೊಂಡು ತನ್ನ ಆಳ್ವಿಕೆಗೆ ಒಳಪಡಿಸಿ ಬಲಗೊಳಿಸಿದನು. ವಿಶ್ವವನ್ನೇ ಗೆಲ್ಲುವ ಮಹತ್ವಾಕಾಂಕ್ಷೆಯನ್ನು

ಹೊಂದಿದ ಆ ರಾಜೇಂದ್ರನು ತನ್ನ ಸಾಮ್ರಾಜ್ಯವನ್ನು ವಿಸ್ತರಿಸುವ ಕಾರ್ಯದಲ್ಲಿ ಪ್ರವೃತ್ತನಾದನು. ರಘುವಿನ ರಾಜ್ಯದಲ್ಲಿ ಶಾಂತಿಸಮೃದ್ಧಿಗಳ ಸುವರ್ಣಯುಗವು ಕಾಲಿಟ್ಟಿರಲು ಅವನು ಉಪಶಾಂತಚಿತ್ತನಾದನು. ಅಂತಹ ಪ್ರಶಾಂತಚಿತ್ತನನ್ನು ಶರದೃತುವಿನ ಕಾಲದಲ್ಲಿ ಶರದ್‌ಲಕ್ಷ್ಮಿಯು ಸಮೀಪಿಸಿದಳು. ಬಳಸಾರ್ದಳು. ಶರದೃತುವಿನ ಕಾಲದಲ್ಲಿ ಎಲ್ಲೆಡೆಯಲ್ಲೂ ತಾವರೆಹೂಗಳು (ಕೆಂದಾವರೆಗಳು) ಯಥೇಚ್ಛವಾಗಿ ಹೂಬಿಡುವ ಕಾಲ. ವೀರಪಾರ್ಥಿವನಾದ, ಪುರುಷವ್ಯಾಘ್ರನಾದ ರಘುವನ್ನು ಎಲ್ಲಾ ಕಾಲಗಳಲ್ಲೂ ವೀರಶ್ರೀ ಅಥವಾ ವೀರಲಕ್ಷ್ಮಿಯು ಅವನ ಎದೆಯಲ್ಲಿ, ಭುಜಗಳಲ್ಲಿ ನೆಲೆಗೊಂಡಿರುವಳು. ಇಂತಹ ಪಾರ್ಥಿವಶಿರೋಮಣಿಯನ್ನು ತಾವರೆಯೇ ಲಾಂಛನವಾಗಿರುವ ಶರದ್‌ಲಕ್ಷ್ಮಿಯು ರಾಜ್ಯಲಕ್ಷ್ಮಿಯಂತೆ ಅಥವಾ ಎರಡನೆಯ ಪಾರ್ಥಿವಶ್ರೀಯಂತೆ ಬಳಿಸಾರ್ದಳು.

ಅನ್ವಯಃ—ಅಥ ಲಬ್ಧಪ್ರಶಮನಸ್ಸ್ವಸ್ಥಮ್ ಏನಂ ಪಂಕಜಲಕ್ಷಣಾ ದ್ವಿತೀಯಾ ಪಾರ್ಥಿವಶ್ರೀಃ ಇವ ಶರತ್ ಸಮುಪಸ್ಥಿತಾ ॥

ಲಬ್ಧಸ್ಯ ಪ್ರಶಮನಂ । ಲಬ್ಧಪ್ರಶಮನೇನ ಸ್ವಸ್ಥಃ, ಲಬ್ಧಪ್ರಶಮನಸ್ವಸ್ಥಃ, ತಮ್ ಪಾರ್ಥಿವಸ್ಯ ಶ್ರೀಃ । ಪಂಕಜಾನಿ ಲಕ್ಷಣಂ ಯಸ್ಯಾಃ ಸಾ ಪಂಕಜಲಕ್ಷಣಾ ॥

ಅಥ = ಅಮೇಲೆ, ಲಬ್ಧಪ್ರಶಮನಸ್ವಸ್ಥಂ = ರಾಜ್ಯವು ಸ್ಥಿರವಾದುದರಿಂದ ಶಾಂತವಾದ ಮನಸ್ಸುಳ್ಳ, ಏನಂ = ಆ ರಘುರಾಜನನ್ನು, ಪಂಕಜಲಕ್ಷಣಾ = ಕಮಲಗಳೇ ಚಿಹ್ನೆಯಾಗಿರುವ, ಶರತ್ = ಶರದೃತುವು, ದ್ವಿತೀಯಾ = ಎರಡನೆಯ, ಪಾರ್ಥಿವಶ್ರೀಃ ಇವ = ರಾಜ್ಯಲಕ್ಷ್ಮಿಯಂತೆ, ಸಮುಪಸ್ಥಿತಾ = ಹೊಂದಿತು.

**15. ನಿರ್ವೃಷ್ಟಲಘುಭಿರ್ಮೇಘೈರ್ಮುಕ್ತವರ್ತ್ಮಾ ಸುದುಃಸಹಃ ।**
**ಪ್ರತಾಪಸ್ತಸ್ಯ ಭಾನೋಶ್ಚ ಯುಗಪದ್ವ್ಯಾನಶೇ ದಿಶಃ ॥ ೧೫ ॥**

ಆ ಸಾರ್ವಭೌಮನ ದಿಗ್ವಿಜಯದ ಮಹಾವೀರ್ಯ ಶಕ್ತಿಪ್ರತಾಪಗಳು ಮತ್ತು ಸೂರ್ಯನ ಅತ್ಯಂತ ತಾಪದಾಯಕವಾದ ರಶ್ಮಿಗಳು (ಪ್ರತಾಪಾಗ್ನಿ) ನಾಕಲೋಕದ ನಾಲ್ಕು ದಿಕ್ಕುಗಳನ್ನು ಏಕಕಾಲದಲ್ಲಿ ತುಂಬಿಕೊಂಡವು. ವರ್ಷಾಕಾಲದಲ್ಲಿ ಮಳೆಗರೆದು ಹಗುರಾದ ಮೋಡರಾಶಿಗಳು ಬೇಸಿಗೆಕಾಲದ ಸೂರ್ಯರಶ್ಮಿಗಳ ಕಾಂತಿಗೆ ಹೆದರಿ ಚೆಲ್ಲಾಪಿಲ್ಲಿಯಾಗಿ ಆಕಾಶಮಂಡಲವು ಶುಭ್ರವಾಗಿ ಕನ್ನಡಿಯಂತೆ ಕಾಣತೊಡಗಿತು. ಎಲ್ಲಾ ಪಥಗಳು ಅಡೆತಡೆಗಳಿಲ್ಲದೆ ನಿರ್ವಿಘ್ನವಾದ ಚಲನೆಗೆ ಅನುಕೂಲವಾಯಿತು. ಸೂರ್ಯನ ಪ್ರಖರವಾದ ಕಿರಣಗಳಂತೆ (ರಶ್ಮಿಗಳಂತೆ) ರಘುಭೂಪಾಲನ ಪೌರುಷವು ಶತ್ರುಗಳನ್ನು ನಿಗ್ರಹಿಸಿ ಯಾವ ತಡೆಯೂ ಇಲ್ಲದೆ ದಿಗ್ದಿಗಂತವನ್ನು ವ್ಯಾಪಿಸಿತು.

—ನಿರ್ವೃಷ್ಟಾಶ್ಚ ತೇ ಲಘವಶ್ಚ । ನಿರ್ವೃಷ್ಟಲಘವಸ್ತೈಃ । ಮುಕ್ತಂ ವರ್ತ್ಮ ಯಸ್ಯ ಸಃ ಮುಕ್ತವರ್ತ್ಮಾ । ವಿ—ಉಪಸರ್ಗ । ಅಶೂ ವ್ಯಾಪ್ತೌ—ವ್ಯಾನಶೇ—ಅನಶಾತೇ—ಅನಶಿರೇ—ಇತ್ಯಾದಿ, ಲಿಟ್ ಪ್ರ.ಪು.ಏ.

ನಿರ್ವೃಷ್ಟಲಘುಭಿಃ = ಸಂಪೂರ್ಣವಾಗಿ ಮಳೆಗರೆದು ಹಗುರವಾದ, ಮೇಘೈಃ = ಮೋಡಗಳಿಂದ, ಮುಕ್ತವರ್ತ್ಮಾ = ಬಿಡಲ್ಪಟ್ಟ ಮಾರ್ಗವುಳ್ಳ, ಸುದುಃಸಹಃ = ಸಹಿಸಲು ಅಸಾಧ್ಯವಾದ, ತಸ್ಯ = ಆ ಮಹಾರಾಜನ, ಭಾನೋಃ ಚ = ಸೂರ್ಯನ (ಖದ್ಯೋತ)

ಪ್ರತಾಪಃ = ಪೌರುಷವು (ಬಿಸಿಲು), ಯುಗಪತ್ = ಏಕಕಾಲದಲ್ಲಿ, ದಿಶಃ = ದಿಕ್ಕುಗಳನ್ನು, ವ್ಯಾನಶೇ = ವ್ಯಾಪಿಸಿತು. ಅಲಂಕಾರ : ಉಪಮಾಲಂಕಾರ.

**16. ವಾರ್ಷಿಕಂ ಸಂಜಹಾರೇಂದ್ರೋ ಧನುರ್ಜೈತ್ರಂ ರಘುರ್ದಧೌ ।**
**ಪ್ರಜಾರ್ಥಸಾಧನೇ ತೌ ಹಿ ಪರ್ಯಾಯೋದ್ಯತಕಾರ್ಮುಕೌ ॥ ೧೬ ॥**

ಪ್ರಜಾರ್ಥಹಿತಸಾಧನೆಗಾಗಿ ಇಂದ್ರ ಮತ್ತು ರಘುವರರು ತಮ್ಮ ಧನುಸ್ಸುಗಳನ್ನು ಹಿಡಿದು ಹೆಗ್ಗೆದರು. ಮಹೇಂದ್ರನು ಜನರಿಗೆ ಮಳೆಯನ್ನು ಒದಗಿಸುವ ಸಲುವಾಗಿ ಇಂದ್ರಧನುಸ್ಸನ್ನು ಅಥವಾ ಕಾಮನ ಬಿಲ್ಲನ್ನು ಹಿಡಿದು ಆಕಾಶಮಾರ್ಗದಲ್ಲಿ ನಿಂತು ಶೋಭಿಸಿದರೆ, ರಘುವು ಇಳೆಯ ದಿಗ್ವಿಜಯಕ್ಕಾಗಿ ತನ್ನ ದಿವ್ಯಕಾರ್ಮುಕವಾದ ಜೈತ್ರ ಧನುವನ್ನು ಕೈಯಲ್ಲಿ ಧರಿಸಿ ಪರ್ಯಾಯವಾಗಿ ಭೂವಲಯದಲ್ಲಿ ನಿಂತಿದ್ದನು. ಇಬ್ಬರ ಮನೋರಥವು (ಮನೋಧರ್ಮವು) ಒಂದೇ. ಮಾನವಸಮಾಜದ ಆರ್ಥಿಕ, ಸಾಮಾಜಿಕ ಉನ್ನತಿ, ಮಾನವಕಲ್ಯಾಣ.

ಮಳೆಗಾಲದಲ್ಲಿ ಬಾನನ್ನು ಕಪ್ಪುಮೋಡಗಳು ಆಕ್ರಮಿಸಿ ಇರುವುದರಿಂದ ಮಳೆಯು ಮುನ್ಸೂಚನೆಯಾಗಿ ಇಂದ್ರಧನುಸ್ಸು ಮೂಡಿಬರುವುದು. ಮಳೆಗಾಲದಲ್ಲಿ ಹೇರಳವಾಗಿ ಮಳೆ ಸುರಿಸಿ ಇಂದ್ರನು ಭೂಮಿಯನ್ನು ಹದಗೊಳಿಸಿ, ಬೆಳೆ ಬೆಳೆಯಲು ಇಳೆಯನ್ನು ಹಸನುಗೊಳಿಸಿ ತನ್ನ ಕಾರ್ಯಸಾಧನೆ ಮಾಡಿ ವಿರಮಿಸುತ್ತಾನೆ. ಮಳೆ ಸುರಿಸಲು ತನ್ನ ಸಾಧನವಾದ ಬಿಲ್ಲನ್ನು ಉಪಸಂಹಾರಮಾಡುತ್ತಾನೆ.

ಅದೇ ರೀತಿಯಲ್ಲಿ ಜೈತ್ರಯಾತ್ರೆಗೆ ಶರದ್ಕಾಲವು ತಕ್ಕ ಸಮಯವಾದ್ದರಿಂದ ಇದೀಗ ರಘುವು ತನ್ನ ವಿಜಯಕಾರ್ಮುಕವನ್ನು ಹಿಡಿದು ಟಂಕಾರವಗೈದು ಯುದ್ಧಭೂಮಿಗೆ ಧೀಮಂತ ದಿಗ್ವಿಜಯಕ್ಕೆ ಹೊರಟಿದ್ದಾನೆ. ಹೀಗೆ ಇಬ್ಬರು ಲೋಕಪಾಲಕರು ಒಬ್ಬರಾದ ಮೇಲೆ ಒಬ್ಬರು ಪರ್ಯಾಯವಾಗಿ (ಪರ್ಯಾಯೋದ್ಯಮಪಿಕ್ರಮೌ) ಉದ್ಯಮಶೀಲರಾಗಿ ಪ್ರಜಾಪರಿಪಾಲನೆಯಲ್ಲಿ, ಪ್ರಜಾಹಿತಸಾಧನೆಯಲ್ಲಿ ನಿರತರಾಗಿ ಕಾರ್ಯಭಾರವನ್ನು ನಡೆಸುತ್ತಾರೆ. ಒಬ್ಬರು ಕಾರ್ಯದಲ್ಲಿ ತೊಡಗಿದಾಗ, ಇನ್ನೊಬ್ಬರು ವಿಶ್ರಾಂತಿಹೊಂದುವುದರಿಂದ, ಉದ್ಯಮವಿಶ್ರಾಂತಿಗಳನ್ನು ಪರ್ಯಾಯದಿಂದ ಹೊಂದುತ್ತಿರುವರು. (ನಿಸರ್ಗದತ್ತವಾಗಿ, ಸ್ವಾಭಾವಿಕವಾಗಿ).

ವರ್ಷಾಸು ಭವಂ = ವಾರ್ಷಿಕಮ್ । ಜೇತೃ ಏವ ಜೈತ್ರಮ್ । ಜೇತೃ ಶಬ್ದದ ಮೇಲೆ ಅಣ್ ಪ್ರತ್ಯಯ—ಜಿ ಧಾತುವಿಗೆ ತೃನ್ ಬಂದರೆ ಜೇತೃ ಎಂದಾಗುತ್ತದೆ. (ಸ್ವಾರ್ಥ ಅರ್ಥದಲ್ಲಿ. ಪ್ರಜಾನಾಂ ಅರ್ಥಃ ಪ್ರಜಾರ್ಥಸ್ಯ ಸಾಧನಂ, ತಸ್ಮಿನ್ । ಪರ್ಯಾಯೇಣ ಉದ್ಯತೇ) ಪರ್ಯಾಯೋದ್ಯತೇ ಕಾರ್ಮುಕೇ ಯಯೋಃ ತೌ, ಪರ್ಯಾ-ಕೌ । ಸಂ—ಉಪಸರ್ಗ । ಜಹಾರ—ಜಹ್ರತುಃ—ಜಹ್ರುಃ । ಜಹರ್ಥ—ಜಹ್ರಥುಃ—ಜಹ್ರ । ಜಹಾರ, ಜಹರ—ಜಹ್ರಿವ—ಜಹ್ರಿಮ । ಹೃಞ್—ಹರಣೇ- ಲಿಟ್ । ದಧೌ—ಡುಧಾಞ್ ಧಾರಣಪೋಷಣಯೋಃ—ಲಿಟ್ ॥

ಇಂದ್ರಃ = ಇಂದ್ರನು, ವಾರ್ಷಿಕಂ = ಮಳೆಗಾಲದಲ್ಲಿ ಉಂಟಾಗುವ—ಧನುಃ = ಬಿಲ್ಲನ್ನು, ಸಂಜಹಾರ = ಒಂದೆಕ್ಕೆ ತೆಗೆದುಕೊಳ್ಳು, ರಘುಃ = ರಘುಮಹೀಪತಿ, ಜೈತ್ರಂ

ಜಯಶೀಲವಾದ, ದದೌ = ಧರಿಸು, ಹಿ = ಯಾವ ಕಾರಣದಿಂದ, ತೌ = ಅವರಿಬ್ಬರು, ಪ್ರಜಾರ್ಥಸಾಧನೇ = ಪ್ರಜೆಗಳ ಹಿತಸಾಧನೆಗೆ, ಪರ್ಯಾಯೋದ್ಯತಕಾರ್ಮುಕೌ = ಪರ್ಯಾಯದಿಂದ ಎತ್ತಿದ ಬಿಲ್ಲುಳ್ಳವರು.

**17. ಪುಂಡರೀಕಾತಪತ್ರಸ್ತಂ ವಿಕಸತ್ಕಾಶಚಾಮರಃ ।**
**ಋತುರ್ವಿಡಂಬಯಾಮಾಸ ನ ಪುನಃ ಪ್ರಾಪ ತಚ್ಛ್ರಿಯಮ್ ॥ ೧೭ ॥**

ಅಂದಿನ ಆ ಮಂಗಳಕರವಾದ ಶರದೃತುವಿನಲ್ಲಿ ರಾಜನ ಬೆಳ್ಗೊಡೆಯನ್ನು ಹೋಲುವ ಬಿಳಿತಾವರೆಗಳನ್ನೂ, ರಾಜನ ಚಾಮರಗಳನ್ನು (ಚೌರಿಗಳನ್ನು) ಹೋಲುವ ಕಾಶದರ್ಭೆಗಳು ಹೂಗಳಿಂದ ರಾರಾಜಿಸಿದರೂ ರಾಜನ ವೈಭವವನ್ನು ಪೂರ್ಣವಾಗಿ ಪಡೆಯದಾದುವು. ಶರದೃತುವಿನ ಕಾಲದಲ್ಲಿ ಪುಲ್ಲಕುಸುಮಗಳನ್ನು ಧರಿಸಿ ಕಾಶದರ್ಭೆಯು ವನಭೂಮಿಯ ಎಲ್ಲೆಡೆಗಳಲ್ಲೂ ಹರಡಿ ಕಾಡಿನ ಶೋಭೆಯನ್ನು ಹೆಚ್ಚಿಸಿತು. ಅದೇ ತೆರದಲ್ಲಿ ಬಿಳಿಯ ಪದ್ಮಾತಪತ್ರಗಳಿಂದ ಕೊಳಗಳು, ಜಲಾಶಯಗಳು ತುಂಬಿಹೋಗುವುವು. ಹೀಗೆ ಶರದೃತುವು ರಾಜನನ್ನು ಪ್ರಕೃತಿದತ್ತ ಸಸ್ಯಶೋಭೆಯಿಂದ ಅಣಕಿಸಿದರೂ ಆ ನರೇಶನ ಸಿರಿಯನ್ನು ತಾ ಪಡೆಯದಾಯಿತು.

ಪುಂಡರೀಕಮೇವ ಆತಪತ್ರಂ ಯಸ್ಯ ಸಃ, ಪುಂಡರೀಕಾತಪತ್ರಃ । ವಿಕಸಂತಿ ಚ ತಾನಿ ಕಾಶಾನಿ ಚ । ವಿಕಸತ್ಕಾಶನ್ಯೇವ ಚಾಮರಃ ಯಸ್ಯ ಸಃ । ತಸ್ಯ ಶ್ರೀಃ, ತಚ್ಛ್ರೀಃ, ತಾಮ್ । ವಿ—ಉಪಸರ್ಗ । ಡಬಿ—ತಿರಸ್ಕಾರೇ—ಲಿಟ್—ಚುರಾದಿ ॥

ಪುಂಡರೀಕಾತಪತ್ರಃ = ಬಿಳಿಕಮಲವೇ ಕೊಡೆಯಾಗಿರುವ, ವಿಕಸತ್ಕಾಶಚಾಮರಃ = ಅರಳಿದ ದರ್ಭೆಯ ಹೂವೇ ಚಾಮರವಾಗಿರುವ, ಋತುಃ = ಶರದೃತುವು, ತಂ = ಆ ರಘುರಾಜನನ್ನು, ವಿಡಂಬಯಾಮಾಸ = ಅನುಕರಿಸಿತು, ತಚ್ಛ್ರಿಯಂ ಪುನಃ = ಅವನ ಕಾಂತ್ಯತಿಶಯವನ್ನಾದರೋ, ನ ಪ್ರಾಪ = ಹೊಂದಲಿಲ್ಲ.

**18. ಪ್ರಸಾದಸುಮುಖೇ ತಸ್ಮಿಂಶ್ಚಂದ್ರೇ ಚ ವಿಶದಪ್ರಭೇ ।**
**ತದಾ ಚಕ್ಷುಷ್ಮತಾಂ ಪ್ರೀತಿರಾಸೀತ್ಸಮರಸಾ ತಯೋಃ ॥ ೧೮ ॥**

ಆ ನರೇಶ್ವರನು ಪ್ರಜಾವತ್ಸಲನು. ಅವನ ಸಂದರ್ಶನಕ್ಕೆಂದು ಬಂದವರನ್ನು ಮುಗುಳುನಗೆಯಿಂದಲೇ ಮಾತನಾಡಿ ಅವರ ಸಂಕಷ್ಟಗಳನ್ನು ಪರಿಹರಿಸುವ ಮಹಾನುಭಾವನವನು. ಅವನ ಬಳಿಗೆ ಬಂದ ಜನರ ಆನಂದಕ್ಕೆ ಪಾರವಿರಲಿಲ್ಲ. ಸಹಜಪ್ರಸಾದ ಸುಮುಖನಲ್ಲಿ ಅವರು ಚಂದ್ರನ ಪ್ರಭೆಯನ್ನು ಅಥವಾ ಬೆಳದಿಂಗಳನ್ನು ಕಂಡರು. ಅವನ ದಯಾರ್ದ್ರ ಅನುಕಂಪಹೃದಯದಲ್ಲಿ ಅಡಗಿರುವ ಪ್ರೀತಿರಸವು ಚಂದ್ರನು ಸಸ್ಯಸಂಕುಲಕ್ಕೆ ಮತ್ತು ಮಾನವಕೋಟಿಗೆ ನೀಡುವ ಅಮೃತಕಿರಣಗಳಿಗೆ ಸಾಟಿ ಎನಿಸಿತ್ತು. ಚಂದ್ರನಲ್ಲಿ ಮತ್ತು ಚಂದ್ರಹಾಸದಿಂದ ಬೆಳಗುವ ರಾಜಕುಲಚಂದ್ರನಲ್ಲಿ ಸಂದರ್ಶಕರು, ವೀಕ್ಷಕರು, ಪ್ರಜಾಕೋಟಿ ಸಮರಸಭಾವವನ್ನು, ಸಮಭಾವವನ್ನು ತಳೆದಿದ್ದರು.

ಅನ್ವಯ:—ಪ್ರಸಾದಸುಮುಖೇ ತಸ್ಮಿನ್ ವಿಶದಪ್ರಭೇ ಚ ಚಂದ್ರೇ ದ್ವಯೋಃ ತದಾ ಚಕ್ಷುಷ್ಮತಾಂ ಪ್ರೀತಿಃ ಸಮರಸಾ ಆಸೀತ್ ॥

ಪ್ರಸಾದೇನ ಸುಮುಖಿಃ, ತಸ್ಮಿನ್ । ವಿಶದಾ ಪ್ರಭಾ ಯಸ್ಯ ಸಃ, ವಿಶದಪ್ರಭಃ, ತಸ್ಮಿನ್ । ಚಕ್ಷುಃ ಏಷಾಮಸ್ತೀತಿ, ಚಕ್ಷುಷ್ಮಂತಃ ತೇಷಾಮ್ । ಸಮಃ ರಸಃ ಯಸ್ಯಾಂ ಸಾ, ಸಮರಸಾ । ಆಸೀತ್ । ಅಸ—ಭುವಿ—ಲಙ್—ಪ್ರ.ಪು.ಏ. ॥

ಪ್ರಸಾದಸುಮುಖೇ=ಅನುಗ್ರಹದಿಂದ ಅನುಕೂಲವಾಗಿರುವ, ತಸ್ಮಿನ್=ಆ ರಘುರಾಜನಲ್ಲಿಯೂ, ವಿಶದಪ್ರಭೇ = ನಿರ್ಮಲಕಾಂತಿಯುಳ್ಳ, ಚಂದ್ರೇ ಚ = ಚಂದ್ರನಲ್ಲಿಯೂ, = ಇವರಿಬ್ಬರ ವಿಷಯದಲ್ಲಿಯೂ, ತದಾ = ಆಗ, ಚಕ್ಷುಷ್ಮತಾಂ=ತೆರೆದ ಕಣ್ಣುಳ್ಳ ಜನರ, ಪ್ರೀತಿ = ಆನಂದವಾಗ, ಸಮರಸಾ = ಸಮವಾದ, ಸಮಾನವಾದ ಆಸ್ವಾದನೆಯುಳ್ಳ, ಆಸೀತ್ = ಆಯಿತು.

19. ಹಂಸಶ್ರೇಣೀಷು ತಾರಾಸು ಕುಮುದ್ವತ್ಸು ಚ ವಾರಿಷು ।
ವಿಭೂತಯಸ್ತದೀಯಾನಾಂ ಪರ್ಯಸ್ತಾ ಯಶಸಾಮಿವ ॥ ೧೯ ॥

ಕೀರ್ತಿಯು ಬೆಳದಿಂಗಳಂತೆ ಬೆಳ್ಳಗೆ ಎನ್ನುವರು. ಶರದೃತುವಿನಲ್ಲಿ ಭಾನು ನಿರ್ಮಲವಾಗಿ, ಬೆಳ್ಳಗಾಗಿ, ಅಲ್ಲಲ್ಲಿ ಜಡರೂಪ ಕೆಲವೇ ಬಿಳಿಯ ಮೋಡಗಳಿಂದ ಆವರಿಸಿ ಶುಭ್ರವಾಗಿ ತೋರುತ್ತಿರುವುದು. ನಕ್ಷತ್ರಗಳು ರಾತ್ರಿಕಾಲದಲ್ಲಿ ಚೆನ್ನಾಗಿ ಪ್ರಕಾಶಿಸುತ್ತವೆ. ಶರದೃತುವಿನಲ್ಲಿ ಜಲಾಶಯದ ತಿಳಿಯಾದ ನೀರಲ್ಲಿ ನೀರಾಟವಾಡಲು ಮಾನಸಸರೋವರದಿಂದ ಹಂಸಪಕ್ಷಿಗಳ ದಂಡು ಬರುತ್ತಿವೆ. ಆ ರಾಜೇಂದ್ರನ ಯಶಸ್ಸು ಅಥವಾ ಅಮಲ ಕೀರ್ತಿಯು ಜನವು ಧವಳತನದಿಂದ ಪ್ರಕಾಶಿಸುವ ಹಂಸಪಕ್ಷಿಗಳ ಸಾಲುಗಳಲ್ಲಿ ಹರಡಿ ನೆಲೆನಿಂತಿರಬಹುದೇ ?

ಆ ನೃಪಚಂದ್ರನ ಕೀರ್ತಿಪರಂಪರೆಯು ಹಾಗೂ ಯಶೋಭೂತಿಯು ಶರದೃತುವಿನ ರಾತ್ರಿಯಲ್ಲಿ ಬೆಳಗುವ ಅಮರತಾರಾವಳಿಗಳಲ್ಲಿ, ಮತ್ತು ಸ್ಫಟಿಕದಂತೆ ಹೊಳೆಯುವ ನಿರ್ಮಲಜಲರಾಶಿಯಲ್ಲಿ, ಅಲ್ಲದೆ ಅರಳಿನಿಂತಿರುವ ಕುಮುದಪುಷ್ಪಗಳಲ್ಲಿ ಪಸರಿಸಿದಂತೆ ಕಂಡಿತು. ಎತ್ತ ನೋಡಿದ್ದರೂ ಹಂಸಾದಿಗಳಿಂದ ಬೆಳ್ಳಗಾಗಿ ತೋರುವುದರಿಂದ ರಘುರಾಜನ ಕೀರ್ತಿಸಂಪತ್ತು ಎಲ್ಲಾ ಕಡೆಗಳಲ್ಲೂ (ದಿಗ್ದಿಗಂತದಲ್ಲೂ) ದಿಕ್ಕುದಿಕ್ಕುಗಳಲ್ಲೂ (ದಶದಿಕ್ಕುಗಳಲ್ಲೂ) ಪಸರಿಸಿರುವುದೋ ಎಂಬಂತೆ ತೋರಿತು.

ಹಂಸಾನಾಂ ಶ್ರೇಣಯಃ, ತಾಸು । ಕುಮುದಾನಿ ಯೇಷು ಸಂತಿ ಇತಿ ಕುಮುದ್ವಂತಿ, ತೇಷು । ತಸ್ಯ ಇಮಾನಿ, ತದೀಯಾನಿ, ತೇಷಾಮ್ ॥

ಹಂಸಶ್ರೇಣೀಷು = ಹಂಸಗಳ ಸಾಲುಗಳಲ್ಲಿಯೂ, ತಾರಾಸು = ನಕ್ಷತ್ರಗಳಲ್ಲಿಯೂ, ಕುಮುದ್ವತ್ಸು = ನೈದಿಲೆಗಳಲ್ಲಿ, ವಾರಿಷು ಚ = ನೀರಿನಲ್ಲಿಯೂ, ತದೀಯಾನಾಂ = ರಘುರಾಜನ ಸಂಬಂಧಪಡೆಂದಿದ, ಯಶಸಾಂ = ಕೀರ್ತಿರಾಶಿಯ, ವಿಭೂತಯಃ = ಸಂಪತ್ತುಗಳು, ಪರ್ಯಸ್ತಾ ಇವ = ಪಸರಿಸುತ್ತಿವೆಯೋ ಎಂಬಂತೆ.

20. ಇಕ್ಷುಚ್ಛಾಯನಿಷಾದಿನ್ಯಸ್ತಸ್ಯ ಗೋಪ್ತುರ್ಗುಣೋದಯಮ್ ।
ಆಕುಮಾರಕಥೋದ್ಘಾತಂ ಶಾಲಿಗೋಪ್ಯೋ ಜಗುರ್ಯಶಃ ॥ ೨೦ ॥

ಆ ವಸುಂಧರಾಧೀಶನ ಗುಣಗಾಥೆಗಳನ್ನು ಬಾಲ್ಯದಿಂದ ಮೊದಲ್ಗೊಂಡು ಇಂದ್ರ ವಿಜಯವೇ ಮೊದಲಾದ ವೀರೋಚಿತವಾದ ಬಾಲ್ಯದ ಮಹತ್ಕಾರ್ಯಗಳನ್ನು ಗ್ರಾಮಾಂತರಪ್ರದೇಶದಲ್ಲಿ ಬತ್ತದ ಪೈರುಗಳಿರುವ ಪಾಮರಿಯರು, ಹೊಲಗದ್ದೆಯನ್ನು ಕಾಯುವ ಸ್ತ್ರೀಯರು ಹಾಡುತ್ತಿದ್ದರು. ಆ ಕುಮಾರನ ಗುಣಕೀರ್ತನೆಗಳನ್ನು ಕಥೋದ್ಘಾತಗಳನ್ನು ಪಾಮರಿಯರು ಹುಲುಸಾಗಿ ಬೆಳೆದ ತನಿಕಬ್ಬಿನ ದಟ್ಟವಾದ ನೆರಳಿನಲ್ಲಿ ಕುಳಿತು ಜಾನಪದಗೀತೆಗಳಲ್ಲಿ, ಲಾವಣಿಗಳಲ್ಲಿ, ಹಾಡುಗಬ್ಬಗಳನ್ನು ರಚಿಸಿ ರಾಗವಾಗಿ ಹಾಡಿ ಕುಣಿಯುತ್ತಿದ್ದರು. ಸುಗಮಸಂಗೀತದಲ್ಲಿ, ಪದ್ಯರೂಪದಲ್ಲಿ ಪಾಡ್ದನಗಳನ್ನು ರಚಿಸಿ ಹಾಡುತ್ತಿದ್ದರು. ಹಾಡಿ ಕುಣಿದು ಕುಪ್ಪಳಿಸುತ್ತಿದ್ದರು.

ಅನ್ವಯ :— ಇಕ್ಷುಚ್ಛಾಯನಿಷಾದಿನ್ಯಃ ಶಾಲಿಗೋಪ್ಯಃ ಗೋಪ್ತುಃ ತಸ್ಯ ಗುಣೋದಯಮ್ ಆಕುಮಾರಕಥೋದ್ಘಾತಂ ಯಶಃ ಜಗುಃ ।

ಕುಮಾರಸ್ಯಕಥಾ, ಕುಮಾರಸ್ಯ ಕಥಾಯಾಃ ಆರಭ್ಯ, ಆ ಕುಮಾರಕಥಂ, ಆಕುಮಾರಸ್ಯ ಕಥಂ ಉದ್ಘಾತಃ ಯಶಃ ಜಗುಃ ॥

ಇಕ್ಷೂಣಾಂ ಛಾಯಾ, ಇಕ್ಷುಚ್ಛಾಯಾ, ಇಕ್ಷುಚ್ಛಾಯೇ ನಿಷಾದಿನ್ಯಃ । ಗುಣಾನಾಂ ಉದಯಃ ಯಸ್ಮಿನ್ ತತ್ । ಗುಣಾನಾಂ ಉದಯಃ ಯಸ್ಮಿನ್ ತತ್ । ಗುಣೋದಯಮ್ ಕುಮಾರಾತ್ ಆರಭ್ಯ. ಆಕುಮಾರಂ, ಕಥಾಯಾಃ ಉದ್ಘಾತಃ, ಆಕುಮಾರಂ ಕಥೋದ್ಘಾತಃ ಯಸ್ಮಿನ್ ತತ್ । ಕುಮಾರಸ್ಯಕಥಾ, ಕುಮಾರಸ್ಯ ಕಥಾಯಾಃ ಆರಭ್ಯ, ಆಕುಮಾರ ಕಥಂ, ಆಕುಮಾರಸ್ಯ ಕಥಂ ಉದ್ಘಾತಃ ಯಸ್ಮಿನ್, ತತ್ । ಶಾಲೀನ್ ಗೋಪಾಯಂತಿ ಇತಿ ಶಾಲಿಗೋಪ್ಯಃ । ಜಗೌ—ಜಗತುಃ—ಜಗುಃ । ಜಗಿಥ, ಜಗಾಥ—ಜಗಥುಃ—ಜಗ—ಜಗೌ । ಜಗಿವ—ಜಗಿಮ । ಗೈ—ಶಬ್ದೇ—ಲಿಟ್ । ಪ್ರ.ಪು.ಬ. ॥

ಇಕ್ಷುಚ್ಛಾಯನಿಷಾದಿನ್ಯಃ = ಕಬ್ಬಿನ ನೆರಳಲ್ಲಿ ಕುಳಿತಿರುವ, ಶಾಲಿಗೋಪ್ಯಃ = ಭತ್ತದ ಪೈರನ್ನು ರಕ್ಷಿಸುವ ಸ್ತ್ರೀಯರು—ಗೋಪ್ತುಃ = ರಕ್ಷಿಸುವ, ತಸ್ಯ= ಆ ರಾಜನ, ಗುಣೋದಯಂ = ಗುಣಾತಿಶಯದಿಂದ ಉಂಟಾದ, ಆಕುಮಾರಕಥೋದ್ಘಾತಂ = ಚಿಕ್ಕಮಗುವಿನಿಂದ ಆರಂಭಿಸಿದ ಕಥಾರಂಭವಿರುವ—ರಘುವಿನ ಕುಮಾರವಸ್ಥೆಯಿಂದ (ಬಾಲ್ಯಾವಸ್ಥೆ) ಆರಂಭವಾದ ಕಥಾಭಾಗಗಳಿಂದ—ಯಶಃ=ಕೀರ್ತಿಯನ್ನು, ಜಗುಃ=ಗಾನಮಾಡಿದರು.

**21. ಪ್ರಸಸಾದೋದಯಾದಂಭಃ ಕುಂಭಯೋನೇರ್ಮಹೌಜಸಃ ।**
**ರಘೋರಭಿಭವಾಶಂಕಿ ಚುಕ್ಷುಭೇ ದ್ವಿಷತಾಂ ಮನಃ ॥ ೨೧ ॥**

ಹೇಗೆ ಕೊಡದಲ್ಲಿ ಜನಿಸಿದ ತೇಜೋನಿಧಿ, ಮಹರ್ಷಿ ಅಗಸ್ತ್ಯರನ್ನು ಕಂಡು ಸಾಗರವು ಸುಮ್ಮಗಾಯಿತೋ ಅಂತೆಯೇ ರಘುಸಾರ್ವಭೌಮನ ಉತ್ಕರ್ಷವನ್ನು, ಅವನ ತೇಜಸ್ಸನ್ನು ಕಂಡು ವೈರಿರಾಜರ ಧೈರ್ಯಶಿಖರವು ಕುಸಿದುರಸಾತಳಕ್ಕೆ ಬಿತ್ತು. ಅವರ ಮನೋಧೈರ್ಯವು ಶಿಥಿಲವಾಯಿತು. ಧೈರ್ಯವು ಕುಗ್ಗಿತು, ಭಯವು ಅವರನ್ನು ಆವರಿಸಿತು, ತಮಗೆ ಅಪಜಯವಾಗುವುದು ಖಚಿತವೆನಿಸಿತು. ಅವರ ಮನೋಧೈರ್ಯವು ಕದಡಿದವು. ಅಗಸ್ತ್ಯನಕ್ಷತ್ರವು ಉದಯಿಸಿದೊಡನೆಯೇ ಜಲರಾಶಿಯು ನಿರ್ಮಲವಾಗಿ ಕಂಗೊಳಿಸುವಂತೆ ವೈರಿರಾಜರ ದರ್ಪ ಅಹಂಕಾರಗಳು ಅಡಗಿ, ಅವರು ಸಾಮಾನ್ಯ

ಮಾಂಡಲಿಕರಂತೆ ವರ್ತಿಸಿದರು. ಅವರನ್ನು ಮೀರುವ ನೆಲದೊಡೆಯನು ಇನ್ನೊರ್ವ ನಿರುವನೆಂಬ ಭಾವನೆ ಅವರಲ್ಲಿ ಉದಯಿಸಿತು (ಅಂಕುರಿಸಿತು). ಶರದೃತುವಿನ ಕಾಲದಲ್ಲಿ ಆಕಾಶವು ಮೇಘಾವರಣವಿಲ್ಲದೆ ತಿಳಿಯಾಗಿರುವುದು. ದಕ್ಷಿಣದಿಕ್ಕಿನಲ್ಲಿ ಬೆಳಗಿನಜಾವ ಪ್ರಶಸ್ತವಾದ ಅಗಸ್ತ್ಯನಕ್ಷತ್ರೋದಯ ವಾದುದು ಸ್ಪಷ್ಟವಾಗಿ ಗೋಚರಿಸುವುದು. ಮಹಾ ಮಹಿಮರಾದ ಅಗಸ್ತ್ಯರು ನಕ್ಷತ್ರರೂಪದಿಂದ ದಕ್ಷಿಣದಿಕ್ಕಿನಲ್ಲಿ ಪ್ರತಿಷ್ಠಿತರಾಗಿರುವರೆಂದು ನಂಬಿಕೆ.

ಅನ್ವಯ :—ಮಹೌಜಸಃ ಕುಂಭಯೋನೇಃ ಉದಯಾತ್ ಅಂಭಃ ಪ್ರಸಸಾದ । ರಘೋಃ ಅಭಿಭವಾಶಂಕಿದ್ವಿಷತಾಂ ಮನಃ ಚುಕ್ಷುಭೇ ॥

ಪ್ರ—ಉಪಸರ್ಗ । ಸಸಾದ—ಸೇದತುಃ—ಸೇದುಃ । ಸೇದಿಥ—ಸೇದಥುಃ—ಸೇದ । ಸಸಾದ, ಸಸದ—ಸೇದಿವ—ಸೇದಿಮ । ಷದಲ್ಲೃ—ವಿಶರಣಗತ್ಯವಸಾದನೇಷು—ಲಿಟ್—ಪ್ರ.ಪು.ಏ. । ಮಹತ್ ಓಜಃ—ಯಸ್ಯ ಸಃ—ಮಹೌಜಾಃ—ತಸ್ಯ। ಅಭಿಭವಮ್ ಆಶಂಕತೇ ಇತಿ ಅಬಿಭವಾಶಂಕಿ । ಚುಕ್ಷುಭೇ—ಚುಕ್ಷುಭಾತೇ—ಚುಕ್ಷುಭಿರೇ—ಇತ್ಯಾದಿ । ಕ್ಷುಭ—ಸಂಚಲನೇ—ಲಿಟ್ ॥

ಮಹೌಜಸಃ = ಅತ್ಯಂತ ತೇಜಸ್ವಿಗಳಾದ, ಕುಂಭಯೋನೇಃ = ಅಗಸ್ತ್ಯರ (ನಕ್ಷತ್ರದ), ಉದಯಾತ್ = ಉದಯದಿಂದ, ಅಂಭಃ = ನೀರು, ಪ್ರಸಸಾದ = ನಿರ್ಮಲವಾಯಿತು, ಮಹೌಜಸಃ = ಅತ್ಯಂತ ಪರಾಕ್ರಮವುಳ್ಳ, ರಘೋಃ = ರಘುರಾಜನ. ಉದಯಾತ್ = ಅಭಿವೃದ್ಧಿಯಿಂದ, ಅಭಿಭವಾಶಂಕಿ = ಅಪಜಯವನ್ನು ಶಂಕಿಸುವ, ದ್ವಿಷತಾಂ = ಶತ್ರುಗಳ, ಮನಃ = ಮನಸ್ಸು, ಚುಕ್ಷುಭೇ = ಕದಡಿಹೋಯಿತು (ಕೆಟ್ಟಿತು).

**22. ಮದೋದಗ್ರಾಃ ಕಕುದ್ಮಂತಃ ಸರಿತಾಂ ಕೂಲಮುದ್ರುಜಾಃ ।**
**ಲೀಲಾಖೇಲಮನುಪ್ರಾಪುರ್ಮಹೋಕ್ಷಾಸ್ತಸ್ಯ ವಿಕ್ರಮಮ್ ॥ ೨೨ ॥**

ಆ ವಿಕ್ರಮಾರ್ಜನನ ಪರಾಕ್ರಮವನ್ನು ಮದವೇರಿದ ಕಾಡ್ಕೋಣಗಳು, ಕಾಡೆಮ್ಮೆಗಳು, ದೊಡ್ಡ ಎತ್ತುಗಳು ತಮ್ಮ ಲೀಲಾಖೇಲದಲ್ಲಿ, ನಾನಾ ವಿಧದ ಕ್ರೀಡೆಗಳಲ್ಲಿ ಅನುಸರಿಸು ತ್ತಿದ್ದುವು. ದೊಡ್ಡದೊಡ್ಡ ಹಿಣಿಲುಗಳಿಂದ ಶೋಭಿಸುವ ಸೊಕ್ಕಿದ ಕಾಡುಕೋಣಗಳು ಕಾಡಿನಿಂದ ನದಿಯ ದಡಕ್ಕೆ ಬಂದು ಲೀಲಾವಿನೋದದಿಂದ ಸುಂದರವಾಗಿ ಸ್ವಚ್ಛಂದವಾಗಿ ಕ್ರೀಡಿಸಿದುವು. ನದಿಯ ದಡವನ್ನು ತಮ್ಮ ಹಣೆಯಿಂದ ಗುದ್ದಿ ಹಾಣಾಹಣಿ ಹೋರಾಡು ವಂತೆ, ಕೆಮ್ಮಣ್ಣನ್ನು ಕೆದಕಿ ಸುತ್ತಲೂ ಹರಡಿ ರಘುಭೂಮಿಪನ ವಿಕ್ರಮವನ್ನು ಅನುಕರಿಸುವವೋ ಎಂಬಂತೆ ಮನದಣಿಯೆ ಕ್ರೀಡಿಸುತ್ತಿದ್ದುವು ; ಅಂದಿನ ಶರದೃತುವಿನ ಕಾಲದಲ್ಲಿ, ವೈರಿಭಂಜಕನಾದ ರಘುನೃಪೋತ್ತಮನ ಯುದ್ಧಲೀಲೆಯೋ ಎಂಬಂತೆ ರುದ್ರ ಭಯಂಕರವಾಗಿ ಕ್ರೀಡಿಸುತ್ತಾ ಅನುಕರಣೆ ಮಾಡಿದುವು.

ಮದೇನ ಉದಗ್ರಾಃ । ಕಕುತ್ ಏಷಾಮಸ್ತೀತಿ ಕಕುದ್ಮಂತಃ । ಕೂಲಂ ಉದ್ರುಜಂತಿ ಇತಿ ಕೂಲಮುದ್ರುಜಾಃ । ಕೂಲ ಪದ ಉಪಪದವಾಗಿರುವಾಗ ರುಜ ಧಾತುವಿಗೆ ಖಶ್ ಪ್ರತ್ಯಯ ಬಂದಾಗ ಕೂಲ ಪದಕ್ಕೆ ಮುವಾಗಮ ಬಂದಿದೆ, ಲೀಲಯಾಖೇಲಃ, ತಮ್ । ಅನು—ಪ್ರ—ಉಪಸರ್ಗಗಳು । ಆಪ—ಆಪತುಃ—ಆಪುಃ । ಆಪಿಥ—ಆಪಥುಃ—ಆಪ ।

ಆಪ—ಆಪಿವ—ಆಪಿಮು। ಆಪ್‌ಲೃ—ವ್ಯಾಪ್ತೌ—ಲಿಟ್। ಮಹಾಂತಶ್ಚ ತೇ ಉಕ್ಷಾಣಶ್ಚ—ಮಹೋಕ್ಷಾಣಃ ॥

ಮದೋದಗ್ರಾಃ = ಮದದಿಂದ ಕೊಬ್ಬಿರುವ, ಕಕುದ್ಮಂತಃ = ಉನ್ನತವಾದ, ಸರಿತಾಂ = ನದಿಗಳ, ಕೂಲಮುದ್ರುಜಾಃ = ದಡಗಳನ್ನು ಕೆದಕುವ, ಮಹೋಕ್ಷಾಃ = ದೊಡ್ಡ ಎತ್ತುಗಳು, ಲೀಲಾಯೇಲಂ = ವಿಲಾಸದಿಂದ ಸುಂದರವಾದ, ತಸ್ಯ = ಆ ರಘುನೃಪನ, ವಿಕ್ರಮಂ = ಶೌರ್ಯವನ್ನು, ಅನುಪ್ರಾಪುಃ = ಅನುಸರಿಸಿದುವು.

**23. ಪ್ರಸವೈಃ ಸಪ್ತಪರ್ಣಾನಾಂ ಮದಗಂಧಿಭಿರಾಹತಾಃ ।**
**ಅಸೂಯಯೇವ ತನ್ನಾಗಾಃ ಸಪ್ತಧೈವ ಪ್ರಸುಸ್ರುವುಃ ॥ ೨೩ ॥**

ಸಪ್ತಪರ್ಣ ಅಥವಾ ಏಳೆಲೆಬಾಳೆಗಳ ಹೂಗಂಪಿಗೆ ಮನಸೋತ ಆ ಭೂಮಂಡಲಾಧೀಶನ (ಪೃಥ್ವೀಪತಿ, ಪೃಥ್ವೀವಲ್ಲಭನ) ಗಜಸೇನೆಯಲ್ಲಿ ಮದಿಸಿದ ಮದ್ದಾನೆಗಳು ಮದಜಲಧಾರೆಯನ್ನು ಸುರಿಸಿದುವು. ಆ ಮದಕರಿಗಳು ತಮ್ಮ ಕಿವಿಗಳಲ್ಲಿ, ಕಪೋಲಗಳಲ್ಲಿ ಏಳು ದ್ವಾರಗಳ ಮೂಲಕ (ಏಳು ನಳಿಕೆಗಳು,ಏಳು ನಾಳಗಳು) ಸಪ್ತಧಾರೆಯಲ್ಲಿ ಮದಜಲ ಧಾರೆಯನ್ನು ಕೋಡಿಹರಿಸಿದುವು.

ಏಳೆಲೆಬಾಳೆಗಳ ಹೂಗಳ ಕಂಪು ಆನೆಗಳ ಮದಜಲದ ವಾಸನೆಯನ್ನೇ ಬೀರುವುದರಿಂದ, ಉತ್ತೇಜನಹೊಂದಿ ಮದಗಜಗಳು ಅಧಿಕವಾಗಿ ಮದಜಲವನ್ನು ಸುರಿಸಿದುವು. ತಮ್ಮ ಮದಜಲವನ್ನೇ ಬೀರುತ್ತಲಿರುವ ಬಾಳೆಗಳನ್ನು ಸ್ಪರ್ಶಿಸಿದಾಗ, ಸೋಂಕಿದಾಗ ಅಸಹನೆಯಿಂದಲೋ ಎಂಬಂತೆ ತಮ್ಮ ದೇಹದ ಏಳು ದ್ವಾರಗಳ ಮೂಲಕ (ಎರಡು ಸೊಂಡಿಲಿನ ತುದಿಯಲ್ಲಿರುವ ಸೊಳ್ಳೆಗಳು, ಎರಡು ಕಪೋಲಗಳು ಎರಡು ಕಣ್ಣುಗಳು ಹಾಗೂ ಜನನಾಂಗ) ಮದಜಲವನ್ನು ಧಾರೆಧಾರೆಯಾಗಿ ಸುರಿಸಿದುವು.

ಅನ್ವಯ :—ಸಪ್ತಪರ್ಣಾನಾಂ ಮದಗಂಧಿಭಿಃ ಪ್ರಸವೈಃ ಆಹತಾಃ ತನ್ನಾಗಾಃ ಅಸೂಯಯೇವ ಸಪ್ತಧೈವ ಪ್ರಸುಸ್ರುವುಃ ॥

ಮದಸ್ಯ ಗಂಧ ಇವ ಗಂಧಃ ಯೇಷಾಂ ತೇ, ಮದಗಂಧಯಃ ತೈಃ । ತಸ್ಯ ನಾಗಾಃ । ಪ್ರ—ಉಪಸರ್ಗ । ಸುಸ್ರಾವ—ಸುಸ್ರುವತುಃ—ಸುಸ್ರುವುಃ—ಇತ್ಯಾದಿ.

ಮದಗಂಧಿಭಿಃ = ಆನೆಯ ಮದಜಲದಂತೆ ಪರಿಮಳವುಳ್ಳ, ಸಪ್ತಪರ್ಣಾನಾಂ = ಏಳೆಲೆಬಾಳೆಗಳ, ಪ್ರಸವೈಃ = ಹೂಗಳಿಂದ, ಅಸೂಯಯಾ ಇವ = ಅಸಹನೆಯಿಂದಲೋ ಎಂಬಂತೆ, ಸಪ್ತಧೈವ = ಏಳು ರೀತಿಯಿಂದ—ಪ್ರಸುಸ್ರುವುಃ = ಮದವನ್ನು ಸುರಿಸಿದವು

**24. ಸರಿತಃ ಕುರ್ವತೀ ಗಾಧಾಃ ಪಥಶ್ಚಾಶ್ಯಾನಕರ್ದಮಾನ್ ।**
**ಯಾತ್ರಾಯೈ ಚೋದಯಾಮಾಸ ತಂ ಶಕ್ತೇಃ ಪ್ರಥಮಂ ಶರತ್ ॥ ೨೪ ॥**

ಆ ಧೀರರಾಜಕುಮಾರನನ್ನು ಶರದೃತುವು ದಿಗ್ವಿಜಯಕ್ಕೆ ಪ್ರಚೋದಿಸಿತು. ಆಗ ನದಿಗಳ ನೀರು ಬತ್ತಿ ಮರಳರಾಶಿಯು ದಿಣ್ಣೆಗಳು ತೋರಿದುವು. ನದಿಗಳನ್ನು ದಾಟಲು ದೋಣಿಗಳ, ಸೇತುವೆಗಳ ಅಗತ್ಯವಿರದೆ ಸುಲಭವೆನಿಸಿತು. ದಾರಿಗಳ ಕೆಸರು ಒಣಗಿ ಮಾರ್ಗಭೂಮಿಯು ಬೈತಲೆಯಂತೆ ಸ್ಪಷ್ಟವಾಗಿ ತೋರಿದುವು. ದಿಗ್ವಿಜಯಕಾತುರನಾದ ರಾಜನಿಗೆ

ಸೈನಿಕರನ್ನು ದಾಟಿಸಲು, ಸೈನಿಕರ ಚಲನವಲನಕ್ಕೆ ಸುಲಭವೆನಿಸಿತು. ಅಂದಿನ ಶರದ್ ಋತುವು ಆ ಮನುಜಾಧಿಪನಲ್ಲಿ ಅಡಗಿರುವ ಅಪ್ರತಿಮ ಶಕ್ತಿ, ಉತ್ಸಾಹ, ಬಲ, ಪರಾಕ್ರಮಗಳಿಗಿಂತಲೂ ಅಧಿಕವಾಗಿ ಪ್ರಚೋದಿಸಿತು. ಪ್ರಭುಶಕ್ತಿ, ಮಂತ್ರಶಕ್ತಿಗಳಿಂದ ಸಂಪನ್ನನಾದ ರಘುಸಾಮ್ರಾಟನಿಗೆ ಶರದೃತುವು ಜೈತ್ರಯಾತ್ರೆ ಕೈಗೊಳ್ಳಲು ಪ್ರೇರೇಪಿಸಿತು.

ಅಶ್ಯಾನಃ ಕರ್ದಮಃ ಯೇಷಾಂ ತೇ—ಅಶ್ಯಾನಕರ್ದಮಾಃ, ತಾನ್ । ಚೋದಯಾಮಾಸ—ಚುದ—ಪ್ರೇರಣೇ—ಲಿಟ್—ಪ್ರ.ಪು.ಏ. ॥

ಸರಿತಃ = ನದಿಗಳನ್ನು, ಗಾಧಾಃ = ಆಳವಿಲ್ಲದೆ, ದಾಟಲು ಯೋಗ್ಯವಾಗಿ, ಪಥಃ = ಮಾರ್ಗಗಳನ್ನು, ಅಶ್ಯಾನಕರ್ದಮಾನ್ = ಒಣಗಿದ ಕೆಸರುಳ್ಳವುಗಳನ್ನಾಗಿಯೂ, ಕುರ್ವತೀ ಮಾಡುತ್ತಲಿರುವ, ಶರತ್ = ಶರದೃತುವು, ತಂ = ಆ ರಘುರಾಜನನ್ನು, ಶಕ್ತೇಃ = ಉತ್ಸಾಹ, ಶಕ್ತಿಗಿಂತಲೂ, ಪ್ರಥಮಂ = ಮೊದಲು, ಯಾತ್ರಾಯೈ = ಚೈತ್ರ(ಜೈತ್ರ) ಯಾತ್ರೆಗೆ, ಚೋದಯಾಮಾಸ = ಪ್ರೇರೇಪಿಸಿತು.

**25. ತಸ್ಮೈ ಸಮ್ಯಗ್ಘುತೋ ವಹ್ನಿರ್ವಾಜಿನೀರಾಜನಾವಿಧೌ ।**
**ಪ್ರದಕ್ಷಿಣಾರ್ಚಿರ್ವ್ಯಾಜೇನ ಹಸ್ತೇನೇವ ಜಯಂ ದದೌ ॥ ೨೫ ॥**

ಆನೆಕುದುರೆಗಳಿಗೆ ಸಂಬಂಧಿಸಿದ ನೀರಾಜನದ ಕರ್ಮದಿಂದ ಅಗ್ನಿಯನ್ನು ಪೂಜಿಸಿ ದಿಗ್ವಿಜಯವನ್ನು ಪ್ರಾರಂಭಿಸಲುದ್ಯುಕ್ತನಾದನು. ಆಗ ಹಂತವಹನನಾದ ಅಗ್ನಿದೇವನು ತೊಳಗಿಬೆಳಗಿ ಪ್ರಸನ್ನತೆಯನ್ನು ತೋರಿದನು. ಅಗ್ನಿಯ ಉರಿಜ್ವಾಲೆಗಳು ಮೇಲಕ್ಕೆ ಒಗೆದು ಬಲಭಾಗಕ್ಕೆ ತಿರುಗಿ ಶುಭವನ್ನು ಸೂಚಿಸಿದುವು. ಹಿರಿಯನೊಬ್ಬನು ಕಾಲಿಗೆರಗಿದವನಿಗೆ ಹರಸುವಂತೆ ಅಗ್ನಿದೇವನು ಎದ್ದುನಿಂತು ಹರಸಿದಂತೆ ಮೇಲ್ಮುಖವಾದ ತನ್ನ ಬೆಂಕಿಯ ಉರಿಕೈಗಳಿಂದ ಹರಸಿ ವಿಜಯವನ್ನು ಸೂಚಿಸಿದನು. ಸುರುಳಿಸುರುಳಿಯಾದ, ಉರುಟುರುಟಾದ ಬೆಂಕಿಯ ಜ್ವಾಲೆ ಜಯಮಾಲೆಯ ದ್ಯೋತಕವಲ್ಲವೆ ?

ವಾಜಿನಾಂ ನೀರಾಜನಾವಿಧಿಃ । ವಾಜಿನಾಂ ನೀರಾಜನವಿಧಿಃ, ತಸ್ಮಿನ್ । ಪ್ರಗತಾ ದಕ್ಷಿಣಾಂ—ಪ್ರದಕ್ಷಿಣಾಂ । ಪ್ರದಕ್ಷಿಣಾಂ ಅರ್ಚಿಃ । ಪ್ರದಕ್ಷಿಣಾರ್ಚಿಷಃ, ವ್ಯಾಜಃ, ತೇನ । ದದೌ—ದದತುಃ—ದದುಃ—ಇತ್ಯಾದಿ—ಡುದಾಞ್—ದಾನೇ—ಲಿಟ್—ಪ್ರ.ಪು.ಏ. ॥

ವಾಜಿನೀರಾಜನಾವಿಧೌ = ಕುದುರೆ, ಆನೆಗಳ ನೀರಾಜನವೆಂಬ ಶಾಂತಿಕರ್ಮದಲ್ಲಿ, ಸಮ್ಯಗ್ಘುತಃ = ಚೆನ್ನಾಗಿ ಹೋಮಿಸಲ್ಪಟ್ಟ, ಪ್ರಜ್ವಲಿಸುವಂತೆ ಮಾಡಿದ, ವಹ್ನಿಃ = ಬೆಂಕಿಯು, ಪ್ರದಕ್ಷಿಣಾರ್ಚಿರ್ವ್ಯಾಜೇನ = ಪ್ರದಕ್ಷಿಣಾಕಾರವಾದ ಜ್ವಾಲೆಯ ನೆಪದಿಂದ, ಹಸ್ತೇನ ಇವ = ಕೈಯಿಂದಲೋ ಎಂಬಂತೆ, ತಸ್ಮೈ=ಆ ರಾಜಬಂಧುವಿಗೆ, ಜಯಂ = ಜಯವನ್ನು, ದದೌ = ಕೊಟ್ಟಿತು.

**26. ಸಗುಪ್ತಮೂಲಪ್ರತ್ಯಂತಃ ಶುದ್ಧಪಾರ್ಷ್ಣಿರಯಾನ್ವಿತಃ ।**
**ಷಡ್ವಿಧಂ ಬಲಮಾದಾಯ ಪ್ರತಸ್ಥೇ ದಿಗ್ಜಿಗೀಷಯಾ ॥ ೨೬ ॥**

ದಿಗಂತವಿಶ್ರಾಂತವಾದ ಕೀರ್ತಿಯನ್ನು ಪಡೆಯಲು ವಿಶ್ವವಿಜಯದ ದಿಗ್ವಿಜಯಕ್ಕೆ ಮನಮಾಡಿದ ಆರು ವಿಧದ ಸೇನೆಯನ್ನು ಸಂಗ್ರಹಿಸಿದನು. ತನ್ನ ರಾಜಧಾನಿಯಲ್ಲಿ ಮೂಲ

ಬಲವನ್ನಿಟ್ಟು, ತನ್ನ ಸಾಮ್ರಾಜ್ಯದ ಗಡಿಯಲ್ಲಿನ ಕೋಟೆಗಳನ್ನು ಭದ್ರಗೊಳಿಸಿ, ಸಾಕಷ್ಟು ಸೇನೆಯನ್ನು ಕಾವಲಾಗಿ ಅಲ್ಲಿರಿಸಿ ದಿಗ್ವಿಜಯಾಕಾಂಕ್ಷಿಯಾಗಿ ರಘುವು ಹೊರಟನು. ತಾನು ಮುಂದುವರಿದಂತೆ ವೈರಿರಾಜರು ಬೆನ್ನಹಿಂದಿನಿಂದ ಎರಗದಂತೆ ಜಾಗ್ರತೆ ವಹಿಸಿ ತನ್ನ ಆರು ತೆರನಾದ ಬಲದೊಡಗೂಡಿ ದಿಗ್ವಿಜಯಕ್ಕೆಂದು ಹೊರಟನು. ಆರು ತೆರನಾದ ಬಲ, ಸೇನಾವಾಹಿನಿಗಳು: ೧. ಮೂಲಬಲ, ೨. ಭೃತ್ಯಬಲ, ೩. ಮಿತ್ರಬಲ, ೪. ಪೌರಬಲ, ೫. ಶತ್ರುಬಲ, ೬. ಬೇಡರ ಬಲ.

ಮೂಲಂ ಚ ಪ್ರತ್ಯಂತಶ್ಚ, ಮೂಲಪ್ರತ್ಯಂತೌ, ಗುಪ್ತೌ ಮೂಲ ಪ್ರತ್ಯಂತೌ ಯೇನ ಸಃ ಗುಪ್ತಮೂಲಪ್ರತ್ಯಂತಃ। ಶುದ್ಧಃ ಪಾರ್ಷ್ಣಿಃ ಯಸ್ಯ ಸಃ। ಅಯೇನ ಅನ್ವಿತಃ। ಷಟ್ ವಿಧಾಃ ಯಸ್ಯ ತತ್। ಜೇತುಂ ಇಚ್ಛಾ—ಜಿಗೀಷಾ. ದಿಶಾಂ ಜಿಗೀಷಾ, ದಿಗ್ ಜಿಗೀಷಾ, ತಯಾ ॥

ಗುಪ್ತಮೂಲಪ್ರತ್ಯಂತಃ=ರಕ್ಷಿಸಲ್ಪಟ್ಟ ತನ್ನ ನಿವಾಸಸ್ಥಾನವೂ, ಸಮೀಪದ ದುರ್ಗವೂ ಇವುಗಳುಳ್ಳ, ಶುದ್ಧಪಾರ್ಷ್ಣಿಃ = ಶಾಂತಗೊಳಿಸಿದ ಹಿಂದಿನ ಪ್ರದೇಶದ ಶತ್ರುವುಳ್ಳ, ಅಥವಾ ಸೇನೆಯಿಂದ ರಕ್ಷಿತವಾದ ಹಿಂದಿನ ದೇಶವುಳ್ಳ, ಅಯಾನ್ವಿತ = ಶುಭದೈವದಿಂದ ಕೂಡಿದ, ಸಃ = ರಘುರಾಜನು, ಷಡ್ವಿಧಂ = ಆರು ವಿಧವಾದ (ಮೌಲ. ಭೃತ್ಯ, ಶ್ರೇಣಿ, ದ್ವಿಷತ್, ಸುಹೃತ್, ಆಟವಿಕವೆಂಬ ಆರು ವಿಧವಾದ), ಬಲ = ಸೈನ್ಯವನ್ನು, ಆದಾಯ = ಕೂಡಿಕೊಂಡು, ದಿಗ್ಜಿಗೀಷಯಾ = ದಿಕ್ಕುಗಳನ್ನು ಜಯಿಸುವ ಇಚ್ಛೆಯಿಂದ, ಪ್ರತಸ್ಥೇ = ಹೊರಟನು, ಮೂಲ = ನಿವಾಸಸ್ಥಾನ.

**27. ಅವಾಕಿರನ್ವಯೋವೃದ್ಧಾಸ್ತಂ ಲಾಜೈಃ ಪೌರಯೋಷಿತಃ ।**
**ಪೃಷತೈರ್ಮಂದರೋದ್ಧೂತೈಃ ಕ್ಷೀರೋರ್ಮಯ ಇವಾಚ್ಯುತಮ್ ॥ ೨೭ ॥**

ರಘುರಾಜನು ಜೈತ್ರಯಾತ್ರೆಗೆ ಹೊರಟ ಶುಭವೇಳೆ, ಕ್ಷೀರಸಾಗರವನ್ನು ಕಡೆಯಲು, ಮಂದರ ಪರ್ವತವನ್ನು ಕಡೆಗೋಲಾಗಿ ಮಾಡಿ ಕಡೆದಾಗ ಅದು ಗರಗರನೆ ಸುತ್ತುತ್ತಿದ್ದಾಗ, ಕ್ಷೀರಸಾಗರದ ಅಲೆಗಳಿಂದ ಹಾರಿದ ತುಂತುರುಹಾಲಿನ ಹನಿಗಳು ಹಾಲಿನ ಬಿಂದುಗಳು ಪರಮಾತ್ಮನಾದ ಮಹಾವಿಷ್ಣುವಿನ ಮೈಮೇಲೆ ಹಾರಿ ಆ ದೇವದೇವನನ್ನು ನೆನೆಸಿದಂತೆ, ಹಿರಿಯರಾದ ಮಹಿಳೆಯರು, ಪ್ರೌಢರಾದ ಸುಮಂಗಲಿಯರು, ಮುತ್ತೈದೆಯರು ಅರಲಮಳೆಯಿಂದ ತೋಯುವಂತೆ ಮಾಡಿದರು. ಅವನನ್ನು ಲಾಜದ ಮಳೆಯಿಂದ ಮುಚ್ಚಿಬಿಟ್ಟರು. ಮೈಮೇಲೆ ಬೊಗಸೆ ಕೈಗಳೀದ ನಾನಾವಿಧದ ಪುಷ್ಪಗಳನ್ನು, ಅಕ್ಷತೆಯನ್ನು ಎರಚಿ ಶುಭವಾಗಲೆಂದು ಹರಸಿ ಆಶೀರ್ವದಿಸಿದರು.

ಅವ—ಉಪಸರ್ಗ—ಅಕಿರತ್—ಅಕಿರತಾಂ—ಅಕಿರನ್—ಇತ್ಯಾದಿ—ಕೄ = ವಿಕ್ಷೇಪೇ—ಲಙ್—ಪ್ರ.ಪು.ಬ.। ವಯಸಾಃ ವೃದ್ಧಾಃ। ಪೌರಾಣಾಂ ಯೋಷಿತಃ। ಮಂದರಾತ್ ಉದ್ಧೂತಾಃ, ತೈಃ ॥

ವಯೋವೃದ್ಧಾಃ = ವಯಸ್ಸಾಗಿರುವ, ಪೌರಯೋಷಿತಃ=ನಗರದಸುಮಂಗಲಿಯರು, ತಂ = ಆ ರಘುರಾಜನನ್ನು, ಲಾಜೈ= ಅರಳುಗಳಿಂದ, ಮಂದರೋದ್ಧೂತೈಃ = ಮಂದರ

ಪರ್ವತದಿಂದ ಎದ್ದಿರುವ, ಪೃಷತೈಃ = ನೀರಿನ ಕಣಗಳಿಂದ, ಕ್ಷೀರೋರ್ಮಯಃ = ಕ್ಷೀರ ಸಮುದ್ರದ ಅಲೆಗಳು, ಅಚ್ಯುತಂ ಇವ = ಮಹಾವಿಷ್ಣು ಇವನು ಎಂಬಂತೆ, ಅವಾಕಿರನ್ = ಎರಚಿದರು (ಸೂಡಿದರು).

**28. ಸ ಯಯೌ ಪ್ರಥಮಂ ಪ್ರಾಚೀಂ ತುಲ್ಯಃ ಪ್ರಾಚೀನಬರ್ಹಿಷಾ ।**
**ಅಹಿತಾನನಿಲೋದ್ಧೂತೈಸ್ತರ್ಜಯನ್ನಿವ ಕೇತುಭಿಃ ॥ ೨೮ ॥**

ಆ ಜನನಾಥನು ಸಾಹಸ, ಶೌರ್ಯ, ಧೈರ್ಯ, ವಿಕ್ರಮಂಗಳಲ್ಲಿ ಇಂದ್ರನಿಗೆ ಸಮನಾಗಿದ್ದನು. ಇಂದ್ರನಂತೆ ಧೈರ್ಯಮೇರುವೇ ಆಗಿದ್ದನು. ಅಂತಹ ಪ್ರತಾಪಿಯಾದ ದೇವೇಂದ್ರಸದೃಶನಾದ ಪೃಥ್ವೀವಲ್ಲಭನು ಮೊದಲು ದಂಡಯಾತ್ರೆಯನ್ನು ಪ್ರಾರಂಭಿಸಿದಾಗ ದೇವೇಂದ್ರನ ದಿಕ್ಕಾದ ಪೂರ್ವದಿಕ್ಕಿಗೆ ತನ್ನ ಸೇನಾವಾಹಿನಿಯನ್ನು ಕಳುಹಿಸಿ ಪ್ರಾರಂಭಿಸಿದನು. ಅನುಕೂಲಕರವಾದ ಗಾಳಿಯು ಹಿತಕರವಾಗಿ ಬೀಸತೊಡಗಿತು. ಆಗ ಅವನ ಬಾವುಟ, ಧ್ವಜಪತಾಕೆಗಳು ಗಾಳಿಯಲ್ಲಿ ಚಲಿಸುತ್ತ (ಅಲ್ಲಾಡುತ್ತಾ) ಪಟಪಟನೆ ಶಬ್ದಿಸುತ್ತಾ, ಅಲ್ಲಾಡುವ ಧ್ವಜಪತಾಕೆಯ ಮೂಲಕ ಇವನು ಶತ್ರುಗಳನ್ನು ಹೆದರಿಸುತ್ತಾನೋ ಎಂಬಂತೆ ತೋರಿತು. ಗದರಿಸುವವನು ತೋರುಬೆರಳನ್ನು ತೋರಿ ಭಯಪಡಿಸುವುದು (ನಡುಗಿಸುವುದು) ಸ್ವಾಭಾವಿಕವಲ್ಲವೆ. ಆದರಂತೆ ತೋರುಬೆರಳನ್ನು ನಡುಗಿಸುತ್ತಾ ತೋರಿ ವೈರಿಗಳನ್ನು ತಲ್ಲಣಗೊಳಿಸುವನೋ ಎಂಬಂತೆ ಆ ಧ್ವಜಪತಾಕೆಗಳು ಗಾಳಿಯಲ್ಲಿ ಪಟಪಟನೆಂದು ಕಂಪಿಸುತ್ತಾ ವೈರಿಗಳ ನಡುಕವನ್ನು ಅನುಕರಿಸಿದುವು.

ಯಯೌ—ಯಯತುಃ—ಯಯುಃ—ಇತ್ಯಾದಿ । ಯಾ—ಪ್ರಾಪಣೇ—ಲಿಟ್ । ಅನಿಲೇನ ಉದ್ಧೂತಾಃ ತೈಃ ॥

ಪ್ರಾಚೀನಬರ್ಹಿಷಾ = ಇಂದ್ರನಿಂದ, ತುಲ್ಯಃ = ಸಮಾನನಾದ, ಸಃ = ಆ ರಘುರಾಜನು, ಅನಿಲೋದ್ಧೂತೈಃ = ಅನುಕೂಲವಾದ ಗಾಳಿಯಿಂದ ಅಲ್ಲಾಡಿಸಲ್ಪಡುವ, ಕೇತುಭಿಃ = ಧ್ವಜಪತಾಕೆಗಳಿಂದ, ಅಹಿತಾನ್ = ವೈರಿಗಳನ್ನು, ತರ್ಜಯನ್ನಿವ ಪ್ರಾಚೀಂ = ಪೂರ್ವದಿಕ್ಕನ್ನು, = ಹರಿವಾಹನದಿಙ್ಮುಖವ್—ಯಯೌ = ಹೋದನು.

**29. ರಜೋಭಿಃ ಸ್ಯಂದನೋದ್ಧೂತೈರ್ಗಜೈಶ್ಚ ಘನಸನ್ನಿಭೈಃ ।**
**ಭುವಸ್ತಲಮಿವ ವ್ಯೋಮ ಕುರ್ವನ್ ವ್ಯೋಮೇವ ಭೂತಲಮ್ ॥ ೨೯ ॥**

ರಘುವಿನ ದಂಡಯಾತ್ರೆಯಲ್ಲಿ ಭೂಮಿ ಆಕಾಶವಾಯಿತು ; ಆಕಾಶಮಂಡಲವು ಭೂಮಂಡಲವಾದಂತೆ ತೋರಿತು, ಅವನ ಸಾಗರದಂತಹ ಚತುರಂಗ ಮಹಾಸೇನೆ (ಆನೆ, ಕುದುರೆ, ರಥ, ಪದಾತಿ) ಭೂಮಿಯಲ್ಲಿ ಸಾಗುತ್ತಿರುವಾಗ ರಭಸದಿಂದ ಓಡುತ್ತಿರುವ ರಥಚಕ್ರಗಳಿಂದ ಎದ್ದ ಧೂಳು ಆಕಾಶವನ್ನು (ಅಂಬರವನ್ನು, ಗಗನವನ್ನು, ನಭವನ್ನು) ದಟ್ಟವಾಗಿ ಮುತ್ತಿಕೊಂಡಿತು. ಸಹಸ್ರಾರು ಗಜಗಳಿಂದೆಸೆವ ಅವನ ಗಜಸೇನೆ, ಕಪ್ಪಾದ ಮೇಘರಾಶಿಯೇ ಚಲಿಸುವಂತೆ ತೋರಿತು. ಮುಗಿಲುಗಳಿಗೆ ಎಣೆಯಾದ (ಬೂದುಬಣ್ಣದ, ಕಪ್ಪಾದ) ಗಜಗಳಿಂದ ಮೆರೆಯುತ್ತ ಭೂಮಿಯು ಆಕಾಶದಂತೆ (ಆಗಸದಂತೆ) ತೋರಿತು. ಆ ಪರಂತಪನು ಭೂಮಿಯನ್ನು ಆಕಾಶದಂತೆ ಮಾಡುತ್ತಾ ಉಪಕ್ರಮಿಸಿದನು.

ಸ್ಯಂದನೇಭ್ಯಃ ಉದ್ಧೂತಾನಿ, ತೈಃ । ಘನಾನಾಂ ಸನ್ನಿಭಾಃ, ತೈಃ ॥

ಸ್ಯಂದನೋದ್ಧೂತೈಃ = ರಥಗಳಿಂದ ಎದ್ದಿರುವ, ರಜೋಭಿಃ = ಧೂಳಿನಿಂದ, ಘನಸನ್ನಿಭೈಃ = ಮೋಡಗಳಿಗೆ ಸಮಾನವಾದ, ಗಜೈಶ್ಚ = ಆನೆಗಳಿಂದಲೂ, ವ್ಯೋಮ = ಆಕಾಶ, ಭುವನಸ್ತಲಂ ಇವ = ಆಕಾಶದಂತೆ, ಕುರ್ವನ್ = ಮಾಡುತ್ತಾ, ಯಯೌ = ಹೋದನು.

**30. ಪ್ರತಾಪೋಽಗ್ರೇ ತತಃ ಶಬ್ದಃ ಪರಾಗಸ್ತದನಂತರಮ್ ।**
**ಯಯೌ ಪಶ್ಚಾದ್ರಥಾದೀತಿ ಚತುಸ್ಕಂಧೇವ ಸಾ ಚಮೂಃ ॥ ೩೦ ॥**

ಅವನ ಭೂರಿವರ್ಚಲವು ಮೊದಲು ಪ್ರತಾಪವೆಂಬ ಅಗ್ನಿಯನ್ನು ಕಾರಿತು. ಮೊದಲು ಏಟು (ರಪರಪನೆ ಏಟು), ಆಮೇಲೆ ಬೊಬ್ಬೆ (ಅಟ್ಟಹಾಸದ ಆರ್ಭಟ). ಸೈನಿಕರು ಮೊದಲು ವೈರಿಗಳಿಗೆ ತಮ್ಮ ಕೈಗುಣವನ್ನು ತೋರಿ ಆ ಬಳಿಕ ಬೊಬ್ಬಿಡುವರು. ಆರ್ಭಟಿಸುತ್ತಾ ಸಿಂಹನಾದಮಾಡುವರು (ಹರಹರ ಮಹಾದೇವ, ಅಲ್ಲಾಹೋ ಅಕ್ಬರ್). ಹೀಗೆ ಮೊದಲು ಪ್ರತಾಪ. ಆಮೇಲೆ ಆರ್ಭಟ, ಆ ಬಳಿಕ ಧೂಳು. ಕೊನೆಗೆ ರಥಗಳಿಂದ ಇಡಿಕ್ಕಿರಿದ ರಘುಸೇನೆ. ಧಾಳಾಧೂಳಿ, ಏರಾಟ, ಭೀಕರಕಾಳಗ. ಈ ತೆರನಾಗಿ ನಾಲ್ಕು ಬಗೆಯ ರಚನೆಯಿಂದ ರಘುಸೇನೆಯು ಸಾಗರದಂತೆ ಮುಂಬರಿಯಿತು. ನಾಲ್ಕು ಬಗೆಯ ಸೇನಾವಿಭಾಗಗಳ, ನಾಲ್ಕು ಬಗೆಯ ಸೇನಾವ್ಯೂಹಗಳ (ಸ್ಕಂಧಗಳ) ರಚನೆಯಿಂದ ಒಡಗೂಡಿದ ಆ ಸೇನಾಶರಧಿಯು ವೈರಿಮಂಡಲಗಳಿಗೆ ದಾಳಿಮಾಡಲು ಹೊರಟಿತು. ಪರಮಂಡಲವನ್ನು ಆಕ್ರಮಿಸತೊಡಗಿತು.

ತಸ್ಮಾದನಂತರಂ—ತದನಂತರಮ್ । ಯಯೌ—ಯಾ—ಪ್ರಾಪಣೇ—ಲಿಟ್ । ರಥಃ ಆದಿಃ ಯಸ್ಯ ತತ್ ರಥಾದಿ (ಚತುರಂಗಬಲಂ) । ಚತ್ವಾರಃ ಸ್ಕಂಧಾ ಯಸ್ಯಾಃ ಸಾ, ಚತುಸ್ಕಂಧಾ ॥

ಅಗ್ರೇ = ಮೊದಲು, ಪ್ರತಾಪಃ = ತೇಜಸ್ಸು, ಶಬ್ದಃ = ಸೇನೆಯ ಕಲಕಲಧ್ವನಿಯೂ, ತದನಂತರಂ = ಆಮೇಲೆ, ಪರಾಗಃ = ಧೂಳಿಯೂ, ಪಶ್ಚಾತ್ = ಆಮೇಲೆ, ರಥಾದಿ = ರಥ ಮೊದಲಾದ ಚತುರಂಗಬಲ, ಚತುಃ ಸ್ಕಂಧಾ ಇವ = ನಾಲ್ಕು ವ್ಯೂಹಗಳುಳ್ಳ, ಸಾ ಚಮೂಃ = ಆ ರಘುರಾಜನ ಸೇನೆಯು, ಯಯೌ = ಹೋಯಿತು.

ಅಲಂಕಾರ : ಉತ್ಪ್ರೇಕ್ಷಾಲಂಕಾರ.

**31. ಮರುಪೃಷ್ಠಾನ್ಯುದಂಭಾಂಸಿ ನಾವ್ಯಾಃ ಸುಪ್ರತರಾ ನದೀಃ ।**
**ವಿಪಿನಾನಿ ಪ್ರಕಾಶಾನಿ ಶಕ್ತಿಮತ್ತ್ವಾಚ್ಚಕಾರ ಸಃ ॥ ೩೧ ॥**

ರಘುವಿನ ಸೇನೆ ನೌಕಾಬಲಸಜ್ಜಿತವಾಗಿತ್ತು. ನೌಕಾಬಲದ ಮೂಲಕ ಅಗಾಧವಾದ ಜಲರಾಶಿಯನ್ನು, ವಿಶಾಲವಾದ ನದಿಗಳನ್ನು ದಾಟಿದನು ಅವನ ಸೇನೆಯು ದಾಟುತ್ತಿದ್ದಾಗ ಮರುಭೂಮಿಯನ್ನು ಉಪಕಾರಮಯವಾದ ಭೂಭಾಗವನ್ನಾಗಿ ಮಾಡಿದನು. ಮರುಭೂಮಿಯಲ್ಲಿ ಕೊಳಬಾವಿಗಳನ್ನು ಕೊರೆದು ಜಲಕಾರಂಜಿ ಚಿಮ್ಮುವಂತೆ ಮಾಡಿದನು. ಪರಿವಾರದ ಅನುಕೂಲಕ್ಕಾಗಿ ಕಾಲುವೆಗಳಲ್ಲಿ ನೀರು ತುಂಬಿ ನದಿಯು

ಹರಿಯುವಂತೆ ಮಾಡಿದನು. ಏಕೆಂದರೆ ಅವನ ಸೇನೆಯು ಎಲ್ಲಾ ತರದ ಸಂಪನ್ಮೂಲಗಳ ಆಶ್ರಯವನ್ನು ಪಡೆದಿತ್ತು. ವನಭೂಮಿಯನ್ನು ಪ್ರವೇಶಿಸಿದಾಗ ಆ ಕಾಡುಗಳು ದೊಡ್ಡ ನಗರಗಳಂತೆ ಶೋಭಿಸಿದುವು. ನಗರಗಳಂತೆಯೇ ಕಂಡುವು. ಕಾಡುಗಳನ್ನು ಕಡಿದು ಬಯಲುಸೀಮೆ ಮಾಡಿ ಸೈನಿಕರ ಸೌಕರ್ಯಕ್ಕೆ ಡೇರೆಗಳನ್ನು ರಚಿಸಿ (ನೆಟ್ಟು) ನಗರಗಳನ್ನಾಗಿ ಪರಿವರ್ತಿಸಿದನು. ಅವನು ಮಹಾನದಿಗಳನ್ನು ನೌಕಾಬಲದ ಮೂಲಕ ಸಣ್ಣಸಣ್ಣ ತೊರೆಗಳನ್ನು ದೋಣಿಗಳ (ನಾಡದೋಣಿ) ಮೂಲಕ, ತೊರೆಗಳನ್ನು, ಕಾಲುವೆಗಳನ್ನು ತೆಪ್ಪಗಳ ಮೂಲಕ ಅನಾಯಾಸವಾಗಿ ದಾಟಿದನು.

ಉದ್ಗತಂ ಅಂಭಃ ಯೇಷು ತಾನಿ। ನಾವಾತಾರ್ಯಾಃ, ನಾವ್ಯಾಃ ಸುಖೇನ ಪ್ರತರ್ತುಂ ಯೋಗ್ಯಾಃ ಸುಪ್ರತರಾಃ। ಶಕ್ತಿಃ ಅಸ್ಯ ಅಸ್ತಿ ಇತಿ—ಶಕ್ತಿಮಾನ್। ಶಕ್ತಿಮತೋ ಭಾವಃ—ಶಕ್ತಿಮತ್ತ್ವಂ, ತಸ್ಮಾತ್। ಚಕಾರ—ಚಕ್ರತುಃ—ಚಕ್ರುಃ। ಚಕರ್ಥ—ಚಕ್ರಥುಃ—ಚಕ್ರ। ಚಕಾರ, ಚಕರ—ಚಕೃವ—ಚಕೃಮ। ಡುಕೃಞ್—ಕರಣೇ—ಲಿಟ್॥

ಸಃ = ಆ ರಘುರಾಜನು, ಶಕ್ತಿಮತ್ತ್ವಾತ್ = ಸಮರ್ಥನಾದುದರಿಂದ, ಮರುಪೃಷ್ಠಾನಿ = ನಿರ್ಜಲಸ್ಥಲಗಳನ್ನು, ಮರುಭೂಮಿಗಳನ್ನು, ಉದಂಭಾಂಸಿ = ನೀರುಳ್ಳವುಗಳನ್ನಾಗಿ, ಚಕಾರ = ಮಾಡಿದನು, ನಾವ್ಯಾಃ = ದೋಣಿಯಿಂದ ದಾಟಬೇಕಾದ, ನದೀಃ = ನದಿಗಳನು, ಸುಪ್ರತರಾಃ=ಸುಖವಾಗಿ ದಾಟಲು ಯೋಗ್ಯವನ್ನಾಗಿ, ವಿಪಿನಾನಿ=ಕಾಡುಮೇಡುಗಳನ್ನು, ಪ್ರಕಾಶಾನಿ = ಮರಗಿಡಗಳಿಲ್ಲದ ಬಯಲುಸೀಮೆಯನ್ನಾಗಿ, ಚಕಾರ = ಮಾಡಿದನ್ನು ಉದಂಭಾಂಸಿ = ಉದ್ ಭೂತ ಜಲಾನಿ, ''ಅಟವ್ಯರಣ್ಯಂ ವಿಪಿನಮ್'' ಇತ್ಯಮರಃ ॥

**32. ಸ ಸೇನಾಂ ಮಹತೀಂ ಕರ್ಷನ್ಪೂರ್ವಸಾಗರಗಾಮಿನೀಮ್।**
**ಬಭೌ ಹರಜಟಾಭ್ರಷ್ಟಾಂ ಗಂಗಾಮಿವ ಭಗೀರಥಃ** ॥ ೩೨ ॥

ಪೂರ್ವಸಮುದ್ರದ ಕಡೆಗೆ ಹೊರಟ ಅವನ ಸೇನೆಯು ವೇಗದಿಂದ ಪ್ರವಹಿಸುತ್ತಿರುವ (ಹರಿಯುತ್ತಿರುವ) ಗಂಗಾನದಿಯಂತೆ ಕಂಡಿತು. ಈ ಹಿಂದೆ ಸಗರಪುತ್ರರ ಶಾಪವಿಮೋಚನೆಗಾಗಿ ಭಗೀರಥನು ಘೋರತಪಸ್ಸನ್ನು ಮಾಡಿ ಶಿವನನ್ನು ಮೆಚ್ಚಿಸಿ ದೇವಗಂಗೆಯನ್ನು ಜಟೆಯಲ್ಲಿ ಧರಿಸುವಂತೆ ಪರಶಿವನನ್ನು ಪ್ರಾರ್ಥಿಸಿದನು, ಆಗ ಮೂರು ಲೋಕಗಳನ್ನು ತಲ್ಲಣಗೊಳಿಸುತ್ತಾ ದೇವಗಂಗೆಯು ನಾಕಲೋಕದಿಂದ ಭೂಮಿಗಿಳಿದಳು, ಭೂಮಿಗಿಳಿದು ಬರುತ್ತಿದ್ದಾಗ (ಧುಮುಕಿದಾಗ) ಹರನು ಅವಳನ್ನು ತನ್ನ ಜಟೆಯಲ್ಲಿ ಧರಿಸಿದನು. ಭಗೀರಥನ ಪ್ರಾರ್ಥನೆಯಂತೆ ಶಿವನು ಅವಳನ್ನು ಹರಿಯಬಿಟ್ಟನು. ಹೀಗೆ ಶಿವನ ಜಡೆಯಿಂದ ಹರಿದುಬರುತ್ತಿದ್ದ ಗಂಗೆಗೆ ಭಗೀರಥನು ಮುಂದಿನಿಂದ ದಾರಿತೋರುತ್ತ ನಡೆದನು. ಭಗೀರಥನ ಹಿಂದಿನಿಂದ ಗಂಗಾನದಿಯು ಹರಿದುಬರುತ್ತಿತ್ತು. ಅದೇ ರೀತಿಯಲ್ಲಿ ಪೂರ್ವಸಾಗರದತ್ತ ಹೊರಟ ರಘುವಿನ ಸೇನೆ ಹರನ ಜಡೆಯಿಂದ ಇಳಿದುಬರುತ್ತಿದ್ದ ಭಾಗೀರಥಿಯೋ ಎಂಬಂತೆ ಕಂಡಿತು. ಗಂಗೆಯನ್ನು ತನಗೆ ಬೇಕಾದ ಕಡೆಗೆ ಒಯ್ಯುವ ಭಗಿರಥನಂತೆ, ದಿಗ್ವಿಜಯಾಕಾಂಕ್ಷಿಯಾದ ರಘುವು ಪೂರ್ವಸಮುದ್ರಾಭಿಮುಖವಾಗಿ ಹೋಗುತ್ತಲಿರುವ ತನ್ನ ಮಹಾಸೈನ್ಯವನ್ನು ತನಗೆ ಅಭಿಮತವಾದ ದೇಶದ ಕಡೆಗೆ ಒಯ್ಯುತ್ತಾ ಶೋಭಿಸಿದನು.

ಅನ್ವಯಃ:—ಮಹತೀಂ ಸೇನಾಂ ಪೂರ್ವಸಾಗರಗಾಮಿನೀಂ ಕರ್ಷನ್ ಸ ಹರಜಟಾಭ್ರಷ್ಟಾಂ ಗಂಗಾಂ (ಕರ್ಷನ್) ಭಗೀರಥ ಇವ ಬಭೌ ॥

ಪೂರ್ವಸಾಗರಂ ಗಚ್ಛತೀತಿ ಪೂರ್ವಸಾಗರಗಾಮಿನೀಮ್ । ಬಭೌ—ಭಾ—ದೀಪ್ತೌ—ಲಿಟ್ । ಹರಸ್ಯ ಜಟಾಃ । ಹರಜಟಾಭ್ಯಃ ಭ್ರಷ್ಟಾ। ಹರಜಟಾಭ್ರಷ್ಟಾ। ತಾಂ ॥

ಪೂರ್ವಸಾಗರಗಾಮಿನೀಂ = ಪೂರ್ವಸಮುದ್ರದ ಕಡೆಗೆ ಹೋಗುವ, ಮಹತೀಂ = ದೊಡ್ಡದಾದ, ಸೇನಾಂ = ಸೇನೆಯನ್ನು, ಕರ್ಷನ್ = ಎಳೆದುಕೊಂಡು ಒಯ್ಯುತ್ತಿರುವ, ಸಃ = ಆ ರಘುರಾಜನು, ಹರಜಟಾಭ್ರಷ್ಟಾಂ = ಶಿವನ ಜಡೆಯಿಂದ ಕೆಳಗೆ ಇಳಿದ (ಹಾರಿದ), ಗಂಗಾಂ = ಗಂಗಾನದಿಯನ್ನು, ಕರ್ಷನ್ = ಕರೆದೊಯ್ಯುವ, ಭಗೀರಥಃ ಇವ =ಭಗೀರಥನಂತೆ, ಬಭೌ = ಶೋಭಿಸಿದನು, ಪ್ರಕಾಶಿಸಿದನು.

**33. ತ್ಯಾಜಿತೈಃ ಫಲಮುತ್ಖಾತೈರ್ಭಗ್ನೈಶ್ಚ ಬಹುಧಾ ನೃಪೈಃ ।**
**ತಸ್ಯಾಸೀದುಲ್ಬಣೋ ಮಾರ್ಗಃ ಪಾದಪೈರಿವ ದಂತಿನಃ ॥ ೩೩ ॥**

ಆವನ ದಾರಿಯು ಮಹಾದಿಗ್ಗಜವು ಹೋದ ದಾರಿಯಂತೆ ಸುಗಮವಾಗಿತ್ತು, ಕಂಟಕ ರಹಿತವಾಗಿತ್ತು. ವನಸ್ಥಲಗಳಲ್ಲಿ ಗಜರಾಜನು ಸುತ್ತುಮುತ್ತಲ ಪರಿವೆಯಿಲ್ಲದೆ ತನ್ನ ಮಹತ್ತಾದ ಶಕ್ತಿಯಲ್ಲಿ ನಂಬಿಕೆಯಿಟ್ಟು ತನ್ನ ದಾರಿಯಲ್ಲಿ ಅಡ್ಡಬೆಳೆದಿರುವ ಮಹಾವೃಕ್ಷಗಳನ್ನು ಬೇರುಸಹಿತ ಕಿತ್ತು ಎಸೆವಂತೆ ರಘುವಿನ ಸೇನೆಯು ಯಾವ ಅಡೆತಡೆಗಳನ್ನು ಲೆಕ್ಕಿಸದೆ ಶತ್ರುನೆಲೆಗಳನ್ನು ಆಕ್ರಮಿಸಿತು. ವೈರಿಭೂಮಿಯಲ್ಲಿ ಪದಾರ್ಪಣಮಾಡಿತು. ಕೆಲವು ರಾಜರು ತಾವಾಗಿ ಮಣಿದು ಕಪ್ಪಕಾಣಿಕೆ ಕೊಟ್ಟು ಶರಣಾಗತರಾದರು. ಅವರನ್ನು ಮಿತ್ರರನ್ನಾಗಿ ಮಾಡಿಕೊಂಡು, ಅವರ ರಾಜ್ಯವನ್ನು ಅವರಿಗೇ ಕೊಟ್ಟು ಮುಂದು ವರಿದನು. ಗಜರಾಜನು ಪ್ರವೇಶಿಸಿದ ಮಹಾಕಾಂತಾರದಲ್ಲಿ ಬೆಳೆದ ಮರಗಳಲ್ಲಿದ್ದ ಹಣ್ಣುಗಳು ಬರಿದಾಗುವಂತೆ ರಘುಸೇನೆಯು ಎಲ್ಲವನ್ನು ತಮ್ಮದಾಗಿಸಿತು. ವೈರಿ ರಾಜಕುಮಾರರು ತಮ್ಮ ಸಿಂಹಾಸನವನ್ನು ರಘುವಿಗೆ ಸಮರ್ಪಿಸಿದರು. ರಘುಸೇನೆಯು ರಾಜ್ಯಗಳನ್ನು ಆಕ್ರಮಿಸಿಕೊಂಡಿತು. ಕಾಡಿನಲ್ಲಿ ಆನೆಯು ಮುಂದುವರಿದಂತೆ ರಘುವು ವೈರಿಭೂಪಾಲರ ರಾಜ್ಯದಲ್ಲಿ ಮುಂಬರಿದನು.

ಆಸೀತ್—ಅಸ—ಭುವಿ—ಲಙ್—ಪ್ರ.ಪು.ಏ. । ಪಾದೈಃ ಪಿಬಂತಿ ಇತಿ ಪಾದಪಾಃ, ತೈಃ । ದಂತಃ ಅಸ್ಯಾಸ್ತೀತಿ ದಂತೀ । ತೇ—ದಂತಿನಃ ॥

ಫಲಂ = ಲಾಭವನ್ನು, ತ್ಯಾಜಿತೈಃ = ಕೊಡುವಂತೆ ಮಾಡಲ್ಪಟ್ಟ, ಉತ್ಖಾತೈಃ = ತಮ್ಮ ಸ್ಥಾನದಿಂದ ಉಚ್ಚಾಟಿಸಲ್ಪಟ್ಟ, ನೃಪೈಃ = ರಾಜರಿಂದ, ಫಲಂ = ಹಣ್ಣನ್ನು, ಬಹುಧಾ = ನಾನಾ ರೀತಿಯಾಗಿ, ಭಗ್ನೈಃ = ಭಂಗಗೊಳಿಸಲ್ಪಲ್ಪ, ತ್ಯಾಜಿತೈಃ = ಬೀಳುವಂತೆ ಮಾಡಲ್ಪಟ್ಟ, ಉತ್ಖಾತೈಃ = ಕೀಳಲ್ಪಟ್ಟ, ಭಗ್ನೈಃ = ಕತ್ತರಿಸಲ್ಪಟ್ಟ, ಪಾದಪೈಃ = ಮರಗಳಿಂದ, ದಂತಿನಃ ಇವ = ಆನೆ ಎಂಬುತೆ, ತಸ್ಯ= ಆ ರಾಜನ, ಮಾರ್ಗಃ = ದಾರಿಯು, ಉಲ್ಬಣಃ = ತಡೆಯಿಲ್ಲದೆ, ಪ್ರಕಾಶವುಳ್ಳದ್ದು, ಆಸೀತ್ = ಆಯಿತು. (ಪಾದಪ, ನೃಪ) (ಉತ್ಖಾತೈಃ, ಭಗ್ನ) (ಹೋಲಿಕೆ).

**34. ಪೌರಸ್ತ್ಯಾನೇವಮಾಕ್ರಾಮಂಸ್ತಾಂಸ್ತಾಞ್ಜನಪದಾಞ್ಜಯೀ ।**
**ಪ್ರಾಪ ತಾಲೀವನಶ್ಯಾಮಮುಪಕಂಠಂ ಮಹೋದಧೇಃ ॥ ೩೪ ॥**

ಹೀಗೆ ರಘುರಾಜನು ಬಿಹಾರ, ಅಂಗ, ವಂಗ, ಬಾಂಗ್ಲಾದೇಶಗಳ ನರಪತಿಗಳನ್ನು ಬಗ್ಗು ಬಡೆದು (ಸದೆಬಡಿದು) ಅವರಿಂದ ಹೇರಳ ಕಪ್ಪಕಾಣಿಕೆಗಳನ್ನು ಪಡೆದು ಅವರನ್ನು ಅಲ್ಲಲ್ಲಿಯೇ, ಆಯಾ ಪ್ರದೇಶದ ಮಾಂಡಳಿಕ ರಾಜರಾಗಿ ಇರಿಸಿ ದಂಡಯಾತ್ರೆಯನ್ನು ಮತ್ತೂ ಮುಂದುವರಿಸಿದನು, ಆ ಮೂಡಣ ಜನಪದದ ಅರಸರನ್ನು ಗೆಲಿದನು. ವಿಜಯ ಪತಾಕೆಯನ್ನು ಹಾರಿಸುತ್ತ ಮುಂದೆ ಮಹಾಸಾಗರದಿಂದ ಶೋಭಿಸುವ ಪೂರ್ವಕರಾವಳಿ ಯತ್ತ ತಿರುಗಿದನು, ಅಲ್ಲಿ ಶ್ಯಾಮರಂಜಿತ ಅಸಂಖ್ಯಾತ ತಾಳೇಮರಗಳಿಂದ ಮೆರೆಯುವ ಭೂಪ್ರದೇಶಕ್ಕೆ ಅಡಿಯಿಟ್ಟನು. ಅಲ್ಲಿ ಎತ್ತೆತ್ತ ನೋಡಿದರೂ ನಿಬಿಡವಾಗಿ ಬೆಳೆದಿರುವ ತಾಳೇಮರದ ವನಗಳು ರಘುವಿನ ಮನಸ್ಸನ್ನು ಆಕರ್ಷಿಸಿದುವು. ತಾಳಿವನಶ್ಯಾಮರಂಜಿತ ಸಾಗರದಿಂದ ಆವರಿಸಲ್ಪಟ್ಟ ಭೂಪ್ರದೇಶ. ತಾಳೇಮರಗಳಿಂದ ತುಂಬಿ ನೀಲವಾಗಿ ರಂಜಿಸುವ ಮಹೋದಧಿ ಸಮುದ್ರತೀರಪ್ರದೇಶವನ್ನು ಸೇರಿದನು. ಅಲ್ಲಿ ವಿಜಯಧ್ವಜ ವನ್ನು ನೆಟ್ಟನು.

ಪುರೋ ಭವಾಃ—ಪೌರಸ್ತ್ಯಾಃ, ತಾನ್ । ತಾಲೀವನೈಃ ಶ್ಯಾಮಮ್—ಪ್ರ— ಉಪಸರ್ಗಃ । ಆಪ್ಲೃ—ಲಿಟ್—ಪ್ರ.ಪು.ಏ. ॥

ಜಯೀ = ಜಯಶೀಲನಾದ ರಘುವು, ಏವಂ = ಈ ರೀತಿಯಾಗಿ, ಪೌರಸ್ತ್ಯಾನ್ = ಪೂರ್ವದಿಕ್ಕಿನಲ್ಲಿರುವ, ತಾನ್‌ತಾನ್ = ಆಯಾಯ, ಜನಪದಾನ್ = ದೇಶಗಳನ್ನು, ಆಕ್ರಾಮನ್ = ಆಕ್ರಮಿಸುವವನಾಗಿ, ತಾಲೀವನಶ್ಯಾಮಂ = ತಾಳೇಮರಗಳಿಂದ ನೀಲ ವಾಗಿ (ಕಪ್ಪಾಗಿ) ತೋರುವ, ಮಹೋದಧೇಃ = ಮಹೋದಧಿಯೆಂಬ ಸಮುದ್ರದ, ಉಪಕಂಠಂ = ಸಮೀಪವನ್ನು, ಪ್ರಾಪ = ಸೇರಿದನು.

**35. ಅನಮ್ರಾಣಾಂ ಸಮುದ್ಧರ್ತುಸ್ತಸ್ಮಾತ್ಸಿಂಧುರಯಾದಿವ ।**
**ಆತ್ಮಾ ಸಂರಕ್ಷಿತಃ ಸುಹ್ಮೈರ್ವೃತ್ತಿಮಾಶ್ರಿತ್ಯ ವೈತಸೀಮ್ ॥ ೩೫ ॥**

ಕ್ರಾಂತಿವೀರನಾದ ರಘುಚಕ್ರವರ್ತಿಯು ಆ ಬಳಿಕ ಬರ್ಮಾದೇಶದ ಕಡೆಗೆ ತಿರುಗಿ ಆ ದೇಶದ ಮೇಲೆ ದಾಳಿಮಾಡಿದನು. ಬರ್ಮಾದೇಶವನ್ನು ಸುಹ್ಮ ಎಂಬ ರಾಜವಂಶದ ದವರು ಆಳುತ್ತಿದ್ದರು. ಉದ್ಧಟತನದಿಂದ ವರ್ತಿಸಿದ ರಾಜರನ್ನು ರಘುವು ಮೂಲೋ ತ್ಪಾಟನೆ ಮಾಡಿದನು. (ಸುಹ್ಮದೇಶ) ಬರ್ಮಾದೇಶದ ಅರಸರು, ನದಿಯಲ್ಲಿ ವೇಗವಾದ ಪ್ರವಾಹ ಬಂದಾಗ, ನದೀದಡದಲ್ಲಿ ಬೆಳೆದಿರುವ ವೇತಸವೆಂಬ ದೊಡ್ಡ ಜಾತಿಯ ಹುಲ್ಲು, ಮೊದಲು ಬಾಗಿ, ಆಮೇಲೆ ನೆಟ್ಟಗಾಗುವಂತೆ, ಅವನಿಗೆ ವಿನಯದಿಂದ ತಲೆಬಾಗಿ ವಂದಿಸಿ, ವಿನೀತರಾಗಿ ಕಪ್ಪಕಾಣಿಕೆಗಳನ್ನು ಕೊಟ್ಟು, ಅವನ ಆಧಿಪತ್ಯವನ್ನು ಸ್ವೀಕರಿಸಿದರು. ಸುಹ್ಮರಾಜಪುತ್ರರು ನದೀದಡದಲ್ಲಿ ಬೆಳೆದಿರುವ ಜಲೀಯ ಸಸ್ಯಗಳಂತೆ, ದೊಡ್ಡ ಜಾತಿಯ ಜೊಂಡುಹುಲ್ಲಿನಂತೆ ದೊಡ್ಡ ಪ್ರವಾಹ ಬಂದಾಗ ತಲೆಬಾಗಿ ಬಚಾವಾದರು. ರಘುವಿನ ಪರಮಾಧಿಕಾರಕ್ಕೆ ತಲೆಬಾಗಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಂಡರು. ಆಮೇಲೆ ಪ್ರವಾಹ

ಕಡಿಮೆಯಾದಾಗ ಜೊಂಡುಹುಲ್ಲು ತಾನಾಗಿ ನೆಟ್ಟಗಾಗುವಂತೆ ಆ ರಾಜರೂ ನೆಟ್ಟಗಾದರು. ರಘುವು ಹೊರಟುಹೋದಮೇಲೆ ಅವರು ಸ್ವತಂತ್ರರಾದರು.

ನ ನಮ್ರಾಃ, ಅನಮ್ರಾಃ, ತೇಷಾಮ್ । ಸಿಂಧೋಃ ರಯಃ, ತಸ್ಮಾತ್ । ವೇತಸಃ ಇಯಂ ವೈತಸೀ, ತಾಮ್ ॥

ಅನಮ್ರಾಣಾಂ = ಅವಿಧೇಯರನ್ನು, ಸಮುದ್ಧರ್ತುಃ = ಅವರ ದೇಶದಿಂದ ಎಬ್ಬಿಸಿ ಓಡಿಸುವ, ಸಿಂಧುರಯಾತ್ ಇವ = ನದೀವೇಗದಂತೆ, ಇವನು, ಸುಹ್ಮೈಃ = ಬರ್ಮಾ ದೇಶದ ರಾಜಪುತ್ರರಿಂದ, ವೈತಸೀಂ = ವೇತಸಹುಲ್ಲಿನ ಸಂಬಂಧವಾದ, ವೃತ್ತಿಂ = ನಡತೆ (ಬಗ್ಗುವಿಕೆ), ಆಶ್ರಿತ್ಯ = ಹೊಂದಿ, ಆತ್ಮಾ = ಶರೀರವು, ರಕ್ಷಿತಃ = ಕಾಪಾಡಲ್ಪಟ್ಟಿತು.

**36. ವಂಗಾನುತ್ಖಾಯ ತರಸಾ ನೇತಾ ನೌಸಾಧನೋದ್ಯತಾನ್ ।**
**ನಿಚಖಾನ ಜಯಸ್ತಂಭಾನ್ ಗಂಗಾಸ್ರೋತೋಂತರೇಷು ಸಃ ॥ ೩೬ ॥**

ತನ್ನ ನೌಕಾಬಲದ ಸಹಾಯದಿಂದ ಆ ರಾಜವಂಶ ಕಲ್ಪದ್ರುಮನು, ಆ ಮಹಾ ನೇತಾರನು (ನಾಯಕನು) ತನ್ನನ್ನು ಇದಿರಿಸಿ ವಂಗರಾಜರನ್ನು ಗೆಲಿದು ಗಂಗಾನದಿಯ ಉಪನದಿಗಳ ಮಧ್ಯೆ, ಗಂಗಾವಾರಿಯ ಮಧ್ಯೆಯಿರುವ ಅನೇಕ ದ್ವೀಪಗಳನ್ನು ತನ್ನದಾಗಿಸಿ, ಅಲ್ಲಿ ವಿಜಯದ ಕುರುಹಾಗಿ ಜಯಸ್ತಂಭಗಳನ್ನು ನೆಡಿಸಿ ಮುಂದುವರಿದನು. ನೌಕಾಬಲ ದಿಂದ ಸನ್ನದ್ಧರಾದ ವಂಗರಾಜರನ್ನು (ವಂಗಾಧೀಶರನ್ನು) ನೌಕಾಬಲದಿಂದಲೇ ಎದುರಿಸಿ ಅವರ ಆಟವನ್ನು ಅಡಗಿಸಿದನು. ಗಂಗಾವಾರಿಯಲ್ಲಿ ಅವನ ನೌಕೆಗಳು ಅಜೇಯವಾಗಿ, ರಾಜಾರೋಪವಾಗಿ ಓಡಾಡಿದುವು.

ನಾವಃ ಏವ ಸಾಧನಾನಿ, ನೌಸಾಧನಾನಿ । ನೌಸಾಧನೈಃ ಉದ್ಯತಾಃ ತಾನ್ । ಜಯ ಸೂಚಕಾಃ ಸ್ತಂಭಾಃ, ತಾನ್ । ಗಂಗಾಯಾಃ ಸ್ರೋತಾಂಸಿ, ಗಂಗಾಸ್ರೋತಾಂಸಿ, ಗಂಗಾ ಸ್ರೋತಸಾಂ ಅಂತರಾಣಿ, ತೇಷು । ನಿ ಉಪಸರ್ಗ—ಚಖಾನ—ಚಖ್ನತುಃ—ಚಖ್ನುಃ । ಚಖನಿಥ—ಚಖ್ನಥುಃ—ಚಖ್ನ । ಚಖಾನ, ಚಖನ—ಚಖ್ನಿವ—ಚಖ್ನಿಮ । ಖನು— ಅವಧಾರಣೇ—ಲಿಟ್—ಪ್ರ.ಪು.ಏ. ॥

ನೇತಾ = ನಾಯಕನಾದ, ಸಃ = ಆ ರಘುರಾಜನು, ನೌಸಾಧನೋದ್ಯತಾನ್ = ಹಡಗಿನ ಸಾಧನಗಳಿಂದ ಯುದ್ಧಕ್ಕೆ ಸನ್ನದ್ಧರಾದ, ವಂಗಾನ್ = ಬಂಗಾಳದೇಶದ ರಾಜನನ್ನು, ತರಸಾ = ಬಲದಿಂದ, ಉತ್ಖಾಯ = ಉಚ್ಚಾಟನೆ ಮಾಡಿ, ಗಂಗಾಸ್ರೋತೋಂತರೇಷು = ಗಂಗಾನದಿಯ ಪ್ರವಾಹದ ಮಧ್ಯದಲ್ಲಿರುವ ದ್ವೀಪಗಳಲ್ಲಿ (ಕುರುವೆಗಳಲ್ಲಿ), ಜಯಸ್ತಂ ಭಾನ್ = ವಿಜಯಧ್ವಜ, ಪತಾಕೆಗಳನ್ನು, ನಿಚಖಾನ = ಸ್ಥಾಪಿಸಿದನು.

**37. ಆಪಾದಪದ್ಮಪ್ರಣತಾಃ ಕಲಮಾ ಇವ ತೇ ರಘುಮ್ ।**
**ಫಲೈಃ ಸಂವರ್ಧಯಾಮಾಸುರುತ್ಖಾತ ಪ್ರತಿರೋಪಿತಾಃ ॥ ೩೭ ॥**

ಆ ರಾಜಕುಲತಿಲಕರು ರಘುವಿನ ಕೆಂದಾವರೆಯನ್ನು ಹೋಲುವ ಪಾದಕಮಲಗಳಿಗೆ ಎರಗಿ ಕಪ್ಪಕಾಣಿಕೆಗಳನ್ನು, ಅನರ್ಘ್ಯರತ್ನಗಳನ್ನಿತ್ತು ರಘುವನ್ನು ಗೌರವಿಸಿದರು. ಇದರಿಂದ ಪೂರ್ಣತೃಪ್ತನಾದ ರಘುಮಹಾರಾಜನು ಅವರನ್ನು ಉಚ್ಚಾಟಿಸದೆ ಅವರವರ

ಸ್ಥಾನದಲ್ಲಿ ನಿಲ್ಲಿಸಿ ಅವರನ್ನು ಗೌರವಿಸಿದನು. ಹೇಗೆ ಕಳಮವೆಂಬ ಭತ್ತದ ಪೈರನ್ನು ಒಮ್ಮೆ ಕಿತ್ತು ಮರುನಾಟಿಮಾಡಿದಾಗ ಹೆಚ್ಚಿನ ಧಾನ್ಯಗಳನ್ನು ಅಥವಾ ಫಲಗಳನ್ನು ಪಡೆಯುವಂತೆ ಆ ವಂಗನೃಪರು ರಘುವಿಗೆರಗಿ ಅಧಿಕಫಲಾನುಭಾಗಿಗಳಾದರು.

ಭತ್ತದ ಸಸಿಗಳನ್ನು ಕಿತ್ತು ನಾಟಿಮಾಡಿದಾಗ ಅವು ತಲೆಬಾಗುತ್ತವೆ. ಆಮೇಲೆ ಅವು ದೃಢವಾಗಿ ಬೆಳೆಯುತ್ತಾ ಉತ್ತಮ ಫಲವನ್ನು ಅಂದರೆ ಭತ್ತದ ತೆನೆಗಳನ್ನು ಬಿಟ್ಟು ಕಂಗೊಳಿಸುತ್ತವೆ. ಅದರಂತೆ ಆ ನೃಪರು ಒಮ್ಮೆ ತಲೆಬಾಗಿ ತಮ್ಮಲ್ಲಿದ್ದುದನೆಲ್ಲಾ ತಮ್ಮ ಅಧಿರಾಜನಿಗೆ ತೆತ್ತು ಆ ಬಳಿಕ ಅವರು ತಮ್ಮದೇ ಆದ ರೀತಿಯಲ್ಲಿ ಪ್ರವರ್ಧಮಾನರಾಗಿ ಅಭಿವೃದ್ಧಿ ಹೊಂದುವರು.

ಅನ್ವಯ :—ಆಪಾದಪದ್ಮಪ್ರಣತಾಃ ಉತ್ಖಾತಪ್ರತಿರೋಪಿತಾಃ ಕಲಮಾಃ ಇವ ತೇ ರಘುಂ ಫಲೈಃ ಸಂವರ್ಧಯಾಮಾಸುಃ ॥

ಪಾದೌ ಪದ್ಮೇ ಇವ—ಪಾದಪದ್ಮೇ। ಪಾದಪದ್ಮೇ ಅಭಿವ್ಯಾಪ್ಯ—ಆಪಾದಪದ್ಮಂ। ಆಪಾದಪದ್ಮಂಪ್ರಣತಾಃ। ಉತ್ಖಾತಾಶ್ಚ ತೇ ಪ್ರತಿರೋಪಿತಾಶ್ಚ—ಉತ್ಖಾತಪ್ರತಿ ರೋಪಿತಾಃ। ಸಮ್—ಉಪಸರ್ಗ, ವೃಧು—ವೃದ್ಧೌ—ಣಿಜಂತದ ಮೇಲೆ ಲಿಟ್—ಪ್ರ.ಪು.ಬ. ॥

ಆಪಾದಪದ್ಮಪ್ರಣತಾಃ = ಪಾದಪದ್ಮಗಳಿಗೆ ಎರಗಿರುವ, ಉತ್‌ಖಾತ್‌ಪ್ರತಿರೋಪಿತಾಃ = ಮೊದಲು ಸ್ಥಾನದಿಂದ ಎಬ್ಬಿಸಿ ಆಮೇಲೆ ಪುನಃ ಅವರ ಸ್ಥಾನದಲ್ಲಿ ಅವರನ್ನು ನೆಲೆಗೊಳಿಸಿ, ತೇ = ಆ ರಾಜರು, ಕಲಮಾ ಇವ = ಭತ್ತದ ಪೈರಿನಂತೆ, ರಘುಂ = ರಘು ರಾಜನನ್ನು, ಫಲೈಃ = ಧನದಿಂದ (ಭತ್ತದ ತೆನೆಗಳಿಂದ). ಸಂವರ್ಧಯಾಮಾಸುಃ = ಅಧಿಕ್ಯವುಳ್ಳವನನ್ನಾಗಿ ಮಾಡಿದರು.

ಕಲಮಾ ಇವ ಶಾಲಿವಿಶೇಷಾ ॥

**38. ಸ ತೀರ್ತ್ವಾ ಕಪಿಶಾಂ ಸೈನ್ಯೈರ್ಬದ್ಧದ್ವಿರದಸೇತುಭಿಃ ।**
**ಉತ್ಕಲಾದರ್ಶಿತಪಥಃ ಕಲಿಂಗಾಭಿಮುಖೋ ಯಯೌ ॥ ೩೮ ॥**

ಮುಂದೆ ಕಪಿಶಾನದಿಯು ಅಡ್ಡವಾಗಲು ಆ ನದಿಯ ಪಾತ್ರದಲ್ಲಿ ಮದಿಸಿದ ಮದ್ದಾನೆಗಳನ್ನು, ಪೇರಾನೆಗಳನ್ನು, ಸಾಲುಸಾಲಾಗಿ ನಿಲ್ಲಿಸಿ ಆನೆಗಳ ಸೇತುವೆಯನ್ನೇ ರಚಿಸಿ, ಆ ಮೂಲಕ (ಅದರ ಬೆನ್ನಿನ ಮೇಲೆ) ವೇಗದಿಂದ ಹರಿಯುವ ಕಪಿಶಾನದಿಯನ್ನು ದಾಟಿ ಒರಿಸ್ಸಾ ರಾಜ್ಯವನ್ನು ಆಕ್ರಮಿಸಿದನು. ಶಾಂತಿಪ್ರಿಯರಾದ ಉತ್ಕಲದ ರಾಜಪ್ರಮುಖರು ರಘುವನ್ನು ಪ್ರತಿಭಟಿಸದೆ ಶರಣಾಗತರಾದರು. ಅವರ ಆತಿಥ್ಯವನ್ನು ಸ್ವೀಕರಿಸಿ, ಅವರನ್ನು ಮಾಂಡಲೀಕರನ್ನಾಗಿ ಮಾಡಿ ರಘುಮಹೋದಯನು ಅವರ ಮಾರ್ಗದರ್ಶನದಲ್ಲಿ ದಿಗ್ವಿಜಯವನ್ನು ಮುಂದುವರಿಸಿ ಕಳಿಂಗಾಭಿಮುಖನಾಗಿ ಹೊರಟನು.

ದ್ವಿರದಾ ಏವ ಸೇತವಃ। ಬದ್ಧಾಃ ದ್ವಿರದಸೇತವಃ ಯೈಸ್ತೇ—ಬದ್ಧದ್ವಿರದಸೇತುಭಿಃ ಏವ ಸೇತವೋ ಯೈಸ್ತೈಃ ಸೈನ್ಯೈಃ ಕಪಿಶಾಂ ನಾಮ ನದೀಂ ತೀರ್ತ್ವಾ। ಉತ್ಕಲೈ ಆದರ್ಶಿತಃ ಪಂಥಾಃ ಯಸ್ಯ ಸಃ—ಉತ್ಕಲಾದರ್ಶಿತಪಥಃ। ಕಲಿಂಗಸ್ಯ ಅಭಿಮುಖಃ। ಯಯೌ—ಯಾ—ಪ್ರಾಪಣೇ—ಲಿಟ್—ಪ್ರ.ಪು.ಏ. ॥

ಸಃ = ರಘುರಾಜನು, ಬದ್ಧದ್ವಿರದಸೇತುಭಿಃ = ಆನೆಗಳಿಂದ ಕಟ್ಟಿರುವ ಸೇತುವೆಗಳ ಮೂಲಕ, ಸೈನ್ಯೈಃ = ಸೇನೆಗಳಿಂದ, ಕಪಿಶಾಂ = ಕಪಿಶಾ ಎಂಬ ನದಿಯನ್ನು, ತೀರ್ತ್ವಾ = ದಾಟಿ, ಉತ್ಕಲಾದರ್ಶಿತಪಥಃ = ಒರಿಸ್ಸಾ ದೇಶದವರು (ಉತ್ಕಲಾ) ತೋರಿಸಿದ ಮಾರ್ಗದ ಮೂಲಕ, ಕಲಿಂಗಾಭಿಮುಖಃ = ಕಳಿಂಗದೇಶಕ್ಕೆ ಎದುರಾಗಿ, ಯಯೌ = ಹೋದನು.

**39. ಸ ಪ್ರತಾಪಂ ಮಹೇಂದ್ರಸ್ಯ ಮೂರ್ಧ್ನಿ ತೀಕ್ಷ್ಣಂ ನ್ಯವೇಶಯತ್ ।**
**ಅಂಕುಶಂ ದ್ವಿರದಸ್ಯೇವ ಯಂತಾ ಗಂಭೀರವೇದಿನಃ ॥ ೩೯ ॥**

ಅವನು ತನ್ನ ಪ್ರತಾಪ ಮತ್ತು ಪೌರುಷದ ಮಹಿಮೆಯಿಂದ ಕಾಳಿಂಗರಾಜ್ಯವನ್ನು ಗೆದ್ದು ಮಹೇಂದ್ರ ಪರ್ವತದ ಮೇಲೆ (ಮಹೇಂದ್ರಾಚಲ) ಮಹೇಂದ್ರಪರ್ವತದ ಉನ್ನತೋನ್ನತ ಶಿಖರದ ಮೇಲೆ ತನ್ನ ಬಾವುಟವನ್ನು ನೆಟ್ಟನು. ಹೇಗೆ ಗಂಭೀರವೇದಿ ಯೆಂಬ ಗಜರಾಜನ ಮಸ್ತಕದ ಮೇಲೆ ಚತುರನಾದ ಮಾವುತನು ತನ್ನ ಚೂಪಾದ ಅಂಕುಶದಿಂದ ಇರಿಯುವಂತೆ ಆ ರಾಜಕುಲತಿಲಕನು ಮಹೇಂದ್ರಾಚಲಮಸ್ತಕದ ಇಕ್ಷ್ವಾಕು ಧ್ವಜವನ್ನು ಸದ್ದುಗದ್ದಲವಿಲ್ಲದೆ ನೆಟ್ಟನು. ಧೈರ್ಯಸಾಹಸಸಂಪನ್ನರಾದ ಕಾಳಿಂಗರನ್ನು ಕೌಶಲ್ಯದಿಂದ ರಣರಂಗದಲ್ಲಿ ಸೋಲಿಸಿ ಆ ರಾಜ್ಯವನ್ನು ದರ್ಪದಿಂದ ಗೆಲಿದನು. ಗಂಭೀರ ವೇದಿಯೆಂಬ ಕಾಡಾನೆಯು ಕ್ರೂರವಾದ ಚೂಪಾದ ಅಂಕುಶದ ಏಟನ್ನು, ರಕ್ತಮಾಂಸವು ಹೊರಹರಿದರೂ, ರಕ್ತಸ್ರಾವವಾದರೂ ಸಹಿಸಿಕೊಂಡು ಮಾವುತನ ಅಂಕಿತಕ್ಕೆ ಒಳಗಾಗು ವಂತೆ ಯುದ್ಧೋತ್ಸಾಹಿಗಳಾದ ಕಾಳಿಂಗರು ರಘುವಿನ ಅಧೀನರಾದರು. ರಘುವಿನ ಸಾರ್ವಭೌಮತ್ವವನ್ನು ಸ್ವೀಕರಿಸಿದರು. ಏಳು ಶ್ರೇಷ್ಠಕುಲ ಪರ್ವತದಲ್ಲಿ ಒಂದಾದ ಮಹೇಂದ್ರಪರ್ವತದ ಶಿಖರದ ಮೇಲೆ ಸೂರ್ಯವಂಶದ ಧ್ವಜವನ್ನು ನೆಟ್ಟು ತನ್ನ ಪ್ರತಾಪವನ್ನು ಮೆರೆದನು.

ಏಳು (ಸಪ್ತ) ಕುಲಪರ್ವತಗಳು—ಮಹೇಂದ್ರ, ಮಲಯ. ಸಹ್ಯ, ಶಕ್ತಿಮಾನ್, ಋಕ್ಷ ಪರ್ವತ, ವಿಂಧ್ಯ ಮತ್ತು ಪಾರಿಯಾತ್ರ.

ನಿ—ಉಪಸರ್ಗ, ಅವೇಶಯತ್—ವಿಶ-ಪ್ರವೇಶನೇ—ಲಙ್ (ಣಿಜಂತ) ಪ್ರ.ಪು.ಏ. । ದ್ವೌ ರದೌ ಯಸ್ಯ ಸಃ ದ್ವಿರದಃ, ತಸ್ಯ॥

ಸಃ = ಆ ರಘುರಾಜನು, ಮಹೇಂದ್ರಸ್ಯ = ಮಹೇಂದ್ರವೆಂಬ ಕುಲಪರ್ವತದ, ಮೂರ್ಧ್ನಿ = ಶಿಖರದಲ್ಲಿ, ತೀಕ್ಷ್ಣಂ = ದುಃಸಹವಾದ, ಪ್ರತಾಪಂ = ಪರಾಕ್ರಮವನ್ನು, ಯಂತಾ = ಸಾರಥಿಯು (ಮಾವಟಿಗನು), ಗಂಭೀರವೇದಿನಃ = ವಿಶೇಷಲಕ್ಷಣವುಳ್ಳ, ದ್ವಿರದಸ್ಯ= ಆನೆಯ, ಮೂರ್ಧ್ನಿ = ತಲೆಯಲ್ಲಿ, ತೀಕ್ಷ್ಣಂ = ಹರಿತವಾದ, ಅಂಕುಶಂ ಇವ = ಅಂಕುಶವನ್ನೆಂಬಂತೆ, ನ್ಯವೇಶಯತ್ = ಇರಿಸಿದನು.

**40. ಪ್ರತಿಜಗ್ರಾಹ ಕಾಲಿಂಗಸ್ತಮಸ್ತ್ರೈರ್ಗಜಸಾಧನಃ ।**
**ಪಕ್ಷಚ್ಛೇದೋದ್ಯತಂ ಶಕ್ರಂ ಶಿಲಾವರ್ಷೀವ ಪರ್ವತಃ ॥ ೪೦ ॥**

ಕಳಿಂಗರಾಜನ ಗಜಸೇನೆಯು ಲೋಕ(ವಿಶ್ವ)ವಿಖ್ಯಾತವಾದುದು. ಕಾಳಿಂಗನ ಗಜಾ ರೋಹಿಗಳು ನಾನಾವಿಧದ ಶಸ್ತ್ರಾಸ್ತ್ರಗಳಿಂದ ಸಜ್ಜಿತರಾಗಿ ರಘುಸೇನೆಯನ್ನು ಇದಿರಿಸಿದರು.

ಭಯಂಕರವಾದ ಯುದ್ಧವು ನಡೆಯಿತು. ಪುರಾಣಕಾಲದಲ್ಲಿ ಮಹೇಂದ್ರನಿಗೂ ಪರ್ವತಗಳಿಗೂ ನಡೆದ ಯುದ್ಧದಲ್ಲಿ ಪರ್ವತಗಳ ರೆಕ್ಕೆಗಳನ್ನು ಇಂದ್ರನು ತನ್ನ ವಜ್ರಾಯುಧದಿಂದ ಕತ್ತರಿಸಿ ಬೆಟ್ಟಗುಡ್ಡಗಳು ಹಾರಿಹೋಗದಂತೆ (ಹಾರುತ್ತಾಹೋಗದಂತೆ) ತಡೆದನು. ಅವುಗಳನ್ನು ಭೂಮಿಯ ಮೇಲೆ ವಜ್ರಿಯು ವಜ್ರಾಯುಧದ ಮೂಲಕ ಸ್ಥಿರಗೊಳಿಸಿದನು. ಆಗ ನಡೆದ ಹೋರಾಟದಲ್ಲಿ ಪರ್ವತಾವಳಿಗಳು ಇಂದ್ರನ ಮೇಲೆ ಕಲ್ಲುಬಂಡೆಗಳ ಸುರಿಮಳೆಯನ್ನೇ ಸುರಿಸಿ ಎದುರಿಸಿದಂತೆ ಕಳಿಂಗರಾಜನ ಗಜಾರೋಹಿಗಳು (ಗಜಘಟೆ) ಶಸ್ತ್ರಾಸ್ತ್ರಗಳ ಸುರಿಮಳೆಯನ್ನೇ ರಘುವಿನ ಮೇಲೆ ಸುರಿದರು. ಆದರೆ ತಾವೇ ಸೋತುಶರಣಾದರು. ಸುರೇಂದ್ರನಿಗೆ ಸೋತ ಪರ್ವತರಾಜರಂತೆ (ಕುಲಪರ್ವತಗಳಂತೆ).

ಪ್ರತಿ ಉಪಸರ್ಗ, ಜಗ್ರಾಹ—ಜಗೃಹತುಃ—ಜಗೃಹುಃ । ಜಗ್ರಹಿಥ—ಜಗೃಹಥುಃ—ಜಗೃಹ। ಜಗ್ರಾಹ, ಜಗ್ರಹ—ಜಗೃಹಿವ—ಜಗೃಹಿಮ। ಗ್ರಹ—ಉಪಾದಾನೇ—ಲಿಟ್—ಪ್ರ.ಪು ಏ.। ಗಜಾಃ ಸಾಧನಂ ಯಸ್ಯ ಸಃ—ಗಜಸಾಧನಃ। ಪಕ್ಷಾಣಾಂ ಛೇದಃ ಪಕ್ಷಚ್ಛೇದೇ ಉದ್ಯತಃ—ಪಕ್ಷಚ್ಛೇದೋದ್ಯತಃ, ತಮ್। ಶಿಲಾಃ ವರ್ಷತಿ—ಇತಿ ಶಿಲಾವರ್ಷೀ ॥

ಗಜಸಾಧನಃ = ಆನೆಗಳ ಸೈನ್ಯಬಲವುಳ್ಳ (ಕರಿಘಟೆ), ಕಾಲಿಂಗ = ಕಳಿಂಗದೇಶದ ರಾಜಪ್ರಮುಖ, ಅಸ್ತ್ರೈಃ = ಆಯುಧಗಳಿಂದ, ತಂ = ಆ ರಘುರಾಜನನ್ನು, ಪಕ್ಷಚ್ಛೇದೋದ್ಯತಂ = ರೆಕ್ಕೆಗಳನ್ನು ಕತ್ತರಿಸಬಲ್ಲ, ಶಕ್ರಂ = ಇಂದ್ರನನ್ನು, ಶಿಲಾವರ್ಷೀ = ಕಲ್ಲುಗಳ ಮಳೆಗರೆವ, ಪರ್ವತ ಇವ = ಪರ್ವತಗಳಂತೆ, ಪ್ರತಿಜಗ್ರಾಹ = ಎದುರಿಸಿದನು.

**41. ದ್ವಿಷಾಂ ವಿಷಹ್ಯ ಕಾಕುತ್ಸ್ಥಸ್ತತ್ರ ನಾರಾಚದುರ್ದಿನಮ್ ।**
**ಸನ್ಮಂಗಲಸ್ನಾತ ಇವ ಪ್ರತಿಪೇದೇ ಜಯಶ್ರಿಯಮ್ ॥ ೪೧ ॥**

ಕಳಿಂಗರಾಜನಿಗೂ ರಘುಸಾರ್ವಭೌಮನಿಗೂ ಮಹೇಂದ್ರಪರ್ವತವಲಯದಲ್ಲಿ (ಪ್ರದೇಶದಲ್ಲಿ) ಸಿಖರಹೋರಾಟನಡೆಯಿತು. ಕಾಕುತ್ಸ್ಥನು ಕಳಿಂಗಸೈನಿಕರು ಎಸೆದ ಕ್ರೂರವಾದ ಕಬ್ಬಿಣದ ಬಾಣಗಳ ಸುರಿಮಳೆಯಲ್ಲಿ ಪವಿತ್ರಸ್ನಾನವನ್ನು ಗೈದು ಯಶಸ್ವಿಯಾದನು. ಆ ಬಾಣಾಘಾತವನ್ನು ಸಹಿಸಿ, ಯುದ್ಧವಿದ್ಯಾವಿಶಾರದನಾದ ಅವನು ಪ್ರತ್ಯಸ್ತ್ರಗಳ ಸುರಿಮಳೆಯನ್ನೇ ಹೂಡಿ ಅವರ ದರ್ಪವನ್ನು ಅಡಗಿಸಿದನು. ವೀರಸ್ನಾನಗೈದು, ಶಾಸ್ತ್ರೋಕ್ತವಾದ ಮಂಗಳಸ್ನಾನಗೈದು ಜಯಲಕ್ಷ್ಮಿಯ ಕಟಾಕ್ಷಕ್ಕೆ ಪಾತ್ರನಾಗಿ ಅವನು ವಿಜಯಿಯಾದನು. ಜಯಶ್ರೀಯು ಒಲಿದು ಅವನನ್ನು ಸೇರಿದಳು. ಅವನ ಭುಜವನ್ನು ಆಶ್ರಯಿಸಿ ಅಲ್ಲಿಯೇ ನೆಲೆನಿಂತಳು.

ಅನ್ವಯ :—ಕಾಕುತ್ಸ್ಥಃ ತತ್ರ ದ್ವಿಷಾಂ ನಾರಾಚದುರ್ದಿನಮ್ ವಿಷಹ್ಯ ಸನ್ಮಂಗಲಸ್ನಾತ ಇವ ಜಯಶ್ರಿಯಮ್ ಪ್ರತಿಪೇದೇ ॥

ನಾರಾಚಾನಾಂ ದುರ್ದಿನಮ್। ಸನ್ಮಂಗಲಾರ್ಥಂ ಸ್ನಾತಃ। ಪ್ರತಿ—ಉಪಸರ್ಗ—ಪದಗತೌ—ಲಿಟ್—ಪ್ರ ಪು.ಏ. ॥

ಕಾಕುತ್ಸ್ಥ = ರಘುಮಹೀಪತಿ, ತತ್ರ = ಆ ಮಹೇಂದ್ರಪರ್ವತದಲ್ಲಿ, ದ್ವಿಷಾಂ = ಶತ್ರುಗಳ, ನಾರಾಚದುರ್ದಿನಂ = ಬಾಣಗಳ ಸುರಿಮಳೆಯನ್ನು, ವಿಷಹ್ಯ = ಸಹಿಸಿ,

ಸನ್ಮಂಗಲಸ್ನಾತ ಇವ = ಶಾಸ್ತ್ರಾನುಸಾರ ವಿಜಯಮಂಗಲಸ್ನಾನದೂಡಿ, ಜಯಶ್ರಿಯಂ = ಜಯಲಕ್ಷ್ಮಿ(ಜಯವಧು)ಯನ್ನು, ಪ್ರತಿಪೇದೇ = ಹೊಂದಿದನು.

**42. ತಾಂಬೂಲೀನಾಂ ದಲೈಸ್ತತ್ರ ರಚಿತಾ ಪಾನಭೂಮಯಃ ।**
**ನಾರಿಕೇಲಾಸವಂ ಯೋಧಾಃ ಶಾತ್ರವಂಚ ಪಪುರ್ಯಶಃ ॥ ೪೨ ॥**

ಅಲ್ಲಿ ಆ ಮಹೇಂದ್ರಪರ್ವತದಲ್ಲಿ ಆ ವೈರಿರಾಜರ ಭೂಪ್ರದೇಶದಲ್ಲಿ ರಘುನೃಪನ ವೀರಯೋಧರು ಪಾನಪಾಟಿಕೆಗಳನ್ನು ರಚಿಸಿ ವೀಳ್ಯದೆಲೆಯ ದೊನ್ನೆಗಳಲ್ಲಿ ತೆಂಗಿನಮರದ ನೊರೆನೊರೆಯಾದ ಹೆಂಡವನ್ನು, ವೈರಿಗಳ ಜಸದೊಂದಿಗೆ ಈಂಟಿ (ಕುಡಿದು) ತೃಪ್ತಿ ಹೊಂದಿದರು. ಅವರು ರಘುವಿನ ಸೇನೆಯ ಧೀರಪುರುಷರು. ತೆಂಗಿನಮರದ ಮದ್ಯದ (ಕಳ್ಳು, ಸೇಂದಿ, ಸೆರೆ) ಸವಿಯನ್ನು ಸವಿದರು. ಅದನ್ನು ಸವಿಯುವಾಗ ಅದರೊಂದಿಗೆ ವೈರಿಯೋಧರ ವೀರರಸವನ್ನೂ ಸವಿಯಾಗಿ ಸವಿದರು (ಮೆದ್ದರು). ಅದು ಅಲ್ಲದೆ ತಾವು ಗಳಿಸಿದ ವಿಜಯದಿಂದ ಶತ್ರುಗಳು ಈವರೆಗೆ ಗಳಿಸಿದ ಕೀರ್ತಿಶ್ರೀಯನ್ನೂ ಅಪಹರಿಸಿ ಕೃತಾರ್ಥರಾದರು.

ಅನ್ವಯ :—ತತ್ರ ಯೋಧಾಃ ರಚಿತಾಪಾನಭೂಮಯಃ ತಾಂಬೂಲೀನಾಂ ದಲೈಃ ನಾರಿಕೇಲಾಸವಂಶಾತ್ರವಂಚ ಯಶಃ ಪಪುಃ ॥

ಆಪಾನಸ್ಯ ಭೂಮಯಃ । ರಚಿತಾಃ ಆಪಾನಭೂಮಯಃ ಯೈಸ್ತೇ ರಚಿ—ಯಃ । ನಾರಕೇಲಸ್ಯ ಆಸವಃ, ತಂ । ಶತ್ರೋಃ ಇದಂ, ಶಾತ್ರವಮ್ । ಪಪೌ—ಪಪುಃ—ಇತ್ಯಾದಿ । ಪಾ—ಪಾನೇ—ಲಿಟ್—ಪ್ರ.ಪು.ಬ. ॥

ತತ್ರ= ಆ ಮಹೇಂದ್ರಪರ್ವತದಲ್ಲಿ, ಯೋಧಾಃ = ಯೋಧರು, ಭಟರು, ಸೈನಿಕರು, ರಚಿತಾಪಾನಭೂಮಯಃ = ಪಾನಕ್ಕೆ ಯೋಗ್ಯವಾಗಿರುವ ಸ್ಥಳವುಳ್ಳವರಾಗಿ (ವಿರಚಿಸಿ), ನಾರಿಕೇಲಾಸವಂ = ತೆಂಗಿನಮರದ ಹೆಂಡವನ್ನು, ತಾಂಬೂಲೀನಾಂ = ವೀಳ್ಯದ ಬಳ್ಳಿ, ದಲೈಃ = ಎಲೆಗಳಿಂದ, ಪಪುಃ = ಕುಡಿದರು, ಶಾತ್ರವಂ = ಶತ್ರು ಸಂಬಂಧವಾದ, ಯಶಶ್ಚ = ಕೀರ್ತಿಯನ್ನೂ, ಪಪುಃ = ಅಪಹರಿಸಿದರು.

**43. ಗೃಹೀತ ಪ್ರತಿಮುಕ್ತಸ್ಯ ಸ್ವಧರ್ಮವಿಜಯೀ ನೃಪಃ ।**
**ಶ್ರಿಯಂ ಮಹೇಂದ್ರನಾಥಸ್ಯ ಜಹಾರ ನ ತು ಮೇದಿನೀಮ್ ॥ ೪೩ ॥**

ಕಳಿಂಗರಾಜನು ಧರ್ಮಯುದ್ಧದಲ್ಲಿ ಸೋತು ಸೆರೆಸಿಕ್ಕಿದನು. ಶರಣಾಗತನಾದ ಕಾಳಿಂಗನನ್ನು, ಶರಣಾಗತವತ್ಸಲನಾದ ರಘುವು ಅವನನ್ನು ಗೌರವಿಸಿ ಸ್ವತಂತ್ರಗೊಳಿಸಿದನು (ಬಂಧಮುಕ್ತ). ಅಲ್ಲಿ ಧರ್ಮವಿಜಯಿಯಾದ, ಧರ್ಮಸಾಮ್ರಾಟನಾದ ರಘು ಚಕ್ರವರ್ತಿಯು ತನ್ನ ಔದಾರ್ಯವನ್ನು ಮೆರೆದನು. ಮಹೇಂದ್ರೇಶ್ವರನ (ಮಹೇಂದ್ರ ನಾಥನ, ಮಹೇಂದ್ರಾಧಿಪತಿಯ) ಸಿರಿಸಂಪತ್ತನ್ನು ಮಾತ್ರ ಅಪಹರಿಸಿ, ಅವನ ಭೂಮಿ ಸಾಮ್ರಾಜ್ಯವನ್ನು ಅವನಲ್ಲಿರಿಸಿ ತಾನು ಪರಮಗುಣಾಢ್ಯ(ಗುಣವಂತ)ನೆನಿಸಿದನು. ಮೇದಿನಿ ಯನ್ನು ಹಿಂದಕ್ಕೆ ಕೊಟ್ಟು ಪೊಗದಿಯನ್ನು ಸ್ವೀಕರಿಸಿ ಮುಂದಕ್ಕೆ ಸಾಗಿದನು. ಅವನ ರಾಜ್ಯವನ್ನು ಕಬಳಿಸಲಿಲ್ಲ.

ಅನ್ವಯ :— ಧರ್ಮವಿಜಯೀ ಸ ನೃಪಃ ಗೃಹೀತ ಪ್ರತಿಮುಕ್ತಸ್ಯ ಮಹೇಂದ್ರನಾಥಸ್ಯ ಶ್ರಿಯಂ ಜಹಾರ ನ ತು ಮೇದಿನೀಮ್ ॥

ಗೃಹೀತಶ್ಚಾಸೌ ಪ್ರತಿಮುಕ್ತಶ್ಚ। ತಸ್ಯ। ವಿಜೇತುಂ ಶೀಲಮಸ್ಯ ವಿಜಯೀ । ನೄನ್ ಪಾತಿ ಇತಿ ನೃಪಃ । ಮಹೇಂದ್ರಸ್ಯ ನಾಥಃ । ತಸ್ಯ। ಜಹಾರ—ಜಹ್ರತುಃ—ಜಹ್ರುಃ । ಹೃಞ್—ಹರಣೇ—ಲಿಟ್—ಪ್ರ.ಪು.ಏ. ॥

ಧರ್ಮವಿಜಯೀ = ಧರ್ಮಯುದ್ಧದಿಂದ ಜಯಗಳಿಸುವ, ಸಃ ನೃಪಃ = ಆ ರಘು ರಾಜನು, ಗೃಹೀತಪ್ರತಿಮುಕ್ತಸ್ಯ=ಸೆರೆಹಿಡಿದು ಮರಳಿ ಬಿಡಲ್ಪಟ್ಟ, ಮಹೇಂದ್ರನಾಥಸ್ಯ= ಕಳಿಂಗರಾಜನ, ಶ್ರಿಯಂ = ಐಶ್ವರ್ಯವನ್ನು, ಜಹಾರ = ತೆಗೆದುಕೊಂಡನು, ಮೇದಿನೀಂ = ಭೂಮಿಯನ್ನು (ಅವನಿಯನ್ನು). ನ ತು ಜಹಾರ = ಅಪಹರಿಸಲಿಲ್ಲ (ಧರ್ಮವಿಜಯೀ, ಲೋಭವಿಜಯೀ, ಅಸುರವಿಜಯೀ = ತ್ರಿವಿಧ ವಿಜಯಗಳು).

**44. ತತೋ ವೇಲಾತಟೇನೈವ ಫಲವತ್ಪೂಗಮಾಲಿನಾ ।**
**ಅಗಸ್ತ್ಯಾಚರಿತಾಮಾಶಾಮನಾಶಾಸ್ಯ ಜಯೋ ಯಯೌ ॥ ೪೪ ॥**

ಪೂರ್ವದಿಗ್ಭಾಗದ ಎಲ್ಲಾ ರಾಜ್ಯಗಳನ್ನು ಗೆದ್ದ ಬಳಿಕ ದಕ್ಷಿಣಾಪಥಕ್ಕೆ ಕಾಲಿಟ್ಟನು. ಆ ಮನುಜೇಂದ್ರನು ವರುಣಪುತ್ರನಾದ, ಯೋಗಿಶ್ರೇಷ್ಠನಾದ, ವಿಂಧ್ಯಾವಾತಾಪಿ ಮರ್ದನನಾದ, ಅಗಸ್ತ್ಯಮುನಿಯು ನಡೆದುಹೋದ ದಾರಿಯಲ್ಲೇ ನಡೆದು ದಕ್ಷಿಣಭಾರತ ವನ್ನು ಪ್ರವೇಶಿಸಿದನು. ಅವನು ಅಗಸ್ತ್ಯನಕ್ಷತ್ರವು ತೋರಿದ ಪಥದಲ್ಲೇ ಮುಂದು ವರಿದನು. ಪೂರ್ವದ ಕಡಲತೀರದಲ್ಲೇ, ಬೆಳೆದಿರುವ ಅಡಿಕೆಗಳನ್ನು (ಪೂಗ) ಹೊತ್ತು ನಿಂತಿರುವ ಕಂಗು ಮತ್ತು ವೀಳ್ಯದೆಲೆ(ತಾಂಬೂಲದೆಲೆ)ಯ ತೋಟಗಳಿರುವ ಕಣ್ಮನ ಸೆಳೆವ ವನಭೂಮಿಗಳ ಮೂಲಕ ತನ್ನ ವಿಜಯಯಾತ್ರೆಯನ್ನು ಮುಂದುವರಿಸಿದನು. ಅವನು ಬಯಸಿದುದು ಕೇವಲ ಜಯವನ್ನು ಮಾತ್ರ, ಕೊಳ್ಳೆಯನ್ನಲ್ಲ. ಬೇರೆನನ್ನೂ ಆಶಿಸದೆ ವಿಜಯಕಾಂಕ್ಷಿಯಾಗಿ ದಕ್ಷಿಣದಿಶೆಗೆ ಕರಾವಳಿಯಲ್ಲೇ ಜೈತ್ರಯಾತ್ರೆಯನ್ನು ಮುನ್ನಡೆಸಿದನು.

ಅನ್ವಯ :— ತತಃ ಫಲವತ್ಪೂಗಮಾಲಿನಾ ವೇಲಾತಟೇನೈವ ಅನಾಶಾಸ್ಯ ಜಯಃ ಅಗಸ್ತ್ಯಾಚರಿತಾಮ್ ಆಶಾಂ ಯಯೌ ॥

ವೇಲಾಯಾಃ ತಟಂ, ತೇನ । ಫಲವಂತಶ್ಚ ತೇ ಪೂಗಾಶ್ಚ। ಫಲವತ್ಪೂಗಾನಾಂ ಮಾಲಾಃ । ಫಲವತ್ಪೂಗಮಾಲಾಃ ಅಸ್ಮಿನ್ ಸಂತಿ ಇತಿ—ಫಲವತ್ಪೂಗಮಾಲಿ । ತೇನ । ಅಗಸ್ತ್ಯೇನ ಆಚರಿತಾ, ತಾಂ । ಆಶಾಸ್ಯಃ ಜಯಃ ಯೇನ ಸಃ । ಆಶಾಸ್ಯಜಯಃ । ಅನಾಶಾಸ್ಯಜಯಃ ನ ಭವತಿ ಇತಿ ಅನಾಶಾಸ್ಯಜಯಃ । ಯಯೌ—ಯಾ—ಪ್ರಾಪಣೇ —ಲಿಟ್—ಪ್ರ.ಪು.ಏ. ॥

ತತಃ = ಪೂರ್ವದೇಶಗಳ ದಿಗ್ವಿಜಯವಾದಮೇಲೆ, ಫಲವತ್ಪೂಗಮಾಲಿನಾ = ಫಲ ಭರಿತವಾದ ಅಡಿಕೆಮರಗಳ ಸಾಲುಗಳುಳ್ಳ, ವೇಲಾತಟೇನ = ಸಮುದ್ರಕಿನಾರೆಯ ಮಾರ್ಗದಿಂದಲೇ, ಅಗಸ್ತ್ಯಾಚರಿತಾಂ = ಅಗಸ್ತ್ಯರಿಂದ ಆಶ್ರಯಿಸಿದ, ಆಶಾಂ = ದಿಕ್ಕನ್ನು ಕುರಿತು, ಅನಾಶಾಸ್ಯಜಯಃ = ಪ್ರಾರ್ಥಿಸದಿರುವ ಜಯವನ್ನು ಪಡೆದು, ಯಯೌ = ಹೋದನು.

45. ಸಸ್ಸೈನ್ಯಪರಿಭೋಗೇಣ ಗಜದಾನಸುಗಂಧಿನಾ ।
ಕಾವೇರೀಂ ಸರಿತಾಂ ಪತ್ಯುಃ ಶಂಕನೀಯಾಮಿವಾಕರೋತ್ ॥ ೪೫ ॥

ರಘುವಿನ ಆ ಮಹಾಸೈನ್ಯಸಾಗರವು, ಗಜಸೇನೆಯು ಕಾವೇರಿನದಿಯನ್ನು ಪ್ರವೇಶಿಸಿತು, ಅಲ್ಲಿ ಆ ಪಾವನನಾದ ಜಲರಾಶಿಯಲ್ಲಿ ನಾನಾ ತೆರದ ಕ್ರೀಡೆಗಳನ್ನಾಡಿ ಆನಂದ ಸಾಗರದಲ್ಲಿ ತೇಲಾಡಿದರು. ಗಜದಾನಗಂಧಮಯಪರಿ ಭೋಗದಿಂದ ಆ ಧರೆಗೊಡೆಯನು (ರಘುವು) ಸ್ವತಃ ಕಾವೇರಿನದಿಯು ಪತಿಯಾದ ಸಾಗರನೋ ಇವನು ಎಂಬಂತೆ ತೋರಿದನು (ಎಚ್ಚರಿಸಿದನು). ಆನೆಗಳ ಮದಧಾರೆಯಿಂದ ಕಾವೇರಿನದಿಯು ಹೊಸ ಸುವಾಸನೆಯನ್ನು ಪಡೆಯಿತು, ಇದರಿಂದ ಇವಳು ಇನ್ನೊಬ್ಬನ ಸಂಗವನ್ನು ಪಡೆದಳೊ (ದೇಹದರ್ಶನಪಡೆದಳೋ) ಎಂಬ ಶಂಕೆ ನದಿಗಳ ಪತಿಯಾದ ಸಾಗರನಿಗೆ ಉಂಟಾಗುವಂತೆ, ಹೊಸ ಶಂಕೆಯು ಉತ್ಪನ್ನವಾಗುವಂತೆ ರಘುವು ಕಾರಣನಾದನು. ಕಾವೇರಿನದಿಯು ಮದೋದಕದಿಂದ ಪರಿಮಳಿತವಾಗಿ ತನ್ನ ನೈಸರ್ಗಿಕ ಪರಿಮಳವನ್ನು, ಸುವಾಸನೆಯನ್ನು ಕಳೆದುಕೊಂಡು ಪತಿಯಾದ ಸಾಗರನ ಶಂಕೆಗೆ ಪಾತ್ರವಾಯಿತು.

ಸೇನಾಯಾಂ ಸಮವೇತಾಃ, ಸೈನ್ಯಾಃ । ತೇಷಾಂ ಪರಿಭೋಗಃ ತೇನ । ಗಜಾನಾಂ ದಾನಂ । ಗಜದಾನೇನ ಸುಗಂಧಿಃ ತೇನ । ಅಕರೋತ್—ಅಕುರುತಾಂ—ಅಕುರ್ವನ್ । ಅಕರೋಃ—ಅಕುರುತಂ—ಅಕುರುತ । ಅಕರವಂ—ಅಕುರ್ವ—ಅಕುರ್ಮ । ಡುಕೃಞ್—ಕರಣೇ—ಪ್ರ.ಪು.ಏ. ॥

ಸಃ = ಆ ರಘುರಾಜನು, ಗಜದಾನಸುಗಂಧಿನಾ = ಆನೆಯ ಮದೋದಕದಿಂದ ಪರಿಮಳವುಳ್ಳ, ಸೈನ್ಯಪರಿಭೋಗೇಣ = ಸೇನಾಜನದ ಸ್ನಾನಾದಿ ಉಪಭೋಗದಿಂದ (ಸೇವನೆಯಿಂದ), ಕಾವೇರೀಂ = ಕಾವೇರಿನದಿಯನ್ನು, ಸರಿತಾಂ = ನದಿಗಳಿಗೆ, ಪತ್ಯುಃ = ಒಡೆಯನಾದ ಸಮುದ್ರನಿಗೆ, ಶಂಕನೀಯಾಂ ಇವ = ಶಂಕೆಗೆ ಆಸ್ಪದಳಾದವಳು ಇವಳು ಏನೋ ಎಂಬಂತೆ, ಅಕರೋತ್ = ಮಾಡಿದನು.

46. ಬಲೈರಧ್ಯುಷಿತಾಸ್ತಸ್ಯ ವಿಜಿಗೀಷೋರ್ಗತಾಧ್ವನಃ ।
ಮಾರೀಚೋದ್ಭ್ರಾಂತಹಾರೀತಾ ಮಲಯಾದ್ರೇರುಪತ್ಯಕಾಃ ॥ ೪೬ ॥

ಆ ಮನುಕುಲೋದ್ಧಾರಕನು ವಿಶ್ವವಿಜಯಾಕಾಂಕ್ಷಿತನಾಗಿ ಪ್ರಬಲಸೇನೆಯೊಂದಿಗೆ ಮಹಾದಂಡಯಾತ್ರೆಯನ್ನು ಕೈಕೊಂಡು, ದಾರಿಯಲ್ಲಿ ಸಿಕ್ಕಿದ ರಾಜ್ಯಗಳನ್ನು ಗೆಲ್ಲುತ್ತಾ ಬಹುದೂರ ಉಪಕ್ರಮಿಸಿದನು. ಅವನ ಮಹಾಸೇನೆ ಹಗಲು ಪಯಣಿಸಿ ಸಾಯಂಕಾಲದ ವೇಳೆ, ಸೂರ್ಯನು ಅಸ್ತಮಿಸುವ ಸಮಯಕ್ಕೆ ಸರಿಯಾಗಿ ಮಲಯಪರ್ವತ ವಲಯಕ್ಕೆ ಕಾಲಿಟ್ಟಿತು. ಮಲಯಪರ್ವತವು ಮಲಬಾರಿಗೆ ಅಥವಾ ಕೇರಳ ರಾಜ್ಯದ ದಕ್ಷಿಣದಲ್ಲಿ, ಪಶ್ಚಿಮಘಟ್ಟದ (ಸಹ್ಯಾದ್ರಿಯ) ದಕ್ಷಿಣದ ಭಾಗದಲ್ಲಿರುವ ರಮ್ಯಪ್ರದೇಶ. ಅಲ್ಲಿ ದಣಿದು ಆಯಾಸಹೊಂದಿದ ರಘುಸೇನೆ ವಿರಮಿಸಿತು. ಸೈನಿಕರು ವಿಶ್ರಾಂತಿಪಡೆದರು. ಮಲಯ ಪ್ರದೇಶವು ಕಾಳುಮೆಣಸಿನ ತೋಟಗಳಿಗೆ ಹೆಸರಾದ ಪ್ರದೇಶ. ಅಲ್ಲಿಯ ಕಾಳುಮೆಣಸಿನ ಕಾಡುಗಳಲ್ಲಿ ಸ್ವಚ್ಛಂದವಾಗಿ ಹಾರುವ ಹಾರೀತವೆಂಬ ಹಸುರು ಬಣ್ಣದ ಗಿಳಿಗಳು

ಹಾರಾಡುತ್ತಿರುವುದನ್ನು ಕಂಡು ಆ ಸೈನಿಕರು ಆನಂದಿಸಿದರು. ಹಾರೀತವೆಂಬ, ಮಧುಕಾರಂಡ ಪಕ್ಷಿಗಳಿಂದ ನಿಬಿಡವಾಗಿರುವ ಮಲಯಗಿರಿಯಲ್ಲಿ ಅವರು ತಂಗುದಾಣಗಳನ್ನು ವಿರಚಿಸಿ ಬೀಡುಬಿಟ್ಟರು (ಮಾರೀಚವನಚಯೋದ್ಭ್ರಾಂತ). (ಮರೀಚವನ = ಕಾಳು ಮೆಣಸಿನ ತೋಟ) ಸೈನಿಕರು ಆ ಸುಂದರವಾದ ಪಕ್ಷಿಗಳ ಹಾರಾಟ, ಮಲಯಪರ್ವತದ ನಿಸರ್ಗಸುಂದರವಾದ ತಾಣಗಳ ದೃಶವನ್ನು ಕಂಡು ತಲೆತೂಗಿದರು. ತಮ್ಮ ದಣಿವನ್ನು ಕ್ಷಣಾರ್ಧದಲ್ಲಿ ಮರೆತು ಆನಂದದಲ್ಲಿ ಮೈಮರೆತರು.

ಅನ್ವಯ :—ವಿಜಿಗೀಷೋ ಗತಾಧ್ವನಃ ತಸ್ಯ ಬಲೈಃ ಮಾರೀಚೋದ್ಭ್ರಾಂತ ಹಾರೀತಾ ಮಲಯಾದ್ರೇಃ ಉಪತ್ಯಕಾ ಅಧ್ಯುಷಿತಾಃ ॥

ಜೇತುಂ ಇಚ್ಛುಃ ವಿಜಿಗೀಷುಃ ತಸ್ಯ। ಗತಃ ಅಧ್ವಾ ಯೇನ ಸಃ ಗತಾಧ್ವಾ, ತಸ್ಯ। ಮಾರೀಚೇಷು ಉದ್ಭ್ರಾಂತಾಃ ಹಾರೀತಾಃ ಯಾಸು ತಾಃ ಮಾರೀಚೋದ್ಭ್ರಾಂತ ಹಾರಿತಾಃ। ಮಲಯಶ್ಚಾಸೌ ಅದ್ರಿಶ್ಚ। ತಸ್ಯ। ಅಧಿ—ಉಪಸರ್ಗದಿಂದ ಕೂಡಿದ ವಸ ಧಾತು ಪ್ರಯೋಗವಿರುವುದರಿಂದ ಅಧಿಕರಣಕ್ಕೆ ಕರ್ಮಸಂಜ್ಞಾ ಬಂದು ದ್ವಿತೀಯಾ ಬಂದಿದೆ.

ವಿಜಿಗೀಷೋಃ = ಜಯವನ್ನು ಬಯಸುತ್ತಿರುವ, ಗತಾಧ್ವನಃ = ಮಾರ್ಗವನ್ನು ಉಪಕ್ರಮಿಸಿದ, ತಸ್ಯ = ಆ ರಘುವಿನ, ಬಲೈಃ = ಸೈನಿಕರಿಂದ, ಮಾರೀಚೋದ್ಭ್ರಾಂತ ಹಾರಿತಾಃ = ಮೆಣಸಿನ ಕಾಡುಗಳಲ್ಲಿ ಹಾರುತ್ತಿರುವ ಹಾರೀತವೆಂಬ ಪಕ್ಷಿವಿಶೇಷಗಳಿಂದ ಕೂಡಿದ, ಮಲಯಾದ್ರೇಃ = ಮಲಯಪರ್ವತದ, ಉಪತ್ಯಕಾಃ = ತಪ್ಪಲು ಪ್ರದೇಶಗಳು, ಅಧ್ಯುಷಿತಾಃ = ವಾಸಮಾಡಲ್ಪಟ್ಟ, ಉಪಪತ್ಯಕಾಃ = ಆಸನ್ನಭೂಮಯಃ ॥

**47. ಸ ಸಂಜುರಶ್ವಕ್ಷುಣ್ಣಾನಾಮೇಲಾನಾಮುತ್ಪತಿಷ್ಣವಃ ।**
**ತುಲ್ಯಗಂಧಿಷು ಮತ್ತೇಭಕಟೇಷು ಫಲರೇಣವಃ ॥ ೪೭ ॥**

ಮಲಯಪರ್ವತಪ್ರದೇಶದ ತಪ್ಪಲಿನ ಕಣಿವೆಮಾರ್ಗಗಳಲ್ಲಿ ಏಲಕ್ಕಿಲತೆಗಳು ಹೇರಳವಾಗಿ ಹಬ್ಬಿದ್ದುವು. ದಾರಿಯುದ್ದಕ್ಕೂ ಏಲಕ್ಕಿಯ ನರುಗಂಪು ಬೀರುತ್ತಿತ್ತು. ಕುದುರೆಗಳು ವೇಗದಿಂದ ಹೋಗುವಾಗ ಏಲಕ್ಕಿಕಾಳುಗಳು ಕಾಲ್ತುಳಿತಕ್ಕೆ ಸಿಕ್ಕಿ (ಗೊರಸುಗಳ) ಪುಡಿ ಪುಡಿಯಾಗಿ ಮೇಲಕ್ಕೆ ಹಾರಲು ಪ್ರಾರಂಭಿಸಿದುವು. ಆ ಏಲಕ್ಕಿಧೂಳು, ಅದೇ ಕಂಪಿನ ಸುವಾಸನೆ ಬೀರುವ (ಸಮಾನವಾದ) ಮದೋದಕ ಸುರಿಸುತ್ತಿರುವ ಕಪೋಲಗಳಲ್ಲಿ, ಆನೆಯ ಗಂಡಸ್ಥಲದಲ್ಲಿ, ಮೈಬೆವರಿನಿಂದ ಒದ್ದೆಯಾದ ಆನೆಗಳ ಅವಯವಗಳಲ್ಲಿ ಅಂಟಿಕೊಂಡು ಹೆಚ್ಚಿನ ಸುವಾಸನೆ ಬೀರಿದುವು.

ಕುದುರೆಗಳ ಕಾಲ್ತುಳಿತದಿಂದ ಎದ್ದ ಧೂಳು ಮತ್ತು ಏಲಕ್ಕಿ ಗಿಡಗಳಿಂದ ನೆಲಕ್ಕುದುರಿದ ಕಾಯಿಗಳ ಸುಗಂಧಯುಕ್ತ ಹುಡಿಯು ಮದ್ದಾನೆಗಳ ಕಪೋಲಗಳಲ್ಲಿ ಮೆತ್ತಿದುವು. ಹೀಗೆ ಕಟಪ್ರದೇಶದಲ್ಲಿ ಅಂಟಿರುವ ಏಲಕ್ಕಿಪುಡಿಯ ಕಂಪು ಎಲ್ಲಾ ಪ್ರಾಣಿಜಾತಿಗೆ ಆಮೋದವೀಯುತ್ತಿತ್ತು. ಸುಗಂಧವೂ ಸುವಾಸನೆಯೂ ಕಂಪು ರಘುಪಾಳ್ಯದಲ್ಲಿ ವ್ಯಾಪಿಸಿತು.

ಅನ್ವಯ :—ಅಶ್ಮಕ್ಷುಣ್ಣಾನಾಂ ಏಲಾನಾಮ್ ಉತ್ಪತಿಷ್ಣವಃ ಫಲರೇಣವಃ ತುಲ್ಯ ಗಂಧಿಷು ಮತ್ತೇಭಕಟೇಷು ಸಸಂಜುಃ ॥

ಸಸಂಜ—ಸಸಂಜತುಃ—ಸಸಂಜುಃ । ಸಸಂಜಿಥ—ಸಸಂಜಥುಃ—ಸಸಂಜ । ಸಸಂಜ—ಸಸಂಜಿವ—ಸಸಂಜಿಮ । ಷಞ್ಜ—ಸಂಗೇ—ಲಿಟ್—ಪ್ರ.ಪು.ಬ. । ಅಶ್ಮಭಿಃ ಕ್ಷುಣ್ಣಾಃ । ತಾಸಾಂ । ಗಂಧಃ ಏಷಾಮಸ್ತೀತಿ ಗಂಧಿನಃ । ತುಲ್ಯಾಃ ಗಂಧಿನಃ ಯೇಷಾಂ ತೇ । ತೇಷು । ಮತ್ತಾಶ್ಚ ತೇ ಇಭಾಶ್ಚ । ಮತ್ತೇಭಾನಾಂ ಕಟಾಃ, ತೇಷು । ಫಲಾನಾಂ ರೇಣವಃ ॥

ಅಶ್ಮಕ್ಷುಣ್ಣಾನಾಂ = ಕಲ್ಲುಗಳಿಂದ ಪುಡಿಮಾಡಿದ, ಏಲಾನಾಂ = ಏಲಕ್ಕಿಬಳ್ಳಿಗಳ, ಉತ್ಪತಿಷ್ಣವಃ = ಮೇಲಕ್ಕೆ ಹಾರುವ, ಫಲರೇಣವಃ = ಏಲಕ್ಕಿಬೀಜಗಳ ಧೂಳಿ, ತುಲ್ಯ ಗಂಧಿಷು = ಸಮಾನವಾದ ಪರಿಮಳವುಳ್ಳ, ಮತ್ತೇಭಕಟೇಷು = ಮದಗಜಗಳ ಗಂಡಸ್ಥಳ ಗಳಲ್ಲಿ, ಸಸಂಜುಃ = ಅಂಟಿಕೊಂಡುವು.

**48. ಭೋಗಿವೇಷ್ಟನಮಾರ್ಗೇಷು ಚಂದನಾನಾಂ ಸಮರ್ಪಿತಮ್ ।**
**ನಾಸ್ರಸತ್ ಕರಿಣಾಂ ಗ್ರೈವಂ ತ್ರಿಪದೀಚ್ಛೇದಿನಾಮಪಿ ॥ ೪೮ ॥**

ಅಲ್ಲಿ ಚಂದನದ ಮರಗಳಿಗೆ ಆನೆಗಳನ್ನು ಬಿಗಿದು ಸಂಕಲೆಗಳಿಂದ ಕಟ್ಟಿಹಾಕಿದರು. ಆ ಗಂಧದ ಮರಗಳಲ್ಲಿ ಹಾವುಗಳು ವಿಹರಿಸುತ್ತಿದ್ದಾಗ ಉಂಟಾದ ಹಳ್ಳಗಳ ಹಳಗಳಲ್ಲಿ (ಗುಚ್ಛಗಳಲ್ಲಿ) ಆನೆಗಳ ಕೊರಳ ಸರಪಳಿಯನ್ನು ಬಿಗಿಯಾಗಿ ಕಟ್ಟಿದರು. ಹೀಗೆ ಕಂಠ ಪ್ರದೇಶದಲ್ಲಿ ಬಿಗಿದ ಸಂಕಲೆಗಳು ಬಿಗಿಯಾಗಿಯೇ ಇದ್ದುವು. ಕಾಲಸರಪಳಿಗಳು ಸಡಿಲ ವಾದರೂ ಕೊರಳ ಹುರಿ ಒಂದಿಷ್ಟು ಜಗ್ಗದೆ ಬಿಗಿಯಾಗಿಯೇ ಇರುತ್ತಿತ್ತು. ಕಾಲಸರಪಣಿ ಯನ್ನು ಆನೆಗಳು ಸೆಳೆದು ತಪ್ಪಿಸಿದರೂ, ಕಾಲಬಂಧನವನ್ನು ಸಡಿಸಿಲಿದರೂ, ಕುತ್ತಿಗೆಯ ಸರಪಣಿಯ ಬಂಧನವು ಜಾರಿಸಿಕೊಳ್ಳಲು ಸಮರ್ಥವಾಗಲಿಲ್ಲ. ಮರದ ಗುಚ್ಛಗಳಲ್ಲಿ ಕಟ್ಟಿಕೊಂಡುದರಿಂದ ಭದ್ರವಾಗಿಯೇ ಇರುತ್ತಿತ್ತು.

ಅನ್ವಯ :—ಚಂದನಾನಾಂ ಭೋಗಿವೇಷ್ಟನಮಾರ್ಗೇಷು ಸಮರ್ಪಿತಂ ತ್ರಿಪದೀ ಚ್ಛೇದಿ ನಾಮ್ ಅಪಿ ಕರಿಣಾಂ ಗ್ರೈವಂ ನ ಅಸ್ರಸತ್ ॥

ಭೋಗಿನಾಂ ವೇಷ್ಟನಂ । ಭೋಗಿವೇಷ್ಟನೇನ ಮಾರ್ಗಾಃ ಯೇಷು ತೇ, ಭೋಗಿ ವೇಷ್ಟನಮಾರ್ಗಾಃ, ತೇಷು । ತ್ರಿಪದಿನಾಂ ಛೇದಿನಃ । ತೇಷಾಂ । ಸ್ರಂಸು—ಅವಸ್ರಂಸನೇ —ಲಙ್—ಪ್ರ ಪು.ಏ. । ಅಸ್ರಸತ್ ಅಸಸ್ರತಾಂ—ಅಸ್ರಸನ್—ಇತ್ಯಾದಿ ॥

ಚಂದಾನಾಂ—ಗಂಧದ ಮರಗಳ. ಭೋಗಿವೇಷ್ಟನಮಾರ್ಗೇಷು=ಸರ್ಪಗಳು ಸುತ್ತಿರು ವುದರಿಂದ ಉಂಟಾದ ಸವೆತದ ಗುರುತುಗಳು, ಸಮರ್ಪಿತಂ = ತಗಲಿಸಿದ, ತ್ರಿಪದೀ ಚ್ಛೇದಿನಾಮಪಿ = ಪಾದದ ಸರಪಣಿಯನ್ನು ಮಾಡಿರುವ, ಕರಿಣಾಂ=ಆನೆಗಳ, ಗ್ರೈವಂ= ಕುತ್ತಿಗೆಯ ಸರಪಣಿ, ನ ಅಸ್ರತತ್ = ಜಾರಲಿಲ್ಲ.

**49. ದಿಶಿ ಮಂದಾಯತೇ ತೇಜೋ ದಕ್ಷಿಣಸ್ಯಾಂ ರವೇರಪಿ ।**
**ತಸ್ಯಾಮೇವ ರಘೋಃ ಪಾಂಡ್ಯಾಃ ಪ್ರತಾಪಂ ನ ವಿಷೇಹಿರೇ ॥ ೪೯ ॥**

ದಕ್ಷಿಣಾಯನದ ಸಮಯದಲ್ಲಿ ಸೂರ್ಯನ ತೇಜಸ್ಸು ಕ್ಷೀಣವಾಗಿರುವುದು ಸ್ವಾಭಾವಿಕ. ಆದರೆ ಭಾರತದ ದಕ್ಷಿಣದಲ್ಲಿರುವ ಪಾಂಡ್ಯದೇಶದ ರಾಜರ ಪ್ರತಾಪ ಕ್ಷೀಣವಾಗಿರಲಿಲ್ಲ. ಅವರು ಪ್ರತಾಪಾಗ್ನಿಯಲ್ಲಿ ಸೂರ್ಯನನ್ನೂ ಮೀರಿಸಿದ್ದರು. ದಕ್ಷಿಣದಿಶಾಭಾಗದಲ್ಲಿ ಸೂರ್ಯನ ತೇಜಸ್ಸು ಒಂದಿಷ್ಟು ಕುಂದಿತ್ತಾದರೂ ರಘುವಿನ ಪ್ರತಾಪವು ಎಳ್ಳಷ್ಟೂ ಕಡಿಮೆಯಾಗಿರಲಿಲ್ಲ. ಇದನ್ನು ಪಾಂಡ್ಯರಾಜನು ರಘುವನ್ನು ಮಾರಾಂತು ಎದುರಿಸಿದಾಗ ಚೆನ್ನಾಗಿ ಮನಗಂಡನು. ರಘುವು ನಡುಹಗಲಮಾರ್ತಾಂಡನಂತೆ ವಿಕ್ರಮಾಗ್ನಿಯಿಂದ ಉರಿಯುತ್ತಾ ಪಾಂಡ್ಯರ ಮೇಲೆ ಅಭಿಯೋಗಮಾಡಿ ಗೆಲಿದನು. ಪಾಂಡ್ಯರು ದಕ್ಷಿಣ ದಿಕ್ಕಿನಲ್ಲಿ, ತಮ್ಮ ನೆಲೆಯಲ್ಲಿ ನಿಂತು ರಘುವನ್ನು ಎದುರಿಸಿದರೂ ಅವನ ಪ್ರತಾಪಕ್ಕೆ ಮಣಿದರು. ಪಾಂಡ್ಯರಾಜರ ಪ್ರತಾಪವನ್ನು ಅಣಗಿಸಿ ರಘುವು ಮಹಾಪ್ರತಾಪಶಾಲಿಯಾದ ತೇಜಸ್ವಿ ಎನಿಸಿದನು. ದಕ್ಷಿಣಾಯನದ ಸೂರ್ಯನ ತೇಜಸ್ಸನ್ನೂ ಮೀರಿಸಿದ ಪ್ರತಾಪ, ಶೌರ್ಯ, ವಿಕ್ರಮದಲ್ಲಿ ಸೂರ್ಯವಿಜಯಿಯೆನಿಸಿದನು. ಪಾಂಡ್ಯರು ಸೂರ್ಯನ ಉರಿ ಬಿಸಿಲಿನ ತಾಪವನ್ನು ಸಹಿಸಿದರೂ, ರಘುವಿನ ಪ್ರತಾಪಾಗ್ನಿಯ ಮುಂದೆ ವಿಪಣ್ಣರಾಗಿ ಕ್ಷೀಣಬಲರೆನಿಸಿದರು.

ಮಂದಾಯತೇ=ನಾಮಧಾತು. ಪಾಂಡೂನಾಂ ರಾಜಾನಃ ಪಾಂಡ್ಯಾಃ । ವಿ ಉಪಸರ್ಗ, ಷಹ—ಮರ್ಷಣೇ—ಲಿಟ್—ಪ್ರ.ಪು.ಬ. । ಸೇಹೇ—ಸೇಹಾತೇ—ಸೇಹಿರೇ । ಸೇಹಿಷೇ —ಸೇಹಾಥೇ—ಸೇಹಿಧ್ವೇ । ಸೇಹೇ—ಸೇಹಿವಹೇ—ಸೇಹಿಮಹೇ ॥

ದಕ್ಷಿಣಸ್ಯಾಂ ದಿಶಿ = ದಕ್ಷಿಣದಿಕ್ಕಿನಲ್ಲಿ, ರವೇರಪಿ = ಸೂರ್ಯನದ್ದಾದರೂ, ತೇಜಃ= ಪ್ರಕಾಶ, ಮಂದಾಯತೇ =ಕಡಿಮೆಯಾಗುತ್ತ, ತಸ್ಯಾಮೇವ = ಅದೇ ದಿಕ್ಕಿನಲ್ಲಿ, ಪಾಂಡ್ಯಾಃ = ಪಾಂಡುದೇಶದ ಅರಸರು, ರಘೋಃ = ರಘುರಾಜನ, ಪ್ರತಾಪಂ = ಪರಾಕ್ರಮವನ್ನು, ನ ವಿಷೇಹಿರೇ = ಸಹಿಸಲಿಲ್ಲ.

**50. ತಾಮ್ರಪರ್ಣೀಸಮೇತಸ್ಯ ಮುಕ್ತಾಸಾರಂ ಮಹೋದಧೇಃ ।**
**ತೇ ನಿಪತ್ಯ ದದುಸ್ತಸ್ಮೈ ಯಶಃ ಸ್ವಮಿವ ಸಂಚಿತಮ್ ॥ ೫೦ ॥**

ತಾಮ್ರಪರ್ಣೀನದಿಯು ಸಂಗಮದಲ್ಲಿ, ನದಿಯು ಮಹಾಸಾಗರವನ್ನು ಸೇರುವಲ್ಲಿ (ಮಹೋದಧಿಯನ್ನು) ಉತ್ತಮವಾದ ಮುತ್ತುಗಳು ಹೇರಳವಾಗಿ ಸಿಗುತ್ತವೆ. ಈ ಮುತ್ತುಗಳು ಜಗತ್ಪ್ರಸಿದ್ಧಿಯನ್ನು ಪಡೆದಿವೆ. ಪಾಂಡ್ಯರಾಜರು ರಘುವಿನ ಪದತಲಕ್ಕೆ ಎರಗಿ ಅವನಿಗೆ ಬಹುಮಾನರೂಪವಾಗಿ ತಾಮ್ರಲಿಪ್ತೀನದಿಯು ಸಮುದ್ರಕ್ಕೆ ಸೇರುವಲ್ಲಿ ದೊರೆಯುವ ಶ್ರೇಷ್ಠಜಾತಿಯ ಮುತ್ತುಗಳನ್ನು, ತಾವು ಈ ತನಕ ಸಂಗ್ರಹಿಸಿದ ಯಶಸ್ಸನ್ನು ಕೊಡುವಂತೆ ಮಣಿದು ಕೊಟ್ಟರು. ಯಶೋಧನರಾದ ಅವರು ತಮ್ಮ ಜೀವಮಾನದಲ್ಲಿ ಸಂಗ್ರಹಿಸಿರುವ ಕೀರ್ತಿ ಅಥವಾ ಯಶಸ್ಸೆಂಬ ಧನವನ್ನು ಕೊಡುವಂತೆ ತಾಮ್ರಪರ್ಣಿಯ ಉತ್ತಮತರದ ಮುತ್ತುಗಳನ್ನು ಆ ಪರಂತಪನಿಗೆ ಕೊಟ್ಟು ಅವನ ಸಖ್ಯವನ್ನು ಪಡೆದರು. ಯಶಸ್ಸನ್ನು ಕೊಟ್ಟು ಅವನನ್ನು ತಮ್ಮವನನ್ನಾಗಿ ಅಂಗೀಕರಿಸಿದರು. ಬೆಳ್ಳಗಾದ ಈ ಮುತ್ತುಗಳನ್ನು ಕೊಡುವಾಗ ತಾವು ಈ ತನಕ ಗಳಿಸಿದ ಧವಳಕೀರ್ತಿಯನ್ನು ಕೊಟ್ಟರೋ ಎಂಬಂತೆ ಭಾಸವಾಯಿತು.

ಅನ್ವಯಃ :—ತೇ ತಾಮ್ರಪರ್ಣೀಸಮೇತಸ್ಯ ಮಹೋದಧೇಃ ಮುಕ್ತಾಸಾರಂ ಸ್ವಮ್ ಸಂಚಿತಮ್ ಯಶಃ ಇವ ತಸ್ಮೈ ನಿಪತ್ಯ ದದುಃ ॥

ತಾಮ್ರಪರ್ಣ್ಯಾ ಸಮೇತಃ, ತಸ್ಯ। ಮುಕ್ತಾನಾಂ ಸಾರಃ, ತಮ್ । ದದೌ—ದದತುಃ —ದದುಃ—ಇತ್ಯಾದಿ । ಡುದಾಞ್ ದಾನೇ—ಲಿಟ್—ಪ್ರ.ಪು.ಬ. ॥

ತೇ = ಆ ಪಾಂಡ್ಯರಾಜರು, ತಾಮ್ರಪರ್ಣೀಸಮೇತಸ್ಯ= ತಾಮ್ರಪರ್ಣೀನದಿಯಿಂದ ಕೂಡಿದ, ಮಹೋದಧೇಃ = ಸಮುದ್ರದ, ಸಂಚಿತಂ = ಸಂಪಾದಿಸಲ್ಪಟ್ಟ, ಮುಕ್ತಾಸಾರಂ = ಶ್ರೇಷ್ಠ ಮುತ್ತುಗಳನ್ನು, ಸ್ವಂ = ಸ್ವಕೀಯವಾದ, ಸಂಚಿತಂ = ಗಳಿಸಿದ, ಯಶಃ ಇವ = ಕೀರ್ತಿಯನ್ನು ಎಂಬಂತೆ, ತಸ್ಮೈ = ಆ ರಘುರಾಜನಿಗೆ, ನಿಪತ್ಯ= ನಮಸ್ಕರಿಸಿ, ದದುಃ = ಕೊಟ್ಟರು.

51. ಸ ನಿರ್ವಿಶ್ಯ ಯಥಾಕಾಮಂ ತಟೇಷ್ವಾಲೀನಚಂದನೌ ।
ಸ್ತನಾವಿವ ದಿಶಸ್ತಸ್ಯಾಃ ಶೈಲೌ ಮಲಯದರ್ದುರೌ ॥ ೫೧ ॥

ಆ ನರೇಶನು ತನ್ನ ಸೇನಾವಾಹಿನಿಯೊಂದಿಗೆ ಮಲಯ ಮತ್ತು ದರ್ದುರ ಅದ್ರಿಗಳ (ಪರ್ವತಗಳ) ಪ್ರದೇಶಕ್ಕೆ ಬಂದನು. ಅಲ್ಲಿ ಕಾಮಿಯಂತೆ ಅನುಭವಿಸಿ, ವಿಹರಿಸಿ ಮುಂದಕ್ಕೆ ನಡೆದನು. ಮಲಯ, ದರ್ದುರ ಪರ್ವತಸಾಲುಗಳು ಶ್ರೀಗಂಧದ ಮರಗಳ ಕಾಡಿನಿಂದ ಕಂಗೊಳಿಸುತ್ತ ಮನಸೆಳೆಯುತ್ತಿವೆ. ಆ ಎರಡು ಗಿರಿಸಾಲುಗಳು ದಿಗಂಗನೆಯ (ದಿಕ್ಕೆಂಬ ಸ್ತ್ರೀಯ) ಕುಚಯುಗ್ಮದಂತೆ ಎಸೆಯುತ್ತಲಿವೆ. ಮೇಲ್ಭಾಗದಲ್ಲಿ (ತಟದಲ್ಲಿ) ಹಳದಿಬಣ್ಣದ ಚಂದನಾಲೇಪಿತ (ಚಂದನ ವೃಕ್ಷಗಳ ಸಾಲಿನಿಂದ) ದಿಗಂಗನೆಯ ಸ್ತನಯುಗ್ಮದಂತೆ ಶೋಭಾಯಮಾನವಾಗಿ ಕಂಗೊಳಿಸುತ್ತಿವೆ, ದೇಹಮರ್ದನ, ಆಲಿಂಗನಾದಿಗಳಿಂದ ಸ್ತ್ರೀಯರನ್ನು ಉಪಭೋಗಿಸಿದಂತೆ ರಘುಸಾರ್ವಭೌಮನು ಅಲ್ಲಿ ಆ ಪರ್ವತದ ಸಾನು ಪ್ರದೇಶದಲ್ಲಿ ತನ್ನ ಸೈನಿಕರೊಂದಿಗೆ ಬೀಡುಬಿಟ್ಟುದರಿಂದ, ಸೈನಿಕರು ಬೇಕಾದಂತೆ (ಯಥೇಚ್ಛವಾಗಿ, ಸಿಕ್ಕಾಬಟ್ಟೆ) ವಿಹರಿಸಿ ಕಾಮಿಯಂತೆ ಉಪಭೋಗಿಸಿ, ಮುಂದೆ ಸಾಗಿ ಹೋದನು.

ಅನ್ವಯಃ :—ಅಸಹ್ಯವಿಕ್ರಮಃ ಸಃ ತಟೇಷು ಆಲೀನಚಂದನೌ ತಸ್ಯಾಃ ದಿಶಃ ಸ್ತನೌ ಇವ ಮಲಯದರ್ದುರೌ ಯಥಾಕಾಮಂ ನಿರ್ವಿಶ್ಯ ಉದನ್ವತಾದೂರಾತ್ ಮುಕ್ತಂ ಸ್ರಸ್ತಾಂಶುಕಂ ಮೇದಿನ್ಯಾಃ ನಿತಂಬಮಿವ (ಸ್ಥಿತಂ) ಸಹ್ಯಮ್ ಅಲಂಘಯತ್ ॥

ಕಾಮಮನತಿಕ್ರಮ್ಯ ಯಥಾಕಾಮಮ್ । ಆಲೀನಾಃ ಚಂದನಾಃ ಯಯೋಸ್ತೌ ಆಲೀನ ಚಂದನೌ । ಮಲಯಶ್ಚ ದರ್ದುರಶ್ಚ ॥

ಸಃ = ಆ ರಘುರಾಜನು, ತಟೇಷು = ತಪ್ಪಲುಪ್ರದೇಶಗಳಲ್ಲಿ ಆಲೀನಚಂದನೌ = ವ್ಯಾಪಿಸಿದ ಗಂಧದ ಮರಗಳುಳ್ಳ (ಲೇಪಿಸಿದ ಗಂಧವುಳ್ಳ), ತಸ್ಯಾಃ ದಿಶಃ = ದಕ್ಷಿಣದಿಕ್ಕಿನ, ಸ್ತನಾವಿವ = ಸ್ತನಗಳೆಳ್ಳ, ಮಲಯದರ್ದುರೌ = ಮಲಯದರ್ದುರಗಳೆಂಬ, ಶೈಲೌ = (ಎರಡು) ಪರ್ವತಗಳನ್ನು, ಯಥಾಕಾಮಂ = ಯಥೇಚ್ಛವಾಗಿ, ನಿರ್ವಿಶ್ಯ= ಭೋಗಿಸಿ.

52. ಅಸಹ್ಯವಿಕ್ರಮಃ ಸಹ್ಯಂ ದೂರಾನ್ಮುಕ್ತಮುದನ್ವತಾ ।
ನಿತಂಬಮಿವ ಮೇದಿನ್ಯಾಃ ಸ್ರಸ್ತಾಂಶುಕಮಲಂಘಯತ್ ॥ ೫೨ ॥

ಆ ಅಸಹ್ಯಬಲನು ಸಹ್ಯಾದ್ರಿಗೆ ಕಾಲಿಟ್ಟನು. ಆ ಸಹ್ಯಾದ್ರಿಯು ಮೇದಿನಿಯ ನಿತಂಬದಂತೆ ಕಾಣಿಸುತ್ತಿತ್ತು. ಪಶ್ಚಿಮದ ಸಾಗರನು ಆ ಸಹ್ಯಾದ್ರಿಯನ್ನು ದೂರಗೈದಿರುವನು. ಬಹಳ ದೂರಕ್ಕೆ ತಳ್ಳಿರುವನು. ಹೀಗೆ ಅಲ್ಪವಸನದಿಂದ (ವಸ್ತ್ರದಿಂದ) ಆಚ್ಛಾದಿತವಾದ ಮೇದಿನಿಯ (ಭೂದೇವಿಯ) ಜಘನಪ್ರದೇಶದಂತೆ ಸಹ್ಯಾಚಲವು ಕಣ್ಸೆಳೆಯುತ್ತಿತ್ತು. ಹಿಂದೂಮಹಾಸಾಗರವು ದೂರವಿದ್ದುದರಿಂದ ವಿವಸ್ತ್ರಗೊಂಡ ನಿತಂಬದಂತೆ ಎತ್ತರವಾದ ಸಹ್ಯಾದ್ರಿಗಿರಿಸಾಲು ಕಂಗೊಳಿಸುತ್ತಿತ್ತು. ಆ ವೀರಾಗ್ರಣಿ ಆ ಸಹ್ಯಾಚಲವನ್ನು ದಾಟಿ ಹೋದನು.

ನ ಸಹ್ಯಃ ಅಸಹ್ಯಃ । ವಿಕ್ರಮಃ ಯಸ್ಯ ಸಃ । ಉದಕಾನಿ ಅಸ್ಯ ಸಂತಿ ಇತಿ ಉದನ್ವಾನ್ । ತೇನ । ಸ್ರಸ್ತಂ ಅಂಶುಕಂ ಯಸ್ಮಾತ್ ಸಃ । ತಮ್ । ಅಲಂಘಯತ್—ಲಘಿ—ಗತೌ—ಲಙ್ ಪ್ರ.ಪು.ಏ. ॥

ಅಸಹ್ಯವಿಕ್ರಮಃ = ಸಹಿಸಲಸಾಧ್ಯವಾದ ಪರಾಕ್ರಮವುಳ್ಳ, ಉದನ್ವತಾ = ಸಮುದ್ರದಿಂದ, ದೂರಾತ್ = ದೂರದಿಂದಲೇ, ಮುಕ್ತಂ = ಬಿಡಲ್ಪಟ್ಟ, ಸ್ರಸ್ತಾಂಶುಕಂ = ಜಾರಿಹೋದ ವಸ್ತ್ರವುಳ್ಳ, ಮೇದಿನ್ಯಾಃ = ಭೂಮಿಯ, ನಿತಂಬಮಿವ = ನಿತಂಬದಂತೆ, ಸಹ್ಯಂ = ಸಹ್ಯಾದ್ರಿಯನ್ನು, ಅಲಂಘಯತ್ = ಅತಿಕ್ರಮಿಸಿದನು.

53. ತಸ್ಯಾನೀಕೈರ್ವಿಸರ್ಪದ್ಭಿರಪರಾಂತಜಯೋದ್ಯತೈಃ ।
ರಾಮಾಸ್ತ್ರೋತ್ಸಾರಿತೋಽಪ್ಯಾಸೀತ್ಸಹ್ಯಲಗ್ನ ಇವಾರ್ಣವಃ ॥ ೫೩ ॥

ಜಮದಗ್ನಿನಂದನನಾದ, ಕ್ಷತ್ರಿಯಕುಲಾಂತಕನೆನಿಸಿದ, ಪರಶುರಾಮನ ಕೊಡಲಿಯ ಏಟಿಗೆ ಹೆದರಿ ಹಿಂದಕ್ಕೆ ಸರಿದ ಪಶ್ಚಿಮದ ಸಮುದ್ರವು (ಪಶ್ಚಿಮ ಮಹಾಸಾಗರವು) ಇಂದು ಸಹ್ಯಾದ್ರಿಯೊಂದಿಗೆ ಒಂದುಗೂಡಿದಂತೆ ಕಂಡಿತು. ಇದಕ್ಕೆ ಕಾರಣ ರಘುವಿನ ಇನ್ನೊಂದು ಸಾಗರವೋ ಎಂಬಂತೆ ತೋರುವ ಚತುರಂಗಮಹಾಸೇನಾಸಾಗರ. ಪಶ್ಚಿಮ ಕರಾವಳಿಯ ರಾಷ್ಟ್ರಗಳಾದ ಕೇರಳ, ತುಳುನಾಡು, ಕೊಂಕಣಗಳ ದಿಗ್ವಿಜಯವನ್ನು ಕೈಕೊಂಡು ತನ್ನ ಸೈನಿಕರನ್ನು ಸಹ್ಯಾದ್ರಿ ಮತ್ತು ಪಡುವಣ ಕಡಲಿನ ಮಧ್ಯೆ ಹರಡಿದನು. ಹೀಗೆ ಹರಡಿದ ಆ ಮಹಾಸೇನೆಯು ಅಶ್ವ, ಗಜ, ಪದಾತಿಗಳ, ರಥಗಳ ಅನೇಕ ಅಕ್ಷೋಹಿಣೀ ಸೇನೆ ಪಶ್ಚಿಮಸಾಗರವನ್ನು (ಅರೇಬಿಯನ್ ಮಹಾಸಾಗರ, ಅರಬಿ ಸಮುದ್ರ) ಸಹ್ಯಾಚಲದೊಂದಿಗೆ ಒಂದುಗೂಡಿಸಿದಂತೆ ತೋರಿತು. ರಘುವಿನ ಸೇನೆಯು ಎರಡನೆಯ ಮಹಾಸಾಗರವೋ ಎಂಬಂತೆ ಭಾಸವಾಗುತ್ತಿತ್ತು.

ಅನ್ವಯ :—ಅಪರಾಂತಜಯೋದ್ಯತೈಃ ವಿಸರ್ಪದ್ಭಿಃ ತಸ್ಯ ಅನೀಕೈಃ ರಾಮಾಸ್ತ್ರೋತ್ಸಾರಿತಃ ಅಪಿ ಸಹ್ಯಲಗ್ನಃ ಇವ ಅರ್ಣವ ಆಸೀತ್ ॥

ಅಪರಾಂತಾನಾಂ ಜಯಃ, ಅಪರಾಂತಜಯೇ ಉದ್ಯತಾಃ, ತೈಃ । ರಾಮಸ್ಯ ಅಸ್ತ್ರಂ ರಾಮಾಸ್ತ್ರಂ ತೇನ ಉತ್ಸಾರಿತಃ । ರಾಮಾಸ್ತ್ರೋತ್ಸಾರಿತಃ । ಸಹ್ಯೇ ಲಗ್ನಃ । ಆಸೀತ್—ಆಸ್ತಾಂ—ಆಸನ್ । ಆಸೀಃ—ಆಸ್ತಂ—ಆಸ್ತ । ಆಸಂ—ಆಸ್ವ—ಆಸ್ಮ । ಅಸ—ಭುವಿ—ಲಙ್—ಪ್ರ.ಪು.ಏ. ॥

ಅಪರಾಂತಜಯೋದ್ಯುಕ್ತೈಃ = ಪಾಶ್ಚಾತ್ಯ (ಕೊಂಕಣ, ಪರಶುರಾಮ ಸೃಷ್ಟಿ) ದೇಶಗಳ ಜಯದಲ್ಲಿ ಉದ್ಯುಕ್ತರಾದ, ವಿಸರ್ಪದ್ಭಿಃ = ಮುಂದೆ ಹೋಗುತ್ತಿರುವ, ತಸ್ಯ = ರಘು ರಾಜನ, ಅನೀಕೈಃ = ಸೈನ್ಯಗಳಿಂದ, ಅರ್ಣವಃ = ಸಮುದ್ರವು, ರಾಮಾಸ್ತ್ರೋತ್ಸಾರಿತಃ ಅಪಿ = ಪರಶುರಾಮನ ಕೊಡಲಿಯಿಂದ ಹಿಂದಕ್ಕೆ ಸರಿಸಲ್ಪಟ್ಟಿದ್ದರೂ, ಸಹ್ಯಲಗ್ನ ಇವ = ಸಹ್ಯಪರ್ವತದವರೆಗೆ ವ್ಯಾಪಿಸಿರುವಂತೆ, ಆಸೀತ್ = ಆಯಿತು.

**54. ಭಯೋತ್ಸೃಷ್ಟವಿಭೂಷಾಣಾಂ ತೇನ ಕೇರಲಯೋಷಿತಾಮ್ ।**
**ಅಲಕೇಷು ಚಮೂರೇಣುಶ್ಚೂರ್ಣಪ್ರತಿನಿಧೀಕೃತಃ ॥ ೫೪ ॥**

ಕೇರಳದ ಸ್ತ್ರೀಜನರು ದಿಗ್ವಿಜಯಕ್ಕೆ ಬಂದ ರಘುವಿನ ಭಯದಿಂದ ತಮ್ಮ ದೇಹಾಲಂಕಾರವನ್ನು ಮರೆತರು. ಅವರು ಒಡವೆವಸ್ತ್ರಗಳನ್ನು ಧರಿಸಲು ಹಿಂಜರಿದು ಕೇವಲ ಕೇಶಾಲಂಕಾರವನ್ನು ಮಾತ್ರ ಮಾಡಿಕೊಳ್ಳುತ್ತಿದ್ದರು. ಒಡವೆ ವಸ್ತ್ರಗಳ ಝಣ ಝಣತ್ಕಾರ ಸದ್ದು ರಘುವಿನ ಸೈನಿಕರಿಗೆ ಕೇಳಿಸದಂತೆ (ಡಾಬು ಮೇಖಲೆ), ಕಾಲ್ಗೆಜ್ಜೆ (ನೂಪುರ) ಇತ್ಯಾದಿ) ಅವರು ಮುಂಜಾಗ್ರತೆ ವಹಿಸಿದ್ದರು. ಅವರು ಅವರ ಭಯದಿಂದ ಓಡಿಹೋಗುವಾಗ (ಪಲಾಯನಮಾಡುವಾಗ) ಆ ಒಡವೆವಸ್ತ್ರಗಳನ್ನು ಆಭರಣಗಳನ್ನು ತ್ಯಜಿಸಿ ಬರೀ ಕೇಶಾಲಂಕಾರದ ಕಡೆಗೆ ಮಾತ್ರ ಗಮನವೀಯುತ್ತಿದ್ದರು. ಕೇಶಾಲಂಕಾರಕ್ಕೆ ಪ್ರತಿಚೂರ್ಣದಂತಿರುವ ಅರಶಿನಕುಂಕುಮದ ರೇಣುವಿನಂತೆ ಇರುವ, ಸೇನೆಯ ಕಾಲ್ತುಳಿತ ದಿಂದ ಎದ್ದ ಕೆಂಧೂಳಿಯು ಮೋಡದಂತೆ ಎದ್ದ ಕೆಂಧೂಳು, ಕೇರಳ ಮಹಿಳೆಯರ ಕೇಶರಾಶಿಯಲ್ಲಿ (ಮುಂಗುರುಳಲ್ಲಿ) ಅಲಂಕರಿಸಿತು. ಹೀಗೆ ರಘುಸಾಮ್ರಾಟನು ಅವರಿಗೆ ಕುಂಕುಮಾದಿಚೂರ್ಣದ ಸ್ಥಾನದಲ್ಲಿ ನಾಗಾಲೋಟದಿಂದ ಓಡುವ ಸೈನ್ಯವು ಎಬ್ಬಿಸಿದ ಕೆಂಧೂಳನ್ನು ಇತ್ತು ಅಲಂಕಾರಯೋಗ್ಯಸಾಮಗ್ರಿಯೊಂದನ್ನು ಹೊಸತಾಗಿ ನೀಡಿದನು.

ಭಯೇನ ಉತ್ಸೃಷ್ಟಾನಿ ಭಯೋತ್ಸೃಷ್ಟಾನಿ ಆಭರಣಾನಿ ಯಾಭಿಸ್ತಾಃ । ತಾಸಾಮ್ । ಕೇರಲಸ್ಯ ಯೋಷಿತಃ, ತಾಸಾಮ್ । ಚಮ್ವಾಃ ರೇಣುಃ । ಚೂರ್ಣಸ್ಯ ಪ್ರತಿನಿಧೀಕೃತಃ । ಅಪ್ರತಿನಿಧಿಃ ಪ್ರತಿನಿಧಿತ್ವೇನ ಸಂಪದ್ಯಮಾನಃ ಪ್ರತಿನಿಧೀಕೃತಃ ॥

ತೇನ = ಆ ರಘುರಾಜನಿಂದ, ಭಯೋತ್ಸೃಷ್ಟವಿಭೂಷಾಣಾಂ = ಭಯದಿಂದ ತ್ಯಜಿಸಿದ ಆಭರಣಗಳುಳ್ಳ, ಕೇರಲಯೋಷಿತಾಂ = ಕೇರಳ ದೇಶದ ಮಹಿಳೆಯರು, ಅಲಕೇಷು = ಮುಂಗುರುಳುಗಳಲ್ಲಿ, ಚಮೂರೇಣುಃ = ಸೈನ್ಯದ ಧೂಳಿಯು, ಚೂರ್ಣಪ್ರತಿನಿಧೀಕೃತಃ = ಕುಂಕುಮಾ ಚೂರ್ಣದ ಸ್ಥಾನದಲ್ಲಿ ಪ್ರತಿಯಾಗಿ.

**55. ಮುರಲಾಮಾರುತೋದ್ಧೂತಮಗಮತ್ಕೈತಕಂ ರಜಃ ।**
**ತದ್ಯೋಧವಾರಬಾಣಾನಾಮಯತ್ನಪಟವಾಸತಾಮ್ ॥ ೫೫ ॥**

ಇದೀಗ ರಘುಸೇನೆಯು ಕೇರಳರಾಜ್ಯದ ಮುರಲಾ ಎಂಬ ಪ್ರಾಮುಖ್ಯವಾದ ನದಿಯನ್ನು ಸಮೀಪಿಸಿತು. ಮುರಲಾ ನದಿದಂಡೆಯಲ್ಲಿ ಕೇದಗೆಯ ಗಿಡಗಳು ಹುಲುಸಾಗಿ, ಸೊಂಪಾಗಿ ಬೆಳೆದಿರುತ್ತವೆ. ಆ ನದಿಯ ಕಡೆಯಿಂದ, ಕೇದಗೆಯ ವನಪ್ರದೇಶದಿಂದ ಗಾಳಿಯು ಬೀಸಿದಾಗ ರಘುಸೈನಿಕರ, ಏದೆಯ ಕವಚ, ಮುಂಡಾಸು ಇತ್ಯಾದಿಗಳು ಕೇದಗೆಯ

ಪುಡಿಯಿಂದ, ಪರಾಗರೇಣುಗಳಿಂದ ಪರಿಮಳಿತವಾಯಿತು. ಮೃಗನಾಭಿ(ಕಸ್ತೂರಿ)ಕರ್ಪೂರ ಮೊದಲಾದ ಸುಗಂಧವಸ್ತುಗಳಂತೆ, ಅವುಗಳನ್ನು ಪೂಸಿಕೊಂಡಂತೆ ಅವರು ಸುಗಂಧಿತರಾದರು. ಕೇರಳ ನಾಡಿನಲ್ಲಿ ಬೀಸುವ ತಂಪಾದ, ಹಿತಕರವಾದ ಮುರಲಾಮಾರುತನು ಕೇದಗೆಯ ಹೂಪುಡಿಯ ರೇಣುರೇಣುಗಳನ್ನು ಹೊತ್ತುತಂದು ಸೈನಿಕರ ಮುಖಕ್ಕೆ ಎರಚಿದನು. ಅವರು ಮೋದವಾಂತರು. ಅವರ ಸರ್ವಾಂಗವೂ ಪರಿಮಳಿತವಾಯಿತು (ಮದುವೆಯ ಗಂಡಿನಂತೆ). ಪ್ರಯತ್ನವಿಲ್ಲದೆ ಸುಗಂಧಿತರಾದರು. ಸುಗಂಧಯುಕ್ತ ಕೇದಗೆಯ ರೇಣುಗಳು ರಘುಸೇನೆಯಲ್ಲಿರುವ ಆನೆ, ಕುದುರೆ, ಒಂಟೆ, ಹೇಸರಕತ್ತೆಗಳ ಮೈಯನ್ನು ಅಲಂಕರಿಸಿತು. ಆ ಚತುಷ್ಪಾದಗಳು ಘಮಘಮಿಸುವ ಪರಿಮಳದ ಕೇದಗೆಯ ಧೂಳಲ್ಲಿ ಸ್ನಾನಮಾಡಿದಂತೆ ಪರಿಮಳಿಸಿದುವು. ಕೇದಗೆಯ ಧೂಳನ್ನು ಆಘ್ರಾಣಿಸುತ್ತಾ ಆನಂದಿಸಿದುವು. ಮುರಲಾನದಿಯಿಂದ ಕೇರಳ ದೇಶಕ್ಕೆ ಮಲಬಾರ್, ಕೇರಳಾ ಎಂಬ ಹೆಸರುಬರಲು ಕಾರಣ (ಮುರಳೀಯರು, ಕೇರಳೀಯರು).

ಅನ್ವಯ :—ಮುರಲಾಮಾರುತೋದ್ಧೂತಂ ಕೈತಕಂ ರಜಃ ತದ್ಯೋಧವಾರಬಾಣಾನಾಮ್ ಅಯತ್ನಪಟವಾಸತಾಮ್ ಅಗಮತ್ ॥

ಮುರಲಾಯಾಃ ಮಾರುತಃ, ಮುರಲಾಮಾರು ತೇನಉದ್ಧೂತಮ್ । ಕೇತಕಸ್ಯ ಇದಂ ಕೈತಕಮ್ । ತಸ್ಯ ಯೋಧಾಃ ತದ್ಯೋಧಾಃ । ತದ್ಯೋಧಾನಾಂ ವಾರವಾಣಾಃ, ತೇಷಾಮ್ । ಪಟವಾಸಸ್ಯ ಭಾವಃ, ಪಟವಾಸತಾ । ಅಯತ್ನೇನ ಪಟವಾಸತಾ, ತಾಮ್ । ಅಗಮತ್—ಗಮ್ಲೃ—ಗತೌ—ಲುಙ್—ಪ್ರ.ಪು.ಏ. ॥

ಮುರಲಾಮಾರುತೋದ್ಧೂತಂ = ಮುರಲಾನದಿಯ ಗಾಳಿಯಿಂದ ಹಾರಿಸಲ್ಪಟ್ಟ, ಕೈತಕಂ = ಕೇತಕೀಸಂಬಂಧವಾದ, ರಜಃ = ಧೂಳಿಯು, ತದ್ಯೋಧವಾರವಾಣಾನಾಂ = ಆ ರಘುರಾಜನ ಭಟರ ಮೇಲಂಗಿಗಳಿಗೆ, ಅಯತ್ನಪಟವಾಸತಾಂ = ಪ್ರಯತ್ನವಿಲ್ಲದೆ ಸಾಧ್ಯವಾದ ಸುಗಂಧದ್ರವ್ಯದ ಚೂರ್ಣವಾಗಿ, ಅಗಮತ್ = ಹೊಂದಿ.

**56. ಅಭ್ಯಭೂಯತ ವಾಹಾನಾಂ ಚರತಾಂ ಗಾತ್ರಶಿಂಜಿತೈಃ ।**
**ವರ್ಮಭಿಃ ಪವನೋದ್ಧೂತರಾಜತಾಲೀವನಧ್ವನಿಃ ॥ ೫೬ ॥**

ಅನ್ವಯ :—ಚರತಾಂ ವಾಹಾನಾಂ ಗಾತ್ರಶಿಂಜಿತೈಃ ವರ್ಮಭಿಃ ಪವನೋದ್ಧೂತ ರಾಜತಾಲೀವನಧ್ವನಿಃ ಅಭ್ಯಭೂಯತ ॥

ಪಶ್ಚಿಮ ಕರಾವಳಿಯ ತೀರಪ್ರದೇಶದಲ್ಲಿ ರಾಜತಾಲೀ ವೃಕ್ಷಗಳು ವಿಪುಲವಾಗಿ ಬೆಳೆಯುತ್ತವೆ. ರಾಜತಾಲೀ, ಖಲತಾಲೀ ಎಂಬ ಎರಡು ಜಾತಿಯ ತಾಳೆವೃಕ್ಷಗಳು ಕಾಣಸಿಗುತ್ತವೆ. ಗಾಳಿಯು ಜೋರಾಗಿ ಬೀಸಿದಾಗ ತಾಳೆಗರಿಗಳು ಅಧಿಕ ಶಬ್ದ ಮಾಡುತ್ತವೆ. ಮರ, ಮರ ಎಂಬ ಶಬ್ದ ಬಹುದೂರ ಕೇಳಿಸುತ್ತಿದೆ. ಸಂಚರಿಸುತ್ತ ಬರುತ್ತಿರುವ ರಘು ಸಾರ್ವಭೌಮನ ಯುದ್ಧಾಶ್ವಗಳ ಮೈಮೇಲೆ ಧರಿಸಿದ ಕವಚಗಳ, ಮತ್ತು ಶಸ್ತ್ರಾಸ್ತ್ರಗಳ ಝಣಝಣತ್ಕಾರ ಶಬ್ದವು, ಅಶ್ವಗಳ ಕಡಿವಾಣದ ಕಟಕಟ ಶಬ್ದವು ರಾಜತಾಲೀ ವೃಕ್ಷಗಳ ಅಗಲವಾದ ಎಲೆಗಳು ಒಂದಕ್ಕೊಂದು ಗಾಳಿಯಿಂದ ಘರ್ಷಿಸಿ ಉಂಟಾದ ಮರ್ಮರ ಶಬ್ದವನ್ನು ಮರೆಸಿತು. ತಾಳೀವನಗಳಿಂದ ಅಥವಾ ತಾಳೆಮರದ ಕಾಡುಗಳಿಂದ

ಕೇಳಿಬರುತ್ತಿದ್ದ ಶಬ್ದಕ್ಕಿಂತಲೂ ಬಹಳ ಅಧಿಕವಾಗಿ ಯುದ್ಧಾಶ್ವಗಳ ಮೈಮೇಲಿನ ಲೋಹದ ಕವಚಗಳಿಂದ ಉಂಟಾದ ಶಬ್ದವು ಜೋರಾಗಿ ಕೇಳಿಸಿತು. ತಾಳೀವನದರವವು ಕೇಳಿಸಲೇ ಇಲ್ಲ. ಆ ಶಬ್ದವು ಅಲ್ಲಿಗೇ ಮುಚ್ಚಿಹೋಯಿತು (ಅಡಗಿಹೋಯಿತು, ಇಂಗಿ ಹೋಯಿತು). ಕವಚಾದಿಗಳ ಧ್ವನಿಯೇ ಅಧಿಕವಾಗಿ ಕೇಳಿಸಿತು.

ಅನ್ವಯ :—ಚರತಾಂ ವಾಹಾನಾಂ ಗಾತ್ರಶಿಂಜಿತೈಃ ವರ್ಮಭಿಃ ಪವನೋದ್ಧೂತ ರಾಜ ತಾಲೀವನಧ್ವನಿಃ ಅಭ್ಯಭೂಯತ ॥

ಅಭಿ ಉಪಸರ್ಗ—ಅಭೂಯತ—ಅಭೂಯೇತಾಂ—ಅಭೂಯಂತ। ಅಭೂಯಥಾಃ—ಅಭೂಯೇಥಾಂ—ಅಭೂಯಧ್ವಮ್। ಅಭೂಯೇ—ಅಭೂಯಾವಹಿ—ಅಭೂಯಾಮಹಿ। ಭೂ—ಸತ್ತಾಯಾಂ ಕರ್ಮಣಿ—(ಉಪಸರ್ಗದಿಂದ ಸಕರ್ಮಕ) ಲಙ್। ಗಾತ್ರೇಷು ಶಿಂಜಿತಾನಿ. ತೈಃ। ಪವನೇನ ಉದ್ಧೂತಾಃ, ಪವನೋದ್ಧೂತಾಶ್ಚ ತೇ ರಾಜ ತಾಲ್ಯಶ್ಚ। ಪವನೋದ್ಧೂತತಾಲೀನಾಂ ವನಾನಿ। ಪವನಾನಾಂ ಧ್ವನಿಃ। ಪವನಧ್ವನಿಃ ॥

ಚರತಾಂ = ಹೋಗುತ್ತಿರುವ. ವಾಹಾನಾಂ ಕುದುರೆಗಳ. ಗಾತ್ರಶಿಂಜಿತೈಃ = ಶರೀರಗಳಲ್ಲಿ ಶಬ್ದಮಾಡುವ, ವರ್ಮಭಿಃ = ಕವಚಗಳಿಂದ, ಪವನೋದ್ಧೂತರಾಜತಾಲೀವನಧ್ವನಿಃ = ಗಾಳಿಯಿಂದ ತೀಡಲ್ಪಟ್ಟ ರಾಜತಾಳೆಯ ಮರಗಳ ಕಾಡಿನ ಶಬ್ದವು, ಅಭ್ಯಭೂಯತ = ತಿರಸ್ಕರಿಸಲ್ಪಡು.

**57. ಖರ್ಜೂರೀಸ್ಕಂಧನದ್ಧಾನಾಂ ಮದೋದ್ಗಾರಸುಗಂಧಿಷು।**
**ಕಟೇಷು ಕರಿಣಾಂ ಪೇತುಃ ಪುನ್ನಾಗೇಭ್ಯಃ ಶಿಲೀಮುಖಾಃ ॥ ೫೭ ॥**

ರಘುಸೇನೆಯು ಇದೀಗ ಖರ್ಜೂರ ಬೆಳೆಯುವ ಸೀಮೆಗೆ ಬಂದು ಅಲ್ಲಿ ತಳವೂರಿತು. ಖರ್ಜೂರವು ತಾಳೆ, ಈಚಲು, ತೆಂಗು, ಕೇದಗೆ ಜಾತಿಗೆ ಸೇರಿದ ವೃಕ್ಷ. ಖರ್ಜೂರವೃಕ್ಷದ ಕಾಂಡಗಳಿಗೆ ಗಜಸೇನೆಯು ಆನೆಗಳನ್ನು ಕಟ್ಟಿಹಾಕಿದ್ದರು. ಆ ಮದ್ದಾನೆಗಳು ತಮ್ಮ ಕಪೋಲಗಳಿಂದ ಧಾರಾಪೂರ್ವಕ ಸುಗಂಧಾತಿಶಯವುಳ್ಳ ಮದಜಲವನ್ನು ಸುರಿಸುತ್ತಿದ್ದುವು. ಈ ಸುವಾಸನೆಯಿಂದ ಆಕರ್ಷಿಸಲ್ಪಟ್ಟ ಪುನ್ನಾಗ ವೃಕ್ಷದ ಹೂಗಳಲ್ಲಿ ಕುಳಿತ್ತಿದ್ದ ಕಪ್ಪಾದ ತುಂಬಿಗಳ ದಂಡು (ಜೇನ್ನೊಣಗಳ ಹಿಂಡು) ಆನೆಗಳ ಗಂಡಸ್ಥಳದ ಕಡೆಗೆ ಧಾವಿಸಿ ಬಂದು ಅಲ್ಲಿ ಕಲೆತುವು. ಕಪ್ಪಾದ ತುಂಬಿಹಿಂಡು ಪುನ್ನಾಗಪುಷ್ಪಗಳನ್ನು ತೊರೆದು, ಮದಧಾರೆಯನ್ನು ಸುರಿಸುತ್ತಿರುವ ಮದ್ದಾನೆಗಳ ಹಿಂಡಿನ ಕಡೆಗೆ ಮದಜಲದ ಪರಿಮಳವನ್ನು ಅರಸುತ್ತಾ ಒಲಿದುಬಂದುವು. ಅವು ಗುಯಿಂಗುಟ್ಟುತ್ತಾ, ಝೇಂಕಾರ ಮಾಡುತ್ತಾ ಸವಾರಿ ಮಾಡಿದುವು.

ಅನ್ವಯ :—ಖರ್ಜೂರೀಸ್ಕಂಧನದ್ಧಾನಾಂ ಕರಿಣಾಂ ಮದೋದ್ಗಾರಸುಗಂಧಿಷು ಕಟೇಷು ಶಿಲೀಮುಖಾಃ ಪುನ್ನಾಗೇಭ್ಯಃ ಪೇತುಃ ॥

ಖರ್ಜೂರೀಣಾಂ ಸ್ಕಂಧಾಃ, ತೇಷು ನದ್ಧಾಃ, ತೇಷಾಂ। ಮದಸ್ಯ ಉದ್ಗಾರಃ, ಮದೋದ್ಗಾರೇಣ ಸುಗಂಧಿನಃ। ಪಪಾತ—ಪೇತತುಃ—ಪೇತುಃ। ಪೇತಿಥ—ಪೇತಥುಃ—ಪೇತ। ಪಪಾತ—ಪಪತ—ಪೇತಿವ—ಪೇತಿಮ। ಪತ್ಲೃ—ಗತೌ—ಲಿಟ್—ಪ್ರ.ಪು.ಬ. ॥

ಖರ್ಜೂರೀಸ್ಕಂಧನದ್ಧಾನಾಂ = ಖರ್ಜೂರವೃಕ್ಷಗಳ ಕಾಂಡಗಳಿಗೆ ಕಟ್ಟಿರುವ, ಕರಿಣಾಂ =ಆನೆಗಳ, ಮದೋದ್ಗಾರಸುಗಂಧಿಷು=ಮದಜಲ ಸುರಿಯುತ್ತಿರುವುದರಿಂದ ಪರಿಮಳಿತ ವಾದ, ಕಟೇಷು = ಗಂಡಸ್ಥಳಗಳಲ್ಲಿ, ಪುನ್ನಾಗೇಭ್ಯಃ = ನಾಗಕೇಸರ ಮರಗಳನ್ನು ಬಿಟ್ಟು, ಶಿಲೀಮುಖಾಃ = ಭ್ರಮರಗಳು, ಬಾಣಗಳು, ಪೇತುಃ = ಬಿದ್ದವು.

**58. ಅವಕಾಶಂ ಕಿಲೋದನ್ವಾನ್ ರಾಮಾಯಾಭ್ಯರ್ಥಿತೋ ದದೌ ।**
**ಅಪರಾಂತಮಹೀಪಾಲವ್ಯಾಜೇನ ರಘವೇ ಕರಮ್ ॥ ೫೮ ॥**

ಇತಿಹಾಸದಲ್ಲಿ ಕೊಡಲಿರಾಮನ ಬೇಡಿಕೆಗೆ ಪುರಸ್ಕಾರವಿತ್ತು ಪಶ್ಚಿಮದ ಸಾಗರವು ಹಿಂದಕ್ಕೆ ಸರಿದು ಪಶ್ಚಿಮ ಕರಾವಳಿಯ ಭೂಭಾಗವನ್ನೇ ನೀಡಿತು. ಆದರೆ ಇಂದು ಮಹಾ ಪರಂತಪನಾದ, ವಿಶ್ವವಿಜಯಿಯಾಗಬೇಕೆಂಬ ಮಹತ್ವಾಕಾಂಕ್ಷೆಯಿಂದ ರಘು ಸಾರ್ವಭೌಮನು ಬಂದಿದ್ದಾನೆಂದು ತಿಳಿದು ಆ ಸಾಗರರಾಜನು ಅಲ್ಲಿಯ ಆಳರಸರ ಮೂಲಕ ಹೇರಳ ಕಪ್ಪಕಾಣಿಕೆಯನ್ನು, ಪೊಗದಿಯ ರೂಪದಲ್ಲಿ ಅರ್ಪಿಸಿದನು ಎಂಬಂತೆ ತೋರಿತು. ಸ್ವತಃ ಕಾಣಿಕೆಯನ್ನು ಸಾಗರವೇ ಬಂದು ಅರ್ಪಿಸಲಿಲ್ಲ. ರಾಜಕುಮಾರರ ಮೂಲಕ ಅರ್ಪಿಸಿತು ಎಂಬಂತೆ ತೋರಿತು. ಪಶ್ಚಿಮದೇಶದ ದೊರೆಗಳು ಧೈರ್ಯಸಾಗರ ನಾದ, ಧೈರ್ಯಮೇರುವೆನಿಸಿದ ರಘುವಿನೊಡನೆ ಯುದ್ಧಮಾಡದೆ ಸಂಧಿಮಾಡಿಕೊಂಡರು. ಯುದ್ಧಮಾಡಲು ಭೀತರಾಗಿ, ಶರಣಾಗತರಾಗಿ ಕಪ್ಪಕಾಣಿಕೆಗಳನ್ನು ಅರ್ಪಿಸಿ ತಮ್ಮ ಅಧಿರಾಜನನ್ನಾಗಿ ಒಪ್ಪಿ ಉಪಚರಿಸಿದರು. ಸಮುದ್ರದಲ್ಲಿ ದೊರೆಯುವ ಮುತ್ತು, ನವರತ್ನಗಳಾದ ವಜ್ರ, ವೈಢೂರ್ಯ, ಗೋಮೇದಿಕ, ಹಳದಿ, ಪಚ್ಚೆ, ಕೆಂಪು ಮೊದ ಲಾದುವನ್ನು ಹೇರಳವಾಗಿ ಅರ್ಪಿಸಿ ತಮ್ಮ ಭಂಡಾರವನ್ನು ಬರಿದುಮಾಡಿದರು. ಅವರು ಮಾಡಿದ ಸತ್ಕಾರವು ಸಾಗರವೇ ಮಾಡಿತೋ ಎಂಬಂತೆ ತೋರಿದುದರಲ್ಲಿ ಆಶ್ಚರ್ಯ ವೇನಿಲ್ಲ.

ದದೌ ಡುದಾಞ್—ದಾನೇ—ಲಿಟ್—ಪ್ರ.ಪು.ಏ. । ಅಪರಾಂತಾನಾಂ ಮಹೀ ಪಾಲಾಃ । ಅಪರಾಂತಮಹೀಪಾಲಾನಾಂ ವ್ಯಾಜಃ, ತೇನ ॥

ಉದನ್ವಾನ್ = ಸಮುದ್ರವು, ರಾಮಾಯ = ಪರಶುರಾಮನಿಗೋಸ್ಕರ, ಅಭ್ಯರ್ಥಿತಃ = ಪ್ರಾರ್ಥಿಸಲ್ಪಟ್ಟು, ಅವಕಾಶಂ = ಸ್ಥಳವನ್ನು, ದದೌ ಕಿಲ = ಕೊಟ್ಟಿತಷ್ಟೆ, ರಘವೇ = ರಘುರಾಜನಿಗಾದರೋ. ಅಪರಾಂತಮಹೀಪಾಲವ್ಯಾಜೇನ = ಪಾಶ್ಚಾತ್ಯ ರಾಜರ ನೆಪ ದಿಂದ, ಕರಂ = ಕಪ್ಪವನ್ನು, ದದೌ = ಕೊಟ್ಟಿತು.

**59. ಮತ್ತೇಭರದನೋತ್ಕೀರ್ಣವ್ಯಕ್ತವಿಕ್ರಮಲಕ್ಷಣಮ್ ।**
**ತ್ರಿಕೂಟಮೇವ ತತ್ರೋಚ್ಚೈರ್ಜಯಸ್ತಂಭಂ ಚಕಾರ ಸಃ ॥ ೫೯ ॥**

ಅಲ್ಲಿ ಆ ಅಸ್ಮಾಕ ಅಥವಾ ತಿರುವಾಂಕೂರು ರಾಜ್ಯದಲ್ಲಿ ಜಯಭೇರಿಯನ್ನು ಬಾರಿಸಿ ಅಲ್ಲಿರುವ ತ್ರಿಕೂಟಗಿರಿಯನ್ನೇ ಜಯಸ್ತಂಭವನ್ನಾಗಿ ಮಾಡಿಕೊಂಡನು. ತಿರುವನಂತ ಪುರದ ಬಳಿಯಿರುವ ಕೂಟಪರ್ವತವು ತ್ರಿಕೂಟಪರ್ವತ(ತ್ರಿಕೂಟಾಚಲ)ವೆಂದೇ ಕರೆಯ ಲ್ಪಡುತ್ತದೆ. ಇನ್ನೊಂದು ಪ್ರಖ್ಯಾತವಾದ ತ್ರಿಕೂಟಾಚಲವು ಶ್ರೀಲಂಕಾದಲ್ಲಿದೆ. ಅವನ್ನು

ಸಂಪೇಲಾಪರ್ವತವೆಂದೂ ಹೆಸರಿಸಲಾಗಿದೆ. ರಘುವಿನ ಸೊಕ್ಕೇರಿದ ಮದ್ದಾನೆಗಳು ತ್ರಿಕೂಟಾಚಲವನ್ನೇರಿ ಸಂತಸಗೊಂಡು ತಮ್ಮ ದಂತಗಳಿಂದ ಅಥವಾದಾಡೆಗಳಿಂದ ಬಂಡೆಗಳನ್ನು ತಿವಿದು ಗಾಸಿಗೊಳಿಸಿದವು. ಹೀಗೆ ಗಾಸಿಗೊಳಿಸಿದಾಗ ಗೀಚಿ ಗಾಸಿಗೊಳಿಸಿದ ಅಕ್ಷರಗಳೇ ಬರೆದ ಶಿಲಾಶಾಸನವಾದುವು. ಇದು ರಘುವಿನ ಅವ್ಯಕ್ತವಾದ ವಿಕ್ರಮದ ಕುರುಹು. ದಂತಪ್ರಹಾರದಿಂದ ಗೀರಿ ಬರೆದಂತೆ ಅವುಗಳೇ ಅಕ್ಷರವಾಗಿ (ಲಿಪಿಯಾಗಿ) ಅಕ್ಷರವನ್ನು ಬಂಡೆಯಲ್ಲಿ ಕೆತ್ತಿದಂತೆ, ಶಾಶ್ವತವಾದ ಕೀರ್ತಿಸ್ತಂಭವಾದುವು. ಶ್ರೀರಾಮನ ಪೂರ್ವಜನಾದ ರಘುವು ತನ್ನ ಜಯವನ್ನು ಸೂಚಿಸಲು ಈ ತ್ರಿಕೂಟಪರ್ವತವನ್ನೇ ಜಯಸ್ತಂಭವನ್ನಾಗಿ ಮಾಡಿಕೊಂಡು ಅದರಲ್ಲಿ ತನ್ನ ವಿಜಯವನ್ನು ಬರೆದು ಶಿಲಾಶಾಸನದ ಮೂಲಕ ಬರೆದು ಆಚಂದ್ರಾರ್ಕವಾಗಿ ಸೂಚಿಸಿದನೋ ಎಂಬಂತೆ ತೋರಿತು.

ಮತ್ತಾಶ್ಚ ತೇ ಇಭಾಶ್ಚ । ಮತ್ತೇಭಾನಾಂ ರದನಾಃ, ಮತ್ತೇಭರದನೈಃ ಉತ್ಕೀರ್ಣಾನಿ। ವ್ಯಕ್ತಾನಿ ಚ ತಾನಿ ವಿಕ್ರಮಲಕ್ಷಣಾನಿ, ವ್ಯಕ್ತವಿಕ್ರಮಲಕ್ಷಣಾನಿ । ಮತ್ತೇಭರದನೋತ್ಕೀರ್ಣಾ ಏವ ವ್ಯಕ್ತವಿಕ್ರಮಲಕ್ಷಣಾನಿ ಯಸ್ಮಿನ್ ಸಃ, ತಮ್ । ಜಯಸೂಚಕಃ ಸ್ತಂಭಃ, ತಮ್ । ಚಕಾರ—ಡುಕೃಞ್—ಕರಣೇ—ಲಿಟ್—ಪ್ರ.ಪು.ಏ. ॥

ತತ್ರ= ಅಲ್ಲಿ , ಸಃ = ಆ ರಘುರಾಜನು, ಮತ್ತೇಭ = ಮದಭರಿತ ಆನೆಗಳ (ದಂತಿಗಳ), ರದನ = ದಂತಗಳಿಂದ, ಉತ್ಕೀರ್ಣ ಮಾಡಿದ ದಂತಕ್ಷತಗಳೇ, ವ್ಯಕ್ತ= ಸ್ಪಷ್ಟವಾಗಿ ತೋರುವ ವಿಕ್ರಮಲಕ್ಷಣಮ್ = ಪರಾಕ್ರಮದ ಗುರುತಿರುವ, ತ್ರಿಕೂಟಮೇವ = ತ್ರಿಕೂಟ ಪರ್ವತವನ್ನೇ, ಉಚ್ಚೈಃ ಎತ್ತರವಾದ, ಜಯಸ್ತಂಭಂ = ಜಯಸೂಚಕ ಕಂಬವನ್ನಾಗಿ. ಚಕಾರ = ಮಾಡಿದನು.

**60. ಪಾರಸೀಕಾಂಸ್ತತೋ ಜೇತುಂ ಪ್ರತಸ್ಥೇ ಸ್ಥಲವರ್ತ್ಮನಾ ।**
**ಇಂದ್ರಿಯಾಖ್ಯಾನಿವ ರಿಪೂಂಸ್ತತ್ತ್ವಜ್ಞಾನೇನ ಸಂಯಮೀ ॥ ೬೦ ॥**

ಆ ಬಳಿಕ ಆ ಸಮರೈಕಮೇರುವು ಪಾರಸೀಕ ದೇಶದ ಮೇಲೆ ದಂಡಯಾತ್ರೆಯನ್ನು ಕೈಗೊಂಡನು. ಇಂದ್ರಿಯಂಗಳೆಂಬ ಶತ್ರುಗಳನ್ನು ಪರಮತತ್ತ್ವಜ್ಞಾನಿಯು ಸಂಯಮದಿಂದ ಗೆಲ್ಲುವಂತೆ ಪಾರಸೀಕರನ್ನು ಜಯಿಸಲು ರಘುವು ಭೂಮಾರ್ಗದಿಂದ ಹಿಡಿದನು. ಯೋಗಿವರೇಣ್ಯನು ಇಂದ್ರಿಯಗಳೆಂಬ ಶತ್ರುಗಳನ್ನು ಬಹಳ ಸಂಯಮದಿಂದ ಗೆಲ್ಲುವಂತೆ, ಗೆದ್ದು ಆತ್ಮಸಾಕ್ಷಾತ್ಕಾರ ಮಾಡಿಕೊಂಡು ಪರಮಾತ್ಮನ ದರ್ಶನ ಪಡೆವಂತೆ ರಘುವು ಅಜೇಯರಾದ ಯುದ್ಧವೀರರಾದ ಪಾರಸೀಕರನ್ನು ಅವರ ನೆಲದಲ್ಲಿ ಅವರನ್ನು ಸೋಲಿಸಿ, ಆ ಬಳಿಕ ಜಯಶ್ರೀಯನ್ನು ವರಿಸಿದನು. ಇಂದ್ರಿಯಂಗಳನ್ನು ಪರಮಾತ್ಮನ ಧ್ಯಾನದಿಂದ (ಧ್ಯಾನಮಾರ್ಗದಿಂದ) ಆಧ್ಯಾತ್ಮ ತತ್ತ್ವಜ್ಞಾನದಿಂದ ಕಷ್ಟಕರವಾದ ಜ್ಞಾನಮಾರ್ಗದಿಂದ, ಕರ್ಮಯೋಗದಿಂದ. ಕ್ರಿಯಾತ್ಮಕವಾದ ಕರ್ತವ್ಯನಿಷ್ಠೆಯಿಂದ, ಗೆದ್ದು ವಶಮಾಡಿಕೊಂಡು ಪರಮಾತ್ಮನ ಸಕ್ಷಾತ್ಕಾರ ಪಡೆಯುವಂತೆ, ರಘುವು ಯುದ್ಧ ಕಷ್ಟನಷ್ಟಗಳನ್ನು ಸಂಯಮದಿಂದ ಸಹಿಸಿ ತನ್ನ ಗುರಿ ಸಾಧಿಸಿ ಪಾರಸೀಕರನ್ನು ತನ್ನ ಮಾಂಡಲಿಕರನ್ನಾಗಿ ಮಾಡಿಕೊಂಡನು. ಪಾರಸೀಕ ದೇಶದಲ್ಲಿ (ಪರ್ಶಿಯಾ, ಇರಾನ್) ಇನವಂಶದ ಧ್ವಜವು ಸ್ವಚ್ಛಂದವಾಗಿ ಹಾರಾಡಿತು. ಪರ್ಶಿಯಾದೇಶದ ದಂಡಯಾತ್ರೆಗೆ ಭೂಮಾರ್ಗವಾಗಿಯೇ

ತೆರಳಿದನು. ಸಮೀಪದ ಜಲಮಾರ್ಗವು ನಿಷಿದ್ಧವಾದುದರಿಂದ (ಅಂದಿನ ಸಾಮಾಜಿಕ ಕಟ್ಟಳೆಯಂತೆ) ಭೂಮಾರ್ಗದಿಂದಲೇ ಪಯಣಿಸಿದರು.

ಪ್ರ—ಉಪಸರ್ಗ—"ಸಮವಪ್ರವಿಭ್ಯಃ ಸ್ಥಃ" ಸೂತ್ರದಿಂದ ಪ್ರಯೋಗದಿಂದ ಷ್ಠಾ ಧಾತು ಆತ್ಮನೇಪದಿಯಾಗಿದೆ. ಷ್ಠಾ—ಗತಿನಿವೃತ್ತೌ—ಲಿಟ್—ಪ್ರ.ಪು.ಏ.। ಸ್ಥಲಸ್ಯ ವರ್ತ್ಮ, ತೇನ। ಇಂದ್ರಿಯಾಣಿ ಆಖ್ಯಾ ಯೇಷಾಂ ತೇ, ಇಂದ್ರಿಯಾಖ್ಯಾಃ, ತಾನ್। ತತ್ತ್ವಸ್ಯ ಜ್ಞಾನಂ ತೇನ॥

ತತಃ = ಆಮೇಲೆ, ಸಂಯಮೀ = ಯೋಗಿಯು, ತತ್ತ್ವಜ್ಞಾನೇನ = ಪರಮಾತ್ಮನ ಧ್ಯಾನದಿಂದ, ಇಂದ್ರಿಯಾಖ್ಯಾನ್ = ಇಂದ್ರಿಯಗಳೆಂಬ, ರಿಪೂನ್ ಇವ = ಶತ್ರುಗಳನ್ನು ಎಂಬಂತೆ, ಪಾರಸೀಕಾನ್ = ಪಾರಸೀದೇಶದ ರಾಜರನ್ನು, ಜೇತುಂ = ಗೆಲ್ಲಲು, ಸ್ಥಲವರ್ತ್ಮನಾ = ಭೂಮಿಮಾರ್ಗದಿಂದಲೇ, ಪ್ರತಸ್ಥೇ = ಹೊರಟನು.

**61. ಯವನೀಮುಖಪದ್ಮಾನಾಂ ಸೇಹೇ ಮಧುಮದಂ ನ ಸಃ ।**
**ಬಾಲಾತಪಮಿವಾಬ್ಜಾನಾಮಕಾಲಜಲದೋದಯಃ ॥ ೬೧ ॥**

ರಘುನರೇಶನು ಯವನವನಿತೆಯರ ಮುಖಪದ್ಮವು ದ್ರಾಕ್ಷಾರಸಪಾನದಿಂದ ಕೆಂಪಾಗಿರುವುದನ್ನು ನೋಡಿ ಸಹಿಸಲಿಲ್ಲ. ಹೇಗೆ ಬಾಲಸೂರ್ಯನು ಪ್ರಾತಃಕಾಲದ ಸಮಯ ಬೇಸಿಗೆ ಕಾಲದಲ್ಲಿ ಮೋಡಗಳು ಅರಳಿನಿಂತ ತಾವರೆ ಹೂಗಳ ಕೊಳವನ್ನು ಅಡ್ಡೈಸಬಂದರೆ ಸಹಿಸದಿರುವಂತೆ ಸಹಿಸದಾದನು. ಮೋಡಗಳು ಬಾನಲ್ಲಿ ದಟ್ಟೈಸುವುದು ಮಳೆಗಾಲದಲ್ಲಿ ಮೋಡಗಳಿರುವುದರಿಂದ ಕಮಲಗಳಿಗೆ ಬಿಸಿಲಿನ ಸಂಪರ್ಕವಾಗದೆ ಇರುವುದರಿಂದ ಅವು ವಿಕಸಿತವಾಗುವುದಿಲ್ಲ.

ಆದರೆ ಇದೀಗ ಬೇಸಿಗೆಕಾಲ. ಮೋಡಗಳು ಕಾಣಸಿಗುವುದೇ ಅಪರೂಪ. ಇಂತಹ ಅಕಾಲದಲ್ಲಿ ಮೋಡವು ನಳಿನಬಂಧುವಾದ ಸೂರ್ಯನನ್ನು ತಡೆದು ಅವನ ಕಿರಣಗಳನ್ನೇ ನಂಬಿರುವ ಕಮಲಪುಷ್ಪಗಳಿಗೆ ಕೇಡನ್ನು ಬಗೆದರೆ ಸೂರ್ಯದೇವರು ಸಹಿಸದಿರುವಂತೆ ರಘುವಿನ ಸ್ಥಿತಿ. ಯವನ ಸ್ತ್ರೀಯರು ಸಾಮಾನ್ಯವಾಗಿ ಪಾನಾಸಕ್ತರು. ಮಧುರವಾದ ಮಧುವನ್ನು ಚೆನ್ನಾಗಿ ಕುಡಿಯುವರು. ಮಧುಪಾನದಿಂದ ಕೆಂಪೇರಿದ ಮುಖ ಕಮಲವುಳ್ಳವರು ತಾವರೆಯ ಮಿತ್ರನಾದ ಕಮಲಬಾಂಧವನಾದ ಸೂರ್ಯದೇವನು ಪದ್ಮಮುಖಿಯರ ಕೆಂಪೇರಿದ ಮಧುವಿನಿಂದ ಮದವೇರಿದ ಮುಖವನ್ನು ಕಂಡರೂ ಆಕರ್ಷಿತನಾಗಲಿಲ್ಲ, ಅಕಾಲದಲ್ಲಿ ಕಾಣಿಸಿದ ಮೋಡಗಳನ್ನು ಕಡೆಗಣಿಸುವಂತೆ ಕಡೆಗಣಿಸಿದನು. ರಘುವಿನ ದಂಡಯಾತ್ರೆಯು ಅವರಲ್ಲಿ ಸ್ತ್ರೀಸಹಜವಾದ ಭಯವನ್ನು ಹುಟ್ಟಿಸಿದೆ. ಇದರಿಂದ ಅವರ ಮುಖಪದ್ಮವು ಬೆಳಚಿಹೋಗಿದೆ ಅವರ ಮುಖಪದ್ಮವು ಎಂದಿನಂತೆ ಕಳಾಪೂರ್ಣವಾಗಿಲ್ಲ. ರಘುವಿನ ದಂಡಯಾತ್ರೆಯೂ ಕಾಲವಲ್ಲದ ಕಾಲದಲ್ಲಿ (ಅಕಾಲದಲ್ಲಿ) ನಡೆದಿದೆ. ಆ ವಸಂತಮಾಸದಲ್ಲಿ ತುಂಬುಜವ್ವನೆಯರಾದ ಯವನ ಸ್ತ್ರೀಯರು ಬಹಳ ಖುಷಿಯಲ್ಲಿ ಇರುವ ಸಮಯ ಅವರು ಚಟುವಟಿಕೆಶೀಲರು ಆದರೆ ಅವರು ಮೊದಲಿನಂತೆ ಕ್ರೀಡಾಸಕ್ತರಾಗಿಲ್ಲ ಅವರ ಮುಖಪದ್ಮವು ಬೇಸಿಗೆಕಾಲದ ಮೋಡಗಳಂತೆ ಬೆಳಚಿದೆ, ಬಾಲಸೂರ್ಯನ ತಾಪದಿಂದ ಗ್ರೀಷ್ಮಕಾಲದಲ್ಲಿ, ಅಕಾಲದಲ್ಲಿ ತಲೆದೋರಿದ ಮೋಡಗಳ ಕಾಂತಿಕುಂದಿದಂತೆ ಆ ಸ್ತ್ರೀಯರ ಮುಖದ ಕಾಂತಿಯೂ ಕಂದಿ ಕುಂದಿತು.

ಅನ್ವಯಃ:—ಸ ಯೌವನೀ ಮುಖಪದ್ಮಾನಾಂ ಮಧುಮದಮ್ ಅಕಾಲಜಲದೋದಯಃ ಅಬ್ಜಾನಾಂ ಬಾಲಾತಪಮ್ ಇವ ನ ಸೇಹೇ ॥

ಮುಖಾನಿ ಪದ್ಮಾನೀವ । ಯುವತೀನಾಂ ಮುಖಪದ್ಮಾನಿ । ತೇಷಾಮ್ ॥ ಸೇಹೇ—ಸೇಹಾತೇ—ಸೇಹಿರೇ ಇತ್ಯಾದಿ । ಷಹ—ಮರ್ಷಣೇ—ಲಿಟ್—ಪ್ರ.ಪು.ಏ. । ಮಧುನಃ, ಮದಃ, ತಮ್ । ಬಾಲಶ್ಚಾಸೌ ಆತಪಶ್ಚ ತಮ್ । ಜಲದಾನಾಂ ಉದಯಃ । ಅಕಾಲೇ ಜಲದೋದಯಃ.

ಸಃ = ರಘುರಾಜನು, ಅಕಾಲೇ = ಮಳೆಗಾಲವನ್ನು ಬಿಟ್ಟು ಉಳಿದ ಕಾಲದಲ್ಲಿ. ಜಲದೋದಯಃ = ಮೋಡಗಳ ಉತ್ಪತ್ತಿಯು, ಅಬ್ಜಾನಾಂ = ತಾವರೆಗಳಿಗೆ, ಬಾಲಾತಪಮಿವ=ಎಳೆಬಿಸಿಲು ಎಂಬಂತೆ, ಯುವತೀಮುಖಪದ್ಮಾನಾಂ=ಯುವತಿಸ್ತ್ರೀಯರ ಕಮಲದಂತಿರುವ ಮುಖಗಳ, ಮಧುಮದಂ = ಮದ್ಯದಿಂದ ಉಂಟಾದ. ಮದಂ = ಮತ್ತತೆ (ಕೆಂಪು ಬಣ್ಣವನ್ನು)ಯನ್ನು, ನ ಸೇಹೇ = ಸಹಿಸಲಿಲ್ಲ.

**62. ಸಂಗ್ರಾಮಸ್ತುಮುಲಸ್ತಸ್ಯ ಪಾಶ್ಚಾತ್ಯೈರಶ್ವಸಾಧನೈಃ ।**
**ಶಾರ್ಙ್ಗಕೂಜಿತವಿಜ್ಞೇಯ ಪ್ರತಿಯೋಧೇ ರಜಸ್ಯಭೂತ್ ॥ ೬೨ ॥**

ಇರಾನಿಯನರಿಗೂ ಭಾರತೀಯರಿಗೂ (ಇಂಡಿಯನರಿಗೂ) ಘೋರವಾದ ಸಂಗ್ರಾಮವು ಅಂದು ಪರ್ಶಿಯಾದೇಶದಲ್ಲಿ ನಡೆಯಿತು. ಯವನರ ಅಶ್ವದಳದೊಡನೆ ರಘುವು ತುಮುಲಯುದ್ಧವನ್ನು ಆರಂಭಿಸಿದನು. ಆಗ ಉಭಯಪಕ್ಷದ ಅಶ್ವಬಲದಿಂದ. ಎದ್ದ ಕಾಲ್ಧೂಳು ಮೋಡದಂತೆ ಕವಿದು ದಿಕ್ಕುಗಳು ಕಣ್ಮರೆಯಾದುವು, ಧೂಳಿನ ಕತ್ತಲೆ ದಶದಿಕ್ಕುಗಳನ್ನು ವ್ಯಾಪಿಸಿತು. ಆಗ ಕೇಳಿಸುತ್ತಿದ್ದುದು ಧನುಷ್ಟಂಕಾರ ಮಾತ್ರ, ಬರಿಯ ಸಿಂಜನಿಯ ಸದ್ದು ಮಾತ್ರ ಕೇಳಿಸುತ್ತಿತ್ತು. ಆ ಶಬ್ದ ಧ್ವನಿಯ ಸಹಾಯದಿಂದ ಉಭಯ ಪಕ್ಷದ ಯೋಧರು ತಮ್ಮ ಎದುರಾಳಿಗಳನ್ನು ತುಮುಲಸಂಕುಲಸಂಗ್ರಾಮದಲ್ಲಿ ಪತ್ತೆಹಚ್ಚಿ ಕಾದಾಡಿದರು (ಹೋರಾಡಿದರು).

ಅಶ್ವಾಃ—ಸಾಧನಾನಿ ಏಂ ತೇ ಅಶ್ವಸಾಧನಾಃ, ತೈಃ । ಶಾರ್ಙ್ಗಾಣಾಂ ಕೂಜಿತಾನಿ, ತೈಃ ವಿಜ್ಞೇಯಾಃ, ಶಾರ್ಙ್ಗಕೂಜಿತವಿಜ್ಞೇಯಾಃ ಪ್ರತಿಯೋಧಾಃ ಯಸ್ಮಿನ್ ತತ್—ಶಾರ್ಙ್ಗಕೂಜಿತ ವಿಜ್ಞೇಯಪ್ರತಿಯೋಧಮ್, ತಸ್ಮಿನ್ । ಅಭೂತ್—ಭೂ—ಸತ್ತಾಯಾಂ—ಲುಙ್—ಪ್ರ.ಪು.ಏ. ॥

ತಸ್ಯ= ಆ ರಘುರಾಜನಿಗೆ, ಅಶ್ವಸಾಧನೈಃ = ಕುದುರೆಯ ಸೈನ್ಯವುಳ್ಳ, (ರಾವುತದಳ) ಪಾಶ್ಚಾತ್ಯೈಃ = ಯವನರೊಡನೆ, ಶಾರ್ಙ್ಗ = ಬಿಲ್ಲುಗಳ, ಕೂಜಿತ = ಶಬ್ದಗಳಿಂದ, ವಿಜ್ಞೇಯ = ತಿಳಿಯಬೇಕಾದ, ಪ್ರತಿಯೋಧೇ = ಶತ್ರುಭಟರಿರುವ, ರಜಸಿ = ಧೂಳಿನಲ್ಲಿ, ತುಮುಲಃ = ದ್ವಂದ್ವಯುದ್ಧ, ಸಂಗ್ರಾಮಃ = ಯುದ್ಧವು, ಅಭೂತ್ = ಆಯಿತು, ಶಾರ್ಙ್ಗಮ್ = ಶಾರ್ಙ್ಗಾಣಾಂ ವಿಕಾರಮ್.

**63. ಭಲ್ಲಾಪವರ್ಜಿತೈಸ್ತೇಷಾಂ ಶಿರೋಭಿಃ ಶ್ಮಶ್ರುಲೈರ್ಮಹೀಮ್ ।**
**ತಸ್ತಾರ ಸರಘಾವ್ಯಾಪ್ತೈಃ ಸ ಕ್ಷೌದ್ರಪಟಲೈರಿವ ॥ ೬೩ ॥**

ಆ ಪಾಶ್ಚಾತ್ಯ ಸೈನಿಕರು ತಲೆ ಬೋಳಿಸಿಕೊಂಡ ಗಡ್ಡಧಾರಿಗಳು. ಭಲ್ಲಿಯಿಂದ ಮತ್ತು ಅರ್ಧಚಂದ್ರಾಕೃತಿಯ ಬಾಣಾವಳಿಗಳಿಂದ ರಘುವು ಮತ್ತು ವೀರಸೈನಿಕರು ತಮ್ಮ ಇದಿರಾಳುಗಳ ಶಿರಸ್ತ್ರಾಣಗಳಿಂದ ಶೋಭಿಸುತ್ತಿರುವ ತಲೆಗಳನ್ನು ಕತ್ತರಿಸಿ ರಣಭೂಮಿಯಲ್ಲಿ ಹರಹಿದರು. ಆಗ ಭೂಮಿಯು ಶಿರಸ್ತ್ರಾಣಗಳಿಂದ ಅಲಂಕೃತವಾದ ಹಾಗೂ ಶಿರಸ್ತ್ರಾಣವಿಲ್ಲದೆ ಬೋಳುಮಂಡೆಗಳಿಂದ ಶೋಭಿಸುವ ತಲೆ(ಶಿರಗಳು)ಗಳಿಂದ ಸಂಗ್ರಾಮಭೂಮಿಯು ತುಂಬಿಹೋಯಿತು. ಹೀಗೆ ರಣಭೂಮಿಯ ಮೇಲೆ ಬಿದ್ದಿರುವ ಯವನ ವೀರರ ಶಿರಗಳು ಕಪ್ಪಾದ ಜೇನುನೊಣಗಳು ಮುಸುಕಿರುವ ಹಳದಿಬಣ್ಣದ ಜೇನುಗೂಡುಗಳನ್ನು ನೆಲದ ಮೇಲೆ ಹರಡಿದಂತೆ ಬಹು ಸೊಗಸಾಗಿ ಕಂಡಿತು.

ಅನ್ವಯ :—ಭಲ್ಲಾಪವರ್ಜಿತೈಃ ಶ್ಮಶ್ರುಲೈಃ ತೇಷಾಂ ಶಿರೋಭಿಃ ಸ ರಘಾವ್ಯಾಪ್ತೈಃ ಕ್ಷೌದ್ರಪಟಲೈಃ ಸ ಇವ ಮಹೀಂ ತಸ್ತಾರ ॥

ಭಲ್ಲೈಃ ಅಪವರ್ಜಿತಾನಿ, ತೈಃ । ಸರಘಾಭಿಃ ವ್ಯಾಪ್ತಾಃ, ತೈಃ । ಕ್ಷೌದ್ರಾಣಾಂ ಪಟಲಾನಿ, ತೈಃ । ತಸ್ತಾರ—ತಸ್ತರತುಃ—ತಸ್ತರುಃ । ತಸ್ತರಿಥ—ತಸ್ತರಥುಃ—ತಸ್ತರ । ತಸ್ತಾರ, ತಸ್ತರ—ತಸ್ತರಿವ—ತಸ್ತರಿಮ । ಸ್ತೃ—ಆಚ್ಛಾದನೇ—ಲಿಟ್—ಪ್ರ.ಪು.ಏ. ॥

ಸಃ = ಆ ರಘುರಾಜನು, ಭಲ್ಲಾಪವರ್ಜಿತೈಃ = ಅರ್ಧಚಂದ್ರಾಕಾರದ ಬಾಣಾವಳಿಗಳಿಂದ ಕತ್ತರಿಸಿದ, ಶ್ಮಶ್ರುಲೈಃ = ಗಡ್ಡಮೀಸೆಗಳಿಂದ ಕೂಡಿದ, ತೇಷಾಂ = ಪಾಶ್ಚಾತ್ಯರ, ಶಿರೋಭಿಃ = ತಲೆಗಳಿಂದ, ಸರಘಾವ್ಯಾಪ್ತೈಃ = ಜೇನುನೊಣಗಳಿಂದ ಕೂಡಿದ ಕ್ಷೌದ್ರಪಟಲೈರಿವ = ಜೇನುತೊಟ್ಟಿಗಳಿಂದ ಕೂಡಿರುವ, ತಸ್ತಾರ = ಮುಚ್ಚಿದನು, ಮಹೀಂ = ಭೂಮಿಯನ್ನು, ಭಲ್ಲಃ = ಅರ್ಧಚಂದ್ರಾಕೃತಿಬಾಣ ಶ್ಮಶ್ರುಲೈಃ = ಶ್ಮಶ್ರೂಣಿ ಸನ್ತಿ ಏಷು ಇತಿ ತೈಃ ಶ್ಮಶ್ರು + ಲ(ಚ್) ಸರಘಾ = ತುಂಬಿಗಳು, ಕ್ಷೌದ್ರಪಟಲೈಃ = ಕ್ಷುದ್ರಾ (ತುಂಬಿ) ಕ್ಷುದ್ರಾಭಿಕೃತಾನ = ಕ್ಷೌದ್ರಾಣಿ ತೇಷಾಂ ಪಟಲೈಃ = ಜೇನುಗೂಡು.

**64. ಅಪನೀತಶಿರಸ್ತ್ರಾಣಾಂ ಶೇಷಾಸ್ತಂ ಶರಣಂ ಯಯುಃ ।
ಪ್ರಣಿಪಾತಪ್ರತೀಕಾರಃ ಸಂರಂಭೋ ಹಿ ಮಹಾತ್ಮನಾಮ್ ॥ ೬೪ ॥**

ಉಳಿದುಳಿದ ನರವರರು ತಮ್ಮ ಸೇನೆಯೊಂದಿಗೆ ಶರಣುಬಂದರು. ತಮ್ಮ ಶಿರಸ್ತ್ರಾಣಗಳನ್ನು ತೆಗೆದು ಮರೆಹೊಕ್ಕರು. ಮಹಾತ್ಮನಾದ ರಘುವು ಅಭಯಪ್ರದಾನ ಮಾಡಿದನು. ಆರ್ತರಾದವರನ್ನು ರಕ್ಷಿಸುವುದು ಶ್ರೇಷ್ಠರಾದವರ ಗುಣವಲ್ಲವೆ ಅವರ ಕೋಪವೂ ಹಾಗೆಯೇ (ಕರ್ಪೂರದಂತೆ) ಒಮ್ಮೆ ಮಹೋಗ್ರವಾಗಿ ವರ್ತಿಸಿದರೂ ಕೂಡಲೇ ಶಾಂತನಾದನು. ಸೋತವರ ಮೇಲೆ ಕೂಡಲೇ ಅನುಕಂಪ ತೋರಿದನು. ಹೀಗೆ ಅನುಕಂಪ ತೋರುವುದು ಮಹಾವೀರರ ಹಿರಿಯ ಗುಣ, ದೊಡ್ಡಗುಣ. ಔದ್ಧತ್ಯ ತೋರಿಸಿದಾಗ ಅವನ್ನು ನಾಶಪಡಿಸಲು ಕ್ರುದ್ಧರಾಗುತ್ತಾರೆ ಆದರೆ ಶರಣಾಗತರಾಗಿ ನಮಿಸಿದಾಗ ಪ್ರಾಣದಾನ (ಜೀವದಾನ) ಮಾಡಿ ರಕ್ಷಿಸುತ್ತಾರೆ.

ಅನ್ವಯ :—ಮಹಾತ್ಮನಾಮ್ ಸಂರಂಭಃ ಹಿ ಪ್ರಣಿಪಾತ ಪ್ರತೀಕಾರಃ । ಪ್ರಣಿಪಾತಃ ಪ್ರತೀಕಾರಃ ಯಸ್ಯ ॥

ಅಪನೀತಾನಿಶಿರಸ್ತ್ರಾಣಾನಿ ಯೈಸ್ತೇ—ಅಪ—ಣಾಃ । ಯಯುಃ— ಯಾ—ಪ್ರಾಪಣೇ

—ಲಿಟ್—ಪ್ರ.ಪು.ಬ. । ಪ್ರಣಿಪಾತಃ ಪ್ರತೀಕಾರಃ ಯಸ್ಯ ಸಃ—ಪ್ರಣಿಪಾತಪ್ರತೀಕಾರಃ ॥

ಶೇಷಾಃ = ಅಳಿದುಳಿದವರು, ಅಪನೀತಶಿರಸ್ತ್ರಾಣಾಃ = ತೆಗೆದುಹಾಕಿದ ತಲೆಯ ಕುಲಾವಿ (ಹೆಲ್ಮೆಟ್) ಉಳ್ಳವರಾಗಿ, ತಂ = ಆ ರಘುರಾಜನನ್ನು, ಶರಣಂ = ರಕ್ಷಕನನ್ನಾಗಿ ಪಡೆದರು, ಮಹಾತ್ಮಾನಾಂ = ಮಹಾಪುರುಷರ, ಸಂರಂಭಃ = ಕೋಪವು, ಪ್ರಣಿಪಾತಃ = ನಮಸ್ಕಾರವೇ, ಪ್ರತೀಕಾರಃ = ಪ್ರತಿಕ್ರಿಯೆಯಾಗಿರುವುದಷ್ಟೆ.

ಅಲಂಕಾರ : ಅರ್ಥಾಂತರನ್ಯಾಸ ಅಲಂಕಾರ.

**65. ವಿನಯಂತೇ ಸ್ಮತದ್ಯೋಧಾ ಮಧುಭಿರ್ವಿಜಯಶ್ರಮಮ್ ।**
**ಆಸ್ತೀರ್ಣಾಜಿನರತ್ನಾಸು ದ್ರಾಕ್ಷಾವಲಯಭೂಮಿಷು ॥ ೬೫ ॥**

ರಘುವಿನ ಸೈನಿಕರು ತಮ್ಮ ಸಮರದ ಆಯಾಸವನ್ನು ಉತ್ತಮವಾದ ಪಾನೀಯ ವೆನಿಸಿದ ದ್ರಾಕ್ಷಾರಸವನ್ನು (ಮಧುರಸವನು) ಪಾನಮಾಡಿ ನೀಗಿಕೊಂಡರು. ಅಲ್ಲಿಯ ದ್ರಾಕ್ಷಾತೋಟಗಳಲ್ಲಿ ರತ್ನಕಂಬಳಿಯಂತೆ ಕಾಣುವ, ಉತ್ತಮವಾದ ಜಿಂಕೆಯ ಚರ್ಮ ವನ್ನು (ಚರ್ಮರತ್ನಾನಿ) ನೆಲಕ್ಕೆ ಹಾಸಿದರು. ಹೀಗೆ ಹಾಸಿದ ಕೃಷ್ಣಾಜಿನದ ಮೇಲೆ ಆ ಭಟರು ಕುಳಿತು ಭರ್ಜರಿಯಾಗಿ ದ್ರಾಕ್ಷಾರಸವನ್ನು ಪಾನಮಾಡಿ ಸಮರದ ಶ್ರಮ ವನ್ನು, ಯುದ್ಧಖೇದವನ್ನು, ಯುದ್ಧದ ಆಯಾಸ ಪರಿಹರಿಸಿಗೊಂಡರು. ವಿಜಯಶ್ರಮ ವನ್ನು ನೀಗಿಕೊಂಡರು.

ಅನ್ವಯ :—ತದ್ಯೋಧಾಃ ಆಸ್ತೀರ್ಣಾಜಿನರತ್ನಾಸು ದ್ರಾಕ್ಷಾಲವಯಭೂಮಿಷು ಮಧುಭಿಃ ವಿಜಯಶ್ರಮಂ ವಿನಯಂತೇ ಸ್ಮ ॥

ವಿ—ಉಪಸರ್ಗ—ಣೀಞ್—ಪ್ರಾಪಣೇ—ಲಟ್—ನಯಂತೇ—ನಯೇತೇ—ನಯಂತೇ —ಇತ್ಯಾದಿ, ಸ್ಮ ಯೋಗವಿರುವುದರಿಂದ ಭೂತಕಾಲಾರ್ಥ ತೋರುತ್ತದೆ. ತಸ್ಯ ಯೋಧಾಃ, ತದ್ಯೋಧಾಃ । ವಿಜಯಸ್ಯಶ್ರಮಃ, ತಮ್ । ಆಸ್ತೀರ್ಣಾನಿ ಅಜಿನರತ್ನಾನಿ ಯಾಸು ತಾಃ, ಆಸ್ತೀರ್ಣಾಜಿನರತ್ನಾಃ, ತಾಸು । ದ್ರಾಕ್ಷಾವಲಯಾನಾಂ ಭೂಮಯಃ, ತಾಸು । ದ್ರಾಕ್ಷಾಣಾಂ ವಲಯಾಃ ॥

ತದ್ಯೋಧಾಃ = ರಘುರಾಜನಭಟರು, ಆಸ್ತೀರ್ಣಾಜಿನರತ್ನಾಸು = ಹಾಸಿದ ಉತ್ತಮ ವಾದ ಜಿಂಕೆಯ ಚರ್ಮಗಳುಳ್ಳ, ದ್ರಾಕ್ಷಾವಲಯಭೂಮಿಷು = ದ್ರಾಕ್ಷಾ (ಬಳ್ಳಿ) ಚಪ್ಪರಗಳ ಕೆಳಭಾಗದಲ್ಲಿ, ಮಧುಭಿಃ = ದ್ರಾಕ್ಷಾಸವದಿಂದ, ವಿಜಯಶ್ರಮಂ = ಯುದ್ಧದ ಆಯಾಸವನ್ನು, ವಿನಯಂತೇ = ಹೋಗಲಾಡಿಸಿಕೊಂಡರು.

**66. ತತಃಪ್ರತಸ್ಥೇ ಕೌಬೇರೀಂ ಭಾಸ್ವಾನಿವ ರಘುರ್ದಿಶಮ್ ।**
**ಶರೈರುಸ್ರೈರಿವೋದೀಚ್ಯಾದುದ್ಧರಿಷ್ಯನ್ ರಸಾನಿವ ॥ ೬೬ ॥**

ಅನಂತರ ವೀರರಘುವು ಕುಬೇರನ ವಾಸಸ್ಥಾನವಾದ ಉತ್ತರದಿಕ್ಕಿಗೆ ಪಯಣಿಸಿದನು. ಕುಬೇರನು ಉತ್ತರದಿಕ್ಕಿನ ಅಧಿಷ್ಠಾತೃದೇವತೆ, ಉತ್ತರದಿಕ್ಕು ಕುಬೇರನಿಗೆ ಸಂಬಂಧಿಸಿದ ದಿಕ್ಕು, ಉತ್ತರಾಯಣಕಾಲದಲ್ಲಿ ಭಗವಾನ್ ಸೂರ್ಯನಾರಾಯಣನು (ಸೂರ್ಯ ದೇವನು) ತನ್ನ ಪ್ರಚಂಡಕಿರಣಗಳೆಂಬ ಕೈಗಳಿಂದ ಭೂಮಿಯ ಸಾರವನ್ನು ಮತ್ತು

ಸಾಗರದ ನೀರನ್ನು ಹೀರುವಂತೆ ಅಥವಾ ಸೆಳೆಯುವಂತೆ ರಘುನೃಪಾಲನು ಅಂದು ತನ್ನ ತೀಕ್ಷ್ಣವಾದ ಬಾಣಗಳಿಂದ ಉತ್ತರದ ರಾಜರನ್ನು ಬಡಿದೋಡಿಸಿ ಮಾಡಲು ವಿಜಯ ದುಂದುಭಿ ಬಾರಿಸುತ್ತಾ ಒಲಿದು ಉತ್ತರದಿಕ್ಕಿಗೆ ಪ್ರಯಾಣಿಸಿದನು. ಉತ್ತರಾಯಣ ಕಾಲದಲ್ಲಿ ಸೂರ್ಯನು ಉತ್ತರಕ್ಕೆ ಅಯನಮಾಡುವಂತೆ (ಪ್ರಯಾಣ ಮಾಡುವಂತೆ) ರಘುವು ಉತ್ತರರಾಷ್ಟ್ರಗಳ ಕಡೆಗೆ ತನ್ನ ವಿಜಯಯಾತ್ರೆಯನ್ನು ಮುನ್ನಡೆಸಿದನು.

ಪ್ರ ಉಪಸರ್ಗ ಸಂಬಂಧದಿಂದ ಷ್ಠಾ ಧಾತು, ಆತ್ಮನೇಪದಿಯಾಗಿದೆ, ತಸ್ಥೇ—ತಸ್ಥಾತೇ —ತಸ್ಥಿರೇ ಇತ್ಯಾದಿ ಷ್ಠಾ—ಗತಿನಿವೃತ್ತೌ—ಲಿಟ್—ಪ್ರ.ಪು.ಏ. । ಕುಬೇರಸ್ಯ ಇಯಂ ಕೌಬೇರೀ—ತಾಂ ॥

ತತಃ = ಆಮೇಲೆ, ಭಾಸ್ವಾನ್ ಇವ = ಸೂರ್ಯನಂತೆ, ರಘುಃ = ರಘುರಾಜನು, ಉಸ್ರೈರಿವ = ಕಿರಣಗಳಿಂದ ಎಂಬಂತೆ, ಶರೈಃ = ಬಾಣಗಳಿಂದ, ರಸಾನ್ ಇವ = ನೀರನ್ನೆಂಬಂತೆ, ಉದೀಚ್ಯಾನ್ = ಉತ್ತರದೇಶದವರನ್ನು, ಉದ್ಧರಿಷ್ಯನ್ = ಗೆಲ್ಲುವವನಾಗಿ, ಕೌಬೇರೀಂ = ಉತ್ತರದಿಕ್ಕನ್ನು ಕುರಿತು, ಪ್ರತಸ್ಥೇ = ಪಯಣ ಬೆಳೆಸಿದನು.

**67. ವಿನೀತಾಧ್ವಶ್ರಮಾಸ್ತಸ್ಯ ಸಿಂಧುತೀರವಿಚೇಷ್ಟನೈಃ ।**
**ದುಧುವುರ್ವಾಜಿನಃ ಸ್ಕಂಧಾನ್ ಲಗ್ನಕುಂಕುಮಕೇಸರಾನ್ ॥ ೬೭ ॥**

ಅವನ ಸೇನಾವಾಹಿನಿ ಸಿಂಧುರಾಜ್ಯದತ್ತ ತಿರುಗಿತು, (ಪಾಕಿಸ್ತಾನದತ್ತ) ಅಲ್ಲಿ ಆ ಸಿಂಧು ನದಿಯ ತೀರದಲ್ಲಿ, ಅಲ್ಲಿಯ ಮರಳುನೆಲದಲ್ಲಿ ರಘುವಿನ ಯುದ್ಧಾಶ್ವಗಳು ಹೊರಳಾಡಿದುವು, ಮಣ್ಣಿನಲ್ಲಿ ಮರಳಿನಲ್ಲಿ ಹೊರಳಾಡಿ ತಮ್ಮ ದೇಹದ ಆಯಾಸವನ್ನು (ಮಾರ್ಗಾಯಾಸವನ್ನು) ಹೋಗಲಾಡಿಸಿಕೊಂಡುವು. ಹೀಗೆ ಹೊರಳಾಡಿದಾಗ ಆ ಕುದುರೆಗಳ ಮೈಗೆ ಕುಂಕುಮ ಪರಾಗರೇಣು, ಕುಂಕುಮಕೇಸರಗಳು ಅಂಟಿಕೊಂಡುವು. ಕುದುರೆಗಳ ಜೇನು ಕೂದಲಿಗೆ ದೇಹದ ವಿವಿಧ ಭಾಗಗಳಿಗೆ (ಅವಯವಗಳಿಗೆ) ಅಂಟಿಕೊಂಡಿತು. ಆ ಬಳಿಕ ಆ ಯುದ್ಧಾಶ್ವಗಳು ಎದ್ದುನಿಂತು ಮೈಯನ್ನು ಕೊಡಹಿಕೊಂಡು ಆ ಕುಂಕುಮ ಕೇಸರಗಳನ್ನು ಹೋಗಲಾಡಿಸಿಕೊಂಡುವು.

ಅಧ್ವನಃ ಶ್ರಮಃ । ವಿನೀತಃ ಆಧ್ವಶ್ರಮಃ ಯೈಸ್ತೇ—ವಿನೀತಾಧ್ವಶ್ರಮಾಃ । ಸಿಂಧೋಃ ತೀರಂ, ಸಿಂಧುತೀರೇವಿಚೇಷ್ಟನಾನಿ, ತೈಃ, ಸಿಂಧುತೀರವಿಚೇಷ್ಟನೈಃ । ದುಧಾವ —ದುಧುವತುಃ—ದುಧುವುಃ । ದುಧವಿಥ—ದುಧುವಥುಃ—ದುಧುವ । ದುಧಾವ, ದುಧವ—ದುಧುವಿವ—ದುಧುವಿಮ । ಧೂಞ್—ಕಂಪನೇ—ಲಿಟ್—ಪ್ರ.ಪು.ಬ. । ಕುಂಕುಮಾನಾಂಕೇಸರಾಃ, ಲಗ್ನಾಃ ಕುಂಕುಮಕೇಸರಾಃ ಯೇಷಾಂತೇ—ತಾನ್ ॥

ಸಿಂಧುತೀರವಿಚೇಷ್ಟನೈಃ = ಸಿಂಧುನದಿಯಲ್ಲಿ ಹೊರಳಾಡುವುದರಿಂದ, ವಿನೀತಾಧ್ವಶ್ರಮಾಃ = ಮಾರ್ಗದ ಆಯಾಸವನ್ನು ಕಳೆದುಕೊಂಡ, ವಾಜಿನಃ = ಕುದುರೆಗಳು, ಲಗ್ನಕುಂಕುಮಕೇಸರಾನ್ = ಅಂಟಿಕೊಂಡಿರುವ ಕುಂಕುಮಕೇಸರದ ಪರಾಗವನ್ನು (ಕಿಂಜಲ್ಕ ವಿರುವ), ಸ್ಕಂಧಾನ್ = ದೇಹವನ್ನು, ಕತ್ತನ್ನು, ದಧುವು = ಕೊಡಹಿದುವು.

**68. ತತ್ರ ಹೂಣಾವರೋಧಾನಾಂ ಭರ್ತೃಷು ವ್ಯಕ್ತವಿಕ್ರಮಮ್ ।**
**ಕಪೋಲಪಾಟಲಾದೇಶಿ ಬಭೂವ ರಘುಚೇಷ್ಟಿತಮ್ ॥ ೬೮ ॥**

ರಘುವಿನ ಸಮರಕೌಶಲದಿಂದ ಹೂಣರು ಪರಾಭವಗೊಂಡಿದ್ದರು, ಹೂಣಯುವಕರು ರಣರಂಗದಲ್ಲಿ ಮಡಿದು ದೇಶಕ್ಕಾಗಿ ಪ್ರಾಣಾರ್ಪಣೆ ಮಾಡಿದ್ದರು. ಇದರಿಂದ ದುಃಖಿತರಾದ ಹೂಣಮಹಿಳೆಯರು ತಮ್ಮ ಅಂತಃಪುರದಲ್ಲಿ ಕುಳಿತು ಕಣ್ಣೀರು ಮಿಡಿಯುತ್ತ, ತಮ್ಮ ಕೈಗಳಿಂದ ಕೆಂಪಾದ ಕಪೋಲಗಳನ್ನು ಒಡಿದು ಮತ್ತೂ ಕೆಂಪೇರುವಂತೆ ಮಾಡಿದರು. ಇದು ರಘುವಿನ ಚೇಷ್ಟೆಗಳು, ಇವು ರಘುವಿನ ವ್ಯಾಪಾರಗಳು ಎಂಬಂತೆ. ಹೂಣರಮಣಿಯರ ಮುಖಬಿಂಬವು ಕೆಂದಾವರೆಯಂತೆ ಕೆಂಪು ವರ್ಣದವು. ಈಗ ರಘುವು ಅವರಿಗೆ ಮುಖಕ್ಕೆ ಕಳೆಯೇರಿಸುವ ವಿಧಿವಿಧಾನಗಳನ್ನು ಅರುಹಿದ ಗುರುವಾದನು. ಉಪದೇಶಿಸಿದ ಉಪದೇಶಕನಾದನು.

ಹೂಣಾನಾಂ ಅವರೋಧಾಃ, ತೇಷಾಮ್ । ವ್ಯಕ್ತಃ ವಿಕ್ರಮಃ ಯಸ್ಯ ತತ್ । ಕಪೋಲೇಷು ಪಾಟಲಃ, ಕಪೋಲಪಾಟಲಸ್ಯ ಆದೇಶಿ । ಬಭೂವ— ಭೂ—ಸತ್ತಾಯಾಂ —ಲಿಟ್ ॥

**69. ಕಾಂಬೋಜಾಃ ಸಮರೇ ಸೋಢುಂ ತಸ್ಯ ವೀರ್ಯಮನೀಶ್ವರಾಃ ।**
**ಗಜಾಲಾನಪರಿಕ್ಲಿಷ್ಟೈರಕ್ಷೋಟೈಃ ಸಾರ್ಧಮಾನತಾಃ ॥ ೬೯ ॥**

ಕಾಂಭೋಜದೇಶದ ಅವನಿಪಾಲರು ರಘುವಿನೊಡನೆ ಹಾಡಾಹಾಡಿ ಸಂಗ್ರಾಮಕ್ಕೆ ನಿಂದು ಸೋತುಹೋದರು, ಅವರು ರಘುವಿನ ಯುದ್ಧದ (ಗಜಸೇನೆಯ) ಆನೆಗಳನ್ನು ಕಟ್ಟಿಹಾಕಿರುವ ಅಕ್ಷೋಟ(ಅಕ್ರೋಟು, ಅಂಕೋಲ)ತರುಗಳೊಡನೆ ಅವನ ಚರಣಗಳಿಗೆ ಭರದಿಂದ ಎರಗಿದರು. ಅಕ್ಷೋಟ, ಅಕ್ರೋಟು ಅಥವಾ ಅಂಕೋಲ ಎಂಬ ಮರಗಳು ಕಾಂಬೋಜ ದೇಶದಲ್ಲಿ ಬೆಳೆಯುವ ಸಸ್ಯ ವಿಶೇಷ, ಯುದ್ಧದ ಆನೆಗಳನ್ನು ಆ ಮರಗಳಿಗೆ ಕಟ್ಟುವುದರಿಂದ, ಸರಪಣಿಯಿಂದ ಬಿಗಿಯುವುದರಿಂದ, ಆನೆಗಳ ಜಗ್ಗಾಟದಿಂದ ಆ ವೃಕ್ಷಗಳು ಬಾಗಿಹೋಗಿ ತಾವೂ ರಘುನೃಪನಿಗೆ ತಲೆಬಾಗಿ ಸಲಾಂ ಮಾಡಿದಂತೆ, ವಂದಿಸಿದಂತೆ ತೋರುವುದು ಸ್ವಾಭಾವಿಕವಷ್ಟೆ. ಹೀಗೆ ಕಾಂಭೋಜದೇಶದ ದೊರೆಗಳು, ತಮ್ಮ ದೇಶದಲ್ಲಿ ಬೆಳೆಯುವ ಪ್ರಖ್ಯಾತವಾದ ಅಕ್ಷೋಟತರುಗಳೊಂದಿಗೆ ಅನತರಾಗಿ ಶರಣಾಗತರಾದರು. ಕಾಂಭೋಜದೇಶವು (ಅಫಘಾನಿಸ್ತಾನ) ಅಶ್ವಗಳಿಗೆ ಅರೇಬಿಯಾದಂತೆ ಪ್ರಖ್ಯಾತವಾದ ಮಧ್ಯ ಏಶಿಯಾಖಂಡದ ಭೂಭಾಗ.

ನ ಈಶ್ವರಾಃ, ಅನೀಶ್ವರಾಃ । ಗಜಾನಾಂ ಆಲಾನಂ, ಗಜಾಲಾನೇನ ಪರಿಕ್ಲಿಷ್ಟಾಃ, ತೈಃ ॥

ಕಾಂಭೋಜಾಃ=ಕಾಂಬೋಜದೇಶದ ರಾಜರು, ಸಮರೇ=ಯುದ್ಧದಲ್ಲಿ, ತಸ್ಯ=ರಘುರಾಜನ, ವೀರ್ಯಂ = ಪ್ರಭಾವವನ್ನು, ಸೋಢುಂ=ಸಹಿಸಲು, ಅನೀಶ್ವರಾಃ=ಅಸಮರ್ಥರಾಗಿ, ಗಜಾಲಾನಪರಿಕ್ಲಿಷ್ಟೈಃ=ಆನೆಗಳ ಬಂಧನದಿಂದ ಪೀಡಿತವಾದ, ಅಕ್ಷೋಟೈಃ ಸಾರ್ಧಂ = ಅಕ್ಷೋಟವೆಂಬ ಮರಗಳಿಂದ ಕೂಡಿದ, ಆನತಾಃ = ಶರಣಾಗತರಾದರು.

ಅಲಂಕಾರಃ ಸಹೋಕ್ತಿ ಅಲಂಕಾರ.

**70. ತೇಷಾಂ ಸದಶ್ವಭೂಯಿಷ್ಠಾಃ ತುಂಗಾ ದ್ರವಿಣರಾಶಯಃ ।**
**ಉಪದಾ ವಿವಿಶುಃ ಶಶ್ವನ್ನೋತ್ಸೇಕಾಃ ಕೋಸಲೇಶ್ವರಮ್ ॥ ೭೦ ॥**

ಆ ಕಾಂಭೋಜದೇಶಾಧಿಪತಿಗಳು ಅಮುಳಧನಕನಕರತ್ನಗಳ ರಾಶಿಯನ್ನು ಆ ಕೋಸಲೇಶ್ವರನಿಗೆ ಪ್ರತಿದಿನವೂ ಇತ್ತು, ಗೌರವಿಸಿದರು, ಉತ್ತಮವಾದ ಅಶ್ವಗಳನ್ನು ತಂಡೋಪತಂಡವಾಗಿ ತಮ್ಮ ಅಧಿರಾಜನಾದ ಕೋಸಲಾಧಿಪನಿಗೆ ಪ್ರತಿದಿನವೂ ಆದರದಿಂದ ನೀಡಿದರು, ಆ ಕೋಸದೇಶಾಧೀಶ್ವರನು ಆ ಐಶ್ವರ್ಯವೆಲ್ಲವನ್ನು ಸಂತೃಪ್ತಿಯಿಂದ ಸ್ವೀಕರಿಸಿದನು, ಆದರೆ ಅವುಗಳ ಜೊತೆಗೆ ಡಂಭ, ಮೋಹ, ಕಪಟ, ದುರಹಂಕಾರ, ಮೋಸ ಮೊದಲಾದ ಅರಿಷಡ್ವರ್ಗಗಳನ್ನು ಸ್ವೀಕರಿಸದೆ ಅವುಗಳಿಂದ ದೂರವಾಗಿಯೇ ಇದ್ದನು, ಸಾಮಾನ್ಯವಾಗಿ ಮಾನವನು ಸಿರಿವಂತಿಕೆ (ದೊಡ್ಡಸ್ತಿಕೆ) ಬಂದಕೂಡಲೇ ಡಾಂಭಿಕತನದಿಂದ ಒರಟಾಗಿ ವರ್ತಿಸುವನು, ತನ್ನ ಹಿಂದಿನ ಸ್ಥಿತಿಯನ್ನು ಮರೆತು ಒರಟಾಗಿ ವರ್ತಿಸುವನು, ಆದರೆ ರಘುವು ಹಾಗಿರಲಿಲ್ಲ. ಅವನು ಗರ್ವಿತನಾಗದೆ ಮೊದಲಿನಂತೆ ಗುಣಾಢ್ಯನಾಗಿಯೇ ಇದ್ದನು.

ಸಂತಶ್ಚ ತೇ ಅಶ್ವಾಶ್ಚ, ಸದಶ್ವಾಃ, ಸದಶ್ವೈಃ ಭೂಯಿಷ್ಠಾಃ। ದ್ರವಿಣಾನಾಂ ರಾಶಯಃ। ವಿವೇಶ—ವಿವಿಶತುಃ—ವಿವಿಶುಃ । ವಿವೇಶಿಥ—ವಿವಿಶಥುಃ—ವಿವಿಶ । ವಿವೇಶ—ವಿವಿಶಿವ—ವಿವಿಶಿಮ। ವಿಶ—ಪ್ರವೇಶನೇ—ಲಿಟ್—ಪ್ರ.ಪು.ಬ. ॥

ತೇಷಾಂ = ಆ ಕಾಂಭೋಜರಾಜರ, ಸದಶ್ವಭೂಯಿಷ್ಠಾ = ಉತ್ತಮ ಕುದುರೆಗಳಿಂದ ಅಧಿಕವಾದ, ತುಂಗಾಃ=ಉನ್ನತವಾದ, ದ್ರವಿಣರಾಶಯಃ=ಚಿನ್ನದರಾಶಿಗಳೇ, ಉಪದಾಃ= ಉಪಾಯನಗಳು, ಕೋಸಲೇಶ್ವರಂ = ರಘುರಾಜನನ್ನು, ಶಶ್ವತ್ = ಪುನಃಪುನಃ, ವಿವಿಶುಃ = ಹೊಂದಿದವು, ಉತ್ಸೇಕಾಃ = ಗರ್ವಗಳು, ನ ವಿವಿಶುಃ = ಹೊಂದಲಿಲ್ಲ, ಉಪದಾ = ಉಪದೀಯಂತೇ ಇತಿ.

**71. ತತೋ ಗೌರೀಗುರುಂ ಶೈಲಮಾರುರೋಹಾಶ್ವಸಾಧನಃ ।**
**ವರ್ಧಯನ್ನಿವ ತತ್ಕೂಟಾನುದ್ಧೂತೈರ್ಧಾತುರೇಣುಭಿಃ ॥ ೭೧ ॥**

ಜಗನ್ಮಾತೆಯಾದ, ಭುವನೇಶ್ವರಿ, ಶ್ರೀ ರಾಜರಾಜೇಶ್ವರಿ ಮೊದಲಾದ ಹೆಸರುಗಳಿಂದ, ಜಗತ್ಕಲ್ಯಾಣಮಯಿ, ಶಿವನ ಅರ್ಧಾಂಗಿ ಗೌರೀದೇವಿಯು ಹಿಮವಂತನ ಗಿರಿಯನ್ನು ರಘುವರನು ಅಂದು ತನ್ನ ತುರಗದಳ ಸಮೇತ ದೌಡಾಯಿಸಿ ಏರಿಹೋದನು. ಆ ಮನುಜೇಂದ್ರನು ಹಿಮಾಲಯದ ಕಡೆಗೆ ಪಯಣ ಬೆಳೆಸಿದನು, ಅವನ ಚತುರಂಗಬಲದ ಪರಾಟದಿಂದ ಹಿಮಾಲಯದ ಗಿರಿಶ್ರೇಣಿಗಳನ್ನು ಇನ್ನೂ ವಿಶಾಲಗೊಳಿಸಲು ಯತ್ನಿಸಿದಂತೆ ಕಂಡಿತು. ಖನಿಜಲವಣಗಳು ತುರಗಗಳ ಕಾಲ ತುಳಿತಕ್ಕೆ ಸಿಕ್ಕಿ ಮೇಲಕ್ಕೆ ಹಾರಿ ವಾಯುಮಂಡಲದಲ್ಲಿ ಮೋಡದಂತೆ ಕಂಗೊಳಿಸಿತು. ಗೈರಿಕಾದಿಧಾತುಗಳು ಪುಡಿಪುಡಿಯಾಗಿ, ಧೂಳಾಗಿ (ರೇಣುಗಳಾಗಿ) ಮೇಲೆ ಹಾರಿ ಮೋಡದಂತೆ ಕಂಗೊಳಿಸುವುದರಿಂದ ಉನ್ನತವಾದ ಶಿಖರಗಳು ಇನ್ನೂ ಉನ್ನತವಾದಂತೆ, ಆ ವಸುಂಧರಾಧೀಶನು, ಇನ್ನೂ ಉನ್ನತಗೊಳಿಸುವನೋ (ಉನ್ನತವಾಗಿ ಮಾಡುವನೋ) ಎಂಬಂತೆ ತೋರಿತು. ಅವನು ಮೇಲೇರುತ್ತಹೋದಂತೆ ಪರ್ವತವು ಹಿಮಾಲಯದ ಗಿರಿಶಿಖರಗಳು ವರ್ಧಿಸುತ್ತಾ ಹೋಗುವುದೋ ಎಂಬಂತೆ ಕಂಡಿತು, ಹಾಗೆ ಭ್ರಮಿಸುವಂತೆ ಆಯಿತು.

ಗೌರ್ಯಾಃ ಗುರುಃ, ತಮ್ । ಅಶ್ವಾಃ ಸಾಧನಾನಿ ಯಸ್ಯ ಸಃ ಅಶ್ವಸಾಧನಃ । ಅಜ್ ಉಪಸರ್ಗ । ರುರೋಹ—ರುರುಹತುಃ—ರುರುಹುಃ ಇತ್ಯಾದಿ । ರುಹ—ಬೀಜಜನ್ಮನಿ—ಪ್ರಾದುರ್ಭಾವೇ—ಲಿಟ್—ಪ್ರ.ಪು.ಏ. । ತಸ್ಯ ಕೂಟಾಃ, ತಾನ್ । ಧಾತೂನಾಂ ರೇಣವಃ, ತಾಭಿಃ ॥

ತತಃ = ಆಮೇಲೆ, ಅಶ್ವಸಾಧನಃ = ಕುದುರೆಗಳ ಸಹಾಯವುಳ್ಳವನಾಗಿ, ಗೌರೀಗುರುಂ = ಹಿಮವಂತನೆಂಬ (ಹಿಮಾಲಯ) ಗೌರಿಯ ತಂದೆ, ಶೈಲಂ = ಪರ್ವತವನ್ನು, ಉದ್ಧೂತೈಃ = ಮೇಲಕ್ಕೆ ಹಾರಿದ, ಧಾತುರೇಣುಭಿಃ = ಗೈರಿಕಾದಿಧಾತುಗಳ ಧೂಳಿಯಿಂದ, ತತ್ ಕೂಟಾನ್=ಆ ಪರ್ವತದ ಶಿಖರಗಳನ್ನು, ವರ್ಧಯನ್ ಇವ = ಹೆಚ್ಚಿಸುವನೋ ಎಂಬಂತೆ, ಆರುರೋಹ = ಹತ್ತಿದನು.

**72. ಶಶಂಸ ತುಲ್ಯಸತ್ತ್ವಾನಾಂ ಸೈನ್ಯಘೋಷೇಽಪ್ಯಸಂಭ್ರಮಮ್ ।**
**ಗುಹಾಶಯಾನಾಂ (ಸತ್ವಾನಾಂ) ಸಿಂಹಾನಾಂ ಪರಿವೃತ್ಯಾವಲೋಕಿತಮ್ ॥ ೭೨ ॥**

ರಘುವಿನ ಮಹಾಸೇನೆಯು ವಾದ್ಯಘೋಷ ಮಾಡುತ್ತಾ ಹಿಮಾಲಯದ ತಪ್ಪಲಲ್ಲಿ ಸಾಗಿತು. ಆ ಮಹಾಶಬ್ದವು ಹಿಮವತ್ ಪ್ರದೇಶದ ಗಿರಿಗಹ್ವರಗಳಲ್ಲಿ ಗುಹೆಗಳಲ್ಲಿ, ಕಣಿವೆಗಳಲ್ಲಿ, ಕಂದರಗಳಲ್ಲಿ ಪ್ರತಿಧ್ವನಿಸುತ್ತಿತ್ತು. ಹಿಮಾಲಯದ ಗುಹೆಗಳಲ್ಲಿ ಮಲಗಿ ನಿದ್ರಿಸುತ್ತಿರುವ ಮಹಾಸತ್ವಶಾಲಿಗಳಾದ ಸಿಂಹಗಳು ಸೇನೆಯ ಅಬ್ಬರವನ್ನು, ಸೇನೆಯ ಅಟ್ಟಹಾಸವನ್ನು ಕಂಡು ಹಾಗೆ ತಲೆಯನ್ನು ಸ್ವಲ್ಪ ತಿರುಗಿಸಿ ನೋಡಿದುವು. ಸಿಂಹಾವಲೋಕನ ಮಾಡಿದುವು. ತಾವು ಬೆದರದೆ ಇರುವೆವು ಎಂಬುದನ್ನು ತೋರಿಕೊಡುವಂತೆ ಮಲಗಿರುವಂತೆಯೆ ಕತ್ತೆತ್ತಿ ನೋಡಿ ಹಾಗೆಯೇ ಮಲಗಿಕೊಂಡುವು. ಅವು ದಿಗ್ಭ್ರಮೆಗೊಳಗಾಗಲಿಲ್ಲ. ಮಹಾಬಲಶಾಲಿಗಳಾದ ಆ ಕೇಸರಿಗಳು ತಮ್ಮ ಬಲದಲ್ಲಿ ಅಚಲ ವಿಶ್ವಾಸವಿರುವಂತೆ ಕತ್ತನ್ನು ತುಸು ತಿರುಗಿಸಿ ಓರೆಗಣ್ಣಿಂದ ಓರೆನೋಟ ಬೀರಿದುವು. ಅವು ಬಾಹ್ಯಚೇಷ್ಟೆಗೆ ಭ್ರಮಿಸದೆ, ಸಿಂಹಾವಲೋಕನ ಮಾಡಿ, ಸೈನ್ಯದ ಘೋಷವನ್ನು ಗಮನಿಸಿ, ಮನೋವೃತ್ತಿಯಲ್ಲಿ ಚಂಚಲತೆಯಿಲ್ಲದೆ ಇದ್ದುವು. ಸೈನ್ಯದ ಬಲವು ತಮಗೆ ಸಮನಾದ ಬಲವೆಂಬ ಅಚಲವಿಶ್ವಾಸದಿಂದ ಅವು ಓಡದೆ ತೆಪ್ಪಗೇ ಇದ್ದುವು. ತಮ್ಮ ಬಲದಲ್ಲಿ ಆತ್ಮವಿಶ್ವಾಸ ತಳೆದಿದ್ದುವು. ಮೃಗರಾಜನ ಗಂಭೀರವಾದ ನೋಟವನ್ನು ನೋಡಿ ರಘುರಾಜನು ಪ್ರಶಂಸೆಮಾಡಿದನು, ತನ್ನ ಮನದಲ್ಲಿ ಹೊಗಳಿದನು.

ಅನ್ವಯಃ:—ತುಲ್ಯಸತ್ವಾನಾಮ್ ಗುಹಾಶಯಾನಾಂ ಸಿಂಹಾನಾಂ ಪರಿವೃತ್ಯ ಅವಲೋಕಿತಂ ಸೈನ್ಯಘೋಷೇಽಪಿ ಅಸಂಭ್ರಮಂ ಶಶಂಸ ॥

ಶಶಂಸ—ಶಶಂಸತುಃ—ಶಶಂಸುಃ—ಇತ್ಯಾದಿ । ಶಂಸು—ಸ್ತುತೌ—ಲಿಟ್—ಪ್ರ.ಪು.ಏ. । ತುಲ್ಯಂ ಸತ್ವಂ ಯೇಷಾಂತೇ । ತುಲ್ಯಸತ್ವಾಃ, ತೇಷಾಮ್ । ಸೈನ್ಯಸ್ಯ ಘೋಷಃ । ತಸ್ಮಿನ್ । ನ ವಿದ್ಯತೇ ಸಂಭ್ರಮಃ ಯಸ್ಮಿನ್ ತತ್ । ಗುಹಾಸು ಶೇರತ ಇತಿ ಗುಹಾಶಯಾಃ, ತೇಷಾಮ್ ॥

ತುಲ್ಯಸತ್ವಾನಾಂ = ಸೈನ್ಯದ ಬಲದೊಡನೆ ಸಮಾನ ಬಲವಿರುವ, ಗುಹಾಶಯಾನಾಂ =

ಗುಹೆಯಲ್ಲಿ ಮಲಗಿರುವ, ಸಿಂಹಾನಾಂ = ಸಿಂಹಗಳ, ಪರಿವೃತ್ತ್ಯ= ಹಿಂತಿರುಗಿಸಿ, ಅವಲೋಕಿತಂ = ನೋಡುವಿಕೆಯನ್ನು, ಸೈನ್ಯಘೋಷೇಽಪಿ = ಸೈನ್ಯದ ಘೋಷವನ್ನು (ರವ) ಕೇಳಿಯೂ, ಅಸಂಭ್ರಮಂ = ಭಯರಹಿತವಾಗಿ, ಶಶಂಸ = ಹೊಗಳು.

**73. ಭೂರ್ಜೇಷು ಮರ್ಮರೀಭೂತಾಃ ಕೀಚಕಧ್ವನಿಹೇತವಃ ।**
**ಗಂಗಾಶೀಕರಿಣೋ ಮಾರ್ಗೇ ಮರುತಸ್ತಂ ಸಿಷೇವಿರೇ ॥ ೭೩ ॥**

ಆ ಹಿಮಾಲಯದ ಭೂವಲಯದಲ್ಲಿ ಭೂರ್ಜವೃಕ್ಷಗಳು ಬೆಳೆದಿದ್ದುವು. ಅಗಲವಾದ ಭೂರ್ಜಪತ್ರಗಳು, ಅಥವಾ ಭೂರ್ಜವೃಕ್ಷದ ಎಲೆಗಳ ಮರ್ಮರ ಶಬ್ದವೂ, ಆ ಪ್ರದೇಶದಲ್ಲಿ ಬೆಳೆದುನಿಂತ ಬಿದಿರು ಮೆಳೆಗಳಿಂದ ಬರುವ ಇನಿದಾದ ಕೊಳಲಿನ ನಾದದಂತಹ ಕೀಚಕಧ್ವನಿಯನ್ನು ಆಲಿಸುತ್ತ ಅವರು ಮುಂದುವರಿದರು. ಕೊಳಲಿನ ನಿನಾದದಂತಹ ನಾದದಿಂದ ಹರ್ಷ ತಳೆದರು. ಅವರ ದೇಹವನ್ನು ಗಂಗಾನದಿಯ ತಂಪಾದ ನೀರಹನಿಯ ಪ್ರೋಕ್ಷಣೆಯಿಂದಲೂ ಅವರು ಆಮೋದವಾಂತರು, ಸುಖಸ್ಪರ್ಶಪಡೆದರು, ಅಲ್ಲಿ ಬೀಸುತ್ತಿರುವ ತಂಪಾದ ಗಾಳಿಯಿಂದ ನವಶಕ್ತಿಯನ್ನು, ನವಚೇತನವನ್ನು ಪಡೆದು ಆ ಹಿಮಪ್ರದೇಶದಲ್ಲಿ ಸಂಚರಿಸಿದರು. ದೂರದ ಉರಾಲ ಪರ್ವತಶ್ರೇಣಿಯ ಕಡೆಯಿಂದ, ಸೈಬೀರಿಯಾದ ಮರುಭೂಮಿಯ ಕಡೆಯಿಂದ, ಕೇದರ್‌ನಾಥ್, ಹರಿದ್ವಾರ, ಹೃಷಿಕೇಶ ಪುಣ್ಯಕ್ಷೇತ್ರಗಳ ಕಡೆಯಿಂದ, ಕಾಂಚನಗಂಗಾ, ಟಿಬೇಟ್, ಭೂತಾನ್, ಸಿಕ್ಕಿಂ ಕಡೆಯಿಂದ ಗೌರೀಶಂಕರ ಪುಣ್ಯಧಾಮದ ಕಡೆಯಿಂದ ಬೀಸುವ ಔಷಧಮಿಶ್ರಿತವಾದ ಶೀತಮಾರುತವು ಅವರಿಗೆ ಶೀತವನ್ನು ಉಣಿಸಿ ಆಪ್ಯಾಯಮಾನವಾದ, ಹಿತಕರವಾದ, ಸ್ವರ್ಗೀಯವಾದ, ಆರೋಗ್ಯಕರವಾದ ಸುಖವನ್ನಿತ್ತಿತು. ಅವರು ಚೇತೋವಿಹಾರಿಗಳಾಗಿ ಹಿಮಾಲಯದ ಆ ಪಾವನಭೂಮಿಯಲ್ಲಿ ಸಂಚರಿಸಿದರು.

ಕೀಚಕಾನಾಂ ಧ್ವನಿಃ । ಕೀಚಕಧ್ವನೌ ಹೇತವಃ । ಗಂಗಾಯಾಃ ಶೀಕರಾಃ । ಗಂಗಾ ಶೀಕರಾಃ ಏಷಾಂ ಸಂತೀತಿ ಗಂಗಾಶೀಕರಿಣಃ । ಸಿಷೇವೇ—ಸಿಷೇವಾತೇ—ನಿಷೇವಿರೇ । ಇತ್ಯಾದಿ । ಷೇವೃ—ಸೇವಾಯಾಂ—ಲಿಟ್—ಪ್ರ.ಪು.ಏ. ॥

ಭೂರ್ಜೇಷು = ಭೂರ್ಜಪತ್ರಗಳಲ್ಲಿ, ಮರ್ಮರೀಭೂತಾಃ = ಮರ್ಮರ ಧ್ವನಿಯಿಂದ ಕೂಡಿದ, ಕೀಚಕಧ್ವನಿಹೇತವಃ = ಬಿದಿರುಗಳಲ್ಲಿ ಧ್ವನಿ ಉಂಟಾಗಲು ಕಾರಣಗಳಾದ, ಗಂಗಾಶೀಕರಿಣಃ = ಗಂಗಾನದಿಯ ತುಂತುರುಹನಿಗಳಿಂದ ಕೂಡಿದ, ಮರುತಃ=ಗಾಳಿಯು, ಮಾರ್ಗೇ = ದಾರಿಯಲ್ಲಿ, ತಂ = ರಘುರಾಜನನ್ನು, ಸಿಷೇವಿರೇ = ಸೇವಿಸಿತು, ಮರ್ಮರೀಭೃತಾಃ = ಮರ್ಮರ ಶಬ್ದವನ್ತಃ ಭೃತಾಃ.

**74. ವಿಶಶ್ರಮುರ್ನಮೇರೂಣಾಂ ಛಾಯಾಸ್ವಧ್ಯಾಸ್ಯ ಸೈನಿಕಾಃ ।**
**ದೃಷದೋ ವಾಸಿತೋತ್ಸಂಗಾ ನಿಷಣ್ಣ ಮೃಗನಾಭಿಭಿಃ ॥ ೭೪ ॥**

ಆ ಹಿಮವಂತನ ಹಿಮಾಚ್ಛಾದಿತ ಭೂವಲಯದಲ್ಲಿ ಕಸ್ತೂರಿಮೃಗಗಳು ಸ್ವೇಚ್ಛೆಯಿಂದ ತಿರುಗುತ್ತಿವೆ. ಅವುಗಳ ನಾಭಿಯಿಂದ ಹೊರಬಿದ್ದ ಕಸ್ತೂರಿಯಿಂದ (ಕತ್ತುರಿಯಿಂದ) ಅಲ್ಲಿಯ ಬಂಡೆಗಳು ಕಂಪಿಡುವ ಸುವಾಸನೆಯನ್ನು ಬೀರುತ್ತಿವೆ, ರಘುವಿನ ಮಹಾ

ಸೇನೆಯು ಆ ಸುವಾಸನೆಯನ್ನು ಆಘ್ರಾಣಿಸಿ ತಮ್ಮ ಬಳಲಿಕೆಯನ್ನು ನೀಗಿಕೊಂಡಿತು. ಅವನ ಸೈನಿಕರು ನಮೇರು ಮರಗಳ ನೆರಳಿನಲ್ಲಿ ಕುಳಿತುಕೊಂಡರು. ಅಲ್ಲಿಯ ಬಂಡೆಗಳನ್ನು ತಮ್ಮ ಆಸನವನ್ನಾಗಿ ಮಾಡಿಕೊಂಡು ಸುಖಾಸೀನರಾದರು. ಆ ಬಂಡೆಕಲ್ಲುಗಳಲ್ಲಿ ಕಸ್ತೂರಿಮೃಗವು ತನ್ನ ನಾಭಿಯಿಂದ ಬರುತ್ತಿರುವ ಕಸ್ತೂರಿಯನ್ನು ಅಂಟಿಸಿ ಅದನ್ನು ಕಂಪಿಡುವಂತೆ ಮಾಡುವುದು. ಆ ಸೈನಿಕರು ಸುರಪುನ್ನಾಗವೃಕ್ಷಗಳ (ನಮೇರುವೃಕ್ಷ) ನೆರಳಲ್ಲಿರುವ ಕಸ್ತೂರಿಯ ಕಂಪನ್ನು ಬೀರುವ ಶಿಲೆಗಳ ಮೇಲೆ (ಶಿಲಾಫಲಕಗಳ, ಬಂಡೆಕಲ್ಲುಗಳ) ಆರಾಮವಾಗಿ ಕುಳಿತು ತಮ್ಮ ದೇಹಾಯಾಸವನ್ನು ನೀಗಿಕೊಂಡರು, ವಿಶ್ರಾಂತಿ ಹೊಂದಿದರು.

ಅನ್ವಯ :—ಸೈನಿಕಾಃ ನಮೇರೂಣಾಂ ಛಾಯಾಸು ನಿಷಣ್ಣ ಮೃಗನಾಭಿಭಿಃವಾಸಿತೋತ್ಸಂಗಾಃ ದೃಷದಃ ಅಧ್ಯಾಸ್ಯ ವಿಶಶ್ರಮುಃ ॥

ವಿ ಉಪಸರ್ಗ । ಶಶ್ರಾಮ—ಶಶ್ರಮತುಃ—ಶಶ್ರಮುಃ । ಇತ್ಯಾದಿ । ಶ್ರಮು—ತಪಸಿ, ಖೇದೇಚ, ಲಿಟ್—ಪ್ರ.ಪು.ಬ. । ಸೇನಾಯಾಂ ಸಮವೇತಾಃ, ಸೈನಿಕಾಃ । ವಾಸಿತಾಃ ಉತ್ಸಂಗಾಃ ಯಾಸಾಂ ತಾಃ, ವಾಸಿತೋತ್ಸಂಗಾಃ । ನಿಷಣ್ಣಾಶ್ಚ ತೇ ಮೃಗಾಶ್ಚ । ನಿಷಣ್ಣ ಮೃಗಾನಾಂ ನಾಭಯಃ ತೈಃ । ಅಧ್ಯಾಸ್ಯ ಎಂಬಲ್ಲಿ ಅಧಿ ಉಪಸರ್ಗದಿಂದ ಕೂಡಿದ ಆಸ ಧಾತುಪ್ರಯೋಗವಿರುವುದರಿಂದ ದೃಷದಃ ಎಂಬಲ್ಲಿ ಸಪ್ತಮಿಗೆ ಬದಲಾಗಿ ದ್ವಿತೀಯಾ ಬಂದಿದೆ.

ಸೈನಿಕಾಃ = ಸೇನಾಭಟರು, ನಮೇರೂಣಾಂ = ಸುರಪುನ್ನಾಗವೃಕ್ಷಗಳ, ಛಾಯಾಸು = ನೆರಳುಗಳಲ್ಲಿ, ನಿಷಣ್ಣಮೃಗನಾಭಿಭಿಃ = (ಕಲ್ಲಿನ ಮೇಲೆ ಕುಳಿತಿರುವ) ಕಸ್ತೂರೀಮೃಗಗಳ ನಾಭಿಯಿಂದ, ವಾಸಿತೋತ್ಸಂಗಾಃ = ಪರಿಮಳಗೊಂಡಿರುವ ಮೇಲ್ಭಾಗವುಳ್ಳ, ದೃಷದ = ಶಿಲೆಗಳಲ್ಲಿ, ಅಧ್ಯಾಸ್ಯ = ಕುಳಿತು, ವಿಶಶ್ರಮುಃ = ವಿಶ್ರಾಂತಿ ಹೊಂದಿದರು.

75. ಸರಲಾಸಕ್ತಮಾತಂಗಗ್ರೈವೇಯಸ್ಫುರಿತತ್ವಿಷಃ ।
ಆಸನ್ನೋಷಧಯೋ ನೇತುರ್ನಕ್ತಮಸ್ನೇಹದೀಪಿಕಾ ॥ ೭೫ ॥

ಆ ಹಿಮವತ್ಪ್ರದೇಶದಲ್ಲಿ ಬೆಳೆದಿರುವ ಸರಳಾ ಅಥವಾ ದೇವದಾರು ವೃಕ್ಷಗಳಿಗೆ ಯುದ್ಧದ ಮದ್ದಾನೆಗಳನ್ನು (ಮಾತಂಗಗಳನ್ನು) ಸಂಕಲೆಗಳಿಂದ ಬಂಧಿಸಿದ್ದರು. ಆ ಹಿಮವತ್ ಪ್ರದೇಶದಲ್ಲಿ ಬೆಳಕನ್ನು ಕೊಡುವ ಜ್ಯೋತಿರ್ಲತೆಗಳು ಬೆಳೆಯುತ್ತಿವೆ. ಆನೆಗಳಿಗೆ ಬಿಗಿದ ಸರಪಳಿಯು ಅಲ್ಲಿಯ ಔಷಧಿ ಗಿಡಗಳು ಬೀರುವ ಬೆಳಕನ್ನು ಪ್ರತಿಫಲಿಸುತ್ತಿದ್ದುವು. ಆ ವನಸ್ಪತಿಗಳು ಎಣ್ಣೆಯಿಲ್ಲದೆಯೆ ಉರಿಯುವ ದೀಪಗಳಂತೆ ರಾತ್ರಿಕಾಲದಲ್ಲಿ ಪ್ರಕಾಶಿಸುತ್ತಿದ್ದುವು. ಈ ಪ್ರಕಾಶಮಾನವಾದ ಆನೆಗಳ ಕೊರಳಿಗೆ ಬಿಗಿದ, ಪಂಚಲೋಹದ ಹಾಗೂ ಕಬ್ಬಿಣದ ಸರಪಣಿಗಳಲ್ಲಿ ಪ್ರತಿಫಲನಹೊಂದುತ್ತಿದ್ದುದರಿಂದ ಗಜಸೇನೆಯ ಅಧಿಪತಿಗಳಿಗೆ ಇರುಳ ಸೊಡರಿನ ಚಿಂತೆಯೇ ಇರಲಿಲ್ಲ. ಆ ಪೃಥ್ವೀಪತಿಗೆ ಪ್ರಕೃತಿಯೇ ದೀಪಮಾಲೆಯನ್ನು ಒದಗಿಸಿತೆಂಬಂತೆ ತೋರಿತು. ಜ್ಯೋತಿರ್‌ಲತೆಗಳು ಪ್ರಕಾಶಮಾನವಾದ ಜ್ಯೋತಿಯನ್ನು ಒದಗಿಸಿದುವು.

ಸರಲೇಷು ಆಸಕ್ತಾನಿ । ಮಾತಂಗಾನಾಂ ಗ್ರೈವೇಯಾಣಿ, ಮಾತಂಗಗ್ರೈವೇಯಾಣಿ ।

ಗ್ರೀವಾಸು ಭವಾನಿ ಗ್ರೈವೇಯಾಣಿ । ಸರಲಾಸಕ್ತಾನಿ ಚ ತಾನಿ । ಮಾತಂಗಗ್ರೈವೇಯಾಣಿ ಚ—ಸರಲಾಸಕ್ತಮಾತಂಗಗ್ರೈವೇಯಾಣಿ । ತೇಷು ಸ್ಫುರಿತಾಃ ತ್ವಿಷಃ ಯಾಸಾಂತಾಃ, ಸರಲಾಸಕ್ತಮಾತಂಗಗ್ರೈವೇಯಸ್ಫುರಿತ ತ್ವಿಷಃ। ಆಸೀತ್—ಆಸ್ತಾಂ—ಆಸನ್ । ಇತ್ಯಾದಿ। ಅಸ—ಭುವಿ—ಲಙ್—ಪ್ರ.ಪು.ಬ. । ನ ವಿದ್ಯತೇ ಸ್ನೇಹಃ ಯೇಷಾಂ ತೇ ಅಸ್ನೇಹಾಃ । ಅಸ್ನೇಹಾಶ್ಚ ತೇ ದೀಪಿಕಾಶ್ಚ । ಅಸ್ನೇಹದೀಪಿಕಾಃ ॥

ಸರಲ = ದೇವದಾರು ಮರಗಳಲ್ಲಿ, ಆಸಕ್ತಃ = ಕಟ್ಟಿದ, ಮಾತಂಗ = ಆನೆಗಳ, ಗ್ರೈವೇಯ = ಕುತ್ತಿಗೆಯ ಸರಪಣಿಗಳಲ್ಲಿ, ಸ್ಫುರಿತತ್ವಿಷಃ = ಪ್ರತಿಫಲಿಸಿದ ಕಾಂತಿಯುಳ್ಳ, ಓಷಧಯಃ = ಜ್ಯೋತಿರ್ಲತೆಗಳು, ನಕ್ತಂ = ರಾತ್ರಿಯಲ್ಲಿ, ನೇತುಃ = ನಾಯಕನಾದ ರಘುವಿಗೆ, ಅಸ್ನೇಹದೀಪಿಕಾಃ = ಎಣ್ಣೆಯಿಲ್ಲದೆ ಉರಿಯುವ ದೀಪಗಳು, ಆಸನ್ = ಆದುವು.

76. ತಸ್ಯೋತ್ಸೃಷ್ಟನಿವಾಸೇಷು ಕಂಠರಜ್ಜುಕ್ಷತತ್ವಚಃ ।
ಗಜವರ್ಷ್ಮ ಕಿರಾತೇಭ್ಯಃ ಶಶಂಸುರ್ದೇವದಾರವಃ ॥ ೭೬ ॥

ರಘುಸೇನೆಯು ಬೀಡುಬಿಟ್ಟ ಆ ಹಿಮಭೂಮಿಯಲ್ಲಿ ಬೆಳೆದಿರುವ ದೇವದಾರು ವೃಕ್ಷಗಳಿಗೆ ಆನೆಗಳನ್ನು ಬಿಗಿದಿದ್ದರು, ಆನೆಗಳು ಎಳೆದಾಡುವಾಗ, ಎಳೆದು ಜಗ್ಗುವಾಗ ಅವುಗಳ ಕೊರಳ ಸರಪಣಿಯಿಂದ ಆ ದೇವದಾರು ವೃಕ್ಷಗಳು ಸಿಗುರೆದ್ದು, ತೊಗಟೆಯು ಗಾಯಗೊಂಡು ಆಳವಾದ ಅದರ ಗುರುತು ಮಾಜದೆ ಹಾಗೆಯೇ ಇರುತ್ತಿತ್ತು. ರಘುವಿನ ಸೇನೆಯು ಹೊರಟುಹೋದ ಬಳಿಕ, ಅವರು ಶಿಬಿರ ಹೂಡಿದ ಜಾಗಕ್ಕೆ (ಪಾಳಯ ಹೂಡಿದ ತಂಗುದಾಣಕ್ಕೆ) ಹಿಮವತ್ಪ್ರದೇಶದ ಕಾಡುಬೇಡರು, ಕಿರಾತರು ಬಂದಾಗ ಆ ದೃಶ್ಯಗಳನ್ನು ಅವಲೋಕಿಸಿ ಗಜಸೇನೆಯ ಮಾಹಿತಿಗಳನ್ನು ಅರಿತುಕೊಳ್ಳುತ್ತಿದ್ದರು. ದೇವದಾರು ಮರಗಳಲ್ಲಿ ತಲೆದೋರಿರುವ ಗುರುತುಗಳಿಂದ ಕಿರಾತರು ರಘುವಿನ ಆನೆಗಳ ಎತ್ತರ (ಗಾತ್ರ) ಹಾಗೂ ದೇಹದಾರ್ಢ್ಯಗಳನ್ನು ಕೂಡಲೇ ಅರಿತುಕೊಳ್ಳಲು ಇವೆಲ್ಲ ಜೀವಂತಸಾಕ್ಷಿಗಳಾಗಿದ್ದುವು, ನಿದರ್ಶನಗಳಾಗಿದ್ದುವು.

ಅನ್ವಯ :—ತಸ್ಯ ಉತ್ಸೃಷ್ಟ ನಿವಾಸೇಷು ಕಂಠರಜ್ಜುಕ್ಷತತ್ವಚಃ ದೇವದಾರವಃ ಕಿರಾತೇಭ್ಯಃ ಗಜವರ್ಷ್ಮ ಶಶಂಸುಃ ॥

ಉತ್ಸೃಷ್ಟಾಶ್ಚ ತೇ ನಿವಾಸಾಶ್ಚ, ತೇಷು । ಕಂಠಾನಾಂ ರಜ್ಜವಃ । ಕಂಠರಜ್ಜುಭಿಃ ಕ್ಷತಾಃ । ಕಂಠರಜ್ಜುಕ್ಷತಾಃ ತ್ವಚಃ ಯೇಷಾಂ ತೇ—ಕಂಠರಜ್ಜುಕ್ಷತತ್ವಚಃ । ಗಜಾನಾಂ ವರ್ಷ್ಮ—ಗಜವರ್ಷ್ಮ । ಶಶಂಸ—ಶಂಸು—ಸ್ತುತೌ—ಲಿಟ್—ಪ್ರ.ಪು.ಬ. ॥

ತಸ್ಯ = ಆ ರಘುರಾಜನ, ಉತ್ಸೃಷ್ಟನಿವಾಸೇಷು = ಸೇನೆ ಬೀಡನ್ನು ಬಿಟ್ಟಾಗ, ಕಂಠರಜ್ಜುತತ್ವಚಃ = ಆನೆಯ ಕುತ್ತಿಗೆಯ ಸರಪಣಿಯಿಂದ ಉಜ್ಜಲ್ಪಟ್ಟ ತೊಗಟೆಯುಳ್ಳ, ದೇವದಾರವಃ = ದೇವದಾರು ಮರಗಳು, ಕಿರಾತೇಭ್ಯಃ = ಕಾಡಿನಲ್ಲಿರುವ ಬೇಡರಿಗೆ, ಗಜವರ್ಷ = ಆನೆಯ ಪ್ರಮಾಣವನ್ನು, ಶಶಂಸುಃ = ತಿಳಿಸಿದುವು. ಕಿರಾತೇಭ್ಯಃ = ಕಿರಂ ಪರ್ಯಂತ ಭೂಮಿಂವರ್ ಅತತಿ ಗಚ್ಛತಿ ಇತಿ ಕಿರಾತಃ ॥

**77. ತತ್ರ ಜನ್ಯಂ ರಘೋರ್ಘೋರಂ ಪರ್ವತೀಯೈರ್ಗಣೈರಭೂತ್ ।**
**ನಾರಾಚಕ್ಷೇಪಣೀಯಾಶ್ಮನಿಷ್ಪೇಷೋತ್ಪತಿತಾನಲಮ್ ॥ ೭೭ ॥**

ಆ ಹಿಮಗಿರಿ ಪ್ರಾಂತ್ಯದಲ್ಲಿ ರಘುವಿಗೂ ಪರ್ವತೀಯರಿಗೂ ಘೋರ ಸಂಗ್ರಾಮವು ನಡೆಯಿತು. ಹಿಮವತ್ಪ್ರದೇಶದಲ್ಲಿ ಉತ್ಸ, ಸಂಕೇತರೆಂಬ ಹೆಸರುಳ್ಳ ಪುರಾಣ ಪ್ರಸಿದ್ಧರಾದ 7 ಕ್ಷತ್ರಿಯ ಗಣಗಳು (ಪಂಗಡಗಳು) ನೆಲಸಿದ್ದರು. ಅವರು ಮಹಾಶೂರರು, ಬಿಳಿಯ ಬಣ್ಣದ ಎತ್ತರದ ಗಂಡಾಳುಗಳು, ಆಜಾನುಬಾಹುಗಳು, ಯುದ್ಧವೀರರು, ಕಬ್ಬಿಣದ ಅಲಗುಗಳಿರುವ ಬಾಣಗಳಿಂದ, ಕಣೆಕಲ್ಲು, ಭಿಂಡಿವಾಳಗಳಿಂದ ಅವರೊಳಗೆ ಮಹೋಗ್ರ ಕಾಳಗ ನಡೆಯಿತು. ಬಂಡೆಕಲ್ಲುಗಳ ಢಿಕ್ಕಿಯಿಂದ, ಕ್ಷಿಪಣಿಗಳ ಉಡಾವಣೆಯಿಂದ ಸಂಗ್ರಾಮಭೂಮಿಯಲ್ಲಿ ಬೆಂಕಿ ಕಿಡಿ ಕಾಣಿಸಿ ಅಗ್ನಿಯು ಆಸ್ಫೋಟಿಸಿತು. ಸುತ್ತಲೂ ಕಿಚ್ಚು ಉರಿಯು ಹತ್ತಿತು. ಧೀರರಾದ ಕಿರಾತರು, ಕಾಡುಬೇಡರು ಕದನಕಲಿಗಳಾಗಿ ರಘುವಿನೊಡನೆ ದಿಟ್ಟತನದಿಂದ ಹೋರಾಡಿದರು.

ಪರ್ವತೇ ಭವಾಃ ಪರ್ವತೀಯಾಃ, ತೈಃ । ಅಭೂತ್—ಭೂ—ಸತ್ತಾಯಾಂ—ಲುಙ್—ಪ್ರ.ಪು.ಏ. । ನಾರಾಚಾಶ್ಚ ಕ್ಷೇಪಣೀಯಾಶ್ಚ ಅಶ್ಮಾನಶ್ಚ— ನಾರಾಚಕ್ಷೇಪಣೀಯಾಶ್ಮಾನಃ। ನಾರಾಚಕ್ಷೇಪಣೀಯಾಶ್ಮನಾಂ ನಿಷ್ಪೇಷಃ । ತೇನ ಉತ್ಪತಿತಾಃ ಅನಲಾಃ ಯಸ್ಮಿನ್ ತತ್—ನಾರಾಚಕ್ಷೇಪಣೀಯಾಶ್ಮನಿಷ್ಪೇಷೋತ್ಪತಿತಾನಲಮ್ ॥

ತತ್ರ= ಆ ಹಿಮವತ್ಪರ್ವತದಲ್ಲಿ, ರಘೋಃ = ರಘುರಾಜನಿಗೆ, ಪರ್ವತೀಯೈಃ = ಪರ್ವತದಲ್ಲಿರುವ, ಗಣೈಃ = ಉತ್ಸವ, ಸಂಕೇತಾದಿ ಏಳುಗುಣಗಳಿಂದ, ನಾರಾಚ = ಬಾಣ ವಿಶೇಷಗಳ, ಕ್ಷೇಪಣೀಯ = ಈಟಿ, ಭರ್ಚಿ ಮುಂತಾದ ಆಯುಧಗಳ, ಅಶ್ಮ = ಕಲ್ಲು ಬಂಡೆಗಳ, ನಿಷ್ಪೇಷ = ಸಂಘರ್ಷದಿಂದ, ಘೋರಂ = ಭಯಂಕರವಾದ, ಜನ್ಯಂ = ಯುದ್ಧವು, ಅಭೂತ್ = ಆಯಿತು.

**78. ಶರೈರುತ್ಸವಸಂಕೇತಾನ್ ಸ ಕೃತ್ವಾ ವಿರತೋತ್ಸವಾನ್ ।**
**ಜಯೋದಾಹರಣಂ ಬಾಹ್ವೋರ್ಗಾಪಯಾಮಾಸ ಕಿನ್ನರಾನ್ ॥ ೭೮ ॥**

ಘನಘೋರ ಸಂಗ್ರಾಮದಲ್ಲಿ, ಸಂಕುಲ, ದ್ವಂದ್ವಯುದ್ಧಗಳ ಮೂಲಕ ರಘುವು ಅಲಗು ಪರಾಕ್ರಮಿಗಳಾದ ಉತ್ಸವ, ಸಂಕೇತರೆಂಬ ಗಣಗಳ ವೀರಯೋಧರನ್ನು (ಪರ್ವತೀಯರನ್ನು) ಸೋಲಿಸಿ ಅವರನ್ನು ಉತ್ಸಾಹರಹಿತರನ್ನಾಗಿ ಮಾಡಿದನು. ತನ್ನ ಬಾಣಾವಳಿಗಳಿಂದ (ನಾರಾಚಗಳಿಂದ) ಉತ್ಸವ, ಸಂಕೇತ ಸ್ಥಳಗಳನ್ನು ಶರಸಂಕೇತಗಳನ್ನಾಗಿ (ರಣಭೂಮಿಯನ್ನಾಗಿ) ಮಾಡಿ (ಪರಿವರ್ತಿಸಿ) ತನ್ನ ತೋಳ್ಬಲವನ್ನು ಪ್ರದರ್ಶಿಸಿದನು. ಆ ಉತ್ಸವ ಸಂಕೇತಗಳಲ್ಲಿ (ಆ ಗಣರಾಜ್ಯಗಳಲ್ಲಿ) ಹೆಣ್ಣುಗಂಡು ಸ್ವಚ್ಛಂದವಾಗಿ ಸೇರುತ್ತಿದ್ದರು. ಕಿನ್ನರರು ಇದೀಗ ಉತ್ಸವ, ಸಂಕೇತವನ್ನು ತೊರೆದು ಈಗ ವಿಗತೋತ್ಸವಾಂಕಿತರಾಗಿದ್ದರು. ಕಿನ್ನರರು, ದೇವಗಾಯಕರು, ಲಾವಣಿ ಹಾಡುವವರು, ರಘುವೀರನ ಗಾಥೆಯನ್ನು ಅವರು ಹಾಡುಗಬ್ಬಗಳನ್ನು ರಚಿಸಿ ಹಾಡತೊಡಗಿದರು. ರಘುಚಕ್ರೇಶ್ವರನು ತನ್ನ ಭುಜವಿಜಯಗಾನವನ್ನು (ಭಾರತವರ್ಷದ ಅಖಂಡಕೀರ್ತಿ

ಹುಸ್ನು). ಕಿನ್ನರರ ಮುಖದಿಂದ ಹಾಡಿಸಿ ಆ ಕಿನ್ನರಕಿಂಪುರುಷರ ಭೂಮಿಯಲ್ಲಿ ತನ್ನ ಪ್ರತಾಪವನ್ನು ಅಜರಾಮರವಾಗಿ ಮೆರೆಸಿದನು.

ಅನ್ವಯ :—ಸಃಶರೈಃ ಉತ್ಸವಸಂಕೇತಾನ್ ವಿರಸ್ರೋತ್ಸವಾನ್ ಕೃತ್ವಾ ಬಾಹ್ವೋಃ ಜಯೋದಾಹರಣಂ ಕಿನ್ನರಾನ್ ಗಾಪಯಾಮಾಸ ॥

ವಿರತಃ ಉತ್ಸವಃ ಯೇಷಾಂತೇ, ವಿರತೋತ್ಸವಾಃ, ತಾನ್। ಜಯಖ್ಯಾಪಕಂ ಉದಾಹರಣಂ—ಜಯೋದಾಹರಣಮ್। ಗಾಪಯಾಮಾಸ—ಗೈ—ಶಬ್ದೇ—ಣಿಜಂತಾತ್—ಲಿಟ್—ಪ್ರ.ಪು.ಏ. ॥

ಸಃ = ರಘುಮಹಾರಾಜನು, ಶರೈಃ = ಬಾಣಗಳಿಂದ, ಉತ್ಸವಸಂಕೇತಾನ್ = ಉತ್ಸವ ಸಂಕೇತರೆಂಬ ಗಣದ (ಗಣರಾಜ್ಯದ) ಯೋಧರನ್ನು, ವಿರತೋತ್ಸವಾನ್ = ಉತ್ಸಾಹ ರಹಿತರನ್ನಾಗಿ, ಕೃತ್ವಾ = ಮಾಡಿ, ಕಿನ್ನರಾನ್ = ಕಿನ್ನರೆಂಬ ಗಾಯಕರನ್ನು, ಬಾಹ್ವೋಃ = ತೋಳುಗಳ, ಜಯೋದಾಹರಣಂ = ಜಯವನ್ನು ಸೂಚಿಸುವ ಲಾವಣಿಗಳನ್ನು, ಗಾಪಯಾಮಾಸ = ಗಾನಮಾಡಿಸಿದನು.

**79. ಪರಸ್ಪರೇಣ ವಿಜ್ಞಾತಸ್ತೇಷೂಪಾಯನಪಾಣಿಷು ।**
**ರಾಜ್ಞಾ ಹಿಮವತಃ ಸಾರೋ ರಾಜ್ಞಃ ಸಾರೋ ಹಿಮಾದ್ರಿಣಾ ॥ ೭೯ ॥**

ಆ ಹಿಮಾಲಯದ ಪರ್ವತ ಪ್ರಾಂತವನ್ನು ಗೆದ್ದು ಪರಾಜಿತರಾದ ಕಿಂಪುರುಷ, ಕಿನ್ನರ, ಪರ್ವತೀಯರು, ಕಿರಾತರೇ ಮೊದಲಾದವರಿಂದ ನಾನಾ ರೀತಿಯ ಧನಕನಕ, ಕಪ್ಪಕಾಣಿಕೆ ಗಳನ್ನು, ಚರ್ಮಾದಿವಸ್ತುಗಳನ್ನು ಸ್ವೀಕರಿಸಿ ತನ್ನ ಶಕ್ತಿಯಸಾರವನ್ನು (ಬಲರೂಪ) ಜಗತ್ತಿಗೆ ತಿಳಿಸಿದನು. ಆಗ ಮಾನವಾಧೀಶನಾದ (ಭೂಮಂಡಲಾಧೀಶನಾದ) ರಘುವಿನ ಅಪಾರಸತ್ವವನ್ನು, ಸಾಹಸದ ಮಹಿಮೆಯನ್ನು ಪರ್ವತಗಳ ರಾಜನಾದ (ಪರ್ವತಗಳ ಸಾರ್ವಭೌಮನಾದ) ಹಿಮವಂತನು (ಗೌರಿಯ ಪಿತನು, ಸರ್ವಮಂಗಳೆಯ ಶ್ರೀ ಗೌರಿಯ ಜನಕನು) ಅರಿತನು. ಅದೇ ರೀತಿಯಲ್ಲಿ ಹಿಮಗಿರಿಯ ಸಿರಿಸಂಪತ್ತನ್ನು, ಧನಸಂಪತ್ತನ್ನು (ಧನರೂಪ) ಅಣಿಮಾದಿ ಅಷ್ಟೈಶ್ವರ್ಯಗಳನ್ನು ರಘುವು ತಿಳಿದುಕೊಂಡನು. ಹೀಗೆ ಒಬ್ಬರ ಸತ್ವವನ್ನು (ಅಂತಃಸತ್ವವನ್ನು) ಇನ್ನೊಬ್ಬರು ಪರಸ್ಪರ ಅರಿತುಕೊಂಡು ಮೆಚ್ಚಿ ಕೊಂಡರು.

ಉಪಾಯನಾನಿಪಾಣಿಷು ಯೇಷಾಂತೇ—ಉಪಾಯನಪಾಣಯಃ, ತೇಷು । ಹಿಮಸ್ಯ ಅದ್ರಿಃ, ತೇನ ॥

ತೇಷು = ಆ ಗಣದವರು, ಉಪಾಯನಪಾಣಿಷು = ಕಾಣಿಕೆಯನ್ನು ಕೈಯಲ್ಲಿ ಹಿಡಿದಿರಲು, ಪರಸ್ಪರೇಣ = ಅನ್ಯೋನ್ಯವಾಗಿ, ರಾಜ್ಞಾ = ರಘುವಿನಿಂದ, ಹಿಮವತಃ = ಹಿಮವಂತನ, ಸಾರಃ = ಧನಕನಕದ ಬಲವು, ವಿಜ್ಞಾತಃ = ತಿಳಿಯಲ್ಪಟ್ಟಿತು, ಹಿಮಾದ್ರಿಣಾ = ಹಿಮವಂತನಿಂದ, ರಾಜ್ಞಃ = ರಘುರಾಜನ, ಸಾರಃ = ಬಲವು, ವಿಜ್ಞಾತಃ = ತಿಳಿಯಲ್ಪಟ್ಟಿತು.

**80. ತತ್ರಾಕ್ಷೋಭ್ಯಂ ಯಶೋರಾಶಿಂ ನಿವೇಶ್ಯಾವರುರೋಹ ಸಃ ।**
**ಪೌಲಸ್ತ್ಯತುಲಿತಸ್ಯಾದ್ರೇರಾದಧಾನ ಇವ ಹ್ರಿಯಮ್ ॥ ೮೦ ॥**

ಹೀಗೆ ನಾಶರಹಿತವಾದ, ಅಕ್ಷಯವಾದ ನಿಜಯಶೋರಾಶಿಯನ್ನು ಆ ದಿಲೀಪನಂದನನು ಹಿಮಗಿರಿಯೊಳಿರಿಸಿ ತಾನು ಅಲ್ಲಿಂದ ಕೆಳಗಿಳಿದು ನಿರ್ಗಮಿಸಿದನು, ಆ ಹಿಮವಂತನನ್ನು ತನ್ನ ಅಪಾರವಾದ ಕೀರ್ತಿಯಿಂದ, ನಿರ್ಮಲವಾದ ಯಶೋರಾಶಿಯಿಂದ ಮತ್ತೂ ಬೆಳ್ಳಗಾಗಿಸಿದನು, ಜಗದೇಕವೀರನಾದ ರಘುವು ಯಾರಿಂದಲೂ ಸೋಲನ್ನು ಕಂಡರಿಯದವನು, ಅಜೇಯನು ಈ ಹಿಂದೆ ಪುಲಸ್ತ್ಯಕೈಕಸೆಯರ ಸುತನಾದ ರಾವಣೇಶ್ವರನು ತನ್ನ ಅಗಾಧವಾದ ತೋಳ್ಬಲದಿಂದ ಹಿಮಗಿರಿಯನ್ನು ಎತ್ತಿ ಆ ಚಂದ್ರಾರ್ಕಕೀರ್ತಿಯನ್ನು ಪಡೆದು ಹಿಮಗಿರಿಯನ್ನು ನಾಚಿಸಿದ್ದನು. ಈಗ ರಘುವೂ ಅವನಂತೆಯೇ ಹಿಮವಂತನನ್ನು ತನ್ನ ಅತಿಶಯವಾದ ಕೀರ್ತಿಯಿಂದ (ಕೀರ್ತಿಯ ಪೆಂಪು) ಸಣ್ಣದಾಗಿಸಿ ಅಲ್ಲಿಂದ ಕೆಳಗಿಳಿದು ಹೊರಟುಹೋದನು.

ಅನ್ವಯ :—ತತ್ರ ಅಕ್ಷೋಭ್ಯಂ ಯಶೋರಾಶಿಂ ನಿವೇಶ್ಯ ಪೌಲಸ್ತ್ಯತುಲಿತಸ್ಯಾದ್ರೇಃ ಹ್ರಿಯಮ್ ಆದಧಾನಃ ಇವ ಅವರುರೋಹ ॥

ನ ಕ್ಷೋಭ್ಯಃ, ಅಕ್ಷೋಭ್ಯಃ, ತಮ್ । ಯಶಸಃ ರಾಶಿಃ, ತಮ್ । ಅವ—ಉಪಸರ್ಗ. ರುರೋಹ—ರುರುಹತುಃ—ರುರುಹುಃ । ಇತ್ಯಾದಿ । ರುಹ—ಬೀಜಜನ್ಮನಿಪ್ರಾದುರ್ಭಾವೇ. ಚ—ಲಿಟ್ । ಪೌಲಸ್ತ್ಯೇನ ತುಲಿತಃ, ತಸ್ಯ॥

ಸಃ = ಆ ರಘುರಾಜನು, ತತ್ರ= ಆ ಹಿಮವತ್ಪರ್ವತದಲ್ಲಿ, ಅಕ್ಷೋಭ್ಯಂ = ಶಾಶ್ವತವಾದ, ಯಶೋರಾಶಿಂ = ಕೀರ್ತಿಯತಿಶಯವನ್ನು, ನಿವೇಶ್ಯ= ಇಟ್ಟು, ಪೌಲಸ್ತ್ಯತುಲಿತಸ್ಯ = ರಾವಣನಿಂದ ಎತ್ತಲ್ಪಟ್ಟ, ಅದ್ರೇಃ = ಕೈಲಾಸಪರ್ವತಕ್ಕೆ, ಹ್ರಿಯಂ = ನಾಚಿಕೆಯನ್ನು, ಆದಧಾನಃ ಇವ = ಉಂಟುಮಾಡಿದನು ಎಂಬಂತೆ. ಅವರುರೋಹ = ಇಳಿದನು.

**81. ಚಕಂಪೇ ತೀರ್ಣಲೌಹಿತ್ಯೇ ತಸ್ಮಿನ್ ಪ್ರಾಗ್ಜ್ಯೋತಿಷೇಶ್ವರಃ ।**
**ತದ್ಗಜಾಲಾನತಾಂ ಪ್ರಾಪ್ತೈಃ ಸಹ ಕಾಲಾಗುರುದ್ರುಮೈಃ ॥ ೮೧ ॥**

ರಘುವು ತನ್ನ ದಿಗ್ವಿಜಯವನ್ನು ಮುಂದುವರಿಸಿ, ಲೋಹಿತ ನದಿಯನ್ನು ದಾಟಿ ಪ್ರಾಗ್ಜ್ಯೋತಿಷ್ಯನಗರಕ್ಕೆ ದಾಳಿಯಿಟ್ಟನು. ರಘುವು ಲೋಹಿತನದಿಯನ್ನು ದಾಟಿಬರುವ ವದಂತಿಯನ್ನು ತಿಳಿದ ಪ್ರಾಗ್ಜ್ಯೋತಿಷ್ಯಪುರದ ಅವನೀಶ್ವರನು ಕೇಳಿ ನಡನಡುಗಿದನು. ಲೋಹಿತನದಿಯ ಭೂವಲಯದಲ್ಲಿ ಬೆಳೆದಿರುವ ಕೃಷ್ಣಾಗುರು ಮರಗಳಿಗೆ ಯುದ್ಧದ ಆನೆಗಳನ್ನು ಬಿಗಿದುಕಟ್ಟಿದ ವದಂತಿಬಂದಿತು, ಆ ಪ್ರದೇಶದಲ್ಲಿ ರಘುವು ಸಮರಸನ್ನಾಹ ನಡೆಸಿದನು. ಆಲಾನಭಾವ ಹೊಂದಿದ (ಆನೆಗಳನ್ನು ಕಟ್ಟುವ ಕಂಬಗಳಾದ ಪರಿಣಾಮವಾಗಿ) ನಡುಗುವ ಕೃಷ್ಣಾಗುರು ಮರಗಳೊಂದಿಗೆ ತಾನೂ ನಡುಗಿದನು. ಲೋಹಿತನದಿ (ಹಳದಿನದಿ) ಪ್ರದೇಶವು ಕಾಲಾಗುರು (ಕಪ್ಪುಗಂಧ, ಕೃಷ್ಣಾಗುರು) ವೃಕ್ಷಕ್ಕೆ ಜಗತ್ ಪ್ರಸಿದ್ಧವಾಗಿದೆ.

ಅಲಂಕಾರಃ ಸಹೋಕ್ತಿ ಅಲಂಕಾರ.

ಅನ್ವಯಃ :—ತಸ್ಮಿನ್ ತೀರ್ಣಲೌಹಿತ್ಯೇ ಪ್ರಾಗ್ಜ್ಯೋತಿಷೇಶ್ವರಃ ತದ್ ಗಜಾಲಾನತಾಂ ಪ್ರಾಪ್ತೈಃ ಕಾಲಾಗುರುದ್ರುಮೈಃ ಸಹ ಚಕಂಪೇ ॥

ಚಕಂಪೇ—ಚಕಂಪಾತೇ—ಚಕಂಪಿರೇ—ಇತ್ಯಾದಿ । ಕಪಿ—ಕಿಂಚಿಚ್ಚಲನೇ—ಲಿಟ್—ಪ್ರ.ಪು.ಏ. । ತೀರ್ಣಾ ಲೌಹಿತ್ಯಾ ಯೇನ ಸಃ, ತೀರ್ಣಲೌಹಿತ್ಯಃ । ತಸ್ಮಿನ್ । ಪ್ರಾಗ್ಜ್ಯೋತಿಷಾನಾಂ ಈಶ್ವರಃ । ತಸ್ಯ ಗಜಾಃ, ತದ್ಗಜಾಃ । ತದ್ಗಜಾನಾಂ ಆಲಾನಂ, ತದ್ಗಜಾಲಾನಸ್ಯ ಭಾವಃ, ತದ್ಗಜಾಲಾನತಾ. ತಾಮ್ । ಕಾಲಾಗುರವಶ್ಚ ತೇ ದ್ರುಮಾಶ್ಚ । ಕಾಲಾಗುರುದ್ರುಮಾಃ, ತೈಃ ॥

ತಸ್ಮಿನ್ = ಆ ರಘುರಾಜನು, ತೀರ್ಣಲೌಹಿತ್ಯೇ = ಲೌಹಿತ್ಯೇ = ಲೌಹಿತ್ಯ(ಬ್ರಹ್ಮಪುತ್ರ), ವನ್ನು ದಾಟುತ್ತಿರಲು. ಪ್ರಾಗ್ಜ್ಯೋತಿಷೇಶ್ವರಃ=ಪ್ರಾಗ್ಜ್ಯೋತಿಷವೆಂಬ (ಅಸ್ಸಾಮ್, ಭೂತಾನ್, ಸಿಕ್ಕಿಂ) ದೇಶದ ರಾಜನು (ಮಂಡಲೇಶ್ವರನು), ತದ್ಗಜಾಲಾನತಾಂ = ಆನೆಗಳನ್ನು ಕಟ್ಟುವ ಸ್ತಂಭದ ಭಾವವನ್ನು ಹೊಂದಿ, ಪ್ರಾಪ್ತೈಃ = ಹೊಂದಿದ, ಕಾಲಾಗುರುದ್ರುಮೈಃ=ಕಪ್ಪು ಅಗುರುಮರಗಳಿಂದ ನಿಬಿಡವಾಗಿರುವ, ಚಕಂಪೇ=ನಡುಗಿದನು.

ಅತ್ರೈವ ಹಿ ಸ್ಥಿತೋ ಬ್ರಹ್ಮಾ, ಪ್ರಾಚ್ ನಕ್ಷತ್ರಂ ಸಸರ್ಜಹ । ತತಃ ಪ್ರಾಗ್ಜ್ಯೋತಿಷಾಖ್ಯೇಯಂಪುರೀ ಶಕ್ರಪುರೀಸಮಾ ॥

**82. ನ ಪ್ರಸೇಹೇ ಸ ರುದ್ಧಾರ್ಕಮಧಾರಾವರ್ಷದುರ್ದಿನಮ್ ।**
**ರಥವರ್ತ್ಮರಜೋಽಪ್ಯಸ್ಯ ಕುತ ಏವ ಪತಾಕಿನೀಮ್ ॥ ೮೨ ॥**

ರಘುವಿನ ರಥದಿಂದೆದ್ದ ದಟ್ಟವಾದ ಧೂಳು ಭಾನುಮಂಡಲವನ್ನೂ ಆಕಾಶವನ್ನೂ ಕವಿಯಿತು. ದಟ್ಟವಾದ ಕಾರ್ಗತ್ತಲೆ ದಿಗಂತಗಳನ್ನು ವ್ಯಾಪಿಸಿತು. ಮಳೆ ಬಾರದಿದ್ದರೂ ಧಾರಾಕಾರವಾಗಿ ಮಳೆಬರುವಂತೆ ಕಂಡಿತು. ಆ ಧೂಳಿನ ಮೋಡಗಳನ್ನು ಕಂಡು, ಮಳೆಗಾಲದ ದುರ್ದಿನದಂತೆ, ಕತ್ತಲೂ ಎತ್ತೆತ್ತಲೂ ವ್ಯಾಪಿಸಿರುವುದನ್ನು ಕಂಡು ಇಂತಹ ಉತ್ಪಾತಗಳನ್ನು ಯುದ್ಧಕ್ಕೆ ಮೊದಲೇ ಕಂಡು ಪ್ರಾಗ್ಜ್ಯೋತಿಷ ನರೇಶ್ವರನು ಭಯದಿಂದ ನಡುಗಿದನು. ಇನ್ನು ಮುಂದೆ ರಘುವಿನ ಮಹಾಸೇನೆಯನ್ನು ಎದುರಿಸುವುದೆಂತು? ಎದುರಿಸುವನು ಎಂತು? (ಚಿದಂಬರಪ್ರಶ್ನೆ) ಸಪ್ತಾಂಗದಿಂದ ಕೂಡಿದ ಆ ಮಹಾ ಸೇನಾ ಸಾಗರವು ಮುಂಬರಿದು ಕಾಳ್ಗಿಚ್ಚಿನಂತೆ ಪಸರಿಸುತ್ತ, ಶರವೇಗದಿಂದ ಬರುತ್ತಿರುವುದನ್ನು ಕಂಡು ಸಹಿಸುವನು ಎಂತು. ಅವನು ದಿಙ್ಮೂಢನಾಗಿ ದಿಕ್ಕುತೋಚದೆ ಯುದ್ಧಮಾಡದೇ ಶರಣಾಗತನಾದನು.

ಅನ್ವಯಃ :—ಸ ರುದ್ಧಾರ್ಕಮ್ ಅಧಾರಾವರ್ಷದುರ್ದಿನಂ ರಥವರ್ತ್ಮ ರಜೋಽಪಿ ನ ಪ್ರಸೇಹೇ । ಕುತ ಏವ ಅಸ್ಯ ಪತಾಕಿನೀಮ್ ॥

ಪ್ರ—ಉಪಸರ್ಗ । ಸೇಹೇ—ಸೇಹಾತೇ—ಸೇಹಿರೇ—ಇತ್ಯಾದಿ । ಷಹ—ಮರ್ಷಣೇ—ಲಿಟ್—ಪ್ರ.ಪು.ಏ. । ರುದ್ಧಃ ಅರ್ಕಃ ಯೇನ ತತ್—ರುದ್ಧಾರ್ಕಮ್ । ನ ವಿದ್ಯತೇ ಧಾರಾವರ್ಷಃ—ಯಸ್ಮಿನ್ ತತ್ । ಅಧಾರಾವರ್ಷಂ ಚ ತತ್ ದುರ್ದಿನಂ ಚ—ಅಧಾರಾವರ್ಷದುರ್ದಿನಮ್ । ರಥಾನಾಂ ವರ್ತ್ಮ । ರಥವರ್ತ್ಮನಃ ರಜಃ ॥

ಸಃ = ಆ (ಅರಸನು), ರುದ್ಧಾರ್ಕಂ = ಮುಚ್ಚಿದ ಸೂರ್ಯನುಳ್ಳ, ಅಧಾರಾವರ್ಷಂ = ಧಾರಾಕಾರ ಮಳೆಯಿಲ್ಲದೇ ದುರ್ದಿನವನ್ನಾಗಿ ಮಾಡಿದ, ಅಸ್ಯ = ರಘುವಿನ, ರಥವರ್ತ್ಮ ರಜಃ = ರಥಗಳ ದಾರಿಯ ದೂಳನ್ನು ಕೂಡಾ, ನ ಪ್ರಸೇಹೇ = ಸಹಿಸಲಿಲ್ಲ, ಪತಾಕಿನೀಂ = ಸೇನೆಯನ್ನು, ಕಿಂತ ಏವ = ಹೇಗೆ ಸಹಿಸಿಯಾನು, 'ಪತಾಕಿನೀ = ಪತಾಕಾವಿದ್ಯಂತೇ ಅಸ್ಯಾಃ ಇತಿ ಪತಾಕಿನೀ, ಅಧಾರಾವರ್ಷ ಚ ತದ್ ದುರ್ದಿನಂ ಚ = ಮೇಘಚ್ಛನ್ನೇ ಹಿ ದುರ್ದಿನಮ್ ॥

**83. ತಮೀಶಃ ಕಾಮರೂಪಾಣಾಮತ್ಯಾಖಂಡಲವಿಕ್ರಮಮ್ ।**
**ಭೇಜೇ ಭಿನ್ನಕಟೈರ್ನಾಗೈರನ್ಯಾನುಪರುರೋಧಯೈಃ ॥ ೮೩ ॥**

ಆಖಂಡವಿಕ್ರಮಿ ಇಂದ್ರಸಮ ಪರಾಕ್ರಮಿಯಾದ (ಅತೀಂದ್ರ ಶಕ್ತಿಸಂಪನ್ನನಾದ) ರಘುವಿಗೆ ಕಾಮರೂಪಾಧಿಪತಿಯು ಶರಣುಹೋದನು. ಈ ಹಿಂದೆ ಇತರರು ಆಕ್ರಮಿಸಿದಾಗ ಆ ನರೇಂದ್ರನು ಅವರನ್ನು ತನ್ನ ಗಜಸೈನ್ಯದಿಂದ ಜಯಿಸಿದ್ದನು. ಯಾರಿಗೂ ತಲೆಬಾಗಿದವನಲ್ಲ. ಅವನ ಗಜಸೇನೆ ಅತ್ಯಂತ ಬಲಿಷ್ಠವೆನಿಸಿತ್ತು. ಆದರೆ ಇಂದು ಮದಧಾರೆಯನ್ನು ಸುರಿಸುತ್ತಿರುವ ಗಜಸೇನೆ ಸಹಿತ ರಘುವಿನ ಪದಗಳಿಗೆರಗಿ ಕಾಣಿಕೆ ನೀಡಿದನು. ಶೂರರಿಗೆ ಶೂರನಾದ ವೀರರಘುವಿನೊಡನೆ ಅವನು ಯುದ್ಧಕ್ಕೆ ಇಳಿಯದೆ ಶರಣು ಹೋದನು. ಇಂದ್ರನ ಪರಾಕ್ರಮವನ್ನು ಮೀರುವ ರಘುವು ಬಂದಾಗ ಎದುರಿಸಲು ಅಸಮರ್ಥನಾಗಿ ಅವನಿಗೆ ಅಧೀನನಾಗಿ ಆನೆಗಳನ್ನೇ ಕಪ್ಪವನ್ನಾಗಿ ಒಪ್ಪಿಸಿದನು.

ಅನ್ವಯಃ :—ಕಾಮರೂಪಾಣಾಮ್ ಈಶಃ ಅತ್ಯಾಖಂಡಲವಿಕ್ರಮಂ ತಂ ಯೈಃ ಅನ್ಯಾನ್ ಉಪರುರೋಧ(ತೈಃ)ಭಿನ್ನಕಟೈಃ ನಾಗೈಃ ಭೇಜೇ ॥

ಆಖಂಡಲಸ್ಯ ವಿಕ್ರಮಃ । ಅತ್ಯಾಕ್ರಾಂತಃ ಆಖಂಡಲವಿಕ್ರಮಃ ಯೇನಸಃ, ತಮ್ । ಭೇಜೇ—ಭಜ—ಸೇವಾಯಾಂ ಲಿಟ್ । ಭಿನ್ನಾಃ ಕಟಾಃ ಯೇಷಾಂ ತೇ. ಭಿನ್ನಕಟಾಃ, ತೈಃ । ಉಪ—ಉಪಸರ್ಗ—ರುರೋಧ—ರುರುಧತುಃ—ರುರುಧುಃ—ಇತ್ಯಾದಿ । ರುಧಿರ್—ಆವರಣೇ—ಲಿಟ್ ॥

ಕಾಮರೂಪಾಣಾಂ ಈಶಃ = ಕಾಮರೂಪದೇಶದ ಅರಸ—ಅತ್ಯಾಖಂಡಲವಿಕ್ರಮಂ = ಇಂದ್ರನನ್ನು ಮೀರಿಸಿದ ಪರಾಕ್ರಮವುಳ್ಳ, ತಂ = ಆ ರಘುರಾಜನನ್ನು—ಭಿನ್ನಕಟೈಃ = ಸುರಿಯುವ ಮದವುಳ್ಳ (ಕಪೋಲವುಳ್ಳ) ನಾಗೈಃ = ಆನೆಗಳಿಂದ, ಭೇಜೇ = ಸೇವಿಸಿದನು, ಯೈಃ = ಯಾವ ಆನೆಗಳಿಂದ, ಅನ್ಯಾನ್ = ಇತರ ಶತ್ರುಗಳನ್ನು, ಉಪರುರೋಧ = ತಡೆದಿದ್ದನು.

**84. ಕಾಮರೂಪೇಶ್ವರಸ್ತಸ್ಯ ಹೇಮಪೀಠಾಧಿದೇವತಾಮ್ ।**
**ರತ್ನಪುಷ್ಪೋಪಹಾರೇಣ ಛಾಯಾಮಾನರ್ಚ ಪಾದಯೋಃ ॥ ೮೪ ॥**

ಕಾಮರೂಪದೇಶಾಧಿಪತಿಯು ಅಖಂಡ ಸಾಹಸದ ಅಧಿಷ್ಠಾತೃ ದೇವತೆಯಂತಿರುವ ರಘುಸಾರ್ವಭೌಮನ ಪಾದಗಳನ್ನು ಹೇಮಮಯ ಪೀಠದಲ್ಲಿರಿಸಿ ತಾನು ಪೂಜಿಸಿದನು. ಆ ವೀರನಾಯಕನ ಚರಣಗಳ ಕಾಂತಿ ಆ ಸ್ವರ್ಣಪೀಠದಲ್ಲಿ ಸುತ್ತಲೂ

ವ್ಯಾಪಿಸಿತು. ಆ ಯುದ್ಧಾಧಿ ದೇವತೆಯು ಪಾದಮೂಲದಲ್ಲಿ ರತ್ನ, ಮುತ್ತು, ಗೋಮೇಧಿಕ, ಹವಳ, ವಜ್ರ, ವೈಡೂರ್ಯ, ಪುಷ್ಯರಾಗಗಳಿಂದಲೂ, ಪುಷ್ಪಹಾರಗಳಿಂದಲೂ ಅರ್ಚಿಸಿ ಪೂಜಿಸಿದನು. ಆ ಚರಣಗಳ ದಿವ್ಯಕಾಂತಿಯು ಹೇಮಪೀಠದಲ್ಲಿ ಸುತ್ತಲೂ ವ್ಯಾಪಿಸಿದಾಗ ಅದರ ಛಾಯೆಯನ್ನು ವರ್ಣಪುಷ್ಪಹಾರಗಳಿಂದ ಅರ್ಚಿಸುತ್ತಿರುವನೋ ಎಂಬಂತೆ ಕಂಡಿತು.

ರಘುಸಾರ್ವಭೌಮನ ಚರಣಗಳನ್ನು ಸುವರ್ಣ ಪಾದಪೀಠದಲ್ಲಿಟ್ಟು, ಆ ಚರಣಗಳ ಕಾಂತಿಯು ಪೀಠವನ್ನು ವ್ಯಾಪಿಸಿದಾಗ, ಅದರ (ಆ ಪಾದಗಳ) ಛಾಯೆಯು ಪೀಠ ದೇವತೆಯ ಸ್ವರೂಪವನ್ನು ಧರಿಸಿತು. ಹೀಗಿರುವ ಪಾದಗಳ ಛಾಯಾರೂಪವಾದ ಪೀಠ ದೇವತೆಯನ್ನು, ಆ ಕಾಂತಿಮಯ ಸ್ವರೂಪವನ್ನು ಭಕ್ತಿಯಿಂದ ನವರತ್ನಗಳ ಹಾರದಿಂದ, ಪೂಜಿಸಿದನು. ರಘುಚಕ್ರವರ್ತಿಯು ಚರಣಾರವಿಂದಗಳಿಗೆ ನವರತ್ನಗಳ ಕಾಣಿಕೆಗಳಿಂದ ಅರ್ಚಿಸಿದನೆಂದು.

ಅನ್ವಯ :—ಕಾಮರೂಪೇಶ್ವರಃ ಹೇಮಪೀಠಾಧಿದೇವತಾ ತಸ್ಯ ಪಾದಯೋ, ಛಾಯಾಂ ರತ್ನಪುಷ್ಪೋಪಹಾರೇಣ ಆನರ್ಚ ॥

ಕಾಮರೂಪಾಣಾಂ ಈಶ್ವರಃ । ಹೇಮ್ನಃ ಪೀಠಂ, ಹೇಮಪೀಠಸ್ಯ ಅಧಿದೇವತಾಃ ತಾಮ್ । ರತ್ನಾನ್ಯೇವ ಪುಷ್ಪಾಣಿ । ರತ್ನಪುಷ್ಪಾಣಾಂ ಉಪಹಾರಃ, ತೇನ । ಆನರ್ಚ— ಆನರ್ಚತುಃ—ಆನರ್ಚುಃ । ಇತ್ಯಾದಿ । ಅರ್ಚ—ಪೂಜಾಯಾಂ—ಲಿಟ್—ಪ್ರ.ಪು.ಏ. ॥

ಕಾಮರೂಪೇಶ್ವರಃ = ಕಾಮರೂಪದೇಶದ ರಾಜನು, ಹೇಮಪೀಠಾಧಿದೇವತಾಂ = ಚಿನ್ನದಪೀಠಕ್ಕೆ ದೇವತೆಯಾಗಿರುವ, ತಸ್ಯ= ಆ ರಘುರಾಜನ, ಪಾದಯೋಃ = ಪಾದಗಳ, ಛಾಯಾಂ = ಕಾಂತಿಯನ್ನು. ರತ್ನಪುಷ್ಪೋಪಹಾರೇಣ = ರತ್ನಗಳೆಂಬ ಹೂಗಳ ಕಾಣಿಕೆ ಯಿಂದ, ಆನರ್ಚ = ಪೂಜಿಸಿದನು.

**85.** ಇತಿ ಜಿತ್ವಾ ದಿಶೋ ಜಿಷ್ಣುರ್ನ್ಯವರ್ತತ ರಥೋದ್ಧತಮ್ ।
ರಜೋ ವಿಶ್ರಾಮಯನ್ ರಾಜ್ಞಾಂ ಛತ್ರಶೂನ್ಯೇಷು ಮೌಲಿಷು
|| ೮೫ ||

ಹೀಗೆ ನಾಲ್ಕು ದಿಕ್ಕುಗಳಲ್ಲಿರುವ ಭೂಮಿಪಾಲರನ್ನು ಗೆದ್ದು ಅವರನ್ನು ಬೆಳ್ಗೊಡೆ ವಿಹೀನರನ್ನಾಗಿ ಮಾಡಿ ರಘುಚಕ್ರವರ್ತಿಯು ತನ್ನ ರಾಜಧಾನಿಗೆ ಯಾನಮಾಡಿದನು. ಬೆಳ್ಗೊಡೆವಿಹೀನರಾದ ಆ ಮಹಾರಾಜರ ತಲೆಯ ಮೇಲೆ ಮತ್ತು ಅವರ ರತ್ನಖಚಿತ ಕಿರೀಟಗಳ ಮೇಲೆ ಆ ರಾಜಮೌಳಿಯು ವೇಗದಿಂದ ಚಲಿಸುವ ತನ್ನ ರಥದ ಧೂಳಿಯನ್ನು ಇರಿಸಿ, ತಾನು ವಿಶ್ವವಿಜೇತನೆನಿಸಿ ತನ್ನ ನಿಜನಗರಿಗೆ ವೈಭವದಿಂದ ಐತಂದನು (ತೆರಳಿದನು).

ನಿ—ಪಸರ್ಗ । ಅವರ್ತತ—ಅವರ್ತೇತಾಂ—ಅವರ್ತಂತ—ಅವರ್ತಥಾಃ—ಅವರ್ತೇಥಾಂ—ಅವರ್ತಧ್ವಂ । ಅವರ್ತೇ—ಅವರ್ತಾವಹಿ—ಅವರ್ತಾಮಹಿ । ವೃತು—ವರ್ತನೇ —ಲಙ್—ಪ್ರ.ಪು.ಏ. ॥ರಥೈಃ ಉದ್ಧತಂ—ರಥೋದ್ಧತಮ್। ಛತ್ರೈಃ ಶೂನ್ಯಾಃ, ತೇಷು ॥

ಜಿಷ್ಣುಃ = ಜಯಶೀಲನಾದ (ರಘುವು), ಇತಿ = ಈ ತೆರನಾಗಿ, ದಿಶಃ = ದಿಕ್ಕುಗಳನ್ನು, ಜಿತ್ವಾ = ಗೆದ್ದು, ರಥೋದ್ಧತಂ = ರಥಗಳಿಂದ ಎದ್ದಿರುವ, ರಜಃ = ಧೂಳಿಯನ್ನು,

ಛತ್ರಶೂನ್ಯೇಷು = ಶ್ವೇತಚತ್ರವಿಲ್ಲದಿರುವ, ರಾಜ್ಞಾಂ = ಸಾಮಂತರಾಜರ, ಮಾಂಡಲಿಕರ, ಆಶ್ರಿತರಾಜರ, ಮೌಲಿಷು = ಕಿರೀಟಗಳಲ್ಲಿ, ನೆತ್ತಿಗಳಲ್ಲಿ, ವಿಶ್ರಾಮಯನ್ = ವ್ಯಾಪಿಸಿ ನ್ಯವರ್ತತ = ಹಿಂದಿರುಗಿದನು, ಜಿಷ್ಣುರ್ಜಯಶೀಲಃ ॥

**86. ಸ ವಿಶ್ವಜಿತಮಾಜಹ್ರೇ ಯಜ್ಞಂ ಸರ್ವಸ್ವದಕ್ಷಿಣಮ್ ।**
**ಆದಾನಂ ಹಿ ವಿಸರ್ಗಾಯ ಸತಾಂ ವಾರಿಮುಚಾಮಿವ ॥ ೮೬ ॥**

ಇದೀಗ ರಘುವು ತನ್ನ ಸರ್ವಸ್ವವನ್ನು ದಾನಮಾಡುವ ವಿಶ್ವಜಿತ್ ಮಹಾ ಯಾಗವನ್ನು ಕೈಗೊಂಡನು. ತನ್ನ ಸಾಮ್ರಾಜ್ಯದ ಸಕಲಸಂಪತ್ತನ್ನು ಪೂರ್ಣವಾಗಿ ದಕ್ಷಿಣೆಯ ರೂಪದಲ್ಲಿ ದಾನಮಾಡುವ ಮಹಾಯಾಗವನ್ನು ಕೈಗೊಂಡನು. ಅವನು ಪ್ರಪಂಚದ ಎಲ್ಲಾ ಅರಸರನ್ನು ಗೆದ್ದು ವಿಶ್ವವಿಜೇತ ನೆನಿಸಿರುವನು. ಅಪಾರಧನಸಂಪತ್ತನ್ನು ಸಂಗ್ರಹಿಸಿರುವನು. ಅಂತಹ ಅಜೇಯಸಾಮ್ರಾಟನು ಕೈಗೊಳ್ಳಬೇಕಾದ ಮಹಾಯಾಗವೇ ವಿಶ್ವಜಿತ್ ಮಹಾಯಾಗ, ಮೋಡವು ಕೆರೆ, ಕಾಲುವೆ, ಸಾಗರದಿಂದ ನೀರನ್ನು ಸಂಗ್ರಹಿಸಿ ಮಳೆಯ ರೂಪದಲ್ಲಿ ಮರಳಿ ಕೊಡುವಂತೆ (ಹಿಂದಿರುಗಿಸು) ಆ ಸಮ್ರಾಟನು ವಿಶ್ವಜಿತ್ ಮಖವನ್ನು ಕೈಕೊಂಡು ತನ್ನಲ್ಲಿರುವ ಧನಸಂಪತ್ತನ್ನು ದಾನರೂಪದಲ್ಲಿ ಧಾರೆಯೆರೆದನು. ಸಜ್ಜನರ ರೀತಿನೀತಿಯೇ ಹೀಗಿರುವುದಲ್ಲವೆ ? ಮೇಘವು ತನ್ನಲ್ಲಿ ಬಚ್ಚಿಡದೇ ಎಲ್ಲವನ್ನೂ ಸುರಿಸುವುದು ಅಂತೆಯೇ ವಿಶ್ವಜಿತನೂ. ವಿಶ್ವವನ್ನೇ ಗೆದ್ದವನು ತನ್ನ ಸರ್ವಸ್ವವನ್ನು ದಾನ ಮಾಡುವನು (ತ್ಯಾಗ) ಮಹಾತ್ಮರ ಲಕ್ಷಣವೇ ಹಾಗೆ. ಸಮಾಜದ ಹಿತಕ್ಕೆ, ಒಳಿತಿಗಾಗಿ ಸರ್ವಸ್ವವನ್ನು ದಾನರೂಪದಲ್ಲಿ ತ್ಯಾಗಮಾಡುವರು, ಧನ, ಕನಕ, ರತ್ನಾದಿ, ಅಷ್ಟೈಶ್ವರ್ಯ ಎಲ್ಲವನ್ನು ತ್ಯಾಗಶೀಲರು ದಾನಮಾಡುವರು, "ಕೆರೆಯ ನೀರನ್ನು ಕೆರೆಗೆ ಚೆಲ್ಲಿ" ಎಂಬ ಚೆನ್ನುಡಿಯಂತೆ, ಸಂಗ್ರಹಿಸುವುದು (ಸಂಗ್ರಹಪ್ರವೃತ್ತಿ) ಕೊಡುವುದಕ್ಕಾಗಿ ಹೊರತು ಕೂಡಿಹಾಕುವುದಕ್ಕಲ್ಲ. ಪಾತ್ರೆಯಲ್ಲಿ ತುಂಬಿಡುವುದು ವಿನಿಯೋಗಕ್ಕಾಗಿ, ಸತ್ಪಾತ್ರರಿಗೆ ಹಂಚುವುದಕ್ಕಾಗಿ.

ಆಙ್ ಉಪಸರ್ಗ । ಜಹ್ರೇ—ಜಹ್ರಾತೇ—ಜಹ್ರಿರೇ । ಇತ್ಯಾದಿ । ಹೃಞ್—ಹರಣೇ—ಲಿಟ್ । ಸರ್ವಸ್ವಂ ದಕ್ಷಿಣಾ ಯಸ್ಯ ಸಃ, ಸರ್ವಸ್ವದಕ್ಷಿಣಃ, ತಮ್ । ವಾರಿ ಮುಂಚಂತಿ ಇತಿ ವಾರಿಮುಚಃ, ತೇಷಾಮ್ ॥

ಸಃ = ಆ ರಘುರಾಜನು, ಸರ್ವದಕ್ಷಿಣಂ = ಎಲ್ಲವೂ ದಕ್ಷಿಣೆಯಾಗಿರುವ, ವಿಶ್ವಜಿತಂ = ವಿಶ್ವಜಿತ್ತೆಂಬ ಹೆಸರುಳ್ಳ, ಯಜ್ಞಂ = ಯಜ್ಞವನ್ನು, ಆಜಹ್ರೇ = ಮಾಡಿದನು, ಸತಾಂ = ಸಜ್ಜನರ, ವಾರಿಮುಚಾಂ ಇವ=ಮೇಘಗಳಂತೆ, ಆದಾನಂ=ಸಂಪಾದನೆಯು, ವಿಸರ್ಗಾಯ ಹಿ = ಸತ್ಪಾತ್ರದಲ್ಲಿ ವಿನಿಯೋಗಕ್ಕೋಸ್ಕರ, ವಿಶ್ವಜಿತ್ = ವಿಶ್ವಂ ಜಯತಿ ಇತಿ ವಿಶ್ವಜಿತ್.

**87. ಸತ್ರಾಂತೇ ಸಚಿವಸಖಃ ಪುರಸ್ಕ್ರಿಯಾಭಿಃ ।**
**ಗುರ್ವೀಭಿಃಶಮಿತಪರಾಜಯವ್ಯಲೀಕಾನ್ ॥**
**ಕಾಕುತ್ಸ್ಥಶ್ಚಿರವಿರಹೋತ್ಸುಕಾವರೋಧಾನ್ ।**
**ರಾಜನ್ಯಾನ್ ಸ್ವಪುರನಿವೃತ್ತಯೇಽನುಮೇನೇ ॥ ೮೭ ॥**

ಹನ್ನೆರಡು ದಿನಗಳ ತನಕ ನಡೆಯುವ ವಿಶ್ವಜಿತ್ ಯಾಗವನ್ನು ವಿಶ್ವವಿಜೇತನಾದ ಕೋಸಲೇಶ್ವರನು, ತನ್ನ ಸಚಿವರ ನೆರವಿನಿಂದ ಬಹಳ ವೈಭವದಿಂದ ನಡೆಸಿ ಕೃತಕೃತ್ಯನಾದನು. ತಾನು ಈ ಹಿಂದೆ ಗೆದ್ದಿದ್ದ ಸಹಸ್ರಾರು ಮಂದಿ ಕ್ಷತ್ರಿಯ ಅರಸರನ್ನು ಮಿತ್ರಭಾವದಿಂದ ಕಂಡು ನಾನಾತರದ ಉಡುಗೊರೆಗಳಿಂದ ಅವರ ಮನಸ್ಸನ್ನು ಒಲಿಸಿ, ತಣಿಸಿ, ಅವರ ಮನದ ಗಾಯವನ್ನು, ಸೋಲಿನ ಕಹಿಭಾವನೆಯನ್ನು (ಅಳಲನ್ನು) ಸ್ವಲ್ಪಮಟ್ಟಿಗೆ ಅಳಿಸಿದನು. ಅವನ ಸತ್ಕ್ರಿಯೆಗಳಿಂದ, ಉದಾತ್ತಗುಣಗಳನ್ನು ಕಂಡು ಅವರಲ್ಲೂ ಘನತರವಾದ ಪ್ರತಿಕ್ರಿಯೆಯುಂಟಾಯಿತು. ಆ ನರೇಂದ್ರರು ತಮಗೆ ಯುದ್ಧೋದ್ಯೋಗದಿಂದ ಮುಕ್ತಿದೊರಕಿ ತಾವು ಶೀಘ್ರದಲ್ಲೆ ತಮ್ಮ ಅಗಲುವಿಕೆಯಿಂದ ವಿರಹಪೀಡಿತರಾದ ತಮ್ಮ ಸತಿಯರನ್ನು ಒಂದುಗೂಡಲು ಕಾತುರರಾಗಿದ್ದರು, ಇದರಿಂದಲೂ ಅವರ ಸೋಲಿನ ಅಳಲು ತಾಳುವಂತಾಯಿತು. ಇದೆಲ್ಲವನ್ನೂ ಮೊದಲೇ ಮುಂದಾಗಿ ತಿಳಿದಿರುವ ಆ ಕಾಕುತ್ಸ್ಥನು ತಮ್ಮ ನಿಜಪುರಿಗೆ ಮರಳು ಅವರಿಗೆ ಒಪ್ಪಿಗೆಯಿತ್ತನು.

ಅನ್ವಯ :—ಕಾಕುತ್ಸ್ಥಃ ಸತ್ರಾಂತೇ ಸಚಿವಸಖಃ ಗುರ್ವೀಭಿಃ ಪುರಸ್ಕ್ರಿಯಾಭಿಃ ಶಮಿತಪರಾಜಯವ್ಯಲೀಕಾನ್ ಚಿರವಿರಹೋತ್ಸುಕಾವರೋಧಾನ್ ರಾಜನ್ಯಾನ್ ಸ್ವಪುರನಿವೃತ್ತಯೇ ಅನುಮೇನೇ ॥

ಸತ್ರಸ್ಯಅಂತಃ, ತಸ್ಮಿನ್ । ಸಚಿವಃ ಸಖಾಯಃ ಯಸ್ಯ ಸಃ, ಸಚಿವಸಖಃ । ಪರಾಜಯೇನ ವ್ಯಲೀಕಂ, ಶಮಿತಂಪರಾಜಯವ್ಯಲೀಕಂ ಯೇಷಾಂ ತೇ—ಶಮಿ—ಕಾಃ, ತಾನ್ । ಚಿರವಿರಹೇಣ ಉತ್ಸುಕಾಃ, ಚಿರವಿರಹೋತ್ಸುಕಾಃ ಅವರೋಧಾಃ ಯೇಷಾಂ ತೇ, ತಾನ್। ಸ್ವೇಷಾಂ ಪುರಾಣಿ, ಸ್ವಪುರಾಣಿ (ಪ್ರತಿ) ನಿವೃತ್ತಿಃ, ತಸ್ಮೈ। ಅನು—ಉಪಸರ್ಗ—ಮೇನೇ—ಮೇನಾತೇ—ಮೇನಿರೇ—ಇತ್ಯಾದಿ—ಮನ—ಜ್ಞಾನೇ—ಲಿಟ್ ॥

ಕಾಕುತ್ಸ್ಥಃ = ರಘುರಾಜನು, ಸತ್ರಾಂತೇ = ಯಾಗದ ಕೊನೆಯಲ್ಲಿ ಸಚಿವಸಖಃ = ಮಂತ್ರಿಗಳನ್ನು ಮಿತ್ರರನ್ನಾಗಿ ಮಾಡಿಕೊಂಡಿರುವ, ಗುರ್ವೀಭಿಃ = ಅಧಿಕವಾದ, ಪುರಸ್ಕ್ರಿಯಾಭಿಃ = ಪೂಜಾದಿಗಳಿಂದ, ಶಮಿತಪರಾಜಯವ್ಯಲೀಕಾನ್ = ಶಮಿತ ನಾಶವಾದ, ಪರಾಜಯ = ಸೋಲಿನಿಂದಾದ, ವ್ಯಲೀಕಾನ್ = ದುಃಖವುಳ್ಳ, ಚಿರವಿರಹೋತ್ಸುಕಾವರೋಧಾನ್ = ಬಹುಕಾಲದ ವಿರಹದಿಂದ ಉತ್ಕಂಠ ಹೊಂದಿದ (ಅಂತಃಪುರ ಸ್ತ್ರೀಯರುಳ್ಳ) ರಾಜನ್ಯಾನ್ = ಕ್ಷತ್ರಿಯರಾಜರನ್ನು, ಸ್ವಪುರನಿವೃತ್ತಯೇ = ತಮ್ಮ ಪಟ್ಟಣಕ್ಕೆ ವಾಪಸಾಗಲು, ಅನುಮೇನೇ = ಅನುಮತಿ ಕೊಡು.

**88. ತೇ ರೇಖಾಧ್ವಜಕುಲಿಶಾತಪತ್ರಚಿಹ್ನಂ ।**
**ಸಮ್ರಾಜಶ್ಚರಣಯುಗಂ ಪ್ರಸಾದಲಭ್ಯಮ್ ॥**
**ಪ್ರಸ್ಥಾನ ಪ್ರಣತಿಭಿರಂಗುಲೀಷು ಚಕ್ರುಃ ।**
**ಮೌಲಿಸ್ರಕ್ ಚ್ಯುತ ಮಕರಂದರೇಣುಗೌರಮ್ ॥ ೮೮ ॥**

ಆ ಸಮ್ರಾಟನ ಧ್ವಜ, ವಜ್ರ, ಬೆಳ್ಗೊಡೆಗಳೆಂಬ ಈ ಮೂರು ಗುರುತುಗಳನ್ನು (ಚಿಹ್ನೆ) ಪಡೆದಿರುವ ಪಾದದ್ವಯಗಳನ್ನು ನೃಪಸಂತರು ಮಹಾಪ್ರಸಾದವೆಂದು ತಮ್ಮ ರತ್ನಕಿರೀಟಗಳನ್ನು ಸ್ಪರ್ಶವಾಗುವಂತೆ ಮುಟ್ಟಿ ನಮಸ್ಕರಿಸಿದರು. ಚಕ್ರವರ್ತಿಯ ಪಾದಗಳಲ್ಲಿ

ರೇಖಾರೂಪದಲ್ಲಿ ಧ್ವಜ. ಕುಲಿಶ, ಛತ್ರ ಚಿಹ್ನೆಗಳಿರುವುದೆಂದು ಸಾಮುದ್ರಿಕಶಾಸ್ತ್ರದಲ್ಲಿ ಹೇಳಿದೆ. ಅಂತಹ ರೇಖಾಚಿಹ್ನೆಗಳಿಂದ ಕೂಡಿದ ಮನೋಹರವಾದ ಸುಂದರವಾದ ಪಾದಪದ್ಮಗಳನ್ನು ರಘುವು ಹೊಂದಿದ್ದನು. ಆ ಸಾಮಂತರಾಜರು ಭಕ್ತಿಪುರಸ್ಸರವಾದ ನಮನಗಳನ್ನು ಪಾದಮೂಲದಲ್ಲಿ ಸಲ್ಲಿಸುತ್ತಿದ್ದಾಗ ರಾಜನ ಕಾಲಬೆರಳುಗಳು ನವರತ್ನಗಳ ಮತ್ತು ಸುವರ್ಣದ ಕಾಂತಿಯಿಂದ ಪ್ರಕಾಶಮಾನವಾಗಿ ಬೆಳಗಿದುವು. ಆ ಮುಕುಟ ವರ್ಧನರು ಚಕ್ರವರ್ತಿಯ ಚರಣಯುಗಗಳಲ್ಲಿ ತಮ್ಮ ಕಿರೀಟಗಳನ್ನು ಚಾಚಿದಾಗ ಮುಡಿಯಿಂದ ಹಾಗೂ ಕಿರೀಟಗಳಿಂದ ಕೊರಳ ಹೂಮಾಲೆಗಳಿಂದ (ಸರಮಾಲೆಗಳಿಂದ) ಉದುರಿದ ಹೂಗಳ ಪರಾಗರೇಣು, ಹೂಗಳ ಮಧುಗಂಧ ಕಾಲ್ಬೆರಳುಗಳನ್ನು ಹೊಂಬಣ್ಣದಿಂದ ಕಂಗೊಳಿಸುವಂತೆ ಮಾಡಿದುವು. ಹೊಂಬಣ್ಣದಿಂದ ರಾರಾಜಿಸುವಂತೆ ಮಾಡಿದುವು.

ರೇಖಾ ಏವ ಧ್ವಜಾಃ, ಕುಲಿಶಾನಿ. ಆತಪತ್ರಾಣಿ ಚ। ರೇ—ಣಿ, ಚಿಹ್ನಾನಿ ಯಸ್ಯ ತತ್—ರೇಖಾ—ಚಿಹ್ನಮ್। ಚರಣಯೋಃ ಯುಗಮ್। ಪ್ರಸಾದೇನ ಲಭ್ಯಮ್। ಪ್ರಸ್ಥಾನೇ ಪ್ರಣತಯಃ, ತಾಭಿಃ। ಚಕಾರ—ಚಕ್ರತುಃ—ಚಕ್ರುಃ। ಚಕರ್ಥ—ಇತ್ಯಾದಿ। ಡುಕೃಞ್—ಕರಣೇ—ಲಿಟ್—ಪ್ರ.ಪು.ಬ.। ಮೌಲಿಷು ಸ್ರಜಃ। ಮೌಲಿಸ್ರಗ್ಭ್ಯಃ ಚ್ಯುತಾಃ। ಮೌಲಿ—ತಾಶ್ಚ ತೇ ಮಕರಂದಾಶ್ಚ। ಮೌ—ದಾನಾಂರೇಣವಃ ಮೌಲಿ—ರೇಣುಭಿಃ ಗೌರಮ್। ಮೌಲಿ—ಗೌರವತ್॥

ತೇ = ಆ ರಾಜರು, ರೇಖಾಧ್ವಜಕುಲಿಶಾತಪತ್ರಚಿಹ್ನಂ = ರೇಖಾರೂಪನಾದ ಧ್ವಜ, ಕುಲಿಶ, ಛತ್ರ, ಚಿಹ್ನೆಗಳುಳ್ಳ, ಪ್ರಸಾದಲಭ್ಯಂ = ಅನುಗ್ರಹದಿಂದ ಹೊಂದಲು ಯೋಗ್ಯವಾದ, ಸಮ್ರಾಜಃ = ಸಾರ್ವಭೌಮನಾದ ರಘುವಿನ, ಚರಣಯುಗಂ = ಎರಡು ಕಾಲುಗಳನ್ನು, ಪ್ರಸ್ಥಾನಪ್ರಣತಿಭಿಃ = ಪ್ರಯಾಣಸಮಯದಲ್ಲಿ ಮಾಡುವ ನಮಸ್ಕಾರಗಳಿಂದ, ಅಂಗುಲೀಷು=ಬೆರಳುಗಳಲ್ಲಿ, ಮೌಲಿಸ್ರಕ್‌ಚ್ಯುತ=ತಲೆಯ ಹೂಮಾಲೆಗಳಿಂದ ಬಿದ್ದಿರುವ, ಮಕರಂದರೇಣುಗೌರು = ಪುಷ್ಪರಸದ ಧೂಳಿಯಿಂದ ಹಳದಿಯನ್ನಾಗಿ, ಚಕ್ರುಃ = ಮಾಡಿದರು.

# ಪಂಚಮ ಸರ್ಗಃ
## ಐದನೇಯ ಸರ್ಗ

1. ತಮಧ್ವರೇ ವಿಶ್ವಜಿತಿ ಕ್ಷಿತೀಶಂ ।
ನಿಃಶೇಷವಿಶ್ರಾಣಿತಕೋಶಜಾತಮ್ ॥
ಉಪಾತ್ತ ವಿದ್ಯೋ ಗುರುದಕ್ಷಿಣಾರ್ಥೀ ।
ಕೌತ್ಸಃ ಪ್ರಪೇದೇ ವರತಂತುಶಿಷ್ಯಃ ॥ ೧ ॥

ಒಂದು ದಿನ ವರತಂತು ಮಹಾಮುನಿಯ ಶಿಷ್ಯನಾದ ಕೌತ್ಸನು ತನ್ನ ಗುರುವಿನಿಂದ ೧೪ ಮಹಾವಿದ್ಯೆಗಳನ್ನು ಕಲಿತು ಗುರುದಕ್ಷಿಣೆ ಕೊಡಲು ಹಣವನ್ನು ಯಾಚಿಸಲು (ಆರ್ಥಿಕ ಸಹಾಯ) ರಘುಸಮ್ರಾಟನ ಬಳಿಗೆ ಬಂದನು. ರಘುವು ವಿಶ್ವವಿಖ್ಯಾತವಾದ ಮಹಾಯಾಗವನ್ನು ಮಾಡಿ ದಕ್ಷಿಣೆಯಾಗಿ ತನ್ನ ಖಜಾನೆಯಲ್ಲಿದ್ದ ಎಲ್ಲಾ ಸಂಪತ್ತನ್ನು ದಾನಮಾಡಿ ಮಹಾದಾನಿಯೆಂಬ ಬಿರುದಿಗೆ ಅಕ್ಷರಶಃ ಪಾತ್ರನಾಗಿದ್ದನು. ಅವನು ರಿಕ್ತಹಸ್ತನಾಗಿದ್ದನು (ಕೈ ಖಾಲಿ), ಆ ಭೂಪತಿಯ ಬಳಿಗೆ ಗುರುದಕ್ಷಿಣಾರ್ಥವಾಗಿ ಹಣವನ್ನು ಯಾಚಿಸಲು ಗುರುಸಾರ್ವಭೌಮ, ವೇದವೇತ್ತ್ರವರ ತಂತುಮಹರ್ಷಿಗೆ ಕೊಡಲು ಮಹಾಮೌನಿ ಕೌತ್ಸನು ಬಂದಿದ್ದನು.

ಅನ್ವಯ :—ವಿಶ್ವಜಿತಿ ಅಧ್ವರೇ ನಿಃಶೇಷವಿಶ್ರಾಣಿತಂ ಕೋಶಜಾತಂ ತಂ ಕ್ಷಿತೀಶಂ ಉಪಾತ್ತವಿದ್ಯಃ ಗುರುದಕ್ಷಿಣಾರ್ಥೀವರತಂತು ಶಿಷ್ಯಃ ಕೌತ್ಸಃ ಪ್ರಪೇದೇ ॥

ಕ್ಷಿತೇಃ ಈಶಃ । ತಮ್ ॥ ಕೋಶನಾಂ ಜಾತಂ । ನಿಃಶೇಷಿತಂ ವಿಶ್ರಾಣಿತಂ । ನಿಃಶೇಷ ವಿಶ್ರಾಣಿತಂ ಕೋಶಜಾತಂ ಯೇನ ಸಃ । ತಮ್ ॥ ಉಪಾತ್ತಾಃ ವಿದ್ಯಾಃ ಯೇನ ಸಃ ಉಪಾತ್ತವಿದ್ಯಃ ॥ ಗುರೋಃ ದಕ್ಷಿಣಾ । ಗುರುದಕ್ಷಿಣಾಯಾಃ ಅರ್ಥೀ । ವರತಂತೋಃ ಶಿಷ್ಯಃ ॥ ಪ್ರ—ಉಪಸರ್ಗ । ಪೇದೇ—ಪೇದಾತೇ—ಪೇದಿರೇ । ಪೇದಿಷೇ—ಪೇದಾಥೇ—ಪೇದಿಧ್ವೇ । ಪೇದೇ—ಪೇದಿವಹೇ—ಪೇದಿಮಹೇ । ಪದ—ಗತೌ—ಲಿಟ್ ॥ ಪ್ರ.ಪು.ಏ.॥

ವಿಶ್ವಜಿತಿ = ವಿಶ್ವಜಿತ್ ಎಂಬ ಹೆಸರುಳ್ಳ, ಅಧ್ವರೇ = ಯಜ್ಞದಲ್ಲಿ, ನಿಃಶೇಷ = ಸಂಪೂರ್ಣವಾಗಿ, ವಿಶ್ರಾಣಿತ = ದಾನಮಾಡಲ್ಪಟ್ಟ, ಕೋಶಜಾತಂ = ಧನರಾಶಿಯ ಸಮೂಹವುಳ್ಳ, ತಂ ಕ್ಷಿತೀಶಂ = ಆ ರಘುರಾಜನನ್ನು, ಸಮುಪಾತ್ತವಿದ್ಯಃ = ಹೊಂದಿದ ಸಕಲ ವಿದ್ಯೆಗಳುಳ್ಳ, ವರತಂತುಶಿಷ್ಯಃ = ವರತಂತು ಋಷಿಯ ಶಿಷ್ಯನಾದ, ಕೌತ್ಸ= ಕೌತ್ಸನೆಂಬ ಋಷಿಶ್ರೇಷ್ಠನು, ಗುರುದಕ್ಷಿಣಾರ್ಥೀ=ಗುರುದಕ್ಷಿಣೆಗಾಗಿ, ಪ್ರಪೇದೇ=ಹೊಂದಿದನು.

2. ಸ ಮೃಣ್ಮಯೇ ವೀತಹಿರಣ್ಮಯತ್ವಾ ।
ತ್ಪಾತ್ರೇ ನಿಧಾಯಾರ್ಘ್ಯಮನರ್ಘಶೀಲಃ ॥
ಶ್ರುತಪ್ರಕಾಶಂ ಯಶಸಾ ಪ್ರಕಾಶಃ ।
ಪ್ರತ್ಯುಜ್ಜಗಾಮಾತಿಥಿಮಾತಿಥೇಯಃ ॥ ೨ ॥

ವರತಂತು ಋಷಿಗಳಿಗೆ ಗುರುದಕ್ಷಿಣೆಯನ್ನು ಸಲ್ಲಿಸಲು ಬೇಕಾದ ದ್ರವ್ಯರಾಶಿಯನ್ನು ಯಾಚಿಸಲು ಕೌತ್ಸಮುನಿಯು ಕಾಕುತ್ಸ್ಥನಲ್ಲಿಗೆ ಬಂದನು. ಅನರ್ಘಶೀಲನಾದ ತನ್ನ ಸದ್ಗುಣಗಳಿಂದಲೇ ವಿರಾಜಿಸುವ, ಕೀರ್ತಿಶಾಲಿಯಾದ, ಅತಿಥಿಗಳನ್ನು ಸದಾ ಆದರಿಸುವ, ಗುಣಶೇಖರ ಆತಿಥೇಯನಾದ ರಘುವು ಕೌತ್ಸನನ್ನು ಅರ್ಘ್ಯಪಾದ್ಯಾದಿಗಳಿಂದ ಸತ್ಕರಿಸಲು ಮಣ್ಣಿನ ಪೂಜಾಪಾತ್ರೆಗಳಿಂದ ಸನ್ನಿಹಿತನಾಗಿ ಇದಿರ್ಗೊಳ್ಳಲು ಬಂದನು. ಚಿನ್ನದ ಕಲಶದಲ್ಲಿ ಅರ್ಘ್ಯಪಾದ್ಯಾದಿಗಳನ್ನು ನೀಡಬೇಕಾದವನು ಸರ್ವಸ್ವವನ್ನು ದಾನಮಾಡಿ ಮಣ್ಣಿನ ಪಾತ್ರೆಗಳನ್ನು ಮಾತ್ರ ಹೊಂದಿದ್ದನು, ಮಣ್ಣಿನ ಪಾತ್ರೆಗಳಲ್ಲಿ ಪೂಜಾಸಾಮಗ್ರಿಗಳನ್ನು ಇಟ್ಟುಕೊಂಡು, ವೇದವಿದ್ಯೆಯಿಂದ ಪ್ರಕಾಶಿಸುವ, ಸ್ನಾತಕನಾಗಿ ತನ್ನ ಬಳಿಗೆ ಬಂದಿರುವ ಅತಿಥಿಯಾದ ಕೌತ್ಸನನ್ನು ಆ ಕೋಸಲೇಂದ್ರನು ಇದಿರ್ಗೊಂಡನು.

ಅನ್ವಯ :—ಅನರ್ಘಶೀಲಃ ಸ ವೀತಹಿರಣ್ಮಯತ್ವಾತ್ ಮೃಣ್ಮಯೇ ಪಾತ್ರೇ ಅರ್ಘ್ಯಂ ನಿಧಾಯ ಆತಿಥೇಯಃ ಯಶಸಾ ಪ್ರಕಾಶಃ ಶ್ರುತಪ್ರಕಾಶಮ್ ಅತಿಥಿಂ ಪ್ರತ್ಯುಜ್ಜಗಾಮ ॥

ಮೃದಃ ವಿಕಾರಃ—ಮೃಣ್ಮಯಮ್ ವಿಕಾರಾರ್ಥದಲ್ಲಿ ಮಯಟ್ ಪ್ರತ್ಯಯ । ದಾಂಡಿನಾಯನ ಸೂತ್ರದಿಂದ ಹಿರಣ್ಮಯ ಶಬ್ದವೂ ನಿಪಾತಿತವಾಗಿದೆ. ವೀತಂ ಹಿರಣ್ಮಯಂ —ಯಸ್ಮಾತ್—ವೀತಹಿರಣ್ಮಯಃ । ವೀತಹಿರಣ್ಮಯಸ್ಯ ಭಾವಃ—ವೀತಹಿರಣ್ಮಯತ್ವಂ —ತಸ್ಮಾತ್ । ಅರ್ಘಾರ್ಥವಿಂದು ಅರ್ಘ್ಯಂ ॥ ಅನರ್ಘ್ಯಃ ಶೀಲಃ ಯಸ್ಯ ಸಃ । ಶ್ರುತೇನ ಪ್ರಕಾಶಃ, ತಮ್ । ಅಥಿತಿಷು ಸಾಧುಃ—ಆತಿಥೇಯಃ । ಪ್ರತಿ + ಉತ್—ಉಪಸರ್ಗಗಳು ಜಗಾಮ—ಜಗ್ಮತುಃ—ಜಗ್ಮುಃ। ಜಗಮಿಥ, ಜಗಂಥ—ಜಗ್ಮಥುಃ—ಜಗ್ಮ । ಜಗಾಮ, ಜಗಮ—ಜಗ್ಮಿವ—ಜಗ್ಮಿಮ । ಗಮ್ಲೃ ಗತೌ—ಲಿಟ್—ಪ್ರ.ಪು.ಏ. ॥

ಅನರ್ಘಶೀಲಃ = ಪೂಜಿತವಾದ (ಅಸಾಧಾರಣ ಸ್ವಭಾವದ) ಯಶಸಾ = ಕೀರ್ತಿಯಿಂದ, ಪ್ರಕಾಶಃ = ಶೋಭಿಸುವ, ಅತಿಥೇಯಃ = ಅತಿಥಿಗಳನ್ನು ಸತ್ಕರಿಸುವ ಸ್ವಭಾವವಿರುವ, ಸಃ = ಆ ರಘುಶ್ರೇಷ್ಠನು, ವೀತಹಿರಣ್ಮಯತ್ವಾತ್ = ಚಿನ್ನದ ಪಾತ್ರೆ ಇಲ್ಲದೆಯಿರುವುದರಿಂದ, ಮೃಣ್ಮಯೇ = ಮಣ್ಣಿನ ಪಾತ್ರೆಯಲ್ಲಿ, ಅರ್ಘ್ಯ = ಪೂಜಾಪದಾರ್ಥಗಳನ್ನು, ವಿಧಾಯ = ಇಟ್ಟುಕೊಂಡು, ಶ್ರುತಪ್ರಕಾಶಂ = ಶಾಸ್ತ್ರಗಳಿಂದ ಪ್ರಕಾಶಿಸುವ, ಅತಿಥಿಂ = ಅತಿಥಿಯಾಗಿ ಬಂದಿರುವ, ಪ್ರತ್ಯುಜ್ಜಗಾಮ = ಎದುರ್ಗೊಂಡನು.

**3. ತಮರ್ಚಯಿತ್ವಾ ವಿಧಿವದ್ವಿಧಿಜ್ಞಃ ।**
**ತಪೋಧನಂ ಮಾನಧನಾಗ್ರಯಾಯೀ ॥**
**ವಿಶಾಂಪತಿರ್ವಿಷ್ಟರಭಾಜಮಾರಾತ್ ।**
**ಕೃತಾಂಜಲಿಃ ಕೃತ್ಯವಿದಿತ್ಯುವಾಚ ॥ ೩ ॥**

ವೇದಾದಿ ಸಕಲಶಾಸ್ತ್ರಗಳನ್ನು ಅರಿತವನು ಮಾನಧನಸಂಪನ್ನನಾದ ಆ ಮಾನವಾಗ್ರಣಿಯು (ಅಗ್ರೇಸರ) (ಮನುಜೇಶ್ವರ) ಕೌತ್ಸಮುನಿವರನನ್ನು ಉಚಿತಾಸನದಲ್ಲಿ ಬಳಿಯಲ್ಲಿ ಕುಳ್ಳಿರಿಸಿ ಆ ಬಳಿಕ ಅಂಜಲಿಬದ್ಧನಾಗಿ ನಿಂತುಕೊಂಡನು. ಆ ರಘುವರನು ಕಾರ್ಯಾಕಾರ್ಯವನ್ನು ತಿಳಿದವನು ಆ ತಪೋಧನನನ್ನು, ಅಪಯಶಸ್ಸಿಗೆ ಭಯಪಡುವ ಆ ಮಾನಧನನು ವಿಧ್ಯುಕ್ತ ರೀತಿಯಿಂದ ಪೂಜಿಸಿ ಸತ್ಕರಿಸಿದನು. ತದನಂತರ ಕೈಮುಗಿದು

ತಾನು ಮಾಡಬೇಕಾದ ಕೆಲಸವೇನೆಂದು ನಿರ್ಣಯಿಸಿ ಹೇಳುವಂತೆ ಆ ಶಾಸ್ತ್ರಜ್ಞನನ್ನು ಕೇಳಿದನು.

ಅನ್ವಯ :—ವಿಧಿಜ್ಞಃ ಮಾನಧನಾಗ್ರಯಾಯಿಣಾ ಕೃತ್ಯವಿದ್ ವಿಶಾಂಪತಿಃ ವಿಷ್ಟರ ಭಾಜಂ ತಂ ತಪೋಧನಮ್ ವಿಧಿವತ್ ಅರ್ಚಯಿತ್ವಾ ಆರಾತ್‌ಕೃತಾಂಜಲಿಃ ಇತಿ ಉವಾಚ ॥

ವಿಧಿಂ ಅನತಿಕ್ರಮ್ಯ—ವಿಧಿವತ್ ॥ ವಿಧಿಂ ಜಾನಾತಿ ಇತಿ ವಿಧಿಜ್ಞಃ ॥ ತಪಃ ಏವ ಧನಂ ಯಸ್ಯ ಸಃ, ತಪೋಧನಃ, ತಂ ॥ ಮಾನಃ ಏವ ಧನಂ ಯೇಷಾಂ, ತೇ—ಮಾನಧನಾಃ। ಮಾನಧನಾನಾಂ ಅಗ್ರಯಾಯಿಣ (ಅಗ್ರೇ ಯಾತುಂ ಶೀಲಂ, ಯಸ್ಯ) ಮಾನಧನಾ ಗ್ರಯಾ ಯಿಣಾ ॥ ವಿಷ್ಟರಂ ಭಜತಿ ಇತಿ ವಿಷ್ಟರಭಾಕ್ ತಮ್ ॥ ಕೃತಾ ಅಂಜಲಿಃ ಯೇನಸಃ ಕೃತಾಂಜಲಿಃ। ಕೃತ್ಯಂವೇತ್ತಿ ಇತಿ ಕೃತ್ಯವಿತ್ ಉವಾಚ—ಊಚತುಃ—ಊಚುಃ। ಉವಚಿಥ, ಉವಕ್ಥ—ಊಚಥುಃ—ಊಚ। ಉವಾಚ, ಉವಚ—ಊಚಿವ—ಊಚಿಮ ॥ ಬ್ರೂಞ್—ವ್ಯಕ್ತಾಯಾಂ ವಾಚಿ—ಲಿಟ್। ಪ್ರ.ಪು. ಏ. ॥

ವಿಧಿಜ್ಞಃ = ಶಾಸ್ತ್ರವನ್ನು ತಿಳಿದಿರುವ, ಮಾನಧನಾಗ್ರಯಾಯಿಣಾ = ಮರ್ಯಾದಾ ಪುರುಷೋತ್ತಮ, ಕೃತ್ಯವಿತ್ = ಕಾರ್ಯವನ್ನು ತಿಳಿದಿರುವ, ವಿಶಾಂಪತಿಃ = ನರೇಶ್ವರ, ಮನುಜೇಶ್ವರ, ವಿಷ್ಟರಭಾಜಂ = ಆಸನದಲ್ಲಿ ಕುಳಿತಿರುವ, ತಂ = ಆ, ತಪೋಧನಂ = ತಪಸ್ವಿಯಾದ ಕೌತ್ಸಮುನಿಯನ್ನು, ವಿಧಿವತ್ = ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ, ಅರ್ಚಯಿತ್ವಾ= ಪೂಜಿಸಿ. ಆರಾತ್ = ಸಮೀಪದಲ್ಲಿ, ಕೃತಾಂಜಲಿ = ಅಂಜಲಿಬದ್ಧನಾಗಿ (ಕೈಮುಗಿಯುತ್ತಾ), ಇತಿ = ಈ ತೆರನಾಗಿ, ಉವಾಚ = ಹೇಳಿದನು.

**4. ಅಪ್ಯಗ್ರಣೀರ್ಮಂತ್ರಕೃತಾಮೃಷೀಣಾಂ।**
**ಕುಶಾಗ್ರಬುದ್ಧೇ! ಕುಶಲೀ ಗುರುಸ್ತೇ॥**
**ಯತಸ್ತ್ವಯಾ ಜ್ಞಾನಮಶೇಷಮಾಪ್ತಂ।**
**ಲೋಕೇನ ಚೈತನ್ಯಮಿವೋಷ್ಣರಶ್ಮೇಃ** ॥ ೪ ॥

ಆ ವಸುಂಧರಾಧೀಶನು ಹೇ ಕುಶಾಗ್ರಬುದ್ಧಿಯ ಮುನಿಕುಲಾಗ್ರಣಿಯೇ, ನಿನ್ನ ಗುರು ವಾದ ವಿದ್ಯಾಪರಿಪೂರ್ಣರಾದ ಆಚಾರ್ಯ ವರತಂತು ಮಹಾಮುನಿಗಳು ಕುಶಲಿಗರೇ? ಅವರು ಸವಿತೃವಾದ ಸೂರ್ಯದೇವನಂತೆ ಸರ್ವಲೋಕವಂದಿತರು. ಆ ಸೂರ್ಯ ದೇವನೊಬ್ಬನಿಂದಲೇ ಈ ಬ್ರಹ್ಮಾಂಡವು ಚೇತನವನ್ನು, ಬೆಳಕನ್ನು ಪಡೆಯುತ್ತಿದೆ. ಆ ಸೂರ್ಯನ ಕಿರಣಗಳಿಂದ ಈ ವಸುಂಧರೆಯು ಬೇಕಾದ ಉಷ್ಣಾಂಶವನ್ನು ಪಡೆದು ಬೆಳಗುತ್ತಿದೆ, ಪ್ರಕಾಶಮಾನವಾಗಿ ರಾರಾಜಿಸುತ್ತಿದೆ. ಅದೇ ರೀತಿಯಲ್ಲಿ ನಿನ್ನ ಗುರು ಶ್ರೇಷ್ಠರಾದ ವರತಂತು ಮುನಿಗಳು ಮಂತ್ರದ್ರಷ್ಟಾರರು, ಮಂತ್ರಕರ್ತೃಗಳು, ಸಕಲ ವಿದ್ಯೆಗಳ ಪ್ರಭೆಗಳಿಂದ ಬೆಳಗುತ್ತಿರುವ ಜ್ಞಾನಸೂರ್ಯರು. ಅಂತಹ ಮಹಾತ್ಮರಿಂದ ನೀನು ಸಕಲಶಾಸ್ತ್ರಗಳನ್ನು, ಸಂಪೂರ್ಣಜ್ಞಾನವನ್ನು ಹೊಂದಿರುವಿಯಲ್ಲವೆ? ಹೇ ಕುಶಾಗ್ರಮತಿಯೆ, ಲೋಕದ ಸಮಸ್ತ ಪ್ರಾಣಿಗಳೂ, ಜನರೂ ಸೂರ್ಯನಿಂದ ಜಾಗೃದ ವಸ್ಥೆಯನ್ನು ಪಡೆದಂತೆ ನೀನು ಆ ಮಂತ್ರದ್ರಷ್ಟಾರನಿಂದ ಸಕಲಶಾಸ್ತ್ರಗಳನ್ನು ತಿಳಿದು

ಪೂರ್ಣಪ್ರಜ್ಞ(ಪೂರ್ಣಜ್ಞಾನಿ)ನೆನಿಸಿದೆಯಲ್ಲವೆ ? ಅಂತಹ ಮಹಿಮಾನ್ವಿತರಾದ ಆ ನಿನ್ನ ಗುರುಶ್ರೇಷ್ಠರು ಕ್ಷೇಮದಿಂದ ಇರುವರಷ್ಟೆ?

ಮಂತ್ರಂ ಕುರ್ವಂತಿ ಇತಿ ಮಂತ್ರಕೃತಃ. ತೇಷಾಮ್ । ಕುಶಾಗ್ರಮ್ ಬುದ್ಧಿಃ ಯಸ್ಯ ಸಃ—ಕುಶಾಗ್ರಬುದ್ಧಿಃ—ಅದರ ಸಂಬೋಧನೆ ॥ ಕುಶಲಮಸ್ಯಾಸ್ತೀತಿ ಕುಶಲೀ ॥ ಉಷ್ಣಾಃ ರಶ್ಮಯಃ ಯಸ್ಯ ಸಃ । ತಸ್ಮಾತ್ ॥

ಹೇ ಕುಶಾಗ್ರಬುದ್ಧೇ = ಎಲೈ ಸೂಕ್ಷ್ಮಬುದ್ಧಿಯುಳ್ಳವನೇ, ಮಂತ್ರಕೃತಾ = ಮಂತ್ರಗಳನ್ನು ಕಂಡುಹಿಡಿದ, ಋಷೀಣಾಂ = ಋಷಿಗಳ ಮಧ್ಯದಲ್ಲಿ, ಅಗ್ರಣೀಃ = ಶ್ರೇಷ್ಠನಾದ, ತೇ = ನಿನ್ನ, ಗುರುಃ = ಗುರುಗಳು, ಕುಶಲೀ ಅಪಿ = ಕ್ಷೇಮದಿಂದ ಇರುವರಷ್ಟೆ, ಯತಃ = ಯಾವ ಗುರುಗಳ ಮೂಲಕ, ತ್ವಯಾ = ನಿನ್ನಿಂದ, ಅಶೇಷಂ = ಪರಿಪೂರ್ಣವಾದ, ಜ್ಞಾನಂ = ಜ್ಞಾನವು, ಲೋಕೇನ = ಜನರಿಂದ, ಉಷ್ಣರಶ್ಮೇಃ = ಸೂರ್ಯನಿಂದ, ಚೈತನ್ಯಂ ಇವ = ಪ್ರಬೋಧವನ್ನೆಂಬಂತೆ (ಎಚ್ಚರಿಕೆ), ಆಪ್ತಂ = ಹೊಂದಲ್ಪಟ್ಟಿದೆಯೋ.

**5. ಕಾಯೇನ ವಾಚಾ ಮನಸಾಽಪಿ ಶಶ್ವತ್ ।**
**ಯತ್ಸಂಭೃತಂ ವಾಸವಧೈರ್ಯಲೋಪಿ ॥**
**ಆಪಾದ್ಯತೇ ನ ವ್ಯಯಮಂತರಾಯೈಃ ।**
**ಕಚ್ಚಿನ್ಮಹರ್ಷೇಸ್ತ್ರಿವಿಧಂ ತಪಸ್ತತ್ ॥ ೫ ॥**

"ಎಲೈ ತಪೋಧನನೇ, ನಿನ್ನ ಗುರುಗಳಾದ ವರತಂತುಋಷಿಗಳು ಮಹಾತಪೋಧನರು. ಅವರು ಕೃಚ್ಛ್ರ, ಚಾಂದ್ರಾಯಣಾದಿ ವ್ರತಾನುಷ್ಠಾನಗಳಿಂದ ಶಾರೀರಿಕ (ದೈಹಿಕ) ತಪಸ್ಸನ್ನು ಆಚರಿಸಿರುವರು. ವೇದಮಂತ್ರಪಾಠಾದಿಗಳಿಂದ ವಾಕ್. ತಪಸ್ಸು, ಜಪ, ಧ್ಯಾನ, ಯೋಗಗಳಿಂದ ಮಾನಸಿಕ ತಪಸನ್ನು ಆಚರಿಸಿ ಮಹಾ ತಪೋಧನರೆನಿಸಿ ಪ್ರಖ್ಯಾತರಾಗಿರುವರು. ಅವರ ತಪದ ಮಹಿಮೆಯಿಂದ ಇಂದ್ರನ ಗದ್ದುಗೆಯೂ ಅಲ್ಲಾಡಬಲ್ಲದು. ಧೈರ್ಯಮೇರುವಾದ ಇಂದ್ರನು ತನ್ನ ತ್ರಿಲೋಕಪದವಿಯು ಲೋಪವಾಗಬಹುದೆಂದು ತಲ್ಲಣಗೊಳ್ಳುವನು. ಆಗ ಅದನ್ನು ಶಂಕಿಸಿ ತಪಸ್ಸನ್ನು ಕೆಡಿಸಲು ಮೋಹದ ಬಲೆಯನ್ನು (ಪ್ರೇಮದ, ಕಾಮದ) ಒಡ್ಡುವನು. ಶಾರೀರಿಕ, ವಾಚಕ, ಮಾನಸಿಕ ತಪಸ್ಸುಗಳಿಂದ ದೇಹ, ಮಾತು, ಮನಸ್ಸು ಈ ಮೂರನ್ನೂ ಗೆದ್ದಿರುವ ವಿಶ್ವಮಾನವರಾದ, ಲೋಕಾತೀತರಾದ, ಬ್ರಹ್ಮಚೈತನ್ಯರಾದ (ಪರಬ್ರಹ್ಮಸ್ವರೂಪರಾದ) ವರತಂತು ಮಹಾಮುನಿಗಳು ಕುಶಲಿಗರಷ್ಟೆ? ಇಂದ್ರನ ಶಾಂತಿಯನ್ನೂ ಕೆಡಿಸಬಲ್ಲ ಆ ಮುನಿಪುಂಗವರು ಉಗ್ರತಪಸ್ವಿನಿಂದ ವಿರಾಜಿಸುತ್ತಿರುವರೇ ? ಅವರ ತಪೋಬಲದ ಮಹಿಮೆಯಿಂದ ವಿಶ್ವಶಾಂತಿಯು ನೆಲಸಿದೆಯಷ್ಟೆ?"

ಅನ್ವಯ :—ಕಾಯೇನ ವಾಚಾ ಮನಸಾಽಪಿ ವಾಸವ ಧೈರ್ಯಲೋಪಿ ಯತ್ ತಪಃ ಶಶ್ವತ್ ಸಂಭೃತಮಹರ್ಷೇಃ ತ್ರಿವಿಧಂ ತತ್ (ತಪಃ) ಅಂತರಾಯೈಃ ವ್ಯಯಮ್ ನ ಆಪದ್ಯತೇ ಕಚ್ಚಿತ್ ॥

ವಾಸವಸ್ಯ ಧೈರ್ಯಂ । ವಾಸವಧೈರ್ಯಂ ಲೋಪಯತಿ ಇತಿ ವಾಸವಧೈರ್ಯ

ತಾನು ಮಾಡಬೇಕಾದ ಕೆಲಸವೇನೆಂದು ನಿರ್ಣಯಿಸಿ ಹೇಳುವಂತೆ ಆ ಶಾಸ್ತ್ರಜ್ಞನನ್ನು ಕೇಳಿದನು.

ಅನ್ವಯ :—ವಿಧಿಜ್ಞಃ ಮಾನಧನಾಗ್ರಯಾಯಿಾ ಕೃತ್ಯವಿದ್ ವಿಶಾಂಪತಿಃ ವಿಷ್ಟರ ಭಾಜಂ ತಂ ತಪೋಧನಮ್ ವಿಧಿವತ್ ಅರ್ಚಯಿತ್ವಾ ಆರಾತ್‌ಕೃತಾಂಜಲಿಃ ಇತಿ ಉವಾಚ ॥

ವಿಧಿಂ ಅನತಿಕ್ರಮ್ಯ—ವಿಧಿವತ್ ॥ ವಿಧಿಂ ಜಾನಾತಿ ಇತಿ ವಿಧಿಜ್ಞಃ ॥ ತಪಃ ಏವ ಧನಂ ಯಸ್ಯ ಸಃ, ತಪೋಧನಃ, ತಂ ॥ ಮಾನಃ ಏವ ಧನಂ ಯೇಷಾಂ, ತೇ—ಮಾನಧನಾಃ । ಮಾನಧನಾನಾಂ ಅಗ್ರಯಾಯೀ (ಅಗ್ರೇ ಯಾತುಂ ಶೀಲಂ, ಯಸ್ಯ) ಮಾನಧನಾ ಗ್ರಯಾ ಯಿಾ ॥ ವಿಷ್ಟರಂ ಭಜತಿ ಇತಿ ವಿಷ್ಟರಭಾಕ್ ತಮ್ ॥ ಕೃತಾ ಅಂಜಲಿಃ ಯೇನಸಃ ಕೃತಾಂಜಲಿಃ । ಕೃತ್ಯಂವೇತ್ತಿ ಇತಿ ಕೃತ್ಯವಿತ್ ಉವಾಚ—ಊಚತುಃ—ಊಚುಃ । ಉವಕ್ಥ, ಉವಕ್ಥ—ಊಚಥುಃ—ಊಚ । ಉವಾಚ, ಉವಚ—ಊಚಿವ—ಊಚಿಮ ॥ ಬ್ರೂಞ್—ವ್ಯಕ್ತಾಯಾಂ ವಾಚಿ—ಲಿಟ್ । ಪ್ರ.ಪು. ಏ. ॥

ವಿಧಿಜ್ಞಃ = ಶಾಸ್ತ್ರವನ್ನು ತಿಳಿದಿರುವ, ಮಾನಧನಾಗ್ರಯಾಯಿಾ = ಮರ್ಯಾದಾ ಪುರುಷೋತ್ತಮ, ಕೃತ್ಯವಿತ್ = ಕಾರ್ಯವನ್ನು ತಿಳಿದಿರುವ, ವಿಶಾಂಪತಿಃ = ನರೇಶ್ವರ, ಮನುಜೇಶ್ವರ, ವಿಷ್ಟರಭಾಜಂ = ಆಸನವಲ್ಲಿ ಕುಳಿತಿರುವ, ತಂ = ಆ, ತಪೋಧನಂ = ತಪಸ್ವಿಯಾದ ಕೌತ್ಸಮುನಿಯನ್ನು, ವಿಧಿವತ್ = ಶಾಸ್ತ್ರದಲ್ಲಿ ಹೇಳಿದ ರೀತಿಯಲ್ಲಿ, ಅರ್ಚಯಿತ್ವಾ = ಪೂಜಿಸಿ. ಆರಾತ್ = ಸಮಿಾಪದಲ್ಲಿ, ಕೃತಾಂಜಲಿ = ಅಂಜಲಿಬದ್ಧನಾಗಿ (ಕೈಮುಗಿಯುತ್ತಾ), ಇತಿ = ಈ ತೆರನಾಗಿ, ಉವಾಚ = ಹೇಳಿದನು.

4. **ಅಪ್ಯಗ್ರಣೀರ್ಮಂತ್ರಕೃತಾಮೃಷೀಣಾಂ ।**
**ಕುಶಾಗ್ರಬುದ್ಧೇ ! ಕುಶಲೀ ಗುರುಸ್ತೇ ॥**
**ಯತಸ್ತ್ವಯಾ ಜ್ಞಾನಮಶೇಷಮಾಪ್ತಂ ।**
**ಲೋಕೇನ ಚೈತನ್ಯಮಿವೋಷ್ಣರಶ್ಮೇಃ** ॥ ೪ ॥

ಆ ವಸುಂಧರಾಧೀಶನು ಹೇ ಕುಶಾಗ್ರಬುದ್ಧಿಯ ಮುನಿಕುಲಾಗ್ರಣಿಯೇ, ನಿನ್ನ ಗುರುವಾದ ವಿದ್ಯಾಪರಿಪೂರ್ಣರಾದ ಆಚಾರ್ಯ ವರತಂತು ಮಹಾಮುನಿಗಳು ಕುಶಲಿಗಳೇ ? ಅವರು ಪವಿತ್ರವಾದ ಸೂರ್ಯದೇವನಂತೆ ಸರ್ವಲೋಕವಂದಿತರು. ಆ ಸೂರ್ಯ ದೇವನೊಬ್ಬನಿಂದಲೇ ಈ ಬ್ರಹ್ಮಾಂಡವು ಚೇತನವನ್ನು, ಬೆಳಕನ್ನು ಪಡೆಯುತ್ತಿದೆ, ಆ ಸೂರ್ಯನ ಕಿರಣಗಳಿಂದ ಈ ವಸುಂಧರೆಯು ಬೇಕಾದ ಉಷ್ಣಾಂಶವನ್ನು ಪಡೆದು ಬೆಳಗುತ್ತಿದೆ, ಪ್ರಕಾಶಮಾನವಾಗಿ ರಾರಾಜಿಸುತ್ತಿದೆ. ಅದೇ ರೀತಿಯಲ್ಲಿ ನಿನ್ನ ಗುರು ಶ್ರೇಷ್ಠರಾದ ವರತಂತು ಮುನಿಗಳು ಮಂತ್ರದ್ರಷ್ಟಾರರು, ಮಂತ್ರಕರ್ತೃಗಳು, ಸಕಲ ವಿದ್ಯೆಗಳ ಪ್ರಭೆಗಳಿಂದ ಬೆಳಗುತ್ತಿರುವ ಜ್ಞಾನಸೂರ್ಯರು. ಅಂತಹ ಮಹಾತ್ಮರಿಂದ ನೀನು ಸಕಲಶಾಸ್ತ್ರಗಳನ್ನು, ಸಂಪೂರ್ಣಜ್ಞಾನವನ್ನು ಹೊಂದಿರುವೆಯಲ್ಲವೆ ? ಹೇ ಕುಶಾಗ್ರಮತಿಯೇ, ಲೋಕದ ಸಮಸ್ತ ಪ್ರಾಣಿಗಳೂ, ಜನರೂ ಸೂರ್ಯನಿಂದ ಜಾಗೃದ ವಸ್ಥೆಯನ್ನು ಪಡೆದಂತೆ ನೀನು ಆ ಮಂತ್ರದ್ರಷ್ಟಾರನಿಂದ ಸಕಲಶಾಸ್ತ್ರಗಳನ್ನು ತಿಳಿದು

ಪೂರ್ಣಪ್ರಜ್ಞ(ಪೂರ್ಣಜ್ಞಾನಿ)ನೆನಿಸಿದೆಯಲ್ಲವೆ ? ಅಂತಹ ಮಹಿಮಾನ್ವಿತರಾದ ಆ ನಿನ್ನ ಗುರುಶ್ರೇಷ್ಠರು ಕ್ಷೇಮದಿಂದ ಇರುವರಷ್ಟೆ?

ಮಂತ್ರಂ ಕುರ್ವಂತಿ ಇತಿ ಮಂತ್ರಕೃತಃ. ತೇಷಾಮ್ । ಕುಶಾಗ್ರಮ್ ಬುದ್ಧಿಃ ಯಸ್ಯ ಸಃ—ಕುಶಾಗ್ರಬುದ್ಧಿಃ—ಅದರ ಸಂಬೋಧನೆ ॥ ಕುಶಲಮಸ್ಯಾಸ್ತೀತಿ ಕುಶಲೀ ॥ ಉಷ್ಣಾಃ ರಶ್ಮಯಃ ಯಸ್ಯ ಸಃ । ತಸ್ಮಾತ್ ॥

ಹೇ ಕುಶಾಗ್ರಬುದ್ಧೇ = ಎಲೈ ಸೂಕ್ಷ್ಮಬುದ್ಧಿಯುಳ್ಳವನೇ, ಮಂತ್ರಕೃತಾ = ಮಂತ್ರಗಳನ್ನು ಕಂಡುಹಿಡಿದ, ಋಷೀಣಾಂ = ಋಷಿಗಳ ಮಧ್ಯದಲ್ಲಿ, ಅಗ್ರಣೀಃ = ಶ್ರೇಷ್ಠನಾದ, ತೇ = ನಿನ್ನ, ಗುರುಃ = ಗುರುಗಳು, ಕುಶಲೀ ಅಪಿ = ಕ್ಷೇಮದಿಂದ ಇರುವರಷ್ಟೆ, ಯತಃ = ಯಾವ ಗುರುಗಳ ಮೂಲಕ, ತ್ವಯಾ = ನಿನ್ನಿಂದ, ಅಶೇಷಂ = ಪರಿಪೂರ್ಣವಾದ, ಜ್ಞಾನಂ = ಜ್ಞಾನವು, ಲೋಕೇನ = ಜನರಿಂದ, ಉಷ್ಣರಶ್ಮೇಃ = ಸೂರ್ಯನಿಂದ, ಚೈತನ್ಯಂ ಇವ = ಪ್ರಬೋಧವನ್ನುಬಂತೆ (ಎಚ್ಚರಿಕೆ), ಆಪ್ತಂ = ಹೊಂದಲ್ಪಟ್ಟಿದೆಯೋ.

**5. ಕಾಯೇನ ವಾಚಾ ಮನಸಾಽಪಿ ಶಶ್ವತ್ ।**
**ಯತ್ಸಂಭೃತಂ ವಾಸವಧೈರ್ಯಲೋಪಿ ॥**
**ಆಪಾದ್ಯತೇ ನ ವ್ಯಯಮಂತರಾಯೈಃ ।**
**ಕಚ್ಚಿನ್ಮಹರ್ಷೇಸ್ತ್ರಿವಿಧಂ ತಪಸ್ತತ್ ॥ ೫ ॥**

"ಎಲೈ ತಪೋಧನನೇ, ನಿನ್ನ ಗುರುಗಳಾದ ವರತಂತುಮುನಿಗಳು ಮಹಾತಪೋಧನರು. ಅವರು ಕೃಚ್ಛ್ರ, ಚಾಂದ್ರಾಯಣಾದಿ ವ್ರತಾನುಷ್ಠಾನಗಳಿಂದ ಶಾರೀರಿಕ (ದೈಹಿಕ) ತಪಸ್ಸನ್ನು ಆಚರಿಸಿರುವರು. ವೇದಮಂತ್ರಪಾಠಾದಿಗಳಿಂದ ವಾಕ್. ತಪಸ್ಸು, ಜಪ. ಧ್ಯಾನ, ಯೋಗಗಳಿಂದ ಮಾನಸಿಕ ತಪಸ್ಸನ್ನು ಆಚರಿಸಿ ಮಹಾ ತಪೋಧನರೆನಿಸಿ ಪ್ರಖ್ಯಾತರಾಗಿರುವರು. ಅವರ ತಪದ ಮಹಿಮೆಯಿಂದ ಇಂದ್ರನ ಗದ್ದುಗೆಯೂ ಅಲ್ಲಾಡಬಲ್ಲುದು. ಧೈರ್ಯಮೇರುವಾದ ಇಂದ್ರನು ತನ್ನ ತ್ರಿಲೋಕಪದವಿಯು ಲೋಪವಾಗಬಹುದೆಂದು ತಲ್ಲಣಗೊಳ್ಳುವನು. ಆಗ ಅದನ್ನು ಶಂಕಿಸಿ ತಪಸ್ಸನ್ನು ಕೆಡಿಸಲು ಮೋಹದ ಬಲೆಯನ್ನು (ಪ್ರೇಮದ, ಕಾಮದ) ಒಡ್ಡುವನು. ಶಾರೀರಿಕ, ವಾಚಿಕ, ಮಾನಸಿಕ ತಪಸ್ಸುಗಳಿಂದ ದೇಹ. ಮಾತು, ಮನಸ್ಸು ಈ ಮೂರನ್ನೂ ಗೆದ್ದಿರುವ ವಿಶ್ವಮಾನವರಾದ, ಲೋಕಾತೀತರಾದ. ಬ್ರಹ್ಮಚೈತನ್ಯರಾದ (ಪರಬ್ರಹ್ಮಸ್ವರೂಪರಾದ) ವರತಂತು ಮಹಾಮುನಿಗಳು ಕುಶಲಿಗರಷ್ಟೆ? ಇಂದ್ರನ ಶಾಂತಿಯನ್ನೂ ಕೆಡಿಸಬಲ್ಲ ಆ ಮುನಿಪುಂಗವರು ಉಗ್ರತಪಸ್ಸಿನಿಂದ ವಿರಾಜಿಸುತ್ತಿರುವರೇ ? ಅವರ ತಪೋಬಲದ ಮಹಿಮೆಯಿಂದ ವಿಶ್ವಶಾಂತಿಯು ನೆಲಸಿದೆಯಷ್ಟೆ?"

ಅನ್ವಯ :—ಕಾಯೇನ ವಾಚಾ ಮನಸಾಽಪಿ ವಾಸವ ಧೈರ್ಯಲೋಪಿ ಯತ್ ತಪಃ ಶಶ್ವತ್ ಸಂಭೃತಮಹರ್ಷೇಃ ತ್ರಿವಿಧಂ ತತ್ (ತಪಃ) ಅಂತರಾಯೈಃ ವ್ಯಯಮ್ ನ ಆಪದ್ಯತೇ ಕಚ್ಚಿತ್ ॥

ವಾಸವಸ್ಯ ಧೈರ್ಯಂ । ವಾಸವಧೈರ್ಯಂ ಲೋಪಯತಿ ಇತಿ ವಾಸವಧೈರ್ಯ

ರ್ಲೋಪಿ । ತಿಸ್ರಃ ವಿಧಾಃ ಯಸ್ಯ ತತ್ ತ್ರಿವಿಧಮ್ ॥ ಅಚ್—ಉಪಸರ್ಗ—ಪಾದ್ಯತೇ ಪಾದ್ಯೇತೇ—ಪಾದ್ಯಂತೇ ॥ ಪಾದ್ಯಸೇ—ಪಾದ್ಯೇಥೇ—ಪಾದ್ಯಧ್ವೇ । ಪಾದ್ಯೇ—ಪಾದ್ಯಾವಹೇ—ಪಾದ್ಯಾಮಹೇ । ಪದ—ಗತೌ—ಣಿಜಂತಾತ್—ಕರ್ವಣಿ—ಲಟ್—ಪ್ರ.ಪು.ಏ. ॥

ಕಾಯೇನ = ಶರೀರದಿಂದಲೂ, ವಾಚಾ = ಮಾತಿನಿಂದಲೂ, ಮನಸಾ ಅಪಿ = ಮನಸ್ಸಿನಿಂದಲೂ, ವಾಸವಧೈರ್ಯಲೋಪಿ = ಇಂದ್ರನ ಧೈರ್ಯವನ್ನೂ ಅಪಹರಿಸುವ, ಯತ್ = ಯಾವ ತಪಸ್ಸು, ಶಶ್ವತ್ = ಯಾವಾಗಲೂ, ಸಂಭೃತಂ = ಸಂಪಾದಿಸಲ್ಪಟ್ಟಿದೆಯೋ, ಮಹರ್ಷೇಃ = ವರತಂತು ಋಷಿಗಳ, ತ್ರಿವಿಧಂ = ಮೂರು ವಿಧವಾದ, ತತ್ = ಆ ತಪಸ್ಸು, ಅಂತರಾಯೈಃ—ವಿಘ್ನಗಳಿಂದ, ವ್ಯಯಂ = ನಾಶವು, ನ ಆಪಾದ್ಯತೇ ಕಚ್ಚಿತ್ = ಹೊಂದಿಸಲ್ಪಡುವುದಿಲ್ಲವೇ ?

6\. ಆಧಾರಬಂಧಪ್ರಮುಖೈಃ ಪ್ರಯತ್ನೈಃ ।
ಸಂವರ್ಧಿತಾನಾಂ ಸುತನಿರ್ವಿಶೇಷಮ್ ॥
ಕಚ್ಚಿನ್ನ ವಾಯ್ವಾದಿರುಪಪ್ಲವೋ ವಃ ।
ಶ್ರಮಚ್ಛಿದಾಮಾಶ್ರಮಪಾದಪಾನಾಮ್ ॥ ೬ ॥

"ಹೇ ಮುನಿವರ, ಪಾತಿಗಳನ್ನು ರಚಿಸಿ ಕಾಲಕಾಲಕ್ಕೆ ನೀರೆರೆದು ಮಕ್ಕಳಂತೆ ಪ್ರೀತಿಯಿಂದ ಬೆಳೆಸಿದ ಆಶ್ರಮದ ಮರಗಿಡ ಬಳ್ಳಿಗಳು, ಹೂಹಣ್ಣು ಫಲಗಳನ್ನು ಮತ್ತು ನೆರಳನ್ನು ಕೊಡುವುದರ ಮೂಲಕ ನಿಮ್ಮ ಆಯಾಸವನ್ನು, ಶ್ರಮವನ್ನು ಹೋಗಲಾಡಿಸುತ್ತವೆಯಷ್ಟೆ? ನಿಮ್ಮ ಪೂಜಾದಿ ಸತ್ಕಾರ್ಯಗಳಿಗೆ ಬೇಕಾದ ಕುಸುಮ, ಹಣ್ಣುಹಂಪಲು, ಸಮಿತ್ತುಗಳನ್ನು ನಿರಂತರವೂ ಒದಗಿಸುವ ಸಸ್ಯಾದಿಗಳಿಗೆ ವಾತಾದಿಬಾಧೆಗಳಿಂದ ಮುಕ್ತವಾಗಿ ನಳನಳಿಸುತ್ತಿವೆಯಷ್ಟೆ? ಆ ತರುಗಳಿಗೆ ಬಿರುಗಾಳಿ, ಚಂಡಮಾರುತದ (ಮುಂತಾದಿ) ಭಯವಿಲ್ಲವಷ್ಟೆ? ಮುಂತಾದಿ ಬಾಧೆಗಳಿಂದ ಅವು ಅಳಿದಿಲ್ಲವಷ್ಟೆ?"

ಅನ್ವಯ:—ಆಧಾರಬಂಧ ಪ್ರಮುಖೈಃ ಪ್ರಯತ್ನೈಃ ಸುತನಿರ್ವಿಶೇಷಮ್ ಸಂವರ್ಧಿತಾನಾಮ್ ಶ್ರಮಚ್ಛಿದಾಂ ವಃ ಆಶ್ರಮಪಾದಪಾನಾಂ ವಾಯ್ವಾದಿಃ ಉಪಪ್ಲವಃ ನ ಕಚ್ಚಿತ್ ॥

ಆಧಾರಾಣಾಂಬಂಧಾಃ । ಆಧಾರಬಂಧಾ ಏವ ಪ್ರಮುಖಾಃ ಯೇಷಾಂ ತೇ । ಆಧಾರಬಂಧಪ್ರಮುಖಾಃ । ತೈಃ ॥ ಸುತೇಭ್ಯಃ ನಿರ್ಗತಃ ವಿಶೇಷಃ ಯಸ್ಮಿನ್ ಕರ್ಮಣಿ ತದ್ಯಥಾ ಭವತಿ ತಥಾ—ಸು—ಶೇಷಂ—ಕ್ರಿಯಾವಿಶೇಷಣ । ವಾಯುಃ ಆದಿಃ ಯಸ್ಯ ಸಃ—ವಾಯ್ವಾದಿಃ ॥ ಶ್ರಮಂ ಛಿಂದಂತಿ ಇತಿ—ಶ್ರಮಚ್ಛಿದಃ । ತೇಷಾಮ್ । ಆಶ್ರಮಾಣಾಂ ಪಾದಪಾಃ । ತೇಷಾಮ್ ॥

ಆಧಾರಬಂಧಪ್ರಮುಖೈಃ = ಕಟ್ಟೆ(ಪಾತಿ)ಕಟ್ಟುವುದೇ ಮುಂತಾದ, ಪ್ರಯತ್ನೈಃ = ನಾನಾ ಉಪಾಯಗಳಿಂದ, ಸುತನಿರ್ವಿಶೇಷಂ = ಮಕ್ಕಳಿಗೆ ಸಮಾನವಾಗಿ, ಸಂವರ್ಧಿತಾನಾಂ = ಬೆಳೆಸಲ್ಪಟ್ಟ, ಶ್ರಮಚ್ಛಿದಾಂ = ಆಯಾಸವನ್ನು ಹೋಗಲಾಡಿಸುವ, ವಃ = ನಿಮ್ಮ

ಆಶ್ರಮಪಾದಪಾನಾಂ = ಆಶ್ರಮದ ಮರಗಳಿಗೆ, ವಾಯ್ವಾದಿಃ = ಗಾಳಿಯೇ ಮುಂತಾದ, ಉಪಪ್ಲವಃ = ಬಾಧಕವು, ನ ಕಚ್ಚಿತ್ = ಇಲ್ಲವಷ್ಟೆ?

7. ಕ್ರಿಯಾನಿಮಿತ್ತೇಷ್ವಪಿ ವತ್ಸಲತ್ವಾತ್ ।
ಅಭಗ್ನಕಾಮಾ ಮುನಿಭಿಃ ಕುಶೇಷು ॥
ತದಂಕಶಯ್ಯಾಚ್ಯುತನಾಭಿನಾಲಾ ।
ಕಚ್ಚಿನ್ಮೃಗೀಣಾಮನಘಾಪ್ರಸೂತಿಃ ॥ ೭ ॥

"ಹೇ ಯೋಗಿರಾಜ, ಆ ದಿವ್ಯಾಶ್ರಮದಲ್ಲಿ ತಪೋನುಷ್ಠಾನಗಳಿಗೆ ಸಾಧನಗಳಾದ ದರ್ಭೆಗಳನ್ನು ಆಶ್ರಮದ ಸಮೀಪದಲ್ಲಿ ಬೆಳೆಸಿರುವರಲ್ಲವೆ? ಜಿಂಕೆಯ ಮರಿಗಳು (ಮೃಗ ಶಾಬಕ) ಆ ದರ್ಭೆಯನ್ನು ತಿನ್ನಲು ಹೋದಾಗ ಆ ಋಷಿಗಳು ತಡೆಯುದೆ, ಅವರು ತಮ್ಮ ಮಕ್ಕಳಂತೆಯೇ ಅತಿಶಯ ವಾತ್ಸಲ್ಯದಿಂದ ಸಾಕಿದ ಆ ಜಿಂಕೆಮರಿಗಳನ್ನು ಅವು ವ್ಯಥೆ ಪಡಬಹುದೆಂದು ಭಾವಿಸಿ ತಡೆಯದೆ (ಅಡ್ಡಿಮಾಡದೆ) ಹಾಗೆಯೇ ಬಿಟ್ಟುಬಿಡುತ್ತಿದ್ದರು. ಇದರಿಂದ ತಪೋಕಾರ್ಯಗಳಿಗೆ ತೊಂದರೆಯಾದರೂ ಚಿಂತಿಸುತ್ತಿರಲಿಲ್ಲ. ಅವು ಹುಟ್ಟಿದೊಡನೆಯೇ, ಆ ಋಷಿಪುಂಗವರು ಆ ಚಿಕ್ಕ ಎರಳೆಮರಿಗಳನ್ನು ತಮ್ಮ ತೊಡೆಯ ಮೇಲೆ ಮಲಗಿಸಿಕೊಳ್ಳುತ್ತಾ, ಅಕ್ಕರೆಯ ತನಿರಸದಿಂದ ಅದರ ಲಾಲನೆಪಾಲನೆಯನ್ನು ನೋಡಿಕೊಳ್ಳುತ್ತಿದ್ದರು. ಇದರಿಂದ ಆ ಮರಿಜಿಂಕೆಗಳಿಗೆ ಅವರ ತೊಡೆಯೇ ಹಾಸಿಗೆ ಯಾಯಿತು (ತೊಟ್ಟಿಲಾಯಿತು) ಇದರಿಂದ ಆಶ್ರಮವಾಸಿಗಳಿಗೆ ಅವುಗಳ ಮೇಲೆ ಇರುವ ವಾತ್ಸಲ್ಯ ಎಷ್ಟಿದೆಯೆಂದು ವ್ಯಕ್ತವಾಗುವುದಲ್ಲವೆ? ಎಲೈ ಕೌತ್ಸನೇ, ಆ ಎರಳೆಯ ಮರಿಗಳು ಪ್ರಾಣಾಪಾಯದಿಂದ ರೋಗರುಜಿನಗಳಿಂದ ವ್ಯಥೆಪಡುತ್ತಿಲ್ಲವಷ್ಟೆ? ಅವುಗಳಿಗೆ ಎಳ್ಳಷ್ಟು ಅಪಾಯವಾದರೂ, ಅಹಿಂಸಾಧರ್ಮಪ್ರತಿಪಾದಕರಾದ, ದೇವಸದೃಶರಾದ, ಸಾತ್ವಿಕಗುಣದ ಸಾಕಾರಮೂರ್ತಿಗಳಾದ ಅವರು ಖಂಡಿತವಾಗಿಯೂ ಸಹಿಸಲಾರರು ಎಂಬುದು ಸತ್ಯವಷ್ಟೆ?

ಅನ್ವಯ :—ಕ್ರಿಯಾನಿಮಿತ್ತೇಷು ಅಪಿ ಕುಶೇಷು ಮುನಿಭಿಃ ವತ್ಸಲತ್ವಾತ್ ಅಭಗ್ನ ಕಾಮಾತದಂಕಶಯ್ಯಾ ಚ್ಯುತನಾಭಿನಾಲಾಮೃಗೀಣಾಂ ಪ್ರಸೂತಿಃ ಅನಘಾ ಕಚ್ಚಿತ್ ॥

ಕ್ರಿಯಾಯಾಃ ನಿಮಿತ್ತಾನಿ । ತೇಷು । ವತ್ಸಲಸ್ಯ ಭಾವಃ ವತ್ಸಲತ್ವಮ್ । ತಸ್ಮಾತ್ । ನ ಭಗ್ನಃ—ಅಭಗ್ನಃ । ಅಭಗ್ನಃ ಕಾಮಃ ಯಸ್ಯಾಃ ಸಾ ॥ ತೇಷಾಂ ಅಂಕಾಃ । ತದಂಕಾ ಏವ ಶಯ್ಯಾಃ । ತದಂಕ ಶಯ್ಯಾಸುಚ್ಯುತಾನಿ । ತದುಂಕಶಯ್ಯಾಚ್ಯುತಾನಿ ನಾಭಿನಾಲಾನಿ ಯಸ್ಯಾಃ ಸಾ । ತದಂಕಶಯ್ಯಾಚ್ಯುತನಾಭಿನಾಲಾ ॥ ನ ವಿದ್ಯತೇ ಅಘಂ ಯಸ್ಯಾಃ ಸಾ ಅನಘಾ ॥

ಕ್ರಿಯಾನಿಮಿತ್ತೇಷ್ವಪಿ = ತಪಾನುಷ್ಠಾನದ ಸಾಧನಸಾಮಗ್ರಿಗಳಾಗಿದ್ದರೂ, ಕುಶೇಷು = ದರ್ಭೆಗಳಲ್ಲಿ, ಮುನಿಭಿಃ = ಋಷಿಗಳಿಂದ, ವತ್ಸಲತ್ವಾತ್ = ಅತಿಶಯವಾದ ಪ್ರೀತಿ ಇರುವುದರೀದ, ಅಭಗ್ನಕಾಮಾ = ತಡೆಯಿಲ್ಲದ ಇಚ್ಛೆಯುಳ್ಳ, ತತ್ = ಆ ಋಷಿಗಳು, ಅಂಕಶಯ್ಯಾ= ತೊಡೆಗಳೆಂಬ ಹಾಸಿಗೆಯಲ್ಲಿ, ಚ್ಯುತ = ಬಿದ್ದಿರುವ, ನಾಭಿನಾಲಾ =

ಹೊಕ್ಕಳ ತೊಟ್ಟು, ಮೃಗೀಣಾಂ = ತಾಯಿಜಿಂಕೆ, ಪ್ರಸೂತಿಃ = ಸಂತತಿಯು, ಅನಘಾ ಕಚ್ಚಿತ್ = ಯಾವ ತೊಂದರೆಯೂ ಇಲ್ಲದಿರುವುದಷ್ಟೆ?

**8. ನಿರ್ವರ್ತ್ಯತೇ ಯೈರ್ನಿಯಮಾಭಿಷೇಕೋ।**
**ಯೇಭ್ಯೋ ನಿವಾಪಾಂಜಲಯಃ ಪಿತೄಣಾಮ್॥**
**ತಾನ್ಯುಂಛಷಷ್ಠಾಂಕಿತಸೈಕತಾನಿ।**
**ಶಿವಾನಿ ವಸ್ತೀರ್ಥಜಲಾನಿ ಕಚ್ಚಿತ್ ॥ ೮ ॥**

ಎಲೈ ಕೌತ್ಸಮುನಿಯೇ, ಯಾವ ಪವಿತ್ರವಾದ ನೀರಿನಿಂದ ಆಶ್ರಮ ನಿವಾಸಿಗಳಾದ ಮುನಿಪುಂಗವರು, ವಾನಪ್ರಸ್ಥಾಶ್ರಮಿಗಳು ನಿತ್ಯಸ್ನಾನ ಸಂಧ್ಯಾವಂದನಾದಿ ನಿತ್ಯಕರ್ಮಗಳನ್ನು ಪೂರೈಸಿ, ಪಿತೃದೇವತೆಗಳಿಗೆ ತರ್ಪಣಾದಿಗಳನ್ನು ಕೊಡುತ್ತಾ ತಪಾನುಷ್ಠಾನಗಳನ್ನು ಮಾಡುತ್ತಿರುವರೋ, ಅಂತಹ ನೀರಿನಿಂದ ತುಂಬಿದ ಕೆರೆ, ಕಾಲುವೆಗಳೇ ಮುಂತಾದ ಜಲಾಶಯಗಳು ಜಲರಾಶಿಯಿಂದ ಸಮೃದ್ಧಿಯಾಗಿವೆಯಷ್ಟೆ? ಕೆರೆ ಕಾಲುವೆಗಳು ಕಟ್ಟೆ ಒಡೆದು ಅಥವಾ ಹೂಳು ತುಂಬಿ ನೀರಿಗ ಬರಗಾಲ ತಲೆದೋರಿ ಕ್ಷಾಮ ಡಾಮರಗಳ ಹಿಂಸೆಗೆ ಒಳಗಾಗಿ ಕಾಡಿನ ಜನಪದ ಸಂಕಟಪಡುತ್ತಿದ್ದಾರೆಯೆ? ರಾಜಬೊಕ್ಕಸಕ್ಕೆ ನೀಡಬೇಕಾದ ಆರನೇ ಒಂದು ಭಾಗ ಧಾನ್ಯಾಂಶದಿಂದ ಕೂಡಿದ ಮರಳು ದಿಣ್ಣೆಗಳ ದಡಗಳಿಂದ ಕೂಡಿದ ಜಲಾಸಯದ ಪ್ರದೇಶವನ್ನು ಕಾಡಾನೆ, ಕಾಡ್ಕೋಣ, ಕಾಡುಹಂದಿಗಳು ನುಗ್ಗಿ ಹಾಳುಮಾಡಿರುವುದುಂಟೆ? ಅಂತಹ ಯಾವೊಂದು ತೊಂದರೆಯೂ ಇಲ್ಲದೆ ಪುಣ್ಯಾಶ್ರಮಗಳಿಂದ ಒಳಗೊಂಡ ವನಭೂಮಿಗಳು ನಿಷ್ಕಂಟಕವಾಗಿ ಶೋಭಿಸುತ್ತಿರುವುದೇ?

ನಿರ್—ಉಪಸರ್ಗ। ವರ್ತ್ಯತೇ—ವರ್ತ್ಯೇತೇ—ವರ್ತ್ಯಂತೇ। ಇತ್ಯಾದಿ॥ ವೃತು—ವರ್ತನೇ ಕರ್ಮಣಿ—ಲಿಟ್—ಪ್ರ.ಪು.ಏ.॥ ನಿಯಮಸ್ಯ—ಅಭಿಷೇಕಃ॥ ನಿವಾಪಸ್ಯ ಅಂಜಲಿಯಃ। ಉಂಛಾನಾಂ ಷಷ್ಠಾಃ ಉಂಛಷಷ್ಠ್ಯಾ ಅಂಕಿತಾನಿ ಸೈಕತಾನಿ ಯೇಷಾಂ ತಾನಿ॥ ಉ—ಸ॥

ಯೈಃ = ಯಾವ ತೀರ್ಥಜಲದಿಂದ, ನಿಯಮಾಭಿಷೇಕಃ = ನಿತ್ಯಸ್ನಾನಾದಿಗಳು, ನಿವರ್ತ್ಯತೇ = ಪೂರೈಸಲ್ಪಡುತ್ತವೆಯೋ, ಯೇಭ್ಯಃ = ಯಾವ ಜಲದಿಂದ, ಪಿತೄಣಾಂ = ಪಿತೃದೇವತೆಗಳಿಗೆ, ನಿವಾಪಾಂಜಲಯಃ = ತರ್ಪಣಾಂಜಲಿಗಳು, ನಿರ್ವರ್ತ್ಯಂತೇ = ಪೂರೈಸಲ್ಪಡು, ಉಂಛ = ಷಷ್ಠಾಂಕಿತ, ಸೈಕತಾನಿ = ಕಣಕಣವಾಗಿ ಆರಿಸಿದ ಧಾನ್ಯಗಳ $\frac{1}{6}$ ಭಾಗದಿಂದ ಕೂಡಿದ ಮರಳು ದಿಣ್ಣೆಗಳಿರುವ, ವಃ = ನಿಮ್ಮ, ತಾನಿ = ಆ, ತೀರ್ಥಜಲಾನಿ = ಕೆರೆ ಮೊದಲಾದ, ಶಿವಾನಿ ಕಚ್ಚಿತ್ = ಚೆನ್ನಾಗಿರುವುದಷ್ಟೆ?

**9. ನೀವಾರಪಾಕಾದಿಕಡಂಗರೀಯೈ।**
**ರಾಮೃಶ್ಯತೇ ಜಾನಪದೈರ್ನ ಕಚ್ಚಿತ್॥**
**ಕಾಲೋಪಪನ್ನಾತಿಥಿಕಲ್ಪ್ಯಭಾಗಂ।**
**ವನ್ಯಂ ಶರೀರಸ್ಥಿತಿಸಾಧನಂ ವಃ ॥ ೯ ॥**

"ಎಲೈ ವರತಂತು ಶಿಷ್ಯೋತ್ತಮನೇ, ಯೋಗ್ಯಕಾಲದಲ್ಲಿ ಬಂದ ಅತಿಥಿಗಳನ್ನು ಸತ್ಕಾರಮಾಡಲು ಮತ್ತು ಈ ದೇಹವನ್ನು ಪೋಷಿಸಲು ಬೇಕಾದ ನೀವಾರ (ತೃಣಧಾನ್ಯ, ನವಣೆ, ಜೋಳ) ಧಾನ್ಯಗಳನ್ನು ಬೆಳೆಸಿರುವುದನ್ನು ಇತರ ಜನಪದಗಳ ಅಲೆಮಾರಿ ಜಾನುವಾರುಗಳು ಬಂದು ತಿಂದುಹೋಗುತ್ತಿರುವುದಿಲ್ಲವಷ್ಟೆ? ಋಷ್ಯಾಶ್ರಮಗಳಲ್ಲಿ ತಮ್ಮ ಜೀವನೋಪಾಯಕ್ಕೆ ಮತ್ತು ನಿರ್ದಿಷ್ಟ ಸಮಯದಲ್ಲಿ ಬರತಕ್ಕ ಅತಿಥಿ ಅಭ್ಯಾಗತರಿಗೆ ದಾನಮಾಡಲು ಬೇಕಾದ ನೀವಾರಧಾನ್ಯಗಳನ್ನು, ಬರೇ ಬೂಸ ತಿಂದು ಜೀವಿಸುವ ಇತರ ಗ್ರಾಮಗಳ ನಾಡಾಡಿ ದನಗಳು ಬಂದು ಮೇದುರಂಪಮಾಡಿ, ನಾಶಗೊಳಿಸಿ ತೊಂದರೆಗೊಳಿಸುತ್ತಿವೆಯೇನು ? ಆ ತಾಪಸರು ಅತ್ಯಂತ ಕಷ್ಟ ಸಹಿಷ್ಣುಗಳಾಗಿ, ತಮ್ಮ ಕಾಯಕವೆಂದು ಮಾಡಿ ಬೆಳೆಸಿದ ತೃಣಧಾನ್ಯಗಳನ್ನು ಈ ತೆರನಾಗಿ ಪೋಲುಮಾಡಿ ತೊಂದರೆಗೊಳಿಸಿ ಕಾಡುವವರೂ ಇದ್ದಾರೆ. ಅಂತಹ ನಿದರ್ಶನಗಳಿವೆಯೇ" ಎಂದು ಆ ದಯಾಳು ರಾಜನು ಪ್ರಶ್ನಿಸಿದನು.

ಅನ್ವಯ :—ಕಾಲೋಪಪನ್ನಾತಿಥಿಕಲ್ಪ್ಯಭಾಗಂ ವಃ ವನ್ಯಂ ಶರೀರಸ್ಥಿತಿಸಾಧನಂ ನೀವಾರಪಾಕಾದಿ ಜಾನಪದ್ಯೈಃ ಕಡಂಗರೀಯೈಃ ನ ಆಮೃಶ್ಯತೇ ಕಚ್ಚಿತ್ ॥

ಪಚ್ಯತ ಇತಿ ಪಾಕಃ (ಧಾನ್ಯ) ನೀವಾರಸ್ಯ ಪಾಕಃ । ನೀವಾರಪಾಕಃ ಆದಿಃ ಯಸ್ಯ ತತ್—ನೀ—ಕಾದಿ ॥ ಕಡಂಗರಂ ಅರ್ಹಂತೀತಿ ಕಡಂಗರೀಯಾಃ । ತೈಃ । ಆಙ್—ಉಪಸರ್ಗ, ಮೃಶ್ಯತೇ—ಮೃಶ್ಯೇತೇ—ಮೃಶ್ಯಂತೇ ಇತ್ಯಾದಿ, ಮೃಶ—ಆಮರ್ಶನೇ—ಕರ್ಮಣಿ—ಲಟ್—ಪ್ರ.ಪು.ಏ. ॥ ಕಾಲೇಷು ಉಪಪನ್ನಾಃ । ಕಾಲೋಪಪನ್ನಾಶ್ಚ ತೇ ಅತಿಥಯಶ್ಚ । ಕಾಲೋಪಪನ್ನಾತಿಥೀನಾಂ ಕಲ್ಪ್ಯಾಃ ಭಾಗಾಃ ಯಸ್ಯ ತತ್ । ಕಾಲೋಪಪನ್ನಾತಿಥಿಕಲ್ಪ್ಯಭಾಗಮ್ ॥ ವನೇ ಭವಂ ವನ್ಯಮ್ । ಶರೀರಾಣಾಂ ಸ್ಥಿತಿಃ । ಶರೀರಸ್ಥಿತೇಃ ಸಾಧನಮ್ ಶರೀ—ನಮ್ ॥

ಕಾಲೋಪಪನ್ನಾ, ತಿಥಿ, ಕಲ್ಪ್ಯಭಾಗಮ್ = ಯೋಗ್ಯಕಾಲದಲ್ಲಿ ಬಂದಿರುವ, ಅತಿಥಿಗಳಿಗೆ ಕೊಡುವ ಭಾಗವಿರುವ, ವನ್ಯಂ = ಕಾಡಿನಲ್ಲಿ ಬೆಳೆದಿರುವ, ಶರೀರಸ್ಥಿತಿಸಾಧನಂ = ಜೀವನಕ್ಕೆ ಸಾಧನವಾದ, ವಃ = ನಿಮ್ಮ, ನೀವಾರಪಾಕಾದಿ = ನವಣೆ ಮುಂತಾದ ಧಾನ್ಯಗಳು, ಜಾನಪದ್ಯೈಃ = ಇತರ ಊರುಗಳಿಂದ ಬಂದಿರುವ, ಕಡಂಗರೀಯೈಃ = ಹಸು, ಎಮ್ಮೆ ಮುಂತಾದ ಜಾನುವಾರುಗಳಿಂದ, ನ ಆಮೃಶ್ಯತೇ ಕಚ್ಚಿತ್ = ತಿನ್ನಲ್ಪಡುವುದಿಲ್ಲವಷ್ಟೆ?

10. ಅಪಿ ಪ್ರಸನ್ನೇನ ಮಹರ್ಷಿಣಾ ತ್ವಂ ।
ಸಮ್ಯಗ್ವಿನೀಯಾನುಮತೋ ಗೃಹಾಯ ॥
ಕಾಲೋಹ್ಯಯಂ ಸಂಕ್ರಮಿತುಂ ದ್ವಿತೀಯಂ ।
ಸರ್ವೋಪಕಾರ ಕ್ಷಮಮಾಶ್ರಮಂತೇ ॥ ೧೦ ॥

ಸಕಲ ಜೀವರಾಶಿಗಳಿಗೂ ತಾಯಿಯೇ ಪ್ರಧಾನ ಆಶ್ರಯಳಾಗಿರುವವಳು (ಆಶ್ರಯದಾತಳು), ಪರೋಪಕಾರಾರ್ಥವಾಗಿಯೇ ಮಾತೆಯು (ಮಾತೃಶ್ರೀಯು) ಜೀವಿಸಿಕೊಂಡಿರುವಳು. ಅಂತೆಯೇ ಗೃಹಸ್ಥಾಶ್ರಮವು ಉಳಿದ ಮೂರು ಆಶ್ರಮಗಳಾದ

ಬ್ರಹ್ಮಚರ್ಯ, ವಾನಪ್ರಸ್ಥ, ಸನ್ಯಾಸ ಆಶ್ರಮಗಳಿಗಿಂತಲೂ ಶ್ರೇಷ್ಠವಾಗಿರುವುದು. ಅದು ಇತರ ಆಶ್ರಮಗಳಿಗೆ ಮಾತೃಸ್ಥಾನದಲ್ಲಿದೆ. ಎಲೈ ಮುನಿಪುಂಗವನೇ, ನೀನು ಧರ್ಮಾತ್ಮನಾದ, ನಿನ್ನ ಗುರುವಾದ, ವರತಂತು ಮಹರ್ಷಿಯಿಂದ ಸಕಲ ವಿದ್ಯೆಗಳನ್ನು ಉಪದೇಶದಿಂದ ಪಡೆದಿರುವಿ, ಆ ಮಹಾತ್ಮನ ಸೇವೆಮಾಡಿ ಬ್ರಹ್ಮಚರ್ಯವ್ರತದಲ್ಲಿದ್ದು ಅಧ್ಯಯನ ಮಾಡಿ, ವಿದ್ಯಾಸಂಪತ್ತನ್ನು ಅನುಗ್ರಹರೂಪದಲ್ಲಿ ಪಡೆದಿರುವೆ. ಇದೀಗ ಗೃಹಸ್ಥಾಶ್ರಮ ಎಂಬ ಅತ್ಯಂತ ಶ್ರೇಷ್ಠವಾದ ದ್ವಿತೀಯ ಆಶ್ರಮವನ್ನು ಪ್ರವೇಶಿಸಲು ಗುರುವಿನಿಂದ ಅನುಮತಿಯನ್ನು ಪಡೆದುಬಂದಿರುವಿ, ಇದೀಗ ನಿನ್ನ ವಿದ್ಯಾಭ್ಯಾಸದ ಅವಧಿಯು ಮುಗಿದಿದೆ. ನೀನೀಗ ಸ್ನಾತಕನಾಗಿ ಗೃಹಸ್ಥಾಶ್ರಮಧರ್ಮವನ್ನು ಸ್ವೀಕರಿಸಲು ಪ್ರಾಪ್ತವಯಸ್ಕನಾಗಿರುವೆ.

ಮಹಾಂಶ್ಚಾಸೌ ಋಷಿಶ್ಚ ಮಹರ್ಷಿಃ । ತೇನ ॥ ಸರ್ವೇಷಾಂ ಉಪಕಾರಃ ಸರ್ವೋಪಕಾರೇ ಕ್ಷಮಃ । ತಮ್ ॥

ತ್ವಂ = ನೀನು, ಪ್ರಸನ್ನೇನ = ಸಂತೋಷಗೊಂಡ, ಮಹರ್ಷಿಣಾ = ವರತಂತು ಮುನಿಗಳಿಂದ, ಸಮ್ಯಕ್ ವಿನೀಯ = ಚೆನ್ನಾಗಿ ಶಿಕ್ಷಣಪಡೆದು, ಗೃಹಾಯ = ಗೃಹಸ್ಥಾಶ್ರಮ ಹೊಂದಲು, ಅನುಮತಃ ಅಪಿ = ಅಪ್ಪಣೆಪಡೆದಿರುವೆ ಏನು ?, ಹಿ = ಏಕೆಂದರೆ, ತೇ = ನಿನಗೆ, ಸರ್ವೋಪಕಾರಕ್ಷಮಂ = ಬ್ರಹ್ಮಚರ್ಯಾದಿ ಸಕಲ ಆಶ್ರಮಗಳಿಗೆ ಉಪಕಾರ ಸಲ್ಲಿಸುವ, ದ್ವಿತೀಯಂ ಆಶ್ರಮಂ = ಗೃಹಸ್ಥಾಶ್ರಮವನ್ನು, ಸಂಕ್ರಮಿತುಂ = ಹೊಂದಲು, ಅಯಂ ಕಾಲಃ = ಇದು ಸರಿಯಾದ ಸಮಯವಾಗಿದೆ. ಗೃಹಾಯ = ಗೃಹಸ್ಥಾಶ್ರಮ ಪ್ರವೇಷ್ಟುಮ್, ಹಿ = ಯತಃ ॥

**11. ತವಾರ್ಹತೋ ನಾಭಿಗಮೇನ ತೃಪ್ತಂ ।**
**ಮನೋನಿಯೋಗಕ್ರಿಯಯೋತ್ಸುಕಂ ಮೇ ॥**
**ಅಪ್ಯಾಜ್ಞಯಾ ಶಾಸಿತುರಾತ್ಮನಾ ವಾ ।**
**ಪ್ರಾಪ್ತೋಽಸಿ ಸಂಭಾವಯಿತುಂ ವನಾನ್ಮಾಮ್ ॥ ೧೧ ॥**

ಎಲೈ ಮುನಿಪ್ರೋತ್ರಮನೆ, ನೀನು ನನ್ನ ಬಳಿಗೆ ಬಂದಿರುವ ಉದ್ದೇಶವನ್ನು ನಾನು ಹೀಗೆಂದು ಊಹಿಸುವೆನು. ಓ ವಂದಿಸಲು ಯೋಗ್ಯನಾದ ಮಹಾತ್ಮನೇ, ನನ್ನ ಮನಸ್ಸು ನಿನ್ನ ಆಣತಿಯನ್ನು ಕೇಳಲು ತುಡಿಯುತ್ತಿದೆ. (ಹಾರೈಸುತ್ತಿದೆ) ನಿನ್ನ ಅಥವಾ ನಿನ್ನ ಮಹಾಗುರುವಾದ ವರತಂತು ಋಷಿವರನ ಪರಮಪವಿತ್ರವಾದ ಅನುಜ್ಞೆಯೇನು ? ನೀನು ನನ್ನ ರಾಜಾಸ್ಥಾನಕ್ಕೆ ಬಂದು ನನ್ನನ್ನು ಗೌರವಿಸಿರುವೆ, ನಿನ್ನ ಗುರುವಿನ ಆಜ್ಞೆಯೇನೆಂದು ಈ ಕ್ಷಣವೇ ತಿಳಿಸು. ನನ್ನನ್ನು ಗೌರವಿಸಿ ಬಾಯೆಂದು ಆ ಮುನಿವರೌಳಿಯು ಕಳುಹಿಸಿರುವನೋ ಅಥವಾ ನೀನಾಗಿಯೇ ನನ್ನ ಕುಶಲವನ್ನು ವಿಚಾರಿಸಲು ಅಡವಿಯಿಂದ ಬಂದೆಯೋ ಹೇಳು'' ಎಂದನು ಆ ನೃಪನು.

ಅನ್ವಯ :—ಅರ್ಹತಃ ತವ ಅಭಿಗಮೇನ ಮೇ ಮನಃ ನ ತೃಪ್ತಂ (ಕಿಂತು) ನಿಯೋಗಕ್ರಿಯಯಾ ಉತ್ಸುಕಮ್ । ಅಪಿ ಶಾಸಿತುಃ ಆಜ್ಞಯಾ ಆತ್ಮನಾ ವಾ ಮಾಂ ಸಂಭಾವಯಿತುಂ ವನಾತ್ ಪ್ರಾಪ್ತೋಽಸಿ ॥

ನಿಯೋಗಸ್ಯಕ್ರಿಯಾ । ತಯಾ ॥ ಅಸ್ಮಿ—ಸ್ವಃ—ಸಂತಿ । ಅಸಿ—ಸ್ಥಃ—ಸ್ಥ। ಅಸ್ಮಿ—ಸ್ವಃ—ಸ್ಮಃ॥ ॥ ಅಸ—ಭುವಿ—ಲಟ್—ಮ.ಪು.ಏ. ॥

ಅರ್ಹತಃ = ಪೂಜ್ಯನಾದ, ತವ = ನಿನ್ನ, ಅಭಿಗಮೇನ = ಆಗಮನದಿಂದ, ಮೇ = ನನ್ನ, ಮನಃ = ಮನಸ್ಸು, ನ ತೃಪ್ತಂ = ಸಂತೋಷಹೊಂದಲಿಲ್ಲ, ನಿಯೋಗಕ್ರಿಯಯಾ = ಅಪ್ಪಣೆಮಾಡುವುದರಿಂದ, ಉತ್ಸುಕಂ = ಕೇಳುವ ಅತಿ ಉತ್ಸಾಹ, ಶಾಸಿತಃ = ಗುರುವಿನ, ಆಜ್ಞಯಾ ಅಪಿ = ಅಪ್ಪಣೆಯಿಂದ, ಆತ್ಮನಾ ವಾ = ತಾವಾಗಿಯೇ ಆಗಲಿ, ಮಾಂ = ನನ್ನನ್ನು, ಸಂಭಾವಯಿತುಂ = ಆಜ್ಞೆಮಾಡಿ ಗೌರವಿಸಲು, ವನಾತ್ = ಕಾಡಿನಿಂದ, ಪ್ರಾಪ್ತಃ ಅಸಿ = ಬಂದಿರುವಿಯಷ್ಟೆ?

12. ಇತ್ಯರ್ಘ್ಯಪಾತ್ರಾನುಮಿತವ್ಯಯಸ್ಯ।
ರಘೋರುದಾರಾಮಪಿ ಗಾಂ ನಿಶಮ್ಯ॥
ಸ್ವಾರ್ಥೋಪಪತ್ತಿಂ ಪ್ರತಿ ದುರ್ಬಲಾಶ।
ಸ್ತಮಿತ್ಯವೋಚದ್ವರತಂತು ಶಿಷ್ಯಃ ॥ ೧೨ ॥

ರಘುರಾಯನು ಮಣ್ಣಿನ ಅರ್ಘ್ಯಪಾತ್ರೆಗಳಿಂದಲೇ ತನ್ನನ್ನು ಆದರಾತಿಥ್ಯಗಳನ್ನು ಮಾಡಿದುದರಿಂದಲೇ ಆ ಸಾಮ್ರಾಟನು ತನ್ನ ಸರ್ವಸ್ವವನ್ನು ದಾನಮಾಡಿ ಖಾಲಿ ಕೈಯಿಂದ ನಿಂತಿರುವುದನ್ನು ಊಹಿಸಿ ತಿಳಿದನು. ಇದರಿಂದ ಅವನು ಅಧಿಕವಾದ ದ್ರವ್ಯರಾಶಿಯನ್ನು ಪಡೆಯುವ ಆಶೆಯು ತೀರ ದುರ್ಬಲಗೊಂಡಿತು. ಆಗ ಅವನು ತನ್ನ ಕಾರ್ಯಸಿದ್ಧಿಯನ್ನು ಕುರಿತು (ಸ್ವಕಾರ್ಯಸಿದ್ಧಿ) ಮನದಲ್ಲಿ ಯೋಚಿಸಿದನು. ರಾಜನು ಆಡಿದ ಉದಾರ ಮಾತುಗಳಿಂದ ಏನೂ ಪ್ರಯೋಜನವಿಲ್ಲವೆಂದು ತಿಳಿದು ತನ್ನ ಆಸೆಗೆ ತಿಲಾಂಜಲಿಯನ್ನಿತ್ತು (ಆಸೆ ಕಡಿದವನಾಗಿ), ದುರ್ಬಲಮನೋರಥನಾಗಿ (ಶಿಥಿಲಮನಸ್ಕನಾಗಿ) ಮೆಲ್ಲನೆ ಮಾತನಾಡಲು ಪ್ರಾರಂಭಿಸಿದನು.

ಅರ್ಘ್ಯಸ್ಯ ಪಾತ್ರಂ। ಅರ್ಘ್ಯಪಾತ್ರೇಣ ಅನುಮಿತಃ, ಅರ್ಘ್ಯಪಾತ್ರಾನುಮಿತಃ ವ್ಯಯಃ ಯಸ್ಯ ಸಃ । ಅರ್ಘ್ಯಪಾತ್ರಾನುಮಿತವ್ಯಯಃ । ತಸ್ಯ॥ ಸ್ವಸ್ಯ ಅರ್ಥಃ । ಸ್ವಾರ್ಥಸ್ಯ ಉಪಪತ್ತಿಃ । ತಾಮ್ ॥ ದುರ್ಬಲಾ ಆಶಾ ಯಸ್ಯ ಸಃ । ದುರ್ಬಲಾಶಃ । ವರತಂತೋಃ ಶಿಷ್ಯಃ ॥ ಅವೋಚತ್—ಅವೋಚತಾಂ—ಅವೋಚನ್ । ಅವೋಚಃ—ಅವೋಚತಂ—ಅವೋಚತ। ಅವೋಚಂ—ಅವೋಚಾವ—ಅವೋಚಾಮ । ಬ್ರೂಞ್—ವ್ಯಕ್ತಾಯಾಂ ವಾಚಿ ಲುಙ್—ಪ್ರ.ಪು.ಏ. ॥

ಅರ್ಘ್ಯಪಾತ್ರಾನುಮಿತವ್ಯಯಸ್ಯ= ಮಣ್ಣಿನ, ವ್ಯಕ್ತಿಕೆಯು ಅರ್ಘ್ಯಪಾತ್ರದಿಂದ, ರಘೋಃ=ರಘುರಾಜನ, ಇತಿ = ಹಿಂದೆ ಹೇಳಿದ, ಉದಾರಾಮಪಿ = ಔದಾರ್ಯದಿಂದ ಕೂಡಿದ್ದರೂ, ಗಾಂ = ಮಾತನ್ನು, ನಿಶಮ್ಯ= ಕೇಳಿ, ವರತಂತು ಶಿಷ್ಯಃ=ಕೌತ್ಸಮುನಿಯು, ಸ್ವಾರ್ಥೋಪಪತ್ತಿಂ ಪ್ರತಿ = ತನ್ನ ಕಾರ್ಯಸಿದ್ಧಿಯನ್ನು ಕುರಿತು, ದುರ್ಬಲಾಶಃ = ಕಡಿಮೆಯಾದ, (ಶಿಥಿಲ) ಆಸೆವುಳ್ಳವನಾಗಿ, ತಂ = ಆ ರಾಜನನ್ನು ಕುರಿತು, ಇತಿ = ಮುಂದೆ ಹೇಳುವ ರೀತಿಯಿಂದ, ಅವೋಚತ್ = ಹೇಳಿದನು.

13. ಸರ್ವತ್ರ ನೋ ವಾರ್ತಮವೇಹಿ ರಾಜನ್ ।
ನಾಥೇ ಕುತಸ್ತ್ವಯ್ಯಶುಭಂ ಪ್ರಜಾನಾಮ್ ॥
ಸೂರ್ಯೇ ತಪತ್ಯಾವರಣಾಯ ದೃಷ್ಟೇಃ ।
ಕಲ್ಪೇತ ಲೋಕಸ್ಯ ಕಥಂ ತಮಿಸ್ರಾ ॥ ೧೩ ॥

ಹೇ ರಾಜನ್, ನಿನ್ನ ರಾಜ್ಯಾಡಳಿತದಲ್ಲಿ ಪ್ರಜೆಗಳಿಗೆ ಎಲ್ಲಾ ಕಡೆಗಳಲ್ಲೂ ಶುಭವಲ್ಲದೆ ಅಶುಭ ಇಲ್ಲವು. ನೀನು ಸ್ವಾಮಿಯಾಗಿ ದಕ್ಷತೆಯಿಂದ ರಾಜ್ಯಭಾರ ನಡೆಸುತ್ತಿರುವಾಗ ಅಮಂಗಳವು ಎಲ್ಲಿಂದ ಬರಲು ಸಾಧ್ಯ? ಎಲೈ ಭೂವಲ್ಲಭನೆ, ಸೂರ್ಯನು ಬಾನಲ್ಲಿ ಪ್ರಕಾಶಿಸುತ್ತಿರಲು ಕತ್ತಲೆಯು ಮೊತ್ತವು ಜನರ ಕಣ್ಣನ್ನು ಮುಸುಕಲು ಸಾಧ್ಯವೆ? ಸರ್ವ ಶಕ್ತನಾದ ನೀನು ಅಧಿಕಾರರೂಢನಾಗಿ ವಿಜೃಂಭಿಸುತ್ತಿರಲು ಸರ್ವತ್ರ ಸಂತೋಷವಲ್ಲದೆ ದುಃಖವೆಲ್ಲಿದೆ, ಅಶುಚಿ, ಅಸ್ವಾಸ್ಥ್ಯಕ್ಕೆ ಸ್ಥಾನವೆಲ್ಲಿದೆ, ಆಡಳಿತೆಯ ಯಂತ್ರಗಳು ಶುಚೀ ಭೂತವಾಗಿವೆ. ಲಂಚ, ವಂಚನೆಗಳ ನೆರಳೂ ಸೋಂಕುವಂತಿಲ್ಲ. ನೀನು ಅನಾಥರಿಗೆ ಸನಾಥನು, ಸಾಕ್ಷಾತ್ ಈಶ್ವರನು (ಪ್ರಭು) ನೀನು ರಾಜನಾಗಿರಲು ಪ್ರಜೆಗಳಿಗೆ ಸರ್ವತ್ರ ಮಂಗಳವಲ್ಲದೆ ಅಮಂಗಳ ಬಾರದು. ಕೃಷ್ಣಪಕ್ಷದ ಕತ್ತಲೆಯೂ (ಅಮಾವಾಸ್ಯೆಯ ಕತ್ತಲೂ) ಸೂರ್ಯನ ಬಿಸಿಲಿಗೆ ಮೋರೆ ತೋರುವುದೇ ರಾಜನಾದ ನೀನು ಹೇಗೆ ಸಂತೋಷದಲ್ಲಿರುವೆಯೋ ಹಾಗೆಯೇ ಪ್ರಜೆಗಳಾದ ನಾವೂ ಸಂತೋಷದಲ್ಲಿರುವೆವು, ಸಾಮ್ರಾಜ್ಯದ ಎಲ್ಲೆಡೆ ಶಾಂತಿಸಂಭಿಕ್ಷೆಗಳು, ಸಂತೋಷಗಳು ಸೌಹಾರ್ದ ನೆಲಸಿರುತ್ತವೆ.''

ಅವ—ಉಪಸರ್ಗ ಏತು, ಇತಾತ್—ಇತಾಂ—ಯಂತು । ಇಹಿ, ಇತಾತ್—ಇತಂ—ಇತ । ಅಯಾನಿ—ಅಯಾವ—ಅಯಾಮ ॥ ಇಣ್—ಗತೌ—ಲೋಟ್—ಮ.ಪು.ಏ. ॥ ಕಲ್ಪೇತ—ಕಲ್ಪೇಯಾತಾಂ—ಕಲ್ಪೇರನ್ । ಕಲ್ಪೇಥಾಃ—ಕಲ್ಪೆಯಾಥಾಂ—ಕಲ್ಪೇಧ್ವಮ್ । ಕಲ್ಪೇಯ—ಕಲ್ಪೇವಹಿ—ಕಲ್ಪೇಮಹಿ ॥ ಕ್ಲೃಪೂ—ಸಾಮರ್ಥ್ಯೇ—ವಿಧಿಲಿಙ್—ಪ್ರ.ಪು. ಏ. ॥

ಹೇ ರಾಜನ್ = ಎಲೈ ರಾಜನೇ, ಸರ್ವತ್ರ = ಗುರುವಿನ ಆಶ್ರಮಾದಿ ಎಲ್ಲಾ ಕಡೆಗಳಲ್ಲೂ, ನಃ = ನಮಗೆ, ವಾರ್ತಂ = ಆರೋಗ್ಯವನ್ನು, (ಸ್ವಾಸ್ಥ್ಯವನ್ನು) ಅವೇಹಿ = ತಿಳಿ, ತ್ವಯಿ = ನೀನು, ನಾಥೇ ಸತಿ = ಸ್ವಾಮಿಯಾಗಿರಲು, ಪ್ರಜಾನಾಂ = ಪ್ರಜೆಗಳಿಗೆ, ಅಶುಭಂ = ಅಮಂಗಳವು, ಕುತಃ = ಎಲ್ಲಿಂದ (ಬರುತ್ತೆ) ಬರಲುಸಾಧ್ಯ) ಸೂರ್ಯೇ = ಸೂರ್ಯನು, ತಪತಿ = ಪ್ರಕಾಶಿಸುತ್ತಿರಲು, ತಮಿಸ್ರಾ = ಕತ್ತಲೆಯು, ಲೋಕಸ್ಯ = ಜನರ, ದೃಷ್ಟೇಃ = ಕಣ್ಣಿಗೆ, ಆವರಣಾಯ = ಕಟ್ಟಲು, ಕಥಂ = ಹೇಗೆ, ಕಲ್ಪೇತ = ಸಮರ್ಥವಾಯಿತು.

ಅಲಂಕಾರ: ದೃಷ್ಟಾಂತ ಅಲಂಕಾರ, ಅಲಂಕಾರಃ ಅರ್ಥಾಂತರನ್ಯಾಸ ಅಲಂಕಾರ.

14. ಭಕ್ತಿಃ ಪ್ರತೀಕ್ಷ್ಯೇಷು ಕುಲೋಚಿತಾ ತೇ ।
ಪೂರ್ವಾನ್ಮಹಾಭಾಗ ! ತಯಾತಿಶೇಷೇ ॥
ವ್ಯತೀತಕಾಲಸ್ತ್ವಹಮಭ್ಯುಪೇತಃ ।
ತ್ವಾಮರ್ಥಿಭಾವಾದಿತಿ ಮೇ ವಿಷಾದಃ ॥ ೧೪ ॥

"ಎಲೈ ಮಹಾತ್ಮನೇ (ಮಹಾಭಾಗನೇ) ಪೂಜ್ಯರಾದವರಲ್ಲಿ ನೀನು ತೋರಿಸುವ ಭಕ್ತಿಯು, ನಿನ್ನ ಪೂರ್ವಜರಿಂದಲೇ ನೀನು ಆನುವಂಶಿಕವಾಗಿ) ರಕ್ತಗತವಾಗಿ) ನಿನ್ನಲ್ಲಿ (ಹರಿದು) ಬಂದಿದೆ. ಅದು ನಿನ್ನಲ್ಲಿ ಶಾಶ್ವತವಾಗಿ ನೆಲೆಗೊಂಡಿದೆ. ಈ ದಿಶೆಯಲ್ಲಿ ನಿನ್ನ ಹಿರಿಯರನ್ನು (ಪೂರ್ವಜರನ್ನು) ಮೀರಿಸಿರುವೆ. ನಾನೀಗ ಧನವನ್ನು ಅಪೇಕ್ಷಿಸಿ ಯಾಚಕನಾಗಿ ನಿನ್ನ ಬಳಿಗೆ ಬಂದಿರುವೆನು, ನೀನಾದರೋ ಸರ್ವಸ್ವವನ್ನು ದಾನಮಾಡಿದಮೇಲೆ ನಾನು ಬಂದಿರುವುದೇ ಒಂದು ಒಗಟಾಗಿದೆ. ಸತ್ಪಾತ್ರರಿಗೆ ಎಲ್ಲವನ್ನೂ ಕೊಟ್ಟು ನಿನ್ನಲ್ಲಿ ನಿನ್ನ ದೇಹ ಮಾತ್ರ ಉಳಿದಿದೆ. ಸಾರ್ವಭೌಮನೆ, ಈಗ ಕಾಲ ಮಿಂಚಿಹೋಗಿದೆ. ವಿಳಂಬ ಮಾಡಿ ಯಾಚಿಸಲು ಬಂದಿರುವ ನನಗೆ ನಾನು ಬಂದಿರುವುದೇ ತಪ್ಪೆಂದು ತಿಳಿದಿದೆ. ಅದಕ್ಕಾಗಿ ವಿಷಾದಿಸುತ್ತೇನೆ."

ಅನ್ವಯ:—ಮಹಾಭಾಗ ಪ್ರತೀಕ್ಷ್ಯೇಷು ಭಕ್ತಿಃ ತೇ ಕುಲೋಚಿತಾ ತಯಾ ಪೂರ್ವಾನ್ ಅತಿಶೇಷೇ । ವ್ಯತೀತಕಾಲಃ ತು ಅಹಂ ತ್ವಾಮ್ ಅರ್ಥಿಭಾವಾತ್ ಅಭ್ಯುಪೇತಃ ಇತಿ ಮೇ ವಿಷಾದಃ ॥

ಕುಲೇನ ಉಚಿತಾ । ವ್ಯತೀತಃ ಕಾಲಃ ಯಸ್ಯ ಸಃ ॥ ಅರ್ಥಿನಃ ಭಾವಃ । ತಸ್ಮಾತ್ । ಅತಿ — ಉಪಸರ್ಗ । ಶೇತೇ—ಶಯಾತೇ—ಶೇರತೇ । ಶೇಷೇ—ಶಯಾಥೇ—ಶೇಧ್ವೇ । ಶಯೇ—ಶೇವಹೇ—ಶೇಮಹೇ ॥ ಶೀಙ್ = ಸ್ವಪ್ನೇ—ಲಟ್—ಮ.ಪು.ಏ. ॥

ಪ್ರತೀಕ್ಷ್ಯೇಷು = ಪೂಜ್ಯರಲ್ಲಿ, ಭಕ್ತಿಃ = ಪ್ರೀತಿವಿಶೇಷವು, ತೇ = ನಿನಗೆ, ಕುಲೋಚಿತಾ = ವಂಶದಿಂದಲೇ ಬಂದಿದೆ, ಹೇ ಮಹಾಭಾಗ = ಎಲೈ ಮಹಾತ್ಮನೇ, ತಯಾ = ಆ ಭಕ್ತಿಯಿಂದ, ಪೂರ್ವಾನ್ = ನಿನ್ನ ಪೂರ್ವಜರನ್ನು, ಅತಿಶೇಷೇ = ಮೀರಿರುತ್ತೀಯೆ, ಅಹಂ = ನಾನು, ವ್ಯತೀತಕಾಲಃ = ಅತಿಕ್ರಮಿಸಿದ ಕಾಲವುಳ್ಳವನಾಗಿ, ಅರ್ಥಿಭಾವಾತ್ = ಯಾಚಕಭಾವದಿಂದ. ತ್ವಾಂ = ನಿನ್ನನ್ನು, ಅಭ್ಯುಪೇತಃ = ಹೊಂದಿರುತ್ತೇನೆ, ಇತಿ = ಹೀಗೆಂದು. ಮೇ = ನನಗೆ, ವಿಷಾದಃ = ವ್ಯಥೆಯಾಗಿದೆ.

**15. ಶರೀರಮಾತ್ರೇಣ ನರೇಂದ್ರ ತಿಷ್ಠನ್ ।**
**ಆಭಾಸಿ ತೀರ್ಥಪ್ರತಿಪಾದಿ ತದ್ರ್ಧಿಃ ॥**
**ಆರಣ್ಯಕೋಪಾತ್ತ ಫಲಪ್ರಸೂತಿಃ ।**
**ಸ್ತಂಭೇನ ನೀವಾರ ಇವಾವಶಿಷ್ಟಃ ॥ ೧೫ ॥**

ಹೇ ನರೇಂದ್ರ (ನರೋತ್ತಮ) ನೀನಿಂದು ನಿನ್ನ ಧನಕನಕಾದಿ ಸರ್ವಸ್ವಗಳನ್ನು ಸತ್ಪಾತ್ರರಿಗೆ ದಾನಮಾಡಿ, ನೀವಾರಧಾನ್ಯದ ಸಸಿಯಂತೆ ದೇಹ ಮಾತ್ರದಿಂದ ಕಂಗೊಳಿಸುತ್ತಿರುವೆ. ಪುಣ್ಯಕ್ಷೇತ್ರಕ್ಕೆ ಬಂದ ಭಕ್ತರು ಪವಿತ್ರ ತೀರ್ಥವನ್ನು ತಮ್ಮ ಪಾತ್ರೆಯಲ್ಲಿ ಒಯ್ಯುವಂತೆ ಸತ್ಪಾತ್ರರು ನಿನ್ನಲ್ಲಿರುವ ಧನವನ್ನು (ಅರ್ಥವನ್ನು) ಪೂರ್ಣವಾಗಿ ಒಯ್ದಿರುವರು. ಹೇ ದಿವ್ಯಪುರುಷ, ನವಣೆ, ಜೋಳ, ಭತ್ತದ ಪೈರು, ಪರಿಪಕ್ವವಾದ ಧಾನ್ಯದ ತೆನೆಗಳನ್ನು ಆಶ್ರಮವಾಸಿಗಳಿಗೆ ಕಾಡಿನಲ್ಲಿ ವಾಸಿಸುವ ಸಮಸ್ತಜನರಿಗೆ (ಅರಣ್ಯಕರಿಗೆ) ಅರ್ಪಿಸಿ ಕೊನೆಗೆ ಬರೀ ಕಾಂಡಭಾಗದಿಂದ ಕೂಡಿರುವಂತೆ ನೀನಿಂದು ಸತ್ಪಾತ್ರರಿಗೆ ಸರ್ವಸ್ವವನ್ನು ಧಾರೆಯೆರೆದು ಶರೀರಮಾತ್ರದಿಂದ (ವಪು, ಕಾಯ) ಶೋಭಿಸುತ್ತಿರುವೆ.

ಅನ್ವಯ :—ನರೇಂದ್ರ, ತೀರ್ಥಪ್ರತಿಪಾದಿತರ್ದ್ಧಿಃ ಶರೀರಮಾತ್ರೇಣತಿಷ್ಠನ್ ಆರಣ್ಯಕೋಪಾತ್ತಫಲಪ್ರಸೂತಿಃ ಸ್ತಂಭೇನ ಅವಶಿಷ್ಟಃ ನೀವಾರಃ ಇವ ಆಭಾಸಿ ॥

**ಕೇವಲಂ ಶರೀರಂ—ಶರೀರಮಾತ್ರಂ** । ತೇನ । ತೀರ್ಥೇಷು ಪ್ರತಿಪಾದಿತಾ । ತೀರ್ಥ ಪ್ರತಿಪಾದಿತಾ ಋದ್ಧಿಃ ಯೇನ ಸಃ । ತೀರ್ಥಪ್ರತಿಪಾದಿತರ್ದ್ಧಿಃ ॥ ಅರಣ್ಯೇಭವಾಃ— ಆರಣ್ಯಕಾಃ । ಆರಣ್ಯಕೈಃ ಉಪಾತ್ತಾ। ಫಲಮೇವ ಪ್ರಸೂತಿಃ । ಆರಣ್ಯಕೋಪಾತ್ತಾ ಫಲಪ್ರಸೂತಿಃ ಯಸ್ಯ ಸಃ । ಆರಣ್ಯಕೋಪಾತ್ತಫಲಪ್ರಸೂತಿಃ । ಆಙ್—ಉಪಸರ್ಗ । ಭಾಸಿ—ಭಾತಃ—ಭಾಂತಿ । ಇತ್ಯಾದಿ । ಭಾದೀಪ್ತೌ—ಲಟ್—ಮ.ಪು.ಏ. ॥

ಹೇ ನರೇಂದ್ರ= ಎಲೈ ರಾಜನೇ, ತೀರ್ಥಪ್ರತಿಪಾದಿತರ್ದ್ಧಿಃ = ಸತ್ಪಾತ್ರರಲ್ಲಿ ದಾನ ಮಾಡಿದ ಸಂಪತ್ತುಳ್ಳ, ಶರೀರಮಾತ್ರೇಣ = ಕೇವಲ ಶರೀರದಿಂದ, ತಿಷ್ಠನ್ = ಇರುವ ನೀನು, ಆರಣ್ಯ ಕೋಪಾತ್ತಫಲಪ್ರಸೂತಿಃ = ಅರಣ್ಯವಾಸಿಗಳಿಂದ ಸ್ವೀಕರಿಸಿದ ಫಲದ ತೆನೆಗಳುಳ್ಳ, ಸ್ತಂಭೇನ = ಕಾಂಡಭಾಗದಿಂದ, ಅವಶಿಷ್ಟಃ = ಉಳಿದಿರುವ, ನೀವಾರ ಇವ = ನವಣೆ ಧಾನ್ಯದ ಸಸಿಯಂತೆ = ಆಭಾಸಿ = ಶೋಭಿಸುತ್ತಿರುವಿ.

**16. ಸ್ಥಾನೇಭವಾನೇಕನರಾಧಿಪಃ ಸನ್ ।**
**ಅಕಿಂಚನತ್ವಂ ಮಖಜಂ ವ್ಯನಕ್ತಿ॥**
**ಪರ್ಯಾಯ ಪೀತಸ್ಯ ಸುರೈರ್ಹಿಮಾಂಶೋಃ ।**
**ಕಲಾಕ್ಷಯಃ ಶ್ಲಾಘ್ಯತರೋ ಹಿ ವೃದ್ಧೇಃ** ॥ ೧೬ ॥

ಎಲೈ ರಾಜನ್, ಸಾರ್ವಭೌಮನಾದ ನೀನು ವಿಶ್ವಜಿತ್ ಯಾಗವನ್ನು ಮಾಡಿ ಧನ್ಯನಾಗಿರುವಿ, ಸರ್ವಸ್ವವನ್ನು ದಾನವಮಾಡಿರುವ ನೀನು ಇದೀಗ ಮಣ್ಣಿನ ಪಾತ್ರೆಯಲ್ಲಿ ಅರ್ಘ್ಯಪಾದ್ಯಗಳ ಆತಿಥ್ಯವನ್ನು ನೀಡಿರುವೆ. (ಉದಾತ್ತ ಪುರುಷೋತ್ತಮ) ಹೇಗೆ ಅಮೃತಕಲಾನಿಧಿಯಾದ ಚಂದ್ರಮನ ಕಲೆಗಳನ್ನು ಕೃಷ್ಣಪಕ್ಷದ ಹದಿನೈದು ದಿನಗಳಲ್ಲಿ ದೇವತೆಗಳು ಕುಡಿದು ಕಲಾಕ್ಷಯವನ್ನುಂಟು ಮಾಡಿದರೂ, ಅವನು ಶುಕ್ಲಪಕ್ಷದ ಅವಧಿಯಲ್ಲಿ ಪುನಃ ಶೋಭಾಯಮಾನನಾಗಿ ಬೆಳಗುವನು, ಕಲಾಭಿವೃದ್ಧಿಯ ಅವಸ್ಥೆಗಿಂತಲೂ ಶ್ಲಾಘ್ಯವಾಗಿರುವನು. ಪ್ರಥಮದಿನ ವಹ್ನಿ, ಎರಡನೆಯದಿನ ರವಿ, ವಿಶ್ವೇದೇವರು ಮೂರನೆಯ ದಿನ ನಾಲ್ಕರಂದು ಸಲಿಲಾಧಿಪ (ವರುಣ), ಐದನೆಯ ದಿನ ವಷಟ್ಕಾರ, ಷಷ್ಠಿಯಂದು ವಾಸವ (ಇಂದ್ರ), ಸಪ್ತಮಿಯಂದು ಯಮ್ಮಷಯೋ, ಅಷ್ಟಮಿಯಂದು ಏಕಪಾತ, ನವಮಿ ವಾಸರೇ ಯಮ, ದಶಮಿದಿನ ವಾಯು, ಉಮೆ ಏಕಾದಶಿಯಂದು, ದ್ವಾದಶಿಯಂದು ಪಿತೃದೇವತೆಗಳು, ತ್ರಯೋದಶಿಯಂದು ಧನಾಧ್ಯಕ್ಷನಾದ ಕುಬೇರ, ಚತುರ್ದಶಿಯಂದು ಉಮಾಪತಿಯಾದ ಪಶುಪತಿ, ಹದಿನೈದನೆಯ ದಿನ ಪ್ರಜಾಪತಿ ಕ್ರಮವಶ್ಯಾಗಿ ಪಾನಮಾಡುತ್ತಲಿರುವರು. ಹೀಗೆ ಶ್ರೇಷ್ಠರಾದ ದೇವಾದಿದೇವತೆಗಳಿಗೆ ಪ್ರಿಯವಾದ ಅಮೃತವನ್ನು ದಾನಮಾಡಿ ಚಂದ್ರಮನು ಕ್ಷೀಣದಶೆ ಹೊಂದಿದರೂ ಶ್ಲಾಘ್ಯನೆನಿಸಿದನು. ಅವನು ಶುಕ್ಲಪಕ್ಷದಲ್ಲಿ ಪುನಃ ಅಮೃತಕಲೆಗಳನ್ನು ವೃದ್ಧಿಗೊಳಿಸಿದರೂ ಕೃಷ್ಣಪಕ್ಷದಲ್ಲೇ ಅಧಿಕ ಶ್ಲಾಘ್ಯನೆನಿಸಿರುವನು (ಪರೋಪಕಾರಮಾಡಿ ಸೊರಗಿದ (ಬತ್ತಿದ) ನದಿಯಂತೆ), ಹಾಗೆಯೇ ನೀನು ಸತ್ಪಾತ್ರರಿಗೆ ದಾನಮಾಡಿ ದಾರಿದ್ರ್ಯಾವಸ್ಥೆಯನ್ನು

ಹೊಂದಿದರೂ (ಧರ್ಮಾರ್ಥಕ್ಷೀಣಕೋಶಸ್ಯ ಕ್ಷೀಣತ್ವ ಶೋಭತೇ) ಅಧಿಕವಾದ ಯಶಸ್ಸನ್ನು ಸಂಪಾದಿಸಿ ಶೋಭಿಸುತ್ತಿರುವೆ. ಅದು ಇತರರಿಗೆ ಲಭ್ಯವಿಲ್ಲ (ಅಮೃತ ಸಂಕ್ಷಯವು ವೃದ್ಧಿಯಿಂ ಶೋಭೆಪಡೆವಂತೆ).

ನರಾಣಾಂ ಅಧಿಪಃ। ಏಕಶ್ಚಾಸೌ ನರಾಧಿಪಶ್ಚ॥ ನಾಸ್ತಿ ಕಿಂಚನ ಯಸ್ಯ ಸಃ ಅಕಿಂಚನಃ। ತಸ್ಯ ಭಾವಃ—ಅಕಿಂಚನತ್ವಂ। ಮಖಾತ್ ಜಾತಂ॥ ಪರ್ಯಾಯೇಣ ಪೀತಃ। ತಸ್ಯ॥ ಕಲಾನಾಂ ಕ್ಷಯಃ॥ ವಿ—ಉಪಸರ್ಗ। ಅನಕ್ತಿ—ಅಂಕ್ತಃ—ಅಂಜಂತಿ॥ ಅನಕ್ಷಿ—ಅಂಕ್ಥಃ—ಅಂಕ್ಥ। ಅನಜ್ಮಿ—ಅಂಜ್ವಃ—ಅಂಜ್ಮಃ॥ ಅಂಜೂ—ವ್ಯಕ್ತಿಮರ್ಷಣ ಕಾಂತಿ ಗತಿಷು—ಲಟ್—ಪ್ರ.ಪು.ಏ.॥

ಭವಾನ್ = ನೀನು, ಏಕನರಾಧಿಪಃ ಸನ್ = ಚಕ್ರವರ್ತಿಯಾಗಿ, ಮಖಜಂ = ಯಾಗದಿಂದ ಉಂಟಾದ, ಅಕಿಂಚನತ್ವಂ = ದಾರಿದ್ರ್ಯವನ್ನು, ವ್ಯನಕ್ತಿ = ಪ್ರಕಾಶಪಡಿಸುತ್ತಿರುವಿ, ಸ್ಥಾನೇ = ಇದು ಯುಕ್ತವು, ಸುರೈಃ = ದೇವತೆಗಳಿಂದ, ಪರ್ಯಾಯಪೀತಸ್ಯ = ಕ್ರಮವಾಗಿ ಪಾನಮಾಡಿದ, ಹಿಮಾಂಶೋಃ = ಚಂದ್ರನ, ಕಲಾಕ್ಷಯಃ = ಕಲೆಗಳ ಕ್ಷೀಣಗೊಳ್ಳುವ ಅವಸ್ಥೆಯು, ವೃದ್ಧೇ = ಕಲಾಭಿವೃದ್ಧಿಯ ಅವಸ್ಥೆಗಿಂತಲೂ, ಶ್ಲಾಘ್ಯತರಃ ಹಿ = ಅತ್ಯುತ್ತಮವಷ್ಟೆ?

**17. ತದನ್ಯತಸ್ತಾವದನನ್ಯಕಾರ್ಯಃ।**
**ಗುರ್ವರ್ಥಮಾಹರ್ತುಮಹಂ ಯತಿಷ್ಯೇ॥**
**ಸ್ವಸ್ತ್ಯಸ್ತು ತೇ ನಿರ್ಗಲಿತಾಂಬುಗರ್ಭಂ।**
**ಶರದ್ಘನಂ ನಾರ್ದತಿ ಚಾತಕೋಽಪಿ** ॥ ೧೭ ॥

ಹೇ ಅತಿಪೂಜಕನಾದ ದೊರೆಯೇ, ನೀನು ವಿಶ್ವದ ಶ್ರೇಷ್ಠದಾನಿಯೆಂಬುದನ್ನು ಬಲ್ಲೆ, ನಾನು ಗುರುಧನಾರ್ಜನೆಗೆ ಬಂದಿರುವುದು ದಿಟವಾದರೂ ನಿರ್ಧನನಾದ ನಿನ್ನನ್ನು ಕೇಳುವುದು ಯುಕ್ತವಲ್ಲ, ಅದಕ್ಕಾಗಿ ಬೇರೆ ಮಾರ್ಗವನ್ನು ಹುಡುಕುವೆನು. ಇತರ ದಾನಿಗಳ ಸಹಾಯವನ್ನು ಬಯಸುವೆನು. ಯಾವಾಗಲೂ ಮೇಘದ ಬರವನ್ನು ಇದಿರು ನೋಡುವ ಚಾತಕಪಕ್ಷಿಯು ಶರತ್ಕಾಲದ ಮೇಘವನ್ನು ನೋಡಿ ಸಂತುಷ್ಟವಾದರೂ ನೀರನ್ನು ಯಾಚಿಸುವುದಿಲ್ಲ. ಏಕೆಂದರೆ ನೀರನ್ನು ಸುರಿಸಿ ಖಾಲಿಯಾಗಿದೆ ಶರತ್ಕಾಲದ ಮೇಘ. ಇನ್ನು ನನ್ನ ಪಾಲಿಗಿರುವ ಒಂದೇ ಒಂದು ಕಾರ್ಯವೆಂದರೆ, ದಾನಿಯಾದ ಇತರರನ್ನು ಪ್ರಾರ್ಥಿಸಿ ಹಣವನ್ನು ಸಂಗ್ರಹಿಸುವುದು. ನಿನಗಿನ್ನು ಮಂಗಳವಾಗಲಿ.''

ನ ವಿದ್ಯತೇ ಅನ್ಯತ್ ಕಾರ್ಯಂ ಯಸ್ಯ ಸಃ। ಅನನ್ಯಕಾರ್ಯಃ। ಗುರೋಃ ಅರ್ಥಃ। ತಮ್॥ ನಿರ್ಗಲಿತಂ ಚ ತತ್ ಅಂಬು ಚ। ನಿರ್ಗಲಿತಾಂಬು। ಏವ ಗರ್ಭಃ ಯಸ್ಯ ಸಃ—ನಿರ್ಗಲಿತಾಂಬುಗರ್ಭಃ। ತಂ॥ ಶರಧ್ಘನಃ। ತಂ॥ ಯತಿಷ್ಯತೇ—ಯತಿಷ್ಯೇತೇ—ಯತಿಷ್ಯಂತೇ। ಇತ್ಯಾದಿ। ಯತೀ—ಪ್ರಯತ್ನೇ—ಲೃಟ್—ಉ.ಪು.ಏ.॥ ಅರ್ದತಿ—ಅರ್ದ—ಗತೌ, ಯಾಚನೇಚ—ಲೃಟ್—ಪ್ರ.ಪು.ಏ.॥

ತತ್ = ಆದುದರಿಂದ, ತಾವದನನ್ಯಕಾರ್ಯಃ = ಇತರ ಯಾವ ಕೆಲಸವೂ ಇಲ್ಲದ, ಅಹಂ = ನಾನು. ಅನ್ಯತಃ = ಇತರರಿಂದ, ಗುರ್ವರ್ಥ = ಗುರುವಿನ ದಕ್ಷಿಣೆಯ ಹಣವನ್ನು

(ವಿದ್ಯಾವೇತನ) ಆಹರ್ತುಂ = ಸಂಪಾದಿಸಲು, ಯತಿಷ್ಯೇ = ಪ್ರಯತ್ನಿಸುವೆನು, ತೇ = ನಿನಗೆ, ಸ್ವಸ್ತಿ= ಮಂಗಳವು, ಅಸ್ತು= ಆಗಲಿ, ಚಾತಕಃ ಅಪಿ = ಚಾತಕಪಕ್ಷಿಯಾದರೂ. ನಿರ್ಗಲಿತಾಂಬುಗರ್ಭಂ = ಸುರಿದುಹೋದ ನೀರಿನಿಂದ ಖಾಲಿಯಾಗಿರುವ ಮೋಡ, ಶರದ್ಘನಂ = ಶರತ್ಕಾಲದ ಮೋಡವನ್ನು, ನ ಆರ್ದತಿ = ಬೇಡುವುದಿಲ್ಲ.

ಅಲಂಕಾರ :—ದೃಷ್ಟಾಂತ ಅಲಂಕಾರ.

**18. ಏತಾವದುಕ್ತ್ವಾ ಪ್ರತಿಯಾತುಕಾಮಂ ।**
**ಶಿಷ್ಯಂ ಮಹರ್ಷೇರ್ನೃಪತಿರ್ನಿಷಿಧ್ಯ ॥**
**ಕಿಂ ವಸ್ತು ವಿದ್ವನ್ ಗುರವೇ ಪ್ರದೇಯಂ ।**
**ತ್ವಯಾ ಕಿಯದ್ವೇತಿ ತಮನ್ವಯುಂಕ್ತ ॥ ೧೮ ॥**

ಈ ತೆರ ನುಡಿದು ವರತಂತು ಮುನಿಯ ಶಿಷ್ಯನಾದ ಕೌತ್ಸಮುನಿಯು ಹೊರಡಲು ದ್ಯುಕ್ತನಾದನು. ಆಗ ಆತನನ್ನು ತಡೆದು ಆ ನೃಪನು "ಎಲೈ ಋಷಿಶ್ರೇಷ್ಠನೇ. ನೀನು ನಿನ್ನ ಗುರುವಿಗೆ ಗುರುದಕ್ಷಿಣೆಯಾಗಿ ಸಲ್ಲಿಸಬೇಕೆಂದಿರುವ ಧನವೆಷ್ಟು. ಅದನ್ನು ತಿಳಿಸದೇ ಹೋಗುವುದು ಯುಕ್ತವಲ್ಲ. ಎಲೈ ಜ್ಞಾನಸಂಪನ್ನನೇ, ನಾನು ಅದನ್ನು ಹೊಂದಿಸಿ ಕೊಡಲು ಸಮರ್ಥನಾಗಲಾರೆನೇ ?"

ಪ್ರತಿಯಾತುಂ ಕಾಮಃ ಯಸ್ಯ ಸಃ । ತಮ್ ॥ ಮಹಾಂಶ್ಚಾಸೌ ಋಷಿಶ್ಚ । ತಸ್ಯ ॥ ನೃಣಾಂ ಪತಿಃ ॥ ಅನು—ಉಪಸರ್ಗ. ಅಯುಂಕ್ತ—ಅಯುಂಜಾತಾಂ—ಅಯುಂಜತ । ಅಯುಂಕ್ಥಾಃ—ಅಯುಂಜಾಥಾಂ—ಅಯುಂಗ್ಧ್ವಮ್ । ಅಯುಂಜಿ—ಅಯುಂಜ್ವಹಿ —ಅಯುಂಜ್ಮಹಿ ॥ ಯುಜಿರ್—ಯೋಗೇ—ಲಙ್—ಪ್ರ.ಪು.ಏ. ॥

ಏತಾವತ್=ಇಷ್ಟು ಮಾತನ್ನು, ಉಕ್ತ್ವಾ=ಹೇಳಿ, ಪ್ರತಿಯಾತುಕಾಮಂ = ಹೋಗಲು ಬಯಸುತ್ತಿರುವ, ಮಹರ್ಷೇಃ = ವರತಂತು ಋಷಿಯ, ಶಿಷ್ಯಂ = ಕೌತ್ಸಮುನಿಯನ್ನು, ನೃಪತಿಃ = ರಘುರಾಜನು, ನಿಷಿಧ್ಯ = ತಡೆದು, ಹೇವಿದ್ವನ್ = ಎಲೈಜ್ಞಾನಿಯೇ. ತ್ವಯಾ = ನಿನ್ನಿಂದ, ಗುರವೇ = ಗುರುವಿಗೆ, ಪ್ರದೇಯಂ = ಕೊಡಬೇಕಾದ, ವಸ್ತು = ಪದಾರ್ಥವು, ಕಿಂ = ಯಾವುದು, ಕಿಯತ್‌ವಾ = ಎಷ್ಟು, ಇತಿ = ಈ ರೀತಿಯಾಗಿ, ತಂ = ಆಕೌತ್ಸನನ್ನು, ಅನ್ವಯುಂಕ್ತ = ಪ್ರಶ್ನಿಸಿದನು.

**19. ತತೋ ಯಥಾವದ್ವಿಹಿತಾಧ್ವರಾಯ ।**
**ತಸ್ಮೈಸ್ಮಯಾ ವೇಶವಿವರ್ಜಿತಾಯ ॥**
**ವರ್ಣಾಶ್ರಮಾಣಾಂ ಗುರುವೇ ಸ ವರ್ಣೀ ।**
**ವಿಚಕ್ಷಣಃ ಪ್ರಸ್ತುತಮಾಚಚಕ್ಷೇ ॥ ೧೯ ॥**

ರಘುರಾಜನು ಸರ್ವಸಮರ್ಥನು. ಶಾಸ್ತ್ರೋಕ್ತ ರೀತಿಯಿಂದ ವಿಶ್ವಜಿತ್ ಮಹಾಯಾಗ ವನ್ನು ಕೈಕೊಂಡು ಪೂರ್ಣಗೊಳಿಸಿದ ಪೂಜ್ಯನಾದರೂ ಮಮಕಾರವರ್ಜಿತನು. ಗರ್ವಿತ ನಾಗದೆ ಶಾಂತ ರೀತಿಯಿಂದ ಮೆರೆಯುತ್ತಿದ್ದನು. (ಗರ್ವಶೂನ್ಯನು. ಅಹಂಕಾರ ಶೂನ್ಯನು) ಅವನು ಬ್ರಾಹ್ಮಣಾದಿ ಚಾತುರ್ವರ್ಣ್ಯದ (ನಾಲ್ಕು ಪಂಗಡಗಳ) ರಕ್ಷಕನು·

(ನಿಯಾಮಕನು), ಚತುರ್ವರ್ಣಗಳು ಪರಮಾತ್ಮನ ವರ್ಣಗಳು ಅಥವಾ ಬಣ್ಣಗಳು ಇಲ್ಲವೆ ಛಾಯೆಗಳು. ಆಪರಂಜ್ಯೋತಿಸ್ವರೂಪನ (ಪರಮಾತ್ಮನ) ಅಂಶಗಳು. ರಘುವು ಆ ವಿಭಜಿತ ಮಾನವ ಪಂಗಡಗಳ) ರಕ್ಷಕನು. (ಆರಕ್ಷಕನು, ನಿಯಂತ್ರಣಾಧಿಕಾರಿ) ಪರಮಾತ್ಮನ ಆಜ್ಞೆಯಂತೆ ರಾಜನಾಗಿ ರಕ್ಷಿಸುತ್ತಿರುವನು. ಹಾಗೆಯೆ ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ, ಸನ್ಯಾಸಿಯೆಂಬ ನಾಲ್ಕುವಿಧ ಜನಸ್ತೋಮಕ್ಕೆ ಸಂಬಂಧಪಟ್ಟ ಆಶ್ರಮಧರ್ಮಗಳನ್ನೂ ಅವನೇ ನಿಯಾಮಕನಾಗಿ ಎಲ್ಲರ ಯೋಗಕ್ಷೇಮವನ್ನು ನೋಡಿ ಕೊಳ್ಳುವುದು ರಾಜನಾದ ಅವನ ಕರ್ತವ್ಯವೇ ಆಗಿದೆ. ಹೀಗೆ ಸರ್ವಸಮರ್ಥನಾದ ರಘುಕುಲ ಸಾರ್ವಭೌಮನಿಗೆ ಯಥೋಚಿತವಾಗಿ, ಮಹಾವಿದ್ವಾಂಸನಾದ ಕೌತ್ಸಮುನಿಯು ವಿಷಯವನ್ನು ಅರುಹಲು ಮುಂದಾದನು.

ವಿಹಿತಃ ಅಧ್ವರಃ ಯೇನಸಃತಸ್ಮೈ ॥ ಸ್ಮಯಸ್ಯ ಆವೇಶಃ । ಸ್ಮಯಾವೇಶೇನ ವಿವ ರ್ಜಿತಃ । ತಸ್ಮೈ ॥ ವರ್ಣಾಶ್ಚ ಆಶ್ರಮಾಶ್ಚ । ವರ್ಣಾಶ್ರಮಾಃ । ತೇಷಾಮ್ । ಬ್ರಹ್ಮಚಾರೀ, ಗೃಹಸ್ಥ, ವಾನಪ್ರಸ್ಥ, ಸನ್ಯಾಸೀ ಈ ನಾಲ್ಕು ವರ್ಗದ ಜನರ ಧರ್ಮಗಳೇ ಆಶ್ರಮಗಳು ॥ ವರ್ಣಃ ಅಸ್ಯ ಅಸ್ತಿ ಇತಿ ವರ್ಣೀ ॥ ಆಜ್—ಉಪಸರ್ಗ ಚಚಕ್ಷೇ—ಚಚಕ್ಷಾತೇ ಚಚಕ್ಷಿರೇ—ಚಚಕ್ಷಿಷೇ—ಚಚಕ್ಷಾಥೇ—ಚಚಕ್ಷಿಢ್ವೇ । ಚಚಕ್ಷೇ—ಚಚಕ್ಷಿವಹೇ —ಚಚಕ್ಷಿ ಮಹೇ । ಚಕ್ಷಿಙ್—ವ್ಯಕ್ತಾಯಾಂ—ವಾಚಿ—ಲಿಟ್—ಪ್ರ.ಪು.ಏ ॥

ತತಃ=ಆಮೇಲೆ, ಯಥಾವತ್ = ಯೋಗ್ಯತೆಗೆ ಅನುಸಾರವಾಗಿ, ವಿಹಿತಾಧ್ವರಾಯ = ಶಾಸ್ತ್ರೋಕ್ತವಾದ ಕ್ರಮದಿಂದ ಯಾಗಮಾಡಿದ, ಸ್ಮಯಾವೇಶವಿವರ್ಜಿತಾಯ = ಗರ್ವಾದಿಗಳಿಲ್ಲದಿರುವ, ವರ್ಣಾಶ್ರಮಾಣಾಂ = ಚಾತುರ್ವರ್ಣ್ಯಗಳಿಗೂ, ಬ್ರಹ್ಮ ಚರ್ಯಾದಿ ನಾಲ್ಕು ಆಶ್ರಮಗಳಿಗೂ. ಗುರುವೇ = ನಿಯಾಮಕನಾದ, ತಸ್ಮೈ = ಆ ರಘು ರಾಜನಿಗೆ, ವಿಚಕ್ಷಣಃ = ವಿದ್ವಾಂಸನಾದ, ವರ್ಣೀ = ಬ್ರಹ್ಮಚಾರಿಯಾದ, ಸಃ = ಆ ಕೌತ್ಸಮುನಿಯು. ಪ್ರಸ್ತುತಂ = ಪ್ರಕೃತ ಹೇಳಬೇಕಾದ ವಿಷಯವನ್ನು ಆಚಚಕ್ಷೇ = ಹೇಳಿದನು.

20. ಸಮಾಪ್ತವಿದ್ಯೇನ ಮಯಾ ಮಹರ್ಷಿಃ ।
ವಿಜ್ಞಾಪಿತೋಽಭೂದ್ಗುರು ದಕ್ಷಿಣಾಯೈ ॥
ಸ ಮೇ ಚಿರಾಯಾಸ್ಖಲಿತೋಪಚಾರಾಂ ।
ತಾಂ ಭಕ್ತಿಮೇವಾ ಗಣಯತ್ಪುರಸ್ತಾತ್ ॥ ೨೦ ॥

ನಾನು ನನ್ನ ಗುರುಗಳಾದ ವರತಂತು ಋಷಿಗಳ ಬಳಿ ಸಕಲ ವಿದ್ಯೆಯನ್ನು ಉಪದೇಶ ಗಳ ಮೂಲಕ ಪಡೆದು ವಿದ್ಯಾಭ್ಯಾಸಂಗವನ್ನು ಸಮಾಪ್ತಿಗೊಳಿಸಿದೆನು. ಆ ಬಳಿಕ ಏನು ಗುರುದಕ್ಷಿಣೆಯನ್ನು ಸಲ್ಲಿಸಬೇಕೆಂದು ಆ ಮಹರ್ಷಿಯನ್ನು ಕೇಳಿದೆನು. ಗುರುದಕ್ಷಿಣೆ ಯನ್ನು ಸ್ವೀಕರಿಸುವಂತೆ ಒತ್ತಾಯಮಾಡಿದೆ. ಆಗಲೂ ಋಷಿವರೇಣ್ಯರು ನಾನು ವಿದ್ಯಾಭ್ಯಾಸದ ಅವಧಿಯಲ್ಲಿ ಮಾಡಿದ ಗುರುಸೇವೆ ತೋರಿದ ಅಧಿಕವಾದ ಗುರುಭಕ್ತಿ ಅವುಗಳನ್ನೇ ಗುರುದಕ್ಷಿಣೆಯಾಗಿ ಸ್ವೀಕರಿಸಿರುವೆನೆಂದು ಹೇಳಿದರು. "ನಿನ್ನ ಗುರುಭಕ್ತಿ

ಮೊದಲೇ ಸಂತುಷ್ಟನಾಗಿರುವೆನೆಂದರು. ಇನ್ನು ದಕ್ಷಿಣೆಯ ಮಾತೇಕೆ ಎಂದರು. ಹಾಗೆಯೇ ಪರಿಗಣಿಸಿರುವೆನೆಂದರು. ಬೇರೆ ಯಾವ ಗುರುದಕ್ಷಿಣೆಯೂ ಬೇಡವೆಂದು ಹೇಳಿದರು.

ಸಮಾಪ್ತಾ ವಿದ್ಯಾ ಯೇನ ಸಃ । ಸಮಾಪ್ತವಿದ್ಯಃ । ತೇನ । ಗುರೋಃ ದಕ್ಷಿಣಾ । ತಸ್ಯೈ । ಅಸ್ಖಲಿತಃ ಉಪಚಾರಃ ಯಸ್ಯಾಃ ಸಾ । ಅಸ್ಖಲಿತೋಪಚಾರಾ । ತಾಮ್ ॥ ಅಭೂತ್—ಭೂ—ಸತ್ತಾಯಾಂ—ಲುಙ್—ಪ್ರ.ಪು.ಏ. ॥ ಅಗಣಯತ್ ಅಗಣಯತಾಂ—ಅಗಣಯನ್. । ಇತ್ಯಾದಿ । ಗಣ—ಸಂಖ್ಯಾನೇ—ಲಙ್—ಪ್ರ.ಪು.ಏ. ॥

ಸಮಾಪ್ತವಿದ್ಯೇನ = ಸಂಪೂರ್ಣವಾಗಿ ಮುಗಿಸಿದ ವಿದ್ಯೆಯುಳ್ಳ, ಮಯಾ = ನನ್ನಿಂದ ಮಹರ್ಷಿ = ವರತಂತು ಋಷಿಗಳು ಗುರುದಕ್ಷಿಣಾಯೈ = ಗುರುದಕ್ಷಿಣೆ ಸ್ವೀಕರಿಸಲು, ವಿಜ್ಞಾಪಿತಃ = ಪ್ರಾರ್ಥಿಸಲ್ಪಟ್ಟವರು, ಅಭೂತ್ = ಆದರು, ಸಃ = ಆ ಗುರುವಾದರೋ ಚಿರಾಯ = ಬಹುಕಾಲದವರೆಗೆ, ಅಸ್ಖಲಿತೋಪಚಾರಾಂ = ಎಡೆ ಬಿಡದೆ ಮಾಡಿದ ಸೇವೆಯುಳ್ಳ, ತಾಂ = ಅಧಿಕವಾದ, ಭಕ್ತಿಮೇವ = ಗುರುಭಕ್ತಿಯನ್ನೇ. ಪುರಸ್ತಾತ್ = ಮೊದಲು, ಅಗಣಯತ್ = ಗುರುದಕ್ಷಿಣೆಯನ್ನಾಗಿ ಎಣಿಸಿದನು.

**21. ನಿರ್ಬಂಧಸಂಜಾತರುಷಾರ್ಥಕಾರ್ಶ್ಯಮ್ ।**
**ಅಚಿಂತಯಿತ್ವಾ । ಗುರುಣಾಹಮುಕ್ತಃ ॥**
**ವಿತ್ತಸ್ಯ ವಿದ್ಯಾ ಪರಿಸಂಖ್ಯಯಾ ಮೇ ।**
**ಕೋಟೀಶ್ಚತಸ್ರೋ ದಶ ಚಾಹರೇತಿ** ॥ ೨೧ ॥

ಗುರುವು ವರದಕ್ಷಿಣೆ ಬೇಡಬೇಡವೆಂದರೂ ಕೇಳದೆ ನಾನು ಒತ್ತಾಯ ಪೂರ್ವಕವಾಗಿ ನಿರ್ಬಂಧಿಸಿದೆನು. ಪುನಃಪುನಃ ಒತ್ತಾಯಪೂರ್ವಕವಾಗಿ ಕೇಳಲು ನನ್ನ ಪ್ರಾರ್ಥನೆಯಿಂದ ಅಧಿಕ ಕೋಪಗೊಂಡನು. ನನ್ನ ಬಡತನವನ್ನು ಗಣನೆಗೆ ತಾರದೆ (ನಾನು ಕಡು ಬಡವನೆಂದು ತಿಳಿದಿದ್ದರೂ) ನನಗೆ ಕಲಿಸಿದ ೧೪ ವಿದ್ಯೆಗಳಿಗೆ ಅನುಗುಣವಾಗಿ ೧೪ ಕೋಟಿ ಸುವರ್ಣ ನಾಣ್ಯಗಳನ್ನು ಗುರುದಕ್ಷಿಣೆಯಾಗಿ ಯಾಚಿಸಿದನು. ನಾನು ಆ ಮಹಾತ್ಮನಿಂದ ಆರು ವೇದಾಂಗಗಳು, ನಾಲ್ಕು ವೇದಗಳು, ಮೀಮಾಂಸಾ, ನ್ಯಾಯ, ಪುರಾಣ, ಧರ್ಮಶಾಸ್ತ್ರ ಇವೇ ಮೊದಲಾದ ಹದಿನಾಲ್ಕು (ಚತುರ್ದಶ, ಚತಸ್ರೋದಶ ಚ) ವಿದ್ಯೆಗಳು ಕ್ರಮವತ್ತಾಗಿ ಅಧ್ಯಯನ ನಡೆಸಿ ಕಲಿತ್ತಿದ್ದೆನು.

ನಿರ್ಬಂಧೇನ ಸಂಜಾತಾ । ನಿರ್ಬಂಧ ಸಂಜಾತ ರುಟ್ ಯಸ್ಯ ಸಃ । ನಿರ್ಬಂಧರುಟ್ । ತೇನ ॥ ಅರ್ಥಸ್ಯ ಕಾರ್ಶ್ಯಮ್ ॥ ವಿದ್ಯಾನಾಂ ಪರಿಸಂಖ್ಯಾ । ತಯಾ ॥ ಆಙ್—ಉಪಸರ್ಗ ಹರತು, ಹರತಾತ್—ಹರತಾಂ—ಹರಂತು । ಹರ, ಹರತಾತ್—ಹರತಂ—ಹರತ । ಹರಾಣಿ—ಹರಾವ—ಹರಾಮ ॥ ಹೃಞ್—ಹರಣೇ—ಲೋಟ್— ಮ.ಪು.ಏ. ॥

ನಿರ್ಬಂಧಸಂಜಾತರುಷಾ = ಅತಿ ಪ್ರಾರ್ಥನೆಯಿಂದ ಉಂಟಾದ, ಕೋಪಾವೇಶದಿಂದ, ಗುರುಣಾ = ಗುರುವಿನಿಂದ, ಅರ್ಥಕಾರ್ಶ್ಯಮ್ = (ನನ್ನ) ದಟ್ಟದರಿದ್ರತೆಯನ್ನು (ದಾರಿದ್ರ್ಯವನ್ನು, ಬಡತನವನ್ನು ಅಚಿಂತಯಿತ್ವಾ = ಯೋಚಿಸದೆ. ಅಹಂ = ನಾನು ವಿದ್ಯಾಪರಿಸಂಖ್ಯಯಾ = ವಿದ್ಯೆಗಳ ಸಂಖ್ಯಾನುಸಾರವಾಗಿ ವಿತ್ತಸ್ಯ = ಹಣದ, ಚತಸ್ರಃ = ನಾಲ್ಕು

ದಶ ಚ = ಹತ್ತು, ಕೋಟೀಃ = ಕೋಟಿಗಳನ್ನು, ಮೇ = ನನಗೆ, ಆ ಹರ = ತಂದುಕೊಡು ಇತಿ = ಈ ರೀತಿಯಾಗಿ, ಉಕ್ತಃ = ಹೇಳಿದನು.

**22. ಸೋಽಹಂ ಸಪರ್ಯಾವಿಧಿಭಾಜನೇನ |**
**ಮತ್ವಾ ಭವಂತಂ ಪ್ರಭುಶಬ್ದಶೇಷಮ್ ||**
**ಅಭ್ಯುತ್ಸಹೇ ಸಂಪ್ರತಿನೋಪರೋದ್ಧುಂ |**
**ಅಲ್ಪೇತರತ್ವಾತ್ ಶ್ರುತನಿಷ್ಕ್ರಯಸ್ಯ || ೨೨ ||**

"ಹೇ ರಾಜನ್ ನಾನೀಗ ನಿನ್ನನ್ನು ನಿರ್ಬಂಧಪಡಿಸಲು ಇಚ್ಛಿಸಲಾರೆ. ನಿನ್ನಲ್ಲಿ ಈಗ ಪ್ರಭು ಎಂಬ ಶಬ್ದಮಾತ್ರ ಉಳಿದುಕೊಂಡಿದೆ (ಪ್ರಭುಶಬ್ದಶೇಷಮ್). ನೀನು ಅತಿಥಿ ಸತ್ಕಾರಕ್ಕಾಗಿ ಉಪಯೋಗಿಸಿದ ಮಣ್ಣಿನ ಪಾತ್ರೆಗಳಿಂದ ನಾನು ನಿನ್ನ ದಾರಿದ್ರ್ಯಾವಸ್ಥೆಯನ್ನು ಸಂಪೂರ್ಣವಾಗಿ ತಿಳಿದುಕೊಂಡೆನು. ನನಗೆ ಬೇಕಾಗಿರುವ ದ್ರವ್ಯವನ್ನು ಒದಗಿಸಿ ಕೊಡು ಎಂದು ಒತ್ತಾಯಪೂರ್ವಕ ಕೇಳಲು, ನಿನ್ನನ್ನು ಉಪಟಳಗೊಳಿಸಲು ನಾನೀಗ ಇಷ್ಟಪಡಲಾರೆ.

ಅನ್ವಯ :—ಸೋಹಂ ಸಪರ್ಯಾವಿಧಿಭಾಜನೇನ ಭವಂತಂ ಪ್ರಭುಶಬ್ದಶೇಷಂ ಮತ್ವಾ ಸಂಪ್ರತಿ ಶ್ರುತನಿಷ್ಕ್ರಯಸ್ಯ ಅಲ್ಪೇತರತ್ವಾತ್ ಉಪರೋದ್ಧುಂನ ಅಭ್ಯುತ್ಸಹೇ ||

ಸಪರ್ಯಾವಿಧೇಃ ಭಾಜನಂ | ತೇನ | ಪ್ರಭುಃ ಇತಿ ಶಬ್ದಃ ಪ್ರಭು ಶಬ್ದ ಏವ ಶೇಷಃ ಯಸ್ಯ ಸಃ | ಪ್ರಭುಶಬ್ದಶೇಷಃ | ತಮ್ || ಅಲ್ಪಾತ್ ಇತರಃ ಅಲ್ಪೇತರಸ್ಯ ಭಾವಃ—ಅಲ್ಪೇತರತ್ವಮ್ | ತಸ್ಮಾತ್ || ಶ್ರುತಸ್ಯನಿಷ್ಕ್ರಯಃ | ತಸ್ಯ|| ಅಭಿ + ಉತ್—ಉಪಸರ್ಗಗಳು | ಸಹತೇ—ಸಹೇತೇ—ಸಹಂತೆ | ಸಹಸೇ—ಸಹೇಥೇ—ಸಹಧ್ವೇ | ಸಹೇ—ಸಹಾವಹೇ—ಸಹಾಮಹೇ | ಷಹ—ಮರ್ಷಣೇ—ಲಟ್—ಉ.ಪು.ಏ. ||

ಸಃ ಅಹಂ = ಆ ನಾನು, ಸಪರ್ಯಾವಿಧಿಭಾಜನೇನ = ಅರ್ಘ್ಯಪೂಜಾಪಾತ್ರದಿಂದ, ಭವಂತಂ = ತಮ್ಮನ್ನು, ಪ್ರಭುಶಬ್ದಶೇಷಂ = ಪ್ರಭು ಎಂಬ ಶಬ್ದಮಾತ್ರ ಉಳಿದು, ಮತ್ವಾ = ತಿಳಿದು, ಶ್ರುತನಿಷ್ಕ್ರಯಸ್ಯ = ವಿದ್ಯಾ (ಸಂಖ್ಯೆಯಿಂದ) ಮೊಲ್ಯವು, ಅಲ್ಪೇತರತ್ವಾತ್ = ಅತ್ಯಧಿಕವಾದುದರಿಂದ, ಸಂಪ್ರತಿ = ಈಗ, ಉಪರೋದ್ಧುಂ = ನಿರ್ಬಂಧಪಡಿಸಲು, ನ ಅಭ್ಯುತ್ಸಹೇ = ಉತ್ಸಾಹ ಪಡಲಾರೆ.

**23. ಇತ್ಥಂ ದ್ವಿಜೇನ ದ್ವಿಜರಾಜಕಾಂತಿಃ |**
**ಆವೇದಿತೋ ವೇದವಿದಾಂ ವರೇಣ ||**
**ಏನೋ ನಿವೃತ್ತೇಂದ್ರಿಯವೃತ್ತಿರೇನಂ |**
**ಜಗಾದ ಭೂಯೋ ಜಗದೇಕನಾಥಃ || ೨೩ ||**

ವೇದಾಭ್ಯಾಸಿಯಾದ ಆ ದ್ವಿಜೋತ್ತಮನ ಮಾತನ್ನು ಚಂದ್ರನಂತೆ ಉಜ್ವಲಕಾಂತಿಯಿಂದ ಮೆರೆಯುವ ಆ ರಘುಸಾರ್ವಭೌಮನು ಕೇಳಿದನು. ಆ ಜಗದೇಕನಾಯಕನಾದ ರಾಜೇಂದ್ರನು ಪಾಪವಿದೂರನು. ತ್ರಿಕರಣಶುದ್ಧಿಯುಳ್ಳ ಪರಿಶುದ್ಧಾತ್ಮನು. ಅಂತಹ ಅಂತರಂಗಶುದ್ಧಿಯುಳ್ಳ ನಿರ್ಮಲಾತ್ಮನು ದ್ವಿಜರಾಜನಾದ ಕೌತ್ಸಮುನಿಯನ್ನು ಹೀಗೆ ಪ್ರಶ್ನಿಸಿದನು.

ಅನ್ವಯ :—ಇತ್ಥಂ ವೇದವಿದಾಂ ವರೇಣ ದ್ವಿಜೇನ ದ್ವಿಜರಾಜಕಾಂತಿಃ ಅವಿದಿತಃ ಏನೋ ನಿವೃತ್ತೇಂದ್ರಿಯವೃತ್ತಿಃ ಜಗದೇಕನಾಥಃ ಏನ ಭೂಯಃ ಜಗಾದ ॥

ದ್ವಿಜರಾಜಸ್ಯ ಕಾಂತಿರಿವ ಕಾಂತಿಃ ಯಸ್ಯ ಸಃ ॥ ಇಂದ್ರಿಯಾಣಾಂ ವೃತ್ತಿಃ ಇಂದ್ರಿಯವೃತ್ತಿಃ । ಏನಸಃ ನಿವೃತ್ತಾ ಏನೋ ನಿವೃತ್ತಾ ಇಂದ್ರಿಯವೃತ್ತಿಃ ಯಸ್ಯ ಸಃ । ಏನೋನಿವೃತ್ತೇಂದ್ರಿಯವೃತ್ತಿಃ ॥ ಜಗತಃ ಏಕನಾಥಃ ॥ ವೇದಂ ವಿದಂತಿ ಇತಿ ವೇದವಿದಃ । ತೇಷಾಂ ॥ ಜಗಾದ—ಜಗದತುಃ—ಜಗದುಃ ಇತ್ಯಾದಿ ॥ ಗದ—ವ್ಯಕ್ತಾಯಾಂ ವಾಚಿ ॥ ಲಿಟ್—ಪ್ರ.ಪು.ಏ. ॥

ದ್ವಿಜರಾಜಕಾಂತಿಃ = ಚಂದ್ರನಂತೆ ಉಜ್ವಲಕಾಂತಿ ಇರುವ, ಏನೋ ನಿವೃತ್ತೇಂದ್ರಿಯವೃತ್ತಿಃ = ತ್ರಿಕರಣಶುದ್ಧಿಯುಳ್ಳ, ಜಗದೇಕನಾಥಃ = ಚಕ್ರವರ್ತಿಯಾದ, ವೇದವಿದಾಂ ವರೇಣ, ಶ್ರೋತ್ರಿಯರಲ್ಲಿ ಶ್ರೇಷ್ಠನಾದ, ದ್ವಿಜೇನ = ಕೌತ್ಸಬ್ರಾಹ್ಮಣನಿಂದ, ಇತ್ಥಂ = ಈ ರೀತಿಯಾಗಿ, ಆವೇದಿತಃ = ತಿಳಿಸಲ್ಪಟ್ಟು, ಏನಂ = ಈ ಕೌತ್ಸನನ್ನು ಕುರಿತು, ಭೂಯಃ = ತಿರುಗಿಯೂ, ಜಗಾದ = ಹೇಳಿದನು.

**24. ಗುರ್ವರ್ಥಮರ್ಥೀ ಶ್ರುತಪಾರದೃಶ್ವಾ ।**
**ರಘೋಃ ಸಕಾಶಾದನವಾಪ್ಯ ಕಾಮಮ್ ॥**
**ಗತೋ ವದಾನ್ಯಾಂತರಮಿತ್ಯಯಂ ಮೇ ।**
**ಮಾ ಭೂತ್ಪರೀವಾದನವಾವತಾರಃ** ॥ ೨೪ ॥

ಶಾಸ್ತ್ರಗಳ ಕೊನೆಯನ್ನು ನೋಡಿರುವ ವೇದವಿದನಾದ ಕೌತ್ಸಮುನಿಯೇ ನಿನ್ನಂತಹ ಸತ್ಪಾತ್ರನು ಗುರುದಕ್ಷಿಣಾರ್ಥಿಯಾಗಿ, ಯಾಚಕನಾಗಿ ಬಂದಿರಲು ಹಾಗೆಯೇ ಬರಿಗೈಯಲ್ಲಿ ಕಳುಹಿಸಲು ನನ್ನ ಮನ ಒಪ್ಪುತ್ತಿಲ್ಲ. ಈ ತನಕ ನನ್ನ ಬಳಿಗೆ ಬಂದವರು ತಮ್ಮ ಇಷ್ಟಾರ್ಥವನ್ನು ಪಡೆಯದೆ ಬೇರೊಬ್ಬ ದಾನಿಯ ಬಳಿಗೆ ಹೋದುದೇ ಇಲ್ಲ. ಇದರಿಂದ ನಾನು ಕೆಟ್ಟ ಅಪವಾದಕ್ಕೆ (ಜನಾಪವಾದಕ್ಕೆ) ಗುರಿಯಾಗುವುದು ಸಹಜ. ಅವನ್ನು ನಾನು ಸಹಿಸೆನು. ಅದನ್ನು ನಾನು ಹೇಗಾದರೂ ಮಾಡಿ ಪರಿಹರಿಸಲೇಬೇಕು. ಇದು ನನ್ನ ಕಾಯಕ (ಕಾಯಕವೇ ಕೈಲಾಸವಲ್ಲವೆ).

ಗುರೋಃ ಇದಂ ಗುರ್ವರ್ಥಮ್ । ಶ್ರುತಸ್ಯ ಪಾರಂ ದೃಷ್ಟವಾನ್—ಶ್ರುತಪಾರದೃಶ್ವಾ । ಅನ್ಯೋ ವದಾನ್ಯಃ ವದಾನ್ಯಾಂತರಂ । ಪರೀವಾದಸ್ಯ ನವಾವತಾರಃ । ಮಾ ಸಂಬಂಧವಿರುವಾಗ ಧಾತುವಿನ ಮೊದಲು ಅಡಾಗಮ ಬರುವುದಿಲ್ಲ, (ಅ)ಭೂತ್—ಭೂ—ಸತ್ತಾಯಾಂ—ಲುಙ್—ಪ್ರ.ಪು.ಏ. ॥

ಶ್ರುತಪಾರದೃಶ್ವಾ = ಶಾಸ್ತ್ರಗಳ ಕೊನೆಯನ್ನು ಕಂಡಿರುವ, ಗುರ್ವರ್ಥಂ = ಗುರುವಿನ ದಕ್ಷಿಣೆಗೋಸ್ಕರ, ಅರ್ಥೀ = ಯಾಚಕನಾಗಿ ಬಂದಿರುವ, ರಘೋಃ ಸಕಾಶಾತ್ = ರಘುವಿನ ಸಮೀಪದಿಂದ, ಕಾಮಂ = ಇಷ್ಟಾರ್ಥವನ್ನು, ಅನವಾಪ್ಯ = ಹೊಂದದೆ, ವದಾನ್ಯಾಂತರಂ = ಇತರ ದಾನಿಯನ್ನು, ಗತಃ = ಹೊಂದಿದವನು, ಇತಿ = ಈ ರೀತಿಯಾದ, ಅಯಂ = ಈ ಪರೀವಾದನವಾವತಾರಃ = ಈ ಅಪವಾದದ ನೂತನ ಆವಿರ್ಭಾವವು, ಮೇ = ನನಗೆ, ಮಾಭೂತ್ = ಆಗದಿರಲಿ.

25. ಸತ್ವಂ ಪ್ರಶಸ್ತೇ ಮಹಿತೇ ಮದೀಯೇ ।
ವಸಂಶ್ಚತುರ್ಥೋಽಗ್ನಿರಿವಾಗ್ನ್ಯಗಾರೇ ॥
ದ್ವಿತ್ರಾಣ್ಯಹಾನ್ಯರ್ಹಸಿ ಸೋಢುಮರ್ಹನ್ ।
ಯಾವದ್ಯತೇ ಸಾಧಯಿತುಂ ತ್ವದರ್ಥಮ್ ॥ ೨೫ ॥

ಎಲೈ ಮಹಾತ್ಮನೇ, ತ್ರೇತಾಗ್ನಿಗಳಿಂದ ಪೂಜಿತವಾದ ನನ್ನ ಪ್ರಸಿದ್ಧವಾದ ಅಗ್ನಿಶಾಲೆಯಲ್ಲಿ ನೀನು ನಾಲ್ಕನೆಯ ಅಗ್ನಿಯಂತೆ ವಾಸಮಾಡುತ್ತಾ, ಕೇವಲ ಒಂದೆರಡು ದಿನಗಳವರೆಗೆ ಸಹನೆಯಿಂದ ನಿರೀಕ್ಷಿಸುತ್ತಿರು. ನನ್ನ ಅಗ್ನಿಶಾಲೆಯಲ್ಲಿ ಮಹಾಪ್ರಕಾಶಮಾನರಾದ ಮೂರು ಮಂದಿ ಅಗ್ನಿದೇವತೆಗಳು ಮೂರು ಜ್ವಾಲೆಗಳಿಂದ ಪ್ರಕಟಗೊಳ್ಳುತ್ತಾ ಸದಾ ನೆಲಸಿರುವರು. ಅವರ ಜೊತೆಗೆ ನಾಲ್ಕನೆಯ ಅಗ್ನಿದೇವನಂತೆ ನೀನು ವಾಸವಾಗಿರು. ಒಂದೆರಡು ದಿನಗಳಲ್ಲಿ ನಾನು ನಿನ್ನ ಇಷ್ಟಾರ್ಥವನ್ನು ಪೂರೈಸಿಕೊಡಲು ಪ್ರಯತ್ನಿಸುವೆನು.

ಅನ್ವಯ :—ಹೇ ಅರ್ಹನ್ ಸತ್ವಂ ಪ್ರಶಸ್ತೇ ಮಹಿತೇ ಮದೀಯೇ ಅಗ್ನ್ಯಗಾರೇ ಚತುರ್ಥಃ ಅಗ್ನಿಃ ಇವ ವಸನ್ ದ್ವಿತ್ರಾಣಿ ಅಹಾನಿ ಸೋಢುಮ್ ಅರ್ಹಸಿ ತಾವತ್ ತ್ವದರ್ಥಮ್ ಸಾಧಯಿತುಂ ಯತೇ ॥

ಚತುರ್ಥಶ್ಚಾಸೌ ಅಗ್ನಿಶ್ಚ ॥ ಅಗ್ನೀನಾಂ ಅಗಾರಃ । ತಸ್ಮಿನ್ ॥ ದ್ವೇ ವಾ ತ್ರೀಣಿ ವಾ ದ್ವಿತ್ರಾಣಿ ॥ ತವ ಅರ್ಥಃ । ತ್ವದರ್ಥಃ । ತಂ ॥ ಯತತೇ—ಯತೇತೇ—ಯತಂತೇ । ಯತಸೇ—ಯತೇಥೇ—ಯತಧ್ವೇ । ಯತೇ—ಯತಾವಹೇ—ಯತಾಮಹೇ । ಯತೀ —ಪ್ರಯತ್ನೇ—ಲಟ್—ಉ.ಪು.ಏ. ॥ ಯಾವತ್ ಎಂಬುದರ ಸಂಬಂಧವಿರುವುದರಿಂದ ಭವಿಷ್ಯದರ್ಥದಲ್ಲಿ ಲಟ್ ಬಂದಿದೆ.

ಸಃ ತ್ವಂ = ಆ ನೀನು, ಮಹಿತೇ = ಪೂಜ್ಯವಾದ, ಪ್ರಶಸ್ತೇ = ಮಂಗಳಕರವಾದ, ಮದೀಯೇ = ನನ್ನ, ಅಗ್ನ್ಯಗಾರೇ = ಅಗ್ನಿಶಾಲೆಯಲ್ಲಿ, ಚತುರ್ಥಃ = ನಾಲ್ಕನೆಯ, ಅಗ್ನಿರಿವ = ಅಗ್ನಿಯಂತೆ. ವಸನ್=ವಾಸಮಾಡುತ್ತಾ, ದ್ವಿತ್ರಾಣಿ = ಎರಡು, ಮೂರು, ಅಹಾನಿ = ದಿನಗಳನ್ನು, ಸೋಢುಂ ಅರ್ಹಸಿ = ಸಹಿಸಿಕೊಳ್ಳಲು ಅರ್ಹನಾಗುವಿ, ಹೇ ಅರ್ಹನ್ = ಹೇ ಪೂಜ್ಯನೆ, ತ್ವದರ್ಥಂ = ನಿನ್ನ ಇಷ್ಟಾರ್ಥವನ್ನು, ಸಾಧಯಿತುಂ = ಸಾಧಿಸಲು, ಯಾವತ್ ಯತೇ = ಪ್ರಯತ್ನಿಸುವೆನು.

26. ತಥೇತಿ ತಸ್ಯಾವಿತಥಂ ಪ್ರತೀತಃ ।
ಪ್ರತ್ಯಗ್ರಹೀತ್ಸಂಗರಮಗ್ರಜನ್ಮಾ ॥
ಗಾಮಾತ್ತಸಾರಾಂ ರಘುರಪ್ಯವೇಕ್ಷ್ಯ ।
ನಿಷ್ಕ್ರಷ್ಟುಮರ್ಥಂ ಚಕಮೇ ಕುಬೇರಾತ್ ॥ ೨೬ ॥

ಚಾತುರ್ವರ್ಣದಲ್ಲಿ ಕೊನೆಯದಾದ (ಅಗ್ರಜನ್ಮನಾದ), ತುರೀಯವರ್ಣವಾದ ಬ್ರಹ್ಮ ವರ್ಣದಲ್ಲಿ ಜನ್ಮತಳೆದಿರುವ ಬ್ರಹ್ಮನಿಷ್ಠನಾದ ಕೌತ್ಸಮುನಿಯು ರಘುಸಾರ್ವಭೌಮನ ಸತ್ಯಪ್ರತಿಜ್ಞೆಯನ್ನು ಕೇಳಿ ಸಂತೋಷಗೊಂಡು ಹಾಗೆಯೇ ಆಗಲೆಂದು ಹೇಳಿ, ಎರಡು ಮೂರು ದಿನ ತಂಗಲು ಒಪ್ಪಿಕೊಂಡನು. ಆದರೆ ಆ ಅಗ್ರಜನ್ಮನಾದ ಕೌತ್ಸಮುನಿಯು ಇಚ್ಛಿತಾರ್ಥವಾಗಿ ಬೇಕಾಗಿರುವ ಧನರಾಶಿಯನ್ನು (ದ್ರವ್ಯರಾಶಿಯನ್ನು) ಪೃಥ್ವೀಪತಿ

ಗಳಿಂದ ಪಡೆಯುವಂತಿರಲಿಲ್ಲ. ವಿಶ್ವಜಿತ್ ಯಾಗದಿಂದ ಪೃಥ್ವಿಯು ಎಲ್ಲಾ ರಾಜರುಗಳಿಂದ ಸಕಲೈಶ್ವರ್ಯ ಪಡೆದುದರಿಂದ ತಿರುಗಿ ಅವರ ಮೇಲೆ ದಿಗ್ವಿಜಯಕ್ಕೆ ಹೊರಡುವಂತಿರಲಿಲ್ಲ. ಭೂಮಿಯು ಸಕಲಸಾರವನ್ನೂ, ಸಂಪತ್ತನ್ನೂ ಹೀರಿ ಭೂಮಿಯು (ಭೂಮಂಡಲವು) ನಿಸ್ಸಾರವಾಗಿರುವುದರಿಂದ ದಿಗ್ವಿಜಯಾದಿಗಳಿಂದ ಪ್ರಯೋಜನ ಪಡೆಯುವಂತಿರಲಿಲ್ಲ. ಹೀಗೆ ಕಾರ್ಯಸಾಧನೆಯಾಗದೆಂದು ಅರಿತು ದೇವತೆಗಳಿಂದ ಯಾಚಿಸಲು ತೀರ್ಮಾನಿಸಿದನು. ಹೀಗೆ ಯೋಚಿಸಿ ಕೊನೆಗೆ ಧನಾಧಿಪತಿಯಾದ ಕುಬೇರನಿಂದಲೇ ಪಡೆಯುವುದು ಸೂಕ್ತವಾದ ಮಾರ್ಗೋಪಾಯವೆಂದು ದೃಢನಿಶ್ಚಯ ಮಾಡಿಕೊಂಡು ಆ ಸಾಮ್ರಾಟನು ಕಾರ್ಯೋನ್ಮುಖನಾದನು.

ಅನ್ವಯ :—ಅಗ್ರಜನ್ಮಾ ಪ್ರತೀತಃ (ಸನ್) ತಸ್ಯ ಅವಿತಥಂ ಸಂಗರಂ ತಥೇತಿ ಪ್ರತ್ಯಗ್ರಹೀತ್ । ರಘುರಪಿ ಗಾಮ್ ಆತ್ತಸಾರಾಮ್ ಅವೇಕ್ಷ್ಯ ಅರ್ಥಂ ಕುಬೇರಾತ್ ನಿಷ್ಕ್ರಷ್ಟುಂ ಚಕಮೇ ॥

ನ ವಿತಥಮ್ । ಅವಿತಥಮ್ ॥ ಆತ್ತಃ ಸಾರಃ ಯಸ್ಯಾಃ ಸಾ । ಆತ್ತಸಾರಾ, ತಾಮ್ ॥ ಪ್ರತಿ—ಉಪಸರ್ಗ ॥ ಅಗ್ರಹೀತ್—ಅಗ್ರಹೀಷ್ಟಾಂ—ಅಗ್ರಹೀಷುಃ । ಅಗ್ರಹೀಃ—ಅಗ್ರಹೀಷ್ಟಂ—ಅಗ್ರಹೀಷ್ಟ । ಅಗ್ರಹೀಷಮ್—ಅಗ್ರಹೀಷ್ವ—ಅಗ್ರಹೀಷ್ಮ ॥ ಗ್ರಹ—ಉಪಾದಾನೇ—ಲುಙ್—ಪ್ರ.ಪು.ಏ. ॥ ಚಕಮೇ—ಚಕಮಾತೇ—ಚಕಮಿರೇ । ಚಕಮಿಷೇ—ಚಕಮಾಥೇ —ಚಕಮಿಧ್ವೇ । ಚಕಮೇ—ಚಕಮಿವಹೇ—ಚಕಮಿಮಹೇ ॥ ಕಮು ಕಾಂತೌ—ಲಿಟ್—ಪ್ರ.ಪು.ಏ. ॥

ಅಗ್ರಜನ್ಮಾ = ಬ್ರಾಹ್ಮಣ ಪಂಗಡದವನಾದ (ವರ್ಣ = ಪಂಗಡ, ವರ್ಗ, ಬಣ್ಣ, ಛಾಯೆ), ಪ್ರತೀತಃ = ಸಂತುಷ್ಟನಾಗಿ, ತಸ್ಯ = ಆ ರಘುವಿನ, ಅವಿತಥಂ = ಅಮೋಘವಾದ (ಎಂದೂ ಸುಳ್ಳಾಗದ), ಸಂಗರಂ = ಪ್ರತಿಜ್ಞೆಯನ್ನು, (ತಾಂ ಗಿರಂ = ಆ ಮಾತನ್ನು ಎಂದು ಪಾಠಾಂತರ) ತಥಾ ಇತಿ = ಹಾಗೆಯೇ ಆಗಲೆಂದು, ಪ್ರತ್ಯಗ್ರಹೀತ್ = ಅಂಗೀಕರಿಸಿದನು, ರಘುರಪಿ = ರಘುರಾಜನು ಸಹ, ಗಾಂ = ಭೂಮಿಯನ್ನು, ಆತ್ತಸಾರಾಂ = (ಸಂಪೂರ್ಣವಾಗಿ) ಸ್ವೀಕರಿಸಿದ ಧನವುಳ್ಳವನಾಗಿ, ಅವೇಕ್ಷ್ಯ = ನೋಡಿ, ಕುಬೇರಾತ್ = ಕುಬೇರನಿಂದ, ಅರ್ಥಂ = ಹಣವನ್ನು, ನಿಷ್ಕ್ರಷ್ಟುಂ = ತರಲು, ಚಕಮೇ = ಬಯಸಿದನು.

**27. ವಸಿಷ್ಠಮಂತ್ರೋಕ್ಷಣಜಾತ್ಪ್ರಭಾವಾತ್ ।**
**ಉದನ್ವದಾಕಾಶಮಹೀಧರೇಷು ॥**
**ಮರುತ್ಸಖಸ್ಯೇವ ಬಲಾಹಕಸ್ಯ ।**
**ಗತಿರ್ವಿಜಘ್ನೇ ನ ಹಿ ತದ್ರಥಸ್ಯ** ॥ ೨೭ ॥

ಕುಬೇರನ ಬಳಿಗೆ ಸಾಮಾನ್ಯರು ಹೋಗಲಾರರು. ಆದರೆ ವಿಶ್ವವಿಜೇತನಾದ ರಘು ಸಾರ್ವಭೌಮನ ಪಟ್ಟಾಭಿಷೇಕ ಸಮಾರಂಭದಲ್ಲಿ, ಕಿರೀಟಧಾರಣೆಯ ವೇಳೆ ಸರ್ವಶ್ರೇಷ್ಠರಾದ ಕುಲಗುರುಗಳಾದ ವಸಿಷ್ಠರೇ ಮಂತ್ರಪೂತ ಜಲವನ್ನು ಪ್ರೋಕ್ಷಿಸಿ ಪೌರೋಹಿತ್ಯವನ್ನು ವಹಿಸಿದ್ದರು. ಆ ಮಹರ್ಷಿಗಳ ಮಂತ್ರಪ್ರೋಕ್ಷಣೆಯ ಪ್ರಭಾವದಿಂದ ಮತ್ತು ಅವರ ಶಿಕ್ಷಣದ ಪ್ರಭಾವದಿಂದ ಸಕಲಮಂತ್ರಾಸ್ತ್ರಗಳು, ಸೃಷ್ಟಿಪಾಲಕರಾದ ದೇವತೆಗಳೂ

ಹಸ್ತಗತರಾಗಿರುವುದರಿಂದ, ಸಹಾಯಕರಾಗಿರುವುದರಿಂದ ರಘುಸಾರ್ವಭೌಮನನ್ನು ಯಾರೂ ಎಲ್ಲಿಯೂ ತಡೆಯುವಂತಿರಲಿಲ್ಲ. ಹೇಗೆ ಗಾಳಿಯ ಸಹಾಯದಿಂದ ಮೇಘವು (ಮೋಡವು) ಎಲ್ಲಿ ಬೇಕೆಂದರಲ್ಲಿ ತನ್ನ ಇಚ್ಛೆಯಂತೆ ಸಂಚರಿಸಬಲ್ಲುದೋ! (ಅಮರಾದ್ರೀ ಬರೆಗಂ ಚರಿಪ್ಪ ರಥದಿಂ) ಅಂತೆಯೇ ರಘುಚಕ್ರವರ್ತಿಯ ರಥವು ಸಾಗರದ ಮೇಲಾಗಲೀ, ಭೂಮಿಯ ಮೇಲಾಗಲೀ, ಅಂಬರದ ಮೇಲಾಗಲೀ, ತಡೆಯಿಲ್ಲದೆ ಗಮಿಸಬಲ್ಲುದು. ಮರುತ್ಸಖನಾದ ಮೋಡವು ವಾಯುವಿನ ಸಹಾಯದಿಂದ ಎಲ್ಲಿ ಬೇಕೆಂದರಲ್ಲಿ ಹೋಗ ಬಲ್ಲುದು. ಅಂತೆಯೇ ರಘುವಿನ ರಥಕ್ಕೆ ಭೂವ್ಯೋಮಾಕಾಶದಲ್ಲಿ, ಸ್ವರ್ಗಮರ್ತ್ಯಪಾತಾಳಾದಿ ಮೂರು ಲೋಕಗಳಲ್ಲಿ ಅಡ್ಡಿಆತಂಕಗಳಿಲ್ಲದೆ ಯಾನಮಾಡಬಹುದು, ಅವನ ಮನದ ಇಚ್ಛೆಯಂತೆ ಚಲಿಸಬಲ್ಲುದು.

ಅನ್ವಯ :—ವಸಿಷ್ಠಮಂತ್ರೋಕ್ಷಣಜಾತ್ ಪ್ರಭಾವಾತ್ ಉದನ್ವದಾಕಾಶಮಹೀಧ ರೇಷು ತದ್ರಥಸ್ಯ ಗತಿಃ ಮರುತ್ಸಖಸ್ಯ ಬಲಾಹಕಸ್ಯ ಇವ ನ ಹಿ ವಿಜಘ್ನೇ ॥

ಮಂತ್ರೇಣ ಉಕ್ಷಣಂ । ಮಂತ್ರೋಕ್ಷಣಂ । ವಸಿಷ್ಠಸ್ಯ ಮಂತ್ರೋಕ್ಷಣಂ । ವಸಿಷ್ಠ ಮಂತ್ರೋಕ್ಷಣಂ । ವಸಿಷ್ಠ ಮಂತ್ರೋಕ್ಷಣೇನಜಾತಃ । ವಸಿಷ್ಠಮಂತ್ರೋಕ್ಷಣಜಃ । ತಸ್ಮಾತ್ ॥ ಉದನ್ವಾಂಶ್ಚ, ಆಕಾಶಂ ಚ, ಮಹೀಧರಾಶ್ಚ । ಉದನ್ವದಾಕಾಶಮಹೀಧರಾಃ। ತೇಷು ॥ ಮರುತಃ ಸಖಾ । ಮರುತ್ಸಖಃ । ತಸ್ಯ। ವಾರೀಣಾಂ ವಾಹಕಃ । ಬಲಾಹಕಃ । ತಸ್ಯ ॥ ತಸ್ಯ ರಥಃ ತದ್ರಥಃ । ತಸ್ಯ ॥ ವಿ—ಉಪಸರ್ಗ । ಜಘ್ನೇ—ಜಘ್ನಾತೇ—ಜಘ್ನಿರೇ ॥ ಇತ್ಯಾದಿ । ಹನ—ಹಿಂಸಾಗತ್ಯೋಃ—ಲಿಟ್ (ಕರ್ಮಣಿ) ಪ್ರ.ಪು.ಏ. ॥

ವಸಿಷ್ಠಮಂತ್ರೋಕ್ಷಣಜಾತ್=ವಸಿಷ್ಠಮಹರ್ಷಿಗಳ ಮಂತ್ರಪ್ರೋಕ್ಷಣೆಯಿಂದ ಉಂಟಾದ, ಪ್ರಭಾವಾತ್ = ಸಾಮರ್ಥ್ಯದಿಂದ, ಮರುತ್ಸಖಸ್ಯ= ಗಾಳಿಯೇ ಸಹಾಯವಾಗಿರುವ, ಬಲಾಹಕಸ್ಯ ಇವ = ಮೋಡದಂತೆ, ತದ್ರಥಸ್ಯ= ಆ ರಘುರಾಜನ ರಥದ, ಗತಿಃ = ಸಂಚಾರವು, ಉದನ್ವದಾಕಾಶಮಹೀಧರೇಷು = ಸಮುದ್ರ, ಆಕಾಶ ಮತ್ತು ಪರ್ವತ ಗಳಲ್ಲಿಯೂ, ನ ವಿಜಘ್ನೇಹಿ = ತಡೆಯಲ್ಪಡುವುದಿಲ್ಲವಷ್ಟೆ?

28. ಅಥಾಧಿಶಿಷ್ಯೇ ಪ್ರಯತಃ ಪ್ರದೋಷೇ ।
ರಥಂ ರಘುಃ ಕಲ್ಪಿತಶಸ್ತ್ರಗರ್ಭವ್ ॥
ಸಾಮಂತಸಂಭಾವನಯೈವ ಧೀರಃ ।
ಕೈಲಾಸನಾಥಂ ತರಸಾ ಜಿಗೀಷುಃ ॥ ೨೮ ॥

ಹೀಗೆ ಕೌತ್ಸಮುನಿಗೆ ಸಮಾಧಾನ ಹೇಳಿ, ರಾತ್ರಿಯಾಗುತ್ತಾ ಬರುತ್ತಿರಲು ಶುಚಿರ್ಭೂತ ನಾದ ಅತಿಪರಾಕ್ರಮಶಾಲಿಯಾದ ರಘು ನರೇಶನು ಉತ್ತರದಿಕ್ಕಿನ ಒಡೆಯನಾದ ದಿಕ್ಪಾಲಕರಲ್ಲಿ ಒಬ್ಬನಾದ ಹರನ ಸಖ ಧನಾಧಿಪತಿಯಾದ ಕುಬೇರನನ್ನು ಗೆಲ್ಲಲು ದೃಢ ನಿರ್ಧಾರ ಮಾಡಿದನು. ಆ ಯಕ್ಷರಾಜನನ್ನು ಒಬ್ಬ ಸಾಮಂತರಾಜನೆಂದೇ (ತಾನು ಅಧಿರಾಜನೆಂದು ಭಾವಿಸಿ ಯುದ್ಧಕ್ಕೆ ಸಿದ್ಧನಾದನು. ಆ ಧನಾಧಿಪತಿಯನ್ನು (ವಿತ್ತಾಧಿಪತಿ) ಸೋಲಿಸಿ ದ್ರವ್ಯವನ್ನು ಪಡೆಯಲು ನಿರ್ಧರಿಸಿ ಶುಚಿರ್ಭೂತನಾಗಿ ತನ್ನ ರಥದಲ್ಲಿ ದಿವ್ಯಾಸ್ತ್ರ ಗಳನ್ನು ಕ್ರಮವತ್ತಾಗಿ ಜೋಡಿಸಿದನು. ಪ್ರಯಾಣ ನಿಮಿತ್ತ ಆ ರಥದಲ್ಲಿ ರಾತ್ರಿಹೊತ್ತು

ಪವಡಿಸಿ ನಿದ್ದೆ ಹೋದನು. ಬ್ರಾಹ್ಮೀಮುಹೂರ್ತದಲ್ಲಿ ಎದ್ದು ಕುಬೇರನ ಮೇಲೆ ಯುದ್ಧ ಮಾಡಲು ದಿವ್ಯಾಸ್ತ್ರ ಸಹಿತ ಸನ್ನದ್ಧನಾದನು.

ಅನ್ವಯಃ :—ಅಥ ಪ್ರದೋಷೇ ಪ್ರಯತಃ ಧೀರಃ ರಘುಃ ಸಾಮಂತಸಂಭಾವನಯೈವ ಕೈಲಾಸನಾಥಂ ತರಸಾ ಜಿಗೀಷುಃ ಕಲ್ಪಿತಶಸ್ತ್ರ ಗರ್ಭಃ, ಶಸ್ತ್ರಂ ರಥಮ್ ಅಧಿಶಿಷ್ಯೇ ॥

ಕಲ್ಪಿತಾನಿ ಶಸ್ತ್ರಾಣಿ ಗರ್ಭೇ ಯಸ್ಯ ಸಃ । ಕಲ್ಪಿತಶಸ್ತ್ರಗರ್ಭಃ । ತಮ್ । ಸಾಮಂತಸ್ಯ ಸಂಭಾವನಾ । ಸಾಮಂತಸಂಭಾವನಾ । ತಯಾ ॥ ಕೈಲಾಸಸ್ಯ ನಾಥಃ । ತಮ್ ॥ ಜೇತುಂ । ಇಚ್ಛುಃ ಜಿಗೀಷುಃ ॥ ಅಧಿ—ಉಪಸರ್ಗ । ಶಿಷ್ಯೇ—ಶಿಷ್ಯಾತೇ ಶಿಶ್ಯಿರೇ । ಇತ್ಯಾದಿ ॥ ಶೀಙ್-ಸ್ವಪ್ನೇ ಲಿಟ್—ಪ್ರ.ಪು.ಏ.॥ ಅಧಿಶೀಙ್ ಸ್ಥಾಸಾಂ ಕರ್ಮ—ಎಂಬ ಸೂತ್ರದಿಂದ ಅಧಿಕರಣಕ್ಕೆ ಕರ್ಮಸಂಜ್ಞಾ ಬಂದು ರಥಂ ಎಂದಾಗಿದೆ.

ಅಥ = ಆಮೇಲೆ, ಪ್ರದೋಷೇ = ರಾತ್ರಿಯಲ್ಲಿ, ಪ್ರಯತಃ = ಶುಚಿಯಾಗಿ, ಧೀರಃ = ಪರಾಕ್ರಮಿಯಾದ ರಘುರಾಜನು, ಸಾಮಂತ ಸಂಭಾವನಯಾ ಏವ = ಸಾಮಂತರಾಜ ನೆಂಬ (ಆಶ್ರಿತರಾಜ) ಭಾವನೆಯಿಂದಲೇ, ಕೈಲಾಸನಾಥಂ = ಕುಬೇರನನ್ನು, ತರಸಾ = ಬಲದಿಂದ, ಜಿಗೀಷುಃ = ಜಯಿಸಲು ಬಯಸುವವನಾಗಿ, ಕಲ್ಪಿತಶಸ್ತ್ರಗರ್ಭಂ = ಶಸ್ತ್ರಾಸ್ತ್ರ ಗಳಿನ್ನು ತುಂಬಿ ಶಸ್ತ್ರಸಜ್ಜಿತನಾಗಿ, ರಥಂ = ರಥದಲ್ಲಿ, ಅಧಿಶಿಷ್ಯೇ = ಮಲಗಿದನು.

**29. ಪ್ರಾತಃ ಪ್ರಯಾಣಾಭಿಮುಖಾಯ ತಸ್ಮೈ ।**
**ಸವಿಸ್ಮಯಾ ಕೋಶಗೃಹೇ ನಿಯುಕ್ತಾಃ ॥**
**ಹಿರಣ್ಮಯೀಂ ಕೋಶಗೃಹಸ್ಯ ಮಧ್ಯೇ ।**
**ವೃಷ್ಟಿಂ ಶಶಂಸುಃ ಪತಿತಾಂ ನಭಸ್ತಃ ॥ ೨೯ ॥**

ಬೆಳಗಿನಜಾವ (ಮುಂಜಾನೆ) ದ್ರವ್ಯಭಂಡಾರದ ಅಧಿಕಾರಿಗಳು ಪ್ರಯಾಣಕ್ಕೆ ಸನ್ನದ್ಧ ನಾಗುತ್ತಿರುವ ರಘುಭೂಪತಿಯ ಬಳಿಗೆ ಬಂದು ಅಧಿಕಾಶ್ಚರ್ಯದಿಂದ (ಸವಿಸ್ಮಯಾ ಸಂತಃ) ಕೂಡಿದವರಾಗಿ ರಾತ್ರಿಕಾಲದಲ್ಲಿ ಆಗಸದಿಂದ ಸುವರ್ಣದ ಮಳೆ ಸುರಿದು ದ್ರವ್ಯಾ ಗಾರವು (ದ್ರವ್ಯಭಾಂಡಾಗಾರವು) ತುಂಬಿರುವ ಶುಭ ವೃತ್ತಾಂತವನ್ನು ನಿವೇದಿಸಿದರು (ಅರುಹಿದರು).

ಪ್ರಯಾಣಸ್ಯ ಅಭಿಮುಖಃ । ತಸ್ಮೈ ॥ ವಿಸ್ಮಯೇನ ಸಹಿತಾಃ ॥ ಕೋಶಸ್ಯ ಗೃಹಂ ॥ ತಸ್ಮಿನ್ ॥ ಶಶಂಸ—ಶಶಂಸತುಃ—ಶಶಂಸುಃ । ಶಶಂಸಿಥ—ಶಶಂಸಥುಃ—ಶಶಂಸ । ಶಶಂಸ—ಶಶಂಸಿವ—ಶಶಂಸಿಮ ॥ ಶಂಸು—ಸ್ತುತೌ—ಲಿಟ್—ಪ್ರ.ಪು. ॥

ಪ್ರಾತಃ = ಬೆಳಿಗ್ಗೆ, ಪ್ರಯಾಣಾಭಿಮುಖಾಯ = ಪ್ರಯಾಣಕ್ಕೆ ಸನ್ನದ್ಧನಾದ, ತಸ್ಮೈ = ಆ ರಘುರಾಜನಿಗೆ, ಕೋಶಗೃಹೇ = ಖಜಾನೆಯಲ್ಲಿ, (ದ್ರವ್ಯಭಂಡಾರ), ನಿಯುಕ್ತಾಃ = ಅಧಿಕೃತರಾದ ಅಧಿಕಾರಿಗಳು, ಸವಿಸ್ಮಯಾ = ಆಶ್ಚರ್ಯಚಕಿತರಾಗಿ, ಕೋಶಗೃಹಸ್ಯ ಮಧ್ಯೇ = ಕೋಶಗೃಹದ, ಖಜಾನೆಯ ಮಧ್ಯದಲ್ಲಿ, ನಭಸ್ತಃ = ಆಕಾಶದಿಂದ, ಪತಿತಾಂ = ಬಿದ್ದಿರುವ, ಹಿರಣ್ಮಯೀಂ = ಸುವರ್ಣಮಯವಾದ, ವೃಷ್ಟಿಂ = ಮಳೆಯನ್ನು, ಶಶಂಸುಃ = ಹೇಳಿದರು.

30. ತಂ ಭೂಪತಿರ್ಭಾಸುರಹೇಮರಾಶಿಂ ।
ಲಬ್ಧಂ ಕುಬೇರಾದಭಿಯಾಸ್ಯಮಾನಾತ್ ॥
ದಿದೇಶ ಕೌತ್ಸಾಯ ಸಮಸ್ತಮೇವ ।
ಪಾದಂ ಸುಮೇರೋರಿವ ವಜ್ರಭಿನ್ನಮ್ ॥ ೩೦ ॥

ಯುದ್ಧದಲ್ಲಿ ಜಯಿಸಿ ತರಬೇಕೆಂದಿರುವಾಗಲೇ ಕುಬೇರನು ಅವನ ಖಜಾನೆಯನ್ನು ಹೊನ್ನರಾಶಿಯಿಂದ, ಹೊನ್ನಮಳೆ ಸುರಿಸಿ (ಸುವರ್ಣವೃಷ್ಟಿ) ಪೂರ್ಣಗೊಳಿಸುವಂತೆ ಮಾಡಿದ್ದನು. ಆ ಭುವನಪತಿಯ ದ್ರವ್ಯಕೋಶಾಗಾರವು, ಹೊನ್ನಮಯವಾಗಿ ಪ್ರಕಾಶಿಸುತ್ತ ಕಂಗೊಳಿಸುತ್ತಿರುವುದನ್ನು ಕಂಡರೆ ಹೊನ್ನಪರ್ವತವಾದ ಸುಮೇರು ಪರ್ವತದ ತಪ್ಪಲಿನ ಒಂದು ಭಾಗವು ಇಂದ್ರನ ವಜ್ರಾಯುಧದಿಂದ ಭೇದಿಸಲ್ಪಟ್ಟು ತುಂಡರಿಸಿದಂತೆ ತೋರುತ್ತಿತ್ತು. ಸುಮೇರುಪರ್ವತಶಿಖರದ ಒಂದು ಭಾಗದಂತೆ ಆ ದ್ರವ್ಯ ರಾಶಿಯು ಭಾಂಡಾಗಾರದಲ್ಲಿ (ಖಜಾನೆಯಲ್ಲಿ) ಕಂಗೊಳಿಸುತ್ತಿತ್ತು. ರಘುರಾಜನು ಕೌತ್ಸನಿಗೋಸುಗ ಹೊಂದಿರುವ ಹೊನ್ನರಾಶಿಯು ೧೪ ಕೋಟಿಗೂ ಮೀರಿದ್ದರೂ ಅದನ್ನು ಪೂರ್ಣವಾಗಿ ದಾನವಮಾಡಿದನು. ಅದನ್ನು ಪೂರ್ಣವಾಗಿ ಕೊಂಡುಹೋಗುವಂತೆ ಹೇಳಿ ದಾನಮಾಡಿದನು.

ಅನ್ವಯ :—ಭೂಪತಿಃ ಅಭಿಯಾಸ್ಯಮಾನಾತ್ ಕುಬೇರಾತ್ ಲಬ್ಧಂ ಸುಮೇರೋಃ ವಜ್ರಭಿನ್ನಂ ಪಾದಮಿವ ತಂ ಭಾಸುರಹೇಮರಾಶಿಂ ಸಮಸ್ತಮೇವ ಕೌತ್ಸಾಯ ದಿದೇಶ ॥

ಭುವಃ ಪತಿಃ । ಭಾಸುರಶ್ಚಾಸೌ ಹೇಮರಾಶಿಶ್ಚ । ಹೇಮ್ನಃ ರಾಶಿಃ । ತಮ್ । ವಜ್ರೇಣ ಭಿನ್ನಃ । ತಮ್ ॥ ದಿದೇಶ—ದಿದಿಶತುಃ—ದಿದಿಶುಃ । ದಿದೇಶಿಥ—ಇತ್ಯಾದಿ । ದಿಶ—ಅತಿಸರ್ಜನೇ—ಲಿಟ್—ಪ್ರ.ಪು.ಏ. ॥

ಭೂಪತಿಃ=ರಘುರಾಜನು, ಅಭಿಯಾಸ್ಯಮಾನಾತ್=ಯುದ್ಧಮಾಡಲ್ಪಡಬೇಕೆಂದಿರುವ, ಕುಬೇರಾತ್ = ಕುಬೇರನಿಂದ, ಲಬ್ಧಂ = ಹೊಂದಿರುವ, ವಜ್ರಭಿನ್ನಂ = ವಜ್ರಾಯುಧದಿಂದ ಕತ್ತರಿಸಿರುವ, ಸುಮೇರೋಃ = ಮೇರುಪರ್ವತದ, ಪಾದಂ ಇವ = ತಪ್ಪಲಿನ ಪ್ರದೇಶದಂತಿರುವ, ತಂ = ಆ, ಭಾಸುರಂ = ಪ್ರಕಾಶಮಾನವಾದ, ಹೇಮರಾಶಿಂ = ಚಿನ್ನದ ರಾಶಿಯನ್ನು, ಸಮಸ್ತಂ ಏವ = ಎಲ್ಲವನ್ನೂ, ಕೌತ್ಸಾಯ = ಕೌತ್ಸಮುನಿಗೆ, ದಿದೇಶ = ಕೊಟ್ಟನು.

31. ಜನಸ್ಯ ಸಾಕೇತನಿವಾಸಿನಸ್ತೌ ।
ದ್ವಾವಪ್ಯಭೂತಾಮಭಿನಂದ್ಯಸತ್ತ್ವೌ ॥
ಗುರುಪ್ರದೇಯಾಧಿಕನಿಸ್ಪೃಹೋಽರ್ಥೀ ।
ನೃಪೋಽರ್ಥಿಕಾಮಾದಧಿಕಪ್ರದಶ್ಚ ॥ ೩೧ ॥

ಸಾಕೇತನಗರ(ಅಯೋಧ್ಯಾ, ಕೋಸಲನಂದಿನೀ)ವಾಸಿಗಳಾದ ಸತ್ಪ್ರಜೆಗಳು ಮಹಾದಾನಿಯಾದ ರಾಜನಾದ ರಾಜನನ್ನು ಅರ್ಥಿಯಾಗಿ ಬಂದು ಪ್ರತಿಗ್ರಹಿಸುವ ಕೌತ್ಸಮುನಿಯನ್ನು ಪ್ರಶಂಸಿಸಿ ಹೊಗಳಿದರು. ಅವರಿಬ್ಬರೂ ಪ್ರಜೆಗಳ ಅಭಿನಂದನೆಗೆ ಪಾತ್ರರಾದರು. ಅವಕ್ಕೆ ಕಾರಣವಿಷ್ಟೆ—ಎಷ್ಟು ಸುವರ್ಣವೃಷ್ಟಿಯಾಗಿರುವುದೋ ಅಷ್ಟನ್ನೂ ಕೊಂಡು ಹೋಗ

ಬೇಕು ಎಂದು ಹೇಳುವ ಅವನ ಉದಾರಗುಣವನ್ನು ನೆನೆದು ಅವರು ಪ್ರಶಂಸಿಸಿದರು. ಅವರೆ ನಿಃಸ್ಪೃಹನಾದ, ದೃಢಮನಸ್ಕನಾದ, ಲೋಭರಹಿತನಾದ ಕೌತ್ಸನು ತನಗೆ ಗುರು ದಕ್ಷಿಣೆಯಾಗಿ ೧೪ ಕೋಟಿ ವರಹಗಳಿಗಿಂತ ಅಧಿಕ ಸ್ವಲ್ಪವೂ ಬೇಡವೆಂದು (ಒಂದು ಚಿಕ್ಕಾಸು, ಒಂದು ನಯಾಪೈಸೆಯೂ) ನಿರಾಕರಿಸಿದುದನ್ನು ಕೇಳಿ ಜನರು ಅವನನ್ನು ಮನದಣಿಯೆ ಕೊಂಡಾಡಿದರು. ಯಾಚಕನಾಗಿ ಬಂದಿದ್ದರೂ ಬೇಕಾದುದಕ್ಕಿಂತ ಅಧಿಕ ವಾಗಿ ಸ್ವೀಕರಿಸುವ ಮನೋಗುಣ (ಮನೋವೃತ್ತಿ) ಇರಲಿಲ್ಲ. ಹೀಗೆ ಅವರಿಬ್ಬರೂ (ಅತಿಥಿ, ಆತಿಥೇಯ) ಅಭಿನಂದನೆಗೆ ಪಾತ್ರರಾಗಿದ್ದರು. ಅರಸನು ಎಲ್ಲವನ್ನೂ ಕೊಂಡು ಹೋಗುವಂತೆ ಒತ್ತಾಯಿಸುತ್ತಿದ್ದನು,

ಸಾಕೇತೇ ನಿವಸಂತಿ ಇತಿ ಸಾಕೇತನಿವಾಸಿನಃ ॥ ಅಭಿನಂದ್ಯಃ ಸತ್ವಃ ಯಯೋಃ ತೌ ॥ ಗುರವೇ ಪ್ರದೇಯಃ । ಗುರುಪ್ರದೇಯಾತ್ ಅಧಿಕಃ । ಗುರುಪ್ರದೇಯಾದಧಿಕೇ ನಿಃಸ್ಪೃಹಃ । ಗುರುಪ್ರದೇಯಾಧಿಕನಿಃಸ್ಪೃಹಃ । ಅರ್ಥಿನ ಕಾಮಃ । ತಸ್ಮಾತ್ । ಅಧಿಕಂ ಪ್ರದದಾತೀತಿ, ಅಧಿಕಪ್ರದಃ । ಅಭೂತಾಂ—ಭೂ ಸತ್ತಾಯಾಂ, ಲುಙ್—ಪ್ರ.ಪು.ದ್ವಿ. ॥

ಗುರುಪ್ರದೇಯಾಧಿಕನಿಃಸ್ಪೃಹಃ = ಗುರುವಿಗೆ ಕೊಡಬೇಕಾದುದಕ್ಕಿಂತಲೂ ಹೆಚ್ಚಾಗಿ ಆಸೆಪಡದಿರುವ, ಅರ್ಥೀ = ಯಾಚಕನಾದ. ಕೌತ್ಸನೂ, ಅರ್ಥಿಕಾಮಾತ್ = ಯಾಚಕನ ಇಚ್ಛೆಗಿಂತಲೂ, ಅಧಿಕಪ್ರದಃ = ಹೆಚ್ಚಾಗಿ ಕೊಡುವ, ನೃಪಶ್ಚ = ರಾಜನೂ (ಹೀಗೆ) ತೌ ದ್ವೌ ಅಪಿ = ಅವರಿಬ್ಬರೂ, ಸಾಕೇತನಿವಾಸಿನಃ = ಅಯೋಧ್ಯೆಯಲ್ಲಿ ವಾಸಿಸುತ್ತಿರುವ, ಜನಸ್ಯ = ಪ್ರಜೆಗಳಿಗೆ, ಅಭಿನಂದ್ಯಸತ್ವೌ = ಸ್ತುತಿಸಲು ಯೋಗ್ಯ ವ್ಯಾಪಾರವುಳ್ಳವರು, ಅಭೂತಾಂ = ಆದರು.

32. ಅಥೋಷ್ಟ್ರವಾಮೀಶತವಾಹಿತಾರ್ಥಂ ।
ಪ್ರಜೇಶ್ವರಂ ಪ್ರೀತಮನಾ ಮಹರ್ಷಿಃ ॥
ಸ್ಪೃಶನ್ ಕರೇಣಾನತಪೂರ್ವಕಾಯಂ ।
ಸಂಪ್ರಸ್ಥಿತೋ ವಾಚಮುವಾಚ ಕೌತ್ಸಃ ॥ ೩೨ ॥

ಆ ಪ್ರಜೇಶ್ವರನು ಸುಪ್ರೀತನಾಗಿ ಹೊರಡಲುದ್ಯುಕ್ತನಾದ ಮಹರ್ಷಿಯನ್ನು ಕಳುಹಿಸಿ ಕೊಡಲು ಸಿದ್ಧತೆಗಳನ್ನು ಮಾಡಿದನು. ನೂರಾರು ಒಂಟೆಗಳು, ಹೆಣ್ಣುಕುದುರೆಗಳು ಸುವರ್ಣನಾಣ್ಯಗಳ ಹೇರನ್ನು ಹೊತ್ತುನಿಂತುವು. ರಾಜನು ಸರ್ವಸ್ವವನ್ನು ದಾನಮಾಡಿ ಅವನಿಗೆ ತಲೆಬಾಗಿ ವಿನೀತನಾಗಿ ನಮಸ್ಕರಿಸುತ್ತ ನಿಂತಿದ್ದನು. ಆಗ ಬಹಳ ಸಂತೋಷ ಚಿತ್ತನಾದ ಆ ಋಷಿವರನು ಪ್ರೀತಿಯಿಂದ ಅವನ ಮೈದಡವುತ್ತ, ಕೈಗಳಿಂದ ಬೆನ್ನನ್ನು ಸವರುತ್ತ ಈ ತೆರನಾಗಿ ನುಡಿದನು.

ಅನ್ವಯ :—ಅಥ ಪ್ರೀತಮನಾಃ ಮಹರ್ಷಿಃ ಕೌತ್ಸಃ ಸಂಪ್ರಸ್ಥಿತಃ ಉಷ್ಟ್ರವಾಮೀಶತ ವಾಹಿತಾರ್ಥಮ್ ಆನತಪೂರ್ವಕಾಯಮ್ ಪ್ರಜೇಶ್ವರ ಕರೇಣ ಸ್ಪೃಶನ್ ವಾಚಮ್ ಉವಾಚ ॥

ಉಷ್ಟ್ರಾಶ್ಚ ವಾಮ್ಯಶ್ಚ । ಉಷ್ಟ್ರವಾಮ್ಯಃ । ಉಷ್ಟ್ರವಾಮೀನಾಂ ಶತಾನಿ ಉಷ್ಟ್ರ ವಾಮೀಶತೈಃ ವಾಹಿತಃ ಅರ್ಥಃ ಯೇನ ಸಃ । ಉಷ್ಟ್ರವಾಮೀಶತವಾಹಿತಾರ್ಥಃ । ತಂ ॥

ಪ್ರಜಾನಾಂ ಈಶ್ವರಃ । ತಂ ॥ ಪ್ರೀತಂ ಮನಃ ಯಸ್ಯ ಸಃ । ಪ್ರೀತಮನಾಃ । ಮಹಾಂಶ್ಚಾಸೌ ಋಷಿಶ್ಚ ॥ ಆನತಃ ಪೂರ್ವಕಾಯಃ ಯಸ್ಯ ಸಃ । ತಂ ॥ ಉವಾಚ—ಊಚತುಃ—ಊಚುಃ । ಇತ್ಯಾದಿ । ಬ್ರೂಞ್—ವ್ಯಕ್ತಾಯಾಂ ವಾಚಿ—ಲಿಟ್—ಪ್ರ.ಪು.ಏ. ॥

ಅಥ = ಆಮೇಲೆ, ಪ್ರೀತಮನಾಃ = ಸಂತೋಷಗೊಂಡ, ಮಹರ್ಷಿಃ = ತಪಸ್ವಿಯಾದ, ಕೌತ್ಸಃ = ಕೌತ್ಸಮುನಿಯು, ಸಂಪ್ರಸ್ಥಿತಃ = ಹೊರಡಲು ಉದ್ಯುಕ್ತನಾಗಿ, ಉಷ್ಟ್ರವಾಮೀಶತವಾಹಿತಾರ್ಥಂ = ಅನೇಕ ಒಂಟೆಗಳಿಂದ ಸಾಗಿಸಿದ ಸುವರ್ಣವುಳ್ಳ, ಆನತಪೂರ್ವಕಾಯಂ = ವಿನಯದಿಂದ ಬಾಗಿರುವ, ಪ್ರಜೇಶ್ವರಂ = ರಘುರಾಜನನ್ನು, ಕರೇಣ = ಕೈಯಿಂದ, ಸ್ಪೃಶನ್ = ಸವರುತ್ತಾ (ತಟ್ಟುತ್ತಾ, ಉಜ್ಜುತ್ತಾ, ಪೂಸುತ್ತಾ), ವಾಚಂ = ಮಾತನ್ನು, ಉವಾಚ = ಹೇಳಿದನು.

**33. ಕಿಮತ್ರ ಚಿತ್ರಂ ಯದಿ ಕಾಮಸೂರ್ಭೂಃ ।**
**ವೃತ್ತೇ ಸ್ಥಿತಸ್ಯಾಧಿಪತೇಃ ಪ್ರಜಾನಾಮ್ ॥**
**ಅಚಿಂತನೀಯಸ್ತು ತವ ಪ್ರಭಾವಃ ।**
**ಮನೀಷಿತಂ ದ್ಯೌರಪಿ ಯೇನ ದುಗ್ಧಾ ॥ ೩೩ ॥**

ಎಲೈ ಕರ್ತವ್ಯದಲ್ಲೇ ನಿರತನಾದ ರಾಜನೇ, ನಿನ್ನ ಮಹಿಮೆಯು ಅಲೌಕಿಕವಾದುದು, ಕರ್ತವ್ಯನಿರತನಾದ ರೈತನಿಗೆ ಭೂಮಿಯು ಇಷ್ಟಾರ್ಥವನ್ನು ಕೊಡುತ್ತಿದೆ ಎಂಬುದು ಸರ್ವವಿದಿತ. ಅದೇನೂ ವಿಚಿತ್ರವಾದ ವಿಷಯವಲ್ಲ, ನೀನಿಂದು ಅಸಾಧ್ಯವನ್ನು ಸಾಧ್ಯವೆಂದು ಮಾಡಿ ತೋರಿಸಿ ನನ್ನನ್ನು ಕೃತಕೃತ್ಯನನ್ನಾಗಿ ಮಾಡಿರುವೆ. ನಿನಗಿಂದು ಸ್ವರ್ಗಲೋಕವೇ ನಿನ್ನ ಸ್ವಾಧೀನವಿದೆ, ನೀನು ಕೇಳಿದ್ದನ್ನು ಕೊಡುತ್ತಿದೆ. ನೀನು ದಿಟಕ್ಕೂ ಮಹಾಮಹಿಮನು, ಆಕಾಶವೇ ಹಾಲನ್ನು ಸುರಿಸಿದೆ. ಇದು ನಿನ್ನ ಅಪಾರವಾದ ಇತರರ ಕಾಮಿತಾರ್ಥವನ್ನು (ಇಷ್ಟಾರ್ಥವನ್ನು) ಪೂರೈಸುವ ದ್ಯೋತಕವಾಗಿದೆ ಎಂಬುದರಲ್ಲಿ ಸಂದೇಹವೇ ಇರುವುದಿಲ್ಲ, ನೀನೊಬ್ಬನಲ್ಲದೆ ಇತರರಿಗೆ ಇದು ಸಾಧ್ಯವಾಗಲಾರದು.

ಅನ್ವಯ :—ವೃತ್ತೇ ಸ್ಥಿತಸ್ಯ ಪ್ರಜಾನಾಮ್ ಅಧಿಪತೇಃ ಭೂಃ ಕಾಮಸೂಃ ಯದಿ ಅತ್ರ ಕಿಂ ಚಿತ್ರಮ್ । (ಕಿಂ) ತು ಅಚಿಂತನೀಯಃ ತವ ಪ್ರಭಾವಃ ಯೇನ ತ್ವಯಾ ದ್ಯೌಃ ಅಪಿ ಅಭಿಲಷಿತಂ ದುಗ್ಧಾ ॥ ಕಾಮಂ ಸೂತೇ ಇತಿ ಕಾಮಸೂಃ ॥ ನ ಚಿಂತನೀಯಃ । ಅಚಿಂತನೀಯಃ ॥

ವೃತ್ತೇ ಸ್ಥಿತಸ್ಯ = ರಾಜನ ಕರ್ತವ್ಯದಲ್ಲಿಯೇ ಆಸಕ್ತನಾಗಿರುವ, ಪ್ರಜಾನಾಂ = ಪ್ರಜೆಗಳಿಗೆ, ಅಧಿಪತೇಃ = ಒಡೆಯನಾದ ರಾಜನಿಗೆ, ಭೂಃ = ಭೂಮಿಯು, ಕಾಮಸೂಃ ಯದಿ = ಇಷ್ಟಾರ್ಥವನ್ನು ಕೊಡುವುದಾದರೆ, ಅತ್ರ = ಈ ವಿಷಯದಲ್ಲಿ, ಕಿಂ ಚಿತ್ರಂ = ಆಶ್ಚರ್ಯವೇನಿದೆ, ಕಿಂತು = ಆದರೆ, ತವ = ನಿನ್ನ, ಪ್ರಭಾವಃ = ಸಾಮರ್ಥ್ಯವಾದರೋ, ಅಚಿಂತನೀಯಃ = ಎಣಿಸಲು ಅಸಾಧ್ಯವು, ಯೇನ = ಯಾವ ನಿನ್ನಿಂದ, ದ್ಯೌರಪಿ = ಆಕಾಶವೂ (ಸ್ವರ್ಗಲೋಕ), ಮನೀಷಿತಂ = ಇಷ್ಟಾರ್ಥವನ್ನು, ದುಗ್ಧಾ = ಕರೆಯಲ್ಪಟ್ಟಿತೋ.

**34. ಆಶಾಸ್ಯಮನ್ಯತ್ ಪುನರುಕ್ತಭೂತಂ ।**
**ಶ್ರೇಯಾಂಸಿ ಸರ್ವಾಣ್ಯಧಿಜಗ್ಮುಷಸ್ತೇ ॥**
**ಪುತ್ರಂ ಲಭಸ್ವಾತ್ಮಗುಣಾನುರೂಪಂ ।**
**ಭವಂತಮೀಡ್ಯಂ ಭವತಃ ಪಿತೇವ ॥ ೩೪ ॥**

ಹೇ ರಾಜನ್, ನೀನು ಸರ್ವಶುಭಫಲಗಳನ್ನು ಪಡೆದಿರುವೆ. ಪುತ್ರಪ್ರಾಪ್ತಿಯೊಂದನ್ನು ಬಿಟ್ಟು ಎಲ್ಲಾ ಶ್ರೇಯಸ್ಸನ್ನು ಹೊಂದಿರುವ ನಿನಗೆ ನಾನು ಯಾವ ವರವನ್ನು ಕೊಡಲಿ? ಮಹದೈಶ್ವರ್ಯವನ್ನು ಹೊಂದು ಎಂದು ನಾನು ಆಶೀರ್ವದಿಸುವುದಾದರೆ ಸಕಲೈಶ್ವರ್ಯವನ್ನೂ ಹೊಂದಿರುವ ನಿನಗೆ ಅದು ಪುನರುಕ್ತಿಯಾದೀತು. ಆದುದರಿಂದ ಸ್ತೋತ್ರಾರ್ಹನಾದ ನಿನ್ನನ್ನು ನಿನ್ನ ತಂದೆಯು ಪುತ್ರನನ್ನಾಗಿ ಪಡೆದಂತೆ ನೀನು ನಿನ್ನಂತೆ ಸಕಲಗುಣಸಂಪನ್ನನಾದ ಮಗನನ್ನು ಪಡೆ. ನೀನು ನಿನ್ನ ಆತ್ಮಾನುಗುಣಾನುರೂಪನಾದ ಸರ್ವಗುಣಸಂಪನ್ನನಾದ ಕುಲಪುತ್ರರತ್ನನನ್ನು ಪಡೆದು ಸುಖಿಯಾಗು. ಇದೇ ನನ್ನ ಆಶೀರ್ವಾದ (ಪರಮಾಶೀರ್ವಾದ).

ಅನ್ವಯ :— ಸರ್ವಾಣಿ ಶ್ರೇಯಾಂಸಿ ಅಧಿಜಗ್ಮುಷಃ ತೇ ಅನ್ಯತ್ ಆಶಸ್ಯಂ ಪುನರುಕ್ತಭೂತಂ । ಈಡ್ಯಂ ಭವನ್ತಂ ಭವತಃ ಪಿತಾ ಇವ ಆತ್ಮಗುಣಾನುರೂಪಂ ಪುತ್ರಂ ಲಭಸ್ವ ॥

ಆತ್ಮನಃ ಗುಣಾಃ । ಆತ್ಮಗುಣಾನಾಂ ಅನುರೂಪಃ । ತಂ ॥ ಲಭತಾಂ—ಲಭೇತಾಂ—ಲಭಂತಾಂ ॥ ಲಭಸ್ವ—ಲಭೇಥಾಂ—ಲಭಧ್ವಮ್ । ಲಭೈ—ಲಭಾವಹೈ—ಲಭಾಮಹೈ ॥ ಡು ಲಭಷ್—ಪ್ರಾಪ್ತೌ—ಲೋಟ್—ಮ.ಪು.ಏ. ॥

ಸರ್ವಾಣಿ = ಎಲ್ಲಾ, ಶ್ರೇಯಾಂಸಿ = ಸೌಭಾಗ್ಯಗಳನ್ನು, ಅಧಿಜಗ್ಮುಷಃ = ಹೊಂದಿರುವ, ತೇ = ನಿನಗೆ, ಅನ್ಯತ್ = ಇತರ, ಆಶಾಸ್ಯಂ = ಆಶೀರ್ವಾದವು, ಪುನರುಕ್ತಭೂತಂ = ಪುನರುಕ್ತವಾಗುತ್ತದೆ, ಹೇಳಿದ್ದನ್ನು ಪುನಃಪುನಃ ಹೇಳಿದಂತೆ, ಈಡ್ಯಂ = ಸ್ತುತಿಸಲು ಯೋಗ್ಯನಾದ. ಭವಂತಂ = ನಿನ್ನನ್ನು, ಭವತಃ = ನಿನ್ನ, ಪಿತಾ ಇವ = ತಂದೆಯಂತೆ, ಆತ್ಮಗುಣಾನುರೂಪಂ = ನಿನ್ನ ಗುಣಗಳಿಗೆ ಸಮಾನವಾಗಿರುವ. ಪುತ್ರಂ = ಮಗನನ್ನು, ಲಭಸ್ವ = ಹೊಂದು.

**35. ಇತ್ಥಂ ಪ್ರಯುಜ್ಯಾಶಿಷಮಗ್ರಜನ್ಮಾ ।**
**ರಾಜ್ಞೇ ಪ್ರತೀಯಾಯ ಗುರೋಃ ಸಕಾಶಾತ್ ॥**
**ರಾಜಾಪಿ ಲೇಭೇ ಸುತಮಾಶು ತಸ್ಮಾತ್ ।**
**ಆಲೋಕಮರ್ಕಾದಿವ ಜೀವಲೋಕಃ ॥ ೩೫ ॥**

ಜೀವಿಗಳಲ್ಲಿ ಉತ್ತಮನಾದ, ಜ್ಞಾನಯೋಗಿ ಕೌತ್ಸನು ರಘುಮಹಾರಾಜನಿಗೆ ಆಶೀರ್ವಾದವನ್ನು ಮಾಡಿ ಗುರುದಕ್ಷಿಣೆಯನ್ನು ಕೊಡಲು ತನ್ನ ಗುರುವಾದ ವರತಂತು ಋಷಿಗಳ ಬಳಿಗೆ ಬಿಜಯಂಗೈದನು. ಹೇಗೆ ಸಕಲ ಜೀವರಾಶಿಯು ಚೈತನ್ಯವನ್ನು, ಜ್ಞಾನವನ್ನು, ತೇಜಸ್ಸನ್ನು ಸೂರ್ಯನಿಂದ ಪಡೆದು ಸುಖವಾಗಿ ಜೀವಿಸುವುದೋ ಅದರಂತೆ ಆ ಮಹಾರಾಜನು ಆ ಋಷಿಯ ಆಶೀರ್ವಾದದ ಫಲವಾಗಿ ಪುತ್ರಶ್ರೇಷ್ಠನನ್ನು ಬಹುಬೇಗನೆ ಪಡೆದು ಸಂತೋಷಸಾಗರದಲ್ಲಿ ತೇಲಾಡಿದನು.

ಪ್ರತಿ—ಉಪಸರ್ಗ। ಇಯಾಯ—ಈಯತುಃ—ಈಯುಃ। ಇಯಯಿಥ, ಇಯೇಥ—ಈಯಥುಃ—ಈಯ। ಇಯಾಯ, ಇಯಯ—ಈಯಿವ—ಈಯಿಮ॥ ಇಣ್—ಗತೌ—ಲಿಟ್—ಪ್ರ.ಪು.ಏ.॥ ಲೇಭೇ—ಲೇಭಾತೇ—ಲೇಭಿರೇ। ಇತ್ಯಾದಿ—ಡುಲಭಷ್—ಪ್ರಾಪ್ತೌ—ಲಿಟ್—ಪ್ರ.ಪು.ಏ.॥

ಅಗ್ರಜನ್ಮಾ = ಬ್ರಾಹ್ಮಣನಾದ, ಇತ್ಥಂ = ಈ ರೀತಿಯಾಗಿ, ರಾಜ್ಞಃ = ರಘುರಾಜನಿಗೆ, ಆಶಿಷಂ = ಆಶೀರ್ವಾದವನ್ನು, ಪ್ರಯುಜ್ಯ = ಕೊಟ್ಟು, ಗುರೋಃ ಸಕಾಶಂ = ಗುರುವಿನ ಸಮೀಪಕ್ಕೆ, ಪ್ರತೀಯಾಯ = ಹೋದನು. ರಾಜಾ ಅಪಿ = ರಾಜನೂ ಕೂಡಾ. ಜೀವಲೋಕಃ = ಪ್ರಾಣಿಲೋಕವು, ಅರ್ಕಾತ್ = ಸೂರ್ಯನಿಂದ, ಆಲೋಕಂ ಇವ = ಬೆಳಕನ್ನು ಎಂಬಂತೆ (ಚೈತನ್ಯ, ಜ್ಞಾನ). ತಸ್ಮಾತ್ = ಆ ಋಷಿಯ ಆಶೀರ್ವಾದದಿಂದ, ಸುತಂ = ಮಗನನ್ನು, ಲೇಭೇ = ಹೊಂದಿದನು.

**36. ಬ್ರಾಹ್ಮೇ ಮುಹೂರ್ತೇ ಕಿಲ ತಸ್ಯ ದೇವೀ।**
**ಕುಮಾರಕಲ್ಪಂ ಸುಷುವೇ ಕುಮಾರಮ್॥**
**ಅತಃ ಪಿತಾ ಬ್ರಹ್ಮಣ ಏವ ನಾಮ್ನಾ।**
**ತಮಾತ್ಮಜನ್ಮಾನಮಜಂ ಚಕಾರ ॥ ೩೬ ॥**

ಬ್ರಹ್ಮದೇವತಾಕವಾದ ಅಭಿಜಿನ್ (ಅಭಿಜಿತ್) ಮುಹೂರ್ತದಲ್ಲಿ (ಬ್ರಾಹ್ಮಿ ಮುಹೂರ್ತದಲ್ಲಿ) ಮಧ್ಯಾಹ್ನ ಹನ್ನೊಂದು ಗಂಟೆಗೆ ಸರಿಯಾಗಿ ಇನವಂಶದ ರಾಣಿ ಷಣ್ಮುಖನಿಗೆ (ಕುಮಾರಸ್ವಾಮಿ) ಸಮಾನನಾದ ಪುತ್ರರತ್ನನಿಗೆ ಜನ್ಮವಿತ್ತಳು. ಈ ರಾಜಕುಮಾರನೇ ಅಂದಿನ ಶಿವಪಾರ್ವತಿಯರ "ಕುಮಾರ"ನೋ (ಬಾಲಕ) ಎಂಬಂತೆ ದೇವಸೇನಾನಿಯಾದ ಷಣ್ಮುಖನು ಇವನು ಎಂಬಂತೆ ರಘುಪುತ್ರನಾದ ಅಜನು ತೊಟ್ಟಿಲಿನಲ್ಲಿ ಹೆತ್ತವರಿಗೆ (ಜನ್ಮವಿತ್ತವರಿಗೆ)ಬ್ರಹ್ಮಾನಂದವೀಯುತ್ತ್ಯ,ವಿರಾಜಿಸುತ್ತಿದ್ದನು. ಬ್ರಾಹ್ಮಮುಹೂರ್ತದಲ್ಲಿ ಜನ್ಮತಾಳಿದ ಆ ಶಿಶುವಿಗೆ ಪಿತನಾದ ರಘುಸಾರ್ವಭೌಮನು ಬ್ರಹ್ಮದೇವರ ಪರ್ಯಾಯ ವಾಚಕವಾದ ಅಜನೆಂಬ (ವಿಧಿ) ಹೆಸರನ್ನಿಟ್ಟು ನಾಮಕರಣಮಾಡಿದನು. ವೇದಾಂತಿಗಳು ಆ ಅಜನನ್ನೇ (ಬ್ರಹ್ಮದೇವನನ್ನೇ ಪರಬ್ರಹ್ಮನನ್ನು) ಹರಿ, ಹರ ಎಂಬ ನಾಮಧೇಯದಿಂದ ಸ್ತುತಿಸುವರು, ವಂದನೆಗೈವರು.

ಬ್ರಹ್ಮಾದೇವತಾ ಅಸ್ಯ—ಬ್ರಾಹ್ಮಃ। ತಸ್ಮಿನ್॥ ಕುಮಾರಸದೃಶಃ ಕುಮಾರಕಲ್ಪಃ। ತಮ್॥ ಆತ್ಮನಃ ಜನ್ಮ ಯಸ್ಯ ಸಃ। ಆತ್ಮಜನ್ಮಾ। ತಂ॥ ಸುಷುವೇ—ಸುಷುವಾತೇ—ಸುಷುವಿರೇ। ಸುಷುವಿಷೇ—ಸುಷುವಾತೇ—ಸುಷುವಿಧ್ವೇ। ಸುಷುವೇ—ಸುಷುವಿವಹೇ—ಸುಷುವಿಮಹೇ। ಷೂಙ್—ಪ್ರಸವೇ—ಲಿಟ್—ಪ್ರ.ಪು.ಏ.॥ ಚಕಾರ—ಚಕ್ರತುಃ—ಚಕ್ರುಃ। ಚಕರ್ಥ—ಚಕ್ರಥುಃ—ಚಕ್ರ। ಚಕಾರ, ಚಕರ—ಚಕೃವ—ಚಕೃಮ॥ ಡುಕೃಞ್—ಕರಣೇ—ಲಿಟ್—ಪ್ರ.ಪು.ಏ.॥

ತಸ್ಯ = ಆ ರಘುರಾಜನ, ದೇವೀ = ಪಟ್ಟಮಹಿಷಿಯು, ಬ್ರಾಹ್ಮೇ = ಬ್ರಹ್ಮದೇವತಾಕವಾದ (ಅಭಿಜಿತ್), ಮುಹೂರ್ತೇ ಕಿಲ = ಸಮಯದಲ್ಲಿ, ಕುಮಾರಕಲ್ಪಂ = ಷಣ್ಮುಖನಿಗೆ ಸಮಾನನಾದ, ಕುಮಾರಂ = ಪುತ್ರನನ್ನು, ಸುಷುವೇ = ಹೆತ್ತಳು, ಅತಃ = ಬ್ರಾಹ್ಮ

ಮುಹೂರ್ತದಲ್ಲಿ ಹುಟ್ಟಿದುದರಿಂದ, ಪಿತಾ = ತಂದೆಯು, ಬ್ರಹ್ಮಣ ಏವ = ಬ್ರಹ್ಮ ದೇವರ, ನಾಮ್ನಾ = ಹೆಸರಿನಿಂದ, ತಂ ಆತ್ಮಜನ್ಮಾನಂ = ಆ ಮಗನನ್ನು, ಅಜಂ = ಅಜನೆಂದು, ಚಕಾರ = ಮಾಡಿದನು.

**37.** **ರೂಪಂ ತದೋಜಸ್ವಿತದೇವವೀರ್ಯಂ ।**
**ತದೇವ ನೈಸರ್ಗಿಕ ಮುನ್ನತತ್ವಮ್ ॥**
**ನ ಕಾರಣಾತ್ ಸ್ವಾತ್ ಬಿಭಿದೇ ಕುಮಾರಃ ।**
**ಪ್ರವರ್ತಿತೋ ದೀಪ ಇವ ಪ್ರದೀಪಾತ್ ॥ ೩೭ ॥**

ಹೀಗೆ ತನ್ನ ಆತ್ಮಜನ್ಮನನ್ನು ಅಜನೆಂಬ ನಾಮಧೇಯದಿಂದ ಕರೆದನು. ಆ ಕುಮಾರನು ತಂದೆಯ ಪ್ರಕೃತಿದತ್ತವಾದ ತೇಜಸನ್ನು, ವೀರ್ಯವನ್ನು (ಶೌರ್ಯ) ಬಲಿಷ್ಠವಾದ ಕಾಯವನ್ನು (ದೇಹ ಐಶ್ವರ್ಯವನ್ನು) ಗಾಂಭೀರ್ಯವನ್ನು ಪಡೆದು ಜನಿಸಿದ್ದನು. (ರೂಪ, (ಸೌಂದರ್ಯ),ಓಜಸ್ಸು,(ಬಲ) ತೇಜಸ್ಸು) ಬಾಲಕನ ಎತ್ತರವಾದ ಕಾಯವನ್ನು ನೋಡಿದರೆ ಮುಂದೆ ದೇಹದ ಔನ್ನತ್ಯದಲ್ಲಿ (ಎತ್ತರದಲ್ಲಿ) ತಂದೆಗೆ ಸಮಾನನಾಗುವ ನೆಂಬುದರಲ್ಲಿ ಯಾವ ಸಂದೇಹವೂ ಇರಲಿಲ್ಲ. ಹಾಗೆಯೇ ತಂದೆಯ ಪರಾಕ್ರಮವನ್ನೂ, ಸಹಜ ಗಂಭೀರವಾದ ಔನತ್ಯವನ್ನೂ ಪಡೆದಿದ್ದನು. ಹೆಚ್ಚೇಕೆ, ಆ ಬಾಲಕನು ತಂದೆಯನ್ನು ಸ್ವಭಾವಜನ್ಯ ಹಾಗೂ ನೈಸರ್ಗಿಕವಾದ ಎಲ್ಲಾ ವಿಧದಿಂದಲೂ ಹೋಲುತ್ತ ತಂದೆಯ ಪಡಿಯಚ್ಚಿನಂತೆ ಅಥವಾ ಪ್ರತಿಬಿಂಬದಂತೆ ಇದ್ದನು. ಒಂದೇ ಪ್ರಕಾಶಮಾನವಾದ ತೇಜಪುಂಜವು (ಬೆಳಕು) ಇಬ್ಭಾಗವಾದಂತೆ ಅಜನು ತಂದೆಯ ಪಡಿನೆಳಲಾಗಿ, ಇಳೆಯಲ್ಲಿ ಕಂಗೊಳಿಸುತ್ತ, ಪ್ರವರ್ಧಮಾನನಾಗಿ ದಿನದಿಂದ ದಿನಕ್ಕೆ ಪೌರ್ಣಮಿಯ ಚಂದ್ರಮನಂತೆ ಬಳೆಯುತ್ತಲಿದ್ದನು. ಹೇಗೆ ದೊಡ್ಡ ದೀಪದಿಂದ ಉಂಟಾದ ಸಣ್ಣ ದೀಪವು, ಆ ದೀಪದ ಕಾಂತಿ ಮುಂತಾದುವುಗಳಿಂದ, ಎಲ್ಲಾ ಗುಣಗಳಿಂದ ಶೋಭಿಸು ವಂತೆ ಸಾದೃಶ್ಯವನ್ನು ಹೊಂದಿ ಪರಿಶೋಭಿಸಿದನು (ಸರ್ವಾತ್ಮನಾ ತಾದೃಶ).

ಓಜಃ ಅಸ್ಯ ಅಸ್ತಿ ಇತಿ ಓಜಸ್ವಿ। ಬಿಭಿದೇ—ಬಿಭಿದಾತೇ—ಬಿಭಿದಿರೇ । ಇತ್ಯಾದಿ ॥ ಭಿದಿರ್ ವಿದಾರಣೇ—ಲಿಟ್—ಪ್ರ.ಪು.ಏ. ॥

ಓಜಸ್ವಿ = ತೇಜಸುಳ್ಳ, ರೂಪಂ = ಶರೀರವು, ತದೇವ = ತಂದೆಯ, ವೀರ್ಯಂ = ಪರಾಕ್ರಮ, ತದೇವ ನೈಸರ್ಗಿಕಂ = ಸ್ವಾಭಾವಿಕವಾದ, ಉನ್ನತತ್ವಮ್ = ಔನ್ನತ್ಯವು, ತದೇವ ಕುಮಾರಃ = ಬಾಲಕನು, ಪ್ರವರ್ತಿತಃ = ಹಚ್ಚಿ ಉರಿಸಿರುವ, ದೀಪಃ = ದೀಪವು, ಪ್ರದೀಪಾತ್ ಇವ = ತನಗೆ ಕಾರಣವಾದ ದೊಡ್ಡದೀಪವೋ ಎಂಬಂತೆ, ಸ್ವಾತ್ = ಸ್ವಕೀಯವಾದ, ಕಾರಣಾತ್ = ಜನಕನಿಂದ. ನ ಬಿಭಿದೇ = ಭೇದಹೊಂದಲಿಲ್ಲ.

**38.** **ಉಪಾತ್ತವಿದ್ಯಂ ವಿಧಿವದ್ಗುರುಭ್ಯಃ ।**
**ತಂ ಯೌವನೋದ್ಭೇದ ವಿಶೇಷಕಾಂತಮ್ ॥**
**ಶ್ರೀಃ ಸಾಭಿಲಾಷಾಪಿ ಗುರೋರನುಜ್ಞಾಂ ।**
**ಧೀರೇವ ಕನ್ಯಾಪಿತುರಾಚಕಾಂಕ್ಷ ॥ ೩೮ ॥**

ವಿಧಿವತ್ತಾಗಿ, ದೀಕ್ಷಾಬದ್ಧನಾಗಿ, ನಿಯಮಬದ್ಧನಾಗಿ, ಉಪದೇಶಾತ್ಮಕವಾಗಿ ಸಕಲ ವಿದ್ಯೆಯನ್ನು ಕಲಿತು ಅಜನು ವಿದ್ಯಾಸಾಗರ(ವಿದ್ಯಾಪಾರಾವಾರ, ವಿದ್ಯಾಪಾರಗ) ನೆನಿಸಿದನು..ಅವನು ಧೀರ, ಸ್ಥಿರ, ಉನ್ನತಚಿತ್ತನೆನಿಸಿದನು. ಈಗ ಯೌವನದ ಹೊಸ್ತಿಲಿಗೆ ಕಾಲಿಟ್ಟುದರಿಂದ ಅಜನ ದೇಹಕಾಂತಿ, ಸೂರ್ಯದೇವನಂತೆ ತೇಜಃಪುಂಜವಾಯಿತು. ನವತಾರುಣ್ಯದ ಕಳೆಯು ಒಡಲಲ್ಲಿ ಮೂಡಿತು. ಸರ್ವಾಂಗವು ಹೊಸ ಹೊಗರಕಾಂತಿ ಗರಿಗಟ್ಟಿತು, ಈ ಹಿಂದೆ ಬಾಲ್ಯ, ಕೌಮಾರ್ಯದಲ್ಲಿ ಕಂಡುದಕ್ಕಿಂತ ಹರೆಯವು ಕಾಲಿಟ್ಟಾಗ ಅಧಿಕಮನೋಹರನಾಗಿ ತೋರ್ದನು, ಅಂತಹ ವಿದ್ಯಾವಂತ ತರುಣನನ್ನು, ನಯನ ಮನೋಹರನಾದ ಪುರುಷಸಿಂಹನನ್ನು (ಪುರುಷವ್ಯಾಘ್ರ) ರಾಜ್ಯಲಕ್ಷ್ಮಿಯು ಸೇರಲು ಬಯಸಿದರೂ, ಪ್ರಾಯಕ್ಕೆ ಬಂದ ಮಗಳು ತಂದೆಯ ಆಜ್ಞೆಯಿಲ್ಲದೆ ತಾನು ಬಯಸಿದ ಪ್ರಿಯನನ್ನು ಸೇರಲು (ಪಾಣಿಗ್ರಹಣ ಮಾಡಿಕೊಳ್ಳಲು) ಅಭಿಲಾಷೆಯಿಂದ ಕೂಡಿದ ದವಳಾದರೂ ತಾಳ್ಮೆಯಿಂದ ತಂದೆಯ ಅಪ್ಪಣೆಯನ್ನು ಬಯಸಿ, ನಿರೀಕ್ಷಿಸುವಂತೆ। ನಿರೀಕ್ಷಿಸುತ್ತಿದ್ದನು.

ಅನ್ವಯ :—ಗುರುಭ್ಯಃ ವಿಧಿವತ್ ಉಪಾತ್ತವಿದ್ಯಂ ಯೌವನೋದ್ಭೇದವಿಶೇಷ ಕಾಂತಮ್ ತಂ ಸಾಭಿಲಾಷಾ ಅಪಿ ಶ್ರೀಃ ಧೀರಾ ಕನ್ಯಾ ಪಿತುರಿವ ಗುರೋಃ ಅನುಜ್ಞಾಮ್ ಆಚಕಾಂಕ್ಷ ॥

ಉಪಾತ್ತಾಃ ವಿದ್ಯಾಃ ಯೇನ ಸಃ । ಉಪಾತ್ತವಿದ್ಯಃ । ತಂ ॥ ವಿಧಿಂ ಅನತಿಕ್ರಮ್ಯ, ವಿಧಿವತ್ ॥ ಯೌವನಸ್ಯ ಉದ್ಭೇದಃ । ಯೌವನೋದ್ಭೇದೇನ ವಿಶೇಷಕಾಂತಃ । ವಿಶೇಷೇಣ ಕಾಂತಃ । ತಂ ॥ ಅಭಿಲಾಷಯಾ ಸಹಿತಾ, ಸಾಭಿಲಾಷಾ॥ ಆಙ್—ಉಪಸರ್ಗ ॥ ಚಕಾಂಕ್ಷ—ಚಕಾಂಕ್ಷತುಃ—ಚಕಾಂಕ್ಷುಃ। ಚಕಾಂಕ್ಷಿಥ। ಇತ್ಯಾದಿ। ಕಾಂಕ್ಷಾ—ಕಾಂಕ್ಷಾಯಾಮ್ —ಲಿಟ್—ಪ್ರ.ಪು.ಏ. ॥

ಗುರುಭ್ಯಃ = ಗುರುಗಳಿಂದ, ವಿಧಿವತ್ =ಕ್ರಮವನ್ನು ಅನುಸರಿಸಿ, ಉಪಾತ್ತವಿದ್ಯಂ= ಹೊಂದಿದ ಸಕಲ ವಿದ್ಯೆಯುಳ್ಳ, ಯೌವನೋದ್ಭೇದವಿಶೇಷಕಾಂತಂ=ತಾರುಣ್ಯದ ವಿಶೇಷ ಕಾಂತಿಯಿಂದ, ಅಧಿಕ ಮನೋಹರನಾದ, ತಂ = ಆ ಅಜಕುಮಾರನನ್ನು, ಸ್ವಾಭಿಲಾಷಾ ಅಪಿ = ಅಭಿಲಾಷೆಯಿಂದ ಕೂಡಿದವಳಾದರೂ, ಶ್ರೀಃ = ಲಕ್ಷ್ಮಿಯು, ಧೀರಾ = ಸ್ಥಿರವಾದ ಮನಸುಳ್ಳ, ಕನ್ಯಾ= ಹುಡುಗಿಯು, ಪಿತುರಿವ = ತಂದೆಯ, ಗುರೋಃ = ಗುರುವಿನ, ಅನುಜ್ಞಾಂ = ಆಜ್ಞೆಯನ್ನು, ಆಚಕಾಂಕ್ಷ = ಬಯಸಿದಳು.

39. ಅಥೇಶ್ವರೇಣಕ್ರಥಕೈಶಿಕಾನಾಂ ।
 ಸ್ವಯಂವರಾರ್ಥಂ ಸ್ವಸುರಿಂದುಮತ್ಯಾಃ ॥
 ಆಪ್ತಃ ಕುಮಾರಾ ನಯೋನೋತ್ಸುಕೇನ ।
 ಭೋಜೇನ ದೂತೋ ರಘವೇ ವಿಸೃಷ್ಟಃ ॥ ೩೯ ॥

ಭೋಜನೃಪನು ಕ್ರಥಕೈಶಿಕೇಯರ ಒಡೆಯನು, ಕ್ರಥಕೈಶಿಕಾ ಅಥವಾ ವಿದರ್ಭದೇಶದ ರಾಜನಾದ ಭೋಜರಾಜನು ಪ್ರಾಯಪ್ರಬುದ್ಧಳಾದ ತನ್ನ ತಂಗಿಯಾದ ಇಂದುಮತಿಯ ಸ್ವಯಂವರಕ್ಕೆ ಸಕಲಸಿದ್ಧತೆಗಳನ್ನು ಅಣಿಗೊಳಿಸುತ್ತಿದ್ದನು. ಈತನು ಅಜಕುಮಾರನನ್ನು

ಬಹಳವಾಗಿ ಮೆಚ್ಚಿಕೊಂಡಿದ್ದನು. ಬಹಳ ಉತ್ಸಾಹಿತನಾಗಿ ಭೋಜರಾಜನು ತನ್ನ ಸಂದೇಶದೊಂದಿಗೆ ಸಂಬಿಗೆಯ ದೂತನನ್ನು ರಘುರಾಜನ ಬಳಿಗೆ, ಕುಮಾರನಾದ ಅಜನು ಭಾಗವಹಿಸುವಂತೆ (ಕುಮಾರನಯನೋತ್ಸುಕೇನ) ಸ್ವಯಂವರಕ್ಕೆ ಬರುವಂತೆ ಕಳುಹಿಸಿ ಕೊಟ್ಟನು.

ಅನ್ವಯಃ — ಅಥ ಸ್ವಸುಃ ಇಂದುಮತ್ಯಾಃ ಸ್ವಯಂವರಾರ್ಥಂ ಕುಮಾರಾನಯನೋತ್ಸುಕೇನ ಕ್ರಥಕೈಶಿಕಾನಾಂ ಈಶ್ವರೇಣ ಭೋಜೇನ ಆಪ್ತಃ ದೂತಃ ರಘವೇ ವಿಸೃಷ್ಟಃ ॥

ಸ್ವಯಂವರಾಯ—ಸ್ವಯಂವರಾರ್ಥವಮ್ । ಕುಮಾರಸ್ಯ ಆನಯನಂ । ಕುಮಾರ ನಯನೇ ಉತ್ಸುಕಃ । ತೇನ ॥

ಅಥ = ಆಮೇಲೆ, ಸ್ವಸುಃ = ತಂಗಿಯಾದ (ಇಂದುಮತಿಯು), ಸ್ವಯಂವರಾರ್ಥಂ = ಸ್ವಯಂವರಕ್ಕೋಸ್ಕರ, ಕುಮಾರಾನಯನೋತ್ಸುಕೇನ = ಅಜಕುಮಾರನನ್ನು ಕರೆಸುವುದ ರಲ್ಲಿ ಉತ್ಸುಕನಾದ (ಉತ್ಸಾಹಿತನಾದ), ಕ್ರಥಕೈಶಿಕಾನಾಂ=ವಿದರ್ಭದೇಶದ, ಈಶ್ವರೇಣ = ರಾಜನಾದ ಭೋಜನಿಂದ, ಆಪ್ತಃ = ಹಿತಚಿಂತಕನಾದ, ದೂತಃ = ಸೇವಕನು, ರಘುವೇ = ರಘುರಾಜನಿಗೆ, ವಿಸೃಷ್ಟಃ = ಕಳುಹಿಸಲ್ಪಟ್ಟನು.

**40. ತಂ ಶ್ಲಾಘ್ಯಸಂಬಂಧಮಸೌ ವಿಚಿಂತ್ಯ।**
**ದಾರಕ್ರಿಯಾಯೋಗ್ಯದಶಂ ಚ ಪುತ್ರಮ್ ॥**
**ಪ್ರಸ್ಥಾಪಯಾಮಾಸ ಸಸೈನ್ಯಮೇನ।**
**ಮೃದ್ಧಾಂ ವಿದರ್ಭಾಧಿಪರಾಜಧಾನೀಮ್ ॥ ೪ ॥**

ದೂತನಿಂದ ವಿಷಯವನ್ನು ತಿಳಿದು ರಘುರಾಜನು ಉತ್ತಮ ಕುಲಪ್ರಸೂತನೂ, ಗುಣವಂತನೂ, ಸಂಪತ್ಸಮೃದ್ಧಿಯ ವಿದರ್ಭದೇಶದ ಒಡೆಯನಾದ ಭೋಜರಾಜ ನೊಡನೆ ಸಂಬಂಧವನ್ನು ಬೆಳೆಸುವುದು ಯುಕ್ತವೆಂದು ತಿಳಿದುಕೊಂಡು (ಶ್ಲಾಘ್ಯ ಸಂಬಂಧಂ, ಸ್ಪೃಹಣೀಯ ಸಂಬಂಧಂ) ಮನದಲ್ಲಿ ಹರ್ಷಗೊಂಡನು. ಆ ಬಳಿಕ ಆ ನರೇಂದ್ರನು ನಯನಾನಂದಕಾರಕನಾದ ಮಹಾ ವಿದ್ಯಾವಂತನೂ, ಸಕಲಗುಣ ಸಂಪನ್ನನೂ, ವಿವಾಹಕ್ಕೆ ಪ್ರಾಪ್ತವಯಸ್ಕನಾದ ಅಜಕುಮಾರನನ್ನು ಸ್ವಯಂವರಕ್ಕಾಗಿ ವಿದರ್ಭಾಧಿಪತಿಯ ರಾಜಧಾನಿಗೆ ಸೇನಾಸಮೇತನಾಗಿ ಸಕಲ ಮರ್ಯಾದೆಯೊಂದಿಗೆ ಕಳುಹಿಸಿಕೊಟ್ಟನು.

ಶ್ಲಾಘ್ಯಸಂಬಂಧಃ ಯಸ್ಯ ಸಃ । ತಂ ॥ ದಾರಕ್ರಿಯಾಯಾಃ ಯೋಗ್ಯದಶಾಯಸ್ಯ ಸಃ । ದಾರಕ್ರಿಯಾಯೋಗ್ಯದಶಃ । ತಂ ॥ ಸೈನ್ಯೇನ ಸಹ ವರ್ತತ ಇತಿ ಸಸೈನ್ಯಃ । ತಮ್ । ವಿದರ್ಭಾಣಾಂ ಅಧಿಪಃ । ವಿದರ್ಭಾಧಿಪಸ್ಯ ರಾಜಧಾನೀ । ತಾಂ ॥ ಪ್ರ—ಉಪಸರ್ಗ ಷ್ಠಾ—ಗತಿನಿವೃತ್ತೌ—ಲಿಟ್—(ಣಿಜಂತಾತ್)—ಪ್ರ.ಪು.ಏ. ॥

ಅಸೌ = ಈ ರಘುವು, ತಂ = ಆ ಭೋಜರಾಜನನ್ನು, ಶ್ಲಾಘ್ಯಸಂಬಂಧಂ = ಯೋಗ್ಯ ವಾದ ಸಂಬಂಧವೆಂದು, ವಿಚಿಂತ್ಯ = ವಿಚಾರಿಸಿ ತಿಳಿದು, ಪುತ್ರಂ ಚ = ಮಗನನ್ನು, ದಾರ ಕ್ರಿಯಾಯೋಗ್ಯದಶಂ = ಪಾಣಿಗ್ರಹಣಕ್ಕೆ ಯೋಗ್ಯವಾದ ವಯಸ್ಸುಳ್ಳವನೆಂದು, ವಿಚಿಂತ್ಯ = ತಿಳಿದು, ಸಸೈನ್ಯಂ = ಸೈನ್ಯದಿಂದ ಕೂಡಿದ, ಏನಂ = ಆ ಅಜನನ್ನು, ಋದ್ಧಾಂ =

ಸಂಪತ್ಸಮೃದ್ಧವಾದ, ವಿದರ್ಭಾಧಿಪರಾಜಧಾನೀಂ=ಭೋಜರಾಜನ ಧಾನಿಗೆ, ಪ್ರಸ್ಥಾಪಯಾಮಾಸ = ಕಳುಹಿಸಿದನು.

**41. ತಸ್ಯೋಪಕಾರ್ಯಾರಚಿತೋಪಚಾರಾ ।**
**ವನ್ಯೇತರಾಜಾನಪದೋಪದಾಭಿಃ ॥**
**ಮಾರ್ಗೇ ನಿವಾಸಾಮನುಜೇಂದ್ರಸೂನೋಃ ।**
**ಬಭೂವುರುದ್ಯಾನವಿಹಾರಕಲ್ಪಾಃ ॥ ೪೧ ॥**

ಭಾವೀಚಕ್ರವರ್ತಿಯು ತಮ್ಮ ಊರಿಗೆ ಬರುತ್ತಿರುವನೆಂದು ತಿಳಿದು ಹಳ್ಳಿಗರ ಸಡಗರಕ್ಕೆ ಎಣೆಯಿರಲಿಲ್ಲ. ಅವರು ರಾಜನನ್ನು ಹೂ, ಹಣ್ಣು, ಧಾನ್ಯ ಮೊದಲಾದ ಫಲ ಕಾಣಿಕೆಗಳನ್ನು ವಿರಚಿಸಿ ಇಳಿದುಕೊಂಡು, ಅವುಗಳನ್ನೆಲ್ಲಾ ಪ್ರೀತ್ಯಾದರದಿಂದ ಸ್ವೀಕರಿಸಿ ಪ್ರಜೆಗಳಿಗೆ ದರ್ಶನವಿತ್ತನು, ಆ ಬಯಲುಸೀಮೆಯಲ್ಲಿ ಅರಸುಕುವರನಿಗೆ ಬೇರೆ ಯಾವ ವ್ಯವಹಾರವೂ ಇರಲಿಲ್ಲ. ಹೀಗೆ ಉಪಚಾರದಮೇಲೆ ಉಪಚಾರಗಳು ನಡೆಯುತ್ತಿದ್ದುದರಿಂದ ರಾಜಧಾನಿಯಲ್ಲಿರುವ ಉದ್ಯಾನವನಗಳಲ್ಲಿ ರಚಿಸಿದ ವಿಹಾರಸ್ಥಳಗಳಂತೆ ರಾಜಕುಮಾರನು ಗ್ರಾಮಗಳಲ್ಲಿ ಹೂಡಿದ ವಾಸಸ್ಥಳಗಳು ತೋರಿದುವು. ದಾರಿಯುದ್ದಕ್ಕೂ ರಾಜಧಾನಿಯ ಸಡಗರ ಎದ್ದುಕಾಣುತ್ತಿತ್ತು. ನಗರಪ್ರದೇಶದ ಯಾವುದೋ ಉದ್ಯಾನವಲ್ಲಿ ಗುಂಪುಗುಂಪಾಗಿ ನಾಗರಿಕರು ಬಂದು ಕ್ರೀಡಿಸುವಂತೆ ಗ್ರಾಮಾಂತರ ಪ್ರದೇಶಗಳ ಮೂಲಕ ರಾಜಕುಮಾರನು ಹಾದುಹೋಗುವಾಗ ನಗರದ ಶ್ರೀಮಂತಿಕೆಯ ಲಕ್ಷಣಗಳು ಮೂಡಿಬಂದುವು, ಗುಡಿತೋರಣಗಳು, ಮಂಟಪಗಳು, ಸ್ವಾಗತಕಮಾನುಗಳು ಅಲ್ಲಲ್ಲಿ ರಚಿತವಾದುವು. ಹಳ್ಳಿಯ ಬೀದಿಗಳು ರಾಜಮಾರ್ಗಗಳಂತೆ (ರಾಜವೀದಿಗಳಂತೆ) ಕಂಡುವು, ರಾಜಕುಮಾರನ ಆಗಮನದಿಂದ ಗ್ರಾಮಾಂತರಪ್ರದೇಶಗಳೂ, ವಿಹಾರ ಭೂಮಿಗಳಾದುವು.

ಅನ್ವಯ :—ಉಪಕಾರ್ಯಾರಚಿತೋಪಚಾರಾ ಜಾನಪದೋಪದಾಭಿಃ ವನ್ಯೇತರಾ ತಸ್ಯ ಮನುಜೇಂದ್ರಸೂನೋಃ ಮಾರ್ಗೇ ನಿವಾಸಾಃ ಉದ್ಯಾನವಿಹಾರಕಲ್ಪಾಃ ಬಭೂವುಃ ॥

ಉಪಕಾರ್ಯಾಸು ರಚಿತಾಃ । ಉಪಕಾರ್ಯಾರಚಿತಾಃ ಉಪಚಾರಾಃ ಯೇಷಾಂ ತೇ । ಉಪಕಾರ್ಯಾರಚಿತೋಪಚಾರಾಃ ॥ ವನೇ ಭವಾಃ । ವನ್ಯಾಃ । ವನ್ಯೇ ಇತರೇ ಯೇಷಾಂ ವನ್ಯೇತರಾ– ತಾಃ । ಜಾನಪದಾನಾಂ ಉಪದಾಃ । ತಾಭಿಃ ॥ ಮನುಜಾನಾಂ ಇಂದ್ರಃ । ಮನುಜೇಂದ್ರಸ್ಯ ಸೂನುಃ । ತಸ್ಯ । ಮನುಜೇಂದ್ರಸೂನೋಃ ಉದ್ಯಾನಾನಿ ಏವ ವಿಹಾರಾಃ । ಉದ್ಯಾನಕಲ್ಪವಿಹಾರಾನಿ ರಸದೃಶಾಃ । ಉದ್ಯಾನವಿಹಾರಕಲ್ಪಾಃ । ಬಭೂವ —ಬಭೂವತುಃ—ಬಭೂವುಃ । ಇತ್ಯಾದಿ । ಭೂ ಸತ್ತಾಯಾಂ—ಲಿಟ್—ಪ್ರ.ಪು.ಬ. ॥

ಉಪಕಾರ್ಯಾಚಿತೋಪಚಾರಾಃ=ರಾಜಯೋಗ್ಯವಾದ ಗುಡಾರಗಳಲ್ಲಿ, ಜಾನಪದೋಪದಾಭಿಃ = ಆಯಾದೇಶಗಳಿಂದ ಬಂದ, ವನ್ಯೇತರಾಃ = ಕಾಡಿನಲ್ಲಿ ಇರುವವುಗಳಿಗಿಂತಲೂ ಬೇರೆಯಾದ, ಮನುಜೇಂದ್ರಸೂನೋಃ = ರಾಜಪುತ್ರನಾದ ಅಜನಿಗೆ, ಮಾರ್ಗೇ = ದಾರಿಯಲ್ಲಿ, ನಿವಾಸಾಃ=ವಾಸಸ್ಥಳಗಳು, ಉದ್ಯಾನವಿಹಾರಕಲ್ಪಾಃ=ಉದ್ಯಾನಗಳಲ್ಲಿರುವ, ಪಾರ್ಕ್‌ಗಳಲ್ಲಿರುವ ಕ್ರೀಡಾವಿಹಾರ ಸ್ಥಾನಗಳಂತೆ, ಬಭೂವುಃ = ಆದುವು.

**42. ಸ ನರ್ಮದಾರೋಧಸಿ ಸೀಕರಾರ್ದ್ರೈಃ ।**
**ಮರುದ್ಭಿರಾನರ್ತಿತನಕ್ತಮಾಲೇ ॥**
**ನಿವೇಶಯಾಮಾಸ ವಿಲಂಘಿತಾಧ್ವಾ ।**
**ಕ್ಲಾಂತಂ ರಜೋಧೂಸರಕೇತುಸೈನ್ಯಮ್ ॥ ೪೨ ॥**

ಬಹುದೂರ ಪಯಣಿಸುತ್ತಾ ಬಂದ ಅಜಕುಮಾರನ ಸೇನೆ ಬಳಲಿ ಬೆಂಡಾಗಿತ್ತು. ಅಜನು ತನ್ನ ಸೇನೆಯನ್ನು ನರ್ಮದಾನದಿಯ ದಡದಲ್ಲಿ ಬೀಡುಬಿಡುವಂತೆ ಆದೇಶಿಸಿದನು. ಅಲ್ಲಿ ಅವರು ತಂಗಿದರು. ಆಗ ಆಯಾಸದಿಂದ ದಣಿದ ಸೇನಾನಿಕರಕ್ಕೆ ನರ್ಮದೆಯ ಕಡೆಯಿಂದ ಬೀಸುವ ಸೀರ್ಪನಿಯಿಂದ ಕೂಡಿದ ತಂಪಾದ ಗಾಳಿಯು ಬಹಳ ಹಿತಕರವೆನಿಸಿತು. ನರ್ಮದೆಯ ದಡದ ಮೇಲೆ ನಕ್ತಮಾಲಾ ಅಥವಾ ಚಿರಬಿಲ್ವಮರಗಳು (ಚಿರಬಿಲ್ವಮಾಲಾ, ಕರುಂಜಕೇ ವೃಕ್ಷಗಳು) ನಿಬಿಡವಾಗಿ ಬೆಳೆದಿದ್ದುವು. ನದಿಯ ಮೇಲಿಂದ ಗಾಳಿಯು ಬೀಸಿಕೊಂಡು ಬರುವಾಗ ಚಿರಬಿಲ್ವವೃಕ್ಷಗಳ ಎಲೆಯನ್ನು ಅಲ್ಲಾಡಿಸುತ್ತಾ ಬೀಸುತ್ತಿರಲು ಪರಿಮಳಯುಕ್ತವಾದ, ತಂಪಾದ, ಮಂದವಾದ ಗಾಳಿಯು, ಹಿತಕರವಾಗಿ ಸ್ಪರ್ಶಿಸಿ ಮಾರ್ಗಶ್ರಮವನ್ನು ಪರಿಹರಿಸಿತು. ಬಹುದೂರ ಪಯಣಿಸಿ ಬಂದುದರಿಂದ ಮಾರ್ಗದ ಕೆಂಧೂಳಿನಿಂದ ಧ್ವಜಪತಾಕೆಗಳ ಬಣ್ಣವೇ ಬದಲಾಗಿತ್ತು, ಬಾವುಟಗಳು, ಧ್ವಜಪತಾಕೆಗಳು ಬೂದುಬಣ್ಣದಿಂದ ಮಲಿನಗೊಂಡು ಶೋಭಿಸುತ್ತಿದ್ದುವು. ಹೀಗೆ ನರ್ಮದೆಯ ಗಾಳಿಯಲ್ಲಿ ಶೈತ್ಯ, ಮಾಂದ್ಯ, ಸೌರಭ್ಯ ಗುಣಗಳಿರುವುದರಿಂದ ಸೈನ್ಯದ (ಸೈನಿಕರ, ಚತುರಂಗಬಲದ) ಪ್ರಯಾಣದ ಆಯಾಸವು ಕ್ಷಣಮಾತ್ರದಲ್ಲಿ ಪರಿದೋಡಿದುದು (ಪರಿಹಾರವಾಯಿತು).

ಅನ್ವಯ :—ವಿಲಂಘಿತಾಧ್ವಾ ಸೀಕರಾರ್ದ್ರೈಃ ಮರುದ್ಭಿಃ ಆನರ್ತಿತ ನಕ್ತಮಾಲೇ ನರ್ಮದಾರೋಧಸಿಸ ಕ್ಲಾಂತಂ ರಜೋಧೂಸರಕೇತುಸೈನ್ಯಂ ನಿವೇಶಯಾಮಾಸ ॥

ನರ್ಮದಾಯಾಃ ರೋಧಃ । ತಸ್ಮಿನ್ ॥ ಸೀಕರೈಃ ಆರ್ದ್ರಾಃ । ತೈಃ ॥ ಆನರ್ತಿತಾಃ ನಕ್ತಮಾಲಾಃ ಯಸ್ಮಿನ್ ತತ್ । ಆನರ್ತಿತನಕ್ತಮಾಲವತ್ । ತಸ್ಮಿನ್ ॥ ವಿಲಂಘಿತಃ ಅಧ್ವಾ ಯೇನ ಸಃ । ವಿಲಂಘಿತಾಧ್ವಾ ॥ ರಜಸಾಧೂಸರಾಃ । ರಜೋಧೂಸರಾಃ ಕೇತವಃ ಯಸ್ಯ ತತ್ । ರಜೋಧೂಸರಕೇತು ॥ ನಿ—ಉಪಸರ್ಗ । ವೇಶಯಾಮಾಸ—ಮಾಸತುಃ —ಮಾಸುಃ । ಇತ್ಯಾದಿ ॥ ವಿಶ—ಪ್ರವೇಶನೇ । ಣಿಜಂತಾತ್—ಲಿಟ್—ಪ್ರ.ಪು.ಏ. ॥

ವಿಲಂಘಿತಾಧ್ವಾ = ಅತಿಕ್ರಮಿಸಿದಮಾರ್ಗವುಳ್ಳ, ಸಃ = ಆ ಅಜನು ಸೀಕರಾರ್ದ್ರೈಃ = ತುಂತುರುಗಳಿಂದ ಶೀತಲವಾದ, ಮರುದ್ಭಿಃ = ಗಾಳಿಯಿಂದ, ಆನರ್ತಿತನಕ್ತಮಾಲೇ = ಅಲ್ಲಾಡಿಸಲ್ಪಡುವ ಚಿರಬಿಲ್ವವೆಂಬ ಮರಗಳ ಸಾಲುಗಳಿರುವ, ನರ್ಮದಾರೋಧಸಿ = ನರ್ಮದಾನದಿಯ ಕಿನಾರೆಯಲ್ಲಿ, ಕ್ಲಾಂತಂ = ನಡೆದು ಬಳಲಿದ, ರಜೋಧೂಸರಕೇತು = ಧೂಳಿಂದ ಬೂದುಬಣ್ಣ ಹೊಂದಿದ ಪತಾಕೆಗಳು, ಸೈನ್ಯಂ = ಸೈನ್ಯವನ್ನು, ನಿವೇಶಯಾಮಾಸ = ಇಡಿಸಿದನು, ನಿಲ್ಲಿಸಿದನು.

**43. ಅಥೋಪರಿಷ್ಟಾದ್ಭ್ರಮರೈರ್ಭ್ರಮದ್ಭಿಃ ।**
**ಪ್ರಾಕ್ ಸೂಚಿತಾಂತಃ ಸಲಿಲಪ್ರವೇಶಃ ॥**

**ನಿರ್ಧೌತದಾನಾಮಲಗಂಡಭಿತ್ತಿಃ ।**
**ವನ್ಯಃ ಸರಿತ್ತೋ ಗಜ ಉನ್ಮಮಜ್ಜ ॥ ೪೩ ॥**

ಅಲ್ಲಿ ಆ ನರ್ಮದೆಯ ಮಡುವಿನಲ್ಲಿ ಕಾಡಾನೆಯೊಂದು ಮೇಲಕ್ಕೆ ಎದ್ದಿತು. ಅದು ನರ್ಮದೆಯ ಜಲರಾಶಿಯಲ್ಲಿ ಏಳುತ್ತ, ಬೀಳುತ್ತ, ಕ್ರೀಡಿಸಿತು. ರಂದ್ರಭಯಂಕರವಾಗಿ ವಿಹರಿಸಿತು ಸ್ವೇಚ್ಛೆಯಿಂದ, ಉನ್ಮತ್ತತೆಯಿಂದ ಜಲಕ್ರೀಡೆಯಾಡಿತು. ಆ ಮದ್ದಾನೆಯ ಕಿವಿಗಳಿಂದ ಒಸರುತ್ತಿರುವ ಮದಜಲಧಾರೆಯು ತೊಳೆಯಲ್ಪಟ್ಟು ಶುದ್ಧವಾಯಿತು. ಮದೋದಕದ ಪರಿಮಳವನ್ನು ಅನುಸರಿಸಿ ಬಂದ ತುಂಬಿಗಳ ದಂಡು ಮದಗಜವು ನೀರಿಗಿಳಿದ ಜಾಗವನ್ನು ಸೂಚಿಸುತ್ತ ಮೇಲೆ ಸುತ್ತುವರಿದು ಝೇಂಕರಿಸುತ್ತಿದ್ದುವು. ಅಜನ ಸೇನೆಯು ದಡದಲ್ಲಿ ಬೀಡುಬಿಟ್ಟಿತು. ಅಜನ ಸೈನಿಕರು ಕಾಡಾನೆಯು ನದಿಯ ನೀರಿನಿಂದ ಮೇಲಕ್ಕೆ ಎದ್ದುದನ್ನು ಕಂಡರು.

ಪ್ರಾಕ್‌ಸೂಚಿತಃ । ಅಂತಃ ಸಲಿಲೇ ಪ್ರವೇಶಃ । ಪ್ರಾಕ್‌ಸೂಚಿತಃ ಅಂತಃಸಲಿಲ ಪ್ರವೇಶಃ ಯಸ್ಯ ಸಃ । ಪ್ರಾಕ್‌ಸೂಚಿತಾಂತಃಸಲಿಲಪ್ರವೇಶಃ ಪ್ರಶಸ್ತೌ ಗಂಡೌ । ಗಂಡ ಭಿತ್ತೀ । (ಅಥವಾ) ಗಂಡೌ ಭಿತ್ತೀ ಇವ ನಿರ್ಧೌತಂ ದಾನಂ ಯಾಭ್ಯಾಂ ತೇ । ನಿರ್ಧೌತ ದಾನೇ । ನಿರ್ಧೌತದಾನೇ ಅಮಲೇ ಗಂಡಭಿತ್ತೀ ಯಸ್ಯ ಸಃ । ನಿರ್ಧೌತದಾನಮಲಗಂಡ ಭಿತ್ತಿಃ ॥ ವನೇ ಭವಃ ವನ್ಯಃ । ಉತ್—ಉಪಸರ್ಗ । ಮಮಜ್ಜ—ಮಸ್ಜೋ ಶುದ್ಧೌ—ಲಿಟ್—ಪ್ರ.ಪು.ಏ. ॥ (line partly reads: ಮಮಜ್ಜ—ಮಮಜ್ಜತುಃ—ಮಮಜ್ಜುಃ । ಇತ್ಯಾದಿ । ಟುಮಸ್ಜೋ—ಶುದ್ಧೌ—ಲಿಟ್—ಪ್ರ.ಪು.ಏ. ॥)

ಅಥ = ಅನಂತರ, ಉಪರಿಷ್ಟಾತ್ = ಮೇಲ್ಭಾಗದಲ್ಲಿ, ಭ್ರಮದ್ಭಿಃ = ಹಾರುತ್ತಿರುವ, ಭ್ರಮರೈಃ = ತುಂಬಿಗಳಿಂದ, ಪ್ರಾಕ್‌ಸೂಚಿತಾಂತಃಸಲಿಲಪ್ರವೇಶಃ = ಮೊದಲೇ ತಿಳಿಸಲ್ಪಟ್ಟ ನೀರಿನೊಳಗೆ ಸೇರಿರುವ, ನಿರ್ಧೌತದಾನಾಮಲಗಂಡಭಿತ್ತಿಃ = ತೊಳೆದುಹೋದ ಸ್ವಚ್ಛವಾದ ಕಪೋಲಪ್ರದೇಶವುಳ್ಳ (ಮದಜಲದಿಂದ), ವನ್ಯಗಜಃ = ಕಾಡಾನೆಯು, ಸರಿತ್ತಃ = ನದಿಯಿಂದ, ಉನ್ಮಮಜ್ಜ = ಎದ್ದಿತು.

**44. ನಿಃಶೇಷವಿಕ್ಷಾಲಿತಧಾತುನಾಪಿ ।**
**ವಪ್ರ ಕ್ರಿಯಾಮೃಕ್ಷವತಸ್ತಟೇಷು ॥**
**ನೀಲೋರ್ಧ್ವರೇಖಾಶಬಲೇನ ಶಂಸನ್ ।**
**ದಂತದ್ವಯೇನಾಶ್ಮವಿಕುಂಠಿತೇನ ॥ ೪೪ ॥**

ನೀರಿನಲ್ಲಿ ಮುಳುಗಿ ಹೊರಳಾಡಿ ಆ ಆನೆಯು ತನ್ನ ದಂತದ್ವಯಗಳನ್ನು ಶುಚಿಗೊಳಿಸಿತು. ದಂತಪ್ರದೇಶದಲ್ಲಿ ಅಂಟಿಕೊಂಡಿದ್ದ ಕೆಂಪಾದ ಗೈರಿಕಾದಿ ಧಾತುಗಳು (ಖನಿಜ, ಮಣ್ಣು ಇತ್ಯಾದಿ) ಸಂಪೂರ್ಣವಾಗಿ ತೊಳೆದುಹೋದುವು. ಆ ಎರಡು ಮಹಾದಂತಗಳು ಧವಳ ಕಾಂತಿಯಿಂದ ಹೊಳೆಯತೊಡಗಿದುವು (ವಜ್ರಾಯುಧದಂತೆ). ಆ ಮದಗಜವು ಋಕ್ಷವಾನ್ ಪರ್ವತದ ಸಾನುಪ್ರದೇಶದಲ್ಲಿ ವಪ್ರಕ್ರೀಡೆಯಾಡಿ (ಏಲಾಟವಾಡಿ) ಆಗ ತಾನೇ ಬಂದಿತ್ತು. ಅದರ ತಿರ್ಯಗ್‌ದಂತಹ ಪ್ರಹಾರದಿಂದ, ಕಲ್ಲುಬಂಡೆಗಳಿಗೆ ತೀಕ್ಷ್ಣವಾದ ದಂತಗಳನ್ನು ಹೊಡೆದ ಪರಿಣಾಮವಾಗಿ ದಂತಗಳು ಮೊಂಡಾಗಿದ್ದುವು. ಖನಿಜಗಳಿಂದ ದಂತದ ಮೇಲೆ ಕರಿಯ ನೀಲಬಣ್ಣದ ಗೆರೆಗಳು ಸ್ಫುಟವಾಗಿ ಅಂದವಾಗಿ ಕಾಣಿಸುತ್ತಿದ್ದುವು.

ಈ ರೀತಿ ನೀರಾಟವಾಡಿ ರಭಸದಿಂದ ಮೇಲಕ್ಕೆದ್ದು ಬಲಯುತವಾದ ಎರಡು ದಂತಗಳಿಂದ ಶೋಭಿಸುತ್ತಬರುವ ಬಲಯುತವಾದ, ಬಲು ಒರಟಾದ ಕಾಡಾನೆಯೊಂದನ್ನು ನೋಡಿ ಆ ಸೈನಿಕರು ಮೋದಗೊಂಡರು.

ಅನ್ವಯ :—ನಿಃಶೇಷವಿಕ್ಷಾಲಿತಧಾತುನಾ ಅಪಿ ನೀಲೋರ್ಧ್ವರೇಖಾಶಬಲೇನ ಅಶ್ಮವಿಕುಂಠಿತೇನ ದಂತದ್ವಯೇನ ಋಕ್ಷವತಃ ತಟೇಷು ವಪ್ರಕ್ರಿಯಾಂ ಶಂಸನ್ ॥

ನಿಃಶೇಷಂ ವಿಕ್ಷಾಲಿತಃ । ನಿಃಶೇಷವಿಕ್ಷಾಲಿತಃ ಧಾತುಃ ಯಸ್ಯ ತತ್ । ನಿಃಶೇಷವಿಕ್ಷಾಲಿತ ಧಾತುಃ । ತೇನ ॥ ನೀಲಾ ಚ ಸಾ ಊರ್ಧ್ವಾ ಚ । ನೀಲೋರ್ಧ್ವಾ ಚ ಸಾ ರೇಖಾ ಚ । ನೀ—ಖಯಾಶಬಲಂ । ತೇನ ॥ ದಂತಯೋಃ ದ್ವಯಂ । ತೇನ ॥ ಅಶ್ಮಭಿಃ ವಿಕುಂಠಿತಂ । ತೇನ ॥

ನಿಃಶೇಷವಿಕ್ಷಾಲಿತಧಾತುನಾ ಅಪಿ = ಚೆನ್ನಾಗಿ ತೊಳೆದುಹೋದ ಗೈರಿಕಾದಿಧಾತುವುಳ್ಳದ್ದಾದರೂ, ನೀಲೋರ್ಧ್ವಲೇಖಾಶಬಲೇನ=ಕಪ್ಪಾಗಿಯೂ, ಮೇಲ್ಮುಖವಾಗಿಯೂ ಇರುವ ರೇಖೆಯಿಂದ ಚಿತ್ರವರ್ಣವುಳ್ಳ, ಅಶ್ಮವಿಕುಂಠಿತೇನ = ಕಲ್ಲಿನಿಂದ ದಪ್ಪವಾದ, ಮೊಂಡಾದ ತುದಿಯುಳ್ಳ, ದಂತದ್ವಯೇನ = ಎರಡು ದಾಡೆಗಳುಳ್ಳ, ಋಕ್ಷವತಃ = ಋಕ್ಷವಾನ್ ಪರ್ವತದ, ತಟೇಷು = ತಪ್ಪಲು ಪ್ರದೇಶಗಳಲ್ಲಿ, ವಪ್ರಕ್ರಿಯಾಂ = ವಪ್ರಕ್ರೀಡೆಯನ್ನು, ಶಂಸನ್ = ಸೂಚಿಸುತ್ತಾ (ಎದ್ದಿತು).

**45. ಸಂಹಾರವಿಕ್ಷೇಪಲಘುಕ್ರಿಯೇಣ ।**
**ಹಸ್ತೇನ ತೀರಾಭಿಮುಖಃ ಸಶಬ್ದಮ್ ॥**
**ಬಭೌ ಸ ಭಿಂದನ್ ಬೃಹತಸ್ತರಂಗಾನ್ ।**
**ನಾರ್ಯರ್ಗಲಾಭಂಗ ಇವ ಪ್ರವೃತ್ತಃ ॥ ೪೫ ॥**

ಆ ಆನೆಯು ಜಲಕ್ರೀಡೆಯಾಡುತ್ತ ಅದ್ಭುತ ಆಟಾಟೋಪಗಳನ್ನು ಪ್ರದರ್ಶಿಸಿತು. ವೇಗವಾಗಿ ಸೊಂಡಿಲನ್ನು ಸಂಕೋಚವಮಾಡುತ್ತಾ, ಮತ್ತೊಮ್ಮೆ ಸೊಂಡಿಲನ್ನು ಸಂಕೋಚಮಾಡುತ್ತಾ, ಮತ್ತೊಮ್ಮೆ ಸೊಂಡಿಲನ್ನು ವೇಗದಿಂದ ಮುಂದಕ್ಕೆ ಚಾಚುತ್ತಾ, ಘೀಳಿಡುತ್ತಲಿತ್ತು. ನೀರನ್ನು ರಭಸದಿಂದ ಒಳಕ್ಕೆಳೆದು ಕಾರಂಜಿಯಂತೆ ಹೊರಸೂಸುತ್ತ ಕ್ರೀಡಿಸುತ್ತಲಿತ್ತು. ಆಗ ಅದರ ಸಿಡಿಲಿನಂತಹ ಮಹಾಧ್ವನಿಯು ಗಿರಿಕಂದರಗಳಲ್ಲಿ ಮೊಳಗತೊಡಗಿತು. ಹೀಗೆ ಅಧಿಕಶಬ್ದವನ್ನುಂಟುಮಾಡುತ್ತಾ ತನಗೆ ಎದುರಾಗಿ ಬರುವ ದೊಡ್ಡ ಅಲೆಗಳನ್ನು ದಡಕ್ಕೆ ಅಭಿಮುಖವಾಗಿ ಬರುತ್ತಿತ್ತು. ಹೀಗೆ ಬರುವ ಆನೆಯ ಗತಿಯನ್ನು ನೋಡಿದರೆ ಗಜಬಂಧನಸ್ಥಾನವಾದ ಗಜಾಲಯದ ಅಗಣಿಯನ್ನು ಕಿತ್ತೊಗೆಯಲು ಪ್ರಯತ್ನಿಸಿದಂತೆ ಕಂಡಿತು. ಅದು ಅಲೆಗಳನ್ನು ಛೇದಿಸುತ್ತಾ ದಡಕ್ಕೆ ಅಭಿಮುಖವಾಗಿ ಬರುವುದನ್ನು ಕಂಡರೆ, ಗಜಬಂಧನಸ್ಥಾನದ ಅಗಣಿಯನ್ನು ಕಿತ್ತೊಗೆಯಲು ಯತ್ನಿಸುತ್ತಿದೆಯೋ ಎಂಬಂತೆ ವಿಜೃಂಭಿಸಿತು. ಅದು ಮುಂದೆ ನುಗ್ಗಿ ಗಜಗಳನ್ನು ಬಂಧಿಸುವ ಸಂಕೋಲೆಗಳನ್ನು ತುಂಡು ತುಂಡುಮಾಡಿ ಕಿತ್ತೆಸೆವುದೋ ಎಂಬಂತೆ ರಂಪಾಟವಾಡುವಂತೆ ನೀರಲ್ಲಿ ಅಟ್ಟಹಾಸದ ಆಟಾಟೋಪಗಳನ್ನು ಪ್ರದರ್ಶಿಸುತ್ತಾ ಶೋಭಿಸಿತು.

ಅನ್ವಯಃ :— ಸಂಹಾರವಿಕ್ಷೇಪಲಘುಕ್ರಿಯೇಣ ಹಸ್ತೇನ ಸಶಬ್ದಂ ಬೃಹತಃ ತರಂಗಾನ್ ಭಿಂದನ್ ತೀರಾಭಿಮುಖಃ ಸಃ ವಾರ್ಯರ್ಗಲಾಭಂಗೇ ಇವ ಪ್ರವೃತ್ತಃ ॥

ಸಂಹಾರಶ್ಚ ವಿಕ್ಷೇಪಶ್ಚ, ಸಂಹಾರವಿಕ್ಷೇಪೌ । ಸಂಹಾರವಿಕ್ಷೇಪಯೋಃ ಲಘುಃಕ್ರಿಯಾ ಯಸ್ಯ ಸಃ । ಸಂಹಾರವಿಕ್ಷೇಪಲಘುಃಕ್ರಿಯಃ ತೇನ ॥ ತೀರಸ್ಯ ಅಭಿಮುಖಃ ॥ ಶಬ್ದೇನ ಸಹಿತಂ ಯಥಾ ತಥಾ ॥ ಸಶಬ್ದಮ್ ॥ ವಾರ್ಯಾಃ ಅರ್ಗಲಾ । ವಾರ್ಯರ್ಗಲಾಯಾಃ ಭಂಗಃ । ತಸ್ಮಿನ್ ॥ ಬಭೌ—ಬಭತುಃ—ಬಭುಃ । ಬಭಿಥ, ಬಭಾಥ—ಬಭಥುಃ—ಬಭ । ಬಭೌ—ಬಭಿವ—ಬಭಿಮ ॥ ಭಾ—ದೀಪ್ತೌ—ಲಿಟ್—ಪ್ರ.ಪು.ಏ. ॥

ಸಂಹಾರವಿಕ್ಷೇಪಲಘುಕ್ರಿಯೇಣ = ಸಂಕೋಚಪ್ರಸಾರಣ (ಸಣ್ಣದು, ದೊಡ್ಡದು ಮಾಡುವ ಕ್ರಿಯೆ), ಹಸ್ತೇನ = ಸೊಂಡಿಲಿನಿಂದ, ಸಶಬ್ದಂ = ಶಬ್ದಮಾಡುತ್ತಾ, ಬೃಹತಸ್ತರಂಗಾನ್ = ದೊಡ್ಡದೊಡ್ಡ ಅಲೆಗಳನ್ನು, ಭಿಂದನ್ = ಭೇದಿಸುತ್ತಾ, ತೀರಾಭಿಮುಖಃ = ದಡಕ್ಕೆ ಎದುರಾಗಿಬರುವ, ಸಃ = ಆ ಆನೆಯು, ವಾರ್ಯರ್ಗಲಾಭಂಗೇ = ಗಜಬಂಧನ ಸ್ಥಾನದ ಅಗಣೆಯನ್ನು ಮುರಿಯಲು, ಪ್ರವೃತ್ತ ಇವ = ಆರಂಭಿಸಿರುವಂತೆ, ಬಭೌ = ಶೋಭಿಸಿತು.

46. **ಶೈಲೋಪಮಃ ಶೈವಲಮಂಜರೀಣಾಂ ।**
**ಜಾಲಾನಿ ಕರ್ಷನ್ನುರಸಾ ಸ ಪಶ್ಚಾತ್ ॥**
**ಪೂರ್ವಂ ತದುತ್ಪೀಡಿತವಾರಿರಾಶಿಃ ।**
**ಸರಿತ್ಪ್ರವಾಹಸ್ತಟಮುತ್ಸಸರ್ಪ** ॥ ೪೬ ॥

ಪರ್ವತಕ್ಕೆ ಸಮಾನವಾದ ದೇಹವುಳ್ಳ ಆ ಆನೆಯು ನೀರಿನಲ್ಲಿರುವ ಪಾಚಿಯ ಗೊಂಚಲುಗಳ ಸಮುದಾಯಗಳನ್ನು ಕಾಲು, ಎದೆಗಳಿಂದ ಸುತ್ತಿ ಎಳೆದುಕೊಂಡು ಬರುತ್ತಾ ಇರುವಾಗ ಅದರ ಹೊಡೆತದಿಂದ ಎದ್ದಿರುವ ನೀರಿನ ದೊಡ್ಡ ಅಲೆಗಳುಳ್ಳ ನದಿಯ ಪ್ರವಾಹವು ಅದಕ್ಕಿಂತ ಮೊದಲೇ ದಡವನ್ನು ಸೇರಿತು. ಆಮೇಲೆ ಆ ಆನೆಯು ದಡಕ್ಕೆ ಬಂತು. ಹೀಗೆ ಹಾವಸೆಯ ಮಂಜರಿಯ ಜಾಲ ಮುಚ್ಚಿದ ಮೈಯಗಿರಿಯಂತ ಹೇರಾನೆ ದಡ ಸೇರಿತು. ಆದರೆ ಅದಕ್ಕಿಂತ ಮೊದಲೇ ಅಲ್ಲೋಲಕಲ್ಲೋಲವಾದ ಪ್ರವಾಹದ ಮಹಾಪೂರವು ದಡಕ್ಕೆ ಅಪ್ಪಳಿಸಿತು.

ಶೈಲೇನ ಉಪಮಾ ಯಸ್ಯಸಃ । ಶೈಲೋಪಮಃ । ಶೈವಲಾನಾಂ ಮಂಜರ್ಯಃ ತಾಸಾಮ್ ॥ ತೇನ ಉತ್ಪೀಡಿತಃ । ವಾರೀಣಾಂ ರಾಶಿಃ । ತದುತ್ಪೀಡಿತಃ ವಾರಿರಾಶಿಃ ಯಸ್ಯ ಸಃ । ತದುತ್ಪೀಡಿತವಾರಿರಾಶಿಃ । ಸರಿತಃ ಪ್ರವಾಹಃ ॥ ಉತ್—ಉಪಸರ್ಗ । ಸಸರ್ಪ—ಸಸೃಪತುಃ—ಸಸೃಪುಃ । ಸಸರ್ಪಿಥ—ಇತ್ಯಾದಿ । ಸೃಪಲೃ—ಗತೌ—ಲಿಟ್—ಪ್ರ.ಪು.ಏ. ॥

ಅನ್ವಯಃ :—ಶೈಲೋಪಮಃ ಸಃ ಶೈವಲಮಂಜರೀಣಾಂ ಜಾಲಾನಿ ಉರಸಾ ಕರ್ಷನ್ ಪಶ್ಚಾತ್ ತಟಮ್ ಉತ್ಸಸರ್ಪ । ಪೂರ್ವಂ ತದುತ್ಪೀಡಿತವಾರಿರಾಶಿಃ ಸರಿತ್ ಪ್ರವಾಹಃ ತಟಮ್ ಉತ್ಸಸರ್ಪ ॥

ಶೈಲೋಪಮಃ = ಪರ್ವತಸಮಾನವಾದ, ಸಃ = ಆ ಆನೆಯು, ಶೈವಲಮಂಜರೀಣಾಂ = ಪಾಚಿಯ ಗೊಂಚಲುಗಳ, ಜಾಲಾನಿ = ಸಮುದಾಯಗಳನ್ನು, ಉರಸಾ = ಎದೆಯಿಂದ, ಕರ್ಷನ್ = ಎಳೆಯುತ್ತಾ, ಪಶ್ಚಾತ್ = ಆಮೇಲೆ, ತಟಂ = ದಡವನ್ನು, ಉತ್ಸಸರ್ಪ = ಸೇರಿತು, ಪೂರ್ವಂ = ಮೊದಲು, ತದುತ್ಪೀಡಿತವಾರಿರಾಶಿಃ = ಆನೆಯ ಸಮ್ಮರ್ದದಿಂದ ಉಂಟಾದ ನೀರಿನ ರಾಶಿಯುಳ್ಳ (ಎತ್ತರವಾದ ಅಲೆಗಳುಳ್ಳ) ಸರಿತ್ಪ್ರವಾಹಃ = ನದಿಯ ನೀರು, ತಟಂ = ದಡವನ್ನು. ಉತ್ಸಸರ್ಪ = ಮುಟ್ಟಿತು.

**47.** **ತಸ್ಯೈಕನಾಗಸ್ಯ ಕಪೋಲಭಿತ್ತ್ಯೋಃ ।**
**ಜಲಾವಗಾಹಕ್ಷಣಮಾತ್ರಶಾಂತಾ ॥**
**ವನ್ಯೇತರಾನೇಕಪದರ್ಶನೇನ ।**
**ಪುನರ್ದಿದೀಪೇ ಮದದುರ್ದಿನಶ್ರೀಃ** ॥ ೪೭ ॥

ಸೊಕ್ಕೇರಿದ ಆ ಗಂಡಾನೆಯು ಗೋಡೆಯಂತಿರುವ ಕಪೋಲಗಳಿಂದ ಧಾರಾಪೂರ್ವಕ ಸುರಿಯುತ್ತಿದ್ದ ಮದಜಲವು ನೀರಾಟವಾಡಿದಾಗ ಕ್ಷಣಕಾಲ ತೊಳೆದುಹೋಗಿ ನಿರ್ಮಲ ಗೊಂಡಿತು. ಆದರೆ ಮರುಕ್ಷಣವೇ ಆ ಆನೆಯು ಅಜನ ಸೇನೆಯಲ್ಲಿರುವ ಪಳಗಿದ ಆನೆಗಳ ಸಮೂಹವನ್ನು ನೋಡಿದ ಆ ಕ್ಷಣವೇ ಅದು ಸೊಕ್ಕೇರಿತು. ಕೂಡಲೇ ಅದರ ಕಪೋಲ ಗಳಿಂದ ಮದಧಾರೆಯು ಎಡೆಬಿಡದೆ ಸುರಿಯಲು ಪ್ರಾರಂಭಿಸಿತು, ಹೀಗೆ ಸೊಕ್ಕಿದ ಆ ಕಾಡಾನೆ ಪಳಗಿದ ಊರಾನೆಗಳನ್ನು ಕಂಡೊಡನೆ ಮದಧಾರೆ ಮೇರೆವರಿದು ಕಪೋಲ ದಿಂದ ಉಕ್ಕಿಹರಿಯಿತು.

ಅನ್ವಯ :—ತಸ್ಯ ಏಕನಾಗಸ್ಯಕಪೋಲಭಿತ್ತ್ಯೋಃಜಲಾವಶಾಂತಾ ಮದ ದುರ್ದಿನ ಶ್ರೀಃವನ್ಯೇತರಾನೇಕಪದರ್ಶನೇನ ಪುನಃ ದಿದೀಪೇ ॥

ಏಕಶ್ಚಾಸೌ ನಾಗಶ್ಚ । ತಸ್ಯ ॥ ಕಪೋಲೌ ಭಿತ್ತೀ ಇವ—ಕಪೋಲಭಿತ್ತೀ । ತಯೋಃ ॥ ಕ್ಷಣ ಏವ ಕ್ಷಣಮಾತ್ರಂ ॥ ಕ್ಷಣಮಾತ್ರಂ ಶಾಂತಾ । ಜಲೇ ಅವಗಾಹಃ । ಜಲಾವಗಾಹೇನ ಕ್ಷಣಮಾತ್ರಶಾಂತಾ ॥ ವನ್ಯಾತ್ ಇತರೇ । ವನ್ಯೇತರೇ ಚ ತೇ ಅನೇಕಪಾಶ್ಚ । ವನ್ಯೇತರಾ ನೇಕಪದರ್ಶನೇನ । ದರ್ಶನಂ ತೇನ ॥ ಮದಸ್ಯ ದುರ್ದಿನಶ್ರೀಃ ॥ ದಿದೀಪೇ—ದಿದೀ ಪಾತೇ—ದಿದೀಪಿರೇ—ಇತ್ಯಾದಿ ॥ ದೀಪೀ—ದೀಪ್ತೌ—ಲಿಟ್—ಪ್ರ.ಪು.ಏ. ॥

ತಸ್ಯ = ಆ, ಏಕನಾಗಸ್ಯ = ಒಂದೇ ಆದ ಆನೆಯ, ಕಪೋಲಭಿತ್ತ್ಯೋಃ = ವಿಶಾಲವಾದ ಕಪೋಲಪ್ರದೇಶಗಳಲ್ಲಿ, ಜಲಾವಗಾಹಕ್ಷಣಮಾತ್ರಶಾಂತಾ = ನೀರಿನಲ್ಲಿ ಮುಳುಗಿರುವುದ ರಿಂದ ಕ್ಷಣಕಾಲ ನಿಂತಿರುವ, ಮದದುರ್ದಿನಶ್ರೀಃ = ಅಧಿಕವಾದಮದಜಲಧಾರೆಯು, ವನ್ಯೇತ ರಾನೇಕಪದರ್ಶನೇನ = ಪಳಗಿದ ಆನೆಗಳನ್ನು ನೋಡುವುದರಿಂದ, ಪುನಃ = ತಿರುಗಿ, ದಿದೀಪೇ = ಅಧಿಕವಾಗಿ ಸುರಿಯಲು ಪ್ರಾರಂಭಿಸಿತು.

**48.** **ಸಪ್ತಚ್ಛದಕ್ಷೀರಕಟುಪ್ರವಾಹ ।**
**ಮಸಹ್ಯಮಾಘ್ರಾಯ ಮದಂ ತದೀಯಮ್ ॥**

ವಿಲಂಘಿತಾಧೋರಣತೀವ್ರಯತ್ನಾಃ ।
ಸೇನಾ ಗಜೇಂದ್ರಾ ವಿಮುಖಾ ಬಭೂವುಃ ॥ ೪೮ ॥

ಏಳೆಲೆ ಬಾಳೆಯ ಹಾಲಿನಂತೆ ಕಟುವಾದ ಪರಿಮಳದಿಂದ ಕೂಡಿದ ದುಸ್ಸಹವಾದ ಮದಜಲಧಾರೆಯನ್ನು ಪಳಗಿಸಿದ ಆನೆಗಳು ದೂರದಿಂದಲೇ ಆಘ್ರಾಣಿಸಿ ಅವುಗಳೂ ಸೊಕ್ಕೇರಿದುವು. ಅವುಗಳು ಕೆರಳಿ ಮದಭರಿತವಾಗಿ ಅದರೊಡನೆ ಕಾದಾಡಲು ಉದ್ಯುಕ್ತವಾಗಿ ಮೊಗ ತಿರುಗಿಸಿ ಸಂಕೋಲೆಗಳ ಬಂಧನವನ್ನು ಮುರಿದಿಕ್ಕಲು ಯತ್ನಿಸಿದುವು. ಆದರೆ ಕಾರ್ಯನಿರತರಾದ ಮಾವುತರು ಅದರ ಪ್ರಯತ್ನಗಳನ್ನು ಹುಸಿಗೊಳಿಸಲು ಯತ್ನಿಸಿದರು. ಆ ಗಜೇಂದ್ರರ ಗಂಡಸ್ಥಲವನ್ನು ಅಂಕುಶದಿಂದ ತಿವಿದು ಶಾಂತಗೊಳಿಸಲು ಪ್ರಯತ್ನಿಸಿ ಮಾವುತರು ವಿಫಲರಾದರು. ಪಳಗಿದ ಗಜೇಂದ್ರರ ಸಾಲು ಮಹಾಘೋರವಾಗಿ ಘೀಳಿಡುತ್ತಾ ಗಳಬಂಧನವನ್ನು ಮುರಿದಿಕ್ಕಿ ಮುನ್ನುಗ್ಗಲು ಪ್ರಾರಂಭಿಸಿದುವು.

ಸಪ್ತಚ್ಛದಸ್ಯ ಕ್ಷೀರಂ। ಸಪ್ತಚ್ಛದಕ್ಷೀರಂ। ಸಪ್ತಚ್ಛದಕ್ಷೀರವತ್ ಕಟುಃಪ್ರವಾಹಃ । ತಂ ॥ ತಸ್ಯ ಅಯಂ ತದೀಯಃ—ತಮ್ । ಆಧೋರಣಾನಾಂ ತೀವ್ರಯತ್ನಃ । ವಿಲಂಘಿತಃ ಆಧೋರಣತೀವ್ರಯತ್ನಃ ಯೈಸ್ತೇ । ವಿಲಂಘಿತಾಧೋರಣತೀವ್ರಯತ್ನಾಃ । ಸೇನಾಯಾಃ ಗಜೇಂದ್ರಾಃ । ಬಭೂವುಃ—ಭೂ—ಸತ್ತಾಯಾಂ—ಲಿಟ್—ಪ್ರ.ಪು.ಬ. ॥

ಸಪ್ತಚ್ಛದ = ಏಳೆಲೆಬಾಳೆ, ಕ್ಷೀರ = ಹಾಲಿನಂತೆ, ಕಟುಃ = ಪರಿಮಳವಾದ, ಪ್ರವಾಹಂ = ಧಾರೆಯುಳ್ಳ, ಅಸಹ್ಯಂ = ಸಹಿಸಲಸಾಧ್ಯವಾದ, ತದೀಯಂ = ಆ ಆನೆಯ ಸಂಬಂಧವಾದ, ಮದಂ = ಮದಜಲವನ್ನು, ಆಘ್ರಾಯ = ಮೂಸಿನೋಡಿ, ಸೇನಾಗಜೇಂದ್ರಾಃ = ಸೈನ್ಯದ ಸಾಧು ಆನೆಗಳು, ವಿಲಂಘಿತಾಧೋರಣತೀವ್ರಯತ್ನಾಃ = ತಿರಸ್ಕರಿಸಿದ ಮಾವಟಿಗರ ಯತ್ನ ಉಳ್ಳವುಗಳಾಗಿ (ಬಗ್ಗದೆ), ವಿಮುಖಾಃ = ಪರಾಙ್ಮುಖಗಳು, ಬಭೂವುಃ = ಆದವು.

49. ಸಚ್ಛಿನ್ನಬಂಧದ್ರುತಯುಗ್ಯಶೂನ್ಯಂ ।
ಭಗ್ನಾಕ್ಷಪರ್ಯಸ್ತರಥಂ ಕ್ಷಣೇನ ॥
ರಾಮಾಪರಿತ್ರಾಣವಿಹಸ್ತಯೋಧಂ ।
ಸೇನಾನಿವೇಶಂ ತುಮುಲಂ ಚಕಾರ ॥ ೪೯ ॥

ಆ ಗಜೇಂದ್ರನು ನಿರ್ವಿಘ್ನಾರ್ಥದಲ್ಲಿ ಸೇನೆಯಲ್ಲಿ ಕೋಲಾಹಲವನ್ನೆಬ್ಬಿಸಿತು. ಅದರ ಮಿಂಚಿನ ವೇಗದ ದಾಳಿಗೆ ಸಿಕ್ಕಿ ರಥಗಳು ಅಡಿಮೇಲಾದುವು. ಕುದುರೆಗಳು ಕಟ್ಟುಸಡಿಲಿಸಿ ಪಲಾಯನ ಮಾಡಿದುವು. ರಥದ ಅಚ್ಚಿನ ಮರಗಳು ಮುರಿದುಬಿದ್ದುವು. ಸೈನಿಕರು ಭಯಭೀತರಾದ ಸ್ತ್ರೀಯರನ್ನು ಸ್ವಾಂತನಗೊಳಿಸುವುದರಲ್ಲಿ ನಿರತರಾದರು, ಆ ಸೇನೆಯು ಕುದುರೆಗಳಿಂದ ಶೂನ್ಯವಾದ ತುಂಡಾದ ಅಚ್ಚುಮರದಿಂದ ಭಗ್ನಗೊಂಡ ರಥಗಳ ಸಾಲುಗಳಿಂದ ಸುಂದರ ಕಾಮಿನಿಯರ ರಕ್ಷಣಾ ನಿರತರಾದ ಯೋಧರಿಂದ, ಅಸ್ತವ್ಯಸ್ತವಾಗಿ ಶಿಥಿಲಗೊಂಡು, ಹಾಹಾಕಾರರವದಿಂದ ನಿರ್ವೀರ್ಯಗೊಂಡಂತೆ ತೋರಿತು. ಸೇನಾಶಿಬಿರಗಳು ಆ ಗಜರಾಜನ ಅವ್ಯಾಹತವಾದ ಧಾಳಿಗೆ ಸಿಲುಕಿ ಧೂಳೀಧೂಸರಿತವಾಯಿತು.

ಯುಗಂ ವಹಂತೀತಿ ಯುಗ್ಯಾಃ । ಛಿನ್ನಾಃ ಬಂಧಾಃ ಯೈಸ್ತೇ ಛಿನ್ನ ಬಂಧಾಃ । ಛಿನ್ನ ಬಂಧಾಃ ಯುಗ್ಯಾಃ ಯಸ್ಮಿನ್ ಸಃ । ಛಿನ್ನಬಂಧದ್ರುತಯುಗ್ಯಶ್ಚಾಸೌ ಶೂನ್ಯಶ್ಚ ಛಿನ್ನ ಬಂಧದ್ರುತಯುಗ್ಯಶೂನ್ಯಃ । ತಂ । ಭಗ್ನಾಃ ಅಕ್ಷಾಃ ಯೇಷಾಂ ತೇ । ಭಗ್ನಾಕ್ಷಾಶ್ಚ ತೇ ಪರ್ಯಸ್ತಾಶ್ಚ । ಭಗ್ನಾಕ್ಷಪರ್ಯಸ್ತಾಃ ರಥಾಃ ಯಸ್ಮಿನ್ ಸಃ । ಭಗ್ನಾಕ್ಷಪರ್ಯಸ್ತರಥಃ । ತಂ ॥ ರಾಮಾಣಾಂ ಪರಿತ್ರಾಣಂ । ರಾಮಾಪರಿತ್ರಾಣೇ ವಿಹಸ್ತಾಃ ಯೋಧಾಃ ಯಸ್ಮಿನ್ ಸಃ ರಾಮಾಪರಿತ್ರಾಣವಿಹಸ್ತಯೋಧಃ । ತಂ ॥ ಸೇನಾಯಾಃ ನಿವೇಶಃ । ತಂ । ಚಕಾರ —ಡುಕೃಞ್—ಕರಣೇ—ಲಿಟ್—ಪ್ರ.ಪು.ಏ. ॥

ಸಃ = ಆ ಆನೆಯು, ಛಿನ್ನಬಂಧದ್ರುತಯುಗ್ಯಶೂನ್ಯಂ = ಕಟ್ಟುಕಡಿದು ಪಲಾಯನ ಮಾಡಿದ ಕುದುರೆಗಳಿಂದ ಶೂನ್ಯವಾದ, ಭಗ್ನಾಕ್ಷಪರ್ಯಸ್ತರಥಂ = ತುಂಡಾದ ಅಚ್ಚು ಮರದಿಂದ ಬಿದ್ದುಹೋದ ರಥವುಳ್ಳ, ರಾಮಾಪರಿತ್ರಾಣವಿಹಸ್ತಯೋಧಂ=ಸ್ತ್ರೀಯರ ರಕ್ಷಣೆಯಲ್ಲಿ ವ್ಯಾಕುಲರಾದ ಭಟರುಳ್ಳ, ಸೇನಾನಿವೇಶಂ = ಸೇನಾಶಿಬಿರವನ್ನು, ಕ್ಷಣೇನ = ಕ್ಷಣಕಾಲದಲ್ಲಿ, ತುಮುಲಂ ಚಕಾರ = ಭಯವ್ಯಾಕುಲವನ್ನಾಗಿ ಮಾಡಿತು.

**50. ತಮಾಪತಂತಂ ನೃಪತೇರವಧ್ಯಃ ।**
**ವನ್ಯಃ ಕರೀತಿ ಶ್ರುತವಾನ್ ಕುಮಾರಃ ॥**
**ನಿವರ್ತಯಿಷ್ಯನ್ ವಿಶಿಖೇನ ಕುಂಭೇ ।**
**ಜಘಾನ ನಾತ್ಯಾಯತಕೃಷ್ಟಶಾರ್ಙ್ಗಃ ॥ ೫೦ ॥**

ಗಜದ ಹಾವಳಿಯನ್ನು ಶಾಂತಮೂರ್ತಿಯಾದ, ಕರುಣಾಮಯನಾದ (ಕರುಣಾರಸ ಪರಿಪೂರ್ಣನಾದ) ಅಜಕುಮಾರನು ಕಂಡು ಕೂಡಲೇ ತನ್ನ ಮಹಾಕಾರ್ಮುಕವನ್ನು ಕೈಯಲ್ಲಿ ಧರಿಸಿ ಹೀಗೆ ಯೋಚಿಸಿದನು. ಸರ್ವಶಾಸ್ತ್ರವಿಶಾರದನಾದ ಆ ರಾಜೇಂದ್ರನು ಆನೆಯನ್ನು ಯುದ್ಧಸಮಯದಲ್ಲಿ ಅಲ್ಲದೆ ಇತರ ಸಮಯದಲ್ಲಿ ಕೊಲ್ಲಬಾರದೆಂಬ ನಿಯಮವನ್ನು ತಿಳಿದಿದ್ದನು. ಆ ಕಾಡಾನೆಯನ್ನು ಹಿಮ್ಮೆಟ್ಟಿಸಬೇಕೆಂದು ಬಗೆದು ಸಿಂಜಿನಿ ಯನ್ನು ಸ್ವಲ್ಪವೇ ಎಳೆದು ಅದರ ಗಂಡ ಸ್ಥಲಕ್ಕೆ ಗುರಿಯಿಟ್ಟು ಒಂದು ದಿವ್ಯಬಾಣವನ್ನು ಎಸೆದನು. ಆ ವೇಳೆಗಾಗಲೇ ಆ ಮಾತಂಗವು ರೋಷಾವೇಶದಿಂದ ಮುನ್ನುಗ್ಗಿ ಆಕ್ರಮಣ ಎಸಗಲು ಅಣಿಯಾಗಿತ್ತು.

ಅನ್ವಯ :—ತಮಾಪತಂತಂ ವನ್ಯಃ ಕರೀ ನೃಪತೇರವಧ್ಯಃ ಇತಿ ಶ್ರುತವಾನ್ ಕುಮಾರಃ ನಾತ್ಯಾಯತಕೃಷ್ಟಶಾರ್ಙ್ಗಃ ನಿವರ್ತಯಿಷ್ಯನ್ ವಿಶಿಖೇನ ಕುಂಭೇ ಜಘಾನ ॥

ನ ವಧ್ಯಃ ಅವಧ್ಯಃ । ನ ಅತ್ಯಾಯತಂ, ನಾತ್ಯಾಯತಂ । ನಾತ್ಯಾಯತಂ ಕೃಷ್ಟಂ, ಶಾರ್ಙ್ಗಂ ಯೇನ ಸಃ । ನಾತ್ಯಾಯತಕೃಷ್ಟಶಾರ್ಙ್ಗಃ । ಜಘಾನ, ಜಘ್ನತುಃ—ಜಘ್ನುಃ । ಜಘನಿಥ, ಜಘಂಥ—ಜಘ್ನಥುಃ—ಜಘ್ನ । ಜಘಾನ—ಜಘನ—ಜಘ್ನಿವ—ಜಘ್ನಿಮ । ಹನ—ಹಿಂಸಾಗತ್ಯೋಃ—ಲಿಟ್—ಪ್ರ.ಪು.ಏ. ॥

ನೃಪತೇಃ = ರಾಜನಿಂದ, ವನ್ಯಃ ಕರೀ=ಕಾಡಾನೆಯು, ಅವಧ್ಯಃ=ಕೊಲ್ಲಲ್ಪಡಬಾರದು ಇತಿ = ಈ ರೀತಿಯಾಗಿ, ಶ್ರುತವಾನ್ = ಶಾಸ್ತ್ರದಿಂದ ತಿಳಿದಿರುವ, ಕುಮಾರಃ = ಅಜ ಕುಮಾರನು, ಆಪತಂತಂ = ಎದುರಿಗೆ ಬರುತ್ತಿರುವ, ತಂ = ಆ ಕಾಡಾನೆಯನ್ನು, ನಿವರ್ತ

ಯಿಂಷ್ಯನ್ = ಹಿಂತಿರುಗಿಸುವವನಾಗಿ, ಸಾತ್ಯಯತಕೃಷ್ಟಶಾರ್ಙ್ಗಃ = ಅಧಿಕವಾಗಿ ಎಳೆಯ ದಿರುವ ಬಿಲ್ಲುಳ್ಳವನಾಗಿ, ವಿಶಿಖೇನ = ಬಾಣದಿಂದ, ಕುಂಭೇ = ಕಪೋಲಭಾಗದಲ್ಲಿ, ಜಘಾನ = ಹೊಡೆದನು.

51. ಸ ವಿದ್ಧಮಾತ್ರಃ ಕಿಲ ನಾಗರೂಪಂ ।
ಉತ್ಸೃಜ್ಯ ತದ್ವಿಸ್ಮಿತಸೈನ್ಯದೃಷ್ಟಃ ॥
ಸ್ಫುರತ್ಪ್ರಭಾಮಂಡಲಮಧ್ಯವರ್ತಿ ।
ಕಾಂತಂ ವಪುರ್ವ್ಯೋಮಚರಂ ಪ್ರಪೇದೇ ॥ ೫೧ ॥

ಬಾಣವು ಮೆಲ್ಲನೆ ಬಂದು ಕಪೋಲವನ್ನು ಮೃದುವಾಗಿ ಸ್ಪರ್ಶಿಸಿದ ಕೂಡಲೇ ಆ ಆನೆಯು ತನ್ನ ನಿಜರೂಪವನ್ನು ಕಳೆದುಕೊಂಡಿತು. ಆ ಸ್ಥಳದಲ್ಲೇ ಒಂದು ಪ್ರಭಾ ಮಂಡಲವು ಜಗ್ಗನೆ ಪ್ರಕಾಶಿಸಿತು. ಹೊಳೆಹೊಳೆವ ಕಾಂತಿಮಯವಾದ ರಮಣೀಯತೆಯ ಪ್ರಭಾಪುಂಜದ ಮಧ್ಯದಲ್ಲಿ ದಿವ್ಯದೇಹಧಾರಿಯಾದ ಗಂಧರ್ವಪತಿಯೋರ್ವನು ವ್ಯೋಮ ಮಾರ್ಗದಲ್ಲಿ ಕಾಣಿಸಿಕೊಂಡನು. ಆ ವ್ಯೋಮಚರನನ್ನು ಕಂಡ ಅಜನ ಸೇನಾನಿಕರ ಬೆರಗು ಗೊಂಡು ಆ ವಿಚಿತ್ರವನ್ನು ತೆರೆದ ಕಣ್ಗಳಿಂದ ಕಂಡಿತು.

ಕೇವಲಂ ವಿದ್ಧಃ ವಿದ್ಧಮಾತ್ರಃ । ನಾಗಸ್ಯ ರೂಪಂ ॥ ತೇನ ವಿಸ್ಮಿತಂ । ತದ್ವಿಸ್ಮಿತಂ ಚ ತತ್ ಸೈನ್ಯಂ ಚ । ತದ್ವಿಸ್ಮಿತಸೈನ್ಯೇನ ದೃಷ್ಟಃ ॥ ಪ್ರಭಾಯಾಃ ಮಂಡಲಂ । ಸ್ಫುರಚ್ಚ ತತ್ ಪ್ರಭಾಮಂಡಲಂ ಚ । ಸ್ಫುರತ್ಪ್ರಭಾಮಂಡಲಸ್ಯ ಮಧ್ಯಂ ॥ ಸ್ಫುರತ್ಪ್ರಭಾ ಮಂಡಲಮಧ್ಯೇ ವರ್ತತೇ ಇತಿ ಸ್ಫುರತ್ಮಂಡಲಮಧ್ಯವರ್ತಿಃ ॥ ವ್ಯೋಮ್ನಿ ಚರತಿ ಇತಿ ವ್ಯೋಮಚರಂ ॥ ಪ್ರ—ಉಪಸರ್ಗ । ಪೇದೇ—ಪೇದಾತೇ—ಪೇದಿರೇ । ಪೇದಿಷೇ —ಇತ್ಯಾದಿ ॥ ಪದ—ಗತೌ—ಲಿಟ್—ಪ್ರ.ಪು.ಏ. ॥

ಸಃ = ಆ ಆನೆಯು, ವಿದ್ಧಮಾತ್ರಃ ಕಿಲ = ಹೊಡೆದ ಒಡನೆಯೇ, ನಾಗರೂಪಂ = ಆನೆಯ ಸ್ವರೂಪವನ್ನು, ಉತ್ಸೃಜ್ಯ = ತೊರೆದು, ತದ್ವಿಸ್ಮಿತಸೈನ್ಯದೃಷ್ಟಃ = ಆ ವೃತ್ತಾಂತ ದಿಂದ ಆಶ್ಚರ್ಯಗೊಂಡ ಸೈನಿಕರಿಂದ ನೋಡಲ್ಪಟ್ಟು, ಸ್ಫುರತ್ಪ್ರಭಾಮಂಡಲ ಮಧ್ಯವರ್ತಿ = ಪ್ರಕಾಶಿಸುವ ಕಾಂತಿರಾಶಿಯ ಮಧ್ಯದಲ್ಲಿ, ಕಾಂತಂ = ಮನೋಹರವಾದ, ವ್ಯೋಮಚರಂ = ಆಕಾಶದಲ್ಲಿ ಚರಿಸಲು ಯೋಗ್ಯವಾದ, ವಪುಃ = ಶರೀರವನ್ನು ಪ್ರಪೇದೇ = ಹೊಂದಿದನು.

52. ಅಥ ಪ್ರಭಾವೋಪನತೈಃ ಕುಮಾರಂ ।
ಕಲ್ಪದ್ರುಮೋತ್ಥೈರವಕೀರ್ಯ ಪುಷ್ಪೈಃ ॥
ಉವಾಚ ವಾಗ್ಮೀ ದಶನಪ್ರಭಾಭಿಃ ।
ಸಂವರ್ಧಿತೋರಃಸ್ಥಲತಾರಹಾರಃ ॥ ೫೨ ॥

ಆ ದಿವ್ಯಪುರುಷನು ತನ್ನ ಮಹಿಮಾಬಲದಿಂದ ಸುರಕಲ್ಪವೃಕ್ಷದ ಹೂಗಳನ್ನು ಪಡೆದು ಅಜನಿಗೆ ಪುಷ್ಪವೃಷ್ಟಿಗರೆದನು. ಇದು ಅವನ ದೇವತಾಸ್ವರೂಪದ ಮಹಿಮೆಯ ಸಂಕೇತ.

ಅವನು ತನ್ನ ಕೊರಳಲ್ಲಿ ತೋರಮುತ್ತಿನ ಹಾರವನ್ನು ಧರಿಸಿದ್ದನು. ಮಾತಿನಲ್ಲಿ ಚತುರನಾದ ಆ ಖೇಚರನು ಅಜನೊಡನೆ ಮಾತನ್ನು ಆರಂಭಿಸಿದಾಗ ಅವನ ಹೊಳೆಯುವ ದಂತಪಂಕ್ತಿಗಳ ಕಾಂತಿಯು ಎದೆಯ ಆಣಿಮುತ್ತಿನ ಹಾರದ ಕಾಂತಿಯನ್ನು ಅಧಿಕಗೊಳಿಸಿತು.

ಅನ್ವಯ:—ಅಥ ಪ್ರಭಾವೋಪನತೈಃ ಕಲ್ಪದ್ರುಮೋತ್ಥೈಃ ಪುಷ್ಪೈಃ ಕುಮಾರಮ್ ಅವಕೀರ್ಯ ವಾಗ್ಮೀ ದಶನಪ್ರಭಾಭಿಃ ಸಂವರ್ಧಿತೋರಃಸ್ಥಲತಾರಹಾರಃ ॥

ಪ್ರಭಾವೇಣ ಉಪನತಾನಿ। ಪ್ರಭಾವೋಪನತಾನಿ। ತೈಃ ॥ ಕಲ್ಪದ್ರುಮೇಭ್ಯಃ ಉತ್ಥಾನಿ। ತೈಃ ॥ ದಶನಾನಾಂ ಪ್ರಭಾಃ। ತಾಭಿಃ ॥ ತಾರಶ್ಚಾಸೌ ಹಾರಶ್ಚ। ತಾರಹಾರಃ। ಉರಃಸ್ಥಲೇ ತಾರಹಾರಃ। ಸಂವರ್ಧಿತಃ ಉರಃಸ್ಥಲತಾರಹಾರಃ ಯಸ್ಯ ಸಃ। ಸಂವರ್ಧಿತೋರಃಸ್ಥಲತಾರಹಾರಃ। ಉವಾಚ—ವಚ—ಪರಿಭಾಷಣೇ—ಲಿಟ್—ಪ್ರ.ಪು.ಏ. ॥

ಅಥ=ಆಮೇಲೆ, ಪ್ರಭಾವೋಪನತೈಃ = ಸಾಮರ್ಥ್ಯದಿಂದ, ಪುಷ್ಪೈಃ= ಹೂಗಳಿಂದ, ಕುಮಾರಂ=ಅಜರಾಜಕುಮಾರನನ್ನು, ಅವಕೀರ್ಯ = ಅಭಿಷೇಚಿಸಿ, ದಶನಪ್ರಭಾಭಿಃ = ಹಲ್ಲುಗಳ ಕಾಂತಿಗಳಿಂದ, ಸಂವರ್ಧಿತ ಉರಃಸ್ಥಲತಾರಹಾರಃ=ಅಧಿಕವಾಗಿ ಎದೆಯಲ್ಲಿರುವ ಸ್ಥೂಲವಾದ ಮುತ್ತಿನ ಹಾರವುಳ್ಳವನಾಗಿ, ವಾಗ್ಮೀ = ಮಾತಿನಲ್ಲಿ ಚತುರನಾದ, ಉವಾಚ = ಹೇಳಿದನು.

53. ಮತಂಗಶಾಪಾದವಲೇಪಮೂಲಾತ್ ।
ಅವಾಪ್ತವಾನಸ್ಮಿ ಮತಂಗಜತ್ವಮ್ ॥
ಅವೇಹಿ ಗಂಧರ್ವಪತೇಸ್ತನೂಜಂ ।
ಪ್ರಿಯಂವದಂ ಮಾಂ ಪ್ರಿಯದರ್ಶನಸ್ಯ ॥ ೫೩ ॥

"ಎಲೈ ಮರ್ತ್ಯಲೋಕಾಧೀಶನೆ, ನಾನು ಗಂಧರ್ವಪತಿಯಾದ ಪ್ರಿಯದರ್ಶನನ ಪುತ್ರನಾದ ಪ್ರಿಯಂವದನು. ಒಮ್ಮೆ ನಾನು ಗರ್ವ ಅಹಂಕಾರದಿಂದ ಪ್ರಚೋದಿತನಾಗಿ ಮತಂಗಮಹರ್ಷಿಯನ್ನು ಹುಡುಗಾಟಿಕೆಯಿಂದ ಕೆಣಕಿದನು. ಆ ಋಷಿವರೌಳಿಯು ಕಡು ಕೋಪದಿಂದ ಮುಳಿದು "ನೀನು ಆನೆಯ ಜನ್ಮವನ್ನು ಹೊಂದು ಎಂದು ನನ್ನನ್ನು ಶಪಿಸಿದನು. ಇದರಿಂದ ನಾನು ಮತಂಗರೂಪವನ್ನು (ಆನೆಯ ರೂಪವನ್ನು) ಪಡೆದೆನು. ಇದು ನನ್ನ ಜನ್ಮವೃತ್ತಾಂತ. ನನ್ನ ಅಹಂಕಾರಕ್ಕೆ ಸಿಕ್ಕಿದ ಫಲ." ಎಂದು ಗಂಧರ್ವರಾಜ ಪುತ್ರನಾದ ಪ್ರಿಯಂವದನೆಂದನು. (ಪ್ರಿಯಂ ವದತೀತಿ ಪ್ರಿಯಂವದಃ)

ಮತಂಗಸ್ಯ ಶಾಪಃ। ತಸ್ಮಾತ್ ॥ ಅವಲೇಪಃ ಮೂಲಂ ಯಸ್ಯ ಸಃ। ತಸ್ಮಾತ್। ಮತಂಗಜಸ್ಯ ಭಾವಃ। ಮತಂಗಜತ್ವಮ್ ॥ ಗಂಧರ್ವಾಣಾಂ ಪತಿಃ। ತಸ್ಯ॥ ಅವ— ಉಪಸರ್ಗ। ಏತು, ಇತಾತ್—ಇತಾಂ—ಯಂತು। ಇಹಿ, ಇತಾತ್—ಇತಂ—ಇತ। ಅಯಾನಿ—ಅಯಾವ—ಅಯಾಮ। ಇಣ್—ಗತೌ—ಲೋಟ್—ಮ.ಪು.ಏ. ॥

ಅವಲೇಪಮೂಲಾತ್ =ಗರ್ವಕಾರಣದಿಂದ, ಮತಂಗಶಾಪಾತ್ = ಮತಂಗಮುನಿಯ ಶಾಪದಿಂದ, ಮತಂಗಜತ್ವಂ=ಆನೆಯ ಸ್ವರೂಪವನ್ನು, ಅಪ್ತವಾನಸ್ಮಿ= ಹೊಂದಿರುತ್ತೇನೆ, ಮಾಂ = ನನ್ನನ್ನು, ಪ್ರಿಯದರ್ಶನಸ್ಯ= ಪ್ರಿಯದರ್ಶನನೆಂಬ ಹೆಸರುಳ್ಳ, ಗಂಧರ್ವಪತೇಃ

= ಗಂಧರ್ವರಾಜನ, ತನೂಜಂ=ಮಗನಾದ, ಪ್ರಿಯಂವದಂ=ಪ್ರಿಯಂವದನೆಂಬ ಹೆಸರಿನ, ಅವೇಹಿ = ತಿಳಿ.

**54. ಸ ಚಾನುನೀತಃ ಪ್ರಣತೇನ ಪಶ್ಚಾತ್ ।**
**ಮಯಾ ಮಹರ್ಷಿರ್ಮೃದುತಾಮಗಚ್ಛತ್ ॥**
**ಉಷ್ಣತ್ವಮಗ್ನ್ಯಾತಪಸಂಪ್ರಯೋಗಾತ್ ।**
**ಶೈತ್ಯಂ ಹಿ ಯತ್ಸಾ ಪ್ರಕೃತಿರ್ಜಲಸ್ಯ ॥ ೫೪ ॥**

ನಾನು ಭಯಭೀತನಾಗಿ ವಿನೀತನಾಗಿ, ವಿನಯದಿಂದ ಶಿರಸಾಷ್ಟಾಂಗವೆರಗಿ ಪ್ರಾರ್ಥಿಸಿದೆನು. ಸ್ವಲ್ಪಹೊತ್ತಿನ ಮೇಲೆ ಮತಂಗಮಹಾಮುನಿಯು ಶಾಂತನಾದನು. ಏಕೆಂದರೆ ನೀರಿನ ಗುಣವೇ ಶೈತ್ಯ. ತಣ್ಣಗಾಗಿರುವುದು ಮಾತ್ರವಲ್ಲ, ಬಿಸಿಯನ್ನು ತಣ್ಣಗೆ ಮಾಡಬಲ್ಲುದು. ಅಂತೆಯೇ ಋಷಿಮುನಿಗಳ ಸ್ವಭಾವಜನ್ಯ ಗುಣವೇ ಶಾಂತತೆ. ಶಾಂತಚಿತ್ತರಾಗಿರುವರು. ಕ್ರೋಧವು ಅವರ ಗುಣವಲ್ಲ. ಬಿಸಿಲು, ಬೆಂಕಿಯ ಸಂಸರ್ಗದಿಂದ ಅಥವಾ ಸ್ನೇಹದಿಂದ ನೀರು ಕಾದು ಕುದಿಯಬಹುದು. ಆದರೆ ಅದು ತಣಿಯಬಲ್ಲುದು. ಅದರ ಪ್ರಕೃತಿಸಹಜವಾದ (ಪ್ರಕೃತಿದತ್ತವಾದ) ಗುಣ ತಂಪಾಗಿರುವುದು. ಅಂತೆಯೇ ಮುನಿಗಳು ಸ್ವಲ್ಪಹೊತ್ತಿನಲ್ಲಿಯೇ ಅವರ ಕೋಪದಿಂದ ಉಂಟಾದ ಕ್ಷೋಭೆ ಅಡಗಿ ಅವರು ಶಾಂತಾತ್ಮರಾದರು. ವಿಕಾರಗಳು ನಷ್ಟವಾದುವು. ಅವರು ಮೊದಲಿನ ದಯಾಮೂರ್ತಿಗಳಾಗಿ ತೋರಿದರು.

ಮೃದೋರ್ಭಾವಃ—ಮೃದುತಾ । ತಾಂ ॥ ಗಮ್ಲೃ—ಗತೌ—ಲಙ್—ಅಗಚ್ಛತ್—ಅಗಚ್ಛತಾಂ—ಅಗಚ್ಛನ್ ಇತ್ಯಾದಿ—ಲಙ್—ಪ್ರ.ಪು.ಏ. ॥ ಅಗ್ನಿಶ್ಚ ಆತಪಶ್ಚ—ಅಗ್ನ್ಯಾತಪೌ । ಅಗ್ನ್ಯಾತಪಯೋಃ ಸಂಪ್ರಯೋಗಃ । ತಸ್ಮಾತ್ ॥

ಸ ಚ = ಆ ಮಹರ್ಷಿಗಳಾದರೋ, ಪ್ರಣತೇನ = ನಮಸ್ಕರಿಸಿದ, ಮಯಾ = ನನ್ನಿಂದ, ಅನುನೀತಃ (ಸನ್) = ವಿನಯದಿಂದ ಪ್ರಾರ್ಥಿತನಾಗಿ, ಪಶ್ಚಾತ್ = ಆಮೇಲೆ, ಮೃದುತಾಂ = ಶಾಂತಿಯನ್ನು, ಅಗಚ್ಛತ್ = ಹೊಂದಿದನು, ಜಲಸ್ಯ = ನೀರಿನ, ಉಷ್ಣತ್ವಂ = ಬಿಸಿಯ ಸ್ವಭಾವವು, ಅಗ್ನ್ಯಾತಪಸಂಯೋಗಾತ್ = ಬೆಂಕಿಬಿಸಿಲುಗಳ ಸಂಪರ್ಕದಿಂದ ಉಂಟಾದ, ಯತ್ ಶೈತ್ಯಂ = ಯಾವುದು ತಣ್ಣಗಿರುವ ಸ್ವಭಾವವಿದೆಯೋ, ಸಾ ಪ್ರಕೃತಿಃ = (ನಿಸರ್ಗ) ಅದು ಅದರ ನಿಜವಾದ ಸ್ವರೂಪವು.

**55. ಇಕ್ಷ್ವಾಕುವಂಶಪ್ರಭವೋ ಯದಾ ತೇ ।**
**ಭೇತ್ಸ್ಯತ್ಯಜಃ ಕುಂಭಮಯೋ ಮುಖೇನ ॥**
**ಸಂಯೋಕ್ಷ್ಯಸೇ ಸ್ವೇನ ವಪುರ್ಮಹಿಮ್ನಾ ।**
**ತದೇತ್ಯವೋಚತ್ ಸ ತಪೋನಿಧಿರ್ಮಾಮ್ ॥ ೫೫ ॥**

ಆ ಶಾಂತಿಸಾಗರನು (ಕರುಣಾನಿಧಿಯು) ಮೆಲ್ಲನೆ ಕಣ್ತೆರದು ನನ್ನ ಮೇಲೆ ದಯೆ ತಳೆದನು. ಪಶ್ಚಾತ್ತಾಪದಿಂದ ಪರಿತಪಿಸುವ ನನಗೆ ಶಾಪವಿಮೋಚನೆಯಾಗುವಂತೆ ಹೀಗೆ ಅನುಗ್ರಹಿಸಿ ನುಡಿದನು. ಆ ಶಾಂತಾತ್ಮನು "ಎಲೈ ಗಂಧರ್ವಪತಿಯೇ, ಇಕ್ಷ್ವಾಕುವಂಶ

ದಲ್ಲಿ ಜನಿಸಲಿರುವ ಅಜಸಾರ್ವಭೌಮನಿಂದ ನಿನ್ನ ಶಾಪವಿಮೋಚನೆಯಾಗುವುದು. ಎಂದರೆ ಅಜಕುಮಾರನು ನಿನ್ನ ಕುಂಭಸ್ಥಲವನ್ನು ಲೋಹದಿಂದ ರಚಿಸಿರುವ ಬಾಣದಿಂದ ಭೇದಿಸುವನೋ ಆಗ ನೀನು ನಿನ್ನ ಇಂದಿನ ತೇಜಃಪುಂಜವಾದ, ರಮಣೀಯ, ಪ್ರಕಾಶಮಾನವಾದ ಗಂಧರ್ವದೇಹವನ್ನು ಪಡೆವೆ. ಆ ದೇಹದೊಂದಿಗೆ ನಿನ್ನ ಇಂದಿನ ವೈಭವಯುತವಾದ ಸಕಲಸಾಮರ್ಥ್ಯಗಳನ್ನೂ ನಿಶ್ಚಯವಾಗಿಯೂ ಪಡೆವೆ" ಎಂದು ಆ ಮಹಾತಪಸ್ವಿಯು ಅನುಗ್ರಹಿಸಿ ನುಡಿದನು.

ಇಕ್ಷ್ವಾಕೋಃ ವಂಶಃ। ಇಕ್ಷ್ವಾಕುವಂಶಃ ಪ್ರಭವಃ ಯಸ್ಯ ಸಃ। ಇಕ್ಷ್ವಾಕುವಂಶಪ್ರಭವಃ। ಭಿದಿರ್—ವಿದಾರಣೇ—ಲೃಟ್—ಭೇತ್ಸ್ಯತಿ—ಪ್ರ.ಪು.ಏ.॥ ಸಮ್—ಉಪಸರ್ಗ। ಯುಜಿರ್—ಯೋಗೇ—ಮ.ಪು.ಏ.॥ ಯೋಕ್ಷ್ಯತೇ—ಯೋಕ್ಷ್ಯೇತೇ—ಯೋಕ್ಷ್ಯಂತೇ। ಇತ್ಯಾದಿ॥ ವಪುಷಃ ಮಹಿಮಾ। ವಪುರ್ಮಹಿಮಾ। ತೇನ। ತಪಃ ಏವ ನಿಧಿಃ ಯಸ್ಯ ಸಃ। ತಪೋನಿಧಿಃ॥ ಅವೋಚತ್—ಅವೋಚತಾಂ—ಅವೋಚನ್। ಅವೋಚಃ—ಅವೋಚತಂ—ಅವೋಚತ। ಅವೋಚಂ—ಅವೋಚಾವ—ಅವೋಚಾಮ॥ ಬ್ರೂಞ್—ವ್ಯಕ್ತಾಯಾಂ ವಾಚಿ—ಲುಙ್—ಪ್ರ.ಪು.ಏ.॥

ಇಕ್ಷ್ವಾಕುವಂಶಪ್ರಭವಃ = ಇಕ್ಷ್ವಾಕುವಂಶದಲ್ಲಿ ಜನಿಸಿದ, ಅಜಃ = ಅಜನು, ಯದಾ = ಯಾವಾಗ, ತೇ = ನಿನ್ನ, ಕುಂಭಂ = ಕಪೋಲಸ್ಥಲವನ್ನು, ಅಯೋಮುಖೇನ = ಬಾಣದಿಂದ, ಭೇತ್ಸ್ಯತಿ = ಹೊಡೆದು ಗಾಯಗೊಳಿಸಿದಾಗ, ತದಾ = ಆಗ, ಸ್ವೇನ = ಸ್ವಕೀಯವಾದ, ವಪುರ್ಮಹಿಮ್ನಾ = ದಿವ್ಯಶರೀರದಿಂದ, ಸಂಯೋಕ್ಷ್ಯಸೇ = ಕೂಡಿಕೊಳ್ಳುವಿ, ಇತಿ = ಈ ರೀತಿಯಾಗಿ, ಸ ತಪೋನಿಧಿಃ = ಆ ಮಹರ್ಷಿಯು, ಮಾಂ = ನನ್ನನ್ನು ಕುರಿತು, ಅವೋಚತ್ = ಹೇಳಿದನು.

**56. ಸಮ್ಮೋಚಿತಃ ಸತ್ವವತಾ ತ್ವಯಾಹಂ।**
**ಶಾಪಾಚ್ಚಿರಪ್ರಾರ್ಥಿತದರ್ಶನೇನ॥**
**ಪ್ರತಿಪ್ರಿಯಂ ಚೇದ್ಭವತೋ ನ ಕುರ್ಯಾಂ।**
**ವೃಥಾ ಹಿ ಮೇ ಸ್ಯಾತ್ ಸ್ವಪದೋಪಲಬ್ಧಿಃ ॥ ೫೬ ॥**

ಓ ಜನಪತಿಯೇ, ನೀನಿಂದು ಬಂದು ನನ್ನ ಶಾಪವನ್ನು ಕಳೆದಿರುವಿ. ನಿನ್ನನ್ನು ನಾನು ಇದಿರುನೋಡುತ್ತ, ನಿನ್ನ ದರ್ಶನಕ್ಕೆ ಕಾತರನಾಗಿ ಸದಾ ಪ್ರಾರ್ಥಿಸುತ್ತಿದ್ದೆ. ನಿನ್ನ ದರ್ಶನಕ್ಕಾಗಿ ಹಗಲುರಾತ್ರಿ ಕಾತುರನಾಗಿದ್ದೆ. ಇಂದು ನನ್ನ ಪ್ರಾರ್ಥನೆ ಸಫಲವಾಗಿದೆ. ಮಹಾಬಲಶಾಲಿಯಾದ ನಿನ್ನಿಂದ ಬಿಡಲ್ಪಟ್ಟ ಬಾಣದಿಂದ ನಾನು ಋಷಿಶಾಪದಿಂದ ಮೋಕ್ಷ ಹೊಂದಿರುವೆನು, ನನಗೆ ನನ್ನ ಮೊದಲಿನ ಸ್ಥಾನವು ಪ್ರಾಪ್ತಿಯಾಗಿದೆ. ನಿನ್ನಿಂದ ಉಪಕಾರ ಹೊಂದಿರುವ ನಾನು ನಿನಗೆ ಪ್ರತಿಯಾಗಿ ಉಪಕಾರ ಮಾಡಬೇಕೆಂಬ ಆಸೆ ತಳೆದಿರುವೆನು. ನಾನೀಗ ನಿನ್ನಿಂದ ನನ್ನ ಪೂರ್ವದ ಸ್ಥಾನಮಾನಗಳನ್ನು ಪಡೆದು ಕೃತಾರ್ಥನಾಗಿರುವೆನು. ಉಪಕಾರ ಪಡೆದು ಪ್ರತ್ಯುಪಕಾರ ಮಾಡದೇ ಜೀವಿಸುವುದು ಮರಣಕ್ಕಿಂತಲೂ ಹೀನವೆಂದು ವೇದಶಾಸ್ತ್ರಗಳು ಸಾರುತ್ತಿವೆ. ಆದುದರಿಂದ ಹೇ ದಯಾಳೋ (ಹೇ ಕೃಪಾಳು). ನನ್ನದೊಂದು ಪ್ರಾರ್ಥನೆಯನ್ನು ನೀನು ಅಂಗೀಕರಿಸು. ಪ್ರತ್ಯುಪಕಾರವನ್ನು ಮಾಡದೇ

ಹೋದರೆ ನಾನು ಪತಿತನಾಗುತ್ತೇನೆ (ದಲಿತನಾಗುತ್ತೇನೆ). ನನ್ನ ಜೀವನ ವ್ಯರ್ಥವಾಗುವುದಲ್ಲವೆ ?

ಸತ್ತ್ವಂ ಅಸ್ಯ ಅಸ್ತಿ ಇತಿ ಸತ್ತ್ವವಾನ್। ತೇನ॥ ಚಿರಂ ಪ್ರಾರ್ಥಿತಂ। ಚಿರಪ್ರಾರ್ಥಿತಂ ದರ್ಶನಂ ಯಸ್ಯ ಸಃ । ತೇನ ॥ ಸ್ವಸ್ಯ ಪದಂ । ಸ್ವಪದಸ್ಯ ಉಪಲಬ್ಧಿಃ । ಸ್ವಪದೋಪಲಬ್ಧಿಃ । ಕುರ್ಯಾತ್—ಕುರ್ಯಾತಾಂ—ಕುರ್ಯುಃ । ಕುರ್ಯಾಃ—ಕುರ್ಯಾತಂ—ಕುರ್ಯಾತ। ಕುರ್ಯಾಂ—ಕುರ್ಯಾವ—ಕುರ್ಯಾಮ । ಡುಕೃಞ್ ಕರಣೇ—ವಿಧಿಲಿಙ್—ಉ.ಪು.ಏ. ॥ ಸ್ಯಾತ್—ಸ್ಯಾತಾಂ—ಸ್ಯುಃ । ಸ್ಯಾಃ—ಸ್ಯಾತಂ—ಸ್ಯಾತ । ಸ್ಯಾಂ—ಸ್ಯಾವ—ಸ್ಯಾಮ । ಅಸ—ಭುವಿ—ವಿ—ಲಿಙ್—ಪ್ರ.ಪು.ಏ. ॥

ಚಿರಪ್ರಾರ್ಥಿತದರ್ಶನೇನ = ಬಹುಕಾಲದಿಂದ ಪ್ರಾರ್ಥಿಸುತ್ತಿರುವ ದರ್ಶನವುಳ್ಳ, ಸತ್ತ್ವವತಾ = ಬಲಶಾಲಿಯಾದ, ತ್ವಯಾ = ನಿನ್ನಿಂದ, ಅಹಂ ನಾನು. ಶಾಪಾತ್ = ಶಾಪದಿಂದ, ಸಂಮೋಚಿತಃ = ಬಿಡಿಸಲ್ಪಟ್ಟೆನು, ಭವತಃ = ನಿನಗೆ, ಪ್ರತಿಪ್ರಿಯಂ = ಪ್ರತ್ಯುಪಕಾರವನ್ನು, ನ ಕುರ್ಯಾಂ ಚೇತ್ = ಮಾಡದಿದ್ದರೆ, ಸ್ವಪದೋಪಲಬ್ಧಿಃ = ನನ್ನ ಸ್ಥಾನಪ್ರಾಪ್ತಿಯು, ವೃಥಾ ಹಿ ಸ್ಯಾತ್ = ವ್ಯರ್ಥವಾದೀತು.

57. ಸಮ್ಮೋಹನಂ ನಾಮ ಸಖೇ ಮಮಾಸ್ತ್ರಂ ।
ಪ್ರಯೋಗಸಂಹಾರವಿಭಕ್ತಮಂತ್ರಮ್ ॥
ಗಾಂಧರ್ವಮಾದತ್ಸ್ವ ಯತಃ ಪ್ರಯೋಕ್ತುಃ ।
ನ ಚಾರಿಹಿಂಸಾ ವಿಜಯಶ್ಚ ಹಸ್ತೇ ॥ ೫೭ ॥

ಎಲೈ ರಾಜೇಂದ್ರ (ಮನುಕುಲಪ್ರದೀಪನೆ) ನನ್ನ ಪ್ರಾಣಮಿತ್ರನಾದ ನೀನು ನನ್ನಿಂದ ಇಂದು ಸಂಮೋಹನವೆಂಬ ದಿವ್ಯಾಸ್ತ್ರವನ್ನು ಸ್ವೀಕರಿಸು. ಇದರ ಪ್ರಯೋಗ, ಸಂಹಾರಗಳ ವಿಧಿಯನ್ನು ಉಪದೇಶಿಸುವೆನು. ಈ ಮಂತ್ರಗಳು ಬೇರೆಬೇರೆಯಾಗಿವೆ. ಈ ಗಾಂಧರ್ವ ಸಮ್ಮೋಹನಾಸ್ತ್ರವು ವೈರಿಯನ್ನು ತಟಸ್ಥಗೊಳಿಸಿ ಕೂಡಲೇ ನಿರ್ವೀರ್ಯನನ್ನಾಗಿ ಮಾಡಿ ವಶಮಾಡುವ ಮಹಿಮೆಯನ್ನು ಹೊಂದಿದೆ. ಇದರ ಮಹಿಮೆಯಿಂದ ಶತ್ರುವು ಹಿಂಸೆಯನ್ನು ಮಾಡಲು ಅಶಕ್ತನಾಗುವನು ಜಯವು ನಿಶ್ಚಿತ. ಇದರ ಮಂತ್ರಾಧಿದೇವತೆ ಗಂಧರ್ವನೇ ಆಗಿರುವನು. ಇದು ಗಂಧರ್ವದೇವತಾಕವಾದ ದಿವ್ಯಾಸ್ತ್ರ. ಈ ಸಮ್ಮೋಹನಾಸ್ತ್ರದ ಪ್ರಯೋಗವಾದಕೂಡಲೇ ವೈರಿಯು ಯುದ್ಧರಂಗದಲ್ಲಿ ನಡೆಸಿರುವ ಎಲ್ಲಾ ಹಿಂಸೆಗಳನ್ನು, ಹಿಂಸಾಪ್ರವೃತ್ತಿಗಳನ್ನು ಶಾಂತಗೊಳಿಸಬಲ್ಲುದು. ಇದರಿಂದ ನೀನು ಈ ಭೂಮಂಡಲದಲ್ಲಿ ನೀನು ಅಜೇಯಹಸ್ತನಾಗುವೆ. ವಿಜಯಶ್ರೀಯು ಹಸ್ತವನ್ನು ಹಿಡಿಯುವ ಸಿದ್ಧಿಯು ನಿನಗೆ ಪ್ರಾಪ್ತಿಯಾಗುವುದು.

ಪ್ರಯೋಗಶ್ಚ ಸಂಹಾರಶ್ಚ। ಪ್ರಯೋಗಸಂಹಾರೌ। ಪ್ರಯೋಗಸಂಹಾರಯೋಃ ವಿಭಕ್ತಃ ಮಂತ್ರಃ ಯಸ್ಯ ತತ್। ಪ್ರಯೋಗಸಂಹಾರವಿಭಕ್ತಮಂತ್ರಮ್। ಗಂಧರ್ವಃ ದೇವತಾ ಅಸ್ಯ—ಗಾಂಧರ್ವಂ। ಅರೀಣಾಂ ಹಿಂಸಾ ॥ ಆಙ್—ಉಪಸರ್ಗ । ದತ್ತಾಂ—ದದಾತಾಂ—ದದತಾಂ । ದತ್ಸ್ವ—ದದಾಥಾಂ—ದದ್ಧ್ವಮ್। ದದೈ—ದದಾವಹೈ—ದದಾಮಹೈ॥ ಡುದಾಞ್—ದಾನೇ—ಲೋಟ್—ಮ.ಪು.ಏ. ॥

ಹೇ ಸಖೇ = ಎಲೈ ಮಿತ್ರನೇ, ಪ್ರಯೋಗಸಂಹಾರವಿಭಕ್ತಮಂತ್ರಂ = ಪ್ರಯೋಗ ಮತ್ತು ಉಪಸಂಹಾರಕಾಲಗಳಲ್ಲಿ ಬೇರೆಬೇರೆಯಾದ ಮಂತ್ರಗಳಿರುವ, ಗಾಂಧರ್ವಂ = ಗಂಧರ್ವದೇವತಾಕವಾದ, ನಾಮ = ಸಮ್ಮೋಹನವೆಂಬ, ಮಮ = ನನ್ನ, ಅಸ್ತ್ರಂ = ಅಸ್ತ್ರಮಂತ್ರವನ್ನು, ಆದತ್ಸ್ವ = ಉಪದೇಶದಿಂದ ಸ್ವೀಕರಿಸು, ಯತಃ = ಯಾವ ಈ ಅಸ್ತ್ರದಿಂದ, ಪ್ರಯೋಕ್ತುಃ = ಅಸ್ತ್ರಪ್ರಯೋಗ ಮಾಡುವವನಿಗೆ, ಅರಿಹಿಂಸಾ ನ ಚ = ಶತ್ರುಗಳಿಂದ ಹಿಂಸೆ ಆಗಲು ಸಾಧ್ಯವಿಲ್ಲ, ವಿಜಯಶ್ಚ ಹಸ್ತೇ = ಜಯಸಿದ್ಧಿಯು ಹಸ್ತಗತವಾಗುವುದು.

**58.** **ಅಲಂ ಹ್ರಿಯಾ ಮಾಂ ಪ್ರತಿ ಯನ್ಮುಹೂರ್ತಂ ।**
**ದಯಾಪರೋಽಭೂಃ ಪ್ರಹರನ್ನಪಿ ತ್ವಮ್ ॥**
**ತಸ್ಮಾದುಪಚ್ಛಂದಯತಿ ಪ್ರಯೋಜ್ಯಂ ।**
**ಮಯಿ ತ್ವಯಾ ನ ಪ್ರತಿಷೇಧರೌಕ್ಷ್ಯಮ್** ॥ ೫೮ ॥

ಎಲೈ ಪ್ರಾಣಮಿತ್ರಾ, ನನ್ನ ಮೇಲೆ ಬಾಣವನ್ನು ಪ್ರಯೋಗಿಸಿ ನನ್ನನ್ನು ನೀನು ಹೊಡೆದೆನೆಂದು ಭಾವಿಸಿ ನಾಚಿಕೆ ಪಡದಿರು. ಏಕೆಂದರೆ ನೀನು ದಯಾಪರನಾಗಿ ಕೊಲಬಾರದೆಂದೆಣಿಸಿ ಕರುಣಾರ್ದ್ರ ಹೃದಯದಿಂದ ಮೆಲ್ಲನೆ ಬಾಣವನ್ನು ಹೊಡಿದೆ. ಹೊಡೆಯುವುದರಲ್ಲೂ ಕರುಣೆಯನ್ನು ತಳೆದೆ. ಹೇ ಮಹಾಬಾಹೋ ಬೇರೇನನ್ನೂ ಎಣಿಸದೆ ನನ್ನಿಂದ ಈ ಮಹಾಸ್ತ್ರವನ್ನು ಪತಿಕರಿಸು (ಪರಿಗ್ರಹಿಸು). ಬೇಡವೆಂಬ ಕಠಿಣವಾದ ಶಬ್ದವನ್ನು ಮಾತ್ರ ಹೇಳದಿರು, ನನ್ನ ಮೇಲೆ ದಯೆದೋರಿ (ಕನಿಕರಿಸಿ) ಈ ಗಾಂಧರ್ವಾಸ್ತ್ರವನ್ನು ಪರಿಗ್ರಹಿಸು (ಸ್ವೀಕರಿಸು).

ಅನ್ವಯಃ :—ಉಪಚ್ಛಂದಯತಿ ಮಯಿ ತ್ವಯಾ ಪ್ರತಿಷೇಧರೌಕ್ಷ್ಯಮ್ ನ ಪ್ರಯೋಜ್ಯಮ್ । ಮಾಂ ಪ್ರತಿ ಹ್ರಿಯಾ ಅಲಂ ॥

ಭೂ—ಸತ್ತಾಯಾಂ—ಲುಙ್—ಮ.ಪು.ಏ. । ಅಭೂಃ ॥ ಪ್ರತಿಷೇಧ ಏವ ರೌಕ್ಷ್ಯಂ । ರೂಕ್ಷಸ್ಯ ಭಾವಃ ರೌಕ್ಷ್ಯಮ್ ॥

ಮಾಂ ಪ್ರತಿ = ನನ್ನ ವಿಷಯದಲ್ಲಿ, ಹ್ರಿಯಾ = ನಾಚಿಕೆಯಿಂದ, ಅಲಂ = ಸಾಕು, ಯತ್ = ಯಾವ ಕಾರಣದಿಂದ, ತ್ವಂ = ನೀನು, ಮಾಂ = ನನ್ನನ್ನು, ಪ್ರಹರನ್ನಪಿ = ಹೊಡೆದವನಾದರೂ, ಮುಹೂರ್ತಂ = ಅಲ್ಪಕಾಲ, ದಯಾಪರಃ = ದಯೆಯುಳ್ಳವನು, ಅಭೂಃ = ಆಗಿರುವಿ. ತಸ್ಮಾತ್ = ಆದುದರಿಂದ, ಉಪಚ್ಛಂದಯತಿ=ಪ್ರಾರ್ಥಿಸುತ್ತಿರುವ ಪ್ರತಿಷೇಧರೌಕ್ಷ್ಯಂ=ನಿಷೇಧವೆಂಬ ಕಾಠಿಣ್ಯವು, ನ ಪ್ರಯೋಜ್ಯಂ =ಮಾಡಲ್ಪಡಬಾರದು.

**59.** **ತಥೇತ್ಯುಪಸ್ಪೃಶ್ಯ ಪಯಃ ಪವಿತ್ರಂ ।**
**ಸೋಮೋದ್ಭವಾಯಾಃ ಸರಿತೋ ನೃಸೋಮಃ ॥**
**ಉದಙ್ಮುಖಃ ಸೋಽಸ್ತ್ರವಿದಸ್ತ್ರಮಂತ್ರಂ ।**
**ಜಗ್ರಾಹ ತಸ್ಮಾನ್ನಿಗೃಹೀತ ಶಾಪಾತ್** ॥ ೫೯ ॥

ಪುರುಷಶ್ರೇಷ್ಠನಾದ, ತನ್ನ ಪಾವಿತ್ರ್ಯತೆಯಿಂದ ಚಂದ್ರನನ್ನು ಹೋಲುವ ಧೀರ ಪುರುಷನಾದ ಅಜನು ಅಂತೆಯೇ ಆಗಲೆಂದು ಹೇಳಿ ಅಸ್ತ್ರಮಂತ್ರವನ್ನು ಪಡೆಯಲು ಸನ್ನದ್ಧನಾದನು, ಓಷಧಿಮಿತ್ರನಾದ ಚಂದ್ರನಿಂದ ಉದ್ಭವಿಸಿದ ಪವಿತ್ರವಾದ ಜಲರಾಶಿಯನ್ನು ಹೊಂದಿರುವ ನರ್ಮದಾ ನದಿಯ (ರೇವಾನದಿಯ) ನೀರಿನಿಂದ ಆಚಮನಮಾಡಿ ಪರಿಶುದ್ಧನಾಗಿ ಉತ್ತರದಿಕ್ಕಿಗೆ ಮುಖಮಾಡಿ ನಿಂತನು. ಆಗ ಆ ಪ್ರೀತನಾದ ಯಕ್ಷನು ಗಾಂಧರ್ವಾಸ್ತ್ರದ ಮಂತ್ರವನ್ನು ವಿಧಿಪೂರ್ವಕ ಉಪದೇಶಿದನು. ರಾಜಕುಮಾರನು ಆ ದಿವ್ಯಾಸ್ತ್ರವನ್ನು ಪಡೆದು ತನ್ನ ತೂಣೀರವನ್ನು ಬಲಪಡಿಸಿಕೊಂಡನು.

ಅನ್ವಯ :—ನೃಸೋಮಃ ಅಸ್ತ್ರವಿದ್ ಸಃ ತಥೇತಿ ಸೋಮೋದ್ಭವಾಯಾಃ ಸರಿತಃ ಪವಿತ್ರಂ ಪಯಃ ಉಪಸ್ಪೃಶ್ಯ ಉದಙ್ಮುಖಃ (ಸನ್) ನಿಗೃಹೀತಶಾಪಾತ್ ತಸ್ಮಾತ್ ಅಸ್ತ್ರಮಂತ್ರಂ ಜಗ್ರಾಹ ॥

ಸೋಮಃ ಉದ್ಭವಃ ಯಸ್ಯಾಃ ॥ ನಾ ಸೋಮಃ ಇವ । ನೃಸೋಮಃ । ಅಸ್ತ್ರಾಣಿ ವೇತ್ತಿ ಇತಿ ಅಸ್ತ್ರವಿತ್ ॥ ಅಸ್ತ್ರಸ್ಯ ಮಂತ್ರಃ । ತಂ ॥ ನಿಗೃಹೀತಃ ಶಾಪಃ ಯಸ್ಮಾತ್ ॥ ಜಗ್ರಾಹ—ಜಗೃಹತುಃ—ಜಗೃಹುಃ । ಜಗ್ರಹಿಥ—ಜಗೃಹಥುಃ—ಜಗೃಹ । ಜಗ್ರಾಹ । ಜಗೃಹಿವ । ಜಗೃಹಿಮ । ಗ್ರಹ—ಉಪಾದಾನೇ—ಲಿಟ್—ಪ್ರ.ಪು.ಏ. ॥

ನೃಸೋಮಃ = ಪುರುಷಶ್ರೇಷ್ಠನಾದ, ಅಸ್ತ್ರವಿತ್ = ನಾನಾಸ್ತ್ರಗಳನ್ನು ತಿಳಿದಿರುವ, ಸಃ=ಆ ಅಜಕುಮಾರನು, ತಥಾ ಇತಿ = ಹಾಗೆಯೇ ಆಗಲೆಂದು, ಸೋಮೋದ್ಭವಾಯಾಃ ಸರಿತಃ=ನರ್ಮದಾನದಿಯ, ಪವಿತ್ರಂ=ಪರಿಶುದ್ಧವಾದ, ಪಯಃ=ನೀರನ್ನು, ಉಪಸ್ಪೃಶ್ಯ = ಆಚಮನ ಮಾಡಿ, ಉದಙ್ಮುಖಃ = ಉತ್ತರಾಭಿಮುಖನಾಗಿ, ನಿಗೃಹೀತಶಾಪಾತ್ = ಶಾಪದಿಂದ ಮುಕ್ತನಾಗಿ, ತಸ್ಮಾತ್ = ಆ ಯಕ್ಷನಿಂದ, ಅಸ್ತ್ರಮಂತ್ರಂ = ಗಾಂಧರ್ವ ಅಸ್ತ್ರಮಂತ್ರವನ್ನು, ಜಗ್ರಾಹ = ಸ್ವೀಕರಿಸಿದನು.

**60. ಏವಂ ತಯೋರಧ್ವನಿ ದೈವಯೋಗಾತ್ ।**
**ಆಸೇದುಷೋಃ ಸಖ್ಯಮಚಿಂತ್ಯಹೇತು ॥**
**ಏಕೋ ಯಯೌ ಚೈತ್ರರಥಪ್ರದೇಶಾನ್ ।**
**ಸೌರಾಜ್ಯರಮ್ಯಾನಪರೋ ವಿದರ್ಭಾನ್ ॥ ೬೦ ॥**

ಅಜಕುಮಾರನಿಗೂ ಪ್ರಿಯಂವದ ಗಂಧರ್ವರಾಜನಿಗೂ ದೈವಯೋಗದಿಂದ, ಆಕಸ್ಮಿಕವಾಗಿ ಸಖ್ಯವುಂಟಾಯಿತು. ಇದನ್ನು ಅದೃಷ್ಟವಶಾತ್ ಎಂದೇ ಹೇಳಬೇಕು. ಏಕೆಂದರೆ ಇದರ ಕಾರಣವನ್ನು ಊಹಿಸಲು ಸಾಧ್ಯವಿಲ್ಲ. ಆ ಯಕ್ಷನು ಪಾಪವಿಮೋಚನೆ ಹೊಂದಿ ತನ್ನ ಸ್ವರಾಜ್ಯಕ್ಕೆ ಗಮಿಸಿದನು. ಅವನು ಉತ್ತರದಿಕ್ಕಿನಲ್ಲಿ ಕುಬೇರನ ಸಾಮ್ರಾಜ್ಯವಾದ ಉದ್ಯಾನನಗರಿಯಾದ ಹಿಮಾಲದತ್ತ (ಚೈತ್ರರಥಪ್ರದೇಶ) ಹೊರಟ. ಇನ್ನೊಬ್ಬನು ಸುಭಿಕ್ಷೆಯ ತಾಣವಾದ, ಸುಂದರವಾದ, ಸಸ್ಯಶ್ಯಾಮಲ ವಿದರ್ಭದೇಶಕ್ಕೆ ಪಯಣ ಬೆಳೆಸಿದನು. ಗಂಧರ್ವಪತಿಯು ಕುಬೇರನ ಚೈತ್ರರಥೋದ್ಯಾನ ಪ್ರದೇಶದತ್ತ ಯಾನ ಮಾಡಿದನು.

ದೈವಸ್ಯ ಯೋಗಃ । ತಸ್ಮಾತ್ ॥ ಅಚಿಂತ್ಯಃ ಹೇತುಃ ಯಸ್ಯ ತತ್—ಅಚಿಂತ್ಯಹೇತು ॥

ಚೈತ್ರರಥಸ್ಯ ಪ್ರದೇಶಾಃ । ತಾನ್ । ಸೌರಾಜ್ಯೇ ನ ರಮ್ಯಾಃ । ತಾನ್ । ಯಯೌ—ಯಾ—ಪ್ರಾಪಣೇ—ಲಿಟ್—ಪ್ರ.ಪು.ಏ. ॥

ಏವಂ = ಈ ರೀತಿಯಾಗಿ, ಅಧ್ವನಿ = ಮಾರ್ಗದಲ್ಲಿ, ದೈವಯೋಗಾತ್ = ಅದೃಷ್ಟದಿಂದ, ಅಚಿಂತ್ಯ ಹೇತು = ಊಹಿಸಲು ಅಶಕ್ಯವಾದ ಕಾರಣವುಳ್ಳ, ಸಖ್ಯಂ = ಸ್ನೇಹವನ್ನು, ಆಸೇದುಷೋಃ = ಹೊಂದಿರುವ, ತಯೋಃ = ಅವರಿಬ್ಬರಲ್ಲಿ, ಏಕಃ = ಒಬ್ಬನು, ಚೈತ್ರರಥ ಪ್ರದೇಶಾನ್ = ಕುಬೇರೋದ್ಯಾನಪ್ರದೇಶವನ್ನು ಕುರಿತು, ಯಯೌ = ಹೋದನು, ಅಪರಃ = ಇನ್ನೊಬ್ಬನು, ಸೌರಜ್ಯರಮ್ಯಾನ್ = ಒಳ್ಳೆಯ ರಾಜನ ರಾಜ್ಯಭಾರದಿಂದ ಸುಂದರವಾದ (ಸುಭಿಕ್ಷೆಯುಳ್ಳ), ವಿದರ್ಭಾನ್ = ವಿದರ್ಭದೇಶಕ್ಕೆ, ಯಯೌ = ಹೋದನು.

**61. ತಂ ತಸ್ಥಿವಾಂಸಂ ನಗರೋಪಕಂಠೇ ।**
**ತದಾಗಮಾರೂಢಗುರುಪ್ರಹರ್ಷಃ ॥**
**ಪ್ರತ್ಯುಜ್ಜಗಾಮ ಕ್ರಥಕೈಶಿಕೇಂದ್ರಃ ।**
**ಚಂದ್ರಪ್ರವೃದ್ಧೋರ್ಮಿರಿವೋರ್ಮಿಮಾಲೀ ॥ ೬೧ ॥**

ಅಜಕುಮಾರನು ವಿದರ್ಭನಗರದ ಸಮೀಪದಲ್ಲಿ ಬಂದು ಶಿಬಿರವನ್ನು ಹೂಡಿ ಇಳಿದುಕೊಂಡಿರುವುದನ್ನು ಕ್ರಥಕೈಶಿಕರ ಒಡೆಯನಾದ ವಿದರ್ಭರಾಜನು ತಿಳಿದು ಅಧಿಕವಾದ ಸಂತೋಷವನ್ನು ತಾಳಿ ತನ್ನ ಅತಿಥಿಯನ್ನು ಗೌರವದಿಂದ ಕರೆತರಲು ತನ್ನ ಸಿಂಹಾಸನದಿಂದ ಕೂಡಲೇ ಎದ್ದು ನಿಂತನು. ವೈಭವದಿಂದ ಕರೆತಲು, ಸರ್ವಸನ್ನಾಹದಿಂದ ಪೂರ್ಣಸಜ್ಜಾದನು. ಹುಣ್ಣಿಮೆಚಂದ್ರನ ದರ್ಶನದಿಂದ ಸಾಗರನು ಸಂತಸದಿಂದ ಉಬ್ಬಿ ನಲಿಯುವಂತೆ ಅಜನ ಆಗಮನದ ವಾರ್ತೆ ಕೇಳಿದೊಡನೆಯೇ ಸಂಜನಿತ ಹರ್ಷಯುತನಾದನು. ಆ ರಾಜೇಂದ್ರನು ಹುಣ್ಣಿಮೆಯಚಂದ್ರನು ಉದಯಿಸಲು ಅದನ್ನು ಕಂಡು ಸಾಗರವು ಸಂತಸದಿಂದ ದೊಡ್ಡದೊಡ್ಡ ಅಲೆಗಳನ್ನು (ತೆರೆಗಳನ್ನು) ಎಬ್ಬಿಸಿ ಭೋರೆಂದು ಘರ್ಜಿಸುತ್ತ, ಹರ್ಷನಾದ ಮಾಡುತ್ತಾ ತನ್ನ ಹರ್ಷವನ್ನು ಸೂಚಿಸಿ ಎದುರುಗೊಳ್ಳುವಂತೆ, ವಿದರ್ಭರಾಜನು ಸಕಲ ವಾದ್ಯಘೋಷದೊಂದಿಗೆ, ರಾಜಮರ್ಯಾದೆಯೊಂದಿಗೆ ಇದಿರುಗೊಂಡು ಸ್ವಾಗತಿಸಿ ಕರೆತಂದನು.

ಅನ್ವಯ :—ನಗರೋಪಕಂಠೇ ತಸ್ಥಿವಾಂಸಂ ತಂ ತದಾಗಮಾರೂಢಪ್ರಹರ್ಷಃ ಕ್ರಥಕೈಶಿಕೇಂದ್ರಃ ಪ್ರವೃದ್ಧೋರ್ಮಿಃ ಊರ್ಮಿಮಾಲೀ ಚಂದ್ರಮ್ ಇವ ಪ್ರತ್ಯುಜ್ಜಗಾಮ ॥

ನಗರಸ್ಯ ಉಪಕಂಠಃ । ತಸ್ಮಿನ್ ॥ ತಸ್ಯ ಆಗಮಃ । ತದಾಗಮಃ । ತದಾಗಮೇನ ಆರೂಢಃ ಗುರುಶ್ಚಾಸೌ ಪ್ರಹರ್ಷಶ್ಚ । ತದಾಗಮಾರೂಢಃ ಗುರುಪ್ರಹರ್ಷಃ ಯಸ್ಯ ಸಃ । ತದಾಗಮಾರೂಢಗುರುಪ್ರಹರ್ಷಃ ॥ ಕ್ರಥಕೈಶಿಕಾನಾಂ ಇಂದ್ರಃ । ಪ್ರವೃದ್ಧಾಃ ಊರ್ಮಯಃ ಯಸ್ಯ ಸಃ ಪ್ರವೃದ್ಧೋರ್ಮಿಃ ಪ್ರತಿ ಉತ್—ಉಪಸರ್ಗಗಳು । ಜಗಾಮ—ಜಗ್ಮತುಃ—ಜಗ್ಮುಃ । ಜಗಮಿಥ ಜಗಂಥ—ಜಗ್ಮಥುಃ—ಜಗ್ಮ । ಜಗಾಮ, ಜಗಮ—ಜಗ್ಮಿವ—ಜಗ್ಮಿಮ ॥ ಗಮ್ಲೃ— ಗತೌ—ಲಿಟ್—ಪ್ರ.ಪು.ಏ. ॥

ನಗರೋಪಕಂಠೇ = ಪಟ್ಟಣದ ,ಸಮೀಪದಲ್ಲಿ, ತಸ್ಥಿವಾಂಸಂ = ಬಂದು ತಂಗಿರುವ

(ನೆಲಸಿರುವ). ತಂ = ಆ ಅಜಕುಮಾರನನ್ನು, ಶಥಾಗಮಾರೂಢ ಗುರುಪ್ರಹರ್ಷಃ = ಅಜನ ಬರುವಿಕೆಯಿಂದ ಉಂಟಾದ ಅಧಿಕ ಸಂತೋಷವುಳ್ಳ, ಕ್ರಥಕೈಶಿಕೇಂದ್ರಃ = ವಿದರ್ಭ ರಾಜನು, ಪ್ರವೃದ್ಧೋರ್ಮಿಃ = ಅಧಿಕವಾದ ಅಲೆಗಳುಳ್ಳ, ಉರ್ಮಿಮಾಲೀ = ಸಮುದ್ರನು, ಚಂದ್ರವಿಂಬ = ಚಂದ್ರನನ್ನು ಕಂಡಂತೆ (ಪ್ರತಿಚಂದ್ರನೆಂಬಂತೆ), ಪ್ರತ್ಯುಜ್ಜಗಾಮ = ಎದುರ್ಗೊಂಡನು.

**62. ಪ್ರವೇಶ್ಯ ಚೈನಂ ಪುರಮಗ್ರಯಾಯೀ ।**
**ನೀಚೈಸ್ತಥೋಪಾಚರದರ್ಪಿತಶ್ರೀಃ ॥**
**ಮೇನೇ ಯಥಾ ತತ್ರ ಜನಃ ಸಮೇತೋ ।**
**ವೈದರ್ಭಮಾಗಂತುಮಜಂ ಗೃಹೇಶಮ್ ॥ ೬೨ ॥**

ವಿದರ್ಭರಾಜನು ವಿನೀತನಾಗಿ ಅಜಕುಮಾರನನ್ನು ಸ್ವಾಗತಿಸಿದನು. ಅವನ ಸೇವೆಗೋಸ್ಕರ ಸಹಸ್ರಾರು ಮಂದಿ ಸೇವಕರು ಸಿದ್ಧರಿದ್ದರೂ ತಾನೇ ವಿನೀತನಾಗಿ, ದಾರಿ ತೋರಿಸುತ್ತಾ, ಪಟ್ಟಣದೊಳಕ್ಕೆ ಬರಮಾಡಿಕೊಂಡನು. ಅವನ ಸೌಜನ್ಯಕ್ಕೆ ಪಾರವೆ) ಇರಲಿಲ್ಲ. ಅವನ ಸೇವಾಕಾರ್ಯವೈಖರಿಯನ್ನು ನೋಡಿ ಜನರು ತಬ್ಬಿಬ್ಬಾಗಿ, ಗೌರವದ ಅತಿಥಿಯಾದ, ಇನಕುಲಶೇಖರನಾದ, ಅಜಸಾರ್ವಭೌಮನೇ ಮನೆಯ ಯಜಮಾನನೆಂದೇ ಭಾವಿಸಿದರು. ಸೇವಾಧರ್ಮಧುರಂಧರನಾದ (ಸೇವಾಕಾರ್ಯಧುರಂಧರನಾದ. ವಿದರ್ಭದೇಶದ ಒಡೆಯನಾದ ಭೋಜರಾಜನೇ ಅತಿಥಿಯೆಂಬಂತೆ ಜನರು ಭಾವಿಸಿದರು, ಭೋಜರಾಜನು ಆಗಂತುಕನು. ಅಜನೇ ಮನೆಯ ಒಡೆಯನೆಂಬಂತೆ, ತನ್ನ ಮನೆಯಲ್ಲಿ ತಾನೇ ಅತಿಥಿಯೋ ಎಂಬಂತೆ, ಆತಿಥೇಯನಾದ ಭೋಜರಾಜನು ಅತ್ಯಂತ ವಿನೀತನಾಗೀ ಎಲ್ಲರೂ ಅರಿಯುವಂತೆ ಅತ್ಯಂತ ಸೌಜನ್ಯದಿಂದ ಸತ್ಕಾರಗೈದನು. ರತ್ನಾದಿಗಳ ಕಾಣಿಕೆಯನ್ನಿತ್ತು ಗೌರವಿಸಿದನು. ಅಧಿಕವಾದ ಸಂಪತನ್ನು ಸಮರ್ಪಿಸಿದನು.

ಅನ್ವಯ :—ಏನಮ್ ಅಗ್ರಯಾಯೀ ಪುರಂ ಪ್ರವೇಶ್ಯ ಅರ್ಪಿತಶ್ರೀಃ ನೀಚೈಃ ತಥಾ ಉಪಾಚರತ್ ಯಥಾ ತತ್ರ ಸಮೇತಃ ಜನಃ ವೈದರ್ಭಮ್ ಆಗಂತುಂ ಅಜಂ ಗೃಹೇಶಮ್ ಆಗಂತುಂ ಮೇನೇ ॥

ಅಗ್ರೇ ಯಾತುಂ ಶೀಲಮಸ್ಯ—ಅಗ್ರಯಾಯೀ ॥ ಅರ್ಪಿತಾಶ್ರೀಃ ಯೇನ ಸಃ । ಅರ್ಪಿತಶ್ರೀಃ ॥ ಉಪ—ಉಪಸರ್ಗ । ಆಚರತ್—ಆಚರತಾಂ—ಆಚರನ್ । ಆಚರಃ—ಆಚರತಂ—ಆಚರತ । ಆಚರಂ—ಆಚರಾವ—ಆಚರಾಮ । ಚರ—ಗತಿಭಕ್ಷಣಯೋಃ ಲಙ್—ಪ್ರ.ಪು.ಏ. ॥ ಮೇನೇ—ಮೇನಾತೇ—ಮೇನಿರೇ । ಇತ್ಯಾದಿ—ಮನ—ಜ್ಞಾನೇ —ಲಿಟ್—ಪ್ರ.ಪು.ಏ. ॥ ಗೃಹಸ್ಯ ಈಶಃ ॥ ತಮ್ ॥

ಏನಂ = ಈ ಅಜನನ್ನು, ಅಗ್ರಯಾಯೀ = ಮುಂದೆ ಹೋಗುತ್ತಾ, ನೀಚೈಃ = ನಮ್ರನಾಗಿ, ಪುರಂ = ಪಟ್ಟಣಕ್ಕೆ, ಪ್ರವೇಶ್ಯ = ಪ್ರವೇಶಮಾಡಿಸಿ, ಅರ್ಪಿತಶ್ರೀಃ = ಸಮರ್ಪಿಸಿದ ಸಂಪತ್ತುಳ್ಳವನಾಗಿ, ತಥಾ = ಆ ರೀತಿಯಾಗಿ, ಉಪಾಚರತ್ = ಉಪಚರಿಸಿದನು, ಯಥಾ = ಹೇಗೆಂದರೆ, ತತ್ರ = ಆ ಪಟ್ಟಣದಲ್ಲಿ, ಸಮೇತಃ = ಸೇರಿರುವ, ಜನಃ = ಜನರು, ವೈದರ್ಭಂ = ಭೋಜರಾಜನನ್ನು, ಆಗಂತುಂ = ಅತಿಥಿಯನ್ನಾಗಿಯೂ, ಅಜಂ = ಅಜನನ್ನು, ಗೃಹೇಶಂ = ಮನೆಯ ಯಜಮಾನನ್ನಾಗಿಯೂ, ಮೇನೇ = ತಿಳಿದರು, ಭಾವಿಸಿದರು.

63. ತಸ್ಯಾಧಿಕಾರಪುರುಷೈಃ ಪ್ರಣತೈಃ ಪ್ರದಿಷ್ಟಾಂ ।
ಪ್ರಾಗ್ದ್ವಾರವೇದಿವಿನಿವೇಶಿತಪೂರ್ಣಕುಂಭಾಮ್ ॥
ರಮ್ಯಾಂ ರಘುಪ್ರತಿನಿಧಿಃ ಸ ನವೋಪಕಾರ್ಯಾಂ ।
ಬಾಲ್ಯಾತ್ಪರಾಮಿವ ದಶಾಂ ಮದನೋಽಧ್ಯುವಾಸ ॥ ೬೩ ॥

ಸಮ್ರಾಟನಾದ ರಘುವಿನ ಪ್ರತಿನಿಧಿಯಾದ ಅಜಕುಮಾರನು ಎಲ್ಲಾ ವಿಧದಲ್ಲಿ ತನ್ನ ತಂದೆಗೆ ಸಮಾನನಾಗಿದ್ದನು. ಭೋಜರಾಜನು ತನ್ನ ಗೌರವದ ಅತಿಥಿಯು ಉಳಿದು ಕೊಳ್ಳಲು ಒಂದು ರಾಜಭವನವನ್ನು ಕಟ್ಟಿಸಿದ್ದನು. ಆ ರಾಜಮಹಲಿನ ಪೂರ್ವದ್ವಾರದ ವೇದಿಕೆಯಲ್ಲಿ ಮಂಗಲಕರವಾದ ಪೂರ್ಣಕುಂಭಗಳನ್ನು ಇಡಿಸಿದ್ದನು. ಭೋಜನ ಅಪ್ಪಣೆ ಯಂತೆ ಅಧಿಕೃತರಾದ ಕೋಶಾಧ್ಯಕ್ಷರೇ ಮೊದಲಾದವರು ರಘುಸೂನುವನ್ನು ಅತ್ಯಂತ ವೈಭವದಿಂದ ಕರೆದೊಯ್ದರು. ಅಜನು ತನ್ನ ದೇಹಸೌಂದರ್ಯದಿಂದ ಮನ್ಮಥದೇವನಿಗೆ ಸರಿಸಾಟಿಯಾಗಿದ್ದನು. ಸ್ವತಃ ಮನ್ಮಥದೇವನೇ ತನ್ನ ಸಹಜಸುಂದರವಾದ ಬಾಲ್ಯಾವಸ್ಥೆ ಯನ್ನು ಕಳೆದು ವೈಭವೋಪೇತವಾದ ಯೌವನಾವಸ್ಥೆಗೆ ಕಾಲಿಟ್ಟಂತೆ, ಮದನನೇ ಮೈತಳೆದ ನೆಂಬಂತೆ ಆ ರಾಜಭವನದಲ್ಲಿ ವಿರಾಜಿಸಿದನು. ರತಿರಾಜನಾದ ಮನ್ಮಥದೇವನೇ ಅಜನ ದೇಹದಲ್ಲಿ ನೆಲಸಿ ನಿಂದನೋ ಎಂಬಂತೆ ಅಜನು ರೂಪಸೌಂದರ್ಯದ ಶೋಭಾ ಮೂರ್ತಿಯಾಗಿ (ಸಾಕಾರಮೂರ್ತಿಯಾಗಿ) ತೋರಿದನು. ಅಂತಹ ತೇಜೋಮೂರ್ತಿ ಯಾಗಿ ಸೌಂದರ್ಯನಿಧಿಯಾಗಿ ಆ ರಾಜಭವನದಲ್ಲಿ ನೆಲಸಿರ್ದನು.

ಅನ್ವಯ:—ತಸ್ಯ ಪ್ರಣತೈಃ ಅಧಿಕಾರಪುರುಷೈಃ ಪ್ರದಿಷ್ಟಾಂ ಪ್ರಾಗ್ದ್ವಾರ (ಪ್ರಾಗ್ದ್ವಾರ) ವೇದಿವಿನಿವೇಶಿತಪೂರ್ಣಕುಂಭಾಮ್ ರಮ್ಯಾಂ ನವೋಪಕಾರ್ಯಾಂ ಸ ರಘುಃ ಪ್ರತಿನಿಧಿಃ ಬಾಲ್ಯಾತ್ ಪರಾಂ ದಶಾಂ ಮದನಃ ಇವ ಅಧ್ಯುವಾಸ ॥

ಅಧಿಕಾರಾಣಾಂ ಪುರುಷಾಃ । ತೈಃ ॥ ಪ್ರಾಗ್ದ್ವಾರಸ್ಯ ವೇದೀ—ಪ್ರಾಗ್ದ್ವಾರವೇದೀ । ಪ್ರಾಗ್ದ್ವಾರವೇದ್ಯಾಂ ವಿನಿವೇಶಿತಃ । ಪ್ರಾಗ್ದ್ವಾರ ವೇದಿವಿನಿವೇಶಿತಃ ಪೂರ್ಣಕುಂಭಃ ಯಸ್ಯಾಃ ಸಾ । ಪ್ರಾಗ್ದ್ವಾರ ವೇದಿನಿವೇಶಿತಪೂರ್ಣಕುಂಭಾ । ತಾಂ । ರಘೋಃ ಪ್ರತಿ ನಿಧಿಃ । ನವಾ ಚ ಸಾ ಉಪಕಾರ್ಯಾ ಚ । ನವೋಪಕಾರ್ಯಾ । ತಾಮ್ । "ಉಪಾನ್ವ ಧ್ಯಾಙ್ ವಸಃ" ಸೂತ್ರದಿಂದ ಅಧಿಪೂರ್ವಕ ವಸ್ ಧಾತು ಇರುವುದರಿಂದ ಕರ್ಮಸಂಜ್ಞಾ ಬಂದು ಉಪಕಾರ್ಯಾಂ ಎಂದು ದ್ವಿತೀಯಾ ಬಂದಿದೆ. ಅಧಿ—ಉಪಸರ್ಗ । ಉವಾಸ— ಊಷತುಃ—ಊಷುಃ । ಉವಸಿಥ—ಊಷಥುಃ—ಊಷ । ಉವಾಸ, ಉವಸ— ಊಷಿವ—ಊಷಿಮ । ವಸ—ನಿವಾಸೇ—ಲಿಟ್, ಪ್ರ.ಪು ಏ. ॥

ರಘು ಪ್ರತಿನಿಧಿಃ = ರಘುವಿಗೆ ಸಮಾನನಾದ, ಸಃ = ಆ ಅಜಕುಮಾರನು, ಪ್ರಣತೈಃ = ನಮಸ್ಕರಿಸಿದ, ತಸ್ಯ= ಆ ಭೋಜರಾಜನ, ಅಧಿಕಾರಪುರುಷೈಃ = ಕೋಶಾಧ್ಯಕ್ಷಾದಿ ಅಧಿಕಾರಿಜನರಿಂದ, ಪ್ರದಿಷ್ಟಾಂ = ತೋರಿಸಿದ, ಪ್ರಾಗ್ದ್ವಾರವೇದಿವಿನಿವೇಶಿತಪೂರ್ಣ ಕುಂಭಾಂ = ಪೂರ್ವದ ವೇದಿಕೆಯಲ್ಲಿ ಇಡಿಸಿದ ಪೂರ್ಣಕುಂಭವುಳ್ಳ, ರಮ್ಯಾಂ = ಮನೋಹರವಾದ, ನವೋಪಕಾರ್ಯಾ = ನೂತನವಾದ ರಾಜಭವನವನ್ನು, ಮದನಃ = ಮನ್ಮಥನು, ಬಾಲ್ಯಾತ್ಪರಾಮ್=ಶೈಶವಾವಸ್ಥೆಯ ಮುಂದಿನ, ದಶಾಂ ಇವ=ಯೌವನಾ ವಸ್ಥೆಯನ್ನೆಂಬಂತೆ, ಅಧ್ಯುವಾಸ = ವಾಸಮಾಡಿದನು.

**64. ತತ್ರ ಸ್ವಯಂವರಸಮಾಹೃತರಾಜಲೋಕಂ ।**
**ಕನ್ಯಾಲಲಾಮಕಮನೀಯಮಜಸ್ಯ ಲಿಪ್ಸೋಃ ॥**
**ಭಾವಾವಬೋಧಕಲುಷಾ ದಯಿತೇವ ರಾತ್ರೌ ।**
**ನಿದ್ರಾ ಚಿರೇಣ ನಯನಾಭಿಮುಖೀ ಬಭೂವ ॥ ೬೪ ॥**

ಸ್ವಯಂವರನಿಮಿತ್ತವಾಗಿ ಭಾರತದ ಛಪ್ಪನ್ನಾರು ದೇಶಗಳಿಂದ ರಾಜಕುಮಾರರು ಬಂದಿದ್ದರು. ರಾಜಕನ್ನಿಕೆಯರಲ್ಲಿ ಅತಿಶ್ರೇಷ್ಠಳೂ, ಚಾರುಯೌವನಭರಿತಳೂ, ಅತಿ ಸುಂದರಿಯೂ ಆದ ಇಂದುಮತಿದೇವಿಯನ್ನು ಹೊಂದಲು ಬಂದಿದ್ದ ಅಜಸಾರ್ವಭೌಮನು ತನ್ನ ಹೃದಯಾರವಿಂದದಲ್ಲಿ ಧ್ಯಾನಿಸುತ್ತ ಹಂಸತೂಲಿಕಾಪಲ್ಲಂಕದಲ್ಲಿ ಒರಗಿದ್ದನು. ಆಗ ತನ್ನ ಪುರುಷನು ಬೇರೆ ಸ್ತ್ರೀಯ ಧ್ಯಾನದಲ್ಲಿದ್ದಾಗ ಪ್ರೌಢಳಲ್ಲದ ಸಾಮಾನ್ಯ ಸ್ತ್ರೀಯು ಅದನ್ನು ತಿಳಿಯದೆ ಅವನನ್ನು ಪ್ರೀತಿಸಲು ಬಂದಂತೆ ನಿದ್ರಾದೇವಿಯು ಅವನಿಗೆ ಅಭಿಮುಖವಾಗಿ ಬಂದು ಅವನನ್ನು ಗಾಢವಾಗಿ ಆಲಿಂಗಿಸುತ್ತಾ ಆಶ್ರಯಿಸಿದಳು. ಅಜನು ಅರಿವಿಲ್ಲದೆಯೇ ನಿದ್ರೆಯಿಂದ ಬಂಧಿತನಾಗಿ ನಿದ್ರಾಲೋಲನಾದನು. ಅವನು ನಿದ್ರಾಂಗನೆಯ ವಶನಾದನು, ನಿದ್ರಾಮುದ್ರಿತನಾದನು.

ಅನ್ವಯ :—ತತ್ರ ಸ್ವಯಂವರಸಮಾಹೃತರಾಜಲೋಕಂ ಕಮನೀಯಮ್ ಕನ್ಯಾಲಲಾಮಂ ಲಿಪ್ಸೋಃ ಅಜಸ್ಯ ಭಾವಾವಬೋಧಕಲುಷಾ ದಯಿತೇವ ನಿದ್ರಾ ರಾತ್ರೌ ಚಿರೇಣ ನಯನಾಭಿಮುಖೀ ಬಭೂವ ॥

ರಾಜ್ಞಾಂ ಲೋಕಃ । ಸ್ವಯಂವರಾಯ ಸಮಾಹೃತಃ । ಸ್ವಯಂವರಸಮಾಹೃತಃ ರಾಜಲೋಕಃ ಯೇನ ತತ್ । ಸ್ವಯಂವರಸಮಾಹೃತರಾಜ ಲೋಕಂ ॥ ಕನ್ಯಾಸು ಲಲಾಮ ॥ ಲಬ್ಧುಂ ಇಚ್ಛುಃ—ಲಿಪ್ಸುಃ । ತಸ್ಯ ॥ ಭಾವಸ್ಯ ಅವಬೋಧಃ ॥ ಭಾವಾವಬೋಧೇ ಕಲುಷಾ । ನಯನಯೋಃ ಅಭಿಮುಖೀ । ಬಭೂವ—ಭೂ—ಸತ್ತಾಯಾಂ—ಲಿಟ್—ಪ್ರ.ಪು.ಏ. ॥

ತತ್ರ = ಆ ರಾಜಭವನದಲ್ಲಿ, ಸ್ವಯಂವರಸಮಾಹೃತರಾಜಲೋಕಂ = ಸ್ವಯಂವರ ಕಾರಣದಿಂದ ಬಂದು ಸೇರಿರುವ ರಾಜಸಮುದಾಯವಿರುವ, ಕಮನೀಯಂ = ಸುಂದರವಾದ, ಕನ್ಯಾಲಲಾಮ = ಶ್ರೇಷ್ಠಕನ್ನಿಕೆಯನ್ನು, ಲಿಪ್ಸೋಃ = ಹೊಂದಲು ಬಯಸುವ, ಅಜಸ್ಯ = ಅಜನಿಗೆ, ಭಾವಾವಬೋಧಕಲುಷಾ = ಪುರುಷನ ಅಭಿಪ್ರಾಯವಿಶೇಷವನ್ನು ತಿಳಿಯಲು ಅಸಮರ್ಥಳಾದ, ದಯಿತಾ ಇವ = ಪತ್ನಿಯಂತೆ, ರಾತ್ರೌ = ರಾತ್ರಿಯಲ್ಲಿ, ನಿದ್ರಾ = ನಿದ್ರಾಂಗನೆಯು, ಚಿರೇಣ = ಬಹಳ ಸಮಯವಾದಮೇಲೆ, ನಯನಾಭಿಮುಖೀ ಬಭೂವ = ಕಣ್ಣಿಗೆ ಎದುರಾಗಿ ಬರುವುದು (ನಿದ್ದೆಹತ್ತಿತು).

**65. ತಂ ಕರ್ಣಭೂಷಣನಿಪೀಡಿತಪೀವರಾಂಸಂ ।**
**ಶಯ್ಯೋತ್ತರಚ್ಛದವಿಮರ್ದಕೃಶಾಂಗರಾಗಮ್ ॥**
**ಸೂತಾತ್ಮಜಾಃ ಸವಯಸಃ ಪ್ರಥಿತಪ್ರಬೋಧಂ ।**
**ಪ್ರಾಬೋಧಯನ್ನುಷಸಿ ವಾಗ್ಭಿರುದಾರವಾಚಃ ॥ ೬೫ ॥**

ವಜ್ರದ ಕರ್ಣಕುಂಡಲಗಳಿಂದ ಒತ್ತಲ್ಪಟ್ಟು ಮಹಾಭುಜನಾದ ಅಜಕುಮಾರನ ಬಾಹುಯುಗಗಳಲ್ಲಿ ಗುರುತುಗಳು ಕಾಣಿಸಿಕೊಂಡುವು. ಮೈಗೆ ಹಚ್ಚಿದ ಸುಗಂಧಲೇಪನಗಳು

ಹಾಸಿದ ವಸ್ತ್ರಗಳ ಬಳಸುವಿಕೆಯಿಂದ ಅಳಿಸಿಹೋಗಿದ್ದುವು. ಕಾಂತಾಲಿಂಗನಸಂಬಂಧದಿಂದ ಅಳಿಸಿಹೋಗಬೇಕಾದ ಸುಗಂಧದ್ರವ್ಯಗಳು (ಗಂಧಲೇಪನಗಳು) ಮದುವೆಯಾಗದೆ, ಸಂಸಾರಿಯಾಗದೆ (ಗೃಹಸ್ಥನಾಗದೆ) ಒಂಟಿಬಾಳು ನಡೆಸುತ್ತಲಿದ್ದುದರಿಂದ (ಒಂಟಿಸಲಗ) ಹಾಸಿಗೆಯು ಹಾಸುಬಟ್ಟೆಗಳಿಂದಲೇ ಅವು ಅಳಿಸಿಹೋಗಿದ್ದುವು. ಯುವರಾಜನ ಸಮಾನ ವಯಸ್ಕರಾದ ಮಾಗಧರು ತಮ್ಮ ಪ್ರೌಢವಾಕ್ಸರಣಿಯಿಂದ ಸ್ತುತಿಸುತ್ತ ಅವನನ್ನು ಕ್ಲಪ್ತಕಾಲಕ್ಕೆ, ಉಷಃಕಾಲದಲ್ಲಿ (ಪ್ರಾತಃಕಾಲದಲ್ಲಿ, ಬ್ರಾಹ್ಮೀಮುಹೂರ್ತದಲ್ಲಿ) ಪೂರ್ಣವಾಗಿ ಎಚ್ಚರಗೊಳಿಸಿದರು. ಆ ಮಂಗಳಗಾನವನ್ನು ಕೇಳುತ್ತಾ ಆ ಪುರುಷವ್ಯಾಘ್ರನು ತನ್ನ ಶಯನವನ್ನು ಬಿಟ್ಟು ಎದ್ದನು.

ಅನ್ವಯ :—ತು ಕರ್ಣಭೂಷಣನಿಪೀಡಿತಪೀವರಾಂಸಂ ಶಯ್ಯೋತ್ತರಚ್ಛದವಿಮರ್ದಕೃಶಾಂಗರಾಗಮ್ ಪ್ರಥಿತಪ್ರಬೋಧಂ ಸವಯಸ ಉದಾರವಾಚಃ ಸೂತಾತ್ಮಜಾಃ ಉಷಸಿ ವಾಗ್ಭಿಃ ಪ್ರಬೋಧಯನ್ ॥

ಕರ್ಣಯೋಃ ಭೂಷಣೇ ॥ ಕರ್ಣಭೂಷಣಾಭ್ಯಾಂ ನಿಪೀಡಿತೌ ಪೀವರಾಂಸೌ ಯಸ್ಯ ಸಃ । ಕರ್ಣಭೂಷಣನಿಪೀಡಿತಪೀವರಾಂಸಃ । ತಂ ॥ ಪೀವರೌ ಚ ತೌ ಅಂಸೌ ಚ-ಪೀವರಾಂಸೌ ॥ ಶಯ್ಯಾಯಾಃ ಉತ್ತರಚ್ಛದಃ । ಶಯ್ಯೋತ್ತರಚ್ಛದಸ್ಯ ವಿಮರ್ದಃ, ಶಯ್ಯೋತ್ತರಚ್ಛದೇನ ಕೃಶಃ ಅಂಗರಾಗಃ ಯಸ್ಯ ಸಃ । ಶಯ್ಯೋತ್ತರಚ್ಛದವಿಮರ್ದಕೃಶಾಂಗರಾಗಃ । ತಂ ॥ ಸೂತಾನಾಂ ಆತ್ಮಜಾಃ ॥ ಸಮಾನಂ ವಯಃ ಯೇಷಾಂ ತೇ—ಸವಯಸಃ । ಪ್ರಥಿತಃ ಪ್ರಬೋಧಃ ಯಸ್ಯ ಸಃ—ಪ್ರಥಿತಪ್ರಬೋಧಃ । ಉದಾರಾಃ ವಾಚಃ ಯೇಷಾಂ ತೇ—ಉದಾರವಾಚಃ। ಪ್ರ—ಉಪಸರ್ಗ । ಅಬೋಧಯತ್—ಅಬೋಧಯತಾಂ—ಅಬೋಧಯನ್ । ಇತ್ಯಾದಿ । ಬುಧ ಅವಗಮನೇ—ಲಙ್—ಪ್ರ.ಪು.ಬ. ॥

ಕರ್ಣಭೂಷಣನಿಪೀಡಿತಪೀವರಾಂಸಂ = ಕಿವಿಯ ಆಭರಣಗಳಿಂದ ಪೀಡಿಸಲ್ಪಟ್ಟ ಉನ್ನತವಾದ, ಸ್ಥೂಲವಾದ ಭುಜಗಳುಳ್ಳ, ಶಯ್ಯೋತ್ತರಚ್ಛದವಿಮರ್ದಕೃಶಾಂಗರಾಗಂ = ಹಾಸಿದ ವಸ್ತ್ರದ ತಿಕ್ಕುವಿಕೆಯಿಂದ, ಸಂಪರ್ಕದಿಂದ ಮಾಸಿದ ಪಟವಾಸವುಳ್ಳ, ಪ್ರಥಿತಪ್ರಬೋಧಂ = ಸಂಪೂರ್ಣ ಎಚ್ಚರಗೊಂಡ, ತಂ = ಆ ಅಜನನ್ನು, ಸವಯಸಃ = ಸಮಾನ ವಯಸ್ಕರಾದ, ಉದಾರವಾಚಃ = ಪ್ರಗಲ್ಭವಾದ ಮಾತುಳ್ಳ, ಸೂತಾತ್ಮಜಾಃ = ಸ್ತುತಿಪಾಠಕರ ಮಕ್ಕಳು, ವಾಗ್ಭಿಃ = ಸ್ತುತಿಪಾಠಗಳಿಂದ, ಸ್ತೋತ್ರಗಳಿಂದ (ವಾಗ್ಬಲದಿಂ), ಉಷಸಿ = ಪ್ರಾತಃಕಾಲದಲ್ಲಿ, ಪ್ರಾಬೋಧಯನ್ = ಎಚ್ಚರಿಸಿದರು.

66. ರಾತ್ರಿರ್ಗತಾ ಮತಿಮತಾಂ ವರ ! ಮುಂಚ ಶಯ್ಯಾಂ ।
ಧಾತ್ರಾ ದ್ವಿಧೈವ ನನು ಧೂರ್ಜಗತೋ ವಿಭಕ್ತಾ ॥
ತಾಮೇಕಸ್ತವ ಬಿಭರ್ತಿ ಗುರುರ್ವಿನಿದ್ರಃ ।
ತಸ್ಯಾ ಭವಾನಪರಧುರ್ಯಪದಾವಲಂಬೀ ॥ ೬೬ ॥

ಹೇ ಕುಶಾಗ್ರಬುದ್ಧಿಯ (ಬುದ್ಧಿಶಾಲಿಯಾದ) ವಿವೇಕಿ ಹಾಗೂ ಮತಿವಂತರಲ್ಲಿ ಮತಿವಂತನಾದ ಮಾನವಾಧೀಶ್ವರನೇ (ಮಾನವೇಂದ್ರನೇ), ರಾತ್ರಿಯು ಕಳೆದಿದೆ, ಹಾಸಿಗೆ ಬಿಟ್ಟೇಳು. ಸೃಷ್ಟಿಕರ್ತನಾದ ಪರಬ್ರಹ್ಮನು ಲೋಕದ ಭಾರವನ್ನು ತಂದೆಮಕ್ಕಳಾದ

ನಿಮ್ಮಿಬ್ಬರಲ್ಲಿ ಸಮಾನವಾಗಿ, ಸಮಪಾಲಾಗಿ ವಿಭಜಿಸಿರುವನು. ಆ ಭಾರದ ಹೊರೆಯಲ್ಲಿ ಒಂದು ಸ್ಥಾನವನ್ನು (ಒಂದು ತುದಿಯನ್ನು) ಪೂಜ್ಯನಾದ ದೇವಶಿಖಾಮಣಿಯಾದ ನಿನ್ನ ತಂದೆ ರಘುಸಾರ್ವಭೌಮನು ಸದಾ ಜಾಗ್ರತನಾಗಿ, ನಿದ್ರಾರಹಿತನಾಗಿ ಧರಿಸಿರುತ್ತಾನೆ. ಅಂತೆಯೇ ಇನ್ನೊಂದು ಸ್ಥಾನವನ್ನು (ಇನ್ನೊಂದು ಪದವಿ, ಇನ್ನೊಂದು ತುದಿ) ನೀನು ನಿದ್ರಾರಹಿತನಾಗಿ ಹೊತ್ತು ಮೆರೆಯಲು ಶಕ್ತನಾಗಿ, ನೀನು ಇಂದು ನಿನ್ನ ಶಯ್ಯೆಯನ್ನು ಬಿಟ್ಟೇಳು. ಎಲೈ ಭವ್ಯಭಾರತದ ಭಾವೀಸಾಮ್ರಾಟನೇ (ಭಾರತನೇ, ನವಭಾರತದ ಶಿಲ್ಪಿಯೇ, ದೃಷ್ಟಾರನೇ) ಈ ದೇಶದ ಭಾರವನ್ನು ಹೊರಲು (ನೊಗವನ್ನು ಹೊರಲು) ಉತ್ತಿಷ್ಠನಾಗು, ಕರ್ತವ್ಯದ ಕರೆಗೆ ಓಗೊಡು, ಎದ್ದೇಳು. ದೃಢಚಿತ್ತದಿಂದ ಸನ್ನದ್ಧನಾಗು (ಸಾವಧಾನ, ಪ್ರಭುಚಿತ್ತ. ಸಾವಧಾನ್). ಭಾರತಮಾತೆಯ ಸೇವೆಗೆ ಭಾರತೀಯರ ಉದ್ಧಾರಕ್ಕೆ ಪಣತೊಡು. ಜಾಗೃತನಾಗು, ಎದ್ದೇಳು. ಉತ್ತಿಷ್ಠನಾಗಿ ದೇಶಸೇವೆ (ರಾಷ್ಟ್ರಸೇವೆ. ದೇಶೋದ್ಧಾರ) ಮಾಡು (ದೇಶಭಕ್ತ).

ಮತಿಃ ಏಷಾಂ ಅಸ್ತಿ ಇತಿ ಮತಿಮಂತಃ । ತೇಷಾಮ್ ॥ ವಿಗತಾ ನಿದ್ರಾ ಯಸ್ಮಾತ್ ಸಃ—ವಿನಿದ್ರಃ । ಧುರಂ ವಹತಿ ಇತಿ ಧುರ್ಯಂ । ಧುರ್ಯಸ್ಯ ಪದಂ ಧುರ್ಯಪದಂ । ಅಪರಂ ಚ ತತ್ ಧುರ್ಯಪದಂ ಚ । ಅಪರಧುರ್ಯಪದಂ ಅವಲಂಬತ ಇತಿ ಅಪರ ಧುರ್ಯಪದಾವಲಂಬೀ ॥ ಮುಂಚತು, ಮುಂಚತಾತ್—ಮುಂಚತಾಂ—ಮುಂಚಂತು । ಮುಂಚ, ಮುಂಚತಾತ್—ಮುಂಚತಂ—ಮುಂಚತ । ಮುಂಚಾನಿ—ಮುಂಚಾವ—ಮುಂಚಾಮ । ಮುಚಲೃ—ಮೋಕ್ಷಣೇ—ಲೋಟ್—ಮ.ಪು.ಏ. ॥ ಬಿಭರ್ತಿ—ಬಿಭೃತಃ—ಬಿಭ್ರತಿ । ಬಿಭರ್ಷಿ—ಬಿಭೃಥಃ—ಬಿಭೃಥ । ಬಿಭರ್ಮಿ—ಬಿಭೃವಃ—ಬಿಭೃಮಃ । ಡುಭೃಞ್—ಭರಣೇ—ಲಟ್—ಪ್ರ.ಪು.ಏ. ॥

ಹೇ ಮತಿಮತಾಂ ವರ = ಬುದ್ಧಿವಂತರಲ್ಲಿ ಶ್ರೇಷ್ಠನೇ, ರಾತ್ರಿಃ = ರಾತ್ರಿಯು, ಗತಾ = ಕಳೆಯಿತು, ಶಯ್ಯಾಂ = ಹಾಸಿಗೆಯನ್ನು, ಮುಂಚ = ಬಿಡು ಧಾತ್ರಾ = ಬ್ರಹ್ಮನಿಂದ, ಜಗತಃ = ಲೋಕದ, ಧೂಃ = ಭಾರವು, ದ್ವಿಧೈವ = ಇಬ್ಬರಲ್ಲಿ, ವಿಭಕ್ತಾ ನನು = ವಿಭಾಗಿಸಲ್ಪಟ್ಟಿದೆಯಷ್ಟೆ, ತಾಂ = ಆ ಭಾರವನ್ನು, ಏಕತಃ = ಒಂದು ಕಡೆಯಿಂದ, ತವ = ನಿನ್ನ, ಗುರುಃ = ತಂದೆಯು, ವಿನಿದ್ರಃ = ನಿದ್ರೆಯಿಲ್ಲದವನಾಗಿ, ಬಿಭರ್ತಿ = ಧರಿಸು, ಭವಾನ್ = ನೀನು, ತಸ್ಯಾಃ = ಆ ಭಾರದ, ಅಪರಧುರ್ಯಪದಾವಲಂಬೀ = ಇನ್ನೊಂದು ಭಾರವನ್ನು ನೀನು ಹೊರಲು ತಯಾರಾಗಿರಬೇಕಷ್ಟೆ?

67. ನಿದ್ರಾವಶೇನ ಭವತಾಪ್ಯನವೇಕ್ಷ್ಯಮಾಣಾ ।
ಪರ್ಯುತ್ಸುಕತ್ವಮಬಲಾ ನಿಶಿ ಖಂಡಿತೇವ ॥
ಲಕ್ಷ್ಮೀರ್ವಿನೋದಯತಿ ಯೇನ ದಿಗಂತಲಂಬೀ ।
ಸೋಽಪಿ ತ್ವದಾನನರುಚಿಂ ವಿಜಹಾತಿ ಚಂದ್ರಃ ॥ ೬೭ ॥

ಎಲೈ ಮಹಾರಾಜನೇ, ನಿನ್ನ ಮುಖಕಮಲದಲ್ಲಿ ಚಂದ್ರನೂ, ಕಾಂತಿಮತಿಯಾದ ಲಕ್ಷ್ಮೀದೇವಿಯೂ ವಾಸಿಸುತ್ತಾ ಪ್ರಸಿದ್ಧಿಪಡೆದಿರುವರು. ನೀನು ರಾತ್ರಿಕಾಲದಲ್ಲಿ ನಿದ್ರಾದೇವಿಯಿಂದ ಅಪಹೃತನಾಗಿ, ನಿದ್ರಾಪರವಶನಾಗಿ ಇರುಳನ್ನು ಕಳೆದ. ಇದರಿಂದ

ಸವತಿಮಾತ್ಸರಪೀಡಿತಳಾದ ಅರವಿಂದರಾಜವದನೆಯಾದ, ಖಂಡಿತನಾಯಕಿಯಾದ ಲಕ್ಷ್ಮೀದೇವಿಯು ವಿರಹವೇದನೆಯಲ್ಲೇ ರಾತ್ರಿಯನ್ನು ಕಳೆಯಬೇಕಾಯಿತು. ನೀನು ಆಕೆಯನ್ನು ನೋಡದೆ, ಮಾತಾಡದೆ ಪೆರತೋರ್ವ ಸಾಧ್ವಿಯಲ್ಲಿ ತನುಮನಗಳೆರಡನ್ನೂ ಅವೇಗೆ ಸಲ್ಲಿಸಿರುವುದರಿಂದ ಶೃಂಗರಿಸಿ ಸಿದ್ಧಳಾದ ಆ ಶ್ರೀದೇವಿಯು ಕೋಪಗೊಂಡು ನಿನ್ನಂತಹ ಮುಖಚಂದ್ರವನ್ನು ಹೊಂದಿರುವ ಆಕಾಶಮಾರ್ಗದಲ್ಲಿ ನೆಲಸಿರುವ ಬೆಳದಿಂಗಳ ಅರಸನಾದ (ಯಾಮಿನೀಪತಿ) ಚಂದ್ರಮನನ್ನು ವಿನೋದದಿಂದ ನೋಡುತ್ತಾ, ಸರಸಸಲ್ಲಾಪಗಳನ್ನಾಡುತ್ತಾ, ವಿನೋದಚಿತ್ತಳಾಗಿ ಚಿತ್ತಶಾಂತಿಯನ್ನು ಹೊಂದುತ್ತಿದ್ದಳು. ಕಾಲಯಾಪನೆ ಮಾಡುತ್ತಿದ್ದಳು, ಆದರೆ ಇದೀಗ ಉಷಃಕಾಲ ಸನ್ನಿಹಿತವಾಗಿದೆ. ಚಂದ್ರಮನ ಕಾಂತಿ ಕಳೆಗುಂದುತ್ತಾ ಬಂದಿದೆ. ಅವನು ಪಶ್ಚಿಮದಿಕ್ಕಿನಲ್ಲಿ ದಿಗಂತದತ್ತ ಅಸ್ತಂಗತನಾಗಲು ಸರಿಯುತ್ತಲಿದ್ದಾನೆ. ಅವನ ಮೊಗದ ಸಿರಿ (ಮೊಗದ ಐಸಿರಿ) ಕಳೆಗುಂದುತ್ತಾ ಬರುತ್ತಲಿದೆ. ನೀನು ನಿದ್ರಾಂಗನೆಯನ್ನು ತೊರೆದು ನಿನ್ನ ದರ್ಶನಾಕಾಂಕ್ಷಿತಳಾದ, ನಿನಗೆ ಶರಣ್ಯಳಾದ, ವಿರಹಿಣಿಯಾದ ಲಕ್ಷ್ಮೀದೇವಿಯನ್ನು ತುಂಬುಮನಸ್ಸಿನಿಂದ ಸ್ವಾಗತಿಸಿ ಪರಿಗ್ರಹಿಸು. ತ್ವರೆಮಾಡು (ಗಳಿಗೆ ತಪ್ಪಿದರೆ ಗೀಳಿಗೆ ನಷ್ಟ ಎಂಬಂತೆ).

ಅನ್ವಯ :—ಭವತಾ ಹಿ ನಿದ್ರಾವಶೇನ ಅನವೇಕ್ಷ್ಯಮಾಣಾ ನಿಶಿ ಖಂಡಿತಾ ಅಬಲೇವ ಯೇನ ಲಕ್ಷ್ಮೀಃ ಪರ್ಯುತ್ಸುಕತ್ವಂ ವಿನೋದಯತಿ ದಿಗಂತಲಂಬೀ ಸೋಽಪಿ ಚಂದ್ರಃ ತ್ವದಾನನರುಚಿಂ ವಿಜಹಾತಿ ॥

ನಿದ್ರಾಯಾಃ ವಶಃ । ತೇನ । ದಿಗಂತೇ ಲಂಬತೇ ಇತಿ ದಿಗಂತಲಂಬೀ ॥ ತವ ಆನನಂ । ತ್ವದಾನನಂ । ತ್ವದಾನನಸ್ಯ ರುಚಿಃ । ತಾಂ ॥ ವಿ—ಉಪಸರ್ಗ । ಣುದ—ಪ್ರೇರಣೇ—ಣಿಜಂತ—ಲಟ್—ಪ್ರ.ಪು.ಏ. । ವಿ—ಉಪಸರ್ಗ ॥ ಜಹಾತಿ, ಜಹಿತಃ—ಜಹೀತಃ—ಜಹತಿ । ಜಹಾಸಿ—ಜಹಿತಃ, ಜಹೀಥಃ—ಜಹಿಥ, ಜಹೀಥ । ಜಹಾಮಿ—ಜಹಿವಃ, ಜಹೀವಃ—ಜಹಿಮಃ, ಜಹೀಮಃ । ಓಹಾಕ್—ತ್ಯಾಗೇ—ಲಟ್—ಪ್ರ.ಪು.ಏ. ॥

ನಿದ್ರಾವಶೇನ = ನಿದ್ರಾಧೀನನಾದ, ಭವತಾ = ನಿನ್ನಿಂದ, ಪರ್ಯುತ್ಸುಕತ್ವಂ ಅಪಿ = ಅತ್ಯಂತಾನುರಾಗಭಾವವನ್ನು, ನಿಶಿ = ರಾತ್ರಿಯಲ್ಲಿ, ಖಂಡಿತಾ = ಪತಿಯ ಅನ್ಯಸ್ತ್ರೀ ಆಸಕ್ತಿಯಿಂದ ವೈಮನಸ್ಯಹೊಂದಿದ, ಅಬಲಾ ಇವ = ನಾಯಿಕೆಯಂತೆ, ಅನವೇಕ್ಷ್ಯಮಾಣಾ = ಆದರಿಸದಿರುವ, ಅನವೇಕ್ಷ್ಯಮಾಣಾ = ನೋಡಲ್ಪಡದಿರುವ, ಲಕ್ಷ್ಮೀಃ = ಲಕ್ಷ್ಮಿಯು, ಪರ್ಯುತ್ಸುಕತ್ವಂ = ವಿರಹವೇದನೆಯನ್ನು, ಯೇನ = ಯಾವ ಚಂದ್ರನಿಂದ, ವಿನೋದಯತಿ = ಹೋಗಲಾಡಿಸಿಕೊಳ್ಳುತ್ತಿದ್ದಳೋ, ಸಃ ಚಂದ್ರಃ ಅಪಿ = ಆ ಚಂದ್ರನೂ ಕೂಡ, ದಿಗಂತಲಂಬೀ = ಪಶ್ಚಿಮದಿಕ್ಕನ್ನು ಆಶ್ರಯಿಸಿದವನಾಗಿ, ತ್ವದಾನನರುಚಿಂ = ನಿನ್ನ ಮುಖದ ಕಾಂತಿಯನ್ನು, ವಿಜಹಾತಿ = ಬಿಡುತ್ತಾನೆ, ಲಕ್ಷ್ಮೀಃ = ಲಕ್ಷ್ಮಿಯು, ಯೇನ = ಯಾವ ಚಂದ್ರನೊಡನೆ, ವಿನೋದಯತಿ = ವಿನೋದವಾಡುತ್ತಿದ್ದಳೋ.

**68.** **ತದ್ವಲ್ಗುನಾ ಯುಗಪದುನ್ಮಿಷಿತೇನ ತಾವತ್ ।**
**ಸದ್ಯಃ ಪರಸ್ಪರ ತುಲಾಮಧಿರೋಹತಾಂ ದ್ವೇ ॥**
**ಪ್ರಸ್ಪಂದಮಾನಪರುಷೇತರತಾರಮಂತ ।**
**ಶ್ಚಕ್ಷುಸ್ತವ ಪ್ರಚಲಿತ ಭ್ರಮರಂ ಚ ಪದ್ಮಮ್** ॥ ೬೮ ॥

ಎಲೈ ಸ್ವಾಮಿಯೆ (ಎಲೈ ಲೋಕೋದ್ಧಾರಕನೆ). ನಿನ್ನ ಎರಡು ಕಣ್ಣುಗಳು ಎರಡು ತಾವರೆಮೊಗ್ಗುಗಳಿಗೆ ಸಮವಾಗಿವೆ. ನಿನ್ನ ಕಣ್ಣುಗಳು ನಕ್ಷತ್ರಕಾಂತಿಯನ್ನು ಪಡೆದಿವೆ, ರಾತ್ರಿಕಾಲದಲ್ಲಿ ತಾವರೆಯ ಹೂವಿನಲ್ಲಿ ಬಂದಿಯಾಗಿರುವ ತುಂಬಿಯು ಇದೀಗ ತಾವರೆಯು ಅರಳಲು ಮೆಲ್ಲನೆ ಚಲಿಸಲು ಪ್ರಾರಂಭಿಸುವುದು. ಅಂತೆಯೇ ನೀನೀಗ ಕಣ್ಣು ತೆರೆದು ನೋಡಲು ಪ್ರಾರಂಭಿಸಿದಾಗ ಕಪ್ಪಾದ ಕಣ್ಣಿನ ಕಣ್ಮಣಿಗಳು (ಕಣ್ಣುಬೊಂಬೆ, ಕನೀನಿಕೆ, ಕಣ್ಣುಗುಡ್ಡೆ) ಚಲಿಸುತ್ತ ತಾವರೆಯಲ್ಲಿ ಸೆರೆಸಿಕ್ಕ ಕಪ್ಪಾದ ಭ್ರಮರವು ಚಲಿಸುವಂತೆಯೇ ತೋರುತ್ತಿದೆ. ಅತ್ತ ಕಮಲದ ಹೂವು ಹಿಗ್ಗಿ ಅರಳಿ ಬೀಗುತ್ತಿದೆ, ತುಂಬಿಯು ಮೆತ್ತಗೆ ಚಲಿಸುತ್ತಾ ಹೊರಬರುತ್ತಿದೆ. ಇತ್ತ ಲೋಕವನ್ನಾಳುವ ಪ್ರಭುವಾದ ನೀನೂ ಕಣ್ಣು ತೆರೆದು ಲೋಕವನ್ನು ನೋಡುತ್ತಿರುವೆ. ತಾವರೆಹೂ ಲಕ್ಷ್ಮೀದೇವಿಯ (ಮಹಾಲಕ್ಷ್ಮಿಯ, ಐಶ್ವರ್ಯಲಕ್ಷ್ಮಿಯ, ಶ್ರೀಲಕ್ಷ್ಮಿಯ) ವಾಸಸ್ಥಾನ, ಆದ್ದರಿಂದ ನಿಮ್ಮಿಬ್ಬರಲ್ಲಿ ಅನ್ಯೋನ್ಯ ಸಾಮರಸ್ಯವು ಹೊಂದುವಂತಾಗಲಿ. ಸಂಪೂರ್ಣಸಾದೃಶ್ಯಲಾಭವನ್ನು ಪಡೆಯುವಂತಾಗಲಿ. ಹೀಗೆಂದು ಸ್ತುತಿಪಾಠಕರು, ವಂದಿಮಾಗಧರು, ವೈತಾಲಿಕರು (ಹೊಗಳುಭಟ್ಟರು) ಸ್ತೋತ್ರಗೈದರು.

ತೇನ ವಲ್ಗು । ತದ್ವಲ್ಗು । ತೇನ ॥ ಪುರುಷಾತ್ ಇತರಾ । ಪರುಷೇತರಾ ಚ ಸಾ ತಾರಾ ಚ । ಪರುಷೇತರಾ । ಪ್ರಸ್ಪಂದಮಾನಾ ಪರುಷೇತರಾ ಯಸ್ಯ ತತ್ । ಪ್ರಸ್ಪಂದಮಾನಪರುಷೇತರತಾರಂ ॥ ಪ್ರಚಲಿತಃ ಭ್ರಮರಃ ಯಸ್ಮಿನ್ ತತ್ । ಪ್ರಚಲಿತಭ್ರಮರಂ ॥ ಅಧಿ—ಉಪಸರ್ಗ । ರೋಹತಾಂ—ರೋಹೇತಾಂ—ರೋಹಂತಾಮ್ । ರೋಹಸ್ವ—ರೋಹೇತಾಂ—ರೋಹಧ್ವಮ್ । ರೋಹೈ—ರೋಹಾವಹೈ—ರೋಹಾಮಹೈ॥ ರುಹ—ಬೀಜಜನ್ಮನಿ ಪ್ರಾದುರ್ಭಾವೇ ಚ—ಲೋಟ್—ಪ್ರ.ಪು.ಏ. ॥

ತದ್ವಲ್ಗುನಾ=ಲಕ್ಷ್ಮಿಯ ಸ್ವೀಕಾರದಿಂದ ಮನೋಹರವಾದ, ಯುಗಪದುನ್ಮಿಷಿತೇನ = ಏಕಕಾಲದಲ್ಲಿ ಅರಳುವುದರಿಂದ, ಸದ್ಯಃ = ತತ್‌ಕ್ಷಣದಲ್ಲಿ, ಅಂತಃ = ಮಧ್ಯಭಾಗದಲ್ಲಿ, ಪ್ರಸ್ಪಂದಮಾನಪರುಷೇತರತಾರಂ = ಚಲಿಸುವ ನುಣುಪಾದ ಕಣ್ಣುಗುಡ್ಡೆಯುಳ್ಳ, ತವ = ನಿನ್ನ, ಚಕ್ಷುಃ = ಕಣ್ಣು, ಅಂತಃ = ಮಧ್ಯದಲ್ಲಿ, ಪ್ರಚಲಿತಭ್ರಮರಂ = ಚಲಿಸುವ ದುಂಬಿ ಇರುವ, ಪದ್ಮಂ ಚ = ಕಮಲವೂ, ದ್ವೇ = ಹೀಗೆ ಇವೆರಡೂ, ಪರಸ್ಪರ ತುಲಾಂ = ಅನ್ಯೋನ್ಯಸಾದೃಶ್ಯವನ್ನು, ಅಧಿರೋಹತಾಂ = ಹೊಂದಲಿ.

**69. ವೃಂತಾತ್ ಶ್ಲಥಂ ಹರತಿ ಪುಷ್ಪಮನೋಕಹಾನಾಂ ।**
**ಸಂಸೃಜ್ಯತೇ ಸರಸಿಜೈರರುಣಾಂಶುಭಿನ್ನೈಃ ॥**
**ಸ್ವಾಭಾವಿಕಂ ಪರಗುಣೇನ ವಿಭಾತವಾಯುಃ ।**
**ಸೌರಭ್ಯಮೀಪ್ಸುರಿವ ತೇ ಮುಖಮಾರುತಸ್ಯ ॥ ೬೯ ॥**

ಪ್ರಭಾತಕಾಲದಲ್ಲಿ (ಉಷಃಕಾಲದಲ್ಲಿ, ಪ್ರಾರಂಭದಲ್ಲಿ, ಪ್ರಾತಃಕಾಲದಲ್ಲಿ) ವಾಯುವು ಸ್ವಾಭಾವಿಕವಾಗಿ ಪರಿಮಳರಹಿತವಾಗಿ ಬೀಸುತ್ತಿದೆ. ಆದರೆ ನಸುಕಿನಲ್ಲಿ ಬೀಸುತ್ತಿರುವ ಮಂದಮಾರುತವು ಇದೀಗ ಸರ್ವ ಪುರುಷಲಕ್ಷಣಗಳಿಂದ ಮೆರೆಯುತ್ತಿರುವ ನಿನ್ನ ಶ್ವಾಸೋಚ್ಛ್ವಾಸದ ಕಂಪಾದ ಎಲರಿನಿಂದ ಲಾಭಪಡೆದು ಬೀಸುತ್ತಿರುವನು. ನಸುಕಿನಲ್ಲಿ

ಸೂಸುತ್ತಿರುವ ನಿನ್ನ ಮುಖಮಾರುತದ ಕಂಪನ್ನು ಹೀರಿ ಪರಿಮಳವನ್ನು ಸಂಪಾದಿಸಿ ಬೀಸುತ್ತಿದೆ, ಆ ಮಾರುತನು ಇತರರ ಸಹಾಯದಿಂದ ಸೌರಭವನ್ನು ಹೆಚ್ಚಿಸಿಕೊಂಡು ಬೀಸುತ್ತಿರುವನು. ಎಲ್ಲರ ಸಹಾಯಪಡೆದು ಲೋಕೋಪಕಾರ ಮಾಡುತ್ತಿರುವನು. ಸಹಸ್ರಾರು ವೃಕ್ಷಗಳ ಮೂಲಕ ಹಾದುಹೋಗುತ್ತಾ ತೊಟ್ಟಿನಿಂದ ಕಳಚಿಬೀಳುತ್ತಿರುವ ಪುಷ್ಪಗಳಿಂದಲೂ ಪರಿಮಳವನ್ನು ಎರವಲಾಗಿ ಪಡೆದು ಸೌರಭಪೂರ್ಣನಾಗಿ ಹಿತಕರವಾಗಿ ಬೀಸುತ್ತಿರುವನು. ಹಾಗೆಯೇ ಸೂರ್ಯನ ಕೆಂಪಾದ ಕಿರಣಗಳ ಶಾಖದಿಂದ ತಾವರೆ ಹೂಗಳು ಅರಳುತ್ತಿವೆ. ಅವುಗಳನ್ನು ಸಂಪರ್ಕಿಸಿ, ಅವುಗಳ ಸಮ್ಮಿಲನದಿಂದ ಪರಿಮಳ ವನ್ನು ಸಂಪಾದಿಸುತ್ತ, ತಾವರೆಯ ನರುಗಂಪನ್ನು ಹೀರಿ ಕಂಪಾದ ತಂಪಾದ ಉಷಃಕಾಲದ ಎಲರು ರೊಯ್ಯನೆ ಬೀಸಿ ಜೀವರಾಶಿಗಳಿಗೆ, ಮೃಗಖಗತತಿಗಳಿಗೆ ಆಮೋದವೀಯುತ್ತಿದೆ (ನಗುತ್ತ ಬರುತ್ತಿದೆನಗಾಳಿ), ಎಲ್ಲರ ಸಹಾಯಪಡೆದು (ಸಹಕಾರತತ್ತ್ವ) ಬಲವರ್ಧನೆ ಮಾಡಿಕೊಂಡು ಸೌರಭವನ್ನು ಹೆಚ್ಚಿಸಿ (ಪೆರ್ಚಿಸಿ) ಎಲ್ಲರಿಗೂ ಸರ್ವಜೀವರಾಶಿಗೆ (ಕೋಟ್ಯನುಕೋಟಿ ಜೀವರಿಗೆ) ಹಿತವನ್ನುಂಟುಮಾಡುವನು.

ಅನ್ವಯ :—ವಿಭಾತವಾಯುಃ ಸ್ವಾಭಾವಿಕಂ ತೇ ಮುಖಮಾರುತಸ್ಯ ಸೌರಭ್ಯಂ ಪರಗುಣೇನ ಈಪ್ಸುಃ ಅನೋಕಹಾನಾಂ ವೃಂತಾತ್ ಶ್ಲಥಂ ಪುಷ್ಪಂ ಹರತಿ ಅರುಣಾಂಶುಭಿನ್ನೈಃ ಸರಸಿಜೈಃ ಸಂಸೃಜ್ಯತೇ ॥

ಹರತಿ—ಹೃಞ್—ಹರಣೇ । ಲಟ್—ಪ್ರ.ಪು.ಏ. ॥ ಸಮ್—ಉಪಸರ್ಗ । ಸೃಜ—ವಿಸರ್ಗೇ—ಲಟ್—ಪ್ರ.ಪು.ಏ. ॥ ಸೃಜ್ಯತೇ—ಸೃಜ್ಯೇತೇ—ಸೃಜ್ಯಂತೇ ಇತ್ಯಾದಿ ॥ ಸರಸಿ ಜಾತಾನಿ—ಸರಸಿಜಾನಿ । ತೈಃ ॥ ಅರುಣಸ್ಯ ಅಂಶವಃ । ಅರುಣಾಂಶುಭಿಃ ಭಿನ್ನಾನಿ । ಅರುಣಾಂಶುಭಿನ್ನಾನಿ । ತೈಃ ॥ ಪರೇಷಾಂ ಗುಣಃ । ತೇನ ॥ ವಿಭಾತಸ್ಯ ವಾಯುಃ ॥ ಆಪ್ತುಂ ಇಚ್ಛುಃ ಈಪ್ಸುಃ । ಮುಖಸ್ಯ ಮಾರುತಃ । ತಸ್ಯ ॥

ವಿಭಾತವಾಯುಃ = ಪ್ರಾತಃಕಾಲದ ಗಾಳಿಯು, ಸ್ವಾಭಾವಿಕಂ = ಸಹಜವಾದ, ತೇ = ನಿನ್ನ, ಮುಖಮಾರುತಸ್ಯ = ನಿಃಶ್ವಾಸದ ಗಾಳಿಯು, ಸೌರಭ್ಯಂ = ಪರಿಮಳವನ್ನು, ಪರಗುಣೇನ = ಇನ್ನೊಬ್ಬರ ಗುಣದಿಂದ, ಈಪ್ಸುಃ ಇವ = ಹೊಂದಲು ಬಯಸುವುದೋ ಎಂಬಂತೆ, ಅನೋಕಹಾನಾಂ = ಮರಗಳ, ಶ್ಲಥಂ = ಶಿಥಿಲವಾದ, ಪುಷ್ಪಂ = ಹೂವನ್ನು, ವೃಂತಾತ್ = ತೊಟ್ಟಿನಿಂದ, ಹರತಿ = ಅಪಹರಿಸು, ಅರುಣಾಂಶುಭಿನ್ನೈಃ = ಸೂರ್ಯ ಕಿರಣಗಳಿಂದ ಅರಳಿದ, ಸರಸಿಜೈಃ = ಕಮಲಗಳೊಡನೆ, ಸಂಸೃಜ್ಯತೇ = ಸಂಬಂಧ ಹೊಂದು.

**70. ತಾಮ್ರೋದರೇಷು ಪತಿತಂ ತರುಪಲ್ಲವೇಷು ।**
**ನಿರ್ಧೌತಹಾರಗುಲಿಕಾ ವಿಶದಂ ಹಿಮಾಂಭಃ ॥**
**ಆಭಾತಿ ಲಬ್ಧಪರಭಾಗತಯಾಧರೋಷ್ಠೇ ।**
**ಲೀಲಾಸ್ಮಿತಂ ಸದಶನಾರ್ಚಿರಿವ ತ್ವದೀಯಮ್** ॥ ೭೦ ॥

ಚೆಂದದಿಂದ ಹರಡಿ ಹೊಳೆಯುತ್ತಿರುವ ಮರಗಿಡಗಳ ಕೆಂಪಾದ ಚಿಗುರುಗಳ ಮೇಲೆ ಶುಭ್ರವಾದ ಮಂಜಿನ ಹನಿಗಳು ಬಿದ್ದಿವೆ. ನಳನಳಿಸುವ ಪಲ್ಲವಗಳ ಮೇಲೆ, ಹೂವಳಗಳ

ಮೇಲೆ ಬಿದ್ದಿರುವ ಮಂಜಿನ ಕಣಗಳು ಹೊಳೆವ, ಒಳಗೆ ಕೆಂಪಾಗಿ ತೋರುವ ಮುತ್ತಿನ ಮಣಿಯಂತೆ ಅತಿಶಯವಾದ ಗುಣೋತ್ಕರ್ಷವನ್ನು ಹೊಂದಿವೆ. ಎಲೈ ಅಜಕುಮಾರನೆ, ನಿನ್ನ ಚೆಲುವು ಸೂಸುವ, ಹೊಳೆಹೊಳೆಯುವ, ಕೆಂಪಾದ ಕೆಳತುಟಿಯು ಎಡೆಯಲ್ಲಿ ತೋರುವ ಧವಳಕಾಂತಿಯು, ಶುಭ್ರವಾದ ಹಲ್ಲುಗಳ ಕಾಂತಿಯು ಮುತ್ತಿನ ಸರದ ಮುತ್ತಿನ ಮಣಿಗಳ ಕಾಂತಿಯನ್ನೇ ಹೋಲುತ್ತಿದೆ. ಆ ದಂತಕಾಂತಿಯಿಂದ ಕೂಡಿ ಮೆರೆಯುವ ಚೆಲುವಿನ ಮುಗುಳುನಗೆಯ ವಿಲಾಸದ ಮಂದಹಾಸದಂತೆ ಶೋಭಿಸುತ್ತಿದೆ.

ತಾಮ್ರಂ ಉದರಂ ಯೇಷಾಂ ತೇ । ತಾಮ್ರೋದರಾಃ । ತೇಷು ॥ ತರೂಣಾಂ ಪಲ್ಲವಾಃ । ತೇಷು ॥ ನಿರ್ಧೌತಾಶ್ಚ ತಾಃ ಹಾರಗುಲಿಕಾಶ್ಚ । ನಿರ್ಧೌತಹಾರಗುಲಿಕಾ ಇವ ವಿಶದಂ । ನಿರ್ಧೌತಹಾರಗುಲಿಕಾವಿಶದಂ । ಹಿಮಸ್ಯ ಅಂಭಃ । ಆಙ್—ಉಪಸರ್ಗ । ಭಾತಿ—ಭಾ ದೀಪ್ತೌ—ಲಟ್—ಪ್ರ.ಪು.ಏ. ॥ ಲಬ್ಧಶ್ಚಾಸೌ ಪರಭಾಗಶ್ಚ । ಲಬ್ಧ ಪರಭಾಗಸ್ಯ ಭಾವಃ । ಲಬ್ಧಪರಭಾಗತಾ ತಯಾ ॥ ದಶನಾನಾಂ ಅರ್ಚಿಃ । ದಶನಾರ್ಚಿಷಾ ಸಹಿತಂ । ಸದಶನಾರ್ಚಿಃ । ತವ (ಇದಂ) ಸಂಬಂಧಿ । ತ್ವದೀಯಂ ॥

ತಾಮ್ರೋದರೇಷು=ಕೆಂಪಾದ ಮಧ್ಯಭಾಗವುಳ್ಳ, ತರುಪಲ್ಲವೇಷು=ಮರಗಳ ಚಿಗುರು ಗಳಲ್ಲಿ, ಪತಿತಂ=ಬಿದ್ದಿರುವ, ನಿರ್ಧೌತಹಾರಗುಲಿಕಾವಿಶದಂ=ಶುದ್ಧವಾದ ಮುತ್ತಿನ ಮಣಿಗಳಂತೆ, ಹಿಮಾಂಭಃ=ಮಂಜಿನ ಕಣಗಳು, ಲಬ್ಧಪರಭಾಗತಯಾ=ಹೊಂದಿದ ಉತ್ಕರ್ಷದ ಇರುವಿಕೆಯಿಂದ, ಅಧರೋಷ್ಠೇ=ಕೆಳತುಟಿಯಲ್ಲಿ, ತ್ವದೀಯಂ=ನಿನ್ನ, ಸದಶನಾರ್ಚಿಃ=ದಂತಕಾಂತಿಯಿಂದ ಕೂಡಿದ, ಲೀಲಾಸ್ಮಿತಂ ಇವ=ವಿಲಾಸದ ಮಂದ ಹಾಸದಂತೆ, ಆಭಾತಿ=ಶೋಭಿಸುತ್ತದೆ.

71. ಯಾವತ್ಪ್ರತಾಪನಿಧಿರಾಕ್ರಮತೇ ನ ಭಾನುಃ ।
ಅಹ್ನಾಯ ತಾವದರುಣೇನ ತಮೋ ನಿರಸ್ತಮ್ ॥
ಆಯೋಧನಾಗ್ರಸರತಾಂ ತ್ವಯಿ ವೀರಯಾತೇ ।
ಕಿಂ ವಾ ರಿಪೂಂಸ್ತವ ಗುರುಃ ಸ್ವಯಮುಚ್ಛಿನತ್ತಿ ॥ ೭೧ ॥

ತೇಜಸ್ಸಿಗೆ, ಚೇತನಕ್ಕೆ, ಪ್ರತಾಪಕ್ಕೆ ಆಶ್ರಯಸ್ಥಾನನಾದ ಸೂರ್ಯದೇವನು ಮೂಡಣ ದೆಸೆಯಲ್ಲಿ ಉದಯಿಸಿ ಮೇಲಕ್ಕೆ ಬರುವ ಮೊದಲೇ ಅವನ ಸಾರಥಿಯಾದ ವಿನತಾಪುತ್ರ ನಾದ ಅರುಣನು ಜಾಗ್ರತೆಯಾಗಿ ವೈರಿಯಾದ ಕತ್ತಲೆಯ ಮೊತ್ತವನ್ನು ಬೇಗಬೇಗನೇ ನಾಶಮಾಡುತ್ತಾನೆ. ಅಂತೆಯೇ ಹೇ ವೀರವರನೆ (ವೀರಾಗ್ರಣಿ), ನೀನು ರಣರಂಗದಲ್ಲಿ ಕಟ್ಟುಗ್ರನಾಗಿ ನುಗ್ಗಿ ನಿನ್ನ ವೈರಿಗಳನ್ನು ಕೊಚ್ಚಿ ವಿಜಯವನ್ನು ಸಾಧಿಸುವೆ. ಇದರಿಂದ ನಿನ್ನ ತಂದೆಯು ಶತ್ರುನಾಶದಲ್ಲ ಪ್ರವೃತ್ತನಾಗದೆ ಸುಮ್ಮನಿರುವನು. ಅವನು ಎದುರು ಬೀಳುವುದೇ ಇಲ್ಲ. ಯೋಗ್ಯರಾದ ಪುತ್ರರ ಮೇಲೆ ಭಾರ ಹೊರಿಸಿದಮೇಲೆ ತಂದೆಯು ನಿಶ್ಚಿಂತನಾಗಿರುವುದು ಯುಕ್ತವೇ ಆಗಿದೆ.

ಪ್ರತಾಪಸ್ಯ ನಿಧಿಃ । ಅಗ್ರೇ ಸರತೀತಿ ಅಗ್ರಸರಃ । ಆಯೋಧನೇ ಅಗ್ರಸರಃ । ಆಯೋಧನಾಗ್ರಸರಸ್ಯ ಭಾವಃ । ಆಯೋಧನಾಗ್ರಸರತಾ । ತಾಂ ॥ ಆಙ್—ಉಪಸರ್ಗ । ಕ್ರಮತಿ—ಪಾದವಿಕ್ಷೇಪೇ—ಲಟ್—ಪ್ರ.ಪು.ಏ. ॥ "ಆಙ ಉದ್ಗಮನೇ" ಸೂತ್ರದಿಂದ

ಆತ್ಮನೇಪದ ಬಂದಿದೆ. ಉತ್—ಉಪಸರ್ಗ । ಭಿನತ್ತಿ—ಭಿಂತಃ—ಭಿಂದಂತಿ । ಭಿನತ್ಸಿ—ಭಿಂಥಃ—ಭಿಂಥ । ಬಿನದ್ಮಿ—ಭಿಂದ್ವಃ—ಭಿಂದ್ಮಃ । ಭಿದಿರ್—ದ್ವೈಧೀಕರಣೇ—ಲಟ್—ಪ್ರ.ಪು.ಏ. ॥

ಪ್ರತಾಪನಿಧಿಃ = ತೇಜಸ್ವಿಯಾದ, ಭಾನುಃ = ಸೂರ್ಯನು, ಯಾವತ್ ನ ಆಕ್ರಮಂತೇ = ಎಲ್ಲಿಯವರೆಗೆ ಉದಯಿಸಿ ಮೇಲೆ ಬರುವುದಿಲ್ಲವೋ, ತಾವತ್ = ಅಷ್ಟರಲ್ಲಿಯೇ, ಅಹ್ನಾಯ=ಜಾಗ್ರತೆಯಾಗಿ, ಅರುಣೇನ=ಸೂರ್ಯಸಾರಥಿಯಾದ ಅರುಣನಿಂದ, ತಮಃ =ಕತ್ತಲೆಯು, ನಿರಸ್ತಂ=ಹೋಗಲಾಡಿಸಲ್ಪಟ್ಟಿತು. ಹೇ ವೀರ=ಎಲೈ ಪರಾಕ್ರಮಿಯೇ, ತ್ವಯಿ=ನೀನು, ಅಯೋಧನಾಗ್ರಸರತಾಂ=ಯುದ್ಧದಲ್ಲಿ ಮುಂದಾಳುತನವನ್ನು, ಯಾತೇ (ಸತಿ)=ಹೊಂದುತ್ತಿರಲು, ತವ=ನಿನ್ನ, ಗುರುಃ=ತಂದೆಯು, ರಿಪೂನ್=ಶತ್ರುಗಳನ್ನು, ಸ್ವಯಂ = ತಾನಾಗಿ, ಉಚ್ಛಿನತ್ತಿ ಕಿಂ ವಾ = ನಾಶ ಮಾಡುವನೇನು ?

72. ಶಯ್ಯಾಂ ಜಹತ್ಯುಭಯಪಕ್ಷವಿನೀತನಿದ್ರಾಃ ।
ಸ್ತಂಬೇರಮಾಮುಖರಶೃಂಖಲಕರ್ಷಿಣಸ್ತೇ ॥
ಯೇಷಾಂ ವಿಭಾಂತಿ ತರುಣಾರುಣರಾಗಯೋಗಾತ್ ।
ಭಿನ್ನಾದ್ರಿಗೈರಿಕತಟಾ ಇವ ದಂತಕೋಶಾಃ ॥ ೭೨ ॥

ಆನೆಗಳು ತಮ್ಮ ಎರಡು ಪಾರ್ಶ್ವಗಳಲ್ಲಿಯೂ ನಿದ್ರಿಸಿ ಎರಡು ಪಕ್ಕಗಳನ್ನು ಕೊಡಹುತ್ತ ಜಡನಿದ್ರೆಯನ್ನು ಬಡಿದೋಡಿಸಿ ಎಚ್ಚರಗೊಂಡಿವೆ. ಪ್ರಾತಃಕಾಲದ ಸಂಪ್ರಭಾತದ ವೇಳೆಗಾಗಲೇ ನಿನ್ನ ಸೇನೆಯು ಆನೆಗಳ ಕಾಲ ಸರಪಳಿಗಳ ದನಿ ಕೇಳಿಸುತ್ತಿದೆ. ಆ ಮದ್ದಾನೆಗಳ ಬಿಳಿಯ ಹೂವೊಗ್ಗಿನಂತಹ ದಂತಕೋಶಗಳು (ದಾಡೆಗಳು) ಬಾಲಸೂರ್ಯನ ಕೆಂಪಾದ ಕಿರಣಗಳಿಂದ ಸುಕೆಂಪಾಗಿ ತೋರುತ್ತ ಗಿರಿಯ ತಪ್ಪಲಿನಲ್ಲಿ ವಪ್ರಕ್ರೀಡೆಯನ್ನಾಡಿ ಗೈರಿಕಾದಿ ಧಾತುಗಳ ಸಂಪರ್ಕಹೊಂದಿದಂತೆ ಅಂದವಾಗಿ ತೋರುತ್ತಿವೆ. ಗಜಸೇನೆಯು ಸಹಸ್ರಾರು ಮದ್ದಾನೆಗಳು ಸಾಲುಸಾಲಾಗಿ ನಿಂದಿರಲು ಆ ದಂತಕೋಶಗಳು ದೊಡ್ಡ, ಬೃಹದಾಕಾರದ ಹೂವೊಗ್ಗಿನಂತೆ ಸುಂದರವಾಗಿ ಬಾಲಸೂರ್ಯನ ರಶ್ಮಿಯಲ್ಲಿ ರಾರಾಜಿಸುತ್ತ ಎಸೆದಿವೆ.

ಅನ್ವಯ :—ಉಭಯಪಕ್ಷವಿನೀತನಿದ್ರಾಃ ಮುಖರಶೃಂಖಲಕರ್ಷಿಣಃ ತೇ ಸ್ತಂಬೇರಮಾಃ ಶಯ್ಯಾಂ ಜಹತಿ ಯೇಷಾಂ ದಂತಕೋಶಾಃ ತರುಣಾರುಣರಾಗಯೋಗಾತ್ ಭಿನ್ನಾದ್ರಿಗೈರಿಕತಟಾಃ ಇವ ವಿಭಾಂತಿ ॥

ಜಹತಿ, ಜಹಾತಿ—ಜಹಿತಃ, ಜಹೀತಃ—ಜಹತಿ । ಜಹಾಸಿ—ಜಹಿಥಃ, ಜಹೀಥಃ—ಜಹಿಥ, ಜಹೀಥ । ಜಹಾಮಿ—ಜಹಿವಃ, ಜಹೀವಃ—ಜಹಿಮಃ,ಜಹೀಮಃ— ಉಭಾಭ್ಯಾಂ ಪಕ್ಷಾಭ್ಯಾಂ ವಿನೀತಾ ನಿದ್ರಾ ಯೇಷಾಂ ತೇ—ಉಭ—ದ್ರಾಃ ॥ ಮುಖರಾಣಿ ಚ ತಾನಿ ಶೃಂಖಲಾನಿ ಚ ॥ ಮುಖರಶೃಂಖಲಾನಿ । ಮುಖರಶೃಂಖಲಾನಿ ಕರ್ಷಂತಿ ಇತಿ ಮುಖರಶೃಂಖಲಕರ್ಷಿಣಃ ॥ ತರುಣಾಶ್ಚಾಸೌ ಅರುಣಶ್ಚ ತರುಣಾರುಣಸ್ಯ ರಾಗಃ । ತರುಣಾರುಣಯೋಗಸ್ಯ ಯೋಗಃ । ತಸ್ಮಾತ್ ಭಿನ್ನಶ್ಚಾಸೌ ಅದ್ರಿಶ್ಚ । ಗೈರಿಕಾನಾಂ ತಟಂ । ಭಿನ್ನಾದ್ರೇಃ ಗೈರಿಕತಟಂ ಯೇಷಾಂ ತೇ । ಭಿನ್ನಾದ್ರಿಗೈರಿಕತಟಾಃ ॥

ವಿ—ಉಪಸರ್ಗ । ಭಾತಿ—ಭಾತಃ—ಭಾಂತಿ । ಇತ್ಯಾದಿ । ಭಾ—ದೀಪ್ತೌ—ಲಟ್—ಪ್ರ.ಪು.ಏ. ॥

ಉಭಯಪಕ್ಷವಿನೀತನಿದ್ರಾಃ = ಎರಡು ಪಾರ್ಶ್ವಗಳಲ್ಲಿಯೂ ನಿದ್ರೆಮಾಡಿ ಎದ್ದಿರುವ, ಮುಖರಶೃಂಖಲಕರ್ಷಿಣಃ = ಶಬ್ದವಾಗುವ ಕಾಲಿನ ಸರಪಣಿಗಳನ್ನು ಎಳೆಯುತ್ತಿರುವ, ತೇ = ನಿನ್ನ, ಸ್ತಂಬೇರಮಾಃ = ಆನೆಗಳು, ಶಯ್ಯಾಂ = ಹಾಸಿಗೆಯನ್ನು, ಜಹತಿ = ಬಿಡುತ್ತವೆ, ಯೇಷಾಂ = ಯಾವ ಆನೆಗಳ, ದಂತಕೋಶಾಃ = ಕೋಶಗಳಂತಿರುವ ದಂತಗಳು (ದೊಡ್ಡ ಮೊಗ್ಗುಗಳಂತಿರುವ), ತರುಣಾರುಣರಾಗಯೋಗಾತ್ = ಬಾಲ ಸೂರ್ಯನ ಕೆಂಪಾದ ಕಿರಣಗಳ ಸಂಪರ್ಕದಿಂದ, ಭಿನ್ನಾದ್ರಿಗೈರಿಕತಟಾ ಇವ = ಈ ಭೇದಿಸಿದ ಪರ್ವತತಪ್ಪಲಿನ ಗೈರಿಕಾದಿ ಧಾತುಸಂಪರ್ಕವುಳ್ಳ, ವಿಭಾಂತಿ = ಶೋಭಿಸು.

73. ದೀರ್ಘೇಷ್ವಮೀ ನಿಯಮಿತಾಃ ಪಟಮಂಡಪೇಷು ।
ನಿದ್ರಾಂ ವಿಹಾಯ ವನಜಾಕ್ಷ ವನಾಯುದೇಶ್ಯಾಃ ॥
ವಕ್ತ್ರೋಷ್ಮಣಾ ಮಲಿನಯಂತಿ ಪುರೋಗತಾನಿ ।
ಲೇಹ್ಯಾನಿ ಸೈಂಧವಶಿಲಾಶಕಲಾನಿ ವಾಹಾಃ ॥ ೭೩ ॥

ಹೇ ವನಜಾಕ್ಷನೆ, ಸರಸಿಜಾಂಬಕನೇ (ನೀರಜಾಕ್ಷನೇ), ಕಮಲದ ಪಟಲದಂತೆ ವಿಶಾಲವಾದ ಕಣ್ಣುಗಳಿಂದ ಶೋಭಿಸುವ ಪುರುಷವ್ಯಾಘ್ರನೆ, ನೋಡು, ಡೇರೆಗಳಲ್ಲಿ (ಶಿಬಿರಗಳಲ್ಲಿ) ಕಟ್ಟಿರುವ ಯುದ್ಧಾಶ್ವಗಳು ಪ್ರಾತಃಕಾಲದ ಶುಭವೇಳೆಗೆ ಸರಿಯಾಗಿ ನಿದ್ರೆಯನ್ನು ಬಿಟ್ಟೆದ್ದು ತಮ್ಮ ಮುಂದೆ ಇಟ್ಟಿರುವ ಸೈಂಧವಲವಣದ ತುಂಡುಗಳನ್ನು ತಿನ್ನಲು ಬಾಯೊಡ್ಡಿರುವುವು. ಅವುಗಳ ಬಾಯಿ ಮತ್ತು ಮೂಗಿನಿಂದ ಬರುವ ಬಿಸಿಯಾದ ಗಾಳಿಯು ಹಬೆ ಹಾಗೂ ಶ್ಲೇಷ್ಮಾದಿಗಳಿಂದ ಆಸ್ವಾದಿಸಲು ಯೋಗ್ಯವಾದ ಸೈಂಧವಲವಣದ ಶಕಲಗಳನ್ನು ಮಲಿನಗೊಳಿಸುತ್ತಲಿವೆ. ನಿನ್ನ ದಿವ್ಯಾಶ್ವಗಳು ಪಾರಸೀಕದೇಶದಲ್ಲಿ (ಯವನದೇಶದಲ್ಲಿ, ಇರಾನ್, ಇರಾಕ್, ಅರೇಬಿಯಾ, ಸಿರಿಯಾ, ಅಸ್ಸೀರಿಯಾ, ತುರಾನ್, ಅಫಘಾನಿಸ್ತಾನ, ವನಾಯುಜ, ವನಾಯು ದೇಶಗಳು) ಬಲ, ವೀರ್ಯ, ವೇಗದಿಂದ ಪ್ರಖ್ಯಾತವಾದವುಗಳು.

ಅನ್ವಯ :—ಹೇ ವನಜಾಕ್ಷ ಅಮೀ ದೀರ್ಘೇಷುಪಟಮಂಡಪೇಷು ನಿಯಮಿತಾಃ ವನಾಯುದೇಶ್ಯಾಃ ವಾಹಾಃ ನಿದ್ರಾಂ ವಿಹಾಯವಕ್ತ್ರೋಷ್ಮಣಾ ಪುರೋಗತಾನಿ ಲೇಹ್ಯಾನಿ ಸೈಂಧವಶಿಲಾಶಕಲಾನಿ ಮಲಿನಯಂತಿ ॥

ಪಟಾನಾಂ ಮಂಡಪಾಃ । ತೇಷು ॥ ವನೇ ಜಾತೇ ವನಜೇ । ವನಜೇ ಇವ ಅಕ್ಷಿಣೀ ಯಸ್ಯ ಸಃ । ವನಜಾಕ್ಷಃ ॥ ವನಾಯುದೇಶೇ ಭವಾಃ ವನಾಯುದೇಶ್ಯಾಃ । ವಕ್ತ್ರಾಣಾಂ ಊಷ್ಮಾ । ವಕ್ತ್ರೋಷ್ಮಾ । ತೇನ ॥ ಸೈಂಧವಾನಾಂ ಶಿಲಾಃ । ಸೈಂಧವಶಿಲಾನಾಂ ಶಕಲಾನಿ । ಸೈಂಧವಶಿಲಾಶಕಲಾನಿ । ಮಲಿನಯಂತಿ—ನಾಮಧಾತು—ಮಲಿನಂ ಕುರ್ವಂತಿ ॥

ಹೇ ವನಜಾಕ್ಷ = ಕಮಲದಂತೆ ಸುಂದರವಾದ ಕಣ್ಣುಳ್ಳವನೇ, ದೀರ್ಘೇಷು = ಉದ್ದವಾಗಿರುವ, ಪಟಮಂಡಪೇಷು=ವಸ್ತ್ರದ ಗುಡಾರಗಳಲ್ಲಿ, ನಿಯಮಿತಾಃ=ಕಟ್ಟಲ್ಪಟ್ಟಿರುವ, ವನಾಯುದೇಶ್ಯಾಃ=ವನಾಯುದೇಶದಲ್ಲಿ ಹುಟ್ಟಿದ, ಅಮೀ ವಾಹಾಃ=ಈ ಕುದುರೆಗಳು,

ನಿದ್ರಾಂ=ನಿದ್ರೆಯನ್ನು, ವಿಹಾಯ=ಬಿಟ್ಟು, ಪುರೋಗತಾನಿ=ಮುಂದಿರುವ, ಲೇಹ್ಯಾನಿ = ಆಸ್ವಾದಿಸಲು ಯೋಗ್ಯವಾದ, ಸೈಂಧವಶಿಲಾಶಕಲಾನಿ = ಸೈಂಧವಲವಣದ ಚೂರು ಗಳನ್ನು, ವಕ್ತ್ರೋಷ್ಮಣಾ = ಮುಖದ ಬಿಸಿ ಉಸಿರಿನಿಂದ, ಮಲಿನಯಂತಿ = ಮಲಿನವಾಗು.

**74. ಭವತಿ ವಿರಲಭಕ್ತಿರ್ಮ್ಲಾನಪುಷ್ಪೋಪಹಾರಃ ।**
**ಸ್ವಕಿರಣಪರಿವೇಷೋದ್ಭೇದಶೂನ್ಯಾಃ ಪ್ರದೀಪಾಃ ॥**
**ಅಯಮಪಿ ಚ ಗಿರಂ ನಸ್ತ್ವತ್ ಪ್ರಬೋಧಪ್ರಯುಕ್ತಾ ।**
**ಮನುವದತಿ ಶುಕಸ್ತೇ ಮಂಜುವಾಕ್ ಪಂಜರಸ್ಥಃ ॥ ೭೪ ॥**

ಪೂಜಾಕಾಲದಲ್ಲಿ ಉಪಯೋಗಿಸಿದ ಪುಷ್ಪಗಳು, ಪೂಜೆಮಾಡಿರುವ ಕುಸುಮಗಳು, ಶಿಥಿಲವಾಗಿ, ಬಾಡಿದಂತೆ ಮತ್ತು ವಿರಳವಾಗಿ ಕಟ್ಟಿದಂತೆ ತೋರುತ್ತಿವೆ. ರಾತ್ರಿಕಾಲದಲ್ಲಿ ಪೂರ್ಣವಾಗಿ ಉರಿದುದರಿಂದ ದೀಪಗಳು ಕರಿಕಟ್ಟಿ ಕಿರಣಗಳು ಮಂಡಲಾಕಾರವೊಂದಿ, ಮ್ಲಾನತೆಹೊಂದಿ ಪ್ರಕಾಶಶೂನ್ಯವಾಗಿ ತೋರುತ್ತಿವೆ. ಪಂಜರದಲ್ಲಿರುವ ರಾಜಕೀರವು (ಪಂಜರಶುಕ, ಪಂಜರಗಿಳಿ, ಅರಗಿಣಿ) ಮಂಜುಳವಾಕ್‌ಸರಣಿಯಿಂದ ನಾವು ಹಾಡುವ ನುಡಿಗಳನ್ನೇ ಆಲಾಪಿಸುತ್ತಿದೆ (ಜಪಿಸುತ್ತಿದೆ). ನಿನ್ನನ್ನು ಎಚ್ಚರಿಸಲು ಪಂಜರದ ಗಿಣಿಯು ತಾನೂ ಉಲಿದು, ಮೃದುಮಧುರವಾದ, ಮನೋಹರವಾದ, ಕರ್ಣಾನಂದಕರವಾದ ಶಬ್ದಗಳನ್ನು ಶಬ್ದಿಸುತ್ತಾ, ಹಾಡುತ್ತಾ ಪಾಡುತ್ತಾ ನಮ್ಮನ್ನೇ ಅನುಕರಿಸುತ್ತಿದೆ.

ಭವತಿ—ಭೂ ಸತ್ತಾಯಾಂ—ಲಟ್—ಪ್ರ.ಪು.ಏ. ॥ ವಿರಲಾ ಭಕ್ತಿಃ ಯಸ್ಯ ಸಃ ॥ ಮ್ಲಾನಾನಿ ಚ ತಾನಿ ಪುಷ್ಪಾಣಿ ಚ—ಮ್ಲಾನಪುಷ್ಪಾಣಿ । ಮ್ಲಾನಪುಷ್ಪಾಣಾಂ ಉಪಹಾರಃ ॥ ಸ್ವೇಷಾಂ ಕಿರಣಾಃ । ಸ್ವಕಿರಣಾನಾಂ ಪರಿವೇಷಃ । ಸ್ವಕಿರಣಪರಿವೇಷಸ್ಯ ಉದ್ಭೇದಃ । ಸ್ವಕಿರಣಪರಿವೇಷೋದ್ಭೇದೇನ ಶೂನ್ಯಾಃ ॥ ತವ ಪ್ರಬೋಧಃ । ತ್ವತ್ ಪ್ರಬೋಧಃ । ತ್ವತ್ ಪ್ರಬೋಧೇ ಪ್ರಯುಕ್ತಾ। ತಾಂ ॥ ಮಂಜುಃ ವಾಕ್ ಯಸ್ಯ ಸಃ । ಪಂಜರೇ ತಿಷ್ಠತಿ ಇತಿ ಪಂಜರಸ್ಥಃ । ಅನು—ಉಪಸರ್ಗ । ವದ—ವ್ಯಕ್ತಾಯಾಂ ವಾಚಿ—ಲಟ್ ॥

ಮ್ಲಾನಪುಷ್ಪೋಪಹಾರಃ = ಬಾಡಿದ ಪೂಜಾಕುಸುಮಗಳು, ವಿರಲಭಕ್ತಿಃ = ಶಿಥಿಲ ವಾದ ರಚನೆಯುಳ್ಳದ್ದು, ಭವತಿ = ಆಗು, ಪ್ರದೀಪಾಃ = ದೀಪಗಳು, ಸ್ವಕಿರಣಪರಿವೇ ಷೋದ್ಭೇದಶೂನ್ಯಾಃ = ತಮ್ಮ ಕಿರಣಗಳ ಮಂಡಲರಚನೆಯಿಂದ, ತೇಜೋವಿಹೀನವಾದ, ಭವಂತಿ = ಆಗುತ್ತವೆ, ಅಪಿ ಚ = ಮತ್ತು, ಅಯಂ = ಈ, ಮಂಜುವಾಕ್ = ಮಧುರ ಮಾತಿನ, ಪಂಜರಸ್ಥಃ = ಪಂಜರದಲ್ಲಿರುವ, ತೇ = ನಿನ್ನ, ಶುಕಃ = ಗಿಣಿಯು, ತ್ವತ್ ಪ್ರಬೋಧಪ್ರಯುಕ್ತಾಂ = ನಿನ್ನನ್ನು ಎಬ್ಬಿಸಲು ಪಠಿಸಿರುವ, ಗಿರಂ=ಮಾತನ್ನು, ಅನುವದತಿ = ಅನುಕರಿಸಿ ಹೇಳು.

**75. ಇತಿ ವಿರಚಿತವಾಗ್ಭಿರ್ವಂದಿಪುತ್ರೈಃ ಕುಮಾರಃ ।**
**ಸಪದಿವಿಗತನಿದ್ರಸ್ತಲ್ಪಮುಜ್ಝಾಂ ಚಕಾರ ॥**
**ಮದಪಟು ನಿನದದ್ಭಿರ್ಬೋಧಿತೋ ರಾಜಹಂಸೈಃ ।**
**ಸುರಗಜ ಇವ ಗಾಂಗಂ ಸೈಕತಂ ಸುಪ್ರತೀಕಃ ॥ ೭೫ ॥**

ಕೈಲಾಸನಾಥನಾದ ಈಶ್ವರನ ದಿಗ್ಗಜವಾದ ಸುಪ್ರತೀಕವು ದೇವಗಂಗಾನದಿಯ ಮರಳಿನ ದಿಣ್ಣೆಯ ಮೇಲೆ ಮಲಗಿ ನಿದ್ರಿಸುತ್ತಿದೆ. ಬೆಳಗಿನ ಜಾವ ಮದವೇರಿದ ರಾಜಹಂಸಗಳು ಆನಂದದಿಂದ ಕಲಕಲನಾದಗೈದು, ಮೆಲ್ಲುಲಿಗೈದು, ಮಧುರಸುನಾದದ ಅಲೆಗಳನ್ನೆಬ್ಬಿಸಿ ದೇವತೆಗಳ ಆ ದಿಗ್ಗಜವನ್ನು ಎಬ್ಬಿಸುವಂತೆ, ತರತರದ ವಾಗ್ವಿಲಾಸದಿಂದ ಸವಿಯಾಗಿ ಹಾಡಿ ಸಮಾನವಯಸ್ಕರಾದ ವಂದಿಮಾಗಧರು ಎಚ್ಚರಿಸಿದರು. ಮಧುರವಾದ ರವದಿಂದ ಜಾಗೃತಗೊಂಡ ಈಶಾನದಿಗ್ಗಜವು ದೇವಗಂಗೆಯ ಪುಳಿನಸ್ಥಳದಿಂದ ಎದ್ದೇಳುವಂತೆ ಆ ಶುಭಾಂಗನು (ಗುಂಡಾಕೇಶನು) ಭರದಿಂದ ತನ್ನ ಹಾಸನ್ನು ಬಿಟ್ಟು ಎದ್ದನು.

ಅನ್ವಯಃ:—ಇತಿ ವಿರಚಿತವಾಗ್ಭಿಃ ವಂದಿಪುತ್ರೈಃ ಬೋಧಿತಃ ಸಪದಿವಿಗತನಿದ್ರಃ ಮದಪಟುನಿನದದ್ಭಿಃ ರಾಜಹಂಸೈಃ (ಬೋಧಿತಃ) ಸುರಗಜಃ ಸುಪ್ರತೀಕಃ ಗಾಂಗಂ ಸೈಕತಮಿವ ತಲ್ಪಂ ಉಜ್ಝಾಂ ಚಕಾರ ॥

ವಿರಚಿತಾಃ ವಾಚಃ ಯೈಸ್ತೇ। ವಿರಚಿತವಾಚಃ ತೈಃ ॥ ವಂದಿನಾಂ ಪುತ್ರಾಃ। ತೈಃ ॥ ವಿಗತಾ ನಿದ್ರಾ ಯಸ್ಮಾತ್ ಸಃ। ವಿಗತನಿದ್ರಃ ॥ ನಿನದಂತೀತಿ ನಿನದಂತಃ। ಮದೇನ ಪಟು ನಿನದಂತಃ। ಮದಪಟು ನಿನದಂತಃ ತೈಃ ॥ ಸುರಸ್ಯ ಗಜಃ। ಗಂಗಾಯಾಃ ಇದಂ ಗಾಂಗಂ ॥ ಉಜ್ಝ—ಉತ್ಸರ್ಗೇ—ಲಿಟ್—ಪ್ರ.ಪು.ಏ.—ಉಜ್ಝಾಂಚಕಾರ ॥

ಇತಿ = ಈ ತೆರನಾಗಿ, ವಿರಚಿತವಾಗ್ಭಿಃ = ರಚಿಸಿ ಪಠಿಸಿದ ಸ್ತುತಿವಾಕ್ಯಗಳುಳ್ಳ, ವಂದಿಪುತ್ರೈಃ = ಸ್ತುತಿಪಾಠಕರ ಮಕ್ಕಳಿಂದ, ಸಪದಿ = ಜಾಗೃತನಾಗಿ, ವಿಗತನಿದ್ರಃ = ನಿದ್ರೆಯನ್ನು ಮುಗಿಸಿರುವ, ಕುಮಾರಃ = ಅಜಕುಮಾರನು, ಮದಪಟುನಿನದದ್ಭಿಃ = ಮದದಿಂದ ಮಧುರವಾಗಿ ಶಬ್ದಮಾಡುವ, ರಾಜಹಂಸೈಃ = ರಾಜಹಂಸಗಳಿಂದ, ಬೋಧಿತಃ = ಎಚ್ಚರಿಸಲ್ಪಟ್ಟ. ಸುಪ್ರತೀಕಃ = ಸುಪ್ರತೀಕವೆಂಬ ಆನೆ. ಸುರಗಜಃ = ದಿಗ್ಗಜವು, ಗಾಂಗಂ = ಗಂಗಾನದಿಯ, ಸೈಕತಂ ಇವ = ಮರಳಿನ ದಡವನ್ನು ಎಂಬಂತೆ, ತಲ್ಪಂ = ಹಾಸಿಗೆಯನ್ನು, ಉಜ್ಝಾಂಚಕಾರ = ಬಿಟ್ಟು ಎದ್ದನು.

**76. ಅಥ ವಿಧಿಮವಸಾಯ್ಯ ಶಾಸ್ತ್ರದೃಷ್ಟಂ।**
**ದಿವಸಮುಖೋಚಿತಮುಂಚಿತಾಕ್ಷಿಪಕ್ಷ್ಮಾ॥**
**ಕುಶಲವಿರಚಿತಾನುಕೂಲವೇಷಃ।**
**ಕ್ಷಿತಿಪಸಮಾಜಮಗಾತ್ ಸ್ವಯಂವರಸ್ಥಮ್ ॥೭೬॥**

ಸುಂದರವಾದ ಕಣ್ಣೆವೆಗಳಿಂದ ಕೂಡಿದ ನಯನಗಳುಳ್ಳ ಚೆಲುವ ನೋಟದಿಂದ ವಿರಾಜಿಸುತ್ತಿರುವ ಚೆಲುವರಲ್ಲಿ ಚೆಲುವನಾದ ಅಜಕುಮಾರನು ಪ್ರಾತಃಕಾಲದಲ್ಲಿ ಶಾಸ್ತ್ರಗಳಲ್ಲಿ ಹೇಳಿರುವ ಕಾಲೋಚಿತವಾದ ಅನುಷ್ಠಾನಗಳನ್ನು ಮಾಡಿ (ಕರ್ಮಾನುಷ್ಠಾನಗಳನ್ನು) ಮುಗಿಸಿದನು ಆ ಬಳಿಕ ನಿಪುಣರಾದ ಪರಿಚಾರಕರಿಂದ ಸ್ವಯಂವರಕ್ಕೆ ಉಚಿತವಾದ ವೇಷಭೂಷಣಗಳಿಂದ ಅಲಂಕೃತನಾದನು. ನಯನಮನೋಹರವಾದ ನೋಟವನ್ನು ಬೀರುತ್ತ ಆ ಸುಂದರಾಂಗನು ಸ್ವಯಂವರಮಂಟಪಶಾಲೆಗೆ ಬಂದು ರಾಜರ ಸಭೆಯನ್ನು ಪ್ರವೇಶಿಸಿ ಉಚಿತಾಸನದಲ್ಲಿ ಸುಖಾಸೀನನಾದನು.

ಅನ್ವಯಃ:—ಅಥ ಅಂಚಿತಾಕ್ಷಿಪಕ್ಷ್ಮಾ ದಿವಸಮುಖೋಚಿತಂ ಶಾಸ್ತ್ರದೃಷ್ಟಂ ವಿಧಿಮ್

**ಅವಸಾಯ್ಯ ಕೌಶಲವಿರಚಿತಾನುಕೂಲವೇಷಃ ಸ್ವಯಂವರಸ್ಥಮ್ ಕ್ಷಿತಿಪಸಮಾಜಮ್ ಅಗಾತ್ ॥**

ಶಾಸ್ತ್ರೇ ದೃಷ್ಟಂ । ಶಾಸ್ತ್ರದೃಷ್ಟಂ । ದಿವಸಸ್ಯ ಮುಖಂ । ದಿವಸಮುಖೇ ಉಚಿತಂ । ದಿವಸಮುಖೋಚಿತಂ ॥ ಅಕ್ಷ್ಣೋಃ ಪಕ್ಷ್ಮಣೀ । ಅಕ್ಷಿಪಕ್ಷ್ಮಣೀ । ಅಂಚಿತೇ ಅಕ್ಷಿಪಕ್ಷ್ಮಣೀ ಯಸ್ಯ ಸಃ ಅಂಚಿತಾಕ್ಷಿಪಕ್ಷ್ಮಾ ॥ ಅನುಕೂಲಶ್ಚಾಸೌ ವೇಷಶ್ಚ । ಕೌಶಲೈಃ ವಿರಚಿತಃ । ಕೌಶಲವಿರಚಿತಃ ಅನುಕೂಲವೇಷಃ । ಕೌಶಲವಿರಚಿತಾನುಕೂಲವೇಷಃ । ಕ್ಷಿತಿಪಾನಾಂ ಯಸ್ಯ ಸಃ । ಸಮಾಜಃ । ಸ್ವಯಂವರೇ ತಿಷ್ಠತೀತಿ ಸ್ವಯಂವರಸ್ಥಃ । ತಂ ॥ ಅಗಾತ್—ಅಗಾತಾಂ—ಅಗುಃ । ಅಗಾಃ—ಅಗಾತಂ—ಅಗಾತ । ಅಗಾಂ—ಅಗಾವ—ಅಗಾಮ ॥ ಇಣ್—ಗತೌ—ಲುಙ್—ಪ್ರ.ಪು.ಏ. ॥

ಅಥ = ಎದ್ದಮೇಲೆ, ಅಂಚಿತಾಕ್ಷಿಪಕ್ಷ್ಮಾ = ಸುಂದರವಾದ ಕಣ್ಣಿನ ರೆಪ್ಪೆಗಳುಳ್ಳ ಅಜಕುಮಾರನು, ಶಾಸ್ತ್ರದೃಷ್ಟಂ = ಶಾಸ್ತ್ರಸಮ್ಮತವಾದ (ವಿಹಿತವಾದ), ದಿವಸಮುಖೋಚಿತಂ = ಪ್ರಾತಃಕಾಲದಲ್ಲಿ ಆಚರಿಸಲು ಯೋಗ್ಯವಾದ, ವಿಧಿಂ = ಕಾರ್ಯಗಳನ್ನು, ಅವಸಾಯ್ಯ = ಮಾಡಿ ಮುಗಿಸಿ, ಕೌಶಲವಿರಚಿತಾನುಕೂಲವೇಷಃ = ಕೌಶಲ ರೀತಿಯಲ್ಲಿ ಅಲಂಕಾರಮಾಡುವುದರಲ್ಲಿ ನಿಪುಣರಾದ, ವಿರಚಿತ = ಮಾಡಲ್ಪಟ್ಟ, ಅನುಕೂಲ = ಸ್ವಯಂವರಕ್ಕೆ ಉಚಿತವಾದ ವೇಷವುಳ್ಳವನಾಗಿ, ಸ್ವಯಂವರಸ್ಥಂ = ಸ್ವಯಂವರಸ್ಥಳದಲ್ಲಿ ಸೇರಿದ, ಕ್ಷಿತಿಪಸಮಾಜಂ = ರಾಜರ ಸಮೂಹವನ್ನು, ಅಗಾತ್ = ಹೋಗಿ ಸೇರಿದನು.

## ಷಷ್ಠಃ ಸರ್ಗಃ

## ಆರನೆಯ ಸರ್ಗ

1. ಸ ತತ್ರ ಮಂಚೇಷು ಮನೋಜ್ಞವೇಷಾನ್ ।
   ಸಿಂಹಾಸನಸ್ಥಾನುಪಚಾರವತ್ಸು ॥
   ವೈಮಾನಿಕಾನಾಂ ಮರುತಾಮಪಶ್ಯತ್ ।
   ಅಕೃಷ್ಟಲೀಲಾನ್ನರಲೋಕಪಾಲಾನ್ ॥ ೧ ॥

ಆ ಸ್ವಯಂವರಶಾಲೆಯಲ್ಲಿ ಆಹ್ವಾನಿತರಾದ ಭಾರತದೇಶದ ಸಕಲ ರಾಜಾಧಿರಾಜರ ಸಮೂಹವೇ ಬಂದು ನೆಲಸಿದುದನ್ನು ಅಜಕುಮಾರನು ಕಂಡನು. ಅವರೆಲ್ಲರು ರಮಣೀಯ ವೇಷಧಾರಿಗಳು. ರಾಜೋಪಚಾರದಿಂದ ಅಣಿಗೈದ ಸಿಂಹಾಸನಗಳಲ್ಲಿ ವಿರಾಜಮಾನರಾಗಿದ್ದರು. ಸಾಲಂಸಾಲಾಗಿ ವಿವಾಹಮಂಟಪದಲ್ಲಿ ವಿಲಾಸದಿಂದ ಕುಳಿತು ವಿಜೃಂಭಿಸುತ್ತಿದ್ದರು. ಪ್ರತಿಯೊಂದು ಸಿಂಹಾಸನವನ್ನು ಅಲಂಕೃತಗೊಳಿಸಿದ ಎತ್ತರದ ವೇದಿಕೆಯ ಮೇಲೆ ಇರಿಸಿದ್ದರು. ಆ ನರಲೋಕಪಾಲರು ಅಮರಲೋಕದಲ್ಲಿ ಪುಷ್ಪಕವಿಮಾನಗಳಲ್ಲಿ ಕುಳಿತು ಯಾನಮಾಡುವ ದೇವತೆಗಳಂತೆ ಕಣ್ಣಿಗೆ ಕಾಣಿಸಿದರು. ಆ ಜವ್ವನಿಗರ ಯುವಜನ ಮಂಡಳಿಯು ಮನೋಜ್ಞವೇಷಧಾರಿಗಳಾಗಿ ದೇವತೆಗಳ ಅಂದವನ್ನು ಪಡೆದಿತ್ತು.

ಅನ್ವಯ:—ತತ್ರ ಸ ಉಪಚಾರವತ್ಸು ಮಂಚೇಷು ಸಿಂಹಾಸನಸ್ಥಾನ್ ಮನೋಜ್ಞವೇಷಾನ್ ವೈಮಾನಿಕಾನಾಂ ಮರುತಾಮ್ ಆಕೃಷ್ಟಲೀಲಾನ್ ನರಲೋಕಪಾಲಾನ್ ಅಪಶ್ಯತ್ ॥

ಮನೋಜ್ಞವೇಷಾನ್=ಮನೋಹರನೇಪಥ್ಯಾನ್, ನರಲೋಕಪಾಲಾಃ=ನರಲೋಕಂ ಪಾಲಯಂತೀತಿ ॥

2. ರತೇರ್ಗೃಹೀತಾನುನಯೇನ ಕಾಮಂ ।
   ಪ್ರತ್ಯರ್ಪಿತಸ್ವಾಂಗಮಿವೇಶ್ವರೇಣ ॥
   ಕಾಕುತ್ಸ್ಥಮಾಲೋಕಯತಾಂ ನೃಪಾಣಾಂ ।
   ಮನೋ ಬಭೂವೇಂದುಮತೀ ನಿರಾಶಮ್ ॥ ೨ ॥

ಕಾಕುಸ್ಥನು (ಕಾಕುತ್ಸ್ಥನು) ಸಭಾಭವನವನ್ನು ಪ್ರವೇಶಿಸಿದೊಡನೆ ಅವನನ್ನು ಆ ನರಲೋಕಾಧೀಶರು ಕಂಡು ಅಚ್ಚರಿಗೊಂಡರು. ಅವನು ರೂಪವಿಭವಸೌಂದರ್ಯಶ್ರೀಯ ಪ್ರತೀಕವಾಗಿ ಮೆರೆಯುತ್ತ ಸಾಕ್ಷಾತ್ ಮನ್ಮಥನೇ ಲೋಕಕ್ಕೆ ಇಳಿದುಬಂದನೋ ಎಂಬಂತೆ ತೋರಿದನು (ನಿಜತನುವ ಪಡೆದಿರುವ ಕಾಮನವೊಲು). ರತಿಯ ಪ್ರಾರ್ಥನೆಗೆ ಒಲಿದು, ಅನುಗ್ರಹಿಸಿ ಮಹೇಶ್ವರನು ನಿಜತನುವನ್ನು ಅಂದು ಮದನನಿಗೆ ಕರುಣಿಸಿದನು. ಹೀಗೆ ನಿಜತನುವನ್ನು ಪಡೆದ ಕಾಮದೇವನಂತೆ ಕಂಗೊಳಿಸುತ್ತ ಪುರುಷಗಾಂಭೀರ್ಯದಿಂದ

ಮೆರೆಯುತ್ತ ಸ್ವಯಂವರಶಾಲೆಯನ್ನು ಪ್ರವೇಶಿಸಿದನು. ಅವನನ್ನು ಕಂಡು ಆ ರಾಜ ಕುಮಾರರು ಇಂದುಮತಿಯ ಆಸೆಯನ್ನು ತೊರೆದರು.

ಅನ್ವಯ :—ರತೇರ್ಗೃಹೀತಾನುನಯೇನ ಈಶ್ವರೇಣ ಪ್ರತ್ಯರ್ಪಿತಸ್ವಾಂಗಂ ಕಾಮ ಮಿವ ಕಾಕುತ್ಸ್ಥಂಆಲೋಕಯತಾಂ ನೃಪಾಣಾಂ ಮನಃ ಇಂದುಮತೀ ನಿರಾಶಂ ಬಭೂವ ॥

**3. ವೈದರ್ಭನಿರ್ದಿಷ್ಟಮಸೌ ಕುಮಾರಃ ।**
**ಕ್ಲೃಪ್ತೇನ ಸೋಪಾನಪಥೇನ ಮಂಚಮ್ ॥**
**ಶಿಲಾವಿಭಂಗೈಃ ಮೃಗರಾಜಶಾವಃ ।**
**ತುಂಗಂ ನಗೋತ್ಸಂಗಮಿವಾರುರೋಹ** ॥ ೩ ॥

ಸರಿಯಾದ ರೀತಿಯಲ್ಲಿ ರಚಿಸಲ್ಪಟ್ಟ ಸೋಪಾನಪಂಕ್ತಿಗಳನ್ನು (ಮೆಟ್ಟಲುಗಳನ್ನು) ಏರುತ್ತ ಭೋಜನೃಪನ ಮುಂದಾಳುತನದಲ್ಲಿ ವೇದಿಕೆಯ ಮೇಲೆ ತನಗಾಗಿ ಕಾದಿರಿಸಿದ ಸಿಂಹಾಸನದ ಬಳಿಗೆ (ಉಚಿತಾಸನದ ಬಳಿಗೆ) ಬಂದನು. ಮೃಗರಾಜಶಾಬಕನು ಶಿಲೆಗಳ ಮೇಲೆ ಕಾಲಿರಿಸಿ ಉತ್ತುಂಗವಾದ ಶಿಖರವನ್ನೇರುವಂತೆ (ಶಿಲೆಗಳೊಳಡಿಯಿಡುತ ಮೃಗರಾಜ ಶಾಬಕನು) ಆ ನರೇಂದ್ರನು ಆ ನಿರ್ದಿಷ್ಟ ಮಂಚದೆಡೆಗೆ ಬಂದನು.

ಅನ್ವಯ :—ಅಸೌ ಕುಮಾರಃ ಕ್ಲೃಪ್ತೇನ ಸೋಪಾನಪಥೇನ ವೈದರ್ಭನಿರ್ದಿಷ್ಟಂ ಮಂಚಂ ಮೃಗರಾಜಶಾವಃ ಶಿಲಾವಿಭಂಗೈಃ ತುಂಗಂ ನಗೋತ್ಸಂಗಮ್ ಇವ ಆರುರೋಹ॥ ಸೋಪಾನಪಥೇನ=ಸೋಪಾನಪಂಕ್ತಿಃ ಮೃಗರಾಜಶಾವಃ=ಸಿಂಹಪೋತಃ-ಶೈಲಾಗ್ರಮಿವ ಆರುರೋಹ.

**4. ಪರಾರ್ಧ್ಯವರ್ಣಾಸ್ತರಣೋಪಪನ್ನಂ ।**
**ಆಸೇದಿವಾನ್ ರತ್ನವದಾಸನಂ ಸಃ ॥**
**ಭೂಯಿಷ್ಠಮಾಸೀದುಪಮೇಯಕಾನ್ತಿಃ ।**
**ಮಯೂರಪೃಷ್ಠಾಶ್ರಯಿಣಾ ಗುಹೇನ** ॥ ೪ ॥

ಆ ರಾಜೇಂದ್ರನು ಪರನೀಲ, ಹಳದಿ ಮೊದಲಾದ ವರ್ಣಗಳಿಂದ ಹೊಳೆವ ರತ್ನಾದಿ ಗಳಿಂದಲೂ, ಶ್ರೇಷ್ಠವಾದ ರತ್ನಕಂಬಳಿಗಳಿಂದಲೂ ರಚಿತವಾದ ವೇದಿಕೆಯ ಮೇಲಿರಿಸಿದ ರತ್ನಸಿಂಹಾಸನವನ್ನು ಅಲಂಕರಿಸಿದನು. ಅವನು ಶೋಭಾಯಮಾನನಾಗಿ ಮಂಡಿಸಿದನು. ಹೀಗೆ ಮಂಡಿಸಿ ದೇವತೆಗಳ ಸೇನಾನಿಯಾದ ಶಿವಪುತ್ರ ಗುಹನು ತನ್ನ ವಾಹನವಾದ ಮಯೂರವನ್ನು ಏರಿ ಕುಳಿತಂತೆ ಕಂಡನು (ಆ ಮಯೂರದ ಮೇಲೆ ಕುಳಿತ ಷಣ್ಮುಖ ನೊಲು). ಹೊಳೆವ ಮಣಿಮಂಚದ ಮೇಲೆ ಮಂಡಿಸಿ ದೇವಕುಮಾರನಾದ ಷಣ್ಮುಖ ನಂತೆಯೇ ಕಾಂತಿಯಿಂದ ಸರಿಮಿಗಿಲು ಎನಿಸಿದನು. ಸಿಂಹಾಸನದ ನವರತ್ನಗಳು ಮಯೂರದ (ನವಿಲಿನ) ಬಣ್ಣಕ್ಕೆ ಸಾಟಿಯಾಗಿದ್ದುವು.

ಅನ್ವಯ :—ಪರಾರ್ಧ್ಯವರ್ಣಾಸ್ತರಣೋಪಪನ್ನಂ ರತ್ನವದಾಸನಮ್ ಆಸೇದಿವಾನ್ ಸಃ ಮಯೂರಪೃಷ್ಠಾಶ್ರಯಿಣಾ ಗುಹೇನ ಭೂಯಿಷ್ಠಮ್ ಉಪಮೇಯಕಾಂತಿಃ ಆಸೀತ್ ॥

**5. ತಾಸು ಶ್ರಿಯಾ ರಾಜಪರಂಪರಾಸು ।**
**ಪ್ರಭಾವಿಶೇಷೋದಯದುರ್ನಿರೀಕ್ಷ್ಯಃ ॥**

**ಸಹಸ್ರಧಾತ್ಮಾ ವ್ಯರುಚದ್ವಿಭಕ್ತಃ ।**
**ಪಯೋಮುಚಾಂ ಪಂಕ್ತಿಷು ವಿದ್ಯುತೇವ ॥ ೫ ॥**

ಆ ರಾಜಕುಮಾರರು ಸಾಲುಸಾಲಾಗಿ ಕುಳಿತು ಐಶ್ವರ್ಯಲಕ್ಷ್ಮಿಯು, ರೂಪಲಕ್ಷ್ಮಿಯು, ಭಾಗ್ಯಲಕ್ಷ್ಮಿಯು ತೇಜೋರಾಶಿಯಿಂದ ವಿಜೃಂಭಿಸುತ್ತಿದ್ದರು. ನೋಡುವವರ ಕಣ್ಣಿಗೆ ರಾಜಪುತ್ರರ ವೈಭವವು ಅತಿಶಯವಾಗಿ ಕಂಡಿತು. ಹೇಗೆ ಮೋಡದ ಎಡೆಯಿಂದ ಮಿಂಚು ಮಿಂಚಿದಾಗ ಕಣ್ಣುಕಟ್ಟಿಹೋಗುವುದೋ, ಪೂರ್ಣವಾಗಿ ನೋಡಲಾರೆವೋ ಅದೇ ತೆರನಾಗಿ ಮಿಂಚಿನ ತೇಜಃಪುಂಜವು ಮೋಡಗಳ ಮಧ್ಯದಿಂದ ತೂರಿ ಹೊರಬರುವಾಗ ನೂರಾರು, ಸಹಸ್ರಾರು ವಿಭಾಗವಾಗಿ ಹೊಳೆದಂತೆ (ಮೋಡಗಳ ಹಂತಿಯೊಳು ಹೊಳೆ ಹೊಳೆವ ಮಿಂಚಿನೊಲು) ಅದರ ಪೂರ್ಣರೂಪವನ್ನು ಕಾಣಲು ಅಥವಾ ಗ್ರಹಿಸಲು ಅಸಾಧ್ಯವಾದಂತೆ. ಆ ರಾಜಪಂಕ್ತಿಯಲ್ಲಿ ಲಕ್ಷ್ಮಿಯು ಆ ತೆರನಾಗಿ ತೋರಿದಳು (ಆ ರಾಜ ಪಂಕ್ತಿಯೊಳು ಲಕ್ಷ್ಮಿಯಿಂಹಳು).

ಅನ್ವಯ :—ತಾಸು ರಾಜಪರಂಪರಾಸು ಶ್ರಿಯಾ ಪಯೋಮುಚಾಂ ಪಂಕ್ತಿಷು ವಿದ್ಯುತಾ ಇವ ಸಹಸ್ರಧಾ ವಿಭಕ್ತಃ ಪ್ರಭಾವಿಶೇಷೋದಯದುರ್ನಿರೀಕ್ಷ್ಯಃ ಆತ್ಮಾ ವ್ಯರುಚತ್ ॥

ಶ್ರೀಃ = ಲಕ್ಷ್ಮಿ, ರಾಜ್ಯಲಕ್ಷ್ಮಿ ॥

6. **ತೇಷಾಂ ಮಹಾರ್ಹಾಸನಸಂಸ್ಥಿತಾನಾಂ ।**
**ಉದಾರನೇಪಥ್ಯಭೃತಾಂ ಸ ಮಧ್ಯೇ ॥**
**ರರಾಜ ಧಾಮ್ನಾ ರಘುಸೂನುರೇವ ।**
**ಕಲ್ಪದ್ರುಮಾಣಾಮಿವ ಪಾರಿಜಾತಃ ॥ ೬ ॥**

ಅತ್ಯಂತ ಉತ್ತಮವಾದ ಆಸನಗಳಲ್ಲಿ ಕುಳಿತಿರುವ ಆ ರಾಜಾಧಿರಾಜರ ಸಮೂಹದ ಮಧ್ಯೆ ರಘುವು ನಳನಳಿಸುವ ಆಭರಣಗಳಿಂದಲೂ ಅಲಂಕಾರಯೋಗ್ಯವಾದ ಉಡುಗೆ ತೊಡುಗೆಗಳಿಂದ ಭೂಷಿತನಾಗಿ (ಆ ಮಹಾರ್ಹಾಸನಾಸೀನರಾದರಸರೊಳು, ಚಾರು ನೇಪಥ್ಯಧೃತಭೂಮಿಪರೊಳು) ಸುರಲೋಕದಲ್ಲಿ ಕಲ್ಪತರುಗಳ ಮಧ್ಯದಲ್ಲಿ ಇರುವ ಪಾರಿಜಾತ ಸುರದ್ರುಮದಂತೆ ತನ್ನ ಶೋಭಾವಿಶೇಷದಿಂದ ರಾರಾಜಿಸಿದನು. ಅವನು ತನ್ನ ರೂಪ, ಗುಣ, ಸೌಂದರ್ಯದಿಂದಲೂ ಭೂಷಣವಿಶೇಷದಿಂದಲೂ, ಅತ್ಯಂತ ಕಾಂತಿ ಯುತನಾಗಿ ಮೆರೆಯುತ್ತ ಎಲ್ಲರನ್ನೂ ಮೀರಿಸಿದ್ದನು.

ಕಲ್ಪದ್ರುಮಾಣಾಂ ಮಧ್ಯೇ ಪಾರಿಜಾತ ಇವ ಸುರದ್ರುಮವಿಶೇಷ ಇವ। ದೇವತರವೋ (ಸುರದ್ರುಮಃ) ಮಂದಾರಃ ಪಾರಿಜಾತಕಃ—ಕಲ್ಪಾ ಇತಿ ದ್ರುಮಾಃ ಕಲ್ಪದ್ರುಮಾ ಇತಿ ವಿಗ್ರಹಃ ॥

7. **ನೇತ್ರವ್ರಜಾಃ ಪೌರಜನಸ್ಯ ತಸ್ಮಿನ್ ।**
**ವಿಹಾಯ ಸರ್ವಾನ್ನೃಪತೀ ನಿಪೇತುಃ ॥**
**ಮದೋತ್ಕಟೇ ರೇಚಿತಪುಷ್ಪವೃಕ್ಷಾ ।**
**ಗಂಧದ್ವಿಪೇ ವನ್ಯ ಇವ ದ್ವಿರೇಫಾಃ ॥ ೭ ॥**

ಅಲ್ಲಿ ಉಪಸ್ಥಿತರಾಗಿದ್ದ ನಾಗರಿಕರ ಕಣ್ಣು ರಘುಜನನ್ನೇ ಸೆರೆಹಿಡಿಯಿತು. ಅಪಾರಜನರ ದೃಷ್ಟಿ, ಅಲ್ಲಿ ಮಹಾ ಆಸನಾಸೀನರಾಗಿದ್ದ ರಾಜಾಧಿರಾಜರನ್ನು ಉಳಿದು ನೇರವಾಗಿ ಅಜಕುಮಾರನ ಕಡೆಗೆ ಹರಿಯತೊಡಗಿತು (ಪೌರಜನರಕ್ಷಿಕುಲ ಸೆರೆಯಾದಂದು). ಹೇಗೆ ಮದಜಲದಿಂದ ಉಕ್ಕಿ ಸೊಕ್ಕಿರುವ ಕಾಡಾನೆಯ ಕಪೋಲವನ್ನು ತುಂಬಿಗಳ ಹಿಂಡು ಮುತ್ತುವಂತೆ ಇತರ ಹೂಗಳ ರಾಶಿಯನ್ನೇ ಬಯಸದೆ, ಮದಜಲವನ್ನು ಸುರಿಸುತ್ತಿರುವ ಮದ್ದಾನೆಯ ಕಪೋಲವನ್ನು ಮುತ್ತುವಂತೆ ಅವರ ಅಕ್ಷಿಗಳು ಮುತ್ತಿದುವು.

ಅನ್ವಯಃ:—ಪೌರಜನಸ್ಯ ನೇತ್ರವ್ರಜಾಃ ಸರ್ವಾನ್ ನೃಪತೀನ್ ವಿಹಾಯ ತಸ್ಮಿನ್ ರೇಚಿತಪುಷ್ಪವೃಕ್ಷಾಃ ದ್ವಿರೇಫಾಃ ಮದೋತ್ಕಟೇ ವನ್ಯೇ ಗಂಧದ್ವಿಪೇ ಇವ ನಿಪೇತುಃ ॥

ಗಂಧದ್ವಿಪೇ = ಗಂಧಪ್ರಧಾನೇದ್ವಿಪೇ, ಗಜೇ—ದ್ವಿರೇಫಾ ಭೃಂಗಾ ಇವ ॥

**8. ಅಥ ಸ್ತುತೇ ಬಂದಿಭಿರನ್ವಯಜ್ಞೈಃ ।**
**ಸೋಮಾರ್ಕವಂಶ್ಯೇ ನರದೇವಲೋಕೇ ॥**
**ಸಂಚಾರಿತೇ ಚಾಗುರುಸಾರಯೋನೌ ।**
**ಧೂಪೇ ಸಮುತ್ಸರ್ಪತಿ ವೈಜಯನ್ತೀಃ ॥ ೮ ॥**

ಸ್ವಯಂವರಸಭಾಭವನದಲ್ಲಿ ನೆರೆದ ರಾಜರ (ರಾಜರನು ಸೋಮಾರ್ಕಸಂಭವರನು) ವಂಶಗಳ ಕೀರ್ತಿಪರಂಪರೆಯ ನಾನಾ ತೆರನಾಗಿ ವಂದಿಮಾಗಧರು, ವೈತಾಳಿಕರು, ಸ್ತುತಿ ಪಾಠಕರು ಸ್ತುತಿಸಿದರು. ಸೋಮಸೂರ್ಯವಂಶದರಸುಗಳ ಕುಲಗೌರವವನ್ನು ನಾನಾ ತೆರನಾಗಿ ಮಾಗಿಗಳು (ಪಾಟಾಳಿಗಳು) ಹಾಡಿ ಹೊಗಳಿ ಅಟ್ಟಕ್ಕೇರಿಸಿದರು. ಅವರ ಘೋಷಣೆಗಳು ಆ ಮಂಟಪಶಾಲೆಯ ಎಲ್ಲೆಡೆಗಳಲ್ಲೂ ವಿಜೃಂಭಿಸಿತು. ಅಗುರು ಸಾರಾದಿಗಳ ಗಂಧಾದಿಗಳ ಧೂಪದ ಹೊಗೆಯು ಓಳಿಯು ಧ್ವಜಪತಾಕೆಗಳ ಹಳವಿಗೆಯನ್ನು ದಾಂಟಿತು. ಅಮಮಾ ! ಅದರ ಕಂಪು-ಸೊಂಪು ಎಲ್ಲೆಡೆ ಹರವಾಗಿ ಹರಡಿತು.

ಸೋಮಾರ್ಕವಂಶ್ಯೇ = ಸೋಮಸೂರ್ಯವಂಶಭವೇ — ನರದೇವಲೋಕೇ = ರಾಜ ಸಮೂಹೇ, ಅಗುರುಸಾರಯೋನೌ = ಅಗುರುಣಃ ಸಾರಃ ಅಗುರು ಸಾರಃ ಸ ಯೋನಿಃ ಯಸ್ಯ ॥

**9. ಪುರೋಪಕಂಠೋಪವನಾಶ್ರಯಾಣಾಂ ।**
**ಕಲಾಪಿನಾಮುದ್ಧತನೃತ್ಯಹೇತೌ ॥**
**ಪ್ರಧ್ಮಾತಶಂಖೇ ಪರಿತೋ ದಿಗಂತಾನ್ ।**
**ತೂರ್ಯಸ್ವನೇ ಮೂರ್ಛತಿ ಮಂಗಲಾರ್ಥೇ ॥ ೯ ॥**

ಸ್ವಯಂವರದ ಶುಭಮುಹೂರ್ತವು ಸಮೀಪಿಸುತ್ತಿದ್ದಂತೆ ಶಂಖಾದಿಮಂಗಳವಾದ್ಯಗಳ ರವವು ಭೋರ್ಗರೆದು ದಿಗಂತವನ್ನು ಕವಿದುದೋ ಎಂಬಂತೆ ಎಲ್ಲೆಡೆಯಲ್ಲೂ ಪಸರಿಸಿತು (ದಿಗ್ದಿಗಂತವ ಕವಿದು ಭೋರ್ಗರೆದುದು). ಆ ಮಂಗಲವಾದ್ಯಘೋಷವನ್ನು ನಗರದ ಉಪವನದಲ್ಲಿರುವ ನವಿಲುಗಳು ಕೇಳಿ ಆಮೋದವೆರೆದು, ಸಂತಸದಿಂದ ಮದವೇರಿ ಕುಣಿದು ಕುಪ್ಪಳಿಸಿ ನಲಿದು ಆನಂದಿಸಿದುವು.

ತೂರ್ಯಸ್ವನೇ = ವಾದ್ಯಘೋಷೇ ॥

10. ಮನುಷ್ಯವಾಹ್ಯಂ ಚತುರಸ್ರಯಾನಂ ।
ಅಧ್ಯಾಸ್ಯ ಕನ್ಯಾ ಪರಿವಾರಶೋಭಿ ॥
ವಿವೇಶಮಂಚಾಂತರರಾಜಮಾರ್ಗಂ ।
ಪತಿಂವರಾ ಕ್ಲೃಪ್ತವಿವಾಹವೇಷಾ ॥ ೧೦ ॥

ತನ್ನ ಭಾವೀಪತಿಯನ್ನು (ಜೀವನದ ಸಂಗಾತಿಯನ್ನು) ಆಯ್ದುಕೊಳ್ಳಲು ಉತ್ಸುಕಳಾಗಿ ಇಂದುಮತಿಯು ವೈವಾಹವೇಷಭೂಷಣಗಳಿಂದ ಅಲಂಕೃತಳಾಗಿ ಮೆರೆಯುತ್ತ (ಆ ಪತಿಂವರೆ ಕ್ಲಪ್ತವೈವಾಹವೇಷದೊಳು) ತನ್ನ ಪರಿವಾರನಾರಿಯರ ಜೊತೆಯಲ್ಲಿ ಸ್ವಯಂವರಮಂಟಪಕ್ಕೆ ಶಿಬಿಕೆಯಲ್ಲಿ ಕುಳಿತು ಆಗಮಿಸಿದಳು. ಅವಳು ಕುಳಿತಿರುವ ಶಿಬಿಕೆಯನ್ನು ಬೋವಿಗಳು ಹೊತ್ತಿದ್ದರು. ರಾಜಾಧಿರಾಜರು ವೈಭವದಿಂದ ಕುಳಿತಿರುವ ಮಂಚದ ಮಾರ್ಗವಾಗಿ ಆ ರಾಜಕನ್ಯೆಯು ಸಕಲ ಸಡಗರದಿಂದ ತನ್ನ ಪರಿಜನರ ಸಮೇತ ವಿವಾಹಶಾಲೆಗೆ ಬಂದಳು.

ಪತಿಂವರಾ = ಸ್ವಯಂವರಾ ॥

11. ತಸ್ಮಿನ್ ವಿಧಾನಾತಿಶಯೇ ವಿಧಾತುಃ ।
ಕನ್ಯಾಮಯೇ ನೇತ್ರಶತೈಕಲಕ್ಷ್ಯೇ ॥
ನಿಪೇತುರಂತಃ ಕರಣೈರ್ನರೇಂದ್ರಾಃ ।
ದೇಹೈಃ ಸ್ಥಿತಾಃ ಕೇವಲಮಾಸನೇಷು ॥ ೧೧ ॥

ಆ ವಿಧಾತ್ರನ ಸೃಷ್ಟಿಯಲ್ಲಿ ಅತಿಶಯಮೆನಿಸಿರುವ ಆ ರಾಜಕನ್ನಿಕೆಯು ಸಭಾಭವನವನ್ನು ಪ್ರವೇಶಿಸುತ್ತಿದ್ದಂತೆಯೇ ಎಲ್ಲಾ ನೃಪರ ಲಕ್ಷ್ಯವು ಏಕಕಾಲದಲ್ಲಿ ಒಬ್ಬಳಲ್ಲಿಯೇ ಕೇಂದ್ರೀಕೃತವಾಯಿತು. ಆ ಭುವನಮನಮೋಹಿನಿಯನ್ನು ಕಂಡೊಡನೆಯೇ ಆ ಧಾರಣೀಪತಿಗಳೆಲ್ಲರ ಹೃದಯವೇ ಸೂರೆಹೋಯಿತು. ಅವರ ದೇಹ ಮಾತ್ರ ಅವರು ಕುಳಿತಿದ್ದ ಆಸನದಲ್ಲಿ ಭದ್ರವಾಗಿದ್ದಿತಲ್ಲದೆ ಅವರ ಮನಸ್ಸು ಅಂತಃಕರಣಗಳೆಲ್ಲ ಲಕ್ಷ್ಯೈಕಲಕ್ಷ್ಯೆ ಎನಿಪ ಆಕೆಯಲ್ಲಿ ಸೇರಿಹೋಯಿತು (ನೃಪನೇತ್ರಲಕ್ಷ್ಯೈಕಲಕ್ಷ್ಯೆ ಎನಿಪಾಕೆಯೊಳು). ಬರಿ ತನು ಮಾತ್ರ ಆಸನದಲ್ಲಿ ಭದ್ರವಾಗಿ ಕುಳಿತಿರುತ್ತಿತ್ತು (ತನುಮಾತ್ರದಿಂದಿರ್ದರಾಸನದೊಳು).

ಅನ್ವಯ :—ನೇತ್ರಶತೈಕಲಕ್ಷ್ಯೇ ತಸ್ಮಿನ್ ವಿಧಾತುಃ ಕನ್ಯಾಮಯೇ ವಿಧಾನಾತಿಶಯೇ ನರೇಂದ್ರಾಃ ಅಂತಃಕರಣೈಃ ನಿಪೇತುಃ । ಆಸನೇಷು ಕೇವಲಂ ದೇಹೈಃ ಸ್ಥಿತಾಃ ॥

ಆಸನೇಷು ದೇಹೈಃ = ಕೇವಲಂ ದೇಹೈರೇವ ಸ್ಥಿತಾ ॥

12. ತಾಂ ಪ್ರತ್ಯಭಿವ್ಯಕ್ತಮನೋರಥಾನಾಂ ।
ಮಹೀಪತೀನಾಂ ಪ್ರಣಯಾಗ್ರದೂತ್ಯಃ ॥
ಪ್ರವಾಲಶೋಭಾ ಇವ ಪಾದಪಾನಾಂ ।
ಶೃಂಗಾರಚೇಷ್ಟಾ ವಿವಿಧಾ ಬಭೂವುಃ ॥ ೧೨ ॥

ಆ ಬಳಿಕ ಆ ಅವನೀಶ್ವರರಲ್ಲಿ ನಾನಾ ವಿಧದ ಶೃಂಗಾರಚೇಷ್ಟೆಗಳು ತಲೆದೋರಿದುವು. ಮರಗಿಡಗಳಲ್ಲಿ ಮೊಳಕೆ ಒಡೆಯುವ ಎಳೆಯ ಚಿಗುರಿನಂತೆ ಆ ಧಾರಣೀಶ್ವರರಲ್ಲಿ

ಪ್ರಣಯಚೇಷ್ಟೆಗಳು ಉದ್ಭವಿಸಿದುವು. ಆಕೆಯ ರೂಪಲಾವಣ್ಯಗಳಿಗೆ ಮನಸೋತ ಆ ಧಾರಣೀಪತಿಗಳು, ಮರಗಿಡಗಳು ನವಪಲ್ಲವಗಳಿಂದ ಶೋಭೆಯಾಂತು ಕಂಗೊಳಿಸು ವಂತೆ, ನಾನಾವಿಧದ ನವವಿಲಾಸದ ವರ್ತನೆಗಳಿಂದ ತಮ್ಮ ಅಂತರಂಗದಲ್ಲಿ ಹುಟ್ಟಿರುವ ಅನುರಾಗಗಳನ್ನು ಹೊರಗೆಡಹಿದರು. ಪ್ರಣಯದೂತರಂತೆ ಚೇಷ್ಟೆಗಳು ಕಾಣಿಸಿ ಕೊಂಡುವು (ಮೊತ್ತಮೊದಲು ದಿಸಿದವು ಪ್ರಣಯದೂತಿಯರೋಲು). ನಾನಾವಿಧದ ಶೃಂಗಾರಚೇಷ್ಟೆಗಳ ಮೂಲಕ ಮಹೀಪತಿಗಳು ತಮ್ಮ ಮನೋರಥವನ್ನು ಅಭಿವ್ಯಕ್ತಿ ಗೊಳಿಸಿದರು.

ಶೃಂಗಾರಚೇಷ್ಟಾಃ=ಶೃಂಗಾರವಿಕಾರಾಃ (ಶೃಂಗಾರಲಕ್ಷಣಂ) ; ಭಾವಂ=ಮನೋಗತಂ ॥

13. ಕಶ್ಚಿತ್ ಕರಾಭ್ಯಾಂ ಉಪಗೂಢನಾಲಂ ।
ಆಲೋಲಪತ್ರಾಭಿಹತದ್ವಿರೇಫಮ್ ॥
ರಜೋಭಿರಂತಃ ಪರಿವೇಷಬಂಧಿ ।
ಲೀಲಾರವಿಂದಂ ಭ್ರಮಯಾಂ ಚಕಾರ ॥ ೧೩ ॥

ಒಬ್ಬ ಮಹೀಪತಿಯು ತನ್ನ ಪಾಣಿಪಲ್ಲವದಲ್ಲಿ ಒಂದು ತಾವರೆಹೂವನ್ನು ತಿರುಗಿಸುತ್ತ ಅದರೆಡೆಗೆ ಧಾವಿಸಿಬರುತ್ತಿರುವ ತುಂಬಿಯ ದಂಡನ್ನು ಕಮಲದ ಎಸಳುಗಳಿಂದ ಅಟ್ಟು ತ್ತಿದ್ದನು. ಹೀಗೆ ಲೀಲಾರವಿಂದವನ್ನು ಸುತ್ತು ತಿರುಗಿಸಿದಾಗ ಪರಾಗರೇಣುಗಳ ಪರಿವೇಷ ವನ್ನೇ ರಚಿಸಿದನು. ಹೀಗೆ ಕಮಲದ ಹೂವನ್ನು ವೃತ್ತಾಕಾರವಾಗಿ ತಿರುಗಿಸಿದಾಗ ಪರಾಗ ಧೂಳು (ಪರಾಗರೇಣು) ವೃತ್ತಾಕಾರದಲ್ಲಿ ಒಟ್ಟುಸೇರಿ ಮನೋಜ್ಞವಾಗಿ ಕಂಡಿತು (ಸುರಿವ ಬಂಡಿನೊಳಂದು ರಚಿಸಿ ಪರಿವೇಷವನು).

ದ್ವಿರೇಫಾ = ಭ್ರಮರಾ ॥

14. ವಿಸ್ರಸ್ತಮಂಸಾದಪರೋವಿಲಾಸೀ ।
ರತ್ನಾನುವಿದ್ಧಾಂಗದಕೋಟಿಲಗ್ನಮ್ ॥
ಪ್ರಾಲಂಬಮುತ್ಕೃಷ್ಯ ಯಥಾವಕಾಶಂ ।
ನಿನಾಯ ಸಾಚೀಕೃತ ಚಾರುವಕ್ತ್ರಃ ॥ ೧೪ ॥

ಇನ್ನೋರ್ವ ವಿಲಾಸಿಯು ತನ್ನ ಸುಂದರವಾದ ಮುಖಾರವಿಂದವನ್ನು ಸ್ವಲ್ಪ ಕೊಂಕು ಗೈದು ತನ್ನ ಭುಜದ ಕೊನೆಯನ್ನು ಸೇರಿದ ಸುಮಮಾಲೆಯನ್ನು ಸರಿಪಡಿಸತೊಡಗಿದನು. ಆ ಸುಮಮಾಲೆಯು ರತ್ನಕಾಂತಿಗಳಿಂದ ಹೊಳೆಯುತ್ತಿರುವ ರತ್ನಖಚಿತ ಭುಜಕೀರ್ತಿ ಗಳನ್ನು, ಕೇಯೂರವೆಂಬ ಭುಜದ ಆಭರಣದ ಅಗ್ರಭಾಗದಲ್ಲಿ ಸೇರಿಹೋಗಿತ್ತು (ಭುಜ ಗಳತ್ತ ಸುಮಮಾಲೆ ತೊಡರಿ ನಿಲಲು). ಆ ರಸಿಕನೃಪನು ತನ್ನ ಮೊದಲಿನ ಸ್ಥಾನಕ್ಕೆ ಸುಮ ಮಾಲೆಯು ಬರುವಂತೆ ತನ್ನ ಮೊಗವನ್ನು ಓರೆಯಾಗಿ ತಿರುಗಿಸಿ ಮೇಲೇರಿಸುತ್ತಿದ್ದನು (ತನ್ನ ಸೊಬಗಿನ ಮೊಗವ ಕೊಂಕುಗೈದು).

ಅನ್ವಯ :–ಅಪರೋವಿಲಾಸೀ ಸಾಚೀಕೃತ ಚಾರುವಕ್ತ್ರಃ ಹಸ್ತಾತ್ ವಿಸ್ರಸ್ತಂ ರತ್ನಾನು ವಿದ್ಧಾಂಗದಕೋಟಿಲಗ್ನಮ್ ಪ್ರಾಲಂಬಮ್ ಉತ್ಕೃಷ್ಯ ಯಥಾವಕಾಶಂ ನಿನಾಯ ॥

**15. ಆಕುಂಚಿತಾಗ್ರಾಂಗುಲಿನಾ ತತೋಽನ್ಯಃ ।**
**ಕಿಂಚಿತ್ಸಮಾವರ್ಜಿತನೇತ್ರಶೋಭಃ ॥**
**ತಿರ್ಯಗ್ವಿಸಂಸರ್ಪಿನಖಪ್ರಭೇಣ ।**
**ಪಾದೇನ ಹೈಮಂ ವಿಲಿಲೇಖ ಪೀಠಮ್ ॥ ೧೫ ॥**

ಇನ್ನೋರ್ವ ಸೊಬಗುಪಡೆದ ಅರಸುಕುಮಾರನು ತನ್ನ ಚೆಲುಗಣ್ಣುಗಳನ್ನು ಹಿಂದಕ್ಕೆ ತಿರುಗಿಸಿ ಚಿನ್ನದಿಂದ ರಚಿತವಾದ, ಸ್ವರ್ಣಮಯವಾದ ಕಾಲುಪೀಠವನ್ನು, ತನ್ನ ಕಾಲನ್ನು ಸ್ವಲ್ಪ ಸಂಕುಚಿಸಿ ತನ್ನ ಕಾಲ ಬೆರಳುಗಳಿಂದ ಮೆಲ್ಲನೆ ಏನನ್ನೋ ಬರೆಯುತ್ತಿದ್ದನು. ಹೀಗೆ ಬರೆಯುತ್ತಿರುವಾಗ ತನ್ನ ಕಾಲುಬೆರಳುಗಳನ್ನು ಒಂದಿನಿಸು ಕೊಂಕುಗೈದನು. ಆಗ ಕಾಲ ಬೆರಳಿನ ಉಗುರುಗಳ ಕೆಂಪಾದ ಕಾಂತಿ (ಬೆಳಕು) ಹಿಂದಿರುಗಿ ಕವಿದಂತೆ ಕಂಡಿತು (ಕೇಸುಗುರ ಕೆಂಬೆಳಗು ಹಿಂದಿರುಗಿ ಕವಿದುದು). ಆ ರಾಜಕನ್ಯೆಯ ಲಕ್ಷ್ಯವನ್ನು ತನ್ನೆಡೆಗೆ ಸೆಳೆವಂತೆ ಈ ತೆರನಾದ ಸಮಯೋಚಿತವಾದ ಚೇಷ್ಟೆಗಳನ್ನು ಮಾಡಿದನು. ಸಾಮಾನ್ಯವಾಗಿ ಸ್ತ್ರೀಯರು ಹೆಚ್ಚಾಗಿ ಕನ್ಯೆಯರು ತಬ್ಬಿಬ್ಬಾದಾಗ ಉತ್ತರಿಸದೆ ಮೌನವಾಗಿ ಕಾಲುಬೆರಳು ಗಳಿಂದ ನೆಲವನ್ನು ಗೀಚುತ್ತಾ ಅಧೋಮುಖರಾಗಿ ನಿಲ್ಲುವುದುಂಟು.

ಅನ್ವಯ :—ತತೋಽನ್ಯಃ ಕಿಂಚಿತ್ಸಮಾವರ್ಜಿತನೇತ್ರಶೋಭಃ ಆಕುಂಚಿತಾಗ್ರಾಂಗುಲಿನಾ ತಿರ್ಯಗ್ವಿಸರ್ಪಿನಖಪ್ರಭೇಣ ಪಾದೇನ ಹೈಮಂ ಪೀಠಂ ವಿಲಿಲೇಖ ॥

**16. ನಿವೇಶ್ಯ ವಾಮಂ ಭುಜಮಾಸನಾರ್ಧೇ ।**
**ತತ್ಸನ್ನಿವೇಶಾದಧಿಕೋನ್ನತಾಂಸಃ ॥**
**ಕಶ್ಚಿತ್ ನಿವೃತ್ತತ್ರಿಕಭಿನ್ನಹಾರಃ ।**
**ಸುಹೃತ್ಸಮಾಭಾಷಣತತ್ಪರೋಽಭೂತ್ ॥ ೧೬ ॥**

ಇನ್ನೊಬ್ಬ ರಮಣೀಯ ವೇಷಧರನಾದ ರಾಜಕುಮಾರನು ತನ್ನ ಒರಗುದಿಂಬಿನಲ್ಲಿ ಒರಗಿ ಕುಳಿತು ತನ್ನ ಎಡತೋಳನ್ನು ಆಸನದ ಮೇಲೆ ಊರುತ್ತ ಬೆನ್ನನ್ನು ತಿರುಗಿಸುತ್ತ ಹೆಗಲನ್ನು ತುಸು ಎತ್ತರಿಸಿದನು (ಹೆಗಲು ನಸುನಿಮಿರಿದಂತಿರಲೊರುವನವನಿಪನು). ಆಗ ಅವನ ಕಂಠದಲ್ಲಿ ಸುಮಮಾಲೆಯು ಕೆಳಕ್ಕೆ ಸರಿಯಿತು. ಬೆನ್ನೆಲುಬಿನ ಮತ್ತು ಸೊಂಟದ ಕೆಳಭಾಗಕ್ಕೆ ಹಾರವು ಜೋಲಾಡಿ ಕೆಳಕ್ಕೆ ಸರಿಯಿತು. ಆ ಬಳಿಕ ಆ ಭೂಪನು (ಅವನಿಪನು) ತನ್ನ ದೇಹವನ್ನು ನಸುಮುರಿದು ತನ್ನ ಎಡಭಾಗದಲ್ಲಿ ಕುಳಿತಿರುವ ಇನ್ನೋರ್ವ ರಾಜಕುಮಾರನನ್ನು ಮೆಲ್ಲನೆ ನುಡಿಯಿಸಿದನು. ಮೆಲ್ಲನೆ ಮಾತನಾಡತೊಡಗಿದನು.

ಅನ್ವಯ :—ಕಶ್ಚಿತ್ ವಾಮಂ ಭುಜಮ್ ಆಸನಾರ್ಧೇ ನಿವೇಶ್ಯ ತತ್ಸನ್ನಿವೇಶಾತ್, ಅಧಿಕೋನ್ನತಾಂಸಃ ನಿವೃತ್ತತ್ರಿಕಭಿನ್ನಹಾರಃ ಸುಹೃತ್ಸಮಾಭಾಷಣತತ್ಪರಃ ಅಭೂತ್ ॥

**17. ವಿಲಾಸಿನೀವಿಭ್ರಮದಂತಪತ್ರಂ ।**
**ಆಪಾಂಡುರಂ ಕೇತಕಬರ್ಹಮನ್ಯಃ ॥**
**ಪ್ರಿಯಾನಿತಂಬೋಚಿತಸನ್ನಿವೇಶೈಃ ।**
**ವಿಪಾಟಯಾಮಾಸ ಯುವಾ ನಖಾಗ್ರೈಃ । ॥ ೧೭ ॥**

ಆ ವಿಲಾಸಿನಿಯು, ಮತ್ತಗಜಗಾಮಿನಿಯು, ಕಾಮನ ಅರಗಿಣಿಯು ಚೆಲುವಾದ ಕರ್ಣಗಳಿಗೆ ಆಭರಣವಾಗಿ ರಚಿಸಲಿರುವ ಬಿಳಿಯ ಕೇದಗೆಯನ್ನು ಕೈಯಲ್ಲಿ ತೆಗೆದುಕೊಂಡು ಅದನ್ನೇ ಪ್ರೀತಿಸುವಂತೆ ನೋಡುತ್ತಲಿದ್ದನು (ಪದಪ್ರಗಾತಿಯುದೊಂದುಪಸದನಕೆ ಸಲುವೊಂದು). ಪೆರತೋರ್ವ ರಾಜಕುಲಮೌಳಿಯು, ತನ್ನ ಪ್ರಿಯೆಯು ನಿತಂಬದಲ್ಲಿ ಊರತಕ್ಕ ಸೆಳ್ಳುಗುರಿನಿಂದ, ಬಿಳಿಯ ಕೇದಗೆಯನ್ನೇ ಸೀಳುಸೀಳಾಗಿ ಸೀಳಲು ಆರಂಭಿಸಿದನು. ಆ ಬಿಳಿಯ ಕೇದಗೆಯನ್ನು ಸುಂದರ ವದನೆಯರು ತಮ್ಮ ಕರ್ಣಾಭರಣವಾಗಿ ಉಪಯೋಗಿಸಿ ತಮ್ಮ ವೈಯಾರಕ್ಕೆ ಕಳೆಯೇರಿಸುವರು.

**18. ಕುಶೇಶಯಾ ತಾಮ್ರತಲೇನ ಕಶ್ಚಿತ್ ।**
**ಕರೇಣ ರೇಖಾಧ್ವಜಲಾಂಛನೇನ ॥**
**ರತ್ನಾಂಗುಲೀಯಪ್ರಭಯಾನುವಿದ್ಧಾನ್ ।**
**ಉದೀರಯಾಮಾಸ ಸಲೀಲಮಕ್ಷಾನ್ ॥ ೧೮ ॥**

ಇನ್ನೋರ್ವ ನವತರುಣನು ಪಗಡೆಯನ್ನಾಡುವಂತೆ ಪಗಡೆಯ ದಾಳವನ್ನು ಎಸೆದನು. ಆತನ ಅಂಗೈಯು ಹೊಳೆಯುವ ಶುಭಲಕ್ಷಣದ ಧ್ವಜರೇಖೆಯಿಂದ ಮೆರೆಯುತ್ತ, ಶುಭ್ರವಾದ ರತ್ನದ ಉಂಗುರವನ್ನು ಧರಿಸಿದ ಬೆರಳುಗಳ ಕಾಂತಿಯಿಂದ ವಿಜೃಂಭಿಸುತ್ತಲಿತ್ತು. ಕ್ರೀಡಾಸಕ್ತನಾದ ಆ ಯುವಕನು ಪಗಡೆಯ ದಾಳವನ್ನು ಕೈಯಲ್ಲಿ ಧರಿಸಿದಾಗ ಆ ದಾಳಗಳು, ಉಂಗುರದ ವಜ್ರ ಮತ್ತು ರತ್ನಪ್ರಭೆಯಿಂದ ಪ್ರಕಾಶಮಾನವಾಗಿ ತೋರಿದುವು. ಹೀಗೆ ಮನೋಹರವಾಗಿ ಕಾಣುವ ದಾಳಗಳನ್ನು ಪಗಡೆಯಾಡುವ ಮೋಡಿಯಲ್ಲಿ ಎಸೆಯುತ್ತಲಿದ್ದನು (ಶುಭ್ರರತ್ನಾಂಗುಲಿಯ ಪ್ರಭೆಯ ಸಂಗತಿಯು).

**19. ಕಶ್ಚಿದ್ಯಥಾಭಾಗಮವಸ್ಥಿತೋಽಪಿ ।**
**ಸ್ವಸಂನಿವೇಶಾತ್ ವ್ಯತಿಲಂಘಿನೀವ ॥**
**ವಜ್ರಾಂಶುಗರ್ಭಾಂಗುಲಿರಂಧ್ರಮೇಕಂ ।**
**ವ್ಯಾಪಾರಯಾಮಾಸ ಕರಂ ಕಿರೀಟೇ ॥ ೧೯ ॥**

ಪೆರತೋರ್ವ ಅರಸುಕುವರನು ತನ್ನ ಓರೆಯಾದ ವಜ್ರಮಕುಟವನ್ನು ತನ್ನ ಯಥಾಸ್ಥಾನವಲ್ಲಿರಿಸಲು ಯತ್ನಿಸುವಂತೆ ಕೈಯಿಂದ ಓಸರಿಸಿದನು (ಓರಣದೊಳೊಪ್ಪಿದುದ ನೋರೆವೋಯಿತ್ತೆಂದು). ವಜ್ರ ಮತ್ತು ನವರತ್ನಗಳಿಂದ ರಚಿಸಿರುವ ಆ ರಾಜಮುಕುಟದ ಕಿರಣಕಾಂತಿ ಬೆರಳೆಡೆಯಿಂದ ತೂರಿಬರುತ್ತಿತ್ತು. ಆಗ ಝಗಝಗಿಸುವ ವಜ್ರ ಹಾಗೂ ನವರತ್ನಗಳ ಕಾಂತಿಪುಂಜದಿಂದ ಬೆರಳ ಮಧ್ಯದ ಎಡೆಯು ಪೂರ್ಣವಾಗಿ ಪ್ರಕಾಶದಿಂದಲೇ ತುಂಬಿದಂತೆ ತೋರಿತು. ಹೀಗೆ ತನ್ನ ಮುಕುಟವನ್ನು ಕೈಯಿಂದ ಸರಿಪಡಿಸುವುದರಲ್ಲಿ ತಲ್ಲೀನನಾದನು, ಆ ನವಯುವಕನು.

**20. ತತೋ ನೃಪಾಣಾಂ ಶ್ರುತವೃತ್ತವಂಶಾ ।**
**ಪುಂವತ್ಪ್ರಗಲ್ಭಾ ಪ್ರತಿಹಾರರಕ್ಷೀ ॥**

**ಪ್ರಾಕ್ ಸಂನಿಕರ್ಷಂ ಮಗಧೇಶ್ವರಸ್ಯ ।**
**ನೀತ್ವಾ ಕುಮಾರೀಮವದತ್ಸುನಂದಾ** || ೨೦ ||

ಸ್ವಯಂವರದ ಗಳಿಗೆಯು ಸಮೀಪಿಸಿತು. ಭಾವೀಪತಿಯ ಆಯ್ಕೆಗಾಗಿ ಕೈಯಲ್ಲಿ ಪುಷ್ಪ ಮಾಲಿಕೆಯನ್ನು ಹಿಡಿದು ರಾಜಕುಮಾರಿಯು ನಿಂತಿದ್ದಳು. ಆ ಸೊಬಗಿನ ಕಣಿಯನ್ನು ರಾಜಸಭೆಗೆ ಅಂತಃಪುರದ ಪ್ರತೀಹಾರಿಯಾದ ಸುನಂದೆಯು ಕರೆದುತಂದಳು (ದೌವಾರಿಕೆ, ಅಂತಃಪುರದ ಬಾಗಿಲು ಕಾಯುವವಳು). ಆ ಸುನಂದೆಯು ಪುರುಷರಂತೆ ಧೈರ್ಯಶಾಲಿ, ವಾಗ್ವಿಭವದಿಂದ ಮೆರೆಯುತ್ತ (ಪುರುಷರೊಲು ವಾಗ್ವಿಭವವೆಸೆಯುವವಳು) ಭಾರತದ ಛಪ್ಪನ್ನಾರುದೇಶಗಳ ರಾಜಮಹಾರಾಜರುಗಳ ದಿವ್ಯಚರಿತ್ರೆಗಳನ್ನು ಬಲ್ಲವಳು. ಅವರ ವಂಶಾನುಕ್ರಮ, ಅವರ ವೀರ್ಯ, ಪ್ರತಾಪ, ಚಾರುಕೀರ್ತಿ, ದಿಗ್ವಿಜಯ ಮೊದಲಾದ ಸಮಸ್ತ ವಿಚಾರಗಳನ್ನು ಅರಿತವಳು. ಆ ಮಹಾಸತಿಯನ್ನು ಸುನಂದೆಯು ಮಗಧ ನರೇಶನ ಬಳಿಗೆ ಕರೆದು ಹೀಗೆಂದಳು.

**21. ಅಸೌ ಶರಣ್ಯಃ ಶರಣೋನ್ಮುಖಾನಾಂ ।**
**ಅಗಾಧಸತ್ತ್ವೋ ಮಗಧಪ್ರತಿಷ್ಠಃ ॥**
**ರಾಜಾ ಪ್ರಜಾರಂಜನಲಬ್ಧವರ್ಣಃ ।**
**ಪರಂತಪೋ ನಾಮ ಯಥಾರ್ಥನಾಮಾ** || ೨೧ ||

ಹೇ ರಾಜಕುಮಾರಿ, ಇತ್ತ ನೋಡು. ಈತನು ಶರಣಜನರಕ್ಷಕನಾದ ಮಗಧ ನರೇಶನು, ಅಗಾಧಸತ್ವನು, ಪ್ರಜಾರಂಜಕನು, ಪ್ರಜೆಗಳ ಪ್ರೀತಿಯನ್ನು ಸಂಪಾದಿಸಿರುವ ರಾಜನು (ನೃಪನಿವನು ಜನಮನೋರಂಜನವಿಚಕ್ಷಣನು). ಪರಂತಪನೆಂಬ ಹೆಸರುಳ್ಳ ಈತನು ತನ್ನ ಹೆಸರಿಗೆ ತಕ್ಕಂತೆ ಮಹಾಪ್ರತಾಪಶಾಲಿಯಾದ ಶತ್ರುಜನಶಿಕ್ಷಕನು. ಗಂಭೀರಸ್ವಭಾವದವನು, ಗುರುಜನರಲ್ಲಿ ಭಕ್ತಿವಿನಯದಿಂದ ನಡೆವ ಪರಮಧಾರ್ಮಿಕನಾದ ಅವನೀಶ್ವರನು. ಈತನು ಮಗಧಸಾಮ್ರಾಜ್ಯದ ಒಡೆಯನು. ಜನರ ಆಳ್ವಿಕೆಯಲ್ಲಿ ವಿಚಕ್ಷಣನು, ಕಾರ್ಯ ವಿವೇಚನೆಯಲ್ಲಿ ಚಾಣಾಕ್ಷನು, ಶತ್ರುದಮನಾದಿ ಕಾರ್ಯಗಳಲ್ಲಿ ಅಗ್ರಗಣ್ಯನು, ಪರಮ ಪ್ರತಾಪಿ.

ಶರಣೋನ್ಮುಖಾನಾಂ = ಶರಣಾರ್ಥಿನಾಂ—ಶರಣ್ಯಂ = ಶರಣೇ ರಕ್ಷಣೇ ಸಾಧುಃ—ಇತಿ ಯತ್ ಪ್ರತ್ಯಯಃ—ಶರಣಂ ಭವಿತುಮರ್ಹಃ ಶರಣ್ಯ ಇತಿ—ಶರಣೋನ್ಮುಖಾನಾಂ = ಶರಣೇ ಉನ್ಮುಖಾ ಶರಣಾರ್ಥಿನಃ ಇತ್ಯರ್ಥಃ ॥

**22. ಕಾಮಂ ನೃಪಾಃ ಸಂತು ಸಹಸ್ರಶೋಽನ್ಯೇ ।**
**ರಾಜನ್ವತೀಮಾಹುರನೇನ ಭೂಮಿಮ್ ॥**
**ನಕ್ಷತ್ರತಾರಾಗ್ರಹಸಂಕುಲಾಪಿ ।**
**ಜ್ಯೋತಿಷ್ಮತೀ ಚಂದ್ರಮಸೈವ ರಾತ್ರಿಃ** || ೨೨ ||

ಸುನಂದೆ ಮುಂದುವರಿಸುತ್ತ ನುಡಿದಳು : "ಹೇ ರಾಜಕನ್ಯೆ, ಈ ಧರೆಯು ಸಹಸ್ರಾರು ಮಂದಿ ರಾಜರಿಂದ, ರಾಜವಂಶಗಳಿಂದ ಆಳಲ್ಪಡುತ್ತಿದ್ದರೂ, ಈತನು ರಾಜವಂಶ

ಭೂಷಣನು, ತಿಲಕಪ್ರಾಯನು. ರಾತ್ರಿಕಾಲದಲ್ಲಿ ಲೆಕ್ಕವಿಲ್ಲದಷ್ಟು ತಾರೆಗಳು ಮಿನುಗುತ್ತಿದ್ದರೂ, ಗ್ರಹಗಳು ಜ್ಯೋತಿರ್ಲೋಕದಲ್ಲಿ ಬೆಳಗುತ್ತಲಿದ್ದರೂ ಕತ್ತಲೆಯನ್ನು ದೂರ ಸರಿಸಲು ಚಂದ್ರಮನಿಗಲ್ಲದೆ ಇನ್ನಾರಿಂದ ಸಾಧ್ಯ ? ಲೆಕ್ಕವಿಲ್ಲದಷ್ಟು ಜ್ಯೋತಿಗಳು (ತಾರೆಗಳು) ಬಾನಲ್ಲಿ ಬೆಳಗುತ್ತಿದ್ದರೂ ನಿಶೆಯಾಯ್ತು ಶಶಿಯಿಂದ ಜ್ಯೋತಿಷ್ಮತಿ ಎನುವರು. ರಾತ್ರಿಯು ಹಗಲಾಗುವುದು ಚಂದ್ರಮನಿಂದ ಅಲ್ಲವೆ ? ಅಂತೆಯೇ ಈತನಿಂದ ಆ ರಾಜಾನ್ವಯವು ವೈಭವದ ಶಿಖರಕ್ಕೇರಿತು.

ರಾಜನ್ವತೀ = ರಾಜಾ ಅಸ್ಯಾಃ ವಿದ್ಯತೇ ಇತಿ ॥

**23. ಕ್ರಿಯಾಪ್ರಬಂಧಾದಯಮಧ್ವರಾಣಾಂ ।**
**ಅಜಸ್ರಮಾಹೂತ ಸಹಸ್ರನೇತ್ರಃ ॥**
**ಶಚ್ಯಾಶ್ಚಿರಂ ಪಾಂಡುಕಪೋಲಲಂಬಾನ್ ।**
**ಮಂದಾರಶೂನ್ಯಾನ್ ಅಲಕಾಂಶ್ಚಕಾರ ॥ ೨೩ ॥**

ಆ ಪರಂತಪ ಭೂಕಾಂತನು ತಾನು ಯಾವಾಗಲೂ ಅಶ್ವಮೇಧಾದಿ ಯಜ್ಞಯಾಗಾದಿಗಳಲ್ಲಿ ಕಾಲಕಳೆಯುತ್ತ ಸಹಸ್ರಾಕ್ಷನಾದ ಇಂದ್ರನೇ ಮೊದಲಾದ ದೇವಾದಿದೇವತೆಗಳನ್ನು ಅಷ್ಟದಿಕ್ಪಾಲಕರನ್ನು ಹವಿಸನ್ನು ಪಡೆಯುವಂತೆ ಸ್ವಾಗತಿಸುತ್ತಿದ್ದನು. ಆ ದೇವಾದಿ ದೇವತೆಗಳು ತಾವು ಸ್ವತಃ ಪ್ರತ್ಯಕ್ಷರಾಗಿ ಹವಿರ್ಭಾಗಗಳನ್ನು ಪಡೆಯುತ್ತಿದ್ದರು. ಇದರಿಂದ ಇಂದ್ರದರ್ಶನವಿಲ್ಲದೆ ವಂಚಿತಳಾದ ಶಚೀದೇವಿಯು ವಿರಹವೇದನೆಯಿಂದ ಪರಿತಪಿಸುವಂತಾಯಿತು. ತತ್ಪರಿಣಾಮವಾಗಿ ಇಂದ್ರಾಣಿಯು ತನ್ನ ತಲೆಕೂದಲಿನಲ್ಲಿ ಮಂದಾರ ಪುಷ್ಪವನ್ನು ಅಲಂಕರಿಸದೆ ಇರುತ್ತಿದ್ದಳು. ಶಚೀದೇವಿಯ ಕೆಂಪಾದ ಕಪೋಲಗಳು ಪಾಂಡುವರ್ಣ ತಳೆದುವು (ಶಚಿಯು ಬೆಳ್ಗೆನ್ನೆಗಿಳಿವಲಕದೊಳಗೆಸಗುವವನು). ಅವಳ ಬಿಳಿಯ ಕಪೋಲಗಳು ಅಲಕಾದಿ ಅಲಂಕಾರಶೂನ್ಯವಾಗಿದ್ದುವು. ಇಂದ್ರದರ್ಶನಾಕಾಂಕ್ಷಿತಳಾಗಿ ಆ ದೇವಿಯು ಶೃಂಗಾರದಲ್ಲಿ ಅಲಕ್ಷತೆಯನ್ನು ತೋರಿದಳು.

ಕ್ರಿಯಾಪ್ರಬಂಧಾತ್ = ಯಜ್ಞೋಪಕಾರ್ಯಗಳು, ಅಜಸ್ರಮ್ =ನಿತ್ಯಮ್ ॥

**24. ಅನೇನ ಚೇದಿಚ್ಛಸಿ ಗೃಹ್ಯಮಾಣಂ ।**
**ಪಾಣಿಂ ವರೇಣ್ಯೇನ ಕುರುಪ್ರವೇಶೇ ॥**
**ಪ್ರಾಸಾದವಾತಾಯನಸಂಶ್ರಿತಾನಾಂ ।**
**ನೇತ್ರೋತ್ಸವಂ ಪುಷ್ಪಪುರಾಂಗನಾನಾಮ್ ॥ ೨೪ ॥**

ಎಲೆ ಮಹಾನುಭಾವಳೆ, ನೀನು ಈತನನ್ನು ವರಿಸಲು ಬಯಸುವುದಾದರೆ ಈ ವರಣೀಯನು, ಶ್ರೇಷ್ಠರಾದವರಲ್ಲಿ ಅತ್ಯಂತ ಯೋಗ್ಯನು. ಈತನನ್ನು ಪಾಣಿಗ್ರಹಣ ಮಾಡಿಕೊಂಡು ನೀನು ಈತನೊಡನೆ ಈತನ ರಾಜಧಾನಿಯಾದ ಪುಷ್ಪಪುರವನ್ನು (ಪಾಟಲೀಪುತ್ರ ಮಹಾನಗರವನ್ನು) ಪ್ರವೇಶಿಸಿದರೆ, ಆ ನಗರದ ಪುರಾಂಗನೆಯರ ಅಕ್ಷಿಗಳಿಗೆ ಒಳ್ಳೆಯ ಹಬ್ಬವನ್ನುಂಟುಮಾಡುವೆ. ಆ ನಾಗರಿಕ ಸ್ತ್ರೀಯರು ಅವರ ಉಪ್ಪರಿಗೆಯಲ್ಲಿ ಕುಳಿತು (ಪ್ರಾಸಾದಗಳಲ್ಲಿ, ಹರ್ಮ್ಯಗಳಲ್ಲಿ) ಗವಾಕ್ಷಿಗಳ ಮೂಲಕ ನಗರವಹಗುವ ನಿನ್ನನ್ನು

ನೋಡಿ ಆನಂದಿಸುವರು. ಅವರ ನಯನಗಳಿಗೆ ನೀನು ನಯನೋತ್ಸವವನ್ನು ಒದಗಿಸುವೆ. ಅವರೆಲ್ಲರ ಅಕ್ಷಿಗಳಿಗೆ ಪರ್ವಸಿರಿಯನ್ನೊದಗಿಸುವೆ (ಅಂಗನೆಯರಕ್ಷಿಗಳಿಗೆ ಒದಗಿಪೆ ಪರ್ವಸಿರಿಯಂ).

ಅನ್ವಯ :—ಅನೇನ ವರೇಣ್ಯೇನ ಗೃಹ್ಯಮಾಣಾಂ ಪಾಣಿಂ ಇಚ್ಛಸಿ ಚೇತ್ ಪ್ರವೇಶೇ ಪ್ರಾಸಾದವಾತಾಯನಸಂಶ್ರಿತಾನಾಂ ಪುಷ್ಪಪುರಾಂಗನಾನಾಂ ನೇತ್ರೋತ್ಸವಂ ಕುರು.

ವರೇಣ್ಯಮ್ = ವರಣೀಯಮ್—ಪುಷ್ಪಪುರಾಂಗನಾನಾಂ = ಪಾಟಲೀಪುರಾಂಗನಾನಾಮ್॥ ನೇತ್ರೋತ್ಸವಂ ಕುರು = ಕಣ್ಣಿಗೆ ಹಬ್ಬವನ್ನುಂಟುಮಾಡು.

**25. ಏವಂ ತಯೋಕ್ತೇ ತಮವೇಕ್ಷ್ಯ ಕಿಂಚಿತ್ ।**
**ವಿಸ್ರಂಸಿ ದೂರ್ವಾಂಕಮಧೂಕಮಾಲಾ ॥**
**ಋಜುಪ್ರಮಾಣಕ್ರಿಯಯೈವ ತನ್ವೀ ।**
**ಪ್ರತ್ಯಾದಿದೇಶೈನಮಭಾಷಮಾಣಾ ॥ ೨೫ ॥**

ದೌವಾರಿಕಿ (ಪಡಿಯರತಿ, ಸಖಿ) ಸುನಂದೆಯು ಈ ತೆರನಾಗಿ ನುಡಿಯಲು ಇಂದುಮತಿ ಒಮ್ಮೆ ಕಣ್ತೆರೆದು ಆ ನೃಪತಿಯ ಕಡೆಗೆ ನೋಡಿದಳು. ಕೂಡಲೇ ಭಾವಶೂನ್ಯಳಾಗಿ ತಲೆಯನ್ನು ತುಸು ನಮಿಸಿದಂತೆ ತಗ್ಗಿಸಿ ನೆಟ್ಟಗೆ ಮುಂದಕ್ಕೆ ನಡೆದಳು. ಅವಳು ಮುಂದಕ್ಕೆ ಅಡಿಯಿಟ್ಟಾಗ ಅವಳು ತನ್ನ ಕೈಯಲ್ಲಿದ್ದ ಪುಷ್ಪಮಾಲಿಕೆಯನ್ನು ಒಂದು ಪಾರ್ಶ್ವಕ್ಕೆ ತೊನೆಯಿಸಿ ಮುಂದಕ್ಕೆ ಅಡಿಯಿಟ್ಟಳು (ದೂರ್ವೆಯೊಡವೆರೆದಿರುವ ಗುಡಪುಷ್ಪ ಮಾಲೆಯನು ಒಂದಿನಿಸು ತೊನೆಯಿಸುತ). ಅವಳ ಕೈಯಲ್ಲಿ ಧರಿಸಿದ ವರಮಾಲಿಕೆಯು ದೂರ್ವೆ, ಗುಡಪುಷ್ಪ, ಮಧೂಕಪುಷ್ಪಗಳಿಂದ ಕಟ್ಟಿರುವ ಶ್ರೇಷ್ಠವಾದ ಪುಷ್ಪಮಾಲಿಕೆ, ಅವಳು ಏನನ್ನೂ ನುಡಿಯದೆ ಮುಂದಕ್ಕೆ ನಡೆದಳು.

ಮಧೂಕಮಾಲಾ = ಗುಡಪುಷ್ಪಮಾಲಾ ಯಸ್ಯಾಃ ಸಾ—ಋಜ್ವ್ಯಾ=ಭಾವಶೂನ್ಯಯಾ ॥

**26. ತಾಂ ಸೈವ ವೇತ್ರಗ್ರಹಣೇ ನಿಯುಕ್ತಾ ।**
**ರಾಜಾಂತರಂ ರಾಜಸುತಾಂ ನಿನಾಯ ॥**
**ಸಮೀರಣೋತ್ಥೇವ ತರಂಗಲೇಖಾ ।**
**ಪದ್ಮಾಂತರಂ ಮಾನಸರಾಜಹಂಸೀಮ್ ॥ ೨೬ ॥**

ಆ ರಾಜಮಾನಸರಾಜಹಂಸಿಯನ್ನು ಸಖಿ ಸುನಂದೆಯು ಒಬ್ಬ ರಾಜನ ಬಳಿಯಿಂದ ಇನ್ನೊಬ್ಬ ಮಹಾರಾಜನ ಬಳಿಗೆ ಕರೆದುಕೊಂಡು ಹೋದಳು. ಜೋರಾಗಿ ಗಾಳಿಯು ಬೀಸಿದಾಗ ಮಾನಸ ಸರೋವರದ ಜಲರಾಶಿಯಲ್ಲಿ ತೆರೆಗಳು ಏಳುವುವು. ಆ ತೆರೆಯೋಳಿಯಲ್ಲಿ ರಾಜಹಂಸವು ಒಂದು ತಾವರೆಪುಷ್ಪದಿಂದ ಇನ್ನೊಂದು ತಾವರೆಹೂವಿನೆಡೆಗೆ ಬಹಳ ಸಂತಸದಿಂದ ನೀರ ತೆರೆಯಲ್ಲಿ ತೇಲಿಹೋಗಿ ಸೇರುವಂತೆ ಬಹಳ ಮಮತೆಯಿಂದ ಆ ರಾಜಸುತೆಯು ಒಬ್ಬ ರಾಜಪುತ್ರನ ಬಳಿಯಿಂದ ಇನ್ನೊಬ್ಬ ರಾಜಕುಮಾರನ ಬಳಿಗೆ ನಡೆದು ಹೋದಳು (ಗಾಳಿಯೆಬ್ಬಿಸಿದ ತೆರೆಯೋಳಿ ಅರಸಂಚೆಯನು ಪದುಮದಿಂ ಪದುಮದೆಡೆಗೆ ಒಯ್ಯುವೋಲು).

ಉಪಮಾಲಂಕಾರ.

**27.** **ಜಗಾದ ಚೈನಾಮಯಮಂಗನಾಥಃ ।**
**ಸುರಾಂಗನಾಪ್ರಾರ್ಥಿತಯೌವನಶ್ರೀಃ ॥**
**ವಿನೀತನಾಗಃ ಕಿಲ ಸೂತ್ರಕಾರೈಃ ।**
**ಐಂದ್ರಂ ಪದಂ ಭೂಮಿಗತೋಽಪಿ ಭುಂಕ್ತೇ ॥ ೨೭ ॥**

ಹೇ ರಾಜಕನ್ಯೆ, ಹೇ ಲೋಕಮಾನ್ಯೆ, ಈತನು ಅಂಗದೇಶಾಧಿಪತಿಯಾದ ಅಂಗರಾಜನು. ಗಜಶಾಸ್ತ್ರಪಾರಂಗತನು. ಈತನ ಯೌವನಶ್ರೀಗೆ ಅಮರಸ್ತ್ರೀಯರೂ ಮರುಳಾಗಿ ಆತನನ್ನು ಪತಿಯಾಗುವಂತೆ ಪ್ರಾರ್ಥಿಸುವರು (ಅಮರಲೋಕಾಂಗನೆಯು ರಾರಂಗವಟ್ಟವನು ಕಾಮಿಸುವರು). ಈತನ ಸೈನಿಕಬಲವು ಅಪಾರವಾದುದು. ಗಜಶಾಸ್ತ್ರ ಪರಿಣತರು ಈತನ ಗಜಸೇನೆಯಲ್ಲಿರುವ ಕಾಡಾನೆಗಳನ್ನು ಪಳಗಿಸುವರು, ಈತನ ಗಜ ಸೇನೆಯು ಲೋಕಪ್ರಸಿದ್ಧವಾದುದು. ಈ ನರಾಧಿಪನು ಭೂಮಿಯಲ್ಲಿದ್ದು ಇಂದ್ರಪದವಿಯನ್ನು ಅನುಭವಿಸುವ ಮಹಾನ್ ಭಾಗ್ಯಶಾಲಿ. ಈತನನ್ನು ಸೇರಿ ಸುಖಿಯಾಗು, ಹೇ ಮೋಹನೆ.

ಸುರಾಂಗನಾಪ್ರಾರ್ಥಿತಯೌವನಶ್ರೀಃ = ಸುರಾಂಗನಾಭಿಃ ಪ್ರಾರ್ಥಿತಾ ಯೌವನಶ್ರೀಃ ಯಸ್ಯ, ಅಂಗನಾಥೋ = ಅಂಗದೇಶಾಧೀಶ್ವರಃ, ಪ್ರಾರ್ಥಿತಾ = ಕಾಮಿತಾ ॥

**28.** **ಅನೇನ ಪರ್ಯಾಸಯತಾಶ್ರುಬಿಂದೂನ್ ।**
**ಮುಕ್ತಾಫಲಸ್ಥೂಲತಮಾನ್ ಸ್ತನೇಷು ॥**
**ಪ್ರತ್ಯರ್ಪಿತಾಃ ಶತ್ರುವಿಲಾಸಿನೀನಾಂ ।**
**ಉನ್ಮುಚ್ಯ ಸೂತ್ರೇಣ ವಿನೈವ ಹಾರಾಃ ॥ ೨೮ ॥**

ಆ ವೀರಕ್ಷಿತಿಪಾಲನು ಶತ್ರುನೃಪರ ವಿಲಾಸಿನಿಯರಿಗೆ ತೋರಮುತ್ತಿನಂತಿರುವ ಕಂಬನಿಯ ಧಾರೆ ತಮ್ಮ ಘನಸ್ತನಗಳ ಮೇಲೆ ನಿರಂತರ ಸುರಿಸುವಂತೆ ಮಾಡಿರುವನು. ಆ ಪಗೆವೆಂಡಿರು ವೈಧವ್ಯದುಃಖದಿಂದ ಪರಿತಪ್ತರಾಗಿ ಅಳುತ್ತಿರಲು ಮುತ್ತಿನಂತಹ ಮಣಿಗಳನ್ನು ಪೋಣಿಸಿ ಮಾಡಿದ ಹಾರವೋ ಎಂಬಂತೆ ತೋರುವುದು (ತೋರಮುತ್ತಿನೋಲಿರುವ ಕಂಬನಿಯ ಸುರಿಯುವಂತೆ). ಈ ರಾಜಶೇಖರನು ಅವರು ಈ ಹಿಂದೆ ತಮ್ಮ ಕಂಠಪ್ರದೇಶದಲ್ಲಿ ಧರಿಸಿರುವ ಹಾರವನ್ನು ತಾನು ಪಡೆದು ಅವರಿಗೆ ದಾರವಿಲ್ಲದ ಕಣ್ಣೀರ ಮುತ್ತಿನ ಹಾರವನ್ನು ಉಡುಗೊರೆಯಾಗಿ ಇತ್ತನು. ತಮ್ಮ ತಮ್ಮ ಪತಿಯಂದಿರ ವಿನಾಶಕ್ಕಾಗಿ ಆ ಸತೀಮಣಿಗಳು ಶೋಕಾರ್ತರಾಗಿ ಕಂಬನಿಯನ್ನು ಮಿಡಿಯುತ್ತಿರುವರು.

ಅನ್ವಯ :—ಶತ್ರುವಿಲಾಸಿನೀನಾಂ ಸ್ತನೇಷು ಮುಕ್ತಾಫಲಸ್ಥೂಲತಮಾನ್ ಸ್ತನೇಷು ಮುಕ್ತಾಫಲಸ್ಥೂಲತಮಾನ್ ಅಶ್ರುಬಿಂದೂನ್ ಪರ್ಯಾಸಯತಾ ಅನೇನ ಉನ್ಮುಚ್ಯ ಸೂತ್ರೇಣ ವಿನಾ ಹಾರಾ ಏವ ಪ್ರತ್ಯರ್ಥಿತಾ ॥ ಭರ್ತೃವಧಾದಿತಿ ಭಾವಃ ॥

**29.** **ನಿಸರ್ಗಭಿನ್ನಾಸ್ಪದಮೇಕಸಂಸ್ಥಂ ।**
**ಅಸ್ಮಿನ್ ದ್ವಯಂ ಶ್ರೀಶ್ಚ ಸರಸ್ವತೀ ಚ ॥**
**ಕಾಂತ್ಯಾಗಿರಾ ಸೂನೃತಯಾ ಚ ಯೋಗ್ಯಾ ।**
**ತ್ವಮೇವ ಕಲ್ಯಾಣಿ ! ತಯೋಸ್ತೃತೀಯಾ ॥ ೨೯ ॥**

ಎಲೌ ಮಂದಸ್ಮಿತೆ, ಎಲೌ ಲಲನಾಮಣಿ, ಈ ರಾಜೇಂದ್ರನಲ್ಲಿ ಒಂದೆಡೆಯಲ್ಲಿ ಎಲ್ಲೂ ನೆಲಸದ ವಿದ್ಯಾಧಿದೇವತೆಯಾದ ಸರಸ್ವತಿಯೂ, ಐಶ್ವರ್ಯದ ಅಧಿದೇವತೆಯಾದ ಶ್ರೀದೇವಿಯೂ (ಲಕ್ಷ್ಮೀದೇವಿ) ಒಂದೆಡೆ ಸೇರಿರುವರು. ಎಲೌ ಭಾಗ್ಯವಂತಳೆ, ಇವನನ್ನು ಸೇರಿ ಆ ಇಬ್ಬರು ಮಹಿಳೆಯರಿಗೆ ನೀನು ಸೇರಿ ಮೂರನೆಯವಳಾಗು. ಸುಗುಣಶೀಲಳಾದ ಎಲೌ ಕಲ್ಯಾಣಿ, ನೀನು ಅವರ ಜೊತೆಗಿರಲು ತಕ್ಕವಳು. ನಿನ್ನ ಚೆಲುವಿನಿಂದ ಮತ್ತು ಸರಸವಾದ ಮಾತುಗಳಿಂದ ಅವರನ್ನು ಸಂತೋಷಪಡಿಸು (ತಕ್ಕವಳು ನೀನವರ ಜೊತೆ ಗಿರಲು ಕಲ್ಯಾಣಿ ! ಒಳ್ನುಡಿಯಿಂದು ಚೆಲುವಿರುವುದು).

**30. ಅಥಾಂಗರಾಜಾದವತಾರ್ಯ ಚಕ್ಷುಃ ।**
**ಯಾಹೀತಿ ಜನ್ಯಾಮವದತ್ಕುಮಾರೀ ॥**
**ನಾಸೌ ನ ಕಾಮ್ಯೋ ನ ಚ ವೇದ ಸಮ್ಯಕ್ ।**
**ದ್ರಷ್ಟುಂ ನ ಸಾ ಭಿನ್ನರುಚಿರ್ಹಿ ಲೋಕಃ ॥ ೩೦ ॥**

ಅಂಗದೇಶಾಧಿಪತಿಯತ್ತಣಿಂದ ಇಂದುಮತಿಯು ದೃಷ್ಟಿಯನ್ನು ಬೇರೆಡೆಗೆ ಹೊರಳಿಸಿದಳು. ಆ ಕಂದರ್ಪಮಾನಸರಾಜಹಂಸೆ ತನ್ನ ಸಖಿಗೆ ಮುಂದಕ್ಕೆ ತೆರಳೆಂದು ಆಜ್ಞೆಯಿತ್ತು ತಾನು ಮುಂದೆ ನಡೆದಳು. ಸ್ವಯಂವರಕ್ಕೆ ಸ್ವರ್ಧಾಳುಗಳಂತೆ ಆಗಮಿಸಿದ ರಾಜಕುಮಾರರಲ್ಲಿ ಅಂಗನೃಪಾಲನು ವರಣೀಯನೇ, ಆಕೆಯು ಕೈಹಿಡಿಯಲು ಯೋಗ್ಯನೇ. ಅಂತೆಯೇ ಇಂದುಮತಿಯೂ ವಿವೇಕಿಯೇ ದಿಟ. ಆದರೂ ಲೋಕವು ಭಿನ್ನರುಚಿಯದಾಗಿದೆ (ನೃಪನೇನೋ ವರಣೀಯನು, ಅವಳುಂ ವಿವೇಕಿ ದಿಟ, ಆದೊಡೇಂ). ಒಬ್ಬೊಬ್ಬರ ಅಭಿರುಚಿ, ಅಭಿಪ್ರಾಯ ಒಂದೊಂದು ತೆರನಾಗಿದೆ. ಆದುದರಿಂದ ನಾವು ಯಾರನ್ನೂ ದೂರುವಂತಿಲ್ಲ.

ಅರ್ಥಾಂತರನ್ಯಾಸ ಅಲಂಕಾರ.

ಭಿನ್ನರುಚಿರ್ಹಿ ಲೋಕಃ=ಲೋಕೋಜನೋ ಭಿನ್ನರುಚಿರ್ಹಿ=ಆದೊಡೇಂ ಭಿನ್ನರುಚಿ ಲೋಕಮಂಕಟ.

**31. ತತಃಪರಂ ದುಃಪ್ರಸಹಂ ದ್ವಿಷದ್ಭಿಃ ।**
**ನೃಪಂ ನಿಯುಕ್ತಾ ಪ್ರತಿಹಾರ ಭೂಮೌ ॥**
**ನಿದರ್ಶಯಾಮಾಸ ವಿಶೇಷದೃಶ್ಯಂ ।**
**ಇಂದುಂ ನವೋತ್ಥಾನಮಿವೇಂದುಮತ್ಯೈ ॥ ೩೧ ॥**

ಆ ಬಳಿಕ ಅಂತಃಪುರದ ಪ್ರತೀಹಾರಿಯು ಪೆರತೋರ್ವ ಕಮನೀಯರೂಪನಾದ, ಶತ್ರುಗಳಿಗೆ ದುಸ್ಸಹನಾದ ರಾಜಕುಮಾರನನ್ನು ತೋರಿದಳು (ಬಳಿಕ ಪೆರತೊರ್ವನನು ಕಮನೀಯರೂಪನನು). ಆತನು ಆಗತಾನೇ ಉದಯಿಸಿದ ಇನ್ನೊಬ್ಬ ಶಶಿಯಂತೆ (ಚಂದ್ರನಂತೆ) ರೂಪಯೌವನದಿಂದ ರಾರಾಜಿಸುತ್ತ ಸೌಂದರ್ಯದ ಅಧಿದೇವಿಯಂತಿದ್ದ ಇಂದುಮತಿಗೆ ತಕ್ಕವನಾಗಿದ್ದನು.

ಇಂದುಂ ನವೋತ್ಥಾನಂ = ನವಮ್ ಉತ್ಥಾನಂ ಯಸ್ಯ, ವಿಶೇಷೇಣ ದೃಶ್ಯಂ = ದರ್ಶನೀಯಮ್ = ರೂಪವಂತಮಿತ್ಯರ್ಥಃ—ನವೋತ್ಥಾನಂ = ನವೋದಯ ॥

32. ಅವನ್ತಿನಾಥೋಽಯಮುದಗ್ರಬಾಹುಃ ।
ವಿಶಾಲವಕ್ಷಾಸ್ತನುವೃತ್ತಮಧ್ಯಃ ॥
ಆರೋಪ್ಯ ಚಕ್ರಭ್ರಮಮುಷ್ಣತೇಜಾಃ ।
ತ್ವಷ್ಟ್ರೇವ ಯತ್ನೋಲ್ಲಿಖಿತೋ ವಿಭಾತಿ ॥ ೩೨ ॥

“ಹೇ ಸಾತ್ವಿಕಳೆ, ಈತನು ಅವಂತಿರಾಜಸುತನು. ಉದ್ದವಾದ ತೋಳುಗಳಿಂದಲೂ, ಅಗಲವಾದ ಎದೆಯಿಂದಲೂ, ಸಿಂಹದಂತೆ ಸಣ್ಣನೆಯ ನಡುವಿನಿಂದಲೂ ವಿರಾಜಿಸುತ್ತಿರುವ ಗುಡಿವನು (ವೀರದೆಯ ಗಂಡಿವನು ಭೂಪಾಲನು). ಈತನು ಸಾಕ್ಷಾತ್‌ಸೂರ್ಯದೇವನಂತೆ ತೇಜಸ್ವಿ. ಹಿಂದೆ ದೇವಶಿಲ್ಪಿಯಾದ ವಿಶ್ವಕರ್ಮನು (ತ್ವಷ್ಟ್ರವು) ತನ್ನ ಕರ್ಮಶಾಲೆಯಲ್ಲಿ (ಶಿಲ್ಪಶಾಲೆಯಲ್ಲಿ) ಸಾಣೆಗೊಡ್ಡಿದ ಸೂರ್ಯಬಿಂಬದಂತೆ ಕಂಗೊಳಿಸುತ್ತಿರುವನು. ತ್ವಷ್ಟ್ರವು ಸೂರ್ಯಬಿಂಬವನ್ನು ಸಾಣೆಗೊಡ್ಡಿ ಇನ್ನೂ ಸೂರ್ಯನ ಪ್ರಖರತೆಯನ್ನು ತೀವ್ರಗೊಳಿಸಿದನು. ಅಂತಹ ಚಂಡಕಿರಣವಿಭೂಷಿತನಾದ, ತಾಪದಾಯಕನಾದ ಜ್ಯೋತಿರ್ಲೋಕಕ್ಕೆ ಒಡೆಯನಾದ ಸೂರ್ಯದೇವನಂತೆ ಮಹಾನ್ ತೇಜಸ್ವಿಯಾದ. ರೂಪಸಾಮ್ರಾಟನಾದ ಈ ನವತರುಣನನ್ನು ಒಮ್ಮೆ ನೋಡು.

ಉದಗ್ರಬಾಹುಃ=ದೀರ್ಘಬಾಹು, ಕೃಶವರ್ತುಲಮಧ್ಯೋಽಯಂ=ತನುವೃತ್ತಮಧ್ಯಃ=ಮೇದಚ್ಛೇದಕೃಶೋದರವ್ ॥

33. ಅಸ್ಯ ಪ್ರಯಾಣೇಷು ಸಮಗ್ರಶಕ್ತೇಃ ।
ಅಗ್ರೇಸರೈಃ ವಾಜಿಭಿರುತ್ಥಿತಾನಿ ॥
ಕುರ್ವನ್ತಿ ಸಾಮನ್ತಶಿಖಾಮಣೀನಾಂ ।
ಪ್ರಭಾಪ್ರರೋಹಾಸ್ತಮಯಂ ರಜಾಂಸಿ ॥ ೩೩ ॥

ಹೇ ಚಾರುಶೀಲಳೆ, ಸಮಗ್ರಶಕ್ತಿಸಂಪನ್ನನಾದ ಈತನ ದಿಗ್ವಿಜಯಕಾಲದಲ್ಲಿ (ಶಕ್ತಿಸಂಪನ್ನನಾದಿವನ ದಿಗ್ವಿಜಯದೊಳು) ಚತುರಂಗಸೈನ್ಯದ ಮುಂಚೂಣಿಯ ಅಶ್ವಗಳ ಖುರಪುಟದ ಹತಿಯಿಂದ ಎದ್ದ ಕೆಂಧೂಳಿ, ಸಾಮಂತಭೂಭುಜರ (ರಾಜರ) ಮಣಿಮುಕುಟದ ರತ್ನಪ್ರಭೆಯನ್ನು ಮುಸುಕಿ ಅಸ್ತಮಯಗೊಳಿಸುವುದು (ಮಣಿಮುಕುಟರತ್ನರುಚಿಗಸ್ತಮಯವ). ಆ ಸಾಮಂತರಾಜರ ರತ್ನಮುಕುಟಗಳ ಸಾಲಿಂದ ಹೊರಹುವ ಕಿರಣದೋಳಿಗಳನ್ನು ಸಂಪೂರ್ಣವಾಗಿ ಮುಚ್ಚಿಬಿಡುವುದು. ಅವುಗಳನ್ನು ಕಣ್ಮರೆಗೊಳಿಸುವುದು.

ಅನ್ವಯಃ:—ಸಮಗ್ರಶಕ್ತೇರಸ್ಯ ಪ್ರಯಾಣೇಷು ಅಗ್ರೇಸರೈಃ ವಾಜಿಭಿಃ ಉತ್ಥಿತಾನಿ ರಜಾಂಸಿ ಸಾಮನ್ತಶಿಖಾಮಣೀನಾಂ ಪ್ರಭಾಪ್ರರೋಹಾಸ್ತಮಯಂ ಕುರ್ವನ್ತಿ ॥

ಪ್ರಭುಶಕ್ತಿ, ಉತ್ಸಾಹಶಕ್ತಿ, ಮಂತ್ರಶಕ್ತಿ ಇತ್ಯಾದಿ—ಶಕ್ತಿತ್ರಯಸಂಪನ್ನ—ಜೈತ್ರಯಾತ್ರಾ—ತೇಜೋಽಂಕುರನಾಶಂ ಕುರ್ವನ್ತಿ ॥

34. ಅಸೌ ಮಹಾಕಾಲನಿಕೇತನಸ್ಯ ।
ವಸನ್ನದೂರೇ ಕಿಲ ಚಂದ್ರಮೌಲೇಃ ॥

ತಮಿಸ್ರಪಕ್ಷೇऽಪಿ ಸಹಪ್ರಿಯಾಭಿಃ ।
ಜ್ಯೋತ್ಸ್ನಾವತೋ ನಿರ್ವಿಶತಿ ಪ್ರದೋಷಾನ್ ॥ ೩೪ ॥

ಹೇ ಚಾರುಗಾತ್ರಳೆ, ಈ ಮಹೀಪತಿಯು ಮಹಾಕಾಲನೆಂದೇ ಕರೆಯಲ್ಪಡುವ ಚಂದ್ರಮೌಳೀಶ್ವರನು ನೆಲಸಿರುವ ಉಜ್ಜಯಿನೀಕ್ಷೇತ್ರಕ್ಕೆ ಸಮೀಪದಲ್ಲಿದ್ದು (ಸೋಮಶೇಖರ ನೆಲಸಿದೀ ಮಹಾಕಾಳಕತಿ ಸನಿಯದೊಳೆ). ಆ ಮಹಾದೇವನು ತನ್ನ ಉತ್ತಮಾಂಗದಲ್ಲಿ ಧರಿಸಿರುವ ಚಂದ್ರನ ಬೆಳದಿಂಗಳಲ್ಲಿ ಅಂತಃಪುರಸ್ತ್ರೀಜನದೊಂದಿಗೆ ವಿಹರಿಸುವನು. ಈತನ ಭಾಗ್ಯವನ್ನು ನಾನೇನೆಂದು ವರ್ಣಿಸಲಿ. ಈ ಅವಂತೀಶ್ವರನು ಕೃಷ್ಣಪಕ್ಷದ ಕಾರ್ಗತ್ತಲೆಯ ರಾತ್ರಿಯಲ್ಲಿಯೂ ಈತನು ಚಂದ್ರನ ಬೆಳಕನ್ನು ಪಡೆಯುವ ಭಾಗ್ಯಶಾಲಿ. ಅಂತಹ ಕದ್ದಿಂಗಳಲ್ಲಿ ತನ್ನ ಪ್ರಿಯಜನರಾದ ವಿಲಾಸಿನಿಯರೊಂದಿಗೆ ಒಲಿದು ವಿಹರಿಸುತ್ತಾ ಆನಂದಿಸುವನು.

ಅನ್ವಯ :—ಅಸೌ ಮಹಾಕಾಲನಿಕೇತನಸ್ಯ ಚಂದ್ರಮೌಳೇಃ ಅದೂರೇ ಕಿಲ ವಸನ್ ತಮಿಸ್ರಪಕ್ಷೇऽಪಿ ಪ್ರಿಯಾಭಿಸಹಜ್ಯೋತ್ಸ್ನಾವತಃ ಪ್ರದೋಷಾನ್ ನಿರ್ವಿಶತಿ ॥

35. ಅನೇನ ಯೂನಾ ಸಹಪಾರ್ಥಿವೇನ ।
ರಂಭೋರು ಕಚ್ಚಿನ್ಮನಸೋ ರುಚಿಸ್ತೇ ? ॥
ಸಿಪ್ರಾತರಂಗಾನಿಲಕಂಪಿತಾಸು ।
ವಿಹರ್ತುಮುದ್ಯಾನಪರಂಪರಾಸು ॥ ೩೫ ॥

ಹೇ ಮುಗ್ಧೇ, ಹೇ ದಯಾವಂತಳೇ (ಹೇ ರಂಭೋರುವೇ), ಬಾಳೆಯ ದಿಂಡಿನಂತಿರುವ ಊರುದ್ವಯಗಳಿಂದ ಶೋಭೆವಡೆದ ನನ್ನ ಒಡತಿಯೇ, ನೀನು ಈ ಪಾರ್ಥಿವಯುವಕ ಭೂಪನೊಂದಿಗೆ, ಸಿಪ್ರಾನದಿಯ ಬಳಿಯಲ್ಲಿರುವ ನಂದನವನಗಳಲ್ಲಿ ಉದ್ಯಾನಗಳಲ್ಲಿ ಸ್ವಚ್ಛಂದವಾಗಿ ರಮಿಸಲಿರುವೆ (ಸಿಪ್ರೆಯಾ ತೆರೆತೆರೆಯ ತಣ್ಣನೆಯ ಗಾಳಿಯೊಳು, ಒಯ್ಯನೊಯ್ಯನೆ ತೂಗುವ ನಂದನದೊಳು). ಆಗ ನಕ್ಷತ್ರದಂತೆ ಥಳಥಳಿಸುವ ಸಿಪ್ರಾನದಿಯ ಕಡೆಯಿಂದ ತಣ್ಣನೆಯ ಗಾಳಿ ಬೀಸುತ್ತ, ನಿನ್ನ ನುಣ್ಣನೆಯ ತನುವಿಗೆ ಆಮೋದ ವನ್ನೀಯುವುದು. ಆ ಮಾರುತನು ನದಿಯ ಕಡೆಯಿಂದ ಬೀಸುತ್ತ, ನದಿಗಳಲ್ಲಿ ತರಂಗ ಗಳನ್ನು ಎಬ್ಬಿಸುತ್ತಾ, ಒಯ್ಯನೊಯ್ಯನೆ ತೂಗುವ ಉದ್ಯಾನದ ಮರಗಿಡಬಳ್ಳಿಗಳನ್ನು ಕಂಪಿಸುತ್ತಾ ನಿನಗೆ ಸುಖವೀವನು.

ರಂಭೇ = ಕದಲೀಸ್ತಂಭಾವಿವೋರೂ ಯಸ್ಯಾಃ ಸಾ ರಂಭೋರುಸ್ತಸ್ಯಾಃ ಸಂಬೋಧನಮ್ ॥

36. ತಸ್ಮಿನ್ನಭಿದ್ಯೋತಿತ ಬಂಧುಪದ್ಮೇ ।
ಪ್ರತಾಪಸಂಶೋಷಿತ ಶತ್ರುಪಂಕೇ ॥
ಬಬಂಧ ಸಾನೋತ್ತಮ ಸೌಕುಮಾರ್ಯಾ ।
ಕುಮುದ್ವತೀಭಾನುಮತೀವ ಭಾವಮ್ ॥ ೩೬ ॥

ಇಂದುಮತಿಯ ಚಿತ್ತವು ಅವಂತಿದೇಶಾಧಿಪನ ಮೇಲೆ ನೆಲಸಲೇ ಇಲ್ಲ. ಹೇಗೆ ಕುಮುದಪುಷ್ಪವು ಜಗತ್ತನ್ನೇ ಸುಡುವ ಸೂರ್ಯನ ಬಿಸಿಲಿನಿಂದ ಅರಳದೇ ಇರುವುದೋ (ಬಾಂಧವಜನಾಂಬುಜವಿಕಾಸನೋಲ್ಲಾಸನೊಳು) ಸುಕುಮಾರಿಯ ಹೃದಯಕುಮುದವು ಅವನೊಂದಿಗೆ ಹೊಂದಿಸದೇ ಹೋದಳು. ಆಕೆ ಹಿಂದೆಗೆದಳು. ಆ ಅವಂತಿರಾಜಕುವರನು ತನ್ನ ದಿಗ್ವಿಜಯಗಳಿಂದ ಮಿತ್ರಜನರ ಮತ್ತು ಬಾಂಧವಜನರೆಂಬ ತಾವರೆಹೂಗಳನ್ನು ವಿಕಸಿಸುವ ಮನೋಲ್ಲಾಸನು. ಮಹಾನುಭಾವನು. ಶತ್ರುಗಳೆಂಬ ಕೆಸರನ್ನು ಒಣಗಿಸಬಲ್ಲ ಸೂರ್ಯನಂತೆ ಮಹೋಗ್ರಪ್ರತಾಪನು. ಅಂತಹ ಸೂರ್ಯನಂತೆ ಪ್ರಚಂಡತೇಜಸ್ವಿಯನ್ನು ಆ ಕುಮಾರಿ ಒಲ್ಲದೇ ಹೋದಳು. ಅವನ ಮೇಲೆ ತನ್ನ ಮನಸನ್ನು ಕೇಂದ್ರೀಕರಿಸದೆ ಮುಂದುಮುಂದಕೆ ನಡೆದಳು. ನೈದಿಲೆಯು ಕಮಲಬಾಂಧವನಾದ ಸೂರ್ಯನನ್ನು ತಿರಸ್ಕರಿಸುವಂತೆ ತಿರಸ್ಕರಿಸಿದಳು.

**37. ತಾಮಗ್ರತಸ್ತಾಮರಸಾಂತರಾಭಾಂ ।**
**ಅನೂಪರಾಜಸ್ಯ ಗುಣೈರನೂನಾಮ್ ॥**
**ವಿಧಾಯ ಸೃಷ್ಟಿಂ ಲಲಿತಾಂ ವಿಧಾತುಃ ।**
**ಜಗಾದ ಭೂಯಃ ಸುದತೀಂ ಸುನಂದಾ ॥ ೩೭ ॥**

ಅನಂತರ ಸುನಂದೆಯು ಆ ಚಾರುನೇತ್ರೆಯನ್ನು ಆನೂಪದೇಶದ ದೊರೆಯ ಸಮ್ಮುಖಕ್ಕೆ ಕರೆತಂದಳು. ಆ ತರಳೆಯು ತಾವರೆಹೂವಿನ ಒಳಭಾಗದಂತೆ (ಪದ್ಮಾಂತರಾಭೆಯನು ಅನೂನಗುಣವಂತೆಯನು) ಥಳಥಳನೆ ಹೊಳೆಯುವ ಬಿಳಿಯ ಬಣ್ಣದ ಮೈಕಾಂತಿಯುಳ್ಳವಳು, ಬಿಳಿಯ ದಂತಪಂಕ್ತಿಗಳಿಂದ ರಾಜಿಸುವವಳನ್ನು, ಅನೂನಗುಣವಂತೆಯಾದ ಸುದತಿಯನ್ನು, ಸೃಷ್ಟಿಕರ್ತನಾದ ಬ್ರಹ್ಮನ ಅಮಲವಾದ, ಚತುರತೆಯ ಸೃಷ್ಟಿಕ್ರಮದ ಪ್ರತೀಕಳನ್ನು, ಆ ಪ್ರತಿಹಾರಿಯು ಅನೂಪರಾಜಕುಮಾರನ ಬಳಿಗೆ ಒಯ್ದು ಹೀಗೆಂದು ನುಡಿದಳು.

ಅನ್ವಯ :—ತಾಮರಸಾಂತರಾಭಾಂ ಗುಣೈರನೂನಾಮ್ ಸುದತೀಂ ತಾಂ ವಿಧಾತುಃ ಲಲಿತಾಮ್ ಸೃಷ್ಟಿಮ್ ಅನೂಪರಾಜಸ್ಯ ಅಗ್ರತಃ ವಿಧಾಯ ಭೂಯಃ ಸುನಂದಾ ಜಗಾದ ॥

ಅನೂಪನಾಮಾದೇಶಾಃ ॥

**38. ಸಂಗ್ರಾಮನಿರ್ವಿಷ್ಟ ಸಹಸ್ರಬಾಹುಃ ।**
**ಅಷ್ಟಾದಶದ್ವೀಪನಿಖಾತಯೂಪಃ ॥**
**ಅನನ್ಯಸಾಧಾರಣರಾಜಶಬ್ದೋ ।**
**ಬಭೂವ ಯೋಗೀ ಕಿಲ ಕಾರ್ತವೀರ್ಯಃ ॥ ೩೮ ॥**

ಎಲೌ ದೇವಿ, ಈ ಜವ್ವನಿಗನಾದ ರಾಜಕುಮಾರನನ್ನು ನೋಡು, ತಂಗಿ. ಇವನು ಪ್ರಖ್ಯಾತವಾದ ಕಾರ್ತವೀರ್ಯ ರಾಜವಂಶದಲ್ಲಿ ಜನಿಸಿರುವನು. ಇವನ ಹಿರಿಯನಾದ ಕಾರ್ತವೀರ್ಯನ ಪೂರ್ವೇತಿಹಾಸ ಇಂತಿರುವುದು. ಕಾರ್ತವೀರ್ಯನು ಭಗವಾನ್

ದತ್ತಾತ್ರೇಯನ ವರಪ್ರಸಾದದಿಂದ ಜನಿಸಿದನು. ಅವನು ಅನೇಕ ಯಜ್ಞಯಾಗಾದಿಗಳನ್ನು ಮಾಡಿ ಪ್ರಖ್ಯಾತನಾದವನು. ಹದಿನೆಂಟು ದ್ವೀಪಗಳಲ್ಲಿ ಯೂಪಗಳನ್ನು ನೆಟ್ಟು ಮಹಾಯಾಗಗಳನ್ನು ನಡೆಸಿರುವ ಭಾಗ್ಯಶಾಲಿಯಾದ ಮಹೋದಯನು (ಹದಿನೆಂಟು ದ್ವೀಪಿಯೊಳು ಯೂಪವನು ನೆಟ್ಟವನು). ಯುದ್ಧದಲ್ಲಿ ಅವನನ್ನು ಸರಿಗಟ್ಟುವರಾರು ಲೋಕದಲ್ಲಿ ? ತನ್ನ ಸಹಸ್ರತೋಳುಗಳಿಂದ ದಿವ್ಯಾಸ್ತ್ರಗಳನ್ನು ಎಸೆಯುತ್ತಾ ಅಜೇಯನೆನಿಸಿದ ಲೋಕೈಕವೀರನಾದ ಕಾರ್ತವೀರ್ಯಾರ್ಜುನನು. ಸಾರ್ವಭೌಮನೆಂಬ ರಾಜಪದವಿಗೆ ಯೋಗ್ಯನಾದವನು, ರಾಜಯೋಗಿಯಾದ ಈತನು ತನ್ನ ಯೋಗವಿದ್ಯಾಮಹಿಮೆಯಿಂದ ಕೆಡುಕು ಮಾಡಬಲ್ಲ ಜನರನ್ನು ಕಂಡುಹಿಡಿಯಬಲ್ಲ ದಿವ್ಯಶಕ್ತಿಯನ್ನು ಪಡೆದಿದ್ದನು. ಈ ದಿವ್ಯಶಕ್ತಿ ಅನ್ಯರಾಜರಿಗೆ ಲಭ್ಯವಿಲ್ಲ (ಬ್ರಹ್ಮವಿದ್ಯಾನಿಪುಣನು, ವಿಚಕ್ಷಣನು).

**39. ಅಕಾರ್ಯಚಿಂತಾ ಸಮಕಾಲಮೇವ ।**
**ಪ್ರಾದುರ್ಭವಂಶ್ಚಾಪಧರಃ ಪುರಸ್ತಾತ್ ॥**
**ಅಂತಃಶರೀರೇಷ್ವಪಿ ಯಃ ಪ್ರಜಾನಾಂ ।**
**ಪ್ರತ್ಯಾದಿದೇಶ ವಿನಯಂ ವಿನೇತಾ** ॥ ೩೯ ॥

ಈತನು ಅಕಾರ್ಯವನ್ನು ಚಿಂತಿಸುವವರ ಎದುರಿಗೆ (ಸಮಾಜಘಾತುಕರ ಎದುರಿಗೆ) ಪ್ರತ್ಯಕ್ಷನಾಗಿ ಅವರನ್ನು ಆ ಕೂಡಲೇ ದಂಡಿಸುವನು. ಇದರಿಂದ ಸದ್ಧರ್ಮದಿಂದ ಪೃಥ್ವಿಯನ್ನು ಪಾಲಿಸುವನು. ಜನರು, ಪ್ರಜಾವರ್ಗದವರು ನೆಮ್ಮದಿಯಿಂದ ಬಾಳುತ್ತಿರುವರು. ಅಂತಹ ಮಹಾಮಹಿಮನಾದ ವಿನಯಗುಣಶೀಲನಾದ ಚಾಪಹಸ್ತಧರನಾದ ಕಾರ್ತವೀರ್ಯನು ಜನರ ಅಂತಃಕರ್ಮದೋಷಗಳನ್ನು ನಿವಾರಿಸಬಲ್ಲ ರಾಜಯೋಗಿ (ರಾಜಋಷಿ) ವರೇಣ್ಯನು. ಇತರರಿಗೆ ಲಭ್ಯವಲ್ಲದ ರಾಜಶಬ್ದವು ಇವನಲ್ಲಿ ಚೆನ್ನಾಗಿ ಪ್ರತಿಷ್ಠಿತವಾಗಿದೆ (ಜನಗಳಂತಃಕರ್ಮದೋಷಗಳನಳಿಸುವನು, ಚಾಪಧರ ಕಾರ್ತವೀರ್ಯ ವಿನೇತನು).

ಅನ್ವಯ :—ಯಃ ವಿಜೇತಾ ಅಕಾರ್ಯಚಿಂತಾ ಸಮಕಾಲಮೇವ ಪುರಸ್ತಾತ್ ಚಾಪಧರಃ ಪ್ರಾದುರ್ಭವನ್ ಪ್ರಜಾನಾಮ್ ಅಂತಃಶರೀರೇಷು ಅಪಿ ವಿನಯಂ ಪ್ರತ್ಯಾದಿದೇಶ । ಅಂತರ್ಗತಂ ಶರೀರಂ = ಅಂತಃಶರೀರಮ್ (ಅಂತಃಕರಣೇಷು) ॥

**40. ಜ್ಯಾಬಂಧನಿಷ್ಪಂದಭುಜೇನ ಯಸ್ಯ ।**
**ವಿನಿಃಶ್ವಸದ್ವಕ್ತ್ರಪರಂ ಪರೇಣ ॥**
**ಕಾರಾಗೃಹೇ ನಿರ್ಜಿತವಾಸವೇನ**
**ಲಂಕೇಶ್ವರೇಣೋಷಿತಮಾಪ್ರಸಾದಾತ್** ॥ ೪೦ ॥

ಎಲೌ ಪೂಜ್ಯಳೇ, ಲಂಕೇಶ್ವರನಾದ ರಾವಣನು ಸ್ವರ್ಗಾಧಿಪತಿಯಾದ ವಾಸವನನ್ನು ಸೋಲಿಸಿ ದೈತ್ಯಶಕ್ತಿಯ ಮಹಾವೀರನು ಅಂತಹ ತ್ರಿಲೋಕವಿಜೇತನಾದ ದಶಕಂಠನು ಕಾರ್ತವೀರ್ಯನಿಂದ ಪರಾಜಿತನಾಗಿ ಅವನ ಸೆರೆಮನೆಯಲ್ಲಿ ಬಂಧಿತನಾಗಿ ಇದ್ದನು (ಜ್ಯಾಬಂಧನಿಷ್ಪಂದಭುಜನಿಚಯನು). ಆತನನ್ನು ಬಿಲ್ಲಿನ ಹಗ್ಗಗಳಿಂದ ಭುಜವನ್ನು,

ಕೈಗಳನ್ನು ಒಂದಿಷ್ಟು ಅಲ್ಲಾಡದಂತೆ ಬಿಗಿಯಾಗಿ ಕಟ್ಟಿ ಸೆರೆಯಲ್ಲಿಟ್ಟನು. ಆ ರಾಕ್ಷಸೇಶ್ವರನು ಬಹಳ ಕಷ್ಟದಿಂದ ಉಸಿರಾಡುತ್ತ ಕಾಲಕಳೆಯಬೇಕಾಯಿತು. ಅನಂತರ ಅಜೇಯನಾದ ಕಾರ್ತವೀರ್ಯನ ಅಭಯಪ್ರದಾನದಿಂದ ಬಿಡುಗಡೆಹೊಂದಿ ತನ್ನ ನಿಜನಗರಿಯಾದ ಲಂಕಾಪುರಿಗೆ ಹಿಂತೆರಳಿದನು.

ಅನ್ವಯ :—ಯಸ್ಯ ಕಾರಾಗೃಹೇ ಜ್ಯಾಬಂಧನಿಷ್ಪಂದಭುಜೇನ ನಿಃಶ್ವಸದ್ವಕ್ತ್ರಪರಂಪರೇಣ ನಿರ್ಜಿತವಾಸವೇನ ಲಂಕೇಶ್ವರೇಣ ಆಪ್ರಸಾದಾತ್ ಉಷಿತಮ್ ॥

**41. ತಸ್ಯಾನ್ವಯೇ ಭೂಪತಿರೇಷ ಜಾತಃ ।**
**ಪ್ರತೀಪ ಇತ್ಯಾಗಮವೃದ್ಧಸೇವೀ ॥**
**ಯೇನ ಶ್ರಿಯಃ ಸಂಶ್ರಯದೋಷರೂಢಂ ।**
**ಸ್ವಭಾವಲೋಲೇತ್ಯಯಶಃ ಪ್ರಮೃಷ್ಟಮ್ ॥ ೪೧ ॥**

ಎಲೈ ಚಾರುಯೌವನಶೀಲಳೆ, ಮಂದಸ್ಮಿತವದನಾರವಿಂದಳೆ, ಪವಿತ್ರವಾದ ಆ ದೊರೆಯ ವಂಶದಲ್ಲಿ ಈ ಪ್ರತೀಪಮಹಾರಾಜನು ಜನಿಸಿರುವನು (ಆತನವಂಶಾನ್ವಯದೊಳೀ ಪ್ರತಿಪಾಂಕಿತನು). ಈತನು ವೃದ್ಧಜನಸೇವಕನು, ವಿದ್ಯಾಭಿಮಾನಿ ವೇದವಿದರನ್ನು, ವಿದ್ವಜ್ಜನರನ್ನು ಅಭಿಮಾನದಿಂದ ಸ್ವಾಗತಿಸಿ ಸತ್ಕರಿಸುವ ವಿನಯಶೀಲನು. ಈ ಭೂಪತಿಯು ಐಶ್ವರ್ಯದ ಅಧಿದೇವತೆಯಾದ ಲಕ್ಷ್ಮೀಯು ಚಂಚಲೆಯೆಂಬ ಅಪಯಶಸನ್ನು ಪಡೆದಿದ್ದರೂ ಅದನ್ನು ಈತನು ತನ್ನ ಒಳ್ಗುಣಗಳಿಂದ ಅಳಿಸಿಬಿಟ್ಟನು. ಐಶ್ವರ್ಯವು, ಸಿರಿತನವೂ ಬಡಬಗ್ಗರಲ್ಲಿ ವೃದ್ಧರಲ್ಲಿ, ಪುರೋಹಿತರಲ್ಲಿ, ಕಲಾವಿದರಲ್ಲಿ, ಕಿಂದರಿಜೋಗಿಗಳಲ್ಲಿ, ಸಾಹಿತಿಗಳಲ್ಲಿ ನೆಲೆಗೊಳ್ಳುವಂತೆ ಮಾಡಿದ ಮಹಾವಿದ್ಯಾಪಕ್ಷಪಾತಿ. ದುಷ್ಕೀರ್ತಿವಂತರಲ್ಲಿ, ಲಂಚಕೋರರಲ್ಲಿ ಸಿರಿದೇವಿಯು ನೆಲಸದಂತೆ ಮಾಡಿರುವ ವಿವೇಕಶೀಲನಾದ ನೃಪವರೇಣ್ಯನು.

ಆಗಮವೃದ್ಧಸೇವೀ = ಆಗಮೇನ ವೃದ್ಧಾಃ ಆಗಮವೃದ್ಧಾಸ್ತಾನ್ಸೇವಿತುಂ ಶೀಲಂ ಯಸ್ಯ ॥

**42. ಅಯೋಧನೇ ಕೃಷ್ಣಗತಿಂ ಸಹಾಯಂ ।**
**ಅವಾಪ್ಯ ಯಃ ಕ್ಷತ್ರಿಯಕಾಲರಾತ್ರಿಮ್ ॥**
**ಧಾರಾಂ ಶಿತಾಂ ರಾಮಪರಶ್ವಧಸ್ಯ ।**
**ಸಂಭಾವಯತ್ಯುತ್ಪಲಪತ್ರಸಾರಾಮ್ ॥ ೪೨ ॥**

ಈ ಪ್ರತೀಪಾಖ್ಯನೃಪನು, ನೃಪರಿಗೇ ತಿಲಕಪ್ರಾಯನು. ಅವನು ಯುದ್ಧಸಮಯದಲ್ಲಿ ಸಾಕ್ಷಾತ್ ವೈಶ್ವಾನರನಾದ ಅಗ್ನಿದೇವನಿಂದ ಸಹಾಯವನ್ನು ಪಡೆದು ವೈರಿರಾಜರಿಗೆ ಕಾಳರಾತ್ರಿಯಂತೆ ಇದ್ದು ಅಭೇದ್ಯನೆನಿಸಿರುವನು (ಕಾಳಗದೊಳಗ್ನಿಯ ಸಹಾಯವನು ಪಡೆದಿರುವನು). ಜಮದಗ್ನಿಯ ಪುತ್ರನಾದ ರೇಣುಕಾನಂದನನಾದ ಪರಶುರಾಮನು ಕ್ಷತ್ರಿಯವಂಶಕ್ಕೆ ಕಾಳರಾತ್ರಿಯಂತೆ ಇರುವನು. ಆ ಪರಶುಧರನು ಪ್ರಳಯಭೈರವನಾಗಿದ್ದರೂ ಅವನ ಪರಶುಧಾರೆಯನ್ನು ತಾವರೆಯ ದಳದ ಎಸಳಿನ ಧಾರೆಗೆ ಸಮನಾಗಿ

ಕಾಣುವನು. ಅವನು ಎಳ್ಳಷ್ಟೂ ಭಯಪಡದೆ ತನ್ನ ಕೆಲಸಕಾರ್ಯಗಳಲ್ಲಿ ಮಗ್ನನಾಗಿರುವ ನರೋತ್ತಮನು.

ಅನ್ವಯ:—ಯಃ ಅಯೋಧನೇ ಕೃಷ್ಣಗತಿಂ ಸಹಾಯಮವಾಪ್ಯ ಕ್ಷತ್ರಿಯಕಾಲ ರಾತ್ರಿಂ ರಾಮಪರಶ್ವಧಸ್ಯ ಶಿತಾಂ ಧಾರಾಂ ಉತ್ಪಲಪತ್ರಸಾರಾಂ ಸಂಭಾವಯತಿ ॥

ಕೃಷ್ಣಗತಿವ್ = ಕೃಷ್ಣಾ ಗತಿಃ ಯಸ್ಯ ॥

**43. ಅಸ್ಯಾಂಕಲಕ್ಷ್ಮೀರ್ಭವದೀರ್ಘಬಾಹೋಃ**
**ಮಾಹಿಷ್ಮತೀವಪ್ರನಿತಂಬಕಾಂಚೀಮ್ ॥**
**ಪ್ರಾಸಾದಜಾಲೈರ್ಜಲವೇಣಿರಮ್ಯಾಂ ।**
**ರೇವಾಂ ಯದಿ ಪ್ರೇಕ್ಷಿತುಮಸ್ತಿ ಕಾಮಃ ॥ ೪೩ ॥**

ಓ ಸೌಂದರ್ಯಲಕ್ಷ್ಮಿಯೆ, ಭಾಗ್ಯವಂತಳಾದ ರೂಪಶ್ರೀಯೆ, ನೀನು ಈ ನಿಡು ತೋಳುಗಳ ಮತ್ತು ಹರವಾದ ಎದೆಯ ಕಟ್ಟಾಳು ಎನಿಸಿದ ಪ್ರತೀಪರಾಜಕುಮಾರನನ್ನು ವರಿಸಿ ಅಂಕಲಕ್ಷ್ಮಿಯಾಗು (ತೊಡೆಲಕುಮಿ ಎನಿಸು) ಅಲ್ಲಿಯ ಅರಮನೆಯ ಉಪ್ಪರಿಗೆ ಯಲ್ಲಿ ಕುಳಿತು ವಾತಾಯನದ ಮೂಲಕ ಸುಂದರ ರೇವಾನದಿಯ ಮಿರುಗು ತೆರೆಗಳನ್ನು ನೋಡುತ್ತಾ ಆನಂದಿಸು. ಆ ಪಾವನ ನದಿಯು ರಾಜಧಾನಿಯಾದ ಮಾಹಿಷ್ಮತೀನಗರ ವನ್ನು ಬಳಸಿ ಹರಿಯುತ್ತಾ ನಗರವೆಂಬ ಕಾಮಿನಿಯ ಕಟಿಪ್ರದೇಶದಲ್ಲಿರುವ ಕಾಂಚೀ ಧಾಮದಂತೆ ಲಕ್ಷಣವಾಗಿ ತೋರುತ್ತಲೆಸೆಸುವುದು (ವಪ್ರದನಿತಂಬದೊಳು ಕಾಂಚಿಪೊಲು ಕಂಗೊಳಿಪ) ಆ ನರ್ಮದೆಯ ಹೊಳೆಯುವ ಜಲರಾಶಿಯನ್ನು ನೋಡುತ್ತ ನಿಸರ್ಗದ ಸವಿಯನ್ನು ಸವಿಯುತ್ತ ಸಂಸಾರದ ಭೋಗಸುಖಗಳನ್ನು ಅನುಭವಿಸುತ್ತಿರು.

ಅನ್ವಯ:—ಯದಿ ಮಾಹಿಷ್ಮತೀವಪ್ರನಿತಂಬಕಾಂಚೀಂ ಜಲವೇಣಿರಮ್ಯಾಂ ರೇವಾಂ ಪ್ರಾಸಾದಜಾಲೈಃ ಪ್ರೇಕ್ಷಿತುಂ ಕಾಮಃ ಅಸ್ತಿ ಅಸ್ಯ ದೀರ್ಘಬಾಹೋಃ ಅಂಕಲಕ್ಷ್ಮೀಃ ಭವ ॥

ರೇವಾಂ = ನರ್ಮದಾಂ—ಮಾಹಿಷ್ಮತೀನಾಮಸ್ಯ ನಗರೀ—ತಸ್ಯ ಕಾಂಚೀಂ ರಶನಾ ಭೂತಾಂ ಜಲಾನಾಂ ಪ್ರವಾಹೇಣ ರಮ್ಯಾಮ್—ಜಲವೇಣಿ = ಪ್ರವಾಹ ॥

**44. ತಸ್ಯಾಃ ಪ್ರಕಾಮಂ ಪ್ರಿಯದರ್ಶನೋಽಪಿ ।**
**ನ ಸ ಕ್ಷಿತೀಶೋ ರುಚಯೇ ಬಭೂವ ॥**
**ಶರತ್ಪ್ರಮೃಷ್ಟಾಂಬುಧರೋಪರೋಧಃ ।**
**ಶಶೀವ ಪರ್ಯಾಪ್ತಕಲೋ ನಲಿನ್ಯಾಃ ॥ ೪೪ ॥**

ಆ ಪೃಥ್ವೀವಲ್ಲಭನು ಮನಮೋಹನಾಕಾರನಾದರೂ ಈ ರಾಜಕುಮಾರಿ ಒಪ್ಪದೆ ಇರುವಳು. ಅವಳ ಅಭೀಷ್ಟಕ್ಕೆ ಪಾತ್ರನಾಗದೇ ಹೋದನು. ಆಕೆ ಒಲ್ಲದೇ ಹೋದಳು. ಅದು ಹೇಗೆಂದರೆ ಆ ನರೇಶನು ಶರದೃತುವಿನ ಕಾಲದಲ್ಲಿ, ಮೋಡವಿಲ್ಲದ ಬಾಂದಳದಲ್ಲಿ ಪೂರ್ಣಚಂದ್ರನು, ತನ್ನ ಪೂರ್ಣತೇಜದಿಂದ, ಷೋಡಶಕಲೆಗಳಿಂದ ನಿರ್ಮಲಾಕಾಶದಲ್ಲಿ ತೇಲಿಬಂದರೂ ಅಂಬುಜವು ಒಪ್ಪದೇಹೋಗುವಂತೆ ಆ ಕ್ಷಿತಿಪತಿಯ ಪಾಡಾಯಿತು.

(ಅಪಸ್ಥೆಯಾಯಿತು) (ಮೋಡವಿರದಂಬರದೊಳೆಸೆವ ಶರದಿಂದುವನು) ಅದರಂತೆ ಇಂದು ಮತಿಯು ಮನೋಭಿಲಾಷೆಯು ಬೇರೆಯಾಗಿತ್ತು. "ಲೋಕೋ ಭಿನ್ನರುಚಿಃ" ಎಂಬಂತೆ ಆ ಅರಸುಕುವರಿಯ ಮನದಿಚ್ಛೆ ಬೇರೆಯಾಗಿತ್ತು. ನಲಿನಿಪುಷ್ಪಸಮೂಹವು ಪೂರ್ಣ ಚಂದ್ರಮನನ್ನು ತಿರಸ್ಕರಿಸುವಂತೆ, ಒಪ್ಪದೆ ಮುಂದಕ್ಕೆ ಅಡಿಯಿಟ್ಟಳು (ಪದಾರ್ಪಣ ಮಾಡು).

ಲೋಕೋ ಭಿನ್ನರುಚಿರಿತಿ ಭಾವಃ ॥

**45.** **ಸಾ ಶೂರಸೇನಾಧಿಪತಿ ಸುಷೇಣಂ ।**
**ಉದ್ದಿಶ್ಯ ಲೋಕಾಂತರಗೀತಕೀರ್ತಿಮ್ ॥**
**ಆಚಾರಶುದ್ಧೋಭಯವಂಶದೀಪಂ ।**
**ಶುದ್ಧಾಂತರಕ್ಷ್ಯಾ ಜಗದೇಕನಾರೀ** ॥ ೪೫ ॥

ಹೇ ಶೋಭನಳೆ, ಇತ್ತ ನೋಡು. ಇಲ್ಲಿ ಹೇಮಾಸನದಲ್ಲಿ ಆರೂಢನಾಗಿರುವ ರಾಜಕುಮಾರನು ಶೂರಸೇನರ ಒಡೆಯನಾದ ಸುಷೇಣನು. ಈತನು ತನ್ನ ಸತ್ಕಾರ್ಯ ಗಳಿಂದ ಪರಲೋಕದಲ್ಲಿಯೂ ಕೀರ್ತಿತನಾಗಿದ್ದಾನೆ. ಆ ಪುಣ್ಯಶ್ಲೋಕನ ಪುಣ್ಯಖ್ಯಾತಿಯು ಲೋಕಾಂತರದ ತನಕ ಹರಡಿದೆ. ಅವನು ಆಚಾರಶುದ್ಧನು. ಉಭಯವಂಶಗಳಿಗೂ (ತಾಯಿ ಮತ್ತು ತಂದೆಯ) ತನ್ನ ಸದ್ವರ್ತನೆಗಳಿಂದ ಪ್ರದೀಪನೆನಿಸಿರುವನು (ಬೆಳಗು ತಿಹನನ್ನಯದೀಪನು). ಅಂತಹ ಉಭಯಕುಲವನ್ನು ಬೆಳಗುತ್ತಿರುವ ಈತನನ್ನು ಸೇರಿ ನೀನು ಸುಖಿಸಬಹುದು.

ಸುಷೇಣಂ = ಶೋಭನಾ ಸೇನಾಯಸ್ಯ ಸುಷೇಣಃ ॥ ವಂಶದ್ವಯೋ ಮಾತಾಪಿತೃ ಕುಲಯೋ—ಉಭಯಕುಲದೀಪಂ = ಪ್ರಕಾಶಕಂ—ಶೂರಸೇನಾನ್ ದೇಶಾಧಿಪತಿಂ.

**46.** **ನೀಪಾನ್ವಯಪಾರ್ಥಿವ ಏಷ ಯಜ್ವಾ ।**
**ಗುಣೈರ್ಯಮಾಶ್ರಿತ್ಯ ಪರಸ್ಪರೇಣ ॥**
**ಸಿದ್ಧಾಶ್ರಮಂ ಶಾಂತಮಿವೈತ್ಯಸತ್ತ್ವೈಃ ।**
**ನೈಸರ್ಗಿಕೋಽಪ್ಯುತ್ಸಸೃಜೇ ವಿರೋಧಃ** ॥ ೪೬ ॥

ಎಲೌ ಗುಣಶೀಲಳೆ, ಈತನು ನೀಪಕುಲಸಂಭವನು, ಗುಣ, ಜ್ಞಾನ ನಿಧಿಯೆನಿಸಿದ ಸುಷೇಣನು ಶಾಂತನು. ಸದಾ ಪ್ರಸನ್ನನು. ಯಜ್ಞಯಾಗಾದಿಗಳನ್ನು ನಡೆಸುತ್ತ ಪೂತಾತ್ಮ ನಾದವನು (ಯಜ್ಞಗಳನೆಸಗಿಹನು ನೀಪಕುಲಸಂಭವನು). ಅವನ ರಾಜ್ಯದ ಪ್ರಜೆಗಳು ನಿಸರ್ಗದತ್ತವಾದ ದರ್ಪ, ಅಹಂಕಾರಾದಿ ಕೆಟ್ಟ ಗುಣಗಳಿಂದ ಮುಕ್ತರಾಗಿರುವರು. ಮಹಾವ್ರತಸಂಪನ್ನನಾದ ಮಹಾಯೋಗಿಯ (ಮಹಾಪುರುಷನ) ತಪಃಪ್ರಭಾವದಿಂದ ಕಾಡಿನಲ್ಲಿರುವ ಕ್ರೂರಜಂತುಗಳೂ ನಿಸರ್ಗದತ್ತವಾದ ತಮ್ಮ ವೈರಭಾವವನ್ನು ಮರೆತು ಪರಸ್ಪರ ಮೈತ್ರಿಯಿಂದ ಇರುವಂತೆ ಈತನ ರಾಜ್ಯದಲ್ಲಿ ದ್ವೇಷಾಸೂಯೆ, ಅತ್ಯಾಚಾರ ಗಳಿಲ್ಲದೆ ಸದಾ ಶಾಂತವಾತಾವರಣವು ನೆಲಸಿರುವುದು. ಇವನ ರಾಜ್ಯವೇ ಒಂದು ಸಿದ್ಧಾಶ್ರಮದಂತಿಹುದು.

ಅನ್ವಯಃ :—ಯಜ್ವಾ ಏಷ ನೀಪಾನ್ವಯಃ ಪಾರ್ಥಿವಃ ಯಮಾಶ್ರಿತ್ಯ ಶಾಂತಂ ಸಿದ್ಧಾಶ್ರಮಮ್ ಏತ್ಯ ಸತ್ತ್ವೈರಿವ ಗುಣೈಃ ಪರಸ್ಪರೇಣ ನೈಸರ್ಗಿಕೋಽಪಿ ವಿರೋಧಃ ಉತ್ಸಸೃಜೇ ॥

ಯಜ್ವಾ = ವಿಧಿನಾ ಇಷ್ಟವಾನ್ — ನೈಸರ್ಗಿಕಾಃ = ಸ್ವಾಭಾವಿಕೋಽಪಿ ॥

47. **ಯಸ್ಯಾತ್ಮಗೇಹೇ ನಯನಾಭಿರಾಮಾ ।**
**ಕಾನ್ತಿರ್ಹಿಮಾಂಶೋರಿವ ಸಂನಿವಿಷ್ಟಾ ॥**
**ಹರ್ಮ್ಯಾಗ್ರಸಂರೂಢತೃಣಾಂಕುರೇಷು ।**
**ತೇಜೋಽವಿಷಹ್ಯಂ ರಿಪುಮಂದಿರೇಷು ॥ ೪೭ ॥**

ಎಲೌ ನಯನಾಭಿರಾಮೇ, ಈತನು ಹಿಮಾಂಶುವಾದ ಚಂದ್ರನಂತೆ ಕಾಂತಿಯುತನಾಗಿ ನಯನಾಭಿರಾಮನೆನಿಸಿರುವನು. ತೇಜಸ್ವಿಯಾಗಿ ಶೋಭೆಯಿಂದ ರಾರಾಜಿಸುತ್ತಿರುವ ಕಾಂತಿಪುರುಷನು. ತನ್ನ ಸೌಧಗಳಲ್ಲಿ ರಾಜಭವನದಲ್ಲಿ ನಯನಮೋಹಕನೆನಿಸಿದರೂ ವೈರಿಗಳಿಗೆ ಅತ್ಯಂತ ತಾಪದಾಯಕನು. ಇದರಿಂದ ಇವನ ವೈರಿಗಳ ಪುರಗಳಲ್ಲಿರುವ ರಾಜಮಂದಿರಗಳ ತೃಣಗುಲ್ಮಲತೆಗಳಿಂದ (ತೃಣಗುಲ್ಮಕಲಿತರಿಪುಮಂದಿರದೊಳೆಸೆವುದು) (ಹುಲ್ಲುಕಡ್ಡಿಗಳಿಂದ) ತುಂಬಿಕೊಂಡು ಪಾಳುಬಿದ್ದಿವೆ. ಈ ಸುಷೇಣನ ಭುಜಬಲದ ಅಳುಂಪು ವೈರಿಗಳಿಗೆ ದುಸ್ಸಹವಾದುದು. ಅಂಥ ಕೀರ್ತಿವೈಭವಕ್ಕೆ ತಿಲಕಪ್ರಾಯನಾದ ಈತನನ್ನು ಸೇರಿ, ಎಲೌ ಸುಂದರಿಯೇ, ನಿನ್ನ ಜೀವನವನ್ನು ಸಾರ್ಥಕಗೊಳಿಸು (ಪವಿತ್ರಗೊಳಿಸು).

ಹಿಮಾಂಶೋಃ = ಕಾಂತಿಶ್ಚಂದ್ರಕಿರಣಾ ಇವ— ನಯನಾಭಿರಾಮಾ=ನಯನಯೋರಭಿರಾಮಾ = ಶೋಭಾಽಽತ್ಮಗೇಹೇ (ಸುಷೇಣಸ್ಯ ಕಾಂತಿಃ) ॥

48. **ಯಸ್ಯಾವರೋಧಸ್ತನಚಂದನಾನಾಂ ।**
**ಪ್ರಕ್ಷಾಲನಾದ್ವಾರಿ ವಿಹಾರಕಾಲೇ ॥**
**ಕಲಿಂದಕನ್ಯಾ ಮಥುರಾಂ ಗತಾಽಪಿ ।**
**ಗಂಗೋರ್ಮಿಸಂಸಕ್ತಜಲೇವ ಭಾತಿ ॥ ೪೮ ॥**

ಅಲ್ಲಿ ಜಲಕ್ರೀಡೆಯಾಡುತ್ತಿರುವ ಅಂಗನೆಯರು ತಮ್ಮ ಸ್ತನಗಳಿಗೆ ಲೇಪಿಸಿರುವ ಚಂದನದ ಪುಡಿಯನ್ನು ಕಲಿಂದಕನ್ಯೆಯಾದ ಯಮುನಾನದಿಯು ತೊಳೆಯುತ್ತಿರುವುದು. ಈತನ ರಾಜಧಾನಿಯಾದ ಮಥುರಾಪುರದ ಬಳಿಯಲ್ಲಿ ಹರಿಯುತ್ತಿರುವ ಕಪ್ಪುಬಣ್ಣದ ನೀರಿನಿಂದ ವಿರಾಜಿಸುವ ಜಮುನೆಯು ಬಿಳಿಯ ಗಂಧಲೇಪನದ ಪುಡಿಯಿಂದ ದೇವಗಂಗೆಯ ತೆರೆಗಳ ಬಿಳುಪನ್ನು ಪಡೆಯುವಳು. ಇದರಿಂದ ಮಥುರೆಯಲ್ಲಿ ಜಮುನೆಯು ದೇವಗಂಗೆಯ ಬೆಳ್ನೆಯ ತೆರೆಗಳ ಮಿಲನವನ್ನು ಪಡೆಯುತ್ತಿರುವಳು (ಮಥುರೆಯೊಳೆ ಸುರನದಿಯ ಬೆಳ್ನೆಯ ತೆರೆತೆರೆಯ ಮಿಲನವನು) ಎಂಬಂತೆ ಭಾಸವಾಗುವುದು.

ಮಥುರಾನಗರಿಯ ಸಂಸ್ಥಾಪಕ ಶತ್ರುಘ್ನ—ಎದೆಗೆ ಹಚ್ಚಿದ ಚಂದನ—ಕಲಿಂದಪರ್ವತ

ದಲ್ಲಿ ಹುಟ್ಟಿದ ನದಿ ಕಾಲಿಂದೀ—ಚಂದನಾನಾಂ = ಮಲಯಜಾನಾಂ—ಸಿತಾಸಿತೇ ಗಂಗಾಯಮುನೇ-ಕಾಲಿಂದಿತೀರೇ ಮಥುರಾ—ಲವಣಾಸುರವಧಕಾಲೇ ಶತ್ರುಘ್ನೇನ ನಿರ್ಮಾಸ್ಯತೇತಿ ವಕ್ಷ್ಯತಿ—ಮಥುರಾ ಮಧುರಾಪುರೀತಿ ಶಬ್ದಭೇದಃ—ಗಂಗಾಯಾ = ಭಾಗೀರಥ್ಯಾ—ಧವಲಚಂದನಸಂಸರ್ಗಾತ್ ॥

**49. ತ್ರಸ್ತೇನ ತಾರ್ಕ್ಷ್ಯಾತ್ಕಿಲಕಾಲಿಯೇನ ।**
**ಮಣಿಂ ವಿಸೃಷ್ಟಂ ಯಮುನೌಕಸಾ ಯಃ ॥**
**ವಕ್ಷಃಸ್ಥಲವ್ಯಾಪಿರುಚಂದಧಾನಃ ।**
**ಸಕೌಸ್ತುಭಂ ಹ್ರೇಪಯತೀವ ಕೃಷ್ಣಮ್ ॥ ೪೯ ॥**

ಹೇ ನೀರಜಾಕ್ಷಿ (ಹೇ ಮನೋಹರೇ), ಈತನು ಕೌಸ್ತುಭವೆಂಬ ವಜ್ರವನ್ನು ತನ್ನ ಎದೆಯಲ್ಲಿ ಧರಿಸಿ ಪರಮಾತ್ಮನಾದ ಶ್ರೀಹರಿಯನ್ನೇ (ಮಹಾವಿಷ್ಣುವನ್ನೇ) ನಾಚಿಸಿದನು. ಈತನ ರಾಜಧಾನಿಯಾದ ಮಧುರಾಪುರದ ಬಳಿಯಲ್ಲಿ ಕಾಳಿಂದಿ ಮಡುವಿನಲ್ಲಿ ಸರ್ಪರಾಜನಾದ ಕಾಳೀಯನು ವಾಸಿಸುತ್ತಿರುವನು. ಅವನು ವಿನತಾಪುತ್ರನಾದ ಗರುಡನ ಭಯದಿಂದ ತನ್ನಲ್ಲಿರುವ ಕೌಸ್ತುಭಮಣಿಯನ್ನು ಈ ಸುಷೇಣನಿಗಿತ್ತನು. ಹೇ ಶೋಭನಾಂಗಿ, ಈ ಪುರುಷಶ್ರೇಷ್ಠನು ಆ ಸರ್ವಶ್ರೇಷ್ಠವಾದ ಕೌಸ್ತುಭವನ್ನು ತನ್ನ ಎದೆಯಲ್ಲಿ ಧರಿಸಿ ಧರೆಯಲ್ಲಿ ಎರಡನೆಯ ಶ್ರೀಹರಿಯಂತೆ (ಶ್ರೀ ಕೃಷ್ಣನಂತೆ) (ಮಣಿಸಿದನು ಕೌಸ್ತುಭವ ತಳೆದ ಹರಿಯ) ಈ ಧರಿತ್ರಿಯಲ್ಲಿ ರಾರಾಜಿಸುತ್ತಿರುವನು.

**50. ಸಂಭಾವ್ಯ ಭರ್ತಾರಮಮುಂ ಯುವಾನಂ ।**
**ಮೃದುಪ್ರವಾಲೋತ್ತರಪುಷ್ಪಶಯ್ಯೇ ॥**
**ವೃಂದಾವನೇ ಚೈತ್ರರಥಾದನೂನೇ ।**
**ನಿರ್ವಿಶ್ಯತಾಂ ಸುಂದರಿ ಯೌವನಶ್ರೀಃ ॥ ೫೦ ॥**

ಎಲೌ ತರಳೆ, ನೀನು ಈ ಜವ್ವನಿಗನನ್ನು ಮದುವೆಯಾಗಿ ನಿಂತರೆ (ಜವ್ವನಿಗನೀತನನು ಮದುವೆ ನಿಲುವೊಡೆ ನೀನು) ಹೊದಳಿರ ತೆಳ್ಳನೆಯ (ಮೃದುವಾದ) ಹಾಸುಗೆಯಲ್ಲಿ ದಾಂಪತ್ಯಸುಖವನ್ನು ಪಡೆಯಬಹುದು. ಹೇ ಸುಭಗೆ, ಎಲೌ ಸುಂದರಿ, ಈತನ ವೃಂದಾವನವು ಕುಬೇರನ ಚೈತ್ರರಥವೆಂಬ ಉದ್ಯಾನದ ಶೋಭೆಪಡೆದಿದೆ. ಈತನನ್ನು ವರಿಸಿ ನಿನ್ನ ಭಾವೀ ಭರ್ತಾರನನ್ನಾಗಿ ಮಾಡಿಕೊಂಡು ಈ ಬೃಂದಾವನದ ಉದ್ಯಾನವನದಲ್ಲಿ ಯೌವನದ ಸಕಲಸುಖಭೋಗಭಾಗ್ಯಗಳನ್ನು ಅನುಭವಿಸು, ಮಾನ್ಯಳೆ.

ಕೋಮಲಪಲ್ಲವಾ ಪುಷ್ಪಶಯ್ಯಾ—ವೃಂದಾವನೇ = ವೃಂದಾವನನಾಮಕ ಉದ್ಯಾನವನೇ—ನಿರ್ವಿಶ್ಯತಾಮ್ = ಭುಜ್ಯತಾಮ್—ಯೌವನಶ್ರೀಃ=ಯೌವನಫಲಂ—ಕುಬೇರನ ಚೈತ್ರವನದಂತಿರುವ ಬೃಂದಾವನ.

**61. ಅಧ್ಯಾಸ್ಯ ಚಾಂಭಃ ಪೃಷತೋಕ್ಷಿತಾನಿ ।**
**ಶೈಲೇಯಗಂಧೀನಿ ಶಿಲಾತಲಾನಿ ॥**

**ಕಲಾಪಿನಾಂ ಪ್ರಾವೃಷಿ ಪಶ್ಯ ನೃತ್ಯಂ ।**
**ಕಾನ್ತಾಸು ಗೋವರ್ಧನಕಂದರಾಸು ॥ ೫೧ ॥**

ಓ ಚಾರುಹಾಸಿನಿ (ಮಂತ್ರಹಾಸಿನಿ, ಮಂದಹಾಸಿನಿ), ಓ ರಸಿಕಳೆ, ನೀನು ಮಳೆಗಾಲದ ಸಮಯದಲ್ಲಿ ನಿನ್ನ ಜೀವನಸಖನೊಂದಿಗೆ ಗೋವರ್ಧನಗಿರಿಯ ಗುಹೆಕಂದರಗಳಲ್ಲಿ ವಿಹರಿಸು. ಅಲ್ಲಿ ವರ್ಷಾಕಾಲದ ಶುಭದಿನಗಳಲ್ಲಿ, ಓ ಚಾರುಯೌವನಗಾತ್ರಿಯೇ, ನೀನು ನಿನ್ನ ಕಾಂತನೊಂದಿಗೆ ಮಳೆಯ ಹನಿಯಿಂದ ಒದ್ದೆಯಾಗಿರುವ, ನವುರಾದ ಕಂಪು ಬೀರುವ, ಸುವಾಸನೆಯುಕ್ತವಾದ ದರಿಗಳಲ್ಲಿ ಸಂಚರಿಸುತ್ತ, ಶೈಲೇಯಗಂಧದ ಶಿಲಾತಲಗಳಲ್ಲಿ ಕುಳಿತು ಮೇಘಮಾಲೆಗಳನ್ನು ಕಂಡು, ಮೇಘನಾದವ ಆಲಿಸುತ್ತ ನಲಿವ ನವಿಲುಗಳನ್ನು ಕಾಣುವೆ. ಶಿಲಾಜತು, ಶಿಲಾಪುಷ್ಪ ಮೊದಲಾದ ಓಷಧಿವಿಶೇಷಗಳ ಕಂಪು ತಟ್ಟಿ ನೀನು ಉತ್ಕರ್ಷಗೊಳ್ಳಲಿರುವೆ. (ಅಲ್ಲಿ ಗೋವರ್ಧನದೊಳಾ ಚಾರುದರಿಗಳೊಳು, ಶೈಲೇಯ ಗಂಧದ ಶಿಲಾತಲದೊಳು) ಗೋವರ್ಧನಗಿರಿಯ ಗುಹೆ,ಕಂದರಗಳಲ್ಲಿ ನವಿಲುಗಳ ಕೇಕಾರವವನ್ನು ಕೇಳಿ ಆಮೋದಗೊಳ್ಳುವೆ. ಅವುಗಳ ನೃತ್ಯಗಳನ್ನು ನೋಡುತ್ತ ನಿನ್ನ ಇನಿಯನೊಂದಿಗೆ ಪರವಶಳಾಗುವೆ.

ಕಂದರಾಸು = ಧರೀಷು— ಶಿಲಾಪುಷ್ಪಾಖ್ಯ ಓಷಧಿವಿಶೇಷಃ—ಶೀತಶಿವಾನಿ—"ಶೈಲೇಯಮ್"—"ಶಿಲಾಜತು ಚ ಶೈಲೇಯಮ್" ಇತಿ ಯಾದವಃ ॥

**52. ನೃಪಂ ತಮಾವರ್ತಮನೋಜ್ಞನಾಭಿಃ ।**
**ಸಾ ವ್ಯತ್ಯಗಾದನ್ಯವಧೂರ್ಭವಿತ್ರೀ ॥**
**ಮಹೀಧರಂ ಮಾರ್ಗವಶಾದುಪೇತಂ ।**
**ಸ್ರೋತೋವಹಾ ಸಾಗರಗಾಮಿನೀವ ॥ ೫೨ ॥**

ಆ ಭೂಕಾಂತನನು ಇಚ್ಛಿಸದೆ, ಆ ಸುಳಿಯಾದ ಹೊಕ್ಕುಳ ಚೆಲುವೆಯು ಅನ್ಯರ ಬಳಿಗೆ ದಾಟಿಹೋದಳು. ಮನೋಜ್ಞವಾದ, ಸುಂದರವಾದ ಸುಳಿನಾಭಿಯು, ಸುಳಿಸುಳಿಯಾಗಿ ಅಲೆಅಲೆಯಾಗಿ ಅಲೆಯುವ (ಹರಿಯುತ್ತಿರುವ) ನದಿಯನ್ನೇ ಬಿಂಬಿಸುತ್ತಿದೆ. ಹೇಗೆ ಸುಳಿ ಸುಳಿಯಾಗಿ ಹರಿವ ನದಿಯು ತನ್ನ ವಿವಿಧ ಲೀಲೆಗಳನ್ನು ತೋರುತ್ತ ಗಿರಿಯ ನಿತಂಬದಲ್ಲಿ ತೋರುತ್ತ ಸಾಗರವನ್ನು ಸೇರಲು ಮುಂದುವರಿಯುವುದೋ ಅಂತೆಯೇ ಸ್ತ್ರೀಸಹಜವಾದ ಲಾಸ್ಯಾದಿ ಹಾವಭಾವಗಳನ್ನು ಬೀರಿ ಯುವಕಜನರ ಗಮನ ಸೆಳೆಯುತ್ತ ಆ ರಾಜಕನ್ಯೆಯು ತನ್ನ ಪಥದಲ್ಲಿ ಮುಂದುವರಿದಳು. ಸಾಗರಗಾಮಿನಿಯಾದ ನದಿಯಂತೆ ಮಂದಹಾಸದಿಂದ ಅನ್ಯರ ವಧುವಾದ ಆಕೆ ಅಲ್ಲಿ ತಳುವದೆ ಮನೋಜ್ಞವಾಗಿ ವಿಲಾಸದಿಂದ ಮುಂದಡಿಯಿಟ್ಟಳು (ಕಡಲೆರೆಯನೊಡವೆರೆಯಲು ಎಡೆ ಎಡೆಯು ಬೆಟ್ಟವನು ಬಳಸಿ ತೊರೆ ಮುಂಬರಿಯುವಂತೆ).

ಆವರ್ತಮನೋಜ್ಞನಾಭಿಃ = ಸುಳಿನಾಭಿ ॥

**53. ಅಥಾಂಗದಾಶ್ಲಿಷ್ಟಭುಜಂ ಭುಜಿಷ್ಯಾ ।**
**ಹೇಮಾಂಗದಂ ನಾಮ ಕಲಿಂಗನಾಥಮ್ ॥**

**ಆಸೇದುಷೀಂ ಸಾಧಿತಶತ್ರುಪಕ್ಷಂ ।**
**ಬಾಲಾಮಬಾಲೇಂದುಮುಖೀಂ ಬಭಾಷೇ** ॥ ೫೩ ॥

ಆ ಬಳಿಕ ಆ ಮದುವೆಯ ಹುಡುಗಿ (ಮದಿಮಾಳು (ತೌಳವಭಾಷೆ) ಕಲಿಂಗಧರಾವಲ್ಲಭನ ಬಳಿಯಲ್ಲಿ ಹೋಗಿ ನಿಂತಳು. ಆ ಕಲಿಂಗ (ಕಾಳಿಂಗ, ಉತ್ಕಲ) ದೇಶಾಧಿಪತಿ ಹೇಮಾಂಗದನೆಂಬ ಹೆಸರಿನವನು ತನ್ನ ಹೆಸರಿಗೆ ತಕ್ಕಂತೆ ಹೇಮಭೂಷಣವಿರಾಜಿತನು. ತನ್ನ ನಿಡುತೋಳುಗಳಲ್ಲಿ ಅಂಗದ, ಕೇಯೂರ, ಹೇಮಾಂಗದಗಳನ್ನು ಧರಿಸಿರ್ದ ಸುಂದರ ಯುವಕನು (ಅಂಗದದ ಬಾಹುವಿನ ಹೇಮಾಂಗದಾಂಕಿತನ). ತನ್ನ ಶತ್ರುಗಳನ್ನು ನಾಮಾವಶೇಷಮಾಡಿದ ಅತುಳಪರಾಕ್ರಮಿ. ಪೂರ್ಣೇಂದುಮುಖಿ, ಬಾಲೇಂದುಮುಖಿ ಯೆನಿಸಿದ ಬಾಲೆಯಾದ ಇಂದುಮತಿಯು ಕಳಿಂಗಾಧಿಪತಿಯ ಸನಿಹದಲ್ಲಿ ಬಂದು ನಿಂತಿರಲು ಆಕೆಯ ಕಿಂಕರಿ ಸುನಂದೆ ಸುಮಧುರವಾಗಿ ನುಡಿಯುತ್ತಾ ಹೀಗೆಂದಳು (ಆ ನೃಪನ ಕಥನದಿಂ ಪಡಿಯರಿತಿ ತಣಿಯಿಸಿದಳು).

ಭುಜಿಷ್ಯಾ = ಸೇವಕ ॥

**54.** **ಅಸೌ ಮಹೇಂದ್ರಾದ್ರಿಸಮಾನಸಾರಃ ।**
**ಪತಿರ್ಮಹೇಂದ್ರಸ್ಯ ಮಹೋದಧೇಶ್ಚ ॥**
**ಯಸ್ಯ ಕ್ಷರತ್ಸೈನ್ಯಗಜಚ್ಛಲೇನ ।**
**ಯಾತ್ರಾಸು ಯಾತೀವ ಪುರೋ ಮಹೇಂದ್ರಃ** ॥ ೫೪ ॥

ಈತನು ಮಹೇಂದ್ರಪರ್ವತಕ್ಕೆ ಸಮಾನವಾದ ಗುಣಸತ್ವಗಳನ್ನು ಹೊಂದಿರುವ ಮಹಾವೀರನು (ಅಂತೆಯೆ ಮಹೇಂದ್ರಾದ್ರಿಸಮಸತ್ವನು). ಆ ಜನಭರಿತವಾದ ಉತ್ಕಲ (ಒರಿಸ್ಸಾ) ದೇಶದಲ್ಲಿ ಮಹೇಂದ್ರಪರ್ವತಸಾಲು ತಲೆಯೆತ್ತಿ ಮೆರೆಯುತ್ತಲಿದೆ. ಅಂತಹ ಮಹಾನ್ ದೇಶದ ದೊರೆಯಿವನು. ಅಲ್ಲಿಯೇ ಸನಿಹದಲ್ಲಿ ಪೂರ್ವಮಹಾಸಾಗರವು ಭೋರ್ಗರೆಯುತ್ತಲಿದೆ. ಅವನು ದಿಗ್ವಿಜಯವನ್ನು ಕೈಕೊಂಡಾಗ ತನ್ನ ಗಜಸೇನೆಯ ಮುಂಚೂಣಿಯಲ್ಲಿ ಮಹೇಂದ್ರಾಚಲವೆಂಬ ಕುಲಪರ್ವತದಂತೆ ಶೋಭಿಸುತ್ತ ಸೇನೆಯನ್ನು ಮುನ್ನಡೆಸಿರ್ದನು. ಅವನ ದೇಶವನ್ನು ಪೂರ್ವಸಮುದ್ರವೇ (ಪೂರ್ವಮಹೋದಧಿ) ಒಂದು ಜಲದುರ್ಗದಂತೆ ರಕ್ಷಿಸುತ್ತಿದೆ, ಅವನ ಸೇನೆಯಲ್ಲಿರುವ ಮಹಾಗಜಗಳು ಮಹೇಂದ್ರ ಪರ್ವತದಂತೆ ಬಲವುಳ್ಳವು ಮತ್ತು ಪರ್ವತಕ್ಕೆ ಸಮಾನವಾದ ದೀರ್ಘಕಾಯ(ಬೃಹತ್ ಕಾಯ)ದಿಂದ ಒಪ್ಪುತ್ತ ಕಪ್ಪಾದ (ಕರಿದಾದ) ಪರ್ವತಗಳೇ ನಡೆದುಬಂದಂತೆ ತೋರುತ್ತ ಜನರಿಗೆ ಭಯವನ್ನು (ನಡುಕವನ್ನು) ಹುಟ್ಟಿಸುತ್ತಲಿವೆ.

ಮಹೇಂದ್ರ = ಮಹೇಂದ್ರಾದ್ರೇಃ ಸಮಾನಃ ಸಾರಃ (ಬಲಂ) ಯಸ್ಯ ॥

**55.** **ಜ್ಯಾಘಾತರೇಖೋ ಸುಭುಜೋ ಭುಜಾಭ್ಯಾಂ ।**
**ಬಿಭರ್ತಿ ಯಶ್ಚಾಪಭೃತಾಂ ಪುರೋಗಃ ॥**
**ರಿಪುಶ್ರಿಯಾಂ ಸಾಂಜನಬಾಷ್ಪಸೇಕೇ ।**
**ಬಂದೀಕೃತಾನಾಮಿವ ಪದ್ಧತೀ ದ್ವೇ** ॥ ೫೫ ॥

ಅವನು ಸುಭುಜನು. ಧನುರ್ಧರರಲ್ಲಿ ಅಗ್ರೇಸರನು. ಅವನ ಉನ್ನತವಾದ ಭುಜಭಾಗದಲ್ಲಿ ಬಿಲ್ಲಿನ ಹಗ್ಗದಿಂದಾದ ಎರಡು ಗುರುತುಗಳು ಸ್ಪಷ್ಟವಾಗಿ ರಕ್ಷಣೆಯುವಾಗಿ ಕಾಣಿಸುತ್ತಿವೆ. ಇದು ಚಾಪದ ಸಿಂಜಿನಿಯು ಹೊಡೆತದಿಂದ ಉಂಟಾದ ಜ್ಯಾರೇಖೆಗಳು, ಎರಡು ಕಾಲುದಾರಿಯಂತೆ ತೋರುತ್ತಿವೆ. ಮಹಾಧನುರ್ಧರನಾದ ಇವನಿಂದ ಸೆರೆಹಿಡಿದಿರುವ ವೈರಿಗಳ ಹೆಂಡಿರ ಕಾಡಿಗೆಮಿಶ್ರಿತ ಕಣ್ಣೀರಧಾರೆಗಳು ಈ ದಾರಿಯ ಮೂಲಕ ಹರಿದುಹೋಗುತ್ತಿವೆಯೋ ಎಂಬಂತೆ ತೋರುತ್ತಿಹುದು (ಸೆರೆವಿಡಿದ ಪಗೆ ಸಿರಿಯ ಕಾಡಿಗೆಯೊಳದ್ದಿರುವ ಕಂಬನಿಯ ಸಾಲಿನವೊಲು).

ಅನ್ವಯ :—ಸುಭುಜಃ ಚಾಪಭೃತಾಂ ಪುರೋಗಃ ಯಃ ಬಂದೀಕೃತಾನಾಂ ರಿಪುಶ್ರಿಯಾಂ ಸಾಂಜನಬಾಷ್ಪಸೇಕೇ ದ್ವೇ ಪದ್ಧತೀ ಇವ ಜ್ಯಾಘಾತರೇಖೇ ಭುಜಾಭ್ಯಾಂ ಬಿಭರ್ತಿ ॥

**56.** **ಯಮಾತ್ಮನಃ ಸದ್ಮನಿ ಸಂನಿಕೃಷ್ಟೋ ।**
**ಮಂದ್ರಧ್ವನಿತ್ಯಾಜಿತ ಯಾಮತೂರ್ಯಃ ॥**
**ಪ್ರಾಸಾದವಾತಾಯನದೃಶ್ಯವೀಚಿಃ ।**
**ಪ್ರಬೋಧಯತ್ಯರ್ಣವ ಏವ ಸುಪ್ತಮ್** ॥ ೫೬ ॥

ಅರಮನೆಯ ಸಮೀಪದಲ್ಲಿ ಮಹಾಸಾಗರವು ಭೋರ್ಗರೆಯುತ್ತ ಮೆರೆಯುತ್ತಿಹುದು. ನೀನು ನಿನ್ನ ರಾಜಸೌಧದಲ್ಲಿ ಕುಳಿತು ಅದನ್ನು ವಾತಾಯನಗಳನ್ನು ತೆರೆದು ಕಾಣಬಹುದು. ಆ ಸಮುದ್ರರಾಜನ ಆರ್ಭಟೆಯು (ಬೊಬ್ಬೆ) ಯಾಮತೂರ್ಯಗಳನ್ನು ಧಿಕ್ಕರಿಸಿ ಕೇಳುತ್ತಿರುವುದು. ಮಹಾರಾಜಾಧಿರಾಜನಾದ ನಿನ್ನ ಭರ್ತಾರನನ್ನು ಮುಂಜಾನೆಯ ವೇಳೆ ಸಾಗರನೇ ಬೇಗನೇ ಏಳುವಂತೆ ಎಚ್ಚರಿಸುವನು (ಯಾಮತೂರ್ಯಂಗಳನು ಧಿಕ್ಕರಿಪ ಮಂದ್ರದೊಳು), ಸಮುದ್ರರಾಜನ ಮಂದರಶಬ್ದವು, ತೆರೆಗಳ ಘನವಾದ ರವವು ಯಾಮತೂರ್ಯ ಹಾಗೂ ವೈತಾಲಿಕರ, ಸ್ತುತಿಪಾಠಕರ ಘೋಷವನ್ನು ಮೀರಿಸಿ ಕೇಳುತ್ತಿರುವುದು. ಇದರಿಂದ ಮಹಾರಾಜನು ಎಚ್ಚರಗೊಳ್ಳುವನು, ಪ್ರಬೋಧಿತನಾಗುವನು. ಯಾಮಯಾಮಗಳಲ್ಲಿ ರಾತ್ರಿಕಾವಲಿನ ಯೋಧರು ತಮ್ಮ ನಗಾರಿಯನ್ನು ತಮ್ಮ ನಗರಗಳಲ್ಲಿ ಬಾರಿಸುವ ವ್ಯವಸ್ಥೆಯಿದೆ. ಇದರಿಂದ ಜನರಿಗೆ ರಾತ್ರಿಪಹರೆಯರಿಗೆ ರಾತ್ರಿವೇಳೆ ಸಮಯದ ಅರಿವಾಗುವುದು.

ಸನ್ನಿವಿಷ್ಟಃ = ಕೃತೋಪಭೋಗಮ್ ॥

**57.** **ಅನೇನ ಸಾರ್ಧಂ ವಿಹರಾಂಬುರಾಶೇಃ ।**
**ತೀರೇಷು ತಾಲೀವನಮರ್ಮರೇಷು ॥**
**ದ್ವೀಪಾಂತರಾನೀತಲವಂಗಪುಷ್ಪೈಃ ।**
**ಅಪಾಕೃತಸ್ವೇದಲವಾ ಮರುದ್ಭಿಃ** ॥ ೫೭ ॥

ಆ ಜಲರಾಶಿಯ, ಕಡಲತೀರದಲ್ಲಿ ಬೆಳೆದಿರುವ ತಾಳೆಮರಗಳ ಮರ್ಮರನಾದವನ್ನು ಆಲಿಸುತ್ತ ನಿನ್ನ ಭಾವೀಪತಿಯೊಂದಿಗೆ ನೀನು ವಿಹರಿಸು (ತೀರತಾಲೀವನದ ಮರ್ಮರ

ಸಿನಾಪದೊಳು). ದ್ವೀಪಾಂತರಗಳಿಂದ ಬೀಸುತ್ತಿರುವ ಗಾಳಿಯು ಲವಂಗಪುಷ್ಪದ ಕಂಪನ್ನು ಹೊತ್ತುತರುತ್ತಿರುವುದು. ಆ ದೇವಕುಸುಮದ ಸುವಾಸನೆಯು ಮಾರುತವು ನಿನ್ನ ದೇಹದ ಬೆವರಹನಿಗಳನ್ನು ನೀಗಿಸುವುದು (ದ್ವೀಪಾಂತರಾನೀತದೇವಸುಮದೆಲರಿನೊಳು). ನಾನಾ ಕ್ರೀಡೆಗಳಿಂದ ಆಯಾಸಗೊಂಡಿರುವ ನೀನು (ಮಂದವಾಗಿ ಬೀಸುವ) ದ್ವೀಪಾಂತರದ ಕಡೆಯಿಂದ. ಕಂಪಾದ ಗಾಳಿಯಿಂದ ಪುನಶ್ಚೇತನಗೊಳ್ಳುವೆ.

ತಾಲೀವನ್ಮರ್ಮರ್ರೇಷು = ಮರ್ಮರೇತಿ ಧ್ವನತ್ಸು. ಅಂಬುರಾಶೇಃ = ಸಮುದ್ರಸ್ಯ —"ಲವಂಗದೇವಕುಸುಮಂಮವ್" ಇತ್ಯಮರಃ ॥

**58. ಪ್ರಲೋಭಿತಾಪ್ಯಾಕೃತಿಲೋಭನೀಯಾ ।**
**ವಿದರ್ಭರಾಜಾವರಜಾತಯೈವಮ್ ॥**
**ತಸ್ಮಾದಪಾವರ್ತತ ದೂರಕೃಷ್ಟಾ ।**
**ನೀತ್ಯೇವ ಲಕ್ಷ್ಮೀಃ ಪ್ರತಿಕೂಲದೈವಾತ್ ॥ ೫೮ ॥**

ವಿದರ್ಭದೇಶದ ಅರಸನಾದ ಭೋಜರಾಜನ ತಂಗಿ ಇಂದುಮತಿ ಕಮನೀಯರೂಪ ಗುಣಸಂಪನ್ನೆ. ಅವಳನ್ನು ಈ ತೆರನಾಗಿ ತನ್ನ ವಾಗ್ವಿಭವದಿಂದ, ಸವಿಮಾತುಗಳಿಂದ ದೂತಿ ಸುನಂದೆಯು ಪ್ರಚೋದಿಸಿ ನುಡಿದಳು. ಆದರೂ ಆ ಸೌಂದರ್ಯಶಾಲಿನಿ ರಾಜಮಾನಸಮನೋಹಾರಿಣಿ, ಪಿಕರವಪ್ರಖ್ಯಾತೆ ನಿರ್ಲಕ್ಷಿಸಿ ಮುಂದುವರಿದಳು. ವಿದ್ಯಾ ರೂಪಗುಣಸಂಪನ್ನನಾದ ಓರ್ವನು ಬಹಳ ದೂರದಿಂದ ನಗರಕ್ಕೆ ಆಗಮಿಸಿ ಉದ್ಯೋಗಕ್ಕೆ ಪರದಾಡುತ್ತಾ, ಕೈಯಲ್ಲಿ ಕಾಸಿಲ್ಲ, ಮೈಯಲ್ಲಿ ಬಲವಿಲ್ಲವೆಂಬಂತೆ, ಲಕ್ಷ್ಮೀಕಟಾಕ್ಷವಂಚಿತ ನಾಗಿ ಹತಭಾಗ್ಯನಾಗಿರುವಂತೆ ಆ ರಾಜನ ಪಾಡಾಯಿತು.ಭಾಗ್ಯಹೀನನನ್ನು ಭಾಗ್ಯಲಕ್ಷ್ಮಿಯು (ವೈಭವಲಕ್ಷ್ಮಿ) ತೊರೆಯುವಂತೆ ತೊರೆದು ಮುಂದೆ ಹೆಜ್ಜೆಯಿಟ್ಟಳು (ನೀತಿಯು ಬಳಸಾರ್ದ ಲಕ್ಷ್ಮಿ ಹತಭಾಗ್ಯನನು ತೊರೆವವೊಲು).

ಪ್ರತಿಕೂಲದೈವಾತ್ = ಪ್ರತಿಕೂಲಂ ದೈವಂ ಯಸ್ಯ ತಸ್ಮಾತ್—ಲೋಭನೀಯಾ = ಆಕರ್ಷಣೀಯಾ—ವಿದರ್ಭರಾಜಾವರಜಾ = ಭೋಜರಾಜನ ಅನುಜೆ (ತಂಗಿ) (ವೆಂಗ್ಡಿ-ತೌಳವಭಾಷೆ) ದೂರಕೃಷ್ಟಾ=ದೂರಮಾನೀತಾ—ಪ್ರತಿಕೂಲಂ ದೈವಂ=ದೈವವಿಮುಖ ವಾಗಲು, ದೇವರು ಮುನಿದಾಗ.

**59. ಅಥೋರಗಾಖ್ಯಸ್ಯ ಪುರಸ್ಯ ನಾಥಂ ।**
**ದೌವಾರಿಕೀದೇವಸರೂಪಮೇತ್ಯ ॥**
**ಇತಶ್ಚಕೋರಾಕ್ಷಿ ವಿಲೋಕಯೇತಿ ।**
**ಪೂರ್ವಾನುಶಿಷ್ಟಾಂ ನಿಜಗಾದ ಭೋಜ್ಯಾಮ್ ॥ ೫೯ ॥**

ಅರಮನೆಯ ದ್ವಾರಪಾಲಕಳಾಗಿ ನಿಯುಕ್ತಳಾದ ಭಾಷಾಚತುರೆ ಸುನಂದೆಯು (ದೌವಾರಿಕೆ, ಪಡಿಯರಿತಿ) ತನ್ನ ಒಡತಿಗೆ ನಯದಿಂದ ನುಡಿದಳು. "ಹೇ ಸೌಂದರ್ಯ ಲಕ್ಷ್ಮಿ, ಎಲೌ ಚಕೋರಾಕ್ಷಿ (ನೀಲಾಳಕೆ). ಕೆಂಪಾದ ಕಡೆಗಣ್ಣನೋಟವುಳ್ಳ ಬೆಡಗಿ, ಇತ್ತ ನೋಡು (ನೋಡೌ ಚಕೋರಾಕ್ಷಿ ನೀಲಾಳಕೆ). ಈತನು ನಾಗಪಟ್ಟಣದ (ಉರಗ ಪುರದ) ಅರಸು (ರಾಜಮಹೇಂದ್ರಿಯ ದೊರೆ). ಈತನು ದೇವಸಮರೂಪನು. ರೂಪ

ಮನ್ಮಥನು, ಮಾನವಗಂಧರ್ವನು, ದೃಢಕಾಯನು. (ನಾಗಪುರದೊಡೆಯನನು, ದೇವ ಸಮರೂಪನನು). ಈ ಆಂಧ್ರರಾಜನು (ತೆಲುಗು ದೇಶದ ದೊರೆ) ಮಹಾಯಶಸ್ವಿ. ಪುರುಷಮನ್ಮಥನು, ದೇವಮಾನವರೂಪಸುಂದರನು, ಗುಣವಂತನು, ನಿರ್ದೋಷಿ (ದೋಷರಹಿತನು), ಸಮಸ್ತಪುರುಷಲಕ್ಷ್ಮಗಳಿಂದ ವಿರಾಜಿಸುತ್ತಿರುವ ಪುರುಷಶ್ರೇಷ್ಠನು (ಪುರುಷಸಿಂಹನು, ಪುರುಷವ್ಯಾಘ್ರನು).

ದೌವಾರಿಕೀ = ದ್ವಾರೇ ನಿಯುಕ್ತಾ ॥

60. ಪಾಂಡ್ಯೋಯಮಂಸಾರ್ಪಿತಲಂಬಹಾರಃ ।
ಕ್ಲೃಪ್ತಾಂಗರಾಗೋ ಹರಿಚಂದನೇನ ॥
ಆಭಾತಿ ಬಾಲಾತಪರಕ್ತಸಾನುಃ ।
ಸ ನಿರ್ಝರೋದ್ಗಾರ ಇವಾದ್ರಿರಾಜಃ ॥ ೬೦ ॥

"ಹೇ ವಾಮಪಾಶ ಸಂಜಾತೆ (ಹೇ ರೂಪಿಣಿ), ಹಂಸೆಯು ನಡಿಗೆಯವಳೆ, ಎಲೌ ಸೌಂದರ್ಯಲಕ್ಷ್ಮಿ (ಭ್ರಮರಕುಂತಳೆ, ಫಣಿವೇಣಿ, ಸ್ಮರನ ಮಂತ್ರಾಧಿದೇವತೆ, ಅರಗಿಣಿ), ಈತನು ರಾಜಶ್ರೇಷ್ಠನಾದ ಪಾಂಡ್ಯಭೂಪಾಲನು (ತಮಿಳುನಾಡು, ದ್ರಾವಿಡದೇಶ, ಮದ್ರಾಸುರಾಜ್ಯ, ಚೇರ, ಚೋಳ, ಕೊಂಗುಮಂಡಲರಾಜ್ಯ) ನೀಳವಾದ ಮುತ್ತಿನ ಹಾರದಿಂದ (ಉದ್ದವಾದ, ಲಂಬವಾದ) ಕಂಗೊಳಿಸುತ್ತಿರುವ ನೃಪನಿವನು. ಕೆಂಬಣ್ಣದಿಂದ (ಮಣ್ಣಿನ ಬಣ್ಣದಿಂದ) ಶೋಭಿಸುವ ಈತನ ಘನದೇಹ ಕೆಂಬಣ್ಣದಿಂದೊಪ್ಪುವ ಪರ್ವತ ರಾಜನಂತೆ ವಿರಾಜಿಸುತ್ತಿದೆ. ಹೇ ಮಾನ್ಯಳೆ, ಸರ್ವಗುಣಸಂಪನ್ನಳೆ, ಈತನು ತನ್ನ ದೇಹಕ್ಕೆ ಹರಿಚಂದನದ (ಗಂಧದ) ಲೇಪವನ್ನು (ಅಂಗರಾಗವನ್ನು) ಲೇಪಿಸಿಕೊಂಡಿರುವನು (ಚಂದನದ ಚರ್ಚೆಗಳ ಸೊಬಗಿನವನು). ಈತನು ಪಾಂಡ್ಯದೇಶದ ದೊರೆ. ಬಾಲಸೂರ್ಯನ ಕಿರಣಗಳಿಂದ ಕೆಂಪಗೆ ತೋರುವ ಗಿರಿಶಿಖರದಂತೆ, ಕೆಂಪಾದ ತನುಕಾಂತಿಯಿಂದ ವಿರಾಜಿಸು ತ್ತಿರುವನು (ತಳೆದ ನಿರ್ಝರದದ್ರಿಪೋಲೆಸೆದನು). ಈತನನ್ನು ನಿನ್ನ ಬೊಗಸೆಕಣ್ಣು ಗಳಿಂದ ನೋಡೌ, ತಾಯೆ" ಎಂದಳು ಸಖಿ ಸುನಂದಾ.

ಪಾಂಡೂನಾಂ ಜನಪದಾನಾಂ ರಾಜಾ ಪಾಂಡ್ಯಃ ॥

61. ವಿಂಧ್ಯಸ್ಯ ಸಂಸ್ತಂಭಯಿತಾ ಮಹಾದ್ರೇಃ ।
ನಿಃಶೇಷಪೀತೋಜ್ಝಿತ ಸಿಂಧುರಾಜಃ ॥
ಪ್ರೀತ್ಯಾಶ್ವಮೇಧಾವಭೃಥಾರ್ದ್ರಮೂರ್ತೇಃ ।
ಸೌಸ್ನಾತಿಕೋ ಯಸ್ಯ ಭವತ್ಯಗಸ್ತ್ಯಃ ॥ ೬೧ ॥

ಆ ಅಗಸ್ತ್ಯಮುನಿವರನು ಮಂತ್ರದ್ರಷ್ಟಾರನು. ಮಹಾಮಹಿಮನಾದ ಅವನು ಲೋಕಾಂತರಕ್ಕೆ ಬೆಳೆಯಲು ಹೊರಟ ವಿಂಧ್ಯಾಪರ್ವತವನ್ನು ಉದ್ದಂಡ ಮಲಗಿಸಿ, ಗರ್ವಭಂಗವಮಾಡಿದ ಮಹಾಮಹಿಮನು. ಹಿಂದೆ ವಿಂಧ್ಯಪರ್ವತವು ಸೂರ್ಯನನ್ನು ಮರೆಮಾಡಲು ಉಜ್ಜುಗಿಸಿ ಒಂದೇ ಸಮನೆ ಬೆಳೆಯತೊಡಗಿತು. ಆ ಸಮಯಕ್ಕೆ ಸರಿಯಾಗಿ ಅಗಸ್ತ್ಯಮುನೀಶ್ವರರೂ ದಕ್ಷಿಣಭಾರತಕ್ಕೆ ಕಾಲಿಟ್ಟರು. ಅವರನ್ನು ಕಂಡ ವಿಂಧ್ಯಾದ್ರಿಯು ಸಾಷ್ಟಾಂಗ ವಂದಿಸಿತು. ತಾನು ಬರುವತನಕ ಹಾಗೇ ಮಲಗಿರಬೇಕೆಂದು ಹೇಳಿ ಆ

ಮುನಿಪುಂಗವರು ದಕ್ಷಿಣಾಪಥವನ್ನು ಪ್ರವೇಶಿಸಿದರು. ಆ ಬಳಿಕ ಹಿಂದಿರುಗಲೇ ಇಲ್ಲ (ವಿಂಧ್ಯವನು ಸದೆದವನು, ಅಬ್ಧಿಯನು ಕುಡಿದವನು). ಅಗಸ್ತ್ಯಮಹರ್ಷಿಗಳು ಗೈದ ಇನ್ನೊಂದು ಪವಾಡವೆಂದರೆ ಸಮುದ್ರವನ್ನು ಕೊನೆಯ ಬಿಂದು ತನಕ ಕುಡಿದು ಪುನಃ ಲೋಕಕಲ್ಯಾಣಾರ್ಥವಾಗಿ ಕರುಣಾದ್ರ್ರಹೃದಯರಾದ ಅವರು ಆಪೋಶನಮಾಡಿದ ಸಾಗರದ ಜಲವನ್ನು ಹಾಗೆಯೇ ಹೊರಬಿಟ್ಟರು. ಹೀಗೆ ಸಮುದ್ರವನ್ನು ಕುಡಿದ ಕೀರ್ತಿಗೆ ಪಾತ್ರರಾದವರು. ಅಂತಹ ಬ್ರಹ್ಮಋಷಿಗಳಾದ ಅಗಸ್ತ್ಯರು ಸ್ವತಃ ಬಂದು ಪಾಂಡ್ಯರಾಜನ ಅಶ್ವಮೇಧಯಾಗದಲ್ಲಿ ಅಧ್ವರ್ಯುವಾಗಿ ನಿಂತು ಆ ಯಜ್ಞವನ್ನು ಜೈಮಿನಿಯ ಪೂರ್ವ ಮೀಮಾಂಸೆಯ ವಿಧಿಯಂತೆ ವೇದೋಕ್ತವಾಗಿ ಸಮಾಪ್ತಿಗೊಳಿಸಿದರು. ಹೀಗೆ ಪೂತಾತ್ಮನಾದ (ಪವಿತ್ರನಾದ) ಪಾಂಡ್ಯರಾಜಕುಮಾರನು ಅಶ್ವಮೇಧಯಾಗವು ಮುಗಿದ ಬಳಿಕ ಪರಮಪವಿತ್ರವಾದ ಅವಭೃತಸ್ನಾನಗೈದನು. ಅವಭೃತಸ್ನಾನವನ್ನು ಅಗಸ್ತ್ಯರೇ ಪೂರೈಸಿದರು. ಅವರ ಅಮೃತಹಸ್ತದಿಂದ ಪವಿತ್ರಜಲವನ್ನು ಸ್ವೀಕರಿಸಿದ ಪರಮಭಾಗ್ಯಶಾಲಿ ಈತನು (ಅಶ್ವಮೇಧಾವಭೃತಸ್ನಾನಾದ್ರ್ರಮೂರ್ತಿಯುನು). ಆತನು ಅವಭೃತ ಸ್ನಾನಾದ್ರ್ರ (ಒದ್ದೆಯಾಗು) ಮೂರ್ತಿಯಾಗಿ ಬೆಳಗಿದನು. ಅಂತಹ ತೇಜಸ್ವಿಯಾದ ಪಾಂಡ್ಯರಾಜಕುವರನೀತನು.

ಸೌಸ್ನಾತಿಕಃ = ಸುಸ್ನಾತಂ ಪ್ರಚ್ಛತೀತಿ—ಭವತಿ—ಪ್ರಚ್ಛತೌ ಸುಸ್ನಾತಾದಿಭ್ಯಃ ||

**62. ಅಸ್ತ್ರಂ ಹರಾದಾಪ್ತವತಾ ದುರಾಪಂ |**
**ಯೇನೇಂದ್ರಲೋಕಾವಜಯಾಯ ದೃಪ್ತಃ ||**
**ಪುರಾ ಜನಸ್ಥಾನವಿಮರ್ದಶಂಕೀ |**
**ಸಂಧಾಯ ಲಂಕಾಧಿಪತಿಃ ಪ್ರತಸ್ಥೇ || ೬೨ ||**

ಈ ರಾಜನು ಮುಕ್ಕಣ್ಣನಾದ ಶಿವನಿಂದ ಅಗ್ನಿಕ್ಷಿಪಣಿಯೆಂಬ ದಿವ್ಯಾಸ್ತ್ರವನ್ನು ವರವಾಗಿ ಪಡೆದು ಅಜೇಯನೆನಿಸಿದನು (ಹರನಿಂದ ಅನನ್ಯಲಭ್ಯಾಸ್ತ್ರವನು ಪಡೆದವನು). ಇವನ ಮೇಲ್ಮೆಯನ್ನು ತಿಳಿದು ಇವನಿಂದ ಜನಸ್ಥಾನಕ್ಕೆ (ದಂಡಕಾರಣ್ಯಕ್ಕೆ) ಕೇಡು ಸಂಭವಿಸಬಹುದೆಂದು ತಿಳಿದು ರಾಕ್ಷಸಸಾರ್ವಭೌಮನಾದ ದಶಕಂಠನು ಅವನೊಡನೆ ಸಂಧಿಯನ್ನು ಮಾಡಿಕೊಂಡನು. ಅನಂತರ ಆ ರಾಕ್ಷಸೇಂದ್ರನು ನಾಕಲೋಕವನ್ನು ಗೆಲ್ಲಲು ನಿಶ್ಚಯಿಸಿ. ಸುರಲೋಕದಿಗ್ವಿಜಯಕ್ಕೆ ಅಸುರಸೇನೆಸಹಿತ ಪೊರಮಟ್ಟನು (ಹೊರಟುಹೋದನು),

ದುರ್ಲಭಮಸ್ತ್ರಂ = ಬ್ರಹ್ಮಶಿರೋನಾಮಕ ಅಸ್ತ್ರಂ—ಇಂದ್ರವಿಜಯಿನೋ ರಾವಣಸ್ಯಾಪಿ ವಿಜೇತೇತ್ಯರ್ಥಃ ||

ಅನ್ವಯ :—ಪುರಾ ಜನಸ್ಥಾನವಿಮರ್ದಶಂಕೀದೃಪ್ತಃ ಲಂಕಾಧಿಪತಿಃ ದುರಾಪಂ ಅಸ್ತ್ರಂ ಹರದಾಪ್ತವತಾಯೇನ ಸಂಧಾಯ ಇಂದ್ರಲೋಕಾವಜಯಾಯ ಪ್ರತಸ್ಥೇ ||

**63. ಅನೇನ ಪಾಣೌ ವಿಧಿವದ್ಗೃಹೀತೇ |**
**ಮಹಾಕುಲೀನೇನ ಮಹೀವ ಗುರ್ವೀ ||**
**ರತ್ನಾನುವಿದ್ಧಾರ್ಣವಮೇಖಲಾಯಾ |**
**ದಿಶಃ ಸಪತ್ನೀ ಭವ ದಕ್ಷಿಣಾಸ್ಯಾಃ || ೬೩ ||**

ಎಲೌ ತರಳೆ, ನೀನು ಮಹಾಕುಲಜನನು, ಆಶ್ವಲಾಯನ, ಬೋಧಾಯನ ಮೊದಲಾದ ಮಾನವಧರ್ಮಗೃಹ್ಯಸೂತ್ರಗಳಲ್ಲಿ ವಿವರವಾಗಿ ಹೇಳಿರುವ ಧಾರ್ಮಿಕ ವಿಧಿವಿಧಾನಗಳಿಂದ ಶಾಸ್ತ್ರೋಕ್ತವಾಗಿ ಲಗ್ನವಾಗಿ ದಕ್ಷಿಣಭಾರತದೇಶದ ತುತ್ತತುದಿಯಲ್ಲಿರುವ ರಾಜ್ಯದ ಭೂರಮೆಯು ಪಟ್ಟದರಸಿಯಾಗು (ಕೈವಿಡಿದು ಭೂರಮೆಯು ತೆರವೊಳಿಂದು, ರತ್ನಾಬ್ಧಿ ಮೇಖಲೆಯು ದಕ್ಷಿಣದಿಗಂಗನೆಯು). ಆ ದಕ್ಷಿಣದೇಶದ ದಕ್ಷಿಣದಿಗಂಗನೆಯು ಸವತಿಯಾಗಿ ಚಿರಂಜೀವಿಯಾದ ಸುಮಂಗಲಿಯಾಗಿ ಬಾಳುತ್ತಲಿರು (ಒಪ್ಪಿಕೊಳು ತರಳೆ ನಲಿದು). ಆ ದಕ್ಷಿಣದೇಶವನ್ನು ರತ್ನಗಳ ನಿಧಿಯೆನಿಸಿರುವ, ಮುತ್ತುರತ್ನಗಳು ಸಿಗುವ, ರತ್ನಾಬ್ಧಿಯು ಮೇಖಲೆಯಂತೆ (ಬಳೆಯಂತೆ, ಸೊಂಟದ ಉಡಿದಾರದಂತೆ, ಡಾಬಿನಂತೆ) ಸುತ್ತುವರಿದಿದೆ.

ಅನ್ವಯ :—ಮಹಾಕುಲೀನೇನ ಅನೇನ ವಿಧಿವತ್ ಪಾಣೌ ಗೃಹೀತೇ ಮಹೀವ ಗುರ್ವೀರತ್ನಾನುವಿದ್ಧಾರ್ಣವಮೇಖಲಯಾ ದಕ್ಷಿಣಸ್ಯಾಃ ದಿಶಃ ಸಪತ್ನೀ ಭವ ॥

**64. ತಾಂಬೂಲವಲ್ಲೀಃ ಪರಿಣದ್ಧಪೂಗಾ ।**
**ಸ್ವೇಲಾಲತಾಂಗಿತಚಂದನಾಸು ॥**
**ತಮಾಲಪತ್ರಾಸ್ತರಣಾಸುರಂತುಂ ।**
**ಪ್ರಸೀದ ಶಶ್ವನ್ಮಲಯಸ್ಥಲೀಷು** ॥ ೬೪ ॥

ಅವಳು ಮತ್ತೂ ನುಡಿದಳು: "ಓ ಸಾರಸನೇತ್ರೆ, ಮಂಜುಳಗಾತ್ರೆ, ಓ ರಾಜಕುವರಿ, ನೀನು ನಿನ್ನ ಭಾವೀಭರ್ತಾರನೊಂದಿಗೆ ತಮಾಲವೃಕ್ಷಗಳಿಂದ ನಿಬಿಡವಾಗಿರುವ ಪರ್ವತ ಪ್ರದೇಶದಲ್ಲಿ ಕ್ರೀಡಿಸು. ಅಲ್ಲಿಯ ವನಭೂಮಿಗಳ ಚಂದನವೃಕ್ಷಗಳು ಕಂಪು ಬೀರುವ ಏಲಕ್ಕಿ ಬಳ್ಳಿಯಿಂದ ಸುತ್ತುವರೆದಿವೆ. ಅಲ್ಲಿಯ ಕಂಗಿನ ತೋಟಗಳಲ್ಲಿ (ಅಡಿಕೆಮರ) ವೀಳ್ಯದೆಲೆ ಬಳ್ಳಿಗಳು ಕಂಗಿನ ಮರಗಳನ್ನು (ಪೂಗ) ಆವರಿಸಿ ಸುತ್ತಿಕೊಂಡಿವೆ (ತಾಂಬೂಲವಲ್ಲಿಗಳನೊಡವೆರೆದ ಪೂಗಗಳು, ಏಲಾಲತಾಶ್ಲಿಷ್ಟಚಂದನಗಳು). ಇಂತಹ ಸುರಲೋಕದ, ಭೂಸ್ವರ್ಗದ ನಂದನವನಕ್ಕೆ, ವನಭೂಮಿಗೆ ಸರಸಸಂತೋಷದಿಂದ ನಿನ್ನ ಪತಿಯೊಂದಿಗೆ ವಿಹರಿಸುತ್ತ ಯೌವನಶ್ರೀಯನ್ನು ಸಾರ್ಥಕಗೊಳಿಸಮ್ಮ, ಸೌಭಾಗ್ಯಲಕ್ಷ್ಮಿ (ರಮಿಸು ನೀ ಲೀಲೆಯಿಂದೆಂದಳು ಅವಳು).

ಪರಿಣದ್ಧಾ = ಪರಿರಬ್ಧಾ—ತಾಂಬೂಲೇತಿ = ತಾಂಬೂಲವಲ್ಲೀಭಿರ್ನಾಗವಲ್ಲೀಭಿಃ ॥

**65. ಇಂದೀವರಶ್ಯಾಮತನುರ್ನೃಪೋಽಸೌ ।**
**ತ್ವಂ ರೋಚನಾಗೌರಶರೀರಯಷ್ಟಿಃ ॥**
**ಅನ್ಯೋನ್ಯಶೋಭಾಪರಿವೃದ್ಧಯೇ ವಾಂ ।**
**ಯೋಗಸ್ತಡಿತ್ತೋಯದಯೋರಿವಾಸ್ತು** ॥ ೬೫ ॥

ಈತನು ನೀಲವರ್ಣದ ನೈದಿಲೆ ಹೂವಂತೆ, ಶ್ಯಾನೆಕಪ್ಪಾದ ಮೈಬಣ್ಣದವನು. ನೀನಾದರೋ ಓ ಸೌಂದರ್ಯಸಾರಳೆ (ರೂಪಸಿ). ಥಳಥಳಿಸುವ ಗೌರವರ್ಣವಾದ ಸ್ವರ್ಣದಂತೆ ಮಿರುಗುವ (ಪ್ರಕಾಶಿಸುವ) ಹಳದಿಬಣ್ಣದ ಮೈಯುಳ್ಳವಳು (ಇಂದೀವರ ಶ್ಯಾಮತನುವೀ ನೃಪೋತ್ತಮನು, ಗೋರೋಚನಾಗೌರವರ್ಣೆ ನೀನು), ನಿಮ್ಮಿಬ್ಬರ

ಸಂಗಮವು (ಮಿಲನವು) ಮೇಘ ಮತ್ತು ಅದರಿಂದ ಹೊರಸೂಸುತ್ತಿರುವ ಮಿಂಚಿನಂತೆ ನಿತ್ಯಸಹಜಸುಂದರ. ಘನವಾದ ಯೋಗವಿದ್ಯೆಯಂತೆ ನಿಮ್ಮ ಉಭಯಸಂಗಮವು (ಸೇರುವಿಕೆ, ಕೂಡುವಿಕೆ) ವರ್ಧಿಸಲಿ ಭರದೆ. ನಿಮ್ಮ ಜೋಡಿಯು (ಸುಬ್ರಹ್ಮಣ್ಯಕ್ಕೆ ಹೋದರೂ ಸಿಗದು ಎಂಬಂತೆ) ಒಬ್ಬರ ಸೌಂದರ್ಯಕ್ಕೆ ಪೂರಕವಾಗಿರಲಿ, ಹೆಚ್ಚಿಸುವಂತಾಗಲಿ. ಅನ್ಯೋನ್ಯಕಾಂತಿಯು ವರ್ಧಿಸಲಿ.

ಇಂದೀವರೇತಿ = ಅಸೌ ನೃಪ ಇಂದೀವರಶ್ಯಾಮತನುಃ ॥ ಅನ್ಯೋನ್ಯ ಅಲಂಕಾರ—(ಕ್ರಿಯಯಾತು ಪರಸ್ಪರವಮ್)

**66. ಸ್ವಸುರ್ವಿದರ್ಭಾಧಿಪತೇಸ್ತದೀಯೋ ।**
**ಲೇಭೇಽನ್ತರಂ ಚೇತಸಿ ನೋಪದೇಶಃ ॥**
**ದಿವಾಕರಾದರ್ಶನಬದ್ಧಕೋಶೇ ।**
**ನಕ್ಷತ್ರನಾಥಾಂಶುರಿವಾರವಿಂದೇ ॥ ೬೬ ॥**

ವಿದರ್ಭಾಧಿಪತಿ ಬೋಜರಾಜನ ತಂಗಿಯ ಹೃದಯಾರವಿಂದದಲ್ಲಿ ಸುನಂದಳ ಮಾತಿಗೆ ಆಶ್ರಯ ದೊರಕಲಿಲ್ಲ (ವಿದರ್ಭಾಧಿಪತಿಯ ಮರಜೆಯ ಚೇತದೊಳು ಕೆಳದಿಯುಪದೇಶಕೆ ಎಡೆದೊರೆಯದಿಹುದು). ಸೂರ್ಯನ ದರ್ಶನವನ್ನು ಪಡೆಯದೆ ಮುಚ್ಚಿರುವ ತಾವರೆಯ ಮೊಗ್ಗು ಎಂದಾದರೂ ಚಂದ್ರನ ಕಿರಣಗಳಿಗೆ ಆಶ್ರಯ ಕೊಡುವುದುಂಟೆ? ಅದೇ ತೆರನಾಯ್ತು. ಸುನಂದಳ ಉಪದೇಶವು ಅರಣ್ಯರೋದನವಾಯಿತು. ನಕ್ಷತ್ರರಾಜನಾದ ಅಮೃತಸದೃಶವಾದ ಕಿರಣಗಳನ್ನು ಮಾನವಲೋಕಕ್ಕೆ ಪಸರಿಸುವ ಚಂದ್ರಮನನ್ನು ಕಂಡು ಅರವಿಂದವು (ತಾವರೆಯು) ಎಂದೂ ಅರಳದು.

ಅನ್ವಯ:—ವಿದರ್ಭಾಧಿಪತೇ ಸ್ವಸುಃ ಚೇತಸಿ ತದೀಯಃ ಉಪದೇಶಃ ದಿವಾಕರಾದರ್ಶನಬದ್ಧಕೋಶೇ ಅರವಿಂದೇ ನಕ್ಷತ್ರನಾಥಾಂಶುಃ ಇವ ಅಂತರಂ ನ ಲೇಭೇ ॥ ಅಂತರಮವಕಾಶಂ ನ ಲೇಭೇ ॥

**67. ಸಂಚಾರಿಣೀದೀಪಶಿಖೇವ ರಾತ್ರೌ ।**
**ಯಂ ಯಂ ವ್ಯತೀಯಾಯ ಪತಿಂವರಾ ಸಾ ॥**
**ನರೇಂದ್ರಮಾರ್ಗಾಟ್ಟ ಇವ ಪ್ರಪೇದೇ ।**
**ವಿವರ್ಣಭಾವಂ ಸ ಸ ಭೂಮಿಪಾಲಃ ॥ ೬೭ ॥**

ತನಗೆ ತಕ್ಕವನಾದ ಭೂಮಿಪಾಲನನ್ನು ಅರಸುತ್ತ ರಾತ್ರಿಕಾಲದಲ್ಲಿ ಸಂಚರಿಸುವ ದೀಪದಂತೆ ಮುಂದಮುಂದಕ್ಕೆ ಹೋದಳು. ಆಗ ಆ ಅರಸರ ಮುಖವು ಕಳೆಗುಂದಿತು, ಅವಳು ದಾಟಿಹೋದುದನ್ನು ಕಂಡು ಅವರು ಜೋಲುಮುಖ, ಅಧೋವದನರಾಗಿ ಕುಳಿತುಕೊಂಡರು. ವಿವರ್ಣರಾದರು. ಸಂಚಾರಿಣೀದೀಪವು ದಾರಿಯ ಇಕ್ಕಡೆಗಳ ಸೌಧಗಳನ್ನು ದಾಟುತ್ತ ಮುಂದಮುಂದಕ್ಕೆ ಹೋದಂತೆ, ದೀಪಾಂಕುರವು ದಾಟಿಹೋದಾಗ ಹರ್ಮ್ಯಗಳು ಕಳೆಗುಂದುವಂತೆ, ಅಂಧಕಾರದಲ್ಲಿ (ಕತ್ತಲಲ್ಲಿ) ಮುಳುಗಿರುವಂತೆ (ಇರುಳಿನಲಿ ಸಂಚರಿಪ ದೀಪಾಂಕುರಂಬೋಲು) ಅವರ ಪರಿಸ್ಥಿತಿಯಾಯಿತು. ಅವರ ಮನಸ್ಸಿನಲ್ಲಿ ನಿರಾಶಾಭಾವವು ತಾಂಡವವಾಡತೊಡಗಿತು. ಅವರ ಮನಸ್ಸಿನ ಪಡಿಯಚ್ಚಿನಂತಿದ್ದ

ಮುಖಕಮಲವು ಬಾಡಿ ಕಮರಿಹೋಯಿತು. ಅವರೆಲ್ಲರೂ ಚಿಂತಾಕ್ರಾಂತರಾದರು. ತೇಜೋಹೀನರಾದರು. ಮೊಗವು ಸಪ್ಪೆಯಾಯಿತು. ಕಾಂತಿ ಕುಂದಿ ಮುಂಜುಮುಸುಕಿದ, ಮುದುಡಿದ ತಾವರೆಯಂತಾಯಿತ್ತು,

ವಿವರ್ಣಭಾವಂ = ವಿಚ್ಛಾಯತ್ವಮ್ । ಉಪಮಾಲಂಕಾರ ॥

68. ತಸ್ಯಾಂ ರಘೋಃ ಸೂನುರುಪಸ್ಥಿತಾಯಾಂ।
ವೃಣೀತ ಮಾಂ ನೇತಿ ಸಮಾಕುಲೋಽಭೂತ್ ॥
ವಾಮೇತರಃ ಸಂಶಯಮಸ್ಯ ಬಾಹುಃ।
ಕೇಯೂರಬಂಧೋಚ್ಛ್ವಸಿತೈರ್ನುನೋದ ॥ ೬೮ ॥

ಪತಿಭಿಕ್ಷಾಕಾತುರಳಾದ ಇಂದುಮತಿಯು ರಘುಸೂನುವಿನ ಎದುರು ಬಂದು ನಿಂತ ಆ ಶುಭಘಳಿಗೆಯಲ್ಲಿ ಆತನ ಮನಸಿನಲ್ಲಿ ಬಲವಾದ ಸಂಶಯವೊಂದು ಅಂಕುರಿಸಿತು. ಈ ಅಸಾಮಾನ್ಯಳಾದ ರಾಜಕನ್ಯೆಯು ತನ್ನನ್ನು ವರಿಸುವಳೋ ಅಥವಾ ವರಿಸದಿರುವಳೋ ಎಂದು ಚಿಂತಿಸಿದನು (ಅಜನ ಬಳಿಗೈದುವರ ವರಿಸುವಳೋ ವರಿಸಳೋ ತನ್ನನೆಂದು). ಆಗ ಆತನ ಬಲಭುಜವು ಅದುರಿತು. ವಾಮಭುಜವು ಸ್ಫುರಿಸಿ ಶುಭವನ್ನು ಸೂಚಿಸಿತು, ಇದರಿಂದ ಬಲಭುಜದಲ್ಲಿ ಧರಿಸಿದ್ದ ಕೇಯೂರಾದಿ ಆಭರಣಗಳು ಸಡಿಲಾದುವು. ದೈವ ಪ್ರೇರಣೆಯಿಂದ ಈ ನಿದರ್ಶನವಾದುದನ್ನು ಅರಿತ ಮಾನವಾಗ್ರಣಿ ರಘುಸೂನು ಅತ್ಯಂತ ಹರ್ಷಗೊಂಡನು. ಬಲಭುಜವು ಹಾರುತ ಅವನ ಸುಶಯವನ್ನು ಅಳಿಸಿಬಿಟ್ಟಿತು. ಕಂಪಿಸಿ (ಅದುರಿ) ಅನುಕಂಪ ಸೂಚಿಸಿತು ಎಂಬಂತೆ.

ಸಮಾಕುಲಃ = ಸಂಶಯಿತಃ ॥

69. ತಂ ಪ್ರಾಪ್ಯ ಸರ್ವಾವಯವಾನವದ್ಯಂ।
ವ್ಯಾವರ್ತತಾನ್ಯೋಪಗಮಾತ್ ಕುಮಾರೀ ॥
ನ ಹಿ ಪ್ರಫುಲ್ಲಂ ಸಹಕಾರಮೇತ್ಯ।
ವೃಕ್ಷಾಂತರಂ ಕಾಂಕ್ಷತಿ ಷಟ್ಪದಾಲೀ ॥ ೬೯ ॥

ಸರ್ವಾಂಗಸುಂದರಿಯಾದ ಭೋಜಸೋದರಿಯು ಮುಂದೆ ಹೋಗುವ ತನ್ನ ಉದ್ಯೋಗವನ್ನು ತಡೆದಳು. ಆಗತಾನೇ ಪೂರ್ಣವಾಗಿ ಕುಸುಮಿಸಿ ಹೂಬಿಟ್ಟಿರುವ ಮಾವಿನ ಮರದ ಬಳಿಗೆ ಬಂದ ತುಂಬಿಗಳ (ಬವರಿಹಿಂಡು, ಅಳಿಸಂಕುಲ, ಷಟ್ಪದಿಗಳು, ಭೃಂಗಗಳ ಸಾಲು) ಬೇರೊಂದು ಮಾಮರವನ್ನು ಆಶಿಸುವುದೇ ? ಆಶಿಸದು. ಅಂತೆಯೇ ಆ ಸೌಂದರ್ಯವಲ್ಲರಿಯು (ಬಳ್ಳಿಯು) ಪೃಥ್ವೀಪತಿಯಾದ ರಘುಸೂನುವೆಂಬ ವೃಕ್ಷವನ್ನು ಅರಿಸಿಕೊಂಡು ಸೇರಿ ಧನ್ಯವಾಯಿತು (ಸರ್ವಾಂಗಸುಂದರನ ಸಾರಿದುಂದರಿಗಂವರಿ). ಅನ್ಯೋನ್ಯಸಾದೃಶರಾದ ಆ ಹೊಸ ಜೋಡಿ ಎಲ್ಲರ ಕಣ್ಣು, ಮನಸ್ಸುಗಳಿಗೆ ಆನುದ ಕೊಡುವ ವಿಧಾತನ ಅಮೋಘವಾದ ಸೃಷ್ಟಿಯಲ್ತೆ? ಸೃಷ್ಟಿಯ ಒಂದು ನೂತನ ದಾಖಲೆ.

ಷಟ್ಪದಾಲೀ = ಭೃಂಗಾವಲಿಃ—ಪ್ರಫುಲ್ಲಂ =ವಿಕಸಿತಂ—''ಆಮ್ರಶ್ಚೂತೋ ರಸಾಲೋಽಸೌ ಸಹಕಾರೋಽತಿಸೌರಭಃ'' ಇತ್ಯಮರಃ ॥

ದೃಷ್ಟಾಂತ ಅಲಂಕಾರ—ಅನವದ್ಯ=ವದಿತುಮ್ ಅಯೋಗ್ಯಃ—ಅವದ್ಯಃ ಗರ್ಹ್ಯಃ = ನ ಅವದ್ಯಃ ಅನವದ್ಯಃ ॥

**70. ತಸ್ಮಿನ್ ಸಮಾವೇಶಿತಚಿತ್ತವೃತ್ತಿಂ ।**
**ಇಂದುಪ್ರಭಾಮಿಂದುಮತೀಮವೇಕ್ಷ್ಯ ॥**
**ಪ್ರಚಕ್ರಮೇ ವಕ್ತುಮನುಕ್ರಮಜ್ಞಾ ।**
**ಸವಿಸ್ತರಂ ವಾಕ್ಯಮಿದಂ ಸುನಂದಾ ॥ ೭೦ ॥**

ಇಂದುಮತಿಯು ಆತನಲ್ಲಿ ಬಗೆಸೋತು ನಿಂದಿರ್ದಳು (ಇಂದುಮತಿ, ಇಂದುರುಚಿ, ರುಚಿರಾಂಗಿಯಾತನೊಳು ಬಗೆಸೋತು ನಿಂದುದನು). ಎಳ್ಳಷ್ಟೂ ಕದಲದೆ ಆ ಮುಗ್ಧ ಬಾಲೆ ಪೂರ್ಣ ಅನುರಕ್ತಳಾಗಿ, ಮನಸೋತು ನಿಂದಿರ್ದ ಆಕೆಯ ಭಾವವನ್ನು ದೌವಾರಿಕೆ ಸುನಂದೆಯೂ ಕೂಡಲೇ ತಿಳಿದುಕೊಂಡಳು. ಆ ದೌವಾರಿಕೆ ರಾಜವಂಶದ ಸಂಪೂರ್ಣ ವಿವರಗಳನ್ನು ಅರಿತವಳು. ಯಥೋಚಿತವಾದ ಮಾತುಗಳನ್ನು, ನುಡಿಮುತ್ತುಗಳನ್ನು ಈ ತೆರನಾಗಿ ಆಡತೊಡಗಿದಳು.

"ವಿಸ್ತಾರೋ ವಿಗ್ರಹೋ ವ್ಯಾಸಃ ಚ ಶಬ್ದಸ್ಯ ವಿಸ್ತರಃ" ಇತ್ಯಮರಃ—ಶಬ್ದಾಲಂಕಾರ ॥

**71. ಇಕ್ಷ್ವಾಕುವಂಶ್ಯಃ ಕಕುದಂ ನೃಪಾಣಾಂ ।**
**ಕಕುತ್ಸ್ಥ ಇತ್ಯಾಹಿತಲಕ್ಷಣೋಽಭೂತ್ ॥**
**ಕಾಕುತ್ಸ್ಥಶಬ್ದಂ ಯತ ಉನ್ನತೇಚ್ಛಾಃ ।**
**ಶ್ಲಾಘ್ಯಂ ದಧತ್ಯುತ್ತರಕೋಸಲೇಂದ್ರಾಃ ॥ ೭೧ ॥**

ಎಲೈ ದೇವಿ, ಸರ್ವಶ್ರೇಷ್ಠವಾದ ದೇವಭೂಮಿಯಾದ ಭಾರತವರ್ಷದಲ್ಲಿ (ಆರ್ಯಾವರ್ತದಲ್ಲಿ) ದೇವಗಂಗೆಯು ಉತ್ತರದಿಗ್ಭಾಗದಲ್ಲಿ ಹರಿಯುತ್ತಿರುವಳು. ಈ ಆದಿನದಿಯು ಹಿಮಾಲಯದಲ್ಲಿ ಉದಿಸಿ ದಕ್ಷಿಣಕ್ಕೆ ಹರಿದುಬರುತ್ತಿದೆಯಷ್ಟೆ, ಈ ಗಂಗೆಯ ಉತ್ತರದ ಪ್ರದೇಶವು ಉತ್ತರಕೋಸಲವೆಂದು ಹೆಸರುಪಡೆದಿದೆ. ಈ ಉತ್ತರಕೋಸಲದೇಶವನ್ನು ಇಕ್ಷ್ವಾಕುವಂಶದಲ್ಲಿ ಉದಿಸಿದ ಕಕುದವೆಂಬ ಅರಸನು ಆಳುತ್ತಿದ್ದನು. ಆ ಕಕುದನನ್ನು ಕಕುತ್ಸ್ಥನೆಂದೇ ಕರೆಯುವರು. ಅಪ್ರಮೇಯನಾದ ಕಕುದನು ಧರ್ಮದಿಂದ ರಾಜ್ಯವಾಳುತ್ತಿದ್ದನು (ನೃಪಕಕುದನೊಗೆದನು ಕಕುತ್ಸ್ಥಾಂಕನು). ಇವನು ರಾಜರಲ್ಲಿ ಸರ್ವಶ್ರೇಷ್ಠನು, ಉತ್ತಮಗುಣಗಳ ಆಗರನು. ಸರ್ವಶ್ರೇಷ್ಠರಲ್ಲಿ ಪ್ರಥಮನು, ಗುಣಸಾಗರನು, ವಿವೇಕಿ (ಪ್ರಾಜ್ಞನು). ಶೋಭಾಯಮಾನವಾದ ಎಲ್ಲರಿಗೂ ಹಿತಕರವಾದ ಉದಾತ್ತಗುಣಗಳಿಂದ ವಿರಾಜಿಸುತ್ತ ಶ್ಲಾಘ್ಯನಾದನು. ಆ ಕೋಸಲೇಂದ್ರನ ಗೌರವಾರ್ಥ ಅವನ ವಂಶಜರನ್ನು ಪ್ರಜೆಗಳು ಕಾಕುತ್ಸ್ಥರೆಂದೇ ಕರೆದರು. ಹೀಗೆ ಕಕುತ್ಸ್ಥನ ವಂಶವೇ ಕಾಕುತ್ಸ್ಥವಂಶವೆಂದೇ ಭೂತಲದಲ್ಲಿ ವಿಖ್ಯಾತವಾಯಿತು (ಕಾಕುತ್ಸ್ಥರೆನಿಸಿದರು ಕೀರ್ತಿಯುತರು).

ಇಕ್ಷ್ವಾಕೋರ್ವಂಶಪುತ್ರಸ್ಯ ವಂಶಯೋ ವಂಶೇ ಭವಃ—ಕಕುದಿ ವೃಷಾಂಸೇ ತಿಷ್ಠತೀತಿ ಕಕುತ್ಸ್ಥ ಇತಿ ಪ್ರಸಿದ್ಧಃ ॥

**72. ಮಹೇಂದ್ರಮಾಸ್ಥಾಯ ಮಹೋಕ್ಷರೂಪಂ ।**
**ಯಃ ಸಂಯತಿ ಪ್ರಾಪ್ತ ಪಿನಾಕಿಲೀಲಃ ॥**

ಚಕಾರ ಬಾಣೈರಸುರಾಂಗನಾನಾಂ ।
ಗಂಡಸ್ಥಲೀಃ ಪ್ರೋಷಿತಪತ್ರಲೇಖಾಃ ॥ ॥ ೭೨ ॥

ಆ ಕಾಕುತ್ಸ್ಥನು ತೋರಿದ ರಣಲೀಲೆಯನ್ನು ಏನೆಂದು ಹೇಳಲಿ. ಅವನು ಯುದ್ಧ ಭೂಮಿಯಲ್ಲಿ ಮಹೇಶ್ವರಲೀಲೆ(ಹರಲೀಲೆ)ಯಿಂದ ಎಸೆದನು. ಎಂತು ಪಿನಾಕಿಯಾದ ಶಿವನು ಬಸವನನ್ನು ಏರಿ ಶತ್ರುಸಂಹಾರಮಾಡುವಂತೆ ತಾನೂ ಬಸವರೂಪಧಾರಿಯಾದ ಇಂದ್ರನ ಮೇಲೆ ಕುಳಿತುಕೊಂಡು ರಾಕ್ಷಸರ ಮೇಲೆ ಏರಿಹೋದನು. ತನ್ನ ತೀಕ್ಷ್ಣವಾದ ಬಾಣಗಳಿಂದ ಶತ್ರುಸಂಹಾರಮಾಡುತ್ತ ರಾಕ್ಷಸಸ್ತ್ರೀಯರ ಕಪೋಲದಲ್ಲಿ ಅಲಂಕಾರಾರ್ಥ ವಾಗಿ ಬರೆದಿರುವ ಮಕರಿಕಾಪತ್ರಗಳನ್ನು ಅವರ ಕಣ್ಣೀರಿನಿಂದ ಅಳಿಸಿದನು (ದಾನ ವಾಂಗನೆಯರ ಕದಪುಗಳನಳಿಸಿದನು). ವೈಧವ್ಯದೀಕ್ಷೆಯನ್ನು ಪಡೆದ ಅಸುರವನಿತೆಯರ ಕದಪುಗಳು ಮಕರಿಕಾಪತ್ರಗಳಿಲ್ಲದೆ ಬರಿದಾದುವು. ಅಸುರಸ್ತ್ರೀಯರಿಗೆ ವಿಧವತ್ವ ಪ್ರಾಪ್ತ ವಾಯಿತು.

ಮಹೋಕ್ಷಮ್ = ಮಹಾನ್ ಉಕ್ಷಾ ಮಹೋಕ್ಷಃ—ಮಹೋಕ್ಷರೂಪಧಾರಿಣೋ— ಪಿನಾಕಿಲೀಲಯಾ—ಈಶ್ವರಸ್ಯ ಲೀಲಾ ॥

73. ಐರಾವತಾಸ್ಫಾಲನವಿಶ್ಲಥಂ ಯಃ ।
ಸಂಘಟ್ಟಯನ್ ಅಂಗದಮಂಗದೇನ ॥
ಉಪೇಯುಷಃ ಸ್ವಾಮಪಿ ಮೂರ್ತಿಮಗ್ರ್ಯಾಂ ।
ಅರ್ಧಾಸನಂ ಗೋತ್ರಭಿದೋಽಧಿತಷ್ಠೌ ॥ ॥ ೭೩ ॥

ಆ ಮಹಾನುಭಾವನು ಇಂದ್ರನೊಂದಿಗೆ ಇಂದ್ರ(ಐಂದ್ರ)ಸಿಂಹಾಸನವನ್ನೇರಿ ಕುಳಿತ ಭಾಗ್ಯವನ್ನು ಪಡೆದನು. ಹಿಂದೆ ಕಕುತ್ಸ್ಥವಂಶಸಂಜಾತನಾದ ಕಾಕುತ್ಸ್ಥನು ತ್ರೇತಾಯುಗ ದಲ್ಲಿ ನಡೆದ ದೇವಾಸುರಯುದ್ಧದಲ್ಲಿ ಮಹೇಂದ್ರನಿಗೆ ಸಹಾಯ ಮಾಡಿದನು. ತ್ರೇತಾ ಯುಗದಲ್ಲಿ ದಾನವಚಕ್ರವರ್ತಿಯಾದ ವೃಷಭಾಸುರನು ಸ್ವರ್ಗಲೋಕವನ್ನು ಆಕ್ರಮಿಸಿ ಕೊಂಡನು. ಯುದ್ಧದಲ್ಲಿ ಇಂದ್ರನಿಗೆ ಅಪಜಯವಾಗಲು ಅವನು ಕ್ಷೀರಸಾಗರಕ್ಕೆ ತೆರಳಿ ಮಹಾವಿಷ್ಣುವನ್ನು ಪ್ರಾರ್ಥಿಸಿದನು. ಸಂತುಷ್ಟನಾದ ಮಹಾವಿಷ್ಣುವು ಅದಕ್ಕೆ ಮಾರ್ಗೋಪಾಯವನ್ನು ಹೇಳಿದನು.

ವಿಷ್ಣುವಿನ ಆದೇಶದಂತೆ ಇಂದ್ರನು ಪುರಂಜಯನ ಬಳಿಗೆ ಬಂದು ಸಹಾಯವನ್ನು ಯಾಚಿಸಿದನು. ಪುರಂಜಯನು ಅಯೋಧ್ಯೆಯ ಸಾಮ್ರಾಟ. ಇಂದ್ರನು ವೃಷಭರೂಪ ವನ್ನು (ಎತ್ತು, ಬಸವ, ಗೂಳಿ) ಧರಿಸುವುದಾದರೆ ತಾನು ಅವನ ಹೆಗಲ ಮೇಲೆ (ಹಿಣಿಲ ಮೇಲೆ) ಏರಿ ಯುದ್ಧಮಾಡುವುದಾಗಿ ವಚನವಿತ್ತನು. ಅಂತೆಯೇ ಪುರಂಜಯನು ಕಕುದ ಅಥವಾ ಬಸವನ ಹಿಣಿಲ ಮೇಲೆ ಭದ್ರವಾಗಿ ಕುಳಿತು ಶತ್ರುಸಂಹಾರಕಾರ್ಯ ವನ್ನು ಕೈಕೊಂಡನು. ಕಕುದವನ್ನೇರಿದ ಕಾಕುತ್ಸ್ಥನು ಕಕುದನಾದನು. ಆ ನಾಮವೇ ಅವನ ನಾಮಧೇಯವಾಯಿತು. ಜನರು ಕಕುದನೆಂದೇ ಕರೆದರು.

ಅಂದು ವೃಷಭಾಸುರನೊಡನೆ ನಡೆದ ಘೋರಸಂಗ್ರಾಮದಲ್ಲಿ ಐರಾವತದೊಂದಿಗೆ ಹಳಚಿದನು. ಗೋತ್ರಾರಿಯಾದ ಇಂದ್ರನ ಭುಜಕ್ಕೆ ಭುಜಕೊಟ್ಟು, ಶತ್ರುವಿನೊಡನೆ

ಕಾದಾಡಿದನು. ವೃಷಭಾಸುರನು ಐರಾವತವನ್ನೇರಿ ಪುರಂಜಯನೊಡನೆ ಹೋರಾಡಿದನು. ಐರಾವತದ ದಾಡೆಯ ಏಟಿನಿಂದ ಪುರಂಜಯನಭುಜದ ಅಂಗದ ಮೊದಲಾದ ಆಭರಣಗಳು ಶಿಥಿಲವಾದುವು (ಸುರಕರಿಯ ಹಳಚುವಂದರೆ ಕಳಚಿದಂಗದದೊಳವನ ತೋಳಿನ ಬಳೆಯು ತಾಗುವಂತೆ). ವೃಷಭಾಸುರನನ್ನು ಸಂಹರಿಸಿ ಪುರಂಜಯನು ವಿಜಯ ಸಾಧಿಸಿ ಇಂದ್ರನನ್ನು ಸ್ವರ್ಗಸಿಂಹಾಸನವನ್ನು ಪುನಃ ಏರುವಂತೆ ಮಾಡಿದನು. ಆ ವಿಜಯದ ಸಂಕೇತವಾಗಿ ಮಹೇಂದ್ರನು ತನ್ನ ಅರ್ಧಸಿಂಹಾಸನದಲ್ಲಿ ಪುರಂಜಯನನ್ನು ಗೌರವಿಸಿ ಕುಳ್ಳಿರಿಸಿ ಸತ್ಕರಿಸಿದನು. ಪುರಂಜಯನು ಇಂದ್ರನ ಮೈಗೆ ಮೈ, ಭುಜಕ್ಕೆ ಭುಜ ತಾಗುವಂತೆ ನಾಕಸಿಂಹಾಸನವೇರಿ ಕುಳಿತ ಮಾನವಚಕ್ರವರ್ತಿ. ಅಂತಹ ಯಶಸ್ಸು ಪಡೆದ ಮಹಾವೀರನ ವಂಶದಲ್ಲಿ ಇಂದಿನ ಈ ಅಜಕುಮಾರನು ಜನಿಸಿರುವನು.''—ಹೀಗೆಂದಳು ಸುನಂದೆ.

**74. ಜಾತಃ ಕುಲೇ ತಸ್ಯ ಕಿಲೋರುಕೀರ್ತಿಃ।**
**ಕುಲಪ್ರದೀಪೋ ನೃಪತಿರ್ದಿಲೀಪಃ॥**
**ಅತಿಷ್ಠದೇಕೋನಶತಕ್ರತುತ್ವೇ।**
**ಶಕ್ರಾಭ್ಯಸೂಯಾವಿನಿವೃತ್ತಯೇ ಯಃ॥ ॥ ೭೪ ॥**

ಆತನ ವಂಶದಲ್ಲಿ ಕೀರ್ತಿಶಾಲಿಯಾದ, ಮಹಾಯಶಸ್ತಿಲಕನಾದ ಪ್ರದೀಪನೆಂಬ ನೃಪನು ಜನಿಸಿದನು. ಆತನು ತನ್ನ ಹೆಸರಿಗೆ ತಕ್ಕಂತೆ ವಂಶಪ್ರದೀಪ(ಕುಲದೀಪ)ನಾಗಿದ್ದನು (ಆತನನ್ವಯದೊಳು ಉರುಕೀರ್ತಿ ಜನಿಸಿದನು, ವಂಶಪ್ರದೀಪನು ದಿಲೀಪ ನೃಪನು). ವಂಶಕ್ಕೆ (ಅನ್ವಯಕ್ಕೆ) ಬೆಳಕಾಗಿದ್ದನು. ಅವನು ೯೯ ಅಶ್ವಮೇಧಯಾಗಗಳನ್ನು ಮಾಡಿ ಲೋಕೋತ್ತರವಾದ ಯಶಸ್ಸಿಗೆ ಪಾತ್ರನಾದನು. ಶಕ್ರನ ಪ್ರೀತ್ಯರ್ಥವಾಗಿ ನೂರನೆಯ ಯಾಗವನ್ನು ಮಾಡದೆ ತ್ಯಾಗಮಾಡಿದನು. ಇಂದ್ರನ ಅಸೂಯೆಗೆ ಪಾತ್ರನಾಗದಂತೆ ನೂರನೆಯ ಯಾಗವನ್ನು ಮಾಡದೆ ಉಳಿದನು. ಇದರಿಂದ ಇಂದ್ರನು ಶಾಂತನಾದನು. ಮಾತ್ರವಲ್ಲ ಸುಪ್ರೀತನಾದನು, ಶಾಂತಭಾವಹೊಂದಿ ಪ್ರದೀಪನ ಏಳಿಗೆಯನ್ನು ಬಯಸಿದನು.

ಉರುಕೀರ್ತಿ = ಮಹಾಯಶಾಃ—ಕಕುತ್ಸ್ಥಸ್ಯ ಕುಲೇ ಜಾತಃ—ಏಕೋನೋನಾಃ ಶತಂಕ್ರತವೋ ಯಸ್ಯ ಸ ಏಕೋನಶತಕ್ರತುಸ್ತಸ್ಯ ಭಾವೇ॥

**75. ಯಸ್ಮಿನ್ ಮಹೀಂ ಶಾಸತಿ ವಾಣಿನೀನಾಂ।**
**ನಿದ್ರಾಂ ವಿಹಾರಾರ್ಧಪಥೇ ಗತಾನಾಮ್॥**
**ವಾತೋऽಪಿ ನಾಸ್ರಂಸಯದಂ ಶುಕಾನಿ।**
**ಕೋ ಲಂಬಯೇದಾಹರಣಾಯ ಹಸ್ತಮ್॥ ॥ ೭೫ ॥**

ಅವನ ದಿನಗಳಲ್ಲಿ ಮದಿರೆಯನ್ನು ಕುಡಿದು ಮತ್ತರಾದ ಮತ್ತಕಾಶಿನಿಯರು ರಾತ್ರಿ ಕಾಲದಲ್ಲಿ ತಮ್ಮ ಪ್ರಿಯತಮರೊಡನೆ ವಿಹರಿಸುತ್ತಾ ಕಾಲಕಳೆದು ಬಳಲಿ ಬೆಂಡಾಗಿ (ಸೊಪ್ಪುಸೊಪ್ಪಾಗಿ) ಧರೆಯಲ್ಲಿ ಮೈಮರೆದು ಮಲಗಿರುತ್ತಿರ್ದರು (ಮತ್ತಕಾಮಿನಿ ಜನರು ಮೈಮರೆದು ಮಲಗಿರಲು). ಹೀಗೆ ಮಲಗಿ ನಿದ್ರಿಸುತ್ತಿರುವ ಮದಿಸಿದ ಮದ್ದಾನೆಯಂತಿರುವ ಆ ನೀರೆಯರ (ನಾರಿಯರ) ಬಟ್ಟೆಬರೆಗಳು ಅಸ್ತವ್ಯಸ್ತವಾಗಿದ್ದರೂ

ಅವ್ಯವಸ್ಥೆಗೊಳಿಸದೆ ವಾಯುದೇವನು ಭಯದಿಂದ ಬೀಸುತ್ತಿದ್ದನು. ಆ ಮಂದ ಮಾರುತನು ಪ್ರದೀಪನ ಭಯದಿಂದ ಬಹುಜಾಗರೂಕತೆಯಿಂದ, ಒಂದಿಷ್ಟು ತೊಂದರೆಗೊಳಿಸದೆ ಬೀಸುತ್ತಿದ್ದನು (ಚಲಿಸಲೆಂದು ಅನಿಲನು ಅಶಕ್ತನೆನೆ). ಹೀಗಿರಲು ಆ ವಿಹಾರ ಭೂಮಿಯಲ್ಲಿ ಮಲಗಿ ನಿದ್ರಿಸುತ್ತಿರುವ ಕಾಮಿನಿಯರ ಮೇಲುದವನ್ನು ಸೆಳೆದೊಯ್ದು ಕಳ್ಳನಾವನಿರುವನು ? ಅವರು ಆ ವಿಹಾರಭೂಮಿಯಲ್ಲಿ ನಿಶ್ಚಿಂತೆಯಿಂದ, ನಿರಾಳವಾಗಿ ಮಲಗಿರುತಿರ್ದರು.

ವಿಹರತ್ಯತ್ರೇತಿ ವಿಹಾರಃ ಕ್ರೀಡಾಸ್ಥಾನವ್—ನಾಸ್ರಂಸಯು = ನಾಕಂಪಯಂತ್ ॥

76. ಪುತ್ರೋ ರಘುಸ್ತಸ್ಯ ಪದಂ ಪ್ರಶಾಸ್ತಿ ।
ಮಹಾಕ್ರತೋರ್ವಿಶ್ವಜಿತಃ ಪ್ರಯೋಕ್ತಾ ॥
ಚತುರ್ದಿಗಾವರ್ಜಿತ ಸಂಭೃತಾಂ ಯೋ ।
ಮೃತ್ಪಾತ್ರಶೇಷಾಮಕರೋದ್ವಿಭೂತಿವ್ ॥ ॥ ೭೬ ॥

ಈಗ ಈ ಇಳಾಭಾಗವನ್ನು ವಿಶ್ವಜಿತ್ ಯಾಗವನ್ನು ಮಾಡಿ ವಿಶ್ವಸಾಮ್ರಾಟನೆಂದು ಪ್ರಖ್ಯಾತನಾದ ರಘುವು ಆಳುತ್ತಿದ್ದನು (ವಿರಚಿಸುವ ಕಾಲದೊಳು ವಿಶ್ವಜಿದ್‌ಯಜ್ಞ ವನು). ಅವನು ತನ್ನ ರಾಜಧಾನಿಗೆ ಪ್ರಪಂಚದ ನಾಲ್ಕು ದಿಕ್ಕುಗಳಿಂದಲೂ ದಿಗ್ವಿಜಯ ಮಾಡಿ ವಿಜೇತನಾಗಿ ಹೊನ್ನರಾಶಿಯನ್ನು ಪ್ರವಾಹದಂತೆ ಹರಿಸಿದನು. ಆದರೆ ಉದಾರಿಯಾದ ಆ ನೃಪನು ವಿಶ್ವಜಿತ್‌ಯಾಗಸಮಾರೋಪಮಾಡಿದಂದು ಮಹಾದಾನಮಾಡಿ ಎಲ್ಲವನ್ನು ತನ್ನ ಪ್ರಜೆಗಳಿಗೆ ದಾನವಾಗಿ ಕೊಟ್ಟನು. ಎಲ್ಲರನ್ನು ತಣಿಸಿ ಕೊನೆಗೆ ಅವನಲ್ಲಿ ಉಳಿದುದೆಂದರೆ ಮಣ್ಣಿನ ಪಾತ್ರೆಗಳು (ಮಡಿಕೆ, ಕುಡಿಕೆಗಳು) ಮಾತ್ರ. ಅದರಲ್ಲಿಯೇ ಅವನು ಸೂರ್ಯನಾರಾಯಣನಿಗೆ ಅರ್ಘ್ಯವನ್ನು ಇತ್ತು ಸಂತೃಪ್ತನಾದನು. ಅಂತಹ ಉದಾತ್ತಚರಿತನು, ವಿಭೂತಿಪುರುಷನು ರಘುಸಾರ್ವಭೌಮನು.

ವಿಶ್ವಜಿತೋ ನಾಮ ಮಹಾಕ್ರತೋಹ—ವಿಭೂತಿಂ = ಸಂಪದಂ ॥

77. ಆರೂಢಮದ್ರೀನುದಧೀನ್ವಿತೀರ್ಣ ।
ಭುಜಂಗಮಾನಾಂ ವಸತಿಂ ಪ್ರವಿಷ್ಟಮ್ ॥
ಊರ್ಧ್ವಂ ಗತಂ ಯಸ್ಯ ನ ಚಾನುಬಂಧಿ ।
ಯಶಃ ಪರಿಚ್ಛೇತ್ತುಮಿಯತ್ತಯಾಲಮ್ ॥ ॥ ೭೭ ॥

ಅವನ ಕೀರ್ತಿಯು ಕೈಲಾಸಗಿರಿಶಿಖರವನ್ನು ಏರಿನಿಂದಿಹಂದು. ಸಪ್ತಸಾಗರದ ತಳವನ್ನು ಒಳಹೊಕ್ಕು ವಿಖ್ಯಾತವಾಯಿತು. ಸರ್ಪಗಳು ವಾಸಿಸುವ ಪಾತಾಳವನ್ನು ಮುಟ್ಟಿತು. ಅವನ ಕೀರ್ತಿಯು ಬೆಳಕು ಅಧೋಲೋಕದಲ್ಲಿ ವ್ಯಾಪಿಸಿದುದು ಸಾಲದು ಎಂಬಂತೆ ಊರ್ಧ್ವಲೋಕದ ತನಕ ಹರಡಿತು (ಅದ್ರಿಶಿಖರಕೇರಿಹಂದು,ಅಂಬುಧಿಯೊಳದ್ದಿಹಂದು). ಅಷ್ಟಕ್ಕೇ ನಿಲ್ಲದೆ ಆತನ ಕೀರ್ತಿಪ್ರಕಾಶವು ವ್ಯಾಪಿಸುತ್ತಲೇ ಇದೆ. ಅವನ ಕೀರ್ತಿಜ್ಯೋತಿಯು ಹರಡಲು ಈ ಬ್ರಹ್ಮಾಂಡವು ಸಾಲದು ಎಂಬಂತೆ ಕಿರಿದಾಗಿ ಕಾಣಿಸುತ್ತಿದೆ.

ಸಕಲಭೂಗೋಲವ್ಯಾಪಕಮಿತ್ಯರ್ಥಃ—ಭುಜಂಗಮಾನಾಂ ವಸತಿಂ ಪಾತಾಲಂ ॥

78. ಅಸೌ ಕುಮಾರಸ್ತಮಜೋಽನುಜಾತಃ ।
ತ್ರಿವಿಷ್ಟಪಸ್ಯೇವ ಪತಿಂ ಜಯಂತಃ ॥
ಗುರ್ವೀಂ ಧುರಂ ಯೋ ಭುವನಸ್ಯ ಪಿತ್ರಾ ।
ಧುರ್ಯೇಣ ದಮ್ಯಃ ಸದೃಶಂ ಬಿಭರ್ತಿ ॥ ॥ ೭೮ ॥

ಈ ಕುಮಾರನು ತನ್ನ ಅಸಾಧಾರಣವಾದ ಗುಣಗಳಿಂದ ಸ್ವರ್ಗಾಧಿಪತಿಯಾದ ದೇವೇಂದ್ರನ ತನುಜಾತನಾದ ಜಯಂತನಿಗೆ ಸಮಾನನಾಗಿ ಮೆರೆಯುತ್ತಿರುವನು (ಅಮರೇಂದ್ರಸೂನು ತಾನಾಜಯಂತನು ಎಂತು). ಮಹೇಂದ್ರನಿಗೆ ಜಯಂತನು ಎಂತೋ ಅಂತೆ ಪ್ರದೀಪನಿಗೆ ಈ ಅಜನು. ಅವನು ತನ್ನ ತಂದೆಯೊಂದಿಗೆ ಸಕಲಸಾಮ್ರಾಜ್ಯ ಆಡಳಿತದ ಭಾರವನ್ನು ಹೊತ್ತಿರುವನು. ನೊಗಕ್ಕೆ ಕಟ್ಟಿದ ದೊಡ್ಡ ಗೂಳಿಯೊಂದಿಗೆ ಈಜವ್ವನಿಗ (ಯುವ) ಹೋರಿಯು ಜೊತೆಜೊತೆಯಾಗಿ ಭಾರವನ್ನು ಎಳೆಯುತ್ತಿದೆ.

"ಜಯಂತಃ ಪಾಕಶಾಸನಿಃ" ಇತ್ಯಮರಃ—ಧುರಂಧರ್ಯೇಣ = ಧುರಂಧರೇಣ—ಪಿತ್ರಾ ಸದೃಶಂ ತುಲ್ಯಂ ಯಥಾ ತಥಾ ಬಿಭರ್ತಿ—ಉಪಮಾಲಂಕಾರ ॥

79. ಕುಲೇನ ಕಾಂತ್ಯಾ ವಯಸಾ ನವೇನ ।
ಗುಣೈಶ್ಚ ತೈಸ್ತೈರ್ವಿನಯಪ್ರಧಾನೈಃ ॥
ತ್ವಮಾತ್ಮನಸ್ತುಲ್ಯಮಮುಂ ವೃಣೀಷ್ವ ।
ರತ್ನಂ ಸಮಾಗಚ್ಛತು ಕಾಂಚನೇನ ॥ ೭೯ ॥

ಎಲೌ ರೂಪಸಾಮ್ರಾಜ್ಞಿಯೆ, ಕುಲದಲ್ಲಿ, ಕಾಂತಿಯಲ್ಲಿ, ಲಾವಣ್ಯದಲ್ಲಿ, ವಯಸ್ಸಿನಲ್ಲಿ, ಯೌವನದಲ್ಲಿ, ರೂಪಸಾದೃಶ್ಯದಲ್ಲಿ, ವಿನಯಾದಿಸದ್ಗುಣಗಳಲ್ಲಿ ಮಹೋದಯನು ನಿನಗೆ ಅನುರೂಪನಾದ ವರನಾಗಿರುವನು (ವಿನಯಾದಿಗುಣಗಣದೆ, ನವಯೌವನದೆ), ನೀವಿಬ್ಬರೂ ಸತಿಪತಿಗಳಾಗಿ ಒಂದಾದರೆ ಶ್ರೇಷ್ಠವಾದ ರತ್ನವು ಹೊನ್ನಿನೊಂದಿಗೆ ಸೇರಿ, ವಿರಚಿಸಿದ ದಿವ್ಯಾಭರಣದಂತೆ, ಶೋಭೆಪಡೆಯುವುದು. ನೀನು ಈತನಿಗೆ ಒಲಿದು ವರಿಸು. ನಿಮ್ಮಿಬ್ಬರ ಮಿಲನವು ರತ್ನಕಾಂಚನದ ಮಿಲನದಂತೆ ಉನ್ನತಿಯನ್ನು ಪಡೆಯಲಿ (ರತ್ನ ಕಾಂಚನಮಿಲನವೀಡೇರಲಿ).

ಕಾಂತ್ಯಾ = ಲಾವಣ್ಯೇನ—ನವೇನವಯಸಾ = ಯೌವನೇನ—ಸಮಾಗಚ್ಛತು = ಸಂಗಚ್ಛತಾಂ—ವಿನಯಪ್ರಧಾನೈಃ = ವಿನಯಃ ಪ್ರಧಾನಂ ಏಷಾಂ ತೈಃ ॥

80. ತತಃ ಸುನಂದಾವಚನಾವಸಾನೇ ।
ಲಜ್ಜಾಂ ತನೂಕೃತ್ಯ ನರೇಂದ್ರಕನ್ಯಾ ॥
ದೃಷ್ಟ್ಯಾ ಪ್ರಸಾದಾಮಲಯಾ ಕುಮಾರಂ ।
ಪ್ರತ್ಯಗ್ರಹೀತ್ಸಂವರಣಸ್ರಜೇವ ॥ ೮೦ ॥

ಹೀಗೆ ನುಡಿದು ಆ ಪಡಿಯರಿತಿ ತನ್ನ ಮಾತುಗಳನ್ನು ಕೊನೆಗೊಳಿಸಿದಳು. ಆಗ ಆ ಮಾತುಗಳನ್ನು ಕೇಳುತ್ತಿದ್ದಂತೆ ಆ ರಾಜಕನ್ಯೆಯ ಮುಖಭಾವವು ಬದಲಾಯಿತು. ದೇಹದಲ್ಲಿ ತಲೆದೋರುತ್ತಿದ್ದ ಸ್ತ್ರೀಸಹಜವಾದ ಲಜ್ಜೆಯು ಕಡಿಮೆಯಾಯಿತು. ತನ್ನ

ಪ್ರೇಮವನ್ನು ಬಲವಾಗಿ ಪ್ರಕಟಿಸುವ ಒಂದು ಓರೆನೋಟವನ್ನು ಬೀರಿದಳು. ಆ ಅಮಲವಾದ ದೃಷ್ಟಿಯು ಪ್ರಸಾದವೆಂಬ ಸಂವರಣಮಾಲೆಯನ್ನು ಅಜನ ಮೇಲೆ ಎಸೆದು ಆತನನ್ನು ತನ್ನ ಬಾಳಸಂಗಾತಿಯನ್ನಾಗಿ ಆರಿಸಿದಳು (ಸಂವರಣಮಾಲೆಯೊಲೆ ನೃಪಸುತನ ವರಿಸಿದಳು). ಈ ತೆರನಾಗಿ ತನ್ನ ಸಂಮೋದಲೋಚನದ ಮಾಲೆಯೆಸೆದು ಕೃತಕೃತ್ಯಳಾದಳು.

ದೃಷ್ಟ್ಯಾ ಸಂವರಣಸ್ರ= ಸ್ವಜಾಸ್ವಯಂವರಣಾರ್ಥ—ಸಮ್ಯಕ್ ಸಾನುರಾಗವಂಪಶಯದಿತ್ಯರ್ಥಃ ॥

**81.** **ಸಾಯೂನಿ ತಸ್ಮಿನ್ನಭಿಲಾಷಬಂಧಂ।**
**ತಶಾಕಶಾಲೀನತಯಾ ಸ ವಕ್ತುಮವ್ ॥**
**ರೋಮಾಂಚಲಕ್ಷ್ಯೇಣ ಸಗಾತ್ರಯಷ್ಟಿಂ।**
**ಭಿತ್ವಾ ನಿರಾಕ್ರಾಮದರಾಳ ಕೇಶ್ಯಾಃ** ॥ ೮೧ ॥

ಆ ರಾಜಕನ್ಯೆಯು ಸಾತ್ವಿಕವಾದ ರೀತಿಯಲ್ಲಿ ಅಜನೊಳಾದ ಪ್ರೇಮಭಾವವನ್ನು ಪ್ರಕಟಿಸಿದಳು. ಲಜ್ಜೆಯಿಂದ ಆಕೆಯೇನನ್ನೂ ನುಡಿಯದಾದಳು. ಆವಳ ಅನುರಾಗವು ದೇಹದ ಪ್ರತಿ ಅಂಗದಲ್ಲಿ ಉಂಟಾದ ಪುಳಕಾಂಕುರಗಳ ಮೂಲಕ ಹೊರಗೆಡವಿದಳು (ಲಜ್ಜೆಯಿಂದಜನೊಳಾದೊಲವರನೊರೆವುದಕೆ ಅಸಮರ್ಥೆಯಾದಳಾ ಕುಟಿಲಾಲಕೆ). ಆ ಪುಳಕಗಳೇ ಆ ರೋಮಾಂಚನವೇ ಆವಳ ಅಂತರಂಗದ ಭಾವಗಳ ಕೋಡೆಯುವ ನಾಡಿದುವು ಹೊರಗೆ ಬಂದು. ರಾಜದೂತರು, ರಾಜನ ರಾಜಕಾರ್ಯವನ್ನು ಹೊರಗೆಡಹುವಂತೆ.

ಶಾಲೀನತಯಾಽಧೃಷ್ಟತಯಾ—"ಸ್ಯಾದ್ ಧೃಷ್ಟೇ ಶಾಲೀನಃ" ಇತ್ಯಮರಃ—ರೋಮಾಂಚಲಕ್ಷ್ಯೇಣ = ಪುಲಕವ್ಯಾಜೇನ—ಸಾತ್ವಿಕಾವಿರ್ಭಾವಲಿಂಗೇನ ಪ್ರಕಾಶಿತ ಇತ್ಯರ್ಥಃ ॥

**82.** **ತಥಾಗತಾನಾಂ ಪರಿಹಾಸಪೂರ್ವಂ।**
**ಸಖ್ಯಾಂ ಸಖೀವೇತ್ರಭೃದಾ ಬಭಾಷೇ ॥**
**ಆರ್ಯೇ ವ್ರಜಾಮೋಽನ್ಯತ ಇತ್ಯಥೈನಾಂ।**
**ವಧೂರಸೂಯಾ ಕುಟಿಲಂ ದದರ್ಶ** ॥ ೮೨ ॥

ಆ ಬಳಿಕ ಸಖಿಸುನಂದಾ, ತನ್ನ ಒಡತಿಯಲ್ಲಾದ ಬದಲಾವಣೆಯನ್ನು ಕಂಡು, ಅನುರಾಗಲೋಲಳಾದ ಒಡತಿಗೆ ಪರಿಹಾಸಪೂರ್ವಕವಾಗಿ ಹೀಗೆಂದಳು : "ಎಲೌ ಆರ್ಯೆ, ಎಲೌ ಪೂಜ್ಯಳೆ, ನಾವಿನ್ನು ಮುಂದೆ ಹೋಗೋಣ. ಇನ್ನೊಬ್ಬನೆಡೆಗೆ ನಡೆಯೋಣ" ಎಂದಳು. ಆ ನುಡಿಗಳನ್ನು ಕೇಳಿದಾಕ್ಷಣವೇ ಅಜಕುಮಾರನಿಗೆ ಮನಸೋತ ಆ ಕನ್ಯಾಮಣಿ ಕೋಪವನ್ನು ಪ್ರಕಟಿಸುತ್ತ, ಕರುಬುತ್ತ, ಕುಡಿನೋಟವನ್ನು ಸಖಿಯು ಕಡೆಗೆ ಬೀರುತ್ತ ಆಕೆಯನ್ನು ಒಮ್ಮೆ ಈಕ್ಷಿಸಿದಳು (ಎಂದು ಸಖಿ ನುಡಿದುದು ಕರುಬು ಕುಡಿನೋಟದೊಳು).

ಸಖೀ = ಸಹಚಾರೀ—ಹೇ ಆರ್ಯೇ = ಹೇ ಪೂಜ್ಯೇ—ಪರಿಹಾಸಪೂರ್ವಭಾವಭಾಷೇ—ರೋಷೇಣ ಕುಟಿಲಂ ದದರ್ಶ ॥

**83.** **ಸಾ ಚೂರ್ಣಗೌರಂ ರಘುನಂದನಸ್ಯ ।**
**ಧಾತ್ರೀಕರಾಭ್ಯಾಂ ಕರಭೋಪಮೋರೂಃ ॥**
**ಆಸಂಜಯಾಮಾಸ ಯಥಾ ಪ್ರದೇಶಂ ।**
**ಕಂಠೇ ಗುಣಂ ಮೂರ್ತಮಿವಾನುರಾಗಮ್** ॥ ೮೩ ॥

ಆ ಸುಕನ್ಯೆ, ಆ ಕರಭೋರು, ಸುಂದರವಾದ ಆನೆಯ ಸೊಂಡಿಲಿನಂತೆ ಉರುಟುರುಟಾದ ಕೈಕಾಲುಗಳಿಂದ ಶೋಭೆಪಡೆದವಳು ಪರಿಮಳಿಸುತ್ತಿರುವ ಗಂಧದ ಹುಡಿವರೆದು ಕೆಂಬಣ್ಣದಿಂದ ಕೂಡಿರುವ ತನ್ನ ಪ್ರೀತಿಯೇ ಮೈತಳೆದಂತಿರುವ ಪ್ರೇಮವೇ ರೂಪುಗೊಂಡಿರುವ ಹೂಮಾಲೆಯನ್ನು ರಘುಸುತನಾದ ಅಜನ ಕಂಠಪ್ರದೇಶದಲ್ಲಿ ತನ್ನ ನಿಜಸಖಿಯಾದ ಸುನಂದಳ ಕೈಯಿಂದ ಪಡೆದು ಪಡೆದು ಅರ್ಪಿಸಿದಳು (ಪರಿಮಳದ ಹುಡಿವರೆದು ಕೆಂಬಣ್ಣ ವಾಂತುದನು, ಮೈದಳೆದ ಒಲುಮೆಯೆನೆ ಮಾಲೆಯಂದನು).

ಕರಭಃ = ಕರಪ್ರದೇಶವಿಶೇಷಃ, ಚೂರ್ಣೇನ = ಮಂಗಳಚೂರ್ಣೇನ—ಗೌರಂ = ಲೋಹಿತಂ ॥

**84.** **ತಯಾ ಪ್ರಜಾಮಂಗಲಪುಷ್ಪಮಯ್ಯಾ ।**
**ವಿಶಾಲವೃಕ್ಷಃಸ್ಥಲಲಂಬಯಾ ಸಃ ॥**
**ಅಮಂಸ್ತ ಕಂಠಾರ್ಪಿತಬಾಹುಪಾಶಾಂ ।**
**ವಿದರ್ಭರಾಜಾವರಜಾಂ ವರೇಣ್ಯಃ** ॥ ೮೪ ॥

ಮಂಗಲಪುರುಷನಾದ ಅಜನು ತನ್ನ ವಿಶಾಲವಾದ ವಕ್ಷಃಸ್ಥಲದಲ್ಲಿ ಜೋಲ್ದು ಇಳಿದ ಮಧುಕಾದಿಸುಮಗಳಿಂದ ವಿರಚಿತ ಮಂಗಳಕರವಾದ ಸುಮಮಾಲೆಯನ್ನು ಧರಿಸಿದನು. ಆವರಣೀಯನಾದ ಪುರುಷಶ್ರೇಷ್ಠನು ತನ್ನ ಮನದಲ್ಲಿ ಹೀಗೆಂದು ಯೋಚಿಸಿದನು. ತನ್ನ ಆತ್ಮಕ್ಕೆ ಭೋಜರಾಜನ ಅನುಜೆ ಇಂದುಮತಿಯು ತನ್ನನ್ನು ಅರ್ಪಿಸಿ ತನ್ನ ಎರಡು ಬಾಹುಯುಗಳಿಂದ ಕೊರಳನ್ನು ಸುತ್ತುವರಿದು ಬಾಚಿ ತಬ್ಬಿಹಿಡಿದಿರುವಳು ಎಂಬಂತೆ ಭಾವಿಸಿದನು. ಅವಳು ಭಾವನೆಗಳಿಂದ ತುಂಬಿದ ತನ್ನ ಆತ್ಮನನ್ನೇ ತನಗೆ ಅರ್ಪಿಸಿದಳು ಎಂಬಂತೆ ಭಾವಿಸುತ್ತ ಪ್ರೇಮಲೋಕದಲ್ಲಿ ತೇಲಿ ತೇಲಿಹೋದನು (ಭಾವಿಸಿದನಾತ್ಮಗಳ ಅರ್ಪಿಸಿದ ಭುಜದವೊಲು).

ವೃಞ್ + ಏಣ್ಯಃ = ವರೇಣ್ಯಃ—ವಿಶಾಲವಕ್ಷಃಸ್ಥಲೇ ಲಂಬಯಾ = ಲಂಬಮಾನಯಾ—ಕಂಠಾರ್ಪಿತಬಾಹುಪಾಶಾ ॥

**85.** **ಶಶಿನಮುಪಗತೇಯಂ ಕೌಮುದೀ ಮೇಘಮುಕ್ತಂ ।**
**ಜಲನಿಧಿಮನುರೂಪಂ ಜಹ್ನುಕನ್ಯಾವತೀರ್ಣಾ ॥**
**ಇತಿ ಸಮಗುಣಯೋಗಪ್ರೀತಯತ್ತತ್ರ ಪೌರಾಃ ।**
**ಶ್ರವಣಕಟುನೃಪಾಣಾಮೇಕವಾಕ್ಯಂ ವಿವವ್ರುಃ** ॥ ೮೫ ॥

ಆಗ ಸಮಾನಮನಸ್ಕರಾದ ಸಮಾನಗುಣರಾದ (ಸದೃಶಗುಣರು) ಇಂದುಮತಿ—ಅಜಕುಮಾರರ ಮಿಲನಕ್ಕೆ ಸಾಗರದಂತೆ ಜನರು ಘೋಷಿಸುತ್ತ ಸಂತಸವನ್ನು

ಸೂಚಿಸಿದರು. ಹರ್ಷಸಾರಗದಲ್ಲಿ ಓಲಾಡಿ ತೇಲಾಡಿದರು. ಆ ಜನರ ಘೋಷಣೆಯನ್ನು ಕೇಳಿ ಉಳಿದ ರಾಜಪುತ್ರರ ಕಿವಿಗಳು ಕಿವುಡಾದುವು (ಕೆಪ್ಪಾದುವು). ಆವಳೀಗ ಮೇಘ ಮುಕ್ತವಾದ ಶರದೃತುವಿನ ಕಾಲದ ಚಂದ್ರಮನನ್ನು ಸೇರಿದ ಬೆಳದಿಂಗಳಂತೆ (ಚಂದ್ರಿಕೆ) ತನಗೆ ತಕ್ಕ ವರನನ್ನು ಪಡೆದಳು (ಮೇಘಮುಕ್ತ ಶರಚ್ಚಂದ್ರನೆಡೆಯನ್ನೈದಿ ಮೆರೆಯು ತಿರುವ ಚಂದ್ರಿಕೆ), ಅವಳೀಗ ಜಹ್ನುಋಷಿಕನ್ನಿಕೆಯಾದ ಜಾಹ್ನವಿಯು (ಗಂಗಾನದಿಯು) ಸಾಗರರಾಜನನ್ನು ಸೇರಿ ಸುಖಿಸುವಂತೆ, ನೀರು ನೀರನ್ನೇ ಸೇರುವಂತೆ, ಬೆಳಕು ಬೆಳಕನ್ನೇ ಸೇರುವಂತೆ, ಹೂವು-ಗಂಧ ಸೇರಿದಂತೆ ಅಜಕುಮಾರನನ್ನು ವರಿಸಿ ಧನ್ಯಳಾದಳೆಂದು ಪೌರ ಜನರು ಹರ್ಷೋದ್ಗಾರಮಾಡಿದರು. ಇದರಿಂದ ಸ್ವಯಂವರದಲ್ಲಿ ಭಾಗವಹಿಸಿ ಸೋಲ ನ್ನುಂಡ ರಾಜಕುಮಾರರ ಸಂಕಷ್ಟ ಹೇಳತೀರದು. ಜನರ ಆ ಘೋಷ ಕರ್ಣಕುಹರ ಒಡೆದಂತೆ, ಅವರಿಗೆ ಅಸಹ್ಯವೆನಿಸಿತು. ಅವರ ಸ್ಥಿತಿ ಬಿಗಡಾಯಿಸಿತು (ಸಮಗುಣಯೋಗ ಪ್ರೀತಯಃ = ಪ್ರೀತಿಯೋಗದಿಂದ ಆ ವಧೂವರರು ಒಂದಾದರು).

ಮೇಘಮುಕ್ತಶಶಿನಂ—ಜಹ್ನುಕನ್ಯಾ= ಭಾಗೀರಥೀ—ಮಹಾಲಿನೀವೃತ್ತಮ್ ॥

**86. ಪ್ರಮುದಿತ ವರಪಕ್ಷಮೇಕತಸ್ತತ್ ।**
**ಕ್ಷಿತಿಪತಿಮಂಡಲಮನ್ಯತೋ ವಿತಾನಮ್ ॥**
**ಉಷಸಿ ಸರ ಇವ ಪ್ರಫುಲ್ಲಪದ್ಮಂ ।**
**ಕುಮುದವನಪ್ರತಿಪನ್ನನಿದ್ರಮಾಸೀತ್ ॥ ೮೬ ॥**

ಆ ರಾಜಸಭಾಗೃಹದಲ್ಲಿ ಒಂದು ಕಡೆಯಲ್ಲಿ ನೂತನ ವಧೂವರರ ಕಡೆಯವರು ಸಡಗರದಿಂದ ಸದ್ಗುಗದ್ದಲದಿಂದ ಮೆರೆಯುತ್ತಾ ಸಂತಸಸಮನ್ವಿತರಾಗಿದ್ದರೆ ಇನ್ನೊಂದೆಡೆ ಯಲ್ಲಿ ಭಗ್ನಮನೋರಥರಾದ ಶೂನ್ಯಮನಸ್ಕರಾದ ನೃಪಸಮಾಜವು ಎಸೆಯುತ್ತಲಿತ್ತು. ಹೇಗೆ ಸೂರ್ಯೋದಯಕಾಲದಲ್ಲಿ ದೊಡ್ಡದಾದೊಂದು ಕೊಳದಲ್ಲಿ ನಗುವ ತಾವರೆಗಳು ಒಂದೆಡೆ ಕಂಗೊಳಿಸುತ್ತಿದ್ದರೆ, ಆ ಸುಪ್ರಭಾತದ ವೇಳೆಗೆ ಮುದುಡಿದ ನೈದಿಲೆಹೂವಂತೆ ಆಸ್ಥೆಯಾಗದೆ ಸೋತ ಕ್ಷಿತಿಮಂಡಲವು ಕುಸಿದು ತಿಪ್ಪರಲಾಗಹಾಕಿತ್ತು. ರಾತ್ರಿಕಾಲ ದಲ್ಲಿ ನಳನಳಿಸುತ್ತಿದ್ದ ನೈದಿಲೆ ಇದೀಗ ಪೊಳ್ತರೆಯಲ್ಲಿ (ಉಷಃಕಾಲದಲ್ಲಿ) ಬಾಡಿ ಸೊರಗಿ ಮುದುಡಿಹೋಗಿರುವಂತಿತ್ತು ಅಂದಿನ ಆ ನೃಪಸಭೆ.

ಭಗ್ನಾಶತ್ವಾ ಪ್ರಹೃಷ್ಟಮಿತ್ಯರ್ಥಃ = ಪ್ರಫುಲ್ಲಪದ್ಮಂ ಕುಮುದವನೇನ ಪ್ರತಿಪನ್ನ ನಿದ್ರಂ॥

# ಸಪ್ತಮ ಸರ್ಗಃ
# ಏಳನೆಯ ಸರ್ಗ

1. ಅಥೋಪಯಂತ್ರಾಸದೃಶೇನ ಯುಕ್ತಾಂ ।
ಸ್ಕಂದೇನ ಸಾಕ್ಷಾದಿವ ದೇವಸೇನಾಮ್ ॥
ಸ್ವಸಾರಮಾದಾಯ ವಿದರ್ಭನಾಥಃ ।
ಪುರಪ್ರವೇಶಾಭಿಮುಖೋ ಬಭೂವ ॥ ೧ ॥

ಅನಂತರ ವಿದರ್ಭಾಧಿಪತಿಯಾದ ಭೋಜರಾಜನು, ಶಿವಕುಮಾರನಾದ ಸ್ಕಂದನನ್ನು ವರಿಸಿರುವ ಸಾಕ್ಷಾತ್ ದೇವಸೇನೆಯ ತೆರದಿ ಅನುರೂಪನಾದ ವರನನ್ನು ಒಡಗೂಡಿರುವ ತನ್ನ ಅನುಜೆಯೊಂದಿಗೆ ನಗರಪ್ರವೇಶವನ್ನು ಮಾಡಲು ಉಜ್ಜುಗಿಸಿದನು (ಸ್ಕಂದನು ವರಿಸಿರ್ದ ದೇವಸೇನೆಯ ತೆರದೊಳ್). ಆ ನವದಂಪತಿಗಳೊಂದಿಗೆ ಸಕಲರಾಜವೈಭವ ದಿಂದ ನಗರಾಭಿಮುಖನಾಗಿ ಹೊರಟನು.

ಉಪಯಂತ್ರ = ವರೇಣ—ದೇವಸೇನಾಮ್ = ಇಂದ್ರತನಯೇ । ಉಪಜಾತಿವೃತ್ತಂ ಸರ್ಗೇಽಸ್ಮಿನ್ ॥

2. ಸೇನಾನಿವೇಶಾನ್ ಪೃಥಿವೀಕ್ಷಿತೋಽಪಿ ।
ಜಗ್ಮುರ್ವಿಭಾತಗ್ರಹಮಂದಭಾಸಃ ॥
ಭೋಜ್ಯಾಂ ಪ್ರತಿವ್ಯರ್ಥಮನೋರಥತ್ವಾತ್ ।
ರೂಪೇಷು ವೇಶೇಷು ಚ ಸಾಭ್ಯಸೂಯಾಃ ॥ ೨ ॥

ಆ ನೃಪಾಲರು ಭಗ್ನಮನೋರಥರಾಗಿ ಅಸೂಯಾಪರರಾಗಿ ಚಿಂತಿತರಾದರು. ತಮ್ಮ ವೇಷಭೂಷಣ, ರೂಪವನ್ನು ತಾವೇ ತೆಗಳಿಕೊಂಡರು (ರೂಪವನು ವೇಷವನು ನಿಂದಿಸುತ). ಭೋಜಸೋದರಿಯಿಂದ ತಿರಸ್ಕೃತರಾದ ಅವರು ಬಣ್ಣಗೆಟ್ಟರು. ಅವರ ಮೊಗದ ಕಾಂತಿ ಕುಂದಿತು (ಒಡೆದ ಹೆಬ್ಬಯಕೆಯೊಳು). ಮುಂಜಾವಿನ ಹೊತ್ತು ಬಾನಲ್ಲಿ ಹೊಳೆಯುವ ನಕ್ಷತ್ರಗಳ (ತಾರೆಗಳ) ಗಡಣ ಚಂದ್ರಾದಿಗ್ರಹಗಳು ಕಾಂತಿಹೀನವಾಗಿ ಕಾಣಿಸುವಂತೆ ಅವರ ಸ್ಥಿತಿಗತಿಯಾಯಿತು, ಅವರು ಕೋಪತಾಪದಿಂದ ತಮ್ಮನ್ನು ತಾವೇ ನಿಂದಿಸುತ್ತ ತಮ್ಮ ಶಿಬಿರದತ್ತ ನಡೆದರು.

ಸಾಭ್ಯಸೂಯಾ = ಅಸೂಯಾಪರರಾಗಿ.

3. ಸಾಂನಿಧ್ಯಯೋಗಾತ್ಕಿಲ ತತ್ರ ಶಚ್ಯಾಃ ।
ಸ್ವಯಂವರಕ್ಷೋಭಕೃತಾಮಭಾವಃ ॥
ಕಾಕುತ್ಸ್ಥಮುದ್ದಿಶ್ಯ ಸಮತ್ಸರೋಽಪಿ ।
ಶಶಾಮ ತೇನ ಕ್ಷಿತಿಪಾಲಲೋಕಃ ॥ ೩ ॥

ವಿವಾಹಕಾಲದಲ್ಲಿ ಶಚೀದೇವಿಯ ಪೂಜೆಯನ್ನು ಮಾಡುವುದರಿಂದ ವಿಘ್ನನಿವಾರಣೆಯಾಗುವುದೆಂದು ನಾರದೀಯಸಂಹಿತೆಯಲ್ಲಿ ಹೇಳಿದೆ (ಶಚಿಯ ಸಾನ್ನಿಧ್ಯವಿದ್ದುದರಿಂದ). ಆದುದರಿಂದ ಭಗವದ್ಭಕ್ತನಾದ ಭೋಜರಾಜನು ತನ್ನ ತಂಗಿಯ ಪರವಾಗಿ ಷೋಡಶೋಪಚಾರಗಳಿಂದ ಇಂದ್ರಾಣಿಯ ಪೂಜೆಯನ್ನು ಮಾಡಿ ಸ್ವಯಂವರವು ನಿರ್ವಿಘ್ನವಾಗಿ ನಡೆಯಲೆಂದು ಪ್ರಾರ್ಥಿಸಿದನು. ಇದರಿಂದಾಗಿ ಎಲ್ಲಾ ಕಂಟಕಗಳು, ಇಂದ್ರಾಣಿಯ ಸಾನ್ನಿಧ್ಯ ಅಲ್ಲಿ ಇದ್ದುದರಿಂದ, ಎಡರುತೊಡರುಗಳಿಲ್ಲದೆ ಕಾಕುತ್ಸ್ಥ-ಇಂದುಮತಿಯ ವಿವಾಹಮಹೋತ್ಸವವು ಸುಸೂತ್ರವಾಗಿ ಮಹಾವೈಭವದಿಂದ, ಬಹಳ ವಿಜೃಂಭಣೆಯಿಂದ. ನಡೆಯಿತು. ಆ ಸ್ವಯಂವರಸಭಾಭವನದಲ್ಲಿ (ಕಲ್ಯಾಣಮಂಟಪದ ಬಳಿಯಲ್ಲಿ) ಪ್ರತ್ಯಕ್ಷದರ್ಶಿಗಳಾಗಿ ನೆರೆದಿದ್ದ ಭೂಪತಿಗಳ ಬಳಗ ಒಳಗಿಂದೊಳಗೇ ಕರುಬುತಲಿದ್ದರೂ ಅಡ್ಡಿಪಡಿಸಲಾರದೆ ಕಿಮ್ಮನೆ (ಗರಬಡಿದಂತೆ) ಕುಳಿತಿದ್ದರು.

ಸಮತ್ಸರೋಽಪಿ = ಸವ್ಯೆರೋಽಪಿ ॥

4. ತಾವತ್ ಪ್ರಕೀರ್ಣಾಭಿನವೋಪಚಾರಮ್ ।
ಇಂದ್ರಾಯುಧದ್ಯೋತಿತತೋರಣಾಂಕಮ್ ॥
ವರಃ ಸ ವಧ್ವಾ ಸಹ ರಾಜಮಾರ್ಗಂ ।
ಪ್ರಾಪ ಧ್ವಜಚ್ಛಾಯ ನಿವಾರಿತೋಷ್ಣಮ್ ॥ ೪ ॥

ಕಾಮನಬಿಲ್ಲಿನಂತೆ (ಸುರಚಾಪ, ಇಂದ್ರಧನುಸ್) ಹೊಳೆವ ತಳಿರುತೋರಣಗಳನ್ನು ರಾಜಬೀದಿಯುದ್ದಕ್ಕೂ ಕಟ್ಟಿ ಸಿಂಗರಿಸಿದರು. ಧ್ವಜಪತಾಕೆಗಳನ್ನು ವಿವಿಧ ಅಲಂಕಾರಗಳಿಂದ ಸಜ್ಜುಗೊಳಿಸಿ ಇಕ್ಕಡೆಗಳಲ್ಲಿ ನೆಟ್ಟಿದ್ದರು. ಇದರಿಂದ ಬೀದಿಗಳು ತಂಪನ್ನು ಕೊಡುತ್ತಿದ್ದುವು, ಹೀಗೆ ಸುರಚಾಪದೊಲು ಹೊಳೆವ ತೋರಣಗಳೆತ್ತಿರುವ ಹೂದಳಿರ ಹರಹಿನೊಳು, ತಂಪೀವ ರಾಜಬೀದಿಗಳಲ್ಲಿ ಮಣಿಮಯ ಸ್ವರ್ಣರಥದಲ್ಲಿ ಕುಳಿತು ಆ ನವವಧೂವರರು (ನೂತನದಂಪತಿಗಳು) ದಿಬ್ಬಣಿಗರ ಪರಿವಾರದೊಂದಿಗೆ ಸಾಗಿಹೋದರು (ಸುರಚಾಪದೊಲು ಹೊಳೆವ ತೋರಣಗಳೆತ್ತಿರುವ ಹೂದಳಿರ ಹರಹಿನೊಳು)

ದ್ಯೋತಿತಾನಿ = ಪ್ರಕಾಶಿತಾನಿ—ಇಂದ್ರಾಯುಧದ್ಯೋತಿತತೋರಣಾಂಕಮ್ = ಸುರಚಾಪದೊಲ್ ಹೊಳೆವ ತೋರಣಗಳೆತ್ತಿರುವ.

5. ತತಸ್ತದಾಲೋಕನತತ್ಪರಾಣಾಂ ।
ಸೌಧೇಷು ಚಾಮೀಕರಜಾಲವತ್ಸು ॥
ಬಭೂವುರಿತ್ಥಂ ಪುರಸುಂದರೀಣಾಂ ।
ತ್ಯಕ್ತಾನ್ಯಕಾರ್ಯಾಣಿ ವಿಚೇಷ್ಟಿತಾನಿ ॥ ೫ ॥

ಆ ಹೊಸ ಮದುಮಕ್ಕಳನ್ನು (ಹೊಸ ಹರೆಯದ ಹೊಸ ಜೋಡಿ) ನೋಡಬೇಕೆಂಬ ಆತುರದಿಂದ ಆ ನಗರದ ಅಂಗನೆಯರು (ಪುರಾಂಗನೆಯರು) ತಮ್ಮ ಮನೆಗೆಲಸಗಳನ್ನೆಲ್ಲಾ ಬದಿಗೊತ್ತಿ (ಉಳಿದೆಲ್ಲ ಹರಿಬಗಳ ತೊರೆದು) ಓಡೋಡಿಬಂದರು. ಅವರು ಆ ಪುರದ ಸುಂದರಿಯರು ತಮ್ಮ ಸೌಧಗಳಲ್ಲಿರುವ ಕನಕಜಾಲರಂಧ್ರದೊಳಗಿಂದ (ಚಿನ್ನದ ಕಿಟಕಿಗಳ ಮೂಲಕ) ಅತ್ಯಾಸಕ್ತಿಯಿಂದ ಮಿಣಮಿಣನೆ ನೋಡುತ್ತ ಸಾಲುಸಾಲಾಗಿ ನಿಂತಿದ್ದರು.

(ಆ ವಧೂವರರ ಆಲೋಕಿಪೊಂದಾತುರದೊಳು). ಅವರು ಆ ಸಮಯಕ್ಕೆ ಹಿತಮಿತವಾದ ನಾನಾ ಚೇಷ್ಟೆಗಳನ್ನು (ವರ್ತನೆಗಳನ್ನು) ಪ್ರದರ್ಶಿಸುತಲಿದ್ದರು.

ಆಸಕ್ತಾನಾಂ = ಆಸಕ್ತಿಯಿಂದೊಡಗೂಡಿದ, ತ್ಯಕ್ತಾನ್ಯಕಾರ್ಯಾಣಿ = ಉಳಿದೆಲ್ಲ ಹರಿಬಗಳತೊರೆದು.

**6. ಆಲೋಕಮಾರ್ಗಂ ಸಹಸಾ ವ್ರಜಂತ್ಯಾ ।**
**ಕಯಾಚಿದುದ್ವೇಷ್ಟನವಾಂತಮಾಲ್ಯಃ ॥**
**ಬಂಧುಂ ನ ಸಂಭಾವಿತ ಏವ ತಾವತ್ ।**
**ಕರೇಣ ರುದ್ಧೋಽಪಿ ಚ ಕೇಶಪಾಶಃ ॥ ೬ ॥**

ಓರ್ವ ಒಸಪುಗಾರ್ತಿ (ಓರ್ವ ಬಜಾರಿ, ವಾಯಂಗಾತಿ, ಬಿನ್ನಾಣಗಿತ್ತಿ, ಚೆಲುವೆ, ಚೆಂದೊಳ್ಳಿ ಚೆಲುವೆ, ಗಂಡುಬೀರಿ) ಆ ನೂತನ ವಧೂವರರನ್ನು ನೋಡಲೋಸುಗ ಬಹಳ ಸಡಗರದಿಂದ ಕಿಟಕಿಯೆಡೆಗೆ ಓಡಿದಳು (ಸಡಗರದೊಳೊರ್ವಳಾ ಕಿಟಕಿಯೆಡೆಗೆ ಓಡುತಿರೆ) ಆಕೆ ಜಡೆಯನ್ನು (ಜೆಡೆಯನ್ನು) ಹೆಣೆಯುತ್ತಾ ಒಯ್ಯಾರದಿಂದ (ಬೆಡಗಿನಿಂದ ಬಿಂಕದಿಂದ) ನಿಂತಿದ್ದಳು. ಥಕ್ಕನೆ ಓಡುತ್ತಿರಲು ಅರ್ಧಹೆಣೆದ ಜಡೆಯನ್ನು ಹಾಗೆಯೇ ಹಿಡಿದುಕೊಂಡಿದ್ದಳು. ಅವಳ ಮುಡಿಯು ಕೆದರಿ, ಕರದೊಳಾಂತಿರುವ ಹೂವಮಾಲೆಯ ಹೂಗಳು ಒಂದೊಂದಾಗಿ ಉದುರಿ ಹೋಗುತ್ತಿರುವುದನ್ನು ಸಹ ಗಮನಿಸಲಾರದೆ ಹೋದಳು. ಅಷ್ಟುಮಾತ್ರವಲ್ಲ, ಅರರೇ, ಭಾಪುರೇ, ಆಕೆ ಜಡೆ ಹೆಣೆದುಕೊಳ್ಳುವುದನ್ನು ಮರೆತುಬಿಟ್ಟಳೋ ಏನೋ. ಅರೆಹೆಣೆದ ಜಡೆಯನ್ನು ಕೋಳಿಮೊಟ್ಟೆಯಂತಹ ತನ್ನ ಬಿಳುಪಾದ ಕೈಯಲ್ಲಿ ಹಿಡಿದುಕೊಂಡು (ಜಡೆಹೆಣೆದುಕೊಳುವುದನು ನೆನೆದುದಿಲ್ಲರರೆ!) ಗವಾಕ್ಷದಿಂದ ಇಣುಕಿನೋಡುತಲಿದ್ದಳು.

ನ ಸಂಭಾವಿತೋ = ನ ಚಿಂತಿತ ಏವ ॥

ಅನ್ವಯ :—ಸಹಸಾ ಆಲೋಕಮಾರ್ಗವ್ರಜನ್ತ್ಯಾ ಕಯಾಚಿತ್ ಉದ್ವೇಷ್ಟನವಾಂತ ಮಾಲ್ಯಃ ಕರೇಣ ರುದ್ಧೋಽಪಿ ಚ ಕೇಶಪಾಶಃ ತಾವತ್ ಬಂಧುಂ ಸಂಭಾವಿತ ಏವ ॥
ನ ಸಂಭವಿತೋ = ನ ಚಿಂತಿತ ಏವ, ಉದ್ವೇಷ್ಟನ = ಉದ್‌ಗತಂ ವೇಷ್ಟನಮ್ ಅಸ್ಯ ಉದ್ವೇಷ್ಟನಃ—ಕರೇಣ ರುದ್ಧೋ = ಗೃಹೀತೋಽಪಿ—ಚ ಕೇಶಪಾಶಃ = ಕೇಶಕಲಾಪ.

**7. ಪ್ರಸಾಧಿಕಾಲಂಬಿತಮಗ್ರಪಾದಂ ।**
**ಆಕ್ಷಿಪ್ಯ ಕಾಚಿದ್ದ್ರವರಾಗಮೇವ ॥**
**ಉತ್ಸೃಷ್ಟಲೀಲಾಗತಿರಾ ಗವಾಕ್ಷಾತ್ ।**
**ಅಲಕ್ತಕಾಂಕಾಂ ಪದವೀಂ ತತಾನ ॥ ೭ ॥**

ಇನ್ನೋರ್ವ ಕುಟಿಲಾಳಕಿ (ಮುಂಗುರುಳ ಚೆಲುವೆ) ತನ್ನ ಉಪ್ಪರಿಗೆಯಲ್ಲಿ ಕುಳಿತು ತನ್ನ ಕಾಲಿಗೆ ಅಲತಿಗೆಯ ಗುರುತನ್ನು ದಾಸಿಯ ಮೂಲಕ ಹಾಕಿಸಿಕೊಳ್ಳುತ್ತಲಿದ್ದಳು ವಾದ್ಯಘೋಷವನ್ನು ಕೇಳಿದೊಡನೆಯೇ ವಧೂವರರನ್ನು ನೋಡಲು ಕಾತುರಳಾಗಿ ತನ್ನ ಮೊಣಕಾಲನ್ನು ಸಟಕ್ಕನೆ ಹಿಂದಕ್ಕೆಳೆದು ನಿಟ್ಟೋಟದಿಂದ ಗವಾಕ್ಷದ ಕಡೆಗೆ ಓಡಿದಳು.

ಅವಳು ಬಂದ ದಾರಿಯುದ್ದಕ್ಕೂ ತನ್ನ ಕಾಲತುದಿಯಿಂದ ಅಲತಿಗೆಯ ಕಾಲಗುರುತನ್ನು ಮೂಡಿಸುತ್ತಾ ನಡೆದಳು. (ಅಲಂಕರ್ತ್ರಿ ಹಿಡಿದ ಆ ತನ್ನಡಿಯ ತುದಿಯು ರಚಯಿಸಿದಳು ಅಲತಿಗೆಯ ಗುರುತುಗಳನಾಗ—)ಹೀಗೆ ಆ ತರುಣಿ ಒಂದು ಜೊತೆ ಕಾಲಗುರುತು ದಾರಿಯುದ್ದಕ್ಕೂ ಅಚ್ಚೊತ್ತುವಂತೆ ಮಾಡಿದಳು ಆ ನಾಟ್ಯಮಯೂರಿ.

ಪ್ರಸಾಧಿಕಯಾ = ಅಲಂಕರ್ತ್ರ್ಯಾ—ಲಂಬಿತಂ=ರಂಜನಾರ್ಥಂ ಧೃತಂ—ದ್ರವರಾಗಮೇವ = ಆದ್ರಾರ್ಲಕ್ತಕಮೇವ—ಅಗ್ರನ್ಯಾಸೌ = ಪಾದಶ್ಚೇತ್ಯಗ್ರಪಾದ ಇತಿ—ಕರ್ಮಧಾರಯ ಸಮಾಸ—ಅಲಕ್ತಕಾಂಕಾಂ = ಲಾಕ್ಷಾರಾಗಚಿಹ್ನಾಂ—ತತಾನ = ವಿಸ್ತಾರಯಾಮಾಸ—ಪ್ರಸಾಧಿಕಾ = ಪರಿಚಾರಿಕೆ—ಅಗ್ರಪಾದ = ಪಾದಾಗ್ರ.

8. ವಿಲೋಚನಂ ದಕ್ಷಿಣಮಂಜನೇನ ।
ಸಂಭಾವ್ಯ ತದ್ವಂಚಿತ ವಾಮನೇತ್ರಾ ॥
ತಥೈವ ವಾತಾಯನಸಂನಿಕರ್ಷಂ ।
ಯಯೌ ಶಲಾಕಾಮಪರಾ ವಹಂತೀ ॥ ೮ ॥

ಇನ್ನೋರ್ವ ರಸಿಕರರಸಿ, ಭ್ರಮರಕುಂತಳೆ, ನೀಲಗನ್ನಡಿಯೆಂದೇರು ನೀತು ಬಲಗಣ್ಣಿಗೆ ಕಾಡಿಗೆ ಹಚ್ಚುತ್ತಾ ಅಲಂಕಾರಮಾಡಿಕೊಳ್ಳುತ್ತಿದ್ದಳು (ಸಿಂಗರಿಸುತಂಜನದೆ ದಕ್ಷಿಣಾಕ್ಷಿಯನು). ದಿಬ್ಬಣಿಗರು ರಾಜವೀಧಿಯಲ್ಲಿ (ರಾಜಬೀದಿಯಲ್ಲಿ) ಬ್ಯಾಂಡುವಾಲಗ ಘೋಷವು (ಸದ್ದು) ಅಂಬರವಸುಂಧರೆ ತುಂಬುವಂತೆ ಕೇಳುತ್ತಿರಲು ಎಡದ ಕಣ್ಣಿಗೆ (ವಾಮನೇತ್ರವನು ಮರೆತು) ಅಂಜನವನ್ನು ಹಾಕದೆಯೇ ಕೈಯಲ್ಲಿ ಕೂರ್ಚಿಕೆಯನ್ನು ಹಿಡಿದೇಕೊಂಡು ವಾತಾಯನದ ಬಳಿಗೆ ನುಗ್ಗಿಬರುವ ತೇರಂತೆ ರಭಸದಿಂದ ವಾತಾಯನದ ಬಳಿಗೆ (ಕೂರ್ಚಿಕೆಯ ಹಿಡಿದಂತೆ ಭರದಿಂದಲೈದಿದಳು) ಬಂದಳು ಆ ನೀಲಾಳಕಿ.

ಸಂಭಾವ್ಯ = ಅಲಂಕೃತ್ಯ = ಸಂಭ್ರಮಾದಿತಿ ಭಾವಃ—ತದ್ವಂಚಿತಂ = ತೇನಾಂಜನೇನ ವರ್ಜಿತಂ—ತಥೈವ ಶಲಾಕಾಮಂಜನತೂಲಿಕಾಂ—ವಾತಾಯನಸಂನಿಕರ್ಷಂ = ಗವಾಕ್ಷಸಮೀಪಂ (ಸಂನಿಕರ್ಷಂ)—ತದ್ವಂಚಿತವಾಮನೇತ್ರಾ = ತೇನ (ಅಂಜನೇನ) ವಂಚಿತಂ ಶೂನ್ಯಂ ವಾಮನೇತ್ರ ಯಸ್ಯಾಃ ॥

9. ಜಾಲಾಂತರಪ್ರೇಷಿತದೃಷ್ಟಿರನ್ಯಾ ।
ಪ್ರಸ್ಥಾನಭಿನ್ನಾಂ ನ ಬಬಂಧ ನೀವೀಮ್ ॥
ನಾಭಿಪ್ರವಿಷ್ಟಾಭರಣಪ್ರಭೇಣ ।
ಹಸ್ತೇನ ತಸ್ಥಾವಲಂಬ್ಯ ವಾಸಃ ॥ ೯ ॥

ಗವಾಕ್ಷಿಯ ರಂಧ್ರಗಳತ್ತ ದೃಷ್ಟಿಯನ್ನು ಹರಿಸಿ ನೋಡುತ್ತ ನಿಂದಿರ್ದಾಳು ಕಾಮನ ಅರಗಿಣಿಯೆಂದು ಹೆಸರುಪಡೆದ ನಾಗವೇಣಿ. ತನ್ನ ಗಮನ ಅತ್ತ ಹರಿದಿರಲು ತಾನು ಸೀರೆಯನ್ನು ಉಡುತ್ತ, ತನ್ನ ಸೀರೆಯ ನೆರಿಗೆಗಳನ್ನು ಸರಿಪಡಿಸುತ್ತ ನಿಂದಿರ್ದಾಳು ಆ ನವತರಳೆ. ಮದುವೆಯ ಉತ್ಸವ ಬಾಣಬಿರುಸುಗಳ ಸದ್ದುಗದ್ದಲದೊಂದಿಗೆ ಬೀದಿಗೆ ಬೀದಿಯೇ ಎದ್ದುಬರುತ್ತಿರಲು ಗಮನ ಅತ್ತ ಹರಿಯಲು, ಆಮೋದಗೊಂಡು (ಗಮನ

ಭರದಿಂದ ಉಡಿದ ನೀವಿಯನು) ಒಮ್ಮೆಲೇ ಆಕೆ ವಾತಾಯನದ ಬಳಿಗೆ ನಡೆದಳು. ಆಗ ಗಮನಭರದಿಂದ ನೀವಿಯು (ಸೀರೆಯು) ಆ ಚದುರೆಯ ಸೊಂಟದ ಕೆಳಭಾಗಕ್ಕೆ ಸರಿಯಿತು. ಹೀಗೆ ಕೆಳಕ್ಕೆ ಜಾರುತ್ತಿರುವ ಸೀರೆಯ ನೆರಿಗೆಯನ್ನು ಹಾಗೆಹಾಗೆಯೇ ಕೈಯೊಳಾಂತು ವಾತಾಯನದ ಬಳಿಗೆ ಭರದಿಂದ ಸಾಗಿದಳಾ ವಾರಿಜಾಕ್ಷಿ (ನೀರಜಾಕ್ಷಿ, ವನಜಾಕ್ಷಿ). ಆಗ ಆಕೆಯ ನಾಭಿಪ್ರದೇಶವು ಸ್ಪಷ್ಟವಾಗಿ ಗೋಚರಿಸತೊಡಗಿತು. ನೀವಿಯ ಗಂಟನ್ನು ಹಿಡಿದ ಕೈಯ ಆಭರಣಗಳು ಉಂಗುರದಂತೆ ಆ ಬಂಗಾರಿಯ (ಸಿಂಗಾರಿಯ) ನಾಭಿದೇಶವನು ತಾಂ ಬೆಳಗಿದುದು (ಆಭರಣರುಚಿನಾಭಿದೇಶವನು ತಾಂ ಬೆಳಗಿದಾಗಳ್).

ಅನ್ವಯ :—ಅನ್ಯಾ ಜಾಲಾಂತರಪ್ರೇಷಿತದೃಷ್ಟಿಃ ಪ್ರಸ್ಥಾನಭಿನ್ನಾಂ ನೀವೀಂ ನ ಬಬಂಧ (ಕಿಂತು)ನಾಭಿ ಪ್ರವಿಷ್ಟಾಭರಣಪ್ರಭೇಣ ಹಸ್ತೇನ ವಾಸಃ ಅವಲಂಬ್ಯ ತಸ್ಥೌ॥

ಪ್ರಸ್ಥಾನೇನ = ಗಮನೇನ—ಭಿನ್ನಾಂ = ತ್ರುಟಿತಾಂ—ನೀವೀಂ = ವಸನಗ್ರಂಥಿಮ್—(ನೀವೀಪರಿಪಣೇ ಗ್ರಂಥೌ) ಪ್ರಭೈವನಾಭೇರಾಭರಣಮಭೂದಿತಿ ಭಾವಃ—ಹಸ್ತೇನ ವಾಸೋವಲಂಬ್ಯ = ಗೃಹೀತ್ವಾ ತಸ್ಥೌ—"ನೀವೀಪರಿಪಣೇಗ್ರಂಥೌ ಸ್ತ್ರೀಣಾಂ ಜಘನ ವಾಸಸಿ" ಇತಿ ವಿಶ್ವಃ॥

**10. ಅರ್ಧಾಂಚಿತಾ ಸತ್ವರಮುತ್ಥಿತಾಯಾಃ।**
**ಪದೇ ಪದೇ ದುರ್ನಿಮಿತೇ ಗಲಂತೀ॥**
**ಕಸ್ಯಾಶ್ಚಿದಾಸೀದ್ರಶನಾ ತದಾನೀಂ।**
**ಅಂಗುಷ್ಠಮೂಲಾರ್ಪಿತ ಸೂತ್ರಶೇಷಾ ॥ ೧೦ ॥**

ಇನ್ನೋರ್ವಳು ಮಂದಗಜಗಾಮಿನಿ ಗಮನಭರದಿಂದ ಜಗ್ಗನೆ ಎದ್ದುನಿಂತಳು. ಜಗ್ಗನೆದ್ದು ಅಡಿಯಿಟ್ಟು ರಭಸಕ್ಕೆ ಮುಗ್ಗರಿಸಿ ಎಡವಿದಳು (ಸಂಭ್ರಮದೆ ಜಗ್ಗನೆದ್ದು ಅಡಿಯಿಡಲು). ಎಡವಿದ ಭರಕ್ಕೆ ಆಕೆಯ ಸೊಂಟದಲ್ಲಿದ್ದ, ಅರೆಕೋದ ರತ್ನಖಚಿತವಾದ ಮೇಖಲೆಯು ಕೆಳಕ್ಕೆ ಸರಿಯಿತು, ಆಕೆಯ ಗಮನಸಮಯದಲ್ಲಿ ಎಡವುತ್ತಾ ನಡೆದಂತೆ ಆ ಮೇಖಲೆಯ ರತ್ನಗಳು ಒಂದೊಂದಾಗಿ ಉದುರುತ್ತಾ ಹೋದುವು. ಕೊನೆಗೆ ಗವಾಕ್ಷಿಯ ಜಾಲಂಧ್ರದ ಬಳಿಗೆ ಸೇರಿದಾಗ ಆ ಒಯ್ಯಾರಿಸತಿಯ (ಬಿನ್ನಾಣಗಿತ್ತಿಯ) ಉಂಗುಷ್ಠಮೂಲದಲ್ಲಿ (ಕಾಲಹೆಬ್ಬೆರಳ ತುದಿಯಲ್ಲಿ) ಮೇಖಲೆಯ ಸೂತ್ರ ಮಾತ್ರ ಉಳಿದಿತ್ತು (ಸೂತ್ರ ಮಾತ್ರ ಉಳಿದುದು ಅಹಹ! ಕಡೆಗೆ).

ಅನ್ವಯ:—ಸತ್ವರಮುತ್ಥಿತಾಯಾಃ ಕಸ್ಯಾಶ್ಚಿದ್ ಅರ್ಧಾಂಚಿತಾ ದುರ್ನಿರ್ಮಿತೇ ಪದೇ ಪದೇ ಗಲಂತೀ ರಶನಾ ತದಾನೀಮ್ ಅಂಗುಷ್ಠಮೂಲಾರ್ಪಿತಸೂತ್ರಶೇಷಾ ಆಸೀತ್॥

ರಶನಾ = ಮೇಖಲಾ—ಪದೇಪದೇ = ಪ್ರತಿಪದಮ್—ಗಲಂತೀ=ಗಲದ್ರತ್ನಾ ಸತೀ—ಸೂತ್ರಮೇವ ಶೇಷೋ ಯಸ್ಯಾಃ ಸಾ—ಸಾಂದ್ರಕುತೂಹಲಾನಾಮ್ = ಸಾಂದ್ರಂ ಕುತೂಹಲಂ ಯಾಸಾಮ್—ಕಮಲಾಲಂಕೃತ.ಇವ = "ಸಹಸ್ರಪತ್ರಂ ಕಮಲಂ" ಇತಿ ಅಮರಃ॥

**11. ತಾಸಾಂ ಮುಖೈರಾಸವಗಂಧಗರ್ಭೈಃ।**
**ವ್ಯಾಪ್ತಾಂತರಾಃ ಸಾಂದ್ರಕುತೂಹಲಾನಾಮ್॥**

**ವಿಲೋಲನೇತ್ರಭ್ರಮರೈರ್ಗವಾಕ್ಷಾಃ ।**
**ಸಹಸ್ರಪತ್ರಾಭರಣಾ ಇವಾಸನ್ ॥ ೧೧ ॥**

ಆ ಗವಾಕ್ಷದ ಒಳಿಯಲ್ಲಿ ನಿಂತು ಜಾಲಂದರದ ಸಣ್ಣ ಸಣ್ಣ ಕಿಂಡಿಗಳ ಮೂಲಕ ಆ ತಾವರೆಮೊಗದ ಚೆಲುವೆಯರು (ಕಮಲನಯನೆ, ಮೃಗನಯನೆ) ಬಹಳ ಕುತೂಹಲದಿಂದ ತಮ್ಮ ಭ್ರಮರದಂತಹ ಕಣ್ಣುಗಳನ್ನು ಅತ್ತಿತ್ತ ಚಲಿಸುತ್ತಾ ಈಕ್ಷಿಸುತ್ತಾ ನಿಂತಿದ್ದರು (ಚಲಿಪ ಕಣ್‌ದುಂಬಿ ವೇಣ್ ಉಗುವ ಕಳ್‌ಗಂಪೆಸೆವ). ಹೀಗೆ ನಿಂತು ನೋಡುತ್ತಿರುವ ಸಹಸ್ರಾರು ಮುಗುದೆಯರು ಗವಾಕ್ಷಿಯ ಬಳಿ ಎಸೆದಿದರ್ದ್ದ ಜಾಲಂದ್ರದ ಹೊರಗಡೆಯಿಂದ ನೋಡುವವರ ಕಣ್ಣಿಗೆ (ಕಣ್ಗೆ) ಸಹಸ್ರಪತ್ರಾಭರಣದಂತೆ (ಪೆರೆದುದು ಸಹಸ್ರಪತ್ರಾಭರಣದಂತೆ) ಕಾಣಸುತ್ತ ರಮಣೀಯವಾಗಿ ತೋರುತ್ತಿದ್ದರು. ಆ ಚಂಚಲಾಕ್ಷಿಯರ ಮಿಂಚುವ ಕಾತುರತೆಯ ಕಣ್ಣುಗಳು, ಆನನದ ಅಲಂಪು, ಮುಖಕಮಲದ ಸೌಂದರ್ಯ, ಅತ್ತಿತ್ತ ಬೆಳ್ಳನೆಯ ಬೆಳಕನ್ನು ಚೆಲ್ಲುತ್ತ (ಬಸಿಯುತ್ತ) ಕಣ್ಣುಗಳಂತೂ ಚಲಿಸುವ ತುಂಬಿಗಳಿಗೆ ಸಾಟಿಯಾಗಿ ನೋಟಕರ ಕಣ್ಣಿಗೆ ಸೊಬಗಿನ ಸುಗ್ಗಿಯಾಗಿ, ಖಂಡ ಸಕ್ಕರೆಯಾಗಿ ಪರಿಣಮಿಸಿದುವು. ಅವರು ಮದಿರೆಯನ್ನು (ಆಸವಗಂಧಗರ್ಭೈಃ) ಒಂದಿಷ್ಟು ಕುಡಿದಿದ್ದ ಕಾರಣ ಪ್ರಚೋದಿತವಾದ ಅವರ ಕೆಂಪಾದ ಆನನಪದ್ಮ ಇನ್ನೂ ಕೆಂಪಡರಿ ಸುಂದರವಾಗಿ ಕಾಣುತ್ತಿತ್ತು. ಅವರ ಶ್ವಾಸೋಚ್ಛ್ವಾಸದಲ್ಲಿ (ಉಚ್ಛ್ವಾಸ, ನಿಃಶ್ವಾಸ) ಆಸವದ ಪರಿಮಳ ಹೊರಸೂಸುತ್ತಿತ್ತು.

ಕಮಲಾಲಂಕೃತ ಇವ = ''ಸಹಸ್ರಪತ್ರಂ ಕಮಲಂ'' ಇತಿ ಅಮರಃ ॥

ಅನ್ವಯ :—ಸಾಂದ್ರಕುತೂಹಲಾನಾಂ ತಾಸಾಮ್ ಆಸವಗಂಧಗರ್ಭೈಃ ವಿಲೋಲ ನೇತ್ರಭ್ರಮರೈಃ ವ್ಯಾಪ್ತಾಂತರಾಃ ಗವಾಕ್ಷಾಃ ಸಹಸ್ರಪತ್ರಾಭರಣಾಃ ಇವಾಸನ್ ॥

ವಿಲೋಲಾನಿನೇತ್ರಾಣ್ಯೇವ ಭ್ರಮರಾ ಏಷಾಂ ತೈಃ—ಸಹಸ್ರಪತ್ರಾಭರಣಾ ಇವ ಕಮಲಾಲಂಕೃತಾ ಇವ—''ಸಹಸ್ರಪತ್ರಂ ಕಮಲಂ'' ಇತ್ಯಮರಃ—ಸಾಂದ್ರಂಕುತೂಹಲಾನಾಮ್ = ಸಾಂದ್ರಂ ಕುತೂಹಲಂ ಯಾಸಾಮ್ ॥

**12. ತಾ ರಾಘವಂ ದೃಷ್ಟಿಭಿರಾಪಿಬಂತ್ಯೋ ।**
**ನಾರ್ಯೋ ನ ಜಗ್ಮುಃ ವಿಷಯಾಂತರಾಣಿ ॥**
**ತಥಾ ಹಿ ಶೇಷೇಂದ್ರಿಯವೃತ್ತಿರಾಸಾಂ ।**
**ಸರ್ವಾತ್ಮನಾ ಚಕ್ಷುರಿವ ಪ್ರವಿಷ್ಟಾ ॥ ೧೨ ॥**

ಆ ಪೌರನಾರಿಯರು (ಶೇಶೇಂದ್ರಿಯವೃತ್ತಿ)(ಸರ್ವಾತ್ಮನಾ ಸ್ವರೂಪಕಾತ್ ಸನ್ ತಮ್ಮ ಯೇನ ಚಕ್ಷುಃ—ಕೌತ್ಸುಕ) ರಘುಸೂನುವಿನ ರೂಪಸೌಂದರ್ಯವನ್ನು ಏಕಮಾನಸರಾಗಿ ಕಣ್ಣುಗಳ ದ್ವಾರಗಳಿಂದ ಈಂಟಿದರು (ಕಣ್ಣುಗಳಿಂದೀಂಟಿದರ್ ಏಕದೃಶ್ಯನನು). ಎಲ್ಲಾ ಇಂದ್ರಿಯಗಳು ಆ ಉತ್ಪಲಾಕ್ಷಿಯರ ಕಣ್ಣುಗಳಲ್ಲೆ ಒಂದುಗೂಡಿ ಕೇಂದ್ರೀಕೃತವಾದಂತೆ. ಒಟ್ಟಾಗಿ ನೋಡುವ ಕಾರ್ಯವನ್ನು ಭರದಿಂದ ಮಾಡುತ್ತಿದ್ದರೆಂಬಂತೆ ಏಕಾಗ್ರಚಿತ್ತದಿಂದ ದಿಟ್ಟಿಸಿನೋಡುತ್ತ ಆನಂದಸಾಗರದಲ್ಲಿ ತೇಲಾಡುತ್ತ ವಿನೋದಮನಸ್ಕರಾಗಿದ್ದರು, ಅವರಿಗೆ ಪ್ರಪಂಚದ ಬೇರೆ ವಿಷಯಗಳತ್ತ ಗಮನವೇ ಇರಲಿಲ್ಲ (ಚೇತನವು ಅಕ್ಷಿಗಳ ತಾಂ

ಪೊಕ್ಕಪೋಲಿರ್ದರವರು). ಇದರಿಂದ ಕಣ್ಣನ್ನುಳಿದ ಇತರ ಇಂದ್ರಿಯಗಳ ಕೆಲಸವು ನಿಂತು ಹೋಗಿತ್ತು ಎಂದೆನ್ನಬಹುದಲ್ಲವೆ ? (ಶ್ರೋತ್ರಾದಿ ಇತರ ಇಂದ್ರಿಯಗಳ ವ್ಯಾಪಾರವು ಶೂನ್ಯವೆನ್ನಬಹುದು).

ಶೇಷೇಂದ್ರಿಯವೃತ್ತಿ=ಚಕ್ಷುರ್ವ್ಯತಿರಿಕ್ತ ಶ್ರೋತ್ರಾದೀಂದ್ರಿಯವ್ಯಾಪಾರಃ—ಅನ್ಯಥಾ ಸ್ವಸ್ವವಿಷಯಾಧಿಗಮಃ ಕಿಂ ನ ಸ್ಯಾದಿತಿ ಭಾವಃ—ದೃಷ್ಟಿಭಿಃ ಆಪಿಬಂತ್ಯಃ ॥

**13.** **ಸ್ಥಾನೇ ವೃತಾ ಭೂಪತಿಭಿಃ ಪರೋಕ್ಷೈಃ ।**
**ಸ್ವಯಂವರಂ ಸಾಧುಮಮಂಸ್ತ ಭೋಜ್ಯಾ ॥**
**ಪದ್ಮೇವ ನಾರಾಯಣಮನ್ಯಥಾಽಸೌ ।**
**ಲಭೇತ ಕಾಂತಂ ಕಥಮಾತ್ಮತುಲ್ಯಮ್** ॥ ೧೩ ॥

ಎಂತು ಮಹಾಲಕ್ಷ್ಮಿಯು ಶ್ರೀಮನ್ನಾರಾಯಣನನ್ನು ಪತಿಯಾಗಿ ಪಡೆದಂತೆ ಭೋಜ ರಾಜನ ತಂಗಿಯಾದ ಇಂದುಮತಿಯು ತನಗೆ ಅನುರೂಪನಾದ ಪುರುಷಶ್ರೇಷ್ಠನನ್ನು ತನ್ನ ಪತಿಯನ್ನಾಗಿ ತಾನೇ ಆರಿಸಿಕೊಂಡು ಕೃತಕೃತ್ಯಳಾದಳು. ಅವಳು ಪುಣ್ಯವಂತಳೇ ಸೈ (ಲೇಸನೆಸಗಿದಳಲ್ಲದಿರೆ ಪಡೆದವಳೆಂತು ಎಣೆಯು ಪತಿಯು). ಪರಮಾತ್ಮನಾದ ಷಡ್ಗುಣೈ ಶ್ವರ್ಯಸಂಪನ್ನನಾದ, ಸಕಲಕಲ್ಯಾಣಗುಣನಿಧಿಯಾದ ಶ್ರೀಹರಿಯು (ತ್ರಿವಿಕ್ರಮನು) ಎಲ್ಲಾ ವಿಧದಲ್ಲೂ ಶ್ರೀದೇವಿಯಾದ, ಮಹಾಲಕ್ಷ್ಮಿಗೆ (ಸಿರಿದೇವಿ) ಸಾಟಿಯಾಗಿರುವನು. ಇತರ ಮಹಾರಾಜಾಧಿರಾಜರು ತಾವು ಆಕೆಯನ್ನು ಮನಸಾರೆ ಬಯಸಿದರೂ ಅವರ ಆಶೆ ಆಕಾಂಕ್ಷೆಗಳು ಮೃಗಜಲದಂತೆ ಫಲಿಸಲೇ ಇಲ್ಲ. ಫಲಿಸಲಾರದು.

ಆ ಅನೇಕ ಮಂದಿ ನೃಪರು ಅನಂತರದ ಮಂಗಳಕರವಾದ ವಿವಾಹಕಾರ್ಯಕ್ರಮದಲ್ಲಿ ಭಾಗವಹಿಸದೆ, ಸಹಕರಿಸದೆ ದೂರ ಉಳಿದರು. ಗಂಟುಮೋರೆ ಹಾಕಿಕೊಂಡು ತಮ್ಮ ಶಿಬಿರದಲ್ಲಿ ಕುಳಿತು ನಾನಾತೆರನಾಗಿ ಯೋಚಿಸತೊಡಗಿದರು. ಇಂದುಮತಿಯು ಸ್ವಯಂವರ ಪದ್ಧತಿಯಿಂದಾಗಿ ಒಳ್ಳೆಯ ಗಂಡನನ್ನೇ ಆರಿಸಿ ಪಡೆದಳು. ಅನ್ಯವಿಧಾನದಿಂದ ಇದು ಸಾಧ್ಯವಾಗುತ್ತಿರಲಿಲ್ಲ. ಅವರ ಜೋಡಿ ಪರಂಧಾಮಸ್ವರೂಪರಾದ ಶ್ರೀಹರಿ ಶ್ರೀದೇವಿ ಯರಂತೆ ಲೋಕೋತ್ತರವಾದುದು. ಏಕೆಂದರೆ ಆಕೆ ಸರ್ವಶ್ರೇಷ್ಠನಾದ ಸಾಮ್ರಾಟನಾದ ಅಜನನ್ನು ತನ್ನ ಪತಿಯಾಗಿ ಪಡೆದ ಮಹಾಭಾಗ್ಯವಂತೆ, ಅದೃಷ್ಟಶಾಲಿ. ಅವಳ ಭಾಗ್ಯಕ್ಕೆ ಇನ್ನು ಎಣೆ ಇರದು. ''ಪದವೀ ಪೂರ್ವಪುಣ್ಯಾನಾಂ ಎಂಬಂತೆ.''

ಸ್ಥಾನೇ ಯುಕ್ತಮೇತತ್—''ಯುಕ್ತೇ ದ್ವೇ ಸಾಂಪ್ರತಂ ಸ್ಥಾನೇ'' ಇತ್ಯಮರಃ—ನಾರಾಯಣಾಮಿವ—ಆತ್ಮತುಲ್ಯಂ ಸ್ವಾನುರೂಪಂ ಕಾಂತಂ ಪತಿಂ ಕಥಂ ಲಭೇತ್ ? ನ ಲಭೇತೈವ ॥

**14.** **ಪರಸ್ಪರೇಣ ಸ್ಪೃಹಣೀಯಶೋಭಂ ।**
**ನ ಚೇದಿದಂ ದ್ವಂದ್ವಮಯೋಜಯಿಷ್ಯತ್ ॥**
**ಅಸ್ಮಿನ್ ದ್ವಯೋ ರೂಪವಿಧಾನಯತ್ನಃ ।**
**ಪತ್ಯುಃ ಪ್ರಜಾನಾಂ ವಿತಥೋ ಭವಿಷ್ಯತ್** ॥ ೧೪ ॥

ವಿಶ್ವಶಿಲ್ಪಿಯಾದ ಆ ಪರಬ್ರಹ್ಮನು ಎಷ್ಟೊಂದು ಸಾಮರ್ಥ್ಯದಿಂದ ಬಹಳ ಪ್ರಯತ್ನದಿಂದ ಕಷ್ಟಪಟ್ಟು (ತೊಳಲಿ, ಬಳಲಿ) ಸೃಷ್ಟಿಸಿರುವನು. ಈ ಅಪೂರ್ವಶೋಭೆಯ ಈ ರಾಜಕನ್ಯೆಯನ್ನು (ಈ ವಿಶ್ವಸುಂದರಿಯನ್ನು). ಪುರುಷೋತ್ತಮನಾದ ಈ ಗಂಡಿನೊಡನೆ (ಅಪೂರ್ವ ಜೋಡಿ) ಸಂಘಟಿಸದಿರುತ್ತಿದ್ದರೆ ಆ ಪ್ರಭುವಿನ ವಿಶ್ವಪ್ರಯತ್ನಗಳೆಲ್ಲಾ ಭವಿಷ್ಯತ್ಕಾಲದಲ್ಲಿ ನೀರಲ್ಲಿಟ್ಟ ಹೋಮದಂತೆ ನಿಷ್ಫಲವಾಗುತ್ತಿದ್ದುವು. ಈ ನೂತನ ವಧೂವರರು ಸ್ಪೃಹಣೀಯಶೋಭರು (ಶೋಭಿತರು, ಯಶೋವಂತರು) (ಸ್ಪೃಹಣೀಯ ಶೋಭರಿವರಿರ್ವರನು). ಇತರರು ಈ ಸೌಂದರ್ಯರಾಶಿಯನ್ನು ನೋಡಿ "ತಮಗಿಂತಹ ಭಾಗ್ಯವಿಲ್ಲವಲ್ಲಾ" ಎಂದು ಅಸೂಯೆಪಡತಕ್ಕ ಹೊಸ ಜೋಡಿ. ಇದೀಗ ಬ್ರಹ್ಮನ (ಕರ್ತಾರನ) ಸೌಂದರ್ಯೋಪಾಸನೆಯ ನಿರ್ಮಾಣಕಾರ್ಯ ಯಶಸ್ವಿಯಾಯಿತು (ಸೌದರ್ಯನಿರ್ಮಾಣಯತ್ನ ನಿಜವಹುದು).

ಸ್ಪೃಹಣೀಯಶೋಭು = ಸರ್ವಾಶಾಸ್ಯ ಸೌಂದರ್ಯಮಿದಂ— ರೂಪವಿಧಾನಯತ್ನಃ = ಸೌಂದರ್ಯನಿರ್ಮಾಣಪ್ರಯಾಸೋ ವಿತಥೋ ವಿಫಲೋಃ ಭವಿಷ್ಯತ್ ॥

**15. ರತಿಸ್ಮರೌ ನೂನಮಿಮಾವಭೂತಾಂ ।**
**ರಾಜ್ಞಾಂ ಸಹಸ್ರೇಷು ತಥಾ ಹಿ ಬಾಲಾ ॥**
**ಗತೇಯಮಾತ್ಮಪ್ರತಿರೂಪಮೇವ ।**
**ಮನೋ ಹಿ ಜನ್ಮಾಂತರಸಂಗತಿಜ್ಞಮ್ ॥ ೧೫ ॥**

"ಇವರಿಬ್ಬರು ರಾಜಸಹಸ್ರರ ಮಧ್ಯೆ ಮೈದಳೆದು ನಿಂತಿರುವ ರತಿ-ಮನ್ಮಥರು (ಇವರೆ ಮೈದಳೆದಿರುವ ರತಿಮದನರೇಕೆಸಲು). ರತಿ, ಸ್ಮರರ ಸಾಕಾರಮೂರ್ತಿಗಳು. ಈ ಬಾಲೆಯು ಅದೇಕೆ ಸಹಸ್ರಾರುಮಂದಿ ರಾಜಕುಮಾರರು ನೆರೆದಿರುವ ಈ ವಿವಾಹಶಾಲೆಯಲ್ಲಿ ತನ್ನ ಆತ್ಮಕ್ಕೆ ಸರಿದೂಗುವ ರಘುಜನನ್ನೇ ಏಕೆ ವರಿಸಿದಳು? ಅದಕ್ಕೂ ಸಕಾರಣವಿದೆ. ಅದಕ್ಕೆ ಅವರ ಪೂರ್ವಜನ್ಮದ (ಭವಾಂತರದ) ಪ್ರೀತಿಯೇ ದ್ಯೋತಕವಿದೆ. ಭವಾಂತರದ ಜನ್ಮಾಂತರದ ಪ್ರೀತಿ, ಸ್ನೇಹವು ಅವರನ್ನು ಪ್ರಥಮದೃಷ್ಟಿಯಲ್ಲಿ ಒಂದಾಗಿ ಬಂಧಿಸಿತು. ಕಣ್ಣಿಗಿಂತಲೂ ಮಿಂಚಿತವಾಗಿ ಮನಸ್ಸು ಅರಿಯದಿರುವುದೇ? (ಕಣ್ಣರಿಯದೊಡಂ ಕರುಳರಿಯದೇ ಎಂಬಂತೆ). ಆತ್ಮಪ್ರೀತಿಯು ತನಗೆ ಬೇಕಾದ ಬಾಹ್ಯರೂಪವನ್ನು (ಸ್ವರೂಪವನ್ನು) ಅರಿಸಿಕೊಳ್ಳಲು ಸಮರ್ಥವಾಗಿರುವುದೆಂದು ಬಲ್ಲವರ ಮತ. ಮನಸ್ಸು ಜನ್ಮಾಂತರಪ್ರೀತಿಯನ್ನು ತಿಳಿದುಕೊಳ್ಳಲು ಶಕ್ತವಾಗಿದೆ. ಈ ಮಾತು ಇದೀಗ ಸತ್ಯವಾಯಿತು" ಎಂದು ವೈವಾಹಶಾಲೆಯಲ್ಲಿ, ರಾಜಬೀದಿಯಲ್ಲಿ ನೆರೆದಿರುವ ಪರಿಜನರು, ಪುರಜನರು ಪರಸ್ಪರ ಆಡಿಕೊಳ್ಳುತ್ತಿದ್ದರು.

ರಾಜ್ಞಾಂ ಸಹಸ್ರೇಷು = ರಾಜಸಹಸ್ರಮಧ್ಯೇ— ಗತಾ = ಪ್ರಾಪ್ತಾ—ಮನಃಪ್ರವೃತ್ತಿ ರಸ್ಮಿನ್ನಿತ್ಯುತ್ಕೃಷ್ಟಮ್—ಜನ್ಮಾಂತರಸಹಚರ್ಯಮೇವಾತ್ರ ಪ್ರವರ್ತಕಮಿತಿ ಭಾವಃ ॥

**16. ಇತ್ಯುದ್ಗತಾಃ ಪೌರವಧೂಮುಖೇಭ್ಯಃ ।**
**ಶೃಣ್ವನ್ಕಥಾ ಶ್ರೋತ್ರಸುಖಾಃ ಕುಮಾರಃ ॥**

**ಉದ್ಭಾಸಿತಂ ಮಂಗಲಸಂವಿಧಾಭಿಃ ।**
**ಸಂಬಂಧಿನಃ ಸದ್ಮ ಸಮಾಸಸಾದ ॥ ೧೬ ॥**

ಪೌರಸ್ತ್ರೀಯರು ತನ್ನ ಬಗ್ಗೆ ಆಡಿಕೊಳ್ಳುವ ಹಿತಕರವಾದ, ಸವಿಯಾದ ಮಾತುಗಳನ್ನು ಕೇಳಿ ಅಜಕುಮಾರನು ಅತ್ಯಂತ ಹರ್ಷಗೊಂಡನು (ಶ್ರೋತ್ರಸುಖವೆನಿಸುವೀ ಪುರವಧೂ ಮುಖಜನಿತ ಕಥನವನು). ಏಕೆಂದರೆ ಮಧುರವಾದ ಮಾತು ಸಂತೋಷಕ್ಕೆ ಮೂಲ ವಲ್ಲವೆ ? ಅಷ್ಟುಮಾತ್ರವಲ್ಲ, ಪಾಪಪುಣ್ಯಗಳೆರಡಕ್ಕೂ ಮಾತೇ ಕಾರಣವಲ್ತೆ? ಹೀಗೆಂದು ಬಲ್ಲವರ ಮತ. ಆ ಬಳಿಕ ಆ ವಧೂವರರು ಸಾರಿದರು ಮಂಗಳ ವಿಧಾನಗಳಿಂದ ಶೋಭಿಸುವ ಕನ್ಯಾಪ್ರದಾತೃನಿಲಯುವನು. ಕನ್ಯೆಯನ್ನು ಧಾರೆಯೆರೆದುಕೊಡುವ ಮಂಗಳ ವಸ್ತುನಿಚಯಗಳಿಂದ ಸಮೃದ್ಧವಾಗಿರುವ, ವಿವಾಹಮಂಟಪವಿರುವ ಮಂಗಳಧಾಮ ದತ್ತ ಬಂಧುಜನಸಮೇತರಾಗಿ ನಡೆದರು (ಸಾರಿದನು ಮಂಗಳವಿಧಾನಗಳಿಂದೆಸೆವ ಕನ್ಯಾಪ್ರದಾತೃನಿಲಯುವನು).

ಉದ್ಗತಾ = ಉತ್ಪನ್ನಾಃ—ಶ್ರೋತ್ರಯೋಃ ಸುಖಾಮಧುರಾಃ—"ಸುಖ" ಶಬ್ದೋ ವಿಶೇಷ್ಯ ನಿಘ್ನಃ—"ಪಾಪಪುಣ್ಯಸುಖಾದಿ ಚ" ಇತ್ಯಮರಃ—

17. **ತತೋಽವತೀರ್ಯಾಶುಕರೇಣುಕಾಯಾಃ ।**
**ಸ ಕಾಮರೂಪೇಶ್ವರದತ್ತಹಸ್ತಃ ॥**
**ವೈದರ್ಭನಿರ್ದಿಷ್ಟಮಥೋ ವಿವೇಶ ।**
**ನಾರೀಮನಾಂಸೀವ ಚತುಷ್ಕಮಂತಃ ॥ ೧೭ ॥**

ಕಾಮರೂಪೇಶ್ವರನು (ಕಾಮರೂಪದ ರಾಜನು) ತನ್ನ ನೀಡಿದ ಕೈಯನ್ನು ಹಿಡಿಯಲು, ಆ ಕೈಯ ಸಹಾಯದಿಂದ ಅಂಬಾರಿ ಆನೆಯ ಬೆನ್ನಿಂದ ಕ್ಷಣಾರ್ಧದಲ್ಲಿ ಕೆಳಗಿಳಿದು (ಕಾಮರೂಪೇಶ್ವರನು ಕೈಹಿಡಿಯಲು) ವಿದರ್ಭರಾಜನಾದ ಭೋಜರಾಜನು ತೋರಿದ ಮಂಗಳಸದ್ಮದ ಒಳಹಜಾರಕ್ಕೆ ನಡೆದನು. ಅವನು ಅರಮನೆ ನಾರಿಯರ ಹೃದಯದ ಒಳಪುಗುವಂತೆ, ಅವರ ನಾನಾಬಗೆಯ ಮನವನ್ನು ಪುಗುವಂತೆ ಭರ್ಜರಿ ಯಾದ ಭೋಜಸೂಚಿತ ಸದ್ಮದ ಚತುಷ್ಕದ ಒಳಭಾಗಕ್ಕೆ ನಡೆದನು (ಭೋಜಸೂಚಿತ ಸದ್ಮದೊಳಪೊಕ್ಕನಂದು).

ಕರೇಣುಕಾ = ಸಣ್ಣಪ್ರಾಯದ ಹೆಣ್ಣಾನೆ—ಸದ್ಮ = ಗೃಹಂ—ಸಮಾಸಸಾದ=ಪ್ರಾಪ —ಶೀಘ್ರಮವತೀರ್ಯ—ನಾರೀಣಾಂ ಮನಾಂಸೀವ ವಿವೇಶ ॥

18. **ಮಹಾರ್ಹಸಿಂಹಾಸನಸಂಸ್ಥಿತೋಽಸೌ ।**
**ಸರತ್ನಮರ್ಘ್ಯಂ ಮಧುಪರ್ಕಮಿಶ್ರಮ್ ॥**
**ಭೋಜೋಪನೀತಂ ಚ ದುಕೂಲಯುಗ್ಮಂ ।**
**ಜಗ್ರಾಹ ಸಾರ್ಧಂ ವನಿತಾಕಟಾಕ್ಷೈಃ ॥ ೧೮ ॥**

ಆ ಮಹಾಭಾವನು (ರಾಜರಾಜೇಶ್ವರನು) ಹೇಮ (ಸುವರ್ಣ) ಸಿಂಹಾಸನದಲ್ಲಿ ಆರೂಢನಾಗಿ ಭೋಜರಾಜನಿಂದ ಸನ್ಮಾನಿತನಾದನು. ಮಧುಪರ್ಕದ ಅರ್ಘ್ಯಪಾದ್ಯ

ಗಳನ್ನು ಸ್ವೀಕರಿಸಿದನು. ಭೋಜರಾಜನ ಅಮೃತಹಸ್ತದಿಂದ ನಾನಾವಿಧದ ರತ್ನಗಳನ್ನು, ಗೋಮೇಧಿಕ, ಹವಳ, ವಜ್ರಮಾಣಿಕ್ಯಾದಿಗಳನ್ನು, ರೇಷ್ಮೆಯ ದುಕೂಲಗಳೆರಡನ್ನು ರೂಪಸಿಯರಾದ ವನಿತೆಯರ ಮಂಗಳಕರವಾದ ಕಡೆನೋಟದೊಂದಿಗೆ ಸ್ವೀಕರಿಸಿದನು (ವನಿತೆಯರ ಕಡೆನೋಟದೊಡನೊಡನೆ ಕೈಕೊಂಡನು).

ಮಧುಪರ್ಕ = ಜೇನು, ಮೊಸರು, ಸಕ್ಕರೆ, ಜಲದಿಂದ ವರನನ್ನು ಪೂಜಿಸುವುದು (ವಧುವಿನ ಕಡೆಯವರು), ಸತ್ಕರಿಸುವುದು ಸರತ್ನಂ = ರತ್ನೈಃ ಸಹಿತಂ—ಮಧುಪರ್ಕ ಮಿಶ್ರಮರ್ಘ್ಯಂ ಪೂಜಾಧನದ್ರವ್ಯಂ—ವನಿತಾಕಟಾಕ್ಷೈಃ = ಅನ್ಯಸ್ತ್ರೀಣಾಪಾಂಗದರ್ಶನೈಃ ॥

19. ದುಕೂಲವಾಸಾಃ ಸ ವಧೂಸಮೀಪಂ ।
ನಿನ್ಯೇ ವಿನೀತೈರವರೋಧರಕ್ಷೈಃ ॥
ವೇಲಾ ಸಕಾಶಂ ಸ್ಫುಟಫೇನರಾಜಿಃ ।
ನವೈರುದನ್ವಾನಿವ ಚಂದ್ರಪಾದೈಃ ॥ ೧೯ ॥

ವರನನ್ನು ವಧುವಿನ ಸಮೀಪಕ್ಕೆ ರಾಜದೂತರು ಒಯ್ದರು. ಆ ರಘುಜನನು ರೇಷ್ಮೆಯ ಬಿಳಿಯ ಬಟ್ಟೆಯನ್ನು (ರೇಷ್ಮೆಯ ಬಿಳಿದುಕೂಲವನ್ನು) ಉಟ್ಟು ಸಮುದ್ರ ರಾಜನಂತೆ ಕಂಗೊಳಿಸುತ್ತಾ, ಸಾಗರರಾಜನು ಘನವಾಗಿ ಶಬ್ದಿಸುತ್ತಾ (ಮೊರೆಯುತ್ತಾ). ಬಿಳಿಯ ಫೇನರಾಶಿಯಿಂದ ಶೋಭಿಸುತ್ತಾ, ನವಚಂದ್ರಮನ ಕಿರಣಗಳಿಂದ ಥಳಥಳನೆ ಹೊಳೆಯುತ್ತಾ ಸಮುದ್ರಕಿನಾರೆಗೆ ಹೋಗುವಂತೆ ರಾಜಭಟರ ಜೊತೆಯಲ್ಲಿ ಆ ರಾಜೇಂದು ತಿಲಕನು ತನ್ನ ಸತಿಯಾದ ಇಂದುಮತಿಯ ಬಳಿಗೆ ತೆರಳಿದನು. ಸಮುದ್ರವು ಮೊರೆಯುತ್ತಾ ಸಮುದ್ರಕಿನಾರೆಯ ಬಳಿಗೆ ಹೋಗುವಂತೆ ಸಾಗಿಹೋದನು (ನವಚಂದ್ರಕಿರಣಗಳು ಮೊರೆ ಮೊರೆದು ನೊರೆಗರೆಯುವ ಅಂಬುಧಿಯ ದಡಕೆ ಒಯ್ಯುವವೋಲ್). ಅವನನ್ನು ಆ ರಾಜ ಕನ್ಯೆಯ ಬಳಿಗೆ ಆ ರಾಜಭಟರು ಕರೆದುಕೊಂಡುಹೋದರು.

ಪೂರ್ಣೋಪಮೇ ಅಲಂಕಾರ—ದೃಷ್ಟಾಂತ ಅಲಂಕಾರ—ದುಕೂಲಸ್ಯ ಫೇನೋಪ ಮಾನಮ್—ಇಂದುಮತ್ಯಾ ಅವರೋಧರಕ್ಷಾಣಾಮ್ ಚಂದ್ರಪಾದೋಪಾಮಾನಮ್—ಇತ್ಯಾಹ ಸುಮತಿ—ಸಕಾಶಂ = ಸಮೀಪಮಿವ ॥

20. ತತ್ರಾರ್ಚಿತೋ ಭೋಜಪತೇಃ ಪುರೋಧಾ ।
ಹುತ್ವಾಗ್ನಿಮಾಜ್ಯಾದಿಭಿರಗ್ನಿಕಲ್ಪಃ ॥
ತಮೇವ ಚಾಧಾಯ ವಿವಾಹಸಾಕ್ಷ್ಯೇ ।
ವಧೂವರೌ ಸಂಗಮಯಾಂಚಕಾರ ॥ ೨೦ ॥

ಅಲ್ಲಿ ಆ ಭೋಜರಾಜನ ಅರಮನೆಯಲ್ಲಿ ಪರಮಪೂಜ್ಯನಾದ ವೈದಿಕಧರ್ಮಶಾಸ್ತ್ರ ನಿಪುಣನಾದ ಅಗ್ನಿಹೋತ್ರಿಯು (ಪುರೋಹಿತನು) ಅಗ್ನಿಸಾಕ್ಷಿಯಾಗಿ ಮಾಂಗಲ್ಯ ಧಾರಣಾದಿಕ್ರಿಯೆಗಳನ್ನು ನಡೆಸಿ ಆ ವಧೂವರರ ಕೈಹಿಡಿಸಿ ಗೃಹಸ್ಥಾಶ್ರಮಧರ್ಮದ ದೀಕ್ಷೆಯನ್ನಿತ್ತರು. ಆ ಅಗ್ನಿಹೋತ್ರಿಯು ಸಕಲಮಂತ್ರಶಾಸ್ತ್ರನಿಪುಣನು. ಅವನು ಗುರು ಪರಂಪರೆಯಿಂದ ಆಶ್ವಲಾಯನ, ಬೋಧಾಯನ ಮೊದಲಾದ ಗೃಹ್ಯಸೂತ್ರಗಳನ್ನು ಬಲ್ಲವನು. ಮಾನವ ಧರ್ಮಶಾಸ್ತ್ರಗಳ ಸಿದ್ಧಾಂತಗಳನ್ನು ಅರಿತ ಪೂಜ್ಯನು. ಸ್ವತಃ

ಅಗ್ನಿಯಂತೆ ಅಗ್ನಿಕಲ್ಪಕನು (ಅಗ್ನಿಯನೆ ಸಾಕ್ಷಿಗೈದಾ ವಧೂವರರ ಕೈಪಿಡಿಸಿದನು ಅಗ್ನಿಕಲ್ಪಕನು). ಅಗ್ನಿದೇವನನ್ನು ಆಜ್ಯಾದಿಗಳಿಂದ ಬೇಳಿದವನು. ಅಗ್ನಿಗೆ ತುಪ್ಪ, ಅರಳನ್ನು ಹಾಕಿ ಪ್ರಜ್ವಲಿಸುವಂತೆ ಮಾಡಿ, ಹವಿರ್ಗಂಧದಿಂದ ನಾಲ್ಕು ದಿಸೆಗಳನ್ನು ಘಮ ಘಮಾಯಿಸುವಂತೆ ಮಾಡಿ, ಜ್ಯೋತಿರ್ಮಯ ನಾದ ಅಗ್ನಿಯನ್ನು ಪೂಜಿಸಿದನು. ಆ ಅಗ್ನಿನಾರಾಯಣನನ್ನು ಕರ್ಮಸಾಕ್ಷಿಯನ್ನಾಗಿ ಮಾಡಿ ಮಂತ್ರೋಕ್ತವಾಗಿ ಶಾಸ್ತ್ರೋಕ್ತ ವಾದ ರೀತಿಯಲ್ಲಿ ಸಪ್ತಪದಿ, ಮಾಂಗಲ್ಯಧಾರಣಾದಿ ವಿಧಿಗಳನ್ನು ಪೂರೈಸಿ ಆ ಸತಿಪತಿ ಯರನ್ನು ದಾಂಪತ್ಯದ ಚೌಕಟ್ಟಿನಲ್ಲಿ ಒಂದು ಗೂಡಿಸಿದನು ಆ ಪರಮಪೂಜ್ಯನಾದ ಅಗ್ನಿಹೋತ್ರಿಯು (ರಾಜಪುರೋಹಿತನು).

ಭೋಜಪತೇ = ಭೋಜದೇಶಾಧೀಶ್ವರಸ್ಯ—ಪುರೋಧಾಃ=ಪುರೋಹಿತಃ—''ಪುರೋ ಧಾಸ್ತು, ಪುರೋಹಿತಃ'' ಇತ್ಯಮರಃ ॥

**21. ಹಸ್ತೇನ ಹಸ್ತಂ ಪರಿಗೃಹ್ಯ ವಧ್ವಾಃ ।**
**ಸ ರಾಜಸೂನುಃ ಸುತರಾಂ ಚಕಾಸೇ ॥**
**ಅನಂತರಾಶೋಕಲತಾಃ ಪ್ರವಾಲಂ ।**
**ಪ್ರಾಪ್ಯೇವ ಚೂತಃ ಪ್ರತಿಪಲ್ಲವೇನ** ॥ ೨೧ ॥

ಆ ರಾಜಸೂನುವು ತನ್ನ ಹಸ್ತದಲ್ಲಿ ವಧುವಿನ ಹಸ್ತವನ್ನು ಗೋಧೂಳಿಲಗ್ನದ ಸುಮುಹೂರ್ತಕಾಲದಲ್ಲಿ ಹಿಡಿದುಕೊಂಡು ಇಂದ್ರತೇಜದಿಂದ ಎಸೆದಿರ್ದನು. ತನ್ನ ಕರಪಲ್ಲವವೆಂಬ ಅಶೋಕಲತೆಯು ಕೆಂಪಾದ ಪ್ರವಾಲದಂತಹ (ಹವಳದಂತಹ) ಪಲ್ಲವ ದೊಂದಿಗೆ ಮಾವಿನ ಕೆಂಪಾದ ಚಿಂದಳಿರನ್ನು ಹೋಲುವ ವಧುವಿನ ಕರಪಲ್ಲವವನ್ನು ವಿವಾಹಮುಹೂರ್ತದಲ್ಲಿ ಪರಿಗ್ರಹಿಸಿ ಪ್ರಕಾಶಿಸಿದನು (ಅಶೋಕೆಯು ಲತೆಯು ಚಿಂದಳಿರ ತನ್ನ ಕರಪಲ್ಲವದೊಳಾಂತ ಆಮ್ರಪೆನಲು).

ಅಶೋಕಲತಾಯಾಃ ಪ್ರವಾಲರಿ ಪಲ್ಲವಂ ಪ್ರತಿಪಲ್ಲವೇನ—ಪ್ರಾಪ್ಯಚೂತ = ಆಮ್ರ ಇವ ॥

**22. ಆಸೀದ್ವರಃ ಕಂಟಕಿ ಪ್ರಕೋಷ್ಠಃ ।**
**ಸ್ವಿನ್ನಾಂಗುಲಿಃ ಸಂವವೃತೇ ಕುಮಾರೀಃ ॥**
**ತಸ್ಮಿನ್ ದ್ವಯೋ ತತ್ಕ್ಷಣಮಾತ್ಮವೃತ್ತಿಃ ।**
**ಸಮಂ ವಿಭಕ್ತೇವ ಮನೋಭವೇನ** ॥ ೨೨ ॥

ಆ ಸಂದರ್ಭದಲ್ಲಿ ಅಜನ ಮುಂಗೈಯ ರೋಮರಾಜಿ ರೋಮಾಂಚನಗೊಂಡು, ಪ್ರಕಟಿತವಾಗಿ ಎದ್ದುನಿಂತಿತು. ಅಂತೆಯೇ ವರನ ಹಸ್ತ ಸೋಂಕಿದಾಗ ಇಂದುಮತಿಯು ಕೈಬೆರಳುಗಳು ಬೆವರಿ ತನ್ನ ಅನುರಾಗವನ್ನು ಪ್ರಕಟಿಸಿದುವು. ಅವರ ಪರಸ್ಪರ ಕ್ರಿಯೆ ಗಳನ್ನು ಪರಿಶೀಲಿಸಿದರೆ ಮನೋಭವನು, ಮನ್ಮಥನು (ಕಾಮದೇವನು) ಅವರ ಪರಸ್ಪರ ಸ್ನೇಹ, ಪ್ರೀತಿ, ಅನುರಾಗಗಳನ್ನು ಸಮನಾಗಿ ಆರಿವಬ್ಬರಲ್ಲಿ ವಿಭಜಿಸಿ ಹಂಚಿದಂತೆ, ಸಮನಾಗಿ ವಿಭಾಗಿಸಿದನೆಂಬಂತೆ ತೋರಿತು. ಪ್ರೇಮವನ್ನು ಇಬ್ಭಾಗಗೊಳಿಸಿದನೋ ಎಂಬಂತೆ ತೋರಿದುದು ಆ ಸುಲಗ್ನಮುಹೂರ್ತದಲ್ಲಿ (ಸುಲಗ್ನಕಾಲದಲ್ಲಿ), ಇರ್ವರಸು

ರಾಗವನ್ನು ಆ ಕ್ಷಣದೊಳು ಅಂಗಜನು ಸಮನಾಗಿ ಬಾಗಿಸಿದನೆನಲು) ಸಾತ್ತ್ವಿಕಪ್ರೇಮದ ಲಕ್ಷಣಗಳು ೧. ರೋಮಾಂಚನ (ರೋಮೋದ್ಗಮ), ೨. ಮೈ ಬೆವರುವುದು.

ಪಾಣಿಸಮಾಗಮೇನ = ಪಾಣ್ಯೋಃ ಸಂಸ್ಪರ್ಶೇನ—ಸಮಮ್ ವಿಭಕ್ತೇವ = ಸಮೀಕೃತೇವೇತ್ಯರ್ಥಃ = ಸಮನಾಗಿ ವಿಭಜಿಸು—ಪಾಲುಮಾಡು (ಹಂಚು). ಉತ್ಪ್ರೇಕ್ಷಾಲಂಕಾರ

23. ತಯೋರಪಾಂಗಪ್ರತಿಸಾರಿತಾನಿ ।
ಕ್ರಿಯಾಸಮಾಪತ್ತಿನಿವರ್ತಿತಾನಿ ॥
ಹ್ರೀಯಂತ್ರಣಾಮಾನ ಶಿರೇ ಮನೋಜ್ಞಾಂ ।
ಅನ್ಯೋನ್ಯಲೋಲಾನಿ ವಿಲೋಚನಾನಿ ॥ ೨೩ ॥

ಆ ರಮಣೀಯರಾದ ವಧೂವರರು ಆ ರಮ್ಯಮೂರ್ತಿಯರು ಪರಸ್ಪರವಾಗಿ ತಾವು ಒಬ್ಬರು ಇನ್ನೊಬ್ಬರನ್ನು ನೋಡುವ ಒಂದಾಸೆಯಿಂದ ಕಣ್ಣಾಲಿಗಳನ್ನು ತಿರುಗಿಸುತ್ತಾ ಕುಡಿನೋಟವನ್ನು ಬೀರುತ್ತಿದ್ದರು. ಆಗ ಅವರ ದೃಷ್ಟಿಗಳು ಕಡೆಗಣ್ಣಲ್ಲಿ ಬೆರದು ಒಂದುಗೂಡುತ್ತಿದ್ದುವು. ಆದರೆ ಮರುಕ್ಷಣವೇ ಲಜ್ಜೆಯಿಂದ ಹಿಂದಿರುಗುತ್ತಿದ್ದುವು. ಈ ಸದ್ವರ್ತನೆಯಿಂದ ಮೂಡುತ್ತಿರುವ ಎಳಲಜ್ಜೆಯಿಂದ ಅವರು ಮನೋಜ್ಞರಾಗಿ ರಮ್ಯವಾಗಿ ಕಾಣುತ್ತಿದ್ದರು (ದಿಟ್ಟಿಗಳು ಕೂಡಿದೊಡನಾಕ್ಷಣದೆ ತಿರುಗುವುವು).

ಮನೋಜ್ಞಾಂ = ರಮ್ಯಾಂ—ಪ್ರತಿಸಾರಿತಾನಿ = ಪ್ರವರ್ತಿತಾನಿ—ಲೋಲಾನಿ = ಸತೃಷ್ಣಾನಿ—ಹ್ರಿಯಾ = ಸಂಕೋಚವಾಗು.

24. ಪ್ರದಕ್ಷಿಣಪ್ರಕ್ರಮಣಾತ್ ಕೃಶಾನೋಃ ।
ಉದರ್ಚಿಷಸ್ತನ್ಮಿಥುನಂ ಚಕಾಸೇ ॥
ಮೇರೋರುಪಾಂತೇಷ್ವಿವ ವರ್ತಮಾನಂ ।
ಅನ್ಯೋನ್ಯಸಂಸಕ್ತಮಹಸ್ತ್ರಿಯಾಮಮ್ ॥ ೨೪ ॥

ಆ ರಾಜದಂಪತಿಗಳು ಪ್ರಜ್ವಲಿಸುತ್ತಿರುವ ಹೋಮಾಗ್ನಿಯ ಮುಂದೆ ಪ್ರಕಾಶಿಸುತ್ತ ಬಲವಂದು ಸುತ್ತಿದರು. ಅವರೀರ್ವರು ತಮ್ಮ ಬಲಗಡೆಯಿಂದ ಉರಿಯುತ್ತಿರುವ ಕೃಶಾನುವಾದ ಅಗ್ನಿಜ್ಯೋತಿಯನ್ನು ಪ್ರಮಾಣವಚನ ಸ್ವೀಕರಿಸಿ ಪ್ರದಕ್ಷಿಣೆಗೈದರು (ಬೆಳಗಿದರು ದಂಪತಿಗಳು ಪ್ರಜ್ವಲಿಸುವಗ್ನಿಯನು ಬಲವಂದು). ಆಗ ಅವರು ಸುವರ್ಣಮೇರು ಪರ್ವತವನ್ನು ಸೂರ್ಯಚಂದ್ರರು ಸುತ್ತುತ್ತಿರುವಂತೆ ಕಂಡರು. ಅನ್ಯೋನ್ಯಾಸಕ್ತಿಯಿಂದ ಪ್ರದಕ್ಷಿಣೆಗೈದರು. ಹಗಲುರಾತ್ರಿಗಳು ಒಂದುಗೂಡಲು ಸ್ವತಃ ಹಗಲುರಾತ್ರಿಗಳೇ ಬಯಸಿದಂತೆ ಪರಸ್ಪರಾಸಕ್ತರಾದ, ಪ್ರೇಮಾನುರಾಗಿಗಳಾದ ಆ ದಂಪತಿಗಳು ಎಸೆದಿರ್ದರು (ಅನ್ಯೋನ್ಯಸಂಸಕ್ತರಾದ ಅಹರ್ನಿಶಿಗಳೆನೆ ಮೆರೆದು). ಅವರೀಗ ಮಿಲನ ಕಾಂಕ್ಷಿತರು (ಇಬ್ಬರ ಏರು ಒಂದೇ, ಇಬ್ಬರ ಆಕಾಂಕ್ಷೆ ಒಂದೇ).

ಅನ್ವಯ :—ತನ್ಮಿಥುನಮ್ ಉದರ್ಚಿಷಃ ಕೃಶಾನೋಃ ಪ್ರದಕ್ಷಿಣ ಪ್ರಕ್ರಮಣಾತ್ ಮೇರೋಃ ಉಪಾಂತೇಷು ವರ್ತಮಾನಮ್ ಅನ್ಯೋನ್ಯಸಂಸಕ್ತಮ್ ಅಹಸ್ತ್ರಿಯಾಮಮ್ ಇವ ಚಕಾಸೇ ॥

ಕೃಶಾನೋರ್ವರ್ತ್ಮನೀ—ಕೃಶಾನು = ಅಗ್ನಿ—ಅನ್ಯೋನ್ಯಸಂಸಂಕ್ತಂ=ಪರಸ್ಪರಸಂಗತವಮ್ —ಸಮಾಹಾರೇ = ದ್ವಂದ್ವೈಕವದ್ಭಾವಃ—ಚಕಾಸೇ = ದಿದೀಪೇ ॥

**25.** **ನಿತಂಬಗುರ್ವೀ ಗುರುಣಾ ಪ್ರಯುಕ್ತಾ।**
**ವಧೂರ್ವಿಧಾತೃಪ್ರತಿಮೇನ ತೇನ ॥**
**ಚಕಾರ ಸಾ ಮತ್ತಚಕೋರನೇತ್ರಾ ।**
**ಲಜ್ಜಾವತೀ ಲಾಜವಿಸರ್ಗಮಗ್ನೌ** ॥ ೨೫ ॥

ಲಜ್ಜಿತಳಾದ ಆ ಗುರುನಿತಂಬಿನಿಯು ತನ್ನ ಗುರುವಿನ ನಿರೂಪಣೆಯಂತೆ ತನ್ನ ಕೈಗಳಿಂದ ಅರಳನ್ನು (ಲಾಜವನ್ನು) ಪ್ರಜ್ವಲಿಸುವ ಅಗ್ನಿಗೆ ಅರ್ಪಿಸಿದಳು. ಆ ರಾಜ ಪುರೋಹಿತನು ಸಕಲಮಾನವಧರ್ಮಶಾಸ್ತ್ರನಿಪುಣನು. ಲೋಕಪಿತಾಮಹನಾದ ಬ್ರಹ್ಮ ದೇವನ ಪ್ರತಿಬಿಂಬದಂತೆ ಹಿರಿಯನಾದ ಪೂಜ್ಯನು. ಆ ಚಕೋರಾಕ್ಷಿಯು ಪತಿಕಾಂಕ್ಷಿತಳಾಗಿ ನಾಚಿಕೆಯಿಂದ ಶಾಸ್ತ್ರೋಕ್ತವಾದ ವಿಧಿವಿಧಾನಗಳಿಂದ ನಡೆಸುವ ವೈವಾಹಿಕ ಕಾರ್ಯಕ್ರಮ ಗಳನ್ನು ಯಥಾವತ್ತಾಗಿ ಭಕ್ತಿಪೂರ್ವಕವಾಗಿ, ನಮ್ರತೆಯಿಂದ ಅಗ್ನಿಹೋತ್ರಿಯ ಅಪ್ಪಣೆ ಯಂತೆ ಶಿರಸಾವಹಿಸಿ ನಡೆದಳು. ಆಕೆ ಮದಿಸಿದ ಚಕೋರದಂತೆ ಕಣ್ಣುಗಳಿಂದ ಒಪ್ಪುವ ಚಕೋರಾಕ್ಷಿ, ನೀಲಾಳಕಿ, ಭೃಂಗಕುಂತಳೆ, ಕೈರವನೇತ್ರೆ, ಕೇಶಸೌಂದರ್ಯದಿಂದ ಒಪ್ಪುವ ಭ್ರಮರಕುಂತಳೆ (ಭ್ರಮರಾಂಬಿಕೆ), ಸಹಜಸುಂದರಿ. ಚಿತ್ತಾಕರ್ಷಕ ಚೇತೋಹಾರಿಯಾದ ಮನೋಹರಿ (ಮದಿಸಿದ ಚಕೋರಲೋಲಾಲೋಕಿ ನೀಲಾಳಕಿ).

ಅನ್ವಯಃ—ನಿತಂಬಗುರ್ವೀ ವಿಧಾತೃಪ್ರತಿಮೇನ ತೇನ ಗುರುಣಾ ಪ್ರಯುಕ್ತಾ ಮತ್ತ ಚಕೋರನೇತ್ರಾ ಲಜ್ಜಾವತೀ ಸಾ ವಧೂಃ ಅಗ್ನೌ ಲಾಜವಿಸರ್ಗಮ್ ಚಕಾರ ॥

ಮತ್ತಚಕೋರಸ್ಯೇವ ನೇತ್ರೇ ಯಸ್ಯಾಃ ಸಾ ವಧೂಃ ॥

**26.** **ಹವಿಃ ಶಮೀಪಲ್ಲವಲಾಜಗಂಧೀ ।**
**ಪುಣ್ಯಃ ಕೃಶಾನೋರುದಿಯಾಯ ಧೂಮಃ ॥**
**ಕಪೋಲಸಂಸರ್ಪಿಶಿಖಃ ಸ ತಸ್ಯಾ।**
**ಮುಹೂರ್ತಕರ್ಣೋತ್ಪಲತಾಂ ಪ್ರಪೇದೇ** ॥ ೨೬ ॥

ಆ ವಿವಾಹದ ಮುಹೂರ್ತಕಾಲದಲ್ಲಿ (ಪಾಣಿಗ್ರಹಣದ) ಕೃಶಾನುವಾದ ಅಗ್ನಿಯಲ್ಲಿ ಅರ್ಪಿಸಿದ ಆಜ್ಯ, ಶಮೀಪಲ್ಲವ, ಲಾಜ (ಅರಳು) (ಕಾತ್ಯಾಯನಗೃಹ್ಯಸೂತ್ರದಲ್ಲಿ ವಿವರಿಸಿದಂತೆ) ಮೊದಲಾದ ಸುವಸ್ತುಗಳ ಕಂಪು (ಸುಗಂಧವು) ಸುತ್ತಲೂ ಹರಡಿ ಎಲ್ಲರ ಮನಸ್ಸಿಗೆ ಆಮೋದವನ್ನುಂಟುಮಾಡಿತು. ಆ ಪುಣ್ಯಾಗ್ನಿಯಿಂದ ಒಗೆದ ಹೊಗೆಯು ಸುರುಳಿ ಸುರುಳಿಯಾಗಿ ಸುತ್ತಿ ಆ ವಧುವಿನ ಕಿವಿಯ ಭಾಗದಲ್ಲಿ ಕರ್ಣಾಭರಣದಂತೆ ನೀಲಬಣ್ಣದ ನೈದಿಲೆಹೂವಿನ ಆಕಾರದಲ್ಲಿ ಕಾಣಿಸಿಕೊಂಡಿತು (ಎಸೆದುದಾ ಧೂಮಶಿಖೆ ಯಾಕೆಯ ಕಪೋಲದೊಳು).

ಕರ್ಣೋತ್ಪಲತಾಂ = ಕರ್ಣಾಭರಣತಾಂ ಪ್ರಪೇದೇ ॥

**27.** **ತದಂಜನಕ್ಲೇದಸಮಾಕುಲಾಕ್ಷಂ ।**
**ಪ್ರಮ್ಲಾನಬೀಜಾಂಕುರಕರ್ಣಪೂರಮ್ ॥**
**ವಧೂಮುಖಂ ಪಾಟಲಗಂಡಲೇಖಂ ।**
**ಆಚಾರಧೂಮಗ್ರಹಣಾದ್ಬಭೂವ ॥ ೨೭ ॥**

ನಿಜಪದ್ಧತಿಯಂತೆ ಪಾಣಿಗ್ರಹಣದ ಸುಮುಹೂರ್ತಕಾಲದಲ್ಲಿ ಅಗ್ನಿಕುಂಡದಿಂದ ಎದ್ದ ದಟ್ಟವಾದ ಹೊಗೆಯ ರಾಶಿ ವಧುವಿನ ಕೆಂಪಾದ ಮುಖವನ್ನು ಸ್ಪರ್ಶಿಸಿ ಇನ್ನೂ ಕೆಂಪಾಗಿಸಿತು. ಸುಗಂಧಯುಕ್ತವಾದ ಹೊಗೆಯ ಉರಿ ತಾಳಲಾರದೆ ಕಣ್ಣುಗಳಿಂದ ಕಾಡಿಗೆ ಮಿಶ್ರಿತ ಕಣ್ಣೀರಧಾರೆ ಹರಿಸಿತು. ಇದು ಬಹುಶಃ ಆಕೆಯ ಕೆನ್ನೆ ಕೆಂಪಾಯಿತೆಂದು ತಿಳಿದು ಆಕೆಯ ಕಣ್ಣುಗಳುಸುರಿಸಿದ ಕಜ್ಜಲಮಿಶ್ರಿತ (ಕಾಡಿಗೆಮಿಶ್ರಿತ) ಅಶ್ರುಧಾರೆ. ಮೇಲಕ್ಕೆದ್ದ ಹೊಗೆಯ ಕಾಟದಿಂದ ಆಕೆಯು ತನ್ನ ಕಿವಿಗಳಲ್ಲಿ ಧರಿಸಿದ ಯವಾಂಕುರವು ಬಾಡಿ ಹೋಯಿತು.

ಅಂಜನಮಿಶ್ರಿತಬಾಷ್ಪೋದಕಮಿತ್ಯರ್ಥಃ—ಕರ್ಣಪೂರೋಽವತಂಸೋ ಯಸ್ಯ ತತ್—ಬೀಜಾಂಕುರ = ಬಾರ್ಲಿಯ ಮೊಳಕೆ.

**28.** **ತೌ ಸ್ನಾತಕೈಃ ಬಂಧುಮತಾ ಚ ರಾಜ್ಞಾ ।**
**ಪುರಂಧ್ರಿಭಿಶ್ಚ ಕ್ರಮಶಃ ಪ್ರಯುಕ್ತಮ್ ॥**
**ಕನ್ಯಾಕುಮಾರೌ ಕನಕಾಸನಸ್ಥೌ ।**
**ಆರ್ದ್ರಾಕ್ಷತಾರೋಪಣಮನ್ವಭೂತಾಮ್ ॥ ೨೮ ॥**

ಚಿನ್ನದ ಆಸನಗಳಲ್ಲಿ ಆಸೀನರಾದ ಆ ರಾಜಕನ್ಯೆ ಹಾಗೂ ರಾಜಕುಮಾರರ ತಲೆಯ ಮೇಲೆ ಒದ್ದೆಯಾಗಿರುವ ಪವಿತ್ರವಾದ ಅಕ್ಷತೆಕಾಳುಗಳನ್ನು ಬಂಧುಜನರು ಹೂಮಳೆ ಯಂತೆ ಸುರಿಸಿದರು (ಆರ್ದ್ರ ಅಕ್ಷತೆಗಳ ಆರೋಪಣ). ಈ ಆರ್ದ್ರ ಅಕ್ಷತೆಯ ಆರೋಪಣಾಕಾರ್ಯಕ್ರಮವನ್ನು ಮೊದಲು ಗೃಹಸ್ಥರು (ಸ್ನಾತಕರು), ಆ ಬಳಿಕ ಬಂಧು ಗಳಿಂದ ಒಡಗೂಡಿದ ಭೋಜರಾಜನು, ಆ ಬಳಿಕ ಸುಮಂಗಲೆಯರಾದ ಪುರಂಧ್ರಿಯರು ಕ್ರಮವತ್ತಾಗಿ ಮಾಡಿದರು (ಆರ್ದ್ರಾಕ್ಷತೆಯ ಸೂಸಿದ್ದರವರು).

ಪಾಣಿಗ್ರಹಣಂ = ವಿವಾಹಂ—ಸಂಪಾದ್ಯ = ಕಾರಯಿತ್ವಾ ॥

**29.** **ಇತಿ ಸ್ವಸುರ್ಭೋಜಕುಲಪ್ರದೀಪಃ ।**
**ಸಂಪಾದ್ಯ ಪಾಣಿಗ್ರಹಣಂ ಸ ರಾಜಾ ॥**
**ಮಹೀಪತೀನಾಂ ಪೃಥಗರ್ಹಣಾರ್ಥಂ ।**
**ಸಮಾದಿದೇಶಾಧಿಕೃತಾನಧಿಶ್ರೀಃ ॥ ೨೯ ॥**

ಈ ತೆರನಾಗಿ ಭೋಜಕುಲಪ್ರದೀಪನಾದ, ಭೋಜವಂಶಕ್ಕೆ ಬೆಳಕಾಗಿರುವ ಭೋಜ ರಾಜನು ತಂಗಿಯ ವಿವಾಹಮಹೋತ್ಸವವನ್ನು ಯಶಸ್ವಿಯಾಗಿ ನಡೆಸಿ ಪೂರೈಸಿ (ಅಧಿಕ ಸಂಪನ್ನನಾ ಭೋಜಕುಲದೀಪಕನು) ತನ್ನ ಕೈಕೆಳಗಿನ ಅಧಿಕಾರಿವರ್ಗಕ್ಕೆ ಸೇವಕಜನರಿಗೆ

ಈ ತೆರನಾಗಿ ಆಜ್ಞಾಪಿಸಿದನು. ಅವನು ಅವರನ್ನು ಕುರಿತು ಈ ತೆರನಾಗಿ ಬೆಸಸಿದನು. ನೀವೆಲ್ಲರೂ ಈ ಸ್ವಯಂವರಮಹೋತ್ಸವಕ್ಕೆ ಆಗಮಿಸಿರುವ ಛಪ್ಪನ್ನಾರು ದೇಶಗಳ (೫೬ ದೇಶಗಳ) ಮಹೀಪತಿಗಳನ್ನು ಪ್ರತ್ಯೇಕವಾಗಿ ಓಲಗಿಸಿ, ಗೌರವಿಸಿ ಅವರನ್ನು ಉಚಿತವಾದ ರೀತಿಯಲ್ಲಿ ಮನ್ನಣೆಮಾಡಿ ತೃಪ್ತಿಗೊಳಿಸುವಂತೆ ಆ ಭೋಜಕುಲದೀಪಕನು ಆಜ್ಞಾಪಿಸಿದನು.

ಮಹೀಪತೀನಾಂ = ರಾಜ್ಞಾಂ ॥

**30. ಲಿಂಗೈರ್ಮುದಃ ಸಂವೃತವಿಕ್ರಿಯಾಸ್ತೇ ।**
**ಹ್ರದಾಃ ಪ್ರಸನ್ನಾ ಇವ ಗೂಢನಕ್ರಾಃ ॥**
**ವೈದರ್ಭಮಾಮಂತ್ರ್ಯ ಯಯುಸ್ತದೀಯಾಂ**
**ಪ್ರತ್ಯರ್ಪ್ಯ ಪೂಜಾಮುಪದಾ ಛಲೇನ ॥ ೩೦ ॥**

ಆ ರಾಜಸಮೂಹವು ತಿಳಿಯಾದ ನೀರಿನಿಂದ ತುಂಬಿರುವ ಕೊಳದ ಆಳವಾದ ಮಡುವಿನಲ್ಲಿ ಅಡಗಿರುವ ಮೊಸಳೆಗಳಂತೆ ತೋರ್ದರು. ಅವರು ತಮ್ಮ ಕೋಪ, ತಾಪ, ಬಿಗುಮಾನ, ಈರ್ಷ್ಯೆಯನ್ನು (ಹೊಟ್ಟೆಕಿಚ್ಚು, ನಂಜು, ಮತ್ಸರ) ಹೊರಗೆ ತೋರಗೊಡದೆ, ಭೋಜರಾಜನಮೇಲೆ ತಮಗಿರುವ ಒಲವನ್ನು ಪ್ರಕಟಿಸಿದರು (ಒಳಗೆ ಮೊಸಳೆಗಳಿರುವ ತಿಳಿಮಡುವೊಲ್). ಆ ಮಹೀಪತಿಗಳು ಒಳಗಿಂದೊಳಗೇ ಮನಸಿನಲ್ಲಿ ತಮಗಾದ ಅವಮಾನದ ಮುಳಿಸಿನಿಂದ ಬೇಯುತ್ತ ಕರುಬುತಲಿದ್ದರು. ಅವರು ಭೋಜರಾಜನಿಂದ ನಾನಾತೆರದ ಉಡುಗೊರೆಗಳನ್ನು ಸ್ವೀಕರಿಸಿ, ಅವನು ತಮಗೆ ನೀಡಿದ ಆದರಣೀಯವಾದ ಸತ್ಕಾರಕ್ಕೆ ಪ್ರತಿಯಾಗಿ ತಾವುಗಿತ್ತ ಉಡುಗೊರೆಗಳನ್ನು ಅವನಿಗೆ ಉಡುರೊರೆಯ ನೆಪದಿಂದ ಇತ್ತು ತಮ್ಮ ರಾಜಧಾನಿಗೆ ತೆರಳಿದರು.

ಸಂವೃತವಿಕ್ರಿಯಾ = ನಿಗೂಹಿತಮತ್ಸರಾ—ಅತ ಏವ ಪ್ರಸನ್ನಾ = ಬಹಿರ್ನಿರ್ಮಲಾ—ಪ್ರತ್ಯರ್ಪ್ಯ = ಯುಯುರ್ಗತವಂತಃ ॥

**31. ಸ ರಾಜಲೋಕಃ ಕೃತಪೂರ್ವಸಂವಿತ್ ।**
**ಆರಂಭಸಿದ್ಧೌ ಸಮಯೋಪಲಭ್ಯಂ ॥**
**ಆದಾಸ್ಯಮಾನಃ ಪ್ರಮದಾಮಿಷಂ ತತ್ ।**
**ಆವೃತ್ಯ ಪಂಥಾನಮಜಸ್ಯ ತಸ್ಥೌ ॥ ೩೧ ॥**

ಆ ರಾಜಲೋಕವು ಮೊದಲೇ ಒಂದು ಸಂಚನ್ನು ಹೂಡಿದ್ದರು. ರಘುಜನಿಂದ ಆ ರಾಜಕನ್ಯೆಯನ್ನು ಅಪಹರಿಸಿ ಒಯ್ಯಬೇಕೆಂಬ ಷಡ್ಯಂತ್ರವನ್ನು ನಿಯೋಜಿಸಿ ಮಾರ್ಗ ಮಧ್ಯದಲ್ಲಿ ಸಾಗುತ್ತಿದ್ದ ಅಜಕುಮಾರನನ್ನು ತಡೆಯಲು ಸನ್ನದ್ಧರಾಗಿ ನಿಂತಿದ್ದರು. ಆ ಭೋಜಸೋದರಿಯು ಆ ರಾಜಕುಲತಿಲಕರ ಆಮಿಷವಾಗಿದ್ದಳು. ಕನ್ಯಾಪಹರಣಮಾಡಿಯಾದರೂ ಯುದ್ಧದ ಉಡುಗೊರೆಯಾಗಿ (ಪಾರಿತೋಷಕ) ಒಯ್ಯಬೇಕೆಂಬ ದೃಢ ನಿರ್ಧಾರದಿಂದ ಅವರೆಲ್ಲರು ಒಟ್ಟಾಗಿ ಮಾರ್ಗಮಧ್ಯದಲ್ಲಿ, ಅಚ್ಚುಕಟ್ಟಾದ ಜಾಗದಲ್ಲಿ ಹಲ್ಲೆಮಾಡಲು (ದಾಳಿಮಾಡಲು) ಸಜ್ಜಾಗಿ ರಘುಜನ ಬರುವಿಕೆಯನ್ನು ಇದಿರು ನೋಡುತ್ತಾ ನಿಂತಿದ್ದರು (ಅಧ್ವವನು ತಡೆಯಲ್ಕೆಂದು).

ಅನ್ವಯಃ :—ಆರಂಭಸಿದ್ಧೌ ಕೃತಪೂರ್ವಸಂವಿದ್ ಸ ರಾಜಲೋಕಃ ಸಮಯೋಪ ಲಭ್ಯಂ ತತ್ ಪ್ರಮದಾವಿಷಮ್ ಆದಾಸ್ಯಮಾನಃ ಅಜಸ್ಯ ಪಂಥಾನಮ್ ಆವೃತ್ಯ ತಸ್ಥೌ ॥

ಸಂವಿತ್ = ಸಂಕೇತಃ—ಅನಯಾ = ಸಮಯೋಪಲಭ್ಯಮ್—ಅಜ ಪ್ರಸ್ಥಾನಕಾಲೇ —ಆರಂಭಸಿದ್ಧೌ = ಕಾರ್ಯಸಿದ್ಧೌ ವಿಷಯೇ ॥

32. ಭರ್ತಾಪಿ ತಾವತ್ ಕ್ರಥಕೈಶಿಕಾನಾಮ್ ।
ಅನುಷ್ಠಿತಾನಂತರಜಾವಿವಾಹಃ ॥
ಸತ್ತ್ವಾನುರೂಪಾಹರಣೀಕೃತಶ್ರೀಃ ।
ಪ್ರಸ್ಥಾಪಯದ್ರಾಘವಮನ್ವಗಾಚ್ಚ ॥ ೩೨ ॥

ಕ್ರಥಕೈಶಿಕೇಯರ ಒಡೆಯನಾದ ವಿದರ್ಭೇಶ್ವರನು ತನ್ನ ಅನುಜೆಯ ವಿವಾಹವನ್ನು ವೈಭವದೆ ನಡೆಸಿ ತನ್ನ ಶಕ್ತಿಗೆ ಅನುಗುಣವಾಗಿ ಸಿರಿಸಂಪತ್ತುಗಳ ಕಾಣಿಕೆಯನ್ನು ರಘುಜ ನಿಗೆ ಕೊಟ್ಟು, ಬೀಳ್ಕೊಂಡು ತಾನು ತನ್ನ ರಾಜಧಾನಿಗೆ ಬಿಜಯಂಗೈದನು. (ಸತ್ವಾನು ರೂಪದೈಸಿರಿಯಿತ್ತು).

ಸತ್ವಾನುರೂಪಾ = ಉತ್ಸಾಹಾನು ರೂಪಾ ಕ್ರಥಕೈಶಿಕಾನಾಂ=ದೇಶಾನಾಂ—ಭರ್ತಾ = ಸ್ವಾಮೀ—ಪ್ರಸ್ಥಾಪಯಂತ್ = ಪ್ರಸ್ಥಾಪಿತವಾನ್ ॥

33. ತಿಸ್ರಸ್ತ್ರಿಲೋಕಪ್ರಥಿತೇನ ಸಾರ್ಧಂ ।
ಅಜೇನ ಮಾರ್ಗೇ ವಸತೀರುಷಿತ್ವಾ ॥
ತಸ್ಮಾದಪಾವರ್ತತ ಕುಂಡಿನೇಶಃ ।
ಪರ್ವಾತ್ಯಯೇ ಸೋಮ ಇವೋಷ್ಣರಶ್ಮೇಃ ॥ ೩೩ ॥

ಮೂರು ದಿನ ಹಗಲು, ಕುಂಡಿನೀಪತಿಯಾದ ಭೋಜರಾಜನು ತ್ರಿಲೋಕದಲ್ಲಿ ವಿಖ್ಯಾತನಾದ ಆ ರಾಜೇಂದ್ರ(ರಾಜರಾಜ)ನೊಡನೆ ಪಯಣಿಸಿ (ಮೂಜಗಕೆ ಹೆಸರಾದ ರಘುಜನೊಡನಧ್ವದೊಳು) ಪರ್ವಕಾಲ ಸಮಾಪಿಸಲು ಸೂರ್ಯನನ್ನು ಅಗಲುವ ಚಂದ್ರ ನಂತೆ ತನ್ನ ನಿಜನಗರಿಗೆ ಹಿಂದಿರುಗಿದನು (ದರ್ಶಾಂತದೊಳು ರವಿಯನ್ನಗಲುವ ಸೋಮ ನೊಲು).

ಅನ್ವಯ :—ಕುಂಡಿನೇಶಃ ತ್ರಿಲೋಕಪ್ರಥಿತೇನ ಅಜೇನ ಸಾರ್ಧಂ ಮಾರ್ಗೇ ತಿಸ್ರಃ ವಸತೀಃ ಉಷಿತ್ವಾ ಪರ್ವಾತ್ಯಯೇ ಉಷ್ಣರಶ್ಮೇಃ ಸೋಮಃ ಇವ ತಸ್ಮಾದಪಾವರ್ತತ ॥

ಕುಂಡಿನಂ = ವಿದರ್ಭನಗರು = ಕುಂಡಿನೀಪುರ—ಉಷ್ಣರಶ್ಮೇಃ = ಸೂರ್ಯಾತ್— ಸೋಮಃ = ಚಂದ್ರ—ಪರ್ವಾತ್ಯಯೇ = ದರ್ಶಾಂತ ॥

34. ಪ್ರಮನ್ಯವಃ ಪ್ರಾಗಪಿ ಕೋಸಲೇಂದ್ರೇ ।
ಪ್ರತ್ಯೇಕಮಾತ್ತಸ್ವತಯಾ ಬಭೂವುಃ ॥
ಅತೋ ನೃಪಾಶ್ಚಕ್ಷಮಿರೇ ಸಮೇತಾಃ ।
ಸ್ತ್ರೀರತ್ನಲಾಭಂ ನ ತದಾತ್ಮಜಸ್ಯ ॥ ೩೪ ॥

ಆ ಮಹೀಪಾಲರು ತಮ್ಮನ್ನು ಈ ಹಿಂದೆ ದಿಗ್ವಿಜಯಕಾಲದಲ್ಲಿ ಸೋಲಿಸಿ ಕೋಸಲೇಂದ್ರನಾದ ರಘುವು ತಮ್ಮ ಐಶ್ವರ್ಯವನ್ನು ಕೊಂಡುಹೋಗಿದ್ದನು. ಇದೀಗ ಅವನ ಪುತ್ರನಾದ ಅಜಕುಮಾರನು ಸ್ತ್ರೀರತ್ನಲಾಭವನ್ನು ಪಡೆದಿರುವನು. ಇದರಿಂದ ಸಹಿಸದೆ ಇರುವ ನೃಪಸಮೂಹವು ಹೇಗಾದರೂ ಮಾಡಿ ಆ ಅಪೂರ್ವವಾದ ಸ್ತ್ರೀರತ್ನ ವನ್ನು ಅಪಹರಿಸುವ ಯತ್ನದಲ್ಲಿ ಒಂದುಗೂಡಿದರು.

ವಿಶ್ವಜಿತ್ ಯಾಗಕಾಲದಲ್ಲಿ ತಮ್ಮ ಧನವನ್ನೆಲ್ಲಾ ಕೊಂಡೊಯ್ದ ಕಾರಣ ಮೊದಲೇ ಅವರಲ್ಲಿ ರಘುವಿನ ಮೇಲೆ ಮನಸ್ತಾಪವಿತ್ತು. ಈಗ ರಘುವಿನ ಮಗ ಅಜನು ಸ್ತ್ರೀರತ್ನ ಳಾದ ಇಂದುಮತಿಯನ್ನು ತನ್ನದಾಗಿಸಿಕೊಂಡುದರಿಂದ (ಸ್ತ್ರೀರತ್ನಲಾಭ) ಒಳಗೊಳಗೇ ಕುದಿಯುತ್ತಿದ್ದರು. ಅವರ ಕೋಪಾಗ್ನಿಗೆ ತುಪ್ಪವೆರೆದಂತಾಗಿ ಅವರು ಸಹಿಸದಾದರು.

ನೃಪಾಃ = ರಾಜಾನಃ—ಕೋಸಲೇಂದ್ರಃ = ರಘುಃ ॥

**35. ತಮುದ್ವಹಂತಂ ಪಥಿ ಭೋಜಕನ್ಯಾಂ ।**
**ರುರೋಧ ರಾಜನ್ಯಗಣಃ ಸದೃಪ್ತಃ ॥**
**ಬಲಿಪ್ರದಿಷ್ಟಾಂ ಶ್ರಿಯಮಾದದಾನಂ ।**
**ತ್ರೈವಿಕ್ರಮಂ ಪಾದಮಿವೇಂದ್ರಶತ್ರುಃ ॥** ॥ ೩೫ ॥

ಆ ಅಹಂಭಾವಿಗಳಾದ, ಯಾರ ಮಾತನ್ನೂ ಲಕ್ಷಿಸದ, ಉದ್ಧತರಾದ (ಬೇಕೂಫರಾದ) ರಾಜಪುತ್ರರು, ಬಹಳ ವಿಜೃಂಭಣೆಯಿಂದ ಭೋಜಕನ್ಯೆಯೊಡನೆ ತನ್ನ ರಾಜಧಾನಿಗೆ ಹೊರಟಿರುವ ಕೋಸಲೇಂದ್ರನನ್ನು ನಡುದಾರಿಯಲ್ಲಿ ತಡೆದು (ಅಡ್ಡಗಟ್ಟಿ) ಆಕ್ರಮಿಸಿ ದರು. ಈ ಹಿಂದೆ, ಪೂರ್ವದಲ್ಲಿ ದಾನವಸಾರ್ವಭೌಮನಾದ ವಿರೋಚನಪುತ್ರರತ್ನನಾದ ಬಲಿಚಕ್ರವರ್ತಿಯು ಇತ್ತ ಶ್ರೇಯಸ್ಕರವಾದ ದಾನವನ್ನು, ಸಿರಿಸಂಪತ್ತನ್ನು ಸ್ವೀಕರಿಸು ತ್ತಿದ್ದ ಮಹಾವಿಷ್ಣುವನ್ನು ಇಂದ್ರನ ವೈರಿಗಳಾದ ನಮುಚಿ, ವೃತ್ರಾಸುರ ಮೊದಲಾದ ಮಹಾದಾನವರು ತಡೆಯಲು ಯತ್ನಿಸಿದಂತೆ ಈ ರಾಜಸೂನುಗಳು ಪ್ರತಿಭಟಿಸಿದರು (ಬಲಿಯಿತ್ತ ಸಿರಿಯು ಕೊಳುವಾ ತ್ರಿವಿಕ್ರಮನಂಘ್ರಿಯನು).

ಪ್ರಪಂಚದ ವ್ಯವಸ್ಥಾಪಕನಾದ, ಪಾಲನಕರ್ತೃವಾದ ಮಹಾವಿಷ್ಣುವು ವಾಮನಾವ ತಾರಕಾಲದಲ್ಲಿ ಅದಿತಿಯ ಹೊಟ್ಟೆಯಲ್ಲಿ ವಾಮನನಾಗಿ ಜನಿಸಿ ದೇವತೆಗಳನ್ನು ಪ್ರತಿಷ್ಠಾ ಪಿಸಲು ಅಮರಾವತಿಗೆ ಬಂದನು. ಅವನು ಸ್ವರ್ಗಲೋಕವನ್ನು ಆಳುತ್ತಿದ್ದ ಬಲೀಂದ್ರನ ಬಳಿಗೆ ಬಂದು ಮೂರಡಿ ಭೂಮಿಯನ್ನು ದಾನಕೇಳಿದ. ದಾನಶೂರನಾದ ಬಲಿಯು ದಾನ ವನ್ನು ಕೊಡುವುದಾಗಿ ವಚನವಿತ್ತ. ವಾಮನನು ಯಶಸ್ವಿಯಾಗಿ ದಾನವನ್ನು ಪಡೆಯು ತ್ತಿದ್ದಾಗ, ಸಮಸ್ತ ಸಿರಿಸಂಪತ್ತನ್ನು ತನ್ನ ಅಪಾರಮಹಿಮೆಯಿಂದ ಪಡೆಯುತ್ತಿದ್ದಾಗ ಅಸಂತುಷ್ಟರಾದ ನಮುಚಿ, ವೃತ್ರಾಸುರ ಮೊದಲಾದ ದಾನವಶ್ರೇಷ್ಠರು ಅಡ್ಡಿ ಪಡಿಸಿದರು. ರಾಕ್ಷಸಗುರುಗಳಾದ ಶುಕ್ರಾಚಾರ್ಯರು ಈ ಸಂದರ್ಭದಲ್ಲಿ ಅನುಮೋದಿಸದೆ ಅಸಮ್ಮತಿ ಸಿದ್ದರು. ಅವರು ತಮ್ಮ ಒಂದು ಕಣ್ಣನ್ನು ಕಳೆದುಕೊಂಡು ಒಕ್ಕಣ್ಣ ಶುಕ್ರಾಚಾರ್ಯ ರಾದರು. ಆ ಕಥೆಯನ್ನು ಈ ಸಂದರ್ಭದಲ್ಲಿ ಸ್ಮರಿಸಬಹುದು. ಆ ದಾನವಶ್ರೇಷ್ಠರಂತೆ ಸಂಕಟಪಡುತ್ತಿದ್ದ, ಅತೃಪ್ತರಾದ ರಾಜಕುಮಾರರು ಎಲ್ಲರೂ ಒಟ್ಟಾಗಿ ಮಾರ್ಗಮಧ್ಯದಲ್ಲಿ ಅಜಕುಮಾರನನ್ನು ತಡೆದು ಆಕ್ರಮಿಸಿದರು.

ಸ ರಾಜನ್ಯಗಣೋ = ರಾಜಸಂಘಾತಃ—ಬಲಿನಾ=ವೈರೋಚನಾ—ಪಾದಾಂಭೋಜಂ ರುರೋಧ ಹ ॥

36. ತಸ್ಯಾಃ ಸ ರಕ್ಷಾರ್ಥಮನಲ್ಪಯೋಧಂ ।
ಆದಿಶ್ಯ ಪಿತ್ರ್ಯಂ ಸಚಿವಂ ಕುಮಾರಃ ॥
ಪ್ರತ್ಯಗ್ರಹೀತ್ ಪಾರ್ಥಿವವಾಹಿನೀಂ ತಾಂ ।
ಭಾಗೀರಥೀಂ ಶೋಣ ಇವೋತ್ತರಂಗಃ ॥ ೩೬ ॥

ಆ ಸ್ತ್ರೀರತ್ನವಾದ ಇಂದುಮತಿಯು ರಕ್ಷಣೆಗೆ ಆಪ್ತರಾದ ಸಚಿವಶ್ರೇಷ್ಠರನ್ನು ನೇಮಿಸಿ ಅವರ ಕೈಗೆ ಬಹುಯೋಧರಿಂದ ಮೆರೆಯುತ್ತಿರುವ ಸೇನಾವಾಹಿನಿಯನ್ನು ಬೆಂಗಾವಲಿಗಾಗಿ ಒಪ್ಪಿಸಿ ತಾನು ಸ್ವತಃ ಕಟ್ಟಾಳುಗಳಿಂದ, ಮಹಾಯೋಧರಿಂದ ಮೆರೆಯುತ್ತಿರುವ ಮಹಾ ಸೇನೆಯೊಂದಿಗೆ ಆ ರಾಜಪುತ್ರರನ್ನು ಎದುರಿಸಲು ಕಟಿಬದ್ಧನಾಗಿ ಹೊರಟನು. ಹೇಗೆ ದೇವಗಂಗಾನದಿಯಾದ ಭಾಗೀರಥಿಯನ್ನು, ದೊಡ್ಡ ದೊಡ್ಡ ತೆರೆಗಳಿಂದ ಶೋಭಿಸುವ, ಗಂಗೆಯ ಉಪನದಿಯಾದ ಶೋಣಾನದಿಯು ಇದಿರುಗೊಂಡು ಎದುರಿಸಿ ಲೀನವಾಗುವಂತೆ (ಸಂಗಮವಾಗುವಂತೆ) ಒಂದರಲ್ಲಿ ಒಂದು ಬೆರೆಯುವಂತೆ, ಬೆರೆತು ಸೇರಿಹೋಗುವಂತೆ ಅಜಕುಮಾರನು ತನ್ನ ಸೇನಾಸಮುದ್ರದೊಂದಿಗೆ ಇದಿರ್ಗೊಂಡನು (ಗಂಗೆಯನ್ನು ತೆರೆಯೆದ್ದ ಶೋಣನದ ಎದುರಿಸಿದಂತೆ).

"ಧ್ವಜಿನೀ, ವಾಹಿನೀ, ಸೇನಾ'' ಇತ್ಯಮರಃ ॥

37. ಪತ್ತಿಃ ಪದಾತಿಂ ರಥಿನಂ ರಥೇಶಃ ।
ತುರಂಗಸಾದೀ ತುರಗಾಧಿರೂಢಮ್ ॥
ಯಂತಾ ಗಜಸ್ಯಾಭ್ಯಪತದ್ಗಜಸ್ಥಂ ।
ತುಲ್ಯಪ್ರತಿದ್ವಂದ್ವಿ ಬಭೂವ ಯುದ್ಧಮ್ ॥ ೩೭ ॥

ಅಗ ನಡೆದುದು ನಿಖರಕಾಳಗ. ಕಾಲಾಳುಗಳು ಕಾಲಾಳುಗಳ ಮೇಲೆ ಹೊಡಕರಿಸಿ ಬಿದ್ದು ಇರಿದರು. ಅಶ್ವಾರೋಹಿಗಳು ಅಶ್ವಪಡೆಯೊಂದಿಗೆ ದ್ವಂದ್ವಯುದ್ಧದಲ್ಲಿ ನಿರತ ರಾದರು. ರಥವನ್ನು ಏರಿದ ರಥಿಕನು ರಥೇಶನನ್ನು ರಣರಂಗದಲ್ಲಿ ಎದುರಿಸಿ ಕಾದಾಡಿದನು, ಆನೆಯನ್ನು ಏರಿದ ಗಜಾರೋಹಿ, ಮದಕರಿಯನ್ನು ಏರಿದ ಇನ್ನೊಬ್ಬ ಗಜಸೇನಾರೂಢ ನಾದ ಗಜಸೈನಿಕನೊಂದಿಗೆ ತುಮುಲಯುದ್ಧದಲ್ಲಿ ಪಾಲ್ಗೊಂಡನು. ಹೀಗೆ ರಣರಂಗವು ದ್ವಂದ್ವಯುದ್ಧ(ಕೈಕೈಕಾಳಗ)ಮಯವಾಯಿತು.ಹೀಗೆ ಪದಾತಿದಳ ಪದಾತಿದಳದೊಂದಿಗೆ, ಗಜಸೇನೆ ಗಜಾರೂಢರೊಂದಿಗೆ, ಅಶ್ವದಳ ಅಶ್ವಾರೋಹಿಗಳೊಂದಿಗೆ, ರಥಿಕರು ರಥೇಶ್ವರ ರೊಂದಿಗೆ ಅನ್ಯೋನ್ಯವಾಗಿ, ಸಮಬಲರು ತಮ್ಮ ಸರಿಸಮರಾದವರೊಂದಿಗೆ ಕಾದಾಡಿ ದರು. ವೀರಯೋಧರು ದ್ವಂದ್ವಯುದ್ಧದಲ್ಲಿ ಪಾಲ್ಗೊಂಡು ತಮ್ಮ ಪ್ರತಾಪವನ್ನು ಮೆರೆದರು (ಇಭಾರೂಢನಿರಿಯುತಿರಲಾಮುದು ಅದು ದ್ವಂದ್ವಯುದ್ಧಂ).

ಪದಾತಿಃ = ಪಾದಚಾರೋ ಯೋದ್ಧಾ—''ದ್ವಂದ್ವಂ ಕಲಹಯುಗ್ಮಯೋಃ'' ಇತ್ಯಮರಃ—ಪದಾತಿಃ = ಪಾದಾಭ್ಯಾಮ್ ಅತತೀತಿ ॥

**38.** **ನದತ್ಸು ತೂರ್ಯೇಷು ಅವಿಭಾವ್ಯ ವಾಚೋ ।**
**ನೋದೀರಯನ್ತಿ ಸ್ಮ ಕುಲೋಪದೇಶಾನ್ ॥**
**ಬಾಣಾಕ್ಷರೈರೇವ ಪರಸ್ಪರಸ್ಯ ।**
**ನಾಮೋರ್ಜಿತಂ ಚಾಪಭೃತಃ ಶಶಂಸುಃ** ॥ ೩೮ ॥

ರಣರಂಗದಲ್ಲಿ ರಣಭೇರಿಗಳ ಸದ್ದಿನಿಂದ ವೀರರ ಪೌರುಷಾಲಾಪಗಳು ಕೇಳಿಸುತ್ತಿರಲಿಲ್ಲ, ಅಡಗಿಹೋಗಿತ್ತು (ಪೌರುಷಾಲಾಪವನು ತೂರ್ಯರವ ಅದ್ದಿರಲು). ಬಿಲ್ಲಾಳುಗಳ ಧನುಷ್ಟಂಕಾರಶಬ್ದ ಮಾತ್ರ ಕೇಳಿಸುತ್ತಿತ್ತು. ಪ್ರಖ್ಯಾತವಂಶಗಳಿಗೆ ಸೇರಿದ ಭಾರತದೇಶದ ಆ ರಾಜಪುತ್ರರು ತಮ್ಮ ಬಿಲ್ಲುಗಳಿಂದ ಪುಂಖಾನುಪುಂಖವಾಗಿ ಬಾಣಗಳನ್ನು ಹೂಡುತ್ತ ತಮ್ಮ ಕುಲ, ಗೋತ್ರ, ವೀರ್ಯವಂತರಾದ ತಮ್ಮ ಹಿರಿಯರ ನಾಮಾಕ್ಷರಗಳಿರುವ ಬಾಣಗಳನ್ನು ಎಸೆಯುತ್ತಲಿದ್ದರು. ಇದರಿಂದ ಮಾತ್ರ ಅವರು ತಮ್ಮ ವೈರಿಗಳಿಗೆ ತಮ್ಮ ಪರಿಚಯವನ್ನು ಹಾಗೂ ಹಿರಿಯರ ಕೀರ್ತಿಶ್ರೀಯನ್ನು (ಕೀರ್ತಿಪರಂಪರೆಯನ್ನು) ತೋರುತಿದ್ದರು. ಹೀಗೆ ಪ್ರತಿಯೊಬ್ಬ ರಾಜಕುಮಾರನು ತಮ್ಮ ಅಭಿಧಾನವನ್ನು ಬಾಣಾಕ್ಷರಗಳಿಂದಲೇ ಸೂಚಿಸಿ ಮೆರೆಯುತ್ತಿದ್ದರು.

**39.** **ಉತ್ಥಾಪಿತಃ ಸಂಯತಿರೇಣುರಶ್ವೈಃ ।**
**ಸಾಂದ್ರೀಕೃತಃ ಸ್ಯಂದನವಂಶಚಕ್ರೈಃ ॥**
**ವಿಸ್ತಾರಿತಃ ಕುಂಜರಕರ್ಣತಾಲೈಃ ।**
**ನೇತ್ರಕ್ರಮೇಣೋಪರುರೋಧ ಸೂರ್ಯಂ** ॥ ೩೯ ॥

ಆ ಸಂಗ್ರಾಮಭೂಮಿಯಲ್ಲಿ (ರಣರಂಗದಲ್ಲಿ) ನಡೆದ ಯುದ್ಧದ ಕಾರ್ಯಾಚರಣೆಯಲ್ಲಿ ಭಾಗವಹಿಸಿರುವ ಸಹಸ್ರಾರು ಅಶ್ವಗಳ ಕಾಲ್ತುಳಿತದಿಂದ ಎದ್ದ ಧೂಳು ದಟ್ಟವಾಗಿ ವಾಯುಮಂಡಲವನ್ನು ಅಡರಿತು. ರಥದ ಚಕ್ರಗಳಿಂದಲೂ ಅತಿಸಾಂದ್ರವಾದ ರಜವು ವ್ಯಾಪಿಸಿ (ರಜ=ಧೂಳು) ಭಾನುಮಂಡಲವನ್ನು ಕವಿಯಿತು. ಕುಲಗಿರಿಗಳನ್ನು ಹೋಲುವ ಸಹಸ್ರಾರು ಕುಂಜರಗಳು (ಆನೆಗಳು) ತಮ್ಮ ಮೊರದಂತೆ ಅಗಲವಾದ ಕಿವಿಗಳಿಂದ, ತಾಳವಾದ್ಯದಂತೆ ತಟಪಟ ಎಂದು ಬಡಿಯುತ್ತ, ರಣಧೂಳಿಯನ್ನು ಮೇಲಕ್ಕೆ ಹಾರಿಸುತ್ತಾ ಇರಲಾಗಿ ಆ ಧೂಳು ಮೇಲಮೇಲಕ್ಕೆ ತೆರೆಯಂತೆ ಏರಿ ದಪ್ಪನಾದ ರೇಷ್ಮೆಬಟ್ಟೆಯಂತೆ ಹರಡಿ (ವ್ಯಾಪಿಸಿ) ಸೂರ್ಯನನ್ನು (ಭಾನುವನ್ನು) ಮುಸುಕಿತು (ಸೂರ್ಯನನ್ನು ತೆರೆಯುವೊಲು ಮುಸುಕಿರ್ದುದು ಅಂದು).

**ಸೂರ್ಯಮುಪರೋಧಾ** = ಚ್ಛಾದಯಾಮಾಸ—**ಸಾಂದ್ರೀಕೃತಃ** = ಸಾಂದ್ರಃ ಕೃತಃ ಸಾಂದ್ರೀಕೃತಃ, ಘನೀಕೃತಃ ॥

**40.** **ಮತ್ಸ್ಯಧ್ವಜಾ ವಾಯುವಸಾದ್ವಿದೀರ್ಣೈಃ ।**
**ಮುಖೈಃ ಪ್ರವೃದ್ಧಧ್ವಜಿನೀರಜಾಂಸಿ ॥**
**ಬಭುಃ ಪಿಬಂತಃ ಪರಮಾರ್ಥಮತ್ಸ್ಯಾಃ ।**
**ಪರ್ಯಾವಿಲಾಸೀವ ನವೋದಕಾನಿ** ॥ ೪೦ ॥

ಆ ರಣರಂಗದಲ್ಲಿ ವಿಮಾನಕೇತನಗಳು ಮತ್ಸ್ಯಾಕಾರದ ಧ್ವಜಪತಾಕೆಗಳು ವಾಯುವಿನ ಹೊಡೆತದಿಂದ ಅಗಲಿಸಿದ ಬಾಯಿಯುಳ್ಳ ತೆರೆದ ಬಾಯಿಗಳು ನಿಜವಾದ ವಿಮಾನುಗಳಂತೆ ಕಂಡುವು (ಗಾಳಿ ತಾನಗಲಿಸಿದ ಬಾಯ್ಗಳಲಿ). ಅಲ್ಲಿ ದಟ್ಟವಾಗಿ ಎದ್ದ ಕೆಂಧೂಳಿ ಕಲುಷಿತ ವಾದ ನೀರಿನಂತೆ ಕಾಣಿಸುತ್ತಿತ್ತು. ಹೀಗಿರಲು ಆ ಕಲುಷಿತವಾದ ನೀರನ್ನು ತಮ್ಮ ತೆರೆದ ಬಾಯಿಂದ ಆ ವಿಮಾನಕೇತನಗಳು ಅಥವಾ ಧ್ವಜಪತಾಕೆಗಳು ಕುಡಿಯುವಂತೆ ಭಾಸವಾಗು ತ್ತಿತ್ತು. ಅದು ಅಲ್ಲದೆ ಆ ವಿಮಾನಕೇತನಗಳು ಪರಮಾರ್ಥಮತ್ಸ್ಯಗಳಂತೆ ಎಸೆಯುತ್ತ ಕದಡಿದ ಕಲುಷಿತವಾದ ಜಲವನ್ನು ಈಂಟುತ್ತಿರುವಂತೆ ಕುಡಿಯುತ್ತಿರುವಂತೆ ಕಂಡುವು (ಕಲುಷಿತ ನವೋದಕವನೀಂಟುತಿಹ). ವಾಯುವು ಶಕ್ತಿಯುತವಾಗಿ ನಿರಂತರ ಬೀಸುತ್ತ ಆ ಪರಮಾರ್ಥಮತ್ಸ್ಯಗಳ (ಸತ್ಯವಾದ ಮತ್ಸ್ಯಗಳ, ನಿಜವಾದ ವಿಮಾನುಗಳಂತೆ) ಬಾಯಿ ಗಳನ್ನು ಅಗಲವಾಗಿ ತೆರೆಯುವಂತೆ ಮಾಡುತ್ತಲೇ ಇರುವನು. ತೆರೆಯಿಸುತ್ತಲೇ ಇರುವನು.

ಮತ್ಸ್ಯಧ್ವಜಾ =ಮತ್ಸ್ಯಾಕಾರಾ ಧ್ವಜಾಃ—ಪರಮಾರ್ಥಮತ್ಸ್ಯಾ = ಸತ್ಯಮತ್ಸ್ಯಾ ಇವ—ಉಪಮಾಲಂಕಾರ ॥

**41. ರಥೋ ರಥಾಂಗಧ್ವನಿನಾ ವಿಜಜ್ಞೇ ।**
**ವಿಲೋಲಘಂಟಾಕ್ವಣಿತೇನ ನಾಗಃ ॥**
**ಸ್ವಭರ್ತೃನಾಮಗ್ರಹಣಾದ್ಬಭೂವ ।**
**ಸಾಂದ್ರೇ ರಜಸ್ಯಾತ್ಮಪರಾವಬೋಧಃ** ॥ ೪೧ ॥

ಯುದ್ಧರಂಗದ ಎಲ್ಲೆಡೆಗಳಲ್ಲೂ ದಟ್ಟವಾದ ಕೆಂಧೂಳು ಕವಿದಿದ್ದಿತು. ಆಗ ರಣರಂಗದ ಯಾವ ಭಾಗದಲ್ಲಿ ಎಂತಹ ಕಾಳಗ ನಡೆಯುತ್ತಿದೆಯೆಂದು ಯಾರೂ ಹೇಳಲು ಸಾಧ್ಯವಿರ ಲಿಲ್ಲ. ಬರೇ ಶಬ್ದದಿಂದ ಮಾತ್ರ ತಿಳಿಯಬಹುದಾಗಿತ್ತು. ಆನೆಗಳನ್ನು ಅವುಗಳಕುತ್ತಿಗೆ ಯಲ್ಲಿ ನೇತಾಡುತ್ತಾ ಶಬ್ದಿಸುತ್ತಿರುವ ಘಂಟಾಮಣಿಗಳ ಸದ್ದಿನಿಂದ ಗಜಸೇನೆ ಇಲ್ಲಿ ಇದೆ ಎಂದು ಪತ್ತೆಹಚ್ಚಬಹುದಾಗಿತ್ತು. ಮೇಣ್ ರಥಗಳನ್ನು ರಥಾಂಗನಾದದಿಂದ (ಮೇಣ್ ರಥವನು ರಥಾಂಗನಾದದೊಳು) ರಥಚಕ್ರದ ಶಬ್ದದಿಂದ ತಿಳಿಯುತ್ತಿದ್ದರು. ಪದಾತಿದಳದ ಯೋಧರು ತಮ್ಮ ಸೇನಾಧಿಪತಿಗಳ ನಾಯಕರ ಹೆಸರನ್ನು ಆಗಾಗ ಕೂಗಿ ರಣನಾದ, ಸಿಂಹನಾದ, ರಣದ ಅಟ್ಟಹಾಸವನ್ನು ಪ್ರದರ್ಶಿಸುತ್ತಿದ್ದರು. ಇವರಿಂದ ಆ ಯೋಧರ ಕೂಗಿನಿಂದ ಇವು ಪದಾತಿದಳವೆಂದು ತಿಳಿದುಕೊಳ್ಳುತ್ತಲಿದ್ದರು. ಖಡ್ಗಗಳ, ಢಾಲುಗಳ, ಈಟಿಗಳ ತಾಡನಶಬ್ದ, ಆಯುಧಗಳ ಖಣಿಕಟಿಲೆಂಬ ಶಬ್ದ, ರಥದ ಗಾಲಿ ಗಳ ಘೋರ್ಗರೆವ ಸದ್ದು ಇದರಿಂದ ರಥಸೇನೆಯೆಂದೂ, ಆನೆಗಳ ಘಂಟಾಮಣಿಗಳ ಸದ್ದು ಇದರಿಂದ ಗಜಸೇನೆಯೆಂದೂ, ಕುದುರೆಗಳ ಖುರಪುಟದ ಶಬ್ದದಿಂದ ಅಶ್ವಸೇನೆಯೆಂದೂ ತಿಳಿಯಬಹುದಾಗಿದ್ದಿತು. ಹೀಗೆ ರಣರಂಗವು ನಾನಾತರದ ಶಬ್ದಗಳಿಂದ ಶಬ್ದಮಯ ವಾಗಿ ಈ ಪೃಥ್ವಿಯು ಬರೇ ಶಬ್ದಬ್ರಹ್ಮವಾಗಿ ರೂಪಾಂತರಹೊಂದಿದೆಯೋ ಎಂಬಂತೆ ರಂಜಿಸುತ್ತಿತ್ತು. ದಟ್ಟವಾದ ಹೊಗೆಯಂತೆ, ಕೆಂಧೂಳು ರಣರಂಗವನ್ನು ದಟ್ಟವಾಗಿ

ಮುಸುಕಿಬಿಟ್ಟಿತ್ತು. ಇದರಿಂದ ಹಗಲುಹೊತ್ತಿನಲ್ಲೂ ಕತ್ತಲೆ ಮುಸುಕಿದಂತೆ ತೋರುತ್ತಿತ್ತು (ಶಿಲಿದರಾ ಸಾಂದ್ರರೇಣುವೊಲು).

**ಕ್ವಣಿತೇನ** = ನಾದೇನ—ಆತ್ಮಪರಾವಬೋಧಃ = ಸ್ವಪರವಿವೇಕಃ ॥

**42. ಆವೃಣ್ವತೋ ಲೋಚನಮಾರ್ಗಮಾಜೌ ।**
**ರಜೋಂಧಕಾರಸ್ಯ ವಿಜೃಂಭಿತಸ್ಯ ॥**
**ಶಸ್ತ್ರಕ್ಷತಾಶ್ವದ್ವಿಪವೀರಜನ್ಮಾ ।**
**ಬಾಲಾರುಣೋಽಭೂದ್ರುಧಿರಪ್ರವಾಹಃ** ॥ ೪೨ ॥

ಕೆಂಧೂಳಿಯೆಂಬ ದಟ್ಟವಾದ ಕತ್ತಲೆಯು ವ್ಯಾಪಿಸಿದಂತೆ ರಣರಂಗವು ಭಾಸವಾಗುತ್ತಿತ್ತು. ದೃಷ್ಟಿಪಥವನ್ನು ಆ ಅಂಧಕಾರದಲ್ಲಿ ಹರಿಸಿದರೆ ಏನೊಂದೂ ಕಾಣಿಸುತ್ತಿರಲಿಲ್ಲ. ಲೋಚನಮಾರ್ಗವು ನೀರಸವಾಗಿರುತ್ತಿತ್ತು. ರಕ್ತಪ್ರವಾಹವು ಆನೆಗಳ, ಅಶ್ವಗಳ, ವೀರ ಯೋಧರ ಮೈಯಿಂದ, ಆಯುಧಗಳಿಂದಾದ ಗಾಯಗಳಿಂದ (ಶಸ್ತ್ರಗಳ ಆಘಾತದಿಂದ) ಹರಿದುಬರುತ್ತಿತ್ತು. ರಣರಂಗವು ಎಲ್ಲೆಲ್ಲೂ ಕೆಂಪಾದ ರಕ್ತಪ್ರವಾಹದಿಂದ ರಂಜಿಸುತ್ತಿರುವುದನ್ನು ಕಂಡರೆ ಕತ್ತಲೆ ಮುಸುಕಿದ ಆ ಸಂಗ್ರಾಮಭೂಮಿಯಲ್ಲಿ ಬಾಲಸೂರ್ಯನು ಹೊಸತಾಗಿ ಉದಿಸಿಬರುವಂತೆ (ಉದಯಿಸಿಬರುವಂತೆ) ತೋರುತ್ತಿತ್ತು (ಒಗೆದ ರಕ್ತಧುನಿ ಬಾಲಾರ್ಕನಂತೆಸೆಯಿತಂದು). ದೃಷ್ಟಿಪಥವು ಮುಸುಕಾಗಿ ಕಣ್ಣು ತೆರೆದು ದಿಟ್ಟಿಸಿ ನೋಡಿದರೂ ಏನೂ ಕಾಣಿಸುತ್ತಿರಲಿಲ್ಲ. ಕೆಂಧೂಳು ದೃಷ್ಟಿಪಥಕ್ಕೆ ಅಡ್ಡಿಯನ್ನುಂಟುಮಾಡುತ್ತಿತ್ತು.

ವಿಜೃಂಭಿತಸ್ಯ = ವ್ಯಾಪ್ತಸ್ಯ—ರುಧಿರಪ್ರವಾಹೋ ಬಾಲಾರುಣೋ ಬಾಲಾರ್ಕೋಽಭೂತ್—ಲೋಚನಮಾರ್ಗಮಾವೃಣ್ವತೋ = ದೃಷ್ಟಿಪಥಮುಪರುಂಧತಃ ॥

ಅನ್ವಯ:—ಲೋಚನಮಾರ್ಗಮ್ ಆವೃಣ್ವತಃ ಯುದ್ಧೇ ವಿಜೃಂಭಿತಸ್ಯ ರಜೋಂಧಕಾರಸ್ಯ ಶಸ್ತ್ರಕ್ಷತಾಶ್ವದ್ವಿಪವೀರಜನ್ಮಾ ರುಧಿರಪ್ರವಾಹಃ ಬಾಲಾರುಣಃ ಅಭೂತ್ ॥

**43. ಸಚ್ಛಿನ್ನಮೂಲಃ ಕ್ಷತಜೇನ ರೇಣುಃ ।**
**ತಸ್ಯೋಪರಿಷ್ಟಾತ್ ಪವನಾವಧೂತಃ ॥**
**ಅಂಗಾರಶೇಷಸ್ಯ ಹುತಾಶನಸ್ಯ ।**
**ಪೂರ್ವೋತ್ಥಿತೋ ಧೂಮ ಇವಾಬಭಾಸೇ** ॥ ೪೩ ॥

ಆ ರಣಧೂಳಿ ಹಿಂಡುಹೊಗೆಯಂತೆ ಮೇಲಕ್ಕೆದ್ದು ಆಕಾಶಮಂಡಲವನ್ನು ಮುಸುಕಿಕೊಂಡಿತು. ಆ ಕೆಂಧೂಳು ಭೂಭಾಗದಿಂದ ಮೇಲಕ್ಕೆದ್ದು ರಣಭೂಮಿಯಲ್ಲಿ ಹರಿಯುತ್ತಿರುವ ರಕ್ತಪ್ರವಾಹದಿಂದ ಬೀಸುತ್ತಿರುವ ವಾಯುವಿನ ಸಹಾಯದಿಂದ ಪ್ರತ್ಯೇಕಿಸಲ್ಪಟ್ಟಿತು (ಅದರ ಮೇಲಸಿಲನಾಂದೋಳನಂಗೊಂಡು). ಅದು ಹೊಗೆಯಂತೆ ಭಾನುಮಂಡಲವನ್ನು ಮುಸುಕಿಕೊಂಡಿತು. ಅದು ಅಂಗಾರ ಶೇಷಾಗ್ನಿಯ ಮೊದಲ ಹೊಗೆಯಂತೆ ಹೊಳೆಯುತ್ತ ಭಾನುಮಂಡಲವನ್ನು ಮುಸುಕಿ ಆವರಿಸಿಕೊಂಡಿತು (ಅಂಗಾರ ಶೇಷಾಗ್ನಿಯ ಮೊದಲ ಹೊಗೆಯಂತೆ). ಭೂಭಾಗದಲ್ಲಿ ಅಗ್ನಿಯು ಆರಿಹೋಗಿ ಬೆಂಬೂದಿ ಮಾತ್ರ ಉಳಿದಂತೆ ಶೇಷಾಗ್ನಿಯಲ್ಲಿ ಕೆಲವೇ ಕಿಡಿಗಳು ಉಳಿದಿರುವಂತೆ ಭಾಸ

ವಾಗುತ್ತಿತ್ತು. ಆದರಿಂದ ಎದ್ದ ಹೊಗೆಯು ಮೂಲದಿಂದ ವಿಚ್ಛೇದನಗೊಂಡು ಪ್ರತ್ಯೇಕವಾದಂತೆ, ವಾತಸಂಘಾತದಂತೆ ರಣಧೂಳು ಯುದ್ಧಭೂಮಿಯ ಬಾಹ್ಯಾಕಾಶವನ್ನು ಹೊಗೆಯಂತೆ ವ್ಯಾಪಿಸಿತ್ತು.

ಕ್ಷತಜೇನ ರುಧಿರೇಣ ಛಿನ್ನಮೂಲಃ = ತ್ಯಾಜಿತ ಭೂತಲಸಂಬಂಧ ಇತ್ಯರ್ಥಃ— ಅವಭಾಸೇ = ದಿದೀಪೇ ॥

**44. ಪ್ರಹಾರಮೂರ್ಛಾಪಗಮೇ ರಥಸ್ಥಾ ।**
**ಯಂತ್ರೄನುಪಾಲಭ್ಯ ನಿವರ್ತಿತಾಶ್ವಾನ್ ॥**
**ಯೈಃ ಸಾದಿತಾ ಲಕ್ಷಿತಪೂರ್ವಕೇತೂನ್ ।**
**ತಾನೇವ ಸಾಮರ್ಷತಯಾ ನಿಜಘ್ನುಃ** ॥ ೪೪ ॥

ರಥಾರೂಢರ ಮಧ್ಯೆ ನಡೆದ ಬೀದಿಕಾಳಗದಲ್ಲಿ ರಥೇಶ್ವರನೋರ್ವನು ವೈರಿಯ ಪ್ರಹಾರದ ಹತಿಗಳಿಂದ ಮೂರ್ಛೆಗೊಂಡು ರಥದಲ್ಲಿ ಒರಗುವನು. ಕೂಡಲೇ ಸಾರಥಿಯು ತನ್ನ ಒಡೆಯನನ್ನು ಸಂರಕ್ಷಿಸಲು ರಥವನ್ನು ಬೇರೆಡೆಗೆ ತಿರುಗಿಸುವನು. ಸ್ವಲ್ಪಹೊತ್ತಿನಲ್ಲಿ ಆ ವೀರಾಗ್ರಣಿಯ ಮೂರ್ಛೆಯು ಅಳಿದು (ಇಳಿದು) ಪ್ರಜ್ಞೆಯು ಮರುಕಳಿಸುವುದು (ಹತಿಯ ಹಮ್ಮುದವಿಳಿಯೆ). ಆಗ ಆ ವೀರರಥೇಶ್ವರನು ತನ್ನನ್ನು ಹಿಂದಕ್ಕೆ ಒಯ್ದು ತಂದುದು ತಪ್ಪಾಯಿತೆಂದು ಗದರಿಸುವನು. ರಣರಂಗದಿಂದ ಹಿಮ್ಮೆಟ್ಟುವುದು ಹೇಡಿಗಳ ಲಕ್ಷಣವಲ್ಲವೇ ? ಕೂಡಲೇ ಸಾರಥಿಯನ್ನು ಹಳಿದು ತನಗೆ ಗಾಯಗೊಳಿಸಿದ ವೀರಭಟನನ್ನು ಅವನ ಧ್ವಜಪತಾಕೆಗಳಿಂದ (ಬಾವುಟ) ಗುರುತುಹಿಡಿದು (ತನಗೆ ಹತಿಯೆಸಗಿದನ ಕೇತುವನು ಕುರುಪಿಡುತ) ಕೋಪದಿಂದ ಕಡುಮುಳಿದು ಬಹಳ ರಭಸದಿಂದ ಶಸ್ತ್ರಗಳನ್ನು ಎಸೆದು, ಅವನನ್ನು ಹೊಡೆದು ಕೆಳಗುರುಳಿಸುವನು ವೀರಾವೇಶದಿಂದ.

ರಥಸ್ಥಾ = ರಥಿನಃ—ಮೂರ್ಛಿತಾನಾಮನ್ಯತ್ರ ನೀತ್ವಾ = ಸಂರಕ್ಷಣಂ ಸಾರಥಿಧರ್ಮ ಇತಿ ಕೃತ್ವಾ—ಲಕ್ಷಿತಪೂರ್ವಕೇತೂನ್ = ಪೂರ್ವದೃಷ್ಟೈಃ ಕೇತುಭಿಃ ಪ್ರತ್ಯಭಿಜ್ಞಾತಾನಿತ್ಯರ್ಥಃ ॥

**45. ಅಪ್ಯರ್ಧಮಾರ್ಗೇ ಪರಬಾಣಲೂನಾ ।**
**ಧನುರ್ಭೃತಾಂ ಹಸ್ತವತಾಂ ಪೃಷತ್ಕಾಃ ॥**
**ಸಂಪ್ರಾಪುರೇವಾತ್ಮಜವಾನುವೃತ್ಯಾ ।**
**ಪೂರ್ವಾರ್ಧಭಾಗೈಃ ಫಲಿಭಿಃ ಶರವ್ಯಮ್** ॥ ೪೫ ॥

ಬಿಲ್ಲೋಜರು, ಕಾರ್ಮುಕಾಚಾರ್ಯರು ಎಸೆದ ತೀಕ್ಷ್ಣವಾದ (ಮಸೆದ) ಬಾಣಗಳು ಶತ್ರುಗಳು ತಮ್ಮ ದಿವ್ಯಬಾಣಾವಳಿಗಳಿಂದ ಮಾರ್ಗಮಧ್ಯದಲ್ಲಿ ಕಡಿದು ಇಕ್ಕಡಿಗೈದರು (ಬಿಲ್ಲೋಜರೆಚ್ಚಂಬು ನಡುದಾರಿಯೊಳೆ). ಹೀಗೆ ಅರಿಶರಂಗಳಿಂದ ಎರಡಾದ ಬಾಣದ ಲೋಹಾಗ್ರವು ಆತ್ಮಾನುವೇಗದಿಂದ ಮುಂದುವರಿದ ವೇಗದಿಂದ ಬಂದು ತನ್ನ ಗುರಿ ಮುಟ್ಟುವುದು. ಅದು ಈ ಹಿಂದೆ ಬಿಡಲ್ಪಟ್ಟ ವೇಗೋತ್ಕರ್ಷಬಲದಿಂದ, ತನ್ನಲ್ಲಿ ಉಳಿದಿರುವ ಸ್ವಂತ ವೇಗದಿಂದ ಮುಂದುವರಿದು ತನ್ನ ವೈರಿಯ ಎದೆಯನ್ನು ಸೀಳಿಬಿಡುವುದು (ಆತ್ಮವೇಗಾನುಬಂಧದೊಳೆ). ಆ ಲೋಹಾಗ್ರವೇ ನೇರವಾಗಿ ಬಂದು ಗುರಿಮುಟ್ಟುವುದು.

ಅನ್ವಯಃ— ಅರ್ಧಮಾರ್ಗೇ ಪರಬಾಣಲೂನಾ ಅಪಿ ಹಸ್ತವತಾಂ ಧನುರ್ಭೃತಾಂ ಪೃಷತ್ಕಾಃ ಆತ್ಮಜವಾನುವೃತ್ತ್ಯಾ ಫಲಿಭಿಃ ಪೂರ್ವಾರ್ಧಭಾಗೈಃ ಶರವ್ಯಂ ಸಂಪ್ರಾಪುರೇವ॥

ಅರ್ಧಶ್ಚಾಸೌ ಮಾರ್ಗಶ್ಚ = ತಸ್ಮಿನ್ ಅರ್ಧಮಾರ್ಗೇ—ಹಸ್ತವತಾಂ = ಕೃತಹಸ್ತಾನಾಂ— ಆತ್ಮಜವಾನುವೃತ್ತ್ಯಾ=ಸ್ವವೇಗಾನುಬಂಧೇನ— ಸಂಪ್ರಾಪುರೇವ=ನ ತು ಮಧ್ಯೇ ಪತಿತಾ ಇತ್ಯರ್ಥಃ॥

**46. ಆಧೋರಣಾನಾಂ ಗಜಸಂನಿಪಾತೇ ।**
**ಶಿರಾಂಸಿ ಚಕ್ರೈರ್ನಿಶಿತೈಃ ಕ್ಷುರಾಗ್ರೈಃ ॥**
**ಹೃತಾನ್ಯಪಿ ಶ್ಯೇನ ನಖಾಗ್ರಕೋಟಿ ।**
**ವ್ಯಾಸಕ್ತಕೇಶಾನಿ ಚಿರೇಣ ಪೇತುಃ ॥ ೪೬ ॥**

ರಾಜಧಿರಾಜರು ಮಾಡುವ ಗಜಯುದ್ಧದಲ್ಲಿ, ಗಜಾರೂಢರಾದವರ ತಲೆಗಳು ಚಕ್ರಾಯುಧದ ಚೂಪಾದ ಅಲಗುಗಳಿಂದ ತರಿಯಲ್ಪಟ್ಟು ಧರಿತ್ರಿಗೆ ಉರುಳುತ್ತಿದ್ದುವು. ಹೀಗೆ ಶಿರಗಳು ಚಕ್ರಾಯುಧದ ಅಲಗಿನಿಂದ ಕತ್ತರಿಸಲ್ಪಟ್ಟರೂ ಕೂಡಲೇ ನೆಲಕ್ಕುರುಳುತ್ತಿರಲಿಲ್ಲ. ಅರಿಶಿರಗಳ ತಲೆಗಳ ಸಮೂಹವು ಹದ್ದಿನ ಕಾಲಿನ ಉಗುರಿಗೆ ಸಿಕ್ಕಿದ ಕೂದಲಿನ ಸುರುಳಿಯಂತೆ ನಿಧಾನವಾಗಿ ಧರೆಗೆ ಪತನಗೊಳ್ಳುತ್ತಿದ್ದುವು (ಬೀಳುತ್ತಿದ್ದುವು). ಅದು ಎಂತೆಂಡೆ ''ತರಿದ ಕ್ಷುರನಿಶಿತ ಚಕ್ರಂ ಶ್ಯೇನನಖಸಕ್ತಕೇಶಂಗಳೆನಲು ಬಳಿಯಿಂದುರುರ್ದುದು ಅರಿಶಿರಃ ಪ್ರಚಯಂ.''

ಅನ್ವಯಃ:—ಗಜಸನ್ನಿಪಾತೇ ನಿಶಿತೈಃ ಕ್ಷುರಾಗ್ರೈಃ ಚಕ್ರೈಃ ಹೃತಾನಿ ಅಪಿ ಶ್ಯೇನ ನಖಾಗ್ರಕೋಟಿವ್ಯಾಸಕ್ತಕೇಶಾನಿ ಆಧೋರಣಾನಾಂ ಶಿರಾಂಸಿ ಚಿರೇಣ ಪೇತುಃ॥

ನಖಾಗ್ರಕೋಟಿಷು ವ್ಯಾಸಕ್ತಾಃ ಕೇಶಾ ಯೇಷಾಂ ತಾನಿ—ಶಿರಾಂಸಿ ಚಿರೇಣ ಪೇತುಃ ಪತಿತಾನಿ = ಶಿರಃ ಪಾತಾತ್ಪ್ರಾಗೇ ಪ್ರಾರಭ್ಯ ಪಶ್ಚಾದುತ್ಪತತಾಂ ಪಕ್ಷಿಣಾಂ ನಖೇಷು ಕೇಶಸಂಗಶ್ಚಿರಪಾತಹೇತುರಿತಿ ಭಾವಃ॥

**47. ಪೂರ್ವಂ ಪ್ರಹರ್ತಾ ನ ಜಘಾನ ಭೂಯಃ ।**
**ಪ್ರತಿಪ್ರಹಾರಾಕ್ಷಮಮಶ್ವಸಾದೀ ॥**
**ತುರಂಗಮಸ್ಕಂಧನಿಷಣ್ಣದೇಹಂ ।**
**ಪ್ರತ್ಯಾಶ್ವಸಂತಂ ರಿಪುಮಾಚಕಾಂಕ್ಷ ॥ ೪೭ ॥**

ಇನ್ನೊರ್ವ ಮಹಾವೀರನಾದ, ಮಹಾಪ್ರತಾಪಿಯಾದ ಅಶ್ವಸವಾರನು ತನ್ನ ಎದುರಾಳಿಗೆ ಭಯಂಕರವಾದ, ವಜ್ರಾಘಾತದಂತಹ ಹೊಡೆತವನ್ನು ಹೊಡೆದು ಅವನಿಂದ ಪ್ರತಿಪ್ರಹಾರವನ್ನು ಎದುರು ನೋಡುತ್ತಿದ್ದನು. ಆದರೆ ಆ ಅಶ್ವಾರೋಹಿಯು ಆ ಹೊಡೆತವನ್ನು ತಾಳಲಾರದೆ ಕುದುರೆಯ ಭುಜದ ಮೇಲೆ ಜೋಲ್ದು (ಕುಸಿದು) ಬಿದ್ದಿದ್ದನು. ಮೊದಲು ಹೊಡೆದವನು ಅವನಿಗೆ ಮರಳಿ ಹೊಡೆಯುದೆ ಪ್ರಜ್ಞೆ ಬರುವುದನ್ನು ಕಾಯುತ್ತಿದ್ದನು. ರಣಧರ್ಮದ ನೀತಿಯಂತೆ, ಧರ್ಮಯುದ್ಧದ ಕಟ್ಟುಕಟ್ಟಳೆ ಅಂತಿರ್ದುದು ಅಂದು (ಮರಳಿ ತಾಂ ಹೊಡೆಯುದೆಯೆ ಕುದುರೆಮೆನ್ನೊರಗಿದವನು ಏಳ್ವುದನೆ ಕಾಯುತಿರ್ದನು ಆ ಭಟಂ).

ತುರಂಗಮಸ್ಕಂಧೇ ನಿಷಣ್ಣದೇಹಮ್ = ಮೂರ್ಛಿತಮಿತ್ಯರ್ಥಃ—ನಾಯುಧವ್ಯಸನಂ ಪ್ರಾಪ್ತಂನಾರ್ತನಾತಿಪರಿಕ್ಷತಮ್ ಇತಿ ನಿಷೇಧಾದಿತಿ ಭಾವಃ ॥

**48. ತನುತ್ರಚಾಂ ವರ್ಮಭೃತಾಂ ವಿಕೋಶೈಃ।**
**ಬೃಹತ್ಸುದಂತೇಷ್ವಸಿಭಿಃ ಪತದ್ಭಿಃ॥**
**ಉದ್ಯಂತಮಗ್ನಿಂ ಶಮಯಾಂ ಬಭೂವುಃ।**
**ಗಜಾ ವಿವಿಗ್ನಾಃ ಕರಶೀಕರೇಣ ॥ ೪೮ ॥**

ಕವಚಧಾರಿಗಳಾದ ಧೀರಯೋಧರು ತಮ್ಮ ಚರ್ಮದ ಒರೆಯಿಂದ ಸೆಳೆದ ಹರಿತವಾದ ಕಠಾರಿಗಳಿಂದ ಆನೆಗಳ ಬೃಹದಾಕಾರದ ದಂತಗಳ ಮೇಲೆ ಹೊಡೆದ ಏಟಿಗೆ ಬೆಂಕಿಯ ಕಿಡಿಗಳು ಝಳಕ್ಕನೆ ಹಾರಿದುವು. ಹೀಗೆ ಧವಳ (ಬಿಳಿಯ) ವರ್ಣದ ದಂತಗಳಿಂದ (ದಂತ ಕೋಶಗಳಿಂದ, ಉದ್ದವಾದ ದಾಡೆಗಳಿಂದ) ಅಗ್ನಿಕಿಡಿಗಳು ಉದುರುತ್ತಿರುವುದನ್ನು ಕಂಡು ಆ ಮದಕರಿಗಳು ದಿಗಿಲುಗೊಂಡುವು (ಅಸಿಗಳಿಂದಿಭಗಳನು ಪೊಯ್ಮಲ್ ಬೃಹದ್ ದಂತಗಳನೊಗೆದಗ್ನಿಗೆ ಉರೆಬೆದರ್ದು). ಅವು ಕೂಡಲೇ ತಮ್ಮ ಕರಗಳಂತಿರುವ ಸೊಂಡಿಲುಗಳಿಂದ ನೀರಹನಿಗಳನ್ನು ಸುರಿಸಿ (ಸಿಂಪಡಿಸಿ) ಆರಿಸಿ ಶಾಂತಗೊಳಿಸಿದುವು.

ಅನ್ವಯ:—ತನುತ್ರಚಾಂ ವರ್ಮಭೃತಾಂ ದಂತೇಷು ಪತದ್ಭಿಃ ವಿಕೋಶೈಃ ಅಸಿಭಿಃ ಉದ್ಯಂತಮ್ ಅಗ್ನಿಂ ವಿವಿಗ್ನಾಃ ಗಜಾಃ ಕರಶೀಕರೇಣ ಶಮಯಾಂ ಬಭೂವುಃ ॥

ವಿವಿಗ್ನಾ = ಭೀತಾಗಜಾಃ—ಕರಶೀಕರೇಣ= ಶುಂಡಾದಂಡಜಲಕಣೇನ—ಶಮಯಾಂ ಬಭೂವುಃ = ಶಾಂತಂ ಚಕ್ರುಃ ॥

**49. ಶಿಲೀಮುಖೋತ್ಕೃತ್ತಶಿರಃ ಫಲಾಢ್ಯಾಃ।**
**ಚ್ಯುತೈಃ ಶಿರಸ್ತ್ರೈಶ್ಚಷಕೋತ್ತರೇವ॥**
**ರಣಕ್ಷಿತಿಃ ಶೋಣಿತಮದ್ಯಕುಲ್ಯಾ।**
**ರರಾಜ ಮೃತ್ಯೋರಿವ ಪಾನಭೂಮಿಃ ॥ ೪೯ ॥**

ಆ ರಣಭೂಮಿಯು ಮೃತ್ಯುದೇವತೆಯ ಪಾನಭೂಮಿಯಂತಿತ್ತು. ಬಾಣಾವಳಿಗಳಿಂದ ಕಡಿದು ಉರುಳಿಸಿದ ತಲೆಗಳು ಆ ರುದ್ರಭೂಮಿಯಲ್ಲಿರುವ ಕಳಿತ ಹಣ್ಣುಗಳ ರಾಶಿಯೆಂಬಂತೆ. ಅಲ್ಲಿ ಸೀಳಿದ ಶಿರಸ್ತ್ರಾಣಗಳು ಅಸಂಖ್ಯಾತ ಮಧುಪಾತ್ರೆಗಳಂತೆ, ಅಥವಾ ಪಾನಪಾತ್ರೆಗಳು ಎಂಬಂತೆ. ಇನ್ನು ಆ ರಣಭೂಮಿಯಲ್ಲಿ ಹರಿಯುತ್ತಿರುವ ರಕ್ತದ ಮಡುಗಳು ಒಳ್ಳೆಯ ಮಧು,ದ್ರಾಕ್ಷಾಸವ ಎಂಬಂತೆ, ಮೃತ್ಯುದೇವತೆಯ (ರಣದೇವತೆಯ, ರಣಚಂಡಿಯ) ಪಾನಭೂಮಿಯಂತೆ (ರಣಭೂಮಿ ಮೃತ್ಯುವಿನ ಪಾನಭೂಮಿಯಪೋಲು) ಆ ರಣಭೂಮಿ ಮೆರೆಯುತ್ತಿತ್ತು. ಆ ಅಸಂಖ್ಯಾತ ಶಿರಸ್ತ್ರಾಣವೆಂಬ ಮಧುಪಾತ್ರೆಗಳು ರಕ್ತವೆಂಬ ಮಧುರಸದಿಂದ (ದ್ರಾಕ್ಷಾಸವದಿಂದ) ತುಂಬಿ ತುಳುಕಾಡುತ್ತಿದ್ದುವು ಎಂಬಂತೆ ತೋರಿತು.

ತೈಶ್ಚಷಕೋತ್ತರಾ = ಚಷಕಃ ಪಾನಪಾತ್ರಮುತ್ತರು ಯಸ್ಯಾಃ ಸೇವ ॥ ''ಚಷಕೋಃ ಸ್ತ್ರೀಪಾನಪಾತ್ರಂ'' ಇತ್ಯಮರಃ—''ಕುಲ್ಯಾಲ್ಪಾಕೃತ್ರಿಮಾ ಸರಿತಾ'' ಇತ್ಯಮರಃ ॥

**50. ಉಪಾಂತಯೋಃ ನಿಷ್ಕುಷಿತಂ ವಿಹಂಗೈಃ ।**
**ಆಕ್ಷಿಪ್ಯ ತೇಭ್ಯಃ ಪಿಶಿತಪ್ರಿಯಾಪಿ ॥**
**ಕೇಯೂರಕೋಟಿಕ್ಷತತಾಲುದೇಶಾ ।**
**ಶಿವಾ ಭುಜಚ್ಛೇದಮುಪಾಚಕಾರ ॥ ೫೦ ॥**

ಅಲ್ಲೊಂದು ಹೆಣ್ಣುನರಿ ಮಾಂಸಪಿಪಾಸಿ ತಾನಾದರೂ (ಶಾಕಾಹಾರಿ) ರಣರಂಗದಲ್ಲಿ ಕಡಿದೊಗೆದಿರುವ ತೋಳೊಂದನ್ನು ಗಭಗಭನೆ ಕಚ್ಚಿ ತಿನ್ನುತ್ತಲಿತ್ತು (ಪರಿದಿರ್ದ ತೋಳ್ಗಳ ಹೆಣ್ಣುನರಿ ಎಳೆದು ಮಾಂಸಾಶೆಯಿಂದರ್ಕ). ಹೀಗೆ ತಿನ್ನುತ್ತಲಿದ್ದಾಗ (ಮುಕ್ಕುತ್ತಲಿತ್ತಾಗ) ಆ ಭುಜದ ಭಾಗದಲ್ಲಿರುವ ಕೇಯೂರಕೋಟಿಯೆಂಬ ಭುಜಬಂಧದಿಂದ (ಭುಜಾಭರಣದಿಂದ) ಅದರ ಚೂಪಾದ ಅಲಗುಗಳಿಂದ ಅದರ ಬಾಯೊಳಗಿನ ತಾಲುಪ್ರದೇಶವು ಗಾಯಗೊಂಡಿತು. ಸುತ್ತಲೂ ಹದ್ದುಗಳು ತಿಂದಿರುವ ಆ ಬಾಹುಮೂಲವನ್ನು, ತಾನು ಅವುಗಳಿಂದ ಈ ಹಿಂದೆ ಕಸಿದಿದ್ದರೂ ರಣರಂಗದಲ್ಲಿ ಎಸೆದು ನಾಗಾಲೋಟದಿಂದ ಓಡಿತು.

ಅನ್ವಯ :—ಉಪಾಂತಯೋಃ ವಿಹಂಗೈಃ ನಿಷ್ಕುಷಿತಂ ಭುಜಚ್ಛೇದಂ ತೇಭ್ಯಃ ಆಕ್ಷಿಪ್ಯ ಪಿಶಿತಪ್ರಿಯಾ ಅಪಿ ಶಿವಾ ಕೇಯೂರಕೋಟಿಕ್ಷತತಾಲುದೇಶಾ ಅಪಾಚಕಾರ ॥

ಭುಜಚ್ಛೇದಂ = ಭುಜಖಂಡಮ್—ಆಕ್ಷಿಪ್ಯಾಚ್ಛಿದ್ಯ-ಪಿಶಿತಪ್ರಿಯಾ = ಮಾಂಸಪ್ರಿಯಾ —ಅಪಾಚಕಾರ = ಅಪಸಾರಯಾಮಾಸ ॥

**51. ಕಶ್ಚಿತ್ ದ್ವಿಷತ್ ಖಡ್ಗಹೃತೋತ್ತಮಾಂಗಃ ।**
**ಸದ್ಯೋ ವಿಮಾನಪ್ರಭುತಾಮುಪೇತ್ಯ ॥**
**ವಾಮಾಂಗಸಂಸಕ್ತಸುರಾಂಗನಃ ಸ್ವಂ ।**
**ನೃತ್ಯತ್ಕಬಂಧಂ ಸಮಂ ದದರ್ಶ ॥ ೫೧ ॥**

ಓರ್ವ ಸುಭಟನು, ವೈರಿಯ ಖಡ್ಗದ ಆಘಾತದಿಂದ ಆತನ ಉತ್ತಮಾಂಗವು (ತಲೆಯು) ಮುಂಡದಿಂದ ಪ್ರತ್ಯೇಕವಾಯಿತು. ಒಡನೆಯೆ ಆ ವೀರಾಗ್ರಣಿಯು ಸುರವಿಮಾನವನ್ನೇರಿ ಸುರಲೋಕಕ್ಕೆ ಅಭಿಮುಖನಾಗಿ ಹೊರಟನು. ಅವನ ಎಡತೊಡೆಯಲ್ಲಿ ಮಾರ್ಗದರ್ಶಕಳಾದ ಸುರತರುಣಿಯು ಆಸಕ್ತಿಯಿಂದ ಕುಳಿತಿದ್ದಳು. ಅವನು ರಣರಂಗವನ್ನು ನೋಡಿದಾಗ ಛಿನ್ನಮಸ್ತಕವಾದ ಅವನ ಕಬಂಧವು ರಣಭೂಮಿಯಲ್ಲಿ ಕುಣಿಯುತ್ತಿತ್ತು, ಆ ದೃಶ್ಯವನ್ನು ಆ ವೀರವರನು ನೋಡುತ್ತ ಸುರನಗರಿಗೆ ಹೊರಟುಹೋದನು (ನೋಡಿದನು ಸಮರದೊಳು ನೃತ್ಯತ್ ಕಬಂಧವನು). ಅವನಿಗೆ ವೀರಸ್ವರ್ಗವು ಪ್ರಾಪ್ತಿಯಾಗಿತ್ತು.

ಕಬಂಧಮ್ = ರುಂಡರಹಿತ ದೇಹ (ಮುಂಡ)—ಕಬಂಧಂ = ಅಶಿರಸ್ಕಂ, ಕಲೇವರಂ —ದೇವತ್ವಮಿತ್ಯರ್ಥಃ ॥

**52. ಅನ್ಯೋನ್ಯಸೂತೋನ್ಮಥನಾದಭೂತಾಂ ।**
**ತಾವೇವ ಸೂತೌ ರಥಿನೌ ಚ ಕೌಚಿತ್ ॥**
**ವ್ಯಶ್ವೌ ಗದಾವ್ಯಾಯತಸಂಪ್ರಹಾರೌ ।**
**ಭಗ್ನಾಯುಧೌ ಬಾಹುವಿಮರ್ದನಿಷ್ಠೌ ॥ ೫೨ ॥**

ಇಬ್ಬರೂ ಮಹಾರಥರು ಪರಸ್ಪರ ಭೀಕರವಾಗಿ ಸಿಂಹನಾದ ಮಾಡುತ್ತ, ಹೋರಾಡ ತೊಡಗಿದರು. ಆ ಮಹಾರಥಿಕರ ಸಾರಥಿಗಳಿಬ್ಬರೂ ಅಳಿಯಲು, ತಾವು ಬೇಸರಿಸದೆ ರಥವನ್ನು ತಾವೇ ನಡೆಸುತ್ತಾ ಹೋರಾಡಿದರು. ಅವರ ರಥಾಶ್ವಗಳು ಮಡಿಯಲು ವೀರಾವೇಶದಿಂದ ಗದೆಯನ್ನು ಕೊಂಡು ಗದಾಧಾರಿಗಳಾಗಿ ಗದಾಯುದ್ಧವನ್ನು ಪ್ರಾರಂಭಿಸಿದರು. ಹೀಗೆ ಸೆಣಸುತ್ತಿರಲು ಅವರೀರ್ವರ ಗದೆಗಳು ಮುರಿದು ಚೂರಿಯಾಗಿ ಬಿದ್ದುವು. ಆದರೂ ಮಹಾವೀರರು ಧೃತಿಗೆಡದೆ ಕಡೆಯವರೆಗೂ ಬಾಹುಯುದ್ಧವನ್ನು ಗೆಯ್ಯುತ್ತಿದ್ದರು (ಬಾಹುಯುದ್ಧವು ಗೆಯ್ದರಿರ್ವರೂ ಮಳಿದು).

ಸಂಪ್ರಹಾರೋ = ಯುದ್ಧಂ—ಸೂತಯೋಃ = ಸಾರಥ್ಯೋಃ ॥

**53.** **ಪರಸ್ಪರೇಣ ಕ್ಷತಯೋಃ ಪ್ರಹರ್ತ್ರೋ-**
**ರುತ್ಕ್ರಾಂತವಾಯ್ವೋಃ ಸಮಕಾಲಮೇವ ॥**
**ಅಮರ್ತ್ಯಭಾವೇಽಪಿ ಕಯೋಶ್ಚಿದಾಸೀತ್ ।**
**ಏಕಾಪ್ಸರಃ ಪ್ರಾರ್ಥಿತಯೋರ್ವಿವಾದಃ** ॥ ೫೩ ॥

ಬೇರೆತೊಂದು ಎಡೆಯಲ್ಲಿ (ರಣರಂಗದ ಬೇರೊಂದು ಭಾಗದಲ್ಲಿ) ಈರ್ವರು ಮಹಾವೀರರು ಪರಸ್ಪರ ಕಾದಾಡುತ್ತ, ಏಕಕಾಲದಲ್ಲಿ ಕಡೆಯ ಉಸಿರನ್ನೆಳೆದು ಮಡಿದರು. ಸುರಪದವಿಯನ್ನು ಪಡೆದು ಸುರವಿಮಾನದಲ್ಲಿ ಕುಳಿತು ಮೇಲೇರುತ್ತಿದ್ದರು. ಆ ಇರ್ವರು ಒಬ್ಬ ಸುರಯುವತಿಯನ್ನು ಬಯಸಿ ಅಲ್ಲಿಯೂ ಕಾದಲು ಆರಂಭಿಸಿದರು. ಅವರು ಅಮರದೇಹಿಗಳಾಗಿ ಅಮರ್ತ್ಯರಾಗಿದ್ದರೂ ಅವರ ಅಮರ್ತ್ಯಭಾವದಲ್ಲೂ ಅವರು ಓರ್ವ ಹೆಣ್ಣಿಗಾಗಿ ಸುರಲೋಕದಲ್ಲಿಯೂ ಹೋರಾಡುತ್ತಿದ್ದರು. ಅವರು ಹೋರಾಡುತ್ತಲೇ ಸುರನಗರಿಗೆ ತೆರಳಿದರು (ಕಾದುತಿಹರೋರ್ವ ಸುರಯುವತಿಯನೆ ಇರ್ವರೂ ಬಯಸಿ).

ಪರಸ್ಪರೇಣೇತಿ = ಪರಸ್ಪರೇಣಾನ್ಯೋನ್ಯಂ—ಕ್ಷತಯೋಃ = ಕ್ಷತತನ್ವೋಃ—ಸಮಕಾಲಮ್=ಏಕಕಾಲಮ್—ಏಕಾಮಿಷಾಭಿಲಾಷೋ ಹಿ ಮಹದ್ವೈರಬೀಜಮಿತಿ ಭಾವಃ ॥

**54.** **ವ್ಯೂಹಾವುಭೌ ತಾವಿತರೇತರಸ್ಮಾತ್ ।**
**ಭಂಗಂ ಜಯಂ ಚಾಪತುರವ್ಯವಸ್ಥಮ್ ॥**
**ಪಶ್ಚಾತ್ಪುರೋ ಮಾರುತಯೋಃ ಪ್ರವೃದ್ಧೌ**
**ಪರ್ಯಾಯವೃತ್ತ್ಯೇವ ಮಹಾರ್ಣವೋರ್ಮೀ** ॥ ೫೪ ॥

ಹೀಗೆ ಉಭಯಪಕ್ಷವು ತಮ್ಮ ಸೇನಾವ್ಯೂಹಗಳನ್ನು ರಚಿಸಿ ಅಭಿಯೋಗ, ಪ್ರತ್ಯಭಿಯೋಗ ನಡೆಸುತ್ತಿದ್ದರು. ಕೆಲವೊಮ್ಮೆ ಸೋಲು, ಕೆಲವೊಮ್ಮೆ ಗೆಲವು ಸಂಭವಿಸುತ್ತಲಿತ್ತು. ಜಯಾಪಜಯವು ಅನಿಶ್ಚಿತವಾಗಿ ಯುದ್ಧಾಗ್ನಿಯು ಮುಂದುವರಿಯುತ್ತಲೇ ಇತ್ತು. ಹೇಗೆ ಮಹಾಸಾಗರದಲ್ಲಿ ಬಿರುಗಾಳಿ ತಲೆದೋರಿದಾಗ ಹಿಂದಿನಿಂದ ಮತ್ತು ಮುಂದಿನಿಂದ ಬಿರುಗಾಳಿಗೆದ್ದ ಅಲೆಗಳು ತಮ್ಮ ತಲೆಗಳನ್ನು ಹಾವಿನ ಹೆಡೆಗಳಂತೆ ಎತ್ತಿ ಪರಸ್ಪರ ಹೊಡೆಯುವಂತೆ, ಉಭಯಸೇನೆ ಕಾದುತಲಿತ್ತು. ಆ ಸುಂಟರಗಾಳಿಗೆ ಉಬ್ಬಿರುವ ಕಡಲಿನಂತೆ ಆ ಉಭಯಸೇನೆ ಅಶಾಂತಿ ಮತ್ತು ಅವ್ಯವಸ್ಥೆಯ ತವರ್ಮನೆಯಾಗಿ ರಂಜಿಸುತ್ತಿತ್ತು (ಬಿರುಗಾಳಿಗುಬ್ಬಿರುವ ಕಡಲಲೆಯ ತೆರದೆ).

ಅನ್ವಯಃ:—ತೌ ಉಭೌ ವ್ಯೂಹೌ ಪಶ್ಚಾತ್ ಪುರೋ ಮಾರುತಯೋಃಪರ್ಯಾಯ ವೃತ್ತ್ಯಾ ಪ್ರವೃದ್ಧೌ ಮಹಾರ್ಣವೋರ್ಮೀವ ಇತರೇತರಸ್ಮಾದ್ ಅವ್ಯವಸ್ಥಂ ಭಂಗಂ ಜಯಂ ಚಾಪತುಃ ॥

ಚಾಪತುಃ = ಪ್ರಾಪ್ತವಂತೌ—ಜಯಂ ಭಂಗಂ = ಪರಾಜಯಂ—ತಾವುಭೌ ವ್ಯೂಹೌ= ಸೇನಾಸಂಘಾತೌ ॥

**55. ಪರೇಣ ಭಗ್ನೋಽಪಿ ಬಲೇ ಮಹೌಜಾ।**
**ಯಯಾವಜಃ ಪ್ರತ್ಯರಿಸೈನ್ಯಮೇವ ॥**
**ಧೂಮೋ ನಿವರ್ತ್ಯೇತ ಸಮೀರಣೇನ।**
**ಯತಸ್ತು ಕಕ್ಷಸ್ತತ ಏವ ವಹ್ನಿಃ ॥ ೫೫ ॥**

ಅಜನ ನಿಜಬಲವು ವೈರಿರಾಜರ ಸೇನೆಯಿಂದ (ಪರಬಲದ ದಾಳಿಯಿಂದ) ಅಳಿದು ನಾಶಹೊಂದಿದರೂ. ಏಕಾಂಗವೀರನಾದ ಅಜನ ರಣೋತ್ಸಾಹವು ಎಳ್ಳಷ್ಟೂ ಜಗ್ಗಲಿಲ್ಲ. ಅಜನು ವೈರಿಮೋಹರದ ಮೇಲೆ ಪ್ರಚಂಡವಾದ ದಾಳಿ ನಡೆಸಿದನು. ಬಲವಾದ ಗಾಳಿಯು ಹೊಡೆದೋಡಿಸಿದರೂ ಆ ಕಕ್ಷದಲ್ಲಿರುವ ಗರಿಕೆಹುಲ್ಲುಗಳಲ್ಲಿ ಅಗ್ನಿಯು ಆರದೇ, ಉರಿಯುತ್ತಲೇ ಇರುವಂತೆ, ಅಜನು ತನ್ನ ನಿಜಪ್ರತಾಪವನ್ನು ವೈರಿರಾಯರ ಮೇಲೆ ತೋರಿದನು (ಗರಿ ಗರಿಕೆಹುಲ್ಲುಗಳ ಬಳಿಯೊಳು ಅಗ್ನಿ ಉರಿಯುವ ತೆರದೆ).

"ಕಕ್ಷೌ ತು ತೃಣವೀರುಧೌ" ಇತ್ಯಮರಃ—ತತ ಏವ = ತತ್ರೈವ। ದೃಷ್ಟಾಂತ ಅಲಂಕಾರ ॥

**56. ರಥೀ ನಿಷಂಗೀ ಕವಚೀ ಧನುಷ್ಮಾನ್।**
**ದೃಪ್ತಃ ಸ ರಾಜನ್ಯಕಮೇಕವೀರಃ ॥**
**ನಿವಾರಯಾಮಾಸ ಮಹಾವರಾಹಃ।**
**ಕಲ್ಪಕ್ಷಯೋದ್ವೃತ್ತಮಿವಾರ್ಣವಾಂಭಃ ॥ ೫೬ ॥**

ಆ ಉದ್ಧತನಾದ ಏಕೈಕವೀರನು ತನ್ನ ಸಾಮರ್ಥ್ಯದಲ್ಲಿ ಭರವಸೆಯುಳ್ಳ ಆ ಜಗದೇಕ ಧನುರ್ಧರನು ವಜ್ರಕವಚವನ್ನು ಧರಿಸಿ ತನ್ನ ಮಣಿರಥವನ್ನು (ಹೊಂದೇರನ್ನು) ಏರಿ, ಅಕ್ಷಯತೂಣೀರದಲ್ಲಿ ದಿವ್ಯಾಸ್ತ್ರಗಳನ್ನು (ಆಗ್ನೇಯ, ವಾಯವ್ಯ, ಪರ್ವತ, ಐಂದ್ರ ಮೊದಲಾದ ದಿವ್ಯಾಸ್ತ್ರಗಳು) ತುಂಬಿಸಿ, ಬಿಲ್ಲನ್ನು ಕೈಯಲ್ಲಿ ಧರಿಸಿ, ಆ ನೃಪಸಮುದಾಯ ವನ್ನು ನೂಂಕಿ, ಅವರ ಮೇಲೆ ಏರಿಹೋದನು (ಏಕೈಕವೀರನುದ್ಧತನು ನೂಂಕಿದನು). ಈ ಹಿಂದೆ ಕೃತಯುಗದ ಕೊನೆಯಲ್ಲಿ (ಕಲ್ಪದ ಅಂತ್ಯದಲ್ಲಿ) ಪುರಾಣಪುರುಷನಾದ ಮಹಾ ವಿಷ್ಣುವು ಆದಿವರಾಹರೂಪವನ್ನು ಧರಿಸಿ ಉಕ್ಕುತ್ತಿರುವ ಸಪ್ತಸಾಗರವನ್ನು ಕಲಕಿದಂತೆ, ಅದರಲ್ಲಿ ವಿಹರಿಸಿದಂತೆ, ಸಮುದ್ರದ ಅಬ್ಬರ-ಉಬ್ಬರವನ್ನು ಎದುರಿಸಿದಂತೆ, ಸಮರೈಕ ಮೇರುವಾದ ಅಜನು ಮಾರಾಂತು ವೈರಿಸೇನಾಸಾಗರದ ಮೇಲೆಬಿದ್ದನು (ನೂಂಕುವೊಲು ಕಲ್ಪಾಂತದಬ್ಧಿಯುರ್ಮಿಯನು).

ನಿಷಂಗೀ = ನಿಷಂಗಃ ಅಸ್ಯ ಅಸ್ತೀತಿ ಧನುಷ್ಮಾನ್ = ಧನುರ್ಧರೋ — ಮಹಾ ವರಾಹೋ=ವರಾಹಾವತಾರೋ ವಿಷ್ಣುಃ—ಕಲ್ಪಕ್ಷಯೋ = ಕಲ್ಪಾಂತಕಾಲ ॥

**57. ಸದಕ್ಷಿಣಂ ತೂಣಮುಖೇನ ವಾಮಂ ।**
**ವ್ಯಾಪಾರಯನ್ ಹಸ್ತಮಲಕ್ಷ್ಯತಾಜೌ ॥**
**ಅಕರ್ಣಕೃಷ್ಟಾ ಸಕೃದಸ್ಯ ಯೋದ್ಧುಂ ।**
**ಮೌರ್ವೀವ ಬಾಣಾನ್ ಸುಷುವೇ ರಿಪುಘ್ನಾನ್ ॥ ೫೭ ॥**

ಆ ಕುಮಾರನು ತನ್ನ ದಿವ್ಯರಥದಲ್ಲಿ ಕುಳಿತು ದಶದಿಶೆಗಳಲ್ಲಿ ಮಿಂಚಿನಂತೆ ಓಡಾಡುತ್ತಾ ಬಹಳ ಸುಂದರವಾದ ರೀತಿಯಲ್ಲಿ ಬಾಣಗಳನ್ನು ಎಸೆಯುತ್ತಾ ಧನುರ್ವಿದ್ಯೆಯಲ್ಲಿ ತನಗಿರುವ ಕೈಚಳಕವನ್ನು ತೋರುತ್ತಿದ್ದನು (ಬಲಗೈಯ ತಾನಿಟ್ಟುದೊಂದೇ ಕಾಂಬುದಂದು). ಬಲಗೈಯಿಂದ ಮೌರ್ವಿಯನ್ನು ಕಿವಿಯತನಕ ಎಳೆದು, ತನ್ನ ಕರ್ಣಭಾಗದಿಂದ ಶರಗಳನ್ನು ಎಸೆಯುತ್ತಲಿದ್ದನು. ಆ ಸಿಂಜಿನಿಯು ಬಾಣಗಳನ್ನು ಪ್ರಸವಿಸುವಂತೆ (ಹೆರುವಂತೆ, ಉತ್ಪಾದಿಸುವಂತೆ, ಸೃಷ್ಟಿಸುವಂತೆ) ತೋರಿತು (ನಾರಿ ದಲ್ ಪೆತ್ತವೋಲ್). ಧಾರಾಕಾರದಲ್ಲಿ, ನಿರಂತರವಾಗಿ, ಒಂದರಬೆನ್ನೊಂದು ಬಾಣಗಳು ಹೊರಡುತ್ತಲಿದ್ದುವು. ಕಿವಿಯ ಮೂಲವು ಬಾಣಗಳು ಸೃಷ್ಟಿಯಾಗುವ ಗರ್ಭಪಾತ್ರೆಯಂತೆ ತೋರಿತು. ಅರಿಗಳಿಗೆ ಮಾರಕವಾದ ಅಸ್ತ್ರಗಳನ್ನು ಉತ್ಪಾದಿಸುವ ಯಂತ್ರ, ಅದೊಂದು ಲಕ್ಷ್ಯವಿಲ್ಲದೆ ಮಾಡುವ ಕೈಚಳಕದ ವ್ಯಾಪಾರದಂತೆ (ಇಂದ್ರಜಾಲ, ಮಹೇಂದ್ರಜಾಲ) ತೋರಿತು. ಶತ್ರುಗಳ ಬಗ್ಗೆ ಎಳ್ಳಷ್ಟು ಲಕ್ಷ್ಯವಿಲ್ಲದೆ ಶರಸಂಘಾತದ ಕಾರ್ಯದಲ್ಲಿ (ಶರಸಂಧಾನದಲ್ಲಿ) ಮಗ್ನನಾಗಿದ್ದನು, ಆ ಸಮರೈಕವೀರನು.

ಆಜೌ=ಸಂಗ್ರಾಮೇ—ತೂಣಮುಖೇನ=ನಿಷಂಗವಿವರೇಣ—ವ್ಯಾಪಾರಯನ್ನಲಕ್ಷ್ಯತ = ಶರಸಂಧಾನಾದಯಸ್ತುದುರ್ಲಕ್ಷ್ಯಾ ಇತ್ಯರ್ಥಃ ॥ ಉತ್ಪ್ರೇಕ್ಷಾಲಂಕಾರ ॥

**58. ಸರೋಷದಷ್ಟಾಧಿಕಲೋಹಿತೋಷ್ಠೈಃ ।**
**ವ್ಯಕ್ತೋರ್ಧ್ವರೇಖಾಭ್ರುಕುಟೀರ್ವಹದ್ಭಿಃ ॥**
**ತಸ್ತಾರ ಗಾಂ ಭಲ್ಲನಿಕೃತ್ತ ಕಂಠೈಃ ।**
**ಹೂಂಕಾರಗರ್ಭೈಃ ದ್ವಿಷತಾಂ ಶಿರೋಭಿಃ ॥ ೫೮ ॥**

ವೈರಿಶಿರಗಳು "ಭಲ" ಎಂಬ ಬಲವಾದ ಬಾಣಾವಳಿಗಳಿಂದ ಕತ್ತರಿಸಲ್ಪಟ್ಟು ಕೆಳಗುರುಳುತ್ತಿದ್ದುವು. ರಣರಂಗದಲ್ಲಿ ತಲೆಗಳು ತರಗೆಲೆಗಳಂತೆ (ಬೆಜಕರೆ-ತೌಳವಭಾಷೆ) ಹರಡಿದ್ದುವು. ಆ ಶೂರರಾದ ವೀರರ ತಲೆಗಳಲ್ಲಿ ರೋಷಭೀಷಣಗಳಾದ ಕೆಂಪಾದ ಕಣ್ಣುಗಳು ಮುಂಡದಿಂದ ಪ್ರತ್ಯೇಕಿಸಲ್ಪಟ್ಟರೂ ಆ ವೀರರ ಬಾಯಿಗಳಿಂದ ಹೂಂಕಾರವನ್ನು, ಪ್ರತಿಭಟನೆಯ ಕೂಗನ್ನು ಮತ್ತೂ ಉಚ್ಚರಿಸುತ್ತಲೇ ಇದ್ದುವು. ಆ ವೀರರು ಯುದ್ಧಮಾಡುತ್ತಿದ್ದಾಗ ಗರ್ವದಿಂದ ಔಡು ಕಚ್ಚಿದುದರಿಂದ ತುಟಿಗಳು ಮತ್ತಷ್ಟು ರಂಗೇರಿದ್ದುವು. ಮತ್ತಷ್ಟು ಕೆಂಪಾಗಿ ಕಾಣಿಸುತ್ತಲಿದ್ದುವು. ಅವರು ಹುಬ್ಬುಗಂಟಿಕ್ಕಿ, ತೀಕ್ಷ್ಣದೃಷ್ಟಿಯಿಂದ ಯೋಧರು ಪರಸ್ಪರ ನೋಡುತ್ತಿದ್ದುದರಿಂದ, ಆ ಶಿರಗಳಲ್ಲಿ ಬದ್ಧಭ್ರುಕುಟಿಗಳಾಗಿರ್ದ ಛಾಯೆ ಹಾಗೆಯೇ ಅಚ್ಚೊತ್ತಿದಂತೆ ಕಾಣಿಸುತ್ತಿತ್ತು. ಹಣೆಯ ಮೇಲಿನ ಗೆರೆಗಳು ಇನ್ನೂ ಅಳಿಯದೆ ಮೇಲಕ್ಕೆ ಏರುತ್ತಿದ್ದಹಾಗೆ ಸುಸ್ಪಷ್ಟವಾಗಿ ಕಾಣಿಸುತ್ತಿದ್ದುವು (ಪುರ್ಬುಗಂಟಿಕ್ಕಿರ್ದ ಊರ್ಧ್ವರೇಖೆಯೊಳು ಮೆರೆದು).

ಭ್ರುಕುಟೀ = ಭ್ರೂಭಂಗಾನ್ವಹದ್ಭಿಃ—ಭಲ್ಲನಿಕೃತ್ತಕಂಠಾ = ಬಾಣವಿಶೇಷಚ್ಛಿನ್ನಾಃ ಯೇಷಾಂ ತೈಃ—ಹೂಂಕಾರಭೈಃ = ಛಾದಯಾಮಾಸ ॥

**59. ಸರ್ವೈರ್ಬಲಾಂಗೈಃ ದ್ವಿರದಪ್ರಧಾನೈಃ ।**
**ಸರ್ವಾಯುಧೈಃ ಕಂಕಟಭೇದಿಭಿಶ್ಚ ॥**
**ಸರ್ವಪ್ರಯತ್ನೇನ ಚ ಭೂಮಿಪಾಲಾಃ ।**
**ತಸ್ಮಿನ್ ಪ್ರಜಹ್ರುಃ ಯುಧಿ ಸರ್ವ ಏವ ॥ ೫೯ ॥**

ಗಜಸೇನೆಯೇ ಅಧಿಕಪ್ರಾಮುಖ್ಯತೆಯಿರುವ (ದ್ವಿರದಪ್ರಧಾನವಾದಾ ಸರ್ವಬಲನಿಂದು) ಹಸ್ತಿ, ಅಶ್ವ, ರಥ, ಪದಾತಿಗಳೆಂಬ ಭಾರತೀಯ ಮಾದರಿಯ ಚತುರ್ವಿಧ ಸೇನಾಂಗಗಳು ಸರ್ವಾಯುಧಗಳಿಂದ ಅಜನ ಮೇಲೆ ಪ್ರಹಾರಮಾಡಿದರು. ಸರ್ವನೃಪರು ಸರ್ವಾಯುಧಗಳನ್ನು ಹಿಡಿದು, ಸರ್ವಪ್ರಯತ್ನದಿಂದ ಅಜನ ಮೇಲೇರಿಬಂದರು. ಅನೇಕ ವೀರರು ಒಬ್ಬ ಮಹಾವೀರನ ಮೇಲೆ ಕೈಮಾಡಿದರು (ಜಂಟಿಕಾರ್ಯಾಚರಣೆ).

ದ್ವಿರದಪ್ರಧಾನೈಃ= ಗಜಮುಖ್ಯೈಃ—ಸರ್ವೈರ್ಬಲಾಂಗೈಃ=ಸೇನಾಂಗೈಃ—ಕಂಕಟಭೇದಿಭಿಃ =ಕವಚಭೇದಿಭಿಃ—ಪ್ರಜಹ್ರುಃ = ತಂ ಪ್ರಜಹುರಿತ್ಯರ್ಥಃ ॥

**60. ಸೋಽಸ್ತ್ರವ್ರಜೈಶ್ಛನ್ನರಥಃ ಪರೇಷಾಂ ।**
**ಧ್ವಜಾಗ್ರಮಾತ್ರೇಣ ಬಭೂವ ಲಕ್ಷ್ಯಃ ॥**
**ನೀಹಾರಮಗ್ನೋ ದಿನಪೂರ್ವಭಾಗಃ ।**
**ಕಿಂಚಿತ್ಪ್ರಕಾಶೇನ ವಿವಸ್ವತೇವ ॥ ೬೦ ॥**

ಆದರೆ ಅಜನ ಮುಂದೆ ಯಾರ ಬೇಳೆಕಾಳೂ ಬೇಯುವಂತಿರಲಿಲ್ಲ. ನಾಲ್ಕು ಕಡೆಗಳಿಂದಲೂ ಎಸೆಯಲ್ಪಡುವ ಶತ್ರು ಅಸ್ತ್ರಗಳ ಜಂಝಾಟದಿಂದ ಅಜಕುಮಾರನ ರಥವು (ತೇರು, ಬಂಡಿ) ಸಂಪೂರ್ಣವಾಗಿ ಮುಚ್ಚಿಹೋದರೂ ರಥಾಗ್ರದಲ್ಲಿರುವ ರಾಷ್ಟ್ರ ಧ್ವಜವು ಸ್ಪಷ್ಟವಾಗಿ ಗೋಚರಿಸುತ್ತಿತ್ತು (ರಿಪುಶಸ್ತ್ರಸಂಛನ್ನನಾದಜನು ಕೇತುಮಾತ್ರ ಮೊಳೆ). ಅಂತಹ ಭೀಷಣಯುದ್ಧವು ಸಂಗ್ರಾಮಭೂಮಿಯಲ್ಲಿ ನಡೆಯುತ್ತಿತ್ತು. ಅದು ಹೇಗೆಂದರೆ—ಪ್ರಾತಃಕಾಲದ ಪೂರ್ವಭಾಗದಲ್ಲಿ ಸುತ್ತಲೂ ಮಂಜು ಕವಿದಿದ್ದರೂ ಬಾಲ ಸೂರ್ಯನನ್ನು ಕಿರಣಗಳ ಬೆಳಕಿನಿಂದ ಜನರು (ಲೋಗರು) ತಿಳಿಯುವಂತೆ ಅರಿತು ಕೊಂಡರು. ಆ ಬೆಳಕನ್ನು ಮಂಜುಹನಿ ತಡೆದರೂ, ಅದು ಆ ಮಂಜಲುಗಳನ್ನು ದಾಟಿ ಬಂದು ಬಾಲಸೂರ್ಯನ ಇರವು (ಅಸ್ತಿತ್ವ) ಪ್ರಪಂಚಕ್ಕೆ (ಪೃಥ್ವಿಗೆ) ಗೋಚರಿಪಂತೆ ಅಜಕುಮಾರನು ತನ್ನ ಪ್ರತಾಪಾಗ್ನಿಯಿಂದ, ವಿಕ್ರಮಾಗ್ನಿಯ ತೇಜಸ್ಸಿನಿಂದ ಕಾಣಿಸಿ ಕೊಂಡನು.

ದಿನಪೂರ್ವಭಾಗಃ = ಪ್ರಾತಃಕಾಲಃ—ಧ್ವಜಾಗ್ರಮಾತ್ರೇಣ ಲಕ್ಷ್ಯೋ ಬಭೂವ = ಧ್ವಜಾಗ್ರದನ್ಯನ್ನ ಕಿಂಚಿಲ್ಲಕ್ಷ್ಯತೇ ಸ್ಮೇತ್ಯರ್ಥಃ ॥

**61. ಪ್ರಿಯಂವದಾತ್ಪ್ರಾಪ್ತಮಸೌ ಕುಮಾರಃ ।**
**ಪ್ರಾಯುಂಕ್ತ ರಾಜಸ್ವಧಿರಾಜಸೂನುಃ ॥**

**ಗಾಂಧರ್ವಮಸ್ತ್ರಂ ಕುಸುಮಾಸ್ತ್ರಕಾಂತಃ ।**
**ಪ್ರಸ್ವಾಪನಂ ಸ್ವಪ್ನನಿವೃತ್ತಲೌಲ್ಯಃ ॥ ॥ ೬೧ ॥**

ಕುಸುಮಾಸ್ತ್ರವನ್ನು ಕೈಯಲ್ಲಿ ಧರಿಸಿ ರತಿರಾಜನಾದ ಕಾಮದೇವನಂತೆ ಮದನ ಸುಂದರಕಾಯನಾದ, ಅಧಿರಾಜಪುತ್ರನಾದ, ಆ ಅಜಕುಮಾರನು ಈ ಹಿಂದೆ ಧರ್ಮರಾಜ ನಾದ ಪ್ರಿಯಂವದನು ಇತ್ತ ಗಾಂಧರ್ವಾಸ್ತ್ರವನ್ನು ರಿಪುಗಳ ಮೇಲೆ ಎಸೆದು ಜೇಗೆಯ್ದನು. ಆ ಗಂಧರ್ವದೇವತಾಕವಾದ ಪ್ರಸ್ವಾಪನಾಸ್ತ್ರದಿಂದ ಅರಸರನ್ನು ಎಚ್ಚನು (ಪ್ರಸ್ವಾ ಪನಾಸ್ತ್ರದಿಂದೆಚ್ಚನರಸನು). ಇದು ಆ ಮಹಾಸಮ್ಮೋಹನಾಸ್ತ್ರ. ಎಲ್ಲರನ್ನೂ ಕ್ಷಣಮಾತ್ರ ದಲ್ಲಿ ನಿದ್ರಿಸುವಂತೆ, ನಿದ್ರಾಲೋಲರಾಗುವಂತೆ, ತನಿನಿದ್ರೆಯಲ್ಲಿ ಮುದ್ರಿತರಾಗುವಂತೆ ಮಾಡಬಲ್ಲ ಮಹಾಸ್ತ್ರ. ಆದರೆ ಆ ನಿದ್ರಾಜನಕವಾದ ದಿವ್ಯಶರವನ್ನು ಹೂಡಿದ ಅಜೇಯವೀರನಾದ ಅಜಕುಮಾರನು ತಾನು ಮಾತ್ರ ನಿದ್ರಿಸದೆ ಜಾಗರೂಕಾವಸ್ಥೆ ಯಲಿದ್ದನು.

ಸ್ವಪ್ನನಿವೃತ್ತಲೌಲ್ಯಃ = ಸ್ವಪ್ನೇ ನಿವೃತ್ತಂ ಲೌಲ್ಯಂ ಯಸ್ಯ—ಅಧಿರಾಜಸೂನು = ಮಹಾರಾಜಪುತ್ರಃ—ಕುಸುಮಾಸ್ತ್ರಕಾಂತೋ=ಮದನಸುಂದರಃ—ಸ್ವಪ್ನನಿವೃತ್ತಲೌಲ್ಯಃ = ಸ್ವಪ್ನವಿತೃಷ್ಣಃ, ಜಾಗರೂಕ ಇತ್ಯರ್ಥಃ—ಗಾಂಧರ್ವೇ = ಗಂಧರ್ವದೇವತಾಕಮ್ ॥

**62. ತತೋ ಧನುಷ್ಕರ್ಷಣಮೂಢಹಸ್ತಂ ।**
**ಏಕಾಂಸಪರ್ಯಸ್ತ ಶಿರಸ್ತ್ರಜಾಲಮ್ ॥**
**ತಸ್ಥೌ ಧ್ವಜಸ್ತಂಭನಿಷಣ್ಣದೇಹಂ ।**
**ನಿದ್ರಾವಿಧೇಯಂ ನರದೇವಸೈನ್ಯಮ್ ॥ ೬೨ ॥**

ಆ ನರದೇವರ ಸೈನಿಕರು ನಿದ್ರಾದೇವಿಗೆ ವಿಧೇಯರಾಗಿ ನಿದ್ರೆಯಲ್ಲಿ ವ್ಯಾಮುಗ್ಧರಾಗಿ ಮಲಗಿದರು. ಆ ರಾಜಾಧಿರಾಜರು ತಮ್ಮ ಕೈಯಲ್ಲಿ ಬಿಲ್ಲನ್ನು ಧರಿಸಿದಂತೆಯೇ ಹಾಗೆಯೇ ತಟಸ್ಥವಾಗಿ ಗಾಢವಾದ ನಿದ್ರೆಯಿಂದ ಆವರಿಸಲ್ಪಟ್ಟು ಧ್ವಜಸ್ತಂಭಕ್ಕೆ ಒರಗಿ ಕುಳಿತರು. ಅವರ ಮಸ್ತಕದಲ್ಲಿದ್ದ ಶಿರಸ್ತ್ರಾಣವು ಜೋಲ್ದು ಭುಜದ ಒಂದು ಭಾಗಕ್ಕೆ ಇಳಿಯಿತು. ಅವರೆಲ್ಲ ಗಾಢವಾದ ಸುಷುಪ್ತಿಯಲ್ಲಿ (ನಿದ್ರಾವಿಧೇಯರೆನೆ) ಸ್ವಪ್ನಜಾಲದಲ್ಲಿ ಏನೊಂದು ಪರಿವೆಯಿಲ್ಲದೆ ಮುಳುಗಿ ಏಳುತ್ತಲಿದ್ದರು. ಅವರ ದೇಹವು ಸಣ್ಣದಾಗಿ, ಮುದುಡಿ, ಧ್ವಜಸ್ತಂಭಕ್ಕೆ (ಧ್ವಜದಂಡಕ್ಕೆ, ಕೇತುದಂಡಕ್ಕೆ) ಒರಗಿ ಕುಳಿತು ನಿದ್ರಾಲೋಲರಾಗಿ ತಮ್ಮ ಬುದ್ಧಿಸ್ವಾತಂತ್ರ್ಯವನ್ನು ಕಳೆದುಕೊಂಡು ನಿರ್ವೀರ್ಯರಾಗಿ, ಸ್ತಂಭೀಭೂತರಾಗಿ ಇರುತ್ತಿದ್ದರು (ನಿದ್ರಾವಿಧೇಯರೆನೆ ಕೇತನಸ್ತಂಭದೊಳು).

ನಿದ್ರಾವಿಧೇಯಮ್ = ನಿದ್ರಾಯಾಃ ವಿಧೇಯಮ್—ಧನುಷ್ಕರ್ಷಣೇ = ಚಾಪ ಕರ್ಷಣೇ—ಮೂಢಹಸ್ತ = ಮುವ್ಯಾಪೃತಹಸ್ತಮ್—ಶಿರಸ್ತ್ರಾಣಾಂ = ಶೀರ್ಷಣ್ಯಾನಾಂ ಜಾಲಂ = ಸಮೂಹೋ ಯಸ್ಯ ತತ್—ನರದೇವಾನಾಂ = ರಾಜ್ಞಾಂ—ಸೇನೈವ = ಸೈನ್ಯಮ್—ನಿದ್ರಾವಿಧೇಯಂ = ನಿದ್ರಾಪರತಂತ್ರಂ ತಸ್ಥೌ ॥

**63. ತತಃ ಪ್ರಿಯೋಪಾತ್ತರಸೇಽಧರೋಷ್ಠೇ ।**
**ನಿವೇಶ್ಯ ದಧ್ಮೌ ಜಲಜಂ ಕುಮಾರಃ ॥**

ತೇನ ಸ್ವಹಸ್ತಾರ್ಜಿತಮೇಕವೀರಃ ।
ಪಿಬನ್ಯಶೋಮೂರ್ತಮಿವಾವಭಾಸೇ ॥ ೬೩ ॥

ಆ ಬಳಿಕ ಅಜಕುಮಾರನು ತನ್ನ ಬಾಯಿಯಿಂದ ವಿಜಯದ ಕುರುಹಾಗಿ ಅಮಲಶಂಖವನ್ನು ಊದಿ ಶಂಖನಾದವನ್ನು ಮಾಡಿದನು. ಆ ದಿವ್ಯವಾದ ಶಂಖನಾದದ ಮಂಗಳಕರವಾದ ಶಬ್ದವು ಘಂಟಾಘೋಷದಂತೆ ರಣರಂಗದ ಎಲ್ಲೆಡೆ ಕೇಳಿಸಿತು. ತನ್ನ ಇನಿಯಳಾದ ಇಂದುಮತೀದೇವಿಯು ಮಧುರವಾದ ಅಧರೋಷ್ಠಗಳಿಂದ ಈಂಟಿದ, ನಿರ್ಮಲವಾದ ನೀರಿನಲ್ಲಿ ಉದಿಸಿದ ಆ ಮಹಾಶಂಖವನ್ನು ಊದಿ ಜಯದುಂದುಭಿಯನ್ನು ಮೊಳಗಿದನು (ತನ್ನಿನಿಯೆ ರಸವೀಂಟಿದ ಇನಿದುಟಿಯೊಳು). ಶುಭ್ರವಾದ ಯಶಸ್ಸನ್ನು ಪಾನಮಾಡುವಂತೆ (ಕೀರ್ತಿಯನ್ನು ಹೀರುವಂತೆ) ಆ ಕುಮಾರನು ನಾದವನ್ನು ಮಾಡಿ ತನ್ನ ಸೈನಿಕವೃಂದಕ್ಕೆ ಅಮಿತಾನಂದದ ಒಸಗೆಯನ್ನಿತ್ತನು.

ಪ್ರಿಯಯೇಂದುಮತ್ಯೋಪಾತ್ತರಸ = ಆಸ್ವಾದಿತ ಮಾಧುರ್ಯೇ, ಅತಿಶ್ಲಾಘ್ಯ ಇತಿ ಭಾವಃ—ಅಧರೋಷ್ಠೇ ಜಲಜಂ = ಶಂಖಂ ನಿವೇಶ್ಯ—ದಧ್ಮೌ = ಮುಖಮಾರುತೇನ ಪೂರಯಾಮಾಸ ॥

64. ಶಂಖಸ್ವನಾಭಿಜ್ಞತಯಾ ನಿವೃತ್ತಾನ್ ।
ತಂ ಸನ್ನಶತ್ರುಂ ದದೃಶುಃ ಸ್ವಯೋಧಾಃ ॥
ನಿಮೀಲಿತಾನಾಮಿವ ಪಂಕಜಾನಾಂ ।
ಮಧ್ಯೇ ಸ್ಫುರಂತಂ ಪ್ರತಿಮಾಶಶಾಂಕಮ್ ॥ ೬೪ ॥

ಆ ಕುಮಾರನು ವಿಜಯದ ಸಂಕೇತವಾಗಿ ಮಾಡಿದ ಶಂಖಧ್ವನಿಯನ್ನು ಕೇಳಿ ತಮ್ಮ ರಾಜನ ಶಂಖಸ್ವನವೆಂದರಿತು ಸೇನಾಯೋಧರು ಕೂಡಲೇ ರಾಜಕುಮಾರನ ಬಳಿಗೆ ಬಂದು ಕಲೆತರು. ಆಗ ಅವರ ಕಣ್ಣಿಗೆ ನಿದ್ರಿಸುವ ಶತ್ರುರಾಜರ ಮಧ್ಯೆ ಥಳಥಳಿಸುವ ಚಂದ್ರಮನಂತೆ ಕಾಣುವ ಕಣ್ಮಣಿಯಾದ ರಾಜಕುಮಾರನನ್ನು ಕಂಡು ಆನಂದಿತರಾದರು. ಆ ರಾಜರ ತಾವರೆಯ ಎಸಳಿನಂತಹ ಕಣ್ಣುಗಳು ಮುಚ್ಚಿದ್ದುವು. ಮುಖಕಮಲವು ತಮಸ್ಸಿನಿಂದ ಆವರಿಸಲ್ಪಟ್ಟು ಮುದುಡಿದ ತಾವರೆಯ ಹೂವಿನಂತೆ ಕಾಣುತ್ತಿತ್ತು (ಮುಕುಳಿತ ಸರೋಜಮಧ್ಯದೊಳೆಸೆವ). ಇಂತಹ ಮುಕುಳಿತ ತಾವರೆಹೂಗಳಿಂದ ನಿಬಿಡವಾಗಿರುವ ಹೂಗೊಳದ ಮಧ್ಯದಲ್ಲಿ ಥಳಥಳನೆ ಪ್ರತಿಬಿಂಬಿಸುತ್ತಾ ಹೊಳೆಯುತ್ತಿರುವ ಅಮೃತಕಿರಣಗಳನ್ನು ಸೂಸುತ್ತಿರುವ ಚಂದ್ರನ ಪ್ರತಿಬಿಂಬದಂತೆ (ಶಶಾಂಕಪ್ರತಿಮನು) ಅಜಕುಮಾರನು ರಾರಾಜಿಸುತ್ತ ನಿಂತಿರುವುದನ್ನು ಆ ಭಟರು ಈಕ್ಷಿಸಿ ಹರ್ಷನಾದಗೈದರು.

ಅಭಿಜ್ಞತಯಾ = ಪ್ರತ್ಯಭಿಜ್ಞಾತತಯಾ—ನಿಮೀಲಿತಾನಾಂ = ಮುಕುಲಿತಾನಾಂ—ಪ್ರತಿಮಾಶಶಾಂಕಃ = ಪ್ರನಿಬಿಂಬಚಂದ್ರಮಿವ ॥

65. ಸಶೋಣಿತೈಸ್ತೇನ ಶಿಲೀಮುಖಾಗ್ರೈಃ ।
ನಿಕ್ಷೇಪಿತಾಃ ಕೇತುಷು ಪಾರ್ಥಿವಾನಾಮ್ ॥
ಯಶೋಹೃತಂ ಸಂಪ್ರತಿ ರಾಘವೇಣ ।
ನ ಜೀವಿತಂ ವಃ ಕೃಪಯೇತಿ ವರ್ಣಾಃ ॥ ೬೫ ॥

ಆ ರಘುಪುತ್ರನು ದಯೆಗೈದು ವೈರಿರಾಜರ ಬಾವುಟಗಳ ಮೇಲೆ ತನ್ನ ಬಾಣಗಳ ತುದಿಯನ್ನು ರಕ್ತದೊಳದ್ದಿ ರಕ್ತಾಕ್ಷರಗಳಲ್ಲಿ ಹೀಗೆ ಬರೆದನು. "ಹೇ ರಾಜಕುಲವರ್ಧನರೆ, ಇಂದು ನಾನು ನಿಮ್ಮ ಯಶಸ್ಸನ್ನು, ಕೀರ್ತಿಯನ್ನು, ಪೌರುಷವನ್ನು ಸಮರದಲ್ಲಿ ವಿಜೇತನಾಗಿ ಅಪಹರಿಸಿರುವೆನು. ಆದರೆ ನಿಮಗೆ ಜೀವದಾನ (ಪ್ರಾಣದಾನ) ನೀಡಿ ನಿಮ್ಮನ್ನು ಉಳಿಸಿ ಕೃಪೆಗೈದಿರುವೆನು." (ಯಶವನಪಹರಿಸಿ, ದಯೆಗೈದು. ನಿಮ್ಮನಿಂದುಳುಹಿದೆನು.)

ಅನ್ವಯ :—ಸಂಪ್ರತಿ ರಾಘವೇಣ ವಃ ಯಶಃ ಹೃತಂ ಜೀವಿತಂ (ತು) ಕೃಪಯಾ ನ (ಹೃತಮ್) ಇತಿ ವರ್ಣಾಃ ಸಶೋಣಿತೈಃ ಶಿಲೀಮುಖಾಗ್ರೈಃ ಪಾರ್ಥಿವಾನಾಂ ಕೇತುಷು ತೇನ ನಿಕ್ಷೇಪಿತಾಃ ॥

ಯಶೋಹೃತಂ = ವೋ ಯುಷ್ಮಾಕಂ—ವರ್ಣಾಃ = ಇತ್ಯೇವಂ ರೂಪಾ—ಶಿಲೀಮುಖಾಗ್ರೈಃ = ಬಾಣಾಗ್ರೈಃ—ಪಾರ್ಥಿವಾನಾಂ = ರಾಜ್ಞಾಂ—ಕೇತುಷು = ಧ್ವಜಸ್ತಂಭೇಷು ॥

**66. ಸಚಾಪಕೋಟೀ ನಿಹಿತೈಕಬಾಹುಃ ।**
**ಶಿರಸ್ತ್ರನಿಷ್ಕರ್ಷಣಭಿನ್ನಮೌಲಿಃ ॥**
**ಲಲಾಟಬದ್ಧಶ್ರಮವಾರಿಬಿಂದುಃ ।**
**ಭೀತಾಂ ಪ್ರಿಯಾಮೇತ್ಯ ವಚೋ ಬಭಾಷೇ ॥ ೬೬ ॥**

ಆ ರಾಘವನು ಯುದ್ಧದಲ್ಲಿ ಜಯಭೇರಿ ಹೊಡೆದು ತನ್ನ ಇನಿಯಳ (ಕಾದಲೆ, ನಲ್ಲೆ) ಬಳಿಗೆ ತೆರಳಿದನು. ತನ್ನ ಒಂದು ತೋಳನ್ನು ಬಿಲ್ಲ ತುದಿಯಲ್ಲಿ ತಾನಿರಿಸಿ, ಮೆಲ್ಲನೆ ತನ್ನ ತಲೆಯ ಶಿರಸ್ತ್ರಾಣವನ್ನು ತೆಗೆದಿಟ್ಟನು. ತನ್ನ ಮೈಗಾಪಿಗೆ ಧರಿಸಿದ ವಜ್ರಕವಚವನ್ನು ಬಿಚ್ಚಿದನು. ಶಿರಸ್ತ್ರಾಣವನ್ನು ಕೆಳಗಿರಿಸಿದಾಗ ಅವನ ತಲೆಗೂದಲ ಗಂಟು ಸಡಿಲಾಯಿತು. ಬಿಚ್ಚಿದ ತಲೆಗೂದಲಿನಿಂದ ಕಂಗೊಳಿಸುತ್ತಲಿದ್ದನು. ಆ ಮಹಾವೀರನ ಹಣೆಯಲ್ಲಿ ಶ್ರಮದ ಬೆವರಹನಿಗಳು ಕಾಣಿಸುತ್ತಿದ್ದುವು. ಇಂತಹ ಸಲ್ಲಕ್ಷಣಗಳಿಂದೊಪ್ಪುವ ಅಜಕುಮಾರನು ಭಯಾಕುಲೆಯಾದ ತನ್ನ ಪ್ರಿಯೆ (ಪ್ರಿಯತಮೆ) ಇಂದುಮತಿಗೆ ವಿಜಯದ ವಾರ್ತೆಯನ್ನು ತಿಳಿಸಿ ಆಕೆಯನ್ನು ಸುತ್ತೈಸಲು ಅವಳ ಬಳಿಗೆ ಭರದಿಂದ ಪೋದನು.

ಭಿನ್ನಮೌಲಿಃ = ಶ್ಲಥಕೇಶಬಂಧಃ—"ಚೂಡಾಕಿರೀಟಂ ಕೇಶಾಶ್ಚ ಸಂಯತಾ ಮೌಲಯಸ್ತ್ರಯಃ" ಇತ್ಯಮರಃ ॥

**67. ಇತಃ ಪರಾನರ್ಭಕಹಾರ್ಯಶಸ್ತ್ರಾನ್ ।**
**ವೈದರ್ಭಿ ಪಶ್ಯಾನುಮತಾ ಮಯಾಸಿ ॥**
**ಏವಂ ವಿಧೇನಾಹವಚೇಷ್ಟಿತೇನ ।**
**ತ್ವಂ ಪ್ರಾರ್ಥ್ಯಸೇ ಹಸ್ತಗತಾ ಮಮೈಭಿಃ ॥ ೬೭ ॥**

ಹೇ ವೈದರ್ಭಿ, ಇತ್ತ ನೋಡು. ನಿನ್ನನ್ನು ಭಯಾಕುಲೆಯಾಗುವಂತೆ ಮಾಡಿದ ಈ ಮಾನವಾಧಿಪರ ಪಾಡು ನಗೆಪಾಟಲಾಗಿದೆಯಲ್ಲವೆ ? ಅವರೀಗ ಕುಂಭಕರ್ಣಗಾಢನಿದ್ರೆಯಲ್ಲಿ (ದೀರ್ಘನಿದ್ರೆಯಲ್ಲಿ) ಸಂವಿರುವರು. ಇದೀಗ ಈ ದುರ್ಮಾರ್ಗಿಗಳ ಕೈಯೊಳ

ಗಿರುವ ಶಸ್ತ್ರಾಸ್ತ್ರಗಳು (ಅಸ್ತ್ರನಿಚಯಗಳನ್ನು) ಒಂದು ಮಗುವು ಸಹ ಆಟದ ಸಾಮಾನು ಗಳನ್ನು ಕಸಿದು ತಂದಿರುವಂತೆ ತರಬಹುದು (ಮಕ್ಕಳು ಕೈದುಮೆಳೆವೊಲಿರುವ). ಹೇ **ಭಾಮೆ** (ಪ್ರಾಣವಲ್ಲಭೆ), ನನ್ನ ಅನುಮತಿಯಿಂದ ಅವರೆಲ್ಲರನ್ನು ಕಣ್ಣಾರೆ ನೋಡು. ನೀನಿಂದು ಭದ್ರವಾಗಿ ನನ್ನ ಹಿಡಿತದಲ್ಲಿರುವೆ. ಈ ಯುದ್ಧದ ಚೇಷ್ಟೆಯಿಂದ ಅವರು ನಿನ್ನನ್ನು ಸ್ವಾಧೀನ ಪಡಿಸಬೇಕೆಂದಿದ್ದರು. ಈಗ ಅವರೇ ಪರಾಜಿತರಾಗಿ ನಿದ್ರೆಯ ಅಮಲಿನಲ್ಲಿ ನಿಶ್ಚೇಷ್ಟಿತರಾಗಿ ಇಂಗುತಿಂದ ಮಂಗನಂತೆ ತೂಕಡಿಸುತ್ತಲಿರುವರು. ಭ್ರಮಾ ಲೋಕದಲ್ಲಿ ವಿಹರಿಸುತ್ತಿರುವರು.

ಅರ್ಭಕಹಾರ್ಯಶಸ್ತ್ರಾನ್ = ಬಾಲಕಾಪಹಾರ್ಯಾಯುಧಾನ್—ಹೇ ವೈದರ್ಭಿ = ಇಂದುಮತಿ ॥

**68.** **ತಸ್ಯಾಃ ಪ್ರತಿದ್ವಂದ್ವಿಭವಾದ್ವಿಷಾದಾತ್ ।**
**ಸದ್ಯೋ ವಿಮುಕ್ತಂ ಮುಖಮಾಬಭಾಸೇ ॥**
**ನಿಃಶ್ವಾಸಬಾಷ್ಪಾಪಗಮಾತ್ಪ್ರಪನ್ನಃ ।**
**ಪ್ರಸಾದಮಾತ್ಮೀಯಮಿವಾತ್ಮದರ್ಶಃ** ॥ ೬೮ ॥

ಹೀಗೆ ಹೇಳಿದೊಡನೆಯೇ ಆಕೆಯ ಮುಖಭಾವವು ಬದಲಾಯಿತು. ಮುಖಚಂದ್ರವು ಷೋಡಶಕಲೆಯ ಪೌರ್ಣಮಿಯ ಚಂದ್ರನಂತೆ ಪ್ರಫುಲ್ಲಿತವಾಯಿತು. ಮೊಗವು ತಿಳಿಯಾ ಯಿತು. ಅಂತರಂಗವನ್ನು ಬಾಧಿಸುತ್ತಿದ್ದ ಸಂಕಷ್ಟದ ಸರಮಾಲೆಗಳು ದೂರವಾದುವು ಸಂಕಷ್ಟಗಳಿಂದ ವಿಮುಕ್ತಿಹೊಂದಿದಳು. ಆಕೆಯ ದಂದುಗವು ಅಳಿಯಿತು. ಕನ್ನಡಿಯಲ್ಲಿ ಹರಡಿರುವ ಉಸಿರ ಬಿಸಿಯ ಬಾಷ್ಪಾನಿಲವು ಆರಿದಬಳಿಕ ಪ್ರತಿಬಿಂಬವು ಅಥವಾ ಆತ್ಮ ಸ್ವರೂಪವು ನಿಜಕಾಂತಿಯಿಂದ ಕಾಣಿಸುವಂತೆ, ಆಕೆಯ ವದನಾರವಿಂದವು ನಿಜಕಾಂತಿ ಯನ್ನು ತಳೆದು ಶೋಭಿಸಿತು (ಕನ್ನಡಿಯೊಳು ಉಸಿರ ಬಿಸಿ ಆರಿದೊಡನೆ ಎಸೆಯುವೊಲು).

ನಿಃಶ್ವಾಸಯೋ ಭಾಷ್ಪ ಊಷ್ಮಾ—"ಬಾಷ್ಪೋ ನೇತ್ರಜಲೋಷ್ಮಣೋಃ" ಇತಿ ವಿಶ್ವಃ—ಆತ್ಮದರ್ಶೋ ದರ್ಪಣ ಇವ ॥

**69.** **ಹೃಷ್ಟಾಪಿ ಸಾ ಹ್ರೀವಿಜಿತಾ ನ ಸಾಕ್ಷಾತ್ ।**
**ವಾಗ್ಭಿಃ ಸಖೀನಾಂ ಪ್ರಿಯಮಭ್ಯನಂದತ್ ॥**
**ಸ್ಥಲೀ ನವಾಂಭಃ ಪೃಷತಾಭಿವೃಷ್ಟಾ ।**
**ಮಯೂರಕೇಕಾಭಿರಿವಾಭ್ರವೃಂದವತ್** ॥ ೬೯ ॥

ಆ ಇಂದುಮತಿಯು ತನ್ನ ಪತಿಯ ಪೌರುಷದ ಬಗ್ಗೆ ಪ್ರಮುದಿತಹೃದಯಳಾದಳು. ಆ ವಿಜಯಮಹೋತ್ಸವದ ಬಗ್ಗೆ ಅತ್ಯಂತ ಸಂತಸಗೊಂಡರೂ, ಸ್ತ್ರೀಸಹಜವಾದ ನಾಚಿಕೆಯಿಂದ ಮಾತನಾಡದಾದಳು. ತನ್ನ ಪ್ರಿಯತಮನೊಡನೆ ಪ್ರಶಂಸೆಯ ಒಂದೆರಡು ಮಾತುಗಳನ್ನಾಡಲು ನಾಚಿ ತನ್ನ ಬಳಿಯೊಳಿರುವ ಕೆಳದಿಯ (ಗೆಳತಿಯ) ಮೂಲಕ ತನ್ನ ಒಲವಿನ ನುಡಿಗಳನ್ನು ಆಡುವಂತೆ ಸೂಚಿಸಿದಳು. ಅದು ಹೇಗೆಂದರೆ ಹೊಸ ಮಳೆಗೆ ಒಣಭೂಮಿಯು ನಲಿಯುತ್ತಲಿದ್ದರೂ ಭೂಮಾತೆಯು ತನ್ನ ಕೃತಜ್ಞತೆಯನ್ನು ಮಳೆ

ಯನ್ನು ಸುರಿಸುವ ಮೋಡಗಳಿಗೆ ನವಿಲುಗಳ (ಮಯೂರಗಳ) ಕೇಕಾರವದ ಮೂಲಕ ಕಳ್ಳಿಸುವಂತೆ ಆ ಕಮಲನಯನೆಯು, ತನ್ನ ಪ್ರಿಯತಮನಿಗೆ ಸಖಿಯ ಮೂಲಕ ಅಂತರಂಗದ ಒಲವ ಸಲ್ಲಿಸಿದಳು (ಹೊಸ ಮಳೆಗೆ ನಲಿಯುವಿಳೆ ಮೋಡವನು ನವಿಲುಗಳ ಕೇಕೆಯೊಳು).

ಸ್ವಯಂ ನಾಭ್ಯನಂದನ್ನಪ್ರಶಶಂಸ ಸ—ಅಭ್ರವೃಂದಂ ಮೇಘಸಂಘಂ ಮಯೂರ ಕೇಕಾಭಿರಿವ ಸಖೀನಾಂ ವಾಗ್ಭಿರಭ್ಯನಂದತ್ = ತಥೇಂದುಮತೀ ಪ್ರಮೀತಾಪಿ ಹ್ರಿಯಾ ಲಜ್ಜಾ ಪರವಶಾ ಸಖೀನಾಂ ವಾಗ್ಭಿಃ ಸ್ತುತಿವಚನೈರಜಮಭ್ಯನಂದತ್—ಯದ್ಯಪಿ ಕೇಕಾ ಶಬ್ದೇನ ಮಯೂರಧ್ವನಿಲಬ್ಧಸ್ತಥಾಪಿ ॥

70. ಇತಿ ಶಿರಸಿ ಸಾ ವಾಮಂ ಪಾದಮಾದಾಯ ರಾಜ್ಞಾಂ ।
ಉದವಹದನವದ್ಯಾಂ ತಾಮವದ್ಯಾದಪೇತಃ ॥
ರಥತುರಗರಜೋಭಿಃ ತಸ್ಯ ರೂಕ್ಷಾಲಕಾಗ್ರಾ ।
ಸಮರವಿಜಯಲಕ್ಷ್ಮೀಃ ಸೈವ ಮೂರ್ತಾ ಬಭೂವ ॥ ೭೦ ॥

ಆ ದೋಷರಹಿತನಾದ, ಧರ್ಮಾತ್ಮನಾದ, ಸಮರೈಕವೀರನೆನಿಸಿದ ಅಜಕುಮಾರನು ನೂರಾರು ಮಂದಿ ನೃಪರೊಡನೆ ನಿಖರವಾದ ಕಾಳಗದಲ್ಲಿ ಹೋರಾಡಿ ಅವರನ್ನು ಸೋಲಿಸಿ, ಆ ನೃಪರ ನೆತ್ತಿಯ ಮೇಲೆ ತನ್ನ ವಾಮಪಾದ(ಎಡಗಾಲು)ವನ್ನಿರಿಸಿ ನೃಪರ ತಲೆಯ ಮೇಲೆ ವಾಮಪಾದವಿಳುಹುತೆ) ಸಮರದಲ್ಲಿ ತನ್ನ ವಿಜಯವನ್ನು ಸಾರುತ್ತ ದೋಷರಹಿತಳಾದ ತನ್ನ ಸತಿ ಮಂಗಳಾಂಗಿ (ಶುಭಾಂಗಿ) ಇಂದುಮತಿಯನ್ನು ಮೋದದಿಂದ ನಲಿಯುತ್ತ ಒಯ್ದನು. ಅವಳಾದರೋ ಆ ಸಮರಭೂಮಿಯಲ್ಲಿ ತನ್ನ ಪತಿಯೊಡನೆ ನಿಂತಿರುವ ಸಮರವಿಜಯಲಕ್ಷ್ಮಿಯಂತೆ ತೋರ್ದಳು. ಆಕೆಯ ಮುಂಗುರುಳು ರಣಭೂಮಿಯ ತೇರ ಕುದುರೆಗಳಿಂದ ಎದ್ದ ಧೂಳಿಂದ ಮುಸುಕು ಗೊಂಡಿತ್ತು (ತೇರ ಕುದುರೆಯಿಂದ ಎದ್ದ ಧೂಳು ಮುಂಗುರುಳನು ಮುಸುಕುಗೊಳಿಸಿರೆ). ಆ ರಣಭೂಮಿಯನ್ನು ಅವಲೋಕಿಸಿದರೆ ಸಾಕ್ಷಾತ್ ಮೂರ್ತಿಗೊಂಡ ಸಮರ ದೇವತೆಯಾದ ವಿಜಯಲಕ್ಷ್ಮಿಯಂತೆ ಎಸೆಯುತ್ತಾ ರಣಧೀರಕಂಠೀರವನಾದ ತನ್ನ ಪ್ರಾಣಪತಿಯೊಡನೆ ಜೊತೆಗೂಡಿ ಶೋಭಿಸುತ್ತಿದ್ದಳು.

ಅನ್ವಯ :—ಅವದ್ಯಾದಪೇತಃ ಸಃ ಇತಿ ರಾಜ್ಞಾಂ ಶಿರಸಿ ವಾಮಂ ಪಾದಮಾಧಾಯ ಅನವದ್ಯಾಂ ತಾಮ್ ಉದವಹತ್ । ತಸ್ಯ ರಥತುರಗರಜೋಭಿಃ ರೂಕ್ಷಾಲಕಾಗ್ರಾ ಸಾ ಏವ ಮೂರ್ತಾ ಸಮರ ಲಕ್ಷ್ಮೀಃ ಬಭೂವ ॥

ರಥ ತುರಗರಜೋಭಿಃ ತಸ್ಯ ರೂಕ್ಷಾಲಕಾಗ್ರಾ = ತೇರಕುದುರೆಯಿಂದ ಎದ್ದ ಧೂಳು ಮುಂಗುರುಳನ್ನು ಮುಸುಕುಗೊಳಿಸಿರೆ—ಸಮರವಿಜಯಲಕ್ಷ್ಮೀ = ಸಮರಲಕ್ಷ್ಮೀ ಎನುವ ತೆರದೆ—ಮೂರ್ತಾಬಭೂವ = ಮೂರ್ತಿವುತ ತೆರದಿ ಎಸದಿರೆ.

71. ಪ್ರಥಮಮುಪರಿಗತಾರ್ಥಃ ತಂ ರಘುಃ ಸನ್ನಿವೃತ್ತಂ ।
ವಿಜಯಿನಮಭಿನಂದ್ಯ ಶ್ಲಾಘ್ಯ ಜಾಯಾಸಮೇತಮ್ ॥

**ತದುಪಹಿತಕುಟುಂಬಃ ಶಾಂತಿಮಾರ್ಗೋತ್ಸುಕೋಽಭೂತ್ ।**
**ನ ಹಿ ಸತಿ ಕುಲಧುರ್ಯೇ ಸೂರ್ಯವಂಶ್ಯಾ ಗೃಹಾಯ ॥ ೭೧ ॥**

ರಘುವು ಎಲ್ಲ ವಿಷಯವನ್ನು ಈ ಮೊದಲೇ ಅರಿತಿದ್ದನು. ತನ್ನ ಸುತನ ವಿವಾಹ ವರ್ತಮಾನವನ್ನೂ ಅನಂತರ ನಡೆದ ಮಹಾಯುದ್ಧದಲ್ಲಿ ಜಯಶೀಲನಾಗಿ, ಶ್ಲಾಘ್ಯಳಾದ ಜಾಯೆಯೊಡನೆ ಅಜನು ಬರುತ್ತಿರುವುದನ್ನು ತಿಳಿದು ಆನಂದತುಂದಿಲನಾಗಿ ತನ್ನ ಮಗನನ್ನಪ್ಪಿ ಹೊಗಳ್ದನು (ಶ್ಲಾಘ್ಯಜಾಯೆಯೊಡನೆ ಬಂದ ವಿಜಯಿಯಜನ ಪೊಗಳ್ದನು) ಆ ಬಳಿಕ ರಘುವು ಸೂರ್ಯಕುಲದ ಅರಸರು ಈ ಹಿಂದೆ ನಡೆದ ರೀತಿಯಲ್ಲೇ ತಾನೂ ನಡೆದು, ತನ್ನ ವಂಶಗೌರವಕ್ಕೆ ಸರಿಯಾದ ಸುಧೀರಪುತ್ರನು ಹುಟ್ಟಿರಲು ಅವನ ಮೇಲೆ ಸಂಸಾರದ ಹಾಗೂ ರಾಜ್ಯಭಾರದ ಹೊಣೆಗಾರಿಕೆಯನ್ನು (ನೊಗವನ್ನು) ಅವನ ಮೇಲಿರಿಸಿ (ಒಳಿಯು ಹೊರೆಯು ಅವನೊಳಿಳುಹಿ) ತಾನು ತನ್ನ ಸತಿಸಹಿತ ತಪಕ್ಕೆಂದು ಅರಣ್ಯಕ್ಕೆ ನಡೆದನು. ಶಾಂತಿಯ ಜೀವನವನ್ನು ಬಯಸಿ ಗೃಹಸ್ಥಾಶ್ರಮವನ್ನು ತ್ಯಜಿಸಿದನು. ಕೊನೆಯದಾದ (ತುರೀಯ) ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ತಪೋವನಕ್ಕೆ ನಡೆದನು. ತನ್ನ ವೃದ್ಧಾಪ್ಯವನ್ನು ಭಗವಂತನ ಧ್ಯಾನದಲ್ಲಿ, ವ್ರತಾನುಷ್ಠಾನಗಳಲ್ಲಿ ಕಳೆಯುವಂತೆ ತನ್ನ ಪೂರ್ವಜರು ಹಾಕಿಕೊಟ್ಟ ದಾರಿಯಲ್ಲಿ ಮುಂದುವರಿದನು.

ಅನ್ವಯ :—ಪ್ರಥಮಪರಿಗತಾರ್ಥಃ ರಘುಃ ವಿಜಯಿನಂ ಶ್ಲಾಘ್ಯಜಾಯಾಸಮೇತಂ ಸನ್ನಿವೃತ್ತಂ ತಮಜಮ್ ಅಭಿನಂದ್ಯ ತಸ್ಮಿನ್ ಉಪಹಿತಕುಟುಂಬಃ (ಸನ್) ಶಾಂತಿಮಾರ್ಗೋತ್ಸುಕೋಽಭೂತ್ । ಕುಲಧುರ್ಯೇ ಸತಿ ಸೂರ್ಯವಂಶ್ಯಾಃ ಗೃಹಾಯ ನ ಹಿ ॥

ಶಾಂತಿಮಾರ್ಗೇ = ಮೋಕ್ಷಮಾರ್ಗ— ಕುಲಧುರ್ಯೇ = ಕುಲಧುರಂಧರೇ— ಗೃಹಾಯ = ಗೃಹಸ್ಥಾಶ್ರಮಾಯ—ರಘುರ್ವಿಜಯಿನಂ = ವಿಜಯಯುಕ್ತಂ—ಶ್ಲಾಘ್ಯಜಾಯಾಸಮೇತಂ = ಶ್ಲಾಘ್ಯಜಾಯೆಯೊಡನೆ ಬಂದ.

# ಅಷ್ಟಮ ಸರ್ಗಃ
# ಎಂಟನೆಯ ಸರ್ಗ

**1. ಅಥ ತಸ್ಯ ವಿವಾಹಕೌತುಕಂ ।**
**ಲಲಿತಂ ಬಿಭ್ರತ ಏವ ಪಾರ್ಥಿವಃ ॥**
**ವಸುಧಾಮಪಿ ಹಸ್ತಗಾಮಿನೀಂ ।**
**ಅಕರೋದಿಂದುಮತೀಮಿವಾಪರಾಮ್** ॥ ೧ ॥

ಅಜನು ಲಲಿತವಾದ ವಿವಾಹಸಮಾರಂಭದಲ್ಲಿ ಆಶ್ವಲಾಯನ ಗೃಹ್ಯಸೂತ್ರದಲ್ಲಿ ಹೇಳಿದ ವಿಧಿವಿಧಾನದಂತೆ ಕೌತುಕವೆಂಬ ಹೆಸರಿನ ವಿವಾಹಸೂತ್ರವನ್ನು ತನ್ನ ಕೈಯ ಮಣಿಗಂಟಿನಲ್ಲಿ ಧರಿಸಿ ಭೋಜಕನ್ಯೆ ಇಂದುಮತಿಯ ಪಾಣಿಗ್ರಹಣವನ್ನು ಮಾಡಿಕೊಂಡನು (ಲಲಿತವೈವಾಹಕೌತುಕವನ್ನಾಂತಜನ ಕೈಗಳಲಿ). ಅಜನ ಪಿತನಾದ ರಘುವು ಅತ್ಯಂತ ಪ್ರೀತಿಯಿಂದ ವಸುಂಧರೆಯೆಂಬ ರಾಜ್ಯವಧುವನ್ನು ಇನ್ನೊಬ್ಬ ಇಂದುಮತಿಯಂತೆ ತನ್ನ ಮಗನ ಕೈಯಲ್ಲಿರಿಸಿ ರಾಜ್ಯಪಟ್ಟಾಭಿಷೇಕವನ್ನು ಮಾಡಿ ತನ್ನ ಜವಾಬ್ದಾರಿಯನ್ನು ಇಳಿಸಿಕೊಂಡನು. ಮಗನಿಗೆ ಪಟ್ಟಕಟ್ಟಿ ತಾನು ಹರ್ಷಗೊಂಡನು.

ಅನ್ವಯ :—ಅಥ ಪಾರ್ಥಿವಃ ಲಲಿತಂವಿವಾಹಕೌತುಕಂ ಬಿಭ್ರತಃ ಏವ ತಸ್ಯ ಅಪರಾಮ್ ಇಂದುಮತೀಮಿವ ವಸುಧಾಮಪಿ ಹಸ್ತಗಾಮಿನೀಮ್ ಅಕರೋತ್ ॥

ವಿವಾಹಕೌತುಕಂ = ವಿವಾಹಮಂಗಲಂ ವಿವಾಹಹಸ್ತಸೂತ್ರಂ = "ಕೌತುಕಂ ಮಂಗಲೇ ಹರ್ಷೇ ಹಸ್ತಸೂತ್ರೇ ಕುತೂಹಲೇ" ಇತಿ ಶಾಶ್ವತಃ ॥ ವೈತಾಲೀಯಂ ಛಂದಃ (ಅಸ್ಮಿನ್ ಸರ್ಗೇ)

**2. ದುರಿತೈರಪಿ ಕರ್ತುಮಾತ್ಮಸಾತ್ ।**
**ಪ್ರಯತಂತೇ ನೃಪಸೂನವೋ ಹಿ ಯತ್ ॥**
**ತದುಪಸ್ಥಿತಮಗ್ರಹೀದಜಃ ।**
**ಪಿತುರಾಜ್ಞೇತಿ ನ ಭೋಗತೃಷ್ಣಯಾ** ॥ ೨ ॥

ಪುತ್ರನಲ್ಲಿರಬೇಕಾದ ಸರ್ವಶ್ರೇಷ್ಠ ಗುಣದಿಂದ ಮೆರೆಯುತ್ತಿರುವ ಅಜಕುಮಾರನು ತನ್ನ ತಂದೆಯ ಇಷ್ಟಾರ್ಥದಂತೆ (ಅಯ್ಯನಾಣತಿಯಿಂದ ಅಜನು) ಸಮಸ್ತಸಾಮ್ರಾಜ್ಯವನ್ನು ತನ್ನ ತಂದೆಯಿಂದ ಪ್ರೀತಿಪೂರ್ವಕ ಪಡೆದುಕೊಂಡನು. ಇದು ಭೋಗತೃಷ್ಣೆಯಿಂದಲ್ಲ (ಭೋಗೇಚ್ಛೆಗಲ್ಲು). ಅವನು ತನ್ನ ತಂದೆಯ ಆಜ್ಞೆಯನ್ನು ಶಿರಸಾವಹಿಸಿ ಪಟ್ಟಾಭಿಷಿಕ್ತನಾದನು. ವಂಶಪಾರಂಪರ್ಯವಾಗಿ ಬರಬೇಕಾದ ರಾಜ್ಯವನ್ನು ನ್ಯಾಯ ರೀತಿಯಿಂದ, ರಾಜಧರ್ಮಕ್ಕೆ ಅನುಗುಣವಾಗಿ, ಅನ್ಯಾಯ, ಅಧರ್ಮದಿಂದ ಅಲ್ಲ.

ಅನ್ವಯ :—ನೃಪಸೂನವೋ ಯತ್ ದುರಿತೈಃ ಅಪಿ ಆತ್ಮಸಾತ್ ಕರ್ತುಂ ಪ್ರಯತಂತೇ

ಓ ಉಪಸ್ಥಿತಂ ತತ್ (ರಾಜ್ಯಮ್) ಅಜಃ ಪಿತುರಾಜ್ಞಾ ಇತಿ ಅಗ್ರಹೀತ್ ಭೋಗ ತೃಷ್ಣಯಾ (ತು) ನ ॥

ಆತ್ಮಸಾತ್=ಆತ್ಮನ್ + ಸಾತ್—ಅವಧಾರಣ—ಪ್ರಯತಂತೇ ಏವ—ನೃಪಸೂನವೋ = ರಾಜಪುತ್ರಾ—ದುರಿತೈರಪಿ=ವಿಷಪ್ರಯೋಗಾದೀನಿಷಿದ್ಧೋಪಾಯೈರಪಿ—ಆತ್ಮಸಾತ್ = ಸ್ವಾಧೀನಮ್—ಕರ್ತುಂ ಪ್ರಯತಂತೇ ಹಿ=ಪ್ರವರ್ತಂತ ಏವೇತ್ಯರ್ಥಃ—ಉಪಸ್ಥಿತಂ= ಸ್ವತಃ ಪ್ರಾಪ್ತಂ ತದ್ ರಾಜ್ಯಮ್ ॥

3. ಅನುಭೂಯ ವಸಿಷ್ಠಸಂಭೃತೈಃ ।
ಸಲಿಲೈಃ ತೇನ ಸಹಾಭಿಷೇಚನಮ್ ॥
ವಿಶದೋಚ್ಛ್ವಸಿತೇನ ಮೇದಿನೀ ।
ಕಥಯಾಮಾಸ ಕೃತಾರ್ಥತಾಮಿವ ॥ ೩ ॥

ಪೂಜ್ಯರಾದ ಗುರುವಸಿಷ್ಠರು ಪಟ್ಟಾಭಿಷೇಕದ ಸುಮುಹೂರ್ತದಲ್ಲಿ ನಡೆಸಿದ ಸಲಿಲಾಭಿಷೇಕದಿಂದ ಭೂದೇವಿಯು ಮುದವಡೆದಳು (ಸಲಿಲದ ಸಹಾಭಿಷೇಚನದ). ಗಂಗಾ, ಯಮುನಾ, ಗೋದಾವರಿ, ಕಾವೇರಿ ಮೊದಲಾದ ಪುಣ್ಯನದಿಗಳ ಪವಿತ್ರ ಜಲದಿಂದ ಯುವರಾಜಪಟ್ಟಾಭಿಷೇಕಗೊಂಡಾಗ, ಭೂಮಾತೆಯೂ ಸೇಚನಗೊಂಡಳು. ತನ್ನನ್ನು ಆಳಲು ಯೋಗ್ಯ ಭರ್ತಾರನು ಸಿಕ್ಕಿದನು ಎಂದು ಕೃತಾರ್ಥತೆಯ ಮನೋಭಾವ ವನ್ನು ತಾಳ್ದಳು ಎಂಬಂತೆ ಭೂಮಾತೆಯು ಬೆಳ್ಳಗಾಗಿ, ಸಿತೋಚ್ಛ್ವಸಿತೆಯಾಗಿ ಕಾಣಿಸಿದಳು. ಹಾಲು, ತುಪ್ಪ, ನೀರು ಇವೇ ಮೊದಲಾದ ಹವಿಸ್ಸಿನಿಂದ ಭೂದೇವಿ ಧವಳ ವರ್ಣವು ತಳೆದು ತಾನು ಗಹಗಹನೆ ನಗುತಿರುವಂತೆ ಕಾಣಿಸಿದಳು (ಮೇದಿನಿ ಕೃತಾರ್ಥ ತೆಯು ಕಥಯಿಸುವಂತೆಸೆದಳೆಂದು).

ಅನ್ವಯ :—ಮೇದಿನೀ ವಸಿಷ್ಠಸಂಭೃತೈಃ ಸಲಿಲೈಃ ತೇನ ಸಹ ಅಭಿಷೇಚನಮ್ ಅನುಭೂಯ ವಿಶದೋಚ್ಛ್ವಸಿತೇನ ಕೃತಾರ್ಥತಾಮಿವ ಕಥಯಾಮಾಸ ॥

ಮೇದಿನೀ = ಭೂಮಿರ್ಮಹಿಷೀ—ವಸಿಷ್ಠೇನ ಸಂಭೃತೈಃ = ವಸಿಷ್ಠನು ನೆಗಳ್ದ— ಸಲಿಲೈಸ್ತೇನಾಜೇನ = ಸಲಿಲದ—ಸಹಾಭಿಷೇಚನಮನುಭೂಯ = ಸಹಾಭಿಷೇಚನದ ಮುದವಡುತೆ—ಅನುಭೂಯ = ಸಂತೋಷಿಸಿ—ವಿಶದೋಚ್ಛ್ವಸಿತೇನ = ಆನಂದನಿರ್ಮ ಲೋಚ್ಛ್ವಸಿತೇನ ಚೇತಿ ಧ್ವನ್ಯತೇ—ಕೃತಾರ್ಥತಾಂ = ಸಾಫಲ್ಯಂ—ಕಥಯಾಮಾಸೇವ = ಕಥಯಿಪಂತೆ. ಉತ್ಪ್ರೇಕ್ಷಾಲಂಕಾರ ॥

4. ಸ ಬಭೂವ ದುರಾಸದಃ ಪರೈಃ ।
ಗುರುಣಾಥರ್ವವಿದಾಕೃತಕ್ರಿಯಃ ॥
ಪವನಾಗ್ನಿಸಮಾಗಮೋ ಹ್ಯಯಂ ।
ಸಹಿತಂ ಬ್ರಹ್ಮಯದಸ್ತ್ರತೇಜಸಾ ॥ ೪ ॥

ಅಥರ್ವವೇದದ ವಿಧಿವಿಧಾನಗಳಿಂದ, ಅಥರ್ವವೇದವಿಜ್ಞಾನವನ್ನು ಬಲ್ಲ ಗುರುಗಳು ನಡೆಸಿದ ರಾಜ್ಯಪಟ್ಟಾಭಿಷೇಕಮಹೋತ್ಸವದ ವಿಧಿಗಳಿಂದ, ಸಂಸ್ಕಾರಗಳಿಂದ ಅಜನು

ದುರಾಸದನಾದನು, ವೈರಿಗಳಿಗೆ ಅಜೇಯನೆನಿಸಿದನು. ಆತನು ಬ್ರಹ್ಮತೇಜಸ್ಸನ್ನು ಬೆರೆದ ಕ್ಷಾತ್ರತೇಜವುಳ್ಳ ಮಹಿಮನಾದನು. ಉದಾತ್ತಪುರುಷೋತ್ತಮನಾದನು. ಆತನು ಕ್ಷತ್ರಿಯನಾಗಿ ಅಸ್ತ್ರತೇಜಸ್ಸನ್ನೂ ಪಡೆದಿದ್ದನು. ಈಗ ಅದರ ಜೊತೆಗೆ ಬ್ರಹ್ಮರ್ಷಿಗಳಾದ ವಸಿಷ್ಠರಿಂದ ಬ್ರಹ್ಮತೇಜಸ್ಸನ್ನು (ಬ್ರಹ್ಮತೇಜಂ ಬೆರೆದ ಕ್ಷಾತ್ರವೆಂನಲು) ಪಡೆದು ರಾರಾಜಿಸಿದನು. ಅವನು ಬೆಂಕಿಯೊಡನೆ ಗಾಳಿಯು (ವಾಯುವು) ಸೇರಿದಂತೆ, ತನ್ನ ಕ್ಷತ್ರತೇಜದೊಡನೆ ಬ್ರಹ್ಮತೇಜದ ಸೇರ್ಪಡೆಯಾಗಿ, ಗಾಳಿ ಮತ್ತು ಬೆಂಕಿ ಜೊತೆಗೂಡಿದಂತೆ, ಹೂವಿಗೆ ಗಂಧ ಸೇರಿದಂತೆ (ಹಕ್ಕಿಗೆ ರೆಕ್ಕೆ ಬಂದಂತೆ) ಅನಲಾನಿಲನಯೋಗದಂತೆ ತಾನು ನಿಂದು ಭಾಸ್ಕರತೇಜದಿಂದ ವಿರಾಜಿಸಿದನು.

ಕೃತಾಭಿಷೇಕಸಂಸ್ಕಾರ ಇತ್ಯರ್ಥಃ—ಶತ್ರುಭಿರ್ದುರಾಸದೋ=ದುರ್ಧರ್ಷೋ ಬಭೂವ—ಅಸ್ತ್ರತೇಜಸಾ = ಕ್ಷತ್ರತೇಜಸಾ—ಪವನಾಗ್ನಿಸಮಾಗಮೋ ಹಿ = ಅನಲಾನಿಲನಯೋಗದಲ್ ತಾನು—ಬ್ರಹ್ಮಾಕ್ಷತ್ರೇ ತು ಸಂಯುಕ್ತೇ ಇಹಾಮುತ್ರ ಚ ವರ್ಧತೇ ಇತಿ॥

5. ರಘುಮೇವ ನಿವೃತ್ತಯೌವನಂ ।
ತಮಮನ್ಯಂತ ನವೇಶ್ವರಂ ಪ್ರಜಾಃ ॥
ಸ ಹಿ ತಸ್ಯ ನ ಕೇವಲಾಂ ಶ್ರಿಯಂ ।
ಪ್ರತಿಪೇದೇ ಸಕಲಾನ್ಗುಣಾನಪಿ ॥ ೫ ॥

ಜನಾನುರಾಗಿಯಾದ ರಘುನೃಪತಿಯು ರಾಜ್ಯಾಡಳಿತೆಯಿಂದ ನಿವೃತ್ತಿಹೊಂದಿದನು. ಈಗ ಪುನಃ ತಮ್ಮ ದೊರೆಯು ಹರೆಯವನ್ನು ತಳೆದು (ಮರಳಿ ಹರೆಯಂ ಬೆತ್ತ ರಘುನೃಪನೆಯೆಂದು) ನಿವೃತ್ತಿಯಾದ ಯೌವನವು ಪುನಃ ಅವೃತ್ತಿಯಾದಂತೆ, ಪುನಃ ಜವ್ವನಿಗನಾಗಿ ತಮ್ಮನ್ನಾಳಲು ನವೇಶ್ವರನಾಗಿ (ಪ್ರಜಾವತ್ಸಲನಾಗಿ) ಬಂದಂತೆ ಜನರು (ಪ್ರಜೆಗಳು) ಭಾವಿಸಿದರು. ಕಾರಣ ಸಕಲಸದ್ಗುಣಗಳ ನಿಧಿಯೆನಿಸಿದ, ತಾರುಣ್ಯದಿಂದ ಅಭಿವರ್ಧಿಸುತ್ತಿರುವ ಪುತ್ರರತ್ನನನ್ನು ಪಡೆದಿದ್ದನು. ರಾಜ್ಯಭಾರದ ಹೊರೆಯನ್ನು ತಾನು ಇಳುಹಿದನು (ಯೋಗ್ಯನಾದ ರಾಜಪ್ರತಿನಿಧಿಯಲ್ಲಿ). ಆ ಪುತ್ರಶ್ರೇಷ್ಠನು ತನ್ನ ತಂದೆಯ ಸಕಲೈಶ್ವರ್ಯ ಮಹಾನ್‌ಸಾಮ್ರಾಜ್ಯವನ್ನು ಪಡೆದುದು ಮಾತ್ರವಲ್ಲ, ತಂದೆಯ ದಾಕ್ಷಿಣ್ಯ, ಸೌಜನ್ಯಾದಿ ಸಕಲಸದ್ಗುಣಗಳ ಗುಣಧರ್ಮವನ್ನೂ ಪಡೆದಿದ್ದನು. ಸಕಲಸದ್ಗುಣಯೋಗವನ್ನು ಪಡೆದ ರಾಜಕುಮಾರನು ತಾನಾಗಿದ್ದನು (ಸಿರಿಯೊಂದನೆಯೆ ಕೊಳದೆ).

ನಿವೃತ್ತಯೌವನಂ = ಪ್ರತ್ಯಾವೃತ್ತಯೌವನಂ = ಮರಳಿ ಹರೆಯಂ ಪಡೆದ ರಘುನೃಪನೆಯೆಂದು—ಕಿಂತು ಸಕಲಾನ್ ಗುಣಾನ್ = ಶೌರ್ಯದಾಕ್ಷಿಣ್ಯಾದೀನಪಿ ಪ್ರತಿಪೇದೇ—ನ ಕೇವಲಾಂ ಶ್ರಿಯಂ = ಸಿರಿಯೊಂದನೆಯೆ ಕೊಳದೆ—ನಿವೃತ್ತಯೌವನಂ = ನಿವೃತ್ತ ಪ್ರತ್ಯಾವೃತ್ತಯೌವನಂ ಯಸ್ಯ॥

6. ಅಧಿಕಂ ಶುಶುಭೇ ಶುಭಂಯುನಾ ।
ದ್ವಿತಯೇನ ದ್ವಯಮೇವ ಸಂಗತಮ್ ॥
ಪದಮೃದ್ಧಮಜೇನ ಪೈತೃಕಂ ।
ವಿನಯೇನಾಸ್ಯ ನವಂ ಚ ಯೌವನಮ್ ॥ ೬ ॥

ಈ ತೆರನಾಗಿ ಎರಡು ಶುಭಕರಗಳಾದ, ಮಂಗಳಕರವಾದ ಸುವಸ್ತುಗಳು ಸೇರಿ ಶುಭಾನ್ವಿತವಾದುವು. ಪಿರಿದೆನಿಸಿದುವು ಲೋಕದಲ್ಲಿ. ತಂದೆಯ ಪದವಿಯೆನಿಸಿದ ಪಿತ್ರಾರ್ಜಿತ ರಾಜ್ಯವು ಅಜಕುಮಾರನು ಪಟ್ಟಾಭಿಷಿಕ್ತನಾಗಿ ರಾಜನಾದುದರಿಂದ ಸುಖೀ, ಸಂಪತ್ತು, ಸಮೃದ್ಧಿಯ ರಾಜ್ಯವಾಗುವ ಭರವಸೆಯನ್ನು ಹೊಂದಿತು. ಅಂತೆಯೇ ಅಜನ ನವಯೌವನಶ್ರೀಯು ಇಂದ್ರಿಯವಿಜಯ, ವಿನಯಾದಿ ಸದ್ಗುಣಗಳ ಸಂಯೋಗದಿಂದ ಆಧಿಕ್ಯವನ್ನು ಹೊಂದಿತು. ಹೀಗೆ ಶುಭಕರವಾದ ವಸ್ತುಗಳ ಸೇರುವಿಕೆಯಿಂದ ಶುಭಾನ್ವಿತವಾದುವು (ಶುಭಕರಗಳಾಯೆರಡರೊಡವೆರೆದು). ಮೊದಲೇ ಉತ್ತಮವಾಗಿದ್ದುವು. ಈಗ ಎರಡರ ಜೋಡಿ ಉತ್ತಮೋತ್ತಮವೆನಿಸಿ ಏಳ್ಗೆಗೊಂಡುವು. ಒಂದೆಡೆಯಲ್ಲಿ ಅಜನೂ, ಅಜನ ಪಿತನ ಬೃಹತ್ ಸಾಮ್ರಾಜ್ಯವು ಒಂದಾದುವು. ಇನ್ನೊಂದೆಡೆ ಅಜನ ಯೌವನ ಶ್ರೀಯೊಂದಿಗೆ ಇಂದ್ರಿಯವಿಜಯ-ವಿನಯಾದಿ ಸಕಲಸದ್ಗುಣಗಳು ಬೆರೆತಿರುವುದು. ಈ ತೆರನಾದ ಪಿರಿದೆನಿಸಿದ ಜೋಡಿ ಎಲ್ಲೂ ಕಾಣಸಿಗದು.

ಶುಭಯುಜಾ = ಶುಭವತಾ—"ಶುಭಂ ಯುಸ್ತು, ಶುಭಾನ್ವಿತಃ" ಇತ್ಯಮರಃ—ಪೈತೃಕಂ = ಪಿತುರಾಗತಮ್—ಯೌವನಮಪಿ ನಯೇನೇಂದ್ರಿಯಜಯೇನ ಚ—ಯೌವನೇ ವಿನಯಸ್ತು ದುರ್ಲಭಃ ॥

**7. ಸದಯಂ ಬುಭುಜೇ ಮಹಾಭುಜಃ ।**
**ಸಹಸೋದ್ವೇಗಮಿಯಂ ವ್ರಜೇದಿತಿ ॥**
**ಅಚಿರೋಪನತಾಂ ಸ ಮೇದಿನೀಂ ।**
**ನವಪಾಣಿಗ್ರಹಣಾಂ ವಧೂಮಿವ** ॥ ೭ ॥

ಆ ಮಹಾಭುಜನು ತನ್ನ ಸಾಮ್ರಾಜ್ಯಲಕ್ಷ್ಮಿಯು ಭಯದಿಂದ ಬೆದರುವಳೆಂದು ದಯೆಯಿಂದಲೇ ಆಳಿದನು (ದಯಂದಿ ಅನುಭವಿಸಿದನು ಆ ಮಹಾಭುಜನು). ತನ್ನಲ್ಲಿ ಅಧಿಕ ಬಲವಿದ್ದರೂ ತೋರಗೊಡದೆ, ಅಶಾಂತಿ ತಲೆದೋರಬಹುದೆಂದು, ಹೊಸತಾಗಿ ಮದುವೆಯಾದ ಕನ್ಯೆಯನ್ನು (ನವೋಢಾಂಗನೆಯ ತೆರದೊಳಜನು) ನವವಧುವಿನ ಸ್ನೇಹವನ್ನು ಸಂಪಾದಿಸುವಂತೆ (ದಯಾದಿ ಸದ್ಗುಣಗಳಿಂದ) ಮೇದಿನಿಯನ್ನು ಕರ್ತವ್ಯದಕ್ಷತೆಯಿಂದ, ಚತುರತೆಯಿಂದ ಆಳಿದನು. ಬಲಾತ್ಕಾರದಿಂದ ಭಯವು ತಲೆದೋರಬಹುದೆಂದು ಅರಿತು ಸದಯಹೃದಯನಾಗಿ ಕೃಪಾವಲೋಕನದಿಂದ ಸಹಿಷ್ಣುವಾಗಿ ಶಾಂತಿಯಿಂದ, ಎಚ್ಚರಿಕೆಯಿಂದ ಆಳಿದನು.

ನವಂ ಪಾಣಿಗ್ರಹಣಂ ವಿವಾಹೋ ಯಸ್ಯಾಸ್ತಾಂ ನವೋಢಾಂವಧೂಮಿವ—ಉದ್ವೇಗಂ = ಭಯಂ—ವ್ರಜೇದಿತಿ = ಹೇತೋಃ—ಸದಯಂ=ಸಕೃಪಂ—ಬುಭುಜೇ=ಭುಕ್ತವಾನ್ ॥

**8. ಅಹಮೇವ ಮತೋ ಮಹೀಪತೇಃ ।**
**ಇತಿ ಸರ್ವಃ ಪ್ರಕೃತಿಷ್ವಚಿಂತಯತ್ ।**
**ಉದಧೇರಿವ ನಿಮ್ನಗಾಶತೇ ।**
**ಷ್ವಭವನ್ನಾಸ್ಯ ವಿಮಾನನಾ ಕ್ವಚಿತ್** ॥ ೮ ॥

ಅಜನ ರಾಜ್ಯವೊಂದು ಸುಖೀರಾಜ್ಯ (ಧರ್ಮಸಾಮ್ರಾಜ್ಯ, ದೇವಸಾಮ್ರಾಜ್ಯ), ಭೂಸ್ವರ್ಗ. ಪ್ರತಿಯೊಬ್ಬ ಪ್ರಜೆಯು ಸುಖಿಯಾಗಿ ಸಂತುಷ್ಟನಾಗಿದ್ದನು. ಹೀಗಾದುದ ರಿಂದ ಪ್ರತಿಯೊಬ್ಬನೂ ತಾನೊಬ್ಬನೇ ಅತ್ಯಂತ ಹೆಚ್ಚು ಮಾನ್ಯನು, ಅರಸನ ಅತ್ಯಂತ ಹೆಚ್ಚಿನ ಪ್ರೀತಿಗೆ ಪಾತ್ರನಾದವನು ಎಂದು ಪ್ರತಿಯೊಬ್ಬ ಪ್ರಜೆಯು ಭಾವಿಸಿದನು. ಹೇಗೆ ನೂರಾರು ನದಿಗಳನ್ನು ಒಳಕೊಂಡ ಸಮುದ್ರವು ಯಾವ ತರದ ಭೇದಭಾವ, ತಾರತಮ್ಯ ವನ್ನು ತೋರದೆ ತನ್ನಲ್ಲಿ ಸಂಗಮಿಸಿ ಐಕ್ಯಗೊಳ್ಳುವಂತೆ ಆ ರಾಜಾಧಿರಾಜನು (ನೂರಾರು ಹೊಳೆಗಳನು ಕಡಲೆಂತು ಅಂತು) ಪ್ರಜಾವತ್ಸಲನಾಗಿ ಪ್ರಜೆಗಳನ್ನು ಮಕ್ಕಳಂತೆ ಪ್ರೇಮ ದಿಂದ ಪಾಲಿಸುತ್ತಿದ್ದನು. ಪ್ರಜೆಗಳೆಲ್ಲರೂ ಕ್ಷೇಮಿಗಳಾಗಿದ್ದರು.

ನಿಮ್ನಗಾ = ನಿಮ್ನಂ ಗಚ್ಛತಿ ಇತಿ = ನದಿ, ತೊರೆ, ತೋಡು, ಕಾಲುವೆ—ಮಹೀಪತೇ ರ್ಮತೋ = ಮಹೀಪತಿನಾ ಮನ್ಯಮಾನಃ—ಮತಿಬುದ್ಧಿಪೂಜಾರ್ಥೇಭ್ಯಶ್ಚ (ಪಾಣಿನಿ) ॥ ಕ್ವಚಿದಪಿ = ಜನವಿಷಯೇ ॥

**೯. ನ ಖರೋ ನ ಚ ಭೂಯಸಾ ಮೃದುಃ ।**
**ಪವಮಾನಃ ಪೃಥಿವೀರುಹಾನಿವ ॥**
**ಸ ಪುರಸ್ಕೃತಮಧ್ಯಮಕ್ರಮೋ ।**
**ನಮಯಾಮಾಸ ನೃಪಾನನುದ್ಧರನ್ ॥ ೯ ॥**

ಹೇಗೆ ಪವಮಾನನಾದ ವಾಯು ಮಧ್ಯಮವೇಗದಿಂದ ಬೀಸುತ್ತಾ, ಮರಗಿಡಗಳ ತಲೆಯನ್ನು ತಗ್ಗಿಸುತ್ತಾ, ಅವುಗಳನ್ನು ಮುರಿಯದೆಯೆ, ಬುಡಮೇಲು ಮಾಡದೆಯೇ ಬೀಸುತ್ತಾ ಮುಂದುವರಿಯುವುದೋ ಅದೇ ರೀತಿಯಲ್ಲಿ ಅಜಸಾಮ್ರಾಟನು ತನ್ನ ಸಾಮಂತರಾಜರಲ್ಲಿ ವರ್ತಿಸುತ್ತಿದ್ದನು (ಪವಮಾನನು ಮಹೀರುಹನನೆಂತು ಮುರಿಯು ದೆಯೆ), ಆ ಮಹೀಪತಿಯು ಅತ್ಯಂತ ತೀಕ್ಷ್ಣನಾಗದೆ, ಅಥವಾ ಒಹಳ ಮೃದುತ್ವವೂ ಅಲ್ಲದ ಮಧ್ಯಮ ಮಾರ್ಗದಿಂದಲೇ ಆ ಸಾಮಂತಚೂಡಾಮಣಿಗಳನ್ನು ಅತ್ಯಂತ ಚಾಕಚಕ್ಯತೆಯಿಂದ ತನ್ನ ಹತೋಟಿಯಲ್ಲಿಟ್ಟುಕೊಂಡು ತಾನು ಅಧಿರಾಜನಾಗಿ ಸಾಮ್ರಾಜ್ಯದ ಯಂತ್ರವನ್ನು ಸುಸೂತ್ರವಾಗಿ ನಡೆಸುತ್ತ ಕೀರ್ತಿಶಾಲಿಯಾಗಿ (ಯಶಸ್ವಿ ಯಾಗಿ) ರಾಜ್ಯಭಾರಮಾಡುತ್ತಲಿದ್ದನು.

ಪವಮಾನೋ = ವಾಯುಃ—ಪೃಥಿವೀರುಹಾಂಸ್ತರೂನಿವ = ನೃಪಾನನುದ್ಧರನ್ನನು ತ್ಪಾಟಯನ್ನೇವ—ನಮಯಾಮಾಸ = ಸರಳವಾಗಿ ನಡೆಸು.

**10. ಅಥ ವೀಕ್ಷ್ಯ ರಘುಃ ಪ್ರತಿಷ್ಠಿತಂ ।**
**ಪ್ರಕೃತಿಷ್ವಾತ್ಮಜಮಾತ್ಮವತ್ತಯಾ ॥**
**ವಿಷಯೇಷು ವಿನಾಶಧರ್ಮಸು ।**
**ತ್ರಿದಿವಸ್ಥೇಷ್ವಪಿ ನಿಃಸ್ಪೃಹೋಽಭವತ್ ॥ ೧೦ ॥**

ಇದೀಗ ತನ್ನ ಆತ್ಮಜನಾದ (ಆತ್ಮಭೂ) ಅಜಕುಮಾರನು ಪ್ರಜಾವತ್ಸಲನಾಗಿ ಪ್ರತಿಷ್ಠಿತನಾಗಿ ಸುವ್ಯವಸ್ಥೆಯಿಂದ ರಾಜ್ಯವನ್ನಾಳುವುದನ್ನು ಕಂಡು ಆತ್ಮಜ್ಞಾನಿಯಾದ,

ರಾಜರ್ಷಿಯಾದ ರಘುವು ಸ್ವರ್ಗದ ಭೋಗಭಾಗ್ಯಗಳ ವಿಷಯಗಳಲ್ಲಿ ತನಗಿರುವ ಆಸೆಯನ್ನು ಕಳೆದುಕೊಂಡನು (ನಾಕವಿಷಯುಂಗಳಲಿ ಸ್ಪೃಹೆಯುಳಿದನಂದು).

ಅನ್ವಯ :—ಅಥ ರಘುಃ ಆತ್ಮಜಮ್ ಆತ್ಮವತ್ತಯಾ ಪ್ರತಿಷ್ಠಿತಂ ವೀಕ್ಷ್ಯ ವಿನಾಶಧರ್ಮಸು ತ್ರಿದಿವಸ್ಥೇಷು ಅಪಿ ವಿಷಯೇಷು ನಿಃಸ್ಪೃಹೋಽಭವತ್ ॥

ಆತ್ಮವತ್ತಯಾ = ನಿರ್ವಿಕಾರಮನಸ್ಕತಯಾ—ವಿನಾಶಧರ್ಮಸು = ವಿನಾಶಃ ಧರ್ಮಃ ಯೇಷಾಮ್—ಪ್ರತಿಷ್ಠಿತಮ್ ರೂಢಮೂಲಮ್—ನಿಃಸ್ಪೃಹೋ = ನಿರ್ಗತೇಚ್ಛೋಽಭವತ್, ತ್ರಿದಿವಸ್ಥೇಷು = ಸ್ವರ್ಗಸ್ಥೇಷ್ವಪಿ ವಿಷಯೇಷು ॥

**11. ಗುಣವತ್ಸುತರೋಪಿತಶ್ರಿಯಃ ।**
**ಪರಿಣಾಮೇ ಹಿ ದಿಲೀಪವಂಶಜಾಃ ॥**
**ಪದವೀಂ ತರುವಲ್ಕವಾಸಸಾಂ ।**
**ಪ್ರಯತಾಃ ಸಂಯಮಿನಾಂ ಪ್ರಪೇದಿರೇ ॥ ೧೧ ॥**

ಸಂಯಮಿಗಳಾದ ದೀಲಿಪವಂಶಜರು ತಮ್ಮ ಇಳಿವಯಸ್ಸಿನಲ್ಲಿ ಯೋಗ್ಯರಾದ ಸಂತತಿಕೈಗೆ ಸಾಮ್ರಾಜ್ಯವನ್ನು (ಸಾಮ್ರಾಜ್ಯಶ್ರೀ, ಸಾಮ್ರಾಜ್ಯಲಕ್ಷ್ಮೀ) ಇತ್ತು ತಾವು ತಪಕ್ಕೆ ನಡೆವರು. ಅವರು ಕೊನೆಯದಾದ (ತುರೀಯ) ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ನಾರುಡೆಯುಟ್ಟು (ಮರದ ತೊಗಟೆಯ ವಸ್ತ್ರವನುಟ್ಟು) ವನಕ್ಕೆ ನಡೆವರು. ಅವರು ಸಂಮಿಯಮಿಗಳಾಗಿ, ಆತ್ಮಜ್ಞಾನದ ಪಥವಿಡಿದು ಚತುರ್ವಿಧಪುರುಷಾರ್ಥಗಳಲ್ಲಿ ಕೊನೆಯದಾದ ಮೋಕ್ಷವನ್ನು ಬಯಸಿ ತಪವ ಗೈವರು. ಇದರಿಂದ ಮಾನವಜನ್ಮವು ಸಾರ್ಥಕವಾಗುವುದು (ಸಂಯಮಿಯ ಪಥವಿಡಿದು ನಡೆಯಲ್ ಹರವರು).

ಪ್ರಪೇದಿರೇ = ಸಾರ್ಥಕವಾಗು, ಪರಿಣಾಮೇ = ವಾರ್ಧಕೇ—ಗುಣಾಃ = ಶೌರ್ಯಧೈರ್ಯಾದಿಗುಣಗಳು, ರೋಪಿತಶ್ರಿಯಃ=ಸ್ಥಾಪಿತಲಕ್ಷ್ಮೀಕಾಃ—ಪ್ರಯತಾಶ್ಚ=ಸಂತಃ—ಸಂಯಮಿನಾಂ = ಯತಿನಾಂ, ಯಮಿನಾಂ, ಮುನಿನಾಂ ಪದವೀಂ ವಾನಪ್ರಸ್ಥಾಶ್ರಮಂ ಪ್ರಾಪ್ತಾಃ ॥

**12. ತಮರಣ್ಯಸಮಾಶ್ರಯೋನ್ಮುಖಂ ।**
**ಶಿರಸಾವೇಷ್ಟನಶೋಭಿನಾ ಸುತಃ ॥**
**ಪಿತರಂ ಪ್ರಣಿಪತ್ಯ ಪಾದಯೋಃ ।**
**ಅಪರಿತ್ಯಾಗಮಯಾಚತಾತ್ಮನಃ ॥ ೧೨ ॥**

ಆ ಗುಣಶೀಲನಾದ ನವಭಾರತದ ನವಸಾಮ್ರಾಟನು ವಿನಯಾದಿ ಸದ್ಗುಣಗಳಿಂದ ಶೋಭಿಸುತ್ತ ತನ್ನ ತಂದೆಯ ಪಾದಪದ್ಮಗಳಿಗೆ ಶಿರಸಾ ವಂದಿಸಿ "ತನ್ನನುಳಿದು ಅಡವಿಗೈವುದು ಬೇಡ" ಎಂದು, ಅರಣ್ಯಾಶ್ರಮ ಉನ್ಮುಖನಾದ, ವನವಾಸಕ್ಕೆ ಉದ್ಯುಕ್ತನಾದ ಪಿತನನ್ನು ಪ್ರಾರ್ಥಿಸಿದನು. ಆತ್ಮಜನಾದ ಅಜನು ತನ್ನ ಶಿರದಲ್ಲಿ ರಾಜಚಿಹ್ನೆಗಳಿಂದ ರಾರಾಜಿಸುವ ಪಟ್ಟಬಂಧದಿಂದೊಪ್ಪುವ ಮಕುಟವನ್ನು ಧರಿಸಿ, ಉಷ್ಣೀಶವಂ ಧರಿಸಿ ಪರಿಶೋಭಿಸುತ್ತ ಪಿತನ ಕಾಲುಗಳಿಗೆ ಬಿದ್ದು ಶಿರಸಾಷ್ಟಾಂಗ ವಂದಿಸಿ (ಮುಂಡಿಬಾಚಿ) ಹೋಗಬೇಡೆಂದು ಮನಸಾರೆ ಬೇಡಿದನು (ಬೇಡೆಂದು ಬೇಡಿದನು).

ಅನ್ವಯ :—ಅರಣ್ಯಸಮಾಶ್ರಯೋನ್ಮುಖಮ್ ಪಿತರಂ ತಂ ಸುತಃ ವೇಷ್ಟನಶೋಭಿನಾ ಶಿರಸಾ ಪಾದಯೋಃ ಪ್ರಣಿಪತ್ಯ ಆತ್ಮನಃ ಅಪರಿತ್ಯಾಗಮಯಾಚತ ॥

ಅರಣ್ಯ = ಅರಣ್ಯಸ್ಯ ಸಮಾಶ್ರಯಃ ತತ್ರ ಉನ್ಮುಖಮ್ ॥ ಅರಣ್ಯಸಮಾಶ್ರಯೋನ್ಮುಖಂ = ವನವಾಸೋದ್ಯುಕ್ತಂ—ವೇಷ್ಟನಶೋಭಿನೋ = ಉಷ್ಣೀಶಮನೋಹರೇಣ—ಪ್ರಣಿಪತ್ಯ = ವಂದಿಸಿ.

**13. ರಘುರಶ್ರುಮುಖಸ್ಯ ತಸ್ಯ ತತ್ ।**
**ಕೃತವಾನೀಪ್ಸಿತಮಾತ್ಮಜಪ್ರಿಯಃ ॥**
**ನ ತು ಸರ್ಪ ಇವ ತ್ವಚಂ ಪುನಃ ।**
**ಪ್ರತಿಪೇದೇ ವ್ಯಪವರ್ಜಿತಾಂ ಶ್ರಿಯಮ್ ॥ ೧೩ ॥**

ಅಶ್ರುಮುಖನಾದ ಕಂಬನಿ ತುಂಬಿದ ಕಣ್ಣುಗಳಿಂದ, ಕಂಬನಿಮೊಗದ ರಾಜರಾಜನಾದ (ಕಂಬನಿಯ ಮೊಗದಜನ) ರಾಜಶೇಖರನಾದ ಅಜಕುಮಾರನ ಪ್ರಾರ್ಥನೆಯನ್ನು ಸಲ್ಲಿಸಿದನಾದರೂ (ಮನ್ನಿಸಿದನಾದರೂ) ರಘುವು ರಾಜ್ಯದ ರಾಜ್ಯಶ್ರೀಯನ್ನಾಗಲೀ, ಭೋಗಭಾಗ್ಯಗಳನ್ನಾಗಲೀ ಬಯಸಿದುದಿಲ್ಲ. ಹಾವು ತನ್ನ ಪೊರೆಯನ್ನು (ಪರೆಯನ್ನು) ಕಳಚಿದಮೇಲೆ ಆ ಪೊರೆಯನ್ನು ಎಂದಾದರೂ ಮುಟ್ಟಿ ನೋಡುವುದೇ (ಸ್ಪರ್ಶಿಸುವುದೇ), ಸ್ವೀಕರಿಸುವುದೇ ? ಸ್ವೀಕರಿಸಲಾರದು. ತಾನಾಂತುದಿಲ್ಲ. ಪರಿತ್ಯಾಗ ಮಾಡಿದುದನ್ನು ಮುಟ್ಟಿದುದಿಲ್ಲ (ಪಾವುಳಿದ ಪೊರೆಯವೊಲು).

ಅನ್ವಯ :—ಆತ್ಮಜಪ್ರಿಯಃ ರಘುಃ ಅಶ್ರುಮುಖಸ್ಯ ತಸ್ಯ ತತ್ ಈಪ್ಸಿತಂ ಕೃತವಾನ್ ನ ತು ಸರ್ಪಃ ತ್ವಚಮ್ ಇವ ವ್ಯಪವರ್ಜಿತಾಂ ಶ್ರಿಯಂ ಪುನಃ ಪ್ರತಿಪೇದೇ ॥

ಅಶ್ರುಮುಖಸ್ಯ = ಕಂಬನಿಯ ಮೊಗದಜನ—ಆತ್ಮಜಪ್ರಿಯಃ = ಪುತ್ರವತ್ಸಲೋ ರಘುಃ—ಸರ್ಪಸ್ತ್ವಚಮಿವ ವ್ಯಪವರ್ಜಿತಾಂ=ತ್ಯಕ್ತಾಂ, ವ್ಯವಹಾರವರ್ಜಿತಾ=ಪಾವುಳಿದ ಪೊರೆಯವೊಲು. ಉಪಮಾಲಂಕಾರ ॥

**14- ಸ ಕಿಲಾಶ್ರಮಮಂತ್ಯಮಾಶ್ರಿತೋ ।**
**ನಿವಸನ್ನಾವಸಥೇ ಪುರಾದ್ಬಹಿಃ ॥**
**ಸಮುಪಾಸ್ಯತ ಪುತ್ರಭೋಗ್ಯಯಾ ।**
**ಸ್ನುಷಯೇವಾವಿಕೃತೇಂದ್ರಿಯಃ ಶ್ರಿಯಾ ॥ ೧೪ ॥**

ವೈದಿಕಧರ್ಮದ ನಾಲ್ಕನೆಯ ಆಶ್ರಮವಾದ ವಾನಪ್ರಸ್ಥಾಶ್ರಮವನ್ನು ವಜ್ರಸಂಕಲ್ಪದಿಂದ ಸ್ವೀಕರಿಸಿ ರಘುಚಕ್ರವರ್ತಿಯು, ಊರ ಹೊರವಲಯದಲ್ಲಿ ಮಂಗನ ಕೋರಿಕೆಯಂತೆ ಪರ್ಣಕುಟೀರವನ್ನು ವಿರಚಿಸಿ ವಾಸಿಸತೊಡಗಿದನು. ಅವನು ಇಂದ್ರಿಯನಿಗ್ರಹಾದಿ ಗುಣಗಳಿಂದ ಜಿತಕರಣನು. ತನ್ನನ್ನು ತಾನು ಗೆದ್ದವ (ಜಿನ). ರಾಜ್ಯಶ್ರೀಯು ಅವನಿಗೀಗ ಸೊಸೆಯಂತೆ ಮಾತ್ರ ಮಾನ್ಯಳು. ಮಗನ ಸುಖಕ್ಕಾಗಿ, ಭೋಗಸುಖಕ್ಕಾಗಿ ಅರ್ಹಳು. ಆತನು ವಾನಪ್ರಸ್ಥಧರ್ಮದಂತೆ, ಉದಕ, ಫಲ ಮೊದಲಾದ ಸಾತ್ವಿಕವಸ್ತುಗಳನ್ನು ದೇಹಧಾರಣೆಗೆ, ತನ್ನ ಶುಶ್ರೂಷೆಗೆ ಯೋಗ್ಯವಾದವುಗಳನ್ನು ಮಾತ್ರ ಸ್ವೀಕರಿಸುವನು. ಇತರ

ಭೋಗಭಾಗ್ಯಗಳು ತ್ಯಜಾರ್ಹವಾದವುಗಳು. ಅದನ್ನು ಭೋಗಿಸಬೇಕಾದವನು ಅವನ ಮಗನು, ತಾನಲ್ಲ. ತಾನು ತಪಸ್ವಿ, ತ್ಯಾಗಿ, ಭೋಗಿ, ಯೋಗಿ, ವಿರಾಗಿ, ಜಿತೇಂದ್ರ, ರಾಜಋಷಿ, ರಾಜಯೋಗಿ, ಸರ್ವಸಂಗಪರಿತ್ಯಾಗಿ (ಅನುಪಾಸಿತನ, ಜಿತಕರಣನಂದು).

ಅನ್ವಯ :—ಅವಿಕೃತೇಂದ್ರಿಯಃ ಸಃ ಕಿಲ ಅಂತ್ಯಮ್ ಆಶ್ರಮಮ್ ಆಶ್ರಿತಃ ಪುರಾತ್ ವಹಿಃ ಆವಸಥೇ ನಿವಸನ್ ಪುತ್ರಭೋಗ್ಯಯಾ ಶ್ರಿಯಾ ಸ್ನುಷಯೇವ ಸಮುಪಾಸ್ಯತ ॥

ಆವಸಥೇ = ಮನೆ, ವಾಸಸ್ಥಾನ—ನಿವಸನ್ನವಿಕೃತೇಂದ್ರಿಯಃ=ಜಿತೇಂದ್ರಿಯಃ—ಪುತ್ರಭೋಗ್ಯಯಾ = ಸ ಸ್ವಭೋಗ್ಯಯಾ—ಶ್ರಿಯಾಸಮುಪಾಸಿತ = ಶುಶ್ರೂಷಿತಃ—ತಾಮಸ ಆಹಾರಃ=ಮಾಂಸಾಹಾರ, ಮದ್ಯ, ಹೆಂಡ, ಶರಾಬು (ಕಳ್ಳು=ಕಳ—(ತೌಳವಭಾಷೆ).

**15. ಪ್ರಶಮಸ್ಥಿತ ಪೂರ್ವಪಾರ್ಥಿವಂ ।**
**ಕುಲಮಭ್ಯುದ್ಯತ ನೂತನೇಶ್ವರಮ್ ॥**
**ನಭಸಾ ನಿಭೃತೇಂದುನಾ ತುಲಾಂ ।**
**ಉದಿತಾರ್ಕೇಣ ಸಮಾರುರೋಹ ತತ್ ॥ ೧೫ ॥**

ಪೂರ್ವಪಾರ್ಥಿವ ವಂಶಗಳಲ್ಲಿ ಪ್ರಸಿದ್ಧವಾದ ರಘುವಂಶದಲ್ಲಿ ಶಮಯುತನು. ಏಳಿಗೆಯ ಹೊಸ ದೊರೆಯಾಗಿ ಅಜನು ಇಂದು ಪ್ರತಿಷ್ಠಿತನಾಗಿರುತ್ತಿರಲು, ವಂಶವೆಂಬ ಆಕಾಶದಲ್ಲಿ ಒಂದೆಡೆ ಥಳಥಳಿಸುತ್ತ ಹೊಳೆಯುತ್ತ ಈತನಕ ಬೆಳಕು ಕೊಡುತ್ತಿದ್ದ ಚಂದ್ರನು ಒಂದೆಡೆ ಮುಳುಗುತ್ತಲಿದ್ದರೆ ಬಾನಿನ ಇನ್ನೊಂದು ಅಂಚಿನಲ್ಲಿ ಬಾಲ ಸೂರ್ಯನು ಉದಿಸುತ್ತ ಮೇಲಕ್ಕೆ ಬರುತ್ತಲಿದ್ದನು. ಹೀಗೆ ಹಳೆಯ ಅರಸನು ನಿವೃತ್ತಿ ಹೊಂದಿ ಅವನ ಸ್ಥಾನಕ್ಕೆ ಪಟ್ಟಾಭಿಷಿಕ್ತನಾದ ನವ ಉತ್ಸಾಹದ, ಅಭಿವೃದ್ಧಿ ತರುವ ನವತರುಣನು ಅಧಿಕಾರಸೂತ್ರಗಳನ್ನು ಹಿಡಿದುಕೊಂಡು ಸಿಂಹಾಸನಾರೂಢನಾದಂತೆ, ಮುಳುಗುತಿಹ ತಿಂಗಳನು, ಮೂಡುತಿಹ ನೇಸರನು ತಳೆದ ಬಾನಂತೆ, ಅದಕ್ಕೆ ಸಮಾನವಾಗಿ ಎಸೆದುದು (ಮುಳುಗುತಿಹ ತಿಂಗಳನು, ಮೂಡುತಿಹ ನೇಸರನು ತಳೆದ ಬಾನಂತೆ).

ಪ್ರಶಮೇ = ಸ್ಥಿತಃ—ಪೂರ್ವಪಾರ್ಥಿವಂ = ಹಿಂದಣ ಅರಸರ—ಅಭ್ಯುದ್ಯತೋ = ಅಭ್ಯುದಿತೋ = ಜೊತೆಯು ಏಳಿಗೆಯು—ನೂತನೇಶ್ವರಮ್ = ಹೊಸ ದೊರೆಯಾದ ಅಜಮಹಾರಾಜನು—ನಿಭೃತೇಂದುನಾ = ಮುಳುಗುತಿಹ ಚಂದ್ರನು = ಅಸ್ತಮಯಪ್ರಾ ಚಂದ್ರೇಣೋ—ಉದಿತಾರ್ಕೇಣ = ಪ್ರಕಟಿತಸೂರ್ಯೇಣ = ಮೂಡುತಿಹ ನೇಸರನು— ನಭಸಾ ತುಲಾಂ = ತಳೆದ ಬಾನಂತೆ=ಅದಕ್ಕೆ ಸಮಾನವಾಗಿ—ಸಾದೃಶ್ಯವಾಚಿ— ಸಮಾರುರೋಹ = ಪ್ರಾಪ ॥

**16. ಯತಿ ಪಾರ್ಥಿವಲಿಂಗಧಾರಿಣೌ ।**
**ದದೃಶಾತೇ ರಘುರಾಘವೌ ಜನೈಃ ॥**
**ಅಪವರ್ಗಮಹೋದಯಾರ್ಥಯೋಃ ।**
**ಭುವಮಂಶಾವಿವ ಧರ್ಮಯೋರ್ಗತೌ ॥ ೧೬ ॥**

ರಘು ಮತ್ತು ಅವನ ಸುತನಾದ ಅಜಕುಮಾರನು ಒಂದೊಂದು ವಿಧದ ಧರ್ಮ

ಮಾರ್ಗವನ್ನು ಹಿಡಿದುನಿಂದವರು. ಎರಡು ತರದ ಧರ್ಮವು ಆಕಾಶದಿಂದ ಭೂಮಿಗಿಳಿದು ಬಂದಿತೋ ಎಂಬಂತೆ ಒಬ್ಬನು ಅರಸೊತ್ತಿಗೆಯ, ರಾಜಧರ್ಮವನ್ನು ಕೈಹಿಡಿದು ನಿಂದಿದ್ದರೆ, ಅವನ ಪೂಜ್ಯಪಿತನು ಶಿವಲಿಂಗಧಾರಣೆ ಮಾಡಿಭಸ್ಮಧಾರಣೆಮಾಡಿ ನಿವೃತ್ತಿ ಧರ್ಮಮಾರ್ಗವನ್ನು ಅವಲಂಬಿಸಿ ಹೊರಟಿರುವನು. ಮಗನು ಪ್ರವೃತ್ತಿಧರ್ಮವನ್ನು (ಲೌಕಿಕ ಧರ್ಮಮಾರ್ಗವನ್ನು) ಮುನ್ನಡೆಸುವನು. ಮಹೋದಯನಾದ ಅವನ ಅಯ್ಯನು ನಿವೃತ್ತಿಧರ್ಮಮಾರ್ಗವನ್ನು ಕೈಹಿಡಿದು (ಪಾರಲೌಕಿಕ ಧರ್ಮಚಕ್ರ, ಪಾರಮಾರ್ಥಿಕ ಧರ್ಮಮಾರ್ಗ) ನಡೆಸುತ್ತಿರುವನು. ಇಬ್ಬರ ಗುರಿಯೊಂದೇ. ಮೋಕ್ಷ ಧರ್ಮವೇ ಅವರ ಗುರಿಸಾಧನೆ. ಪ್ರಜಾಪಾಲನೆಯಿಂದ ಮೋಕ್ಷ (ಜನಸೇವೆಯೇ ಜನಾರ್ಧನನ ಸೇವೆ). ಅಂತೆಯೇ ಆತ್ಮಕಲ್ಯಾಣದಿಂದ, ಪರಮಾತ್ಮನ ಚಿಂತನೆಯಿಂದ, ಆಧ್ಯಾತ್ಮಿಕ ಸಾಧನೆಯಿಂದ, ತಪಸ್ಸಿನಿಂದ ಮೋಕ್ಷ ಸಾಧ್ಯ—ನೆಲಕಿಳಿದ ಧರ್ಮದಾ ಮೋಕ್ಷ ಮೇಣ್ ಅಭ್ಯುದಯಫಲಗಳೆಂದು ರಘುರಾಘವರ ಬಗ್ಗೆ ಜನರು ಆಡಿಕೊಳ್ಳುತ್ತಿದ್ದರು.

ಲಿಂಗ = ಗುರುತು. ಧರ್ಮ = ಅಪವರ್ಗ—ಮಹೋದಯ—ಪಾರ್ಥಿವೋ = ರಾಜಾ—ಯತಿ = ಭಿಕ್ಷು—ರಘುರಾಘವೌ = ರಘು ತತ್ಸುತೌ = ರಘುರಾಘವರು—ಅಪವರ್ಗ ಮಹೋಯಾರ್ಥಯೋಃ = ಮೋಕ್ಷಾಭ್ಯುದಯಫಲಯೋಃ = ಮೋಕ್ಷ ಮೇಣ್ ಅಭ್ಯುದಯ ಫಲಗಳೆನುತಿಹರು—ಭುವಂ ಗತೌ = ಭೂಲೋಕಮವತೀರ್ಣಾ = ನೆಲಕಿಳಿದ ಧರ್ಮದಾ—ಜನೈರ್ದಶಾತೇ = ದೃಷ್ಟೌ= ಹೀಗೆಂದು ಜನರು ಎನುತಿಹರು.

**17. ಅಜಿತಾಧಿಗಮಾಯ ಮಂತ್ರಿಭಿಃ ।**
**ಯುಯುಜೇ ನೀತಿವಿಶಾರದೈರಜ ॥**
**ಅನಪಾಯಿಪದೋಪಲಬ್ಧಯೇ ।**
**ರಘುರಾಪ್ತೈಃ ಸಮಿಯಾಯ ಯೋಗಿಭಿಃ ॥ ೧೭ ॥**

ರಘುರಾಜನು ಯೋಗಿಪುಂಗವರನ್ನು ಅರಸಿಕೊಂಡು ಹೋದರೆ, ಅವನ ಶ್ರೇಷ್ಠ ಪುತ್ರನು ನೀತಿಕೋವಿದರಾದ, ರಾಜನೀತಿ, ಅರ್ಥಶಾಸ್ತ್ರವಿಶಾರದರಾದ ಮಂತ್ರಿಗಳೊಡನೆ ದೇಶದ ಅಭ್ಯುದಯದ ಬಗ್ಗೆ ಚರ್ಚಿಸುತ್ತಿದ್ದನು. ಅಜನು ಇನ್ನೂ ಗೆಲ್ಲಬೇಕಾದುದು, ಮಾಡಬೇಕಾದುದು ಬಹಳಷ್ಟು ಇವೆ. ಅದರ ಬಗ್ಗೆ ವಿಚಾರಸಂಕಿರಣ ಮಾಡಿಕೊಳ್ಳುತ್ತಿದ್ದನು. ಬಲ್ಲವರೊಡನೆ ಸಮೀಕ್ಷೆ ನಡೆಸಿ ಚಿಂತನೆ ಮಾಡುತ್ತಿದ್ದನು ಅವನ ಪ್ರಿಯ ಪಿತನಾದರೋ ಯೋಗದರ್ಶನದ ಮಹತ್ವವನ್ನು, ಯೋಗಜ್ಞಾನವನ್ನು ಪರಮ ಯೋಗಿಗಳಿಂದ ಪಡೆಯುತ್ತಿದ್ದನು. ಅರಿತುಕೊಳ್ಳುತ್ತ ಮುಕ್ತಿಮಾರ್ಗಾವಲಂಬಿಯಾಗಿದ್ದನು. ಉಭಯತ್ರರೂ ಚಿಂತಿತಕಾರ್ಯಮಗ್ನರಾಗಿದ್ದರು.

ಯುಯುಜೇ = ಸಂಗತಃ—ಅನಪಾಯಿಪದ = ನಾಶರಹಿತ, ಮೋಕ್ಷಪದ—ಆಪ್ತೈಃ = ಆತ್ಮಸ್ತು ಯಥಾರ್ಥದರ್ಶಿ—ನೀತಿವಿಶಾರದೈಃ= ನೀತಿಕೋವಿದರಾದ.

**18. ನೃಪತಿಃ ಪ್ರಕೃತೀರವೇಕ್ಷಿತುಂ ।**
**ವ್ಯವಹಾರಾಸನಮಾದದೇಯುವಾ ॥**

**ಪರಿಚೇತುಮುಪಾಂಶುಧಾರಣಾಂ।**
**ಕುಶಪೂತಂ ಪ್ರವಯಾಸ್ತು ವಿಷ್ಟರಮ್ ॥ ೧೮ ॥**

ಯುವಕನಾದ ಅಜಮಹಾರಾಜನು ರಾಜ್ಯ ವ್ಯವಹಾರಮಗ್ನನಾಗಿ ವ್ಯವಹಾರ ರಾಜಪೀಠದಲ್ಲಿ ಕಾರ್ಯಾರ್ಥಿಯಾಗಿ ಕುಳಿತು ಜನಮನವನ್ನು ಅರಿಯಲು, ಜನತೆಯ ಕಲ್ಯಾಣ ಸಾಧಿಸಲು ಯತ್ನಿಸುತ್ತಿದ್ದನು. ಅದೇ ವೇಳೆಗೆ ಮುಪ್ಪಿನ ಮಹಾರಾಜನು ಕುಶಪೂತ ಪವಿತ್ರ ಆಸನದಲ್ಲಿ ಕುಳಿತು (ದರ್ಭಾಸನದಲ್ಲಿ) ಪರಮಾತ್ಮಧ್ಯಾನದಲ್ಲಿ ನಿರತನಾಗಿ ನಿದಿಧ್ಯಾಸನ, ಮನನ, ಚಿಂತನದಿಂದ ಚಿತ್ತೈಕಾಗ್ರತೆಯನ್ನು ಸಾಧಿಸುತ್ತಿದ್ದನು. ವಾಸಿಷ್ಠ ಧರ್ಮಶಾಸ್ತ್ರದಲ್ಲಿ ನಿರೂಪಿಸಿದ ರೀತಿಯಲ್ಲಿ ಇಂದ್ರಿಯಗಳನ್ನು ಜಯಿಸಿ ಪರಮಾತ್ಮನಲ್ಲಿ ಮನಸ್ಸನ್ನು ಲಯಮಾಡುತ್ತ ತಪಸ್ಸನ್ನು ಮಾಡುತ್ತಿದ್ದನು. ಧರ್ಮಾಸನದಲ್ಲಿ ಕುಳಿತು ಆಧ್ಯಾತ್ಮಿಕತತ್ತ್ವದ ತಿರುಳನ್ನು ವೇದಾಂತಿಗಳೊಡನೆ ಪರಮಹಂಸರೊಡನೆ, ಭಗವತ್ಪಾದರೊಡನೆ, ಕುಲಪತಿಗಳೊಡನೆ, ಆಚಾರ್ಯರೊಡನೆ, ಪಾರಮಾರ್ಥಿಕ ವಿಷಯಜ್ಞಾನವನ್ನು ಚರ್ಚಿಸಿ, ತಿರುಳನ್ನು ಅರಿತು ಪರಮಾರ್ಥಸಿದ್ಧಿಗಾಗಿ, ಶಾಂತಾತ್ಮನಾಗಿ, ಯೋಗಾರೂಢನಾಗಿದ್ದನು (ಅಜಿತಪದಲಾಭಕೆಂದು).

ವ್ಯವಹಾರಾಸನಮ್ ಆದದೇ = ಧರ್ಮಾಸನದಲ್ಲಿ ಕುಳಿತು ಜನರ ಯೋಗಕ್ಷೇಮ ವಿಚಾರಿಸು—ಪ್ರಕೃತೀಃ = ಪ್ರಜಾಃ ಕಾರ್ಯಾರ್ಥಿನೀ—ರವೇಕ್ಷಿತುಮ್ = ದುಷ್ಟಾದೃಷ್ಟ ಪರಿಜ್ಞಾನಾರ್ಥಮಿತ್ಯರ್ಥಃ—ವ್ಯವಹಾರಾಸನಂ = ಧರ್ಮಾಸನಮ್ – ಧಾರಣಾ=ಚಿತ್ತಸ್ಯೈಕಾಗ್ರತು—ಉಪಾಂಶು = ವಿಜನೇ—"ಉಪಾಂಶು ವಿಜನೇ ಪ್ರೋಕ್ತಮ್" ಇತಿ ಹಲಾಯುಧಃ ॥

**19. ಅನಯತ್ ಪ್ರಭುಶಕ್ತಿಸಂಪದಾ।**
**ವಶಮೇಕೋ ನೃಪತೀನನಂತರಾನ್ ॥**
**ಅಪರಃ ಪ್ರಣಿಧಾನಯೋಗ್ಯಯಾ।**
**ಮರುತಃ ಪಂಚಶರೀರಗೋಚರಾನ್ ॥ ೧೯ ॥**

ಅನಂತವೀರ್ಯನಾದ ಸುತನು ಪ್ರಭುಶಕ್ತಿಯ ಸಂಪತ್ತಿನಿಂದ ದಂಡಪ್ರಯೋಗದಿಂದ ಸಮಸ್ತಜಗತೀಮಲಯದ (ಪೃಥ್ವೀಮಂಡಲದ) ರಾಜಾಧಿರಾಜರನ್ನು ಗೆದ್ದು ತನ್ನ ಹತೋಟಿಯಲ್ಲಿಟ್ಟುಕೊಂಡನು. ಅವನ ಪಿತನಾದರೋ, ಪ್ರಣಿಧಾನಯೋಗ್ಯತೆಯಿಂದ, ಪ್ರಾಣಯೋಗದ ಅಭ್ಯಾಸದಿಂದ,ಅಷ್ಟಾಂಗಯೋಗದವಿಧಿವಿಧಾನಗಳಿಂದ ಸಮಾಧಿಸ್ಥನಾಗಿ ಶರೀರದಲ್ಲಿರುವ ಪಂಚಪ್ರಾಣವಾಯುಗಳಾದ ಪ್ರಾಣ, ಅಪಾನ, ಸಮಾನ, ಉದಾನ, ಧ್ಯಾನಗಳ ಹತೋಟಿಯನ್ನು ಸಾಧಿಸಿಕೊಂಡು ಪ್ರಾಣಾಯಾಮದಿಂದ ಬ್ರಹ್ಮಸಾಕ್ಷಾತ್ಕಾರ ಮಾಡಿಕೊಂಡನು (ಪ್ರಣಿಧಾನದಿಂದೊಬ್ಬನೆಂದು). ಹೀಗೆ ಪ್ರಣಿಧಾನದಿಂದ ಶರೀರದಲ್ಲಿರುವ ಐಗಾಳಿಗಳನ್ನು (ಐದು ಗಾಳಿಗಳನ್ನು) ವಶಗೊಳಿಸಿ ಯಶಸ್ವಿಯಾದನು, ರಘುವಂಶ ಪೂರ್ಣಚಂದ್ರತೇಜಸ್ವಿಯಾದ ರಘುವರನು.

ಪ್ರಭುಶಕ್ತಿಸಂಪದಾ—ಶಕ್ತಯಃ ತಿಸ್ರಃ ಪ್ರಭಾವೋತ್ಸಾಹಮಂತ್ರಜಾಃ—ಪ್ರಣಿಧಾನಯೋಗ್ಯಯಾ = ಸಮಾಧ್ಯಭ್ಯಾಸೇನ ॥

ಪ್ರಭುಶಕ್ತಿಸ್ತ್ರಿವಿಧಃ, ಅನಯಂದಿತಿ = ಏಕೋಽನ್ಯತಮಃ—ಪ್ರಭುಶಕ್ತಿಸಂಪದಾ = "ಕೋಶೋ ದಂಡೋ ಬಲಂ ಚೈವ ಪ್ರಭುಶಕ್ತಿಃ ಪ್ರಕೀರ್ತಿತಾ" ಇತಿ ವಿಂತಾಕ್ಷರಾಯಾಮ್—ಪ್ರಣಿಧಾನಯೋಗ್ಯಯಾ=ಸಮಾಧ್ಯಭ್ಯಾಸೇನ (ಯೋಗಾಭ್ಯಾಸೇನ)—ಶರೀರಗೋಚರಾನ್ = ದೇಹಾಶ್ರಯಾನ್ ಪಂಚಮಾರುತಃ ॥

20. ಅಕರೋದಚಿರೇಶ್ವರಃ ಕ್ಷಿತೌ ।
ದ್ವಿಷದಾರಂಭಫಲಾನಿ ಭಸ್ಮಸಾತ್ ॥
ಇತರೋ ದಹನೇ ಸ್ವಕರ್ಮಣಾಂ ।
ವವೃತೇ ಜ್ಞಾನಮಯೇನ ವಹ್ನಿನಾ ॥ ೨೦ ॥

ಪೃಥ್ವೀಪತಿಯಾದ ಅಜನು ತನ್ನ ಸ್ವಪ್ರಯತ್ನದಿಂದ ಹಗೆಯರಸರು ಬುಡಮೇಲು ಮಾಡುವ ಪ್ರಯತ್ನಗಳನ್ನು ತನ್ನ ಬುದ್ಧಿಬಲಸಾಮರ್ಥ್ಯದಿಂದ ಭಸ್ಮಮಾಡಿದನು. ಅವರನ್ನು ತನ್ನ ಹತೋಟಿಯಲ್ಲಿಟ್ಟು, ಕಾಡಾನೆಯನ್ನು ಪಳಗಿಸಿ ನಾಡಾನೆಯನ್ನಾಗಿಸಿದಂತೆ ತನ್ನ ಹಿಡಿತದಲ್ಲಿಟ್ಟುಕೊಂಡನು. ಅವರನ್ನು (ಭಿನ್ನಮತೀಯರನ್ನು) ಕುರಿತಗೊಳಿಸಿದನು. ಅದೇ ವೇಳೆಗೆ ಅವನ ಪಿತನು ತನ್ನ ತಿಳಿವೆಂಬ ಜ್ಞಾನಾಗ್ನಿಯಿಂದ (ತಿಳಿವೆಂಬ ಬೆಂಕಿಯೊಳು) ತನ್ನ ಎಲ್ಲಾ ಕರ್ಮಗಳನ್ನು ಲಯಮಾಡಿ ತಾನು ಪರಿಶುದ್ಧನಾದನು. ಜ್ಞಾನಮಯವಾದ ಅಗ್ನಿಯಲ್ಲಿ ತನ್ನ ಎಲ್ಲಾ ವಿಧದ ಸ್ವಕರ್ಮಗಳನ್ನು (ಕೃತಕರ್ಮಗಳನ್ನು) ದಹಿಸಿ ನಿರ್ಮಲನಾದನು, ಪೂತಾತ್ಮನಾದನು (ಭಗವಂತನು ಭಗವದ್ಗೀತೆಯಲ್ಲಿ ವಿಶದಪಡಿಸಿದಂತೆ).

ಅಚಿರೇಶ್ವರಃ = ನ ವಿದ್ಯತೇ ಚಿರಂ ಯಸ್ಯ ಸ ಅಚಿರಃ—ವಹ್ನಿನಾ = ಪಾವಕೇನ, ಕರಣೇನ—ಸ್ವಕರ್ಮಣಾಂ=ಭವಬೀಜಭೂತಾನಾಂ—ದಹನೇ=ಭಸ್ಮೀಕರಣೇ ವವೃತೇ—ಸ್ವಕರ್ಮಾಣಿ ದಗ್ಧುಂ ಪ್ರವೃತ್ತ ಇತ್ಯರ್ಥಃ—"ಜ್ಞಾನಾಗ್ನಿಃ ಸರ್ವಕರ್ಮಾಣಿ ಭಸ್ಮಸಾತ್ ಕುರುತೇಽರ್ಜುನ" ಇತಿ ಗೀತಾವಚನಾತ್ ॥

21. ಪಣಬಂಧಮುಖಾನ್ ಗುಣಾನಜಃ ।
ಷಡುಪಾಯುಙ್ಕ್ತ ಸಮೀಕ್ಷ್ಯ ತತ್ಫಲಮ್ ॥
ರಘುರಪ್ಯಜಯದ್ಗುಣತ್ರಯಂ ।
ಪ್ರಕೃತಿಸ್ಥಂ ಸಮಲೋಷ್ಟಕಾಂಚನಃ ॥ ೨೧ ॥

ಅಜನು ಆರು ವಿಧದ, ಷಡ್ಗುಣಗಳ ರಾಜಧರ್ಮವನ್ನು ಅನುಸರಿಸಿ ಅದರ ಪ್ರಭಾವದಿಂದ ರಾಜ್ಯವನ್ನು ಕ್ಷೇಮದಿಂದ ಆಳಿದನು. ಕೌಟಿಲ್ಯನು ಹೇಳಿದ ಆರು ವಿಧದ ರಾಜಧರ್ಮ ಸೂತ್ರಗಳು, ನೀತಿತತ್ವಗಳು, ಸಂಧಿ, ವಿಗ್ರಹ, ಯಾನ, ಸಮಾನ, ದ್ವೈಧ, ಆಶ್ರಯ ಇವೇ ಮೊದಲಾದ ಷಡ್ಗುಣಗಳ ನೈಪುಣ್ಯದಿಂದ ತನ್ನ ಸಾಮ್ರಾಜ್ಯದಲ್ಲಿ ಶಾಂತಿಸುಭಿಕ್ಷೆಗಳನ್ನು ನೆಲೆಗೊಳಿಸಿದನು. ಅವನ ವೃದ್ಧಪಿತನು ಪರಮಾತ್ಮಚಿಂತನೆಯಿಂದ ಸತ್ವ, ರಜ, ತಮಗಳೆಂಬ ಪ್ರಕೃತಿಜನ್ಯವಾದ ಮೂರು ಗುಣಗಳನ್ನು ಮೆಟ್ಟಿ ನಿಂದಿರ್ದನು (ತ್ರಿಗುಣಗಳ ಮೆಟ್ಟಿದನು). ಅವನು ನಿಃಸ್ಪೃಹನಾಗಿ ಹೊನ್ನು ಮತ್ತು ಮಣ್ಣು (ಸಮಲೋಷ್ಟಕಾಂಚನಃ) ಸಮವೆಂಬ ಭಾವನೆಗೆ ಬಂದಿದ್ದನು. ತ್ರಿಗುಣಗಳನ್ನು ಜಯಿಸಿ ಅವುಗಳನ್ನು ವಿಕಾರಿ,

ಗುಣಧರ್ಮವಿಕಾರಶೂನ್ಯನಾಗಿ, ಪರಮಯೋಗಿಯಾಗಿ, ಆತ್ಮಜಯವನ್ನು ಸಾಧಿಸಿ ನಿಂದಿರ್ದನು.

ಪಣಬಂಧೇತಿ = "ಪಣಬಂಧಃ ಸಂಧಿಃ" ಇತಿ ಕೌಟಿಲ್ಯಃ ॥ ಸಮೀಕ್ಷ್ಯ = ಆಲೋಚ್ಯ— ಸಮಲೋಷ್ಟಕಾಂಚನಃ = ನಿಃಸ್ಪೃಹ ಇತ್ಯರ್ಥಃ—ರಘುರಪಿ ಗುಣತ್ರಯಂ=ಸತ್ತ್ವಾದಿಕಮ್ —"ಗುಣಾಃ ಸತ್ತ್ವಂ ರಜಸ್ತಮಃ" ಇತ್ಯಮರಃ ॥

**22. ನ ನವಃ ಪ್ರಭುರಾ ಫಲೋದಯಾತ್ ।**
**ಸ್ಥಿರಕರ್ಮಾ ವಿರರಾಮ ಕರ್ಮಣಃ ॥**
**ನ ಚ ಯೋಗವಿಧೇರ್ನವೇತರಃ ।**
**ಸ್ಥಿರಧೀರಾ ಪರಮಾತ್ಮದರ್ಶನಾತ್ ॥ ೨೨ ॥**

ಹೊಸ ಭೂಮಿಪಾಲನು ಕರ್ಮಾನುಸರಣಮಾರ್ಗದಿಂದ ಕರ್ಮಚೇತನನಾಗಿ ತಾನು ಎಣಿಸಿದ ಗುರಿಯನ್ನು ಮುಟ್ಟುವ ತನಕ ತನ್ನ ಪ್ರಯತ್ನದಿಂದ ವಿಮುಖನಾಗುತ್ತಿರಲಿಲ್ಲ. ಫಲಾನುಭವಿಯಾಗುವ ತನಕ ತನ್ನ ಪ್ರಯತ್ನವನ್ನು ನಿರಂತರ ಮುಂದುವರಿಸುತ್ತಿದ್ದನು (ಫಲಸಿದ್ಧಿ ಪಡೆದವರ ಮಧ್ಯಕನು ಸುಸ್ಥಿರನು). ಹಳೆ ಪ್ರಭುವರನು ತನ್ನ ಮನಸನ್ನು ಬಿಗಿಹಿಡಿದು ಶಾಸ್ತ್ರಗಳು ಹೇಳಿದ ರೀತಿಯಲ್ಲಿ ಧ್ಯಾನಾಸಕ್ತನಾಗಿ ಅವ್ಯಯನಾದ, ಅಕ್ಷರ ನಾದ, ಶಬ್ದಬ್ರಹ್ಮನಾದ ಪರಮಾತ್ಮನ ದರ್ಶನಪಡೆಯುವ ತನಕ, ವಿರಮಿಸದೆ ಯೋಗ ವಿದ್ಯೆಯ ಅಭ್ಯಾಸವನ್ನು ನಿರಂತರ ಕೈಗೊಳ್ಳುತ್ತಿದ್ದನು. ಪರಮಾತ್ಮನ ಸಾಕ್ಷಾತ್ಕಾರವಾಗದೆ ವಿರಮಿಸುವವನಲ್ಲ.

ಸ್ಥಿರಕರ್ಮಾ=ಫಲೋದಯಕರ್ಮಕಾರೀ—ಫಲೋದಯಾತ್=ಫಲಸಿದ್ಧಿಪರ್ಯಂತಂ —ವಿರರಾಮ = ನ ನಿವೃತ್ತಃ—ಸ್ಥಿರಧೀ = ನಿಶ್ಚಲಚಿತ್ತೋ—ಪರಮಾತ್ಮದರ್ಶನಾತ್ = ಪರಮಾತ್ಮಸಾಕ್ಷಾತ್ಕಾರಪರ್ಯಂತಂ ॥

**23. ಇತಿ ಶತ್ರುಷು ಚೇಂದ್ರಿಯೇಷು ಚ ।**
**ಪ್ರತಿಷಿದ್ಧ ಪ್ರಸರೇಷು ಜಾಗ್ರತೌ ॥**
**ಪ್ರಸಿತಾವುದಯಾಪವರ್ಗಯೋಃ ।**
**ಉಭಯೀಂ ಸಿದ್ಧಿಮುಭಾವವಾಪತುಃ ॥ ೨೩ ॥**

ವೃದ್ಧ ರಘುವು ತನ್ನ ಇಂದ್ರಿಯಗಳ ಬಗ್ಗೆ ಜಾಗೃತನಾಗಿ ಮೋಕ್ಷಧರ್ಮವನ್ನು ಚಿಂತಿಸುತ್ತಾ, ಪರಂಧಾಮಸ್ವರೂಪನಾದ ಭಗವಂತನಲ್ಲಿ ಐಕ್ಯವಾಗಿ ಮುಂದೆ ಪುನರ್ಜನ್ಮ ಪಡೆಯದೆ ಬ್ರಹ್ಮಾನಂದಸುಖದ ಸಿದ್ಧಿಗಾಗಿ ಎಳೆದಾಡುತ್ತಿದ್ದನು. ಅವನ ಪುತ್ರನಾದ ಅಜನಿಂದು ಲೌಕಿಕ ಸಿದ್ಧಿಗಾಗಿ, ತನ್ನ ಸಾಮ್ರಾಜ್ಯದ ಎಲ್ಲಾ ಪ್ರಜೆಗಳ ಸ್ವಾರ್ಥಸಾಧನೆಯ ಸಿದ್ಧಿಗಾಗಿ, ಅವರಿಗೆ ಭೋಗಭಾಗ್ಯಗಳನ್ನು ಒದಗಿಸುವ ಸಲುವಾಗಿ ಜಾಗೃತನಾಗಿದ್ದನು (ಜಾಗೃತರು ದುರಿತದೆಡೆಗಳಲಿ). ಅವನು ವೈರಿರಾಜರ ಬಗ್ಗೆ ಸದಾ ಜಾಗರೂಕನಾಗಿದ್ದನು. ಪ್ರಜಾವತ್ಸಲನಾದ ಅವನು ಪ್ರಜೆಗಳ ಕಲ್ಯಾಣಕ್ಕೆ ಧಕ್ಕೆತರುವ, ದುರಿತಗಳನ್ನು ಒಡ್ಡುವ ಶತ್ರುಗಳ ಬಗ್ಗೆ ಜಾಗರೂಕನಾಗಿ ಎಚ್ಚರದಿಂದಿದ್ದನು. ಇದರಿಂದ ಅವನು ಲೌಕಿಕಸಿದ್ಧಿ

ಯನ್ನು ಹೊಂದಿದ್ದನು. ಅವನ ಪ್ರಿಯಪಿತನು ಪಾರಮಾರ್ಥಿಕ ಸಿದ್ಧಿಯನ್ನು ಪಡೆದನು. ಇಬ್ಬರೂ ತಮ್ಮ ತಮ್ಮ ಸಂಕಲ್ಪಿತ ಸಿದ್ಧಿಯನ್ನು ಪಡೆದು ವಿರಾಜಮಾನರಾಗಿದ್ದರು (ಇರ್ವರು ಉಭಯಸಿದ್ಧಿಯನು). ಶಾಂತಮನಸ್ಕರಾಗಿದ್ದರು.

**ಪ್ರತಿಷಿದ್ಧಃ = ಪ್ರಸರಃ = ಸ್ವಾರ್ಥಪ್ರವೃತ್ತಿರ್ಯೇಷಾಂ ತೇಷು—ಚೇಂದ್ರಿಯೇಷು ಚ = ಜಾಗ್ರತಾ—ಉದಯಾಪವರ್ಗಯೋಃ = ಅಭ್ಯುದಯಮೋಕ್ಷಯೋಃ—ಪ್ರಸಿತಾ = ಆಸಕ್ತಿ—ಉಭಯಂ = ಉಭಯಿಂ=ಉಭಯರು—ಪ್ರತಿಷಿದ್ಧಪ್ರಸರೇಷು=ಪ್ರತಿಷಿದ್ಧ] ಪ್ರಸರಃ ಯೇಷಾಂ ತೇಷು—ಪ್ರಸಿತೌ = ಆಸಕ್ತೌ ॥**

**24. ಅಥ ಕಶ್ಚಿದಜವ್ಯಪೇಕ್ಷಯಾ ।**
**ಗಮಯಿತ್ವಾ ಸಮದರ್ಶನಃ ಸಮಾಃ ॥**
**ತಮಸಃ ಪರಮಾಪದವ್ಯಯಂ ।**
**ಪುರುಷಂ ಯೋಗಸಮಾಧಿನಾ ರಘುಃ** ॥ ೨೪ ॥

ಅಜನ ಅಪೇಕ್ಷೆಯಂತೆ ರಘುವು ಕೆಲವು ವರುಷಗಳನ್ನು ಊರ ಹೊರಗಿನ ಪರ್ಣ ಕುಟೀರದಲ್ಲಿ ಕಳೆದನು. ಈ ಮಧ್ಯೆ ಅವನು ಸರ್ವಭೂತರಾಶಿಯಲ್ಲಿ ಸಮದೃಷ್ಟಿಯನ್ನಿರಿಸಿ ಸಮಭಾವವನ್ನು ಹೊಂದಿದನು (ಸಮದರ್ಶಿ ರಘು ಬಳಿಕ). ಅರಿಷಡ್ವರ್ಗಗಳನ್ನು ಗೆದ್ದನು. ಮಾಯಾಪ್ರಪಂಚದ ಮೋಹ, ಮಾಯೆಗಳನ್ನು ಗೆದ್ದನು. ಭವಸಾಗರವನ್ನ ದಾಟಿದನು. ಕತ್ತಲನ್ನು ಅಂದರೆ ತಮಸನ್ನು ದಾಟಿ ಬೆಳಕಿನತ್ತ, ಅಜ್ಞಾನದಿಂದ ಜ್ಞಾನದತ್ತ (ತಮಸೋ ಮಾ ಜ್ಯೋತಿರ್ಗಮಯ, ಮೃತ್ಯೋರ್ಮಾ ಅಮೃತಂಗಮಯ). ಬ್ರಹ್ಮಾನಂದಸುಖದತ್ತ ಪಯಣಿಸಲು ಸನ್ನದ್ಧನಾದನು. ಆ ಪರಮಘಳಿಗೆಯನ್ನು ಇದಿರು ನೋಡುತ್ತಿದ್ದನು. ಹೀಗಿರಲು ತನ್ನ ತಪಸ್ಸಿದ್ಧಿಯಿಂದ, ಯೋಗಸಮಾಧಿಯ ಮೂಲಕ ಪಂಚಭೂತದ ಈ ದೇಹವನ್ನು ತ್ಯಜಿಸಿದನು. ಜೀವಾತ್ಮ, ಪರಮಾತ್ಮ ಐಕ್ಯವಾಗುವ ಯೋಗವನ್ನು, ಪರಮಪದವಿಯನ್ನು ಹೊಂದಲು ವೈಕುಂಠಧಾಮದತ್ತ ನಿತ್ಯಪುರುಷನ ದರ್ಶನಪಡೆಯಲು ಐದಿದನು (ಅಮೃತನಾದನು, ಅಮರನಾದನು ಜರಾಮರಣದಾಟಿ ಅಜರಾಮರನಾದನು). (ಐದಿದನು ನಿರ್ವಾಣಯ ನಿತ್ಯಪುರುಷನನು).

ಸಮಾಃ = ಸಂವತ್ಸರೋ ವತ್ಸರೋಽಬ್ದೋ ಹಾಯನೋಽಸ್ತ್ರೀ ಶರತ್ಸಮಾಃ । ಅಜವ್ಯ ಪೇಕ್ಷಯಾ = ಅಜಾಕಾಂಕ್ಷಾನುರೋಧೇನ = ಅಜನು ಎಳಸಿದೊಲು—ಗಮಯಿತ್ವಾ = ನೀತ್ವಾ—ಯೋಗಸಮಾಧಿನಾ ರಘುಃ = ಐಕ್ಯಾನುಸಂಧಾನೇನ="ಸಂಯೋಗೋಯೋಗ ಇತ್ಯುಕ್ತೋ ಜೀವಾತ್ಮಪರಮಾತ್ಮನೋಃ" ಇತಿ ವಸಿಷ್ಠಃ—ಪುರುಷ=ಪರಮಾತ್ಮಾನಮ್ —ಸಾಯುಜ್ಯಂ ಪ್ರಾಪ್ತ ಇತ್ಯರ್ಥಃ = ಐದಿದನು ನಿರ್ವಾಣಯನಿತ್ಯಪುರುಷನನು.

**25. ಶ್ರುತದೇಹವಿಸರ್ಜನಃ ಪಿತುಃ ।**
**ಚಿರಮಶ್ರೂಣಿ ವಿಮುಚ್ಯ ರಾಘವಃ ॥**
**ವಿದಧೇ ವಿಧಿಮಸ್ಯ ನೈಷ್ಠಿಕಂ ।**
**ಯತಿಭಿಃ ಸಾರ್ಧಮನಗ್ನಿಮಗ್ನಿಚಿತ್** ॥ ೨೫ ॥

ತನ್ನ ತಂದೆಯು ದೇಹತ್ಯಾಗಮಾಡಿದನೆಂದಜನು ಕೇಳ್ದು (ಅಯ್ಯೋ ಮೃಯಳಿದನೆಂದು) ಬಹಳ ದುಗುಡದಿಂದ ಕಣ್ಣೀರಿನ ಅಭಿಷೇಕದಿಂದ ಮನದ ಬೆಂಕಿಯನ್ನು ಆರಿಸಿಕೊಂಡನು. ಯತಿಪರಂಪರೆಗೆ ಸೇರಿದ ತನ್ನ ತಂದೆಯ ದೇಹವನ್ನು ಸನ್ಯಾಸಿಗಳ ವಿಧಿವಿಧಾನಗಳಂತೆ ಭೂಸಮಾಧಿಮಾಡಿಸಿದನು. ಅಗ್ನಿಸಂಸ್ಕಾರಪಿಂಡೋದಕಕ್ರಿಯೆಗಳು ಶೌನಕಾದಿ ಋಷಿಗಳ ಮತದಂತೆ ಸನ್ಯಾಸಿಗಳಿಗೆ ತ್ಯಾಜ್ಯವಾದುದು. ಆದ್ದರಿಂದ ಆ ಮಹಾರಾಜನು ಯತಿ ಪರಂಪರೆಗೆ ಸೇರಿದ ಪರಮಯೋಗಿಯಾದ ತನ್ನ ಪಿತನ ಅಪರಕ್ರಿಯೆಗಳನ್ನು ಅನಲ ರಹಿತಾಂತ್ಯ ವಿಧಿಗಳಿಂದ ಎಸಗಿದನು. ತಾನು ಯತಿವರೆಸು, ಸನ್ಯಾಸಿಗಳನ್ನು ಕೂಡಿಕೊಂಡು ವಿಧ್ಯುಕ್ತವಾದ ರೀತಿಯಲ್ಲಿ ನಡೆಸಿದನು (ಅನಲರಹಿತಾಂತ್ಯವಿಧಿ).

ನೈಷ್ಠಿಕಮ್ = ನಿಷ್ಠಾಯಾಂ—ಅಗ್ನಿಚಿದಾಗ್ನಿಂ—ಶಶ್ರುತದೇಹವಿಸರ್ಜನ = ಆಕರ್ಣಿತ ಪಿತೃತನುತ್ಯಾಗಃ—ಸುಚಿರಮಶ್ರೂಣಿ = ಭಾಷ್ಪಾನ್ವಿತಮಂಚ್ಯ—ನೈಷ್ಠಿಕಂ = ನಿಷ್ಠಾಯಾ ಮಂತೇ—ಅನಾಗ್ನಿವಿಧಿಮ್ ಇತ್ಯತ್ರ ಶೌನಕಃ—"ಸರ್ವಸಂಗನಿವೃತ್ತಸ್ಯ ಧ್ಯಾನಯೋಗ ರತಸ್ಯ ಚ। ನ ತಸ್ಯ ದಹನಂ ಕಾರ್ಯಂ ನೈವ ಪಿಂಡೋದಕಕ್ರಿಯಾ। ನಿದಧ್ಯಾತ್ ಪ್ರಣವೈನೈವ ಬಿಲೇಭಿಕ್ಷೋಃ ಕಲೇವರಮ್। ಪ್ರೋಕ್ಷಣಂ ಖನನಂ ಚೈವ ಸರ್ವ ತೇನೈವ ಕಾರಯೇತ್" ಇತಿ.

**26. ಅಕರೋತ್ಸ ತದೌರ್ಧ್ವದೇಹಿಕಂ।**
**ಪಿತೃಭಕ್ತ್ಯಾ ಪಿತೃಕಾರ್ಯಕಲ್ಪವಿತ್॥**
**ನ ಹಿ ತೇನ ಪಥಾ ತನುತ್ಯಜಃ।**
**ತನಯಾವರ್ಜಿತಪಿಂಡಕಾಂಕ್ಷಿಣಃ ॥ ೨೬ ॥**

ರಘುಮಹಾರಾಜನು ಸಾಮಾನ್ಯ ಮಾನವರು ತನುವನ್ನು ತ್ಯಜಿಸುವಂತೆ ತ್ಯಜಿಸಲಿಲ್ಲ. ಅವನು ಪರಲೋಕಸುಖವನ್ನು ಅಪೇಕ್ಷಿಸಿ ಯೋಗರೂಪವಾದ ಮಾರ್ಗದಿಂದ ತನುವನ್ನು ತ್ಯಜಿಸಿ ಮುಮುಕ್ಷುಗಳು ಹೋಗುವ ಅರ್ಚಿರಾದಿ ಮಾರ್ಗದಲ್ಲಿ ಪಯಣಿಸಿದ್ದಾನೆ ಅಂತಹ ಮಹಾತ್ಮನಿಗೆ ತಿಲ, ಉದಕ, ಪಿಂಡ, ದಾನಾದಿಗಳಿಂದ ಅಪರ ಕ್ರಿಯೆಗಳನ್ನು ಮಾಡು ವಂತಿರಲಿಲ್ಲ. ಅವರು ಅದನ್ನು ಅಪೇಕ್ಷಿಸುವುದಿಲ್ಲ. ರಘುವಿನ ಶ್ರೇಷ್ಠನಾದ ಪುತ್ರನು ತನ್ನ ಭಕ್ತಿ, ಪ್ರೇಮ, ಶ್ರದ್ಧೆಗಳಿಂದ ಔರ್ಧ್ವದೈಹಿಕ ಕರ್ಮದ ವಿಧಿಗಳನ್ನು ಪೂರೈಸಿದನು. ಪಿತೃಭಕ್ತಿಯಿಂದ, ಪಿತೃಕಾರ್ಯಕಲ್ಪವಿದನು ಪಿಂಡಕಾಂಕ್ಷಿಗಳಾಗದವರಿಗೆ ಮಾಡತಕ್ಕ ರೀತಿಯಲ್ಲಿ ಔರ್ಧ್ವದೈಹಿಕ ಕ್ರಿಯೆಗಳನ್ನು ಎಸಗಿ ನೆಮ್ಮದಿಯಿಂದ, ಶಾಂತಿಯಿಂದ ಇರುತಿರ್ದನು (ಭಕ್ತಿಯಿಂ ಔರ್ಧ್ವದೈಹಿಕವ).

ಔರ್ಧ್ವದೈಹಿಕಮ್ = ದೇಹಾದ್ ಊರ್ಧ್ವಂ ಭವತೀತಿ—ಕಲ್ಪ = ವಿಧಾನ (ಪಿತೃ ಕಾರ್ಯಕಲ್ಪವಿತ್) ಊರ್ಧ್ವದೇಹ + ಇಕ (ವೃದ್ಧಿ), ಪಿತೃಕಾರ್ಯಸ್ಯ = ಪಿತೃಶ್ರಾದ್ಧಸ್ಯ —ತನುತ್ಯಜಃ = ಶರೀರತ್ಯಾಗಿನಃ—ಪರಲೋಕಸುಖಾಪೇಕ್ಷಯಾ=ಮುಂಕ್ತ್ವಾದಿಶಿಭಾವಃ —ಯೋಗರೂಪೇಣಮಾರ್ಗೇಣ—ಪಿತೃಭಕ್ತ್ಯಾ = ಪಿತರಿ ಪ್ರೇಮ್ಣಾ॥

**27. ಸ ಪರಾರ್ಧ್ಯಗತೇಃ ಅಶೋಚ್ಯತಾಂ।**
**ಪಿತುರುದ್ದಿಶ್ಯ ಸದರ್ಥವೇದಿಭಿಃ॥**

**ಶಮಿತಾಧಿರಧಿಜ್ಯಕಾರ್ಮುಕಃ ।**
**ಕೃತವಾನಪ್ರತಿಶಾಸನಂ ಜಗತ್ ॥ ೨೭ ॥**

ಶೋಕವು ತಂದೆಯ ಬಗೆಗೆ ಕರ್ತವ್ಯವಲ್ಲವೆಂದು ತಿಳಿದು ಪರಮಾರ್ಥಜ್ಞಾನದಿಂದ ತನ್ನನ್ನು ತಾನು ಸಮಾಧಾನಮಾಡಿಕೊಂಡನು. ಆತ್ಮಜ್ಞಾನದಿಂದ ತನ್ನನ್ನು ತಾನು ಸಂತೈಸಿಕೊಂಡು ಕಾರ್ಯೋನ್ಮುಖನಾದನು. ಆ ಬಳಿಕ ಭುವನಾಧಿಪತಿಯಾದ, ಧನುರ್ವೇದ ಪಾರಾವಾರನು ಮೋಕ್ಷವನ್ನು ಪಡೆದ ಅತ್ಯಂತಶ್ರೇಷ್ಠವಾದ ಬ್ರಹ್ಮಾನಂದಪದವಿಯನ್ನು ಪಡೆದ ತಂದೆಯ ಬಗೆಯ ಕೊರಗನ್ನು ಅಣಗಿಸಿಕೊಂಡಂತೆ ತನ್ನ ಎದುರಾಳಿಗಳಾದ ದೊರೆಗಳ ಪಿಡುಗನ್ನು ಬಾಣಗಳೆಂಬ ಶಾಸನದಿಂದ ಅಡಗಿಸಿಕೊಂಡು ಪೃಥ್ವಿಯನ್ನು ಪೃಥ್ವೀವಲ್ಲಭನೆನಿಸಿ ಆಳಿದನು. ಆ ಭೂಮಿಪತಿಯು ತಂದೆಯ ಬಗೆಯ ಅಳಲನ್ನು ತತ್ತ್ವಜ್ಞಾನದ ಬೆಳಕಿನಿಂದ, ತತ್ತ್ವಶಾಸ್ತ್ರಜ್ಞರಿಂದ, ವೇದವೇದಾಂತಪಾರಗರಿಂದ ಅರಿತು ಶಾಂತಿ ಪಡೆದನು. ತನ್ನ ಬಾಣಗಳ ಸಾಮರ್ಥ್ಯದಿಂದ ವೈರಿರಾಜರ ಹಂಟ್ಟನ್ನು ಅಡಗಿಸಿದನು. ಮೂಲೋತ್ಪಾಟನೆಮಾಡಿ ವಸುಂಧರೆಯನ್ನು ನಿರ್ವಿಘ್ನಗೊಳಿಸಿ ಕ್ಷೇಮದಿಂದ ಆಳಿದನು. ಬಿಲ್ಲಿನ ಜ್ಯಾನಾದದಿಂದ ಜಗತ್ತಿಗೆ ಕರ್ಮಭೂತವಾದ ಪ್ರತಿಶಾಸನವನ್ನು ತಾನು ಬರೆಸಿದನು (ಆಣತಿಯ ಅಡಗಿಸಿದನವನೆಳೆದು ಹೆದೆಯ).

ಅನ್ವಯ:—ಪರಾರ್ಧ್ಯಗತೇ ಪಿತುಃ ಅಶೋಚ್ಯತಾಮುದ್ದಿಶ್ಯ ಸದರ್ಥವೇದಿಭಿಃ ಶಮಿತಾಧಿಃ ಸೋಽಜಃ ಅಧಿಜ್ಯಕಾರ್ಮುಕಃ ಜಗತ್ ಅಪ್ರತಿಶಾಸನಂ ಕೃತವಾನ್ ॥

ಪರಾರ್ಧ್ಯಗತೇಃ=ಪ್ರಶಸ್ತಗತೇಃ—ಪ್ರಾಪ್ತಮೋಕ್ಷಸ್ಯ ಅಶೋಚ್ಯತಾಮ್ ಉದ್ದಿಶ್ಯ—ಅಪ್ರತಿಶಾಸನಮ್ ಅವಿದ್ಯಮಾನಂ ಪ್ರತಿಶಾಸನಮ್—ಶಮಿತಾದಿ = ನಿವಾರಿತಮನೋವ್ಯಥಃ—ಪ್ರತಿಶಾಸನಮ್ = ದ್ವಿತೀಯರಾಜ್ಞಾರಹಿತಮ್ ॥

**28. ಕ್ಷಿತಿರಿಂದುಮತೀಚ ಭಾಮಿನೀ ।**
**ಪತಿಮಾಸಾದ್ಯ ತಮಗ್ರ್ಯಪೌರುಷಮ್ ॥**
**ಪ್ರಥಮಾ ಬಹುರತ್ನಸೂರಭೂತ್ ।**
**ಅಪರಾ ವೀರಮಜೀಜನತ್ ಸುತಮ್ ॥ ೨೮ ॥**

ಆ ಬಳಿಕ ಅಜನು ಭೂಮಿಯ (ವಸುಂಧರೆಯ) ಅಧಿಪತಿಯೆನಿಸಿ, ಇಂದುಮತಿಯ ಪತಿಯೆನಿಸಿ ಆಳಿದನು. ತನ್ನ ಪರಾಕ್ರಮದ ತೇಜದಿಂದ ನಿಷ್ಕ[illegible]ಾಗಿ ಮೇದಿನಿಯನ್ನು ಸ್ವತಂತ್ರವಾಗಿ ಆಳಿದನು. ಅವನ ಆಳ್ವಿಕೆಯಲ್ಲಿ ಇಳೆಯು ನಲಿ[illegible]ಯು. ವಸುಂಧರೆಯು ಬಹುರತ್ನ ಬಹುರತ್ನಸೂಯೆನಿಸಿದಳು. ತನ್ನ ಗರ್ಭದಲ್ಲಿ [illegible]ಮೂಲ್ಯವಾದ ರತ್ನದ ನಿಧಿಯನ್ನೇ ಧರಿಸಿರ್ದಳು ಕೋಸಲಧರಾಭಾಮಿನಿ (ಬಹುರತ್ನಸೂಯೆನಿಸಿದಳು) ವಸುಂಧರೆಯೂ, ಇಂದುಮತೀದೇವಿಯೂ ತಮ್ಮ ಯಜಮಾನನಾಗಿ, ಭರ್ತಾರನಾಗಿ, ಸ್ವಾಮಿಯಾದ, ಮಹೋಗ್ರಪ್ರತಾಪಿಯಾದ ಅಜನಿಂದ ಸಂತೋಷಿಸಿದರು. ಕಾಲಾಂತರದಲ್ಲಿ ಇಂದುಮತಿಯು ಆ ವೀರಾಗ್ರಣಿಗೆ (ಪುರುಷಸಿಂಹನಿಗೆ) ತಕ್ಕವನಾದ ವೀರಪುತ್ರನನ್ನು ಹೆತ್ತು ಸಂಸಾರದ ಋಣವನ್ನು ತೀರಿಸಿದಳು (ರಾಣಿ ಹೆತ್ತಳು ವೀರಸುತನ).

ಕ್ಷಿತಿ = ಮಹಿ—ಅಗ್ರ್ಯಪೌರುಷಮ್ = ಮಹಾಪರಾಕ್ರಮ, ಉತ್ಕೃಷ್ಟಭೋಗಶಕ್ತಿ—

ಬಹೂನಿ ರತ್ನಾನಿ ಶ್ರೇಷ್ಠವಸ್ತೂನಿ=ಬಹುರತ್ನಸೂಯೆನಿಸಿದಳು—ಅಪರಾ=ಅಪರೇಂದು ವಂತಿ—ವೀರಮಜೀಜನತ್ ಸುತಮ್ = ವೀರಂ ಸುತಮಜೀಜನಜ್ಜನಯತಿ ಸ್ಮ= ರಾಣಿ ಪೆತ್ತಳು ವೀರಸುತನ—ರತ್ನಸೂಃ = ಬಹೂನಿ ರತ್ನಾನಿ ಸೂತೇ ಇತಿ ||

**29. ದಶರಶ್ಮಿಶತೋಪಮದ್ಯುತಿಂ |**
**ಯಶಸಾ ದಿಕ್ಷು ದಶಸ್ವಪಿ ಶ್ರುತಮ್ ||**
**ದಶಪೂರ್ವರಥಂ ಯಮಾಖ್ಯಯಾ |**
**ದಶಕಂಠಾರಿಗುರುಂ ವಿದುರ್ಬುಧಾಃ** || ೨೯ ||

ಅರಸನ ಉತ್ತರಾಧಿಕಾರಿಯಾದ ಆ ಗಂಡುಮಗುವನ್ನು ಬುಧಜನರು "ರಥ"ನೆಂಬ ನಾಮಧೇಯದಿಂದ ಕರೆದರು. ಅವನು ಬರೀ ರಥನಲ್ಲ. ಅವನು ಮಹಾರಥ. ಅಷ್ಟು ಮಾತ್ರವಲ್ಲ ಪ್ರಾಯಪ್ರಬುದ್ಧನಾದ ಬಳಿಕ ಯುದ್ಧಕಾಲದಲ್ಲಿ ದಶದಿಕ್ಕುಗಳಲ್ಲಿ ರಥವನ್ನು ನಡೆಸಬಲ್ಲ ತೇಜಸ್ವಿಯಾದ ರಥಾಗ್ರೇಸರನು. ಅವನು ದಶಕಂಠಾರಿಯು ಪಿತನಾಗುವ ಭಾಗ್ಯವನ್ನು ಪಡೆದವನು (ದಶಶಿರಾರಿಯು ಜನಕ ನಹ). ಆ ದಶಕಂಠನು ಸಾಮಾನ್ಯನೇ, ರಾವಣೇಶ್ವರನು ವಿಶ್ವವಿಜೇತನಾದ ರಾಕ್ಷಸಸಾರ್ವಭೌಮನು. ಸುರರನ್ನು ದಿಕ್ಪಾಲಕರನ್ನು ಗೆಲಿದವನು. ತನ್ನ ಯಶಸ್ಸೆಂಬ ಸೂರ್ಯಕಿರಣಗಳಿಂದ ದಶದಿಕ್ಕುಗಳನ್ನು ಬೆಳಗಿಸುತ್ತ, ಪ್ರತಾಪಶಾಲಿಯಾದ, ಪ್ರಚಂಡನಾದ ವಿಶ್ವಸಾಮ್ರಾಟ. ಅವನ ಜಯಗೀತೆಯನ್ನು ಯಕ್ಷ, ಗಂಧರ್ವರು, ಸುರರು, ಕಿನ್ನರರು ರಕ್ಕಸರು ಊರ್ಧ್ವಲೋಕದಲ್ಲಿ (ಅಂತರಿಕ್ಷದಲ್ಲಿ) ಹಾಡುತ್ತಿದ್ದರು (ಯಶದಿಂದ ದಶದಿಶೆಯೊಳೆಸೆವ).

ದಶರಶ್ಮಿಶತಾನಿ ಯಸ್ಯ ಸ ದಶರಶ್ಮಿಶತಃ = ಸೂರ್ಯಃ ಸ ಉಪಮಾ ಯಸ್ಯಾಃ— ಆಖ್ಯಯಾನಾಮ್ನಾ ದಶಪೂರ್ವೋದಶ ಶಬ್ದಪೂರ್ವೋರಥೋರಥ ಶಬ್ದಸ್ತಮ್ = ದಶರಥಮಿತ್ಯರ್ಥಃ—ಶ್ರುತಂ= ಪ್ರಸಿದ್ಧಮ್ ||

**30. ಋಷಿದೇವಗಣಸ್ವಧಾಭುಜಾಂ |**
**ಶ್ರುತಯಾಗಪ್ರಸವೈಃ ಸ ಪಾರ್ಥಿವಃ ||**
**ಅನೃಣತ್ವಮುಪೇಯಿವಾನ್ ಬಭೌ |**
**ಪರಿಧೇರ್ಮುಕ್ತ ಇವೋಷ್ಣದೀಧಿತಿ** || ೩೦ ||

ಆ ಲೋಕಮಾನ್ಯನಾದ ಪಾರ್ಥಿವಪ್ರಭುವು ತ್ರಿವಿಧ ಋಣಗಳನ್ನು ಸಲ್ಲಿಸಿ ಋಣಮುಕ್ತನಾದನು. ಪಿತೃಋಣ, ದೇವಋಣ ಹಾಗೂ ಋಷಿಋಣಗಳನ್ನು ಕ್ರಮವತ್ತಾಗಿ ಸುಸಂತಾನದಿಂದ (ಒಳ್ಳೆಯ ಮಕ್ಕಳಿಂದ) ಪಿತೃಋಣವನ್ನೂ, ಯಜ್ಞಯಾಗಾದಿಗಳನ್ನು ಮಾಡಿ ದೇವಋಣವನ್ನೂ, ವೇದಾಧ್ಯಯನ, ಸ್ವಾಧ್ಯಾಯ, ಯಜನ, ಸಂಧ್ಯಾವಂದನಾದಿ ನಿತ್ಯಾಹ್ನಿಕಗಳಿಂದ ಋಷಿಋಣವನ್ನೂ ಸಲ್ಲಿಸಿ ಋಣಮುಕ್ತನಾದನು (ಯಾಗಸಂತಾನ ಗುಳಿದೆತೀರ್ಚಿಸುತ್ತೆ). ಉಷ್ಣದೀಧಿತಿಯನ್ನು ಪ್ರಕಾಶಿಸುತ್ತಾ, ಚಂಡಕಿರಣಗಳನ್ನು ಲೋಕಕ್ಕೆ ಉಣ್ಣಿಸುತ್ತಾ ಕರ್ತವ್ಯನಿಷ್ಠನಾದ ಸೂರ್ಯಭಗವಾನನು ಪರಿವೇಷಮುಕ್ತನಾಗಿ ಶಾಂತನಾಗಿ ಪರಿಶೋಭಿಸುವಂತೆ ಆ ರಾಜಕುಲತಿಲಕನು (ರಾಜರಾಜನು) ಎಲ್ಲಾ ಸಾಲವನ್ನು ತೀರಿಸಿ ಭಾನುವಿನಂತೆ ವಿರಾಜಿಸಿದನು (ಪರಿವೇಷಮುಕ್ತಾರ್ಕನಂತೆ).

ಸ್ವಧಾಭುಜಾಮ್ = ಪಿತೃಣಾಮ್—ಉಪೇಯಿವಾನ್ = ಪ್ರಾಪ್ತವಾನ್—ಸಪಾರ್ಥಿವೋಜಃ ಪರಿಧೇಃ = ಪರಿವೇಷಾತ್—"ಪರಿವೇಷಸ್ತುಪಂಥಿಃ" ಇತ್ಯಮರಃ—ಉಷ್ಣದೀಧಿತಿ = ಸೂರ್ಯ ಇವ ॥

**31. ಬಲಮಾರ್ತಭಯೋಪಶಾಂತಯೇ ।**
**ವಿದುಷಾಂ ಸತ್ಕೃತಯೇ ಬಹುಶ್ರುತಮ್ ॥**
**ವಸು ತಸ್ಯ ವಿಭೋರ್ನ ಕೇವಲಂ ।**
**ಗುಣವತ್ತಾಪಿ ಪರಪ್ರಯೋಜನಾ ॥ ೩೧ ॥**

ಅವನ ವಿದ್ಯೆ ಬುದ್ಧಿ ಸಾಮರ್ಥ್ಯ, ಬಲ, ಅದ್ಭುತಶಕ್ತಿ, ಗುಣೈಶ್ವರ್ಯಗಳೆಲ್ಲಾ ಆರ್ತರನ್ನು, ಕಷ್ಟಕ್ಕೊಳಗಾದವರನ್ನು ದೀನದಲಿತರನ್ನು, ಸಮಾಜದ ನಿರ್ಬಲ, ದುರ್ಬಲ ವರ್ಗದವರ ರಕ್ಷಣೆಗೆ, ಮನುಕುಲದ ಉದ್ಧಾರಕ್ಕಾಗಿಯೇ ಇತ್ತೆಂದು ಬೇರೆ ಹೇಳ ಬೇಕಾದುದಿಲ್ಲ. ಅವನು ವಿದ್ಯಾಬಲದಿಂದ ಬುಧಜನರ ಸೇವೆಯನ್ನು ಕೈಕೊಂಡನು (ಸಂದಿತೆನೆ ವಿದ್ಯೆ ಬುಧಸೇವೆಯೊಳು). ಬುಧಜನರಿಗೆ, ವಿಜ್ಞಾನಿಗಳಿಗೆ ರಾಜಾಶ್ರಯ ವಿತ್ತನು. ಅವರನ್ನು ಗೌರವಿಸಿದನು, ಬಡವರ ಬಡತನವನ್ನು, ಭಯವನ್ನು ನೀಗಿದನು. ತನ್ನ ಭಾಂಡಾಗಾರದಿಂದ (ಖಜಾನೆಯಿಂದ) ದಾನಾದಿಸತ್ಕಾರ್ಯಗಳಿಂದ ಬಡಜನರನ್ನು ತಣಿಸಿದನು. ತನ್ನಲ್ಲಿರುವ ಅಮೂಲ್ಯವಾದ ಸದ್ಗುಣಗಳಿಂದ ಸಾರಾಸಾರ ವಿಚಾರಮಾಡಿ ಇತರರಿಗೆ ಉಪಯೋಗವಾಗುವಂತೆ ನಡೆದುಕೊಂಡನು. ತನ್ನಲ್ಲಿರುವ ಅಷ್ಟೈಶ್ವರ್ಯವು ಇನ್ನೊಬ್ಬರ ಉಪಯೋಗಕ್ಕೆ,ಪರೋಪಕಾರಾರ್ಥವಾಗಿಯೇಯೆಂದು ಆ ಮಹಾಪುರುಷನು ತಿಳಿದಿದ್ದನು (ಪರಪ್ರಯೋಜನಾರ್ಥವಾಗಿಯೇ). ಹಾಗೆಯೇ ಸತ್ವಸಾಮರ್ಥ್ಯಾದಿ ಬಲಗಳೂ ಭಯವನ್ನು ನೀಗಿಸುವಲ್ಲಿ ಶಿಷ್ಟಸಂರಕ್ಷಣೆಗಾಗಿ, ದುಷ್ಟಶಿಕ್ಷೆಗಾಗಿ, ವಿದ್ಯಾಬಲವು ವಿದ್ಯಾವಂತರನ್ನು ನಮಸ್ಕರಿಸಲು ಹಾಗೂ ಪುರಸ್ಕರಿಸಲು. ಹೀಗೆ ದಯಾಗುಣ(ಸಾಂದ್ರನಾದ)ದ ಸಾಕಾರಮೂರ್ತಿಯಾಗಿ. ದಕ್ಷತೆಯಿಂದ, ನಿಷ್ಪಕ್ಷಪಾತಬುದ್ಧಿಯಿಂದ ರಾಜ್ಯವಾಳುತ್ತ, ಪ್ರಜೆಗಳ ಪ್ರೀತಿವಾತ್ಸಲ್ಯಗಳಿಗೆ ಪಾತ್ರನಾಗಿ ಭೂತಳದಲ್ಲಿ ಶೋಭಿಸುತ್ತಿದ್ದನು (ಗುಣವತ್ತ್ವಮ್ ಇತರೋಪಕೃತಿಗೆಂದು).

ಗುಣವತ್ತಾ = ಗುಣಿತ್ವಮ್—ನ ತು ಸ್ವಾರ್ಥಪರಪೀಡನಾಯ ವಾ—ಬಹುಭೂರಿ ಶ್ರುತಂ ವಿದ್ಯಾ ವಿದುಷಾಂ ಸತ್ಕೃತಯೇ ಸತ್ಕಾರಾಯ ॥

**32. ಸ ಕದಾಚಿದವೇಕ್ಷಿತ ಪ್ರಜಃ ।**
**ಸಹದೇವ್ಯಾ ವಿಜಹಾರ ಸುಪ್ರಜಾಃ ॥**
**ನಗರೋಪವನೇ ಶಚೀಸಖೋ ।**
**ಮರುತಾಂ ಪಾಲಯಿತೇವ ನಂದನೇ ॥ ೩೨ ॥**

ಆ ದೇವಸಮಾನನಾದ ಸೂರ್ಯನಂತೆ ತೇಜಸ್ವಿಯಾದ, ರಾಜನು ಪ್ರಜಾನುರಾಗಿಯಾಗಿ (ಸತ್ಪ್ರಜಾಪ್ರಿಯನೆನಿಸಿ, ಪ್ರಜಾವತ್ಸಲನಾಗಿ) ಸತ್ಸಂಕಲ್ಪದಿಂದ ರಾಜ್ಯಭಾರ ಮಾಡುತ್ತಲಿರಲು ಒಂದು ದಿನ ತನ್ನ ನಗರದ ಸಮೀಪವಿರುವ ಉಪವನವೊಂದರಲ್ಲಿ ಪತ್ನೀ

ಪುತ್ರಸಮೇತನಾಗಿ (ಜಾಯಾಪರಿಸುಪವನದೊಳಗಿಂದು) ವಿಹಾರಕ್ಕೆಂದು ಹೋದನು. ಹೀಗೆ ಪ್ರಿಯಸಖಿ(ಪ್ರಾಣಪ್ರಿಯೆ)ಯೊಂದಿಗೆ ಜೊತೆಗೂಡಿ ದೇವರಾಜನಾದ ಇಂದ್ರನು ಇಂದ್ರಲೋಕದ ನಂದನವನದಲ್ಲಿ ಭಾರ್ಯೆಯಾದ ಶಚೀದೇವಿಯೊಂದಿಗೆ ಕ್ರೀಡಿಸುವಂತೆ ವಿನೋದದಿಂದ ವಿಹರಿಸುತ್ತಿದ್ದನು (ಅಮರೇಂದ್ರನಂತಂತು ವಿಹರಿಸಿದನೊಲಿದು).

ಶೋಭನಾಪ್ರಜಾ—ಅಪೇಕ್ಷಿತಪ್ರಜೋ = ಅಕೃತೋಭಯಾತ್ಮನಾನುಸಂಹಿತಪ್ರಜಃ—ಸುಪ್ರಜಾಃ=ಸುಪುತ್ರವಾನ್—ಶಚೀಸಖಃ=ಶಚ್ಯಾಸಹೇತ್ಯರ್ಥಃ—ಮರುತಾಂ ದೇವಾನಾಂ ಪಾಲಯಿತೇಂದ್ರ ಇವ—ವಿಜಹಾರ = ಚಿಕ್ರೀಡ = ವಿಹರಿಸಿದ.

33. ಅಥ ರೋಧಸಿ ದಕ್ಷಿಣೋದಧೇಃ ।
ಶ್ರಿತಗೋಕರ್ಣನಿಕೇತಮೀಶ್ವರಮ್ ॥
ಉಪವೀಣಯಿತುಂ ಯಯೌ ರವೇಃ ।
ಉದಯಾವೃತ್ತಿಪಥೇನ ನಾರದಃ ॥ ೩೩ ॥

ಅದೇ ವೇಳೆಗೆ ಸರಿಯಾಗಿ ತ್ರಿಲೋಕಸಂಚಾರಿಗಳಾದ, ಬ್ರಹ್ಮಮಾನಸಪುತ್ರರಾದ ನಾರದಮಹರ್ಷಿಗಳು ಆಕಾಶಮಾರ್ಗದಲ್ಲಿ ಗೋಕರ್ಣ ಶ್ರೀಕ್ಷೇತ್ರಕ್ಕೆ ಬರುತ್ತಲಿದ್ದರು. ಆ ಗೋಕರ್ಣಮಹಾಕ್ಷೇತ್ರವು ಪವಿತ್ರವಾದ ಶಿವಕ್ಷೇತ್ರ, ಶಿವನ ಸನ್ನಿಧಿ. ಅದು ದಕ್ಷಿಣ ಭಾರತದ ಪಡುವಣ ಕಡಲಂಚಿನಲ್ಲಿರುವ ದಿವ್ಯಸನ್ನಿಧಿ, ದೇವಸನ್ನಿಧಿ, ಅಂದು ಉತ್ತರಾಯಣದ ಪುಣ್ಯಕಾಲ. ಸೂರ್ಯದೇವನು ಉತ್ತರದಿಕ್ಕಿಗೆ ತಿರುಗುವ ಉತ್ತರಾಪಥದ ಮಾರ್ಗದಲ್ಲಿ ವೀಣಾಗಾನ ಮಾಡುತ್ತ ನಾರದರು ವೀಣೆಯನ್ನು ಈಶ್ವರನ ಸನ್ನಿಧಿಯಲ್ಲಿ ನುಡಿಸಲು ಸುರಮಾರ್ಗದಿಂದ ಬರುತ್ತಲಿದ್ದರು (ಸುರಮಾರ್ಗದಿಂದೆ ಐತರಲು).

ರೋಧಸಿ = ತೀರೇ—ಉಪವೀಣಯಿತುಂ = ವೀಣಯೋಪಸಮೀಪೇ ಗಾತುಮ್, ವೀಣಾಶಬ್ದಾದುಪಗಾನಾರ್ಥೇ—ನಾರದೋ = ದೇವರ್ಷಿ—ರವೇಃ = ಸೂರ್ಯಸ್ಯ ಸಂಬಂಧಿನಾ—ಉದಯಾವೃತ್ತಿಪಥೇನ = ಆಕಾಶಮಾರ್ಗೇಣ ॥

34. ಕುಸುಮೈರ್ಗ್ರಥಿತಾಮಪಾರ್ಥಿವೈಃ ।
ಸ್ರಜಮಾತೋದ್ಯಶಿರೋ ನಿವೇಶಿತಾಮ್ ॥
ಅಹರತ್ಕಿಲ ತಸ್ಯ ವೇಗವಾನ್ ।
ಅಧಿವಾಸಸ್ಪೃಹಯೇವ ಮಾರುತಃ ॥ ೩೪ ॥

ಮುನಿಯ ವೀಣೆಯ ತುದಿಯ ಭಾಗದಲ್ಲಿ ದೇವಕುಸುಮಮಾಲೆಯು ಇದ್ದಿತು. ಆ ಸುರಲೋಕದ ಹೂಗಳ ಸುಗಂಧಕ್ಕೆ (ಸೌರಭ)ಕ್ಕೆ ಮನಸೋತು ಮದವಾಂತ ಮಾರುತನು ಪ್ರಚಂಡವಾಗಿ ಬೀಸುತ್ತ (ಸೌರಭಸ್ಪೃಹನೆನಲು) ಆ ಸುಮಮಾಲೆಯನು (ಕುಸುಮಮಾಲೆಯನು) ಅಪಹರಿಸಿದನು ಭರದೆ.

ಅನ್ವಯ :—ಅಪಾರ್ಥಿವೈಃ ಕುಸುಮೈಃ ಗ್ರಥಿತಾಂ ತಸ್ಯ ಆತೋದ್ಯಶಿರೋನಿವೇಶಿತಾಂ ಸ್ರಜಂ ವೇಗವಾನ್ ಮಾರುತಃ ಅಧಿವಾಸಸ್ಪೃಹಯಾ ಇವ ಅಹರತ್ ಕಿಲ ॥

ಅಧಿವಾಸಃ = ಸಂಸ್ಕಾರೋ ಗಂಧಮಾಲ್ಯಾದ್ಯೈಃ ಯಃ ಸ್ಯಾತ್ತದಧಿವಾಸನಮ್ ॥

ಅಪಾರ್ಥಿವೈರಭೌಮೈಃ = ದಿವ್ಯೈರಿತ್ಯರ್ಥಃ—ಕುಸುಮೈರ್ಗ್ರಥಿತಾಮ್ = ರಚಿತಾಮ್—ಶಿರೋನಿವೇಶಿತಾಮ್ = ಶಿರಸ್ಯಗ್ರೇ ನಿವೇಶಿತಾಮ್—ಸ್ರಜಂ = ಮಾಲಾಂ—ಅಧಿವಾಸೇ = ವಾಸನಾಯಾಂ—ಅಹರತ್ಕಿಲ = ಕಿಲ ಇತಿ ಐತಿಹ್ಯೇ ॥

35. ಭ್ರಮರೈಃ ಕುಸುಮಾನುಸಾರಿಭಿಃ ।
ಪರಿಕೀರ್ಣಾ ಪರಿವಾದಿನೀ ಮುನೇಃ ॥
ದದೃಶೇ ಪವನಾವಲೇಪಜಂ ।
ಸೃಜತೀ ಬಾಷ್ಪಮಿವಾಂಜನಾವಿಲಮ್ ॥ ೩೫ ॥

ತನ್ನ ಕುಸುಮಮಾಲೆಯಿಂದ ವಂಚಿತನಾದ ವೀಣೆಯು ದುಃಖಾತಿರೇಕದಿಂದ, ವೀಣೆಯೇ ಅಳುವಂತೆ ಕಂಡಿತು. ಆ ಸುಗಂಧಕುಸುಮಮಾಲೆಯ ಸುತ್ತ ಕಪ್ಪಾದ ತುಂಬಿಗಳು ಬಳಸಿನಿಂದಿದ್ದುವು. ಇದೀಗ ಆ ತುಂಬಿಗಳನ್ನು ಕಂಡಾಗ, ಪವನವಂಚಿತವಾದ ಪುಷ್ಪಮಾಲೆಗೆ ವೀಣೆಯು (ಪವನವಂಚಿತೆ ವೀಣೆ) ಬಾಷ್ಪಬಿಂದುಗಳನ್ನು ಸುರಿಸುವಂತೆ (ಕಂಬನಿಯ ಸುರಿಸುವೊಲು) ಆ ಕಣ್ಣೀರಹನಿಗಳು ಕಾಡಿಗೆಯ ಮಿಶ್ರಣದಿಂದ ಕಪ್ಪಾಗಿ ತೊಟ್ಟಿಕ್ಕುವಂತೆ ಭ್ರಮರಗಳೋಪಾದಿಯಲ್ಲಿ ತೋರಿದುವು.

ಅನ್ವಯ :—ಕುಸುಮಾನುಸಾರಿಭಿಭ್ರಮರೈಃ ಪರಿಕೀರ್ಣಾ ಮುನೇಃ ಪರಿವಾದಿನೀ ಪವನಾವಲೇಪಜಮ್ ಅಂಜನಾವಿಲಂಬಾಷ್ಪಂ ಸೃಜತೀ ಇವ ದದೃಶೇ ॥

ಕುಸುಮಾನುಸಾರಿಭಿಃ=ಪುಷ್ಪಾನುಯಾಯಿಭಿ—ಪರಿಕೀರ್ಣಾ=ವ್ಯಾಪ್ತಾ—ಪರಿವಾದಿನೀ ವೀಣಾ—ಉತ್ಪ್ರೇಕ್ಷಾಲಂಕಾರ ॥

36. ಅಭಿಭೂಯ ವಿಭೂತಿಮಾರ್ತವೀಂ ।
ಮಧುಗಂಧಾತಿಶಯೇನ ವೀರುಧಾಮ್ ॥
ನೃಪತೇರಮರಸ್ರಗಾಪ ಸಾ ।
ದಯಿತೋರುಸ್ತನಕೋಟಿಸುಸ್ಥಿತಿಮ್ ॥ ೩೬ ॥

ಆ ದೇವಕುಸುಮಮಾಲೆಯು ತನ್ನ ಅತಿಶಯವಾದ ಮಧುಗಂಧದ ಪರಿಮಳದಿಂದ ಅರಸನ ನಗರೋಪವನದ ಹೂಗಳ ಸೌರಭವನ್ನು ಮೀರಿಸುತ್ತ (ವೀರುಧಗಳೈಸಿರಿಯ ಹಳಿದು) ವಸಂತರಾಣಿಯಂತೆ ಕಂಗೊಳಿಸುತ್ತಿರುವ ರಾಜನ ದಯಿತೆ, ಆತ್ಮಪ್ರಿಯೆ ಇಂದುಮತಿಯ ಬಳಿ ಸಾರ್ದುದು (ಅಜನ ದಯಿತಾಮಣಿಯು). ಆ ಸುಮಮಾಲೆಯು ಯೌವನದಿಂದ ಶೋಭಿಸುತ್ತಿರುವ ಉನ್ನತವಾದ ಕುಚಮಂಡಲಗಳಿಂದ ಶೋಭಿಸುತ್ತಿರುವ ಆ ದೇವಿಗೆ ಕಂಠಾಭರಣವಾಗಿ (ಕತ್ತಿಗೆ ಹಾರವಾಗಿ) ಆಕೆಯ ಕುಚಚೂಚುಕದ ಮೇಲೆ ಬಂದು ನೆಲಸಿತು.

ಅನ್ವಯಃ:—ಸಾ ಅಮರಸ್ರಕ್ ಮಧುಗಂಧಾತಿಶಯೇನ ವೀರುಧಾಮ್ ಆರ್ತವೀಂ ವಿಭೂತಿಮ್ ಅಭಿಭೂಯ ನೃಪತೇಃ ದಯಿತೋಪೇರುಸ್ತನಕೋಟಿಸುಸ್ಥಿತಿಮ್ ಆಪ ॥

ವಿಭೂತಿಮ್ = ಶೋಭೆ—ಸಾಽಮರಸ್ರ = ದಿವ್ಯಮಾಲಾ—ಮಧುಗಂಧಯೋಃ ಮಕರಂದಸೌರಭಯೋರತಿಶಯೇನಾಧಿಕ್ಯೇನ—ವೀರುಧಾಂ = ಲತಾನಾಂ—ವಿಭೂತಿಂ =

ಸಮೃದ್ಧಿಮಭಿಭೂಯ—ದಯಿತಾಯಾ = ಇಂದುಮತ್ಯಾ—ಕೋಟೀ = ಚೂಚುಕೌ—ಆಪ = ಪ್ರಾಪ್ತಾ ||

**೩೭. ಕ್ಷಣಮಾತ್ರ ಸಖೀಂ ಸುಜಾತಯೋಃ |**
**ಸ್ತನಯೋಸ್ತಾಮವಲೋಕ್ಯ ವಿಹ್ವಲಾ ||**
**ನಿಮಿಮೀಲ ನರೋತ್ತಮಪ್ರಿಯಾ |**
**ಹೃತಚಂದ್ರಾ ತಮಸೇವ ಕೌಮುದೀ** || ೩೭ ||

ಆ ಕುಸುಮಮಾಲೆ ಕತ್ತಿಗೆ ಹಾರವಾಗಿ ನೆಲೆಗೊಂಡ ಆ ಕ್ಷಣವೇ, ಆ ನರೋತ್ತಮನ ಪ್ರಿಯೆಯು, ಆ ಹೂಮಾಲೆಯ ಪರಿಮಳವನ್ನು ಆಘ್ರಾಣಿಸುತ್ತಿದ್ದಂತೆ, ತನ್ನ ಕಣ್ಣುಗಳನ್ನು ಮುಚ್ಚಿದಳು. ಅರಸನು ನೋಡುತ್ತಿದ್ದಂತೆ ಒಂದು ಅರೆಕ್ಷಣದಲ್ಲಿ ಆತನ ಸಹಧರ್ಮಿಣಿಯು ರಾಹುವು ಅಗಿದ ಪೌರ್ಣಮಿಚಂದ್ರನ ಬೆಳದಿಂಗಳು ಗ್ರಹಣಕಾಲದಲ್ಲಿ ಮಾಯವಾಗಿ ಕತ್ತಲು ಲೋಕವನ್ನು ಆವರಿಸುವಂತೆ (ರಾಹುವಗಿದ ಇಂದುವಿನ ಜೊನ್ನದೊಲು) ಸೌರಭದ ಪರವಶತೆಯಿಂದ ಆ ಲಲನಾಮಣಿ ಕುಸಿದಳು. ಆಕೆಯ ಕಣ್ಣುಗಳು ಪೂರ್ಣವಾಗಿ ಮುಚ್ಚಿಹೋದುವು. ಆಕೆ ಮೂರ್ಛೆಗೆ ಸಂದಳು, ನಿಶ್ಚೇಷ್ಟಿತಳಾಗಿ ಭೂಮಿಯ ಮೇಲೆ ಮೈಮರೆದು ಒರಗಿದಳು ಅಂಗನೆ.

ಸುಜಾತಯೋಃ = ಸುಂದರವಾದ—ಸುಜಾತಯೋಃ = ಸಂಜನ್ಮನೋಃ—ವಿಹ್ವಲಾ = ಪರವಶಾ—ನರೋತ್ತಮಪ್ರಿಯೇಂದುಮತೀ ತಮಸಾ=ರಾಹುಣಾ—"ತಮಸ್ತು ರಾಹುಃ ಸ್ವರ್ಭಾನುಃ" ಇತ್ಯಮರಃ—ಹೃತಚಂದ್ರಾಕೌಮುದೀ = ಚಂದ್ರಿಕೇಯ—ನಿಮಿಮೀಲ = ಮುಮೋಹ, ಮಮಾರೇತ್ಯರ್ಥಃ—"ನಿಮೀಲೋ ದೀರ್ಘನಿದ್ರಾ ಚ" ಇತಿ ಹಲಾಯುಧಃ ||

**೩೮. ವಪುಷಾ ಕರಣೋಜ್ಝಿತೇನ ಸಾ |**
**ನಿಪತನ್ತೀ ಪತಿಮಪ್ಯಪಾತಯತ್ ||**
**ನನು ತೈಲನಿಷೇಕಬಿಂದುನಾ |**
**ಸಹದೀಪಾರ್ಚಿರುಪೈತಿ ಮೇದಿನೀಮ್** || ೩೮ ||

ಒಡನೆಯೆ ಮಹಾರಾಣಿ ಇಂದುಮತಿಯ ಕರಣಗಳು, ಇಂದ್ರಿಯಗಳ ಶಕ್ತಿ ಉಡುಗಿ ಹೋದುವು (ಕರಣಗಳಿಂದ ಉಡುಗುತಿರಲು). ಆಕೆಯ ಚೈತನ್ಯವು ತೇಜಸ್ಸು ನಾಮಶೇಷವಾಯಿತು, ಮಾಯವಾಯಿತು. ಆಕೆಯ ಒಡಲು ಇಳೆಗೆ ಮಾಂಸದ ಚೆಂಡಿನಂತೆ ಉರುಳಿಬಿತ್ತು. ಆಗ ಆಕೆಯ ಜೊತೆಯಲ್ಲಿಯೇ ಆಕೆಯ ಎರೆಯನೂ (ಹೃದಯೇಶ್ವರನೂ) ಧರೆಗೆ ಉರುಳ್ದನು. ಉರಿಯುತ್ತಿರುವ ಮಣಿದೀಪವು ಒಮ್ಮೆಯೇ ಉರುಳಿಬಿದ್ದು ನಂದಿಹೋಗುವಂತೆ ಅದರ ಜ್ವಾಲೆಯು (ಜ್ಯೋತಿಯು, ಆತ್ಮಜ್ಯೋತಿಯೂ) ಆರಿಹೋಗಲು ಅದರ ಜೊತೆಯಲ್ಲಿಯೇ ಎಣ್ಣೆಹನಿಯೂ, ಎಣ್ಣೆಬಿಂದುಗಳೂ ತೊಟ್ಟುತೊಟ್ಟಾಗಿ ತೊಟ್ಟಿಕ್ಕುತ್ತಾ ಧರೆಗೆ ಬೀಳುತ್ತಿರುವುದು ಸಹಜವಷ್ಟೆ (ಸ್ವಾಭಾವಿಕವಲ್ಲವೇ). ಅದೇ ತೆರನಾಗಿ ಇಂದುಮತಿಯೊಂದಿಗೆ ಭೂಪತಿಯಾದ ಅಜನು ಭೂಮಿಯ ಮೇಲೆ ಮೈಮರೆದು, ಪರಿವೆಯಿಲ್ಲದೆ, ಪ್ರಜ್ಞಾಶೂನ್ಯನಾಗಿ ಧರಾತಲದಲ್ಲಿ ಒರಗಿರ್ದನು. ಆದರೆ

ದೀಪದ (ಹಣತೆಯ) ಅಥವಾ ಪಂಜಿನ ಜ್ವಾಲೆಯು ಶಾಶ್ವತವಾಗಿ ನಂದಿಹೋಯಿತು. ಜ್ಯೋತಿಯಂತೆ ಬೆಳಗುತ್ತಿದ್ದ ಇಂದುಮತಿಯ ಜೀವಜ್ಯೋತಿಯು ಕಣ್ಮರೆಯಾಯಿತು. ಮರಣದಲ್ಲಿ ಸೇರಿಹೋಯಿತು. ಜ್ಯೋತಿಯು ನಂದಿಹೋಗಲು ಆದರಿಂದ ಇಳಿದುಬರುವ ಎಣ್ಣೆಹನಿಗಳಲ್ಲಿ ಇನ್ನೂ ಜೀವಸತ್ವವು ಅಡಗಿರುವಂತೆ, ಅಜನು ಸಾಯದೆ ಬದುಕಿ ಉಳಿದಿದ್ದನು. ಎಣ್ಣೆಯ ಬಿಂದುಗಳು ಜೀವನದ, ದೀಪದ ಅಥವಾ ಪ್ರಾಣದ ಸಂಕೇತ ವಾಗಿದೆ. ಅದು ಜೀವಿತಶೇಷವನ್ನು ಸೂಚಿಸುತ್ತದೆ (ಎಣ್ಣೆಹನಿಯುರಿಯು).

"ಕರಣಂ ಸಾಧಕತಮಂಕ್ಷೇತ್ರಗಾತ್ರೇಂದ್ರಿಯೇಷ್ವಪಿ" ಇತ್ಯಮರಃ—ತಥಾ ಹಿ—ನಿಷಿಚ್ಯತ ಇತಿ ನಿಷೇಕಃ—ತೈಲಸ್ಯ ನಿಷೇಕಃಸ್ತೈಲನಿಷೇಕಃ—ತಸ್ಯ ಬಿಂದುನಾ ಸಹ ದೀಪಾರ್ಚಿರ್ದೀಪಜ್ವಾಲಾ ಮೇದಿನೀಂ ಭುವಮಃಪೈತಿ ನನೂಪೈತ್ಯೇವ—ಇಂದುಮತ್ಯಾ ದೀಪಾರ್ಚಿರುಪಮಾನಂ—ಅಜಸ್ಯ ತೈಲಬಿಂದುಃ ॥

39. ಉಭಯೋರಪಿ ಪಾರ್ಶ್ವವರ್ತಿನಾಂ ।
ತುಮುಲೇನಾರ್ತರವೇಣವೇಜಿತಾಃ ॥
ವಿಹಗಾಃ ಕಮಲಾಕರಾಲಯಾಃ ।
ಸಮದುಃಖಾ ಇವ ತತ್ರ ಚುಕ್ರುಶುಃ ॥ ೩೯ ॥

ಆ ಸತಿಪತಿಯ ಸೇವಕರು ಒಮ್ಮಿಂದೊಮ್ಮೆಯೇ, ದಿಗ್ಭ್ರಾಂತರಾಗಿ ಕಿರುಚಾಡಿದರು. ಆ ಆರ್ತನಾದವು ಸುತ್ತಲೂ ಪ್ರತಿಧ್ವನಿಯಾಯಿತು. ಆಗ ಅಲ್ಲಿಯೇ ಸಮೀಪದಲ್ಲಿ ತಾವರೆ ಕೊಳದಲ್ಲಿದ್ದ (ತಾವರೆಯ ಹೂಗೊಳದ ಹಕ್ಕಿಗಳು) ಹಕ್ಕಿಗಳ ಸಮುದಾಯವು ಆ ಆರ್ತ ನಾದವನ್ನು ಕೇಳಿ ತಾವೂ ಭಯಪಟ್ಟು ಚೀರಾಡಿದುವು. ತಾವೂ ಸಮದುಃಖ ಹೊಂದಿ ದಂತೆ ಶೋಕಸಂತಾಪವನ್ನು ಪ್ರಕಟಿಸುವಂತೆ ಆ ಪಕ್ಷಿಸಂಕುಲವು, ಆ ಜಲಾಶಯದ ಶಾಂತ ಮಯ ವಾತಾವರಣವು ಕದಡುವಂತೆ ಗಟ್ಟಿಯಾಗಿ ಚೀರಿದುವು. ಆಗ ಪ್ರತಿಧ್ವನಿಯು ಕೇಳಿಸಿತು. ಹೀಗೆ ಆ ಸತಿಪತಿಯರ ಅನುಚರರ ದುಃಖಾರ್ತರವದೊಂದಿಗೆ ಹಂಸ, ಕಾರಂಡ, ಬಕಪಕ್ಷಿಗಳೇ ಮೊದಲಾದ ನೀರುಹಕ್ಕಿಗಳ ಧ್ವನಿಯೂ ಸೇರಿ ತುಮುಲಾರ್ತರವವು ಎಲ್ಲೆಡೆ ಕೇಳಿಸಿತು. ಆ ಕಮಲಾಕರದಲ್ಲಿದ್ದ ಹಕ್ಕಿಗಳು ಮಾನವರಂತೆ ಸಮದುಃಖಿಗಳಂತೆ ದುಃಖಿಸಿ ಧ್ವನಿಗೈದುವು (ತುಮುಲಾರ್ತರವದಿಂದ ಚೀರಿದುವು ಸುಗಿದು).

ವೇಜಿತಾಃ = ಭೀತಾಃ—ಪಾರ್ಶ್ವವರ್ತಿನಾಂ = ಪರಿಜನಾನಾಂ—ತುಮುಲೇನ = ಸಂಕು ಲೇನ—ಆರ್ತರವೇಣ = ಕರುಣಸ್ವನೇನ—ಸಮದುಃಖಾ ಇವ = ಸಮಾನಶೋಕಾ ಇವ—ಚುಕ್ರುಶುಃ = ಕ್ರೋಶಂತಿ ಸ್ಮ—ಕಮಲಾಕರಾಲಯಾಃ = ಕಮಲಾಕರಃ ಆಲಯೋ ಯೇಷಾಂತೇ ॥

40. ನೃಪತೇರ್ವ್ಯಜನಾದಿಭಿಸ್ತಮೋ ।
ನುನುದೇ ಸಾ ತು ತಥೈವ ಸಂಸ್ಥಿತಾ ॥
ಪ್ರತಿಕಾರವಿಧಾನಮಾಯುಷಃ ।
ಸತಿ ಶೇಷೇ ಹಿ ಫಲಾಯ ಕಲ್ಪತೇ ॥ ೪೦ ॥

ಅರಸನಿಗೆ ಸೇವಕರು ಮಾಡಿದ ಪ್ರಥಮ ಚಿಕಿತ್ಸೆಯ ಫಲವಾಗಿ (ವ್ಯಜನಾದಿಸಾಧನದೊಳ್) ಮೂರ್ಛೆಯು ಅಳಿದು ಮೆಲ್ಲಮೆಲ್ಲನೆ ಎಚ್ಚರಗೊಂಡನಾದರೂ ಇಂದುಮತಿಯ ದೇಹಸ್ಥಿತಿಯಲ್ಲಿ ಯಾವ ಬದಲಾವಣೆಯೂ ತೋರಲಿಲ್ಲ. ಅವಳು ಶಾಶ್ವತವಾದ ಮರಣಶಯ್ಯೆಯಲ್ಲಿ ಮಲಗಿದ್ದಳು. ಆದರೂ ಆಯುಶ್ಶೇಷದಿಂದ ಕ್ಷಣಕಾಲ ಔಷಧೋಪಚಾರದ ಮಹಿಮೆಯಿಂದ (ಔಷಧವಿಶೇಷದಿಂದ) ಸ್ವಲ್ಪ ಪ್ರತಿಕ್ರಿಯೆ ತೋರಿಬಂದಿತಾದರೂ ಅದು ಕೇವಲ ಕ್ಷಣಿಕ. ಹಾಗೆ ತೋರಿಬರುವುದು ಕೆಲವೇ ಕ್ಷಣಗಳು ಮಾತ್ರ (ಫಲಿಸುವುವು ಪ್ರತಿಕಾರ ಸಾಧನಗಳಿರ್ದೊಡೆ ಆಯುಶ್ಶೇಷಮಲ್ತೆ).

ತಥೈವ ಸುಸ್ಥಿತಾ=ಮೃತಾ—ತಥಾ ಹಿ ಪ್ರತಿಕಾರವಿಧಾನಂ ಚಿಕಿತ್ಸಾ ಯುಷೋಜೀವಿತಲಸ್ಯ ಶೇಷೇ ಸತಿ ವಿದ್ಯಮಾನೇ—"ಆಯುರ್ಜೀವಿತಕಾಲೋನಾ" ಇತ್ಯಮರಃ=ಫಲಿಸುವುವು ಪ್ರತಿಕಾರಸಾಧನಗಳಿರ್ದೊಡೆ ಆಯುಸ್ ಶೇಷಮ್ ಅಲ್ತೆ.

41. ಪ್ರತಿಯೋಜಯಿತವ್ಯವಲ್ಲಕೀ ।
ಸಮವಸ್ಥಾಮಥ ಸತ್ತ್ವವಿಪ್ಲವಾತ್ ॥
ಸ ನಿನಾಯ ನಿತಾನ್ತವತ್ಸಲಃ ।
ಪರಿಗೃಹ್ಯೋಚಿತಮಂಕಮಂಗನಾಮ್ ॥ ೪೧ ॥

ಆ ನಿತಾಂತವತ್ಸಲನಾದ ಭೂವಲ್ಲಭನು, ಜೀವಶೂನ್ಯವಾದ ತನ್ನ ಪ್ರಾಣಪ್ರಿಯೆಯ ದೇಹವನ್ನು (ಕಳೇಬರವನ್ನು) ಮೆಲ್ಲನೆ ಕೈಯೊಳಾಂತು ತನ್ನ ತೊಡೆಯ ಮೇಲೆ ತಲೆಯನ್ನಿರಿಸಿ ಮಲಗಿಸಿಕೊಂಡನು (ಕೈಗಳಿಂದ ಅಂಗನೆಯ ಅಂಕದೊಳು ತಳೆದು) ಆ ರಾಜನು ತನ್ನ ಸತಿಯ ಮೇಲೆ ತಳೆದ ಪ್ರೀತಿ, ಪ್ರೇಮವು ಅವರ್ಣನೀಯವಾದುದು. ಸತ್ವಹೀನ, ಚೈತನ್ಯರಹಿತವಾಗಿರುವ ತನ್ನ ಪ್ರಾಣಸತಿಯ ದೇಹವೀಗ ತಂತಿಗಳು ಅಳವಡಿಸದಿರುವ ಒಂದು ವೀಣೆಯಂತೆ ಅವನ ಕಣ್ಣಿಗೆ ಕಂಡಿತು (ತಂತಿಗಳು ಅಳವಡಿಸದಿರುವ ವೀಣೆಯೊಲಿರುವ ಸತ್ವಹೀನಳನು). ಆ ವೀಣಾದಂಡವನ್ನು ತನ್ನ ತೊಡೆಯ ಮೇಲಿರಿಸಿ, ಅದನ್ನು ತಂತಿಗಳಿಂದ ಪುನಃ ನಿಯೋಜಿಸುವಂತೆ, ಆಕೆಯಲ್ಲಿ ಪ್ರಾಣವಾಯುವು ಆವಿರ್ಭವಿಸಲು, ಪ್ರಾಣಜ್ಯೋತಿಯು ಮೂಡಿಸಲು ಯತ್ನಿಸುವಂತೆ, ಆ ಸೂರ್ಯವಂಶ ಕುಲದೀಪಕನು ಪ್ರಯತ್ನಿಸುತ್ತಿರುವಂತೆ ತೋರಿತು.

ಅನ್ವಯ :—ಅಥ ಸತ್ವವಿಪ್ಲವಾತ್ ಪ್ರತಿಯೋಜಯಿತವ್ಯವಲ್ಲಕೀ ಸಮವಸ್ಥಾಮ್ ತಾಮ್ ಅಂಗನಾಂ ನಿತಾಂತವತ್ಸಲಃ ಸಃ ಪರಿಗ್ರಹ್ಯ ಉಚಿತಮ್ ಅಂಕಂ ನಿನಾಯ ॥

ಯಾವಲ್ಲಕೀ = ವೀಣಾ—ವಿಪ್ಲವಾತ್ = ವಿನಾಶಾದ್ಧೇತೋಃ—ನಿತಾಂತವತ್ಸಲ = ಅತಿಪ್ರೇಮವಾನ್—ನಿನಾಯ = ನೀತವಾನ್ ॥

42. ಪತಿರಂಕನಿಷಣ್ಣಯಾ ತಯಾ ।
ಕರಣಾಪಾಯ ವಿಭಿನ್ನವರ್ಣಯಾ ॥
ಸಮಲಕ್ಷ್ಯತ ಬಿಭ್ರದಾವಲೀಂ ।
ಮೃಗಲೇಖಾಮುಷಸೀವ ಚಂದ್ರಮಾಃ ॥ ೪೨ ॥

ಕರಣಗಳ ಹಾಗೂ ಇಂದ್ರಿಯಗಳ ಬಲವಳಿದು, ಬಣ್ಣಗೆಟ್ಟಿರುವ, ಚೈತನ್ಯವು ನಶಿಸಿರುವ ಇಂದುಮತಿಯನ್ನು ತೊಡೆಯೊಳಾಂತು ಅಜನು ಶುಶ್ರೂಷೆ ನಡೆಸಿದನು. ಆಗ ಆ ಮೃಗನಯನೆಯು ಈ ತೆರನಾಗಿ ಕಾಣಿಸಿದಳು. ಆಕೆಯನ್ನು ತನ್ನ ತೊಡೆಯೊಳಾಂತ ಅಜನು ಉಷಃಕಾಲದಲ್ಲಿ, ಪ್ರಾತಃಕಾಲದ ಆರಂಭದಲ್ಲಿ, ಬಾನಿನ ಅಂಚಿನಲ್ಲಿ ಕಾಣಿಸುತ್ತ ತೇಜಸ್ಸು ಕೆಟ್ಟಿರುವ, ಮಲಿನವಾಗಿ ತೋರುತ್ತಿರುವ ಜಿಂಕೆಯ ಗುರುತಿರುವ ಕಳೆಗುಂದಿರುವ ಚಂದ್ರಮನಂತೆ ತೋರಿದನು. ಆ ಸರೋಜನಯನೆಯು ಚಂದ್ರನಲ್ಲಿ (ಶಶಿಬಿಂಬದಲ್ಲಿ) ನಸುತೋರುವ ಮೃಗಚಿಹ್ನೆಗೆ ಸಾಟಿಯಾಗಿ, ಮೃಗಲೇಖಾಲಾಂಛನಕ್ಕೆ ಸಮವಾಗಿ ತೋರುತಿರ್ದಳು (ತೇಜಗೆಟ್ಟ ಎರಳೆ ಕುರುಹು ಅಂತಿರುವ ಪೊಳ್ತರೆಯ ಪೆರೆಯುವೋಲಿಹನು).

ಅನ್ವಯ:—ಪ್ರತಿಃ ಅಂಕ ನಿಷಣ್ಣಯಾ ಕರಣಾಪಾಯವಿಭಿನ್ನವರ್ಣಯಾ ತಯಾ ಉಷಸಿ ಆವಿಲಾಂ ಮೃಗಲೇಖಾಂ ಬಿಭ್ರತ್ ಚಂದ್ರಮಾ ಇವ ಸಮಲಕ್ಷ್ಯತ ॥

ಪತಿರಂಕನಿಷಣ್ಣಯೋತ್ಸಂಗಸ್ಥಿತಯಾ=ತನ್ನ ಸತಿಯನು ತೊಡೆಯೊಳಾಂತ ಅಜನು—ಕರಣಾನಾಮಿಂದ್ರಿಯಾಣಾಮಪಾಯೇ ನಾಪಗಮೇನ ಹೇತುನಾ ವಿಭಿನ್ನವರ್ಣಯಾ ವಿಚ್ಛಾಯಯಾತಯಾ = ಕರಣಗಳ ಬಲವಳಿದು ಬಣ್ಣಗೆಟ್ಟಿರುವಳನು—ಮೃಗಲೇಖಾಂ = ಮೃಗರೇಖಾರೂಪಂ ಲಾಂಛನಂ—ಉಷಸಿ = ಪ್ರಾತಃಕಾಲ—ಆವಿಲಾಂ=ಮಲಿನಾಂ—ಉಪಮಾಲಂಕಾರ ॥

**43. ವಿಲಲಾಪ ಸ ಬಾಷ್ಪಗದ್ಗದಂ ।**
**ಸಹಜಾಮಪ್ಯಪಹಾಯಧೀರತಾಮ್ ।**
**ಅಭಿತಪ್ತಮಯೋಽಪಿ ಮಾರ್ದವಂ ।**
**ಭಜತೇ ಕೈವ ಕಥಾ ಶರೀರಿಷು** ॥ ೪೩ ॥

ಅಜನು ಧೈರ್ಯಗುಂದಿ, ಕುಸಿದು. ಎದೆಗುಂದಿ, ದಿಗ್ಭ್ರಾಂತನಾಗಿ ಸಾಮಾನ್ಯ ಮಾನವರಂತೆ ಅತ್ತನು. ಕಣ್ಣಾಲಿಗಳು ತುಂಬಿ, ಕಂಬನಿ ಮಿಡಿಯುತ್ತಾ, ಗದ್ಗದಕಂಠನಾಗಿ, ತನ್ನ ಸತಿಯ ದೀನಾವಸ್ಥೆಯನ್ನು ಕಂಡು ಶೋಕಭರದಿಂದ ವಿಲಪಿಸಿದನು (ಬಾಷ್ಪಗದ್ಗದವೆರೆದು ನಿಜಧೈರ್ಯವುಳಿದು), ಅಚೇತನವಾದ ಕಠಿಣವಾದ ಲೋಹವೆನಿಸಿದ ಕಬ್ಬಿಣವೆ ಕಾಯಿಸಿದಾಗ ಮೃದುವಾಗುವಾಗ ಮಾನವರ ಪಾಡೇನು. ಚಿಂತೆಗೂ ಚಿತೆಗೂ ಬಿಂದು ಮಾತ್ರವೆ ವ್ಯತ್ಯಾಸ.

ಧೀರತಾಂ ಧೈರ್ಯಮಪಹಾಯ ವಿಪ್ರಕೀರ್ಯ ಬಾಷ್ಪೇಣ ಕಂಠಗತೇನ ಗದ್ಗದಂ ವಿಶೀರ್ಣಾಕ್ಷರಂ ಯಥಾ ತಥಾ ಧ್ವನಿಮಾತ್ರಾನುಕಾರಿ ಗದ್ಗದಶಬ್ದೈರ್ವಿಲಲಾಪ ಪರಿದೇವಿತವಾನ್ = ವಿಲಪಿಸಿದನು. ಅವನಿಪನು ಬಾಷ್ಪಗದ್ಗದವೆರೆದು, ನಿಜಧೈರ್ಯವುಳಿದು—"ವಿಲಲಾಪಃ ಪರಿವೇದನಮ್" ಇತ್ಯಮರಃ—ಮಾರ್ದವಂ = ಮೃದುತ್ವಂ ವೈರತ್ವಂ ಚ ಭಜತೇ ಪ್ರಾಪ್ನೋತಿ—ಶರೀರಿಷು = ದೇಹಿಷು—ಸಬಾಷ್ಪಗದ್ಗದಂ = ಬಾಷ್ಪಶ್ಚಗದ್ಗದಶ್ಚ ತಾಭ್ಯಾಂ ವರ್ತತ ಇತಿ ॥

ಅರಸನಿಗೆ ಸೇವಕರು ಮಾಡಿದ ಪ್ರಥಮ ಚಿಕಿತ್ಸೆಯ ಫಲವಾಗಿ (ವ್ಯಜನಾದಿಸಾಧನದೊಳ್) ಮೂರ್ಛೆಯು ಅಳಿದು ಮೆಲ್ಲಮೆಲ್ಲನೆ ಎಚ್ಚರಗೊಂಡನಾದರೂ ಇಂದುಮತಿಯ ದೇಹಸ್ಥಿತಿಯಲ್ಲಿ ಯಾವ ಬದಲಾವಣೆಯೂ ತೋರಲಿಲ್ಲ. ಅವಳು ಶಾಶ್ವತವಾದ ಮರಣ ಶಯ್ಯೆಯಲ್ಲಿ ಮಲಗಿದ್ದಳು. ಆದರೂ ಆಯುಶ್ಶೇಷದಿಂದ ಕ್ಷಣಕಾಲ ಔಷಧೋಪಚಾರದ ಮಹಿಮೆಯಿಂದ (ಔಷಧವಿಶೇಷದಿಂದ) ಸ್ವಲ್ಪ ಪ್ರತಿಕ್ರಿಯೆ ತೋರಿಬಂದಿತಾದರೂ ಅದು ಕೇವಲ ಕ್ಷಣಿಕ. ಹಾಗೆ ತೋರಿಬರುವುದು ಕೆಲವೇ ಕ್ಷಣಗಳು ಮಾತ್ರ (ಫಲಿಸುವುವು ಪ್ರತಿಕಾರ ಸಾಧನಗಳಿರ್ದೊಡೆ ಆಯುಶ್ಶೇಷಮಲ್ತೆ).

ತಥೈವ ಸಂಸ್ಥಿತಾ=ಮೃತಾ—ತಥಾ ಹಿ ಪ್ರತಿಕಾರವಿಧಾನಂ ಚಿಕಿತ್ಸಾಯುಷೋಜೀವಿತ ಕಾಲಸ್ಯ ಶೇಷೇ ಸತಿ .ವಿದ್ಯಮಾನೇ—"ಆಯುರ್ಜೀವಿತಕಾಲೋನಾ" ಇತ್ಯಮರಃ= ಫಲಿಸುವುವು ಪ್ರತಿಕಾರಸಾಧನಗಳಿರ್ದೊಡೆ ಆಯುಸ್ ಶೇಷಮ್ ಅಲ್ತೆ.

**41.** **ಪ್ರತಿಯೋಜಯಿತವ್ಯವಲ್ಲಕೀ ।**
**ಸಮವಸ್ಥಾಮಥ ಸತ್ತ್ವವಿಪ್ಲವಾತ್ ॥**
**ಸ ನಿನಾಯ ನಿತಾನ್ತವತ್ಸಲಃ ।**
**ಪರಿಗೃಹ್ಯೋಚಿತಮಂಕಮಂಗನಾಮ್** ॥ ೪೧ ॥

ಆ ನಿತಾಂತವತ್ಸಲನಾದ ಭೂವಲ್ಲಭನು, ಜೀವಶೂನ್ಯವಾದ ತನ್ನ ಪ್ರಾಣಪ್ರಿಯೆಯ ದೇಹವನ್ನು (ಕಳೇಬರವನ್ನು) ಮೆಲ್ಲನೆ ಕೈಯೊಳಾಂತು ತನ್ನ ತೊಡೆಯ ಮೇಲೆ ತಲೆಯನ್ನಿರಿಸಿ ಮಲಗಿಸಿಕೊಂಡನು (ಕೈಗಳಿಂದ ಅಂಗನೆಯ ಅಂಕದೊಳು ತಳೆದು) ಆ ರಾಜನು ತನ್ನ ಸತಿಯ ಮೇಲೆ ತಳೆದ ಪ್ರೀತಿ, ಪ್ರೇಮವು ಅವರ್ಣನೀಯವಾದುದು. ಸತ್ವಹೀನ, ಚೈತನ್ಯರಹಿತವಾಗಿರುವ ತನ್ನ ಪ್ರಾಣಸತಿಯ ದೇಹವೀಗ ತಂತಿಗಳು ಅಳವಡಿಸದಿರುವ ಒಂದು ವೀಣೆಯಂತೆ ಅವನ ಕಣ್ಣಿಗೆ ಕಂಡಿತು (ತಂತಿಗಳು ಅಳವಡಿಸದಿರುವ ವೀಣೆಯೊಲಿರುವ ಸತ್ವಹೀನಳನು). ಆ ವೀಣಾದಂಡವನ್ನು ತನ್ನ ತೊಡೆಯ ಮೇಲಿರಿಸಿ, ಅದನ್ನು ತಂತಿಗಳಿಂದ ಪುನಃ ನಿಯೋಜಿಸುವಂತೆ, ಆಕೆಯಲ್ಲಿ ಪ್ರಾಣವಾಯುವು ಆವಿರ್ಭವಿಸಲು, ಪ್ರಾಣಜ್ಯೋತಿಯು ಮೂಡಿಸಲು ಯತ್ನಿಸುವಂತೆ, ಆ ಸೂರ್ಯವಂಶ ಕುಲದೀಪಕನು ಪ್ರಯತ್ನಿಸುತ್ತಿರುವಂತೆ ತೋರಿತು.

ಅನ್ವಯ :—ಅಥ ಸತ್ವವಿಪ್ಲವಾತ್ ಪ್ರತಿಯೋಜಯಿತವ್ಯವಲ್ಲಕೀ ಸಮವಸ್ಥಾಮ್ ತಾಮ್ ಅಂಗನಾಂ ನಿತಾಂತವತ್ಸಲಃ ಸಃ ಪರಿಗೃಹ್ಯ ಉಚಿತಮ್ ಅಂಕಂ ನಿನಾಯ ॥

ವಲ್ಲಕೀ = ವೀಣಾ—ವಿಪ್ಲವಾತ್ = ವಿನಾಶಾದ್ಧೇತೋಃ—ನಿತಾಂತವತ್ಸಲ = ಅತಿಪ್ರೇಮವಾನ್—ನಿನಾಯ = ನೀತವಾನ್ ॥

**42.** **ಪತಿರಂಕನಿಷಣ್ಣಯಾ ತಯಾ ।**
**ಕರಣಾಪಾಯವಿಭಿನ್ನವರ್ಣಯಾ ॥**
**ಸಮಲಕ್ಷ್ಯತ ಬಿಭ್ರದಾವಲೀಂ ।**
**ಮೃಗಲೇಖಾಮುಷಸೀವ ಚಂದ್ರಮಾಃ** ॥ ೪೨ ॥

ಕರಣಗಳ ಹಾಗೂ ಇಂದ್ರಿಯಗಳ ಬಲವಳಿದು, ಬಣ್ಣಗೆಟ್ಟಿರುವ, ಚೈತನ್ಯವು ನಶಿಸಿರುವ ಇಂದುಮತಿಯನ್ನು ತೊಡೆಯೊಳಾಂತು ಅಜನು ಶುಶ್ರೂಷೆ ನಡೆಸಿದನು. ಆಗ ಆ ಮೃಗನಯನೆಯು ಈ ತೆರನಾಗಿ ಕಾಣಿಸಿದಳು. ಆಕೆಯನ್ನು ತನ್ನ ತೊಡೆಯೊಳಾಂತ ಅಜನು ಉಷಃಕಾಲದಲ್ಲಿ, ಪ್ರಾತಃಕಾಲದ ಆರಂಭದಲ್ಲಿ, ಬಾನಿನ ಅಂಚಿನಲ್ಲಿ ಕಾಣಸುತ್ತ ತೇಜಸ್ಸು ಕೆಟ್ಟಿರುವ, ಮಲಿನವಾಗಿ ತೋರುತ್ತಿರುವ ಜಿಂಕೆಯ ಗುರುತಿರುವ ಕಳೆಗುಂದಿರುವ ಚಂದ್ರಮನಂತೆ ತೋರಿದನು. ಆ ಸರೋಜನಯನೆಯು ಚಂದ್ರನಲ್ಲಿ (ಶಶಿಬಿಂಬದಲ್ಲಿ) ನಸುತೋರುವ ಮೃಗಚಿಹ್ನೆಗೆ ಸಾಟಿಯಾಗಿ, ಮೃಗಲೇಖಾಲಾಂಛನಕ್ಕೆ ಸಮವಾಗಿ ತೋರುತಿರ್ದಳು (ತೇಜಗೆಟ್ಟು ಎರಳೆ ಕುರುಹು ಉಂತಿರುವ ಪೂಳ್ತರೆಯ ಪೆರೆಯುವೋಲಿಹನು).

ಅನ್ವಯ :—ಪ್ರತಿಃ ಅಂಕ ನಿಷಣ್ಣಯಾ ಕರಣಾಪಾಯವಿಭಿನ್ನವರ್ಣಯಾ ತಯಾ ಉಷಸಿ ಆವಿಲಾಂ ಮೃಗಲೇಖಾಂ ಬಿಭ್ರತ್ ಚಂದ್ರಮಾ ಇವ ಸಮಲಕ್ಷ್ಯತ ॥

ಪತಿರಂಕನಿಷಣ್ಣಯೋತ್ಸಂಗಸ್ಥಿತಯಾ=ತನ್ನ ಸತಿಯನು ತೊಡೆಯೊಳಾಂತ ಅಜನು— ಕರಣಾನಾಮಿಂದ್ರಿಯಾಣಾಮಪಾಯೇ ನಾಪಗಮೇನ ಹೇತುನಾ ವಿಭಿನ್ನವರ್ಣಯಾ ವಿಚ್ಛಾಯಯಾತಯಾ = ಕರಣಗಳ ಬಲವಳಿದು ಬಣ್ಣಗೆಟ್ಟಿರುವಳನು—ಮೃಗಲೇಖಾಂ = ಮೃಗರೇಖಾರೂಪಂ ಲಾಂಛನಂ—ಉಷಸಿ = ಪ್ರಾತಃಕಾಲ—ಆವಿಲಾಂ=ಮಲಿನಾಂ— ಉಪಮಾಲಂಕಾರ ॥

43\. ವಿಲಲಾಪ ಸ ಬಾಷ್ಪಗದ್ಗದಂ ।
ಸಹಜಾಮಪ್ಯಪಹಾಯಧೀರತಾಮ್ ।
ಅಭಿತಪ್ತಮಯೋಽಪಿ ಮಾರ್ದವಂ ।
ಭಜತೇ ಕೈವ ಕಥಾ ಶರೀರಿಷು ॥ ೪೩ ॥

ಅಜನು ಧೈರ್ಯಗುಂದಿ, ಕುಸಿದು, ಎದೆಗುಂದಿ, ದಿಗ್ಭ್ರಾಂತನಾಗಿ ಸಾಮಾನ್ಯ ಮಾನವರಂತೆ ಅತ್ತನು. ಕಣ್ಣಾಲಿಗಳು ತುಂಬಿ, ಕಂಬನಿ ಮಿಡಿಯುತ್ತಾ, ಗದ್ಗದಕಂಠನಾಗಿ, ತನ್ನ ಸತಿಯ ದೀನಾವಸ್ಥೆಯನ್ನು ಕಂಡು ಶೋಕಭರದಿಂದ ವಿಲಪಿಸಿದನು (ಬಾಷ್ಪಗದ್ಗದವರೆದು ನಿಜಧೈರ್ಯವುಳಿದು), ಅಚೇತನವಾದ ಕಠಿಣವಾದ ಲೋಹವೆನಿಸಿದ ಕಬ್ಬಿಣವೆ ಕಾಯಿಸಿದಾಗ ಮೃದುವಾಗುವಾಗ ಮಾನವರ ಪಾಡೇನು. ಚಿಂತೆಗೂ ಚಿತೆಗೂ ಬಿಂದು ಮಾತ್ರವೆ ವ್ಯತ್ಯಾಸ.

ಧೀರತಾಂ ಧೈರ್ಯಮಪಹಾಯ ವಿಪ್ರಕೀರ್ಯ ಬಾಷ್ಪೇಣ ಕಂಠಗತೇನ ಗದ್ಗದಂ ವಿಶೀರ್ಣಾಕ್ಷರಂ ಯಥಾ ತಥಾ ಧ್ವನಿಮಾತ್ರಾನುಕಾರಿ ಗದ್ಗದಶಬ್ದೈರ್ವಿಲಲಾಪ ಪರಿದೇವಿತವಾನ್ = ವಿಲಪಿಸಿದನು. ಅವನಿಪನು ಬಾಷ್ಪಗದ್ಗದವರೆದು. ನಿಜಧೈರ್ಯವುಳಿದು—"ವಿಲಾಪಃ ಪರಿವೇದನಮ್" ಇತ್ಯಮರಃ—ಮಾರ್ದವಂ = ಮೃದುತ್ವಂ ವೈರತ್ವಂ ಚ ಭಜತೇ ಪ್ರಾಪ್ನೋತಿ—ಶರೀರಿಷು = ದೇಹಿಷು— ಸಬಾಷ್ಪಗದ್ಗದಂ = ಬಾಷ್ಪಶ್ಚಗದ್ಗದಶ್ಚ ತಾಭ್ಯಾಂ ವರ್ತತ ಇತಿ ॥

**44. ಕುಸುಮಾನ್ಯಪಿ ಗಾತ್ರಸಂಗಮಾತ್ ।**
**ಪ್ರಭವಂತ್ಯಾಯುರಪೋಹಿತುಂ ಯದಿ ॥**
**ನ ಭವಿಷ್ಯತಿ ಹಂತ ಸಾಧನಂ ।**
**ಕಿಮಿವಾನ್ಯತ್ ಪ್ರಹರಿಷ್ಯತೋ ವಿಧೇಃ ॥ ೪೪ ॥**

ಹೂವು ಮಾನವನಿಗೆ ಪ್ರಿಯವಾದ ವಸ್ತು. ಇದೀಗ ಕುಸುಮಮಾಲೆಯೇ ಕಂಟಕವಾಗಿ ಪರಿಣಮಿಸಿದೆಯೆಂದಮೇಲೆ ಕೊಲಲೆಳಸಿದ ವಿಧಿಗೆ ಯಾವ ಆಯುಧವು ಕೈದುವೆನಿಸದು ಲೋಕದಲ್ಲಿ. "ಬರಿಯ ಸುಮದ ಸೋಂಕು ಮಾರಣವಾಯಿತು. ವಿಷವಾಯಿತು. ಅದು ಮುಟ್ಟಿದೊಡನೆಯೇ ನನ್ನ ಪ್ರಾಣವಲ್ಲಭೆಯ ಆಯುಸ್ಸನ್ನು ಹೀರಿಬಿಟ್ಟಿತು. ಅಹಾ ಮಾ ದೈವದ ಆಟವೇ (ಮಾಟವೇ). ಇದರಿಂದ ಒಂದು ಸಿದ್ಧಾಂತವು ವಿಶದವಾಯಿತು, ದೈವವು ಪ್ರತಿಕೂಲವಾದಾಗ, ಅಥವಾ ಹೊಡೆಯಲು ಎಣಿಸಿದಾಗ ಅತ್ಯಂತ ಕೋಮಲವಾದ ಆಯುಧವೂ ಕಠಿಣವಾಗಿ ಪರಿಣಮಿಸಬಹುದು. ಆಯುಧವೊಂದು ನಿಮಿತ್ತಮಾತ್ರ. ವಿಧಿಬರಹ ತಪ್ಪದು." ಅಜನು ವಿಧಿವಂಚಿತನಾಗಿ "ಹಾ ವಿಧಿಯೇ, ನನ್ನ ಪ್ರಿಯೆಯ ಆಯುಸನ್ನು ಅಪಹರಿಸಿದೆಯಲ್ಲಾ, ಮೋಟಕುಗೊಳಿಸಿದೆಯಲ್ಲಾ, ಹಾ ದೈವವೇ! ಎಂದು ಘನಚಿಂತಾಂಬುಧಿಯಲ್ಲಿ ಮುಳುಗುತ್ತ, ಏಳುತ್ತ, ಬೀಳುತ್ತ, ತೊಳಲುತ್ತ ಬಲು ಬಳಲಿದನು (ವಿಧಿಯ ಕೈಯೊಳಾವುದು ತಾನೆ ಕೈದು ಎನಿಸದಿಹುದೋ").

ಕುಸುಮಾನಿ = ಪುಷ್ಪಾಣ್ಯಪಿ—ಗಾತ್ರಸಂಗಮಾತ್ = ದೇಹಸಂಸರ್ಗಾತ್—ಆಯುರಪೋಹಿತುಂ = ಅಪಹರ್ತುಂ—ಹಂತ = ವಿಷಾದೇ—ಪ್ರಹರಿಷ್ಯತೋ = ಹಂತುಮಿಚ್ಛತೋ—ವಿಧೇಃ=ದೈವಸ್ಯಾನ್ಯತ್—ಕಿಮಿವ ವಸ್ತು=ಕೀದೃಶಮಿತ್ಯರ್ಥಃ—ಸಾಧನಂ ಪ್ರಹರಣಂ—ನ ಭವಿಷ್ಯತಿ = ನ ಭವೇತ್—ಸರ್ವಮಪಿ ಸಾಧನಂ ಭವಿಷ್ಯತ್ಯೇವೇತ್ಯರ್ಥಃ ॥

**45. ಅಥವಾ ಮೃದುವಸ್ತು ಹಿಂಸಿತುಂ ।**
**ಮೃದುನೈವಾರಭತೇ ಪ್ರಜಾಂತಕಃ ॥**
**ಹಿಮಸೇಕವಿಪತ್ತಿರತ್ರ ಮೇ ।**
**ನಲಿನೀಪೂರ್ವನಿದರ್ಶನಂ ಮತಾ ॥ ೪೫ ॥**

"ಅತ್ಯಂತ ಕೋಮಲವಾದ ಮೈಯನ್ನು ಹೊಂದಿರುವ ನನ್ನಾಕೆಯನ್ನು ಆ ಪ್ರಜಾನಾಶಕಾರಕನಾದ ವಿಧಾತನು ಅತ್ಯಂತ ಮೃದುವಸ್ತುವಿನಿಂದಲೇ ಹತಗೊಳಿಸಿರುವನಲ್ಲಾ. ನನ್ನವಳು ಕುಸುಮಗಂಧಿ, ಸುಮಕೋಮಲೆ, ಪದ್ಮಗಂಧಿ, ಪದ್ಮನಯನೆ, ಅಂಬುಜಾಕ್ಷಿ, ವಾರಿಜಾಕ್ಷಿ, ಕಮಲನಯನೆ, ಕಮಲಪ್ರಿಯಳಾದ ಇಂದುಮತಿ, ಪ್ರಕೃತಿಸಹಜವಾದ ಮೃದುಗುಣದಿಂದ ವಿರಾಜಿಸುತ್ತಿದ್ದಳು. ಸಕಲ ಸದ್ಗುಣಗಳ ನೆಲೆಯಾದ (ಸೆರೆಯಾದ) ಪ್ರಕಾಶಮಾನಳಾದ ನನ್ನ ಮುದ್ದು ಮಡದಿಯನ್ನು ವಜ್ರದಂತೆ ಕಠಿಣಮನಸ್ಕನಾದ ಯಮಧರ್ಮನು ಕುಸುಮಮಾಲೆಯ ಸ್ಪರ್ಶದಿಂದ ಆಯುಸ್ಸನ್ನು ಸೆಳೆದಿರುವನು. ಈ ನಿದರ್ಶನದಿಂದ, ನನ್ನ ಪ್ರಿಯತಮೆಯ ಅಕಾಲನಿಧನದಿಂದ ನಾನಿಂದು ಕಾಲನು ಮೃದುವಸ್ತುಗಳನ್ನು ನಾಶಗೊಳಿಸಲು ಮೃದುವಸ್ತುಗಳನ್ನೇ ಆಯ್ದುಕೊಳ್ಳುವನೆಂಬುದನ್ನು ತಿಳಿದೆನು (ಮೃದುಳ ವಸ್ತುಗಳಿಂದೆ) ಹಾಯ್ ವಿಧಿಯೇ, ಇದನ್ನು ಪ್ರಕೃತಿಯಲ್ಲಿ ಕಂಡುಬರುವ ಒಂದು

ದೃಷ್ಟಾಂತ(ಉದಾಹರಣೆ)ದಿಂದ ಮಂದಟ್ಟುಮಾಡಿಕೊಳ್ಳಬಹುದಲ್ಲವೆ. ತಾವರೆಹೂವನ್ನು (ಪದ್ಮಿನಿ, ನಳಿನಿ) ಮಂಜುಹನಿ ನಾಶಗೊಳಿಸಬಲ್ಲುದು (ಮಂಜುಮನಿ ನಲುಗಿಸುವುದು) (ಪೂರ್ವದೃಷ್ಟಾಂತವಹುದು) ಮೃತ್ಯುವಿನಂತೆ ಕಂಟಕವಾಗಬಲ್ಲುದು. ಈ ಒಂದು ನಿದರ್ಶನ ದಿಂದ ಸೃಷ್ಟಿಯಲ್ಲಿ ಕಂಡುಬರುವ ಏರುಪೇರುಗಳಿಂದ ಕಾಲನ (ಮೃತ್ಯುವಿನ) ಮರಣ ಧರ್ಮವನ್ನು ನಾನೀಗ ಅರಿಯುವಂತಾಯಿತ್ತು. ಹಿಮತುಷಾರದಿಂದ ನಳಿನಿಯು ನಾಶ ವಾಗುವುದು ಒಂದು ನಿದರ್ಶನವಾದರೆ (ಒಂದು ಸತ್ಯವಾದರೆ) ನನ್ನ ಬಾಲೆ, ಕುಸುಮ ಮಾಲೆ (ಕುಸುಮಬಾಲೆ) ಹೂಮಾಲೆಯಿಂದ ಹತವಾದುದು ಎರಡನೆಯ ನಿದರ್ಶನ ವೆಂಬುದನ್ನು ನಾನೀಗ ಪ್ರತ್ಯಕ್ಷಪ್ರಮಾಣದಿಂದ ಅರಿತೆನು'' ಎಂದು ಅಜನು ಬಿಸು ಸುಯ್ದನು.

ಕೋಮಲಂ = ಮೃದು—ನಲಿನೀ = ಪದ್ಮಿನೀ—ಪೂರ್ವ = ಪ್ರಥಮಂ—ನಿದರ್ಶನಂ = ಉದಾಹರಣಂ—ದ್ವಿತೀಯಂ ನಿದರ್ಶನಂ ಪುಷ್ಪ ಮೃತ್ಯುರಿಂದುಮತೀತಿ ಭಾವಃ ॥

46. ಸ್ರಗಿಯಂ ಯದಿ ಜೀವಿತಾಪಹಾ ।
ಹೃದಯೇ ಕಿಂ ನಿಹಿತಾ ನ ಹಂತಿ ಮಾಮ್ ॥
ವಿಷಮಪ್ಯಮೃತಂ ಕ್ವಚಿದ್ಭವೇತ್ ।
ಅಮೃತಂ ವಾ ವಿಷಮೀಶ್ವರೇಚ್ಛಯಾ ॥ ೪೬ ॥

ಈ ಹೂವಿನ ಹಾರವು ನನ್ನ ಜೀವಿತೇಶ್ವರಿಯ ಪ್ರಾಣಾಪಹಾರಮಾಡಿರುವುದು (ಹಾರವಿದು ಹರಣಾಪಹಾರಿಯೆನಲೇಕೆ), ಇದು ಈಶ್ವರನ ಇಚ್ಛೆಯಿಂದಾದುದು. ಹರನಿಚ್ಛೆಯಿಂದ ಅಮೃತವು ವಿಷವಾಗುವುದು. ವಿಷವು ಅಮೃತವಾಗಬಲ್ಲುದು. ಆದರೆ ಆದೇಕೆ ವಿಧಿಯು ನನ್ನನ್ನು ಇರಿಯದೆ ಸುಮ್ಮನಿರುವನು. ಹಾಯ್, ಹಾಯ್ ಎಂದು ಆ ನೃಪಕುಲಶೇಖರನು ಚಿಂತಿಸುತ್ತಾ ಮರುಗಿದನು. ಆ ಹೂಮಾಲೆಯನ್ನು ನಾನೀಗ ವಕ್ಷಃಸ್ಥಲದ ಮೇಲೆ (ಎದೆಯ ಮೇಲೆ) ಇಟ್ಟುಕೊಂಡರೂ ಅದು ನನ್ನ ಪ್ರಾಣವನ್ನು ಮುಟ್ಟದಲ್ಲಾ. ಇದರಿಂದ ಪರಮೇಶ್ವರನ ಆಜ್ಞೆಯಿಲ್ಲದೆ ಕ್ರೂರವಾದ, ಘೋರವಾದ ವಿಷವೂ ಪ್ರಾಣಾಪಹಾರಮಾಡಲಾರದು ಎಂಬುದೂ ಕಟುಸತ್ಯವೆ (ಹರನಿಚ್ಛೆಯಿಂದ ಅಮೃತ ವಿಷಮಹುದು).

ಜೀವಿತಾಪಹಾ = ಜೀವಿತಮಪಹಂತೀತಿ—ಹೃದಯೇ = ವಕ್ಷಸಿ—''ಹೃದಯಂ ವಕ್ಷಸಿ ಸ್ವಾಂತೇ'' ಇತ್ಯಮರಃ—ಈಶ್ವರೇಚ್ಛಯಾ = ವಿಧಿಯ ಇಚ್ಛಾಮಾತ್ರದಿಂದ—ವಿಷಮ ಮಪ್ಯಮೃತಂ ಭವೇತ್ ಕ್ವಚಿದಮೃತಂ ವಾ ವಿಷಂ ಭವೇತ್—ದೈವಮೇವಾತ್ರ ಕಾರಣ ಮಿತ್ಯರ್ಥಃ ॥

47. ಅಥವಾ ಮಮಭಾಗ್ಯವಿಪ್ಲವಾತ್ ।
ಅಶನಿಃಕಲ್ಪಿತ ಏಷ ವೇಧಸಾ ॥
ಯದನೇನ ತರುರ್ನ ಪಾತಿತಃ ।
ಕ್ಷಪಿತಾ ತದ್ವಿಟಪಾಶ್ರಿತಾ ಲತಾ ॥ ೪೭ ॥

ನನ್ನೊಂದು ದೌರ್ಭಾಗ್ಯದ ಫಲವಾಗಿ, ವಿಧಿಯು ಸುಮಮಾಲೆಯನ್ನೇ ಅಥವಾ ಕುಸುಮಾವಲೀರೂಪದ ವಜ್ರಾಯುಧದಿಂದ ನನ್ನ ಪ್ರಾಣಪ್ರಿಯೆಯ ಪ್ರಾಣವನ್ನು ಅಪಹರಿಸಿರುವನು. ಆದರೆ ತರುವನ್ನು ಇಲ್ಲವೆ ವೃಕ್ಷವನ್ನು ಅಥವಾ ಅದರ ರೆಂಬೆಯನ್ನು ಭಸ್ಮಮಾಡದೆ ಅದೇಕೆ ಅದರ ಮೇಲೆ ಹರಡಿರುವ ಲತೆಯನ್ನು ಮಾತ್ರ ಬಳ್ಳಿಯನ್ನು (ಲತಾಲತಿಕೆಯನ್ನು) ಮಾತ್ರ ವಿಧಾತನುಘಾತಿಸಿರುವನು (ಎಳ ಲತೆಯ ಸುಡುವುದೆಂತು). ಹೀಗೆ ಮಾಡಲು ನನ್ನ ದುರಾದೃಷ್ಟವೇ ನಿಮಿತ್ತವಾಗಿರುವುದರಲ್ಲಿ ಸಂದೇಹವಿಲ್ಲ. ಇಂದು ಮರವನ್ನು ಸುತ್ತಿರುವ ಬಳ್ಳಿಯು (ಭಾಗ್ಯಲತೆಯು) ನಾಶಗೊಂಡಿರುವುದು. ಇದರಿಂದ ನಾನೀಗ ಒಂಟಿ ವೃಕ್ಷವಾಗಿ (ಒಂಟಿ ಜೀವವಾಗಿ) ನನ್ನನ್ನು ಆಶ್ರಯಿಸಿರುವ ಬಳ್ಳಿಯಂತಿರುವ ಕಾಂತೆಯನ್ನು ಕಳೆದುಕೊಂಡು ಆತ್ಮಘಾತ ಹೊಂದಿ ಬಳಲುತ್ತಿರುವೆನು (ಲತೆಯನ್ನು ಕಳೆದುಕೊಂಡ ವೃಕ್ಷದಂತೆ), ಮರವಾದರೋ ಅಶನಿಯುಘಾತದಿಂದ, ವಜ್ರಾಯುಧದ ಏಟಿನಿಂದ ಉಳಿದುಕೊಂಡಿದೆ.

ಮಮ ಭಾಗ್ಯಸ್ಯ ವಿಪ್ಲವಾದ್ವಿಪರ್ಯಯಾತ್ ಏಷಃ— ವೇಧಸಾ = ವಿಧಾತ್ರಾ— ಕಿಂತು ತಸ್ಯ ತರೋರ್ವಿಟಪಾಶ್ರಿತಾ ಲತಾ = ವಲ್ಲೀ। ಕ್ಷಪಿತಾ = ನಾಶಿತಾ ॥

**48.** **ಕೃತವತ್ಯಸಿ ನಾವಧೀರಣಾಂ ।**
**ಅಪರಾದ್ಧೇಽಪಿ ಯದಾ ಚಿರಂ ಮಯಿ ॥**
**ಕಥಮೇಕಪದೇ ನಿರಾಗಸಂ ।**
**ಜನಮಾಭಾಷ್ಯಮಿಮಂ ನ ಮನ್ಯಸೇ** ॥ ೪೮ ॥

ಓ ಅನಘಳೆ, ನೀನು ಅನೇಕ ವೇಳೆ ಮಿತಿಯಿಲ್ಲದ ಅಪರಾಧವೆಸಗಿದ ನನ್ನನ್ನು ಎಂದೂ ತಿರಸ್ಕರಿಸದ ಸ್ತ್ರೀಕುಲೋತ್ತಮಳು (ಆದರ್ಶಸ್ತ್ರೀ, ಆದರ್ಶಮಹಿಳೆ) ಹಾಗೆಂದಮೇಲೆ (ಈ ವಿಷಯದಲ್ಲಿ) ನಿರಪರಾಧಿಯಾದ ನನ್ನನ್ನು ಮಾತಾಡಿಸದೆ ಏಕಿರುವೆ? ಏಕಿಂತಹ ಶಾಂತಮುದ್ರಿತ ಮೌನ? ನನ್ನನ್ನು ಮಾತಾಡಿಸದಿರಲು ಕಾರಣವಿರಬಹುದೆ (ನುಡಿಸುವುದಕೆ ಅರ್ಹನಲ್ಲೆಂದೆಣಿಸಬಹುದೆ)? ನುಡಿಸುವುದಕ್ಕೂ ಅನರ್ಹನು (ನಾಲಾಯಕ್) ನಾನೆಂದು ಎಣಿಸಬಹುದೆ? ಓ ಇನಿಯಳೆ, ಈ ಮೌನವನು, ಚಿರನಿದ್ರೆಯನ್ನು ಭೇದಿಸಿ ಎನ್ನೊಡನೆ ಮಾತಾಡು ಪ್ರಿಯೆ. ನನ್ನನ್ನು ಒಮ್ಮೆ ಕಣ್ತೆರೆದು ನೋಡು. ಬಾಯ್ತೆರೆದು ಮಾತಾಡು, ಓ ಶುಚಿಸ್ಮಿತೆ (ಸುಸ್ಮಿತೆ). ಓ ನನ್ನ ಚೇತನವೆ, ದೀರ್ಘನಿದ್ರೆಯ ಸೆರೆಯಿಂದ ದಾಟಿ ಬಾ. ಎದ್ದೇಳು, ಮಮ ಜೀವರತ್ನವೆ.''

ಅವಧೀರಣಾಮವಜ್ಞಾಂ ನ ಕೃತವತ್ಯಸಿ ನಾಕಾರ್ಷೀಃ। ಆಭಾಷ್ಯಂ ಸಂಭಾಷ್ಯಂ ನ ಮನ್ಯಸೇ ನ ಚಿಂತಯಸಿ?

**49.** **ಧ್ರುವಮಸ್ಮಿ ಶಠಃ ಶುಚಿಸ್ಮಿತೇ ।**
**ವಿದಿತ ಕೈತವ ವತ್ಸಲಸ್ತವ ॥**
**ಪರಲೋಕಮಸಂ ನಿವೃತ್ತಯೇ ।**
**ಯದನಾಪ್ರಚ್ಛ್ಯಗತಾಸಿ ಮಾಮಿತಃ** ॥ ೪೯ ॥

ಹೇ ಶುದ್ಧವಾದ ನಗೆಯುವಳೆ, ಹೇ ಧವಳಹಸಿತೆ, ಶುಚಿಸ್ಮಿತೆ, ಸುಸ್ಮಿತೆ, ಸದಾ ಹಸನ್ಮುಖಿಯಾದ ನೀನು ಕಪಟಸ್ನೇಹವತ್ಸಲನಾದ, ಕಪಟಪ್ರೇಮಿಯಾದ ನನಗೆ ಹೇಳದೆ (ಒರೆಯದೆ) ನನ್ನಿಂದ ವಿದಾಯವನ್ನು ಪಡೆಯದೆ, ನೀನಿಂದು ಪರಲೋಕಕ್ಕೆ ಹೊರಟಿರುವೆ. ಮತಿಬುದ್ಧಿ ಪೂಜಾರ್ಹನಲ್ಲದ ನನ್ನನ್ನು ತ್ಯಜಿಸಿ ಪರಲೋಕಕ್ಕೆ ಐದಿರುವೆ. ಹೇ ಮಾನ್ಯಳೇ, ನನ್ನ ಜೀವಬಿಂದುವೇ (ಜೀವಬಂಧುವೇ), ನೀನಿಂದು ಈ ಮರ್ತ್ಯಲೋಕವನ್ನು ತ್ಯಜಿಸಿ ಹಿಂದಕ್ಕೆ ಬಾರದೆಯಿರುವ ಅಮರಲೋಕಕ್ಕೆ ತೆರಳಿರುವೆ. ಮಾನವನಾದ ನನ್ನ ಪ್ರೇಮವು ಶಾಶ್ವತವಲ್ಲವೆಂದು ತಿಳಿದು.

ಕೈತವೇನ = ಕಪಟೇನ—ಧ್ರುವಂ = ಸತ್ಯಂ — ಪರಲೋಕವಾಸಾನಿವೃತ್ತಯೇಃ ಅಪುನರಾವೃತ್ತಯೇ ಗತಾಸಿ—ಅಪ್ರತ್ಯಾಗಮನಾಯ ಪರಲೋಕಂ ಗತಾಸಿ—ವತ್ಸಲಃ = ಸ್ನಿಗ್ಧಃ ॥

**50. ದಯಿತಾಂ ಯದಿ ತಾವದನ್ವಗಾತ್ ।**
**ವಿನಿವೃತ್ತಂ ಕಿಮಿದಂ ತಯಾ ವಿನಾ ॥**
**ಸಹತಾಂ ಹತಜೀವಿತಂ ಮಮ ।**
**ಪ್ರಬಲಾಮಾತ್ಮಕೃತೇನ ವೇದನಾಮ್ ॥ ೫೦ ॥**

ನೀನಿಲ್ಲದ ನಾನೀಗ ಹತಜೀವಿ (ಮೃತಜೀವಿ) ಬದುಕಿಯೂ ಪ್ರಯೋಜನವಿಲ್ಲದಂತೆ. ಪ್ರೇಮಜೀವನದ, ವಾತ್ಸಲ್ಯದ ನಾನಾ ಯಾತನೆಗಳನ್ನು ಅನುಭವಿಸುತ್ತಾ, ಅವುಗಳನ್ನು ಸಹಿಸಿಕೊಳ್ಳುತ್ತಾ ಒಂಟಿಯಾಗಿ ಜೀವನಯಾತ್ರೆಯನ್ನು ಸಾಗಿಸುತ್ತಿರಬೇಕಲ್ಲದೆ ಬೇರೆ ದಾರಿಯೇ ಇರದು. ಏಕೆಂದರೆ ನಾನಿನ್ನೂ ನಿನ್ನನ್ನು ಅನುಸರಿಸದೆ, ಚಿಂತಿಸುತ್ತಾ ಈ ಮರ್ತ್ಯಲೋಕದಲ್ಲಿಯೇ ಇರುವೆನು. ಅಂತಹ ತಪ್ಪಿಗೆ ತಕ್ಕುದಾದ ಶಿಕ್ಷೆಯನ್ನು ಅನುಭವಿಸಲೇಬೇಕಲ್ಲವೆ. ನನ್ನ ಅರ್ಧಾಂಗಿಯಾದ (ಸಹಧರ್ಮಿಣಿಯಾದ) ನನ್ನ ಸತಿಯಾದ ನೀನು ಹೊರಟುಹೋದಮೇಲೆ ನನಗಿನ್ನು ಈ ಲೋಕದಲ್ಲಿ ಯಾವ ಕೆಲಸವಿದೆ ? ಹತಜೀವಿಯಾದ (ಮೃತಜೀವಿಯಾದ) ನಾನು ಇದನ್ನು ಯಾರೊಡನೆ ಹೇಳಲಿ (ಯಾರನ್ನು ಕೇಳಲಿ) ? ನೀನು ಇನ್ನು ಎಂದು ಬರುವೆ ? ಅದನ್ನೂ ತಿಳಿಯೆನು. ನಿನ್ನ ಬಗೆಯ ವೇದನೆಯು ಪ್ರಬಲವಾಗಿ (ಹತಜೀವ ಅನುಭವಿಸು) ನನ್ನ ಆತ್ಮವನ್ನೇ (ಅಂತರಾತ್ಮವನ್ನೇ) ಕಾಡುತ್ತಲಿದೆ, ಸುಡುತ್ತಲಿದೆ (ದಹಿಸುತ್ತಲಿದೆ, ಕಾಡುತ್ತಿದೆ) ಹೇ ಪ್ರಿಯೆ, ನನ್ನ ಮೇಲೆ ದಯೆತೋರು. ನನ್ನ ದುಃಖವನ್ನು ನಾನು ಸಹಿಸಲಾರೆ. ನಿನ್ನ ಕ್ಷಮೆಯಿಂದ (ನಿನ್ನ ಸಾನ್ನಿಧ್ಯದಿಂದ) ಮಾತ್ರ ಸಹಿಸಬಹುದು ಎನಿಸುತ್ತಿದೆ.

ಹತಜೀವಿತಂ = ಕುತ್ಸಿತಜೀವಿತಂ—ವಿನಿವೃತ್ತಮ್ = ಪ್ರತ್ಯಾಗತಮ್—ವೇದನಾಂ = ದುಃಖಂ—ಸಹತಾಂ = ಕ್ಷಮತಾಂ—ಸ್ವಯಂಕೃತಾಪರಾಧೇಷು ಸಹಿಷ್ಣುತೈವ ಶರಣಮಿತಿ ಭಾವಃ ॥

**51. ಸುರತಶ್ರಮಸಂಭೃತೋ ಮುಖೇ ।**
**ಧ್ರಿಯತೇ ಸ್ವೇದಲವೋದ್ಗಮೋಽಪಿ ತೇ ॥**

**ಅಥ ಚಾಸ್ತಮಿತಾತ್ಮನಾ ।**
**ಧಿಗಿ ಮಾಂ ದೇಹಭೃತಾಮಸಾರತಾಮ್** ॥ ೫೧ ॥

"ಓ ಪ್ರಾಣಪ್ರಿಯೆ, ನಾನು ನಿನ್ನೊಡನೆ ಸುಖಿಸಿದೆ. ಆ ಸುರತಸುಖದ (ರತಿಕ್ರೀಡೆಯು) ಸ್ವೇದಬಿಂದುಗಳು (ಬೆವರಹನಿಗಳು) ನಿನ್ನ ವದನಾರವಿಂದದಲ್ಲಿ ನನ್ನ ಕಣ್ಣಿಗೆ ಕಾಣುತ್ತಿವೆ (ಇನ್ನೂ ಇರುವಿದೆಯೊ ನಿನ್ನ ಮೊಗದೆ). ರತಿಸುಖದ ಕೊನೆಯಾಗಿ ನೀನು ಅಸ್ತಮಿಸಿದರೂ (ನೀನೂ ಅಸ್ತಮಿಸಿರುವೆ) ಅವು ಇನ್ನೂ ಅಳಿಯದೆ ಹಾಗೆಯೇ ಉಳಿದಿವೆ. ಈ ದೇಹವು ನೀರಬೊಬ್ಬುಳಿಯಂತೆ ಕ್ಷಣಿಕ ಎಂಬುದನ್ನು ಪ್ರತ್ಯಕ್ಷವಾಗಿ ಅರಿತೆ. ಅದಕ್ಕಾಗಿ ಪಂಚಭೂತಗಳಿಂದಾದ ಈ ದೇಹಕ್ಕಿದೋ ಧಿಕ್ಕಾರ (ದೇಹಿಗಳ ಸಾರತೆಗೆ ಧಿಕ್ಕಾರ ಜಗದೆ).

ಸಂಭೃತೋ = ಜನಿತಃ—ಮುಖೇಧ್ರಿಯಂತೇ = ವರ್ತಂತೇ—ಅಥ ಚಾಸ್ತಮಿತಾತ್ಮನಾ = ಸ್ವರೂಪೇಣಾಸ್ತಂ ಪ್ರಾಪ್ತಾಃ = ದೇಹಿಗಳ ಅಸಾರತೆಗೆ ಧಿಕ್ಕಾರ—ಧಿಕ್ = ಧಿಕ್ಕಾರ—ಅಸ್ಥಿರತಾಂ ॥

**52. ಮನಸಾಽಪಿ ನ ವಿಪ್ರಿಯಂ ಮಯಾ ।**
**ಕೃತಪೂರ್ವಂ ತವ ಕಿಂ ಜಹಾಸಿ ಮಾಮ್ ॥**
**ನನು ಶಬ್ದಪತಿಃ ಕ್ಷಿತೇರಹಂ ।**
**ತ್ವಯಿ ಮೇ ಭಾವನಿಬಂಧನಾ ರತಿಃ** ॥ ೫೨ ॥

ಹೇ ಮುಗುದೆ, ನನ್ನ ಮನದ ಎರಕ ನಿನ್ನೊಳೇ ಬೆಸೆದು ಇರುತ್ತಿರುವಾಗ ನೀನೇಕೆ ನನ್ನನ್ನು ಅಗಲಿ ದೂರವಾದೆ (ನಿನ್ನೊಳೇ ಮನದೆರಕ ಮುಗುದೆ)? ನಾನು ಕನಸಲ್ಲಾಗಲಿ, ಮನಸಲ್ಲಾಗಲಿ ನಿನಗಿನಿತು ತಪ್ಪನ್ನು ಮಾಡಿದವನಲ್ಲ. ನನ್ನ ನೆನಹಿನಲ್ಲಿ ನೀನು ಸದಾ ಅಡಗಿರುವೆ. ಇಂದು ನಾನು ಹೆಸರಿಗೆ ಮಾತ್ರ ಈ ಇಳೆಯ ಅರಸನಾಗಿರುವೆ, ನೀನಿಲ್ಲದ ಮೇಲೆ, ನಿನ್ನ ಪ್ರೇಮವನ್ನೇ ಹಂಬಲಿಸುತ್ತಿರುವ ನನ್ನ ಮನವು ಅಧಿಕಾರ ಗದ್ದುಗೆಗಳಿಂದ ಆಕರ್ಷಿತವಾಗಲಾರದು. ನಾನೊಂದು ಭಾವಜೀವಿಯಾಗಿ ಭ್ರಮಾಲೋಕದಲ್ಲಿ ವಿಹರಿಸುತ್ತಿರುವೆನು. ನೀನು ತೊರೆದ ಬಳಿಕ ನಾನು ಎತರ ಪತಿ? ಮೇದಿನೀಪತಿಯಾಗಿ ಯಾವ ಪುರುಷಾರ್ಥಕವೂ ಬಾರದು. ಇದು ನನ್ನ ಪೂರ್ವಜನ್ಮದ ಯಾವುದೋ ಸ್ವಯಂಕೃತಾಪರಾಧದ ಅಂತಿಮ ಫಲವಾಗಿರಬೇಕು ಎಂದು ಎಣಿಸುವೆನು. ನಾನಿಂದು ಹೆಸರಿಗೆ ಮಾತ್ರ ಮೇದಿನೀಪತಿ (ಹೆಸರಿಗೆ ಇಳೆಯರಸ ನಾನಾಗಿರುವೆ), ಅಮೃತಾನಂದಮಯಿಯಾದ ನಿನ್ನನ್ನು ಅಗಲಿ, ಈ ವಸುಂಧರೆಯ ಪತಿಯಾಗಿ ಪಾಲಿಸುವ ಯಾವ ಶಕ್ತಿಯೂ ನನ್ನಲ್ಲಿ ಉಳಿದಿಲ್ಲ. ನೀನೇಕೆ ಕಠಿಣಮನಸ್ಕಳಾಗಿ ಜಗತ್‌ಸಂಚಾರಿಣಿಯಾಗಿ ಹೊರಟೆ?

ಮಯಾ ಮನಸಾಽಪಿ ತವ ವಿಪ್ರಿಯಂ ನ ಕೃತಪೂರ್ವಮ್—ಭಾವನಿಬಂಧನಾ = ಅಭಿಪ್ರಾಯನಿಬಂಧನಾ, ಸ್ವಭಾವಹೇತುಕಾ ॥

**53. ಕುಸುಮೋತ್ಖಚಿತಾನ್ವಲೀಭೃತಃ ।**
**ಚಲಯನ್ ಭೃಂಗರುಚಸ್ತವಾಲಕಾನ್ ॥**

**ಕರಭೋರು ಕರೋತಿ ಮಾರುತಃ ।**
**ತ್ವದುಪಾವರ್ತನಶಂಕಿ ಮೇ ಮನಃ ॥ ೫೩ ॥**

ಓ ಅಂತರಂಗಪ್ರಿಯಳೆ, ಆನೆಯ ಸೊಂಡಿಲಿನಂತಹ ಕೈಕಾಲುಗಳುಳ್ಳವಳೆ, ಹೇ ಕರಭೋರು, ನಿನ್ನ ಮುದ್ದಾದ ಮುಂಗುರುಳು ಮಾರುತನಿಂದ ಚಲಿಸಲ್ಪಡುತ್ತಾ, ನಿನ್ನಲ್ಲಿ ಚೈತನ್ಯವಿದೆ, ಜೀವಕಲೆಯಿಂದೆ, ನೀನು ಇನ್ನೂ ಬದುಕಿರುವೆ ಎಂಬ ಅನುಮಾನವನ್ನು ಹುಟ್ಟಿಸುತ್ತಿರುವನು. ಓ ಸುಗುಣಶೀಲಳೆ (ಸುಗುಣೆ, ಸುಶೀಲಳೆ), ಕರಭಸದೃಶವಾದ ಊರುಗಳುಳ್ಳವಳೆ, ನೀನು ತರತರದ ಹೂ ಮುಡಿದು ಅಲಂಕರಿಸುತ್ತಿದ್ದ, ತುಂಬಿಯು ಬಣ್ಣದಂತೆ ಕಂಗೊಳಿಸುತ್ತಿದ್ದ, ತುಂಬಿಗಳ ಸಾಲನ್ನು ಹೋಲುವ ಸುಳಿಸುಳಿಯಾದ ಮುಂಗುರುಳನ್ನು ಮಾರುತನು ಅಲುಗಾಡಿಸುತ್ತಿರುವನು. ಇದರಿಂದ ನೀನು ಪುನಃ ಉಸಿರಾಡುವೆ, ಪುನಃ ಪ್ರಾಣವಾಯುವು ಸಂಚರಿಸುವನೆಂಬ, ಚೈತನ್ಯಪೂರ್ಣಳಾಗುವೆ ಯೆಂಬ ಶಂಕೆಯಲ್ಲಿ ನನ್ನಲ್ಲಿ ಮೂಡಿಸುತ್ತಿರುವುದು (ಮರಳಿ ಬಹೆ ನೀನೆಂಬ ಬಗೆಯು ಬಯಕೆಯನು) ನೋಡು ಪ್ರಿಯೆ.

ವಲೀಭೃತಃ = ವಲೀಃ ಬಿಭ್ರತಿ ಇತಿ —ವಲೀಭೃತೋ = ಭಂಗೀಯುಕ್ತಾನ್=ಕುಟಿಲಾನಿತ್ಯರ್ಥಃ—ಹೇ ಕರಭೋರು = ಕರಭಸದೃಶೋರು—''ಮಣಿಬಂಧಾದಾಕನಿಷ್ಠಂ ಕರಸ್ಯ ಕರಭೋ ಬಹಿಃ'' ಇತ್ಯಮರಃ ॥

**54. ತದಪೋಹಿತುಮರ್ಹಸಿ ಪ್ರಿಯೇ ।**
**ಪ್ರತಿಬೋಧೇನ ವಿಷಾದಮಾಶು ಮೇ ॥**
**ಜ್ವಲಿತೇನ ಗುಹಾಗತಂ ತಮಃ ।**
**ತುಹಿನಾದ್ರೇರಿವ ನಕ್ತಮೋಷಧಿಃ ॥ ೫೪ ॥**

ಹೇ ಪ್ರಿಯಳೆ, ಓ ರಾಣಿ, ಓ ಎನ್ನ ಹೃದಯೇಶ್ವರಿ (ಇನಿಯಳೆ), ನೀನು ಪುನಃ ಎಚ್ಚರಗೊಂಡು, ಜೀವಿಸಿದ ಬಳಿಕವೇ ನನ್ನ ಮನದ ಅಳಲು ಪರಿಹಾರವಾಗುವುದು (ಎದೆಯ ಅಳಲು). ನೀನು ಜೀವಿಸಿ ನನ್ನ ದುಃಖವನ್ನು ಬೇಗನೇ ಹೊಡೆದೋಡಿಸು. ಹಿಮಾಲಯದ ಗುಹೆಗಳಲ್ಲಿರುವ ಸಂಜೀವಿನೀಲತೆಯು ಸ್ವಯಂಪ್ರಕಾಶದಿಂದ ಅಲ್ಲಿನ ಗುಹೆಯಲ್ಲಿರುವ ಕಾರ್ಗತ್ತಲೆ ಪರಿದೋಡುವಂತೆ ನೀನು ಪುನಃ ಎಚ್ಚರಗೊಂಡು ನನ್ನ ದುಃಖದ ಸರಮಾಲೆಯನ್ನು ಹೊಡೆದೋಡಿಸು (ಪರಿದೋಡಿಸು). ಗುಹೆಗಳಲ್ಲಿ ಅಡಗಿರುವ ಕತ್ತಲೆಯನ್ನು ಜ್ಯೋತಿರ್ಲತೆಯು ಪ್ರಕಾಶವು ಚದರಿಸುವಂತೆ ನನ್ನ ಮಾನಸಿಕ ದುಃಖವನ್ನು (ಎದೆಯ ಅಳಲು, ಮನೋರೋಗ, ಮನದ ಅಳಲು, ಮನಶ್ಚಿಂತೆ, ಮ್ಲಾನ, ಗ್ಲಾನಿ) ನೀನೋರ್ವಳೇ ಹೋಗಲಾಡಿಸಬಲ್ಲೆ, ಪ್ರಿಯೆ. ಓ ನಗುಮೊಗದ ಚೆಲುವೆ, ನಿನ್ನ ಕಾರುಣ್ಯಪೂರ್ಣ ನಗೆಯನ್ನು ಒಮ್ಮೆ ಬೀರು, ಓ ಪವಿತ್ರಾತ್ಮಳೆ (ದೋಷರಹಿತಳೆ)'' (ಪರಿಹರಿಪುದಾ ಇನಿಯೆ).

ಜ್ವಲಿತೇನ = ಪ್ರಕಾಶೇನ—ತುಹಿನಾದ್ರೇಃ = ಹಿಮಾಚಲಸ್ಯ—ತಮೋ = ಅಂಧಕಾರಮಿವ—ಪ್ರತಿಬೋಧೇನ = ಜ್ಞಾನೇ—ಅಪೋಹಿತುಂ = ನಿರಸಿತುಮರ್ಹಸಿ ॥

**55. ಇದಮುಚ್ಛ್ವಸಿತಾಲಕಂ ಮುಖಂ ।
ತವ ವಿಶ್ರಾಂತ ಕಥಂ ದುನೋತಿ ಮಾಮ್ ॥
ನಿಶಿ ಸುಪ್ತಮಿವೈಕ ಪಂಕಜಂ ।
ವಿರತಾಭ್ಯಂತರಷಟ್ಪದಸ್ವನಮ್ ॥ ೫೫ ॥**

ಓ ಪ್ರಾಣಸರ್ವಸ್ವಳೆ (ಸತ್ವಪೂರ್ಣಳೆ), ಮುಂಗುರುಳು ಕವಿದ ನಿನ್ನ ಅಂದವಾದ ಮುಖಕಮಲವು ಕೆರೆಯಲ್ಲಿರುವ ಒಂಟಿತಾವರೆ ಹೂವಿನಂತೆ ನನ್ನ ಕಣ್ಣಿಗೆ ಕಾಣಿಸುತ್ತಿದೆ. ಆ ನಿನ್ನ ಆಹ್ಲಾದಕರವಾದ ಮುಖಕಮಲವಿಂದು ರಾತ್ರಿಕಾಲದಿಂದ ಹಿಮದಿಂದ ಮುದುಡಿದ ಮಂಜು ಮುಸುಕಿ ಮುಚ್ಚಿಹೋದ ತಾವರೆಹೂವನ್ನು ಹೋಲುತ್ತಿದೆ. ಈಗ ನೀನು ವಿರಮಿಸುತ್ತ ದೀರ್ಘನಿದ್ರೆಯಲ್ಲಿರುವೆ, ನೀನೀಗ ಮಾತಾಡದೆ, ಮೌನಮುದ್ರಿತಳಾದಿ, ನಿದ್ರಾಲೋಲಳಾಗಿರುವೆಯಲ್ಲವೆ. ಶಬ್ದಿಸದ, ಗುಂಗುಂಗಾನಮಾಡದ ಉಲಿಯದ, ನಲಿಯದ, ಸಂಸ್ವನಮಾಡದ ದುಂಬಿಗಳಂತೆ, ಆ ತಾವರೆ ಹೂವು ಮುದುಡಿಕೊಳ್ಳಲು ಅದರ ಒಳಗೆ ಸಿಲುಕಿಕೊಂಡ ಅಳಿಗಳು (ತುಂಬಿಗಳು) ಮೌನವಾಂತಿರುವ ತೆರದೆ. ನೀನೋರ್ವಳೇ ಇಲ್ಲಿ ಮಲಗಿ ವಿರಮಿಸುವುದನ್ನು ಕಂಡರೆ, ಅಪಾರವಾದ ಜಲರಾಶಿಯಲ್ಲಿ ಮುದುಡಿದ ಒಂದೆ ಒಂದು ತಾವರೆಹೂವಿನಂತೆ ಅಥವಾ ಒಂಟಿ ತಾವರೆ ಸುಮದಂತೆ ನನ್ನ ಚಕ್ಷುಗಳಿಗೆ ಗೋಚರಿಸುತ್ತಲಿರುವೆ ರಮಣಿ.

ಇದ ಮುಚ್ಛ್ವಸಿತಾಲಕಂ = ಚಲಿತಚೂರ್ಣಕುಂತಲಂ—ವಿಶ್ರಾಂತಕಥಂ = ನಿವೃತ್ತ ಸಂಲಾಪಂ—ನಿಶಿ = ರಾತ್ರೌ—ಸುಪ್ತಂ = ನಿಮೀಲಿತಂ—ವಿರತೋಽಭ್ಯನ್ತರಷಟ್ಪದಸ್ವನ ಮೇಕಪಂಕಜಮದ್ವಿತೀಯಂಪದ್ಮಮಿವ =ಉಲಿಯದ ಅಳಿಗಳು ಒಳಗಿರಲು ಮುಗಿದ ಒಂಟಿ ತಾವರೆಯು ಕಂಡವೋಲ್ ಇಂದು.

**56. ಶಶಿನಂ ಪುನರೇತಿ ಶರ್ವರೀ ।
ದಯಿತಾದ್ವಂದ್ವಚರಂ ಪತತ್ರಿಣಮ್ ॥
ಇತಿ ತೌ ವಿರಹಾಂತರಕ್ಷಮೌ ।
ಕಥಮತ್ಯಂತ ಗತಾ ನ ಮಾಂ ದಹೇಃ ॥ ೫೬ ॥**

ಓ ಹರಿದ್ರಾಕುಂಕುಮಶೋಭಿತೇ, ಹೇ ಶೋಭನಾಂಗಿ, ರಾತ್ರಿಯು ಪುನಃ ಬರಲಿರುವುದೆಂದು ಚಂದ್ರಮನು ತನ್ನ ವಿರಹವನ್ನು ತಡೆದಪುದು. ಅಂತೆಯೇ ಎಣೆವಕ್ಕಿ ತನ್ನ ಜೊತೆ ಹಕ್ಕಿಯು (ಚಕ್ರವಾಕ ಪಕ್ಷಿಯುನ್ನು) ಒಂದು ಗೂಡಲ್ಲಿರುವುದನ್ನು ನೆನೆದು ತನ್ನ ವಿರಹ ವೇದನೆಯನ್ನು ಸಹಿಸಿಕೊಂಡು ಇರಬಲ್ಲುದು. ಆ ಇಬ್ಬರು ಚಂದ್ರ ಮತ್ತು ಚಕ್ರವಾಕಪಕ್ಷಿ ಪುನರ್ಮಿಲನದ ಆಸೆಯಿಂದ ವಿರಹ (ವಿಯೋಗ) ವೇದನೆಯನ್ನು ಸಹಿಸಿಕೊಂಡಿರುವರು (ನಿಶಿಶಶಿಯುಮೆಣೆವಕ್ಕಿ ದಯಿತೆಯುಮ ಮರಳಿಬೆರೆದಪವೆನುವಕತದೆ), ಆದರೆ ಎಲೆ ಸತಿಯೆ, ಮಂದಭಾಗ್ಯನಾದ ನಾನು ಪುನರಾಗಮವಿಲ್ಲದೆ, ಪುನಃ ನಿನ್ನ ಸಂದರ್ಶನ (ಮುಖಾವಲೋಕನ) ಭಾಗ್ಯ ಪಡೆಯದೆ, ವಂಚಿತನಾಗಿ, ಈ ವಿರಹಾಗ್ನಿಯನ್ನು ಎಂತು ಸಹಿಸಲಿ ? ಈ ವಿರಹಾಗ್ನಿಯು ನನ್ನನ್ನು ದಹಿಸದೆ ಬಿಡದು, ಮತ್ತೆ ನಿನ್ನ ಅಗಲಿಕೆ ನನ್ನ ಸುಡುತ್ತಲಿದೆ.

ನಿನ್ನ ಅಗಲಿಕೆಯ ದೆಸೆಯಿಂದ ನಾನಿಂದು ಭಗ್ನಹೃದಯಿಯಾದೆನು. ಹೇ ವಾಮೋರು (ಅರ್ಧಾಂಗಿ, ವಾಮಾಂಗಿ) ನೀನಿಲ್ಲದ ನನ್ನ ಇಹಲೋಕದ ಬದುಕು ಮಣ್ಣುಪಾಲಾಯಿತು ಅಲ್ಲವೆ ಮನಃಪ್ರಿಯೆ ?"

ಶರ್ವರೀ = ರಾತ್ರಿಃ—ಶಶಿನಂ=ಚಂದ್ರಂ—ಪುನರೇತಿ=ಪ್ರಾಪ್ನೋತಿ—ದ್ವಂದ್ವೀಭೂಯ ಚರತೀತಿ = ದ್ವಂದ್ವಚರಃ—ಪತತ್ರಿಣಾಂ = ಚಕ್ರವಾಕಂ— ಅತ್ಯಂತ ಗತಾ ಪುನರಾವೃತ್ತಿ ರಹಿತಾ ತ್ವಂ ಕಥಂ ನ ಮಾಂ ದಹೇರ್ನ=ಸಂತಾಪಯೇಃ—ದ್ವಂದ್ವಚರಮ್=ದ್ವಂದ್ವೇನ ಅಥವಾ ದ್ವಂದ್ವಭೂಯ ಚರತಿ ॥

57. ನವಪಲ್ಲವಸಂಸ್ತರೇಽಪಿ ತೇ ।
ಮೃದುದೂಯೇತ ಯದಂಗಮರ್ಪಿತಮ್ ॥
ತದಿದಂ ವಿಷಹಿಷ್ಯತೇ ಕಥಂ ।
ವದ ವಾಮೋರು ಚಿತಾಧಿರೋಹಣಮ್ ॥ ೫೭ ॥

ಹೇ ಸುಗುಣಚರಿತಳೆ, ಹೇ ದೇವಿ (ಹೇ ಕಾರುಣ್ಯಮಯಿ), ಹೇ ವಾಮೋರು, ನಿನ್ನ ಈ ಸುಮಕೋಮಲ ದೇಹವು, ನಿನ್ನ ಈ ಮೃದು ದೇಹವು ಚಿಂದಳಿರ ತಳಿರಹಾಸಿಗೆಯಲ್ಲಾದರೂ ನೋಯದೆ ಇರದು. ಹಂಸತೂಲಿಕಾತಲ್ಪವೇ ನೋಯಿಸುವುದೆನ್ನುವವಳು ನೀನು. ಹೀಗಿರುತ್ತ ನಿನ್ನ ನವುರುಮೈ (ಗಂಧದ, ಚಂದನದ ಕೊರಡುಗಳ) ಕಾಷ್ಠಸಜ್ಜಿತವಾದ ಚಿತೆಯನ್ನು ಹೇಗೆ ತಾಳಿಕೊಳ್ಳಬಲ್ಲದು ? ಕಠಿಣವಾದ ಚಿತೆಯನ್ನು ಏರುವ ಬಗೆಯೆಂತೋ ? ನಾನರಿಯೆ (ತಾಳಬಹುದೆಂತು ಹೇಳಾ ಚಿತಾರೋಹಣವ). ನನ್ನ ಸಂತಾಪಕ್ಕೆ ಇನ್ನು ಕೊರೆಯಿರದು. ನಾನೀಗ ಎಣ್ಣೆ ಆರಿದ ದೀಪ, ಬಾಳ್ಗತ್ತಲೆಯಲ್ಲಿ ತೊಳಲುವುದು ಗತಿಯಾಯ್ತು."

ನವಪಲ್ಲವಸಂಸ್ತರೇ = ನವಪಲ್ಲವಾನಾಂ ಸಂಸ್ತರ ಆಸ್ತರಣೇsಪ್ಯರ್ಥಿತಂ—ಯದಂಗಂ = ಶರೀರಂ—ದೂಯೇತ = ಪರಿತಪ್ತಂ ಭವೇತ್—ಕಾಷ್ಠಸಂಚಯಸ್ಯಾಧಿರೋಹಣಂ = ಚಿತಾರೋಹಣವ ನವುರು ಮೈಯವಳು—ಕಥಂ ವಿಷಹಿಷ್ಯತೇ ವದ=ತಾಳಬಹುದೆಂತು, ಹೇಳಾ.

58. ಇಯಮಪ್ರತಿಬೋಧಶಾಯಿನಾಂ ।
ರಶನಾ ತ್ವಾಂ ಪ್ರಥಮಾ ರಹಃ ಸಖೀ ॥
ಗತಿವಿಭ್ರಮಸಾದನೀರವಾ ।
ನ ಶುಚಾ ನಾನುಮೃತೇವ ಲಕ್ಷ್ಯತೇ ॥ ೫೮ ॥

ಹೇ ಮನಃಪ್ರಿಯೆ, ನಿನ್ನ ಸೊಂಟದಲ್ಲಿ ಶೋಭಿಸುತ್ತಿರುವ ಈ ಮಣಿಮೇಖಲೆಯು ಅಂದು ನಾವಿಬ್ಬರು ಜೊತೆಸೇರಿದ ಮಧುಚಂದ್ರದ ಪ್ರಥಮರಾತ್ರಿಯಂದು ನಮ್ಮೊಂದಿಗೆ ಇನಿದಾಗಿ ಶಬ್ದಿಸಿತ್ತು. ಆದರೆ ಇಂದು, ಅದೂ ಶಬ್ದಿಸದೆ, ನಾದಗೈಯದೆ ಶೋಕಭರದಿಂದ ಎಂಬಂತೆ ಸ್ಮಶಾನಮೌನವನ್ನು ತಾಳಿದಂತೆ (ತಳೆದಂತೆ) ಮೂಕಶೋಕವನ್ನು ಪ್ರಕಟಿಸುತ್ತಾ, ಮೂಕಸಾಕ್ಷಿಯಾಗಿ, ಎಲ್ಲಾ ವಿನೋದಕ್ರೀಡೆಗಳನ್ನು ದುಃಖದಿಂದ ತ್ಯಜಿಸಿ

ದಂತೆ. ನೀನು ನಿದ್ರಿಸಿದಂತೆ ಅದೂ ನಿದ್ರಿಸಿದೆ. ನಿನ್ನ ನಿದ್ರೆಯಾದರೋ ಚಿರನಿದ್ರೆ, ಎಚ್ಚರವಾಗದೆ ಇರುವ ದೀರ್ಘನಿದ್ರೆ, ಹಾಯ್ ವಿಧಿಯೇ ವಿಧಾತನು ನನ್ನ ದಾಂಪತ್ಯಕ್ಕೆ ಪೂರ್ಣವಿರಾಮ (ವಿದಾಯ)ವಿತ್ತನೇ, ಹಾಯ್'' ಎಂದು ಆ ಭೂಕಾಂತನು ಅಳಲ್ದನು.

ಅಪ್ರತಿಬೋಧಶಾಯಿನೀಮ್ = ಅಪ್ರತಿಬೋಧಂ ಯಥಾ ಸ್ಯಾತ್ ತಥಾ ಶೇತೇ ಇತಿ —ಗತಿವಿಭ್ರಮಸಾದೇನ ನೀರವಾ = ವಿಲಾಸೋಪರಮೇಣ ನಿಃಶಬ್ದಾ—ರಶನಾ = ಮೇಖಲಾ—ಪ್ರತಿಬೋಧಮ್=ಪುನರುದ್ಬೋಧಂ—ಶಾಯಿನೀಮ್=ಮೃತಾಮಿತ್ಯರ್ಥಃ —ಶುಚಾ = ಶೋಕೇನ—ಮೃತೇವ ನ ಲಕ್ಷ್ಯತ ಇತಿ ನ—ಲಕ್ಷ್ಯತ ಏವೇತ್ಯರ್ಥಃ— ಉತ್ಪ್ರೇಕ್ಷಾಲಂಕಾರ ॥

59. ಕಲಮನ್ಯಭೃತಾಸು ಭಾಷಿತಂ ।
ಕಲಹಂಸೀಷು ಮದಾಲಸಂಗತಮ್ ॥
ಪೃಷತೀಷು ವಿಲೋಲಮೀಕ್ಷಿತಂ ।
ಪವನಾಧೂತಲತಾಸು ವಿಭ್ರಮಾಃ ॥ ೫೯ ॥

ಹೇ ಚಾರುಶೀಲೆ, ಹೇ ಕಮಲನಯನೆ, ಮಂದಹಾಸಿನಿ, ಮಂಜುಭಾಷಿಣಿ, ನೀನು ಅರಸುಚಿಯು ನಡೆಯುವಳು. ಮಂದವಾಗಿ ನಡೆಯುವ, ಮಂದಾಲಸಾಗಾಮಿಯಾದ. ಹಂಸದ ನಡಿಗೆಯವಳು. ನಿನ್ನ ನಡಿಗೆಯನ್ನು ನಾನಿಂದು ರಾಜಹಂಸದಲ್ಲಿ ಕಾಣುವೆನು. ಮೃಗನಯನೆಯಾದ ನಿನ್ನ ಚಂಚಲದೃಷ್ಟಿ ಕಡೆಗಣ್ಣ ನೋಟವು ಜಿಂಕೆಯ ಕಣ್ಣಿನಲ್ಲಿ ಅಡಗಿದೆ (ಅಂಚೆಯೊಳು ಮೆಲುನಡೆಯ ಎರಳೆಯೊಳು ನೋಟವನು), ನಿನ್ನ ದನಿಯು ಕೋಗಿಲೆಯ ಕಂಠದಲ್ಲಿ, ನಿನ್ನ ಮಾಧುರ್ಯದ ಮಂಜುಳವಾದ ಮಾತುಗಳು, ನಿನ್ನ ಸುಭಾಷಿತವು ಕುಕಿಲದ ಇನಿದನಿಯಲ್ಲಿ, ಕೋಕಿಲದ, ಹರಿವ ನೀರಿನ ಕಲಕಲರವದಲ್ಲಿ ಕೇಳುತ್ತಿರುವೆನು. ನೀನಾದರೋ ಬಳ್ಳಿಪ್ಯೆಯುವಳು.ತಂಬೆಲರು ತೀಡುತ್ತಿರುವ (ತಂಬೆಲರ ತೀಟದಲಿ, ತೊನೆವ ಬಳ್ಳಿಯಂತೆ, ನಿನ್ನ ಚಪಲಗಮನ (ನಡೆ), ನಿನ್ನ ಹಾವಭಾವದ ವಿಲಾಸ, ಇನ್ನು ನಿನ್ನ ದರ್ಶನಸುಖ ಎಂದು ಎಂಬುದನ್ನು ನಾನರಿಯೆನು, ಆದರೆ ನಿನ್ನ ದಯೆಯಿಂದ ನಿನ್ನ ಗುಣಗಳನ್ನು ನಾನಿಂದು ಪ್ರಕೃತಿಮಾತೆಯಲ್ಲಿ ಮಾತ್ರ ನೋಡುತ್ತಿರುವೆನು.

ಅನ್ಯಭೃತಾಸು = ಕೋಕಿಲಾಸು—ಕಲಂ = ಮಧುರಂ—ಭಾಷಿತಮ್ = ಭಾಷಣಂ— ಕಲಹಂಸೀಷು = ವಿಶಿಷ್ಟಹಂಸೀಷು—ಮದಾಲಸಂ = ಮಂಥರಂ—ಗತಂ = ಗಮನಮ್— ಪೃಷತೀಷು = ಹರಿಣೀಷು—ವಿಲೋಲಮೀಕ್ಷಿತಂ = ಚಂಚಲಾದೃಷ್ಟಿಃ—ಧೂತಲತಾ = ಸ್ವೀಷತ್ ಕಂಪಿತ ಲತೇಷು—ವಿಭ್ರಮಾ = ವಿಲಾಸಾಃ ॥

60. ತ್ರಿದಿವೋತ್ಸುಕಯಾಪ್ಯವೇಕ್ಷ್ಯ ಮಾಂ ।
ನಿಹಿತಾಃ ಸತ್ಯಮಮೀ ಗುಣಾಸ್ತ್ವಯಾ ॥
ವಿರಹೇ ತವ ಮೇ ಗುರುವ್ಯಥಂ ।
ಹೃದಯಂ ನ ತ್ವವಲಂಬಿತುಂ ಕ್ಷಮಾಃ ॥ ೬೦ ॥

ನೀನೀಗ ದಿವೌಕಸರಲೋಕಕ್ಕೆ ತೆರಳುತ್ತಿವೆ, ನಾಕಗಮನೋತ್ಸಾಹವಿದ್ದರೂ ನನಗಾಗಿ ಸಂಗಮಶೀಲಳೆ, ಸ್ವಲ್ಪತಾಳು, ನೀನು ನನ್ನ ಮೇಲೆ ಕೃಪೆಗೈದು ನಾನು ಪ್ರಾಣಧಾರಣೆ ಮಾಡಿಕೊಂಡಿರಲೆಂದು ನಿನ್ನ ಗುಣಧರ್ಮಗಳನ್ನು ನೀನು ನನಗೋಸ್ಕರ ಪ್ರಕೃತಿಯಲ್ಲಿ ಬಿಟ್ಟುಹೋಗಿರುವಿ. ಆದರೆ ಅವುಗಳು ವಿರಹದುಃಖದಿಂದ ಭಾರವಾದ ನನ್ನ ಹೃದಯವನ್ನು ತಣಿಸಲು ಸಮರ್ಥವಾಗಲಾರವು. ನನ್ನ ಈ ಬೆಂದ ಎದೆಯು, ನಿನ್ನ ಅಗಲಿಕೆಯಿಂದ (ವಿರಹಾಗ್ನಿಯಿಂದ) ಇದೀಗ ಸುಡುತ್ತಲಿದೆ. ನನ್ನ ಬೆಂದಮನಸನ್ನು ತಣಿಸಬಲ್ಲವಳೆಂದರೆ ಅಮೃತಭಾಷಿಣಿಯರಾದ ನೀನೋರ್ವಳೆ, ಪ್ರಿಯೆ ನೀನು ಮಾತ್ರ ಶಕ್ತಳು.

ತ್ರಿದಿವೋತ್ಸುಕಯಾಪೀಹ = ಜೀವನ್ತ್ಯೇವ ಸ್ವರ್ಗಪ್ರತಿಪ್ರಸ್ಥಿತಯಾಪಿ—ಮತ್ಪ್ರಾಣಧಾರಣೋಪಾಯತಯಾ—ತವ ವಿರಹೇ = ಗುರುವ್ಯಥಮಿತಿದುಃಖಂ—ನ ಕ್ಷಮಾ = ನ ಶಕ್ತಾಃ ॥

**61.** **ಮಿಥುನಂ ಪರಿಕಲ್ಪಿತಂ ತ್ವಯಾ ।**
**ಸಹಕಾರಃ ಫಲಿನೀ ಚ ನನ್ವಿಮೌ ॥**
**ಅವಿಧಾಯ ವಿವಾಹಸತ್ಕ್ರಿಯಾಂ ।**
**ಅನಯೋರ್ಗಮ್ಯತ ಇತ್ಯಸಾಂಪ್ರತಮ್** ॥ ೬೧ ॥

ಓ ಮನದನ್ನೆ (ಹೇ ಸಾಧ್ವಿ), ನೀನಂದು ನಿನ್ನ ಲಗ್ನದ ನೆನಪಿಗಾಗಿ ಒಂದು ಮಾವಿನ ಗಿಡವನ್ನು, ಇನ್ನೊಂದು ಪ್ರಿಯಂಗುಲತಾಲತಿಕೆಯನ್ನು ನೆಟ್ಟು ಕೈನೀರೆರೆದು ಬೆಳೆಸಿದೆ (ನೀನೆ ದಲ್ ಸಹಕಾರ ಫಲಿನಿಗಳ ನಿಂತೊಂದುಗೂಡಿಸಿದೆ) ಲೋಕವಾಡಿಕೆಯಂತೆ ನೀನು ಆ ಮರ ಮತ್ತು ಬಳ್ಳಿಗಳನ್ನು ಒಂದುಗೂಡಿಸಿ ಅವುಗಳ ವಿವಾಹವೆಸಗಿ ಆ ಬಳಿಕ ಅಲ್ಲವೆ ಸ್ವರ್ಗದತ್ತ ಗಮನಿಸಬೇಕಾದುದು. ಈಗ ನೀನು ಅವುಗಳನ್ನು ಹಾಗೆಹಾಗೆಯೇ ಬಿಟ್ಟು ತೆರಳುವುದು, ನಡೆಸಬೇಕಾದ ಪವಿತ್ರೋತ್ಸವವನ್ನು ನಡೆಸದೆ ಪಯಣಿಸುವುದು ಸರಿಯೆ. ಹೇ ಪ್ರಿಯೆ (ಎಲೆ ಚೆನ್ನೆ) ಸ್ವಲ್ಪ ನಿಧಾನಿಸು.

ಅನಯೋಃ ಫಲಿನೀ ಸಹಕಾರಯೋರ್ವಿವಾಹ ಸತ್ಕ್ರಿಯಾಂ ವಿವಾಹಮಂಗಲಂ ವಿಧಾಯಾಕೃತ್ವಾ ಗಮ್ಯತ ಇತ್ಯಸಾಂಪ್ರತ ಮಯುಕ್ತಮ್—ಮಾತೃಹೀನಾನಾಂ ನ ಕಿಂಚಿತ್ಸುಖಮಸ್ತೀತಿ ಭಾವಃ—ಸಹಕಾರ = ತರುವಿಶೇಷಃ—ಫಲಿನೀ = ಪ್ರಿಯಂಗುಲತಾ ॥

**62.** **ಕುಸುಮಂ ಕೃತ ದೋಹದಸ್ತ್ವಯಾ ।**
**ಯದಶೋಕೋಽಯಮುದೀರಯಿಷ್ಯತಿ ॥**
**ಅಲಕಾಭರಣಂ ಕಥಂ ನು ತತ್ ।**
**ತವ ನೇಷ್ಯಾಮಿ ನಿವಾಪಮಾಲ್ಯತಾಮ್** ॥ ೬೨ ॥

ನೀನು ಅತ್ಯಂತ ಪ್ರೀತಿಯಿಂದ ಇಚ್ಛೆಪಟ್ಟು ಧರಿಸಿರುವ ಹೂಗಳು ನಿನ್ನ ತುರುಬಿನಲ್ಲಿ ಶೋಭಿಸುತ್ತಲಿವೆ (ನೀನೇ ದೋಹದವೆಸಗಿದ). ನಿನ್ನ ಕಿವಿಗಳಲ್ಲಿ ಅಲಕಾಭರಣದ ಎಸಳುಗಳು ಹಾಗೆಯೇ ಇವೆ. ನಿನ್ನ ಜೀವಿತಕಾಲದಲ್ಲಿ ಧರಿಸಿದ ನಿನ್ನ ಪ್ರೀತಿಯ ಕುಸುಮಮಾಲೆಗಳನ್ನು ನಾನು ಅದೆಂತು ನಿನ್ನ ಮರಣೋತ್ತರಕ್ರಿಯೆಗೆ ಉಪಯೋಗಿಸಲಿ ಹೇಳು.

ಆ ಅಶೋಕದ ಮೊಗ್ಗು ಹೂಗಳು ಕುಸುಮಿಸಿ ನಿನ್ನ ಇಷ್ಟಾರ್ಥವನ್ನು ಸಲ್ಲಿಸಿವೆ. ನಾನೀಗ ಅವುಗಳನ್ನು ನಿನ್ನ ಅಪರಕ್ರಿಯೆಗಳಿಗೆ ಎಂತು ಉಪಯೋಗಿಸಲಿ ? ಹಾಯ್ ವಿಧಿಯೇ "ಶ್ರೌತಧರ್ಮಾನುಸಾರವಾಗಿ ಮಾಡಬೇಕಾದ ಮೃತ್ಯುದೆಯರ ಅಪರಕ್ರಿಯಾಕಾಲದಲ್ಲಿ ಗಂಧ, ಮಾಲ್ಯ, ಧೂಪ, ದೀಪ, ಚಾದನ ಮೊದಲಾದ ಪ್ರಧಾನವಸ್ತುಗಳ ದಾನಕೊಡುವ ಕ್ರಿಯೆಗೆ ಅನುಗುಣವಾಗಿ."

"ನಿವಾಪಃ ಪಿತೃದಾನಂ ಸ್ಯಾತ್" ಇತ್ಯಮರಃ ॥

**63. ಸ್ಮರತೀವ ಸಶಬ್ದನೂಪುರಂ ।**
**ಚರಣಾನುಗ್ರಹಮನ್ಯದುರ್ಲಭಮ್ ॥**
**ಅಮುನಾ ಕುಸುಮಾಶ್ರುವರ್ಷಿಣಾ ।**
**ತ್ವಮಶೋಕೇನ ಸುಗಾತ್ರಿ ಶೋಚ್ಯಸೇ** ॥ ೬೩ ॥

ಹೇ ಸುಗಾತ್ರಿ, ಹೇ ಮಂಗಳನೇತ್ರೆ, ಅಲ್ಲಿ ಕಾಣುತ್ತಿರುವ ಅಶೋಕವೃಕ್ಷವು ತನ್ನ ಅರಳಿದ ಹೂವಿನ ಮಳೆಯನ್ನು ದುಃಖಿಸುತ್ತಾ ಸುರಿಸುತ್ತಲಿದೆ. ಇತರರಿಗೆ ದುರ್ಲಭವಾದ ನಿನ್ನ ಕಾಲ್ಗೆಜ್ಜೆಗಳ ನೂಪುರದ (ಮಂಜೀರದ) ಮತ್ತು ನೇವುರದ (ಡಾಬು, ನೇವಳ) ಇನಿದಾದ ದನಿಯನ್ನು (ಮಂಜುಳವಾದ) ನೆನೆದು ಆ ಅಶೋಕವೃಕ್ಷವು ಹೂವಿನಕಂಬನಿ ಮಳೆಯ (ಪುಷ್ಪಭಾಷ್ಪವನ್ನು) ಸುರಿಸುತ್ತಲಿದೆ. ಅದರಿಂದ ಆ ವೃಕ್ಷವು ನಿನಗಾಗಿ ಅಳುವಂತೆ ತೋರುತ್ತಿದೆ (ಸವಿದನಿಯ ನೇವುರವ ನೆನೆದು ಅಲರುಗಂಬನಿಮಳೆಯು). ನಿನ್ನ ಕಾಲಿನ ಸದ್ದನ್ನು ಕೇಳಿ ಕೃತಜ್ಞತಾಪೂರ್ವಕ ಈ ಹಿಂದೆ ನಿನ್ನ ತಲೆಯಮೇಲೆ ಸಂತಸದಿಂದ ಹೂಮಳೆಯನ್ನು ಸುರಿಸುತ್ತಲಿದ್ದ ಆ ಅಶೋಕ ವೃಕ್ಷವನ್ನು ನೋಡು.

ನೂಪುರಂ = ಮಂಜೀರಂ—ಚರಣೇನಾನುಗ್ರಹಂ = ಪಾದೇನತಾಡನರೂಪಂ — ಕುಸುಮಾನ್ಯೇವಾಶ್ರೂಣಿ = ತದ್ವರ್ಷಿಣಾಽಮುನಾ ಪುರೋವರ್ತಿನಾಽಶೋಕೇನ ॥

**64. ತವ ನಿಃಶ್ವಸಿತಾನುಕಾರಿಭಿಃ ।**
**ಬಕುಲೈರರ್ಧಚಿತಾಂ ಸಮಂ ಮಯಾ ॥**
**ಅಸಮಾಪ್ಯ ವಿಲಾಸಮೇಖಲಾಂ ।**
**ಕಿಮಿದಂ ಕಿನ್ನರಕಂಠಿ ಸುಪ್ಯತೇ** ॥ ೬೪ ॥

ಹೇ ಕಿನ್ನರಕಂಠಿ, ನಿನ್ನ ಮಧುರವಾದ ಸ್ವರವು ದೇವಗಾಯಕರಾದ ಕಿನ್ನರರ ಕಂಠಸ್ವರವನ್ನೇ ಹೋಲುವುದು. ಕಿನ್ನರರ ಕಂಠಸ್ವರವನ್ನೇ ಧ್ವನಿಸುವುದು, ಪ್ರತಿಬಿಂಬಿಸುವುದು. ನೀನಿಗ ಶಾಶ್ವತವಾದ ನಿದ್ದೆಯಲ್ಲಿ ಕಣ್ಣುಗಳನ್ನು ಮುಚ್ಚಿರುವೆ. ನೀನು ವಿಲಾಸಮೇಖಲೆಯೆಂಬ ಪುಷ್ಪಹಾರವನ್ನು ಬಕುಲಪುಷ್ಪಗಳಿಂದ ತಯಾರಿಸಲು ಹೊರಟೆ. ನಿನ್ನ ನಿಃಶ್ವಾಸದಿಂದ, ನಿನ್ನ ಬಿಸಿಯಾದ ಉಸಿರ ಪರಿಮಳದಿಂದ ನೀನು ಬಕುಳಗಳನ್ನು ಎನ್ನೊಡನೆ ಅರೆಕೋದು ಪುಷ್ಪಸರವನ್ನು ಮುಗಿಸದೆಯೆ ಇಂತು ಅಕಾಲದಲ್ಲಿ ಮೈಮರೆತು ಮಲಗಿರುವೆ (ನೀನು ಅರೆಕೋದು ರಶನೆಯನು ಮುಗಿಸದೆಯೆ). ಆದರ ಕೆಲಸ ಅರ್ಧದಲ್ಲಿ ಪೂರ್ಣಗೊಳ್ಳದೆ ನಿಂತಿದೆ. ನಾನೂ ನೀನೂ ಜೊತೆಗೂಡಿ ಆ ಪುಷ್ಪಮಾಲಿಕೆಯನ್ನು ಆ ವಿಲಾಸ

ಮೇಖಲೆಯನ್ನು ಪೂರ್ಣಗೊಳಿಸೋಣ. ಎದ್ದೇಳು ಹೃದಯಪ್ರಿಯೆ. ನಾನೀಗ ನಿಸ್ಸಹಾಯಕನೂ, ಏಕಾಂಗಿಯೂ ಆಗಿರುವೆನು.

ಬಕುಲೈಃ = ಬಕುಲಸುಮೈಃ—ಅರ್ಧಚಿತಾಮರ್ಧಃ = ಯಥಾ ತಥಾ ರಚಿತಾಮ್—ಕಿನ್ನರಸ್ಯ ದೇವಯೋನಿ ವಿಶೇಷಸ್ಯ ಕಂಠ ಇವ = ಕಿನ್ನರಕಂಠಿ—ಕಿಮಿಂದು ಸುಪ್ಯತೇ = ನಿದ್ರಾಕ್ರಿಯಂತೇ—ಅನುಚಿತವಿಂದು = ಸ್ವಪ್ನಮಿತ್ಯರ್ಥಃ ॥

**65.** **ಸಮದುಃಖಸುಖಃ ಸಖೀಜನಃ ।**
**ಪ್ರತಿಪಚ್ಚಂದ್ರನಿಭೋಽಯಮಾತ್ಮಜಃ ॥**
**ಅಹಮೇಕರಸಸ್ತಥಾಪಿ ತೇ ।**
**ವ್ಯವಸಾಯಃ ಪ್ರತಿಪತ್ತಿನಿಷ್ಠುರಃ** ॥ ೬೫ ॥

ಹೇ ದೇವಿ, ನಿನ್ನ ಕಷ್ಟಸುಖದಲ್ಲಿ ಸಮಭಾಗಿಗಳಾದ ಈ ಸಖೀಜನರು, ನಿನ ಪರಿವಾರದ ಜನರು (ಸಮದುಃಖಸುಖಶೀಲರಾಳಿಯರು) ಎಂದಿನಂತೆ ನಿನ್ನನ್ನು ಓಲೈಸಲು ಇಲ್ಲಿರುವರು. ಯುವಕನಾದ, ಭಾಗ್ಯಶಾಲಿಯಾದ, ನಿನ್ನ ಆತ್ಮಜನಾದ ಈ ಪುತ್ರಶ್ರೇಷ್ಠನು ಬಾಲಚಂದ್ರನಂತೆ ಭವಿಷ್ಯದಲ್ಲಿ ಭರವಸೆಯುಳ್ಳವನು. ಅವನು ಇಂದು ಶುಕ್ಲಪಕ್ಷದ, ಪಾಡ್ಯದ ದಿನ ದಕ್ಷೀಣಚಂದ್ರಮನಂತೆ (ಶಶಿಯಂತೆ) ತೋರು ತ್ತಿರುವನು. ನಾನಾದರೋ, ಏಕೋಭಾವನೆಯಿಂದ, ಏಕರಸನಾಗಿ, ನಿನ್ನ ಮೇಲೆ ಪ್ರೇಮಾನುರಾಗದಿಂದ ಹಿಂದಿನಂತೆಯೇ ಇರುತ್ತಿರುವೆನು. ಬದಲಾದುದೇ ಇಲ್ಲ. ಹಾಗಿದ್ದರೂ ನೀನು ನಮಗೆ ವಿರುದ್ಧವಾದ ನಿರ್ಧಾರವನ್ನು ಕೈಗೊಂಡಿರುವೆ ಏಕೆ. ನೀನೇಕೆ ಕ್ರೂರಳಾದೆ ? ಹೇಳು (ನೀನು ಗೈದೆ ಕಟ್ಟೆಸಕವಿದನು).

ಸಮದುಃಖಸುಖಃ = ತ್ವದುಃಖೇನ ದುಃಖೀತ್ವ ಸುಖೇನಸುಖೀ ಇತ್ಯರ್ಥಃ—ಅಯ ಮಾತ್ಮಜೋ=ಬಾಲಃ—ಪ್ರತಿಪಚ್ಚಂದ್ರನಿಭಃ=ಪ್ರತಿಪತ್ ಶಬ್ದೇನ ದ್ವಿತೀಯಾ ಪಕ್ಷ್ಯತೇ—ಪ್ರತಿಪದಿ ಚಂದ್ರಸ್ಯಾದರ್ಶನಾತ್—ಅಹಮೇಕರಸೋ = ಅಭಿನ್ನರಾಗಃ—"ಶೃಂಗಾ ರಾದೌ ವೀರ್ಯೇ ಗುಣೇ, ರಾಗೇ, ದ್ರವೇ, ರಸಃ" ಇತ್ಯಮರಃ ॥ ನಿಷ್ಠುರಃ = ಕ್ರೂರಃ—ಪ್ರತಿಪತ್ತಿಃ= ಪದಪ್ರಾಪ್ತೌ ಪ್ರಕೃತೌಗೌರವೇsಪಿ ಚ । ಪ್ರಾಗಲ್ಭ್ಯೇ ಚ ಪ್ರಬೋಧೇ ಚ" ಇತಿ ವಿಶ್ವಃ ॥—ಅಹಮೇಕರಸಃ = ಏಕ ಏವ (ಅಭಿನ್ನಃ ಏವ) ರಸಃ (ರಾಗಃ) ಯಸ್ಯ ಏತಾದೃಶಃ ॥

**66.** **ಧೃತಿರಸ್ತಮಿತಾರತಿಶ್ಚ್ಯುತಾ ।**
**ವಿರತಂಗೇಯಮೃತುರ್ನಿರುತ್ಸವಃ ॥**
**ಗತಮಾಭರಣಪ್ರಯೋಜನಂ ।**
**ಪರಿಶೂನ್ಯಂ ಶಯನೀಯಮದ್ಯ ಮೇ** ॥ ೬೬ ॥

ನನ್ನ ಧೃತಿಯು, ಧಾರಣಾಶಕ್ತಿಯು ಅಸ್ತಮಿಸಿತು (ಧೃತಿಯುಡುಗಿ, ರತಿಯುಡಗಿ). ನನ್ನ ಪ್ರೇಮ, ರತಿ, ಪ್ರೀತಿಗಳು ಅಡಗಿಹೋದುವು (ಇಂಗಿಹೋದುವು). ಋತುವಸಂತವೂ ಇಂದು ನಿರುತ್ಸಾಹವಾಗಿ ತೋರುತ್ತಿದೆ. ಕೋಗಿಲೆಯ ಕೂಜಿತನಾದ ಕರ್ಕಶವೆನಿಸಿದೆ.

ನೀನಿಲ್ಲದ ಈ ವಸಂತೋತ್ಸವ, ಸಂಗೀತಗೋಷ್ಠಿ, ವನವಿಹಾರ, ಜಲಕ್ರೀಡೆ, ವಿಶ್ವವಿಹಾರ, ಗಾಯನ, ನಾಟಕ, ಕ್ರೀಡೆ, ವೀಣಾವಾದನ, ತಾಳಮದ್ದಳೆ, ಹಬ್ಬ, ಹುಣ್ಣಿಮೆ, ಹರಿದಿನಗಳು ನನ್ನ ಪಾಲಿಗೆ ಗತಿಸಿಹೋದ ವಿಷಯಗಳು. ಆಭರಣದ (ರತ್ನಾಭರಣಗಳ) ಸೊಗಸು ಪ್ರಿಯವೆನಿಸದು. ಅವುಗಳ ಅಗತ್ಯವಿರದು. ನನ್ನ ಶಯನವು ಶೂನ್ಯವಾಯಿತು. ಸುಖ, ಭೋಗ, ಸಂತೋಷ, ಚಿತ್ತಶಾಂತಿಗಳು ನನ್ನಿಂದ ಪರಿದೋಡಿದುವು. ಹಂಸ ತೂಲಿಕಾತಲ್ಪವೂ ನನ್ನಿಂದ ದೂರ ಸರಿಯಿತು. ಶಯನದ ತಲ್ಪವು ಅಲ್ಪವಾಗಿ ಕಾಣಿಸುತ್ತಿದೆ. ನೀನಿಲ್ಲದ ಮೇಲೆ ಹಾಸಿಗೆಯೂ ಹೇಸಿಗೆ ಎನಿಸಿದೆ. ಪ್ರಿಯೆ (ಶಯನವೇ ಪರಿಶೂನ್ಯವಿದು). ವಿಧಿವಂಚಿತನಾದ ಎನಗೆ ಎಲ್ಲವೂ ಶೂನ್ಯ (ಸೊನ್ನೆ).

ಧೃತಿ=ಧೈರ್ಯ—ಪ್ರತೀತಿರ್ವಾಸ್ತಂ=ನಾಶಮಿತಾ—ರತಿಃ=ಕ್ರೀಡಾ—ಚ್ಯುತಾ=ಗತಾ—ಗೇಯಂ = ಗಾನಂ—ಗತ = ಮಪಗತಮ್—ಶಯನೀಯಂ = ತಲ್ಪಂ—ಪರಿಶೂನ್ಯಮ್ = ತ್ವಾಂ ವಿನಾ ಸರ್ವಮಪಿ ನಿಷ್ಫಲಮಿತಿ ಭಾವಃ ॥

**67. ಗೃಹಿಣೀ ಸಚಿವಃ ಸಖೀ ಮಿಥಃ।**
**ಪ್ರಿಯಶಿಷ್ಯಾಲಲಿತೇ ಕಲಾವಿಧೌ ॥**
**ಕರುಣಾವಿಮುಖೇನ ಮೃತ್ಯುನಾ।**
**ಹರತಾ ತ್ವಾಂ ವದ ಕಿಂ ನ ಮೇ ಹೃತಮ್ ॥ ೬೭ ॥**

ನೀನೋರ್ವಳೇ ನನ್ನ ಅರ್ಧಾಂಗಿ, ಸಗೃಹಿಣಿ (ಗೃಹಮಂತ್ರಿ), ಪತಿಕಾಂಕ್ಷಿಣಿಯಾದ ಸಾಧು ಪತಿವ್ರತೆ, ನನ್ನ ಬಂಧು, ಸಹಾಯಮಂತ್ರಿ, ಆಪ್ತಸಚಿವೆ, ಸರ್ವಸಚಿವೆ (ಕ್ರೀಡಾ ಮಂತ್ರಿ ನನ್ನ ಪ್ರಿಯಸಖಿ (ಗೃಹಿಣಿಮೇಣ್‌ಮಂತ್ರಿ), ಸಂಗೀತ, ಲಘುಗಾನ (ಭಾವಗೀತೆ) ನೃತ್ಯ(ಭರತನಾಟ್ಯ)ಗಳೇ ಮೊದಲಾದ ಲಲಿತಕಲೆಗಳಲ್ಲಿ ನನಗೆ ಅನುಕೂಲಳಾದ ಪ್ರಿಯ ಶಿಷ್ಯೆ (ಮೇಣ್ ಆಪ್ತಸಖಿ) ನನ್ನ ಸುಖಸಂಸಾರದ ಎಲ್ಲಾ ಸುಖಸೌಭಾಗ್ಯಗಳಿಗೆ ಮೂಲ ಕಾರಣಳು, ಪ್ರೇರಕಶಕ್ತಿ, ಸರ್ವಸುಖದ ಸಾಕಾರಮೂರ್ತಿ, ಆತ್ಮಬಂಧು, ಹಿತೈಷಿಣಿ, ಅತಿಥಿಸತ್ಕಾರದ ಗಣಿ. ಹೀಗಿರುತ್ತ ಎಲ್ಲಾ ಉತ್ತಮ ಗುಣಗಳ ಸಾರಭೂತಳಾದ (ಪ್ರತ್ಯಕ್ಷ ದೇವತೆ) ನಿನ್ನನ್ನು ನಿಷ್ಕರುಣಿಯಾದ ಮೃತ್ಯುದೇವತೆ ಹೇಳದೆ, ಕೇಳದೆ ನನ್ನಿಂದ ನಿನ್ನನ್ನು ಅಪಹರಿಸಿಕೊಂಡೊಯ್ದಿರುವನು. ನನಗೆ ಇನ್ನು ಉಳಿದುದಾದರೂ ಏನು? ನಾನೀಗ ಏಕಾಂಗಿ. ಚಕ್ರಗಳೆರಡು ಇರುವ ರಥದಿಂದ ಒಂದು ಚಕ್ರವು ಉದುರಿಹೋಗಿ (ಕಳಚಿ ಹೋಗಿ) ಬರೇ ಒಂದು ಚಕ್ರದ ಮೇಲೆ ನಿಂತಿದೆ ನನ್ನ ಸಂಸಾರಬಂಡಿ. ಅದು ಎಳೆವುದೆಂತು, ನಡೆವುದೆಂತು? ಕರುಣಾವಿಮುಖನಾಗಿ, ಅತ್ಯಂತ ಕಠಿಣನಾಗಿ ಮೃತ್ಯುವು ನನ್ನಿಂದ ನಿನ್ನನ್ನು ನನಗೆ ಅರಿಯದಂತೆಯೇ ಒಯ್ದಿರುವನು. ನಾನೀಗ ಇಲ್ಲಿ ಒಂದು ಬಿಡುದಾರವಾಗಿ ಬಿದ್ದಿರುವೆನು. ಜೊತೆಹಕ್ಕಿ ಹಾರಿಹೋದ ಬಳಿಕ ಪರಿತಪಿಸುವ ಪಕ್ಷಿಯಂತೆ. ನಿನ್ನನ್ನು ಒಯ್ದ ಮೇಲೆ ಮೃತ್ಯುವು ದಯೆಗೆಯ್ದು ನನಗೆ ಬಿಟ್ಟಿರುವುದಾದರೂ ಏನಿದೆ ಈ ಲೋಕದಲ್ಲಿ? ಬದುಕಿನ ರೂವಾರಿ ಅಗಲಿದ ಮೇಲೆ ನನಗಿಂದು ಲೋಕವೇ ಶೋಕವಾಗಿ, ಶೂನ್ಯವಾಗಿ, ಬರಿದಾಗಿ, ವಿಷವಾಗಿ, ಕಹಿಯಾಗಿ ತೋರುತ್ತಿದೆ (ಶೂನ್ಯ = ಸೊನ್ನೆ). ಮನಃಪ್ರಿಯೆ.

ಗೃಹಿಣೀತಿ = ತ್ವಮೇವ ಗೃಹಿಣೀ = ದಾರಾಃ— ಅನೇನ ಸರ್ವಕುಟುಂಬಂ ತ್ವದಾಶ್ರಯ

ಮಿಂತಿ ಭಾವಃ—ಸಚಿವೋ = ಬುದ್ಧಿ ಸಹಾಯೋ ಮಂತ್ರೀ—ಮಿಥೋ = ರಹಸಿ—ಸಖೀ = ನರ್ಮಸಚಿವಃ—ಸರ್ವಮಪಿ ಹೃತಮಿತ್ಯರ್ಥಃ—ವಿಶೇಷಾಲಂಕಾರ ॥

**68. ಮದಿರಾಕ್ಷಿಮದಾನನಾರ್ಪಿತಂ ।**
**ಮಧು ಪೀತ್ವಾ ರಸವತ್ಕಥಂ ನು ಮೇ ॥**
**ಅನುಪಾಸ್ಯಸಿ ಬಾಷ್ಪದೂಷಿತಂ ।**
**ಪರಲೋಕೋಪನತಂ ಜಲಾಂಜಲಿಮ್ ॥ ೬೮ ॥**

ಓ ಮದಿರಾಕ್ಷಿ, ಮದಿರೆಯಿಂದ ತುಸು ಮದವೇರಿದ ಕಣ್ಣುಗಳಿಂದ ರಂಜಿತಳಾದ ಓ ಭಾಮಿನಿಯೇ, ಈ ಮೊದಲು ನೀನು ಕುಡಿದ ಮಧುರವಾದ ಮಧುರಾಸವವು (ದ್ರಾಕ್ಷಾಸವ, ದ್ರಾಕ್ಷಾರಸ) ಈಗಾಗಲೇ ನಿನ್ನ ಕವೆ ಬಾಯಿಂದ ಮೆಲ್ಲನೆ ಉಡುತ್ತ ಹೊರ ಹರಿಯುತ್ತಿದೆ. ಓ ಮಧುರವಾಣಿ, ಮುಂದೆ ನಾನು ನಿನಗಾಗಿ ಕೊಡಬೇಕಾದ (ಅರ್ಪಿಸ ಬೇಕಾದ) ಜಲದಾನಕ್ರಿಯೆಯ ವೇಳೆಯಲ್ಲಿ ಭಾಷ್ಪಮಿಶ್ರಿತ ಜಲಾಂಜಲಿಯನು ನೀನೆ ಹೇಗೆ ಕುಡಿಯುವೆ ಹೇಳು (ನೀಂ ಕುಡಿದಪೌ ಬಾಷ್ಪದೂಷಿತ ಜಲಾಂಜಲಿಯು).

ಮದಿರೇತಿ = ನಾರ್ಯೋರ್ಮದಿರಲೋಚನಾಃ—ಮದಿರೇ + ಅಕ್ಷಿಣೀ = ಮದಿರಾಕ್ಷಿ—ಬಾಷ್ಪದೂಷಿತ = ಅಶ್ರುತಪ್ತಂ—ಜಲಾಂಜಲಿಂ = ತಿಲೋದಕಾಂಜಲಿಂ—ಮದಿರಾಕ್ಷಿ = ಮಾದ್ಯತ್ಯಾಭ್ಯಾಮ್ ಇತಿ ಮದಿರೇ ಅಕ್ಷಿಣೀ ಯಸ್ಯಾಃ ॥

**69. ವಿಭವೇಽಪಿ ಸತಿ ತ್ವಯಾ ವಿನಾ ।**
**ಸುಖಮೇತಾವದಜಸ್ಯ ಗಣ್ಯತಾಮ್ ॥**
**ಅಹೃತಸ್ಯ ವಿಲೋಭನಾಂತರೈಃ ।**
**ಮಮ ಸರ್ವೇ ವಿಷಯಾಸ್ತ್ವದಾಶ್ರಯಾಃ ॥ ೬೯ ॥**

ಓ ನನ್ನ ಜೀವನಾಧಾರೆ, ನೀನಿಲ್ಲದ ಸಕಲ ಐಶ್ವರ್ಯ, ಭೋಗಭಾಗ್ಯ, ಆಳುಕಾಳು ನಶ್ವರ. ನಾನು ಅವುಗಳನ್ನು ಗಣಿಸೆನು (ಲೆಕ್ಕಿಸೆನು) ನನ್ನ ಇಹಲೋಕದ ಸುಖವು ಇಂದಿಗೆ ಮುಗಿಯಿತೆಂದು ತಿಳಿಯುವೆನು. ನನ್ನ ಜೊತೆಗಾತಿ ನೀನಿರದ ಬಳಿಕ ಈ ಅಷ್ಟೈಶ್ವರ್ಯ ವನ್ನು ನಾನೊರ್ವನೇ ಹೇಗೆ ಅನುಭವಿಸಲಿ, ಪ್ರಿಯೆ. ನನಗಿನ್ನು ಅವುಗಳ ಬಗ್ಗೆ ಇರುವ ಆಕರ್ಷಣೆಯೂ ಎಳ್ಳನಿತಿಲ್ಲ. ನನ್ನ ಸುಖಸಂತೋಷಗಳಿಗೆ, ಒಲುಮೆಯ ಚಿಲುಮೆಯಹಾದ ಮೂಲ ಸೆಲೆಯಾದ, ರಸಕಾರಂಜಿಯಾದ ನೀನು ಇಲ್ಲದ ಜೀವಪ್ರಭೆಯಾದ ನೀನು ಸಂದಿದ ಬಳಿಕ, ಬಳಿಕ ನಾನು ಅನುಭವಿಸಲಾರೆ. ನನ್ನ ಮನಸ್ಸು ಒಪ್ಪದು. ನಿನ್ನ ವಿನಹ ಕಿಂಚಿತ್ತೂ ರುಚಿಸದು. ಭಾಗ್ಯದೇವತೆ, ನೀನು ಅಸ್ತಮಿಸಿದುದರಿಂದ ನನ್ನ ಇಹಲೋಕದ ಜೀವನ ಚರಿತ್ರೆಯು, ಸಮಾಪ್ತಿಗೊಂಡಿತು. ಅದೊಂದು ಮುಗಿದ ಅಧ್ಯಾಯ, ನನ್ನ ಕತೆ ಮುಗಿಯಿತು. ಇನ್ನು ಉಳಿದುದು ವ್ಯಥೆ ಮಾತ್ರ (ನೀನಿಲ್ಲದೆ ಐಶ್ವರ್ಯವಿದ್ದರೂ ಗಣಿಸೆನು—ಸುಖ ಮುಗಿದುದು).

ವಿಭವ ಇತಿ = ವಿಭವ = ಐಶ್ವರ್ಯ, ಸಿರಿಸಂಪತ್ತು ಮತ್ತು ಅಧಿಕಾರ—ಮಮ ಸರ್ವೇ ವಿಷಯಾ = ಭೋಗಾದಯಃ ॥

70. ವಿಲಪನ್ನಿತಿ ಕೋಸಲಾಧಿಪಃ ।
ಕರುಣಾರ್ಥ ಗ್ರಥಿತಂ ಪ್ರಿಯಾಂ ಪ್ರತಿ ॥
ಅಕರೋತ್ ಪೃಥಿವೀರುಹಾನಪಿ ।
ಸ್ರುತಶಾಖಾರಸಬಾಷ್ಪದೂಷಿತಾನ್ ॥ ೭೦ ॥

ಈ ತೆರನಾಗಿ ಆ ಕೋಸಲಾಧಿಪನು ದುಃಖಿಸಿದನು. ತನ್ನ ಇನಿಯಳ ಗುಣಗಳನ್ನು ನೆನೆನೆನೆದು ಪರಿಪರಿಯಾಗಿ ವಿಲಪಿಸಿದನು. ಹೀಗೆ ವಿಲಪಿಸುತ್ತಿರುವ ಕರುಣಾರ್ದ್ರ ವಚನ ಗಳನ್ನು ಕೇಳಿ ಚೇತನ, ಅಚೇತನ ವಸ್ತುಗಳು ಮರುಗಿದುವು, ಮರಗಿಡಗಳು, ಹೂಬಳ್ಳಿಗಳು ತಮ್ಮ ಶಾಖೋಪಶಾಖೆಗಳಿಂದ, ರೆಂಬೆಕೊಂಬೆಗಳಿಂದ, ಎಲೆಚಿಗುರುಗಳಿಂದ ಕಣ್ಣೀರನ್ನು ಸುರಿಸುವಂತೆ (ಬಾಷ್ಪಗಳನ್ನು ಸುರಿವಂತೆ) ರಸದ ಮಳೆಯನ್ನೇ ಸೇರಿಸಿ ತಮ್ಮ ಸಂತಾಪ ವನ್ನು ಸೂಚಿಸಿದುವು (ಮಕರಂದ ಬಾಷ್ಪವನು) ಮಾನವಶ್ರೇಷ್ಠನ ದುಃಖದಲ್ಲಿ ಅವೂ ಪಾಲ್ಗೊಂಡುವು. ಅರೆಚೇತನ ವಸ್ತುಗಳೆ ಕರುಣೆಯಿಂದ ಕರಗಿ ಕಣ್ಣೀರು ಸುರಿಸಿ ಅನಂತಾಪ ತೋರಿಸಿದರೆ ಮಾನವನ ದುಃಖವನ್ನು ಕಂಡು ಇತರ ಮಾನವರು ಮರುಗಿದರೆ ವಿಶೇಷ ವೇನಿದೆ.

ಕರುಣಾರ್ಥಗ್ರಥಿತಮ್ = ಕರುಣಃ ಅರ್ಥಃ ತೇನಗ್ರಥಿತಮ್ ಯಥಾ ಸ್ಯಾತ್ ತಥಾ ॥ ವಿಲಪನ್ನಿತಿ—ಕರುಣಃ = ಶೋಕರಸಃ—ಪೃಥಿವೀರುಹಾನ್ ವೃಕ್ಷಾನಾಪಿ ಶ್ರುತಾಃ ಶಾಖಾರಸಾ, ಮಕರಂದಾ ಏವ ಬಾಷ್ಪಾಸ್ತೈರ್ದೂಷಿತಾನಕರೋತ್—ಅಚೇತನಾ ನಾಪ್ಯ ರೋದಯದಿತ್ಯರ್ಥಃ ॥

71. ಅಥ ತಸ್ಯ ಕಥಂಚಿದಂಕತಃ ।
ಸ್ವಜನಸ್ತಾಮಪನೀಯ ಸುಂದರೀಮ್ ॥
ವಿಸಸರ್ಜ ತದಂತ್ಯಮಂಡನಾಂ ।
ಅನಲಾಯಾಗುರುಚಂದನೈಧಸೇ ॥ ೭೧ ॥

ಬಂಧುಜನರು, ಸ್ವಜನರು. ಪರಿಜನರು, ಜ್ಞಾತಿಗಳು, ಪುರೋಹಿತರು ಆ ಸುಂದರಿ ಯನು ಅಜನ ತೊಡೆಯಿಂದ ಮುಂದೆ ಮಾಡಬೇಕಾದ ಕೆಲಸದ ಕಡೆಗೆ ಗಮನಹರಿಸಿದರು (ಬಂಧುಜನ ಬಳಿಕಂತೂ) ಆ ನಾರೀಮಣಿಯು ಆ ಸುರಮಾಲೆಯನ್ನು ತನ್ನ ಅಪರಕ್ರಿಯೆಗೆ ತಕ್ಕ ಕೊನೆಯ ಆಭರಣವೆಂಬಂತೆ ತನ್ನ ಕೊರಳಲ್ಲಿ ಧರಿಸಿರ್ದಳು. ಆ ಬಳಿಕ ಸ್ನಾನಾದಿ ಕ್ರಿಯೆಗಳಿಂದ ಶುದ್ಧಗೊಳಿಸಿ ಸುಗಂಧದ್ರವ್ಯಗಳನ್ನು ಸಿಂಪಡಿಸಿದರು. ಹೀಗೆ ಶುದ್ಧ ಗೊಳಿಸಿದ ಇಂದುಮತಿಯ ಕಳೇಬರವನ್ನು ಅಗರು, ಕಾಲಾಗರು, ಚಂದನ, ಶ್ರೀಗಂಧ, ಶ್ರೀಖಂಡ ಮೊದಲಾದವುಗಳಿಂದ ತಯಾರಿಸಿದ ಚಿತೆಯಲ್ಲಿರಿಸಿ ಮಂತ್ರಸಂಸ್ಕಾರಕ್ಕೆ ಸಿದ್ಧ ಗೊಳಿಸಿದರು. ವೇದವಿಧಿಗಳಿಗೆ, ಶ್ರೌತವಿಧಿಸಂಸ್ಕಾರಗಳಿಗೆ ಅನುಸಾರವಾಗಿ, ವೇದ ಘೋಷದ ಮಧ್ಯೆ ಕಳೇಬರವನ್ನು ಅಗ್ನಿನಾರಾಯಣನಿಗೆ ಸಮರ್ಪಿಸಿದರು.

ಸ್ವಜನೋ = ಬಂಧುವರ್ಗದವರು—ಮಂಡನಾಂ = ಅಲಂಕಾರೋ—ವಿಸಸರ್ಜ = ವಿಸೃಷ್ಟವಾನ್ ॥ ಲಾಲಿತೇ = ಮನೋಹರೇ

**72. ಪ್ರಮದಾಮನುಸಂಸ್ಥಿತಃ ಶುಚಾ ।**
**ನೃಪತಿಃ ಸನ್ನಿತಿ ವಾಚ್ಯದರ್ಶನಾತ್ ॥**
**ನ ಚಕಾರ ಶರೀರಮಗ್ನಿಸಾತ್ ।**
**ಸಹದೇವ್ಯಾ ನ ತು ಜೀವಿತಾಶಯಾ ॥ ೭೨ ॥**

ಆ ರಾಜೇಂದ್ರನು ಇಂದುಮತಿಯು ಅಳಿದ ಬಳಿಕ ತಾನು ಉಳಿಯಬೇಕೆಂಬ ಆಶೆಯಿಂದ ಜೀವಿಸಿರಲಿಲ್ಲ. ಆದರೆ ಪತ್ನಿಯ ಶೋಕದಿಂದ ಅಳಿದನು ಎಂಬ ಲೋಕಾಪವಾದ, ಲೋಕದ ನಿಂದೆಗೆ ಹೆದರಿ, ಅವನು ತನ್ನ ಸತಿಯೊಂದಿಗೆ ಅಗ್ನಿಯನ್ನು ಪ್ರವೇಶಿಸದೆ (ಪತಿಸಹಗಮನ) ಚಿತೆಯನ್ನೇರದೆ ಉಳಿದಿರ್ದನು. ಪ್ರಾಣತ್ಯಾಗಕ್ಕೆ ಹೆದರಿ ಅಲ್ಲ. (ಉಳಿವಾಸೆಯಿಂದ ಏನಲ್ಲ).

ಅನ್ವಯ :—ನೃಪತಿಃ ಸನ್ನಪಿ ಶುಚಾಪ್ರಮದಾಮ್ ಅನುಸಂಸ್ಥಿತಃ ಇತಿ ವಾಚ್ಯ ದರ್ಶನಾತ್ ದೇವ್ಯಾ ಸಹ ಶರೀರಮ್ ಅಗ್ನಿಸಾತ್ ನ ಚಕಾರ। ಜೀವಿತಾಶಯಾ ತು ನ ॥

ಶುಚಾ = ಶೋಕೇನ—ಪ್ರಮದಾಮನು = ಪ್ರಮದಯಾ ಸಹ—ಸಂಸ್ಥಿತೋ = ಮೃತ —ಜೀವಿತಾಶಯಾ ಪ್ರಾಣೇಚ್ಛಯಾ ತು ನೇತಿ ॥

**73. ಅಥ ತೇನ ದಶಾಹತಃ ಪರೇ ।**
**ಗುಣಶೇಷಾಮುಪದಿಶ್ಯ ಭಾಮಿನೀಮ್ ॥**
**ವಿದುಷಾ ವಿಧಯೋ ಮಹರ್ದ್ಧಯಃ ।**
**ಪುರ ಏವೋಪವನೇ ಸಮಾಪಿತಾಃ ॥ ೭೩ ॥**

ಸಕಲ ಧರ್ಮಶಾಸ್ತ್ರಗಳನ್ನು ಬಲ್ಲವನಾದ ಆ ರಾಜೇಂದ್ರನು ಶಾಸ್ತ್ರವಿಧಿವಿಧಾನಗಳಿಗೆ ಅನುಗುಣವಾಗಿ (ಮನುಧರ್ಮಶಾಸ್ತ್ರದಲ್ಲಿ, ಪರಾಶರಧರ್ಮಶಾಸ್ತ್ರಗಳಲ್ಲಿ ಹೇಳಿದಂತೆ ಹತ್ತುದಿನಕ್ಕೆ ಶುದ್ಧಿ) ಗುಣಶೇಷಳಾದ, ಮೃಣ್ಮಯವಾದ ತನ್ನ ಇಳಿಯಳ (ಭಾಮಿನಿಯ) ಅಂತ್ಯಕರ್ಮಗಳನ್ನು ಊರ್ಧ್ವಕರ್ಮಗಳನ್ನು ವಿಧಿವತ್ತಾಗಿ ಪೂರೈಸಿದನು. ಹತ್ತು ದಿನಗಳ ಬಳಿಕ ತನ್ನ ರಾಜಧಾನಿಯ ಉಪವನದಲ್ಲಿ ವಿದ್ಯುಕ್ತವಾಗಿ ವೈಭವದಿಂದ ಅಪರಕ್ರಿಯೆ ಗಳನ್ನು ಪೂರ್ಣಗೊಳಿಸಿದನು. (ಔಚಿತ್ಯವನು ಅರಿತು ಪುರೋಹಿತವರ್ಗಕೆ, ಯಾಚಕ ಜನರಿಗೆ ಭೂರಿದಕ್ಷಿಣೆಯಿತ್ತು ತಣಿಸಿದನಾ ಗುಣಮಣಿ. (೧೨ನೆಯ ದಿನಕೆ ಗಂಗೋದಕಾದಿ) ಶಾಂತಿಕ್ರಿಯೆಗಳು ೧೩ನೆಯ ದಿನಕ್ಕೆ ವೈಕುಂಠಸಮಾರಾಧನೆ–ಸಮಾರೋಪ). ಈಗ ಅವನಿಗೆ ಉಳಿದುದೆಂದರೆ ಅವಳ ಗುಣಧರ್ಮಗಳು ಮಾತ್ರ (ಗುಣಶೇಷಳಾದಿನಿಯಳ ಅಂತ್ಯಕರ್ಮವನು) ಅವನ ಸ್ಮೃತಿಪಟಲದಲ್ಲಿ ಆಕೆ ಅಳಿದರೂ ಶಾಶ್ವತವಾಗಿ, ಹಸುರಾಗಿ. ಅವನಿಗೆ ಉಸಿರಾಗಿ ಉಳಿದಿದ್ದವು.

ಅನ್ವಯ :—ಅಥ ವಿದುಷಾ ತೇನ ಗುಣಶೇಷಾಂ ಭಾಮಿನೀಮ್ ಉಪದಿಶ್ಯ ದಶಾಹತಃ ಪರೇ ಮಹರ್ದ್ಧಯಃ ವಿಧಯಃ ಪುರಃ ಉಪವನೇ ಏವ ಸಮಾಪಿತಾಃ ॥

ಗುಣಶೇಷಾಂ ಭಾಮಿನೀಮ್—ಮಹರ್ದ್ಧಯಃ = (ಭೂರಿದಕ್ಷಿಣಾಃ) = ಮಹಾ ಸಮೃದ್ಧಯೋ—ವಿದುಷಾ = ಶಾಸ್ತ್ರಜ್ಞೇನ—ಗುಣಶೇಷಾಂ = ಭಾಮಿನೀಮಿಂದುಮತೀಃ

ಮುಪದಿಶ್ಯೋದ್ದಿಶ್ಯ ದಶಾಹತಃ—ತಸ್ಮಾದಶಾಹತಃ ಪರ ಊರ್ಧ್ವಂ ಕರ್ತವ್ಯಾ—ವಿಧಯಃ = ಕ್ರಿಯಾಃ—ಪುರಃ = ಪುರ್ಯಾಃ—ಉಪವನ = ಉದ್ಯಾನ—ಏವ ಸಮಾಪಿತಾ = ಸಂಪೂರ್ಣಮನುಷ್ಠಿತಾಃ ॥

**74. ಸ ವಿವೇಶ ಪುರೀಂ ತಯಾ ವಿನಾ ।**
**ಕ್ಷಣದಾಪಾಯ ಶಶಾಂಕದರ್ಶನಃ ॥**
**ಪರಿವಾಹಮಿವಾವಲೋಕಯನ್ ।**
**ಸ್ವಶುಚಃ ಪೌರವಧೂಮುಖಾಶ್ರುಷು ॥ ೭೪ ॥**

ತನ್ನ ಇನಿಯಳಾದ ಇಂದುಮತಿಯನ್ನು ಅಗಲಿ ಅವಳಿಂದ ದೂರವಾಗಿ ರಾತ್ರಿಯನ್ನಳಿದ ಚಂದ್ರನಂತೆ, ಏಕಾಂಗಿಯಾದ ಅಜಮಹಾರಾಜನು ಪುರಪ್ರವೇಶಗೈದನು. ರಾತ್ರಿಯನ್ನು ತೊರೆದ, ಪ್ರಾತಃಕಾಲದ ಕಲಾಹೀನನಾದ ಚಂದ್ರನೋ ಎಂಬಂತೆ ಸತಿಶೋಕಪೀಡಿತನಾದ ಅಜನು ಕಾಣಿಸಿದನು (ಇರುಳನಳಿದ ಇಂದುವೆನಲು). ಅಜನ ದಾರುಣವಾದ ಸತಿಶೋಕವನ್ನು ಕಂಡು ಪುರವಧೂಜನರ ಮುಖದಿಂದ ಅಶ್ರುಧಾರೆ ಹೊನಲಿಟ್ಟಿದು. ಅಜನು ಅದುಮಿ ಹಿಡಿದ ದುಃಖದ ಒಡ್ಡು ಕಟ್ಟೆಯೊಡೆದು ಒಮ್ಮೆಯೇ ತೂಬುಗಳ ಮೂಲಕ ಹೊರಹರಿದು ಹೋಗುವಂತೆ ಕರುಣಾರ್ದ್ರಹೃದಯರಾದ ಪುರವಧುಗಳ ಕಣ್ಣೀರಧಾರೆ ಕೋಡಿಹರಿಯಿತು. ಅಜನನ್ನು ಕಂಡಾಗ ನಾಗರಿಕಸ್ತ್ರೀಯರು ಅನುಕಂಪದ ಕಣ್ಣೀರು ಮಿಡಿದರು. ಅವರ ಶೋಕವು ಮಹಾಪೂರವಾಗಿ ಧಾರೆಧಾರೆಯಾಗಿ ಕೋಡಿಹರಿಯಿತು. ಸತಿಯನ್ನು ಕಳಕೊಂಡ ಅಜನು ಕಳಾಹೀನನಾದ ಬೆಳಗಿನ ಜಾವದ ಚಂದ್ರಮನಂತೆ (ಶಶಿಯಂತೆ, ಇಂದುವಿನಂತೆ) ಕಾಣಿಸಿದನು.

ಶಶಾಂಕಃ = ಚಂದ್ರಃ—ಪರಿವಾಹಂ = ಜಲೋಚ್ಛ್ವಾಸಮಿವಾವಲೋಕಯನ್—"ಜಲೋಚ್ಛ್ವಾಸಾಃ ಪರಿವಾಹಾಃ" ಇತ್ಯಮರಃ ॥ ಕ್ಷಣದಾಪಾಯ ಶಶಾಂಕದರ್ಶನಃ = ಪ್ರಾತಃಕಾಲಿಕ ಚಂದ್ರ ಇವ ದೃಶ್ಯಮಾನ ಇತ್ಯರ್ಥಃ ॥

**75. ಅಥ ತಂ ಸವನಾಯ ದೀಕ್ಷಿತಃ ।**
**ಪ್ರಣಿಧಾನಾತ್ ಗುರುರಾಶ್ರಮಸ್ಥಿತಃ ॥**
**ಅಭಿಷಂಗಜಡಂ ವಿಜಜ್ಞಿವಾನ್ ।**
**ಇತಿ ಶಿಷ್ಯೇಣ ಕಿಲಾನ್ವಬೋಧಯತ್ ॥ ೭೫ ॥**

ಅಜನು ದುಃಖದ ಆಘಾತದಿಂದ ಅಭಿಷಂಗಜಿತನಾಗಿ ದುಃಖಮೋಹಿತನಾಗಿ ಜಡನಾಗಿರುವುದನ್ನು, ವಿರಾಗಿಯಾಗಿ, ಸಂಸಾರವಿಮುಖನಾಗಿ (ಅಜನು ಅಭಿಷಂಗಜಿತನೆನ್ನುವುದನು) ಅವನ ಕುಲಗುರುಗಳಾದ ಬ್ರಹ್ಮರ್ಷಿ ವಸಿಷ್ಠರು ಪ್ರಣಿಧಾನದಿಂದ ಚಿತ್ತ ಏಕಾಗ್ರತೆಯಿಂದ ತಮ್ಮ ತಪೋಬಲದಿಂದ ಅರಿತರು. ಆ ಮಹರ್ಷಿಗಳು ಯೋಗಾದಿ ತಪಸ್ಸಿನಿಂದ ಪರಮಾತ್ಮನ ಚಿಂತನೆಯಿಂದ (ಪ್ರಣಿಧಾನದಿಂದ) ಯೋಗಮಹಿಮೆಯಿಂದ ಅರಿತು ಅವನನ್ನು ಸಮಾಧಾನಪಡಿಸಲು ತಮ್ಮ ಶಿಷ್ಯರಲ್ಲಿ ಒಬ್ಬನನ್ನು ಕಳಿಸಿದರು. ಏಕೆಂದರೆ ಆ ಮಹರ್ಷಿಗಳು ಸವನದೀಕ್ಷಿತರಾಗಿದ್ದರು. ಆದುದರಿಂದ ನಾಂದಿಮುಹೂರ್ತದಿಂದ

ಮೊದಲ್ಗೊಂಡು ಆ ಯಾಗವು ಸಮಾಪ್ತಿಗೊಳ್ಳುವತನಕ ಅವರು ಮಧ್ಯದಲ್ಲಿ ಎಲ್ಲೂ ಹೋಗುವಂತಿರಲಿಲ್ಲ. ಈ ತೆರನಾಗಿ ಬೋಧಾಯನ ಧರ್ಮಸೂತ್ರದಲ್ಲಿ ಹೇಳಿದೆ. ಆದುದರಿಂದ ಆ ಕುಲಗುರುಗಳು ತಮ್ಮ ಪ್ರಿಯಶಿಷ್ಯನನ್ನು ಕರೆದು ಆ ಇನಕುಲಪ್ರದೀಪನಲ್ಲಿಗೆ ಕಳುಹಿಸಿ ಈ ತೆರನಾಗಿ ಸಾಂತ್ವನಗೊಳಿಸುವಂತೆ ಬೋಧಿಸಿ ಕಳುಹಿಸಿದರು.

ಅನ್ವಯ:—ಅಥ ಸವನಾಯದೀಕ್ಷಿತಃ ಗುರೋಃ ಆಶ್ರಮಸ್ಥಿತಃ ತಮ್ ಅಭಿಷಂಗ ಜಡಂ ಪ್ರಣಿಧಾನಾತ್ ವಿಜಜ್ಞಿವಾನ್ ಇತಿ ಶಿಷ್ಯೇಣ ಅನ್ವಬೋಧಯತ್ ಕಿಲ ॥

ಅಭಿಷಂಗಜಡಂ = ಚಿಂತೆಯಿಂದ ಜಡನಾಗಿ—ದುಃಖಮೋಹಿತನು—ಸವನಾಯ = ಯಾಗಾಯ—ವಿಜಜ್ಞಿವಾನ್ = ಅರಿದು

ಪ್ರಣಿಧಾನ = ಚಿತ್ತಏಕಾಗ್ರತೆಯಿಂದ, ಯೋಗವಿದ್ಯಾಮಹಿಮೆಯಿಂದ.

**76. ಅಸಮಾಪ್ತವಿಧಿರ್ಯತೋ ಮುನಿಃ ।**
**ತವ ವಿದ್ವಾನಪಿ ತಾಪಕಾರಣಮ್ ॥**
**ನ ಭವಂತಮುಪಸ್ಥಿತಃ ಸ್ವಯಂ ।**
**ಪ್ರಕೃತೌ ಸ್ಥಾಪಯಿತುಂ ಪಥಶ್ಚ್ಯುತಮ್ ॥ ೭೬ ॥**

ವಸಿಷ್ಠರ ಶಿಷ್ಯವರನು ಈ ತೆರನಾಗಿ ಅರಸನಿಗೆ ಸಮಾಧಾನ ಹೇಳಿದನು: "ಎಲೈ ಮೇದಿನೀಪತಿಯೇ ನಿನ್ನ ಚಿತ್ತಗ್ಲಾನಿಯನ್ನು, ಶೋಕಕಾರಣವನ್ನು ಕುಲಗುರುಗಳು ಅರಿತಿದ್ದರೂ ಯಾಗದೀಕ್ಷಿತರಾಗಿರುವುದರಿಂದ ಅದನ್ನು ಯಥಾವತ್ತಾಗಿ ಮುಗಿಸದೆ ಬರುವಂತಿಲ್ಲ. ನಿನ್ನ ತಾಪಕಾರಣವನ್ನು ಹೋಗಲಾಡಿಸಿ ಪ್ರಕೃತಿಯ ಯಥಾಸ್ಥಿತಿಗೆ (ನಿನ್ನ ನೆಲೆಗೊಳಿಸಲ್ಕೆ) ತರಬಲ್ಲ ತಪೋಬಲಸಾಧಕರವರು. ಆದರೆ ಅವರು ಅಲ್ಲಿಯೇ ಉಳಿಯಬೇಕಾಗಿರುವ ಪ್ರಮೇಯದಿಂದ ನನ್ನ ಮೂಲಕ ದಿವ್ಯಸಂದೇಶವನ್ನು ಕಳುಹಿಸಿ ಕೃಪೆ ಮಾಡಿರುವರು" ಎಂದನು.

ತಾಪಕಾರಣಂ = ದುಃಖಹೇತುಂ, ಕಲತ್ರನಾಶರೂಪಂ—ಪಥಶ್ಚ್ಯುತಂ = ಸ್ವಭಾವಭ್ರಷ್ಟಂ—ಪ್ರಕೃತೌ = ಸ್ವಭಾವೇ—ಭವಂತಮ್ = ಸ್ಥಾಪಯಿತುಂ—ಸ್ವಯಂ ನೋಪಸ್ಥಿತೋ = ನಾಗತಃ ॥

**77. ಮಯಿ ತಸ್ಯ ಸುವೃತ್ತವರ್ತತೇ ।**
**ಲಘುಸಂದೇಶಪದಾ ಸರಸ್ವತೀ ॥**
**ಶೃಣು ವಿಶ್ರುತಸತ್ತ್ವಸಾರತಾಂ ।**
**ಹೃದಿ ಚೈನಾಮುಪಧಾತುಮರ್ಹಸಿ ॥ ೭೭ ॥**

ಓ ಇನಕುಲಸಾರ್ವಭೌಮಾ, ಓ ಸತ್ವಸಾರನಾದ ಮಹಾನ್ ದೊರೆಯೇ, ಗುಣನಿಧಿಯಾದ ನಿನಗೆ, ಸರ್ವಗುಣನಿಧಿಯಾದ, ಸರ್ವಜ್ಞನಾದ ನಿನ್ನ ಕುಲಗುರುವು ನಿನ್ನ ಮೇಲಿನ ಒಲವಿನಿಂದ ಒಂದು ಲಘುಸಂದೇಶವನ್ನು ಕಳಿಸಿರುವನು. ಓ ಮಹಾಭಾಗ, ನಿನ್ನ ಮನದ ಕ್ಲೇಶವನ್ನು ಬಗೆಹರಿಸಲು ಸಾಧ್ಯವಾದ ಕೆಲವೇ ನುಡಿಗಳಲ್ಲಿ ಅಣಿಗೊಳಿಸಿ ಕಳುಹಿಸಿರುವ ಅವರ ದಿವ್ಯಸಂದೇಶವನು ಆಲಿಸುವುದು. ನೀನು (ವಿಶ್ರುತ ಸತ್ವಸಾರ

ನೀನದನು) ಅದನ್ನು ಸಾವಧಾನದಿಂದ ಅವಧರಿಸಿ ನಿನ್ನ ಚಿತ್ತದಲ್ಲಿ ಅದನ್ನು ಧಾರಣೆ ಮಾಡಿಕೊಂಡು ದುಃಖವನ್ನು ನೀಗುವುದು.''

ಸುವೃತ್ತ = ಸದಾಚಾರಸಂಪನ್ನ—ಸಂದಿಶ್ಯತ ಇತಿ ಸಂದೇಶಃ ಸಂದೇಷ್ಟವ್ಯಾರ್ಥಃ—ಲಘೂನಿ = ಸಂಕ್ಷಿಪ್ತಾನಿ—ಸರಸ್ವತೀ = ವಾಕ್—ವಿಶ್ರುತಸತ್ವಸಾರ = ಪ್ರಖ್ಯಾತಧೈರ್ಯಾತಿಶಯ ॥

**78.** **ಪುರುಷಸ್ಯ ಪದೇಷ್ವಜನ್ಮನಃ ।**
**ಸಮತೀತಂ ಚ ಭವಚ್ಚ ಭಾವಿ ಚ ॥**
**ಸ ಹಿ ನಿಷ್ಪ್ರತಿಘೇನ ಚಕ್ಷುಷಾ ।**
**ತ್ರಿತಯಂ ಜ್ಞಾನಮಯೇನ ಪಶ್ಯತಿ** ॥ ೭೮ ॥

ಹೇ ರಾಜನ್, ಜನನಮರಣಗಳಿಗೆ ಕಾರಣನಾದ ಯಾವ ಪರಮಾತ್ಮನಾದ ತ್ರಿವಿಕ್ರಮನೆಂಬ ನಾಮಧೇಯದಿಂದ ಪ್ರಕಾಶಿಸುತ್ತಿರುವ, ಪುರಾಣಪುರುಷನಾದ (ಆದಿಪುರುಷ-ಪ್ರಧಾನ ಪುರುಷ) ಮಹಾವಿಷ್ಣುವು ತನ್ನ ಮೂರೇ ಮೂರು ಅಡಿಗಳಿಂದ (ಪಾದಗಳಿಂದ) ಈ ಸಮಸ್ತ ಬ್ರಹ್ಮಾಂಡಗಳೆಲ್ಲದವನ್ನು (ವಿಶ್ವವನ್ನು) ಆಳಿದನೋ (ಅಳತೆಗೊಂಡೀ ಜಗತ್ರಯದ) ಅಂತಹ ಜಗತ್ತನ್ನು (ವಿಶ್ವವನ್ನು) ಸರ್ವಶ್ರೇಷ್ಠರಾದ ನಿನ್ನ ಕುಲಗುರು ವಸಿಷ್ಠರು ತನ್ನ ಜ್ಞಾನಚಕ್ಷುಗಳಿಂದ ನೋಡಿ ತಿಳಿಯಬಲ್ಲರು. ಭೂತ, ಭವಿಷ್ಯತ್, ವರ್ತಮಾನವೆಂಬ ಕಾಲಗರ್ಭದಲ್ಲಿ ಏನು ಅಡಗಿದೆಯೆಂಬುದನ್ನು ತಮ್ಮ ಜ್ಞಾನಯೋಗ ಶಕ್ತಿಯಿಂದ ತಿಳಿಯಬಲ್ಲರು (ಇಂದು ಮುಂದಿನದನ್ನೆಲ್ಲವನು ಭರದೆ). ಸರ್ವಜ್ಞರಾದ, ಸತ್ಯಾನ್ವೇಷಕರಾದ ಸತ್ಯನಿಧಿಯು ನಿನಗೊರೆಯಬೇಕೆಂದಿರುವ (ನನ್ನಲ್ಲಿ ಹೇಳಿರುವ) ಸಂದೇಶವನ್ನು ತಿಳಿಸುವೆನು ಕೇಳು.

ಪುರುಷಸ್ಯೇತಿ = ಅಜನ್ಮನಃ ಪುರಾಣಪುರುಷಸ್ಯ ಭಗವಾನ್ ತ್ರಿವಿಕ್ರಮಸ್ಯ—ಪದೇಷು = ವಿಕ್ರಮೇಷು—ಸಮತೀತಂಭೂತಂಚ ಭವತ್ ವರ್ತಮಾನಂ ಚ ಭಾವಿಭವಿಷ್ಯಚ್ಚೇತಿ—ಜ್ಞಾನಮಯೇನ ಚಕ್ಷುಷಾ = ಜ್ಞಾನದೃಷ್ಟ್ಯಾ ಪಶ್ಯತಿ ಹಿ—ಪುರುಷಸ್ಯಪದೇಷು—ನಿಷ್ಪ್ರತಿಘೇನ—ಅವಿಧ್ಯಮಾನಃ ಪ್ರತಿಘಃ ಯಸ್ಯ ತೇನ ॥

**79.** **ಚರತಃ ಕಿಲ ದುಶ್ಚರಂ ತಪ ।**
**ತೃಣಬಿಂದೋಃ ಪರಿಶಂಕಿತಃ ಪುರಾ ॥**
**ಪ್ರಜಿಘಾಯ ಸಮಾಧಿಭೇದಿನೀಂ ।**
**ಹರಿರಸ್ಮೈ ಹರಿಣೀಂ ಸುರಾಂಗನಾಮ್** ॥ ೭೯ ॥

ಇತಿಹಾಸವು ಹೀಗೆ ಹೇಳುತ್ತಿದೆ. ಹಿಂದೆ ತೃಣಬಿಂದು ಮಹರ್ಷಿಯು ದುಷ್ಕರವಾದ, ಕಠಿಣತಪವನ್ನು ಎಸಗುತ್ತಿದ್ದನು (ದುಷ್ಕರವೆನಿಪ ತಪವೊಳಿರೆ). ಇದರಿಂದ ಭೀತನಾದ ಸುರಾಧಿಪತಿ ವಾಸವನು ಅವನ ತಪೋಭಂಗಮಾಡಲು ಹರಿಣಿಯೆಂಬ ಅಪ್ಸರೆಯನ್ನು ಕಳುಹಿಸಿದನು. ಆ ಮುನಿಪುಂಗವನ ಸಮಾಧಿಭೇದನವನ್ನು ಮಾಡಲು ಹರಿಣಿಯಿಂದ ಸಾಧ್ಯವೆಂದು ತಿಳಿದು ಆಕೆಯನ್ನು (ಛೂಬಿಟ್ಟನು) ಆ ಕಾರ್ಯಕ್ಕೆ ನಿಯೋಜಿಸಿ ಬೀಳ್ಕೊಟ್ಟನು (ದೇವಾಂಗನೆಯೂ ಹರಿಣಿಯನು).

ದಂಷ್ಟ್ರರಂ = ತೀವ್ರಂ—ಪರಿಶಂಕಿತಃ=ಭೀತಃ—ಸಮಾಧಿಭೇದಿನೀಂ=ತಪೋವಿಘಾತಿನೀಂ—ಪ್ರಜಿಘಾಯ = ಪ್ರೇರಿತವಾನ್ ॥

**80. ಸ ತಪಃ ಪ್ರತಿಬಂಧ ಮನ್ಯುನಾ ।**
**ಪ್ರಮುಖಾವಿಷ್ಕೃತ ಚಾರುವಿಭ್ರಮಾಮ್ ॥**
**ಅಶಪದ್ಭವಮಾನುಷೀತಿ ತಾಂ ।**
**ಶಮವೇಲಾ ಪ್ರಲಯೋರ್ಮಿಣಾ ಭುವಿ ॥ ೮೦ ॥**

ಆ ರೂಪಸಿಯಾದ ದೇವಾಂಗನೆಯು ತನ್ನ ಬೆಡಗುಬಿನ್ನಾಣವನ್ನು, ವೈವಯಾಟವನ್ನು, ಒನಪುವೈಯಾರವನ್ನು, ಸೌಂದರ್ಯವಾರಾಶಿಯನ್ನು, ಶೃಂಗಾರವಾದ ತನ್ನ ಚಲನವಲನದಿಂದ ಮುನಿಯ ಮುಂದೆ ಪ್ರದರ್ಶಿಸಿದಳು. ತನ್ನ ತಪಸ್ಸಿಗೆ ಭಂಗಮಾಡುತ್ತಿರುವ ಶಮದಮೆಯ ಸಾಕಾರಮೂರ್ತಿಯಾದ, ಇಂದ್ರಿಯನಿಗ್ರಹಿಯಾದ, ಮಹಾತ್ಮನಾದ ತೃಣಬಿಂದುವು ಅರಿತುಕೊಂಡನು. ಕೂಡಲೇ ಆ ಸಾಧುಸಂತನ ಮನದಲ್ಲಿ ಕ್ರೋಧದ ಅಲೆಗಳು ಭುಗಿಲೆದ್ದುವು. ತ್ರಿಪುರಾರಿಯಾದ ಶಿವನ ಕಣ್ಣಿನಿಂದ ಹೊರಡುವ ಜ್ವಾಲಾಮಾಲೆಗಳು ಪ್ರಕೃತಿಯನ್ನು ದಹಿಸಲು ಹೊರಟಿದು ಭುಗ್ಗೆಂದು ಒಮ್ಮೆಯೇ ಎದ್ದುವು. (ಶಮವೇಲೆಯಿಂದೊಗೆದ ಪ್ರಲಯೋರ್ಮಿಯೆನೆ) ಆ ಮಂತ್ರದ್ರಷ್ಟಾರನು ತನ್ನನ್ನು ಮೋಹಗೊಳಿಸುವ ನವಯೌವನದ ಸೌಂದರ್ಯದ ಸಾಕಾರಮೂರ್ತಿಯಾದ ಹರಿಣಿಯನ್ನು ಕೋಪದಿಂದ ಈ ತೆರನಾಗಿ ಶಪಿಸಿದನು. "ಎಲೌ ಅಪ್ಸರೆ, ಬುದ್ಧಿಗೇಡಿಯಾದ ನೀನು ನನ್ನ ತಪಸಿಗೆ ಮುಳುವಾಗಿರುವೆ. ಆದುದರಿಂದ ಈ ಕ್ಷಣವೇ ಮಾನವಸ್ತ್ರೀಯಾಗಿ (ಹೆಣ್ಣಾಗಿ) ಭೂಲೋಕದಲ್ಲಿ ಜನಿಸು (ಅವತರಿಸು)" ಎಂದವರು (ನೀನು ಮನುಜಳಾಗಿಳೆಯೊಳೆಂದು).

ಶಮಃ = ಶಾಂತಿರೇವ—ವೇಲಾ = ಮರ್ಯಾದಾ—ಪ್ರಲಯೋರ್ಮಿಣಾ = ಪ್ರಲಯಕಾಲತರಂಗೇಣ—ತಪಸಃ ಪ್ರತಿಬಂಧೇನ = ವಿಘ್ನೇನ ಮನ್ಯುಃ = ಕ್ರೋಧತ್ವೇನ ಹೇತುನಾ—ಆವಿಷ್ಕೃತ ಚಾರುವಿಭ್ರಮಾಂ = ಪ್ರಕಾಶಿತ ಮನೋಹರವಿಲಾಸಾಂ—ಭುವಿ = ಭೂಲೋಕೇ ॥

**81. ಭಗವನ್ ಪರವಾನಯಂ ಜನಃ ।**
**ಪ್ರತಿಕೂಲಾಚರಿತಂ ಕ್ಷಮಸ್ವ ಮೇ ॥**
**ಇತಿ ಚೋಪನತಾಂ ಕ್ಷಿತಿಸ್ಪೃಶಂ ।**
**ಕೃತವಾನಾ ಸುರಪುಷ್ಪದರ್ಶನಾತ್ ॥ ೮೧ ॥**

"ಹೇ ಭಗವನ್, ನಾನು ಪರಾಧೀನೆ, ಸ್ವಾಮಿಯಾದ ಇಂದ್ರನ ಅಡಿಯಾಳು. ಅವನ ಆಜ್ಞೆಯನ್ನು ನನ್ನ ಮನಸ್ಸಿಗೆ ಪ್ರತಿಕೂಲವಾದರೂ ಶಿರಸಾವಹಿಸಿ ನಡೆವೆನು. ನನ್ನ ಪರಮಾಪರಾಧವನ್ನು ಮನ್ನಿಪುದು (ಪರಮಾಪರಾಧವನು ಮನ್ನಿಸೈ ಭಗವನ್) ಎಂದು ನುಡಿದು ದೇವಾಂಗನೆ (ದೇವನಾರಿ)ಯಾದ ಹರಿಣಿಯು ಆ ಋಷಿಪುಂಗವನ ಕಾಲ್ಗೆರಗಿ ಅಂಗಲಾಚಿ ಬೇಡಿಕೊಂಡಳು. ಆ ಪರಮಜ್ಞಾನಿಯು ತಕ್ಷಣವೇ ಶಾಂತರಾಗಿ : "ನೀನು

ಮರ್ತ್ಯಳಾಗಿರುವುದು ಸುರಪುಷ್ಪವನ್ನು ಕಾಣುವವರೆಗೆ ಮಾತ್ರ.'' ಮಹಾತ್ಮರ ಕೋಪವೇ ಹೀಗೆ, ಚಿರಕಾಲ ಮಾತ್ರ. ''ಸುರಪುಷ್ಪದರ್ಶನವಾದಕೂಡಲೇ ನೀನು ನಿನ್ನ ಮೊದಲಿನ ರೂಪವನ್ನು ಪಡೆಯುವೆ.'' ದಿವ್ಯ ಪುಷ್ಪದ ದರ್ಶನದಿಂದ ನಿನ್ನ ಶಾಪವಿಮೋಚನೆ ಯಾಗುವುದೆಂದು ಅನುಗ್ರಹಿಸಿ ನುಡಿದರು, ಹೀಗೆಂದು ಮುನಿಶಾಪವನಿತ್ತು ಉಪಸಂಹಾರ ಗೈದರಾಕಾರುಣ್ಯನಿಧಿ.

ಸ್ವಾಮಿಕಾರ್ಯರ್ಥವಾಗಿ—ಅಹಂ ಪರಾಧೀನೇತ್ಯರ್ಥಃ—ಸುರಪುಷ್ಪದರ್ಶನಾತ್ = ದಿವ್ಯಪುಷ್ಪದರ್ಶನಪರ್ಯಂತಮ್ ॥

82. ಕ್ರಥಕೈಶಿಕವಂಶಸಂಭವಾ ।
ತವ ಭೂತ್ವಾ ಮಹಿಷೀ ಚಿರಾಯ ಸಾ ॥
ಉಪಲಬ್ಧವತೀ ದಿವಶ್ಚ್ಯುತಂ ।
ವಿವಶಾ ಶಾಪನಿವೃತ್ತಿಕಾರಣಮ್ ॥ ೮೨ ॥

ಈ ಕಾರಣದಿಂದಾಗಿ ಆ ದೇವಾಂಗನೆಯು ಪ್ರಖ್ಯಾತವಾದ ಕ್ರಥಕೈಶಿಕವಂಶದಲ್ಲಿ ಜನಿಸಿ ನಿನ್ನ ಪಟ್ಟಮಹಿಷಿಯಾಗಿ ನಿನ್ನ ಜೊತೆಯಲ್ಲಿದ್ದು ಪ್ರಕಾಶಿಸಿದಳು. ಇದೀಗ ಆಕೆಯು ಶಾಪ ವಿಮೋಚನೆಯ ಕಾಲವು (ಶಾಪನಿವೃತ್ತಿಕಾರಣವ ಪಡೆದು) ವಿಧಿನಿಯಮದಂತೆ ಸನ್ನಿಹಿತ ವಾಗಿದೆ. ಸುರಪುಷ್ಪದ ದರ್ಶನ ಆಕೆ ತನ್ನ ಮಾನವಜನ್ಮದಿಂದ ಮುಕ್ತಳಾಗಿ (ಮರಣ ಹೊಂದಿ) ದೇವತ್ವವನ್ನು (ಅಮರತ್ವವನ್ನು) ಪಡೆದು ಸುರಲೋಕಕ್ಕೆ ಶಾಶ್ವತವಾಗಿ ತೆರಳಿರುವಳು.

ಮಹಿಷೀ="ಕೃತಾಭಿಷೇಕಮಹಿಷೀ" ಇತ್ಯಮರಃ—ಕ್ರಥಕೈಶಿಕಾನಾಂ ರಾಜ್ಞಾಂ ವಂಶೇ ಸಂಭವೋ ಯಸ್ಯಾಃ—ತವ ಮಹಿಷ್ಯ ಅಭಿಷಿಕ್ತಾ ಸ್ತ್ರೀ—ಸ್ವರ್ಗಚ್ಯುತಂ = ಪತಿತಂ ॥

83. ತದಲಂ ತದಪಾಯಚಿಂತಯಾ ।
ವಿಪದುತ್ಪತ್ತಿಮತಾಮುಪಸ್ಥಿತಾ ॥
ವಸುಧೇಯಮವೇಕ್ಷ್ಯತಾಂ ತ್ವಯಾ ।
ವಸುಮತ್ಯಾ ಹಿ ನೃಪಾಃ ಕಲತ್ರಿಣಃ ॥ ೮೩ ॥

ಹೇ ನೃಪವರ, ನಿನ್ನ ಹೃದಯವನ್ನು ಆವರಿಸಿರುವ ಚಿಂತಾವ್ಯಾಕುಲವನ್ನು ತೊರೆದು ಸುಖಿಯಾಗು. ಮರಣವು ಮರ್ತ್ಯರಿಗೆ ಸಾಮಾನ್ಯವಾದುದು. ಇದರ ಬಗ್ಗೆ ಚಿಂತಿಸಿ ಫಲವಿಲ್ಲ. ಜನಿಸಿದವನಿಗೆ ಮರಣವು ತಪ್ಪದು ಎಂಬುದನ್ನು ನೀನು ತಿಳಿಯದವನೇ ? ''ಜಾತಸ್ಯ ಮರಣಂ ಧ್ರುವಂ'' ಎಂಬ ಶ್ರುತಿವಚನದಂತೆ. ಇದರ ಬಗ್ಗೆ ವ್ಯಾಕುಲತೆಯನ್ನು ನೀಗು. ಪರಮಪುರುಷಾರ್ಥಪ್ರದವಾದ ಸಾಮ್ರಾಜ್ಯವನ್ನು ಧರ್ಮದಿಂದ ಪಾಲಿಸು. ಕರ್ತವ್ಯಪರನಾಗಿ ಕಾರ್ಯನಿರ್ವಹಿಸು. ದೃಢಚಿತ್ತನಾಗು. ಸಕಾರಣವನ್ನು ತಿಳಿದ ಬಳಿಕ ಚಿಂತೆಯನ್ನು ತೊರೆದು ನಿಶ್ಚಿಂತನಾಗಿರು ಇದೆಲ್ಲವೂ ಮೊದಲೇ ನಿಗದಿತವಾದ, ನಿಷ್ಕರ್ಷೆ ಯಾದ ವಿಷಯಗಳು. ಸಾಮಾನ್ಯರಂತೆ ಅತ್ತು ಪ್ರಯೋಜನವಿಲ್ಲ. ಕರ್ತವ್ಯದ ಕಡೆಗೆ ದೃಷ್ಟಿಹರಿಸಿ ಶಾಂತನಾಗು. ವಸುಂಧರೆಯನ್ನು ಪಾಲಿಸಿ ಕೃತಕೃತ್ಯನಾಗು. ನಿನಗೆ ಶುಭ ವಾಗಲಿ'' ಎಂದರು (ವಸುಧೆಯನು ಮತ್ತೆ ಪರಿಪಾಲಿಸೈ).

ತಸ್ಮಾನ್ಮರಣಂ ನ ಚಿಂತ್ಯಮಿತ್ಯರ್ಥಃ—ಉತ್ಪತ್ತಿಮತಾಂ = ಜನ್ಮವತಾಂ—ಜಾತಸ್ಯ ಹಿ ಧ್ರುವೋ ಮೃತ್ಯುರಿತ್ಯರ್ಥಃ—ವಸುಧಾಭೂಮಿರಪೇಕ್ಷ್ಯತಾಂ = ಪಾಲ್ಯತಾಮ್—ಕಲತ್ರಿಣಃ = ಕಲತ್ರವಂತಃ ॥

**84.** **ಉದಯೇ ಮದವಾಚ್ಯಮುಜ್ಝತಾ ।**
**ಶ್ರುತಿಮಾವಿಷ್ಕೃತಮಾತ್ಮವತ್ತ್ವಯಾ ॥**
**ಮನಸಸ್ತದುಪಸ್ಥಿತೇ ಜ್ವರೇ ।**
**ಪುನರ ಕ್ಲೀಬತಯಾ ಪ್ರಕಾಶ್ಯತಾಮ್** ॥ ೮೪ ॥

"ಹೇ ರಾಜೇಂದುಮೌಳಿ, ನೀನು ನಿನ್ನ ಈ ಹಿಂದಿನ ಉದಯಾಭ್ಯುದಯಕಾಲದಲ್ಲಿ ನೀನು ಅತ್ಯಂತ ಶ್ರೇಷ್ಠವಾದ ಮೇಧಾಸ್ಥಿತಿಯನ್ನು (ಸುವಿವೇಕವಾವುದನು ಮೆರೆದೆ) ವಿವೇಕಪ್ರವೃತ್ತಿಯನ್ನು ಪ್ರದರ್ಶಿಸಿ ನೀನು ಮಹಾತ್ಮನೆನಿಸಿ ವಿಖ್ಯಾತನಾದೆ. ಮಹತ್ಕಾರ್ಯಗಳನ್ನು ಸಾಧಿಸಿದೆ (ಎದೆಗೆಡದೆ ತೋರಿದನು). ಅಂದು ನಿನ್ನ ಆತ್ಮ, ಚಿತ್ತ, ಸಂಯಮಾದಿ ಉತ್ತಮ ಗುಣಗಳನ್ನು ಮೆರೆಸಿ ನೀನು ಕೃತಕೃತ್ಯನಾದೆ. ಆದುದರಿಂದ ಇದೀಗ ಬಂದಿರುವ ವಿಪತ್ತನ್ನು, ಚಿತ್ತಕ್ಷೋಭೆಯನ್ನು, ಸಾಂಸಾರಿಕ ತಾಪತ್ರಯಗಳನ್ನು, ಜ್ವರಾದಿಕ್ಲೀಬಗಳನ್ನು, ಮನೋವ್ಯಾಕುಲತೆಯನ್ನು, ದೃಢವಾದ ಆತ್ಮಜ್ಞಾನದಿಂದ ಮನಗಂಡು, ಧೈರ್ಯದಿಂದ ಎದುರಿಸಿ (ಚಿತ್ತಸಂಜನಿತ ತಾಪಜ್ವರದೊಳಿರದೆ) ಜಯಶೀಲನಾಗು. ಅಡಿಯನು ಹಿಂದೆ ಇಡದಿರು, ಜ್ಞಾನಪ್ರಕಾಶದಿಂದ ಅರಿತು, ಎಚ್ಚರಿತು, ಜಾಗೃತನಾಗು. ಎದ್ದೇಳು, ಜಡತೆಗೆ, ನಿಂದೆಗೆ ಎಡೆಕೊಡದೆ ಇರು. ಮಾನಸಿಕ ರೋಗ ಪರಿಹಾರವಾದರೆ ದೇಹವು ಸುದೃಢವಾಗುವುದು. ದೈಹಿಕ, ಮಾನಸಿಕ ಸ್ವಾಸ್ಥ್ಯವು ಕರ್ತವ್ಯಪಾಲನೆಗೆ, ನಿನ್ನ ಕಾಯಕವೃತ್ತಿಗೆ ಅತ್ಯಾವಶ್ಯಕ" ಎಂದು ನುಡಿದು ಆ ಮುನಿವರನು ಸಮಯೋಚಿತವಾದ ಮಾತಿನಿಂದ ಎಚ್ಚರಿಸಿದನು.

ಅಧ್ಯಾತ್ಮ = ಆತ್ಮವತ್ ಶ್ರುತಮ್—ಉದಯೇ = ಅಭ್ಯುದಯೇ—ಮದ್ವಾಚ್ಯಂ = ನಿಂದಾದುಃಖಂ—ತದುಜ್ಝತಾ = ಪರಿಹರತಾ—ಶ್ರುತಂ=ಶಾಸ್ತ್ರಮ್—ತಜ್ಜನಿತಂ ಜ್ಞಾನಮಿತಿಯಾವತ್—ಆವಿಷ್ಕೃತಂ=ಪ್ರಕಾಶಿತಂ— ಮನಸೋಜ್ವರೇ=ಸಂತಾಪ—ಉಪಸ್ಥಿತ=ಪ್ರಾಪ್ತೇ—ಅಕ್ಲೀಭತಯಾ = ಧೈರ್ಯೇಣ ॥

**85.** **ರುದತಾ ಕುತ ಏವ ಸಾ ಪುನಃ ।**
**ಭವತಾ ನಾನುಮೃತಾಪಿ ಲಭ್ಯತೇ ॥**
**ಪರಲೋಕಜುಷಾಂ ಸ್ವಕರ್ಮಭಿಃ ।**
**ಗತಯೋ ಭಿನ್ನಪಥಾ ಹಿ ದೇಹಿನಾಮ್** ॥ ೮೫ ॥

"ನೀನಿನ್ನು ಅತ್ತು (ಅತ್ತು, ಸತ್ತು) ಪ್ರಯೋಜನವಿಲ್ಲ. ಅತ್ತು ಸಾಧಿಸುವುದಾದರೂ ಏನನ್ನು? ಸತ್ತರೂ ಆಕೆ ದೊರೆಯುವಳೆಂಬ ನಿಶ್ಚಿತ ಏನಿಲ್ಲ (ಅತ್ತರೇನವಳು ಮತ್ತೆ ಐತಹಳೆ). ಎಲ್ಲವೂ ವಿಧಾತನ ಕೈವಾಡ (ಪವಾಡ, ಕಸರತ್ತು) (ಕರ್ತಾರನ ಕಮ್ಮಟವಯ್ಯಾ). ಮೃತ್ಯು ಪೊಂದಿದವಳು ಅವಳ ಪ್ರಾರಬ್ಧಕರ್ಮಕ್ಕೆ ಅನುಸಾರವಾಗಿ ಭಿನ್ನಪಥ

ವನ್ನು ಹಿಡಿಯುವಳು (ಭಿನ್ನಪಥ ಹಿಡಿಯುವರು), ಅವರವರ ಕರ್ಮದತ್ತ, ಅತ್ತತ್ತ ವಿಭಿನ್ನಪಥದಲ್ಲಿ ನಡೆದುಹೋಗುವರು (ಅವರವರ ಕರ್ಮದಂತೆ ಅತ್ತತ್ತ ನಡೆವರು). ಪರಲೋಕಕ್ಕೆ ಹೋದವರು ಬೇರೆ ದಾರಿಯಲ್ಲಿ ಸಾಗಲೂಬಹುದಲ್ಲವೆ. ಅವರವರ ಕರ್ಮಾನುಸಾರಕ್ಕೆ ಸರಿಯಾಗಿ ಜೀವಿಗಳು ಅನುಭವಿಸುವರು ಎಂಬ ಶಾಸ್ತ್ರವಚನವನ್ನು ನೀನು ತಿಳಿದೂ ತಿಳಿದೂ ಹೀಗೆ ರೋಧಿಸಬಹುದೆ? ಚಿತ್ತಗ್ಲಾನಿಯನ್ನು ಬಿಸುಟು ಶುಚಿಯಾಗು.

ಪುನರ್ನ ಲಭ್ಯತೇ—ಪರಲೋಕಜುಷಾಂ = ಲೋಕಾಂತರಭಾಜಾಂ—ಗಮ್ಯತ ಇತಿ ಗತಯೋಗಮ್ಯಸ್ಥಾನಾನಿ—ಸ್ವಕರ್ಮಭಿಃ = ಪೂರ್ವಾಚರಿತ ಪುಣ್ಯಪಾಪೈ—ಭಿನ್ನಪಥಾಃ = ಪೃಥಕ್ ಕೃತ ಮಾರ್ಗಾ ಹಿ—ಪರಲೋಕಜುಷಾಮ್ = ಸಂಗಮಃ ಕರ್ಮಣಾಂ ಭೇದಾದ್ಯದಿನ ಸ್ಯಾತ್ ನ ನಾಮ ಸಃ—ಪ್ರಾಣಾನಾಂ ತು ಪರಿತ್ಯಾಗೇ ಸಂತಾಪಾವೋಪ ಶಮಃ ಫಲಮ್ ॥

**86. ಅಪಶೋಕಮನಾಃ ಕುಟುಂಬಿನೀಂ ।**
**ಅನುಗೃಹ್ಣೀಷ್ವ ನಿವಾಪದತ್ತಿಭಿಃ ॥**
**ಸ್ವಜನಾಶ್ರು ಕಿಲಾತಿ ಸಂತತಂ ।**
**ದಹತಿ ಪ್ರೇತಮಿತಿ ಪ್ರಚಕ್ಷತೇ** ॥ ೮೬ ॥

ನಿನ್ನ ಇನಿಯಳಾದ ನಿನ್ನ ಪತ್ನಿಯನ್ನು (ಕುಟುಂಬಿನಿಯನ್ನು) ನೀನಿನ್ನು ಪಿಂಡೋದಕ ದಾನಾದಿಗಳಿಂದ ತರ್ಪಣಾದಿಕ್ರಿಯೆಗಳಿಂದ ತಣಿಸು. ನಿನ್ನ ಮನದ ಅಳಲನ್ನು ಕಳೆದು ಕೊಂಡು, ನಿರ್ದುಃಖಚಿತ್ತನಾಗಿ ನೀನು ನಿನ್ನ ಸ್ವಜಾತಿ ಬಾಂಧವರೊಡನೆ, ಬಂಧುಗಳೊಡ ಗೂಡಿ ಹೀಗೆ ಕಣ್ಣೀರನ್ನು ಸುರಿಸುತ್ತಲಿದ್ದರೆ ಪ್ರೇತರೂಪದಲ್ಲಿರುವ ನಿನ್ನ ದಿವಂಗತ ಪತ್ನಿಯ ಜೀವಾತ್ಮವನ್ನು ಅದು ಸುಡಬಲ್ಲುದು. ಅವರಿಗೆ ಅದು ದೋಷಾರ್ಹವಾದುದು. ಪ್ರೇತರೂಪದಲ್ಲಿರುವ ಮೃತರನ್ನು ದಹಿಸಬಲ್ಲುದೆಂಬುದಾಗಿ ಯಾಜ್ಞವಲ್ಕ್ಯಸ್ಮೃತಿಯಲ್ಲಿ ಹೇಳಿದೆ. ಆದ್ದರಿಂದ ರೋದಿಸುವುದು ನಿನಗೆ ಅಕಾರ್ಯವೆನಿಸುವುದು, ಪ್ರಶಸ್ತವೆನಿಸದು.

ಅಪಶೋಕಮನಾಃ = ನಿರ್ದುಃಖಿತಃ—ಕುಟುಂಬಿನೀಂ = ಪತ್ನೀ—ನಿವಾಪದತ್ತಿಭಿಃ = ಪಿಂಡೋದಕಾದಿದಾನೈರನು,— ಸ್ವಜನಾನಾಂ = ಬಂಧೂನಾಂ—"ಬಂಧು ಸ್ವಸ್ವಜನಾಃ ಸಮಾಃ" ಇತ್ಯಮರಃ—ಅಶ್ರುಕರ್ತೃ ಪ್ರೇತಂ ಮೃತಂ ದಹತೀತಿ ಪ್ರಚಕ್ಷತೆ ಮನ್ವಾದಯಃ ಕಿಲ—ಅತೋ ನ ರೋದಿತವ್ಯಂ ಹಿ ಕ್ರಿಯಾಃ ಕಾರ್ಯಾಃ ಸ ಶಕ್ತಿತಃ" ಇತಿ ಯಾಜ್ಞವಲ್ಕ್ಯಸ್ಮೃತಿಃ ॥ ಅಪಶೋಕಮನಾಃ = ಅಪಗತಃ ಶೋಕಃ ಯಸ್ಮಾತ್ ಏತಾದೃಶಂ ಮನಃ ಯಸ್ಯ ಸಃ ॥

**87. ಮರಣಂ ಪ್ರಕೃತಿಃ ಶರೀರಿಣಾಂ ।**
**ವಿಕೃತಿರ್ಜೀವಿತಮುಚ್ಯತೇ ಬುಧೈಃ ॥**
**ಕ್ಷಣಮಪ್ಯವತಿಷ್ಠತೇ ಶ್ವಸನ್ ।**
**ಯದಿ ಜಂತುರ್ನನು ಲಾಭವಾನಸೌ** ॥ ೮೭ ॥

ಹೇ ನರೇಶ, ಹೇ ಮಹಾಪ್ರಭು (ಕೋಸಲಾಧೀಶ, ರಾಜ್ಯಪಾಲ) ದೇಹಿಗೆ ಅಥವಾ ಶರೀರಿಗೆ (ಜೀವಿಗೆ) ಸಾವು ಪ್ರಕೃತಿದತ್ತವಾದುದು, ಸ್ವಭಾವಜನಿತವಾದುದು. ಅದು ನಿಸರ್ಗದತ್ತವಾದುದು. ಜೀವಿತವು ಜೀವಿಗೆ ವಿಕೃತಿಯೆಂದೆನಿಸುವುದು. ಹೀಗೆಂದು ಬುಧ ಜನರು ಒರೆದಪರು. ಹಿರಿಯರು ಅಭಿಪ್ರಾಯಪಡುತ್ತಿರುವರು. ಆದುದರಿಂದ ಜೀವಿಯು ಒಂದು ಕ್ಷಣಕಾಲವಾದರೂ, ಭೂಮಿಯಲ್ಲಿ ಜೀವಿಸಿದ್ದರೆ ಅಥವಾ ಉಸಿರಾಡುತ್ತಿದ್ದರೆ ಆ ಜೀವಿಯೇ ಲಾಭಯುತನೆಂದು ತಿಳಿ. ಆಯುಷ್ಯವು ಲಾಭವೆನಿಸುವುದು. ಹೀಗೆ ಜೀವಾತ್ಮನಿಗೆ ಎರಡು ಸ್ಥಿತಿಗಳಿವೆ.ಒಂದೋ ಮರಣ ಇಲ್ಲವೇ ಜೀವನ.ಅವನು ಶಾಶ್ವತನು. ಜೀವಾತ್ಮನು ಅವ್ಯಯನು. ನಾಶರಹಿತನು, ಆದುದರಿಂದ ಸ್ಥಿರಚಿತ್ತನಾಗಿ, ಚಿತ್ತಚಾಂಚಲ್ಯ ವನ್ನು ಬಿಟ್ಟು ಕರ್ತವ್ಯದ ಕರೆಗೆ ಓಕೊಡು, ಉಪೇಕ್ಷಿಸದಿರು, ಇದೆಲ್ಲವೂ ಜೀವಾತ್ಮನ ಗುಣಧರ್ಮಗಳೆಂದು ತಿಳಿದು ಆತ್ಮಜ್ಞಾನಿಯಾಗಿ ಕಾರ್ಯಗಳನ್ನು ನಿರ್ವಹಿಸು, ಎದ್ದೇಳು. (ಜೀವಿತವು ವಿಕೃತಿ ಎಂದೊರೆದಪರು).

ಶರೀರಿಣಾಂ ಮರಣಂ ಪ್ರಕೃತಿಃ ಸ್ವಭಾವಃ—ಜೀವಿತಂ ವಿಕೃತಿರ್ಯಾದೃಚ್ಛಿಕಂ ಬುಧೈ ರುಚ್ಯತೇ—ಜೀವನೇ ಯಥಾ ಲಾಭಃ—ಸಂತೋಷ್ಟವ್ಯಮ್, ಅಲಭ್ಯಲಾಭಾತ್— ಮರಣೇ ತು ನ ಶೋಚಿತವ್ಯಮ್—ಅಸ್ಯ ಸ್ವಾಭಾವ್ಯಾದಿತಿ ಭಾವಃ ॥

**88.** **ಅವಗಚ್ಛತಿ ಗೂಢಚೇತನಃ ।**
**ಪ್ರಿಯನಾಶಂ ಹೃದಿ ಶಲ್ಯಮರ್ಪಿತಮ್ ॥**
**ಸ್ಥಿರಧೀಸ್ತು ತದೇವ ಮನ್ಯತೇ ।**
**ಕುಶಲದ್ವಾರತಯಾ ಸಮುದ್ಧೃತಮ್ ॥ ೮೮ ॥**

ಆದ್ದರಿಂದ ಮೂಢರು, ಭ್ರಾಂತಬುದ್ಧಿಯುಳ್ಳವರು ಮರಣಹೊಂದಿದ ಕೂಡಲೇ ಪ್ರಿಯನಾಶದಿಂದ ಸರ್ವಸ್ವವೂ ನಾಶವಾಯಿತೆಂದು ಅತ್ತು ಗೋಳಾಡುವರು. ಮರಣವು ಮೋಕ್ಷಕ್ಕೆ ಮಾರ್ಗವನ್ನು ತೆರವುಮಾಡಿಕೊಡುವುದು, ಪಾಮರರು ಎಲ್ಲವೂ ನಾಶವಾಯಿ ತೆಂದು ಪರಿತಪಿಸುವರು, ಹಿತಾಹಿತಗಳನ್ನು ಮರೆಗಾಣುವರು. ಪ್ರಿಯರ ಅಳಿವು ಹೃದಯ ದಲ್ಲಿ ನಾಟಿರುವ ಶಲ್ಯವು ಎಂದು ಮೂಢಾತ್ಮರು ತಿಳಿಯುವರು (ಹೃದಯದೊಳು ನಾಟಿರುವ ಶಲ್ಯಮೆಂದು). ಆದರೆ ವಿದ್ವಾಂಸರು ಆ ಮುಳ್ಳು ಮುಂಗಳದ್ವಾರಕೆ ಉರ್ಜಿರುವ (ಕಳಚಿರುವ, ತೆರೆದಿರುವ) ಮುಳ್ಳು ಎಂದು ಘೋಷಿಸಿರುವರು. ಕುಶಲದ್ವಾರಕ್ಕೆ ಎಡೆಮಾಡಿಕೊಡಬಲ್ಲುದೆಂದು ನಿಷ್ಕರ್ಷಿಸಿರುವರು, ಮೋಕ್ಷಪಥಕ್ಕೆ ಆ ಆತ್ಮವು ಹೋಗಲು ಸುಗಮವಾದ ಮಾರ್ಗ ಈಗ ತೆರೆಯಿತೆಂದು ತಿಳಿ."

ಮೂಢಚೇತನೋ = ಭ್ರಾಂತಬುದ್ಧಿಃ—ಸ್ಥಿರಧೀರ್ವಿದ್ವಾಂಸ್ತುತದೇವ ಶಲ್ಯಂ ಸಮುದ್ಧೃತಮುತ್ ಖಾತಂ ಮನ್ಯತೇ—ಕುಶಲದ್ವಾರತಯಾ-ವಿಷಯಲಾಭವಿನಾಶಯೋ ರ್ಯಥಾ ಕ್ರಮಂ ಹಿತಾಹಿತಸಾಧನತ್ವಾಭಿಮಾನಃ ಪಾಮರಾಣಾಮ್ ॥

**89.** **ಸ್ವಶರೀರಶರೀರಿಣಾವಪಿ ।**
**ಶ್ರುತ ಸಂಯೋಗವಿಪರ್ಯಯೌ ಯದಾ ॥**

**ವಿರಹಃ ಕಿಮಿವಾನುತಾಪಯೇತ್ ।**
**ವದ ಬಾಹ್ಯೈಃ ವಿಷಯೈಃ ವಿಪಶ್ಚಿತಮ್ ॥ ೮೯ ॥**

ಹೇ ರಾಜನ್ (ಪುರುಷಕೇಸರಿ), ನಿನ್ನ ಆತ್ಮವು ಒಂದಲ್ಲ ಒಂದು ದಿನ ಈ ದೇಹವನ್ನು ಅಗಲಿ ತೆರಳುವುದೆಂದು ತಿಳಿದು ಬಾಹ್ಯಪ್ರಪಂಚದಲ್ಲಿರುವ ದೇಹಿಗಳಿಗಾಗಿ ಹೀಗೆ ದುಃಖಿಸ ಬಹುದೆ? ವಿವೇಕಿಗಳು ಈ ಅನಂತಾಪದಿಂದ ವಿಚಲಿತರಾಗದೆ ಇರುವರು. ಶರೀರ, ಶರೀರಿ, ದೇಹಾತ್ಮಸಂಬಂಧ ಅರಿತು (ಗುಣಧರ್ಮ) ಸಂಯೋಗ, ವಿಯೋಗ ಏನೆಂದು ತಿಳಿದು ಅಬಾಧಿತರಾಗಿರುವರು. ಪುತ್ರ, ಮಿತ್ರ, ಕಳತ್ರಾದಿ ವಿಷಯಂಗಳ ಸಾರಾಸಾರವನ್ನು ಅರಿತು, ಈ ಸಂಬಂಧಗಳನ್ನು ತಿಳಿದು ಸೂಕ್ತವಾದ ಮಾರ್ಗದಲ್ಲಿ ಎಚ್ಚರದಿಂದ ನಡೆಯು ವುದು. ಹೀಗೆ ನಡೆಯುವರು ಜಾಣರಾದ ವಿವೇಕಿಗಳು (ಅರಿತ ಬಂಧಜನರು).

ಸ್ವಸ್ಯ ಶರೀರಶರೀರಿಣೌ ದೇಹಾತ್ಮಾನಾವಪಿ ಯದಾ ಯತಃ ಶ್ರುತಸಂಯೋಗ ವಿಪರ್ಯಯೌ ಸಂಯೋಗವಿಯೋಗೌ ಯಯೋಃಸೌ ತಥೋಕ್ತೌ"—ಶ್ರುತ್ಯವಗತೌ —ವಿಪರ್ಯಯ = ವಿಯೋಗ ॥

**90. ನ ಪೃಥಗ್ಜನವತ್ ಶುಚೋವಶಂ ।**
**ವಶಿನಾಮುತ್ತಮಗಂತುಮರ್ಹಸಿ ॥**
**ದ್ರುಮಸಾನುಮತಾಂ ಕಿಮಂತರಂ ।**
**ಯದಿ ವಾಯೌ ದ್ವಿತಯೇಽಪಿ ತೇ ಚಲಾಃ ॥ ೯೦ ॥**

ಓ ಜಿತೇಂದ್ರಿಯನೇ (ಸಮ್ಯಕ್‌ಜ್ಞಾನಿಯೇ), ಮಹಾಪುರುಷನಾದ ನೀನು ಏನೂ ತಿಳಿಯದ ಅಜ್ಞರಾದ ಮೂಢಮಾನವರಂತೆ ಶೋಕಿಸುವುದು ತರವಲ್ಲ (ಅಜ್ಞರೊಲು ಮರುಗುವುದು ತಗದು). ಶೋಕಾಧೀನನಾಗಿ, ಶೋಕಕ್ಕೆ ಬಲಿಯಾಗುವುದು ನಿನ್ನಂತಹ ಆತ್ಮಸಂಯಮಿಗೆ ಭೂಷಣವಲ್ಲ, ನಿನ್ನಂತಹ ಮಾನವಕುಲೋದ್ಧಾರಕನು ಪಾಮರರಂತೆ ಶೋಕಕ್ಕೆ ವಶನಾಗಿ ಅತ್ತರೆ, ಗಾಳಿಯಲ್ಲಿ ಅಲ್ಲಾಡುವ ಮರಗಿಡಗಳಿಗೂ, ಗಿರಿಪರ್ವತ ಗಳಿಗೂ ಇರುವ ಅಂತರವೇನು ? (ಗಿರಿತರುಗಳಅಂತರವಿದೆಂತು) ಮರಗಿಡಗಳು ಗಾಳಿಯಲ್ಲಿ ಅತ್ತಿತ್ತ ಚಲಿಸುವುವು. ಆದರೆ ಪರ್ವತವು ನಿಶ್ಚಲನಾದ ಯೋಗಿಯಂತೆ ಅಚಲವಾಗಿರು ವುದು, ಯಾವ ಚಂಡಮಾರುತಕ್ಕೂ ಕಂಪಿಸದೆ, ಅಚಲಸಂಕೇತವಾಗಿದೆ, ಇವೆರಡರ ಅಂತರವನ್ನು ನೀನು ತಿಳಿಯದವನೇ ? ಹೇಳು.

ವಶಿನಾಮುತ್ತಮ = ಜಿತೇಂದ್ರಿಯವರ್ಯ—ಪೃಥಗ್ಜನವತ್ = ಪಾಮರಜನವತ್—ದ್ರುಮಸಾನುಮತಾಂ = ತರುಶಿಖರಿಣಾಂ ಕಿಮಂತರಂ ಕೋ ವಿಶೇಷಃ ॥ ದೃಷ್ಟಾಂತ ಅಲಂಕಾರ ॥

**91. ಸ ತಥೇತಿ ವಿನೇತುರುದಾರಮತೇಃ ।**
**ಪ್ರತಿಗೃಹ್ಯ ವಚೋ ವಿಸಸರ್ಜ ಮುನಿಮ್ ॥**
**ತದಲಬ್ಧಪದಂ ಹೃದಿ ಶೋಕಘನೇ ।**
**ಪ್ರತಿಯಾತಮಿವಾಂತಿಕಮಸ್ಯ ಗುರೋಃ ॥ ೯೧ ॥**

ಆ ಉದಾರಹೃದಯಿಯಾದ ರಾಜನು ಕುಲಗುರು ವಸಿಷ್ಠರು ತನ್ನ ಶಿಷ್ಯನಾದ ವಾಮದೇವನ ಮೂಲಕ ಹೇಳಿಕಳಿಸಿದ ಸಮಾಧಾನಕರವಾದ ಉಪದೇಶಾಮೃತವನ್ನು ಕೇಳಿ "ಅಂತೆಯೇ ಆಗಲಿ" ಎಂದು ಒಪ್ಪಿಗೆಯಿತ್ತು ಶಿಷ್ಯವರನನ್ನು ಬೀಳ್ಕೊಂಡನು. ಆದರೆ ಗುರುವಿನ ಹಿತೋಪದೇಶವು ಅರಸನ ದುಃಖತಪ್ತ ಹೃದಯದ ಮೇಲೆ ಯಾವ ಪರಿಣಾಮವನ್ನೂ ಮಾಡದೇ, ತನ್ನ ಕರ್ತೃವಾದ ಗುರುವಿನ ಬಳಿಗೇ ಹಿಂದಿರುಗಿತು. ಆ ಉಪದೇಶವು ನೃಪತಿಯ ಮನಸ್ಸನ್ನು ಒಳಹೊಗದೆ ಹಾಗೆಯೇ ಅದು ಗುರುವಿನ ಬಳಿಗೆ ಮರಳಿತು (ಗುರುವಡೆಯ)—ಬಂದ ದಾರಿಗೆ ಸುಂಕವಿಲ್ಲವೆಂಬಂತೆ.

ಅನ್ವಯ :—ಸಃ ಉದಾರಮತೇಃ ವಿನೇತುಃ ವಚಃ ತಥೇತಿ ಪ್ರತಿಗೃಹ್ಯ ಮುನಿ ವಿಸಸರ್ಜ । ಅಸ್ಯ ಶೋಕಘನೇ ಹೃದಿ ಅಲಬ್ಧಪದಂ ಗುರೋಃ ಅಂತಿಕಂ ಪ್ರತಿಯಾತಮಿವ ॥

ಪ್ರತಿಗೃಹ್ಯ = ಅಂಗೀಕೃತ್ಯ—ವಿಸಸರ್ಜ = ಪ್ರೇಷಯಾಮಾಸ—ಶೋಕಘನೇ = ದುಃಖಸಾಂದ್ರೇ—ಪ್ರತಿಯಾತಮಿವ = ಪ್ರತಿನಿವೃತ್ತಂ ॥

ಉತ್ಪ್ರೇಕ್ಷಾಲಂಕಾರ—ತೋಟಕವೃತ್ತ॥

92. ತೇನಾಷ್ಟೌ ಪರಿಗಮಿತಾಃ ಸಮಾಃ ಕಥಂಚಿತ್ ।
ಬಾಲತ್ವಾದ ವಿತಥ ಸೂನೃತೇನ ಸೂನೋಃ ॥
ಸಾದೃಶ್ಯ ಪ್ರತಿಕೃತಿದರ್ಶನೈಃ ಪ್ರಿಯಾಯಾಃ ।
ಸ್ವಪ್ನೇಷು ಕ್ಷಣಿಕಸಮಾಗಮೋತ್ಸವೈಶ್ಚ ॥ ೯೨ ॥

ತನ್ನ ಪುತ್ರನು ಬಾಲ್ಯಾವಸ್ಥೆಯಲ್ಲಿದ್ದುದರಿಂದ ಅಜಮಹಾರಾಜನು ಪತ್ನೀದುಃಖ ಪೀಡಿತನಾಗಿದ್ದರೂ, ತನ್ನ ಪುತ್ರನಿಗೋಸ್ಕರ ಎಂಟು ವರ್ಷಗಳ ಕಾಲ ಬದುಕಿದ್ದನು. ಪ್ರಿಯವಚನನೂ, ಸತ್ಯಭಾಷಿಯೂ ಆದ ಆ ನೃಪಶ್ರೇಷ್ಠನು ತನ್ನ ಪತ್ನಿಯನ್ನು ಹೋಲುವ ಪ್ರತಿಕೃತಿಯನ್ನು ವಿರಚಿಸಿ ಆ ಚಿತ್ರವನ್ನು ನೋಡುತ್ತನೋಡುತ್ತ ಹಗಲು ಹೊತ್ತನ್ನು ಕಳೆಯುತ್ತಿದ್ದನು. ರಾತ್ರಿವೇಳೆ ನಿದ್ರೆಯಲ್ಲಿ ಸ್ವಪ್ನದಲ್ಲಿ (ಸ್ವಪ್ನಾವಸ್ಥೆಯಲ್ಲಿ) ಅವಳ ಕ್ಷಣಿಕದರ್ಶನವನ್ನು ಪಡೆದು ಕ್ಷಣಿಕಸುಖವನ್ನು ಅನುಭವಿಸುತ್ತಿದ್ದನು. ಹಿಂದಿನ ಆಕೆಯ ಜೀವನವನ್ನು ಮೆಲುಕುಹಾಕುತ್ತ, ಆ ರಸನಿಮಿಷಗಳನ್ನು ನೆನೆದು ಆನಂದಿಸುತ್ತ ಹಗಲುವೇಳೆಯನ್ನು ದೂಡುತ್ತಲಿದ್ದನು. ಹೀಗೆ ಆಕೆಯ ಸಮಾಗಮವನ್ನು, ಸಹವಾಸ ಸುಖವನ್ನು ಬಯಸುತ್ತಾ, ಪತ್ನೀವಿಯೋಗದ ವಿರಹಪೀಡಿತನಾಗಿ ಎಂಟು ವರ್ಷಗಳು ಬಹಳ ಕಷ್ಟದಿಂದ ಜೀವಿಸಿದ್ದನು.

ಅನ್ವಯ :—ಅವಿತಥ ಸೂನೃತೇನ ತೇನ ಸೂನೋಃ ಬಾಲತ್ವಾತ್ ಪ್ರಿಯಾಯಾಃ ಸಾದೃಶ್ಯ ಪ್ರತಿಕೃತಿದರ್ಶನೈಃ ಸ್ವಪ್ನೇಷು ಕ್ಷಣಿಕಸಮಾಗಮೋತ್ಸವೈಶ್ಚ ಕಥಂಚಿತ್ ಅಷ್ಟೌ ಸಮಾಃ ಪರಿಗಮಿತಾಃ ॥

ಪ್ರಿಯಾಯಾಃ = ಇಂದುಮತ್ಯಾಃ—ಸೂನೋಃ = ಪುತ್ರಸ್ಯ—ಸಾದೃಶ್ಯಂ = ಆಕಾರ ಸಾದೃಶ್ಯಂ—ಸ್ವಪ್ನೇಷು ಕ್ಷಣಿಕಾಃ = ಕ್ಷಣಮಾತ್ರಾಯೇ ಸಮಾಗಮೋತ್ಸವಾಸ್ತೈಶ್ಚ—ಕಥಂಚಿತ್ = ಕೃಚ್ಛ್ರೇಣ ॥

93. ತಸ್ಯ ಪ್ರಸಹ್ಯ ಹೃದಯಂ ಕಿಲ ಶೋಕಶಂಕುಃ।
ಪ್ಲಕ್ಷಪ್ರರೋಹ ಇವ ಸೌಧತಲಂ ಬಿಭೇದ ॥
ಪ್ರಾಣಾಂತಹೇತುಮಪಿ ತಂ ಭಿಷಜಾಮಸಾಧ್ಯಂ ।
ಲಾಭಂ ಪ್ರಿಯಾನುಗಮನೇ ತ್ವರಯಾ ಸ ಮೇನೇ ॥ ೯೩ ॥

ಆ ಭೂಕಾಂತನ ಧೀರವಾದ ಮನಸ್ಸನ್ನು ಶೋಕವೆಂಬ ಕೀಲು ಅಥವಾ ಶೋಕವೆಂಬ ಬಾಣ ಬಲಾತ್ಕಾರದಿಂದ ಹೊಕ್ಕು ಮನಸ್ಸನ್ನು ಒಡೆದು ಇಬ್ಭಾಗಮಾಡಿತು. ಅರಳಿಮರದ ಮೊಳಕೆಯೊಂದು (ಪ್ಲಕ್ಷವೃಕ್ಷದ ಮೊಳಕೆ) ಸೌಧತಲವನ್ನು ಒಡೆದು, ಕಟ್ಟಡವನ್ನು ವಿಭಾಗಿಸುವಂತೆ, ಪ್ರತ್ಯೇಕಿಸುವಂತೆ, ಇಬ್ಭಾಗಗೊಳಿಸುವಂತೆ ಅಜನ ಶೋಕತಪ್ತ ಹೃದಯವು ಒಡೆದು ಹೋಳಾಯಿತು. ಅವನ ವಜ್ರದೇಹವು ರೋಗಪೀಡಿತವಾಯಿತು. ಪ್ರಾಣವನ್ನೇ ಸೆಳೆಯಬಲ್ಲ ಮರಣಾಂತಿಕವಾದ ರೋಗಕ್ಕೆ ಈಡಾಯಿತು. ರಾಜವೈದ್ಯರ (ಭಿಷಕ್‌ರತ್ನರ) ಯಾವ ಉತ್ತಮ ಔಷಧಿಗಳು ಗುಣಪಡಿಸಲಾರದೇ ಹೋದುವು. ಜೀವವನ್ನೇ ತೆಗೆವ ರುಜೆಯು (ರೋಗವು) ತನ್ನ ಸಲ್ಲಳಿಡೆಗೆ ಆದಷ್ಟು ಬೇಗನೆ ತೆರಳಲು ವರವೆಂದೇ ಆ ಮಹೀಪತಿಯು ಬಗೆದು (ವರವಿದೆಂದೇ ಬಗೆದನು) ಶಾಂತನಾಗಿದ್ದನು. ರೋಗವೂ ಒಂದು ವರವೆಂದೇ ಭಾವಿಸಿದನು. ಮರಣವೂ ಸ್ವಾಗತಾರ್ಹವೇ, ಒಂದು ಅನುಕೂಲವೇ ಎಂದು ತಿಳಿದು ನೆಮ್ಮದಿಯಿಂದಿದ್ದನು.

ಪ್ಲಕ್ಷಪ್ರರೋಹಃ = ಸೌಧತಲಮಿವ—ಪ್ರಸಹ್ಯ = ಬಲಾತ್ಕಿಲ ಬಿಭೇದ—ಪ್ರಾಣಾಂತ ಹೇತುಂ = ಮರಣಕಾರಣಮಪಿ—ಅನುಗಮನೇ = ತ್ವರಯೋತ್ಕಂಠಯಾ ॥

94. ಸಮ್ಯಗ್ವಿನೀತಮಥ ವರ್ಮಹರಂ ಕುಮಾರಂ ।
ಆದಿಶ್ಯ ರಕ್ಷಣವಿಧೌ ವಿಧಿವತ್ಪ್ರಜಾನಾಮ್ ॥
ರೋಗೋಪಸೃಷ್ಟತನುದುರ್ವಸತಿಂ ಮುಮುಕ್ಷುಃ ।
ಪ್ರಾಯೋಪವೇಶನಮತಿರ್ನೃಪತಿರ್ಬಭೂವ ॥ ೯೪ ॥

ಈಗ ಆ ನೃಪತಿಯು ಪುತ್ರಶ್ರೇಷ್ಠನಾದ ದಶರಥಕುಮಾರನು ವೇದವೇದಾಂಗ ಪಾರಂಗತನಾಗಿ ಅತ್ಯಂತ ವಿನೀತನೂ (ಸಮ್ಯಗ್‌ವಿನೀತನನು), ಸಕಲ ಪ್ರಜೆಗಳನ್ನು ಸಂರಕ್ಷಿಸಲು ಸ್ವತಃ ಕವಚವನ್ನು ಧರಿಸಿ ಯುದ್ಧಮಾಡಲು ಶಕ್ತಿಶಾಲಿಯಾಗಿದ್ದನು. ಅವನೊಳು ರಾಜ್ಯವನು ಇರಿಸಿ ಅರಸನು ತನ್ನ ರೋಗಪೀಡಿತವಾದ ದೇಹವನ್ನು ಉಪವಾಸಾದಿ ನಿಯಮಗಳಿಂದ ಪ್ರಾಯೋಪವೇಶದಿಂದ ಕೊನೆಗೊಳಿಸಬೇಕೆಂದು ಆ ಮುಮುಕ್ಷುವು ನಿರ್ಧರಿಸಿದನು. ಹೀಗೆ ತೀರ್ಮಾನಿಸಿ ತನ್ನ ಅರಮನೆಯನ್ನು ತೊರೆಯುವರೆ ಆ ಮಾನವೇಂದ್ರನು ನಿಶ್ಚಯಿಸಿದನು (ಪ್ರಾಯೋಪವೇಶವನು).

ಸಮ್ಯಗ್ವಿನೀತಂ = ನಿಸರ್ಗಸಂಸ್ಕಾರಾಭ್ಯಾಂ, ವಿನಯವಂತಂ—ವರ್ಮಹರತೀತಿ = ವರ್ಮಹರಃ—ರೋಗೇಣೋಪಸೃಷ್ಟಾಯಾ = ವ್ಯಾಪ್ತಾಯಾಸ್ತನೋಃ—ತನೋಃ = ಶರೀರಸ್ಯ—ದುರ್ವಸತಿಂ = ದುಃಖಾವಸ್ಥಿತಿ ॥

95. ತೀರ್ಥೇ ತೋಯವ್ಯತಿಕರಭವೇ ಜಹ್ನುಕನ್ಯಾ ಸರಯ್ವೋಃ ।
ದೇಹತ್ಯಾಗಾದಮರಗಣನಾಲೇಖ್ಯಮಾಸಾದ್ಯ ಸದ್ಯಃ ॥
ಪೂರ್ವಾಕಾರಾಧಿಕತರರುಚಾ ಸಂಗತಃ ಕಾಂತಯಾಸೌ ।
ಲೀಲಾಗಾರೇಷ್ವರಮತ ಪುನಃ ನಂದನಾಭ್ಯಂತರೇಷು ॥ ೯೫ ॥

ಸುಪ್ರಸಿದ್ಧವಾದ ಪವಿತ್ರತೀರ್ಥಕ್ಷೇತ್ರವೆನಿಸಿದ ಗಂಗಾಸರಯೂ ನದಿಗಳ ಸಂಗಮಸ್ಥಾನದೊಳು ಆ ದೊರೆಯು ಪ್ರಾಯೋಪವೇಶ ನಿಯಮದಿಂದ ತನ್ನ ದೇಹವನ್ನು ತೊರೆದು ಸುರದೇಹವನ್ನು ಪಡೆದು ಸುರಲೋಕಕ್ಕೆ ತೆರಳಿದನು. ಅವನಿಗೆ ಆತ್ಮಘಾತದ ಯಾವ ದೋಷವೂ ತಟ್ಟಲಿಲ್ಲ. ಏಕೆಂದರೆ ಅವನು ತನ್ನ ಅಂತ್ಯವನ್ನು ಮೊದಲೇ ತಿಳಿದು ಪ್ರಾಯೋಪವೇಶವನ್ನು ಕೈಗೊಂಡಿದ್ದನು. ಅವನು ಸುರರೂಪಿನಿಂದ ಎಸೆಯುತ್ತ ಅಮರಗಣಸಂದೋಹವನು ಸೇರಿ ತನ್ನ ಕಾಂತೆಯ ದರ್ಶನವನ್ನು ಪಡೆದನು, ಆಕೆಯಾದರೋ ಅತ್ಯಧಿಕ ಕಾಂತಿಯಿಂದ ಎಸೆಯುತ್ತಾ (ಅಧಿಕಕಾಂತಿಯಿಂನೆಸೆವ ಕಾಂತೆಯು). ತನ್ನ ನಲ್ಲನ ನಿರೀಕ್ಷಣೆಯಲ್ಲಿಯೇ ಇದ್ದಳು, ಆ ಸಾಧ್ವಿಯೊಡನೆ ಆ ನೃಪತಿಯು ಪುನರ್ಮಿಲನಗೊಂಡು ಮರಳಿ ನಂದನದೆಡೆಯ ಲೀಲಾಗಾರದಲ್ಲಿ ರಮಿಸುತ್ತಲಿದ್ದನು (ನಂದನದೆಡೆಯ ಲೀಲಾಗಾರದೊಳು).

ಅನ್ವಯ :—ಅಸೌ ಜಹ್ನುಕನ್ಯಾ ಸರಯ್ವೋಃ ತೋಯವ್ಯತಿಕರಭವೇ ತೀರ್ಥೇ ದೇಹತ್ಯಾಗಾತ್ ಸದ್ಯಃ ಅಮರಗಣನಾಲೇಖ್ಯಮ್ ಆಸಾದ್ಯ ಪೂರ್ವಾಕಾರಾಧಿಕತರರುಚಾ ಕಾಂತಯಾ ಸಂಗತಃ ನಂದನಾಭ್ಯಂತರೇಷು ಲೀಲಾಗಾರೇಷು ಪುನಃ ಅರಮತ ॥

ಜಹ್ನುಕನ್ಯಾಃ = ಜಾಹ್ನವೀ = ಗಂಗಾನದಿ—ಲೀಲಾಗಾರೇಷು = ಕ್ರೀಡಾಭವನೇಷು.

# ನವಮಃ ಸರ್ಗಃ

## ಒಂಬತ್ತನೆಯ ಸರ್ಗ

1. **ಪಿತುರನಂತರಮುತ್ತರಕೋಸಲಾನ್ ।**
   **ಸಮಧಿಗಮ್ಯ ಸಮಾಧಿ ಜಿತೇಂದ್ರಿಯಃ ॥**
   **ದಶರಥಃ ಪ್ರಶಶಾಸ ಮಹಾರಥೋ ।**
   **ಯಮವತಾಮವತಾಂ ಚ ಧುರಿ ಸ್ಥಿತಃ ॥ ೧ ॥**

ತಂದೆಯನಂತರ ಉತ್ತರಕೋಸಲಕ್ಕೆ ಅಧಿಪತಿಯಾಗಿ ದಶರಥನು ಪಟ್ಟಾಭಿಷಿಕ್ತನಾದನು. ಅವನು ಆತ್ಮಸಂಯಮಿ. ಮುನಿಗಳಂತೆ ಇಂದ್ರಿಯಗಳನ್ನು ತನ್ನ ಹತೋಟಿಯಲ್ಲಿಟ್ಟಿದ್ದನು (ಸಂಯಮಜಿತೇಂದ್ರಿಯನು). ಜನಪರಧುರಂಧರನು. ಶಸ್ತ್ರವಿದ್ಯಾ ಪಾರಂಗತನು. ದಶದಿಕ್ಕುಗಳಲ್ಲಿ ರಥವನ್ನು ಓಡಿಸಲು ಸಮರ್ಥನು. ಮುನಿಪರಗ್ರೇಸರನು, ರಾಜಾಧಿರಾಜರ ಶಿರೋಮಣಿಯೆನಿಸಿ ಉತ್ತರಕೋಸಲಾಧೀಶನೆನಿಸಿ ಇಳೆಯ ಸಿರಿಯನ್ನು ಅನುಭವಿಸುತ್ತಲಿದ್ದ ಯಶೋವಂತನು.

ಅನ್ವಯ :—ಸಮಾಧಿಜಿತೇಂದ್ರಿಯಃ ಅವತಾಂ ಯಮವತಾಂ ಚ ಧುರಿ ಸ್ಥಿತಃ ಮಹಾರಥಃ ದಶರಥಃ ಪಿತುರನಂತರಮ್ ಉತ್ತರಕೋಸಲಾನ್ ಸಮಧಿಗಮ್ಯ ಪ್ರಶಶಾಸ ॥

ಸಮಾಧಿನಾ ಸಂಯಮೇನ ಜಿತೇಂದ್ರಿಯಃ—ಯಮವತಾಂ = ಸಂಯಮಿನಾಮವತಾಂ—ರಕ್ಷತಾಂ ರಾಜ್ಞಾಂ ಚ ಧುರ್ಯಗ್ರೇ ಸ್ಥಿತೋ ಮಹಾರಥಃ—ಏಕೋದಶಸಹಸ್ರಾಣಿ ಯೋಧಯೇದ್ಯಸ್ತು ಧನ್ವಿನಾಮ್—ಶಸ್ತ್ರಶಾಸ್ತ್ರಪ್ರವೀಣಶ್ಚ ಸಮಹಾರಥ ಉಚ್ಯತೇ—"ಕ್ಷತ್ರಿಯಸ್ಯ ಪರೋಧರ್ಮಃ ಪ್ರಜಾನಾಂ ಪರಿಪಾಲಯಮ್" ಇತಿ. ಸಮಾಧಿಜಿತ್ = ಸಮಾಧಿಸ್ಥ—ಮಹಾರಥ = ಮಹಾವೀರ. ಹತ್ತು ಸಾವಿರ ಮಂದಿಯನ್ನು ಏಕಕಾಲದಲ್ಲಿ ಏಕಾಂಗಿಯಾಗಿ ಎದುರಿಸಬಲ್ಲ ಶಸ್ತ್ರಪಂಡಿತ.

2. **ಅಧಿಗತಂ ವಿಧಿವದ್ಯದಪಾಲಯತ್ ।**
   **ಪ್ರಕೃತಿಮಂಡಲಮಾತ್ಮಕುಲೋಚಿತವತ್ ॥**
   **ಅಭವದಸ್ಯ ತತೋ ಗುಣವತ್ತರಂ ।**
   **ಸನಗರಂ ನಗರಂಧ್ರಕರೌಜಸಃ ॥ ೨ ॥**

ಕ್ಷತ್ರಿಯಕುಲೋದ್ಧಾರಕನಾದ, ಮಹಾವೀರನಾದ ದಶರಥನು ಕುಮಾರಸ್ವಾಮಿಯಂತೆ ಪ್ರತಾಪಶಾಲಿ. ಹಿಂದೆ ಷಣ್ಮುಖನು ಕ್ರೌಂಚಪರ್ವತವನ್ನು ತನ್ನ ಮಹಾಬಾಣದಿಂದ ರಂಧ್ರ ಕೊರೆದು ಭೇದಿಸಿದಂತೆ (ಧರ್ಮದಿಂದ ನಗರಂಧ್ರಕರತೇಜನೊಲಿದಂ) ದಶರಥನು ತನ್ನ ತೇಜಸ್ಸಿನಿಂದ ವೈರಿರಾಜರನ್ನು ಮೂಲೋತ್ಪಾಟನೆ ಮಾಡಿ ಪ್ರಜಾರಂಜಕನೆನಿಸಿ ಅಧಿಕತೇಜನೆನಿಸಿ ಪ್ರಜೆಗಳನ್ನು ಮಕ್ಕಳಂತೆ ಪೊರೆದನು. ಅವನು

ಧರ್ಮಾತ್ಮನು. ಮಹರ್ಷಿಗಳಿಗೆ ಸಮಾನನಾದ ರಾಜಋಷಿ. ವೇದಶಾಸ್ತ್ರಗಳನ್ನು ಬಲ್ಲವನು, ಅವನ ಶಾಸನಕ್ಕೆ ಅಯೋಧ್ಯಾನಗರವೂ, ಉತ್ತರಕೋಸಲಜನಪದವೂ ಸೇರಿತು. ಅವನ ರಾಜ್ಯಭಾರದ ಕಾಲದಲ್ಲಿ ನಗರವೂ ರಾಷ್ಟ್ರವೂ ಮೊದಲಿಗಿಂತ ಉತ್ಕರ್ಷವನ್ನು ಪಡೆದು ಶೋಭಿಸಿತು.

ಅನ್ವಯ :—ಅಧಿಗತಮ್ ಆತ್ಮಕುಲೋಚಿತಂ ಸನಗರಂ ಪ್ರಕೃತಿಮಂಡಲಂ ಯದ್ ವಿಧಿವತ್ ಅಪಾಲಯತ್ ತತಃ ನಗರಂಧ್ರಕರೌಜಸಃ ಅಸ್ಯ ಗುಣವತ್ತರಮ್ ಅಭವತ್ ॥

ಪ್ರಕೃತಿಮಂಡಲಂ=ಜನಪದಮಂಡಲಮ್—ನಗಸ್ಯ ರೌರಂಧ್ರಕರೋ ನಗರಂಧ್ರಕರಃ ಕುಮಾರಃ = ಕುಮಾರಸ್ವಾಮಿ, ಕಾರ್ತಿಕೇಯ, ಷಣ್ಮುಗ "ಕುಮಾರಃ ಕ್ರೌಂಚಧಾರಣಃ" ಇತ್ಯಮರಃ—ಆತ್ಮಕುಲೋಚಿತಮ್ = ಸ್ವಕುಲಾಗತಮ್ ॥

**3. ಉಭಯಮೇವ ವದಂತಿ ಮನೀಷಿಣಃ ।**
**ಸಮಯವರ್ಷಿತಯಾ ಕೃತಕರ್ಮಣಾಮ್ ॥**
**ಬಲನಿಷೂದನಮರ್ಥಪತಿಂ ಚ ತಂ ।**
**ಶ್ರಮನುದಂ ಮನುದಂಡಧರಾನ್ವಯಮ್ ॥ ೩ ॥**

ವಿದ್ವಾಂಸರು ಹೀಗೆ ಎರಡು ತೆರನಾಗಿ ತಮ್ಮ ಅಭಿಪ್ರಾಯವನ್ನು ಸೂಚಿಸುತ್ತಿದ್ದರು. ಯಾರು ತಮ್ಮ ಕರ್ತವ್ಯವನ್ನು ತಪ್ಪದೆ ಮಾಡುವರೋ ಅವರು ಅದರ ಫಲವನ್ನು ಪಡೆದೇ ಪಡೆಯುವರು. ದಶರಥಭೂಪಾಲನ ಸಾಮ್ರಾಜ್ಯದಲ್ಲಿ ಸಕಾಲದಲ್ಲಿ ಮಳೆಯಾಗುತ್ತಿತ್ತು. ಮಳೆಯಿಂದ ಬೆಳೆ, ಬೆಳೆಯಿಂದ ಧನಧಾನ್ಯಸಮೃದ್ಧಿ ಐಶ್ವರ್ಯ ಎಲ್ಲವೂ. ಅವನು ದಂಡಧರನಾದ ಮನುವಿನಂತೆ ಅನುಶಾಸಕನು (ದಂಡಧರವಮನುವಿನ ಅನ್ವಯದೊಳು), ಕಾನೂನುಕಾಯ್ದೆಗಳ ಶಿಸ್ತುಪಾಲನೆಯಿಂದ ಕೋಸಲರಾಜ್ಯ ಶಾಂತಿಯ ಬೀಡಾಗಿತ್ತು. ಅವನು ಬಲಸೂಧನನಾದ, ಬಲನೆಂಬ ರಕ್ಕಸನನ್ನು ಗೆದ್ದ ಇಂದ್ರನಂತೆ ಮಹಾಬಲಶಾಲಿ, ತೇಜಸ್ವಿ, ದೃಢಕಾಯನು, ಮಹೇಂದ್ರನು, ಭೋಗಭಾಗ್ಯ, ಐಶ್ವರ್ಯಗಳ ಸಂಕೇತ (ಪ್ರತೀಕ). ಹೀಗೆ ಶಾಂತಿಪಾಲನೆ, ದಕ್ಷತೆ, ಶಿಸ್ತುಗಳಿಗೆ ದಶರಥ ಮಹಾರಾಜನು ಹೆಸರಾಗಿದ್ದನು. ಕೋಸಲದೇಶ ಐಶ್ವರ್ಯ, ಸಿರಿಸಂಪತ್ತುಗಳ ನಾಡಾಗಿತ್ತು. ಸಿರಿಸಂಪತ್ತುಗಳ ಬೀಡಾದ ಕೋಸಲರಾಜ್ಯದ ದೊರೆ ದಶರಥನಿಗೆ ಸಮಾನರಾದ ರಾಜರು ಈ ಪೃಥ್ವಿಯಲ್ಲಿ ಯಾರು ಇರುವರು? ಅವನ ರಾಷ್ಟ್ರ ಉತ್ಕರ್ಷದ ಪಥದಲ್ಲಿ ಸರಿಯುತ್ತಿತ್ತು. ಪ್ರವರ್ಧಮಾನವಾಗಿ ಬೆಳಗುತ್ತಿತ್ತು.

ಅನ್ವಯ :—ಮನೀಷಿಣಃ ಬಲನಿಷೂದನಂ ಮನುದಂಡಧರಾನ್ವಯಂ ತಮ್ ಅರ್ಥಪತಿಂ ಚ ಉಭಯಮ್ ಏವ ಸಮಯವರ್ಷಿತಯಾ ಕೃತಕರ್ಮಣಾ ಶ್ರಮನುದಂ ವದಂತಿ ॥

ಸಮಯವರ್ಷಿತಯಾ = ಸಮಯೇ ವರ್ಷತಿ ಇತಿ ಸಮಯವರ್ಷೀ ತಸ್ಯ ಭಾವಃ ತಯಾ—ಬಲನಿಷೂದನ = ಇಂದ್ರ—ಮನಸ ಈಷಿಣೋ ಮನೀಷಿಣೋ ವಿದ್ವಾಂಸಃ—ದಂಡಸ್ಯ ಧರೋ ರಾಜಾಮನುರಿತಿಯೋ ದುಡಧರಃ—ಶ್ರಮಸ್ಯ ನುದಂ = ಶ್ರಮನುದಂ—ಮನು =ಅಯೋಧ್ಯೆಯ ಮೊದಲ ರಾಜ—ಬಲ = ಬಲ ಅರ್ಥಪತಿಮ್—ಕೃತಕರ್ಮಣಾಂ =ಶ್ರಮನುದಮ್ ॥

**4. ಜನಪದೇನಗದಃ ಪದಮಾದಧೌ ।**
**ಅಭಿಭವಃ ಕುತ ಏವ ಸಪತ್ನಜಃ ॥**
**ಕ್ಷಿತಿರಭೂತ್ ಫಲವತ್ಯಜನಂದನೇ ।**
**ಶಮರತೇಽಮರತೇಜಸಿ ಪಾರ್ಥಿವೇ ॥ ೪ ॥**

ಶಮರತನೂ, ಶಾಂತಿಪರನೂ ಅಮರತೇಜಸ್ವಿಯಾದ, ಅಜಸುತನಾದ ದಶರಥನು ನೆಮ್ಮದಿಯಿಂದ ಧರೆಯನ್ನು ಆಳುತ್ತಿದ್ದನು. ಅವನು ಪೃಥ್ವೀಶ್ವರನಾಗಿ ಆಳುತ್ತಿದ್ದ ಕಾಲದಲ್ಲಿ ಮಹೀಮಂಡಲವು ಮಳೆಬೆಳೆಗಳಿಂದ ಸಮೃದ್ಧಿಯಾಗಿ ಒಪ್ಪಿದುದು ನಲಿದು, ರೋಗರುಜೆಗಳ ಬಾಧೆಗಳೇ ಇರಲಿಲ್ಲ, ಹಾಗೆಂದಮೇಲೆ ಈಶ್ವರನಂತೆ ಸುರತೇಜದಿಂದೊಪ್ಪುವ ಆ ರಾಜನ ಕಾಲವಲ್ಲಿ ಶತ್ರುಗಳ ಬಾಧೆ ಇರುವುದೆಂತು ? ಶತ್ರುಗಳ, ಶತ್ರು ಪಡೆಗಳ ಸುಳಿವೇ ಇರಲಿಲ್ಲ. ಸಾಮ್ರಾಜ್ಯದ ಎಲ್ಲೆಡೆಗಳಲ್ಲೂ ಶಾಂತಿಯು ನೆಲಸಿತ್ತು.

ಶಮರತೇ = ಶಾಂತಿಪರೇ—ಪಾರ್ಥಿವೇ = ಪೃಥಿವ್ಯಾ ಈಶ್ವರೇ ಸತಿ—ತಸ್ಯೇಶ್ವರಃ (ಪಾಣಿನಿ)—ಪದಂ ನಾದಧೌ = ನಾಚಕ್ರಾಮೇತ್ಯರ್ಥಃ ॥

**5. ದಶದಿಗಂತಜಿತಾ ರಘುಣಾ ಯಥಾ ।**
**ಶ್ರಿಯಮಪುಷ್ಯದಜೇನ ತತಃ ಪರಮ್ ॥**
**ತಮಧಿಗಮ್ಯ ತಥೈವ ಪುನರ್ಬಭೌ ।**
**ನನ ಮಹೀನ ಮಹೀನ ಪರಾಕ್ರಮಮ್ ॥ ೫ ॥**

ಮೊದಲು ದಶದಿಕ್ಕುಗಳ ತನಕ ತನ್ನ ದಿಗಂತವ್ಯಾಪ್ತಿಯಾದ ದಶದಿಗಂತಗಳ ಜಿತನಾದ ಅತುಳಪರಾಕ್ರಮದಿಂದ ಇಳೆಯನ್ನು ಗೆಲಿದ ರಘುರಾಜನು ದಿವ್ಯತೇಜದಿಂದ ಆಳಿದನು. ಆ ಬಳಿಕ ಅವನ ಪುತ್ರನಾದ ಅಜನು ಅವನಂತೆಯೇ ಪರಾಕ್ರಮದಿಂದ ಪೃಥ್ವೀಶ್ವರನಾಗಿ ಕಾಂತಿಯಿಂದ ಭೂಮಂಡಲವನ್ನು ಆಳಿದನು. ಇದೀಗ ಅಜನ ಸುತನಾದ ದಶರಥನು ಪೃಥ್ವೀವಲ್ಲಭನಾಗಿ ಆಳುತ್ತಿರುವನು. ಅವನೇನೂ ಹೀನವಿಕ್ರಮಿಯಲ್ಲ. ಅವನು ಹತ್ತು ದಿಕ್ಕುಗಳಿಗೆ ರಥವನ್ನು ಓಡಿಸಲು ಸಮರ್ಥನು. ಅವನ ಕಾಲದಲ್ಲಿ ಇಳೆಯು ಮುನ್ನಿನ ರಾಜತೇಜದಿಂದ ರಾರಾಜಿಸಿ ಶೋಭಿಸಿ ಮೆರೆಯಿತು. ಯೋಗ್ಯನಾದ ಪತಿಪಡೆದ ಮರಳಿ ಅದೇ ತೇಜಸನ್ನು ಪಡೆಯಿತು (ಮರಳಿಯೂ ಸಮಂತು).

ದಶದಿಗಂತಾಜ್ಜಿತವಾನಿತಿ=ದಶದಿಗಂತಜಿತ್—ಯಥಾಶ್ರಿಯಮ್ ಪುಷ್ಯತ್—ಇನಮ್ = ಸ್ವಾಮಿನಮ್ ॥

**6. ಸಮತಯಾ ವಸುವೃಷ್ಟಿವಿಸರ್ಜನೈಃ ।**
**ನಿಯಮನಾದಸತಾಂ ಚ ನರಾಧಿಪಃ ॥**
**ಅನುಯಯೌ ಯಮಪುಣ್ಯಜನೇಶ್ವರೌ ।**
**ಸವರುಣಾ ವರುಣಾಗ್ರಸರಂ ರುಚಾ ॥ ೬ ॥**

ನರಾಧಿಪನಾದ, ದಶರಥಮಹಾಭಾಗನು ಸಮತೆಯಲ್ಲಿ ಸಮವರ್ತಿಯಾಗಿ ನ್ಯಾಯ ಧರ್ಮದ ಪರಿಪಾಲನೆಯಲ್ಲಿ ಯಮಧರ್ಮರಾಯನಿಗೆ ಸಮನು. ಅವರವರ ಪುಣ್ಯಕ್ಕೆ

ಅನುಗುಣವಾಗಿ ಕುಬೇರನು ಧನವೃಷ್ಟಿಯನ್ನು (ಧನಸಂಪತ್ತನ್ನು) ಸುರಿಸಿ ವಿತರಣೆ ಮಾಡುತ್ತಿರುವನು. ಪುಣ್ಯಜನೇಶ್ವರನಾದ ಕುಬೇರನಂತೆ ಐಶ್ವರ್ಯದ ಮಳೆಯನ್ನೇ ಸುರಿಸ ತಕ್ಕವನು. ದುಷ್ಟರನ್ನು ಶಿಕ್ಷಿಸುವುದರಲ್ಲಿ ಪಾಶಧರನಾದ ವರುಣದೇವನಂತೆ ಬಹು ಸಮರ್ಥನು. ಆ ರಾಜಸೂನು ಸೂರ್ಯನಂತೆ ತೇಜಸ್ವಿ ಸೂರ್ಯನ ಸಾರಥಿಯಾದ ಅರುಣನು ಸ್ವತಃ ಕಾಂತಿಯಿಂದ ಬೆಳಗುತ್ತ ಸೂರ್ಯನ (ಆದಿತ್ಯನ) ಬರುವಿಕೆಯನ್ನು ಲೋಕಕ್ಕೆ ಸಾರುತ್ತಿರುವನು. ಸೂರ್ಯನು ಉದಯಿಸುವ ಮೊದಲೇ ಉಷಃಕಾಲದಲ್ಲಿ ಬೆಳಕು ಹಬ್ಬಿರುವುದು. ಅಂತೆಯೇ ಆ ರಾಜನ ಕೀರ್ತಿಕಾಂತಿ ಅವನು ಎಲ್ಲೇ ಇದ್ದರೂ ಎಲ್ಲೆಡೆ ಹರಡಿ ಇಳೆಯನ್ನು ವ್ಯಾಪಿಸಿರುತ್ತಿತ್ತು.

ಅನ್ವಯ :—ನರಾಧಿಪಃ ಸಮತಯಾ ವಸುವೃಷ್ಟಿವಿಸರ್ಜನೈಃ ಅಸತಾಂ ಚ ನಿಯಮನಾತ್ ಸವರುಣೌ ಯಮಪುಣ್ಯಜನೇಶ್ವರೌ ಅನುಯಯೌ ; ರುಚಾ ಅರುಣಾಗ್ರಸರಮ್ (ಅನುಯಯೌ).

ಪುಣ್ಯಜನಃ=ಯಕ್ಷರು—ಅರುಣಾಗ್ರಸರಮ್ = ಅರುಣಃ ಅಗ್ರಸರಃ ಯಸ್ಯ—ಸಮತಯಾ = ಸಮವರ್ತಿತ್ವೇನ = ಮಧ್ಯಸ್ಥತ್ವೇನೇತ್ಯರ್ಥಃ—ವಸುವೃಷ್ಟಿ = ಧನವೃಷ್ಟೇರ್ವಿಸರ್ಜನೈಃ—ಯಮಪುಣ್ಯಜನೇಶ್ವರೌ = ಯಮಕುಬೇರೌ=ಯಮಕುಬೇರ ವರುಣಾನ್—ರುಚಾ = ತೇಜಸಾ ॥

**7. ನ ಮೃಗಯಾಭಿರತಿರ್ನ ದುರೋದರಂ ।**
**ನ ಚ ಶಶಿಪ್ರತಿಮಾಭರಣಂ ಮಧು ॥**
**ತಮುದಯಾಯ ನ ವಾ ನವಯೌವನಾ ।**
**ಪ್ರಿಯತಮಾ ಯತಮಾನಮಪಾಹರತ್ ॥ ೭ ॥**

ನಿತ್ಯವೂ ಸಾಮ್ರಾಜ್ಯದ, ತನ್ನ ಪ್ರಜೆಗಳ ಅಭ್ಯುದಯದ ಯೋಜನೆಗಳಿಂದ ಅವನ ನಿರ್ಧಾರವು ಕದಡದೆ ಅಚಲವಾಗಿರುತ್ತಿತ್ತು. ಅವನು ನವಯೌವನದ ಹೊಸ್ತಿಲಲ್ಲಿದ್ದರೂ ಹೆಣ್ಣುಗಳ ಮೈಮಾಟಕ್ಕೆ, ಹಾವಭಾವಗಳಿಗೆ ಸೋತವನಲ್ಲ. ಹದವಾದ ಜೂಜು, ಹದವಾದ ಬೇಟೆ, ಹದವಾದ ಕುಡಿತ, ಪಾನಾದಿಕೂಟಗಳು ಮಿತವಾಗಿತ್ತು, ಯಾವುದರಿಂದಲೂ ಅತಿಯಾಗಿ ಆಕರ್ಷಿತನಾಗದೆ ಮಿಳಿತವಾಗಿದ್ದನು. ಮೃಗಬೇಟೆ, ಸ್ತ್ರೀಲಂಪಟತ್ವ, ಶಶಿಸದೃಶ ಮಧುವು ಮೊದಲಾದ ಸಪ್ತವ್ಯಸನಗಳು ಆ ರಾಜಕುಲಪ್ರದೀಪನನ್ನು ತಪ್ಪು ದಾರಿಗೆ ಎಳೆಯಲು ಅಸಮರ್ಥವಾಗಿದ್ದುವು. ರಾಜ್ಯದ ಸರ್ವತೋಮುಖವಾದ ಅಭಿವೃದ್ಧಿಯೇ ಅವನ ಧ್ಯೇಯವೂ, ಗುರಿಯೂ ಆಗಿತ್ತು (ನಿರುತ ಅಭ್ಯುದಯ ಕುದ್ಯೋಗಿಸುತ), ನವಯುವಕನಾದರೂ ಕಾಮವರ್ಜಿತನಾಗಿ ನಿಷ್ಕಾಮನಾಗಿ ಕೋಸಲ ರಾಜ್ಯವನ್ನು ಆಳುತ್ತಿದ್ದನು (ಎಳೆಯಲಾರ್ತುದಿಲ್ಲ).

ದುರೋದರಂ = ದ್ಯೂತಂ = 'ದುರೋದರೋ ದ್ಯೂತಕಾರೇ ಪಣೇ ದ್ಯೂತೇ ದುರೋದರಮ್' ಇತ್ಯಮರಃ—ಶಶಿನಃ = ಪ್ರತಿಮಾ—ನವಯೌವನಾ ನವ ನೂತನ ಯೌವನ ತಾರುಣ್ಯಂ—ಮೃಗಯಾಭಿರತಿ = ಮೃಗಯಾಯಾಮ್ ಅಭಿರತಿಃ = ಬೇಟೆಯಾಡುವ

ಹುಚ್ಚು (ಗೀಳು)—ದುರೋದರಮ್=ಜೂಜು. ಜುಗಾರು—ಶಶಿಪ್ರತಿಮಾಭರಣಮಧು = ಶಶಿಸದೃಶಮಧು.

**8. ನ ಕೃಪಯಾ ಪ್ರಭವತ್ಯಪಿ ವಾಸವೇ ।**
**ನ ವಿತಥಾ ಪರಿಹಾಸ ಕಥಾಸ್ವಪಿ ॥**
**ನ ಚ ಸಪತ್ನಜನೇಷ್ವಪಿ ತೇನ ವಾಕ್ ।**
**ಅಪರುಷಾ ಪರುಷಾಕ್ಷರಮೀರಿತಾ ॥ ೮ ॥**

ಆ ರಾಜನು ಕೃಪಾಸಾಗರನು, ತನ್ನ ಮೇಲೆ ಪ್ರಭಾವವಿರುವ ದಿಕ್ಪಾಲಕರ ಒಡೆಯನಾದ ವಾಸವನ ಬಗ್ಗೆಯಾದರೂ ಆತನು ಅನುಕಂಪಪಹೊಂದಿ, ಕೃಪಾವಲೋಕನದಿಂದಲೇ ಈಕ್ಷಿಸುತ್ತಿದ್ದನು. ಕೃಪಣತನದಿಂದ ವರ್ತಿಸನು. ಕರುಣೆಯಿಂದಲೇ ಮಾತಾಡಿಸುವ ಸ್ವಭಾವದವನು, ಪರಿಹಾಸಕ್ಕಾದರೂ ಒಂದೇ ಒಂದು ಸುಳ್ಳು ಮಾತನ್ನು ಆಡುವವನಲ್ಲ. ಯಾರನ್ನೂ ತೆಗಳದ, ಮೃದುಸ್ವಭಾವದವನು. ತನ್ನ ಆಜನ್ಮವೈರಿಗಳಿಗಾದರೂ ಕಠಿಣಾಕ್ಷರಗಳಿರುವ ಪದಗಳನ್ನು (ಪರುಷಾಕ್ಷರಗಳನು) ಉಪಯೋಗಿಸದ ಅತ್ಯಂತ ಋಜುಸ್ವಭಾವದ ಲೋಕಮಾನ್ಯನಾದ ಸಾದಾಸೀದಾ ವ್ಯಕ್ತಿ ದಶರಥಮಹಾರಾಜನು. ಅವನಲ್ಲಿ ರೋಷವೆಂದಿಗೂ ತಲೆದೋರದು. ಅವನಲ್ಲಿ ರೋಷವೇ (ಕೋಪ, ತಾಪ, ಸಿಟ್ಟು) ಶೂನ್ಯ (ಸೊನ್ನೆ)ವಾಗಿತ್ತು. ಅವನು ತನ್ನ ಸಪತ್ನಿಯರಲ್ಲಿ, ವೈರಿರಾಜರಲ್ಲಿ ನಿಷ್ಠುರ ವಚನಗಳನ್ನು ಬಳಸದ ನಿರ್ಮಲಜ್ಞಾನಿ, ಆ ಸತ್ಪುರುಷನು ಸರ್ವಜನರಲ್ಲಿ, ದೀನ, ಸತ್ಯ, ಮೃದು, ಋಜು. ಮಧುರಾಕ್ಷರಗಳ ಪದಗಳನ್ನು, ವಾಗೂಕ್ತಿಗಳನ್ನು ಮಾತ್ರ ಉಪಯೋಗಿಸುತ್ತ ಮಾತನಾಡುವ ಸಾತ್ವಿಕಮೂರ್ತಿಯಾಗಿ ಮೆರೆಯುತ್ತ ಇಳೆಯನ್ನು ಆಳುತ್ತಲಿದ್ದನು, ವಸುಧಾದಿಪ ದಶರಥ ಸಾರ್ವಭೌಮನು.

ರಘೂದ್ವಹಃ = ರಘೂಣಾಮ್ ಉದ್ವಃ (ನಾಯಕಃ)—ಕುಚಾಪರುಷಾ = ರೋಷಾಶೂನ್ಯೇನ—ಪರುಷಾಕ್ಷರಂ = ನಿಷ್ಠುರಾಕ್ಷರಂ, ವಾಕ್‌ಪಾರುಷ್ಯ ॥

**9. ಉದಯಮಸ್ತಮಯಂ ಚ ರಘೂದ್ವಹಾತ್ ।**
**ಉಭಯಮಾನಶಿರೇ ವಸುಧಾಧಿಪಾಃ ॥**
**ಸ ಹಿ ನಿದೇಶಮಲಂಘಯತಾಮಭೂತ್ ।**
**ಸುಹೃದಯೋ ಹೃದಯಃ ಪ್ರತಿಗರ್ಜತಾಮ್ ॥ ೯ ॥**

ಆ ವಸುಧಾಧಿಪನಲ್ಲಿ ಸಾಮಂತರಾಜರು ಉದಯಾಸ್ತಗಳನ್ನು ಕಾಣುತ್ತಿದ್ದರು. ಅದು ಹೇಗೆಂದರೆ ಉದಯಕಾಲದಲ್ಲಿ ನೆರಳು ಉದ್ದವಾಗಿಯೂ (ಲಂಬ) ಅಸ್ತಮಾನಕಾಲದಲ್ಲಿ ಸಣ್ಣದಾಗಿ (ಹ್ರಸ್ವವಾಗಿ, ಚೋಟುದ್ದ) ಕಾಣುತ್ತಿರುವುದು. ಅಂತೆಯೇ ಇತರ ರಾಜರು ತಮ್ಮ ಸಾರ್ವಭೌಮನಲ್ಲಿ ಮಿತ್ರತ್ವ ಹೊಂದಿದಾಗ ಎಲ್ಲಾ ಅಭಿವೃದ್ಧಿಗಳನ್ನು ಅವರು ಪಡೆಯುತ್ತಿದ್ದರು. ಸುಹೃದಯನಾದ ಅವನಿಂದ ಎಲ್ಲವನ್ನೂ ಪಡೆಯುತ್ತಿದ್ದರು (ಅಹುನುಸೂಪ್ಪದಯುನು). ಅವನ ಆಜ್ಞೆಗಳನ್ನು ಉಲ್ಲಂಘಿಸಿದಾಗ ಅವನು ಅತ್ಯಂತ ಕಠಿಣನಾಗಿ ಅವರನ್ನು ದಮನಮಾಡಿ, ಅಣಗಿಸಿ ತನ್ನ ಹಿಡಿತಕ್ಕೆ (ವಜ್ರಮುಷ್ಟಿಗೆ)

ತರುತ್ತಿದ್ದನು. ಆಗ ಆ ರಾಜರಿಗೆ ತಮ್ಮ ಅಧಿರಾಜನ ಪರಾಕ್ರಮ, ಕಠಿಣತೆಯು ಅರಿವಾಗು ತ್ತಿದ್ದಿತು. ಆಗ ಅವನ ಹೃದಯವು ಉಕ್ಕಿನಂತೆ ಕಠಿಣವಾಗಬಲ್ಲುದು (ವಜ್ರಹೃದಯಿ, ವಜ್ರಸಂಕಲ್ಪ), ಅಂತಹ ಸಾಮರ್ಥ್ಯವನ್ನು ಆ ರಘುವಿನ ವಂಶೋದ್ಭವನು ಹೊಂದಿದ್ದನು.

ರಘೂದ್ವಹಃ = ರಘೂಣಾಮ್ ಉದ್ವಃ (ನಾಯಕಃ)—ವಸುಧಾಧಿಪಾಃ = ರಾಜಾನಃ —ಶೋಭನಂ = ಹೃದಯಂಮಸ್ಯೇತಿ ಅಯೋಹೃದಯಃ = ಕಠಿಣಚಿತ್ತೋಽಭೂತ್ ॥

**10. ಅಜಯದೇಕರಥೇನ ಸ ಮೇದಿನೀಂ ।**
**ಉದಧಿನೇಮಿಮಧಿಜ್ಯಶರಾಸನಃ ॥**
**ಜಯಮಘೋಷಯದಸ್ಯ ತು ಕೇವಲಂ ।**
**ಗಜವತೀ ಜವತೀ ಪ್ರಹಯಾ ಚಮೂಃ ॥ ೧೦ ॥**

ಸಪ್ತಸಾಗರದಿಂದ (ಏಳು ಸಮುದ್ರ) ಸುತ್ತುವರಿದ ಈ ಧರೆಯನ್ನು (ಶರಧಿವೇಷ್ಟಿತ ಧರೆಯ) ದಶರಥನು ಹೆದೆ ಏರಿಸಿದ ಬಿಲ್ಲನ್ನು ಕೈಯಲ್ಲಿ ಧರಿಸಿ (ಶರಾಸನಶರಪಾಣಿಯಾಗಿ) ತನ್ನ ದಿವ್ಯರಥವನ್ನೇರಿ ಭೂಚಕ್ರವನ್ನು ಸುತ್ತಿದನು. ಅವನು ತನ್ನ ದಿಗ್ವಿಜಯಕಾಲದಲ್ಲಿ ಈ ಭೂಮಂಡಲವನ್ನು ಏಕರಥದಿಂದಲೇ ಗೆದ್ದು ವಿಶ್ವವಿಜೇತನಾದ ಜಗದೇಕರಥನೆಂಬ ಹೆಸರಿಗೆ ನೆನಿಸಿದನು. ಅವನನ್ನು ಎದುರಿಸಿ, ಹಿಮ್ಮೆಟ್ಟಿಸಿ ವಿಜಯಿಗಳಾದ ನೃಪಶ್ರೇಷ್ಠರೇ ಇರಲಿಲ್ಲ. ಒಂದೇ ರಥದಲ್ಲಿ ಯಾನಮಾಡಿ ಅವನು ಬ್ರಹ್ಮಾಂಡವನ್ನು ಜಯಿಸಿದ ಮಹಾರಥ. ಅವನನ್ನು ಸೇನೆ ಹೆಸರಿಗೆ ಮಾತ್ರ ಅನುಸರಿಸುತ್ತಿತ್ತು. ಅವನ ಅತ್ಯಂತ ವೇಗದ ಚತುರಂಗಪಡೆ, ಗಜಗಳಿಂದ, ದಿವ್ಯಾಶ್ವಗಳಿಂದ, ರಥಗಳಿಂದ ಮೆರೆಯುತ್ತ ರಭಸದಿಂದ ಮುನ್ನುಗ್ಗುತ್ತಿದ್ದುದು ಮಾತ್ರ. ಅದು ಜಯವನ್ನು ಉದ್ಘೋಷಿಸುವುದೇ ಅದರ ಪ್ರಧಾನ ಕೆಲಸವಾಗಿತ್ತು (ಬರಿಯ ಜಯದ ಉದ್ಘೋಷಕೆ). ಆ ಮಹಾಸೇನೆಯು ಯಾವ ಸೈನ್ಯ ದೊಡನೆ ಹೋರಾಡಿಯುದೇ ಇಲ್ಲ. ಏಕೆಂದರೆ ಮಹಾರಥನಾದ ದಶರಥನು ತಾನೊಬ್ಬನೇ ತನ್ನ ಅತ್ಯದ್ಭುತವಾದ ಸಮರಸಾಹಸದಿಂದ ವೈರಿರಾಜರನ್ನು ಅವರ ಸೇನೆಗಳೊಂದಿಗೆ ಧೂಳೀಪಟಗೈದು ವಿಜಯಿಯಾಗಿ ಹಿಂದಿರುಗಬಲ್ಲ ಸಮರೈಕವೀರನು.

ಅಧಿಜ್ಯಶರಾಸನಃ = ಅಧಿಜ್ಯಂ ಶರಾಸನಂ ಯಸ್ಯ ಸಃ—ಶರಾಸನ = ಶರಾಃ ಅಸ್ಯಂತೇ ಅನೇನ—ಉದಧಿನೇಮಿಮ್ = ಉದಧಿನೇಮಿಃ ಯಸ್ಯಾಃ ತಾಮ್—ಅಧಿಜ್ಯಶರಾಸನಃ ಸ ದಶರಥ ಉದಧಿನೇಮಿಂ ಸಮುದ್ರವೇಷ್ಟನಾಂ ಮೇದಿನೀಮೇಕರಥೇನಾಜಯತ್ ಚಮೂಸ್ತ್ವಸ್ಯ = ನೃಪಸ್ಯ ॥

**11. ಅವನಿಮೇಕರಥೇನ ವರೂಥಿನಾ ।**
**ಜಿತವತಃ ಕಿಲ ತಸ್ಯ ಧನುರ್ಭೃತಃ ॥**
**ವಿಜಯದುಂದುಭಿತಾಂ ಯಯುರರ್ಣವಾ ।**
**ಘನರವಾ ನರವಾಹನಸಂಪದಃ ॥ ೧೧ ॥**

ಅವನು ಸಪ್ತಸಾಗರಪರ್ಯಂತರ ಇರುವ ಪೃಥ್ವೀಮಂಡಲವನ್ನು ಗುಪ್ತಿಯಿಂದ ಸಜ್ಜಾದ ಏಕವರೂಥದಲ್ಲಿ ಜಯಿಸಿ ಪೃಥ್ವೀವಲ್ಲಭನಾದನು. ಅವನ ಜಯಘೋಷವನ್ನು

ರಣಭೇರಿಗಳ ನಾದದಂತೆ ಸ್ವತಃ ಸಾಗರವೇ ಘೋಷಿಸುತ್ತಿತ್ತು. ಮೇಘಧ್ವನಿಯನ್ನು ಹೋಲುವ ಜಯಘೋಷಧ್ವನಿಯನ್ನು ವಿಜಯದ ಸಂಕೇತವಾದ ಸಪ್ತಸಾಗರಗಳೇ ತಮ್ಮ ಘನವಾದ ಶಬ್ದದಿಂದ (ರವದಿಂದ) ಘೋಷಿಸುತ್ತಿದ್ದುವು. ತನ್ನ ಕೈಯಲ್ಲಿ ಮಹಾ ಧನುಸನ್ನು ಹಿಡಿದು ನರವಾಹನನಾದ ಕುಬೇರನಿಗೆ ಎಣೆಯಾದ ಸಂಪದವನ್ನು ಸಂಪಾದಿಸಿ ಪ್ರಪಂಚದ ಸಿರಿಗೆ ಒಡೆಯನಾದನು (ನರವಾಹನನಂಗೆಣೆಯು ಸಿರಿಯು).

ಅನ್ವಯ :—ಧನುರ್ಭೃತಃ ನರವಾಹನಸಂಪದಃ ಅವನಿಂ ವರೂಥಿನಾ ಏಕರಥೇನ ಜಿತವತಃ ತಸ್ಯ ಘನರವಾಃ ಅರ್ಣವಾಃ ಕಿಲ ವಿಜಯದುಂದುಭಿತಾಂ ಯಯುಃ ॥

ನರವಾಹನಮ್ = ಕುಬೇರ—ಅವನಿಂ ಜಿತವತೋ = ಧನುರ್ಭೃತೋ—ನರವಾಹನ ಸಂಪದಃ = ಕುಬೇರತುಲ್ಯಶ್ರೀಕಸ್ಯ—ಘನರವಾ = ಮೇಘಸಮಘೋಷಾ—ಅರ್ಣವಾ ವಿಜಯದುಂದುಭಿತಾಂ ಕಿಲ ಯಯುಃ ॥

**12. ಶಮಿತಪಕ್ಷಬಲಃ ಶತಕೋಟಿನಾ ।**
**ಶಿಖರಿಣಾಂ ಕುಲಿಶೇನ ಪುರಂದರಃ ॥**
**ಸ ಶರವೃಷ್ಟಿಮುಚಾ ಧನುಷಾದ್ವಿಷಾಂ ।**
**ಸ್ವನವತಾ ನವತಾಮರಸಾನನಃ ॥ ೧೨ ॥**

ಶತಕೋಟಿ ಅಂಚುಗಳಿರುವ ಕುಲಿಶಾಯುಧದಿಂದ (ವಜ್ರಾಯುಧದಿಂದ) ಪುರಂದರನು ಗಿರಿಶಿಖರಗಳ (ಪರ್ವತಶ್ರೇಣಿಗಳ) ರೆಕ್ಕೆಗಳನ್ನು ಕಡಿದಿಕ್ಕಿದಂತೆ (ಶತಕೋಟಿ ಕುಲಿಶದಿಂದಾ ಪುರಂದರನು) ಅರಿಭಯಂಕರನಾದ ದಶರಥನು ಬಿಲ್ಬಿಡಿದು ಶರವೃಷ್ಟಿಗರೆದು ವೈರಿಬಲದ ಪಕ್ಷಗಳನ್ನು (ರೆಕ್ಕೆಗಳನ್ನು) ತರಿದು, ವಿಘಾತಿಗೊಳಿಸಿದನು. ಅವನು ನಳನಳಿಸುವ ನವತಾವರೆಯು ಮುಖಕಮಲದಿಂದೊಪ್ಪುವ ಮಹಾಬಾಹು. ಆವನು ತನ್ನ ಧನುಷ್ಟಂಕಾರ ದಿಂದ ಮೇಘಧ್ವನಿಗೆ ಸಮಾನವಾದ ಧ್ವನಿಗೈದು ವೈರಿಮೋಹರವನ್ನು ದಂಗುಬಡಿಸಿ ಶರವೃಷ್ಟಿಯನ್ನು ಸುರಿಸಿ ವೈರಿಬಲದ ಪಕ್ಷವನ್ನು ಅಳಿಸಿ ವಿಜಯಿಯಾದನು. ಆ ಮೇದಿನೀ ಪತಿ, ಅಮರಾಧಿಪತಿಯಾದ ಇಂದ್ರನಿಗೆ ಬಲದಲ್ಲಿ ಸರಿಸಾಟಿಯಾದ ಮಹಾವೀರನು (ಅರಿಪಕ್ಷ ಮಳಿಸಿಹನು).

ಅನ್ವಯ :—ಪುರಂದರಃ ಶತಕೋಟಿನಾ ಕುಲಿಶೇನ ಶಿಖರಿಣಾ ಶಮಿತ ಪಕ್ಷಬಲಃ । ನವತಾಮರಸಃ ಸ ಶರವೃಷ್ಟಿಮುಚಾಸ್ವನವತಾ ಧನುಷಾ ದ್ವಿಷಾಂ (ಶಮಿತಪಕ್ಷಬಲಃ) ॥

ಶಮಿತಪಕ್ಷಬಲಃ = ಶಮಿತ = ರೆಕ್ಕೆಗಳ ಬಲ—ಪಕ್ಷ = ಸಾಮಂತರು, ಪಕ್ಷದವರು— ಬಲ = ಸೇನೆ—ಪುರಂದರ = ಇಂದ್ರಃ ಶತಕೋಟಿನಾ = ಶತಾಸ್ರೀಣಾ—ಕುಲಿಶೇನ = ವಜ್ರೇಣ—ಶಿಖರಿಣಾಂ = ಪರ್ವತಾನಾಂ—ಶಮಿತಪಕ್ಷಬಲೋ = ವಿನಾಶಿತಪಕ್ಷಸಾರಃ— ನವತಾಮರಸಾನನೋ =ನವಪಂಕಜಾನನಃ—ಶಮಿತೋ=ನಾಶಿತಃ—ಪಕ್ಷ=ಸಹಾಯೋ ಬಲಂ = ಚ ಯೇನ ಸ ತಥೋಕ್ತಃ—'ಪಕ್ಷಃ ಸಹಾಯೇಽಪಿ' ಇತ್ಯಮರಃ ॥

**13. ಚರಣಯೋರ್ನಖರಾಗಸಮೃದ್ಧಿಭಿಃ ।**
**ಮುಕುಟರತ್ನಮರೀಚಿಭಿರಸ್ಪೃಶನ್ ॥**

**ನೃಪತಯಃ ಶತಶೋ ಮರುತೋ ಯಥಾ ।**
**ಶತಮುಖಂ ತಮಖಂಡಿತಪೌರುಷಮ್ ॥ ೧೩ ॥**

ಅಖಂಡಪೌರುಷಮಂಡಿತನಾದ (ಪೌರುಷಧನನಾದ) ದಶರಥನೃಪಾಲನ ಪಾದಕಮಲಗಳ ಮೇಲೆ ನೂರಾರು ಮಕುಟಧರರಾದ ನೃಪರು ವಂದಿಸಿ ತಮ್ಮ ನಮ್ರತೆಯನ್ನು ಸೂಚಿಸಿದರು. ಆಗ ಅವರ ರತ್ನಖಚಿತ ಕಿರೀಟಗಳು ದಶರಥನ ಪಾದಕಮಲಗಳ ಉಗುರುಗಳಲ್ಲಿ ಪ್ರತಿಫಲನಗೊಂಡು ಉತ್ಕರ್ಷಗೊಂಡುವು. ನಖರಾಗ ಸಮೃದ್ಧಿಯನ್ನು ಹೊಂದಿದ್ದುವು. ಕಿರೀಟಮಣಿಗಳ ಪ್ರಕಾಶವು (ಕಿರೀಟಮಣಿಕಿರಣಗಳೆಂದು) ಉಗುರುಗಳ ಕಾಂತಿಯನ್ನು ಹೆಚ್ಚಿಸಿದುವು (ಶತಕ್ರತು). ನೂರು ಯಾಗಗಳನ್ನು ಮಾಡಿ ಶತಮುಖನೆನಿಸಿದ ದೇವತೆಗಳ ಒಡೆಯನಾದ ದೇವರಾಜನಾದ ಇಂದ್ರನ ಕಾಲುಗಳಿಗೆ ಲೋಕಪಾಲಕರು, ದೇವಾದಿದೇವತೆಗಳು ಎರಗಿ ಗೌರವವನ್ನು ಸೂಚಿಸುವಂತೆ ಸಮಸ್ತಪೃಥ್ವಿಯ ರಾಜಾಧಿರಾಜರು ಸಾರ್ವಭೌಮನ ಪಾದಗಳಿಗೆರಗಿ ಅವನ ಆಶ್ರಯವನ್ನು ಪಡೆದರು.

ನಖರಾಗ ಸಮೃದ್ಧಿಭಿಃ = ನಖರಾಗೇಣ ಸಮೃದ್ಧಿಭಿಃ ಸಂಪಾದಿತರ್ದ್ಧಿಬಿಃ ॥ ರತ್ನಮರೀಚಿಭಿಃ = ಕಿರೀಟಮಣಿಗಳ ಪ್ರಭಾವ—ಶತಕ್ರತು = ನೂರುಯಾಗಮಾಡಿದವ ಇಂದ್ರ (ದೇವೇಂದ್ರ)—ನೃಪತಯೋಽಖಂಡಿತಪೌರುಷಾ—ನಖರಾಗೇಣ = ಚರಣನಖಕಾಂತ್ಯಾ ॥

**14. ನಿವವೃತೇ ಸ ಮಹಾರ್ಣವರೋಧಸಃ ।**
**ಸಚಿವಕಾರಿತ ಬಾಲಸುತಾಂಜಲೀನ್ ॥**
**ಸಮನುಕಂಪ್ಯ ಸಪತ್ನಪರಿಗ್ರಹಾನ್ ।**
**ಅನಲಕಾನಲಕಾನವಮಾಂ ಪುರೀಮ್ ॥ ೧೪ ॥**

ಆ ಅವನಿಪಾಲನು ಶರಣಾಗತರಿಗೆ ದಯೆಯನ್ನು ತೋರುತ್ತ ರೋದಿಸುವ ಸಾಗರದ ತಡಿಯಿಂದ ಅಲಕಾವತಿಯ ಸಿರಿಸಂಪತ್ತಿಗೆ ಸಮಾನವಾಗಿ ಶೋಭಿಸಿ ಮೆರೆಯುತ್ತಿರುವ ಅಯೋಧ್ಯೆಗೆ ವಿಜಯಿಯಾಗಿ ಹಿಂದಿರುಗಿದನು. ಅವನಿಂದ ಸೋತು ದಿಕ್ಕುಗೆಟ್ಟ ಶತ್ರುಗಳ ಪತ್ನಿಯರು ರೋದಿಸುತ್ತಲಿದ್ದರು. ಆ ನಾರಿಯರು ತಮ್ಮ ಕೇಶವನ್ನು ಸಿಂಗರಿಸದೆ, ಆಭರಣಗಳನ್ನು ಧರಿಸದೆ, ಯುದ್ಧದಲ್ಲಿ ಅಸುನೀಗಿದ ತಮ್ಮ ಶೂರ, ಧೀರ, ವೀರಪತಿಗಳ ವಿಯೋಗಕ್ಕಾಗಿ ಅಳುತ್ತಲಿದ್ದರು. ಅವರು ತಮ್ಮ ಮಕ್ಕಳಿಂದ ಅಂಜಲಿಬದ್ಧರಾಗಿ ಕೈಮುಗಿದು ಬೇಡಿಕೊಳ್ಳುತ್ತ, ತಮ್ಮ ಸಚಿವರನ್ನು ಮಧ್ಯವರ್ತಿಗಳಾಗಿ ಕಳುಹಿಸಿ, ತಮ್ಮನ್ನು ರಕ್ಷಿಸುವಂತೆ ಪ್ರಾರ್ಥಿಸುತ್ತಿದ್ದರು. ಅವರ ದೈನ್ಯಾವಸ್ಥೆಯನ್ನು ಕಂಡು ಶರಣಾಗತವತ್ಸಲನಾದ ದಶರಥಭೂಪಾಲನು ಅವರಿಗೆ ಅಭಯವನ್ನು ಸೂಚಿಸಿ ತನ್ನ ನಿಜನಗರಿಯಾದ ಸಾಕೇತನಗರಿಗೆ ಹಿಂದಿರುಗಿದನು (ಅಲಕೆಗೆಣೆಪುರಿಯು) ಸಮನುಕಂಪ್ಯ = ಅನುಗ್ರಹ್ಯ ॥

**15. ಉಪಗತೋಽಪಿ ಚ ಮಂಡಲನಾಭಿತಾಂ ।**
**ಅನುದಿತಾನ್ಯಸಿತಾತಪವಾರಣಃ ॥**
**ಶ್ರಿಯಮವೇಕ್ಷ್ಯ ಸರಂಧ್ರಚಲಾಮಭೂತ್ ।**
**ಅನಲಸೋಽನಲಸೋಮಸಮದ್ಯುತಿಃ ॥ ೧೫ ॥**

ಈ ಸಮಸ್ತಭೂಮಂಡಲಕ್ಕೆ ಆತನೊಬ್ಬನೇ ಸಾರ್ವಭೌಮನು. ಹನ್ನೆರಡು ಅರಗಳಿಂದ ರಾರಾಜಿಸುವ ಚಕ್ರಮಂಡಲವನ್ನು ಒಂದೇ ಒಂದು ಗುಂಭವು ತನ್ನಲ್ಲಿ ಅಳವಡಿಸಿಕೊಂಡು, ಕ್ರಿಯಾರೂಪವಾದ ಕೇಂದ್ರಬಿಂದುವೆನಿಸಿ, ತನ್ನ ದೇಹಕಾಂತಿಯು ಆಧಿಕ್ಯದಿಂದ ಚಕ್ರದ ಅರೆಗಳಂತಿರುವ ಅರಸರಿಗೆ ಮೇಲ್ಪಂಕ್ತಿಯಾಗಿ ವಿಶ್ವಸಾಮ್ರಾಟನಾಗಿ ಮೆರೆಯುತ್ತಿದ್ದನು. ಅವನು ಇತರ ಎಲ್ಲಾ ಬಲಾಢ್ಯರಾದ ದ್ವಾದಶರಾಜಮಂಡಲದ ಅರಸರಿಗೂ ಮೂಲಾಧಾರಸ್ತಂಭದಂತೆ ಆಧಾರನಾದ ಪ್ರಧಾನಮಹೀಪತಿ. ಆ ನರೇಶನು ಅಗ್ನಿ ಮತ್ತು ಚಂದ್ರನ ಕಾಂತಿಗೆ ಸಮಾನನಾದ ತೇಜಸ್ವಿ. ಸೋಮಸೂರ್ಯರಿಗೆ ಸಮಾನನು. ಅವನು ಭೂಮಂಡಲಾಧಿಪತಿಯಾಗಿ ಏಕಚ್ಛತ್ರದ ನೆರಳಿನಿಂದ (ಏಕಛತ್ರಪತಿ) ಉರ್ವಿಯನ್ನು ಪಾಲಿಸುತ್ತಿದ್ದನು. ಆ ಸಾರ್ವಭೌಮನ ತಲೆಯ ಮೇಲೆ ಹಿಡಿದಿರುವ ಬೃಹದಾಕಾರದ ಬೆಳ್ಗೊಡೆಯು ಯಾವ ರಾಜನೂ ಹೊಂದಿರಲಿಲ್ಲ. ಏಕೆಂದರೆ ಆತನಲ್ಲವೆ ವಿಶ್ವಸಾಮ್ರಾಟ (ಪೃಥ್ವೀಪತಿ). ಆತನು ಅಜಿತನು, ಬಲಾಧಿಕನು. ಆತನ ಅನುಗ್ರಹವನ್ನು ಉಳಿದ ರಾಜರು ಬಯಸುತ್ತಿದ್ದರು. ಅಂತಹ ವಿಶ್ವವಿಜೇತನಾದ ಕೀರ್ತಿಗೌರವಗಳಿಗೆ ಪಾತ್ರನಾದ ದಶರಥನಿಗೆ ಇದ್ದ ಒಂದೇ ಒಂದು ಆಲೋಚನೆಯೆಂದರೆ—ಈ ಪೃಥ್ವಿಯಲ್ಲಿ ಇನ್ನೂ ಜಯಿಸದೆ ಇರುವ ಯಾವುದಾದರೂ ರಾಜ್ಯವು ಇದೆಯೋ ಎಂದು. ಅವನು ಈ ಪೃಥ್ವೀವಲಯದಲ್ಲಿ ಜಯಿಸದೆ ಉಳಿದುದು ಯಾವುದೂ ಇರಲಿಲ್ಲ. ಅವನಲ್ಲವೆ ಏಕಚಕ್ರಾಧಿಪತಿ.

ಅನ್ವಯ :—ಮಂಡಲನಾಭಿತಾಂ ಚ ಉಪಗತೋಽಪಿ ಅಸುಂದಿತಾನ್ಯಸಿತಾತಪವಾರಣಃ ಅನಲಸೋಮಸಮದ್ಯುತಿಃ ಸಶ್ರಿಯಂ ರಂಧ್ರಚಲಾಮ್ ಅಪೇಕ್ಷ್ಯ ಅನಲಸಃ ಅಭೂತ್ ॥

ಮಂಡಲನಾಭಿತಾಂ = ಕೇಂದ್ರಬಿಂದು—ಮಂಡಲ=ರಾಜಮಂಡಲ (ರಾಜಾಮಂಡಲಾಧೀಶ) ಬಲಾಧಿಕಂ = ದಶರಥಚಕ್ರವರ್ತಿ—ಸಿತಾತಪವಾರಣಂ=ಶ್ವೇತಚ್ಛತ್ರಂ ಯಸ್ಯಸಃ—ಸಮೇಧ್ಯುತೀ = ತೇಜಃ ಕಾಂತೀಯಸ್ಯ ಸ ತಥೋಕ್ತಃ—ಸ ದಶರಥೋ ಮಂಡಲಸ್ಯ ನಾಭಿತಾಂ ದ್ವಾದಶರಾಜಮಂಡಲಸ್ಯ ಪ್ರಧಾನಮಹೀಪತಿ ॥

**16. ತಮಪಹಾಯ ಕಕುತ್ಸ್ಥಕುಲೋದ್ಭವಂ ।**
**ಪುರುಷಮಾತ್ಮಭವಂ ಚ ಪತಿವ್ರತಾ ॥**
**ನೃಪತಿಮನ್ಯಮಸೇವತದೇವತಾ ।**
**ಸ ಕಮಲಾಕಮಲಾಘವಮರ್ಥಿಷು ॥ ೧೬ ॥**

ಆ ವಸುಮತೀಶನು (ವಸುಂಧರಾಧೀಶನು (ಕಕುಸ್ಥಕುಲೋದ್ಭವನಾದ ದಶರಥನು ತನ್ನಲ್ಲಿ ಬೇಡುವವರಿಗೆ, ಬೇಕೆಂದು ಕೇಳುವವರಿಗೆ ಮೊಗತಿರುಗಿಸದ ಮಹಾದಾನಿ (ಬೇಳ್ಪರೊಳು ಮೊಗದಿರುಹದ), ಅಂತಹ ಕೊಡುಗೈದೊರೆ ರವಿಕುಲಸಾರ್ವಭೌಮನಾದ ದಶರಥ ಸಾರ್ವಭೌಮನು ಪೃಥ್ವಿಯ ನಾಲ್ಕು ದಿಗಂತಗಳ (ಎಲ್ಲೆಗಳ) ತನಕ ಪ್ರಚಂಡವಾದ ದಿಗ್ವಿಜಯಯಾತ್ರೆಯನ್ನು ಕೈಕೊಂಡು ಹೇರಳಸಂಪತ್ತನ್ನು ಶೇಖರಿಸಿದನು. ಈ ದಂಡಯಾತ್ರೆಯ ಉದ್ದೇಶವು ದೀನದಲಿತರಾದ ಬಡಬಗ್ಗರಿಗೆ, ಸತ್ಪಾತ್ರರಿಗೆ ದಾನಮಾಡಲು. ಅವನು ತಾನು ತಲೆಯಲ್ಲಿ ಧರಿಸಿದ ರತ್ನಕಿರೀಟವನ್ನು ತೆಗೆದಿರಿಸಿ, ಜಿತಮನಸ್ಕನಾಗಿ.

ತಾಮಸಗುಣವರ್ಜಿತನಾಗಿ ಯಾಗದೀಕ್ಷೆಯನ್ನು ಕೈಕೊಂಡನು. ಶ್ರೇಷ್ಠವಾದ ತಮಸಾ ಮತ್ತು ಸರಯೂ ನದೀತೀರದಲ್ಲಿ ಕನಕಯೂಪಗಳನ್ನು (ಹೇಮಯೂಪಗಳನ್ನು) ನೆಡಿಸಿ ಯಜ್ಞಯಾಗಾದಿ ಪುಣ್ಯಕಾರ್ಯಗಳನ್ನು ಕೈಕೊಂಡು ಯಶೋವಂತನಾಗಿ ಶೋಭಿಸಿದನು. ತನ್ನ ಒಬ್ಬನೇ ಪುರುಷನನ್ನು ಪತಿವ್ರತಾವನಿತೆ ಸೇವಿಸುವಂತೆ ವಸುಂಧರೆಯು ಮತ್ತು ಕಮಲಧೃತೆಯಾದ ಭಾಗ್ಯದೇವತೆಯರು (ಕಮಲಧೃತೆ, ಭಾಗ್ಯದೇವತೆ) ಆ ನೃಪವರನನ್ನು ಸೇವಿಸುತ್ತಿದ್ದರು.

ಪತ್ಯೌವ್ರತಂ ನಿಯಮೋ ಯಸ್ಯಾಃ ಸಾ ಪತಿವ್ರತಾ(ಸತಿವ್ರತಾ)—ಆತ್ಮಭವಂ ಪುರುಷಂ= ವಿಷ್ಣುಂ—ಚಾಪಹಾಯ = ತ್ಯಕ್ತ್ವಾ—ನಾಸೇವತೇತ್ಯರ್ಥಃ—ಆತ್ಮಭವಮ್ = ಆತ್ಮನಃ ಭವಃ ಯಸ್ಯ ತಮ್ ॥

**17. ತಮಲಭಂತ ಪತಿಂ ಪತಿದೇವತಾಃ ।**
**ಶಿಖರಿಣಾಮಿವ ಸಾಗರಮಾಪಗಾಃ ॥**
**ಮಗಧಕೋಸಲಕೇಕಯಶಾಸಿನಾಂ ।**
**ದುಹಿತರೋಽಹಿತರೋಪಿತಮಾರ್ಗಣಮ್ ॥ ೧೭ ॥**

ಮಗಧ, ಕೋಸಲ, ಕೇಕಯ ರಾಜಾಧಿಪರ ಪುತ್ರಿಯರನ್ನು ಆತನು ವಿವಾಹವಾದನು. ಆ ಕನ್ಯೆಯರು ಪತಿಯೇ ದೇವರು, ಪತಿಯೇ ಪರದೈವ (ಇಹ, ಪರದೈವ)ನೆನ್ನುವ ಪತಿವ್ರತೆಯರಾದ ವನಿತೆಯರು. ಪರ್ವತಶಿಖರಗಳಿಂದ ಇಳಿದುಬರುವ ನದಿಗಳು ಸಮುದ್ರ ವನ್ನು ಸೇರುವಂತೆ ಶರಜಿತಾರಾತಿಯನ್ನು ಆ ರಾಜಕನ್ಯೆಯರು ವರಿಸಿ ಸುಖಿಸಿದರು. ಕೋಸಲರಾಜತನಯೆ ಕೌಸಲ್ಯಾದೇವಿ, ಮಗಧರಾಜಕುಮಾರಿ ಸುಮಿತ್ರೆ ಮತ್ತು ಕೇಕಯ ರಾಜಸುತೆ ಕೈಕಾದೇವಿ (ಕೈಕಾ = ಕೋಕಯೀ—ತೌಳವ) ಇವರೇ ಆವನ ಮೂವರು ರಾಣಿಯರು. ಅವನು ವೇಗದಿಂದ ಬಿಡಲ್ಪಡುವ ಮಾರ್ಗಣಗಳಿಂದ ಶತ್ರುಗಳನ್ನು ಮಣಿಸಿದ ನರಕೇಸರಿ. ಅತ್ಯಂತ ವೇಗದಿಂದ ಅವನ ಬಾಣಪರಂಪರೆಗಳು ವೇಗದಿಂದ ಗಿರಿಶಿಖರ ಗಳನ್ನು ದಾಟಿಬರುವ ನದಿತೊರೆಗಳಿಗೆ ಮಿಗಿಲೆನಿಸಿದ್ದುವು. ಆ ಮಹೀಶ್ವರನು ತನ್ನ ಆರಾತಿ ಗಳನ್ನು (ವೈರಿರಾಜರುಗಳನ್ನು) ವೇಗದಿಂದ ಸಂಚರಿಸುವ ಮಾರ್ಗಣಗಳಿಂದ ಗೆದ್ದು ತನ್ನ ಹಿಡಿತದಲ್ಲಿಟ್ಟಿದ್ದನು (ಶರಜಿತಾರಾತಿಯಾದ ಆತನನು).

ಅನ್ವಯ :—ಮಗಧಕೋಸಲಕೇಕಯಶಾಸಿನಾಂ ಪತಿದೇವತಾಃ ದುಹಿತರಃ ಅಹಿತ ರೋಪಿತಮಾರ್ಗಣಂ ತಂ ಶಿಖರಿಣಾಮ್ (ದುಹಿತರಃ) ಆಪಗಾಃ ಸಾಗರಮ್ ಇವ ಪಾತಿಮ್ ಅಲಭನ್ತ ॥

ಆಪಗಾಃ=ನದಿಗಳು—ಪತಿರೇವ ದೇವತಾ ಯಾಸಾಂ ತಾಃ ಪತಿದೇವತಾಃ ಪತಿವ್ರತಾ— ದುಹಿತರಃ=ಪುತ್ರ್ಯಃ—ಶತ್ರುನಿಖಾತಶರಮ್='ಕದಂಬ, ಮಾರ್ಗಣ, ಶರಾಃ' ಇತ್ಯಮರಃ —'ಆಪೇನಾಪ್ಯಂ ಬನ್ಧಿನಾ ವೇಗೇನ ಗಚ್ಛಂತೀ ತ್ಯಾಪಗಾಃ' ಇತಿ ಕ್ಷೀರಸ್ವಾಮಿನಾ—ಪತಿಂ= ಭರ್ತಾರಮ್ ॥

**18. ಪ್ರಿಯತಮಾಭಿರಸೌ ತಿಸೃಭಿರ್ಬಭೌ ।**
**ತಿಸೃಭಿರೇವ ಭುವಂ ಸಹ ಶಕ್ತಿಭಿಃ ॥**

**ಉಪಗತೋ ವಿನಿನೀಷುರಿವ ಪ್ರಜಾ ।**
**ಹರಿಹಯೋಽರಿಹಯೋಗವಿಚಕ್ಷಣಃ ॥ ೧೮ ॥**

ಆ ರಾಜರಾಜನು, ರವಿಕುಲರಾಜಮೌಳಿಯು ಭೂಮಿಗಿಳಿದ ದೇವೇಂದ್ರನಂತೆ ಕಂಗೊಳಿಸುತ್ತ ಇಳೆಯನ್ನು ಆಳುತ್ತಿದ್ದನು. ಅವನ ನೆಚ್ಚಿನ ಪ್ರಿಯತಮೆಯರು ಆ ಮೂವರು ರಾಜಪುತ್ರಿಯರು, ಆತನು ಪ್ರಜಾವತ್ಸಲನು. ಶತ್ರುಗಳನ್ನು ಗೆಲ್ಲುವ ಸಮಸ್ತ ಉಪಾಯಗಳನ್ನು ಬಲ್ಲವನು. ಆತನು ವಿಚಕ್ಷಣನು, ದಕ್ಷನಾದ ರಾಜಕಾರಣ ಯೋಗಮಾರ್ಗ, ಉಪಾಯಗಳನ್ನು, ಸಕಲಸನ್ನಾಹಗಳನ್ನು ಬಲ್ಲ ಮುತ್ಸದ್ದಿ. ಕ್ರಿಯಾ ಶಕ್ತಿಯುಕ್ತಿಸಮನ್ವಿತನು ಪ್ರಭುಶಕ್ತಿ, ಮಂತ್ರಶಕ್ತಿ, ಸಾಹಸಶಕ್ತಿಯೆಂಬ ಮೂರು ರೀತಿಯ ಶಕ್ತಿಗಳಿಂದ (ಶಕ್ತಿತ್ರಯಗಳಿಂದ) (ಶಕ್ತಿತ್ರಯಾನ್ವಿತನು) ರಾರಾಜಿಸುತ್ತ ಸಮಸ್ತ ಮಾನವರನ್ನು ದೈವವೇ ಆಯ್ದು ಕಳುಹಿಸಿರುವ ರಾಜೇಂದ್ರನವನು, ಅವನು ದೇವರಾಜ ನಂತೆ ಪ್ರಭುಶಕ್ತಿ ಹೊಂದಿ ಎಲ್ಲಾ ವಿಧದಿಂದಲೂ ರಾಜನಾಗಿ ರಾಜ್ಯಾಡಳಿತೆಗೆ, ರಾಜ ಪದವಿಗೆ ಭೂಷಣಪ್ರಾಯನಾಗಿದ್ದನು. ತ್ರಿಗುಣಗಳನ್ನು ಪಡೆದ ರಾಜಶ್ರೇಷ್ಠನವನು, ಆರಘೂದ್ವಹನು.

ಅನ್ವಯ :—ಅರಿಹಯೋಗ ವಿಚಕ್ಷಣಃ ಅಸೌ ತಿಸೃಭಿಃ ಪ್ರಿಯತಮಾಭಿಃ ತಿಸೃಭಿಃ ಏವಶಕ್ತಿಭಿಃ ಸಹಪ್ರಜಾಃ ವಿನಿನೀಷುಃ ಭುವಮುಪಗತಃ ಹರಿಹಯಃ ಇವ ಬಭೌ ॥ ಅರಿಹಯೋಗ = ಅರಿನ್‌ಘ್ನಂತಿ ಇತಿ ಅರಿಹಣಃ ಯೋಗಃ ತೇಷು ವಿಚಕ್ಷಣಃ—ಹರಿ = ಹರಿದ್ವರ್ಣದ = ಹರೀಹಯೌ ಯಸ್ಯಸಃ—ವಿನಿನೀಷು = ವಿ + ನಿ = ವಿನೇತುಮ್ + ಇಚ್ಛುಃ—ತೇಷುಯೋಗೇಷೂಪಾಯೇಷು ವಿಚಕ್ಷಣೋದಕ್ಷಃ—"ಯೋಗಃ ಸನ್ನಹ ನೋಪಾಯಧ್ಯಾನ ಸಂಗತಿಯುಕ್ತಿಷು" ಇತ್ಯಮರಃ ॥

**19. ಸ ಕಿಲ ಸಂಯುಗಮೂರ್ಧ್ನಿಸಹಾಯತಾಂ ।**
**ಮಘವತಃ ಪ್ರತಿಪದ್ಯ ಮಹಾರಥಃ ॥**
**ಸ್ವಭುಜವೀರ್ಯಮಗಾಪಯದುಚ್ಛ್ರಿತಂ ।**
**ಸುರವಧೂರವಧೂತಭಯಾಃ ಶರೈಃ ॥ ೧೯ ॥**

ಆ ಪೃಥ್ವೀಶ್ವರನಾದ ಮಹಾರಥನು ಸ್ವಭುಜವೀರ್ಯನು. ಮಘವಂತನೆಂದು ಹೆಸರು ಪಡೆದ ಐರಾವತವನೇರಿ ಸೆಣಸಬಲ್ಲ ಮಹೇಂದ್ರನಿಗೆ ಸಮರಾಂಗಣದಲ್ಲಿ ಸಹಾಯವೆಸಗಿದ ಮಹಾಸಾಹಸಿ. ಅವನು ರಾಕ್ಷಸರ ಬಾಧೆಗೆ ಬಹಳ ಬೆದರಿದ ಸುರವಧುಗಳಿಗೆ (ಉರೆಬೆದರಿದ ಅಮರಿಯರಿಗಾಮಹಾರಥನು) ತನ್ನ ಮಾರ್ಗಣದ ಮೂಲಕ ಅಭಯವನ್ನು, ರಕ್ಷಣೆಯನಿತ್ತ ಮಹಾರಥನು (ರಥಾಗ್ರೇಸರನು) ಅಮರಿಯರು ಅಂತಹ ತ್ರಿಲೋಕವೀರನ ಆತ್ಮಶೌರ್ಯವನ್ನು ಹಾಡಿಪಾಡಿ ನಲಿದರು. ಆ ಮಹಾಭುಜನು ಭಯಮುಕ್ತರಾದ ಅಮರವಧುಗಳ ಮೂಲಕ ಅಮರಲೋಕದಲ್ಲಿ (ನಾಕಲೋಕದಲ್ಲಿ) ತನ್ನ ಆತ್ಮಶೌರ್ಯ, ಸಾಹಸಕೃತ್ಯಗಳನ್ನು ಅವರಿಂದ ಹಾಡಿಸಿದನು.

ಮಹಾರಥಃ = ಸ ದಶರಥಃ—ಸಂಯುಗಮೂರ್ಧ್ನಿ = ರಣಾಂಗಣೇ—ಸಹಾಯತಾಂ ಪ್ರತಿಪದ್ಯ=ಪ್ರಾಪ್ಯ—ಸಂಯುಗಮೂರ್ಧ್ನಿ=ರಣಶಿರಸಿ=ರಣರಂಗದ ಮುಂಚೂಣಿಯಲ್ಲಿ.

20. ಕ್ರತುಷು ತೇನ ವಿಸರ್ಜಿತಮೌಲಿನಾ ।
ಭುಜಸಮಾಹೃತದಿಗ್ವಸುನಾ ಕೃತಾ ॥
ಕನಕಯೂಪಸಮುಚ್ಛ್ರಯಶೋಭಿನಾ ।
ವಿತಮಸಾ ತಮಸಾ ಸರಯೂತಟಾ ॥ ೨೦ ॥

ಆ ಮಹಾನ್ ಚಕ್ರವರ್ತಿಯು (ಧೀಮಂತಪುರುಷನು) ತನ್ನ ಭುಜಬಲಸಾಮರ್ಥ್ಯ ದಿಂದ ದಿಕ್ಕುದಿಕ್ಕಿನ ಸಿರಿಯನ್ನು ಅಯೋಧ್ಯಾನಗರಿಯಲ್ಲಿ ಒಟ್ಟೈಸಿದನು. ಆ ಬಳಿಕ ಯಜ್ಞ ಯಾಗಾದಿಗಳನ್ನು ಮಾಡಲು ಮುಂದಳೆದು ರತ್ನಖಚಿತವಾದ ಕಿರೀಟವನ್ನು ತೆಗೆದಿರಿಸಿ ಅಜಿನವನ್ನು ಧರಿಸಿ (ಜಿಂಕೆಯ ಚರ್ಮವನ್ನು = ಕೃಷ್ಣಾಜಿನವನ್ನು) ವ್ರತಸ್ಥನಾದನು. ಅಯೋಧ್ಯೆಯ ಬಳಿಯಲ್ಲಿ ಹರಿಯುತ್ತಿರುವ ಪಾವನನದಿಗಳಾದ ತಮಸಾ ಮತ್ತು ಸರಯೂ ನದಿಗಳ ತಟದಲ್ಲಿ ಕನಕಯೂಪಗಳನ್ನು ನೆಡಿಸಿ ಯಜ್ಞಸಿದ್ಧತೆಯನ್ನು ಮಾಡಿಸಿದನು.

ಅನ್ವಯ :—ಕ್ರತುಷುವಿಸರ್ಜಿತ ಮೌಲಿನಾ ಭುಜಸಮಾಹತದಿಗ್‌ವಸುನಾ ವಿತಮಸಾ ತೇನ ತಮಸಾ ಸರಯೂತಟಾಃ ಕನಕಯೂಪಸಮುಚ್ಛ್ರಯ ಶೋಭಿನಃ ಕೃತಾಃ ॥

'ಮೌಲಿಃ, ಕಿರೀಟೇ, ಧಮ್ಮಿಲ್ಲೇ' ಇತಿವಿಶ್ವಃ—ಭುಜಾರ್ಜಿತದಿಗಂತಸಂಪದಾ— ಸದ್ವಿನಿಯೋಗಕಾರಿತ್ವಂ ಚಸೂಚ್ಯತೇ — ಕನಕಯೂಪಾನಾಂ — 'ಹೇಮಯೂಪಸ್ತು ಶೋಭಿತಃ' ಇತಿಯಾದವ ॥

21. ಅಜಿನದಂಡಭೃತಂ ಕುಶಮೇಖಲಾಂ ।
ಯತಗಿರಂ ಮೃಗಶೃಂಗಪರಿಗ್ರಹಾಮ್ ॥
ಅಧಿವಸಂಸ್ತನು ಮಧ್ವರದೀಕ್ಷಿತಾಂ ।
ಅಸಮಭಾಸಮಭಾಸಯದೀಶ್ವರಃ ॥ ೨೧ ॥

ಇದೀಗ ದಶರಥಮಹಾಭಾಗನು ಯಜ್ಞದೀಕ್ಷಿತನಾದನು. ಅಷ್ಟಮೂರ್ತಿಯಾದ ಜಗದೀಶ್ವರನಾದ ಶಿವನನ್ನು ನಾಂದೀಮುಹೂರ್ತದಲ್ಲಿ ಪ್ರಾರ್ಥಿಸಿ ಆಹ್ವಾನಿಸಿದನು. ತನ್ನಲ್ಲಿರುವಂತೆ ತನ್ನನ್ನು ಮುನ್ನಡೆಸುವಂತೆ ಪ್ರಾರ್ಥಿಸಿದನು. ಇದರಿಂದ ಸಂಪ್ರೀತನಾದ ಮಹೇಶ್ವರನು ಪ್ರಸನ್ನನಾಗಿ ಅವನ ಇಚ್ಛೆಯನ್ನು ಅನುಗ್ರಹಿಸಿದನು. ಅವನು ಅಧ್ವರ ದೀಕ್ಷಿತನಾದುದರಿಂದ ಕೃಷ್ಣಾಜಿನವನ್ನು ತೊಟ್ಟು ಕೈಯಲ್ಲಿ ಉದುಂಬರದ ದಂಡವನ್ನು ಹಿಡಿದುಕೊಂಡನು, ಜಿಂಕೆಯ ಕೊಂಬನ್ನು ತನುವಿನಲ್ಲಿ ಧರಿಸಿಕೊಂಡನು (ಎರಳೆ ಕೊಂಬಾಂತವನು). ಮೌನವನ್ನು ತಳೆದು (ಮೋನವಿರುವವನು) ಅಂತರ್ಮುಖಿ ಯಾದನು. ಕುಶದ ಮೌಂಜಿಯನ್ನು (ಶರಮೌಂಜಿಯಾಂತವನು) ಆಂತು ಜಗದೀಶ್ವರನನ್ನು ತನ್ನಲ್ಲಿ ನೆರೆಗೊಳಿಸಿ ತನ್ನನ್ನು ತಾನು ಬೆಳಗಿಸಿಕೊಂಡು ಅಧ್ವರದೀಕ್ಷಿತನಾಗಿ ಯಜಮಾನ ನೆನಿಸಿದನು.

ಮೃಗಶೃಂಗಂ ಪರಿಗ್ರಹಃ ಯಸ್ಯಾತಾಮ್ (ತನುಮ್)—ಔದುಂಬರಂದೀಕ್ಷಿತದಂಡಂ ಯಜಮಾನಾಯ ಪ್ರಯಚ್ಛತಿ'' ಇತಿ ವಚನಾತ್—ಕುಶಮಯೀ, ಮೇಖಲಾಯ ಸ್ಯಾಸ್ತಾಂ ಕುಶಮೇ ಖಲಾಮ್—ಮೃಗಶೃಂಗಪರಿಗ್ರಹಃ—ಅಧ್ವರದೀಕ್ಷಿತಾಮ್ ॥

**22.** **ಅವಭೃತಪ್ರಯತೋ ನಿಯತೇಂದ್ರಿಯಃ ।**
**ಸುರಸಮಾಜ ಸಮಾಕ್ರಮಣೋಚಿತಃ ॥**
**ನಮಯತಿಸ್ಮ ಸ ಕೇವಲ ಮುನ್ನತಂ ।**
**ವನಮುಚೇ ನಮುಚೇರರಯೇಶಿರಃ** ॥ ೨೨ ॥

ಆ ಪರಿಶುದ್ಧಾಂಗನು ಅವಭೃತಸ್ನಾನದ ಶುದ್ಧಿಯನಂತರ ದೇವತೆಗಳಿಗೆ ಸಮಾನನಾಗಿ ಕಾಂತಿಯಿಂದ ಕಂಗೊಳಿಸುತ್ತ ಸುರಸಮಾಜದಲ್ಲಿರಲು ಅರ್ಹತೆಯನ್ನು ಪಡೆದು ಯೋಗ್ಯನೆನಿಸಿದನು (ಸುರಸಭಾದಿಷ್ಠಾನಕರ್ಹತೆಯು ಪಡೆದವನು). ಅವನು ಸಾವಧಾನ್ಯನೇ, ಜಿತೇಂದ್ರಿಯನು. ದೀರ್ಘದೇಹಿಯಾದ ಮಹಾಕಾಯನಾದ ಆ ಕೋಸಲಾಧೀಶನು ನಮುಚಿಯ ವೈರಿಯಾದ ಮಹೇಂದ್ರನಿಗೆ (ಪಾಕಶಾಸನ, ವೃತ್ರಾರಿ) ಮಾತ್ರ ತಲೆಬಾಗಿ ವಂದಿಸುವ ಮಹಾನುಭಾವನು. ಇತರ ಚಿಲ್ಲರೆದೈವಗಳನ್ನು ಲೆಕ್ಕಿಸುವವನಲ್ಲ. ದೇವಾದಿ ದೇವತೆಗಳ ಒಡೆಯನಾದ ದೇವೇಂದ್ರನು ಭಾರತಧರಾಮಂಡಲಕ್ಕೆ ಸಕಾಲದಲ್ಲಿ ಮಳೆ ಸುರಿಸಿ ಧನಧಾನ್ಯ ಸಂಪತ್ತನ್ನು ಕರುಣಿಸುವನು ಅನವರತ,

ಅವಭೃತೇನ ಪ್ರಯತೋ ನಿಯತೇಂದ್ರಿಯ ಸುರಸಮಾಜ ಸಮಾಕ್ರಮಣೋಚಿತೋ= ದೇವಸಭಾಧಿಷ್ಠಾನಾರ್ಹಃ—'ಜಲಂ, ನೀರಂ, ವನಂ, ಸತ್ವಮ್' ಇತಿ ಶಾಶ್ವತಃ ॥

**23.** **ಅಸಕೃದೇಕರಥೇನ ತರಸ್ವಿನಾ ।**
**ಹರಿಹಯಾಗ್ರಸರೇಣಧನುರ್ಭೃತಾ ॥**
**ದಿನಕರಾಭಿಮುಖಾರಣರೇಣವೋ ।**
**ರುರುಧಿರೇ ರುಧಿರೇಣ ಸುರದ್ವಿಷಾಮ್** ॥ ೨೩ ॥

ಆ ಜಗದೇಕರಥನು ತನ್ನ ಬೃಹತ್‌ರಥದಲ್ಲಿ ಯುದ್ಧಕಾಂಕ್ಷಿತನಾಗಿ ಕುಳಿತು ಮೂರು ಲೋಕಗಳನ್ನು ಒಂದು ಕೈತೋಡನ್ನು (ತೊರೆಯನ್ನು, ಕಾಲುವೆಯನ್ನು) ದಾಟುವಂತೆ ದಾಟಿದನು. ಏಕರಥನಾದ, ಜಗದೇಕಧನುರ್ಧರನಾದ ದಶರಥಚಕ್ರೇಶ್ವರನು ತನ್ನ ಪ್ರತಾಪಾಗ್ನಿಯನ್ನು ತ್ರಿಲೋಕಗಳಲ್ಲಿ ಪ್ರದರ್ಶಿಸುತ್ತಾ ಸಾಕ್ಷಾತ್ ಮಹೇಂದ್ರನಿಗೆ ಯುದ್ಧದಲ್ಲಿ ಸಹಾಯವೆಸಗುತ್ತಾ ಹರಿಹಯಾಗ್ರೇಸರನಾಗಿ ಮುಂಚೂಣಿಯಲ್ಲಿ ನಿಂತನು. ಸುರವೈರಿಗಳಾದ ದೈತ್ಯರೊಡನೆ ಹೋರಾಡುತ್ತ, ಅಕ್ಷಯಬಾಣಗಳನ್ನೆಸೆದು ಅವರ ಎದೆ ನೆತ್ತರಿನಿಂದ ಅಭಿಷೇಕಮಾಡಿ, ರಣಭೂಮಿಯ ರಜವನ್ನು (ಧೂಳನ್ನು) ಶಾಂತಗೊಳಿಸಿದ ಜಗಜಟ್ಟಿಯವನು. ಸೂರ್ಯಮಂಡಲದವರೆಗೆ ಹಬ್ಬಿದ್ದ ಯುದ್ಧದ ಕೆಂಧೂಳು ದಾನವ ರಕ್ತದಿಂದ, ರುಧಿರಜಲದಿಂದ ತಗ್ಗಿತು (ಸುರಶತ್ರುಜನರೆದೆಯರುಧಿರಜಲದಿಂದೆ) ಇದರಿಂದ ಸೂರ್ಯನ ಪ್ರಕಾಶವು ಮುನ್ನಿನಂತೆಪ್ರಜ್ವಲಿಸುತ್ತಾ ಲೋಕಾಲೋಕಗಳನ್ನು ಬೆಳಗಿಸಿತು. ಅಸುರರ ಹುಟ್ಟಡಗಿ ಸುರರು ನಲಿದು "ಘೇ" ಎಂದರು. ಮೂರು ಲೋಕಗಳಲ್ಲಿ ಮಹಾಯುದ್ಧಪಡಗಿ ಚಿರಶಾಂತಿ ನೆಲಸಿತು.

ಸುರದ್ವಿಷಾಂ = ದೈತ್ಯಾನಾಂ—ರುಧಿರೇಣರುರುಧಿರೇ = ನಿವಾರಿತಾಃ—ಏಕರಥೇನ = ಅದ್ವಿತೀಯರಥೇನ ॥

**24. ಅಥ ಸಮಾವವೃತೇ ಕುಸುಮೈರ್ನವೈಃ ।**
**ತಮಿವ ಸೇವಿತುಮೇಕನರಾಧಿಪಮ್ ॥**
**ಯಮಕುಬೇರ ಜಲೇಶ್ವರವಜ್ರಿಣಾಂ ।**
**ಸಮಧುರಂ ಮಧುರಂಚಿತವಿಕ್ರಮಮ್** ॥ ೨೪ ॥

ತನ್ನ ಅಸಾಮಾನ್ಯವಾದ ಶೌರ್ಯಸಾಹಸದಿಂದ ಆ ಸಾಹಸಿಯು ವಿಶ್ವವನ್ನು ಜಯಿಸಿ ವಿಶ್ವಸಾರ್ವಭೌಮನಾದನು. ಅವನ ಸೇವೆಗೆ ಸದಾ ಸಿದ್ಧನಾಗಿ ಭುವನಾನಂದಮಯ, ನಯನಾನಂದಕನಾದ ಋತುರಾಜನಾದ, ಮನ್ಮಥನ ಪ್ರಿಯಮಿತ್ರನಾದ ಮಧುವಸಂತನು ಅವನನ್ನು ಓಲೈಸಲು ತುಂಬುಹೃದಯದಿಂದ ಬಂದನು. ತನ್ನ ಕುಸುಮಜಾಲವನ್ನು ಅರ್ಪಿಸಿ, ಉತ್ಸವವನ್ನು ಆಚರಿಸಿ, ತನ್ನ ಕೈಂಕರ್ಯವನ್ನು ತೋರಿಸಿ, ಗೌರವ ಆದರಗಳನ್ನು ತೋರಿಸುವ ಸಲುವಾಗಿ ಆಗಮಿಸಿದನೆಂದು. ಜಗದೇಕರಥನಾಗಿ ವಿಶ್ವವೆಲ್ಲವನ್ನು ಜಯಿಸಿರುವ ಮಾನವಾಧೀಶ್ವರನ ಸೇವೆಗೈಯಲು ಸಿದ್ಧನಾಗಿ ಆ ಮಹೀಪತಿಯು ಧರ್ಮರಾಜನಾದ ಯಮ, ಧನಾಧಿಪನಾದ ಕುಬೇರ, ಜಲೇಶ್ವರನಾದ ವರುಣ, ಅಮರೇಶ್ವರನಾದ ಇಂದ್ರ(ವಜ್ರಿಗ)ರಿಗೆ ಸಮನಾಗಿ ಜಗತ್ತಿನ ಭಾರವನ್ನು ಹೊತ್ತಿರುವ ಮಹಾಸಮೇಶ್ವನನು. ಆ ಪೂಜಿತ ಪರಾಕ್ರಮನನ್ನು ಸಂತಸಪಡಿಸಲು (ಖುಷಿಪಡಿಸಲು) ಋತುರಾಜನಾದ ವಸಂತನು ಹೂನಗೆಯ ಪನ್ನೀರನ್ನು ಚೆಲ್ಲುತ್ತಾ ಪ್ರಕೃತಿಯಲ್ಲಿ ಮೂಡಿಬಂದನು ಅಂತಿರುವ ಹೊಸ ಹೂಗಳ ಚೈತ್ರಋತುವು ಆಗಮಿಸಿತು. ಪುಷ್ಪರಥನು, ಪುಷ್ಪಕೋಟಿಯನ್ನು ಸೃಜಿಸಿ ಧರೆಯನ್ನು ಪುಲಕಿಸಿದನು. ಗುರುಗಳನ್ನು, ರಾಜರನ್ನು, ದೇವರನ್ನು ಪೂಜಿಸಲು ಸುಗಂಧ ಕಂಪು ಬೀರುವ ಪುಷ್ಪವಲ್ಲದೆ ಪರಮಾದರ್ಶವಾದುದು ಬೇರಾವುದಿದೆ ಜಗದಲ್ಲಿ !

ಅನ್ವಯ :—ಅಥ ಕುಬೇರಜಲೇಶ್ವರ ವಜ್ರಿಣಾಂ ಸಮಧುರಂ ಅಂಚಿತ ವಿಕ್ರಮಮ್ ಏಕನರಾಧಿಪಂ ತಂ ಸೇವಿತುಮ್ ಇವ ಮಧುಃ ನವೈಃ ಕುಸುಮೈಃ ಸಮಾವವೃತೇ ॥

ಜಲೇಶ್ವರ = ವರುಣ = ಜಲಾಧಿಪ—ಸಮಧುರಮ್ = ಸಮಾ ಧೂಃ ಯಸ್ಯ ಸಃ ಸಮಧುರಃ ತಮ್—ಸುವದನಾಸವ = ಶೋಭನಂ ವದನಂ ಯಸ್ಯಾಃ ಸಾ ತಸ್ಯಾ ವದನಸ್ಯ ಆ ಸವೇನ ಸಂಭೃತಃ—ಅಂಚಿತ ವಿಕ್ರಮಮ್ = ಪೂಜಿತ ಪರಾಕ್ರಮನು. ಅಂಚಿತಃ ವಿಕ್ರಮಃ ಯಸ್ಯ ಸಃ—ಮಧು = ವಸಂತಃ—ಸಮಾವವೃತೇ = ಸಮಾಗತಃ ॥

**25. ಜಿಗಮಿಷುರ್ಧನದಾಧ್ಯುಷಿತಾಂ ದಿಶಂ ।**
**ರಥಯುಜಾ ಪರಿವರ್ತಿತ ವಾಹನಃ ॥**
**ದಿನಮುಖಾನಿ ರವಿರ್ಹಿಮನಿಗ್ರಹೈಃ ।**
**ವಿಮಲಯನ್ಮಲಯಂ ನಗಮತ್ಯಜತ್** ॥ ೨೫ ॥

ರವಿಯು ಧನಾಧಿಪತಿಯಾದ ಕುಬೇರನು ನೆಲಸಿರುವ ಉತ್ತರದಿಕ್ಕಿಗೆ ತೆರಳಬೇಕೆಂದು ನಿಶ್ಚಯಿಸಿ (ಉಜ್ಜುಗಿಸಿ) ಅಂಬರವನ್ನು ಆಡರಿದನು. ಇದನ್ನರಿತ ಅವನ ಸಾರಥಿಯಾದ ಅರುಣನು ಸಪ್ತಾಶ್ವಗಳಿಂದ ಅಣಿಗೊಳಿಸಿರುವ ಸೂರ್ಯರಥವನ್ನು ಉತ್ತರದ ದಿಶೆಗೆ ತಿರುಗಿಸಿದನು. ಆಗ ಪ್ರಾತಃಕಾಲ. ಸೂರ್ಯೋದಯವಾದ ಕೂಡಲೇ ಜಗವನಾವರಿಸಿದ

ಹಿಮವು ಕರಗಿ ಬೆಳಕು ನಾಲ್ಕು ದಿಕ್ಕುಗಳಲ್ಲೂ ಪ್ರಕಾಶಿಸಿತು. ಸುಪ್ರಭಾತಕಾಲ, ಬೆಳಗಿತು. ಅಂದು ಬಾನು ಅಂಬರದಲ್ಲಿ ಹೊಳೆ ಹೊಳೆದು ಬೆಳಗುತ್ತ ಒಡ್ಡೋಲಗವನಿತ್ತನು. ರವಿಯು ಮಲಯಾಚಲವನ್ನು ದಾಟಿ ಉತ್ತರಾಪಥದತ್ತ ಉಪಕ್ರಮಿಸತೊಡಗಿದನು (ತ್ಯಜಿಸಿದನು ತಾನಂದು ಮಲಯವನು ಬಾನು).

ಧನಪಾಧ್ಯುಷಿತಾಂ = ಕುಬೇರಾಧಿಷ್ಠಿತಾಂ—ರಥಯುಜಾ = ಸಾರಥಿನಾರುಣೇನ — ಮಲಯನಗಂ = ಮಲಯಾಚಲಂ ॥

**26.** **ಕುಸುಮಜನ್ಮ ತತೋ ನವಪಲ್ಲವಾಃ ।**
**ತದನುಷಟ್ಪದ ಕೋಕಿಲಕೂಜಿತಮ್ ॥**
**ಇತಿ ಯಥಾಕ್ರಮ ಮಾವಿರಭೂನ್ಮಧುಃ ।**
**ದ್ರುಮವತೀಮವತೀರ್ಯ ವನಸ್ಥಲೀಮ್** ॥ ೨೬ ॥

ಅಂದಿನ ಚೈತ್ರಾಗಮದಲ್ಲಿ (ಮಧುಮಾಸದಲ್ಲಿ), ಮೊದಲು ಹೂವು ಅರಳಿದುವು. ಬಳಿಕ ಎಲೆಗಳು ಚಿಗುರಿದುವು (ನವಪಲ್ಲವಗಳು), ಅನಂತರ ತುಂಬಿಗಳು ಝೇಂಕರಿಸಿದುವು (ದನಿಗೈದುದು ಅಳಿಮೊರೆದು). ತುಂಬಿಗಳ ನಾದವನ್ನು ಕೇಳಿ ತಾವೂ ಸಂತಸಗೊಂಡು ಮಾಮರದಲ್ಲಿದ್ದ ಕೋಗಿಲೆಗಳು (ಶುಕ, ಪಿಕ) (ಶುಕ = ಗಿಳಿ, ಗಿಣಿ) 'ಕುಹೂಕುಹೂ' ಎಂದು ಕೂಗಿದುವು. ಕೋಗಿಲೆಗಳ ಕೂಜಿತರವ ಪುಂಖಾನುಪುಂಖವಾಗಿ ಆ ವನಭೂಮಿ ಯಲ್ಲಿ ರಣರಣಿಸಿತು. ಈ ತೆರನಾದ ರೂಪದಲ್ಲಿ ಮಧುವಸಂತನು ಪ್ರಕೃತಿಯಲ್ಲಿ ಅವತರಿಸಿ (ಆವಿರ್ಭವಿಸಿ) ಜಗತ್ತಿಗೆ ಆಹ್ಲಾದಕರವಾದ, ಮೋಹನವಾದ ತನ್ನ ಅನಂತಚೇಷ್ಟೆಗಳನ್ನು ತೋರಿದನು (ಮಧುವಿನ ವರ್ತನೆ), (ತೋರಿದನು ಮಾಧವನು ಮೈತಳೆದು) ಚೈತ್ರ ರಾಜನು ವನಭೂಮಿಯಲ್ಲಿ ಬೆಳೆದಿರುವ ಕಾನನವೃಕ್ಷಗಳ ಮೂಲಕ ತನ್ನನ್ನು ವಿಶೇಷವಾಗಿ ಪ್ರಕಟಿಸಿಕೊಂಡನು. ಕಾನನಭೂಮಿ ಕುಸುಮಮಯವಾಯಿತು. ಎಲ್ಲೆಲ್ಲೂ ಆಹ್ಲಾದಕರ ವಾದ ಹೂಗಳ ಸುವಾಸನೆ (ಸೌರಭ, ಸುಗಂಧ) (ಕಮ್ಮಣ—ತೌಳವ) ವನಭೂಮಿಯನ್ನು ಆವರಿಸಿತು. ಭೂಮಿ ಸ್ವರ್ಗವಾಯಿತು !

ಕುಸುಮೇತಿ ಆದೌ ಕುಸುಮಜನ್ಮ—ತತೋ ನವಪಲ್ಲವಾ—ಕೋಕಿಲಾನಾಂಚ ಕೂಜಿತಂ—ಮಧುರ್ವಸಂತ ಆವಿರಭೂತ್—"ಕುಸುಮ ಜನ್ಮ ತಸ್ಯತೀತಿ ಕುಸುಮಜನ್ಮ ತತಃ" ಇತಿ ವಲ್ಲಭ ॥

**27.** **ನಯಗುಣೋಪಚಿತಾಮಿವ ಭೂಪತೇಃ ।**
**ಸದುಪಕಾರ ಫಲಾಂಶ್ರಿಯ ಮರ್ಥಿನಃ ॥**
**ಅಭಿಯಯುಃ ಸರಸೋ ಮಧುಸಂಭೃತಾಂ ।**
**ಕಮಲಿನೀ ಮಲಿನೀರಪತತ್ರಿಣಃ** ॥ ೨೭ ॥

ಇದೀಗ ವಸಂತಋತುವಿನ ಆಗಮನಕಾಲ. ವಸಂತಲಕ್ಷ್ಮಿಯು ಆಗಮಿಸುತ್ತಿರಲು ಶಿಶಿರ ಋತುವು ನಿರ್ಗಮಿಸುತ್ತಿದೆ. ಮಾಗಿಯು ಮುಗಿಯಿತು. ಸತ್ಕಾರ್ಯಗಳಿಗೆಂದು ನಯಗುಣ ವಿಧಾನಗಳಿಂದ ಸಂಪಾದಿತವಾದ ಧನವನ್ನು ಯಾಚಕರು ಬಂದು ಕೊಡುಗೈಯ ದೊರೆ

ಯನ್ನು ಅಡರಿಕೊಳ್ಳುತ್ತಿರುವಂತೆ ಭೃಂಗಗಳೂ ನೀರುಹಕ್ಕಿಗಳೂ ತಿಳಿಗೊಳದಲ್ಲಿ ಅರಳಿ ನಿಂದಿರುವ ತಾವರೆ ಹೂಗಳನ್ನು ತಾವು ಒಲಿದು ಮುತ್ತಿದುವು (ಮುತ್ತಿದವು ತಾವೊಲಿದು ಚೈತ್ರಪಾಲಿತೆಯ). ಮಧುಮಾಸದ ಸಂಭ್ರಮದಲ್ಲಿ, ಆ ಋತುವಿನ ಸಂಬಂಧದಿಂದ ಆ ತಿಳಿನೀರಿನ ಕಾಸಾರವು (ತಿಳಿನೀರಿನ ಕೊಳವು) ಅರಳಿದ ಕಮಲದ ಹೂಗಳಿಂದ ಪರಿಮಳಿತ ವಾಗಿ ಮಂದವಾಗಿ ಬೀಸುತ್ತಿರುವ ಮಂದಾನಿಲದಿಂದ ಪಕ್ಷಿ, ಹಂಸಾದಿಪಕ್ಷಿ ನಿಕರವನ್ನೂ, ತುಂಬಿಯ ದಂಡನ್ನೂ ಆಕರ್ಷಿಸುತ್ತಿತ್ತು.

ನಯಗುಣೋಪಚಿತಾಮಿವ = ನಯಃ ಏವಗುಣಃ ನಯಗುಣಃ ಅಥವಾ ನಯೇನ ಗುಣೈಶ್ಚ ಶೌರ್ಯಾದಿಭಿಃ ಉಪಚಿತಾಮ್—ನಯೇತಿ—ನಯೋ ನೀತಿರೇವಗುಣಃ—ತೇನ — ಅಥವಾ ನಯೇನಗುಣೈಃ ಶೌರ್ಯಾದಿಭಿಶ್ಚೋಪಚಿತಾಮ್—ಮಧುನಾ = ವಸಂತೇನ — ಸಂಭೃತಾಂ = ಸಮ್ಯಕ್‌ಪುಷ್ಟಾಂ — ಅಲಯೋ = ಭೃಂಗಾನ್ — ಹಂಸಾದಯ ಜಲಪತತ್ರಿಣೋ ॥

**28. ಕುಸುಮಮೇವ ನ ಕೇವಲಮಾರ್ತವಂ।**
**ನವಮಶೋಕತರೋಃ ಸ್ಮರದೀಪನಮ್ ॥**
**ಕಿಸಲಯ ಪ್ರಸವೋಽಪಿ ವಿಲಾಸಿನಾಂ।**
**ಮದಯಿತಾ ದಯಿತಾಶ್ರವಣಾರ್ಪಿತಃ ॥ ೨೮ ॥**

ಋತುರಾಜನ ಆಗಮನದಿಂದ ಸಸ್ಯಕೋಟಿಗಳಲ್ಲಿ ಋತುಮತಿಯರಾದ ಸ್ತ್ರೀಯರಂತೆ ಸಂಭವದ ಅಭಿಲಾಷೆಯು ಪ್ರಚೋದಿತವಾಯಿತು. ಅವರಲ್ಲಿ ಆರ್ತವದ ಸುಲಲಿತವಾದ ಸಲ್ಲಕ್ಷಣಗಳು ಉದಯಿಸಿದುವು (ಆರ್ತವನವಾಶೋಕತರು ಕುಸುಮಮಾತ್ರದೊಳು) ಋತುರೇಣು ಕಾಣಿಸಿತು. ಮಾವು ಮತ್ತು ಅಶೋಕತರುಗಳು ವಸಂತಮಾಸದಲ್ಲಿ ಕುಸುಮಿಸಿದುವು. ನವಪಲ್ಲವಗಳು (ಚಿಗುರುಗಳು) ಕಾಣಿಸಿದುವು. ಆ ಮರಗಳಲ್ಲಿ ಸ್ಮರನ ಅಥವಾ ಮನ್ಮಥನ ದೀಪನ, ಉದ್ದೀಪನ ಚಟುವಟಿಕೆಗಳು ಕಾಣಿಸಿಕೊಂಡುವೆಂದ ಬಳಿಕ ವಿಲಾಸಿನಿಯರಾದ ಉತ್ತಮಜಾತಿಯ ಹೆಣ್ಣುಗಳಲ್ಲಿ (ಮತ್ತಕಾಶಿನಿಯರಲ್ಲಿ) ಮನ್ಮಥಚೇಷ್ಟೆಗಳು ತಲೆದೋರುವುದು ಸ್ವಾಭಾವಿಕವಲ್ಲವೆ. ಅದೂ ಆ ಮದಿರಾಕ್ಷಿಯರು ಕುಸುಮ ಮಾದಕ ವಸ್ತುಗಳಾದ ದ್ರಾಕ್ಷಾರಸ(ದ್ರಾಕ್ಷಾಸವ)ದಿಂದ ಉನ್ಮತ್ತರಾಗಿ, ಆ ವಿಲಾಸಿನಿಯರು ತಮ್ಮ ಕಿವಿಗಳಲ್ಲಿ ಹೂವಿನಿಂದ ರಚಿತವಾದ ಕರ್ಣಾಭರಣಗಳನ್ನು ಧರಿಸಿ ತಮ್ಮ ಇನಿಯರನ್ನು, ಅಥವಾ ರಸಿಕರಾದ ತಮ್ಮ ಪ್ರಿಯತಮರನ್ನು ಆಕರ್ಷಿಸಿ ಅವರ ಚಿತ್ತಕ್ಷೋಭೆಗೊಳಿಸು ತ್ತಿದ್ದರು. ಆ ಮೋಹನೆಯರು ಮೋಹಗೊಳಿಸಿ ಮುಂದ್ದುಮಾಡಿ ಮನ್ಮಥಲೀಲೆಗೆ ನಾಂದಿ ಹಾಡುತ್ತಿದ್ದರು (ಮನ್ಮಥೋದ್ದೀಪನ).

ಋತುರಸ್ಯಪ್ರಾಪ್ತ ಆರ್ತವಮ್—ಸ್ಮರದೀಪನಂ = ಉದ್ದೀಪನಮ್—ಮದಯಿತಾ= ಮದಜನಕೋ—ಕಿಸಲಯಪ್ರಸವೋಽಪಿ = ಪಲ್ಲವಸಂತಾನೋಽಪಿ ॥

**29. ವಿರಚಿತಾ ಮಧುನೋಪವನಶ್ರಿಯಾಂ।**
**ಅಭಿನವಾ ಇವ ಪತ್ರವಿಶೇಷಕಾ ॥**

**ಮಧುಲಿಹಾಂ ಮಧುದಾನವಿಶಾರದಾಃ ।**
**ಕುರಬಕಾ ರವಕಾರಣ ತಾಂ ಯಯುಃ ॥ ೨೯ ॥**

ಮಧುವಸಂತನು ತನ್ನ ಪ್ರಿಯೆಯಾದ ವನಲಕ್ಷ್ಮಿಯ ದೇಹದ ಮೇಲೆ ಪ್ರೇಮದಿಂದ ಪವಪತ್ರವಿರಚನೆಯ ರಚಿಸಿದಂತೆ ಕುರುಬಕದ್ರುಮವು ತಳಿರು, ಪುಷ್ಪಗಳಿಂದ ಮೆರೆಯುತ್ತಾ ತನ್ನನ್ನು ಮೆಚ್ಚಿ ಹೊಗಳುವ, ಗಾನಮಾಡುತ್ತ ಮೊರೆಯುತ್ತಿರುವ (ಮಧುಪಾನ ಶಾಂತತೆಯೊಳು) ತುಂಬಿಗಳ ಬಳಗಕ್ಕೆ ಅವುಗಳ ಹೊಟ್ಟೆ ತಣಿಯುವಷ್ಟು ಮಧುರಸವನ್ನು (ಜೇನನ್ನು, ಮಕರಂದವನ್ನು) ದಾನವೀಯುತ್ತ ಮಹಾದಾನಿಯಂತೆ ಮೆರೆಯುತ್ತಿತ್ತು. ದಾನವೀರರನ್ನು ದಾನಪಡೆಯುವ ಯಾಚಕರು ಹೊಗಳುವುದು ಲೋಕಪದ್ಧತಿ. ಅದರಂತೆಯೇ ಈ ತುಂಬಿಗಳು ಝೇಂಕರಿಸುತ್ತಾ, ಗಾನಸುಧಾರಸದ (ಸಾಮಗಾನದ, ಪಂಚಮವೇದದ) ಅಲೆಗಳನ್ನು ಎಬ್ಬಿಸುತ್ತಿದ್ದುವು, ಸ್ತುತಿಯ ಸಂಸ್ಕಾರವ ನೆಬ್ಬಿಸದುವು ಸ್ತುತಿಪಾಠಕರಂತೆ (ಅತಿಶಯ ಹೊಗಳಿಕೆಯ ಸಂಸ್ಕಾರಕೆ).

ಮಧೂನಾಂ = ಮಕರಂಧಾನಾಂ—ಮಧೂನಿಲೀಢ್ವಾ—ಮಧು ಲಿಹಾಂ = ಮಧು ಪಾನಾಂ ॥

**30. ಸು ವದನಾವದನಾಸವಸಂಭೃತಃ ।**
**ತದನು ವಾದಿಗುಣಃ ಕುಸುಮೋದ್ಗಮಃ ॥**
**ಮಧುಕರೈರಕರೋನ್ಮಧುಲೋಲುಪೈಃ ।**
**ಬಕುಲಮಾಕುಲ ಮಾಯತಪಂಕ್ತಿಭಿಃ ॥ ೩೦ ॥**

ತಮ್ಮ ಕಾಂತೆಯರಲ್ಲಿ ಆಸಕ್ತರಾಗಿ ಅವರ ಮುಖಬಿಂಬವನು ಆಸಕ್ತಿಯಿಂದ ಚುಂಬಿಸುವ ಮೋಹಿಗಳಾದ ಪತಿಯರಂತೆ. ಆಗತಾನೆ ಅರಳಿ ಘಮಘಮಿಸುತ್ತಿರುವ ಮಕರಂಧದಿಂದ ತುಂಬಿರುವ (ಆದರಣೆಯ ಸುರಂಗಂಪಿನ ಎಲರಿಸ ತೊಡುಬೆ ಬಿರಿಬಿರಿದು) ಬಕುಲದ ಹೂಗಳ ಮೇಲೆ ದುಂಬಿಗಳು ಸಾಲುಸಾಲಾಗಿ ಕುಳಿತು ಮಧುಪಾನ ಮಾಡುತ್ತಿದ್ದುವು. ಮಧುಲೋಲುಪರ ಆಯತಪಂಕ್ತಿಭಿ, ಮಧುಪಾನ ಬಯಸಿ ಸಾಲುಸಾಲಾಗಿ ಊಟಕ್ಕೆ (ಭೋಜನಕ್ಕೆ) ಕುಳಿತವರಂತೆ (ಊಟಕ್ಕೆ ಕುಳಿತ ದಿಬ್ಬಣಿಗರ ಸಾಲಿನಂತೆ, ಪಯಣಿಗರ ಸಾಲಂತೆ) ಪರಿಶೋಭಿಸುತ್ತಾ, ತುಂಬಿಗಳ ದಂಡು ಎಸೆದಿತ್ತು. (ಬಂಡುಣಿ ಮದುಂಬಿ ವಿಂಡು ಐತುಂಡು ತುಂಬಿ).

ಸುವದನಾ ವದನಾಸವಸಂಭೃತಃ = ಶೋಭನಂ ವದನಂ ಯಸ್ಯಾಃ ಸಾ ತಸ್ಯಾ ವದನಮ್ ಆಸವೇನ ಸಂಭೃತಃ ॥ ಸುವದನೇತಿ = ಸುವದನಾವದನಾಸವೇನ = ಕಾಂತಾ ಮುಖ ಮದ್ಯೇನ—ತದನುವಾದಿಗುಣಃ = ಕುಸುಮೋದ್ಗಮಃ ಬಕುಲಂ = ಬಕುಲವೃಕ್ಷ ಮಾಕುಲಮಕರೋತ್ ॥

**31. ಉಪಹಿತಂ ಶಿಶಿರಾಪಗಮಶ್ರಿಯಾ ।**
**ಮುಕುಲಜಾಲಮಶೋಭತಕಿಂಶುಕೇ**
**ಪ್ರಣಯಿನೀವ ನಖಕ್ಷತಮಂಡನಂ ।**
**ಪ್ರಮದಯಾ ಮದಯಾಪಿತಲಜ್ಜಯಾ ॥ ೩೧ ॥**

ಇದೀಗ ಶಿಶಿರಋತು ನಿರ್ಗಮಿಸಲು ವಸಂತಲಕ್ಷ್ಮಿಯು (ಋತುವಸಂತವು) ನಲ್ಲಳಂತೆ ಆಗಮಿಸಿರುವಳು. ಏನು ಚೆಲುವನ್ನು ತಾಳಿರುವುದು ಮುತ್ತುಗದ ಮರವು. ವನಲಕ್ಷ್ಮಿಯು (ಬನಲಕುಮಿಯೊಡರಿಸಿದ) ಈ ಚೆಲುವಾದ ಮುತ್ತುಗದ ಗಿಡಗಳ ಮೇಲೆ ಕೆಂಪಾದ ನವಮೊಗ್ಗುಗಳು ಅಂಕುರಿಸುವಂತೆ ಮಾಡಿರುವಳು. ಮದಿರಾಸವದ ಅಮಲೇರಿ ನಾಚಿಕೆಯನ್ನು ತೊರೆದ (ಲಜ್ಜೆಯನ್ನು ತೊರೆದ) ನವಸತಿಯು ತನ್ನ ನಲ್ಲನ ದೇಹದ ಮೇಲೆ ಒತ್ತಿರುವ ಕೆಂಪಾದ ಉಗುರುಗಾಯಗಳಂತೆ, ಈ ಮುತ್ತುಗದ ಮರವು ನಸುಬಿರಿವ ಮೊಗ್ಗುಗಳಿಂದ ಇಡಿಕಿರಿದಿದೆ (ಉಗುರುಗಳ ಕೆಂಗಾಯದಂದದೊಳು) ಇದರಿಂದ ಇಡೀ ಮರವೇ ಕೆಂಪಾಗಿ, ಸೊಂಪಾಗಿ, ಇಂಪಾಗಿ ತೋರುತ್ತ ಶೋಭಿಸುತ್ತಿದೆ.

ಕಿಂಶುಕೇಕಿಂಶುಕ = ಪಲಾಶ—ಮದಯಾಪಿತಲಜ್ಜಯಾ = ಮದೇನಯಾಪಿತಾಲಜ್ಜಾ ಯಸ್ಯಾಃ ಸಾ—ಕಿಂಶುಕೇ = ಕಿಂಶುಕ—ಶಿಶಿರಾಪಗಮಶ್ರಿಯಾ = ಶಿಶಿರಸ್ಯ ಅಪಗಮಃ ತಸ್ಯ ಯಾಶ್ರೀಃ ತಯಾ—ಶಿಶಿರಾಗಮಶ್ರಿಯಾ = ವಸಂತಲಕ್ಷ್ಮ್ಯಾ—ಕಿಂಶುಕೇ=ಪಲಾಶವೃಕ್ಷೇ—'ಪಲಾಶಃ ಕಿಂಶುಕಃ ಪರ್ಣಃ' ಇತ್ಯಮರಃ—ಪ್ರಮದಯಾಪ್ರಣಯಿನೀ=ಪ್ರಿಯತಮ ಉಪಹಿತಂ ॥

32. ವ್ರಣಗುರುಪ್ರಮದಾಧರದುಃಸಹಂ ।
ಜಘನ ನಿರ್ವಿಷಯೀಕೃತ ಮೇಖಲಮ್ ॥
ನಖಲು ತಾವದಶೇಷಮಪೋಹಿತಂ ।
ರವಿರಲಂ ವಿರಲಂ ಕೃತವಾನ್ ಹಿಮಮ್ ॥ ೩೨ ॥

ಪ್ರಮದೆಯರು ತಮ್ಮ ಪತಿಗಳು ಕಠಿಣವಾಗಿ ದಂತಕ್ಷತ ಮಾಡಿರುವ (ಹಲ್ಲುಗಳಿಂದ ಕಡಿದು, ಕಚ್ಚಿ) ಕೆಳತುಟಿಯ ನೋವನ್ನು ತಾಳಲಾರದೆ (ದುಃಸಹವೆನಿಪ) ತಮ್ಮ ಕಟೀ ಭಾಗದಲ್ಲಿ ಶೋಭಾಯಮಾನವಾಗಿ ಶೋಭಿಸುತ್ತಿರುವ ಕಟೀಸೂತ್ರವನ್ನು (ಮೇಖಲೆಯನ್ನು, ಒಡ್ಯಾಣವನ್ನು) ಕೆಳಕ್ಕೆ ನೂಕುವರು.ಆಗ ಆ ನೇವಳದ ಜೊತೆಯಲ್ಲಿ (ಒಕ್ಕನೂಲು (ತೌಳವ) ಅವರ ಸೀರೆಯ ನಿರಿಗೆಯೂ ತುಸು ಜಾರಿ ಕೆಳಕ್ಕೆ ಸರಿಯುವುದು. ಹೀಗೆ ಸರಿಯುವುದು ಸ್ವಾಭಾವಿಕವಷ್ಟೆ. ಆಗ ಅವರು ಒಂದು ರೀತಿಯ ಅರೆನಗ್ನಾವಸ್ಥೆಯಲ್ಲಿರುವರು. ಹಿಮದ ಬಾಧೆಯು ಸೂರ್ಯರಶ್ಮಿಯ ಶಾಖದಿಂದ ಪೂರ್ಣ ತಗ್ಗದೆ ಇರುವುದರಿಂದ ಕೆಳತುಟಿಯ ದಂತಕ್ಷತದ ನೋವು ಕಡಿಮೆಯಾಗದೆ ಹಾಗೆಯೇ ಉಳಿದಿರುವುದು. ಚಳಿಗಾಲದಲ್ಲಿ ಗಾಯಗಳ ನೋವು ಅಧಿಕಗೊಳ್ಳುವುದು ನಿಸರ್ಗದ ನಿಯಮ. ಇದೀಗ ವಸಂತಾಗಮದಲ್ಲಿ ಲೋಕಕ್ಕೆ ಹಿತಕರನಾದ ಭಾಸ್ಕರನು (ಸೂರ್ಯದೇವನು) ಆದಷ್ಟು ಬೇಗ ಹಿಮಬಾಧೆಯನ್ನು ವಿರಳಗೊಳಿಸುವನು. ಹಿಮವು ಅದೃಶ್ಯವಾಗಿ ಕ್ಷೀಣಿಸುತ್ತಿದೆ (ಅಡಗುತ್ತಿದೆ). ಸೂರ್ಯರಶ್ಮಿಯು ಪ್ರೇಮಿಗಳಿಗೆ ಸಹಾಯಕನಾಗಿ, ಅನುಕಂಪ ತಳೆದು ಕ್ರಿಯಾಗಾಮಿಯಾಗಿರುವನು. ಕಾರ್ಯೋನ್ಮುಖ(ಕಾರ್ಯತತ್ಪರ)ನಾಗಿರುವನು. ಆದರೆ ಏಕಿಲನ್ನು,ಹಿಮವನ್ನು ನಿಶ್ಶೇಷಗೊಳಿಸಲು ಮಾತ್ರ ಸಫಲನಾಗಿಲ್ಲ (ತಗ್ಗಿಸುತಲಿನಿಸು ರವಿ).

ಶೈತ್ಯಾತ್ಯಾಜಿತ ಮೇಖಲಮಿತ್ಯರ್ಥಃ—ವ್ರಣಗುರು ಪ್ರಮದಾಧರ ದುಃಸಹಂ =

ವ್ರಣೈಃ ಗುರುಭಿಃ ಪ್ರಮದಾನಾಮ್ ಅಧರೈಃ ದಂಶಹವರ್—ದಂತಕ್ಷತಂ ಕಪೋಲೇ ವಧ್ವಾಃ ವೇದನಾಸಪತ್ನೀನಾಮ್ ॥

**33. ಅಭಿನಯಾನ್ ಪರಿಚೇತುಮಿವೋದ್ಯತಾ ।**
**ಮಲಯಮಾರುತ ಕಂಪಿತ ಪಲ್ಲವಾ ॥**
**ಅಮದಯತ್ಸಹಕಾರಲತಾ ಮನಃ ।**
**ಸಕಲಿಕಾ ಕಲಿಕಾಮಜಿತಾಮಪಿ ॥ ೩೩ ॥**

ಆಗ ಮಲಯಾಚಲದ ಕಡೆಯಿಂದ ಮಂದವಾಗಿ ಬೀಸುತ್ತಿರುವ ಮಂದಾನಿಲವು ಬೀಸ ತೊಡಗಿತು. ಈ ಮಲಯಮಾರುತವು (ತೆಂಕಣ ಗಾಳಿ) ಅಭಿನಯ ಕಲೆಯನ್ನು ಅಥವಾ ನಾಟಕೀಯ ವೃತ್ತಿಯನ್ನು ಮರಗಿಡ ಬಳ್ಳಿಗಳಿಗೆ ಕಲಿಸುವಂತೆ ಚೆಲುವಾಗಿ ರಯ್ಯನೆ ಬೀಸ ತೊಡಗಿತು (ತೀಡತೊಡಗಿತು). ಆ ಮಲಯದ ಎಲರು ಎಳೆ ತಳಿರುಗಳನ್ನು ಮೃದುವಾಗಿ ಅಲುಗಿಸುತ್ತ (ಅಲುಗಿಸುತಲಿರಲು) ಅಭಿನಯವನ್ನು ಅಭ್ಯಾಸಿಸುವಂತೆ ಮಾಡಿತು. ಹೊಚ್ಚ ಹೊಸನನೆ ಕೊನೆಯ (ದಾಂಗುಡಿ) ಮಾವಿನೆಳೆ ಸಸಿಯೊಂದು ಕಾಮ, ಪ್ರೇಮ, ಕ್ರೋಧ ವರ್ಜಿತರನ್ನು, ಇಂದ್ರಿಯಗಳನ್ನು ಗೆದ್ದ ಕಲಿಕಾಮಜಿತರನ್ನೂ ಮುದಗೊಳಿಸುವಂತಿತ್ತು. ಮಲಯಮಾರುತವು ಆಪ್ಯಾಯಮಾನವಾಗಿ ಬೀಸುತ್ತ ನವಚೂತಪಲ್ಲವವನ್ನು ಕಂಪಿಸುತ್ತ ನರ್ತಿಸತೊಡಗಿದುವು. ಆ ಹೊಸ ಚಿಗುರುಗಳು ಚೆಲುವೆಯರಾದ ನಾರಿಯರ ಹಸ್ತಗಳನ್ನೇ ಹೋಲುತ್ತಿದ್ದುವು. ಕಲಿಶಬ್ದವು ಕಲಹವನ್ನು, ಶೌರ್ಯವನ್ನು ಸೂಚಿಸು ತ್ತಿದೆ, ಕಾಮವು ಅನುರಾಗವನ್ನು ಸೂಚಿಸುವುದು. ಜಿತರಾಗದ್ವೇಷರು, ಮನಸನ್ನು ಹತೋಟಿಯಲ್ಲಿಟ್ಟ ಯೋಗಿಪರ್ಯರೂ ಶಾಂತಾತ್ಮರೂ ಪ್ರಕೃತಿ ಆಂದೋಳನದಿಂದ ಮೋಹಪರವಶರಾದರೆಂದರೆ ಇನ್ನು ಉಪ್ಪು,ಕಾರ ತಿನ್ನುವ ಸಾಮಾನ್ಯ ಜನರ ಪಾಡೇನು !

ಕಲಿಕಾಮ ಜಿತಾಮಪಿ = ಕಲಿಃ ಚ ಕಾಮಶ್ಚ ಕಲಿಕಾಮೌ ತೌ ಜಯಂತೀತೀಪಾವ್— ಸಹಕಾರಲತಾ = ಕೋಮಲರಸಾಲ—ಅತ್ರಚೂತಲತಾಯಾ ನರ್ತಕೀ ಸಮಾಧಿರ ಭಧೀಯಂತೆ—ಅಭಿನಯಾ ನರ್ತವ್ಯಂಜಕಾನ್ ವ್ಯಾಪಾರಾನ್—'ವ್ಯಂಜಕಾಭಿನಯೌ ಸಮೌ' ಇತ್ಯಮರಃ—ಮಲಯಮಾರುತೇನ ಕಂಪಿತ ಪಲ್ಲವಾ—ಸಕಲಿಕಾ ಸ ಕೋರಕಾ— 'ಕಲಿಕಾಕೋರಕಃ ಪುಮಾನ್' ಇತ್ಯಮರಃ—ಕಲಿಃ ಕಲಹೋದ್ವೇಷ ಉಚ್ಯತೇ—ಕಾಮೋ ರಾಗಃ ॥

**34. ಪ್ರಥಮಮನ್ಯಭೃತಾಭಿರುದೀರಿತಾಃ ।**
**ಪ್ರವಿರಲಾ ಇವ ಮುಗ್ಧವಧೂ ಕಥಾಃ ॥**
**ಸುರಭಿಗಂಧಿಷು ಶುಶ್ರುವಿರೇಗಿರಃ ।**
**ಕುಸುಮಿತಾಸುಮಿತಾವನರಾಜಿಷು ॥ ೩೪ ॥**

ಅಲ್ಲಿಯ ವನಪ್ರದೇಶವು ಕುಸುಮರಾಜಿಗಳಿಂದ ರಾರಾಜಿಸುತ್ತ, ಸೌರಭವನ್ನು (ಪರಿಮಳ, ಸುವಾಸನೆ) ದೆಸದಿಶೆಗಳಿಗೆ ಹಬ್ಬಿಸುತ್ತಲಿತ್ತು. ಆಗ ಪ್ರಥಮ ಸ್ತುತಿಪಾಠಕರಂತೆ ಕೋಗಿಲೆ ಗಳು ಮೊದಲ ಬಾರಿಗೆ ಬಿರಿದ ಅರಳ ಕಂಪಿನಲ್ಲಿ, ಘಮಘಮಿಸುವ ಬನಗಳಲ್ಲಿ (ಬಿರಿಪರೆಳ

ಕಂಪಿನೊಳು, ಮಘಮಘಿಪ ಬನಗಳೊಳು) ಕತ್ತೆತ್ತಿ (ಕೊರಳ ಕೊಂಕಿಸಿ) ದನಿ ಎತ್ತಿ ಬಿಂಕದಿಂದ ಹಾಡುತ್ತಲಿದ್ದುವು. ಆ ಕುಹೂ, ಕುಹೂ ಕೋಗಿಲೆಯ ಕೂಜಿತನಾದವು ಸುಶ್ರಾವ್ಯವಾಗಿ ನಡುನಡುವೆ ಕೇಳಿಸುತ್ತಲಿತ್ತು. ಮೊದಮೊದಲು, ಮೊದಲ ದಿನಗಳಲ್ಲಿ ಮುಗ್ಧ ವಧುಗಳು ತಮ್ಮ ಗಂಡಂದಿರಲ್ಲಿ ಆಮೋದದಿಂದ ಒಂದೊಂದು ನುಡಿಯನ್ನು ಮಾತ್ರ ನುಡಿಯುವಂತೆ ಆ ಕೋಗಿಲೆಗಳು ಇಂಚರಗೆಯ್ದುವು. ಪ್ರಾರಂಭದ ಆಲಾಪವಂತೆ ಆ ಧ್ವನಿ ಆ ವನಭೂಮಿಯಲ್ಲಿ ಮಾರ್ದನಿಗೊಂಡಿತು.

ಕುಸುಮಾನ್ಯಾಸಾಂ ಸಂಜಾತಾನಿ ಕುಸುಮಿತಾ—ತಾಸು ವನರಾಜಿಷು=ವನಪಂಕ್ತಿಷು—ಅನ್ಯಭೃತಾಭಿಃ = ಕೋಕಿಲಾಭಿಃ—ಪ್ರಥಮಂ = ಪ್ರಾರಂಭೇ—ಅತ . ಏವ ಮಿತಾಃ = ಪರಿಮಿತಾ—ಗಿರ = ಆಲಾಪಾಃ—ಶುಶ್ರುವಿರೇ = ಶ್ರುತಾಃ ॥

35. ಶ್ರುತಿಮುಖಭ್ರಮರಸ್ವನಗೀತಯಃ ।
ಕುಸುಮಕೋಮಲದಂತರುಚೋಽಬಭುಃ ॥
ಉಪವನಾಂತಲತಾಃ ಪವನಾಹತೈಃ ।
ಕಿಸಲಯೈಃ ಸಲಯೈರಿವ ಪಾಣಿಭಿ ॥ ೩೫ ॥

ಕಿವಿಗೆ ಗಾಯನದ ಅಮೃತಸುಧೆಯು ರುಚಿಯನ್ನು ಒದಗಿಸುತ್ತ ಭ್ರಮರಗಳು ರವಗೈದು, ನಳನಳಿಸುವ ಕೋಮಲ ಸುಮಗಳು, ನಗುವ ದಂತಪಂಙ್ತಿಗಳಾಗಿರಲು (ಹಲ್ಲುಗಳ ಕಾಂತಿ ಮಿಂಗಲು, ಸುಳಿಪಲ್ಲಳಿಸಲು) ತೆಳುಗಾಳಿ ಬೀಸಲು ಅಲುಗುತ್ತಿರುವ ಎಳತಳಿರುಗಳೆ ಬೆರಳೆನಲು, ಬಳ್ಳಿಗಳು (ದಾಂಗುಡಿಗಳು) ಭೃಂಗಗಳ ಹಾಡಿಗೆ ತಕ್ಕಂತೆ ತಾಳಲಯಗಳಿಗೆ ಬದ್ಧವಾಗಿ ಕುಣಿಯುವುವೋ ಎಂಬಂತೆ ತೋರಿತು. ಅದು ಅಲ್ಲದೆ ಕೆಂಪಾದಬಳ್ಳಿಗಳು ಗಾಳಿಯಲ್ಲಿ ಅಭಿನಯಿಸುವ ವನಿತೆಯರ ಕೆಂಪಾದ ಹಸ್ತ, ಪಾದಗಳಂತೆ ತೋರಿದುವು. ಆ ಉಪವನದಲ್ಲಿ ಭ್ರಮರಗಳ ಸಂಗೀತಕ್ಕೆ, ಅನುಗುಣವಾದ ತಾಳಲಯ ಬದ್ಧವಾಗಿ ದಾಂಗುಡಿಗಳು ನರ್ತಕಿಯರಂತೆ ರಮ್ಯನೆ ಮಾರುತನು ಬೀಸಲು ನರ್ತಿಸಿದುವು ಎಂಬಂತೆ ಕಣ್ಣಿಗೆ ಹಬ್ಬವನ್ನುಂಟುಮಾಡುತ್ತಲೆಸೆದವು.

ಶ್ರುತೀತಿ = ಶ್ರುತಿಸುಖಾ ಕರ್ಣ ಮಧುರಾ ಭ್ರಮರಸ್ವನಾ ಏವ ಗೀತಯೋ ಯಾಸಾಂ ತಾಃ—ದಂತರುಚೋ=ದಂತಕಾಂತಯೋ ಯಾಸಾಂ ತಾಃ—ಉಪವನಾಂತಲತಾಃ ಪವನೇನಾ ಹತೈಃ ಕಂಪಿತೈಃ—ಕಿಸಲಯೈಃ ಸಲಯೈಃ ಸಾಭಿನಯೈಃ—ಲಯಶಬ್ದೇನ ಲಯಾನುಗತೋಽಭಿನಯೋ ಲಕ್ಷ್ಯತೇ—ಅನೇನ ಲತಾನಾಂ ನರ್ತಕೀ ಸಾಮ್ಯಂ ಗಮ್ಯತೇ ॥

36. ಲಲಿತ ವಿಭ್ರಮಬಂಧ ವಿಚಕ್ಷಣಂ ।
ಸುರಭಿಗಂಧಪರಾಜಿತ ಕೇಸರಮ್ ॥
ಪತಿಷು ನಿರ್ವಿವಿಶುಃ ಮಧುಮಂಗನಾಃ ।
ಸ್ಮರಸುಖಂ ರಸಖಂಡನ ವರ್ಜಿತಮ್ ॥ ೩೬ ॥

ಆ ಕಾಂತೆಯರು ತಮ್ಮ ಪತಿಯರೊಂದಿಗೆ ಮಧುಪಾನ ಮಾಡಿದರು. ಆ ಮಧುವು ಸ್ಮರನಸಖ, ಮನ್ಮಥಲೀಲೆಗೆ ಚಾಟಿಯಂತೆ ಸಹಕಾರಿ (ಬಡಿದೆಬ್ಬಿಸು) ಆಗ ಅವರ ನಾಯ

ಪರಿಮಳ ಸುವಾಸನೆಯು ಬಕುಳಪುಷ್ಪದ ಸುವಾಸನೆಗೂ ಅಧಿಕವೆನಿಸಿತು. ಮಧುಸುವಾಸನೆಯಲ್ಲಿ ಬಕುಳವನ್ನು ಪರಾಜಿತಗೊಳಿಸಿದರು ಆ ಪಟ್ಟರಾಣಿಯರು. ತಂಸು ಮಧುಪಾನದಿಂದ ಮದವೇರಿದ ಸತಿಯರ ಮುಖಭಾವವು ಪತಿಯರೊಂದಿಗೆ ಆಡುವ ಆಟಪಾಟಗಳಲ್ಲಿ ಕಳೆಯೇರುವಂತೆ ಮಾಡಿತು. ಲಲಿತತರ ವಿಭ್ರಮದ ವಿಚಕ್ಷಣತೆಯನು ಅಂತುದನು ಕಾಣಬಹುದಾಗಿತ್ತು. ಅವರ ಬಿಲ್ಲಿನಾಕೃತಿಯ ಹುಬ್ಬು. ಪ್ರೇಮಕಟಾಕ್ಷವನ್ನು ಬೀರುವ ಅಲರ್ಗಣ್ಣು ಕಾಮನರಗಿಣಿಯಾದರಾಕಾಂತೆಯರು. ಅವರು ತಮ್ಮ ಪತಿರಾಯರ ಜೊತೆಗೂಡಿ ಒಂದಿಷ್ಟು ಮಧುವನ್ನು ಸೇವಿಸಿ ರಸಾಸ್ವಾದ ಮಾಡಿ ತಣಿದರು. ಆಗ ಅವರ ಹಾವಭಾವಗಳು ಅವರ ಪತಿಯರ ಶೃಂಗಾರ ಚೇಷ್ಟೆಗಳಿಗೆ ಅನುಗುಣವಾಗಿ ಒಡಮೂಡಿದುವು. ಅವರು ತಮ್ಮ ಗಂಡಂದಿರ ಹುಚ್ಚಾಟಗಳಿಗೆ ಚೆಲ್ಲಾಟಗಳಿಗೆ ಪೂರ್ಣ ಸಹಕಾರವಿತ್ತರು (ಅಂಗಜನ ಕೆಳೆಯೆನಿಪ ಮದ್ಯವನು) (ತಾಳಿಗಂಡೋ ಶಿವಮ್ಮಣ್ಣ। ತೈತೈ ಕಣಿಯೋ ಮಂಗಣ್ಣ। ಎಂಬಂತೆ).

ಲಲಿತ ವಿಭ್ರಮ ಇತ್ಯಾದಿ=ಲಲಿತಃ ವಿಭ್ರಮಃ ತಸ್ಯಬಂಧಃ ತಸ್ಮಿನ್। ವಿಚಕ್ಷಣಮ್। ಮಧುರವಿಲಾಸಘಟನಾ ಪಟುತರಮ್—ಸುರಭಿಣಾ = ಮನೋಹರೇಣಗಂಧೇನಾ—ಪರಾಜಿತಕೇಸರಂ = ನಿರ್ಜಿತ ಬಕುಲಪುಷ್ಪಂ—'ಅಥಕೇಸರೇ, ಬಕುಲಃ' ಇತ್ಯಮರಃ—ಸ್ಮರಸ್ಯಸಹಾಯಂ = ಸ್ಮರಸಖಮ್—ಸ್ಮರೋದ್ದೀಪಕಮಿತ್ಯರ್ಥಃ—ಪರಸ್ಪರಾನುರಾಗಪೂರ್ವಕಂ ಪತಿಭಿಃ ಸಹ ಪಪುರಿತ್ಯರ್ಥಃ॥

37. ಶುಶುಭಿರೇ ಸ್ಮಿತಚಾರುತರಾನನಾ।
ಸ್ತ್ರಿಯ ಇವ ಶ್ಲಥಶಿಂಜಿತಮೇಖಲಾಃ॥
ವಿಕಚತಾಮರಸಾ ಗೃಹದೀರ್ಘಿಕಾ।
ಮದಕಲೋಲವಿಹಂಗಮಾಃ ॥ ೩೭ ॥

ಅಲ್ಲಿನ ಆ ಕೃತಕ ಕೆರೆಗಳು ಶುದ್ಧವಾದ ನೀರಿನಿಂದ ತುಂಬಿದ್ದು ಅರಳಿದ ತಾವರೆಗಳಿಂದ, ಹಂಸಾದಿಪಕ್ಷಿಗಳಿಂದ ಮೆರೆಯುತ್ತ ಸುಂದರ ಮುಖಕಮಲಗಳಿಂದ ಕಂಗೊಳಿಸುವ ಕಾಮಿನಿಯರನ್ನು ಹೋಲುತ್ತಿತ್ತು (ಚೆಲುವು ಮೊಗದೆಳನಗೆಯ ಕಾಮಿನಿಯ ಪರಿಯ). ಮದಕಲಾಃ, ಉದಕಲೋಲ, ಉದಕಪ್ರಿಯ ಪಕ್ಷಿಗಳಾದ ಹಂಸ,ನೀರ್ಕೋಳಿಗಳಿಂದ ಮತ್ತು ಅರಳಿರುವ ಕೆಂದಾವರೆ, ಬೆಳ್ದಾವರೆ ಹೂಗಳಿಂದ ತುಂಬಿರುವ (ಮದಕಲೋದಕಲೋಲ ವಿಹಗಂಗಳೊಡವೆರೆದು) ಆಗರ್ಭಶ್ರೀಮಂತರ ಮನೆಗಳ ಬಳಿಯಿರುವ ಕೃತಕವಾಗಿ ವಿಹಾರಕ್ಕೆಂದು ರಚಿತವಾಗಿರುವ ಕೆರೆಗಳಲ್ಲಿ ಕೇಳಿಬರುವ ಪಕ್ಷಿಗಳ ಮಧುರವಾದ ದನಿಯು ಚಾರು ಯುವತಿಯರ ಮುಖಾರವಿಂದದಲ್ಲಿ ಮೂಡಿಬರುತ್ತಿರುವ ಹಾಸ್ಯ. ಕಪಟ, ಹೊಟ್ಟೆಕಿಚ್ಚಿನ (ಸ್ಮಿತಹಸಿತಾದಿ ಭೇದಗಳಿಂದ ರಂಜಿಸುತ್ತಿರುವ ಹೆಂಗಸರ ಆರು ತರದ ನಗೆಗಳು. ನಾಟ್ಯಲೋಚನೇ, ಕಟಾಕ್ಷೈಃ, ಸೌಷ್ಠವಾಂಚಿತೈಃ ಇತ್ಯಾದಿ) ಅಲಕ್ಷಿತ ಹುಸಿನಗೆಗಳಿಂದ ಮಂಡಿತರಾದ ಭಾಮೆಯರ ನಗೆ, ಕಿರುನಗೆ, ಬೆಳ್ನಗೆ, ಅರೆನಗೆ ಕೆಲವೊಮ್ಮೆ ಪೂರ್ಣ ಕಟಾಕ್ಷದ ಬೆಳದಿಂಗಳ ನಗೆಯನ್ನು ಬೀರಿ ರಂಜಿಸುತ್ತಿರುವರು. ಅದು ಅಲ್ಲದೆ ಅವರ ಮೇಖಲೆಯು ಸಡಿಲಾದಾಗ ಕೇಳಿಬರುವ ಶಿಂಜಿತ ಶಬ್ದ ಹಕ್ಕಿಗಳ ಮೆಲ್ಲುಲಿ

ಯಂತೆ ಕೇಳಿಬರುತ್ತಿದೆ. ಆ ಮದವೇರಿದ ಹಕ್ಕಿಗಳ ಮೆಲುದನಿಯು ಚಾರುಯುವತಿಯರ ಮೇಖಲೆಯ ಸಡಿಲಾದಾಗ ಕೇಳಿಬರುವ ಶಿಂಜಿತ ಶಬ್ದವನ್ನು ಅನುಕರಿಸುವಂತಿತ್ತು.

ವಿಕಚತಾಮರ ಸಾ = ವಿಕಸಿತಕಮಲಾಃ—ಉದಕಲೋಲವಿಹಂಗಮಾ = ಜಲಪ್ರಿಯ ಪಕ್ಷಿಣೋಹಂಸಾ ದಯೋಯಾಸುತಾ ಮದಕಲೋದಕಲೋಲ ವಿಹಂಗಮಾಸ್ತ್ರಿಯ ಇವ ಶುಶುಭಿರೇ--ಗೃಹದೀರ್ಘಿಕಾ—ಸ್ತ್ರಿಯಃ ವಿಕಚ ತಾಮರಸಾಃ—ಸ್ಮಿತ ಚಾರುತರಾನನಾ —ಮದಕಲ=ಮದಕಲಾಃ ಉದಕೇಲೋಲಾಃ (ಚಂಚಲಾಃ) ಚವಿಹಂಗಮಾಯಾಸಂತಾಃ ॥

ಉಪಮಾಲಂಕಾರ (ಬಿಂಬ ಪ್ರತಿಬಿಂಬ ಭಾವ).

38. ಉಪೆಯುಯೌ ತನುತಾಂ ಮಧುಖಂಡಿತಾ ।
ಹಿಮಕರೋದಯ ಪಾಂಡುಮುಖಚ್ಛವಿಃ ॥
ಸದೃಶಮಿಷ್ಟ ಸಮಾಗಮನಿರ್ವೃತಿನಂ ।
ವನಿತಯಾನಿತಯಾ ರಜನೀವಧೂಃ ॥ ೩೮ ॥

ಆರಾತ್ರಿಯೆಂಬ ವಧು (ವನಿತೆ, ಹೆಂಗಸು, ಸ್ತ್ರೀ) (ಯಾಮಿನೀ ಸತಿ, ರಜನೀ ವಧು) (ರಜನೀಕಾಂತ = ಚಂದ್ರ) ಈ ತೆರನಾಗಿ ಕಂಡಳು. ಪತಿಯು ದೂರವಿದ್ದಾಗ, ಪತಿವಿರಹ ದಿಂದ ಬೆಂಡಾಗಿ, ಕ್ಷೀಣಳಾದ ಸ್ತ್ರೀಯಂತೆ ಕಾಣಸತೊಡಗಿದಳು. ತಂಪಾದ ಕಿರಣಗಳನ್ನು ಅಂಬರದಲ್ಲಿ ಪಸರಿಸುತ್ತಾ ಚಂದ್ರನ ಉದಯವಾಗಲು ಖಂಡಿತ ನಾಯಕಿಯಹಾದ ರಾತ್ರಿ ಯೆಂಬ ವಧುವಿನ ಮುಖಕಮಲವು ಬೆಳ್ಪಡರಿದುದು. ಮುಖಬಿಂಬವು ಬೆಳಚಿತು. ಇದೀಗ ಚೈತ್ರಾಗಮನದ ಕಾಲ. ಚೈತ್ರಾಗಮದಿಂದ ಯಾಮಿನೀವನಿತೆಯು ಕಳೆಗುಂದಿ ಕಾಂತಿ ಹೀನಳಾದಳು. ಆ ನಿಶಾವನಿತೆ (ಪ್ರದೋಷಕಾಲದಲ್ಲಿ) ರಾತ್ರಿಯ ಪ್ರಾರಂಭಕಾಲದಲ್ಲಿ ರಾತ್ರಿಯೆಂಬ ಹೆಣ್ಣು ಚಂದ್ರನ ಉದಯವಾದೊಡನೆ ಬೆಳ್ಪಡರಿದ (ಬೆಳಚಿಹೋದ) ಮುಖಕಾಂತಿ ಹೊಂದಿದಳು, ಉತ್ತರಾಯಣದ ವಸಂತಕಾಲದಲ್ಲಿ ಚೈತ್ರಾಗಮನದಿಂದ ಚೈತ್ರಖಂಡಿತೆಯೆನಿಪ ಆ ರಜನೀವನಿತೆಯ ಮುಖಕಮಲ ಕಂದಿಕುಂದಿ (ಬೆಳ್ಪಡರ ಲಾನನವು) ಬಾಡಿಹೋಯಿತು. ಪ್ರಿಯನ ಸಂಗಮಸುಖವ ಅನುಭವಿಸದಿರುವ ವಂಚಿತೆ ಯಾದ (ಗಂಡನಿಂದ ದೂರವಿದ್ದ) ದಯಿತೆಯಂತೆ (ನಾರಿ, ಸುದತಿ, ಕಾಮಿನಿ) ಬಡವಾಗಿ ತೋರಿದಳು.

ಮಧುಖಂಡಿತಾ—ಅನಿತಯಾ = ನ + ಇತಾ = ಅನಿತಾ—ತಯಾ = ಅಪ್ರಾಪ್ತಯಾ ಖಂಡಿತಾ—ಖಂಡಿತನಾಯಿಕಾ—ಮಧುನಾ = ಮಧುಸಮಯೇನ ಇಷ್ಟ ಸಮಾಗಮ ನಿರ್ವೃತಿಂ = ಪ್ರಿಯಸಂಗಮಸುಖಮ್—ಅನಿತಯಾ=ಅಪ್ರಾಪ್ತಯಾ—ಖಂಡಿತಾಖ್ಯಯಾ = ಚನಾಯಿಕಾಧ್ವನ್ಯತೇ—ಹಿಮಕರೋದಯೇನ = ಚಂದ್ರೋದಯೇನ ॥

39. ಅಪತುಷಾರತಯಾ ವಿಶದಪ್ರಭೈಃ ।
ಸುರತಸಂಗಪರಿಶ್ರಮನೋದಿಭಿಃ ॥
ಕುಸುಮಚಾಪಮತೇಜಯದಂಶುಭಿಃ ।
ಹಿಮಕರೋ ಮಕರೋರ್ಜಿತ ಕೇತನಮ್ ॥ ೩೯ ॥

(ಸುರತಸಂಗಪರಿಶ್ರಮ) ರತಿಸುಖವನನುಭವಿಸಿದ ದಂಪತಿಗಳು ತಮ್ಮ ಶ್ರಮವನ್ನು ಚಂದ್ರಮನ ಶಾಂತವಾದ ತಂಪಾದ ಕಿರಣಗಳು ಪರಿಹಾರಗೈದುವು. ಈಗ ಹಿಮಕಿರಣನಾದ ಚಂದ್ರನು ಹಿಮವನ್ನು ದೂರೀಕರಿಸಿರುವನು. ಮಕರಧ್ವಜವಿರಾಜಿತನಾದ ಮನ್ಮಥನು ತನ್ನ ಹೂಬಾಣಗಳನ್ನು ಪ್ರೇಮಿಗಳತ್ತ ತನ್ನ ಸರ್ವಶಕ್ತಿಯಿಂದ ಎಸೆಯುತ್ತಿರುವನು. ಆ ಮನ್ಮಥನು (ಸ್ಮರನು, ಅನಂಗನು, ಮನಸಿಜನು) ಚೂತಧ್ವಜನು, ಕುಸುಮ ಚಾಪಧರನು. ಈಗ ಚಂದ್ರನ ಅಮೃತಕಿರಣಗಳು, ಹಿಮವಳಿದುದರಿಂದ (ಮಂಜು ಹರಿದುದರಿಂದ) ಹೆಚ್ಚು ಪ್ರಭೆಯಿಂದ ಕಂಗೊಳಿಸುತ್ತಿದೆ. ಅಮಿತಕಾಂತಿಯನ್ನು ತಳೆದು ಹಿಮಕರನು ಹಿಮವನ್ನು ಕೀಸಿದನು. ಮಕರಕೇತವನು ಹೂಬಾಣಗಳನ್ನು ಎಸೆಯುತ್ತಿರಲು.

ಅಪತುಷಾರತಯಾ = ಅಪಗತಃ ತುಷಾರಃ (ಮಂಜು) ಯಸ್ಯ ಸಃ ಅಪತುಷಾರಃ ತಸ್ಯ ಭಾವಃ ತಯಾ—ಸುರತಸಂಗಸ್ಯ ಪರಿಶ್ರಮಂ ನೋದಯನ್ತಿ ಇತಿ ತೈಃ—ಮಕರೋರ್ಜಿತ ಕೇತನಮ್ = ಮಕರೇಣ ಊರ್ಜಿತಂ ಕೇತನಂ ಯಸ್ಯ ಸಃ ಹಿಮಕರ = ಚಂದ್ರಃ—ಅಪತುಷಾರ ತಯಾ = ಅಪಗತನೀಹಾರ ತಯಾ—ವಿಶದಪ್ರಭೈ= ನಿರ್ಮಲಕಾಂತಿಭಿಃ—ಸುರತ ಸಂಗಪರಿಶ್ರಮನೋದಿಭಿಃ = ಸುರತಸಂಗಖೇದಹಾರಿಭಿ—ಅಂಶುಭಿಃ = ಕಿರಣೈಃ—ಮಕರೋರ್ಜಿತ ಕೇತನಮ್=ಮಕರ ಊರ್ಜಿತಂಕೇತನಮ್—ಧ್ವಜೋಯಸ್ಯ ತಮ್—ಕುಸುಮ ಚಾಪಂ=ಕಾಮಮಂತೇ ಜಯದಶಾತಯತ್—"ತಿಜನಿಶಾನೇ" ಇತಿ ಧಾತೋರ್ಣ್ಯ ನ್ತಾಲ್ಲಙ್' ॥

40. ಹುತಹುತಾಶನದೀಪ್ತಿ ವನಶ್ರಿಯಃ ।
ಪ್ರತಿನಿಧಿಃ ಕನಕಾಭರಣಸ್ಯ ಯತ್ ॥
ಯುವತಯಃ ಕುಸುಮಂ ದಧುರಾಹಿತಂ ।
ತದಲಕೇ ದಲಕೇಸರಪೇಶಲಮ್ ॥ ೪೦ ॥

ಆ ಯೌವನಪ್ರಾಯದ ಮಡದಿಯರು ಯಜ್ಞಾಗ್ನಿಯಂತೆ (ಹುತಹುತಾಶನನಂತೆ) ಜ್ವಲಿಸುತ್ತಿರುವ ಉಪವನಲಕ್ಷ್ಮಿಯ ಹೊನ್ನಿನ ಆಭರಣಗಳೋ (ಚಿನ್ನದ ಒಡವೆವಸ್ತು ಗಳೋ) ಎಂಬಂತಿರುವ (ವನರಮೆಯ ಪೊಂದೊಡಿಗೆಯಂತೆಸೆಯುವ) ನವಕರ್ಣಿಕಾರ ಹೂಗಳನ್ನು ತಮ್ಮ ಮುಡಿಗಳಲ್ಲಿ ತಮ್ಮ ಪತಿಗಳಿಂದ ಮುಡಿಸಿಕೊಂಡರು. ಆ ಕರ್ಣಿಕಾರ ಪುಷ್ಪಗಳು ತುಂಬುಕೇಸರದಿಂದ, ಮೃದುವಾದ ದಳಗಳಿಂದ ಕೂಡಿತ್ತು. ಹುತಹುತಾಶನ ದೀಪ್ತಿಯಿಂದ ಶೋಭಿಸುತ್ತಿರುವ ವನಲಕ್ಷ್ಮಿ, ಹೂಗಳೆಂಬ ಕನಕಾಭರಣದಿಂದ ಅಲಂಕೃತ ಳಾಗಿದ್ದಾಳೆ. ಸುಕುಮಾರಪತ್ರಕಿಂಜಲ್ಕ ಶೋಭಿತಂ. ಅಂತಹ ಹೂಗಳನ್ನು ತಮ್ಮ ಕುಂತಳ ದಲ್ಲಿ ಅಳವಡಿಸಿಕೊಂಡು ಅಲಂಕೃತರಾಗಿ (ಶೋಭಿತರಾಗಿ) ನಿಂತಿರುವ ವಧುಗಳಾದ ನವಯುವತಿಯರು (ಶೋಭನಾಂಗಿಯರು) ಎಲ್ಲೆಲ್ಲೂ ಕಂಗೊಳಿಸಿದರು.

ಹುತಹುತಾಶನ ದೀಪ್ತ್ಯಾ= ಆಜ್ಯಾದಿಪ್ರಜ್ವಲಿತಾಗ್ನಿ ಪ್ರಭಂ—ಯತ್ ಕುಸುಮಮ್ = ಕರ್ಣಿಕಾರಮಿತ್ಯರ್ಥಃ—ವನಶ್ರಿಯಾ = ಉಪವನಲಕ್ಷ್ಮ್ಯಾಃ (ಲಕ್ಷ್ಮಿಯಾಃ) = ದಲೇಷು ಕೇಸರೇಷು ಚ ಪೇಶಲಮ್ = ಸುಕುಮಾರಪತ್ರಕಿಂಜಲ್ಕ ಮಿತ್ಯರ್ಥಃ—ತತ್ಕುಸುಮಂ ಯುವತಯೋಽಲಕೇ = ಕುಂತಲೇದಧುಃ—ಹುತಹುತಾಶನ ಇತ್ಯಾದಿ = ಹುತಃ ಯಃ

ಹುತಾಶನಃ ತಸ್ಯ ದೀಪ್ತಿಃ ಇವ ದೀಪ್ತಿಃ ಯಸ್ಯ ತತ್—ದಲಕೇಸರ = ದಲೇಷು ಚ ಕೇಸರೇಷು ಚ ಪೇಶಲಮ್ (ಮೃದು, ಕೋಮಲತರಮ್).

**41. ಅಲಿಭಿರಂಜನಬಿಂದುಮನೋಹರೈಃ ।**
**ಕುಸುಮಪಂಕ್ತಿನಿಪಾತಿಭಿರಂಕಿತಃ ॥**
**ನ ಖಲು ಶೋಭಯತಿ ಸ್ಮ ವನಸ್ಥಲೀಂ ।**
**ನ ತಿಲಕಃ ತಿಲಕಃ ಪ್ರಮದಾಮಿವ ॥ ೪೧ ॥**

ಕಾಡಿಗೆಬಣ್ಣದ ಅಳಿಗಳ ಸಾಲು ತಿಲಕ ವೃಕ್ಷಗಳಲ್ಲಿ, ಸಾಲುಸಾಲಾಗಿ ಬಿಟ್ಟಿರುವ ಹೂಗಳ ಮೇಲೆ ಕುಳಿತು ಕಣ್ಣಿಗೆ ಮನೋಹರತೆಯ ಹಬ್ಬವನ್ನುಂಟುಮಾಡುತ್ತಿತ್ತು (ಕಾಡಿಗೆ ಕಣಯುವೊಲು) (ತಿಲಕವೃಕ್ಷ = ಕ್ಷುರಕವೃಕ್ಷ, ಶ್ರೀಮಾನ್‌ವೃಕ್ಷ). ಪ್ರಮದೆಯರು, ಸುಂದರಿಯರು, ಮದುವಣಗಿತ್ತಿಯರು, ನವಮೋಹನಾಂಗಿಯರು, ನವಮೋಹನಾಕಾರೆಯರು (ನವಯುವತಿಯರು) ತಮ್ಮ ಬೃಂದಾವನದ ಹಣೆಯ ಮೇಲೆ ಕುಂಕುಮ ತಿಲಕವನ್ನು ಧರಿಸಿ ಚಂದ ಕಾಣುವಂತೆ, ಸೌಂದರ್ಯೋಪಾಸನೆಮಾಡುತ್ತ ತಮ್ಮ ಶೋಭೆಯನ್ನು ಹೆಚ್ಚಿಸಿಕೊಳ್ಳುವಂತೆ, ವನಸ್ಥಲಗಳಲ್ಲಿ, ವನದೇವಿಯ ಗುಡಿಯಲ್ಲಿ ಬೆಳೆದಿರುವ ಹೂವು ಬಿಟ್ಟಿರುವ ತಿಲಕವೃಕ್ಷಗಳಲ್ಲಿ ಭೃಂಗಗಳು ಸಾಲುಸಾಲಾಗಿ ಕುಳಿತು ಮಕರಂದವನ್ನು ಹೀರುತ್ತ ಕಿವಿಗೆ ಇಂಪಾದ, ಮನಸಿಗೆ ಸೊಂಪಾದ ಗಾನಸುಧೆಯನ್ನು ಹರಿಸುತ್ತಾ ಕಣ್ಣಿಗೆ ಉತ್ಸವವನ್ನು ಒದಗಿಸುತ್ತಿದ್ದುವು. ಆಗ ವನಲಕ್ಷ್ಮಿಯ ಶೋಭೆ ಹೆರ್ಚಿತು. ಅಳಿಗಳಿಂದ (ತುಂಬಿಗಳಿಂದ) ವಿರಾಜಿತವಾದ ತಿಲಕವೃಕ್ಷವು ಭೂದೇವಿಗೆ, ಭೂದೇವಿಯ ಅಂಗವಾದ ವನದೇವಿಗೆ (ವನಲಕ್ಷ್ಮಿಗೆ, ಗ್ರಾಮೀಣ ಪ್ರದೇಶಗಳಿಗೆ, ಕಾನನಾಂತರಭೂಮಿಗೆ) ಅಲೌಕಿಕ ಅಂದವನ್ನು ತಂದಿತ್ತುವು (ವನಲಕ್ಷ್ಮಿಗತಿಶಯದ ಚೆಲುವನೆಸಗಿದುದು).

ಅಂಜನಬಿಂದುಮನೋಹರೈಃ = ಕಜ್ಜಲಕಣಸುಂದರೈಃ — ಕುಸುಮಪಂಕ್ತಿಷು = ನಿಪತಂತಿ ಯೇ ತೈಃ—ಅಲಿಭಿರಂಕಿತ ಶ್ಚಿಹ್ನಿತಸ್ತಿಲಕಃ—'ತಿಲಕಃ ಕುರಕಃ ಶ್ರೀಮಾನ್' ಇತ್ಯಮರಃ—ಪ್ರಮದಾಮಿವ = ಅಪಿ ತ್ವಶೋಭಯದೇವೇತ್ಯರ್ಥಃ ॥

**42. ಅಮುದಯನ್ಮಧುಗಂಧ ಸನಾಥಯಾ ।**
**ಕಿಸಲಯಾಧರಸಂಗತಯಾ ಮನಃ ॥**
**ಕುಸುಮಸಂಭೃತಯಾ ನವಮಲ್ಲಿಕಾ ।**
**ಸ್ಮಿತರುಚಾ ತರುಚಾರುವಿಲಾಸಿನೀ ॥ ೪೨ ॥**

ನವಮಲ್ಲಿಕಾಬಳ್ಳಿಯು, ವೃಕ್ಷಗಳ ಸತಿಯಂತೆ, ಚೆಲುವಾಗಿ ಮರವನ್ನು ಹಬ್ಬಿ, ನಗುತ್ತಿರುವ ಹೂವುಗಳಿಂದ (ಹೂವುಗಳ ನಗೆಯೆಂಬಲು) (ಹಲ್ಲು ಬಿಟ್ಟು ನಗುವಂತೆ) ಅಲಂಕೃತವಾಗಿ ನೋಟಕರ ಕಣ್ಣು, ಮನಸಿಗೆ ಸಂತಸದ ಸುಗ್ಗಿಯನ್ನೂ, ಆನಂದದ ರಸ ಬುಗ್ಗೆಯನ್ನೂ ಒದಗಿಸುತ್ತಿವೆ. ಕೋಮಲವಾದ ಮಲ್ಲಿಗೆಯ ಅಚ್ಚಬಿಳಿಯ ಪುಷ್ಪಗಳು ಅರಳಿ ಸಾಲುಸಾಲಾಗಿ ನಿಂದಿವೆ. ಅಂತೆಯೇ ಕೆಂಪಾದ ಹೊಸ ಚಿಗುರುಗಳು (ಮೊಳಕೆಯೊಡೆದು) ಚಿಗುರಿ ಸ್ತ್ರೀಯರ ಕೆಂಪಾದ ಕೆಳತುಟಿಯಂತೆ ಕಂಗೊಳಿಸುತ್ತಿದೆ (ಚಿಗುರೆಲೆಯ

ತುಟಿಯೆನಲು). ಹೂಗಳಲ್ಲಿ ತುಂಬಿರುವ ನರುಗಂಪನೀವ (ಹೊಸ ಪರಿಮಳವನ್ನು ಕೊಡುವ) ಮಕರಂದವು (ಸವಿಜೇನು) ಪಾನಪಾತ್ರೆಗಳಲ್ಲಿ ತುಂಬಿರುವ ಮಧುವಿನಂತೆ ತೋರುತ್ತಿದೆ. ಮಲ್ಲಿಗೆಹೂಬಳ್ಳಿ ಚಾರುವಿಲಾಸಿನಿಯೆನಲು ನೋಡುವವರ ಚೇತನಕೆ ಮುದವೀಯುತ್ತಿಹಳು.

ನವಮಲ್ಲಿಕಾ = ಸಪ್ತಲಾಖ್ಯಾಲತಾ—ತರುಚಾರುವಿಲಾಸಿನೀ = ತರೋಃ ಪುಂಸಶ್ಚ ಚಾರುವಿಲಾಸಿನೀ ನವಮಲ್ಲಿಕಾಸಪ್ತಲಾಖ್ಯಾಲತಾ—'ಸಪ್ತಲಾಖ್ಯಾ, ನವಮಲ್ಲಿಕಾ,' ಇತ್ಯಮರಃ ॥ ಮಧುನೋ = ಮಕರಂದಸ್ಯ ಮದ್ಯಸ್ಯ ಚ—ಕುಸುಮೈಃ ಸಂಭೃತಯಾ = ಸಂಪಾದಿತಯಾ = ಕುಸುಮರೂಪಯೇತ್ಯರ್ಥಃ ॥

43. ಅರುಣರಾಗನಿಷೇಧಿಭಿರಂಶುಕೈಃ ।
ಶ್ರವಣಲಬ್ಧಪದೈಶ್ಚ ಯವಾಂಕುರೈಃ ॥
ಪರಭೃತಾವಿರುತೈಶ್ಚ ವಿಲಾಸಿನಃ ।
ಸ್ಮರಬಲೈರಬಲೈಕರಸಾಃ ಕೃತಾಃ ॥ ೪೩ ॥

ಅಂದಿನ ಆ ಮಧುಪಾನಸವು ಯುವಕರ (ಜವ್ವನಿಗರ) ಮನಸನ್ನು ಪೂರ್ಣ ಆಕರ್ಷಿಸಿ ಕೊಂಡಿತ್ತು. ಇದರಿಂದಾಗಿ ಅವರ ಎಲ್ಲಾ ಆಲೋಚನೆಗಳೂ ಹೆಂಗಿಯರ (ಬಾಲೆಯರ) ಪರವಾಗಿಯೇ ಇದ್ದುವು. ಮನ್ಮಥನು (ಮಾರನು, ಸ್ಮರನು) ಸಾಧಾರಣನಲ್ಲ. ಎಲ್ಲಾ ಲೋಕಗಳನ್ನು ಗೆಲ್ಲಬಲ್ಲವನು. ಅಜೇಯನು, ಯುವಕರ ಮನಸನ್ನು ಪೂರ್ಣವಾಗಿ ಗೆದ್ದು, ಅವರ ಜೀವನದ ಗುರಿ, ಯುವತಿಯರನ್ನೇ ಯೋಚಿಸುವಂತೆ ಮಾಡಿದ್ದನು. ಅಂದಿನ ವಸಂತೋದಯದಲ್ಲಿ ಭೂಮಿಯು ಹಸುರುಹುಲ್ಲಿನ ಹಾಸಿನಿಂದ, ಹಸುರು ಸೀರೆ ಉಟ್ಟ ತೆರದಿ ಮೆರೆಯುತ್ತಿತ್ತು. ವಿಲಾಸಿನಿಯರು ಕೆಂಪಟ್ಟೆ ಉಟ್ಟು, ಯವದ ಅಂಕುರಗಳು ಕಿವಿಗಳ ಆಭರಣವೆನಿಸಿ, ಪರಪುಟ್ಟನು (ಕೋಗಿಲೆ) ಕೂಗುತ್ತಿರಲು (ಪರಪುಟ್ಟನಾ ರವವು) ತರುಣಿಯರ ಬೆಂಬಲಪಡೆದ ಮನ್ಮಥದೇವನು ತನ್ನ ಸೈನ್ಯಸಮೇತ (ಕಾಮಸೈನ್ಯಃ) ಯುವಕರನ್ನು ಗೆಲ್ಲಲು ಹೊರಟಿರುವಂತೆ ತೋರಿತು. ಸಿಂಗರಿಸಿದ ಅಬಲೆಯರು, ಕೋಗಿಲೆಗಳ ಕೂಜಿತ ರವ, ಇವೆಲ್ಲ ರಸ, ರಾಗಗಳಿಂದ ಸಜ್ಜಾದ ಕಾಮನ ಪಡೆ ಅಂದು ಜನತೆಯ ಮೇಲೆ ದಾಳಿ ನಡೆಸಿ ಜಯ ಗಳಿಸಿತು. ತಾನು ಸತ್ತು ಶಿವನನ್ನು ಗೆದ್ದವನಲ್ಲವೆ ಆ ಕಾಮದೇವ. ಅಬ್ಬಬ್ಬಾ, ಅವನ ಕಾರ್ಬಾರೇ (ಕಾರ್ಯಭಾರವೇ) !

ಅರುಣರಾಗನಿಷೇಧಿನಃ=ಅರುಣಸ್ಯಾನೂರೋರಾಗಮಾರುಣ್ಯಂ ನಿಷೇಧಂತಿ ತಿರಸ್ಕುರ್ವಂತೀ ಇತಿ—ಶ್ರವಣೇಷು= ಕರ್ಣೇಷು—ಪರಭೃತಾವಿರುತೈಃ = ಕೋಕಿಲಕೂಜಿತೈಶ್ಚ ॥

44. ಉಪಚಿತಾವಯವಾ ಶುಚಿಭಿಃ ಕಣೈಃ ॥
ಅಲಿಕದಂಬಕಯೋಗಮುಪೇಯುಷೀ ॥
ಸದೃಶಕಾಂತಿರಲಕ್ಷ್ಯತಮಂಜರೀ ।
ತಿಲಕಜಾಲಕಜಾಲಕಮೌಕ್ತಿಕೈಃ ॥ ೪೪ ॥

ವನಭೂಮಿಯಲ್ಲಿರುವ ತಿಲಕವೃಕ್ಷವು ವಸಂತಋತುವಿನ ಆಗಮನಕಾಲದಲ್ಲಿ ಹೂವು ಬಿಟ್ಟಿದೆ. ಶುಭ್ರವಾದ ಬೆಳ್ಳನೆಯ ರೇಣುಗಳಿಂದ ಉಬ್ಬಿ ಅರಳಿದ ಹೂವು ಮಂಜರಿಗಳಿಂದ ಒಪ್ಪಿ ಬಲುಸುಂದರವಾಗಿ ತೋರುತ್ತಿದೆ (ಬೆಳ್ಳನೆಯ ಕಣಗಳಿಂದುಬ್ಬಿ ಬಿರಿದು ಅರಳಿರುವ) ಅವುಗಳನ್ನು ಮುತ್ತಿ ಮಕರಂದಪಾನಮಾಡುತ್ತಿರುವ ಭೃಂಗಗಳ ಸಾಲು ಮುತ್ತಿನ ಮಣಿಗಳಂತೆ ಕಾಣುತ್ತಿವೆ. ಆ ತುಂಬಿಗಳ ಹಿಂಡು ಹೆಣ್ಣುಗಳ ಸುಂದರವಾದ ಗುಂಗುರು ಗುಂಗುರಾದ ಮುಂಗುರುಳನ್ನು ಮುತ್ತುಗಳ ಜಾಲಕವನ್ನು ಕೋದಂತೆ ತೋರುತ್ತಿದೆ. ಬೈತಲೆಯಲ್ಲಿ ಮುತ್ತಿನಾಭರಣವನ್ನು ಇಟ್ಟು ಸಿಂಗರಿಸಿದಂತೆ (ಹೂಜಲ್ಲಿ ಹಾಕಿದಂತೆ), ತಿಲಕವೃಕ್ಷದ ಹೂಗಳ ಮೇಲೆ ದುಂಬಿಗಳ ಸಾಲು ಕುಳಿತು ನಯನಾನಂದಕರವಾಗಿ ಶೋಭಿಸುತ್ತಿತ್ತು (ತಿಲಕಜಾಲಕ, ಜಾಲಕಮೌಕ್ತಿಕೈಃ) (ಅಲಕದೊಳು ಮುತ್ತುಗಳ ಜಾಲಕವ ಕೋದಿರುವ).

ಶುಚಿಭಿಃ=ಶುಭ್ರೈಃ—ತಿಲಕಜಾ=ತಿಲಕವೃಕ್ಷೋತ್ಥಾ ಮಂಜರೀ—ಅಲಕೇಷು ಯೋಜ್ಯಂ ಜಾಲಕಮಾಭರಣವಿಶೇಷಸ್ತಸ್ಮಿನ್ ಮೌಕ್ತಿಕೈಃ ಸದೃಶಕಾಂತಿಃ = ತಿಲಕಜಾಲಕಜಾಲಕಮೌಕ್ತಿಕೈಃ —ಉಪೇಯುಷೀ = ಉಪ + ಇ—ಅಲಕಜಾಲಕಜಾಲಕಮಂಜರೀ ॥

45. ಧ್ವಜಪಟಂ ಮದನಸ್ಯ ಧನುರ್ಭೃತಃ ।
ಛವಿಕರಂ ಮುಖಚೂರ್ಣಮೃತುಶ್ರಿಯಃ ॥
ಕುಸುಮಕೇಸರರೇಣುಮಲಿವ್ರಜಾಃ ।
ಸ ಪವನೋಪವನೋತ್ಥಿತಮನ್ವಯುಃ ॥ ೪೫ ॥

ಅಂದಿನ ಮಧುಮಾಸದಲ್ಲಿ ಆ ಉಪವನವು ಮದನನ (ಅಂಗಜನ) ಗುಡಿಯಂತೆ, ದೇಗುಲದಂತೆ ಎಸೆದಿತ್ತು. ಆ ಮನ್ಮಥದೇವನಾದರೋ (ಕಾಮುಚಕ್ರೇಶ್ವರನು) ಕರದಲ್ಲಿ ಹೂಬಿಲ್ಲನ್ನು ಹಿಡಿದು (ಕರವೆ ಬಿಲ್ವಿಡಿದು ಬರುವಂಗಜನ ಗುಡಿಯೆನಲು) ವನಲಕ್ಷ್ಮಿಯನ್ನು ಮಧುರವೆಯನ್ನು ಹುಂಗುತ್ತಿರುವನು (ಪ್ರವೇಶಿಸುತ್ತಿರುವನು). ಆಗ ಪವನನು ಜೋರಾಗಿ ಬೀಸಲು ಅವನಿಂದೆದ್ದ ಪುಷ್ಪಪರಾಗರೇಣು (ಹೂಹುಡಿ), ಕಾಮದೇವನ ಧ್ವಜಪಟವೆಂಬಂತೆ ಹಾರಾಡುವುದು (ಮಧುರವೆಯ ಪೊಗರುಗುವ ಮೊಗದ ಹುಡಿಯೆನಲು). ಆ ಋತುವಸಂತನು ಕೈಯಲ್ಲಿ ಕಬ್ಬಿನ ಬಿಲ್ಲನ್ನು ಧರಿಸಿರುವನು. ಅದೋ ದುಂಬಿ ವಿಂಡು ಹೂಹುಡಿಯಲ್ಲಿ ಹೊರಳಾಡಿ ಓಡಾಡುತ್ತಿದೆ. ಆ ದುಂಬಿಯು ಮೈಯಲ್ಲಿರುವ ಪುಷ್ಪಪರಾಗರೇಣು ಮಧುರವೆಯ (ವಸಂತಲಕ್ಷ್ಮಿಯ, ಋತುಶ್ರೀಯ) ಸೌಂದರ್ಯ ಸಾಧನವಾದ ಮುಖಚೂರ್ಣವೆನಿಸಿರುವುದು. ಆ ಪರಾಗರೇಣುಗಳೇ ಋತುರಾಜನಾದ ವಸಂತನ ಬಾವುಟವು.

ಪರಾಗರೇಣು = ಮೊಗದ ಹುಡಿ, ಹೂಹುಡಿ. ಅಲಿವ್ರಜಾ = ಷಟ್ಪದನಿವಹಾ— ಧನುರ್ಭೃತೋಃ=ಧಾನುಷ್ಕಸ್ಯ—ಮದನಸ್ಯ = ಕಾಮಸ್ಯ—ಧ್ವಜಪಟಂ=ಪತಾಕಾಭೂತಮ್ —ಋತುಶ್ರಿಯೋ = ವಸಂತಲಕ್ಷ್ಮ್ಯಾಃ ಮುಖಚೂರ್ಣಂ = ಮುಖಾಲಂಕಾರಚೂರ್ಣ ಭೂತಂ—ಕುಸುಮಾನಾಂ ಕೇಸರೇಷು = ಕಿಂಜಲ್ಕೇಷು ಯೋ ರೇಣುಸ್ತಮ್ ॥

**46. ಅನುಭವನ್ನವದೋಲಮೃತೂತ್ಸವಂ ।**
**ಪಟುರಪಿ ಪ್ರಿಯಕಂದಜಿಘೃಕ್ಷಯಾ ॥**
**ಅನಯದಾಸನರಜ್ಜುಪರಿಗ್ರಹೇ ।**
**ಭುಜಲತಾಂ ಜಲತಾಮಬಲಜನಃ ॥ ೪೬ ॥**

ಅಂದಿನ ಆ ಮಧುಮಾಸದ ಉತ್ಸವದಲ್ಲಿ ಆ ಜಾಣೆಯರಾದ ಯುವತಿಯರು ತಮ್ಮ ಪತಿಯರನ್ನು ಉಯ್ಯಾಲೆಯ ತೂಗುಮಣೆಯಲ್ಲಿ ಪ್ರೇಮದಿಂದ ಕುಳ್ಳಿರಿಸಿ ತೂಗಿದರು. ಮಣೆಯ ಹಗ್ಗವನ್ನು ತಮ್ಮ ನಳಿತೋಳಿನಲ್ಲಿ ಹಿಡಿದು ತೂಗುತ್ತಾ ಕೆಲವೊಮ್ಮೆ ಕೈಗಳನ್ನು ಸಡಿಲುಗೊಳಿಸುತ್ತಿದ್ದರು. ಆ ನಳಿತೋಳಿನಬಲೆಯರು ತಮ್ಮ ಇನಿಯರ ಕುತ್ತಿಗೆಯನ್ನು ಬಿಗಿದಾಗಿ ಅಪ್ಪಿಕೊಳ್ಳಲು ಬಯಸಿ ಕೈಯನ್ನು ಸಡಿಲಗೊಳಿಸಲು ಉಯ್ಯಾಲೆಯ ಹಗ್ಗ ಸಡಿಲಗೊಳ್ಳುವುದು. ಈ ತೆರನಾಗಿ ಮುಗ್ಧೆಯರು ಮುದದಿಂದ ಕಾಮೋತ್ಸವವೆಂಬ ಅಮೃತೋತ್ಸವದಲ್ಲಿ ಭಾಗವಹಿಸಿ ನಯನಾನಂದಕರವಾಗಿ ಆಟವಾಡಿದರು (ಕ್ರೀಡಿಸಿದರು).

ನವದೋಲಮೃತೋತ್ಸವಮ್=ವಸಂತೋತ್ಸವಮ್—ಪಟುರಪಿ=ನಿಪುಣೋಽಪಿ— ಆಸನರಜ್ಜುಪರಿಗ್ರಹೇ = ಪೀಠರಜ್ಜುಗ್ರಹಣೇ — ಭುಜಲತಾಂ = ಬಾಹುಲತಾಂ— ಜಲತಾಂ = ಶೈಥಿಲ್ಯಮ್ ॥

**47. ತ್ಯಜತಮಾನಮಲಂ ಬತ ವಿಗ್ರಹೈಃ ।**
**ನ ಪುನರೇತಿ ಗತಂ ಚತುರಂ ವಯಃ ॥**
**ಪರಭೃತಾಭಿರಿತೀವ ನಿವೇದಿತೇ ।**
**ಸ್ಮ ರಮತೇ ರಮತೇ ಸ್ಮ ವಧೂಜನಃ ॥ ೪೭ ॥**

ಕೋಗಿಲೆಗಳು ಕೂಗುತ್ತ ಮದನರಾಜನಾದ ವಸಂತನ ಇಂಗಿತವನ್ನು ಈ ತೆರನಾಗಿ ಡಂಗುರ ಸಾರಿ ಅಂಗನೆಯರಿಗೆ ಅರುಹಿದುವು. "ಎಲೆ ಭಾಮಿನಿಯರೆ (ಭಾಮಾಮಣಿಗಳೆ), ನಿಮ್ಮ ಜಗಳವನ್ನು ತುಸು ನಿಲ್ಲಿಸಿರಿ, ನಿಮ್ಮ ಕೋಪಕ್ಕೆ ಕಾರಣವೇ ಈರ್ಷ್ಯೆ. ನೀವು ಈ ಮದನೋತ್ಸವದಲ್ಲಿ ಕೋಪವನ್ನು ತ್ಯಜಿಸಿ ಸರಸದಿಂದ ಪಾಲ್ಗೊಳ್ಳಿರಿ. ಕಾಮಿನಿಯರಾದ ನಿಮ್ಮ ಸಹಕಾರವಿಲ್ಲದೆ ಉತ್ಸವವು ನಡೆಯುವುದುಂಟೆ? ನಿಮಗೆ ಅಂಗಜನು ನವಯೌವನ, ರೂಪ, ಜಾಣ್ಮೆ, ಮಾತುಗಾರಿಕೆ (ವಾಚಾಳಿತನ) ಎಲ್ಲವನ್ನೂ ಕೊಡುಗೈಯಿಂದ ಕೊಟ್ಟಿರುವನು. ಯೌವನದ ಪ್ರತಿಕ್ಷಣವೂ ಅಮೂಲ್ಯವಾದ ವರವೆಂದು ತಿಳಿಯಿರಿ. ಮರಳಿದ ಕಾಲವು ತಿರುಗಿ ಬರುವುದುಂಟೆ? ಅಂತೆಯೇ ವಯಸ್ಸು, ಯೌವನವು. ಇದು ಕಾಮನ ಶಾಸನ(ಆಜ್ಞೆ)ವೆಂದು ತಿಳಿಯಿರಿ. ನಿಮ್ಮ ವಿರೋಧದಿಂದ ಉತ್ಸವವು ಉತ್ಸವವಾಗಲಾರದು. ನಿಮ್ಮ ಸಹಕಾರವಿಲ್ಲದೆ ಪುರುಷರು ನಪುಂಸಕರಾಗುವರು. ಉತ್ಸವವು ಬರಡಾಗುವುದು. ರಾಗೋಲ್ಲಾಸದಿಂದ ಇಂದೇ ಪಾಲ್ಗೊಳ್ಳಿರಿ ಎಂದು ಮದನ ದೂತನಾದ ಮಧುರಸ್ವರದ ಕೋಗಿಲೆಗಳು ಮಾಮರದಲ್ಲಿ ಕುಳಿತು ತಮ್ಮ ಕೂಜಿತರವದಿಂದ ಕೂಗುತ್ತ ವಸಂತೋತ್ಸವದ ಕರೆಗಂಟೆ ಬಾರಿಸಿದುವು. ಆ ವನಭೂಮಿಯಲ್ಲಿ ಕೋಗಿಲೆಗಳ ಮಾರ್ದನಿ ಮೊಳಗಿತು, ಎಲ್ಲೆಲ್ಲೂ ಪ್ರತಿನಿಧ್ವನಿ ರಣರಣಿಸಿತು.

ಮಾನಂ = ಕೋಪಂ—ನಾಗಚ್ಛತಿ = ನ ಪುನರೇತಿ—ಸಾರವಂತೇ = ಸ್ಮರಾಭಿಪ್ರಾಯೇ—ಪರಭೃತಾಭಿಃ = ಕೋಕಿಲಾಭಿಃ—ಕೋಕಿಲಕೂಜಿತೋದ್ದೀಪಿತ ಸ್ಮರಃ—ಸ್ತ್ರೀಜನಃ = ಕಾಮಶಾಸನ—ಮಾನವರ್—ಈರ್ಷ್ಯಾ—ಅಮಂತ್ರೇಣ ॥

**48.** **ಅಥ ಯಥಾ ಸುಖಮಾರ್ತವಮುತ್ಸವಂ ।**
**ಸಮನುಭೂಯ ವಿಲಾಸವತೀ ಸಖಃ ॥**
**ನರಪತಿಶ್ಚಕಮೇ ಮೃಗಯಾರತಿಂ ।**
**ಸ ಮಧುಮನ್ಮಧುಮನ್ಮಥಸನ್ನಿಭಃ** ॥ ೪೮ ॥

ಅಂದಿನ ಆ ವಸಂತಮಾಸದಲ್ಲಿ ಮಧುನಿಭನು, ಮಧುಮಂದನಸನ್ನಿಭನು, ಮನ್ಮಥನಿಗೆ ಸಮನಾದ ದಶರಥಸಾರ್ವಭೌಮನು ಮನಸದಣಿಯುವ ತನಕ ತನ್ನ ಕಾಮಿನೀಜನರೊಂದಿಗೆ ವಸಂತೋತ್ಸವವನ್ನು ಆಚರಿಸಿ ಸುಖಿಸಿದನು. ಆ ರಾಜನು ಮಧುವೆಂಬ ರಾಕ್ಷಸನನ್ನು ವಧಿಸಿದ ಮಹಾವಿಷ್ಣುವಿನಂತೆ ಬಲಶಾಲಿ. ಮನ್ಮಥನು ಕಾಮದೇವನು, ಮನಸಿಜನು, ಎಲ್ಲರ ಮನಸದಲ್ಲಿ ಹುಟ್ಟುವವನು. ಮನ್ಮಥೋಪಮನಾದ ಕಾಮಿನೀಸಖನಾದ ದಶರಥನು ವಿಲಾಸವತಿಯರಾದ ತನ್ನ ಸ್ತ್ರೀಯರೊಂದಿಗೆ ಬೆರೆತು, ವಸಂತೋತ್ಸವದಲ್ಲಿ ಭಾಗಿಯಾಗಿ ಸಕಲ ಸುಖಗಳನ್ನು ಅನುಭವಿಸಿ ಸಂತೃಪ್ತಿಹೊಂದಿದನು. ಆ ಬಳಿಕ ಕ್ರೀಡಾಲೋಲನಾದ ಆ ನರೇಂದ್ರನು ಮೃಗಬೇಟೆಗೆ, ಮೃಗವಿಹಾರಕ್ಕೆಂದು ಉತ್ಕಟಿತನಾದನು. ಮನ್ಮಥನಂತೆ ಕಂಠಾಲಂಕಾರನಾದ ದಶರಥಸಾರ್ವಭೌಮನು ಮೃಗಬೇಟೆಯನ್ನು ಬಯಸಿ ಹೊರಡಲು ಉದ್ಯುಕ್ತನಾದನು.

ಮಧುರ್ವಸಂತಃ—ಮನಸೋಮಥೋ=ಮನ್ಮಥಃ, ಕಾಮಃ—ಮಧುಮನ್ಮಧುಮನ್ಮಥ ಸಂನಿಭಃ = ಮಧುನಿಭನು, ಮಧುಮಂದನಸನ್ನಿಭನು, ಮನ್ಮಥೋಪಮನು, ಯಥಾ ಸುಖಮ್=ಮನಸದಣಿಯುವತನಕ ಸುಖವನನುಭವಿಸಿ—ಮಧುಮಥನ = ಮಧುಸೂದನ = ಮಹಾವಿಷ್ಣು ॥

**49.** **ಪರಿಚಯಂ ಚಲಲಕ್ಷ್ಯನಿಪಾತನೇ ।**
**ಭಯರುಷೋಶ್ಚ ತದಿಂಗಿತಬೋಧನಮ್ ॥**
**ಶ್ರಮಜಯಾತ್ಪ್ರಗುಣಾಂ ಚ ಕರೋತ್ಯಸೌ ।**
**ತನುಮತೋಽನುಮತಃ ಸಚಿವೈರ್ಯಯೌ** ॥ ೪೯ ॥

ಸಪ್ತವ್ಯಸನಗಳಲ್ಲಿ ಒಂದಾದ ಮೃಗಬೇಟೆಯನ್ನು, ಸಚಿವರುಗಳು ಉಪದೇಶಿಸಿದ ಕೆಲವೊಂದು ಆದರ್ಶಗಳ ಪಾಲನೆಗಾಗಿ ಅರಸನು ಆರಿಸಿಕೊಂಡನು. ಲಕ್ಷ್ಯಭೇದವನ್ನು ಅರಿಯುವುದು (ಚಲಲಕ್ಷ್ಯಪಾತನಾಭ್ಯಾಸವನು ದೊರಕಿಪ್ಪುದು), ಗುರಿಯಿಟ್ಟು ಹೊಡೆಯುವುದು, ಧನುರ್ವಿದ್ಯೆಯು ಅಭ್ಯಾಸವೆನಿಸುವುದು ಇದರ ಫಲವಾದ ಉದ್ದೇಶ. ಭಯ, ರೋಷ, ಕ್ರೋಧ, ಪೌರುಷ ಮೊದಲಾದ ಗುಣಗಳನ್ನು ಬೋಧಿಸುವ ಸಲುವಾಗಿಯೇ ರಾಜರಿಗೆ ಬೇಟೆಯು ಪ್ರಿಯವಾಗಿರುವುದು. ಶರೀರವು (ತನುವು) ಬೇಟೆಯ ಶ್ರಮದಿಂದ (ಬಲಗೊಳ್ಳುವುದು) ದೃಢಗೊಳ್ಳುವುದು. ('ಶರೀರಮಾದ್ಯಂ ಖಲು ಧರ್ಮಸಾಧನಂ,

ಎಂಬುತ್ತೆ) ಅಂಗಾಂಗಗಳು ಬಲಗೊಳ್ಳುವುವು. ಬಾಣಸೆಳೆದುಬಿಡುವುದರಿಂದ ಹಸ್ತಲಾಘವ, ಕೈಚಳಕದ ಅಭ್ಯಾಸ ದೊರೆಯುವುದು, ಸೇದವೂ ಕಳೆದವುದು, ಬೊಜ್ಜು ಕರಗುವುದು —ಈ ಎಲ್ಲ ಮೌಲ್ಯಗಳಿಂದ ವ್ಯಸನರೂಪವಾದ ಬೇಟೆಯೂ ಸೈನಿಕವೃತ್ತಿಯವರಿಗೆ (ಯೋಧರಿಗೆ) ಶುಭದಾಯಕವಾದ ಪ್ರವೃತ್ತಿಯೆನಿಸಿರುವುದು. ಅರಸನು ಸಚಿವರ ಮಾತನ್ನು ಅನುಮೋದಿಸಿ ಬೇಟೆಗೆ ಹೊರಟನು.

ತೇಷಾಂ ನಿಪಾತನೇ ಪರಿಚಯಮಭ್ಯಾಸಂ ಕರೋತಿ—ಭಯರುಷೋರ್ಭಯಕ್ರೋಧಯೋಸ್ತದಿಂಗಿತಬೋಧನಂ ತೇಷಾಂ ಚ ಲಕ್ಷ್ಯಾಣಾಮಿಂಗಿತಸ್ಯ ಚೇಷ್ಟಿತಸ್ಯ—ಬೋಧನಂ =ಜ್ಞಾನಂ ಚಕರೋತಿ—ತುಹಿತ=ತೇಷಾಂ ಚ ಲಲಕ್ಷ್ಯಾಣಾಮ್ ಇಂಗಿತಸ್ಯ ಬೋಧನೇ ॥

50. ಮೃಗವನೋಪಗಮಕ್ಷಮವೇಷಭೃತ್ ।
ವಿಪುಲಕಂಠನಿಷಕ್ತಶರಾಸನಃ ॥
ಗಗನಮಶ್ವಖುರೋದ್ಧತರೇಣುಭಿಃ ।
ನೃಸವಿತಾ ಸವಿತಾನಮಿವಾಕರೋತ್ ॥ ೫೦ ॥

ಆ ಬುದ್ಧಿಸಾಗರನಾದ ನೃಪವರ ದಶರಥನು ಮೃಗಯಾವಿಹಾರಕ್ಕೆ ಅನುಗುಣವಾದ ವೇಷಭೂಷಣವನ್ನು ಧರಿಸಿ, ತನ್ನ ಕುತ್ತಿಗೆಯ ಭಾಗದಲ್ಲಿ ಮಹಾಧನುಸ್ಸನ್ನು ಇಳಿಬಿಟ್ಟು, ಮೃಗಗಳಿಂದ ತುಂಬಿರುವ ಕಾನನದೆಡೆಗೆ ಭೂಸೇನಾಸಮೇತ ಹೊರಟನು. ಆ ರಾಜನ ರಥದ ಅಶ್ವಗಳ ಕಾಲಿಂದ (ಕುದುರೆಗಳ ಲದ್ದಿಗಳು) ಎದ್ದ ಧೂಳು ಭಾನುಮಂಡಲವನ್ನು ಮುಸುಕಿತು. ಆಕಾಶಮಂಡಲಕ್ಕೆ ದೂಳಿನ ಮೇಲ್ಛಾವಣಿಯ ಬಟ್ಟೆಯನ್ನು ಒಡರ್ಚಿತ (ಹೊದಿಸಿ) ಆ ನೃಪಶ್ರೇಷ್ಠನು ಉತ್ತರಭಾರತದ ಗೊಂಡಾರಣ್ಯದಲ್ಲಿ ಶಬರರ (ಕಿರಾತರ) ಸಮೇತ ಬೇಟೆಗೆ ಹೊರಟನು.

ನೃಸವಿತಾ = ನಾ ಸವಿತಾ ಇವ ಅಥವಾ ನೃಪಃ ಸವಿತಾ—ವಿಪುಲಕಂಠೇ ನಿಷಕ್ತಶರಾಸನೋ = ಲಗ್ನಧನ್ವಾ—ಸಾ ಸವಿತೇವ ನೃಸವಿತಾ = ಪುರುಷಶ್ರೇಷ್ಠಃ—ಗಗನಂ ಸಾಲಕ್ಷ್ಯತೇ ಇತ್ಯರ್ಥಃ ॥ 'ವಿತಾನಂ ತುಚ್ಛಮಂದಯೋಃ' ಇತಿ ವಿಶ್ವಃ ॥

51. ಗ್ರಥಿತ ಮೌಲಿರಸೌ ವನಮಾಲಯಾ ।
ತರುಪಲಾಶ ಸವರ್ಣತನುಚ್ಛದಃ ॥
ತುರಗವಲ್ಗನಚಂಚಲಕುಂಡಲೋ ।
ವಿರರುಚೇ ರುರುಚೇಷ್ಟಿತ ಭೂಮಿಷು ॥ ೫೧ ॥

ಆ ರಾಜರಾಜನು ಶಬರವೇಷಧಾರಿಯಾಗಿ ಪೊರವಟ್ಟನು. ಮರಗಿಡಗಳ ಹಸುರಾದ ಎಲೆಗಳ ಅಂಗಿಯನ್ನು ಧರಿಸಿ (ಮರಗಿಡಗಳೆಲೆಬಣ್ಣದಂಗಿಯನು ತೊಟ್ಟವನು) ಕಾಡಿನ ಹೂಬಳ್ಳಿಗಳಿಂದ ತನ್ನ ಮುಡಿಯನ್ನು (ಜುಟ್ಟನ್ನು) ಕಟ್ಟಿಕೊಂಡನು. ಆ ಬಳಿಕ ಅಶ್ವಾರೋಹಿಯಾಗಿ, ಕುದುರೆಯ ನೆಗೆತಕ್ಕೆ ಓಲಾಡುತ್ತಿರುವ ಮಕರಕುಂಡಲವಿರುವ (ಕುದುರೆ ನೆಗೆತಕೆ ಒಲಿವ ಮಕರಕುಂಡಲದವನು) ಆ ಜನಪನು, ಶ್ರೇಷ್ಠ ಜಾತಿಯ ರುರುಗಳೆಂಬ ಜಿಂಕೆಗಳಿಂದ ತುಂಬಿರುವ ಕಾಂತಾರಕ್ಕೆ ಮೃಗಬೇಟೆಗೆಂದು ತೆರಳಿದನು.

ವನಮಾಲಯಾ = ಪತ್ರಪುಷ್ಪಮಯೀ ಮಾಲಾ ವನಮಾಲಾ ಪ್ರಕೀರ್ತಿತಾ (ಚಾರಿತ್ರವರ್ಧನ)—ವನಮಾಲಯಾ = ವನಪುಷ್ಪಸ್ರಜಾ—ತುರಗಸ್ಯ ವಲ್ಗನೇನ = ಗತಿವಿಶೇಷೇಣ —'ರುರುಂಭಿವರ್ಲ್ಗಗವಿಶೇಷೇ'—ತನುಚ್ಛದಃ = ತನುಂ ಚ್ಛಾದತೇ ಅಸೌ ॥

52. **ತನುಲತಾವಿನಿವೇಶಿತವಿಗ್ರಹಾ ।**
**ಭ್ರಮರಸಂಕ್ರಮಿತೇಕ್ಷಣವೃತ್ತಯಃ ॥**
**ದದೃಶುರಧ್ವನಿ ತಂ ವನದೇವತಾಃ ।**
**ಸುನಯನಂ ನಯನಂದಿತಕೋಸಲಮ್ ॥ ೫೨ ॥**

ಅಲ್ಲಿ ಆಕಾಶದಲ್ಲಿರುವ ವನದೇವತೆಗಳು ತಮ್ಮ ದೇಹವನ್ನು ತೆಳ್ಳನೆಯ ಬಳ್ಳಿಯಲ್ಲಿ ಮರೆಮಾಡಿ ರೂಪ ಐಶ್ವರ್ಯದಿಂದ ಮೆರೆಯುವ ರೂಪಜಿತಕಾಮನಾದ ಕೋಸಲಾಧೀಶ್ವರನನ್ನು ಕಣ್ತುಂಬಾ ನೋಡಿ ಆನಂದಿಸಿದರು. ಆ ವನದೇವಿಯರು ತೆಳ್ಳನೆಯ ಬಳ್ಳಿಯೊಳಗೆ ತಮ್ಮ ಮೈಯನ್ನು ಮರೆಮಾಡಿಕೊಂಡರು (ಅಡಗಿಸಿಕೊಂಡರು). ಅವರು ತುಂಬಿಗಳ ಮೂಲಕ ತಮ್ಮ ದೃಷ್ಟಿಗಳನ್ನು ತುಂಬಿಗಳಲ್ಲಿ ಅಡಗಿಸಿ ರಾಜಗಾಂಭೀರ್ಯದಿಂದ ಮೆರೆಯುವ ಸಿಂಹವಿಕ್ರಮಿಯನ್ನು ಕಣ್ಣಿನಿಂದ ನೋಡಿ ಆನಂದಿಸಿದರು. ಕಣ್ಣುಗಳಿಗೆ ಆನಂದಕರನಾದ, ನಯನಸಂತೋಷಿತೇಶ್ವರನಾದ, ರೂಪಸಾಮ್ರಾಟನಾದ ಆ ಮಹೇಶ್ವರನು ಆ ವನಭೂಮಿಯಲ್ಲಿ ಸಂಚರಿಸುತ್ತಿರುವುದನ್ನು ಕಂಡು ಸಂತಸದಿಂದ ನಲಿದರು.

ತನುಷು ಲತಾಸು ವಿನಿವೇಶಿತ ವಿಗ್ರಹಾಃ=ಸಂಕ್ರಮಿತದೇಹಾಃ—ಸುಲೋಚನಂ—ನಂದಿತಾ ಸ್ತೋಷಿತಾಃ ಯೇನ ತಂ=ದಶರಥಮಧ್ವನೇ ದದೃಶುಃ—ಗೂಢವೃತ್ತ್ಯಾ ದದೃಶುಃ ಇತ್ಯರ್ಥಃ ॥

53. **ಶ್ವಗಣಿವಾಗುರಿಕೈಃ ಪ್ರಥಮಾಸ್ಥಿತಂ ।**
**ವ್ಯಪಗತಾನಲದಸ್ಯು ವಿವೇಶ ಸಃ ॥**
**ಸ್ಥಿರತುರಂಗಮಭೂಮಿನಿಪಾನವತ್ ।**
**ಮೃಗವಯೋಗವಯೋಪಚಿತಂ ವನಮ್ ॥ ೫೩ ॥**

ಆ ದಟ್ಟವಾದ ಕಾಡಡವಿಯಲ್ಲಿ ಬೇಡರ ಪಡೆ ಬಲೆ ಮತ್ತು ಬೇಟೆನಾಯಿಗಳ ಸಮೇತ ನಡೆದು ರಾಜನ ಆಗಮನಕ್ಕೆ ಬೇಕಾದ ಸಿದ್ಧತೆಯನ್ನು ನಡೆಸಿದರು (ಬಲೆನಾಯ್ಗಳನು ಹಿಡಿದು). ಅವರು ಕಾಡನ್ನು ಕಾಳ್ಗಿಚ್ಚು (ದಾವಾನಲ) ಮತ್ತು ಕಳ್ಳಕಾಕರ ಕಾಟದಿಂದ ಮುಕ್ತಗೊಳಿಸಿ ಬೇಟೆಗೆ ಬೇಕಾದ ಸಕಲಸಿದ್ಧತೆಯನ್ನು ಮಾಡಿದರು. ಭೂಮಿಯನ್ನು ಹದಗೊಳಿಸಿ ಅಲ್ಲಲ್ಲಿ ಕಾಲುದಾರಿಗಳನ್ನು, ಕುದುರೆಗಳು ಓಡಾಡಲು ಗಟ್ಟನೆಲದ ಕಾಲುದಾರಿಗಳನ್ನು ಅಗೆದು ಅಣಿಗೊಳಿಸಿದರು (ನೀರುನಡೆಗಳ ನೋಡಿ, ವಾಜಿಗಮನಕೆ ಸಮೆದು). ಜವುಗು ನೆಲವನ್ನು ಹದಗೊಳಿಸಿ ಓಡಾಡಲು ತೊಂದರೆಯಿಲ್ಲದಂತೆ ಸರಿಪಡಿಸಿದರು. ಆ ವನಭೂಮಿಯು ಗವಯ, ಜಿಂಕೆ (ಹರಿಣಿ), ಕಡವೆಗಳ ಹಿಂಡಿನಿಂದ, ಪಕ್ಷಿನಿಕರದಿಂದ ಸಮೃದ್ಧವಾಗಿ ಬೇಟೆಗೆ ತಕ್ಕುದಾಗಿತ್ತು.

ಶುನಾಂಗಣಃ = ಸ ಏಷಾಮಸ್ತೀತಿ ಶ್ವಗಣಿನಃ ಶ್ವಗ್ರಾಹಿಣಃ—ವಾಗುರಿಕಾ = ಜಾಲಿಕಾ —ಚರತಿ (ಪಾಣಿನಿ)—ಅನಲಾ = ದಾವಾಗ್ನಯೋ—ಸ್ಥಿರಾ = ದೃಢಾ ॥

**54. ಅಥ ನಭಸ್ಯ ಇವ ತ್ರಿದಶಾಯುಧಂ ।**
**ಕನಕಪಿಂಗತಡಿದ್ಗುಣಸಂಯುತವ್ ॥**
**ಧನುರಧಿಜ್ಯಮನಾಧಿರುಪಾದದೇ ।**
**ನರವರೋರವರೋಷಿತಕೇಸರೀ ॥ ೫೪ ॥**

ಆ ಮಹಾರಥನಾದ ನರವರ ದಶರಥ ಮಹಾರಾಜನು ತನ್ನ ಕೈಯಲ್ಲಿ ಮಹಾ ಧನುಸನ್ನು ಹಿಡಿದು ಒಮ್ಮೆ ಸಿಂಜಿನಿಯನ್ನು ಎಳೆದು ಜ್ಯಾರವವನ್ನು ಮಾಡಿದನು. ಆ ಬಿಲ್ಲಿನ ನಾರಿಯ ಶಬ್ದವು (ಧನುಷ್ಟಂಕಾರದ ಶಬ್ದವು) ಕಾನನಾನ್ವಿತ ಭೂಮಿಯಲ್ಲಿ ಪ್ರತಿಧ್ವನಿ ಯಾಯಿತು. ಆ ರವವನ್ನು ಕೇಳಿ ಕೇಸರಿಗಳು (ಸಿಂಹಗಳು) ಕೆರಳಿ ರೊಚ್ಚಿಗೆದ್ದವು. ಕೂಡಲೇ ಗುಹೆಗಳಿಂದ ಹೊರಬಂದವು (ಜ್ಯಾರವದೆ ಕೇಸರಿಯು ಕೆರಳಿಸುವ ನರವರನು). ಇನಕುಲಭೂಷಣನಾದ ದಶರಥನು ಕೈಯಲ್ಲಿ ಧರಿಸಿದ ಬಿಲ್ಲಿನ ಹೆದೆಯು ಮಿಂಚಿನಂತೆ ಥಳಥಳಿಸುತ್ತ (ಚಿನ್ನದೋಲು ತಳತಳನೆ ಹೊಳೆವ ಮಿಂಚಿನ ಹೆದೆಯು) ಭಾದ್ರಪದ ಮಾಸದಲ್ಲಿ ಕಾಣುವ ತ್ರಿದಶ (ಮೂವತ್ತು) ದೇವತೆಗಳಿಗೆ ಒಡೆಯನಾದ ಮೇಘಾಧಿಪ ಇಂದ್ರನ ಏಳು ಬಣ್ಣದಿಂದ ಹೊಳೆಯುವ ಕಾಮನಬಿಲ್ಲಿಗೆ (ಇಂದ್ರಚಾಪ, ಮಳೆಬಿಲ್ಲು) ಸಮನಾಗಿತ್ತು (ಹನಿಗೆಣೆಯ ಮಳೆಬಿಲ್ಲನು). ಭಾದ್ರಪದ ಮಾಸದಲ್ಲಿ ಆಕಾಶದಲ್ಲಿ ಸುಂದರ ವಾಗಿ ಮೂಡುವ ಮಳೆಬಿಲ್ಲಿಗೆ ಅವನ ಧನುಸ್ಸು ಸಮನಾಗಿತ್ತು.

ನರವರೋ = ನರಶ್ರೇಷ್ಠಃ—ರೋಷಿತಾಃ ಕೇಸರಿಣಃ ಸಿಂಹಾ ಯೇನ ಸ ರಾಜಾ— ಕನಕಮಿವ ಪಿಂಗಃ—ತ್ರಿದಶಾಯುಧಮಿಂದ್ರಚಾಪಂ—ಧನುರುಪಾಪದೇ = ಜಗ್ರಾಹ ॥

**55. ತಸ್ಯ ಸ್ತನಪ್ರಣಯಿಭಿರ್ಮುಹುರೇಣಶಾವೈಃ ।**
**ವ್ಯಾಹನ್ಯಮಾನಹರಿಣೀ ಗಮನಂ ಪುರಸ್ತಾತ್ ॥**
**ಆವಿರ್ಬಭೂವ ಕುಶಗರ್ಭಮುಖಂ ಮೃಗಾಣಾಂ ।**
**ಯೂಥಂ ತದಗ್ರಸರಗರ್ವಿತಕೃಷ್ಣಸಾರವ್ ॥ ೫೫ ॥**

ಮರಿಜಿಂಕೆಗಳು (ಹರಿಣಶಿಶುಗಳು) ತಾಯಿಜಿಂಕೆಯ ಸ್ತನಪಾನಮಾಡುತ್ತಾ ಹಿಂದಿನಿಂದ ಓಡುತ್ತಾ ಬರುತ್ತಿವೆ. ಹೀಗೆ ಓಡುತ್ತಾ ಬಂದು ತಾಯಿಜಿಂಕೆಗಳ ಓಂಗಾಲನ್ನು ಅಡ್ಡಗಟ್ಟು ತ್ತಿವೆ. ಚಲನದಲ್ಲಿರುವ ಓಂಗಾಲುಗಳನ್ನು (ಕಾಲುಗಳಿಗೆ ಅಡಿಗಡಿಗೆ ತೊಡರುತ) ಪುಟಾಣಿ ಮೃಗಗಳು ತಾಯಿಜಿಂಕೆಯ ಬೆನ್ನು ಹಿಡಿದು ಬರುತ್ತಿದ್ದವು. ಇದೀಗ ಬೇಟೆ ಆರಂಭವಾಗಿ ರುವುದರಿಂದ, ಬೇಡರ ನಾನಾವಿಧದ ಶಬ್ದಗಳಿಂದ ಮೃಗಹಿಂಡು ಮುಂದೆ ಓಡುತ್ತಾ ಚಲಿಸುತ್ತಿವೆ. ಅವುಗಳ ಮರಿಗಳು ಹಿಂದಿನಿಂದಲೇ ಬರುತ್ತಾ ಸ್ತನಪಾನಕ್ಕಾಗಿ ಓಡೋಡಿ ಬರುತ್ತಲಿವೆ. ಕೆಲವು ಕುಶಸೂಚಿಯನ್ನು ಮೆಲ್ಲುತ್ತಾ (ಕೆಲವು ಕುಶಸೂಚಿಯನು ಮೆಲುತಿರೆ) ಮೆಲುಕುಹಾಕುತ್ತಾ ಮುಂದೆ ಓಡುತ್ತಿವೆ. ಹೀಗೆ ಓಡುತ್ತಿರುವ ಹುಲ್ಲೆಹಿಂಡನ್ನು ನೋಡಿ ದಶರಥನೃಪಾಲನ ಮನವು ನಲಿಯಿತು. ಆ ಜಿಂಕೆಯ ಹಿಂಡು ಹೋದ ದಾರಿಯುದ್ದಕ್ಕೂ ಅವುಗಳ ಬಾಯಿಯಿಂದ ಜಗುಳ್ದ (ಜಾರಿಬಿದ್ದ) ದರ್ಭೆಹುಲ್ಲು ಕಾಣುತ್ತಿದೆ. ಮುಂದೆ ಕಪ್ಪಾದ ಕೃಷ್ಣಮೃಗವು (ಕೃಷ್ಣರಾಜಮೃಗ) ರಾಜನಂತೆ ಠೀವಿಯಿಂದ ಮುಂದೆ ನಿಂತಿರುವ

ದೃಶ್ಯವನ್ನು ನೋಡಿ ಆ ಇನಕುಲಸಾರ್ವಭೌಮನ ಮನ ತಣಿಯಿತು. ಅವನ ಮನಸ್ಸು ತಣಿವ ತನಕ ಕಣ್ಣು ಹೊರಳಿಸಿ ನೋಡಿದ.

ಅನ್ವಯ :—ಸ್ತನಪ್ರಣಯಿಭಿಃ ಏಣಾ ಶಾಪೈಃ ಮುಹುಃ ಪ್ರ್ಯಾಹನ್ಯಮಾನಹಾರಿಣೀ ಗಮನಂ ಕುಶಗರ್ಭಮುಖಂ ತದಗ್ರಸರಗರ್ವಿತ ಕೃಷ್ಣಸಾರಂ ಮೃಗಾಣಾಂ ಯೂಥ ತಸ್ಯ ಪುರಸ್ತಾತ್ ಆವಿರ್ಬಭೂವ ॥

ಸ್ತನಪ್ರಣಯಿಭಿಃ = ಸ್ತನೇಷು ಪ್ರಣಯಃ ಯೇಷಾಂ ತೇ—'ಪ್ರಥುಕಃ, ಶಾಬಕಃ, ಶಿಶು' ಇತ್ಯಮರಃ—ಕುಶಾಗರ್ಭೇ ಏಷಾಂ ತಾನಿ ಮುಖಾನಿ ಯಸ್ಯ ತತ್ ಕುಶಗರ್ಭಮುಖಮ್ —ವಸಂತತಿಲಕವೃತ್ತಮ್ ॥

**56. ತತ್ಪ್ರಾರ್ಥಿತಂ ಜವನವಾಜಿಗತೇನ ರಾಜ್ಞಾ ।**
**ತೂಣೀಮುಖೋದ್ಧೃತ ಶರೇಣ ವಿಶೀರ್ಣಪಂಕ್ತಿ ॥**
**ಶ್ಯಾಮೀಚಕಾರವನಮಾಕುಲದೃಷ್ಟಿಪಾತೈಃ ।**
**ವಾತೇರಿತೋತ್ಪಲದಲಪ್ರಕರೈರಿವಾರ್ದ್ರೈಃ ॥ ೫೬ ॥**

ವಾಯುವೇಗದಲ್ಲಿ ಹೋಗಬಲ್ಲ ಅಶ್ವವನ್ನು ಅರಸನು ಏರಿ ಬತ್ತಳಿಕೆಯಿಂದ ಒಂದು ಅಂಬನ್ನು ಸೆಳೆದು ಬಿಲ್ಲಿಗೆ ಜೋಡಿಸಿ ಹುಲ್ಲೆಹಿಂಡುಗಳ ಬೆನ್ನಟ್ಟಬಂದು ಗುರಿಯಿಟ್ಟು ಹೊಡೆಯಲು ಸನ್ನದ್ಧನಾದನು. ಅಷ್ಟರಲ್ಲಿ ಭಯಚಕಿತವಾದ ಆ ಜಿಂಕೆಹಿಂಡು ಅಡವಿಯ ಒಡಲಲ್ಲಿ ಚದುರಿದುವು. ಕಪ್ಪಾದ ಕಣ್ಣುಗಳುಳ್ಳ ಭಯಚಕಿತವಾದ ಅಶ್ರುಪೂರ್ಣವಾದ ನಯನಗಳ ಆ ಜಿಂಕೆಗಳು ಭಯಬೀರುವ ದೃಷ್ಟಿಯಿಂದ ನೋಡುತ್ತ ಆ ಕಾಡಿನ ಒಡಲನ್ನೇ ತಮ್ಮ ನೋಟದಿಂದ ಕಪ್ಪುಗೈದಂತೆ ಕಂಡಿತು (ಹಿರಿದ ಜಿಂಕೆಗಳಶ್ರುದೃಷ್ಟಿಯೊಳಡವಿಯೊಡಲನು ಕಪ್ಪುಗೈದವು). ಜೋರಾಗಿ ಮಾರುತವು ಬೀಸಿದಾಗ ಕನ್ನೈದಿಲೆ ಹೂಗಳ ಕಪ್ಪಾದ ದಳಗಳು ಎಲ್ಲಾ ಕಡೆಗೂ ಹಾರಿ ಪಸರಿಸುವಂತೆ ಆ ಜಿಂಕೆಗಳ ಕಣ್ಣುಗಳ ಕಾಡಿಗೆಯ ಕರಿದಾದ ಕಾಂತಿ ರಂಜಿಸಿತು.

ಅನ್ವಯ :—ಜವನವಾಜಿಗತೇನ ತೂಣೀಮುಖೋದ್ಧೃತ ಶರೇಣ ರಾಜ್ಞಾ ಪ್ರಾರ್ಥಿತಂ ವಿಶೀರ್ಣಪಂಕ್ತಿ ತತ್ ಆರ್ದ್ರೈಃ ಆಕುಲದೃಷ್ಟಿಪಾತೈಃ ವಾತೇರಿತೋತ್ಪಲದಲ ಪ್ರಕರೈಃ ಇವ ವನಂ ಶ್ಯಾಮೀಚಕಾರ ॥

ಜವನವಾಜಿಗತೇನ—ಜವನ—ಜು (ಗತೌ) ಜು ಚೆಪ್ ಕ್ರಮ್ಯ—ವಾತೇರಿತ—ವಾತೇನ ಈರಿತಾನಿ ಉತ್ಪಲಾನಾಂ ದಲಾನಿ ತೇಷಾಂ ಪ್ರಕರೈಃ ಇವ ॥ ತರಸ್ವೀ, ತ್ವರಿತೋ, ವೇಗೀ, ಪ್ರಜವೀ, ಜವನೋ. ಜವಃ' ಇತ್ಯಮರಃ—ತಸ್ಯಾ ಮುಖಾದ್ವಿವರಾದುದ್ಧೃತ ಶರೇಣ ರಾಜ್ಞಾ ಪ್ರಾರ್ಥಿತಮಭಿಯಾಚಿತಮ್–"ಯಾಚ್ಞಾ ಯಾಮಭಿಯಾನೇ ಚ ಪ್ರಾರ್ಥನಾ ಕಥ್ಯತೇ ಬುಧೈಃ" ಇತಿ ಕೇಶವಃ ॥

**57. ಲಕ್ಷ್ಯೀಕೃತಸ್ಯ ಹರಿಣಸ್ಯ ಹರಿಪ್ರಭಾವಃ ।**
**ಪ್ರೇಕ್ಷ್ಯಸ್ಥಿತಾಂ ಸಹಚರೀಂ ವ್ಯವಧಾಯ ದೇಹಮ್ ॥**

**ಆಕರ್ಣಕೃಷ್ಟಮಪಿ ಕಾಮಿತಯಾ ಸ ಧನ್ವೀ ।**
**ಬಾಣಂ ಕೃಪಾಮೃದುಮನಾಃ ಪ್ರತಿಸಂಜಹಾರ || ೫೭ ||**

ಹೆಣ್ಣುಜಿಂಕೆಯು ಮಧ್ಯೆ ಗೋಚರಿಸುವ ಕೃಷ್ಣಸಾರಂಗ(ಗಂಡುಜಿಂಕೆ)ವನ್ನು ಕಂಡು, ಶ್ರೀಹರಿ, ಮಹೇಂದ್ರರಿಗೆ (ಹರಿ=ಮಹಾವಿಷ್ಣು) ಸಮನಾದ ಪ್ರಭಾವವುಳ್ಳ, ಮಹಾಧನ್ವಿಯಾದ ಆ ರಾಜೇಂದ್ರನು ಒಂದು ನಿಶಿತಬಾಣವನ್ನು ತೆಗೆದು ಅದರ ಒಡಲಿಗೆ ಗುರಿಯಿಟ್ಟು ಸೆಳೆದನು. ಆದರೆ ಮರುಕ್ಷಣವೇ ಹೆಣ್ಣುಜಿಂಕೆಗೆ ಮರೆಯಾಗಿ ನಿಂದಿರುವ ಆ ಗಂಡುಜಿಂಕೆಯ ಮೇಲೆ ಒಲವನ್ನು ತೋರಿದನು. ಏಕೆಂದರೆ ಅವನು ಒಲುಮೆ, ಪ್ರೇಮಂಗಳ ಮರ್ಮವನ್ನು ಅರಿತವನು. ತೊಟ್ಟ ಬಾಣವನ್ನು, ಕಿವಿವರೆಗೆ ಸೆಳೆದಿದ್ದರೂ ಕರುಣಾರ್ದ್ರಹೃದಯನಾಗಿ ಹೆದೆಯಿಂದ ಇಳುಹಿದನು. ಪ್ರೇಮಪಾಶದಿಂದ ಗಂಡುಜಿಂಕೆಯು ಹೆಣ್ಣುಜಿಂಕೆಗೆ ಮರೆಯಾಗಿ ನಿಂತುದನ್ನು (ಪ್ರೇಮವಶದಿಂದೊಡನೆ ಮರೆಗೈದುದನು) ಕಂಡು ತಾನೂ ಪ್ರೇಮಿಯಾದುದರಿಂದ ಅವನ ಮನಸ್ಸನ್ನು ಅದು ಕೆದಕಿತು (ತಾನು ಒಲುಮೆಯ ಬಲ್ಲ ಕತದಿಂ). ಕೃಪೆಗೆ ಹೆಸರಾದ, ಮೃದುಮನದ, ಕರುಣಾರ್ದ್ರಹೃದಯನಾದ, ದಶರಥ ರಾಜೇಂದ್ರನು ಆಕರ್ಣಾಂತನಾಗಿ ಸೆಳೆದ ಬಾಣವನ್ನು, ಕೊಲ್ಲಲು ಮನಸ್ಸು ಬಾರದೆ, ಹಾಗೆಯೇ ಸಡಿಲುಗೊಳಿಸಿದನು.

ಅನ್ವಯ :—ಲಕ್ಷ್ಯೀಕೃತಸ್ಯ ಹರಿಣಸ್ಯ ಸಹಚರೀಂದೇಹಂ ವ್ಯವಧಾಯ ಸ್ಥಿತಾಂ ಪ್ರೇಕ್ಷ್ಯ ಹರಿಪ್ರಭಾವಃ ಸಃ ಕಾಮಿತಯಾ ಕೃಪಾಮೃದುಮನಾಃ ಧನ್ವೀ ಆಕರ್ಣಕೃಷ್ಟಮ್ ಅಪಿ ಬಾಣಂ ಪ್ರತಿಸಂಜಹಾರ ||

ಆಕರ್ಣಕೃಷ್ಟಂ=ಕರ್ಣಪರ್ಯಂತಂ ಆಕರ್ಣಂ ಕೃಷ್ಟಮ್—ಪ್ರಭಾವಃ = ಸಾಮರ್ಥ್ಯ ಯಸ್ಯ ಸ ತಥೋಕ್ತಃ—ಧನ್ವೀ = ಧನುಷ್ಮಾನ್ ಸ ನೃಪಃ—ಲಕ್ಷ್ಯೀಕೃತಸ್ಯ = ವೇದ್ಧುಮಿಷ್ಟಸ್ಯ—ವ್ಯವಧಾಯಾನುರಾಗಾದಂತರ್ಧಾಯಸ್ಥಿತಾಮ್—ಸಹ ಚರತೀತಿ = ಸಹಚರೀ —ಕೃಪಾಮೃದುಮನಾಃ = ಕರುಣಾರ್ದ್ರಚಿತ್ತಃ ಸನ್ ||

**58. ತಸ್ಯಾಪರೇಷ್ವಪಿ ಮೃಗೇಷು ಶರಾನ್ಮುಮುಕ್ಷೋಃ ।**
**ಕರ್ಣಾಂತಮೇತ್ಯ ಬಿಭಿದೇ ನಿಬಿಡೋಽಪಿ ಮುಷ್ಟಿಃ ||**
**ತ್ರಾಸಾತಿಮಾತ್ರಚಟುಲೈಃ ಸ್ಮರತಃ ಸುನೇತ್ರೈಃ ।**
**ಪ್ರೌಢಪ್ರಿಯಾನಯನವಿಭ್ರಮಚೇಷ್ಟಿತಾನಿ || ೫೮ ||**

ಆ ನರೇಂದ್ರನು ಅನ್ಯಮೃಗಗಳಿಗೆ ಬಾಣತೊಡಲು ಅಪೇಕ್ಷಿತನಾಗಿದ್ದನು. ಅವನು ಈ ಮಧ್ಯೆ ಅತ್ಯಂತಚಂಚಲವಾದ ಭೀತನಯನಗಳ ಹರಿಣಗಳನ್ನು ಕಂಡನು, ಅವುಗಳನ್ನು ನೋಡುತ್ತಿದ್ದಂತೆ ರಾಣೀವಾಸದ ಸ್ತ್ರೀಯರ ಭೀತತರಳಾಕ್ಷಿಗಳ ಚೆಲುವನು ನೋಡಿ (ಭೀತತರಳಾಕ್ಷಿಯರ ಚೆಲುವನು ನೆನೆದು) ಅವುಗಳನ್ನೇ ಒಂದರೆಕ್ಷಣ ನೆನೆದನು. ಇದರಿಂದ ಅವನ ಸಿಂಜಿನಿಯನ್ನೆಳೆಯುತ್ತಿದ್ದ ದೃಢಮುಷ್ಟಿ ತನ್ನಿಂದ ತಾನೇ ಸಡಿಲಿತು, ಆ ನರೇಂದ್ರನು ಪ್ರೌಢಕಾಂತೆಯರ ನಯನವಿಭ್ರಮಚೇಷ್ಟಿತಗಳನ್ನು, ನಯನಮಾಧುರ್ಯವಿಲಾಸವನ್ನು ಆ ಎರಳೆಗಳ ಕಣ್ಣಲ್ಲಿ (ಸಾದೃಶವನ್ನು) ಕಂಡು (ಸ್ಮರಿಸಿಕೊಂಡು) ವಿವಶನಾದನು. ಆ ದಯಾಮೂರ್ತಿಯು ತನ್ನ ಮನೋನಿರ್ಧಾರವನ್ನು ಕೂಡಲೇ ಬದಲಿಸಿದನು.

ಅನ್ವಯಃ:—ಅಪರೇಷು ಅಪಿ ಮೃಗೇಷು ಶರಾನ್ ಮುಮುಕ್ಷೋಃ ತ್ರಾಸಾತಿಮಾತ್ರ ಚಟುಲೈಃ ಸುನೇತ್ರೈಃ ಪ್ರೌಢಪ್ರಿಯಾನಯನವಿಭ್ರಮಚೇಷ್ಟಿತಾನಿ ಸ್ಮರತಃ ತಸ್ಯ ನಿಭಿಡಃ ಅಪಿ ಮುಷ್ಟಿಃ ಕರ್ಣಾಂತಮ್ ಏತ್ಯಬಿಭಿದೇ ॥

ಪ್ರೌಢಪ್ರಿಯೆ = ಗಂಡನಿಗೆ ತಕ್ಕ ಹೆಂಡತಿ (ಅಂಜಿ ಅಳುಕದ ಸತಿ)—ಪ್ರೌಢಪ್ರಿಯಾ = ಸುಪ್ರೌಢೆಯರು—ಚಟುಲೈರತ್ಯಂತಚಂಚಲೈಃ ಸುನೇತ್ರೈಃ ಪ್ರೌಢಪ್ರಿಯಾನಯನ ವಿಭ್ರಮಚೇಷ್ಟಿತಾನಿ = ಪ್ರಗಲ್ಭಕಾಂತಾವಿಲೋಚನವಿಲಾಸವ್ಯಾಪಾರಾನ್ ಸಾದೃಶ್ಯಾತ್ ಸ್ಮರತಃ—ಭಿದೇಃ = ಕರ್ಮಕರ್ತರಿ ಲಿಟ್—ಪ್ರಿಯಾವಿಭ್ರಮಸ್ಮೃತಿಜನಿತ ಕೃಪಾತಿರೇಕಾನ್ಮುಷ್ಟಿ ಭೇದಃ ॥

59. ಉತ್ತಸ್ಥುಷಃ ಸಪದಿಪಲ್ವಲಪಂಕಮಧ್ಯಾತ್ ।
ಮುಸ್ತಾಪ್ರರೋಹಕವಲಾವಯವಾನುಕೀರ್ಣಮ್ ॥
ಜಗ್ರಾಹ ಸ ದ್ರುತವರಾಹಕುಲಸ್ಯ ಮಾರ್ಗಂ ।
ಸುವ್ಯಕ್ತಮಾರ್ದ್ರಪದಪಂಕ್ತಿಭಿರಾಯತಾಭಿಃ ॥ ೫೯ ॥

ಅನಂತರ ಆ ಅವನಿಪನು ಕೆಸರುಕೊಳವನ್ನು ತೊರೆದು ಭರದಿಂದ ಭಯದಿಂದ ಓಡುತ್ತಿರುವ ಕಾಡುಹಂದಿಗಳನ್ನು ಕಂಡನು. ಅವುಗಳು ವೇಗದಿಂದ ಚಲಿಸುತ್ತ, ಏದುಸಿರು ಬಿಡುತ್ತ ಬಾಯಿಯೊಳಗಿನ ಎಳೆಯ ಮುಸ್ತೆಯ ಕವಳವು ದಾರಿಯುದ್ದಕ್ಕೂ ಉದುರಿದುವು (ಎಳೆಯ ಮುಸ್ತೆಯ ಕಬಳತತಿಯನು). ಅದು ಅಲ್ಲದೆ ಕೆಸರಿನಿಂದ ಒದ್ದೆಯಾದ ಅವುಗಳ ನಿಡಿದಾದ ಹೆಜ್ಜೆಗಳ ಗುರುತನ್ನು (ನಾಂದ ನಿಡುಹೆಜ್ಜೆಗಳ ಕುರುಪನು) ದಾರಿಯುದ್ದಕ್ಕೂ ಅಚ್ಚೊತ್ತಿರುವುದನ್ನು ಕಂಡನು.

ಅನ್ವಯಃ:—ಸಪದಿಪಲ್ವಲಪಂಕಮಧ್ಯಾತ್ ಉತ್ತಸ್ಥುಷಃ ದ್ರುತವರಾಹಕುಲಸ್ಯ ಮುಸ್ತಾಪ್ರರೋಹಕವಲಾವಯವಾನುಕೀರ್ಣಮ್ ಆಯತಾಭಿಃ ಆರ್ದ್ರಪದಪಂಕ್ತಿಭಿ ಮಾರ್ಗ ಸಃ ಜಗ್ರಾಹ ॥

ಮುಸ್ತಾ = ಒಂದು ಜಾತಿಯ ಹುಲ್ಲು—ಮುಸ್ತಾಪ್ರರೋಹಾಣಾಂ = ಮುಸ್ತಾಂಕುರಾಣಾಂ—ಕವಲಾ = ಗ್ರಾಸಾಃ—ಅನುಕೀರ್ಣ = ವ್ಯಾಪ್ತಾ — ಆಯತಾಭಿರ್ದೀರ್ಘಾಭಿರಾರ್ದ್ರಪದಪಂಕ್ತಿಭಿಃ ಸುವ್ಯಕ್ತಮ್ — ದ್ರುತವರಾಹಕುಲಸ್ಯ = ಪಲಾಯಿತವರಾಹಯೂಥಸ್ಯ ॥

60. ತಂ ವಾಹನಾದವನತೋತ್ತರಕಾಯಮೀಷತ್ ।
ವಿಧ್ಯಂತಮುದ್ಧೃತಸಟಾಃ ಪ್ರತಿಹಂತುಮೀಷುಃ ॥
ನಾತ್ಮಾನಮಸ್ಯ ವಿವಿದುಃ ಸಹಸಾ ವರಾಹಾ ।
ವೃಕ್ಷೇಷು ವಿದ್ಧಮಿಷುಭಿರ್ಜಘನಾಶ್ರಯೇಷು ॥ ೬೦ ॥

ಅರಸನು ಕುದುರೆಗಳತ್ತ ತುಸುಬಾಗಿ ಬಾಣಪ್ರಯೋಗಿಸಲು ಸಜ್ಜಾದುದನ್ನು ಆ ವರಾಹಗಳು ಕಂಡುವು. ಆ ಮುಳ್ಳುಹಂದಿಗಳು (ಕಣೆಹಂದಿಗಳು) ತಮ್ಮ ಪೃಷ್ಠ ಭಾಗವನ್ನು ಮರಗಳಿಗೆ ಅಂಟಿಕೊಂಡಂತೆ ಊರಿ ಕ್ಷಣಮಾತ್ರದಲ್ಲಿ ಅವು ಅಭಿಯೋಗಕ್ಕೆ

ಸಿದ್ಧವಾದುವು. ತಮ್ಮ ಮೈಮೇಲಿನ ಮುಳ್ಳಿನ ಕಣೆಗಳನ್ನು (ಊರ್ಧ್ವರೋಮಂಗಳನ್ನು) ಎಸೆಯಲು ಬಗೆದುವು (ತಾವು ನೆಮ್ಮಿದ ಮರಕೆ ತಮ್ಮ ಆ ಪೃಷ್ಠಭಾಗಗಳ ಅಂಟಿಕೊಂಡುವನು). ಆದರೆ ಅವುಗಳು ಯೋಚಿಸಿ ಎಸೆಯುವುದರೊಳಗಾಗಿ ಅರಸನ ಕಣೆಗಳು ಅವುಗಳ ಮೇರೊಡಲನ್ನು ಹಾಯ್ದು ಅವುಗಳ ದೇಹವು ಮರಕ್ಕೆ ಅಂಟಿಕೊಳ್ಳುವಂತೆ ಮಾಡಿದುವು. ಅಂತಹ ಮಿಂಚಿನ ವೇಗದಲ್ಲಿ ಬಾಣಗಳನ್ನು ಎಸೆವ ಚಾಕಚಕ್ಯತೆಯನ್ನು ಹಸ್ತಲಾಘವ ಆ ನೃಪನು ಪಡೆದಿದ್ದನು.

ಅನ್ವಯಃ :—ಉದ್ಧೃತಸಟಾಃ ವರಾಹಾಃ ವಾಹನಾತ್ ಈಷತ್ ಅವನತೋತ್ತರ ಕಾಯಂ ವಿಧ್ನಂತಮ್ ತಮ್ ಪ್ರತಿಪಂತುಮ್ ಈಷುಃ । ಜಘನಾಶ್ರಯೇಷು ವೃಕ್ಷೇಷು ಸಹಸಾ ಅಸ್ಯ ಇಷುಭಿಃ ವಿದ್ಧಮ್ ಆತ್ಮಾನಂ ನ ವಿವಿಧುಃ ॥

ವಿಧ್ಯನ್ತಂ=ಪ್ರಹರನ್ತಂ—ಉದ್ಧತಸಟಾ=ಊರ್ಧ್ವಕೇಸರಾಃ ಸಂತಃ—'ಸಟಾ, ಜಟಾ' ಕೇಸರಯೋಃ' ಇತಿ ಕೇಶವಃ—ಪ್ರತಿಪಂತುಮಿಷುಃ = ಪ್ರತಿಪರ್ತುಮೈಚ್ಛನ್ ॥

**61. ತೇನಾಭಿಘಾತರಭಸಸ್ಯ ವಿಕೃಷ್ಯ ಪತ್ರೀ ।**
**ವನ್ಯಸ್ಯ ನೇತ್ರವಿವರೇ ಮಹಿಷಸ್ಯ ಮುಕ್ತಃ ॥**
**ನಿರ್ಭಿದ್ಯ ವಿಗ್ರಹಮಶೋಣಿತಲಿಪ್ತಪುಂಖಃ ।**
**ತಂ ಪಾತಯಾಂ ಪ್ರಥಮಮಾಸ ಪಪಾತ ಪಶ್ಚಾತ್ ॥ ೬೧ ॥**

ಆ ಮನುಜೇಂದ್ರನು ಬಹಳ ರಭಸದಿಂದ ತನ್ನತ್ತ ದಾಳಿಮಾಡಲು ಬರುತ್ತಿರುವ ಕಾಡುಕೋಣವೊಂದನ್ನು ಕಂಡನು. ಕೂಡಲೇ ಶರವೊಂದನ್ನು ತೆಗೆದು ಗುರಿಯಿಟ್ಟು ಕಾಡುಕೋಣದ ಕಣ್ಣಿನ ಭಾಗಕ್ಕೆ ಎಸೆಯೆ ಅದು ತನ್ನ ಗುರಿಯನ್ನು ಸೇರಿತು. ಕಣ್ಣಿನ ಮಧ್ಯಭಾಗವನ್ನು ಹೊಕ್ಕು ಶಿರೋಭಾಗವನ್ನು ಭೇದಿಸಿ ಒಳಹೊಕ್ಕು ಹೊರಹೊಮ್ಮಿತು. ನೆತ್ತರು ಕೆಸರಾಯಿತು, ಕೆಸರು ನೆತ್ತರಾಯಿತು (ಅದರ ನೆತ್ತರ ಕೆಸರನಂಟಿಸಿಕೊಳ್ಳದೆ ದೇಹವ ಹೊಕ್ಕು ಹೊರಚಿಮ್ಮಿತು). ಆ ಆಘಾತಕ್ಕೆ ಆ ಮಹಿಷವು ನೆತ್ತರಕೆಸರನಂಟಿಸಿ ನೆತ್ತರಸ್ನಾನಮಾಡಿ ನೆಲಕ್ಕುರುಳಿತು. ಆ ಬಳಿಕ ನಾಶಕಾರಕವಾದ ಕಣೆಯು ತಾನು ನೆಲಕ್ಕುರುಳಿತು.

ಅನ್ವಯ :—ಅಭಿಘಾತರಭಸಸ್ಯ ವನ್ಯಸ್ಯ ಮಹಿಷಸ್ಯ ನೇತ್ರವಿವರೇ ತೇನ ವಿಕೃಷ್ಯ ಮುಕ್ತಃ ಪತ್ರೀವಿಗ್ರಹಂ ನಿರ್ಭಿದ್ಯ ಅಶೋಣಿತಲಿಪ್ತಪುಂಖಃ ತಂ ಪ್ರಥಮಂ ಪಾತಯಾ ಮಾಸ ಪಶ್ಚಾತ್ (ಸ್ವಯಂ) ಪಪಾತ ॥

ಪತ್ರೀ = ಪತ್ರಾಣಿ ಸಂತಿ ಅಸ್ಯ ಇತಿ ಪತ್ರಿನ್ = ಬಾಣ—ಅಭಿಘಾತೋ ರಭಸ = ಔತ್ಸುಕ್ಯಂ ಯಸ್ಯ ತಸ್ಯ—ನೇತ್ರವಿವರೇ = ನೇತ್ರಮಧ್ಯೇ— ಪತ್ರೀ = ಶರೋ—ವಿಗ್ರಹಂ = ಮಹಿಷದೇಹಂ—ನಿರ್ಭಿದ್ಯ= ವಿದಾರ್ಯ—ತಂ ಮಹಿಷಂ ಪ್ರಥಮು ಪಾತಯಾಮಾಸ —ಯಥಾ ಹ ವಾರ್ತಿಕಕಾರಃ 'ವಿಪರ್ಯಾಸ ನಿವೃತ್ತ್ಯರ್ಥಂ ವ್ಯವಹಿತನಿವೃತ್ತ್ಯರ್ಥಂ ಚ' ಇತಿ—ಅಶೋಣಿತಲಿಪ್ತಪುಂಖಃ = ಶೋಣಿತಲಿಪ್ತಃ ನ ಭವತಿ ಇತಿ ಅಶೋಣಿತಲಿಪ್ತ ಏತಾದೃಕ್ ಪುಂಖಃ ಯಸ್ಯ ಸಃ ॥

62. ಪ್ರಾಯೋ ವಿಷಾಣಪರಿಮೋಕ್ಷ ಲಘೂತ್ತಮಾಂಗಾನ್ ।
ಖಡ್ಗಾಂಶ್ಚಕಾರ ನೃಪತಿಃ ನಿಶಿತೈಃ ಕ್ಷುರಪ್ರೈಃ ॥
ಶೃಂಗಂ ಸ ದೃಪ್ತವಿನಯಾಧಿಕೃತಃ ಪರೇಷಾಂ ।
ಅತ್ಯುಚ್ಛ್ರಿತಂ ನಮಮೃಷೇ ನ ತು ದೀರ್ಘಮಾಯುಃ ॥ ೬೨ ॥

ಆ ರಾಜಮೌಳಿಯು ಒಂದು ನಿಶಿತಬಾಣವನ್ನು ತೆಗೆದು ಘೇಂಡಾಮೃಗದ ಮೇಲೆ ಎಚ್ಚನು. ಖಡ್ಗಮೃಗದ ಮೊಗದಮೇಲೆ ಇರುವ ಕೊಂಬನ್ನು ಇರಿದು, ಕತ್ತರಿಸಿ ಹಗುರಗೈದನು. ಆತನು ದುಷ್ಟಶಿಕ್ಷಕನು, ಶಿಷ್ಟಪರಿಪಾಲಕನು. ಈ ಎಸಕದಿಂದ ನಡೆಯುವ ಆ ಮಹೀಪತಿಯು ಹಗೆಗಳ ಹೆಮ್ಮೆಯನ್ನು ಮುರಿಯುವವನು ಮಾತ್ರ. ಆಜನು ಖಡ್ಗಮೃಗದ ಕೊಂಬನ್ನು ಮುರಿದು, ಅದರ ತಲೆಯ ಭಾರವನ್ನು ಹಗುರಗೈದನಲ್ಲದೆ (ತಲೆಗಳ ಹಗುರಗೈದನು) ಅದರ ಆಯುಷ್ಯವನ್ನು ಮುರಿಯಲಿಲ್ಲ. ಅದರ ಜೀವಿತಕಾಲವನ್ನು ಮೊಟಕುಗೊಳಿಸಲಿಲ್ಲ (ಪರರ ಹೆಮ್ಮೆಯ ಮುರಿವನಲ್ಲದೆ).

ಅನ್ವಯ :—ನೃಪತಿ ನಿಶಿತೈಃ ಕ್ಷುರಪ್ರೈಃ ಖಡ್ಗಾನ್ ಪ್ರಾಯಃ ವಿಷಾಣಪರಿಮೋಕ್ಷ ಲಘೂತ್ತಮಾಂಗಾನ್ ಚಕಾರ । ದೃಪ್ತವಿನಯಾಧಿಕೃತಃ ಸಃ ಪರೇಷಾಮ್ ಅತ್ಯುಚ್ಛ್ರಿತಂ ಶೃಂಗಂ ನಮಮೃಷೇ ನ ತು ದೀರ್ಘಮಾಯುಃ ॥

ಕ್ಷುರಪ್ರೈಃ = ಶರವಿಶೇಷೈಃ—ಖಡ್ಗಾನ್ = ಖಡ್ಗಾಖ್ಯಾನ್ ಮೃಗಾನ್ = 'ಗಂಡಕೇ ಖಡ್ಗಖಡ್ಗಿನೌ' ಇತ್ಯಮರಃ—ಪ್ರಾಯೋ = ಬಾಹುಳ್ಯೇನ—ದೃಪ್ತವಿನಯಾಧಿಕೃತೋ = ದುಷ್ಟನಿಗ್ರಹನಿಯುಕ್ತಃ—ಪರೇಷಾಂ = ಪ್ರತಿಕೂಲಾ—ಶೃಂಗಂ ವಿಷಾಣಂ ಪ್ರಾಧಾನ್ಯಂ ಚ—'ಶೃಂಗಂ ಪ್ರಾಧಾನ್ಯಸಾನ್ ವೋಶ್ಚ' ಇತ್ಯಮರಃ—ದೀರ್ಘಮಾಯುರ್ಜೀವಿತ ಕಾಲಮ್ = 'ಆಯುರ್ಜೀವಿತಕಾಲೋನಾ' ಇತ್ಯಮರಃ ॥

63. ವ್ಯಾಘ್ರಾನಭೀರಮುಖೋತ್ಪತಿತಾನ್ ಗುಹಾಭ್ಯಃ ।
ಫುಲ್ಲಾಸನಾಗ್ರವಿಟಪಾನಿವ ವಾಯುರುಗ್ಣಾನ್ ॥
ಶಿಕ್ಷಾವಿಶೇಷಲಘುಹಸ್ತತಯಾ ನಿಮೇಷಾತ್ ।
ತೂಣೀಚಕಾರ ಶರಪೂರಿತ ವಕ್ತ್ರರಂಧ್ರಾನ್ ॥ ೬೩ ॥

ಆ ವೇಳೆಗಾಗಲೆ ಗುಹೆಗಳಲ್ಲಿ ಮಲಗಿದ್ದ ಹುಲಿಗಳು (ವ್ಯಾಘ್ರರಾಜ, ಹುಲಿರಾಯ), ಶಾರ್ದೂಲಗಳು (ಅಷ್ಟಬಲಿಪ, ಪಟ್ಟೆಹುಲಿ), ಚಿಟ್ಟೆಹುಲಿಗಳು (ಚಿರತೆ) ಚಿತ್ರವಿಚಿತ್ರವಾದ ಮೈಬಣ್ಣದಿಂದ ರಾರಾಜಿಸುತ್ತ ಹೊರಬಂದು ಅರಸನ ಮೇಲೆ ಎರಗಲು (ಆಕ್ರಮಣ ಮಾಡಲು) ಸಿದ್ಧವಾದುವು. ಹೀಗೆ ಘರ್ಜಿಸುತ್ತ ಬರುವ ವ್ಯಾಘ್ರಗಳ, ಚಿರತೆ ಕತ್ತೆಕಿರುಬಗಳ ತೆರೆದ ಬಾಯನ್ನು ಬಾಣಗಳಿಂದ ತುಂಬಿಸಿ, ಬಾಯೆಂಬ ರಂಧ್ರವನ್ನು ಮುಚ್ಚಿ ತೂಣೀರವನ್ನಾಗಿ ಮಾಡಿದನು (ಹುಲಿಯ ದೊಣೆಗೈದನು). ಅವನ ಹಸ್ತಲಾಘವದೊಂದು ಜಾಣ್ಮೆಯು ಅಂತಹುದು. ಆತನು ಅಳುಕದೆ ಹುಲಿಯ ಬಾಯನ್ನು ಒಂದು ದೊಣೆಯನ್ನಾಗಿ ಪರಿವರ್ತಿಸಿದನು (ಸರ್ಜ, ಅಸನ, ಬಂಧೂಕ). ಬಿರುಗಾಳಿ ಬೀಸಿದಾಗ ಪವನವೇಗದಿಂದ ಮುರಿದು ಬಿದ್ದಿರುವ ಹೂವು ತುಂಬಿದ ಸರ್ಜದ ಮರದಂತೆ, ತಮ್ಮ

ಗವಿಯ ಬಾಗಿಲಲ್ಲಿ ಶರಗಳಿಂದ ತುಂಬಿರುವ ಬಾಯಿಯಿಂದ ಕಂಗೊಳಿಸುತ್ತ ನೂರಾರು ಹುಲಿಗಳು ಬಿದ್ದಿದ್ದುವು. ಅವು ಮೃತ್ಯುಮುಖವನ್ನು ಹೊಂದಿ ಯಮನಗರಿಯನ್ನು ಸೇರಿದುವು.

ಅನ್ವಯ:—ಅಭೀರಾಯತಭಗ್ನಾನ್ ಫುಲ್ಲಾಸನಾಗ್ರವಿಟಪಾನ್ ಇವ ಗುಹಾಭ್ಯಃ ಅಭಿಮುಖೋತ್ಪತಿತಾನ್ ಶಿಕ್ಷಾವಿಶೇಷಲಘುಹಸ್ತತಯಾ ನಿಮೇಷಾತ್ ಶರಪೂರಿತ ವಕ್ತ್ರರಂಧ್ರಾನ್ ವ್ಯಾಘ್ರಾನ್ ತೂಣೀಚಕಾರ ॥ ಅಭೀಃ = ಅವಿದ್ಯಮಾನಾಭೀಃ ಯಸ್ಯ ಸಃ ॥

ರುಗ್ಣಾನ್ ಭಗ್ನಾನ್—ಫುಲ್ಲಾ = ವಿಕಸಿತಾಃ—ಯೇಽಸನಸ್ಯ ಸರ್ಜವೃಕ್ಷಸ್ಯ—"ಸರ್ಜಕಾಸನಬಂಧೂಕಪುಷ್ಪಪ್ರಿಯಕಜೀವಕಾಃ" ಇತ್ಯಮರಃ—ಲಘುಹಸ್ತತಯಾ =ಕ್ಷಿಪ್ರಹಸ್ತತಯಾ—ತೂಣಂ ಶರೈಃ ಪೂರಿತವಾನಿತ್ಯರ್ಥಃ ॥

**64. ನಿರ್ಘಾತೋಗ್ರೈಃ ಕುಂಜಲೀನಾಂ ಜಿಘಾಂಸುಃ ।**
**ಜ್ಯಾನಿರ್ಘೋಷೈಃ ಕ್ಷೋಭಯಾಮಾಸ ಸಿಂಹಾನ್ ॥**
**ನೂನಂ ತೇಷಾಮಭ್ಯಸೂಯಾಪರೋಽಭೂತ್ ।**
**ವೀರ್ಯೋದಗ್ರೇ ರಾಜಶಬ್ದೇ ಮೃಗೇಷು ॥ ೬೪ ॥**

ಆ ಬಳಿಕ ಆ ರಾಜೇಂದ್ರನು ತಮ್ಮ ಗವಿಗಳಲ್ಲಿ ಅಡಗಿರುವ ಸಿಂಹಗಳನ್ನು ಕೊಲ್ಲಲು ನಿಶ್ಚಯಿಸಿ ಧನುಷ್ಟಂಕಾರಮಾಡಿದನು. ಆ ಧನುಷ್ಟಂಕಾರಧ್ವನಿಯು ಆಕಾಶದಲ್ಲಿ ಮೇಘಧ್ವನಿಯಂತೆ ಪ್ರತಿಧ್ವನಿಸಿತು. ಅದನ್ನು ಕೇಳಿ ಕೇಸರಿವೃಂದವು ತಲ್ಲಣಿಸಿತು, ಕ್ಷೋಭೆಗೊಂಡುವು. ಏಕೆಂದರೆ ಆ ಟಂಕಾರಧ್ವನಿಯು ಮೃಗರಾಜನ ಘರ್ಜನೆಯ ಧ್ವನಿಯನ್ನು ಮೀರಿಸಿತ್ತು. ಇದರಿಂದ ಮೃಗರಾಜನು (ಗಿರಿಗುಹಾಂತರದೆಡೆಯೊಳಿರ್ದಾ) ಶ್ರೇಷ್ಠನೋ, ನರರಾಜನು ಶ್ರೇಷ್ಠನೋ ಎಂಬ ಸಂಶಯವುಂಟಾಗುವುದು ಸ್ವಾಭಾವಿಕವಷ್ಟೆ. ಯಾರು ಹೆಚ್ಚು ವೀರ್ಯವಂತರು ? ರಾಜಶಬ್ದವು ಯಾರಲ್ಲಿ ಹೆಚ್ಚು ಶೋಭಿಸುತ್ತದೆ ? ನಿಜವೀರ್ಯದ ಉತ್ಕರ್ಷದಿಂದ ಮೃಗರಾಜನು ರಾಜಶಬ್ದಕ್ಕೆ ಅರ್ಹನಾಗಿರುವನು. ಅದನ್ನು ಅಸೂಯೆಯಿಂದ ತೊಡೆದುಹಾಕಲು ನಿರ್ಧರಿಸಿದನೋ ಎಂಬಂತೆ (ರಾಜಶಬ್ದವನೆಂದಸೂಯೆಯು ನಾಂತವೊಲು) ಚಾಪಧ್ವನಿಗೈದನು. ಅದು ಬಾನಲ್ಲಿ ಉತ್ಪಾತಶಬ್ದದಂತೆ ಭೀಕರನಾದವನ್ನು ಸೃಷ್ಟಿಸಿ (ಸ್ಫೋಟ, ಆಸ್ಫೋಟಗೊಂಡಂತೆ) ಇದರಿಂದ ಗಿರಿಗುಹಾಂತರದಲ್ಲಿದ್ದ (ಕೇಸರಿ ಹಿಂಡು) ಉಗ್ರಸಿಂಹಗಳು ಆ ಕ್ಷಣವೇ ಹೊರಬಂದುವು.

ಅನ್ವಯ:—ಕುಂಜಲೀನಾನ್ ಸಿಂಹಾನ್ ಜಿಘಾಂಸುಃ ನಿರ್ಘಾತೋಗ್ರೈಃ ಜ್ಯಾನಿರ್ಘೋಷೈಃ ಕ್ಷೋಭಯಾಮಾಸ । ನೂನಂ ತೇಷಾಂ ವೀರ್ಯೋದಗ್ರೇ ಮೃಗೇಷು ರಾಜಶಬ್ದೇ ಅಭ್ಯಸೂಯಾಪರಃ ಅಭೂತ್ ॥

ವೀರ್ಯೋದಗ್ರೇ=ವೀರ್ಯೇಣ ಉದಗ್ರೇ—'ನಿಕುಂಜಕುಂಜೌ ವಾ ಕ್ಲೀಬೇ ಲತಾದಿಪಿಹಿತೋದರೇ' ಇತ್ಯಮರಃ—ಸಿಂಹಾಂಜಿಘಾಂಸುರ್ಹಂತುಮಿಚ್ಛುಃ—ನಿರ್ಘಾತೋ = ವ್ಯೋಮೋತ್ಥಿತ ಔತ್ಪಾತಿಕಃ ಶಬ್ದವಿಶೇಷಃ—ನಿರ್ಘಾತ ॥ ಶಾಲಿನೀವೃತ್ತಮ್ ॥ ರಣತ್ಕೃತ ಕರ್ಮಣಾವತ್ ॥

**೬೫.** **ತಾನ್ ಹತ್ವಾ ಗಜಕುಲಬದ್ಧತೀವ್ರವೈರಾನ್ ।**
**ಕಾಕುತ್ಸ್ಥಃ ಕುಟಿಲನಖಾಗ್ರಲಗ್ನಮುಕ್ತಾನ್ ॥**
**ಆತ್ಮಾನಂ ರಣಕೃತ ಕರ್ಮಣಾಂ ಗಜಾನಾಂ ।**
**ಆನೃಣ್ಯಂ ಗತಮಿವ ಮಾರ್ಗಣೈರಮಂಸ್ತ** ॥ ೬೫ ॥

ಆ ಕಕುತ್ಸ್ಥವಂಶೋದ್ಭವನು ಆನೆಗಳ ಮೇಲೆ ಬದ್ಧವೈರವನ್ನು ತಳೆದಿರುವ ಕೇಸರಿಗಳನ್ನು ತನ್ನ ದಿವ್ಯಶರಾಳಿಗಳಿಂದ ಸಂಹರಿಸಿದನು. ಆ ಮೃಗರಾಜಹಿಂಡು ತಮ್ಮ ಕುಟಿಲ ನಖಗಳಲ್ಲಿ (ತಮ್ಮ ಕುಟಿಲನಖದೊಳು) ಆನೆಗಳ ಗಂಡಸ್ಥಲವನ್ನು (ಗಜಕುಂಭಸ್ಥಲವನ್ನು) ಭೇದಿಸಿ ಮುತ್ತುಗಳನ್ನು ತಳೆದಿದ್ದುವು (ಮುತ್ತುಗಳ ಸಲಿ ತಳೆದ). ಅಂತಹ ಹರಿಗಳನ್ನು (ಸಿಂಹ, ಕೇಸರಿ) ಕೊಂದು, ಆನೆಗಳು ಯುದ್ಧಕಾಲದಲ್ಲಿ ತನಗೆಸಗಿದ ಉಪಕಾರದ ಋಣವನ್ನು ಆ ಮನುಜೇಂದ್ರನು (ಉಪಕೃತಿಯ ನೆನೆಯುತ) ತೀರಿಸಿಕೊಂಡನು. ಹೀಗೆ ತೀರ್ಚುತ ತಾನು ಋಣಮುಕ್ತನಾದೆನೆಂದು ಭಾವಿಸಿದನು.

ಕಾಕುತ್ಸ್ಥೋ = ಕಾಕುತ್ಸ್ಥೋ = ದಶರಥಃ—ಬದ್ಧಂ = ತೀವ್ರಂ—ಕುಟಿಲೇಷು ನಖಾಗ್ರೇಷು ಲಗ್ನಮುಕ್ತಾ = ಗಜಕುಂಭಮೌಕ್ತಿಕಾನಿ ಯೇಷಾಂ—ಕೃತಕರ್ಮಣಾಂ = ಕೃತೋಪಕಾರಾಣಾಂ—''ಮಾರ್ಗಣೋ ಯಾಚಕೇ ಶರೇ'' ಇತಿ ವಿಶ್ವಃ ॥

**೬೬.** **ಚಮರಾನ್ ಪರಿತಃ ಪ್ರವರ್ತಿತಾಶ್ವಃ ।**
**ಕ್ವಚಿದಾಕರ್ಣವಿಕೃಷ್ಟಭಲ್ಲವರ್ಷೀ ॥**
**ನೃಪತೀನಿವ ತಾನ್ವಿಯೋಜ್ಯ ಸದ್ಯಃ ।**
**ಸಿತಬಾಲವ್ಯಜನೈಃ ಜಗಾಮ ಶಾಂತಿಮ್** ॥ ೬೬ ॥

ಆ ರಾಜಾಧಿರಾಜನು ಚಮರೀಮೃಗಗಳ ಹಿಂಡನ್ನು ಒಡನೆ ತನ್ನ ಹಯವನ್ನು (ಕುದುರೆಯನ್ನು) ಓಡಿಸಿ, ಸುತ್ತುವರೆದು ಅವುಗಳ ಮೇಲೆ ''ಭಲ್ಲ'' ಎಂಬ ಬಾಣಗಳ ಸುರಿಮಳೆಯನ್ನು ಸುರಿಸಿದನು (ಅಂಬಿನ ಮಳೆ ಸುರಿಸಿ). ಆ ಬಳಿಕ ಚಮರೀಮೃಗಗಳ ಬಿಳಿಯ ಚಾಮರದ ಬಾಲವನ್ನು ಕತ್ತರಿಸಿ ಅವುಗಳನ್ನು ಕೊಲ್ಲಲು ಮನಸ್ಸು ಬಾರದೆ, ಜೀವಸಹಿತ, ಹಾಗೆಯೇ ಬಿಟ್ಟುಬಿಟ್ಟನು (ಕೆಲವೆಡೆ ಚಮರಿಗಳನು ಬಳಸಿ). ಅರಿರಾಜರನ್ನು ಗೆದ್ದು ಅವರ ಐಶ್ವರ್ಯವನ್ನು ಸೆಳೆದುಕೊಂಡು ಅವರನ್ನು ಬಿಟ್ಟುಬಿಡುವಂತೆ ಚಾಮರದ ಬಾಲವನ್ನು ಕತ್ತರಿಸಿ ಚಮರೀಮೃಗಗಳನ್ನು ಜೀವಸಹಿತ ಬಿಟ್ಟುಬಿಟ್ಟನು. ಚಾಮರದ ಬಿಳಿಯ ಬಣ್ಣವು ಐಶ್ವರ್ಯದ ದ್ಯೋತಕವಾಗಿದೆ, ಸಿರಿಯ ಸಂಕೇತವಾಗಿದೆ. ಈ ತೆರದಲ್ಲಿ ಬೇಟೆಯಾಡಿ ದಶರಥನೃಪನು ಬೇಟೆಯಲ್ಲಿ ನೆಮ್ಮದಿಯನ್ನು ತಳೆದು ಉಲ್ಲಸಿತನಾದನು.

ಅನ್ವಯಃ:—ಕ್ವಚಿತ್ ಚಮರಾನ್ ಪರಿತಃ ಪ್ರವರ್ತಿತಾಶ್ವಃ ಆಕರ್ಣವಿಕೃಷ್ಟ ಭಲ್ಲವರ್ಷೀ ನೃಪತೀನ್ ಇವ ತಾನ್ ಸಿತಬಾಲವ್ಯಜನೈಃ ವಿಯೋಜ್ಯ ಸದ್ಯಃ ಶಾಂತಿಂ ಜಗಾಮ ॥

ಪ್ರವರ್ತಿತಾಶ್ವಃ = ಪ್ರಧಾವಿತಾಶ್ವಃ—ಶಾಂತಿಂ ಜಗಾಮ = ನೆಮ್ಮದಿಯ ತಳೆದನು—ಶೂರಾಣಾಂ ಪರಕೀಯಮೈಶ್ವರ್ಯಮೇವಾಸದ್ಮವ್, ನ ತು ಜೀವಿತಮಿತಿ ಭಾವಃ—ಪರಿತಃ=ಔಪಚ್ಛಂದಸಿಕಂ ವೃತ್ತಮ್ ॥ ಆಕರ್ಣವಿಕೃಷ್ಟ—ಕರ್ಣಸ್ಯ ಪರ್ಯಂತು ಯಥಾ

ತಥಾ ಆಕರ್ಣವಿಕೃಷ್ಟಾಃ ಬಲ್ಲಾಃ—ತಾನ್ ವರ್ಷತೀತಾಸಿತಬಾಲವ್ಯಜನ್ಯೈಃ = ಸಿತಾಃ ಚ ತೇ ಬಾಲಾಶ್ಚ ತೇ ವ್ಯಜನಾನಿಹವತ್ತೈಃ ॥

**67. ಅಪಿ ತುರಗಸಮೀಪಾದುತ್ಪತಂತಂ ಮಯೂರಂ ।**
**ನ ಸ ರುಚಿರಕಲಾಪಂ ಬಾಣಲಕ್ಷ್ಯೀ ಚಕಾರ ॥**
**ಸಪದಿಗತಮನಸ್ಕ ಚಿತ್ರಮಾಲ್ಯಾನುಕೀರ್ಣೇ ।**
**ರತಿವಿಗಲಿತಬಂಧೇ ಕೇಶಪಾಶೇ ಪ್ರಿಯಾಯಾಃ ॥ ೬೭ ॥**

ಅಲ್ಲೊಂದು ನವಿಲು ರಾಜನ ಸಮೀಪದಲ್ಲಿ ತನ್ನ ಬಾಲವನ್ನು ಪೂರ್ಣವಾಗಿ ಬಿಚ್ಚಿ ಕುಣಿಯುತ್ತಲಿತ್ತು. ಅತ್ತಿತ್ತ ಓಡಾಡುತ್ತಾ ರಮ್ಯವಾಗಿ ಕುಣಿಯುತ್ತಿತ್ತು. ಅದು ರಾಜನ ಕಣ್ಣು ಮನಸವನ್ನು ಒಮ್ಮೆಯೇ ಸೆಳೆಯಿತು. ಆ ದೃಶ್ಯವು ರತಿಕೇಳಿಯಲ್ಲಿ ತನ್ನ ಪ್ರಿಯೆಯ ಮುಡಿಯ ಕೇಶಪಾಶವು ಕಟ್ಟುಬಿಚ್ಚಿ ಸುತ್ತಲೂ ಅಸ್ತವ್ಯಸ್ತವಾಗಿ ಹರಡಿದಂತೆ ಮುಡಿಯಲ್ಲಿದ್ದ ಹೂವುಗಳು, ಚಿತ್ರಮಾಲೆಯು ಹರಿದು ಸುತ್ತಲೂ ಚೆಲ್ಲಿದಂತೆ ಕಂಡಿತು (ಬಿರ್ಚಿದ ಚಿತ್ರಮಾಲೆಯ ಮುಡಿಯ ನೆನೆದನು). ಆ ಸುಂದರದೃಶ್ಯವನ್ನು ನೋಡಿ ಮನದಣಿದನು, ಜೀವನಾಶವನ್ನು ಬಯಸದೆ(ಪ್ರಜಾಪ್ರಾಣನಾಶವನ್ನು) ಅಹಿಂಸಾಪರನಾದನು (ಅಹಿಂಸಾ ಪರಮೋ ಧರ್ಮಃ) ಆ ನಿಜವಾದ ಭಾರತೀಯನು.

ರುಚಿರಕಲಾಪಂ=ಭಾಸುರಬರ್ಹಮ್—ತು ಚಿತ್ರೇಣ ಮಾಲ್ಯೇನಾನುಕೀರ್ಣೇ ರತೌ ವಿಗಲಿತಬಂಧೇ ಪ್ರಿಯಾಯಾಃಕೇಶಪಾಶೇ ಸಪದಿಗತಮನಸ್ಕಃ—ಪ್ರವೃತ್ತಚಿತ್ತಃ—ನ ಪ್ರಜಹಾರೇತ್ಯರ್ಥಃ ॥

**68. ತಸ್ಯ ಕರ್ಕಶವಿಹಾರಸಂಭವಂ ।**
**ಸ್ವೇದಮಾನನವಿಲಗ್ನಜಾಲಕಮ್ ॥**
**ಆಚಚಾಮ ಸತುಷಾರಶೀಕರೋ ।**
**ಭಿನ್ನಪಲ್ಲವಪುಟೋ ವನಾನಿಲಃ ॥ ೬೮ ॥**

ಕಠಿಣವಾದ ವ್ಯಾಯಾಮದಿಂದ, ಪರಿಶ್ರಮದಿಂದ ಕೂಡಿದ ಆ ಮೃಗವಿಹಾರದಿಂದ ಒಗೆದ ನೃಪನ ಮುಖದ ಬೆವರಹನಿಯ ಮಾಲೆಗಳನ್ನು (ನನೆಯ ಕೊನೆಯ ಒಡೆದು ಬಂದ ತುಹಿನ) ತಂಪಾದ ವನಗಾಳಿಯು ಬೀಸಿ ಮುತ್ತಿಟ್ಟು ಶಾಂತಗೊಳಿಸಿತು. ಪರಿಶ್ರಮ ವನ್ನು ನೀಗಿ ಉಲ್ಲಾಸಗೊಳಿಸಿತು. ಆ ಶೀತಮಾರುತವು ಹಿಮದ ಕಣಗಳಿಂದ (ಸತುಷಾರ ಶೀಕರಃ) ಕೂಡಿದ್ದು ಹೂಮೊಗ್ಗುಗಳನ್ನು, ತಳಿರುಗಳ ಪಲ್ಲವಗಳನ್ನು, ಹೂಗಳ ಎಸಳು ಗಳನ್ನು ಒಡೆದು, ಪ್ರತ್ಯೇಕಿಸುತ್ತ ಸಸ್ಯಲೋಕಕ್ಕೆ ಆಮೋದವನ್ನು, ಸುಖವನ್ನುಂಟು ಮಾಡುತ್ತ ಬೀಸುತ್ತಲಿತ್ತು ಆ ಅಡವಿಯ ಗಾಳಿ (ಶೀಕರಾಂಬುವೆರೆದ ಗಾಳಿ ಅಡವಿಯ).

ಸತಂಪಾರ = ತಂಪಾರಶ್ಚಾ ಸೌಶೀಕರಃ ತೇನ ಸಹಿತ ಅಥವಾ ತುಷಾರಸ್ಯ ಶೀಕರೇಣ ಸಹಿತಃ—ಸತುಷಾರಶೀಕರಃ ಶಿಶಿರಾಂಬುಕಣಸಹಿತಃ—ಭಿನ್ನಾನಿರ್ದಲಿತಾಃ ಪಲ್ಲವಾನಾಂ ಪುಟಾಃ ಕೋಶಾ ಯೇನ ಸಃ—ರಥೋದ್ಧತಾವೃತಮೇತತ್ ॥

**69. ಇತಿ ವಿಸ್ಮೃತಾನ್ಯಕರಣೀಯಮಾತ್ಮನಃ ।**
**ಸಚಿವಾವಲಂಬಿತಧುರಂ ಧರಾಧಿಪಮ್ ॥**
**ಪರಿವೃದ್ಧರಾಗಮನುಬಂಧಸೇವಯಾ ।**
**ಮೃಗಯಾ ಜಹಾರ ಚತುರೇವ ಕಾಮಿನೀ ॥ ೬೯ ॥**

ಹೀಗೆ ಆ ರಾಜೇಂದ್ರನು ಮೃಗಯಾವಿಹಾರವೆಂಬ ಸಕಲ ಕಲೆಗಳಲ್ಲಿ ಪರಿಣತಳಾದ ಕಾಂತೆಯಿಂದ ಆಕರ್ಷಿತನಾಗಿ (ನಿರಂತ ಒಲಿದ ಕತದೆ ಬೆಳೆದ) ಸಾಮ್ರಾಜ್ಯದ ರಾಜ್ಯಭಾರವೆಂಬ ಕರ್ತವ್ಯವನ್ನು ಮರೆಯುವಂತೆ ಮಾಡಿದ್ದಳು. ಆ ಚತುರಕಾಮಿನಿಯು ತನ್ನ ಕೂರ್ಮೆಯಿಂದ ಅವನನ್ನು ತನ್ನವನನ್ನಾಗಿ ಮಾಡಿದ್ದಳು. ಆ ಧರಾಧಿಪನು ರಾಜ್ಯಾಡಳಿತೆಯನ್ನು ತನ್ನಲ್ಲಿ ಇರಿಸಿ ಹೀಗೆ ವಿಹಾರಾರ್ಥಕೆಂದು ಬಂದಿದ್ದನು.

ಅನ್ವಯ :—ಚತುರಾ ಕಾಮಿನೀ ಇವ ಮೃಗಯಾ ಇತಿ ಆತ್ಮನಃ ವಿಸ್ಮೃತಾನ್ಯಕರಣೀಯಂ ಸಚಿವಾವಲಂಬಿತ ಧುರಮ್ ಅನುಬಂಧಸೇವಯಾ ಪರಿವೃದ್ಧರಾಗಂ ಧರಾಧಿಪಂ ಜಹಾರ ॥

ವಿಸ್ಮೃತಾತ್ಮ ಕಾರ್ಯಾಂತರಮಿತ್ಯರ್ಥಃ—ಅನುಬಂಧಸೇವಯಾ = ಸಂತತಸೇವಯಾ ಪರಿವೃದ್ಧೋ ರಾಗೋ ಯಸ್ಯ ತಂ ಧರಾಧಿಪಮ್ । ಮೃಗ್ಯಂತೇ ಯಸ್ಯಾಂ ಮೃಗಾ ಇತಿ ಮೃಗಯಾ—ಚತುರಾ ವಿದಗ್ಧಾ ಕಾಮಿನೀವ ಜಹಾರ = ಆಚಕರ್ಷ—ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ॥ ಅನುಬಂಧಸೇವಯಾ—ಮಂಜುಭಾಷಿಣೀವೃತ್ತ (ಸಜಸಾಜಗೌಚಯಂದಿ ಮಂಜುಭಾಷಿಣೀ) ॥

**70. ಸ ಲಲಿತಕುಸುಮಪ್ರವಾಲಶಯ್ಯಾಂ ।**
**ಜ್ವಲಿತ ಮಹೌಷಧಿ ದೀಪಿಕಾಸನಾಥಾಮ್ ॥**
**ನರಪತಿರತಿವಾಹಯಾಂ ಬಭೂವ ।**
**ಕ್ವಚಿದಸಮೇತಪರಿಚ್ಛದಸ್ತ್ರಿಯಾಮಾಮ್ ॥ ೭೦ ॥**

ಲಲಿತ ಕುಸುಮ ಪ್ರವಾಲ ಪಲ್ಲವಗಳಿಂದ ರಚಿತವಾದ ಹಾಸಿನಲ್ಲಿ ಆ ನರಪತಿಯು ಆ ಕಾಡಿನ ಯಾವುದೋ ಭಾಗದಲ್ಲಿ ಪರಿಜನರಿಂದ ದೂರವಾಗಿದ್ದು ರಾತ್ರಿಕಾಲವನ್ನು ನಿದ್ರೆಯಲ್ಲಿ ಕಳೆದನು. ಅಲ್ಲಿ ಹಸುರು ತಲ್ಪದ ಸುತ್ತಲೂ ಬೆಳಕಾಗಿ ನಿಂತಿದ್ದುವು, ಸ್ವಯಂ ಪ್ರಕಾಶಿತ ಜ್ಯೋತ್ಸ್ನ ಸಸ್ಯಗಳು, ಓಷಧಿಗಿಡಗಳು ದೀಪದಂತೆ ಪ್ರಕಾಶಿಸುತ್ತ ಆ ರಾಜನಿಗೆ ಬೆಳಕನ್ನು ನೀಡುತ್ತಲಿದ್ದುವು.

ಸ ನರಪತಿಃ ಲಲಿತಾನಿ, ಕುಸುಮಾನಿ, ಪ್ರವಾಲಾನಿ, ಪಲ್ಲವಾನಿ ಶಯ್ಯಾ ಯಸ್ಯಾಂ ತಾಮ್—ತ್ರಿಯಾಮಾಂ = ರಾತ್ರಿಂ—ಪರಿಹೃತ ಪರಿಜನಃ = ಸನ್ನಿತ್ಯರ್ಥಃ ॥ ಪುಷ್ಪಿತಾಗ್ರಾವೃತ್ತಮ್ ॥ ಅಸಮೇತಪರಿಚ್ಛದಃ = ಅಸಮೇತಃ ಪರಿಚ್ಛದಃ ಯಸ್ಯ ಸಃ—ಯಾಮತೂರ್ಯ = ಸಮಯವನ್ನು ಸೂಚಿಸುವ ಭೇರೀನಿನಾದ—ರುರೋಃ ಗೃಹೀತವರ್ತ್ಮಾ (ರುರೋಃ) ಗೃಹೀತಂ ವರ್ತ್ಮ ಏನ ಸಃ—ದ್ವಿರದ = ದ್ವೌ ರದೌ ಯಸ್ಯ—ವಿಲಂಘ್ಯ—ರಜೋನಿಮೀಲಿತಾಃ = ರಜಸಾ ನಿಮೀಲಿತಾಃ—ಅಕ್ಷರಪದ್ಯೈಃ = ಅಕ್ಷರಪ್ರಾಯೈಃ ಪದ್ಯೈಃ—ದ್ವಿಜ = ದ್ವಿಃಜಾತಃ ॥

**71. ಉಷಸಿ ಸ ಗಜಯೂಥಕರ್ಣತಾಲೈಃ ।**
**ಪಟುಪಟಹಧ್ವನಿಭಿರ್ವಿನೀತನಿದ್ರಃ ॥**
**ಅರಮತ ಮಧುರಾಣಿ ತತ್ರ ಶೃಣ್ವನ್ ।**
**ವಿಹಗಕೂಜಿತಬಂದಿಮಂಗಲಾನಿ** ॥ ೭೧ ॥

**ಆ ಅರಸನು ಉಷಾಕಾಲದಲ್ಲಿ** ವಿಗತನಿದ್ರನಾದನು. ಆ ರಾಜಶೇಖರನು (ರಾಜವಮೌಳಿ) ಕೂಡಲೇ ಎಚ್ಚತ್ತನು. ತಮಟೆಯ ಸ್ವರವನ್ನು ಹೋಲುವ ಆನೆಗಳ ಅಗಲವಾದ ಕಿವಿಗಳ ಬಡಿತದಿಂದ (ಪಟುಪಟಹಧ್ವನಿಯಂತಿರುವಾನೆಯ ಕಿವಿಗಳ ಬಡಿತದಿ) ಅವನು ಉದಯ ಕಾಲದಲ್ಲಿ ಎಚ್ಚರಗೊಂಡನು. ಕಾಡಿನ ಮರಗಳಲ್ಲಿ ನೆಲಸಿರುವ ನಾನಾವಿಧದ ಪಕ್ಷಿಗಳ ಮಾಧುರ್ಯದ ಕೂಜಿತರವವು (ಹಕ್ಕಿಗಳ ರಾಗಬದ್ಧವಾದ ಕೂಗು) ಅರಮನೆಯ ಮಾಗಧರ ಸುಪ್ರಭಾತದ ಹಾಡಿನಂತೆ ಸುಖಕರವಾದ ಮಂಗಳಗೇಯವನ್ನು ಆಲಿಸುತ್ತ (ವಿಹಗಕೂಜಿತ ವಂದಿಗಳೊಸಗೆಯ ಸುಖಕರ ಮಂಗಳಗೇಯವ ಕೇಳುತ) ನಲಿದನಂದು ದಶರಥಸಾರ್ವಭೌಮನು.

ಉಷಸಿ = ಪ್ರಾತಃ—ಮಂಗಲಾನಿ = ಮಂಗಲಗೀತಾನಿ—ವಿಹಗಾನಾಂ = ವಿಹಂಗಾನಾಂ —ಪಟೂನಾಂ = ಪಟಹಾನಾಮಿವ ॥

**72. ಅಥ ಜಾತುರುರೋರ್ಗೃಹೀತವರ್ತ್ಮಾ ।**
**ವಿಪಿನೇ ಪಾರ್ಶ್ವಚರೈರಲಕ್ಷ್ಯಮಾಣಃ ॥**
**ಶ್ರಮಫೇನಮುಚಾ ತಪಸ್ವಿ ಗಾಢಾಂ ।**
**ತಮಸಾಂ ಪ್ರಾಪ ನದೀಂ ತುರಂಗಮೇಣ** ॥ ೭೨ ॥

ಹೀಗಿರಲು ತನ್ನ ಅಂಗರಕ್ಷಕ ಜನರಿಂದ, ಪರಿಜನರಿಂದ, ಸೇವಕಜನರಿಂದ (ಪರಿವಾರದ ಜನರಿಂದ) ದೂರನಾದ ಆ ದಶರಥನೃಪಾಲನು ಜಿಂಕೆಗಳು ಓಡಾಡುವ ದಾರಿಯಲ್ಲಿ ಬಹುದೂರ ಸಾಗಿಬಂದನು. ಈ ಹೊತ್ತಿಗಾಗಲೇ ಅವನ ದಿವ್ಯಾಶ್ವವು ಪೂರ್ಣವಾಗಿ ದಣಿದಿತ್ತು. ಅಧರ ಕಡಿವಾಣ ಹಾಕಿದ ಬಾಯಿಯಿಂದ ಬಿಳಿಯ ನೊರೆ ಕಾರುತ್ತಲಿತ್ತು. ದಣಿದು ನೊರೆಗರೆವ ಅಶ್ವದೊಡನೆ ಏತಾಡನು. ಹೀಗೆ ದಾರಿ ಸಾಗುತ್ತಾ, ದಣಿದ ಅಶ್ವ ದೊಂದಿಗೆ ಋಷಿವರರಿಂದ ನಿಬಿಡವಾಗಿರುವ ಪವಿತ್ರವಾದ ತಮಸಾನದಿಯ ತೀರಕ್ಕೆ ಬಂದನು.

ಗೃಹೀತವರ್ತ್ಮಾ=ಸ್ವೀಕೃತರುರುಮಾರ್ಗೋ—ವಿಪಿನೇ=ವನೇ—ಸೇವಿತಾಂ ತಮಸಾಂ ನಾಮ ನದೀಂ ಸರಿತಂ ಪ್ರಾಪ ॥

**73. ಕುಂಭಪೂರಣಭವಃ ಪಟುರುಚ್ಚೈಃ ।**
**ಉಚ್ಚಚಾರ ನಿನದೋಂಭಸಿ ತಸ್ಯಾಃ ॥**
**ತತ್ರ ಸದ್ವಿರದಬೃಂಹಿತಶಂಕೀ ।**
**ಶಬ್ದಪಾತಿನಮಿಷುಂ ವಿಸಸರ್ಜ** ॥ ೭೩ ॥

ಆ ಪವಿತ್ರವಾದ ತಮಸಾನದಿಯ ತೀರಭಾಗದಿಂದ ಗುಳುಗುಳು ನಿನಾದವೊಂದು ಕೇಳುತ್ತಲಿತ್ತು. ಅದನ್ನು ಆಲಿಸುತ್ತ (ಘುಳುಘುಳು ಧ್ವಾನವನು ಕೇಳುತ) ಅರಸನು ಮುಂದೆ ನಡೆದನು. ಕೊಡದಲ್ಲಿ ನೀರು ತುಂಬುತಲಿದ್ದಾಗ ಹೊರಟ ಆ ನಾದ ನಾಲ್ಕು ದಿಕ್ಕುಗಳನ್ನು ತುಂಬಿಕೊಂಡಿತು. ಆ ನಾದವನ್ನು ಆನೆಗಳ ಬೃಂಹಿತನಾದವೆಂದು ಶಂಕಿಸಿ ಶಬ್ದವೇಧಿವಿದ್ಯೆಯನ್ನು ಬಲ್ಲ ದಶರಥರಾಜೇಂದ್ರನು, ಶಬ್ದ ಬರುವ ದಿಕ್ಕನ್ನು ಲಕ್ಷ್ಯ (ಗುರಿಯಾಗಿಟ್ಟು) (ಶಬ್ದಪಥವನು ಲಕ್ಷ್ಯಗೈದು) ಆಕರ್ಣಾಂತವಾಗಿ ಒಂದು ಅಂಬನ್ನು ಹೂಡಿದನು.

ತಸ್ಯಾಸ್ತಮಸಾಯಾ ಅಂಭತಿ ಕುಂಭಪೂರಣೇನ ಭವ ಉತ್ಪನ್ನಃ—ಪಟುರ್ಘರ್ಘರಃ —ತತ್ರ ನಿನದೇ ಸ ನೃಪಃ—ದ್ವಿರದಬೃಂಹಿತಂ ಶಂಕಿತ ಇತಿ = ದ್ವಿರದಬೃಂಹಿತಶಂಕೀ ಸನ್—ದ್ವಿಸದ = ದ್ವೌ ರದೌ ಯಸ್ಯ ॥ ಸ್ವಾಗತವೃತ್ತಮ್—

**74. ನೃಪತೇಃ ಪ್ರತಿಷಿದ್ಧಮೇವ ತತ್ ।**
**ಕೃತವಾನ್ ಪಂಕ್ತಿರಥೋ ವಿಲಂಘ್ಯ ಯತ್ ॥**
**ಅಪಥೇ ಪದಮರ್ಪಯಂತಿ ಹಿ ।**
**ಶ್ರುತವಂತೋಽಪಿ ರಜೋನಿಮೀಲಿತಾಃ ॥ ೭೪ ॥**

ನೃಪರಿಗೆ ವಿರುದ್ಧವಾದ ಕರ್ಮವನ್ನು ಇದೀಗ ದಶರಥನು ಎಸಗಿದನು. ಯುದ್ಧದಲ್ಲಿ ಅಲ್ಲದೆ ಇತರ ಕಾಲಗಳಲ್ಲಿ ಗಜವಧೆಯು ನಿಷಿದ್ಧವಾದುದು. ತಿಳಿದೂ ತಿಳಿದೂ ದಶರಥನು ರಾಜನೀತಿಶಾಸ್ತ್ರವನ್ನು ಉಲ್ಲಂಘಿಸಿ ತಪ್ಪನ್ನು ಎಸಗಿದನು. ಕ್ಷತ್ರಿಯನಿಗೆ ಸ್ವಾಭಾವಿಕವಾದ ರಜೋಗುಣದ ಹಾದಿಯಲ್ಲಿ ನಡೆದರೆ ಸಾತ್ವಿಕರಾಪ ವಿವೇಕಿಗಳೂ ಎಡವುವುದು ಸ್ವಾಭಾವಿಕವಷ್ಟೆ. ದಶರಥಸಾರ್ವಭೌಮನು ಆ ವಿಷಗಳಿಗೆಯಲ್ಲಿ ಒಂದು ನಿಶಿತಶರವನ್ನು ಶಬ್ದಬರುವ ಕಡೆಗೆ ಗುರಿಯಿಟ್ಟು ಎಸೆದನು. ಅರಿಷಡ್ವರ್ಗಗಳ ದಾಸನಾದರೆ, ಅವುಗಳ ವಶನಾದರೆ ಮಾನವನು ಮಾಡಬಾರದುದನು ಮಾಡುತ್ತಾನೆ. ಅದರ ಫಲಿತಾಂಶ ಆಗಬಾರದ್ದು ಆಗುತ್ತದೆ, ಆದ್ದರಿಂದ ಶ್ರುತವಂತರು ದುಷ್ಪಥದೊಳು ಅಡಿಯಿಡರು (ಶ್ರುತವಂತರುಂ ರಜೋಗುಣಕಲಿತರಾದಂದು).

ತತ್ಕರ್ಮ ನೃಪತೇಃ = ಕ್ಷತ್ರಿಯಸ್ಯ—ಪ್ರತಿಷಿದ್ಧಮೇವ—ಗಜವಧರೂಪಂ—ಪಂಕ್ತಿರಥೋ = ದಶರಥೋ—"ಲಕ್ಷ್ಮೀಕಾಮೋ ಯುದ್ಧಾದನ್ಯತ್ರ ಕರಿವಧಂ ನ ಕುರ್ಯಾತ್" ಇತಿ ಶಾಸ್ತ್ರಮುಲ್ಲಂಘ್ಯ ಕೃತವಾನ್—ಅಪಥ ಇತಿ—ಶ್ರುತವಂತೋಽಪಿ ವಿದ್ವಾಂಸೋಽಪಿ ರಜೋನಿಮೀಲಿತಾ ರಜೋಗುಣವೃತಾಃ ಸಂತಃ ॥ ಪದಮರ್ಪಯಂತಿ ಹಿ = ನಿಕ್ಷಿಪಂತ ಹಿ—ಪ್ರವರ್ತಂತ ಇತ್ಯರ್ಥಃ ॥ ವೈತಾಲೀಯಂ ವೃತ್ತಂ ॥

ಅನ್ವಯಃ—ಯತ್ ನೃಪತೇಃ ಪ್ರತಿಷಿದ್ಧಮ್ ಏವ ತತ್ ಪಂಕ್ತಿರಥಃ ವಿಲಂಘ್ಯ ಕೃತವಾನ್ । ರಜೋನಿಮೀಲಿತಾಃ ಶ್ರುತವಂತಃ ಅಪಿ ಹಿ ಅಪಥೇ ಪದಮ್ ಅರ್ಪಯಂತಿ ಪಂಕ್ತಿರಥಃ = ದಶರಥ ॥

**75. ಹಾ ತಾತೇತಿ ಕ್ರಂದಿತಮಾಕರ್ಣ್ಯ ವಿಷಣ್ಣಃ ।**
**ತಸ್ಯಾನ್ವಿಷ್ಯನ್ ವೇತಸಗೂಢಂ ಪ್ರಭವಂ ಸಃ ॥**

**ಶಲ್ಯಪ್ರೋತಂ ಪ್ರೇಕ್ಷ್ಯ ಸಕುಂಭಂ ಮುನಿಪುತ್ರಂ।**
**ತಾಪಾದಂತಃ ಶಲ್ಯ ಇವಾಸೀತ್ ಕ್ಷಿತಿಪೋಽಪಿ ॥ ೭೫ ॥**

ಆಗ "ತಾತ ಹಾಹಾ" "ಓ ತಂದೆಯೆ" "ಅಪ್ಪಾ, ಅಪ್ಪಾ" "ಅಮ್ಮಾ, ಅಮ್ಮಾ" "ಅಯ್ಯೋ, ಅಯ್ಯೋ" "ಹಾ ಕೆಟ್ಟೆನು ಅಕಟಾ ಕೆಟ್ಟೆನು" ಎಂಬ ಕರ್ಣಕಠೋರವಾದ ಕೂಗೊಂದು ಗಗನವನ್ನು ಭೇದಿಸಿ ಶಾಂತವಾತಾವರಣವನ್ನು ಕದಡಿಸಿ ದಶರಥನರಾಧಿಪನ ಕಿವಿದೆರೆಯನ್ನು ಹೊಕ್ಕಿತು. ಆದರಿಂದ ವಿಚಲಿತಮನಸ್ಕನಾದ, ಭಯಚಕಿತನಾದ ರಾಜನು ಆ ಶಬ್ದವು ಕೇಳಿಸಿದ ದಾರಿಯ ಮೂಲವನ್ನು ಅರಸುತ್ತಾ ಆ ಕಾಡಿನಲ್ಲಿ ಮುಂದುವರಿಯುತ್ತ ಬಂದನು. ಬಿದಿರುಮೆಳೆಗಳ ಕಣೆಗಳ ಮೂಲಕ ದಾರಿಮಾಡುತ್ತಾ (ಬೆತ್ತಗಳ ಮೆಳೆಮೆಳೆಯೊಳು ಅರಸುತ) ಬಂದು ತಮಸಾನದಿಯ ತೀರದಲ್ಲಿ ನೀರ ಕೊಡ ಸಹಿತ ನೆಲದಲ್ಲಿ ಉರುಳಿ ರಕ್ತದ ಕಾಲುವೆಯಲ್ಲಿ (ರಕ್ತದ ಮಡುವಿನಲ್ಲಿ) ಹೊರಳಾಡುತ್ತಿರುವ ಋಷಿಕುಮಾರನನ್ನು ಕಂಡನು. ಅಚಾತುರ್ಯದಿಂದ ಎಸೆದ ಮರ್ಮಘಾತಕವಾದ ಬಾಣದಿಂದ ಗಾಯಗೊಂಡ ಮುನಿಬಾಲಕನನ್ನು ಕಂಡು ತನ್ನ ಹೃದಯವನ್ನೇ ತನ್ನ ಬಾಣವು ಹೊಕ್ಕಿತೋ ಎಂಬಂತೆ ಕಣೆ ಹೊಕ್ಕಿರುವ ಬಾಲಕನನ್ನು ಕಂಡು ದುಃಖಾತಿರೇಕದಿಂದ ಬ್ರಹ್ಮಹತ್ಯಾದೋಷಶಂಕಿತನಾಗಿ ಕಡುನೊಂದನು (ತನ್ನನೇ ಕಣೆ ಹೊಕ್ಕವೊಲು).

ಅನ್ವಯ:—ಹಾ ತಾತೇತಿ ಕ್ರಂದನಮಾಕರ್ಣ್ಯ ವಿಷಣ್ಣಃ ಸಃ ತಸ್ಯ ವೇತಸಗೂಢಂ ಪ್ರಭವಮ್ ಅನ್ವಿಷ್ಯನ್ ಶಲ್ಯಪ್ರೋತಂ ಸಕುಂಭಂ ಮುನಿಪುತ್ರಂ ಪ್ರೇಕ್ಷ್ಯ ಕ್ಷಿತಿಪಃ ಅಪಿ ತಾಪಾತ್ ಅಂತಃ ಶಲ್ಯಃ ಇವ ಆಸೀತ್ ॥

'ತಾತಸ್ತು, ಜನಕಃ, ಪಿತಾ'' ಇತಿ ಚಾಮರಃ—ಅಂತಃ ಶಲ್ಯಂ—ಮಾ ಭೂತೇ ಮನಸೋ ವ್ಯಥಾ—ತಾತೋ ಜನಕಃ—"ಹಾ ವಿಷಾದಶುಗರ್ತಿಷು" ಇತಿ ಹಾ ತಾತೇತಿ ಕ್ರಂದಿತಂ ಕ್ರೋಶನಮಾಕರ್ಣ್ಯ—"ಶಲ್ಯಂ, ಶಂಕೌ, ಶರೇ, ವಂಶೇ" ಇತಿ ವಿಶ್ವಃ

ಮತ್ತಮಯೂರಂ ವೃತ್ತಮ್ ॥

**76. ತೇನಾವತೀರ್ಯ ತುರಗಾತ್ ಪ್ರಥಿತಾನ್ವಯೇನ।**
**ಪೃಷ್ಟಾನ್ವಯಃ ಸ ಜಲಕುಂಭನಿಷಣ್ಣದೇಹಃ ॥**
**ತಸ್ಮೈ ದ್ವಿಜೇತರತಪಸ್ವಿಸುತಂ ಸ್ಖಲದ್ಭಿಃ।**
**ಆತ್ಮಾನಮಕ್ಷರಪದೈಃ ಕಥಯಾಂ ಬಭೂವ ॥ ೭೬ ॥**

ಅರಸನು ತನ್ನ ಕುದುರೆಯಿಂದ ಇಳಿದು, ಬ್ರಹ್ಮಹತ್ಯಾಪಾಪವು ತನಗೆ ಬಂತೆಂದು ವ್ಯಾಕುಲಗೊಂಡು ಆ ಋಷಿಕುಮಾರನಿಗೆ ಪ್ರಥಮ ಚಿಕಿತ್ಸೆ ನೀಡಿದ ಬಳಿಕ ಆತನ ಕುಲಗೋತ್ರಗಳನ್ನು ಕೂಲಂಕಷವಾಗಿ ವಿಚಾರಿಸಿದನು. ಆ ಜಲಕುಂಭದ ಬಳಿಯಲ್ಲಿ ನೆಲದಲ್ಲಿ ಒರಗಿರುವ (ನೀರಗಡಿಗೆಯನೊರಗಿದಾತನು) ತಾನು ದ್ವಿಜೇತರ (ದ್ವಿಜಜಾತಿಗೆ ಸೇರದೆ ಇರುವ) ಜಾತಿಯ ಮುನಿಯ ಪುತ್ರನು(ವೈಶ್ಯ ಅಥವಾ ಶೂದ್ರಜಾತಿಯ, ದಲಿತ, ಹರಿಜನ). ತೀರ್ಥಯಾತ್ರಾನಿಮಿತ್ತ, ವೃದ್ಧರಾದ ಮಾತಾಪಿತೃಗಳನ್ನು ಹೊತ್ತು ತಿರುಗುವುದು ತನ್ನ ಕಾಯಕ ಎಂಬುದನ್ನು ಆ ಬಾಲಕನು ಅರುಹಿದನು.

ಪ್ರಥಿತಾನ್ವಯೇನ = ಪ್ರಖ್ಯಾತವಂಶೇನ — ತೇನ ರಾಜ್ಞಾ ತುರಗಾದವತೀರ್ಯ

ಪೃಷ್ಟಾನ್ವಯೋ ಬ್ರಹ್ಮಹತ್ಯಾಶಂಕಯಾ ಪೃಷ್ಟಕುಲಃ—ಅಕ್ಷರವದ್ಭಿಃ=ಅಕ್ಷರಪ್ರಾಯೈಃ ಪದೈಃ—ದ್ವಿಜ=ದ್ವಿಜಾತಃ—(ಜನ್ಮನಾ ಜಾಯತೇ ಶೂದ್ರಃ ಸಂಸ್ಕಾರೈರ್ದ್ವಿಜ ಉಚ್ಯತೇ)

**77. ತಚ್ಚೋದಿತಶ್ಚ ತಮನುದ್ಧೃತ ಶಲ್ಯಮೇವ ।**
**ಪಿತ್ರೋಃ ಸಕಾಶಮವಸನ್ನದೃಶೋರ್ನಿನಾಯ ॥**
**ತಾಭ್ಯಾಂ ತಥಾಗತಮುಪೇತ್ಯ ತಮೇಕಪುತ್ರಂ ।**
**ಅಜ್ಞಾನತಃ ಸ್ವಚರಿತಂ ನೃಪತಿಃ ಶಶಂಸ ॥ ೭೭ ॥**

ಮರಣೋನ್ಮುಖಸ್ಥಿತಿಯಲ್ಲಿರುವ ಆ ಮುನಿಬಾಲಕನ (ಕೀಳದೆಯೇ ಮೈಗಿಳಿದ ಕಣೆಯನು) ಮಾತಿನಿಂದ ವಿಷಯವನ್ನು ತಿಳಿದ ಕೂಡಲೆ ಆ ಎದೆಯಲ್ಲಿ ನಾಟಿರುವ ಬಾಣದಿಂದ ಸಂಕಟ ಪಡುತ್ತಿರುವ ಆ ಬಾಲನನ್ನು ಬಾಣವನ್ನು ಕೀಳದೆ, ಬಾಣಸಹಿತ, ಹಾಗೆಯೇ ಕೈಯಲ್ಲಿ ಎತ್ತಿಕೊಂಡು, ಜೀರ್ಣದೇಹಿಗಳೂ, ಕುರುಡರಾಗಿದ್ದ ಆ ವೃದ್ಧಮಾತಾಪಿತರ ಮುಂದೆ ಇರಿಸಿದನು (ಕುರುಡುತಾಯ್ತಂದೆಯರ ಬಳಿಗೆ). ಆ ಬಳಿಕ ಆತುರದಿಂದ ಅರಿಯದೆ, ಅವರ ಏಕಮಾತ್ರಪುತ್ರನನ್ನು ಅಜ್ಞಾನದಿಂದ ಎಸಗಿದ ಕಾರ್ಯವನ್ನು ಮೆಲ್ಲನೆ ಅವರಿಗೆ ಅರುಹಿದನು.

ಅನ್ವಯ :—ತಚ್ಚೋದಿತಃ ಚ ನೃಪತಿಃ ಅನುದ್ಧೃತಶಲ್ಯಮೇವ ತಮ್ ಅವಸನ್ನ ದೃಶೋಃ ಪಿತ್ರೋಃ ಸಕಾಶಂ ನಿನಾಯ । ತಥಾಗತಂ ತಮ್ ಏಕಪುತ್ರಮ್ ಉಪೇತ್ಯ ಅಜ್ಞಾನತಃ ಸ್ವಚರಿತಂ ತಾಭ್ಯಾಂ ಶಶಂಸ ॥

ಅವಸನ್ನದೃಶೋರ್ನಷ್ಟಚಕ್ಷುಷೋಃ = ಅಂಧಯೋರಿತ್ಯರ್ಥಃ — ಸಕಾಶಂ ಸಮೀಪಂ ನಿನಾಯ—ತಥಾಗತಂ=ಪೇತಸಗೂಢಮ್—ಮುನಿಪುತ್ರಮುಪೇತ್ಯ ಸನ್ನಿಕೃಷ್ಟಂ ಗತ್ವಾ ಜ್ಞಾನತಃ ಕರಿಭ್ರಾಂತ್ಯಾ ಸ್ವಚರಿತಂ = ಸ್ವಕೃತಂ—ತಾಭ್ಯಾಂ = ಮಾತಾಪಿತೃಭ್ಯಾಮ್ ಶಶಂಸ = ಕಥಿತವಾನ್ ॥

**78. ತೌ ದಂಪತೀ ಬಹುವಿಲಪ್ಯ ಶಿಶೋಃ ಪ್ರಹರ್ತ್ರಾ ।**
**ಶಲ್ಯಂ ನಿಖಾತಮುದಹಾರಯತಾಮುರಸ್ತಃ ॥**
**ಸೋಽಭೂತ್ಪರಾಸುರಥ ಭೂಮಿಪತಿಂ ಶಶಾಪ ।**
**ಹಸ್ತಾರ್ಪಿತೈರ್ನಯನವಾರಿಭಿರೇವ ವೃದ್ಧಃ ॥ ೭೮ ॥**

ಆ ವೃದ್ಧದಂಪತಿಗಳು ತಮ್ಮ ಪುತ್ರನ ಗುಣಗಳನ್ನು ನೆನೆದು ರೋದಿಸಿದರು (ಪ್ರಲಪಿಸಿದರು). ತಮ್ಮ ಪುತ್ರನ ಕೊಲೆಗೈದ ರಾಜನೊಡನೆ ಎದೆಯಲ್ಲಿ ಊರಿರುವ ಬಾಣವನ್ನು ಹೊರಗೆಳೆಯುವಂತೆ ಪ್ರಾರ್ಥಿಸಿದರು. ಅರಸನು ಒಡನೆಯೇ ಆ ಶಲ್ಯವನ್ನು ಹೊರಗೆ ಎಳೆಯಲು ಆ ಬಾಲಕನ ಅಸುವು ಹಾರಿಹೋಗಿ ಅವನು ಗತಪ್ರಾಣನಾಗಿ ಧರಾತಲದಲ್ಲಿ ದೀರ್ಘನಿದ್ರೆ ಮಾಡುತ್ತ ಪವಡಿಸಿದನು (ಒಡನೆ ಮಗನ ಅಸುವು ಹಾರಲು). ಆ ಕ್ಷಣವೇ ಆ ವೃದ್ಧಮುನಿಯು ಕೋಪದಿಂದ ಕಿಡಿಕಿಡಿಯಾಗಿ ಕೈಯ ಬೊಗಸೆಯಲ್ಲಿ ಇಳಿಯುತ್ತಿರುವ ಬಾಷ್ಪವೇ (ಕಣ್ಣೀರು) ಶಾಪಜಲವಾಗಲು (ಬಾಷ್ಪವೆ ಶಾಪಜಲವೆನಲು).

ಅನ್ವಯ :—ತೌ ದಂಪತೀ ಬಹುವಿಲಪ್ಯ ಶಿಶೋಃ ಉರಸ್ತಃ ನಿಖಾತಂ ಶಲ್ಯಂ

ಪ್ರಹರ್ತ್ರಾ ಉದಾಹರಯತಾಮ್ । ಸಃ ಪರಾಸುಃ ಅಭೂತ್ । ಅಥ ವೃದ್ಧಃ ಹಸ್ತಾರ್ಪಿತೈಃ ನಯನವಾರಿಭಿರೇವ ಭೂಮಿಪತಿಂ ಶಶಾಪ । ಉದಹಾರಯಂತಾಮ್ ॥

"ದಂಪತೀ, ಜಂಪತೀ, ಜಾಯಾಪತೀ, ಭಾರ್ಯಾಪತೀ ಚ ತೌ" ಇತ್ಯಮರಃ—ಬಹು ವಿಲಪ್ಯ ಭೂಯಿಷ್ಠಂ ಪರಿದೇವ್ಯಃ—"ವಿಲಾಪಃ ಪರಿದೇವನಮ್" ಇತ್ಯಮರಃ—ಹಸ್ತಾರ್ಪಿತೈರ್ನಯನವಾರಿಭಿರೇವ = ಶಾಪದಾನಸ್ಯ ಜಲಪೂರ್ವಕತ್ವಾತ್ತೈರೇವ ॥

**79. ದಿಷ್ಟಾಂತಮಾಪ್ಸ್ಯತಿ ಭವಾನಪಿ ಪುತ್ರಶೋಕಾತ್ ।**
**ಅಂತ್ಯೇವಯಸ್ಯಹಮಿವೇತಿ ತಮುಕ್ತವಂತಮ್ ॥**
**ಆಕ್ರಾಂತಪೂರ್ವಮಿವ ಮುಕ್ತವಿಷಂ ಭುಜಂಗಂ ।**
**ಪ್ರೋವಾಚ ಕೋಸಲಪತಿಃ ಪ್ರಥಮಾಪರಾದ್ಧಃ ॥ ೭೯ ॥**

ಪುತ್ರಶೋಕದಿಂದ ಭಾವನಾಪರವಶನಾದ ಆ ಮುನೀಂದ್ರನು ಮಾರ್ಗಮಧ್ಯದಲ್ಲಿ ಕಾಲತುಳಿತಕ್ಕೆ ಸಿಕ್ಕಿದ ಸರ್ಪವು ಭುಸುಗುಟ್ಟುತ್ತಾ ಹೆಡೆ ಎತ್ತಿ ವಿಷವನ್ನು ಕಾರುವಂತೆ ಪ್ರಥಮಾಪರಾಧವೆಸಗಿದ ಕೋಸಲಾಧಿಪತಿ ದಶರಥಮಹಾರಾಜನನ್ನು ಈ ತೆರನಾಗಿ ಶಪಿಸುತ್ತ ನುಡಿದನು (ವಿಷವ ಕಾರುವವೊಲಿರುವ ಮಾತುಗಳನು). "ಎಲೈ ರಾಜನೆ, ನೀನು ನಿನ್ನ ಅಂತ್ಯಕಾಲದಲ್ಲಿ ನನ್ನಂತೆಯೇ ಪುತ್ರಶೋಕದಿಂದ (ಎನ್ನವೊಲು ನಿನಗೊದಗಲೆನುತ) ನಿನಗೆ ಅಳಿವು ಪ್ರಾಪ್ತವಾಗಲಿ. ಪುತ್ರಶೋಕದಿಂದ ಮರಣವು ಸನ್ನಿಹಿತವಾಗಲಿ" ಎಂಬ ವಿಷದಂತಹ ನುಡಿಗಳನ್ನು ನುಡಿದನು ಹೇಗೆ ಸರ್ಪವು ತನ್ನನ್ನು ತುಳಿದವನನ್ನು, ದಯೆ ದಾಕ್ಷಿಣ್ಯವಿಲ್ಲದೆ ಕಚ್ಚಿ ತನ್ನಲ್ಲಿರುವ ವಿಷಜ್ವಾಲೆಯನ್ನು ಹೊರಗೆಡಹಿ ಶಾಂತವಾಗುವಂತೆ, ಆ ಮುನೀಂದ್ರನು ಕಟುವಾಗಿ ನುಡಿದು ತನ್ನ ಕ್ರೋಧವು ಇಂಗಿ ಶಾಂತನಾದನು, ಅಪರಾಧಿಯ ಮೇಲೆ ತನ್ನ ಕ್ರೋಧಾಗ್ನಿಯನ್ನು ಆಸ್ಫೋಟಿಸಿ ಮೌನವಾಂತನು.

ಅನ್ವಯ:—ಅಹಮಿವ ಭವಾನಪಿ ಪುತ್ರಶೋಕಾದ್ ಅಂತ್ಯೇವಯಸಿ ದಿಷ್ಟಾಂತಮಾಪ್ಸ್ಯತಿ ಇತಿ ಆಕ್ರಾಂತಪೂರ್ವೋ ಮುಕ್ತವಿಷಂ ಭುಜಂಗಮ್ ಇವ ಉಕ್ತವಂತಂ ತಂ ಪ್ರಥಮಾಪರಾದ್ಧಃ ಕೋಸಲಪತಿಃ ಪ್ರೋವಾಚ ॥

ಭವಾನಪ್ಯಂತ್ಯೇವಯಸ್ಯಹಮಿವ ಪುತ್ರಶೋಕಾದಿಷ್ಟಾಂತಂ ಕಾಲಾವಸಾನಮ್ । ಮರಣಮಿತ್ಯರ್ಥಃ—"ದಿಷ್ಟಃ ಕಾಲೇ ಚ ದೈವೇಸ್ಯಾದ್ದಿಷ್ಟಮ್" ಇತಿ ವಿಶ್ವಃ—ಆಪ್ಸ್ಯತಿ = ಪ್ರಾಪ್ಸ್ಯತಿ—ಮುಕ್ತವಿಷಮುಪಕಾರಾತ್ ಪಶ್ಚಾದುತ್ಸೃಷ್ಟವಿಷಂ—ಪ್ರಥಮಾಪರಾದ್ಧಃ ಪ್ರಥಮಾಪರಾಧೀ—ಕೋಸಲಪತಿರ್ದಶರಥಃ ಪ್ರೋವಾಚ ॥

**80. ಶಾಪೋಪ್ಯದೃಷ್ಟತನಯಾನನಪದ್ಮಶೋಭೇ ।**
**ಸಾನುಗ್ರಹೋ ಭಗವತಾ ಮಯಿ ಪಾತಿತೋಽಯಮ್ ॥**
**ಕೃಷ್ಯಾಂ ದಹನ್ನಪಿ ಖಲು ಕ್ಷಿತಿಮಿಂಧನೇದ್ಧೋ ।**
**ಬೀಜಪ್ರರೋಹ ಜನನೀಂ ಜ್ವಲನಂ ಕರೋತಿ ॥ ೮೦ ॥**

ಹೇ ತಾಪಸೋತ್ತಮನೇ, ನನ್ನ ಈ ದುಃಖದ ಪ್ರಸಂಗದಲ್ಲೂ, ಈ ಶಾಪದಲ್ಲೂ ಒಂದು ಅನುಗ್ರಹವು ಅಡಗಿಯೇ ಇದೆ ಎಂಬುದನ್ನು ನಾನು ಈಗ ತಿಳಿದಿರುವೆನು

(ಪೂಜ್ಯರದೊಂದನುಗ್ರಹವೆಂದು). ಏಕೆಂದರೆ ನಾನು ಈತನಕ ತಾವರೆಮೊಗದ ಚೆಲುವನಾದ ಪುತ್ರನನ್ನು ಪಡೆಯದಿರುವೆನು. ಮುಂದೆ ನನಗೆ ಪುತ್ರೋತ್ಪತ್ತಿಯಾಗುವ (ಪುತ್ರೋತ್ಸವ) ಭರವಸೆ ಈ ಶಾಪದಲ್ಲಿ ಅಡಗಿದೆ ಎಂಬುದನ್ನು ಇದೀಗ ಅರಿತನು. ಇದು ನಿಮ್ಮ ಪಾದಾಂಬುಜದ ದರ್ಶನಭಾಗ್ಯ. ಇದು ಪುತ್ರಶೋಕಾರ್ತರಾದ ನೀಡಿರುವ ಪುತ್ರರೂಪವಾದ ಅನುಗ್ರಹರೂಪದ ಶಾಪರೂಪವೆಂಬ ಶಾಸನ. ಸೌದೆ, ಇದ್ದಲು, ಸೊಪ್ಪುಸದೆಗಳಿಂದ ಏಳುವ ಅಗ್ನಿಯಿಂದ ಭೂಮಿಯನ್ನು ಕೃಷಿಕನು ಭೂಮಿಯನ್ನು ಸುಟ್ಟರೂ, ಅನಂತರ ಭೂಮಿಯಲ್ಲಿ ಬಿತ್ತುವ ಬೆಳೆಯಿಂದ ಬೀಜಾಂಕುರಗಳು ಮೊಳಕೆಯೊಡೆದು ಸಸ್ಯಕೋಟಿಯು ಒಳ್ಪಿಗೈಯುವುದು, ಒಳ್ತು ಗೈಯುವುದು, ಜೀವಕೋಟಿ ಬೆಳಗುವುದು.

ಅನ್ವಯ :—ಅದೃಷ್ಟತನಯಾನನಪದ್ಮಶೋಭೇ ಮಯಿ ಭಗವತಾ ಪಾತಿತಃ ಅಯು ಶಾಪಃ ಅಪಿ ಸಾನುಗ್ರಹಃ। ಇಂಧನೇದ್ಧಃ ಜ್ವಲನಃ ಕೃಷ್ಯಾಂ ಕ್ಷಿತಿಂ ದ ಹ ನ್ನ ಪಿ ಖಿಲುಬೀಜಪ್ರರೋಹಜನನೀಂ ಕರೋತಿ ॥

ಕೃಷ್ಯಾಮಿತಿ—ಇಂಧನೈಃ ಕಾಷ್ಟೈರಿದ್ಧಃ ಪ್ರಜ್ವಲಿತೋ ಜ್ವಲನೋಗ್ನಿಃ ಕೃಷ್ಯಾಂ ಕರ್ಷಣಾರ್ಹಾಮ್—ಕ್ಷಿತಿಂ ದಹನ್ನಪಿ ಬೀಜಪ್ರರೋಹಣಾಂ ಬೀಜಾಂಕುರಾಣಾಂ ಜನನೀಮುತ್ಪಾದನಕ್ಷಮಾಂ ಕರೋತಿ ॥

ಅರ್ಥಾಂತರನ್ಯಾಸ ಅಲಂಕಾರ ॥

81. ಇತ್ಥಂ ಗತೇ ಗತ ಘೃಣಃ ಕಿಮಯಂ ವಿಧತ್ತಾಂ ।
ವಧ್ಯಸ್ತವೇತ್ಯಭಿಹಿತೋ ವಸುಧಾಧಿಪೇನ ॥
ಏಧಾನ್ ಹುತಾಶನವತಃ ಸಮುನಿರ್ಯಯಾಚೇ ।
ಪುತ್ರಂ ಪರಾಸುಮನುಗಂತುಮನಾಃ ಸದಾರಃ ॥ ೮೧ ॥

ಆ ವಸುಂಧಾಧಿಪನು : "ನಾನು ದಯಾವಿರಹಿತನಾಗಿ, ನಿರ್ದಯನಾಗಿ ವರ್ತಿಸಿದ ಕಾರಣ ಮರಣದಂಡನೆಗೆ ಅರ್ಹನಾಗಿರುವೆನು. ನಾನು ನಿಮಗೀರ್ವರಿಗೆ ಮಾಡಬೇಕಾದ ಕಾರ್ಯವನು ಬೆಸಸಿರಿ" ಎಂದು ಕೈಮುಗಿದು ಕೇಳಿದನು. ಆಗಲಾ ಮುನಿಪುಂಗವನು ತಾನು ಪತ್ನೀಸಮೇತ ತನ್ನ ಪುತ್ರನನ್ನು ಅನುಸರಿಸುವುದಾಗಿ ಅರುಹಿದನು. ಅನಂತರ "ತನ್ನ ಮಗನಿಗಾಗಿ ಏರ್ಪಡಿಸಿದ ಚಿತೆಯಲ್ಲಿ ತನ್ನನ್ನು ಮತ್ತು ತನ್ನ ಮಡದಿಯನ್ನು ದಹಿಸಬೇಕೆಂದು" ಕೇಳಿಕೊಂಡನು. ಇದರಿಂದ ಪ್ರಾಣಾರ್ಪಣೆ ಮಾಡಿ ಹುತಾತ್ಮರಾಗ (ಬಲಿದಾನ)ಬೇಕೆಂಬ ತಮ್ಮ ಏಕಮುಖವಾದ ತಮ್ಮ ಬಯಕೆಯನ್ನು ಅವನು ತಿಳಿಸಿದನು. ಏಕೆಂದರೆ ಕುರುಡರಾದ ಅವರು (ಅಂಧರಾದ, ಚಾಳೀಸು ಬಂದ, ಪರೆ ಬಂದ ಕಣ್ಣುಳ್ಳ) ಊರುಗೋಲಂತಿರುವ ಪುತ್ರರತ್ನನನ್ನು ಕಳೆದುಕೊಂಡು ಇಳೆಯಲ್ಲಿ ಉಪಜೀವಿಸಲು ಎಳ್ಳಷ್ಟು ಇಷ್ಟಪಡಲಿಲ್ಲ."

ಅನ್ವಯ :—ಇತ್ಥಂಗತೇ ಗತಘೃಣಃ ತವ ವಧ್ಯಃ ಅಯಂ ಕಿಂ ವಿಧತ್ತಾಮಿತಿ ವಸುಧಾಧಿಪೇನ ಅಭಿಹಿತಃ ಪರಾಸುಂ ಪುತ್ರಂ ಸ ದಾರಃ ಅನುಗಂತುಮನಾಃ ಸಃ ಮುನಿಃ ಹುತಾಶನವತಃ ಏಧಾನ್ ಯಯಾಚೇ ॥

ವಸುಂಧಾಧಿಪೇನ=ರಾಜ್ಞಾ–ತವ ವಧ್ಯೋ=ವಧಾರ್ಹೋಽಯಂ ಜನಃ–'ಅಯಮ್'

ಇತಿ ರಾಜ್ಞೋ ನಿರ್ವೇದಾದನಾದರೇಣ ಸ್ವಾತ್ಮನಿರ್ದೇಶಃ—ಕಿಂ ವಿಧತ್ತಾಮಿತ್ಯಭಿಹಿತ ಉಕ್ತಃ—"ಮಯಾ ಕಿಂ ವಿಧೇಯಮ್" ಇತಿ ವಿಜ್ಞಾಪಿತ ಇತ್ಯರ್ಥಃ—ಸ ಮುನಿಃ ಸ ದಾರಃ = ಸ ಭಾರ್ಯಃ—ಪರಾಸುಂ = ಗತಾಸುಂ—ಹುತಾಶನವತಃ=ಸಾಗ್ನಿನೇಧಾನ್ ಕಾಷ್ಠಾನಿಯಾಯಾಚೇ — ಅನುಷ್ಠಾನಾಸಮರ್ಥಸ್ಯ ವಾನಪ್ರಸ್ಥಸ್ಯ ಜೀರ್ಯತಃ—ಗತಘೃಣಃ = ಗತಾ ಘೃಣಾ ಯಸ್ಯ ಸಃ ॥

**82. ಪ್ರಾಪ್ತಾನುಗಃ ಸಪದಿ ಶಾಸನಮಸ್ಯ ರಾಜಾ ।**
**ಸಂಪಾದ್ಯ ಪಾತಕವಿಲುಪ್ತಧೃತಿರ್ನಿವೃತ್ತಃ ॥**
**ಅಂತರ್ನಿವಿಷ್ಟಪದಮಾತ್ಮವಿನಾಶಹೇತುಂ ।**
**ಶಾಪಂ ದಧಜ್ಜ್ವಲನಮೌರ್ವಮಿವಾಂಬುರಾಶಿಃ ॥ ೮೨ ॥**

ಆ ವೇಳೆಗಾಗಲೇ ಅರಸನ ಪರಿವಾರದವರು ಬಂದು ರಾಜನನ್ನು ಸೇರಿಕೊಂಡರು. ಕೂಡಲೇ ಆ ಅರಸನು ಮುನಿಕುಮಾರನ ವಧನಿಮಿತ್ತ ದೊರೆತ ಮುನಿಶಾಸನವನ್ನು ತನ್ನ ಹೃದಯಾಂತರಾಳದಲ್ಲಿ ಧರಿಸಿ ಹೊರಡಲು ಅಪ್ಪಣೆಯನ್ನು ಬೇಡಿದನು. ಆ ರಾಜನ ಮಾನಸಿಕ ಶಾಂತಿಯು ಆ ಶಾಪದಿಂದ ಕದಡಿಹೋಗಿ ಭ್ರಮನಿರಸನ ಹೊಂದಿದ್ದನು. ಅದು ಮುಂದೆ ತನ್ನನ್ನು ಕಾಡಲಿರುವ ಆತ್ಮವಿನಾಶಕಾರಣವಾದ ಶಾಪ. ಕಟ್ಟಿಗೆಯಲ್ಲಿ ಬೆಂಕಿಯು ಅಡಗಿರುವಂತೆ ಅದು ರಾಜನನ್ನು ಬಂದು ಸೇರಿದೆ. ಸಾಗರವು ತನ್ನ ಪವಿತ್ರವಾದ ಜಲರಾಶಿಯಲ್ಲಿ ಔರ್ವವೆಂಬ (ಬಡಬಾನಲ, ಬಾಡಬ) ಬೆಂಕಿಯನ್ನು ತನ್ನ ಜಲಗರ್ಭದಲ್ಲಿ ಧರಿಸಿರುವಂತೆ, ಪ್ರಳಯಕಾಲದ ವಡಬಾಗ್ನಿಯಂತೆ ಇರುವ (ಸೃಷ್ಟಿನಾಶಕಾರಕಹೇತುವಾದ), ಆತ್ಮವಿನಾಶಕಾರಣವಾದ ಶಾಪವನ್ನು ಆ ವಸುಮತೀಶನು ತನ್ನ ಹೃದಯದೊಳಾಂತು ಇದೀಗ ತನ್ನ ರಾಜಧಾನಿಗೆ ಪೊರಮಟ್ಟನು (ಔರ್ವವನು ತಳೆದಂಬುರಾಶಿವೊಲು).

ಅನ್ವಯ :—ಪ್ರಾಪ್ತಾನುಗಃ ರಾಜಾ ಅಸ್ಯ ಶಾಸನಂ ಸಪದಿ ಸಂಪಾದ್ಯ ಪಾತಕವಿಲುಪ್ತಧೃತಿಃ ಅಂತರ್ನಿವಿಷ್ಟಪದಮ್ ಆತ್ಮವಿನಾಶಹೇತುಂ ಶಾಪಂ ಅಂಬುರಾಶಿಃ ಔರ್ವಂ ಜ್ವಲನಂ ಇವ ನಿವೃತ್ತಃ ॥

ಪ್ರಾಪ್ತಾನುಚರಸ್ತ್ವಾತ್ ಸಂಪಾದ್ಯಪಾತಕೇನ ಮುನಿವಧಾರೂಪೇಣ—ವಿಲುಪ್ತಃ ಧೃತಿನಷ್ಟೋತ್ಸಾಹಃ ಸನ್—ಅಂತರ್ನಿವಿಷ್ಟ ಪದಮಂತರ್ಲಬ್ಧಸ್ಥಾನಮಾತ್ಮವಿನಾಶಹೇತುಂ ಶಾಪಂ—ಅಂಬುರಾಶಿರೌರ್ವಂ ಜ್ವಲನಂ=ವಡಬಾನಲಮಿವ—"ಔರ್ವಸ್ತುವಾಡಬೋ ವಡಬಾನಲಃ" ಇತ್ಯಮರಃ—ನಿವೃತ್ತಃ=ವನಾದಿತಿ ಶೇಷಃ—ಪ್ರಾಪ್ತಾನುಗಃ=ಪ್ರಾಪ್ತಾಃ ಅನುಗಾಃ ಯಸ್ಯ ಅಥವಾ ಯೇನ ॥

# ದಶಮಃ ಸರ್ಗಃ

## ಹತ್ತನೆಯ ಸರ್ಗ

**1. ಪೃಥಿವೀಶಾಸತಸ್ತಸ್ಯ ಪಾಕಶಾಸನತೇಜಸಃ ।**
**ಕಿಂಚಿದೂನಮನೂನರ್ದ್ಧೇಃ ಶರದಾಮಯುತಂ ಯಯೌ ॥ ೧ ॥**

ದಶಗುಣಗಳಿಂದ ರಾರಾಜಿಸುವ ದಶರಥಸಾರ್ವಭೌಮನು ಪೃಥ್ವಿಯನ್ನು ಶಾಸನ ಮಾಡಿ ದಶಸಾವಿರ (ಹತ್ತುಸಾವಿರ) ವರ್ಷಗಳು ಸಂದುವು (ಉರುಳಿದುವು). ಪಾಕ ಶಾಸನನಾದ (ಪಾಕನೆಂಬ ರಾಕ್ಷಸನನ್ನು ಸಂಹರಿಸಿದ) ಇಂದ್ರನಂತೆ ಅಮಿತತೇಜಶಾಲಿ ಯಾದ ದಶರಥನು ಸಾವಿರ ಶರದೃತುಗಳನ್ನು ಕಳೆದನು. ಹತ್ತುಸಾವಿರ ವಸಂತಋತುಗಳು ದಾಟಿದುವು. ಅವನ ಆಳ್ವಿಕೆಯಲ್ಲಿ ಧರೆಯು ಸಂಪತ್ತು, ಸಮೃದ್ಧಿಯ ನೆಲೆವೀಡು, ಸಿರಿ ಬೀಡು ಎನಿಸಿತು. ಭಾರತವು ಬೃಹದ್ ಭಾರತವೆನಿಸಿ ಲೋಕವಿಖ್ಯಾತವಾಯಿತು. ಭಾರತೀಯರು ವಿಶ್ವಜ್ಯೇಷ್ಠರು ಎನಿಸಿದರು.

ಪೃಥಿವೀಂ ಶಾಸತಃ = ಪಾಲಯತಃ—ಪಾಕಶಾಸನತೇಜಸಃ = ಇಂದ್ರವರ್ಚಸಃ—ಶರದಾಂ = ವತ್ಸರಾಣಾಮ್—"ಸ್ಯಾದೃತೌ ವತ್ಸರೇ ಶರತ್" ಇತ್ಯಮರಃ—ಅನೂನರ್ದ್ಧೇಃ = ಮಹಾಸಮೃದ್ಧೇಸ್ತಸ್ಯ—ನ ಊನಾ ಅನೂನಾ ಋದ್ಧಿಃ ಯಸ್ಯ — ಕಿಂಚಿದೂನಮ್ = ಈಷನ್ನ್ಯೂನಂ ॥

**2. ನ ಚೋಪಲೇಭೇ ಪೂರ್ವೇಷಾಂ ಋಣನಿರ್ಮೋಕ್ಷಸಾಧನಮ್ ।**
**ಸುತಾಭಿಧಾನಂ ಸ ಜ್ಯೋತಿಃ ಸದ್ಯಃ ಶೋಕತಮೋಪಹಮ್ ॥ ೨ ॥**

ಹೀಗೆ ಅನೇಕ ವರ್ಷಗಳು ಸಂದರೂ ಆ ನೃಪತಿಗೆ ಪುತ್ರಸಂತಾನವಾಗಲೇ ಇಲ್ಲ. ಪೂರ್ವಜರ ಋಣಮುಕ್ತಿಗೆ ಬೇಕಾದ ಬಾಳ್ಗತ್ತಲೆಗೆ ದೀಪದಂತಿರುವ ಪುತ್ರರತ್ನವನ್ನು ಪಡೆಯದೆ ಚಿಂತಿತನಾಗಿದ್ದನು. ಪುತ್ರನೆಂಬುವನು ಬೆಳಕು ಎಂಬ ಇನ್ನೊಂದರ್ಥವನ್ನು ಹೊಂದಿರುವನು. ಆ ಮಗನಲ್ಲವೆ ಶೋಕಾಂಧಕಾರವನ್ನು ತೊಡೆವ ಬೆಳಕು (ಜ್ಯೋತಿ ಸ್ವರೂಪನು, ಪ್ರಕಾಶಕನು), ಋಣಮೋಕ್ಷಸಾಧಕನು, ಗುಣಧರ್ಮಸಾಧಕನು, ಸಂಸಾರ ಸಾರೋದ್ಧಾರಕನು.

ಪೂರ್ವೇಷಾಂ = ಪೂರ್ವಜರ—ಶೋಕತಮೋಪಹಮ್ = ಶೋಕ ಏವ ತಮಸ್ತದ ಪಹಂತೀತಿ ಅಪೇಕ್ಲೇಶ ತಮಸೋಃ ಇತಿ ಡ ಪ್ರತ್ಯಯಃ (ಪಾಣಿನಿ)—ಸುತಾಭಿಧಾನಂ = ಸುತಾಖ್ಯಂ—ಕ್ಲೇಶ = ತಮಸ್—ಪೂರ್ವೇಷಾಂ ಋಣಃ = ಪಿತೃಋಣ, ದೇವಋಣ, ಋಷಿಋಣ—ಶೋಕತಮೋಪಹಾ = ಶೋಕಃ ಏವ ತಮಃ ತದಪಹಸ್ತಿ ॥

**3. ಅತಿಷ್ಠತ್ಪ್ರತ್ಯಯಾಪೇಕ್ಷ ಸಂತತಿಃ ಸ ಚಿರಂ ನೃಪಃ ।**
**ಪ್ರಾಙ್ಮಂಥಾದನಭಿವ್ಯಕ್ತರತ್ನೋತ್ಪರಿವಾರ್ಣವಃ ॥ ೩ ॥**

ಸುತಾಸಾಪೇಕ್ಷೆಯಿಂದ ಆ ರಾಜನು ಬಹಳ ಸಮಯದಿಂದ ಕಾಯುತ್ತಲಿದ್ದನು. ಪುತ್ರ ರತ್ನನು ಹುಟ್ಟಲು ಸರಿಯಾದ ಯಾವುದೋ ಗೂಢವಾದ ಕಾರಣವಿರಬಹುದು. ಅವನ ಅಂತರಂಗವು ನುಡಿಯುತ್ತಿತ್ತು. ರತ್ನಗಳನ್ನು ತನ್ನ ಜಲಗರ್ಭದಲ್ಲಿ ಧರಿಸಿದ್ದರೂ ಅದು ಸಮುದ್ರಮಥನದಿಂದ ತಾನೇ ವ್ಯಕ್ತವಾಗುವುದು ಲೋಕಕ್ಕೆ ? ಸಮುದ್ರವನ್ನು ಕಡೆಯದೆ ಕೌಸ್ತುಭಾದಿರತ್ನಗಳು ದೊರೆತುದಿಲ್ಲ. ರತ್ನೋತ್ಪತ್ತಿಯ ಸ್ಥಾನವು, ಸಮುದ್ರವು ಆದರೂ ಕಡೆಯದೆ ಗೋಚರಿಸುವಂತಿಲ್ಲ, ದೊರೆಯುವಂತಿಲ್ಲ.

ಪ್ರತ್ಯಯಂ ಹೇತುಮಪೇಕ್ಷತ ಇತಿ ಪ್ರತ್ಯಯಾಪೇಕ್ಷಾ ಸಂತತಿರ್ಯಸ್ಯ ಸ ತಥೋಕ್ತಃ —"ಪ್ರತ್ಯಯೋಽಧೀನಶಪಥಜ್ಞಾನವಿಶ್ವಾಸಹೇತುಷು" ಇತ್ಯಮರಃ — ಪ್ರತ್ಯಯ = ಹೇತು, ಕಾರಣ.

**4. ಋಷ್ಯಶೃಂಗಾದಯಸ್ತಸ್ಯ ಸಂತಃ ಸಂತಾನಕಾಂಕ್ಷಿಣಃ ।**
**ಆರೇಭಿರೇ ಜಿತಾತ್ಮಾನಃ ಪುತ್ರೀಯಾಮಿಷ್ಟಿಮೃತ್ವಿಜಃ ॥ ೪ ॥**

ಆ ಋಷಿಪುಂಗವನಾದ ಋಷ್ಯಶೃಂಗ ಮಹಾಮುನಿಯು ಇತರ ಜಿತೇಂದ್ರಿಯರಾದ (ಜಿತಾಂತಃಕರಣರಾದ) ಋತ್ವಿಜರು, ಅಗ್ನಿಹೋತ್ರಿಗಳು, ಪುತ್ರಸಂತಾನವನ್ನು ಬಯಸಿ ರುವ ರಾಜೇಂದ್ರನ ಇಚ್ಛೆಯಂತೆ, ಪುತ್ರರನ್ನು ಪಡೆಯುವ ಸಲುವಾಗಿ (ಪುತ್ರನಿಮಿತ್ತ ವಾಗಿ) ಪುತ್ರಕಾಮೇಷ್ಟಿಯೆಂಬ ಶ್ರೇಷ್ಠವಾದ ಮಹಾಯಾಗವನ್ನು ನಡೆಸಿದರು (ಪ್ರಾರಂಭಿಸಿದರು).

ಋಷ್ಯಶೃಂಗಾದಯಃ = ಋಷ್ಯಶೃಂಗೋ ನಾಮ ಕಶ್ಚಿದೃಷಿಃ—"ಋತ್ವಿಗ್ದಧೃಕ್"— ಇತ್ಯಾದಿನಾಕ್ಷಿಬಂತೋ ನಿಪಾತಃ—ಜಿತಾತ್ಮಾನೋ=ಜಿತಾಂತಃಕರಣಾಃ—ಸಂತಾನಕಾಂಕ್ಷಿಣಃ = ಪುತ್ರಾರ್ಥಿನಸ್ತಸ್ಯ — ಪುತ್ರೀಯಾಂ = ಪುತ್ರನಿಮಿತ್ತಾಮ್ — "ಪುತ್ರಾಚ್ಛ ಚ" ಇತಿ ಛ ಪ್ರತ್ಯಯಃ (ಪಾಣಿನಿ)—ಇಷ್ಟಿಂ=ಯಾಗಮ್—ಆರೇಭಿರೇ=ಪ್ರಚಕ್ರಮಿರೇ—ಋಷ್ಯ ಶೃಂಗಾದಯಃ = ಋಷ್ಯಸ್ಯ ಶೃಂಗಮ್ ಇವ ಶೃಂಗಂ ಯಸ್ಯ ಸಃ ॥

**5. ತಸ್ಮಿನ್ನವಸರೇ ದೇವಾಃ ಪೌಲಸ್ತ್ಯೋಪಪ್ಲುತಾಹರಿಮ್ ।**
**ಅಭಿಜಗ್ಮುಃ ನಿದಾಘಾರ್ತಾಃ ಛಾಯಾವೃಕ್ಷಮಿವಾಧ್ವಗಾಃ ॥ ೫ ॥**

ಈ ಮಧ್ಯೆ (ಪುತ್ರಕಾಮೇಷ್ಟಿಯಾಗವು ನಡೆಯುತ್ತಿರುವಾಗ) ದೇವಾದಿದೇವತೆಗಳು ಪುಲಸ್ತ್ಯನ ಸುತರಾದ ರಾವಣಕುಂಭಕರ್ಣರ ಬಾಧೆಗಳನ್ನು (ಹಿಂಸೆಯನ್ನು) ತಡೆಯಲಾ ದರು, ಅವರೆಲ್ಲರೂ ಲೋಕಪಿತಾಮಹರಾದ ಬ್ರಹ್ಮದೇವರ ಬಳಿಗೆ ನಡೆದು ರಾಕ್ಷಸಭೀತಿ ಯನ್ನು ವ್ಯಕ್ತಪಡಿಸಿದಾಗ ಆ ಸೃಷ್ಟಿಕರ್ತನು ಶ್ರೀಹರಿಯ ಬಳಿಗೆ ತೆರಳಿ ಪ್ರಾರ್ಥಿಸುವಂತೆ ಉಪದೇಶಿಸಿದನು. ಬ್ರಹ್ಮದೇವರನ್ನು ಮುಂದಿಟ್ಟು ಇಂದ್ರಾದಿದೇವತೆಗಳು ಮಹಾವಿಷ್ಣು ವಿನ ಸಾನ್ನಿಧ್ಯಸ್ಥಾನವಾದ ಶ್ರೀವೈಕುಂಠಕ್ಕೆ ನಡೆದರು. ಬೇಸಿಗೆಯ ಉರಿಬಿಸಿಲಿನಲ್ಲಿ ಬೆಂದು ಬೆಂಡಾದ ದಾರಿಗರ (ಪಥಿಕರ) ನೆರಳಿಗಾಗಿ ಮರದ ಬಳಿಗೆ ಆರಸಿಕೊಂಡು ಹೋಗುವಂತೆ ತೆರಳಿದರು. ನೆರಳನ್ನು ಕೊಡುವುದು ಮರದ ಸ್ವಭಾವ. ಅಂತೆಯೇ ಸರ್ವರನ್ನು (ಎಲ್ಲರನ್ನು) ರಕ್ಷಿಸುವುದು (ಕಾಪಾಡುವುದು) ಪರಮಾತ್ಮನ ಆದ್ಯಕರ್ತವ್ಯ.

ಆದ್ದರಿಂದ ಬ್ರಹ್ಮದೇವರು ಸೃಷ್ಟಿಯ ನಿಯಾಮಕನಾದ ಪಾಲಸಕರ್ತೃವಾದ ಶ್ರೀಮನ್ನಾರಾಯಣನಿಗೆ ಮೊರೆಹೋಗಬೇಕೆಂದು ಸೂಚಿಸಿದರು.

ತಸ್ಮಿನ್ನಿತಿ = ತಸ್ಮಿನ್ನವಸರೇ = ಪುತ್ರಕಾಮೇಷ್ಟಿಪ್ರವೃತ್ತಿಸಮಯೇ ದೇವಾಃ — ಪೌಲಸ್ತ್ಯೇ = ರಾವಣಃ — ಪುಲಸ್ತ್ಯಸ್ಯ ಗೋತ್ರಾಪತ್ಯಂ ಪುಮಾನ್ — ಅಧ್ವಾನಂ ಗಂಧನ್ತೀತ್ಯಧ್ವಗಾಃ = ಪಾಂಥಾಃ — ಛಾಯಾವೃಕ್ಷಮಿವ = ಛಾಯಾಪ್ರಧಾನಂ ವೃಕ್ಷಂ— ಹರಿಂ = ವಿಷ್ಣು—ಪೌಲಸ್ತ್ಯೋಪಪ್ಲುತಾಃ=ಪೌಲಸ್ತ್ಯೇನ (ಪುಲಸ್ತ್ಯಪುತ್ರನಾದ) ಉಪಪ್ಲುತಾಃ ಪೀಡಿತಾಃ ॥

**6. ತೇ ಚ ಪ್ರಾಪುರುದನ್ವಂತಂ ಬುಬುಧೇ ಚಾದಿಪುರುಷಃ ।**
**ಅವ್ಯಾಕ್ಷೇಪೋ ಭವಿಷ್ಯಂತ್ಯಾಃ ಕಾರ್ಯಸಿದ್ಧೇರ್ಹಿ ಲಕ್ಷಣಮ್ ॥ ೬ ॥**

ಅವರೆಲ್ಲರೂ (ದೇವೇಂದ್ರಾದಿ ಅಷ್ಟದಿಕ್ಪಾಲಕರೆಲ್ಲರೂ) ಒಟ್ಟುಸೇರಿ ಆದಿಪುರುಷನಾದ ಮಹಾವಿಷ್ಣುವಿನ ಬಳಿಗೆ ಬಂದರು. ಅವರು ಪ್ರಾರ್ಥಿಸಿದುದನ್ನು ಕೇಳಿ ಪುರಾಣ ಪುರುಷನಾದ ಶ್ರೀಹರಿಯು ತನ್ನ ಯೋಗನಿದ್ರೆಯನ್ನು ತೊರೆದು, ಕೂಡಲೇ ಎಚ್ಚತ್ತು ಪ್ರತ್ಯಕ್ಷನಾಗಿ ಅವರಿಗೆ ಗೋಚರಿಸಿದನು. ಯೋಗನಿದ್ರೆಯು ಪ್ರಪಂಚದ ರೀತಿನೀತಿಗಳನ್ನು, ಆಗುಹೋಗುಗಳನ್ನು, ಸಕಲಜೀವಕೋಟಿಯ ಕಾರ್ಯವ್ಯವಹರಿಯನ್ನು, ಕಾರ್ಯ ಚಟುವಟಿಕೆಗಳನ್ನು ಸಾಕ್ಷೀಭೂತನಾದ, ಭಗವಂತನಾದ ಶ್ರೀಹರಿಯು ಗಮನಿಸುವ ರೀತಿ. ಅದು ಕುಂಭಕರ್ಣನ ಗಾಢನಿದ್ರೆಯಲ್ಲ. ಸೃಷ್ಟಿ, ಸ್ಥಿತಿ, ಲಯಗಳನ್ನು ಸರ್ವೇಶ್ವರನಾದ ಅಂತರ್ಯಾಮಿಯಾದ ಭಗವಂತನು ವಿಶ್ಲೇಷಿಸುವ, ಗಮನಿಸುವ ರೀತಿ. ಅವನು ಕೂಡಲೇ ಗೋಚರಿಸಿದುದು ಮುಂದಿನ ಭವಿಷ್ಯದ ಕಾರ್ಯಸಿದ್ಧಿಯ ಶುಭಲಕ್ಷಣ. "ಶುಭಸ್ಯ ಶೀಘ್ರಂ" ವಿಳಂಬವು ಸಲ್ಲದು (ಏನಿದ್ದರೂ ಎಡವಟ್ಟೇ). ಅನವಕಾಶವು ಮಲು, ಭಾವಿಕೃತಿಸಿದ್ಧಿಯು ಸುಲಕ್ಷಣವು ತಾನೆ.

ವಿಷ್ಣುಶ್ಚ = ಆದಿಪುರುಷೋ—ಯೋಗನಿದ್ರಾಂ = ಜಹಾವಿತ್ಯರ್ಥಃ—ಗಮನಪ್ರತಿ ಬೋಧಯೋರವಿಲಂಬಾರ್ಥೌ ಚಕಾರೌ—ಅವ್ಯಾಕ್ಷೇಪೋಃ = ಗಮ್ಯಸ್ಯಾವ್ಯಾಸಂಗಃ— ಭವಿಷ್ಯಂತ್ಯಾಃ = ಕಾರ್ಯಸಿದ್ಧೇರ್ಲಕ್ಷಣಂ ॥

**7. ಭೋಗಿಭೋಗಾಸನಾಸೀನಂ ದದೃಶುಸ್ತಂ ದಿವೌಕಸಃ ।**
**ತತ್ಫಣಾಮಂಡಲೋದರ್ಚಿರ್ಮಣಿದ್ಯೋತಿತವಿಗ್ರಹಮ್ ॥ ೭ ॥**

ಆ ದಿವೌಕಸರು ನೋಡಿದರಂದು, ಆ ಮಹಾವಿಷ್ಣುವು ಭೋಗಿಭೋಗಾಸೀನನಾಗಿದ್ದುದನ್ನು. ಸರ್ಪರಾಜನಾದ ಸಹಸ್ರಹೆಡೆಗಳುಳ್ಳ, ಹೆಡೆಗಳೇ ಮುಖ್ಯವಾಗಿರುವ ಆದಿಶೇಷನೇ (ವಾಸುಕಿ) ಸಿಂಹಾಸನವಾಗಿರುವ ಶೇಷಶಾಯಿಯನ್ನು ಹಾವೆಂಬ ಸಿಂಹಾಸನದಲ್ಲಿ ಆರೂಢನಾಗಿ ಕುಳಿತಿರುವ (ಭೋಗಿಭೋಗಾಸೀನನು) ಆ ಹಾವಿನ ಸಹಸ್ರ ಹೆಡೆಗಳಲ್ಲಿ (ಫಣೀಶನ ಫಣಾಮಂಡಲದಲ್ಲಿ) ರತ್ನಕಾಂತಿಯಿಂದ ಮಿರುಗುತ್ತಿರುವ (ಫಣಿಮಣಿಗಳು) ಝಗಝಗಿಸುತ್ತಿರುವ ದಿವ್ಯಕಾಂತಿಯಿಂದ ಕಂಗೊಳಿಸುತ್ತಿರುವ ಆದಿಪುರುಷನಾದ ಶ್ರೀಹರಿಯನ್ನು ಆ ನಿರ್ಝರರು ಕಂಡರು (ಉಜ್ವಲ ಮಣಿಗಳಿಗೆ ಹೊಳೆವ ಹರಿಯು).

ದ್ಯೌರೋಕೋ ಯೇಷಾಂ ತೇ=ದಿವೌಕಸೋ=ದೇವಾಃ—"ದಿವು ಕ್ರೀಡಾದೌ" ಇತಿ ಧಾತೋಃ—ದಿವಮೋಕ ಏಷಾಮಿತಿ ವಿಗ್ರಹಃ—ಭೋಗಿನಃ ಶೇಷಸ್ಯ ಭೋಗಃ ಶರೀರಮ್—"ಭೋಗಃ ಸುಖೇಸ್ತ್ರ್ಯಾದಿ ಭೃತಾವಹೇಶ್ಚ ಫಣಕಾಯಯೋಃ" ಇತ್ಯಮರಃ—ಸಿಂಹಾಸನವತ್ = ಸ ಏವಾಸನಶ್—ಉದರ್ಚಿಷ = ಉದ್ರಶ್ಮಯೋ ॥

**8. ಶ್ರಿಯಃ ಪದ್ಮನಿಷಣ್ಣಾಯಾಃ ಕ್ಷೌಮಾಂತರಿತಮೇಖಲೇ ।**
**ಅಂಕೇ ನಿಕ್ಷಿಪ್ತಚರಣಂ ಅಸ್ತೀರ್ಣಕರಪಲ್ಲವೇ ॥ ೮ ॥**

ಆ ದೇವಾದಿದೇವನ, ಪರಮಪುರುಷೋತ್ತಮನ ಪಾದಕಮಲಗಳಲ್ಲಿ ಆದಿಲಕ್ಷ್ಮಿಯು (ಸರಸಿಜಾನನೆ ಲಕ್ಷ್ಮಿ) ಕುಳಿತಿದ್ದಳು. ಆ ಕಾರಣಿಕಪುರುಷನ ಶ್ರೀಚರಣಗಳನ್ನು ತನ್ನ ತೊಡೆಯ ಮೇಲಿರಿಸಿ ಕೆಂಪಾದ ಕೆಂದಳಿರಿನಂತಹ, ಚಿಗುರಿನಂತಹ ಅಂಗೈಗಳಿಂದ ಒತ್ತುತ್ತಲಿದ್ದಳು. ಆ ಸರಸಿಜಾನನೆ ಮಹಾಲಕ್ಷ್ಮಿಯು ಕೆಂದಾವರೆಯ ಮೇಲೆ ಕುಳಿತಿದ್ದಳು. ಪಟ್ಟೆ ಪೀತಾಂಬರವನ್ನುಟ್ಟು ಜಗನ್ಮಾತೆ ಶೋಭಿಸುತ್ತಿದ್ದಳು. ರೇಷ್ಮೆಯ ಪಟ್ಟೆಪೀತಾಂಬರದ ಅಂಚಿನಲ್ಲಿ, ಮೇಖಲೆಯು ಮುಚ್ಚಿರಲು, ಶ್ರೀಪತಿಯ ಪಾದಕಮಲಗಳನ್ನಿರಿಸಿ ಪ್ರೀತಿಯಿಂದಾಗಿ ಒತ್ತುತ್ತಾ ಸೇವೆಮಾಡುತ್ತಲಿದ್ದಳು. ಹೀಗೆ ಲಕ್ಷ್ಮೀದೇವಿಯಿಂದ ಸೇವಿಸಲ್ಪಡುವ ಮಹಾವಿಷ್ಣುವನ್ನು ಆ ದೇವಾದಿದೇವತೆಗಳು ಕಣ್ದಣಿಯೆ ನೋಡಿದರು.

ನಿಷಣ್ಣಾಯಾಃ=ಉಪವಿಷ್ಟಾಯಾಃ—ಶ್ರೀಯಃ ಕ್ಷೌಮಾಂತರಿತಾ=ದುಕೂಲವ್ಯವಹಿತಾ—ಆಸ್ತೀರ್ಣಕರಪಲ್ಲವೌ = ಪಾಣಿಪಲ್ಲವೌ ಯಸ್ಮಿನ್ ॥

**9. ಪ್ರಬುದ್ಧಪುಂಡರೀಕಾಕ್ಷಂ ಬಾಲಾತಪನಿಭಾಂಶುಕಮ್ ।**
**ದಿವಸಂ ಶಾರದಮಿವ ಪ್ರಾರಂಭಸುಖದರ್ಶನಮ್ ॥ ೯ ॥**

ವಿಕಸಿತ (ಬಿರಿದ) ತಾವರೆಕಣ್ಣಿನ ಆ ಪುಂಡರೀಕಾಕ್ಷನು ಬಾಲಸೂರ್ಯನ ಕಾಂತಿಯಿಂದ ಮೆರೆಯುತ್ತಿದ್ದನು. ಬಾಲಸೂರ್ಯನ ದಿವ್ಯಪ್ರಕಾಶದಂತೆ ಝಗಝಗಿಸುವ ರೇಷ್ಮೆಯ ಪೀತಾಂಬರವನ್ನು ಆ ನಿರಂಜನಪುರುಷನು ಉಟ್ಟಿದ್ದನು. ಆ ಆದಿಪುರುಷನ ಚಿನ್ಮಯ ಮೂರ್ತಿಯು (ರೂಪವಿಗ್ರಹವು) ಮಹಾನ್ ಯೋಗಿಗಳಿಗೆ ಪರಮಪ್ರಿಯವಾಗಿತ್ತು. ಅವರು ಯಾವಾಗಲೂ ತಮ್ಮ ಹೃದಯಕಮಲದಲ್ಲಿ ಆ ವಿರಾಟ್‌ಪುರುಷನನ್ನು ಕಾಣುತ್ತಿದ್ದರು. ಸುಖದರ್ಶನ ಪಡೆಯುತ್ತಿದ್ದರು. ಶರದೃತುವಿನ ಕಾಲದ (ಶಾರದಶ್ರೀಯ) ಪ್ರಾರಂಭದ ದಿನಗಳಲ್ಲಿ, ತಾವರೆಕಣ್ಣುಗಳಿಂದ ಕೂಡಿದ (ಶಾರದಶ್ರೀಯ ಪ್ರಾರಂಭಸುಖ ದರ್ಶನಾರಂಭದಿನದಪೋಲ್) ನಯನಾನಂದಕರಮೂರ್ತಿಯಲ್ಲವೆ ಆದಿಕೇಶವರಾಯನು ?

ಪ್ರಬುದ್ಧೇ = ವಿಕಸಿತೇ—ಬಾಲಾತಪನಿಭಮಂಶುಕಂ ಯಸ್ಯ ತಮ್=ಪೀತಾಂಬರಮಿತ್ಯರ್ಥಃ—"ನಿಭೋ ವ್ಯಾಜಸದೃಕ್ಷಯೋಃ" ಇತಿ ವಿಶ್ವಃ—ಶರದಂ = ಶರತ್ಸಂಬಂಧಿನಂ ದಿವಸಮಿವಸ್ಥಿತಮ್ ॥

**10. ಪ್ರಭಾನುಲಿಪ್ತಶ್ರೀವತ್ಸಂ ಲಕ್ಷ್ಮೀವಿಭ್ರಮದರ್ಪಣಮ್ ।**
**ಕೌಸ್ತುಭಾಖ್ಯಮಪಾಂ ಸಾರಂ ಬಿಭ್ರಾಣಂ ಬೃಹತೋ ರಸಾ ॥ ೧೦ ॥**

ಪ್ರಭೆಯ ಹೊಗರಿನೊಳು ರಂಜಿಸುತ್ತಿರುವ, ಸಾಗರದ ಸಾರವೆನಿಸಿದ ಕೌಸ್ತುಭಮಣಿಯನ್ನು ತನ್ನ ವಿಶಾಲವಾದ ಎದೆಯಲ್ಲಿ (ವಕ್ಷಃಸ್ಥಲ, ಉರಃಸ್ಥಲ) ಧರಿಸಿರುವ, ಆ ಕೌಸ್ತುಭದ ಕಾಂತಿಯು ಶ್ರೀವತ್ಸವೆಂಬ ಶ್ರೀಹರಿಯ ಲಾಂಛನವನ್ನು ಬೆಳಗಿಸುತ್ತಲಿತ್ತು. ಆ ಕೌಸ್ತುಭವು ಮಹಾಲಕ್ಷ್ಮಿಯ (ಸಿರಿದೇವಿಯ) ವಿಭ್ರಮಮುಕುರ (ಸಿರಿಯ ವಿಭ್ರಮ ಮುಕುರವೆನುವ) ಅವಳ ಮುಖಸೌಂದರ್ಯದ ಬೆಳಕು. ಸುತ್ತುತ್ತಿರುವ ಅಥವಾ ಭ್ರಮಿಸುತ್ತಿರುವ ಮಹಾಲಕ್ಷ್ಮಿಯ ಸಂಭ್ರಮದ ಶೃಂಗಾರಭಾವ.

ಪ್ರಭಯಶಾನುಲಿಪ್ತಮನುರಂಜಿತಂ ಶ್ರೀವತ್ಸಂ ನಾಮ ಲಾಂಛನಂ ಯೇನ ತಮ್—ಲಕ್ಷ್ಮ್ಯಾವಿಭ್ರಮದರ್ಪಣಂ ಕೌಸ್ತುಭಂ ಇತ್ಯಾಖ್ಯಾಯಸ್ಯ ತಮ್—ಅಪಾಂ = ಸಮುದ್ರಾಣಾಂ—ಸಾರಂ = ಸ್ಥಿರಾಂಶಮ್ ॥

**11. ಬಹುಭಿರ್ವಿಟಪಾಕಾರೈಃ ದಿವ್ಯಾಭರಣಭೂಷಿತೈಃ ।**
**ಆವಿರ್ಭೂತಮಪಾಂ ಮಧ್ಯೇ ಪಾರಿಜಾತಮಿವಾಪರಮ್ ॥ ೧೧ ॥**

ಆ ಪುರಾಣಪುರುಷೋತ್ತಮನ ದಿವ್ಯವಾದ ಸುವರ್ಣರತ್ನಾಭರಣಗಳಿಂದ ಅಲಂಕೃತವಾದ ಉದ್ದವಾದ, ಉದ್ದಾಮಬಾಹುಗಳು ನಾಲ್ಕು. ಆ ಚತುರ್ಭುಜಗಳು ಕ್ಷೀರಸಾಗರದ ಮಧ್ಯದಲ್ಲಿ ಉದಿಸಿದ ಇನ್ನೊಂದು (ಎರಡನೆಯ) ಪಾರಿಜಾತವೆಂಬಂತೆ ಕಂಡಿತು (ತೋಯಜೋದ್ಭವ ಪಾರಿಜಾತದಂತಿರುವ). ಅವುಗಳು ವಿಶಾಲವಾದ ವಟವೃಕ್ಷದ ಬಹುಲಂಬಿತವಾದ ಗೆಲ್ಲಿನಂತೆ (ರೆಂಬೆಕೊಂಬೆಯಂತೆ) (ವಿಟಪಗಳ ಆಕಾರವಿರುವ) ಆ ಸರ್ವಜ್ಞಮೂರ್ತಿಯಾದ (ಚಿನ್ಮಯಮೂರ್ತಿ) ಶ್ರೀಹರಿಯ ಕೈಗಳು ಭವ್ಯವಾಗಿ ಕಾಣಿಸಿಕೊಂಡುವು.

ವಿಟಪಾಕಾರೈಃ = ಶಾಖಾಕಾರೈಃ—ದಿವ್ಯಾಭರಣಭೂಷಿತೈಃ—ಬಾಹುಭಿರುಪಲಕ್ಷಿತಂ—ಅಪಾಂ = ಸೈಂಧವಾನಾಮ್—ಆವಿರ್ಭೂತಮಪರಂ = ದ್ವಿತೀಯಂ ॥

**12. ದೈತ್ಯಸ್ತ್ರೀಗಂಡಲೇಖಾನಾಂ ಮದರಾಗವಿಲೋಪಿಭಿಃ ।**
**ಹೇತಿಭಿಶ್ಚೇತನಾವದ್ಭಿಃ ಉದೀರಿತ ಜಯಸ್ವನಮ್ ॥ ೧೨ ॥**

ಆ ದೇವಾದಿದೇವನ ಮಹಾಚೇತನವನ್ನು (ವಿಶ್ವಚೇತನವನ್ನು) ಪಡೆದ ಬಾಹುಗಳು, ರಕ್ಕಸರಿಗೆ ಮಾರಕವಾದ ಶಸ್ತ್ರಾಸ್ತ್ರಗಳನ್ನು, ಶಕ್ತಿಯುತವಾದ ಸುದರ್ಶನಾದಿ ವಿವಿಧ ಆಯುಧಗಳನ್ನು ಧರಿಸಿದ್ದುವು. ರಾಕ್ಷಸವನಿತೆಯರು ತಮ್ಮ ಕೆನ್ನೆಗಳಲ್ಲಿ (ಕಪೋಲಗಳಲ್ಲಿ, ಗಂಡಸ್ಥಲಗಳಲ್ಲಿ) ಮದರಾಗಗಳನ್ನು, ಮದಿರೆಯನ್ನು ಕುಡಿದು ಕೆಂಪಾದ ಕಪೋಲಗಳ ಕಾಂತಿಯನ್ನು ಅಳಿಸುವಂತಹ ಚೇತನವನ್ನು ಪಡೆದ ಮಹಾಬಾಹುಗಳು. ದೇವತೆಗಳಿಗೂ ದೈತ್ಯರಿಗೂ ನಡೆದ ಭೀಕರಕಾಳಗದಲ್ಲಿ ಸದಾ ಜಯಗೀತೆಯನ್ನು ಹಾಡಿಸಬಲ್ಲ (ಹಾಡಿಸಿರುವ) ಜಯಜಯಧ್ವನಿಯನ್ನು ಉಚ್ಚರಿಸುತ್ತಿರುವ ದೇವತೆಗಳಿಗೆ ಅಭಯವನ್ನು ಸೂಚಿಸುತ್ತಿರುವ, ಸುಸ್ವನವನ್ನು ಪ್ರಕಟಿಸುವ ಜಯಘೋಷವನ್ನು ಸಾರುತ್ತಿರುವ, ಸಮಸ್ತಲೋಕಗಳಿಗೆ ಮಂಗಳಕರವಾದ ದೇವರೂಪಿಯ ಮಹಾಬಾಹುಗಳನ್ನು ಕಂಡು ಧನ್ಯರಾದರು.

ದೈತ್ಯಸ್ತ್ರೀಗಂಡರೇಖಾನಾಮಸುರಾಂಗನಾ ಗಂಡಸ್ಥಲೀನಾಮ್—ತೈಶ್ಚ್ಛೇತನಾವದ್ಭಿಃ = ಸಜೀವೈರ್ಪೇಕಶಂಭಿಃ ॥

**13. ಮುಕ್ತಶೇಷವಿರೋಧೇನ ಕುಲಿಶ್ರವಣಲಕ್ಷ್ಮಣಾ ।**
**ಉಪಸ್ಥಿತಂ ಪ್ರಾಂಜಲಿನಾ ವಿನೀತೇನ ಗರುತ್ಮತಾ ॥ ೧೩ ॥**

ಆ ಭಗವಂತನನ್ನು (ಆ ಮಹಾಪುರುಷನನ್ನು) ಕಿಂಕರನಾದ ವಿನೀತನಾದ ಗರುಡನು ಕೈಮುಗಿದು ಸ್ತುತಿಸುತ್ತಿದ್ದನು (ವಿನಯದಲಿ ಬೊಗಸೆಕೈಮುಗಿದಿರುವ). ಆ ಗರುತ್ಮಂತನು ಅಮೃತಾಪಹರಣದ ಕಾಲದಲ್ಲಿ ದೇವೇಂದ್ರನ ವಜ್ರಾಯುಧದ (ಕುಲಿಶ, ಕುಲಿಶಾಯುಧ) ಏಟಿನ ಗುರುತುಗಳನ್ನು ಹೊಂದಿದ್ದನು. ಅವನು ತನ್ನ ಆತ್ಮಶತ್ರುವಾದ (ಆಜನ್ಮ ವೈರಿಯಾದ) ಆದಿಶೇಷನ ಮೇಲಿನ (ವಾಸುಕಿ) ಹಗೆತನವನ್ನು ತೊರೆದು ಪರಮಾತ್ಮನ ಕೈಂಕರ್ಯದಲ್ಲಿ (ಸೇವೆಯಲ್ಲಿ) ನಿರತನಾಗಿದ್ದನು.

ಶೇಷೇಣ = ಅಹೀಶ್ವರೇಣ—ಕುಲಿಶವ್ರಣಾ ಅಮೃತಾಹರಣಕಾಲ ಇಂದ್ರಯುದ್ಧೇ ಯೋ ವಜ್ರಪ್ರಹಾರಾಸ್ತ ಏವ ಲಕ್ಷ್ಮಾಣಿ ಯಸ್ಯ ಸ ತೇನ ॥

**14. ಯೋಗನಿದ್ರಾಂತವಿಶದೈಃ ಪಾವನೈರವಲೋಕನೈಃ ।**
**ಭೃಗ್ವಾದೀನನುಗೃಹ್ಣಂತಂ ಸೌಖಶಾಯನಿಕಾನೃಷೀನ್ ॥ ೧೪ ॥**

ಯೋಗನಿದ್ರೆಯ ಮಾಡುತಿಹನು ಅಲ್ಲಿ ಭೋಗಿಭೂಷಣನು. ಯೋಗನಿದ್ರೆಯಲ್ಲಿ, ಧ್ಯಾನಮಗ್ನನಾಗಿರುವ ಸ್ವಾಮಿಯು ಯೋಗನಿದ್ರೆಯನಂತರ ಸುಪ್ರಸನ್ನತೆಯಿಂದ (ಯೋಗನಿದ್ರಾಂತದೊಳು ಸುಪ್ರಸನ್ನತೆಯಾಂತು) ನೋಡುತ್ತಿರುವ ನಿರ್ಮಲಾಕ್ಷಿಗಳಿಂದ ಪಾವನವು ಆರ್ತಿಯಾದ ಆ ಲಕ್ಷ್ಮೀನಾರಾಯಣನ ದರ್ಶನಸುಖವನ್ನು ಸುರರು ಪಡೆದರು. ಆ ಚಿನ್ಮಯನು ಭೃಗ್ವಾಧೀನನು. ವಾಙ್ಮನಸ್ಸಿಗೆ ಅಗೋಚರನು. ಭೃಗ್ವಾದಿ ಮಹಾಮುನಿಗಳು, ಶ್ರೀಪರಮಾತ್ಮನ ಯೋಗನಿದ್ರೆಯ ಕುರಿತು ವಿನಯದಿಂದ ಪ್ರಶ್ನಿಸುತ್ತಿದ್ದರು.

ಯೋಗೋ ಮನಸೋ ವಿಷಯಾಂತರವೃತ್ತಿಃ—ಸುಖಶಯನಂ ಪೃಚ್ಛಂತೀತಿ ಸೌಖಶಾಯನಿಕಾಸ್ತಾನ್ ॥

**15. ಪ್ರಣಿಪತ್ಯ ಸುರಾಸ್ತಸ್ಮೈ ಶಮಯಿತ್ರೇ ಸುರದ್ವಿಷಾಮ್ ।**
**ಅಥೈನಂ ತುಷ್ಟುವುಃ ಸ್ತುತ್ಯಮವಾಙ್ಮನಸಗೋಚರಮ್ ॥ ೧೫ ॥**

ಸುರರ ಹಗೆಗಳ ದಮನ(ಶಮನ)ಗೊಳಿಸಲಿರುವ. ಆ ವಿಶ್ವಚೇತನನಿಗೆ ಆ ಸುರರು ಶಿರಬಾಗಿ ವಂದಿಸಿದರು. ಸ್ತೋತ್ರಾರ್ಹನಾದ ಆ ಮಹಾಕರ್ತನನ್ನು ಈ ತೆರನಾಗಿ ಗುಣಗಾನ ಮಾಡಿದರು. ಅವನು ಸ್ತೋತ್ರಾರ್ಹನು, ವಂದನಾರ್ಹನು, ಪೂಜಾರ್ಹನು (ಲೋಕಪೂಜ್ಯನು) (ಸ್ತೋತ್ರಾರ್ಹನಾತನನು), ವಾಙ್ಮನಸ್ಸಿಗೆ ಅತೀತನು, ಅವನು ಅವರ್ಣನೀಯನು, ಅತೀತನು, ಅಕ್ಷಯನು, ಅಕ್ಷರನು, ಪರಬ್ರಹ್ಮನು. ಅಂತಹ ಮಹಾತ್ಮನಾದ ಮಹಾವಿಷ್ಣುವನ್ನು ಸುರರು ಅವನ ದರ್ಶನಾನಂತರ ಈ ತೆರನಾಗಿ ಹೊಗಳಿದರು. ಅವನು ಸುರರಿಗೂ ಒಡೆಯನಲ್ಲವೆ ? ಅವನು ಹೊಗಳಿಸಿಕೊಳ್ಳಲು ಯೋಗ್ಯನಾದವನು. ಎಲ್ಲಾ ಕಲ್ಪನೆಗಳಿಗೂ ವಿಚಾರಗಳಿಗೂ ಮೀರಿದವನು (ಮಾತಿಗೂ ಮೀರಿದವನು).

ಪ್ರಣಿಪತ್ಯೇತಿ—ಅಥ ದರ್ಶನಾನಂತರಂ—ವಾಕ್ಚ ಮನಶ್ಚ ವಾಙ್ಮನಸೇ—ಅವಾಙ್ಮನಸಗೋಚರಮ್ = ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥

**16. ನಮೋ ವಿಶ್ವಸೃಜೇ ಪೂರ್ವಂ ವಿಶ್ವಂ ತದನುಬಿಭ್ರತೇ ।**
**ಅಥ ವಿಶ್ವಸ್ಯ ಸಂಹರ್ತ್ರೇ ತುಭ್ಯಂ ತ್ರೇಧಾ ಸ್ಥಿತಾತ್ಮನೇ ॥ ೧೬ ॥**

ಹೇ ಭಗವನ್ ನಿನಗೆ, ಓ ಸರ್ವಶಕ್ತನಾದ ಪರಮಾತ್ಮನೇ (ಅಂತರ್ಯಾಮಿ), ನಾವು ನಮಿಸುವೆವು. ನೀನು ಮೂರು ತೆರನಾದ ರೂಪದಲ್ಲಿ ಕಾಣಿಸಿಕೊಳ್ಳುತ್ತಿರುವೆ. ನೀನು ಓ ವಿಶ್ವಮೂರ್ತಿಯೆ, ವಿಶ್ವದಸೃಷ್ಟಿ ಕರ್ತನಾಗಿ ಪರಬ್ರಹ್ಮನೆನಿಸಿರುವೆ. ಆ ಬಳಿಕ ವಿಶ್ವದ ರಕ್ಷಕನಾಗಿ (ವಿಶ್ವರಕ್ಷಕ) ಕರ್ತೃವಾದ (ವಿಶ್ವಸೃಜ) ಮಹಾವಿಷ್ಣುವೆನಿಸಿರುವೆ. ಕೊನೆಯಲ್ಲಿ ಈ ವಿಶ್ವವನ್ನು ನಾಶಕರ್ತೃವಾದ ಶಿವನೆನಿಸಿ ಸಂಹಾರಮಾಡಿ ನಿನ್ನಲ್ಲಿ ಲಯಗೊಳಿಸುತ್ತಿರುವೆ (ವಿಶ್ವಸಂಹರ್ತನೆನಿಸಿರುವ). ನೀನು ತ್ರಿಗುಣನು, ಸೃಷ್ಟಿ-ಸ್ಥಿತಿ-ಲಯಕಾರಕನು, ಆತ್ಮಸ್ವರೂಪನು (ಸ್ವಯಂಭು), ಸ್ಥಿತನು, ಅಚಲನು. ಎಲ್ಲವನ್ನು ಚಲಿಸುವಂತೆ, ಚಲಿಸದಂತೆ ಮಾಡಬಲ್ಲವನು. ಪ್ರತಿಯೊಂದು ವಸ್ತುವಿಗೆ ರೂಪ, ಆಕಾರ, ನಾಮಗಳನ್ನು, ಜ್ಞಾನವಿಜ್ಞಾನ. ಐಶ್ವರ್ಯಗಳನ್ನು (ಮನಸ್ಸು, ಬುದ್ಧಿ, ಅಹಂಕಾರ) ಕೊಡತಕ್ಕ ಅಪ್ರಮೇಯನು ನೀನು ವಿಶ್ವರೂಪನು. ಬ್ರಹ್ಮ, ವಿಷ್ಣು, ಶಿವ(ಹರ)ರೂಪನಾದ ಅನಾದಿಪುರುಷನಾದ ಪರಬ್ರಹ್ಮನಿಗೆ ನಾವು ನಮಿಸುತ್ತೇವೆ. ನಿನಗೆ ನಮ್ಮ ಕೋಟಿ ನಮನಗಳು. ನಿನಗೆ ಬಾರಿಬಾರಿಗೂ ನಮೋನಮಃ.

ವಿಶ್ವಸೃಜೇ = ವಿಶ್ವಸ್ರಷ್ಟ್ರೇ—ಏವಂ ತ್ರೇಧಾ ಸೃಷ್ಟಿ, ಸ್ಥಿತಿ, ಸಂಹಾರಕರ್ತೃತ್ವೇನ ಸ್ಥಿತ, ಆತ್ಮಾ ಸ್ವರೂಪಂ ಯಸ್ಯ ತಸ್ಮೈ ಬ್ರಹ್ಮ, ವಿಷ್ಣು, ಹರಾತ್ಮನೇ, ತುಭ್ಯಂ ನಮಃ ॥

**17. ರಸಾಂತರಾಣ್ಯೇಕರಸಂ ಯಥಾ ದಿವ್ಯಂ ಪಯೋಽಶ್ನುತೇ ।**
**ದೇಶೇ ದೇಶೇ ಗುಣೇಷ್ವೇವಮ ಅವಸ್ಥಾಸ್ತ್ವಮವಿಕ್ರಿಯಃ ॥ ೧೭ ॥**

ಹೇ ಪ್ರಭೋ, ನೀನು ಮೂಲದಲ್ಲಿ ಏಕರೂಪನು, ನಿರ್ಗುಣನು, ಆತ್ಮರೂಪಧರನು, ನಿರಾಕಾರನು (ನಿರ್ವಿಕಾರನು). ಹಾಗಿದ್ದರೂ ಅನೇಕ ರೂಪಗಳನ್ನು ಧರಿಸಿರುವೆ. ನಿರ್ಗುಣನಾದರೂ ಸತ್ವ, ರಜ, ತಮೋಗುಣಗಳನ್ನು (ತ್ರಿಗುಣಗಳನ್ನು) ಹೊಂದುತ್ತಿರುವೆ. ಹೇಗೆಂದರೆ ಬಾನ ಅಂಚಿನಿಂದ ಬಿದ್ದ ನೀರು, ಮಳೆಯ ರೂಪದಿಂದ ಇಳೆಗೆ ಬೀಳುವ ಏಕರಸವಾದ ಉದಕವು ಬೇರೆಬೇರೆ ದೇಶಗಳಲ್ಲಿ ಅನೇಕ ರುಚಿ, ಅನೇಕ ವಿಧದ ರಸವಾಗಿರುವಂತೆ, ಸಾಗರದಲ್ಲಿ ಬಿದ್ದು ಉಪ್ಪುನೀರಿನ (ಲವಣರಸ) ರುಚಿಯನ್ನು ಪಡೆಯುವಂತೆ ನೀನು ತ್ರಿಗುಣಗಳನ್ನು, ಅನೇಕ ರೂಪಗಳನ್ನು, ಗುಣವಿಶೇಷಗಳನ್ನು ಹೊಂದುತ್ತಿರುವೆಯಷ್ಟೆ. (ಬಾನ್ನೀರಿನೊಂದೆ ರುಚಿಭಿನ್ನತೆಯ ತಳೆವಂತೆ).

ಏಕರಸಂ ಮಧುರೈಕರಸಂ ದಿವಿ ಭವಂ ದಿವ್ಯಂ ಪಯೋ ವರ್ಷೋದಕಂ ದೇಶೇದೇಶ ಊಷರಾದಿದೇಶೇಽನ್ಯಾನ್ ರಸಾಂತರಾಣಿ ಲವಣಾದೀನಿ ಯಥಾಶ್ನುತೇ ಪ್ರಾಪ್ನೋತಿ—ಏವಮವಿಕ್ರಿಯೋ ನಿರ್ವಿಕಾರಃ=ಏಕರೂಪ ಇತ್ಯರ್ಥಃ—ಏಕರಸಂ=ಏಕಃ ರಸಃಯಸ್ಮಿನ್ ॥

**18. ಅಮೇಯೋ ಮಿತಲೋಕಸ್ತ್ವಂ ಅನರ್ಥೀ ಪ್ರಾರ್ಥನಾವಹಃ ।**
**ಅಜಿತೋ ಜಿಷ್ಣುರತ್ಯಂತಂ ಅವ್ಯಕ್ತೋ ವ್ಯಕ್ತಕಾರಣಮ್ ॥ ೧೮ ॥**

ನೀನು, ಹೇ ಜಗದೀಶ್ವರ, ಅಮೇಯನು, ಮಿತಲೋಕನು (ಅಮೇಯನಯ್) ನಿನ್ನನ್ನು ಅಳತೆ ಮಾಡಲು ಸಾಧ್ಯವಿಲ್ಲದವನು (ಅಳತೆಗೆ ಮೀರಿದವನು). ನೀನು ನಿಯಾಮಕನು. ನೀನು ತ್ರಿವಿಕ್ರಮನಾಗಿ ಮೂರೇ ಮೂರು ಹೆಜ್ಜೆಗಳಲ್ಲಿ (ಚೋಟುದ್ದವಿದ್ದ ವಾಮನಮೂರ್ತಿಯಾಗಿ ಬಂದು) ಇಡೀ ವಿಶ್ವವನ್ನೇ (ಬ್ರಹ್ಮಾಂಡವನ್ನೇ) ಅಳತೆ ಮಾಡಿದೆ (ಅದರ ಹೊರಗೂ ವ್ಯಾಪಿಸಿದೆ). ನೀನು ನಿಃಸ್ಪೃಹನು. ಅನರ್ಥಿಯು. ಯಾವ ಅಗತ್ಯವೂ ಉಳ್ಳವನಲ್ಲ. ಹಾಗಿದ್ದರೂ ನಿನ್ನನ್ನು ಪ್ರಾರ್ಥಿಸಿದವರ ಕಾಮಿತಾರ್ಥವನ್ನು, ಇಷ್ಟಾರ್ಥಗಳನ್ನು ಅನುಗ್ರಹಿಸುವ ಶ್ರೀಪರಮಾತ್ಮನು. ನೀನು ನಿತ್ಯನು, ಶಾಶ್ವತನು. ಆಹವದಲ್ಲಿ (ಯುದ್ಧರಂಗದಲ್ಲಿ, ರಣರಂಗದಲ್ಲಿ) ಅಜಿತನು. ಸೋಲಿಸಲು ಅಸಾಧ್ಯನಾದ ಜಿಷ್ಣುವು. ಸದಾ ಜಯಶಾಲಿಯಾಗುವವನು (ವಿಜಯನು). ನೀನು ಅವ್ಯಕ್ತನಾದ ಸೂಕ್ಷ್ಮರೂಪಿ, ವ್ಯಕ್ತವಾಗಿ ತೋರುವ ಅಗಣಿತತಾರಾಗಣಗಳಿಂದೊಡಗೂಡಿದ ಬ್ರಹ್ಮಾಂಡವೆಂಬ ಸ್ಥೂಲರೂಪಕ್ಕೆ (ಸಗುಣರೂಪಕ್ಕೆ) ಕಾರಣಭೂತನು. ಸಗುಣನೂ ನೀನೆ, ನಿರ್ಗುಣನೂ ನೀನೆ. ಅವ್ಯಕ್ತನಾದರೂ ವ್ಯಕ್ತನು. (ಅವ್ಯಕ್ತನಾದೊಡಂ ವ್ಯಕ್ತಕಾರಣನಯ್).

ತ್ವಮಮೇಯೋ ಲೋಕೈರಿಯತ್ತಯಾನಪರಿಚ್ಛೇದ್ಯಃ—ಮಿತಲೋಕಃ = ಪರಿಚ್ಛಿನ್ನಲೋಕಃ—ಅನರ್ಥೀ = ನಿಃಸ್ಪೃಹಃ—ಪ್ರಾರ್ಥನಾನಾಮಾವಹಃ = ಕಾಮದಃ—ಜಿಷ್ಣು = ಜಯಶೀಲಃ—ಅತ್ಯಂತ ಅವ್ಯಕ್ತೋ=ಅತಿಸೂಕ್ಷ್ಮರೂಪಃ—ವ್ಯಕ್ತಸ್ಯ= ಸ್ಥೂಲರೂಪಸ್ಯ ಕಾರಣಮ್ ॥

**19. ಹೃದಯಸ್ಥಮನಾಸನ್ನಂ ಅಕಾಮಂ ತ್ವಾಂ ತಪಸ್ವಿನಮ್ ।**
**ದಯಾಲುಮನಘಸ್ಪೃಷ್ಟಂ ಪುರಾಣಮಜರಂ ವಿದುಃ ॥ ೧೯ ॥**

ಹೇ ದೇವ, ನೀನು ಸಕಲಜೀವಿಗಳ ಹೃದಯದಲ್ಲಿ ವಾಸಿಸುವೆಯೆಂದು (ವಾಸುದೇವ), ಸರ್ವಾಂತರ್ಯಾಮಿಯೆಂದು ಋಷಿಮುನಿಗಳು, ವೇದ, ಆಗಮ, ಪುರಾಣಗಳು, ಉಪನಿಷತ್ತುಗಳು ಸಾರುತ್ತಿವೆ. ನೀನು ಹೃದಯಸ್ಥನು, ನೀನು ಆಸನ್ನನು. ಇದ್ದೂ ಇಲ್ಲದಂತೆ ಕಾಣಿಸಿಕೊಳ್ಳುವವನು. ನೀನು ತಪಸ್ವಿ (ತಾಪಸಿ), ತಪೋರತನು. ನೀನು ಸೃಷ್ಟಿಗೆ ಮೊದಲಿದ್ದ ಸರ್ವಮೂಲನು, ಆದಿಪುರುಷನು, ಪುರಾಣಪುರುಷೋತ್ತಮನು. (ಹಳಬ, ಅಜ್ಜ, ಪಿಜ್ಜ, ಮುತ್ತಜ್ಜ), ನಿತ್ಯನು, ಸತ್ಯನು, ಬುದ್ಧನು, ಸಿದ್ಧನು, ಪರಿಪೂರ್ಣನು, ನಿಷ್ಕಾಮಿ. ಯಾವ ಇಚ್ಛೆಯೂ ಇಲ್ಲದವನು. ನೀನು ಜರಾರಹಿತನು. (ನಿಷ್ಕಾಮಿ ಮೇಣ್ ತಪೋರತನಯ್, ನೀಂ ಜರಾರಹಿತನುಮಯ್). ದುಃಖಕೋಟಲೆಗಳ ಲೇಪವಿಲ್ಲದ ನಿರ್ದುಃಖಿ (ನಿತ್ಯಾನಂದರೂಪನು, ಚಿದಾನಂದ, ಸದಾನಂದ, ಅಮೃತಾನಂದಮಯ, ಬ್ರಹ್ಮಾನಂದ), ದಯಾಸಾಂದ್ರನು, ದಯಾಮಯನು. ಪರದುಃಖವನ್ನು ಪರಿಹರಿಸುವ ಪರಮೇಷ್ಠಿ (ಪಂಚಪರಮೇಷ್ಠಿ).

ತ್ವಾಂ ಹೃದಯಸ್ಥಮ್—ನಿತ್ಯಸನ್ನಿಹಿತಂ—ನ ಕಾಮೋಽಭಿಲಾಷೋಽಸ್ಯ ತಂ ಪರಿಪೂರ್ಣತ್ವಾ ನಿಃಸ್ಪೃಹತ್ವಾ ಚ್ಚ ನಿಷ್ಕಾಮಮ್—ತಥಾಽಪಿ ತಪಸ್ವಿನಂ = ತಾಪಸಂವಿದುಃ—"ಅಘಂ ದುರಿತದುಃಖಯೋಃ" ಇತಿ ವಿಶ್ವಃ—ಪುರಾಣಮನಾದಿಮಜರಂ ನಿರ್ವಿಕಾರತ್ವಾದಕ್ಷರಂ ವಿದುಃ ॥ ವಿರೋಧಾಲಂಕಾರಃ ॥

**20. ಸರ್ವಜ್ಞಃ ತ್ವಂ ಅವಿಜ್ಞಾತಃ ಸರ್ವಯೋನಿಃ ಸ್ತ್ವಂ ಆತ್ಮಭೂಃ ।**
**ಸರ್ವಪ್ರಭುರನೀಶಸ್ತ್ವಂ ಏಕಃ ಸ್ತ್ವಂ ಸರ್ವರೂಪಭಾಕ್ ॥ ೨೦ ॥**

ಹೇ ಪ್ರಭೋ, ನೀನು ಸರ್ವವ್ಯಾಪಿ (ನೀನವಿಜ್ಞಾತನಯ್). ನೀನು ಸರ್ವಜ್ಞನು, ಎಲ್ಲಾ ಬಲ್ಲವನು, ಜ್ಞಾನಸಾಗರ, ಬುದ್ಧಿಸಾಗರ (ಷಡ್ಗುಣ ಐಶ್ವರ್ಯಸಂಪನ್ನ) (ಜ್ಞಾನನಿಧಿ). ನೀನು ತಿಳಿಯದಿರುವ ವಿಷಯಗಳೇ ಇಲ್ಲ. ಎಲ್ಲಾ ಕಾರಣಕರ್ತೃ, ವಸ್ತುಗಳ ಕಾರಣನು, ಕಾರಣಸ್ವರೂಪನು, ಎಲ್ಲಾ ವಸ್ತುಗಳ ಉತ್ಪತ್ತಿಸ್ಥಾನ. ಸರ್ವಯೋನಿ (ವಿಶ್ವಯೋನಿ), ಆತ್ಮಭೂಃ, ನಿನಗೆ ಜನನಿಜನಕರಿಲ್ಲ (ಆದರೆ ಎಲ್ಲರ ಅಪ್ಪ, ಅಮ್ಮನು ನೀನೇ). ನಿನಗೆ ಹುಟ್ಟುಸಾವುಗಳಿಲ್ಲ (ಬಂಧುಬಳಗವಿಲ್ಲ). ನೀನೇ ಸ್ವಯಂಭು. ನೀನು ಎಲ್ಲವನ್ನು ಕಾಣಬಲ್ಲೆ (ವಿಶ್ವಚಕ್ಷು), ಎಲ್ಲವನ್ನು ಕೇಳಬಲ್ಲೆ. ನೀನು ಈಶನು (ಮಹೇಶನು), ವಿರಾಟ್‌ಪುರುಷನು, ಈಶ್ವರನು, ಸರ್ವೇಶ್ವರನು. ಹೀಗೆ ಓರ್ವನೇ ಇರಬಲ್ಲೆ. ನೀನು ಅನೇಕನಾಗುವೆ. ನೀನೇ ಸರ್ವಸ್ವ (ಏಕಃ ಸದ್ವಿಪ್ರಾ ಬಹುಧಾ ವದಂತಿ).

ತ್ವಂ ಸರ್ವಂ ಜಾನಾತೀತಿ ಸರ್ವಜ್ಞಃ—ಅವಿಜ್ಞಾತಃ—ನ ಕೇನಾಪಿ ವಿಜ್ಞಾತ ಇತ್ಯರ್ಥಃ—ತ್ವಂ ಸರ್ವಸ್ಯ ಯೋನಿಃಕಾರಣಮ್— ತ್ವಮಾತ್ಮನ ಏವ ಭವತೀತ್ಯಾತ್ಮಭೂಃ—ತ್ವಂ ಸರ್ವಸ್ಯ ಪ್ರಭುಃ—ತ್ವಮನೀಶಃ—ತ್ವಮೇಕಃ ಸರ್ವರೂಪಭಾಕ್ ॥

**21. ಸಪ್ತಸಾಮೋಪಗೀತಂ ತ್ವಾಂ ಸಪ್ತಾರ್ಣವಜಲೇ ಶಯಮ್ ।**
**ಸಪ್ತಾರ್ಚಿರ್ಮುಖಮಾಚಖ್ಯುಃ ಸಪ್ತಲೋಕೈಕಸಂಶ್ರಯಮ್ ॥ ೨೧ ॥**

ಹೇ ದೇವ, ನೀನು ಭೂರ್ಭುವಸ್ವಃ ಎಂಬ (ಭೂಲೋಕ, ಭುವರ್ಲೋಕ, ಸ್ವರ್ಗಲೋಕ) ಸಪ್ತಲೋಕಗಳ ಆಧಾರನು, ಆಶ್ರಯನು (ಸಪ್ತಲೋಕೈಕಾಶ್ರಯ). ನೀನಲ್ಲವೆ ಸಮಸ್ತಲೋಕಗಳ ಆಧಾರನು. ನೀನು ಏಳುಸಾಗರಗಳಲ್ಲಿ (ಸಪ್ತಸಾಗರಗಳಲ್ಲಿ) ಹಾಯಾಗಿ ಮಲಗಿರುವೆ, ಸಪ್ತಾರ್ಣವಶರತಲ್ಪಶಾಯಿ. ಏಳು ಸಾಮಗಳು ನಿನ್ನ ಕೀರ್ತಿಯನ್ನು ಹಾಡುತ್ತಿವೆ, ನೀನು ಸಾಮೋಪಗೀತನು (ನೀ ಸಪ್ತಸಾಮೋಪಗೀತನಯ್). ನೀನೇ ಸಪ್ತಾರ್ಚಿಮುಖನು (ಸಪ್ತಾರ್ಚಿಮುಖನಯ್). ನಿನ್ನ ಮುಖದಿಂದ ಏಳು ತರದ ಅಗ್ನಿ ಜ್ವಾಲೆಗಳು ಸದಾ ಹೊರಹೊಮ್ಮುತ್ತಲಿವೆ. ನಿನ್ನನ್ನು ಅಗ್ನಿಮುಖನೆಂದು ವೇದಗಳು, ಶ್ರುತಿಗಳು ಜಗತ್ತಿಗೆ ಸಾರುತ್ತಿವೆ (ಸಪ್ತಾಬ್ಧಿಶರತಲ್ಪಶಾಯಿಯಯ್). ಹೇ ವಿಭೋ. ನಿನ್ನ ಬಳಿಗೆ ಬರಬೇಕಾದರೂ ಅಗ್ನಿಯೇ ಸಹಾಯಕನು. ಅಗ್ನಿಯೇ ನಿನ್ನ ಬಳಿಗೆ ಕರೆದೊಯ್ಯುವವನು. ನೀನು ಗೂಢನಾದ, ದಹನಾತ್ಮಕ ತೇಜರೂಪನಾದ ಅಗ್ನಿಯು. ಓ ಹರಿಯೇ, ನಿನ್ನಯ ವಂದಿಗಳ್ ಸಪ್ತಸಾಮಂಗಳ್, ಸಪ್ತಾರ್ಚಿಯಾಗಿರ್ಪೆ, ಹೇ ಸಪ್ತಲೋಕಾಶ್ರಯ.

ಸಪ್ತಾನಾಮರ್ಣವಾನಾಂ ಜಲಂ ಸಪ್ತಾರ್ಣವಜಲಮ್—ತತ್ರ ಶೇತೇಯಃ ಸಸಪ್ತಾರ್ಣವಜಲೇಶಯಃ—ಸಪ್ತಾರ್ಚಿರ್ಮುಖಂ ಯಸ್ಯ ತಮ್— "ಅಗ್ನಿಮುಖಾ ವೈ ದೇವಾಃ" ಇತಿ ಶ್ರುತೇಃ—ಸಪ್ತಾನಾಂ ಲೋಕಾನಾಂ ಭೂರ್ಭುವಃ ಸ್ವರಾದೀನಾಮೇಕ ಸಂಶ್ರಯಮ್ ॥

**22. ಚತುರ್ವರ್ಗಫಲಂ ಜ್ಞಾನಂ ಕಾಲಾವಸ್ಥಾಶ್ಚತುರ್ಯುಗಾಃ ।**
**ಚತುರ್ವರ್ಣಮಯೋ ಲೋಕಸ್ತ್ವತ್ತಃ ಸರ್ವಂ ಚತುರ್ಮುಖಾತ್ ॥ ೨೨ ॥**

ಜ್ಞಾನವೆಂಬುದು ಚತುರ್ವರ್ಗಫಲಕ, ಕಾಲಮಾನವೆಂಬುದು ಚತುರ್ಯುಗಯುತವ್, ಸರ್ವವೂ ನಿನ್ನ ಚತುರಾಸ್ಯಜನಿತವೆಲ್ಲವೂ. ಈ ಕಣ್ಣಿಗೆ ಕಾಣುವ (ಬಾಹ್ಯ ಪ್ರಪಂಚ) ಚತುರ್ವರ್ಣಮಯವಾದ ಲೋಕವನ್ನು (ಚತುರ್ವರ್ಣಮಯಲೋಕವೆಯ್) ನೀನೇ ಸೃಷ್ಟಿಸಿರುವೆ. ನೀನು ಕಾಲನು. ಕಾಲಪರಿಮಾಣವನ್ನು ನಾಲ್ಕು ಯುಗಗಳಾಗಿ ವಿಂಗಡಿಸಿರುವೆ (ಕೃತ, ತ್ರೇತಾ, ದ್ವಾಪರ, ಕಲಿ). ಧರ್ಮ, ಅರ್ಥ, ಕಾಮ ಮೋಕ್ಷವೆಂಬ ನಾಲ್ಕು ಗುರಿಗಳನ್ನಿಟ್ಟು (ಧ್ಯೇಯಗಳನ್ನಿಟ್ಟು) ಸೃಷ್ಟಿಗೈದಿರುವೆ. ಚತುರ್ಮುಖನಾದ ಬ್ರಹ್ಮದೇವರಿಗೂ (ಸರ್ವವನ್ನು ನಿರ್ಮಿಸಿದ ನೀನು ಚತುರ್ಮುಖನಯ್) ನೀನು ಪಿತನಾಗಿರುವೆ. ಚತುರ್ವರ್ಣವೂ ನಿನ್ನ ಮೂಲದಲ್ಲೇ ಅಡಕವಾಗಿದೆ (ನಿನ್ನ ದೇಹದಲ್ಲೇ). ಸಮಸ್ತಜ್ಞಾನಸಾಹಿನಿಗಳು, ಜ್ಞಾನಮಾರ್ಗಗಳು (ತತ್ತ್ವಶಾಸ್ತ್ರ, ವಿಜ್ಞಾನಶಾಸ್ತ್ರ, ಧರ್ಮಶಾಸ್ತ್ರ, ಅರ್ಥಶಾಸ್ತ್ರ) ನಿನ್ನ ನಾಲ್ಕು ಮುಖದಿಂದ ಹರಿದುಬಂದುವು. ನೀನೊರ್ವನೇ ಎಲ್ಲವನ್ನು ಪಡೆದೆ. ಆದರೆ ನಿನ್ನನ್ನು ಪಡೆದವರಿಲ್ಲ (ಪಡೆಯದವರೂ ಇಲ್ಲ) (ನಿನ್ನನ್ನು ಹೆತ್ತವರಿಲ್ಲ). ನೀನು ಅನಾದಿಪುರುಷನು, ಅವ್ಯಯನು.

ಚತುರಿತಿ । ಚತುರ್ಣಾಂ, ಧರ್ಮಾರ್ಥಕಾಮಮೋಕ್ಷಾಣಾಂ ವರ್ಗಶ್ಚತುರ್ವರ್ಗಃ— "ತ್ರಿವರ್ಗೋ ಧರ್ಮಕಾಮಾರ್ಥೈಶ್ಚತುರ್ವರ್ಗಃ ಸ ಮೋಕ್ಷಕೈಃ" ಇತ್ಯಮರಃ—ಚತ್ವಾರಿ ಯುಗಾನಿ, ಕೃತತ್ರೇತಾದೀನಿ ಯಾಸಂತಾಶ್ಚತುರ್ಯುಗಾ ಕಾಲಾವಸ್ಥಾಃ ಕಾಲ ಪರಿಮಾಣಮ್ । ಇತ್ಯೇವಂ ರೂಪಂ ಸರ್ವಂ ಚತುರ್ಮುಖಾಚ್ಚತುರ್ಮುಖರೂಪಿಣಸ್ತ್ವತ್ತಃ ॥

**23. ಅಭ್ಯಾಸನಿಗೃಹೀತೇನ ಮನಸಾ ಹೃದಯಾಶ್ರಯಮ್ ।**
**ಜ್ಯೋತಿರ್ಮಯಂ ವಿಚಿನ್ವಂತಿ ಯೋಗಿನಸ್ತ್ವಾಂ ವಿಮುಕ್ತಯೇ ॥ ೨೩ ॥**

ಅಭ್ಯಾಸಬಲದಿಂದ, ಯೋಗಬಲದಿಂದ (ರಾಜಯೋಗ, ಧ್ಯಾನಯೋಗ, ಭಕ್ತಿಯೋಗ, ಪ್ರಾಣಾಯಾಮ, ಸಮಾಧಿಸ್ಥಿತಿ) ಯೋಗಿಗಳು (ದಾರ್ಶನಿಕರು) ತಮ್ಮ ಮನಸ್ಸನ್ನು ನಿಗ್ರಹಿಸಿ ವಿಷಯಗಳ ಕಡೆಗೆ ಹರಿಯದಂತೆ, ಹೃದಯದಲ್ಲಿ ನೆಲಸಿರುವ (ವಿಷಯವಿಮುಖತೆಯ) ನಿನ್ನನ್ನೇ ಧ್ಯಾನಿಸುತ್ತಿರುವರು. ಆ ಯೋಗಿವರೇಣ್ಯರು ಮುಕ್ತಿಯನ್ನು ಬಯಸಿ, ಹೃದಯಪದ್ಮದಲ್ಲಿ ಸ್ಥಿತನಾಗಿರುವ (ನೆಲೆನಿಂತಿರುಹ) (ಸ್ಥಾಣು)

ನಿನ್ನನ್ನೇ ಅರಸುತ್ತಿರುವರು. ನೀನು ಲಸತ್‌ಜ್ಯೋತಿರೂಪನು. ಬೆಳಕಿನ (ಪ್ರಕಾಶ, ಕಿರಣ, ರಶ್ಮಿ) ಸ್ವರೂಪವುಳ್ಳವನು (ಲಸತ್‌ಜ್ಯೋತಿರ್ಪುರುಷನು). ಜ್ಯೋತಿರ್ಮಯನು. ಜ್ಯೋತಿರ್ಲಿಂಗನು. ಮೋಕ್ಷಾರ್ಥಿಗಳಾಗಿ, ಮೋಕ್ಷವನ್ನು ಬಯಸಿ (ಮೋಕ್ಷ = ಬಿಡುಗಡೆ) ಯೋಗಿವರ್ಯರು ನಿನ್ನನ್ನೇ ಸದಾ ಚಿಂತಿಸುತ್ತಿರುವರು (ಅರ್ಚನಂ ಸೇವನಂ ವಿಷ್ಣೋಃ).

ಅಭ್ಯಾಸೇನ ನಿಗ್ರಹೀತಂ ವಿಷಯಾಂತರೇಭ್ಯೋ ನಿವರ್ತಿತಮ್—ಹೃದಯಾಶ್ರಯಂ =ಹೃತ್‌ಪದ್ಮಸ್ಥಂ—ಜ್ಯೋತಿರ್ಮಯಂ ತ್ವಾಂ ವಿಮುಕ್ತಯೇ—ಮೋಕ್ಷಾರ್ಥವಿಚಿನ್ವಂತ್ಯ, ನ್ವಿಷ್ಯಂತಿ ॥

**24. ಅಜಸ್ಯ ಗೃಹ್ಣತೋ ಜನ್ಮ ನಿರೀಹಸ್ಯ ಹತದ್ವಿಷಃ ।**
**ಸ್ವಪತೋ ಜಾಗರೂಕಸ್ಯ ಯಾಥಾರ್ಥ್ಯಂ ವೇದಕಸ್ತವ ॥ ೨೪ ॥**

ಹೇ ದೇವಾ, ಯಾರು ಬಲ್ಲರು ನಿನ್ನ ನಿಜವಾದ ಸ್ಥಿತಿಯನ್ನು ಅಥವಾ ನೆಲೆಯನ್ನು ಅರಿತವರಾರು ಲೋಕದಲಿ ? ನೀನು ಜನ್ಮರಹಿತನಾದರೂ ಜನಿಸುತ್ತಿರುವೆ, ಜನ್ಮಶೂನ್ಯ ನಾದರೂ ಜನ್ಮಗ್ರಹಣಮಾಡುತ್ತಿರುವೆ. ಮತ್ಸ್ಯ, ಕೂರ್ಮ, ವರಾಹಾದಿ ದಶಾವತಾರ ಗಳನ್ನು ಲೋಕೋದ್ಧಾರಕ್ಕಾಗಿ ಕೈಗೊಂಡಿರುವೆ (ಜನಿ ನೀನೇ, ಜನಿರಹಿತನು ನೀನೇ). ಚೇಷ್ಟೆರಹಿತನಾದರೂ ಚೇಷ್ಟಿತನಾಗಿರುವೆ. ಶತ್ರುಹನನಕಾರ್ಯಗಳನ್ನು ಕೈಗೊಂಡಿರುವೆ. ಎಲ್ಲಾ ಕ್ರಿಯೆಗಳ ಸರ್ವಸಾಕ್ಷಿಭೂತನಾಗಿರುವೆ. ಯೋಗನಿದ್ರೆಯಲ್ಲಿದ್ದರೂ, ಎಚ್ಚತ್ತು (ಜಾಗೃತಾವಸ್ಥೆಯಲ್ಲಿದ್ದು) ಎಲ್ಲವನ್ನೂ ಅವಲೋಕಿಸುತ್ತಿರುವೆ (ನೀನೆಯೆ ನಿರೀಹನಯ್, ಮೇಣ್ ಹತಶತ್ರುವನಯ್). ಮೂಕಸಾಕ್ಷಿಯಾಗಿರುವೆ. ಯೋಗಸಿದ್ಧಿಯ ಅನುಭವವನ್ನು ಪಡೆಯುತ್ತಿರುವ ಸಮಯದಲ್ಲೂ ಎಲ್ಲಾ ವಿಧದ (ವಿರುದ್ಧ ಚೇಷ್ಟೆಗಳು) ಚೇಷ್ಟೆಗಳನ್ನೂ ಅನುಭವಿಸುತ್ತಿರುವೆ. ಲೋಕದ ಯಥಾರ್ಥಜ್ಞಾನವನ್ನು ಪಡೆಯುತ್ತಿರುವೆ.(ಪ್ರೇಕ್ಷಕನಂತೆ ಆಗುಹೋಗುಗಳನ್ನು ಗಮನಿಸುತ್ತಿರುವೆ) (ನೀನೆ ಮಲಗಿರ್ಪವನ್, ನೀನೆ ಎಚ್ಚತ್ತವನ್).

ನ ಜಾಯಂತ ಇತ್ಯಜಃ—ಜನ್ಮಗೃಹ್ಣತಃ = ಮತ್ಸ್ಯಾದಿರೂಪೇಣ ಜಾಯಮಾನಸ್ಯ— ನಿರೀಹಸ್ಯ = ಚೇಷ್ಟಾರಹಿತಸ್ಯಾಪಿ—ಹತದ್ವಿಷಃ = ಶತ್ರುಘಾತಿನೋ — ಜಾಗರೂಕಸ್ಯ = ಸರ್ವಸಾಕ್ಷಿತಯಾ—ತವ ಯಾಥಾರ್ಥ್ಯೇ ಕೋ ವೇದವೇತ್ತಿ—ಯಾಥಾರ್ಥ್ಯಂ = ಯಥಾ ಭೂತಃ ಅರ್ಥಃ ತಸ್ಯ ಭಾವಃ ಯಾಥಾರ್ಥ್ಯಂ—ಶಬ್ದಾದೀನ್=ಶಬ್ದ, ರೂಪ, ರಸ, ಗಂಧ ಮತ್ತು ಸ್ಪರ್ಶವಿಷಯಾನ್ ॥

**25. ಶಬ್ದಾದೀನ್ವಿಷಯಾನ್ ಭೋಕ್ತುಂ ಚರಿತುಂ ದುಶ್ಚರಂ ತಪಃ ।**
**ಪರ್ಯಾಪ್ತೋಽಸಿ ಪ್ರಜಾಃ ಪಾತುಂ ಔದಾಸೀನ್ಯೇನ ವರ್ತಿತುಮ್ ॥ ೨೫ ॥**

ಹೇ ಜಗದೀಶ್ವರಾ, ನಿನ್ನ ನೆಲೆಯನು ಅರಿಯುವವನು ಲೋಕದಲ್ಲಿ ಯಾರೂ ಇಲ್ಲ. ಹೇ ಪ್ರಭೋ, ನೀನು ಶಬ್ದಾದಿವಿಷಯಗಳನು ಅರಿವುದಕೆ ತಕ್ಕವನಾಗಿರುವೆ (ಕೃಷ್ಣಾ ವತಾರದಲಿ) (ಶಬ್ದಾದಿವಿಷಯಗಳನು). ಅದರೆ ನರನಾರಾಯಣ (ಋಷಿಯಾಗಿ) ಕಠಿಣ ತಪವನ್ನಾಚರಿಸಿದೆ, ಜಗತ್ತಿನ ರಕ್ಷಕನಾದ ನೀನು (ಜನರ ಕಾಪಿಡುವುದಕೆ) ದೃತ್ಯಮರ್ದನ

ನಾಗಿ ಅವತರಿಸಿದೆ. ಆದರೆ ಉದಾಸೀನನಾಗಿ, ತಟಸ್ಥನಾಗಿಯೂ ಇರುವೆ. ಪಾಲನಕರ್ತೃ ವಾದ ನೀನು ಏನೂ ಅರಿಯದಂತೆ, ತನಗೆ ಏನೂ ಸಂಬಂಧಿಸದಂತೆಯೂ ಇರುವೆ (ಹಾಗೂ ಇರಬಲ್ಲೆ, ಹೀಗೂ ಇರಬಲ್ಲೆ ಎಂದಂತೆ). ನಿನ್ನ ಮಹಿಮೆಯನರಿತವರಾರು ಲೋಕದಲಿ (ಮೋಹ್ ಕೆಮ್ಮನಿರ್ದಪೆ).

ನರನಾರಾಯಣಾದಿರೂಪೇಣ ದುಶ್ಚರಂ ತಪಶ್ಚರಿತುವರ್—ತಥಾ ದೈತ್ಯಮರ್ದನೇನ ಪ್ರಜಾಃ ಪಾತುವರ್—ಔದಾಸೀನ್ಯೇನ=ತಾಟಸ್ಥ್ಯೇನ—ಪರಸ್ಪರವಿರುದ್ಧಯೋರಾಚರಣೇ ತ್ವದನ್ಯಃ ಕಃ ಸಮರ್ಥ ಇತ್ಯರ್ಥಃ ॥

**26. ಬಹುಧಾಪ್ಯಾಗಮೈರ್ಭಿನ್ನಾಃ ಪಂಥಾನಃ ಸಿದ್ಧಿಹೇತವಃ ।**
**ತ್ವಯ್ಯೇವ ನಿಪತಂತ್ಯೋಘಾ ಜಾಹ್ನವೀಯಾ ಇವಾರ್ಣವೇ ॥ ೨೬ ॥**

ಮಾನವನು ಹಲವಾರು ತರದ ಆಗಮ, ಶಾಸ್ತ್ರಗಳನ್ನು ಅನುಸರಿಸುತ್ತ ಭಿನ್ನಮಾರ್ಗ ಗಳಿಂದ ನಿನ್ನ ಸಿದ್ಧಿಯನ್ನು, ಕಾರ್ಯಸಿದ್ಧಿ, ಪುಣ್ಯಸಿದ್ಧಿಯನ್ನು ಪಡೆಯಲು ಎಳಸಿ, ಪುರುಷಾರ್ಥಸಾಧಕಗಳಾದ ನಿನ್ನ ಪ್ರಸಾದವನ್ನು ಬಯಸಿ ಕೊನೆಗೆ ನಿನ್ನನ್ನೇ ಸೇರುತ್ತಾನೆ. ಹೇಗೆ ಗಂಗಾನದಿಯಲ್ಲಿ ಎಲ್ಲಾ ಪ್ರವಾಹಗಳೂ ಸೇರಿದ್ದರೂ, ನಾನಾವಿಧದ ಕುಟಿಲ ಮಾರ್ಗದಿಂದ ಹರಿಯುತ್ತಿದ್ದರೂ, ಕೊನೆಗೆ ಗಂಗಾನದಿಯು (ಜಾಹ್ನವಿಯು) ಸಾಗರ ವನ್ನೇ ಸೇರುವಂತೆ ಮಾನವನು ಅನುಸರಿಸುವ ಎಲ್ಲಾ ಮಾರ್ಗಗಳೂ (ನಾನಾಪಥಗಳೂ), ಭಿನ್ನವಾದ ಸಾಧಕಬಾಧಕ ಪಥಗಳು ನಿನ್ನಲ್ಲೇ ಐಕ್ಯಹೊಂದುತ್ತಿವೆ (ಭಿನ್ನಮಾದ ಫಲಸಾಧಕ ಪಥಂಗಳ್). ಆಶ್ರಮಗಳು, ಶಾಸ್ತ್ರಗಳು, ಸಾಂಖ್ಯ, ಯೋಗ. ನ್ಯಾಯ, ವೈಶೇಷಿಕ, ಜೈನ, ಬೌದ್ಧ, ಸಿಖ್ಖ, ಜರಾತುಷ್ಟ್ರ, ಲೋಕಾಯತ (ಚಾರ್ವಾಕ, ನಾಸ್ತಿಕ), ಭಾಟ್ಟ ಮೊದಲಾದ ಶಾಸ್ತ್ರಗಳು, ಆಗಮಗಳು, ಧರ್ಮಶಾಸ್ತ್ರಗಳು ಭಿನ್ನಮಾರ್ಗಗಳನ್ನು ಬೋಧಿಸಿದರೂ ನಿನ್ನಲ್ಲಿಯೇ ಸೇರುತ್ತವೆ, ನಿನ್ನನ್ನೇ ಹೊಗುತ್ತವೆ, ನಿನ್ನನ್ನೇ ಮುಟ್ಟು ತ್ತವೆ. ವಿಶ್ವದ ಎಲ್ಲಾ ಕಾರ್ಯಗಳಿಗೂ ಕರ್ಮಗಳಿಗೂ ನೀನೇ ಹೇತುವಾಗಿರುವೆ. ಮೇಲಕ್ಕೆಸೆದ ಕಲ್ಲು ಗುರುತ್ವಾಕರ್ಷಣಶಕ್ತಿಯಿಂದ ನೆಲವನ್ನೇ ಆಶ್ರಯಿಸುವಂತೆ, ಎಲ್ಲಾ ನದಿಗಳೂ ಸಾಗರವನ್ನೇ ಸೇರುವಂತೆ, ನಿನ್ನನ್ನೇ ಸೇರುತ್ತವೆ ನೀನು ಎಲ್ಲದರ ಕೊನೆ, ಗತಿ, ಮತಿ, ಇತಿ, ವಿಂತಿ (ನಿನ್ನೊಳೆಯು ಸೇರ್ಗುಮಿರದೆ).

ಭಿನ್ನಾ ಅಪಿ ಸಿದ್ಧಿಹೇತವಃ = ಪುರುಷಾರ್ಥಸಾಧಕಾಃ—ಪಂಥಾನಃ = ಉಪಾಯಾಃ—ಜಾಹ್ನವ್ಯಾ ಇಮೇ ಜಾಹ್ನವೀಯಾ ಗಂಗಾಃ—ಓಘಾಃ = ಪ್ರವಾಹಾಃ—ಯೇನ ಕೇನಾಪಿ ರೂಪೇಣ ತ್ವಾಮೇವೋಪಯಾಂತೀತ್ಯರ್ಥಃ—ಆಗಮೈಃ = ಆಗಮ, ವೇದಾಗಮಗಳು—ದರ್ಶನ = ಷಡ್‌ದರ್ಶನಗಳು = ಸಾಂಖ್ಯ, ಯೋಗ, ವೇದಾಂತ, ಪೂರ್ವಮೀಮಾಂಸಾ, ಉತ್ತರಮೀಮಾಂಸಾ ॥

**27. ತ್ವಯ್ಯಾವೇಶಿತಚಿತ್ತಾನಾಂ ತ್ವತ್ಸಮರ್ಪಿತಕರ್ಮಣಾಮ್ ।**
**ಗತಿಸ್ತ್ವಂ ವೀತರಾಗಾಣಾಂ ಅಭೂಯಃ ಸನ್ನಿವೃತ್ತಯೇ ॥ ೨೭ ॥**

ಯಾವ ವಿರಕ್ತರಾದ ಪರಮಯೋಗಿಗಳು ನಿನ್ನಲ್ಲಿಯೇ ಮನಸ್ಸಿಟ್ಟು ತಮ್ಮ ಚಿತ್ತವನ್ನು ನಿನ್ನಲ್ಲಿಯೇ ನೆಲೆಗೊಳಿಸಿ ತಮ್ಮೆಲ್ಲ ಕರ್ಮಗಳನ್ನು ನಿನಗೆ ಅರ್ಪಿಸಿ (ಆ ವಿರಕ್ತರು ಭವಕೆ ಮರಳದೊಲು) ಪುನಃ ಭವಕ್ಕೆ (ಸಂಸಾರಕ್ಕೆ) ಬಾರದಂತೆ ಪುನಃ ಜನ್ಮಕ್ಕೆ ಬಾರದಂತೆ ಮೋಕ್ಷವನ್ನು ಬಯಸಿ ತಮ್ಮನ್ನು ಕಾಪಾಡುವಂತೆ ಬೇಡುತ್ತಿರುವರೋ, ಅಂಥವರನ್ನು ಕಾಪಾಡುವವನು ನೀನಲ್ಲದೆ ಅನ್ಯರಿಲ್ಲ. ಆ ಸಾಧಕರು ಸರ್ವಸಮರ್ಪಣಭಾವದಿಂದ (ಅರ್ಪಣಾಮನೋಭಾವದಿಂದ) ನಡೆದುಕೊಳ್ಳುವರು. ಅವರಿಗೆ ಗತಿಮತಿಯೂ, ಕಾಪಾಡು ವವನು ನೀನೊರ್ವನೇ, ದೇವ. ನೀನು ಎಲ್ಲರ ರಕ್ಷಕನು, ನೀನೇ ಪರಮಗತಿ. ನೀನು ಅಮೃತನು. ಎಲ್ಲಾ ಸಾಧನೆಗಳ ಪರಮಗುರಿ ನೀನೇ ಅಲ್ಲವೆ(ನಿನ್ನೊಳಿರದರ್ಪಿಸುತಲಿರುವ).

ವೀತರಾಗಾಣಾಂ ವಿರಕ್ತಾನಾಮಭ್ರೂಯಃ ಸಂನಿವೃತ್ತಯೇಽಪುನರಾವೃತ್ತಯೇ— ತ್ವಮೇವ ಗತಿಃ = ಸಾಧನಮ್ — ವೀತರಾಗಾಣಾಮ್ = ವೀತಾಃ ರಾಗಾಃ ಯೇಷಾಂ ತೇ ॥

**28. ಪ್ರತ್ಯಕ್ಷೋಽಪ್ಯಪರಿಚ್ಛೇದ್ಯೋ ಮಹ್ಯಾದಿರ್ಮಹಿಮಾ ತವ ।**
**ಆಪ್ತವಾಗನುಮಾನಾಭ್ಯಾಂ ಸಾಧ್ಯಂ ತ್ವಾಂ ಪ್ರತಿ ಕಾ ಕಥಾ ॥ ೨೮ ॥**

ಪ್ರತ್ಯಕ್ಷವಾಗಿ ತೋರುವ ಪೃಥ್ವ್ಯಾದಿಲೋಕಗಳು ನಿನ್ನ ಮಹಿಮಾವಿಶೇಷದಿಂದ, ನಿನ್ನ ಮಹಿಮೈಶ್ವರ್ಯಗಳಾದ ವಾಯು, ಜಲ, ಅಗ್ನಿಗಳೇ ಮೊದಲಾದ ಪಂಚಭೂತ ಗಳು (ಮೂಲಧಾತುಗಳು) (ಮೂಲತತ್ತ್ವಗಳು) ಇವುಗಳ ಮಹಿಮಾವಿಶೇಷದಿಂದ ನಿನ್ನನ್ನು ಜ್ಞಾನಿಗಳು ಅರಿತಿರುವರಾದರೂ, ಕಣ್ಣಿನಿಂದ ಪ್ರತ್ಯಕ್ಷವಾಗಿ ಕಂಡರೂ ಪರೀಕ್ಷಿ ಸಲು ಸಾಧ್ಯವಾಗಲಾರದು. ಯಾವ ಪರೀಕ್ಷೆಗೂ (ವಾದ, ತರ್ಕ) ನೀನು ನಿಲುಕಲಾರೆ. ವೇದಪ್ರಮಾಣಾನುಮಾನಗಳಿಗೂ ನೀನು ಮೀರಿದವನು. ನಿನ್ನನ್ನು ತಿಳಿಯಲು ವೇದಗಳೇ ಪ್ರಮಾಣಗಳು.

ಆದರೂ ನೀನು ವೇದಶಾಸ್ತ್ರಗಳಿಗೂ ಮೀರಿದವನು. ದರ್ಶನ. ನಿದರ್ಶನಗಳಿಂದ ನೀನು ವ್ಯಕ್ತವಾಗುವೆಯಾದರೂ, ವೈಜ್ಞಾನಿಕ ಸತ್ಯವಾದರೂ ನಿನ್ನನ್ನು ಶೋಧಿಸಲಾಗದು. ನೀನು ಅಗಮ್ಯನು, ಮಹತೋಮಹೀಯನು. ಶ್ರುತಿಗಳು ಸಾರುತ್ತಿವೆ : "ಯತೋ ವಾ ಇಮಾನಿ ಭೂತಾನಿ ಜಾಯಂತೇ"—ಪ್ರತ್ಯಕ್ಷವಾಗಿ -ಕಾಣುವ ಸಮಸ್ತಲೋಕಗಳು (ಕರ್ತಾರನ ಕಮ್ಮಟವಯ್ಯಾ). ಸ್ವತಃ ವಿಶ್ವದ (ಬ್ರಹ್ಮಾಂಡದ) ಸೃಷ್ಟಿಕರ್ತನು ನೀನಾಗಿ ರುವೆ. ಅನುಮಾನಗಳಿಗೂ ಅರಿದು ನೀನೆನಲು ನಿನ್ನನ್ನು ಅರಿವುದೆಂತು.

ಕಾರ್ಯಕಾರಣಭೇದದಿಂದ ಅನುಮಾನದಿಂದಲೂ ನಿಷ್ಕರ್ಷಿಲಾಗದು. ನೀನು ಪಂಚ ಭೂತಾತ್ಮಕರೂಪನು. ವೇದವಾಕ್ಯ ಹೀಗೆ ಸಾರುತ್ತಿದೆ: "ಸತ್ಯಂ ಜ್ಞಾನಂ ಅನಂತಂ ಬ್ರಹ್ಮಂ" ಎಂದು. ನೀನು ವೇದಪ್ರತಿಪಾದ್ಯನು. ಇಂದ್ರಿಯಗಳಿಗೆ ಗೋಚರನಲ್ಲ. ಕೈಗೆ ಸಿಗುವ ವಸ್ತುವಲ್ಲ. ಚರ್ಚೆಗೆ ಸಿಲುಕುವ (ನಿಲುಕುವ) ಭೌತವಸ್ತುವಲ್ಲ, ಅಪ್ರಮೇಯನು. ಪ್ರತ್ಯಕ್ಷಪ್ರಮಾಣಗಳಿಂದ ಪ್ರಯೋಗಗಳಿಂದ ನಿನ್ನನ್ನು ರುಜುವಾತುಪಡಿಸಲು ಸಾಧ್ಯವಿಲ್ಲ, ನಿನ್ನಿಂದ ಎಲ್ಲವೂ ಉದಯಿಸಿತೆಂದು ವೇದಗಳು ಸಾರುತ್ತಿವೆ. ನಿನ್ನ ಮೂಲಸ್ವರೂಪವನ್ನು ಕಾಣಲು ಸಾಧ್ಯವಿಲ್ಲ. ಈ ಜಗತ್ತನ್ನು ನೀನು ಸೃಷ್ಟಿಸಿದೆಯೆಂದು ವೇದಗಳು ಸಾರುತ್ತಿವೆ.

ಈ ಪ್ರಪಂಚದ ಮೂಲವಿಷಯ(ಮೂಲಸ್ವರೂಪ)ವನ್ನೇ ತಿಳಿಯುವುದು ಕಷ್ಟವೆಂದಿರುವಾಗ, ಇಂತಹ ಆದಿ-ಅಂತ್ಯವಿಲ್ಲದ ವಿಶ್ವವನ್ನು ಸೃಷ್ಟಿಸಿರುವ ಜಗದಾದಿಚೇತನವನ್ನು ತಿಳಿಯುವುದು ಅತ್ಯಂತ ಜಟಿಲವಲ್ಲವೆ (ಪ್ರತ್ಯಕ್ಷವಾದೊಡು ಮಹ್ಯಾದಿಃ ತವ ಮಹಿಮೆ ಪರಿಕಿಸಲ್ಕರಿದು).

ಪ್ರತ್ಯಕ್ಷಃ ಪ್ರತ್ಯಕ್ಷಪ್ರಮಾಣಗಮ್ಯೋಽಪಿ ತವ ಮಹ್ಯಾದಿಃ ಪೃಥಿವ್ಯಾದಿರ್ಮಹಿಮ್ನೈಶ್ವರ್ಯಮಪರಿಚ್ಛೇದ್ಯಃ — ಯತೋ ವಾ ಇಮಾನಿ ಭೂತಾನಿ ಜಾಯಂತೇ ಇತ್ಯಾದಿ ಶ್ರುತೇಃ ॥

29. ಕೇವಲಂ ಸ್ಮರಣೇನೈವ ಪುನಾಸಿ ಪುರುಷಂ ಯತಃ ।
ಅನೇನ ವೃತ್ತಯಃ ಶೇಷಾ ನಿವೇದಿತಫಲಾಸ್ತ್ವಯಿ ॥ ೨೯ ॥

ಹೇ ಶಾಶ್ವತಪುರುಷ (ಪುರಾಣಪುರುಷ). ನಿನ್ನನ್ನು ಬರೀ ನೆನಪುಮಾಡುವುದರಿಂದ (ಸ್ಮರಿಸು, ಜಪಿಸು), ಸ್ಮರಣೆಮಾಡುವುದರಿಂದ (ಸ್ಮರಣೆಮಾತ್ರದಿಂದ), ಬರಿಯ ನಾಮೋಚ್ಚಾರಣೆಯಿಂದ (ಪ್ರಾರ್ಥಿಸುವುದರಿಂದ) ಮಾನವನನ್ನು ಪೂರ್ಣಪರಿಶುದ್ಧರನ್ನಾಗಿ ಮಾಡುವೆಯಲ್ಲವೆ ? ಹಾಗೆಂದಬಳಿಕ ನಿನ್ನ ದರ್ಶನ, ಸುಖಸ್ಪರ್ಶನಾದಿಗಳನ್ನು ಪಡೆದವರು ಅದೆಂತಹ ಅಗಾಧ ಫಲಗಳನ್ನು ಪಡೆಯುವರೆಂಬುದು ನಿರ್ವಿವಾದವೇ ಸರಿ. ಸ್ಮರಣೆಯು ಫಲವೇ ಹಾಗಿರುವಾಗ ದರ್ಶನಫಲವೆಂತಿರದು ?

ಕೇವಲಮಿತಿ । ಸ್ಮರಣೇನ ಕೇವಲಂ ಕೃತ್ಸ್ನಮ್—"ಕೇವಲಃ ಕೃತ್ಸ್ನ ಏಕಶ್ಚ" ಇತಿ ಶಾಶ್ವತಃ—ಪುರುಷಂ ಸ್ಮರ್ತಾರಂ ಜನಂ ಪುನಾಸಿ । ಯತಃ ಬಂದಿತ್ಯರ್ಥಃ—ನಿವೇದಿತ ಫಲಾ = ವಿಜ್ಞಾಪಿತಕಾರ್ಯಾಃ ॥

30. ಉದಧೇರಿವ ರತ್ನಾನಿ ತೇಜಾಂಸೀವ ವಿವಸ್ವತಃ ।
ಸ್ತುತಿಭ್ಯೋ ವ್ಯತಿರಿಚ್ಯಂತೇ ದೂರಾಣಿ ಚರಿತಾನಿ ತೇ ॥ ೩೦ ॥

ವಾಙ್ಮನಸಿಗೆ ಅಗೋಚರನಾದ ನಿನ್ನ ಚರಿತೆಯನ್ನು ಹೊಗಳಲಳವೆ (ಪೊಗಳಲಳವೆ). ಸ್ತುತಿಸಲು ಸಾಧ್ಯವೆ ? ರತ್ನದ ಕಾಂತಿಯನ್ನು, ರಮ್ಯತೆಯನ್ನು ವಿವರಿಸಿದಂತೆ, ಸೂರ್ಯ ರಶ್ಮಿಯನ್ನು, ಸೂರ್ಯನ ಬೆಳಕನ್ನು, ತೇಜಸ್ಸನ್ನು ವಿವರಿಸಿದಂತೆ (ಮರಳಕಣಗಳನ್ನು ಎಣಿಸಿದಂತೆ). ನಿನ್ನ ಚರಿತೆಯನ್ನು ಪೂರ್ಣ ವಿವರಿಸಲು ಸಾಧ್ಯವಿಲ್ಲ. ಅಪ್ರಮೇಯ ತವ ಚರಿತೆ, ಬಗೆಗೆ, ಬಣ್ಣನೆಗೆ ಅತೀತ ಎನಿಸಿರ್ಪುದು ಇಲ್ಲೈ. ಅದನ್ನೇ ವೇದಗಳು (ನೇತಿ, ನೇತಿ = ನ ಇತಿ) (ತೃಣಮಪಿ ನ ಚಲತಿ) ಎಂದು ಹೇಳುತ್ತವೆ. ಇನ್ನು ಹೆಚ್ಚಿಗೆ ಹೇಳಲು ಸಾಧ್ಯವಿಲ್ಲ ಎಂದು ಉಪನಿಷತ್ತುಗಳು ನುಡಿದಿವೆ. ನೀನು ಅಗಮ್ಯ, ಅನಂತ, ನಿನ್ನ ಕೀರ್ತಿ ಅಪಾರ, ನಿನಗೆ ಶರಣು, ಶರಣು (ಸ್ಮರಣ, ಮನನ, ನಿದಿಧ್ಯಾಸನ = ಪ್ರಾರ್ಥನೆ) (ಅಮೇಯ = ಅಪ್ರಮೇಯ).

ಉದಧೇರಿತಿ—ಉದಧೇಃ ರತ್ನಾನೀವ=ಶರನಿಧಿಯ ರತ್ನದೊಲು—ವಿವಸ್ವತ ತೇಜಾಂಸೀವ = ಭಾಸ್ಕರನ ಕಿರಣದೊಲು—ತೇ ಚರಿತಾನಿ = ತವ ಚರಿತೆ = ಸ್ತುತಿಭ್ಯೋ ವ್ಯತಿರಿಚ್ಯತೇ = ಬಣ್ಣನೆಗೆ ಸಿಲುಕದು.

**31. ಅನವಾಪ್ತಮವಾಪ್ತವ್ಯಂ ನ ತೇ ಕಿಂಚನ ವಿದ್ಯತೇ ।**
**ಲೋಕಾನುಗ್ರಹ ಏವೈಕೋ ಹೇತುಸ್ತೇ ಜನ್ಮಕರ್ಮಣೋಃ ॥ ೩೧ ॥**

ಹೇ ಪ್ರಭೋ, ನೀನು ನಿತ್ಯನು, ಸತ್ಯ, ಪರಿಪೂರ್ಣನು. ನೀನು ಪಡೆಯದುದು ಯಾವುದಿದೆ ಲೋಕದಲ್ಲಿ ? ಇನ್ನು ಪಡೆಯಬೇಕಾದುದು ಆವುದಿದೆ ? ಎಲ್ಲವನ್ನು ಪಡೆದಿರುವೆ. ಭೂತ, ಭವಿಷ್ಯತ್, ವರ್ತಮಾನ ಎಲ್ಲಾ ಕಾಲವನ್ನೂ ತಿಳಿದಿರುವೆ. ನಿನ್ನ ಜನನ, ಕರ್ಮಗಳು ಲೋಕಸಂಗ್ರಹಾರ್ಥ, ಲೋಕಾನುಗ್ರಹಾರ್ಥ, ಲೋಕಕಲ್ಯಾಣಕ್ಕಾಗಿ, ಅದರ ಸಲುವಾಗಿ (ಹೇತುವಾಗಿ) ನಿನ್ನ ಅವತಾರಗಳು ದೇವ. ಮಾನವರ ಹಿತಕ್ಕಾಗಿ. ಪರಮ ಕಾರುಣ್ಯನಿಧಿಯಾದ ನೀನು ಲೋಕೋದ್ಧಾರಕ್ಕಾಗಿ, ಜಗತ್ತಿನ ಅಭಿವೃದ್ಧಿ, ಶ್ರೇಯಸ್ಸಿಗಾಗಿ, ಶಾಂತಿಸ್ಥಾಪನೆಗಾಗಿ ಅವತರಿಸಿದೆ. ನಿನಗೆ ಸ್ವಾರ್ಥವೆಂಬುದಿಲ್ಲ. ಎಲ್ಲವೂ ಪರಾರ್ಥ, ಪರಹಿತಕ್ಕಾಗಿ (ಭಕ್ತರ ಉದ್ಧಾರಕ್ಕಾಗಿ) (ಧರ್ಮಪ್ರತಿಷ್ಠಾಪನಾರ್ಥ) (ನಿನ್ನೊಂದು ಜನನ ಕರ್ಮಂಗಳವು ಬರಿದೆ ಲೋಕಾನುಗ್ರಹಾರ್ಥವಾಯಾವಹುದು).

ಅವಾಪ್ತವ್ಯಂ = ಪ್ರಾಪ್ತವ್ಯಂ—ತರ್ಹಿ ಕಿಂ ನಿಬಂಧನೇ ಜನ್ಮಕರ್ಮಣೀ ತತ್ರಾಹ—ಲೋಕೇತಿ—ಏಕೋ ಲೋಕಾನುಗ್ರಹ ಏವ ತೇ ತವ ಜನ್ಮಕರ್ಮಣೋರ್ಹೇತುಃ—ಪರಮಕಾರುಣಿಕಸ್ಯ ತೇ ಪರಾರ್ಥೈವಃ=ನ ಸ್ವಾರ್ಥೇತ್ಯರ್ಥಃ ॥

**32. ಮಹಿಮಾನಂ ಯದುತ್ಕೀರ್ತ್ಯ ತವ ಸಂಹ್ರಿಯತೇ ವಚಃ ।**
**ಶ್ರಮೇಣ ತದಶಕ್ತ್ಯಾ ವಾ ನ ಗುಣಾನಾಮಿಯತ್ತಯಾ ॥ ೩೨ ॥**

ಅವ್ಯಯನಾದ, ಅನಂತನಾದ, ವಿಶ್ವಸೂತ್ರಧಾರಿಯಾದ ನಿನ್ನ ಮಹಿಮೆಯನ್ನು ಹೇಳುತ್ತಾ ಹೋಗುವುದು ಬರಿಯ ಶ್ರಮವಲ್ಲದೆ ಬೇರೆ ಏನನ್ನೂ ಸಾಧಿಸಲಾರದು. ಆದುದರಿಂದ ಮೌನವೇ ಭೂಷಣವೆನಿಸುವುದು. ವಾಗ್ವ್ಯಾಪಾರಕ್ಕೆ (ವಾಗ್ವಿಲಾಸಕ್ಕೆ) ಭವದೀಯ ಮಹಿಮೆಯನು ಸ್ತುತಿಸುವ ನುಡಿಮೌನದಲ್ಲಿ ಕೊನೆಗೊಳ್ಳುವುದು. ಮಹಿಮೆ ಅತೀತ. ಅಲ್ಲಿ ಮಾತು ನಿಲ್ಲುವುದು. ಅದು ಮೂಢತೆಯಿಂದ, ಅಶಕ್ತತೆಯಿಂದ ಮತ್ತು ಪರಿಶ್ರಮದಿಂದ (ಗಾಳಿಯನ್ನು ಗುದ್ದಿ ಕೈ ನೋಯಿಸಿಕೊಂಡಂತೆ), ಆದರೆ ವಿಶ್ವತೋಮುಖನಾದ ನಿನ್ನ ಗುಣಧರ್ಮಗಳ ಕೊರತೆಯಿಂದಲ್ಲ (ಗುಣದ ಮಿತಿಯಿಂದ ಅಲ್ಲ) (ಅಪರಂಪಾರ).

ಮಹಿಮಾನಮಿತಿ—ತವಮಹಿಮಾ ನಮುತ್ಕೀರ್ತ್ಯ ವಚಃ ಸಂಹ್ರಿಯತ ಇತಿ ಯತ್—ತದ್ವಚಃ ಸಂಹರಣಂ ಶ್ರಮೇಣ ವಾಗ್ವ್ಯಾಪಾರಶ್ರಾಂತ್ಯಾ ॥

**33. ಇತಿ ಪ್ರಸಾದಯಾಮಾಸುಃ ತೇ ಸುರಾಃ ತಂ ಅಧೋಕ್ಷಜಮ್ ।**
**ಭೂತಾರ್ಥವ್ಯಾಹೃತಿಃ ಸಾಹಿನಸ್ತುತಿಃ ಪರಮೇಷ್ಠಿನಃ ॥ ೩೩ ॥**

ಅಧೋಕ್ಷಜನಾದ ಮಹಾವಿಷ್ಣುವು ಅಮರರಾದ ದೇವತೆಗಳ ನುಡಿ ಕೇಳಿ ಸಂಪ್ರೀತನಾದನು. ಅದು ಆ ಪರಮೇಷ್ಠಿಯ ಯಥಾರ್ಥವಾದ ಗುಣಕಥನವಲ್ಲದೆ, ಸರ್ವೋತ್ತಮಭಾವವಲ್ಲದೆ ಹೊಗಳಿಕೆಯಲ್ಲ, ಪ್ರಶಂಸೆ ಮಾತ್ರ. ಆ ಪರಮಾತ್ಮನು ಆ ಸ್ತೋತ್ರಗಳಿಂದ ಸಂಪ್ರಸನ್ನನಾದನು.

ಇತೀತಿ । ಇತಿತೇ ಸುರಾಸ್ತಮಧೋಭೂತಮಕ್ಷಜಮಿಂದ್ರಿಯಜಂ ಜ್ಞಾನಂ । ಯಸ್ಮಿಂ ಸ್ತಮಧೋಕ್ಷ ಜಂ ವಿಷ್ಣುಂ—ಪ್ರಸಾದಯಾಮಾಸುಃ= ಪ್ರಸನ್ನಂ ಚಕ್ರುಃ ಪರಮೇಷ್ಠಿನಃ= ಸರ್ವೋತ್ತಮಸ್ಯ ತಸ್ಯ ದೇವಸ್ಯ—ಪರಮೇ ಸ್ಥಾನೇತಿಷ್ಠತೀತಿ ಪರಮೇಷ್ಠೀ—ಭೂತಾರ್ಥವ್ಯಾಹೃತಿಃ=ಭೂತಸ್ಯ ಸತ್ಯಸ್ಯಾರ್ಥಸ್ಯ—ವ್ಯಾಹೃತಿರುಕ್ತಿಃ—ನ ಸ್ತುತಿರ್ನ ಪ್ರಶಂಸಾಮಾತ್ರಮ್—ಅಧೋಕ್ಷಜಮ್ = ಮಹಾವಿಷ್ಣು ॥

**34. ತಸ್ಮೈ ಕುಶಲ ಸಂಪ್ರಶ್ನವ್ಯಂಜಿತಪ್ರೀತಯೇ ಸುರಾಃ ।**
**ಭಯಮಪ್ರಲಯೋದ್ವೇಲಾದಾಚಖ್ಯುಃ ನೈರ್ಋತೋದಧೇಃ ॥ ೩೪ ॥**

ಆ ಪರಂಧಾಮಸ್ವರೂಪನು (ವೈಕುಂಠಾಧಿಪತಿ) ಸುಪ್ರಸನ್ನತೆಯಿಂದ ಕೇಳಿದ ಕುಶಲ ಪ್ರಶ್ನೆಯಿಂದ ಸುರರು (ಸುರಸ್ತೋಮ) ಸಂತುಷ್ಟರಾದರು. ಕಾರಣ ಭಯಾರ್ತರಾದ ತಮ್ಮ ಮೇಲೆ ಹೆಚ್ಚಿನ ಪ್ರೀತಿಯನ್ನು ತೋರಿಸಿದಾಗಲೇ (ಪ್ರಕಟಿಸಿದಾಗಲೇ) ತಾವು ಬಂದ ಕಾರ್ಯವು ನೆರವೇರುವುದು ಖಚಿತವೆಂದು ಭಾವಿಸಿದರು. ತಾವು ಬಂದ ಕಾರ್ಯ ಯಶಸ್ವಿಯಾಗಿ ಕೈಗೂಡುವುದೆಂದು, ನಿಷ್ಫಲವಾಗದೆಂದು ಭಾವಿಸಿ ಹರ್ಷಿತರಾದರು. ಅವರು ಪ್ರಳಯಕಾಲದ ಮುನ್ನವೇ ಸಪ್ತಸಾಗರಗಳು ತಮ್ಮ ದಂಡೆಯನ್ನು ದಾಟಿ ಉರುಳಿಬರುವ ಒಂದಂಜಿಕೆಯನ್ನು ಸರ್ವೋತ್ತಮನಾದ ಶ್ರೀಹರಿಯಲ್ಲಿ ಬಿನ್ನವಿಸಿದರು (ಪ್ರಕಟಿಸಿದರು). ದಕ್ಷಿಣ ಮತ್ತು ಪಶ್ಚಿಮ ದಿಕ್ಕಿನ ಅಧಿಪತಿಗಳಾದ, ಬ್ರಹ್ಮದೇವರಿಂದ ವರ ಪಡೆದು ಅಜೇಯರಾದ ರಾಕ್ಷಸಸಾಗರವು ಯಾವ ಲಂಗುಲಗಾಮೂ ಇಲ್ಲದೆ ತನ್ನ ಎಲ್ಲೆಯನ್ನು ದಾಟಿ, ಉರುಳಿಬರುತ್ತಿರುವುದನ್ನು ಭಯಭೀತರಾದ ದೇವಾದಿದೇವತೆಗಳು ಮಹಾವಿಷ್ಣುವಿನಲ್ಲಿ ನಿವೇದಿಸಿಕೊಂಡರು. ಪ್ರಳಯಕಾಲದಲ್ಲಿ ಎಲ್ಲಾ ಸಾಗರಗಳೂ ತಮ್ಮ ನೆಲೆಯನ್ನು, ಎಲ್ಲೆಯನ್ನು ದಾಟಿಬರುವುದು ಸ್ವಾಭಾವಿಕವೆ. ಉತ್ಪ್ರೇಕ್ಷೆಯೂ ಅಪೇಕ್ಷಣೀಯವೇ (ನಿಸರ್ಗದ ನಿಯಮ).

ಸುರಾಃ = ದೇವಾಃ—ಕುಶಲಸ್ಯ ಸಂಪ್ರಶ್ನೇನ ವ್ಯಂಜಿತಾ ಪ್ರಕಟೀಕೃತಾ ಪ್ರೀತಿರ್ಯಸ್ಯ ತಸ್ಮೈ—ನೈರ್ಋತೋ = ರಾಕ್ಷಸಃ ನೈರ್ಋತೋದಧೇ = ನೈರ್ಋತಃ ಏವ ಉದಧಿಃ ತಸ್ಮಾತ್ ॥

**35. ಅಥ ವೇಲಾಸಮಾಸನ್ನ ಶೈಲರಂಧ್ರಾನುನಾದಿನಾ ।**
**ಸ್ವರೇಣೋವಾಚ ಭಗವಾನ್ ಪರಿಭೂತಾರ್ಣವಧ್ವನಿಃ ॥ ೩೫ ॥**

ಆ ಬಳಿಕ ಆ ವಿಶ್ವನಾಯಕನಾದ ಭಗವಾನ್ ರಮಾಕಾಂತನು (ಆದಿನಾರಾಯಣನು) ಶರಧಿಘೋಷವು ಮೀರುವ ದನಿಯಲ್ಲಿ (ಪೆರ್ಗಡಲ ಮೊರೆತದ ದನಿಯಲ್ಲಿ) (ಶರಧಿ ಗಂಭೀರನಾದದಿ) ಮಾತಾಡಿದನು. ಆ ಧ್ವನಿಯು ಸಾಗರದ ಬಳಿಯಲ್ಲಿರುವ, ಮಹಾರ್ಣವದ ದಡದಡೆಯ ಗಿರಿಶೈಲಗಳ ಗುಹೆಗಳಲ್ಲಿ ಮಾರ್ದನಿಯಾಗಿ (ಪ್ರತಿಧ್ವನಿಯಾಗಿ) ಮೊಳಗಿತು. ಪೆರ್ಗಡಲ ಮೊರೆತದ ದನಿಯಲ್ಲಿ ಶ್ರೀಹರಿಯು ಇಂತೊರೆದನು.

ವೇಲಾಯಮಂಬ್ಧಿಕೂಲೇ — ಸಮಾಸನ್ನಾನಾಂ = ಸನ್ನಿಕೃಷ್ಟಾನಾಂ — ಶೈಲಾನಾಂ ರಂಧ್ರೇಷು = ಗಹ್ವರೇಷ್ವನುನಾದಿನಾ, ಪ್ರತಿಧ್ವನಿಮತಾ—ಶ್ರೀಭಗವಾನುವಾಚ ॥

36. ಪುರಾಣಸ್ಯ ಕವೇಸ್ತಸ್ಯ ವರ್ಣಸ್ಥಾನಸಮೀರಿತಾ ।
ಬಭೂವ ಕೃತಸಂಸ್ಕಾರಾ ಚರಿತಾರ್ಥೈವ ಭಾರತೀ ॥ ೩೬ ॥

ಆ ಬಳಿಕ ಅಕ್ಷರಸ್ಥಾನಗಳನ್ನರಿತ (ವರ್ಣಸ್ಥಾನಗಳನ್ನರಿತ) ಆ ಪುರಾಣಕವಿಯಾದ (ಆದಿಕವಿಯಾದ) ಶ್ರೀಪರಮಾತ್ಮನು ಸಂಸ್ಕಾರಪಡೆದ ಭಾರತಿಯಂತೆ (ವೀಣಾಪಾಣಿಯಾದ ವಾಗ್ದೇವಿಯಾದ ಸರಸ್ವತಿಯಂತೆ) ಉಚ್ಚಸ್ವರದಿಂದ (ಎಲ್ಲರಿಗೂ ಕೇಳುವಂತೆ) ಗಂಭೀರತೆಯಿಂದ, ಪುಷ್ಟಿಪಡೆದು, ಸ್ಪಷ್ಟವಾಗಿ ಈ ಕೆಳಗಿನ ಮಾತುಗಳನ್ನು ಉಚ್ಚರಿಸಿದನು (ಪುರಾಣಕವಿ ಉಚ್ಚರಿಸಿದುದು). ಆ ಪರಮಾತ್ಮನ ಬಾಯಿಯಿಂದ ಹೊರಟ ಮಾತುಗಳು ಕೃತಾರ್ಥವೆನಿಸಿ, ಮಾತುಗಳ ಅಧಿದೇವತೆಯಾದ ವಾಣಿಯೂ ಆ ಮಾತುಗಳಿಂದ ಚರಿತಾರ್ಥೆಯೆನಿಸಿದಳು ಎಂಬಂತೆ ಅರ್ಥಪೂರ್ಣವಾಗಿದ್ದುವು (ಸಂಸ್ಕಾರವನು ಪಡೆದಿರ್ದ).

ಪುರಾಣಸ್ಯ = ಚಿರಂತನಸ್ಯ—ಕವೇಸ್ತಸ್ಯ = ಭಗವತೋ—ವರ್ಣಸ್ಥಾನೇಷು = ಉರಃ ಕಂಠಾದಿಷು — "ಅಷ್ಟೌ ಸ್ಥಾನಾನಿ ವರ್ಣಾನಾಮುರಃ ಕಂಠಃ ಶಿರಸ್ತಥಾ—ಜಿಹ್ವಾಮೂಲಂ ಚ ದಂತಾಶ್ಚ ನಾಸಿಕೋಷ್ಠೌ ಚ ತಾಲು ಚ—" ಇತ್ಯಾದಿನಾ—ಸಮೀರಿತಾ = ಸಮ್ಯಗುಚ್ಚರಿತಾ—ಅತ ಏವ ಕೃತಃ=ಸಂಪಾದಿತಃ—ಭಾರತೀ = ವಾಣೀ—ಚರಿತಾರ್ಥ = ಕೃತಾರ್ಥ—ಕವೇಃ=ಕವಿ=ಜ್ಞಾನಿ, ವಿಜ್ಞಾನಿ—ಭಾರತಿ = ವಿದ್ಯಾ ಸರಸ್ವತಿ ॥

37. ಬಭೌ ಸದಶನಜ್ಯೋತ್ಸ್ನಾ ಸಾ ವಿಭೋರ್ವದನೋದ್ಗತಾ ।
ನಿರ್ಯಾತಶೇಷಾ ಚರಣಾತ್ ಗಂಗೇವೋರ್ಧ್ವಪ್ರವರ್ತಿನೀ ॥ ೩೭ ॥

ವಿಭುವಿನ ಮುಖೋದ್ಗತೆಯಾಗಿ ಆ ಭಾರತಿಯು ಅಂದು ರಂಜಿಸಿದಳು. ಮಹಾವಿಭುವಾದ ಮಹಾವಿಷ್ಣುವು ಮಾತನಾಡುತ್ತಿರಲು, ಬಾಯಿಯಿಂದ ಹೊರಟ ವಾಗ್ಧಾರೆಯು ಅಮಳ ದಂತಗಳ ಕಾಂತಿಯಿಂದ (ಪ್ರಭೆಯಿಂದ ಕೂಡಿ) ಕೂಡಿದ್ದುವು. ಆ ಮಾತುಗಳ ಮೋಡಿಯು ಪಾವನವಾದ ದೇವಗಂಗಾನದಿಯು, ಊರ್ಧ್ವಮುಖವಾಗಿ ಹರಿಯುವ ಪ್ರವಾಹದಂತೆ, ರಸಕಾರಂಜಿಯ ರೂಪದಲ್ಲಿ ಪ್ರವಹಿಸಿತೋ ಎಂಬಂತೆ ಕಂಡಿತು. ಆ ದೇವಾದಿದೇವನ ಪಾದಮೂಲದಿಂದಲ್ಲವೆ ದೇವಗಂಗೆಯು ಹುಟ್ಟಿದುದು. ಹೀಗೆ ಗಂಗೆಯ ಪ್ರವಾಹವು ಸ್ವಾಭಾವಿಕವಾಗಿ ಮೇಲ್ಮುಖವಾಗಿ ಹರಿದಂತೆ, ಪರಮಾತ್ಮನ ವಾಗ್ಧಾರೆಗಳು (ಅಮೃತವಚನಗಳು) ಅಮಳದಂತಗಳ ಕಾಂತಿಯಿಂದ ಮೆರುಗುಗೊಂಡು ಉದ್ಘೋಷದಂತೆ ಹರಿದುಬಂದುವು (ಪಾದನಿರ್ಯಾತಾವಶಿಷ್ಟ ಗಂಗಾನದಿಯು).

ಸದಶನಜ್ಯೋತ್ಸ್ನಾ = ದಂತಕಾಂತಿಸಹಿತಾ—ಚರಣಾದುಗೇ ನಿರ್ಯಾತಾ ಚಾಸೌ ಶೇಷಾ ಚ ನಿರ್ಯಾತಶೇಷಾ—ಊರ್ಧ್ವಪ್ರವರ್ತಿನ್ಯೂರ್ಧ್ವವಾಹಿನೀ ಗಂಗೇವ—ಬಭೌ ॥ ಉತ್ಪ್ರೇಕ್ಷಾ ಲಂಕಾರ ॥

38. ಜಾನೇ ವೋ ರಕ್ಷಸಾಕ್ರಾನ್ತಾ ಅನುಭಾವಪರಾಕ್ರಮೌ ।
ಅಂಗಿನಾಂ ತಮಸೇವೋಭೌ ಗುಣೌ ಪ್ರಥಮಮಧ್ಯಮೌ ॥ ೩೮ ॥

"ಎಲೈ ದೇವಾದಿದೇವೋತ್ತಮರಿರಾ, ಜೀವಿಗಳಲ್ಲಿರುವ ಸತ್ತ್ವ, ರಜೋಗುಣಗಳು, ಅನಂತರ ಉತ್ಪತ್ತಿಯಾಗುವ ಅಹಂಕಾರವೇ ಮೂಲವಾಗಿರುವ ತಮೋಗುಣದಿಂದ (ತಮಸ್ = ಅಂಧಕಾರ, ಕತ್ತಲೆ) ಆವರಿಸಲ್ಪಡುವಂತೆ ನೀವೆಲ್ಲರೂ ಪೌರುಷಕ್ಕೆ ಇನ್ನೊಂದು ಹೆಸರಾಗಿರುವ ರಕ್ಕಸಸಾರ್ವಭೌಮನಾದ ರಾವಣೇಶ್ವರನಿಂದ ಪರಾಜಿತರಾಗಿದ್ದೀರಿ ಎಂಬುದನ್ನು ತಿಳಿದಿರುವೆನು. ನೀವೆಲ್ಲರೂ ಆ ರಾಕ್ಷಸೇಶ್ವರನ ಭಯದಿಂದ ಆವರಿಸಲ್ಪಟ್ಟಿರುವಿರಿ. ನಿಮ್ಮೆಲ್ಲರ ಅನುಭಾವ, ಪರಾಕ್ರಮವನ್ನು ಆತನು ಅಳಿಸಿಬಿಟ್ಟಿರುವನು."

ಹೇ ದೇವಾಃ ! ವೋ ಯುಷ್ಮಾಕಮನುಭಾವ—ಪರಾಕ್ರಮೌ ಮಹಿಮಪುರುಷಕಾರೌ ರಕ್ಷಸಾ ರಾವಣೇನ—ಅಂಗಿನಾಂ = ಶರೀರಿಣಾಂ— ಪ್ರಥಮಮಧ್ಯಮಾವುಭೌ ಗುಣೌ = ಸತ್ತ್ವರಜಸೀ ತಮಸೇವ = ತಮೋಗುಣೇನೇವ—ಆಕ್ರಾಂತೌ ಜಾನೇ ॥

39. ವಿದಿತಂ ತಪ್ಯಮಾನಂ ಚ ತೇನ ಮೇ ಭುವನತ್ರಯಮ್ ।
ಅಕಾಮೋಪನತೇನೇವ ಸಾಧೋರ್ಹೃದಯಮೇನಸಾ ॥ ೩೯ ॥

ಆ ಅಸುರೇಶ್ವರನು ತನ್ನ ಉಪಟಳಗಳಿಂದ ತ್ರಿಭುವನಗಳನ್ನು ತಲ್ಲಣಗೊಳಿಸುತ್ತಿರುವನು. ಪಾಪಂಪಕಶಿಪು ಭಯಾನಕವೆಯು ಒಳಹೊಕ್ಕು ಸಾಧುಜನರ (ಹೃದಯವನು ಪೀಡಿಸುವ ಆಘಾತದಂತೆ). ಆ ರಾಕ್ಷಸೇಶ್ವರನು ಲೋಕತ್ರಯಗಳನ್ನು ಪೀಡಿಸುತ್ತ ಲೋಕಕಂಟಕನಾಗಿ ಮೆರೆಯುತ್ತಿರುವನು. ಅವನ ಉಪಟಳವನ್ನು ನಾನು ಅರಿತಿರುವೆನು.

ಅಕಾಮೇ = ನಾನಿಚ್ಛಾಯೋ — ಪನತೇನ = ಪ್ರಮಾದಾದಾಗತೇ—ನೈನಸಾ = ಪಾಪೇನ—ಸಾಧೋಃ=ಸಜ್ಜನಸ್ಯ—ತಪ್ಯಮಾನಂ=ಸಂತಪ್ಯಮಾನಮ್–"ಮಂತಿಬುದ್ಧಿಃ" (ಪಾಣಿನಿ) ಇತ್ಯಾದಿನಾವರ್ತಮಾನೇಕ್ತಃ ॥

40. ಕಾರ್ಯೇಷು ಚೈಕಕಾರ್ಯತ್ವಾತ್ ಅಭ್ಯರ್ಥ್ಯೋಽಸ್ಮಿ ನ ವಜ್ರಿಣಾ ।
ಸ್ವಯಮೇವ ಹಿ ವಾತೋಽಗ್ನೇಃ ಸಾರಥ್ಯಂ ಪ್ರತಿಪದ್ಯತೇ ॥ ೪೦ ॥

ಈ ವಿಷಯದಲ್ಲಿ ನನ್ನನ್ನು ವಜ್ರಧರನಾದ ಇಂದ್ರನು ಬೇಡಿಕೊಳ್ಳಬೇಕೆಂಬ ಅಗತ್ಯವೇನೂ ಇರುವುದಿಲ್ಲ. ಏಕೆಂದರೆ ನನ್ನ ಮತ್ತು ವಜ್ರಿಯ ಕಾರ್ಯಕಾರಣಭಾವವು ಒಂದೇ ಆಗಿರುವುದು. ಅದನ್ನು ಉದಹರಿಸುವುದಾದರೆ ಬೇಡದೆಯೆ ಮಾರುತನು ಅಗ್ನಿಸಾರಥ್ಯವನ್ನು ಕೈಗೊಳ್ಳುತ್ತಿರುವನು (ಬೇಡದೆಯೆ ಅಗ್ನಿಸಾರಥ್ಯವನು ಕೊಡುವನು). ಎಲ್ಲಿ ವಾಯುವಿರುವನೋ ಅಲ್ಲಿಯೇ ಅಗ್ನಿಯೂ ಇರುವನು. ವಾತಾಗ್ನಿಸಾರಥ್ಯವು ಸ್ವಯಂ ವಿದಿತವಾಗಿರುವುದು.

ಕಾರ್ಯೇಷು = ಕರ್ತವ್ಯೇಷು, ವಿಷಯೇಷು—ವಜ್ರಿಣಾ=ಇಂದ್ರೇಣ—ಅಭ್ಯರ್ಥ್ಯಃ "ಇದಂ ಕುರು" ಇತಿ ಪ್ರಾರ್ಥನೀಯೋ ನಾಸ್ಮಿ—ತಥಾ ಹಿ ವಾತಃ ಸ್ವಯಮೇವಾಗ್ನೇಃ ಸಾರಥ್ಯಂ = ಸಾಹಾಯ್ಯಂ ಪ್ರತಿಪದ್ಯತೇ=ಪ್ರಾಪ್ನೋತಿ—ನ ತು ವಹ್ನಿಪ್ರಾರ್ಥನಯಾ—ನ ತು ಪರಪ್ರಾರ್ಥನಯಾ ॥

41. ಸ್ವಾಸಿಧಾರಾಪರಿಹೃತಃ ಕಾಮಂ ಚಕ್ರಸ್ಯ ತೇನ ಮೇ ।
ಸ್ಥಾಪಿತೋ ದಶಮೋ ಮೂರ್ಧಾ ಲಭ್ಯಾಂಶ ಇವ ರಕ್ಷಸಾ ॥ ೪೧ ॥

ಈ ಹಿಂದೆ ಆ ದುಷ್ಟದನುಜನು ತ್ರಿಪುರಾರಿಯ ಕುರಿತು ತಪವೆಸಗಿದನು. ತನ್ನ ಚಂದ್ರಹಾಸವೆಂಬ ಖಡ್ಗದಿಂದ ಒಂದೊಂದೇ ತಲೆಯನ್ನು ಕತ್ತರಿಸಿ ಮಹಾದೇವನಿಗೆ ಆಹುತಿ ಕೊಡುತ್ತಾ, ಅರ್ಪಿಸುತ್ತಾ ಬಂದನು. ಹೀಗೆ ಒಂಬತ್ತು ತಲೆಗಳನ್ನು ಅರ್ಪಿಸಲು ಪರಶಿವನು ಪ್ರತ್ಯಕ್ಷನಾಗಿ ಆ ದಾನವನಿಗೆ ಅವನು ಪ್ರಾರ್ಥಿಸಿದ ವರವನ್ನು ಅನುಗ್ರಹಿಸಿ ಅವನ ಇಷ್ಟಾರ್ಥವನ್ನು ಪೂರ್ಣಗೊಳಿಸಿದನು. ಮಾತ್ರವಲ್ಲದೆ ಒಂಬತ್ತು ತಲೆಗಳನ್ನು ಪುನಃ ಉತ್ಪತ್ತಿಯಾಗುವಂತೆ ವರವನ್ನಿತ್ತನು. ಹೀಗೆ ಆ ಸಮಯದಲ್ಲಿ ಉಳಿಸಿಕೊಂಡ ಹತ್ತನೆಯ ತಲೆಯನ್ನು ನನ್ನ ಸುದರ್ಶನಚಕ್ರಕ್ಕಾಗಿ ಮೀಸಲಾಗಿಟ್ಟಿರುವಂತಿದೆ. ಅದನ್ನು ನನ್ನ ಸುದರ್ಶನಚಕ್ರವು ಪೂರ್ಣಾಹುತಿಯಾಗಿ ಸ್ವೀಕರಿಸಲಿರುವುದು. ಅದು ನನ್ನ ಚಕ್ರದ ಬಾಯಿಗೆ ಲಭ್ಯಾಂಶವಾಗಿರುವುದು (ನನ್ನ ಚಕ್ರದ ಬಾಯ್ಗೆ ತಗುವ ಲಭ್ಯಾಂಶದೊಲು).

ಸ್ವಾಸಿಧಾರಯಾ = ಸ್ವಖಡ್ಗಧಾರಯಾ—ಲಭ್ಯಾಂಶಃ =ಪ್ರಾಪ್ತವ್ಯಭಾಗ-ತತ್ಸರ್ವಥಾ ತಮಹಂ = ಹನಿಷ್ಯಾಮೀತ್ಯರ್ಥಃ ॥

**42. ಸ್ರಷ್ಟುರ್ವರಾತಿಸರ್ಗಾತ್ತು ಮಯಾ ತಸ್ಯ ದುರಾತ್ಮನಃ ।**
**ಅತ್ಯಾರೂಢಂ ರಿಪೋಃ ಸೋಢಂ ಚಂದನೇನೇವ ಭೋಗಿನಃ ॥ ೪೨ ॥**

ಲೋಕಕಂಟಕನಾದ ದುರಾತ್ಮನಾದ ಈ ರಾಕ್ಷಸನ ಪೀಡೆಯನ್ನು, ಅವನ ಅಭಿವೃದ್ಧಿ, ಬ್ರಹ್ಮದೇವರ ವರದಾನವನ್ನು ನೆನೆದು ನಾನು ತಾಳಿಕೊಂಡಿರುವೆನು. ಸರ್ಪವು ಚಂದನ (ಗಂಧದ) ಗಿಡವನ್ನು ಏರುತ್ತಿರಲು, ಆ ದುಷ್ಟ ಸರ್ಪದ ಸ್ಪರ್ಶವನ್ನು, ಸೃಷ್ಟಿಯ ನಿಯಮಕ್ಕೆ ಮಣಿದು ಚಂದನ ಗಿಡವು ಸಹಿಸಿಕೊಂಡಿರುವಂತೆ ನಾನು ಆ ರಿಪುವಿನ ಪೀಡೆಯನ್ನು ಸಹಿಸಿಕೊಂಡಿರುವೆನು.

ಸ್ರಷ್ಟುಃ = ಬ್ರಹ್ಮಣೋ—ವರಾತಿಸರ್ಗಾತ್=ವರದಾನಾದ್ಧೇತೋಃ—ಭೋಗಿನಃ = ಸರ್ಪಸ್ಯಾತ್ಯಾರೂಢಂ—ಚಂದನೇನೇವ ಸೋಢಮ್ ॥

**43. ಧಾತಾರಂ ತಪಸಾ ಪ್ರೀತಂ ಯಯಾಚೇ ಸ ಹಿ ರಾಕ್ಷಸಃ ।**
**ದೈವಾತ್ಸರ್ಗಾದವಧ್ಯತ್ವಂ ಮರ್ತ್ಯೇಷ್ವಾಸ್ಥಾಪರಾಙ್ಮುಖಃ ॥ ೪೩ ॥**

ಆ ದಾನವನು ನರರನ್ನು ಕಡೆಗಣಿಸಿ, ದೇವತೆಗಳಿಂದ ಮರಣವಾಗದಂತೆ ವರಗಳನ್ನು ಪಡೆದು ಅಜೇಯನೆನಿಸಿರುವನು, ಜಗತ್ತಿನ ಆಧಾರನಾದ, ಸೃಷ್ಟಿಕರ್ತ ಬ್ರಹ್ಮದೇವರನ್ನು (ಧಾತಾರನನ್ನು) ವ್ರತನೇಮಗಳಿಂದ, ತಪಸ್ಸುಗಳಿಂದ (ತಪದಿಂದ ಪರಿತುಷ್ಟನಾದ) ಸಂತುಷ್ಟಿಗೊಳಿಸಿದನು. ಮರ್ತ್ಯರ ಬಗ್ಗೆ ಕಡುತಾತ್ಸಾರ ತಳೆದ ಆ ದಾನವನು ದೇವತೆಗಳಿಂದ ಅವಧ್ಯನಾಗುವಂತೆ ವರವನ್ನು ಬೇಡಿ ಪಡೆದನು.

ಪ್ರೀತಂ = ಸುಪ್ರೀತಂ = ಸಂತುಷ್ಟಂ—ಧಾತಾರಂ = ಬ್ರಹ್ಮಾಣಮ್ — ಆಸ್ಥಾಪರಾಙ್ಮುಖಃ = ಆದರವಿಮುಖಃ ॥

**44. ಸೋಽಹಂ ದಾಶರಥಿರ್ಭೂತ್ವಾ ರಣಭೂಮೇರ್ಬಲಿಕ್ಷಮಮ್ ।**
**ಕರಿಷ್ಯಾಮಿ ಶರೈಸ್ತೀಕ್ಷ್ಣೈಃ ತಚ್ಛಿರಃ ಕಮಲೋಚ್ಚಯಮ್ ॥ ೪೪ ॥**

"ನಾನು ದಾಶರಥಿಯಾಗಿ ಲೋಕದಲ್ಲಿ ಅವತರಿಸುವೆನು. ದಶರಥನ ಪುತ್ರನಾಗಿ, ಕೌಸಲ್ಯೆಯ ಗರ್ಭದಲ್ಲಿ ಮಾನವನಾಗಿ ಜನ್ಮತಳೆಯುವೆನು. ಶಿಷ್ಟರನ್ನು ರಕ್ಷಿಸಲು, ಧರ್ಮ ಜಾಗೃತಿಗೊಳಿಸಲು ನಾನು ಶ್ರೀರಾಮನಾಗಿ ಹುಟ್ಟುವೆನು. ನಿಮ್ಮ ಕೋರಿಕೆಯನ್ನು ಈಡೇರಿಸುವೆನು. ಅವನ ತಲೆಗಳೆಂಬ ತಾವರೆಹೂಗಳನ್ನು (ಕಮಲಪುಷ್ಪಗಳನ್ನು) ನನ್ನ ತೀಕ್ಷ್ಣವಾದ ಬಾಣಗಳಿಂದ ತರಿದು (ನಿಶಿತಶರಹತಿಯಿಂದ) ರಣರಂಗದ ಪೂಜೆಗೆ (ಅರ್ಚನೆಗೆ) ಒದಗಿಸಿ ಬಲಿಕೊಡುವೆನು. ಅವನ ತಲೆಗಳೆಂಬ ತಾವರೆಹೂಗಳಿಂದ ರಣರಂಗದ ಪೂಜೆ ನಡೆಯಲಿ (ರಣರಂಗವರ್ಚನೆಗೆ). ನಾನು ರಾಮನಾಗಿ ಭೂಮಿಯಲ್ಲಿ ಅವತರಿಸಿ ನಿಮ್ಮ ಇಷ್ಟಾರ್ಥವನ್ನು ಸಲ್ಲಿಸುವೆನು" ಎಂದು ಆ ವಿಶ್ವನಿಯಾಮಕನು ಆಶ್ವಾಸನೆಯಿತ್ತನು (ಕಮಲಾಕ್ಷ, ಪುಂಡರೀಕಾಕ್ಷ).

ದಾಶರಥಿಃ = ದಶರಥಸ್ಯಾಪತ್ಯಂ ಪ್ರಮಾನ್—ತೀಕ್ಷ್ಣೈಃ ಶರೈಸ್ತಸ್ಯ—ರಾವಣಸ್ಯ ಶಿರಾಂಸ್ಯೇವ ಕಮಲಾನಿ ತೇಷಾಮುಚ್ಚಯಂ ರಾಶಿಂ ರಣಭೂಮೇರ್ಬಲಿಕ್ಷಮಂ ಪೂಜಾರ್ಹಂ ಕರಿಷ್ಯಾಮಿ—ಪುಷ್ಪಪಿಶದಾಹಿ ಪೂಜೇತಿ ಭಾವಃ ॥

**45. ಅಚಿರಾದ್ಯಜ್ವಭಿರ್ಭಾಗಂ ಕಲ್ಪಿತಂ ವಿಧಿವತ್ಪುನಃ ।**
**ಮಾಯಾವಿಭಿರನಾಲೀಢಂ ಆದಾಸ್ಯಧ್ವೇ ನಿಶಾಚರೈಃ ॥ ೪೫ ॥**

ಆ ಮಾಯಾವಿಗಳಾದ ನಿಶಾಚರರು ದೇವತೆಗಳಾದ ನಿಮ್ಮನ್ನು ಪೂಜಿಸದಂತೆ ಯಾಜ್ಞಿಕರಿಗೆ ಉಪಟಳಕೊಡುತ್ತಿರುವರು. ಹವಿಸ್ಸನ್ನು (ಹವಿರ್ಭಾಗವನ್ನು) ನೀವು ಸ್ವೀಕರಿಸುವ ಮೊದಲೇ ಹವನಹೋಮಗಳನ್ನು ಧ್ವಂಸಗೊಳಿಸುವರು. ಆ ಯಾಜ್ಞಿಕರು ವಿಧ್ಯುಕ್ತ ರೀತಿಯಿಂದ ಒಲಿದು ಅರ್ಪಿಸುವ ಹವಿರ್ಭಾಗಗಳನ್ನು ನೀವು ಮುಟ್ಟದಂತೆ, ನಿಮಗೆ ಸೇರದಂತೆ ತಮ್ಮ ಮಾಯಾವಿದ್ಯೆಯಿಂದ ಆ ರಾತ್ರಿಂಚರರು ಅಪಹರಿಸುತ್ತ, ಭಗ್ನಗೊಳಿಸುತ್ತಿರುವರು. ರಣಯಜ್ಞಕ್ಕೆ ರಾವಣನು ಬಲಿಯಾಗುವನು. ಮಾರಣಹೋಮವಾಗುವುದು. ಇದರಿಂದ ವೇದೋಕ್ತಿಗಳು, ವೇದಮಾರ್ಗವು, ವೈದಿಕ ವಿಧಿವಿಧಾನಗಳು ಲೋಕದಲ್ಲಿ ಪುನಃ ಸಂಸ್ಥಾಪನೆ(ಪ್ರತಿಷ್ಠಾಪನೆ)ಯಾಗುವುದು. ಆ ಅಸುರರು ತಮ್ಮ ಮಾಯಾವಿದ್ಯೆಯಿಂದ ನಾನಾ ರೂಪುಗಳಿಂದ, ನಾನಾ ತೆರದಲ್ಲಿ ಲೋಕದಲ್ಲಿ ಸಂಚರಿಸುತ್ತ, ದುರಾಚಾರ, ಭ್ರಷ್ಟಾಚಾರ, ಕೊಲೆ, ಸುಲಿಗೆ, ದರೋಡೆ, ಹಿಂಸಾಪ್ರವೃತ್ತಿಯನ್ನು (ಭ್ರಷ್ಟರಾಕ್ಷಸನೀತಿಯನ್ನು) ತ್ರಿಲೋಕಗಳಲ್ಲಿ ಸ್ಥಾಪಿಸಲು ಹೊರಟಿರುವರು. ಇದರಲ್ಲಿ ಯಶಸ್ಸುಗಳಿಸಿರುವರು. ಜಪ, ಹೋಮ, ಯಜ್ಞಗಳನ್ನು ಪವಿತ್ರಹಸ್ತಗಳಿಂದ ಮಾಡದಂತೆ ಅಪವಿತ್ರಗೊಳಿಸುತ್ತಿರುವರು. ಬಲವೇ ಸರ್ವತ್ರ ಮೇಲ್ಗೈಪಡೆದಿದೆ. ನನ್ನ ಲೋಕಗಳಲ್ಲಿ ನಾನು ಶಾಂತಿಸ್ಥಾಪನೆ ಮಾಡಲು ಪುನಃ ಹುಟ್ಟಿಬರುವೆನು.

ಕಲ್ಪಿತ = ಮುಪಹೃತಂ — ಭಾಗಂ = ಹವಿರ್ಭಾಗು—ಮಾಯಾವಿಭಿಃ = ಮಾಯಾವದ್ಭಿಃ — ನಿಶಾಚರೈಃ = ರಕ್ಷೋಭಿರನಾಲೀಢಮನಾಕ್ರಾಂತಂ — ಪುನರಾದಾಸ್ಯಧ್ವೇ = ಗ್ರಹೀಷ್ಯಧ್ವೇ ॥

**46. ವೈಮಾನಿಕಾಃ ಪುಣ್ಯಕೃತಃ ತ್ಯಜಂತು ಮರುತಾಂ ಪಥಿ ।**
**ಪುಷ್ಪಕಾಲೋಕಸಂಕ್ಷೋಭಂ ಮೇಘಾವರಣತತ್ಪರಾಃ ॥ ೪೬ ॥**

ಪುಣ್ಯರೂಪಿಗಳಾದ (ಪುಣ್ಯಕರ್ಮನಿರತರು) ದೇವತೆಗಳು ತಮ್ಮ ವಾಹನಗಳಾದ ಆಕಾಶ ಬುಟ್ಟಿಗಳಲ್ಲಿ ಕುಳಿತು ವಾಯುಪಥದಲ್ಲಿ ಯಾನಮಾಡುತ್ತಿರುವ ವೇಳೆ ರಾವಣನ ಪುಷ್ಪಕ ವಿಮಾನವನ್ನು ಕಂಡೊಡನೆಯೇ ಭಯಾರ್ತರಾಗಿ ಮೋಡದಲ್ಲಿ ಮರೆಯಾಗುತ್ತಿದ್ದರು. ರಾವಣನ ಮಾನಸಿಕ ಕ್ಷೋಭೆಯಿಂದ ದೂರವಿರಲು ಅವರಿಗೆ ಉಳಿದುದು ಇದೊಂದೇ ಮಾರ್ಗ. ಅವನ ಕಣ್ಣು ತಪ್ಪಿಸಿ ಜೀವಿಸುವುದು. ಮರಣವಿಲ್ಲದ ದೇವತೆಗಳಿಗೂ (ಪ್ರಾಣ) ಭಯ ಬಿಡದು.

ಮರುತಾಂ = ದೇವಾನಾಂ—ಪಥಿ = ವ್ಯೋಮ್ನಿ—ಮೇಘಾವರಣತತ್ಪರಾ = ರಾವಣ ಭಯಾನ್ ಮೇಘೋನ್ತರ್ಧಾನತತ್ಪರಾಃ—ಪುಣ್ಯಕೃತಃ= ಸುಕೃತಿನಃ—"ಸಂಕ್ಷೋಭೋ= ಭಯಂಚಕಿತಂ"—ಇತಿ ಶಬ್ದಾರ್ಣವಃ ॥

**47. ಮೋಕ್ಷ್ಯತ್ಯೇ ಸ್ವರ್ಗಬಂದೀನಾಂ ವೇಣೀಬಂಧಾ ನ ದೂಷಿತಾನ್ ।**
**ಶಾಪಯನ್ತ್ರಿತ ಪೌಲಸ್ತ್ಯ ಬಲಾತ್ಕಾರಕಚಗ್ರಹೈಃ ॥ ೪೭ ॥**

ಆ ಪೌಲಸ್ತ್ಯನು ನಳಕೂಬರರ ಶಾಪದಿಂದ ನಿಯಂತ್ರಿತನಾಗಿರುವನು. ಈ ಹಿಂದೆ ರಂಭೆಯೆಂಬ ಅಪ್ಸರೆಯನ್ನು ಕಂಡು ರಾವಣನು ಕಾಮಮೋಹಿತನಾಗಿ ತಲೆಕೂದಲನ್ನು ಹಿಡಿದೆಳೆದು ಕೊಂಡೊಯ್ದು ಬಲಾತ್ಕಾರದಿಂದ ಅವಳನ್ನು ಕೂಡಿದನು. ಇದರಿಂದ ಕುಪಿತನಾದ ಅವಳ ಪ್ರಿಯಪತಿ ಕುಬೇರನ ಪುತ್ರ ನಳಕೂಬರನು ಕುಪಿತನಾಗಿ ರಾವಣನನ್ನು ಶಪಿಸಿದನು. "ಎಲೆ ಕಾಮಾಂಧನಾದ ರಾವಣ, ನೀನು ಇನ್ನುಮುಂದೆ ಯಾವ ಸ್ತ್ರೀಯನ್ನಾದರೂ ಬಲಾತ್ಕರಿಸಿದೆಯಾದರೆ ನಿನ್ನ ತಲೆ (ಮಂಡೆ) ಸಾವಿರ ಹೋಳುಗಳಾಗಿ ಧರೆಗೆ ಉರುಳಲಿ" ಎಂದು ಉಗ್ರವಾಗಿ ಶಪಿಸಿದನು. ಇದರಿಂದಾಗಿ ದಶಕಂಠನು ಭಯಗೊಂಡು ಶಾಪದಿಂದ ನಿಯಂತ್ರಿತನಾಗಿದ್ದನು. ಆದರೂ ಅವನ ದುಶ್ಚಟವು ಮೊದಲಿನಂತೆ ತೀವ್ರವಾಗಿತ್ತು, ಅನೇಕಮಂದಿ ಅಮರಿಯರನ್ನು ಕೊಂಡೊಯ್ದು ಬಂಧನದಲ್ಲಿರಿಸಿದನು. ಅಮರಿಯರ ಬಂಧವಿಮೋಚನದ ಕಾಲ ಬೇಗನೇ ಬರಲಿದೆ. ಅವರ ಕೇಶಬಂಧನವನ್ನು ಬಿಡಿಸುವಿರಿ (ಬಿಚ್ಚುವಿರಿ). ರಾವಣನು ಶಾಪಕ್ಕೆ ಕಟ್ಟುಬಿದ್ದು ಅವರ ಕಚಗ್ರಹಣಮಾಡದೆ, ಮುಡಿಸೋಂಕದೆ ದೂರ ಉಳಿದಿರುವನು. ಅವರು ತಮ್ಮ ಬಿಡುಗಡೆಯಾದಬಳಿಕ ತಮ್ಮ ಮುಡಿಯನ್ನು ಅಲಂಕರಿಸಿ, ಸಿಂಗರಿಸಿ (ಕೇಶಾಲಂಕಾರಮಾಡಿ) ಪುಷ್ಪವನ್ನು ಮುಡಿಯಲಿರುವರು. ಅವರ ಮೋಕ್ಷದಕಾಲ ಬೇಗನೇ ಸನ್ನಿಹಿತವಾಗಲಿದೆ. (ಗಂಡಂದಿರು ಪರದೇಶಕ್ಕೆ ಹೋದಾಗ ಸತಿಯರು ಕೇಶಾಲಂಕಾರ ಮಾಡಿಕೊಳ್ಳುವುದು ವಿರಳ(ಅಪರೂಪ)ವೆಂದು ಯಾಜ್ಞವಲ್ಕ್ಯರು ತಮ್ಮ ಸ್ಮೃತಿಯಲ್ಲಿ ಉಲ್ಲೇಖಿಸಿರುವರು).

ಯೂಯಂ ಶಾಪೇನ = ನಲಕೂಬರಶಾಪೇನ — ಯಂತ್ರಿತಾಃ = ಪ್ರತಿಬದ್ಧಾಃ— ಪೌಲಸ್ತ್ಯಸ್ಯ =ರಾವಣಸ್ಯ — ಕಚಗ್ರಹಾಃ = ಕೇಶಾಕರ್ಷಣಸ್ತೈರದೂಷಿತಾನುಪಹತಾನ್ — ಸ್ವರ್ಗಬಂದೀನಾಂ = ಹೃತಸ್ವರ್ಗಾಂಗನಾನಾಂ — "ಸ್ತ್ರೀಣಾಂ ಬಲಾದ್ಗ್ರಹಣೇ ಮೂರ್ಧಾ ತೇ ಶತಧಾ ಭವಿಷ್ಯತಿ" ಇತಿ ॥

**48. ರಾವಣಾವಗ್ರಹಕ್ಲಾಂತಂ ಇತಿ ವಾಗಮೃತೇನ ಸಃ ।**
**ಅಭಿವೃಷ್ಯ ಮರುತ್ಸಸ್ಯಂ ಕೃಷ್ಣಮೇಘಸ್ತಿರೋದಧೇ ॥ ೪೮ ॥**

ಕಾಲಮೇಘದಂತೆ ಕಪ್ಪಾದ ಮೈಯುಳ್ಳ, ನೀಲಮೇಘಶ್ಯಾಮನಾದ ಮಹಾವಿಷ್ಣುವು, ಬರಗಾಲಪೀಡಿತ ಪ್ರದೇಶದಲ್ಲಿ ಒಣಗಿದ ಸಸ್ಯದ ಮೇಲೆ ಅಮೃತದಂತಹ ಸೋನೆಮಳೆಯನ್ನು ಸುರಿದಂತೆ, ಅಮೃತದಂತಹ ತನ್ನ ವಚನಗಳಿಂದ ಸಮಸ್ತ ದೇವತೆಗಳನ್ನು ತಣಿಸಿ ತಾನು ಅಂತರ್ಧಾನನಾದನು. ಅವರು ರಾವಣನಿಂದ ಪೂರ್ಣವಾಗಿ ಮರ್ದಿಸಲ್ಪಟ್ಟಿದ್ದರು. ವಿಶ್ವರಕ್ಷಕನಾದ ಮಹಾವಿಷ್ಣುವು, ವೈಶ್ರವಣಪುತ್ರನಾದ ವಿಶ್ವಜಿತ್ ರಾವಣೇಶ್ವರನಿಂದ ರಕ್ಷಿಸುವೆನೆಂಬ ಅಭಯವಚನ(ಸಾಂತ್ವನದ ಮಾತು)ವಿತ್ತು ಅವರ ಧೈರ್ಯವನ್ನು, ಇಚ್ಛಾಶಕ್ತಿಯನ್ನು ಕುದುರಿಸಿದನು. ಸಸ್ಯವು ಮಳೆ ಬಿದ್ದೊಡೆ ನಲಿದಾಡುವಂತೆ ದೇವತೆಗಳು ಹರ್ಷಗೊಂಡು ಪುಲಕಿತರಾದರು. ಪರಮಾತ್ಮನ ವಾಗಮೃತವನ್ನು ದೇವತೆಗಳು ಸವಿದರು. ಮಾತೂ ಅಮೃತವು. ಮನಸಿನ ತೃಷೆಯನ್ನು ಹೋಗಲಾಡಿಸುತ್ತದೆ. ನೀರು ಬಾಯಾರಿಕೆಯನ್ನು ಹೋಗಲಾಡಿಸಬಲ್ಲುದು. ಆದ್ದರಿಂದ ಮಾತು, ನೀರು ಎರಡೂ ಅಮೃತವೇ (ವಾಗಮೃತವ ಸೂಸಿ) (ಸೋನೆಮಳೆಗರೆದು).

ವಿಶ್ರವಸೋಽಪತ್ಯಂ ಪುಮಾನ್ ರಾವಣ ಇತಿ ವಿಗ್ರಹಃ—ತೇನ ಕ್ಲಾಂತಂ=ಮ್ಲಾನಂ—ವಾಗಮೃತೇನ = ವಾಕ್‌ಸಲಿಲೇನ — "ಅಮೃತಂ ಯಜ್ಞಶೇಷೇ ಸ್ಯಾತ್ ಪೀಯೂಷೇ ಸಲಿಲೇಽಮೃತಮ್" ಇತಿ ವಿಶ್ವಃ—ಕೃಷ್ಣ (ಮೇಘ) ರಾವಣ (ಅವಗ್ರಹ) ರಾವಣ = ರಾವಯತಿ (ಶತ್ರೂನ್) ಇತಿ ರಾವಣಃ = ಶತ್ರುಗಳನ್ನು ತನ್ನ ಬೊಬ್ಬೆಯಿಂದ (ಬೊಬ್ಬಾಟದಿಂದ) ಹೆದರಿಸುವವ. ಸಾವಯವರೂಪಕಾಲಂಕಾರ.

**49. ಪುರುಹೂತ ಪ್ರಭೃತಯಃ ಸುರಕಾರ್ಯೋದ್ಯತಂ ಸುರಾಃ ।**
**ಅಂಶೈರನುಯಯುರ್ವಿಷ್ಣುಂ ಪುಷ್ಪೈರ್ವಾಯುಮಿವ ದ್ರುಮಾಃ ॥ ೪೯ ॥**

ಸುರರ ಕಾರ್ಯಕ್ಕಾಗಿ ಪ್ರಯತ್ನಶೀಲನಾದ (ಸುರಕಾರ್ಯಕುಜ್ಜುಗಿಸಿದಾತನನು) ಮಹಾವಿಷ್ಣುವನ್ನು ಅಮರರೆಲ್ಲರೂ ತಮ್ಮ ಸತ್ವಾಂಶಗಳಿಂದ ಅನುಸರಿಸಿದರು. ಹೇಗೆ ಹೂಗಳಿಂದ, ಗಂಧದಿಂದ ಮರವು (ಸಸ್ಯವು) ಮಾರುತನನ್ನು (ಗಾಳಿ, ವಾಯು) ಅನುಸರಿಸುವಂತೆ (ಮರುತನನು ಪೂಗಳಿಂದ ಅನುಸರಿಪ ಮರಗಳವೊಲ್) ಆಕಾಶಗಾಮಿಗಳಾದ ದೇವತೆಗಳು ಮಹಾವಿಷ್ಣುವನ್ನು ಅನುಸರಿಸಲು ಮುಂದಾದರು. ಸುರರು (ಅಮರರು) ಸುಗ್ರೀವಾದಿಗಳಾಗಿ (ಅಂಗದ, ಜಾಂಬವ, ನಳ, ನೀಲ, ಹನುಮಂತಾದಿ) ಜನಿಸಿ, ವಾನರರಾಗಿ ಜನಿಸಿ ಶ್ರೀಪರಮಾತ್ಮನ ಕೈಂಕರ್ಯವನ್ನು ವಸುಂಧರೆಯಲ್ಲಿ ಕೈಕೊಂಡರು.

ಪುರುಹೂತಪ್ರಭೃತಯಃ = ಇಂದ್ರಾದ್ಯಾಃ ಸುರಾಃ—ಅನುಯಯುಃ = ಅನುಸರಿಸು —ಸುಗ್ರೀವಾದಿರೂಪೇಣ ವಾನರಯೋನಿಷು ಜಾತಾ ಇತ್ಯಾದಿ ಅಭಿಪ್ರಾಯಃ—ಪುರುಹೂತ = ಪುರುಭಿಃ ಬಹುಭಿಃ ಹೂತಃ ॥

**50. ಅಥ ತಸ್ಯ ವಿಶಾಂಪತ್ಯುಃ ಅಂತೇ ಕಾಮ್ಯಸ್ಯ ಕರ್ಮಣಃ ।**
**ಪುರುಷಃ ಪ್ರಬಭೂವಾಗ್ನೇಃ ವಿಸ್ಮಯೇನ ಸಹರ್ತ್ವಿಜಾಮ್ ॥ ೫೦ ॥**

ಇತ್ತ ದಶರಥನೃಪನು ಪುತ್ರರನ್ನು ಪಡೆಯುವ ಸಲುವಾಗಿ ಪುರೋಹಿತರಾದ ವಸಿಷ್ಠ ಮಹರ್ಷಿ, ವಾಮದೇವಾದಿಗಳಿಂದ ಪುತ್ರಕಾಮೇಷ್ಟಿಯಾಗವನ್ನು ಪ್ರಾರಂಭಿಸಿ ಸುಖಾಂತ ವಾಗಿ ಅಂತ್ಯಗೊಳಿಸಿದನು. ಹೀಗೆ ಯಾಗವನ್ನು ಪೂರ್ಣಗೊಳಿಸುತ್ತಿರುವ ಸುಮುಹೂರ್ತ ದಲ್ಲಿ ಸಕಲ ಋತ್ವಿಜರು ವಿಸ್ಮಯಪಟ್ಟು ನೋಡುತ್ತಿರಲು ಓರ್ವ ಯಜ್ಞಪುರುಷನು ಯಜ್ಞಕುಂಡದಿಂದ ಹೊರಬಂದನು.

ವಿಶಾಂಪತ್ಯುಃ = ದಶರಥಸ್ಯ ಸಂಬಂಧಿನಃ—ಕಾಮ್ಯಸ್ಯ ಕರ್ಮಣಃ = ಪುತ್ರಕಾಮೇಷ್ಟೇಃ —ಪ್ರಬಭೂವ = ಪ್ರಾದುರ್ಬಭೂವ—ಕಾಮ್ಯಸ್ಯ ಕರ್ಮಣಃ=ಕರ್ಮನ್—ಕರ್ಮಗಳು ಮೂರು ವಿಧ : (1) ನಿತ್ಯಕರ್ಮ (ಸಂಧ್ಯಾವಂದನಾದಿ), (2) ನೈಮಿತ್ತಿಕ (ದರ್ಶಪೂರ್ಣ ಮಾಸ, ಯಾಗ), (3) ಕಾಮ್ಯ (ಪುತ್ರಕಾಮೇಷ್ಟಿ). ಸಹೋಕ್ತಿ ಅಲಂಕಾರ.

**51. ಹೇಮಪಾತ್ರಗತಂ ದೋರ್ಭ್ಯಾಂ ಆದಧಾನಃ ಪಯಶ್ಚರುಮ್ ।**
**ಅನುಪ್ರವೇಶಾದಾದ್ಯಸ್ಯ ಪುಂಸಸ್ತೇನಾಪಿ ದುರ್ವಹಮ್ ॥ ೫೧ ॥**

ಆ ದಿವ್ಯಪುರುಷನು ಹೇಮಪಾತ್ರೆಯಲ್ಲಿ ಪಾಯಸವನ್ನು ಕೈಯಲ್ಲಿ ಹಿಡಿದುಕೊಂಡು ಬಂದನು. ಆ ಪಯಶ್ಚರುವಿನಲ್ಲಿ (ಪರಮಾನ್ನದಲ್ಲಿ) ಈರೇಳು ಹದಿನಾಲ್ಕು ಲೋಕ ಗಳನ್ನು (ಚತುರ್ದಶಭುವನಗಳನ್ನು) ತನ್ನ ಹೊಟ್ಟೆಯಲ್ಲಿ ಧರಿಸಿರುವ ಭಗವಂತನಾದ ಆದಿಮೂರುತಿ (ಆದಿಪುರುಷನಾದ) ಶ್ರೀಮನ್ನಾರಾಯಣನು ಒಳಹೊಕ್ಕು ಇದ್ದುದ ರಿಂದ, ಬಹಳ ಭಾರವಾಗಿದ್ದುದರಿಂದ ಬಹುಕಷ್ಟದಿಂದ (ಬಹಳ ಯತ್ನದಿಂದ), ಹೇಮ ಕಲಶವನ್ನು ಕೈಯಲ್ಲಿ, ಜಾಗರೂಕತೆಯಿಂದ, ಧರಿಸಿಕೊಂಡು ಬಂದನು. ಚೈತನ್ಯರೂಪ ನಾದ, ತೇಜೋಮಯನಾದ, ಶ್ರೀಪರಮಾತ್ಮನೇ ನಿಜರೂಪವಿಗ್ರಹನಾಗಿ ಅದರಲ್ಲಿ ಅಡಕ ವಾಗಿದ್ದನು.

ಆದ್ಯಸ್ಯ ಪುಂಸೋ = ವಿಷ್ಣೋಃ—ಅನುಪ್ರವೇಶಾ = ಅಧಿಷ್ಠಾನಾದ್ಧೇತೋಸ್ತೇನ— ಚತುರ್ದಶಭುವನೋದರಸ್ಯ ಭಗವತೋ—ಪಯಶ್ಚರುಂ = ಪಾಯಸಾನ್ನಂ—"ಅನ ಲ್ಪಾಗ್ನಿಭಿರೂಷ್ಮಪಕ್ವ ಓದನಶ್ಚರುಃ" ಇತಿ ಯಾಜ್ಞಿಕಾಃ ॥

**52. ಪ್ರಾಜಾಪತ್ಯೋಪನೀತಂ ತತ್ ಅನ್ನಂ ಪ್ರತ್ಯಗ್ರಹೀನ್ನೃಪಃ ।**
**ವೃಷೇವ ಪಯಸಾಂ ಸಾರಂ ಆವಿಷ್ಕೃತಮುದನ್ವತಾ ॥ ೫೨ ॥**

ಮಂತ್ರದ್ರಷ್ಟಾರರಾದ ವಸಿಷ್ಠಮಹರ್ಷಿಗಳ ಪೌರೋಹಿತ್ಯದಲ್ಲಿ ನಡೆದ ಪುತ್ರಕಾ ಮೇಷ್ಟಿಯ ಅಂತ್ಯದಲ್ಲಿ ಯಜ್ಞಪುರುಷನು ಹೇಮಕುಂಭದಲ್ಲಿ ದೇವಪಾಯಸವನ್ನು ತಂದು ದಶರಥಮಹೀಪತಿಯ ಕೈಗೆ ತಂದಿತ್ತನು. ಆ ದೇವಪಾಯಸವು ಪ್ರಜಾಪತಿ ಯಾದ ಬ್ರಹ್ಮದೇವರ ದೇವಪ್ರಸಾದವಾಗಿತ್ತು. ವಿಶ್ವದ ಪರಮೇಷ್ಠಿಯಾದ ಮಹಾ ವಿಷ್ಣುವಿನ ಸಂಬಂಧವನ್ನು ಪಡೆದ, ವೈಷ್ಣವತೇಜದಿಂದ ಬೆಳಗುತ್ತಿರುವ ದೇವಪಾಯಸ. ಸಪ್ತಸಮುದ್ರಗಳನ್ನು ದೇವತೆಗಳೂ ರಾಕ್ಷಸರೂ ಕಡೆದಾಗ ಅದರಿಂದ ಸಮುದ್ರಸಾರ ವಾದ ಅಮೃತವು ಉತ್ಪನ್ನವಾಯಿತಷ್ಟೆ (ಉದಧಿ ವಿಲಿದೀವ ಜಲಸಾರವನು). ಅದನ್ನು ಕಮಂಡಲುವಿನಲ್ಲಿಟ್ಟು ಧನ್ವಂತರಿಯು ಸಾಗರದಿಂದ ಹೊರಬಂದನು. ಆ ದಿವ

ಅಮೃತವನ್ನು ದೇವತೆಗಳೊಡೆಯನಾದ ದೇವೇಂದ್ರನು (ಮಹೇಂದ್ರನು, ವಾಸವನು) ಧನ್ವಂತರಿಯ ಕೈಯಿಂದ ಸ್ವೀಕರಿಸಿದಂತೆ ಆ ದಿವ್ಯಾನ್ನವನ್ನು ದಶರಥಸಾರ್ವಭೌಮನು ಯಜ್ಞಪುರುಷನಿಂದ ಸ್ವೀಕರಿಸಿ ಕೃತಕೃತ್ಯನಾದನು.

ನೃಪೋ = ದಶರಥಃ—ಪ್ರಾಜಾಪತ್ಯೇನ = ಪ್ರಜಾಪತಿಸಂಬಂಧಿನಾ—ತದನ್ನಂ = ಪಾಯಸಾನ್ನಮ್—ಉದನ್ವತೋ ದಧಿನಾಽಽವಿಷ್ಕೃತಂ=ಪ್ರಕಾಶಿತಂ—ಪಯಸಾಂ ಸಾರಂ = ಅಮೃತಂ—ವೃಷಾ=ವಾಸವ ಇವ—''ವಾಸವೋ ವೃತ್ರಹಾ ವೃಷಾ'' ಇತಿ ಅಮರಃ —ಪ್ರತ್ಯಗ್ರಹೀತವಾ್ = ಸ್ವೀಚಕಾರ ॥

**53. ಅನೇನ ಕಥಿತಾ ರಾಜ್ಞೋ ಗುಣಾಸ್ತಸ್ಯಾನ್ಯ ದುರ್ಲಭಾಃ ।**
**ಪ್ರಸೂತಿಂ ಚಕಮೇ ತಸ್ಮಿನ್ ತ್ರೈಲೋಕ್ಯಪ್ರಭವೋಽಪಿ ಯತ್ ॥ ೫೩ ॥**

ತ್ರಿಭುವನಗಳಿಗೆ ಕಾರಣನಾದ, ಪ್ರಭುವಾದ ಶ್ರೀಹರಿಯು ದುರ್ಲಭವಾದ (ಅಸಾಧಾರಣವಾದ) ಲೋಕವಿಖ್ಯಾತವಾದ ಅನೇಕಾನೇಕ ಗುಣಗಳನ್ನು ಹೊಂದಿರುವ (ದುರ್ಲಭವಾದ ಗುಣಗಳಿಂದ) ಗುಣನಿಧಿಯಾದ ದಶರಥನ ಗುಣಗಳಿಗೆ ಮೆಚ್ಚಿ, ತಾನು ಸುತನಾಗಿ ಜನಿಸುವಂತೆ ತಾನೇ ಸ್ವತಃ ಇಚ್ಛಿಸಿದನು. ದಶರಥನು ಮಾನವಲೋಕಕ್ಕೆ ಆದರ್ಶನಾದ ಮಾನವಾಧಿಪನು. ಇಡೀ ವಿಶ್ವವೇ ಅವನಿಂದ ಶೋಭಿಸಿತು (ಶೋಭೆ ಪಡೆದಿತ್ತು).

ತಸ್ಯರಾಜ್ಞೋ = ದಶರಥಸ್ಯ—ಅನ್ಯೈರ್ದುರ್ಲಭಾ = ಅಸಾಧಾರಣಾಗುಣಾ—ಅನೇನ ಕಥಿತಾ = ವ್ಯಾಖ್ಯಾತಾಃ—ಪ್ರಭವಃ = ಕಾರಣಂ—ಪ್ರಸೂತಿಂ = ಉತ್ಪತ್ತಿಂ — ಚಕಮೇ ಕಾಮಿತವಾನ್ ॥

**54. ಸ ತೇಜೋವೈಷ್ಣವಂ ಪತ್ನ್ಯೋಃ ವಿಭೇಜೇ ಚರುಸಂಜ್ಞಿತಮ್ ।**
**ದ್ಯಾವಾಪೃಥಿವ್ಯೋಃ ಪ್ರತ್ಯಗ್ರಂ ಅಹರ್ಪತಿರಿವಾತಪಮ್ ॥ ೫೪ ॥**

ಹೀಗೆ ದೊರೆತ ದೇವಪಾಯಸವನ್ನು ಸೂರ್ಯದೇವನು (ಅಹರ್ಪತಿ, ದಿನಪತಿ) ದ್ಯಾವಾ, ಪೃಥ್ವಿ, ಭೂಮಿ ಮತ್ತು ಆಕಾಶಗಳಿಗೆ (ಅಂತರಿಕ್ಷಕ್ಕೆ) ಎಳೆಬಿಸಿಲನ್ನು ಸಮಾನವಾಗಿ ಹಂಚುವಂತೆ ದಶರಥಚಕ್ರವರ್ತಿಯು ತನ್ನ ಇಬ್ಬರು ಪತ್ನಿಯರಿಗೆ ಆ ಚರುವನ್ನು ಹಂಚಿದನು (ಹರಿತೇಜವನ್ನಿರ್ವರರಸಿಯರಿಗವನು).

ವೈಷ್ಣವಂ = ತೇಜಃ—ದ್ಯೌಶ್ಚ ಪೃಥಿವೀ ಚ ದ್ಯಾವಾಪೃಥಿವ್ಯೌ—ದಿವಶ್ಚ ಪೃಥಿವ್ಯಾಮ್ ಇತಿ ಚಕಾರಾತ್ ದಿವ್ ಶಬ್ದಸ್ಯ ದ್ಯಾವಾದೇಶಃ—ಅಹ್ನಃ ಪತಿರಹರ್ಪತಿಃ—ಅಹರಾದೀನಾಂ ಪತ್ಯಾದಿಷುವಾರೇಫಃ — ಪ್ರತ್ಯಗ್ರಮಾತಪಂ = ಬಾಲಾತಪಮಿವ— = ವಿಭೇಜೇ=ವಿಭಜ್ಯ ದದಾವಿತ್ಯರ್ಥಃ ॥

**55. ಅರ್ಚಿತಾ ತಸ್ಯ ಕೌಸಲ್ಯಾಪ್ರಿಯಾ ಕೇಕಯವಂಶಜಾ ।**
**ಅತಃ ಸಂಭಾವಿತಾಂ ತಾಭ್ಯಾಂ ಸುಮಿತ್ರಾಮೈಚ್ಛದೀಶ್ವರಃ ॥ ೫೫ ॥**

ವೈಷ್ಣವತೇಜದಿಂದ ಬೆಳಗುತ್ತಿರುವ ಆ ದಿವ್ಯ ಆಹಾರವನ್ನು ತನ್ನ ಮೂವರು ಪತ್ನಿಯರಿಗೆ ಈ ತೆರನಾಗಿ ಹಂಚಿದನು ಆ ರಾಜಮೌಳಿ. ಕೌಸಲ್ಯೆ, ಕೋಸಲರಾಜಪುತ್ರಿ,

ಆತನ ಹಿರಿಯ ಹೆಂಡತಿ, ಪಟ್ಟಮಹಿಷಿ. ಬಹಳ ಮಹಾನ್ಯಳು. ಕೇಕಯರಾಜಪುತ್ರಿಯಾದ ಕೈಕೆ ಆತನ ಮೋಹದ ರಾಣಿ (ಮೋಹ = ಮೋಕೆ-ತೌಳವ) ಅತ್ಯಂತ ಪ್ರೀತಿಪಾತ್ರಳು. ನಡುವಿನವಳು ಸುಮಿತ್ರೆ, ಗುಣಾಢ್ಯೆ. ದೇವಪಾಯಸವನ್ನು ಆ ಇಬ್ಬರು ಪ್ರೇಮದ ರಾಣಿಯರಿಗೆ ಕೌಸಲ್ಯೆ ಮತ್ತು ಕೈಕೆಗೆ ಸಮನಾಗಿ ಹಂಚಿದನು. ಅವರಿಬ್ಬರೂ ತಮ್ಮ ಪಾಲಿನ ಸಮಾನಾರ್ಧವನ್ನು ಮಧ್ಯದ ರಾಣಿ ಸುಮಿತ್ರೆಗೆ ಕೊಡುವಂತೆ ಸೂಚಿಸಿದನು. ಅಥವಾ ಅವನ ಮನಸ್ಸಿನ ಒಳಗ್ಗುಣವನ್ನು ಅರಿತು ಅವರೇ ತಮ್ಮ ಪಾಲಿನ ಅರ್ಧವನ್ನು ಹಂಚಿರಲೂಬಹುದು. ಇದು ಅವರ ಸಾಮರಸ್ಯದ ಏಕತೆಯನ್ನು ಪ್ರಕಟಿಸುವುದಲ್ಲವೆ (ಐಕಮತ್ಯವನ್ನು). ಹೀಗೆ ಪಿಂಡೋತ್ಪತ್ತಿಗೆ ಕಾರಣವಾಗಿರುವ ಆ ಪರಮಾನ್ನವನ್ನು (ಚರುವನ್ನು) ತನ್ನ ಮೂವರು ರಾಣಿಯರಿಗೆ ಏಕಪ್ರಕಾರವಾಗಿ ಹಂಚಿದನು ಆ ರಘುಕುಲಸಾರ್ವಭೌಮನು (ಹರಿತೇಜವನ್ನು).

ಕೌ ಪೃಥಿವ್ಯಾಂ ಸಲತಿ ಗಚ್ಛತೀತಿ ಕೋಸಲಃ—ಕೋಸಲಸ್ಯ ರಾಜ್ಞೋಽಪತ್ಯಂ ಸ್ತ್ರೀ ಕೌಸಲ್ಯಾ—ಅರ್ಚಿತಾ=ಜ್ಯೇಷ್ಠಾ ಮಾನ್ಯಾ-ಕೇಕವಂಶಜಾ=ಕೈಕೇಯಿ-ಅತೋ ಹೇತೋಃ ಈಶ್ವರೋ ಭರ್ತಾ ನೃಪಃ ಸುಮಿತ್ರಾಂ ತಾಭ್ಯಾಂ ಕೌಸಲ್ಯಾ-ಕೈಕೇಯೀಭ್ಯಾಂ ಸಂಭಾವಿತಾಂ = ಭಾಗದಾನೇನ ಮಾನಿತಾ ॥

**56.** **ತೇ ಬಹುಜ್ಞಸ್ಯ ಚಿತ್ತಜ್ಞೇ ಪತ್ನ್ಯೌ ಪತ್ಯುರ್ಮಹೀಕ್ಷಿತಃ ।**
**ಚರೋರರ್ಧಾರ್ಧಭಾಗಾಭ್ಯಾಂ ತಾಮಯೋಜಯತಾಮುಭೇ ॥ ೫೬ ॥**

ಆ ಅನುಸರಣೀಯನಾದ ಮತಿವಂತನಾದ ಕ್ಷಿತೀಶ್ವರನ ಮನೋಗತವನ್ನರಿತ (ಭೂಪತಿಯ ಚಿತ್ತವನು ತಿಳಿದಿರ್ದ) ಇಬ್ಬರು ರಾಣಿಯರಾದ ಕೌಸಲ್ಯೆ, ಕೈಕೇಯಿಯರು ತಮ್ಮ ಪಾಲಿಗೆ ಬಂದ ಆ ದಿವ್ಯಪಾಯಸದ ಸಮಭಾಗವನ್ನು (ಅರ್ಧಭಾಗವನ್ನು) ಪ್ರೀತಿಯಿಂದ ಸುಮಿತ್ರೆಗೆ ಹಂಚಿಕೊಟ್ಟರು. ಅವರು ಸಂತೋಷದಿಂದ ಒಲಿದು ಕೊಟ್ಟರು, ಆಕೆಗೂ ಪುತ್ರೋತ್ಪತ್ತಿಯಾಗುವಂತೆ.

ಬಹುಜ್ಞಸ್ಯ = ಸರ್ವಜ್ಞಸ್ಯ — ಪತ್ಯುರ್ಮಹೀಕ್ಷಿತಃ = ಕ್ಷಿತೀಶ್ವರಸ್ಯ — ಚಿತ್ತಜ್ಞೇ = ಅಭಿಪ್ರಾಯಜ್ಞೇ ॥

**57.** **ಸಾ ಹಿ ಪ್ರಣಯವತ್ಯಾಸೀತ್ ಸಪತ್ನ್ಯೋರುಭಯೋರಪಿ ।**
**ಭ್ರಮರೀವಾರಣಸ್ಯೇವ ಮದನಿಸ್ಯಂದರೇಖಯೋಃ ॥ ೫೭ ॥**

ಸುಮಿತ್ರಾದೇವಿಯು ತನ್ನ ಅರಸನ ಇಬ್ಬರು ಸವತಿಯರಾದ ಕೌಸಲ್ಯಾ, ಕೈಕೇಯಿಯರೊಂದಿಗೆ ಏಕಭಾವನೆಯಿಂದ ಇದ್ದಳು. ಕಪ್ಪಾದ ಬಣ್ಣದಿಂದ ಹೊಳೆಯುತ್ತಿರುವ ಹೆಣ್ಣು ಜೇನ್ನೊಣವು ಮದಗಜದ ಎರಡು ಕಪೋಲಗಳಲ್ಲಿ ಒಸರುತ್ತಿರುವ ಮದಜಲಧಾರೆಯನ್ನು ಸಮಾನವಾದ ಪ್ರೇಮಕಾಮನೆಯಿಂದ ಸ್ವೀಕರಿಸುವಂತೆ ಅಕ್ಕರೆಯಿಂದ, ಕೂರ್ಮೆಯಿಂದ ಅವರೊಡನೆ ನಡೆದುಕೊಳ್ಳುತ್ತಿರ್ದಳು. ತನ್ನ ಸವತಿಯರನ್ನು ಒಲುಮೆಯಿಂದಲೇ ಕಾಣುತ್ತಿದ್ದಳು. ಅವಳಲ್ಲಿ ಅವರ ಬಗ್ಗೆ ಯಾವ ವಿಧವಾದ ದ್ವೇಷವಾಗಲೀ, ತಾತ್ಸಾರ ಭಾವನೆಯಾಗಲಿ ಇರಲಿಲ್ಲ. ಆ ಮೂವರು ರಾಣಿಯರು ಐಕಮತ್ಯದಿಂದ ತ್ರಿಮೂರ್ತಿಗಳಂತೆ ಇರುತ್ತಿದ್ದರು.

ಸಮಾಸ ಏಕಃ ಪತಿರ್ಯಯೋಸ್ತಯೋಃ = ಸಪತ್ನ್ಯೋಃ — ಭ್ರಮರೀ = ಭೃಂಗಾಂಗನಾ—ವಾರಣಸ್ಯ = ಗಜಸ್ಯ—ಮದನಿಸ್ಯಂದರೇಖಯೋರಿವ = ಗಂಡದ್ವಯಂ ಗತಯೋರಿತಿ ಭಾವಃ—ಪ್ರಣಯವತೀ = ಪ್ರೇಮವತ್ಯಾಸೀತ್ ॥

**58. ತಾಭಿರ್ಗರ್ಭಃಪ್ರಜಾಭೂತ್ಯೈ ದಧ್ರೇ ದೇವಾಂಶಸಂಭವಃ ।**
**ಸೌರೀಭಿರಿವ ನಾಡೀಭಿಃ ಅಮೃತಾಖ್ಯಾಭಿರಮ್ಮಯಃ ॥ ೫೮ ॥**

ಲೋಕಹಿತಕ್ಕಾಗಿ. ಸಮಾಜದ ಅಭ್ಯುದಯಕ್ಕಾಗಿ ಆ ಮೂವರು ರಾಣಿಯರು ದೇವಾಂಶಸಂಜನಿತ ಗರ್ಭಾಂಕುರವನ್ನು ತಳೆದರು. ಅವರು ಮೂವರೂ ಗರ್ಭವತಿಯ ರಾದರು. ಹೇಗೆ ಸೂರ್ಯನ ಕಿರಣವು ಸಾಗರದ ಜಲದ ಮೇಲೆ ಬಿದ್ದು, ಅದು ಆವಿ ಯಾದಬಳಿಕ ಅಮೃತರೂಪವಾದ ಜಲಗರ್ಭವನ್ನು ಮೇಘವು ಅಥವಾ ಮೋಡವು ಧರಿಸುವಂತೆ ಅವರು ತಮ್ಮ ಹೊಟ್ಟೆಯಲ್ಲಿ ತೇಜೋಮಯವಾದ ಗರ್ಭವನ್ನಾಂತು ಹೆಚ್ಚಿನ ಶೋಭೆಯಿಂದ ಶೋಭಿಸಿದರು. ಮುಂದೆ ಮೋಡವು (ಆ ಮೇಘಮಾಲೆಯು) ಅಮೃತದಂತಹ ಮಳೆಯನ್ನು ಸುರಿಸಿ ಸೃಷ್ಟಿಯನ್ನು ಪುಷ್ಟಿ(ತುಷ್ಟಿ)ಗೊಳಿಸುವುದು. ಮಳೆಯ ಆಗಮನದಿಂದ ಎಲ್ಲವೂ (ಇಳೆಯು) ಅಮೃತವಾಗುವುದು (ಜೇನು ಸುರಿವ, ಹಾಲು ಹರಿವ ದಿವ್ಯ ಭೂಮಿಯಾಗುವುದು ಎಂಬಂತೆ).

ದೇವಸ್ಯ ವಿಷ್ಣೋರಂಶಃ ಸಂಭವಃ ಕಾರಣಂ ಯಸ್ಯ ಸ ಗರ್ಭಃ—ಸೂರ್ಯಸ್ಯೇಮಾಃ ಸೌರ್ಯಃ, ತಾಭಿಃ ಸೌರಿಭಿಃ । ಸೂರ್ಯರಶ್ಮಿಷು ಅಮೃತಾ ಇತ್ಯಾಖ್ಯಾಯಾ ಸಾಂ ತಾಭಿಃ—ಜಲವಹನಸಾಮ್ಯಾನ್ನಾಡೀಭಿರಿವ—ಅಪಾಂ ವಿಕಾರೋಽಮ್ಮಯೋ ಜಲಮಯೋ ಗರ್ಭ ಇವ—ದಧ್ರೇ=ಧೃತಃ—ಗರ್ಭಾದಧಿರ್ ಇತ್ಯರ್ಥಃ—ಸೂರ್ಯ=ಸೌರ (ಪಾಣಿನಿ).

**59. ಸಮಮಾಪನ್ನಸತ್ತ್ವಾಸ್ತೇ ರೇಜುರಾಪಾಂಡುರತ್ವಿಷಃ ।**
**ಅಂತರ್ಗತಫಲಾರಂಭಾಃ ಸಸ್ಯಾನಾಮಿವ ಸಂಪದಃ ॥ ೫೯ ॥**

ತಲೆದೋರಲಿರುವ ಫಲಗಳನ್ನು, ಸಸ್ಯಸಂಪತ್ತುಗಳನ್ನು, ಹೂಹಣ್ಣುಕಾಯಿಗಳನ್ನು, ತಮ್ಮೊಳಗೆ, ತಮ್ಮ ಅಂತರಂಗದಲ್ಲಿ ತಳೆದು ರಾರಾಜಿಸುವ ಸಸ್ಯಗಳಂತೆ ಆ ಮೂವರು ರಾಣಿಯರು ಗರ್ಭವತಿಯರಾಗಿ ಮೆರೆದರು. ಗರ್ಭಧರಿಸಿದ ಆ ಕಾಲದಲ್ಲಿ ಆ ಮೂವರು ಅರಸಿಯರು ಸ್ವಲ್ಪ ಬೆಳಚಿದಂತೆ, ಬೆಳ್ಳೊಗರ ಕಾಂತಿಯಿಂದ (ಬೆಳ್ಳೊಗರನ್ನಾಂತು) ಪಾಂಡುವರ್ಣದಿಂದ (ಬಿಳಿಯ ಬಣ್ಣದಿಂದ) ತೇಜೋವಿರಾಜಿತರಾಗಿ ಎಸೆದರು.

ಆಪನ್ನಸತ್ತ್ವಾ=ಗರ್ಭಿಣ್ಯಃ—ಆಪಾಂಡುರತ್ವಿಷಃ=ಈಷತ್ಪಾಂಡುರವರ್ಣಾ ಸ್ತಾಃರಾಜ ಪತ್ನ್ಯಃ—ಅಂತರ್ಗತಾ =ಗುಪ್ತಾಃ—ಫಲಾರಂಭಾ=ಫಲಾಪ್ರಾದುರ್ಭಾವಾಯಾಸಾಂತಾಃ ॥

**60. ಗುಪ್ತಂ ದದೃಶುರಾತ್ಮಾನಂ ಸರ್ವಾಃ ಸ್ವಪ್ನೇಷು ವಾಮನೈಃ ।**
**ಜಲಜಾಸಿಗದಾಶಾರ್ಙ್ಗಚಕ್ರಲಾಂಛಿತಮೂರ್ತಿಭಿಃ ॥ ೬೦ ॥**

ಆ ಮೂವರು ಪಟ್ಟದ ರಾಣಿಯರು ಸ್ವಪ್ನಗಳಲ್ಲಿ, ಪರಮಾತ್ಮನ ಲಾಂಛನಗಳಾದ ನಂದಕವೆಂಬ ಖಡ್ಗ, ಪಾಂಚಜನ್ಯವೆಂಬ ಶಂಖ, ಕೌಮೋದಕಿ ಗದೆ, ಶಾರ್ಙ್ಗಧನುಸ್ಸು,

ಸುದರ್ಶನಚಕ್ರವೇ ಮೊದಲಾದ ದೇವದೇವನಾದ ಮಹಾವಿಷ್ಣುವಿನ ಆಯುಧಗಳನ್ನು ಕಂಡರು. ಆ ಪ್ರಕಾಶಮಾನವಾದ ದಿವ್ಯಾಯುಧಗಳನ್ನು ವಾಮನರೂಪಧಾರಿಗಳು (ಕುಳ್ಳರು, ಕುಬ್ಜರು) ಧರಿಸಿ ತಮ್ಮನ್ನು ಚೆನ್ನಾಗಿ ರಕ್ಷಿಸುತ್ತಿರುವುದನ್ನು ಕಂಡು ಧನ್ಯರಾದರು (ಪೊಂಪುಳಿಹೋದರು) (ಅಸಿಚಕ್ರಶಾರ್ಙ್ಗಗದೆಶಂಖಂಗಳಂ ಪಿಡಿದ ವಾಮನರು ಬಂದು).

ಜಲಜಃ = ಶಂಖಃ ||

61. ಹೇಮಪಕ್ಷಪ್ರಭಾಜಾಲಂ ಗಗನೇ ಚ ವಿತನ್ವತಾ |
ಉಹ್ಯಂತೇ ಸ್ಮ ಸುಪರ್ಣೇನ ವೇಗಾಕೃಷ್ಟಪಯೋಮುಚಾ || ೬೧ ||

ಆ ಮುನಿವರರು ಪಟ್ಟದರಸಿಯರಿಗೆ ಗರುಡನು ತಮ್ಮನ್ನು ಆಕಾಶಮಾರ್ಗದಲ್ಲಿ ಒಯ್ದಂತೆ ಕನಸಾದುದು. ಚಿನ್ನದ ಬಣ್ಣದ ವಿಸ್ತಾರವಾದ (ಹೊಂಗರಿಯ ಕದಿರೋಳಿಯುನು ಕೆದರಿ) ವಿಸ್ತಾರವಾದ ಹೇಮವರ್ಣದ ರೆಕ್ಕೆಗಳನ್ನು ಬಿಡಿಸಿ ಅವರನ್ನು ತನ್ನ ಬೆನ್ನ ಮೇಲೆ ಕುಳ್ಳಿರಿಸಿ ಅಭ್ರಮಾರ್ಗದಲ್ಲಿ ರಭಸದಿಂದ ತಮ್ಮನ್ನು ಒಯ್ದಂತೆ ಅವರಿಗೆ ಕನಸಾಯಿತು. ಆ ವಿನತಾಪುತ್ರನಾದ (ಪಕ್ಷಿರಾಜ) ಸುಪರ್ಣನು ಮಹಾವೇಗದಿಂದ ಚಲಿಸುತ್ತಿರಲು ಮೇಘಗಳನ್ನು (ಮೋಡಗಳನ್ನು) ತನ್ನ ಮುಂದೆ ಅಟ್ಟುತ್ತ ಬಾನಮಾರ್ಗದಲ್ಲಿ ಚಲಿಸುತ್ತ ಒಯ್ಯುತ್ತಿದ್ದನು.

ಹೇಮ್ನಃ = ಸುವರ್ಣಸ್ಯ—ಪ್ರಭಾಜಾಲಂ = ಕಾಂತಿಪುಂಜಂ—ವಿತನ್ವತಾ = ವಿಸ್ತಾರಯತಾಂ—ಸುಪರ್ಣೇನ = ಗರುತ್ಮತಾ, ಗರುಡೇನ—ಗಗನೇ ತಾ ಉಹ್ಯಂತೇಸ್ಮೋಢಾ ||

62. ಬಿಭ್ರತ್ಯಾ ಕೌಸ್ತುಭನ್ಯಾಸಂ ಸ್ತನಾಂತರವಿಲಂಬಿನಮ್ |
ಪರ್ಯುಪಾಸ್ಯಂತ ಲಕ್ಷ್ಮ್ಯಾ ಚ ಪದ್ಮವ್ಯಜನಹಸ್ತಯಾ || ೬೨ ||

ಅಂದು ಅವರಿಗೆ ಇನ್ನೊಂದು ಕನಸು ಬಿತ್ತು. ಅವರು ತಾವರೆಹೂವಿನ ಬೀಸಣಿಗೆಯನ್ನು ಕೈಯಲ್ಲಿ ಧರಿಸಿ ಬೀಸುತ್ತ ನಿಂತಿರುವ ಮಹಾಲಕ್ಷ್ಮಿಯನ್ನು ಕಂಡರು (ಸಿರಿ ಬಂದು ಕರದೆ ತಾವರೆ ಪಿಡಿದು). ಆ ಶ್ರೀದೇವಿಯು ತನ್ನ ಕೊರಳಿನಲ್ಲಿ ಕೌಸ್ತುಭವಜ್ರವನ್ನು ಧರಿಸಿದ್ದಳು. ಅದನ್ನು ಶ್ರೀಮಹಾವಿಷ್ಣುವೇ ಮಹಾಲಕ್ಷ್ಮಿಯ ಕೊರಳಿಗೆ ತೊಡಿಸಿದ್ದನು. ಆ ಪದ್ಮನಾಭನ ರಾಣಿಯಾದ, ವಿಶ್ವಕಲ್ಯಾಣಿಯಾದ ಸಿರಿದೇವಿಯು, ಥಳಗುಟ್ಟುಗಿಸುವ ಕೌಸ್ತುಭನ್ಯಾಸವನ್ನು ತನ್ನ ವಕ್ಷಃಸ್ಥಲದಲ್ಲಿ ತಳೆದು ಅವರನ್ನು ಉಪಾಸಿಸುವಂತೆ ಕಂಡರು.

ವಿಲಂಬಿನ = ಲಂಬಮಾನಮ್—ನ್ಯಸ್ಯತ ಇತಿ ನ್ಯಾಸಃ—ಬಿಭ್ರತ್ಯಾ ಪದ್ಮಮೇವ ವ್ಯಜನಂ ಹಸ್ತೇ ಯಸ್ಯಾಸ್ತಯಾ ||

63. ಕೃತಾಭಿಷೇಕೈರ್ದಿವ್ಯಾಯಾಂ ತ್ರಿಸ್ರೋತಸಿ ಚ ಸಪ್ತಭಿಃ |
ಬ್ರಹ್ಮರ್ಷಿಭಿಃ ಪರಂಬ್ರಹ್ಮ ಗೃಣದ್ಭಿರುಪತಸ್ಥಿರೇ || ೬೩ ||

ಅಲ್ಲಿ ಅವರು ಏಳುಮಂದಿ ಬ್ರಹ್ಮಋಷಿಗಳನ್ನು ಕಂಡರು. ಆ ಏಳು ಮಂದಿ ಸಪ್ತಋಷಿಗಳು ಆಕಾಶಗಾಮಿಯಾದ ದೇವಗಂಗಾನದಿಯಲ್ಲಿ ಮಿಂದು ವೇದರಹಸ್ಯವನ್ನು ಸಾರು

ತ್ರಿರುವ ವೇದಮಂತ್ರವನ್ನು ಪಠಿಸುತ್ತ ತಮ್ಮನ್ನು ಅರ್ಚಿಸುವಂತೆ ಕಂಡರು (ಬಾಂದೊರೆ ಯಹನೀರಿನಿಂದು).

ಕಿಂಚ, ದಿವಿ ಭವಾಯಾಂ ದಿವ್ಯಾಯಾಂ—ತ್ರಿಸ್ರೋತಸ್ಯಾ = ಆಕಾಶಗಂಗಾಯಾಂ——ಕೃತಾಭಿಷೇಕೈಃ = ಕೃತಾವಗಾಹೈಃ—ಪರಂಬ್ರಹ್ಮ = ವೇದರಹಸ್ಯಂ—ಗೃಣದ್ಭಿಃ— = ವದದ್ಭಿಃ—ರುಪತಸ್ಥಿರ = ಉಪಾಸಾಂಚಕ್ರಿರೇ = ಉಪ + ಸ್ಥಾ (ಆತ್ಮನೇಪದ) = ಪೂಜಿಸು, ಅರ್ಚಿಸು, ಪ್ರಾರ್ಥಿಸು—ಏಳು ಮಂದಿ ಬ್ರಹ್ಮಋಷಿಗಳು : ಕಶ್ಯಪ, ಮರೀಚಿ, ಅಂಗೀರಸ, ಅತ್ರಿ, ಪುಲಹ, ಕ್ರತು, ವಸಿಷ್ಠ. ಕೆಲವು ಸಲ ಕಶ್ಯಪ, ಅತ್ರಿ, ಭಾರದ್ವಾಜ, ವಿಶ್ವಾಮಿತ್ರ, ಗೌತಮ, ಜಮದಗ್ನಿ, ವಸಿಷ್ಠರು. ಈ ಏಳು ಮಂದಿ ಸಪ್ತಋಷಿಗಳು ಕೂಡ. ಬ್ರಹ್ಮಋಷಿ = ಬ್ರಹ್ಮನ ಗುಣವನ್ನು ಪಡೆದ ಮಹಾತ್ಮರು.

**64. ತಾಭ್ಯಃ ತಥಾ ವಿಧಾನ್ ಸ್ವಪ್ನಾನ್ ಶ್ರುತ್ವಾ ಪ್ರೀತೋ ಹಿ ಪಾರ್ಥಿವಃ ।**
**ಮೇನೇ ಪರಾರ್ಧ್ಯಮಾತ್ಮಾನಂ ಗುರುತ್ವೇನ ಜಗದ್ಗುರೋಃ ॥ ೬೪ ॥**

ಈ ಬಗೆಯ ಕನಸುಗಳನ್ನು ತನ್ನ ರಮಣಿಯರಿಂದ ಆ ಪಾರ್ಥಿವಾಗ್ರಣಿಯು ಕೇಳಿ ನಲಿದನು. ಜಗದ ವಿಭುವು, ಜಗದಾತ್ಮನು, ಜಗದ ಆದಿಗುರುವು, ಸರ್ವಜ್ಞನು ಆದ ಮಹಾವಿಷ್ಣುವಿನ ತಂದೆಯಾಗುವ ನಿಜಮಹೋನ್ನತಿಕೆಯ (ಸರ್ವೋತ್ಕೃಷ್ಟವಾದ) ಭಾಗ್ಯ ಸಂಪದವನ್ನು ನೆನೆದು ತಾನು ಧನ್ಯನಾದೆನೆಂದು ಭಾವಿಸಿ ಪೊಂಪುಳಿಹೋದನು. ತನ್ನನ್ನು ತಾನು ಮರೆತನು (ನಿಜಮಹೋನ್ನತಿಪಡೆದೆನೆಂದು).

ಪಾರ್ಥಿವೋ = ದಶರಥಃ—ತಾಭ್ಯಃ = ಪತ್ನೀಭ್ಯಃ—ತಥಾ ವಿಧಾನ್ = ಉಕ್ತ ಪ್ರಕಾರಾನ್ ಸ್ವಪ್ನಾಶ್ರುತ್ವಾ ಪ್ರೀತಃ—ಆತ್ಮಾನಂ ಜಗದ್ಗುರೋಃ = ವಿಷ್ಣೋರಪಿ—ಗುರುತ್ವೇನ = ಪಿತೃತ್ವೇನ ಹೇತುನಾ—ಪರಾರ್ಧ್ಯಮ್ = ಸರ್ವೋತ್ಕೃಷ್ಟಂ ಮೇನೇಹಿ ॥

**65. ವಿಭಕ್ತಾತ್ಮಾ ವಿಭುಸ್ತಾಸಾಂ ಏಕಃ ಕುಕ್ಷಿಷ್ವನೇಕಧಾ ।**
**ಉವಾಸ ಪ್ರತಿಮಾಚಂದ್ರಃ ಪ್ರಸನ್ನಾನಾಮಪಾಮಿವ ॥ ೬೫ ॥**

ವಿಶ್ವನಿಯಾಮಕನಾದ, ಸರ್ವಾಂತರ್ಯಾಮಿಯಾದ, ಏಕಮಾತ್ರನಾದ (ಒಬ್ಬನೇ ಒಬ್ಬನಾದ) ಪರಮಾತ್ಮನು ಅವರ ಬಸಿರಲ್ಲಿ ಬೇರೆಬೇರೆ ರೂಪಗಳಿಂದ ಜನಿಸಲಿರುವನು. ಪ್ರತಿಮಾಚಂದ್ರನು ಅಥವಾ ಚಂದ್ರಪ್ರತಿಬಿಂಬವು ನಿರ್ಮಲವಾದ ಜಲದಲ್ಲಿ (ತಿಳಿನೀರ ಸಲಿಲದಲ್ಲಿ, ನೀರಿನಲ್ಲಿ) ಅನೇಕ ಬಿಂಬಗಳಾಗಿ, ಪ್ರತಿಬಿಂಬಿಸುವಂತೆ, ಏಕರೂಪನಾದ ಭಗವಂತನಾಗಿ ಬೇರೆಬೇರೆ ರೂಪುಗಳಿಂದ ಅವರ ಕುಕ್ಷಿಗಳಲ್ಲಿ (ಹೊಟ್ಟೆಯಲ್ಲಿ) ಕಂಗೊಳಿಸಿದನು (ಹೊಳೆದನು) (ಮಾರ್ಪೊಳೆವ ಚಂದಿರನ ಬಿಂಬದವೊಲಂತು).

ಏಕ = ಏಕರೂಪೋ—ವಿಭು = ವಿಷ್ಣು—ಕುಕ್ಷಿಷು = ಗರ್ಭೇಷು—ಪ್ರಸನ್ನಾನಾಂ = ನಿರ್ಮಲಾನಾಮ್—ಅಪಾಂ = ಕುಕ್ಷಿಷು—ಪ್ರತಿಮಾಚಂದ್ರಃ = ಪ್ರತಿಬಿಂಬಚಂದ್ರ ಇವ—ಅನೇಕಧಾ ವಿಭಕ್ತಾತ್ಮಾ = ಅನೇಕರೂಪಾಯ—ಅನೇಕರೂಪಧರನಾಗಿ ಅನೇಕರೂಪ ವಿಗ್ರಹನಾಗಿ—

**66. ಅಥಾಗ್ರ್ಯಮಹಿಷೀ ರಾಜ್ಞಃ ಪ್ರಸೂತಿಸಮಯೇ ಸತೀ ।**
**ಪುತ್ರಂ ತಮೋಪಹಂ ಲೇಭೇ ನಕ್ತಂ ಜ್ಯೋತಿರಿವೌಷಧಿಃ ॥ ೬೬ ॥**

ಇದೀಗ ದಶರಥನ ಪಟ್ಟಮಹಿಷಿ, ಪತಿಹಿತಗುಣಸಂಪನ್ನೆ ಕೌಸಲ್ಯಾದೇವಿಗೆ ಪ್ರಸೂತಿ ಸಮಯವು ಪ್ರಾಪ್ತವಾಯಿತು. ಅವಳು ಓರ್ವ ಪುತ್ರರತ್ನನನ್ನು ಹೆತ್ತಳು. ಸಕಲದುಃಖವನ್ನು ದೂರಮಾಡುವ, ಕತ್ತಲೆಯನ್ನು ಅಡಗಿಸುವ ಜ್ಯೋತಿರ್ಲತೆಯಂತೆ (ರಾತ್ರಿಕಾಲದಲ್ಲಿ ಬೆಳಕು ಬೀರುವ ಔಷಧಿಯ ಗಿಡದಂತೆ) ಇರುವ ಕುಮಾರನನ್ನು ಆ ಮಹಿಳೆ ಪ್ರಸವಿಸಿದಳು. ಮಹೌಷಧಿಯು ಗಿಡವು ಜ್ಯೋತಿಯನ್ನು ಪಡೆವಂತೆ ವಂಶಕ್ಕೆ ಪ್ರದೀಪನಾದ ಸುಪುತ್ರನನ್ನು ಆ ಕಾಂತೆ ಪಡೆದಳು (ಕತ್ತಲೆಯನಡಗಿಸುವ ಜ್ಯೋತಿಯನು ನಿಶೆಯೊಳು).

ಸತೀ = ಪತಿವ್ರತಾ—ಮಹಿಷೀ = ಅಗ್ರಮಹಿಷೀ—ಪ್ರಸೂತಿಸಮಯೇ = ಪ್ರಸೂತಿಕಾಲೇ—ಓಷಧಿರ್ನಕ್ತಂ = ರಾತ್ರಿಸಮಯೇ ತಮೋಪಹನ್ತೀತಿ = ತಮೋಪಹಮ್ = ತಮೋನಾಶಂ—ಲೇಭೇ = ಪ್ರಾಪ ॥

**67. ರಾಮ ಇತ್ಯಭಿರಾಮೇಣ ವಪುಷಾ ತಸ್ಯ ಚೋದಿತಃ ।**
**ನಾಮಧೇಯಂ ಗುರುಶ್ಚಕ್ರೇ ಜಗತ್ಪ್ರಥಮಮಂಗಲಮ್ ॥ ೬೭ ॥**

ತನ್ನ ಸೌಂದರ್ಯಸಾರದಿಂದ ಎಲ್ಲರ ಮನಸ್ಸನ್ನು ತಣಿಸುವ, ಮುದ್ದುಮೊಗದ ಕುಮಾರನಿಗೆ ಆ ತಂದೆ ಜಗತ್ತಿಗೆ ಅತ್ಯಂತ ಪ್ರಿಯವಾದ ಪವಿತ್ರವಾದ "ರಾಮ"ನೆಂಬ ಹೆಸರನ್ನಿಟ್ಟು ಕರೆದನು. ರಾಮನಾಮವು ಮನೋಹರನಾದ ಜಗದಾದಿಮಂಗಳ ನಾಮಸ್ತೋಮವು. ಆ ಹೆಸರು ಪ್ರಪಂಚಕ್ಕೆ ಮೊದಲನೆಯದಾದ (ಪ್ರಥಮ) ಮಂಗಳನಾಮವು. ಆ ಹೆಸರಿನಗೂಢಾರ್ಥವು ಇಂತಿರುವುದು. ರಾಮನಾಮ ಶಬ್ದವು ಪ್ರಕೃತಿಯು ಪ್ರವೃತ್ತಿಯು ನಿಮಿತ್ತವಿರುವುದು. ಶ್ರೀರಾಮ = ಪರಮಪುರುಷ = ಪರಮಾತ್ಮ = ಅಂತರಾತ್ಮ = ಚಿದಾನಂದ, ಸದಾನಂದ=ಸಚ್ಚಿದಾನಂದಮೂರ್ತಿ=ಆತ್ಮಾರಾಮ (ಸತ್ ಚಿತ್ ಆನಂದ) (ರಾಮನೆಂದಾ ಜಗತ್ ಪ್ರಥಮ ಮಂಗಲನಾಮ ಧೇಯಮನು ನೆನೆಮ).

ರಾಮ ಇತಿ = ಅಭಿರಮಂತೇಽತ್ರೇತ್ಯಭಿರಾಮಃ = ಮನೋಹರಮ್ = ಅಭಿರಾಮತ್ವಮೇವ ರಾಮಶಬ್ದಪ್ರವೃತ್ತಿನಿಮಿತ್ತಮಿತ್ಯರ್ಥಃ—ಅಭಿರಾಮೇಣ = ಅಭಿರಮತೇ ಅತ್ರ ಇತಿ—ಜಗತ್ ಪ್ರಥಮಮಂಗಲಂ ॥

**68. ರಘುವಂಶಪ್ರದೀಪೇನ ತೇನಾಪ್ರತಿಮ ತೇಜಸಾ ।**
**ರಕ್ಷಾಗೃಹಗತಾಃ ದೀಪಾ ಪ್ರತ್ಯಾದಿಷ್ಟಾ ಇವಾಭವನ್ ॥ ೬೮ ॥**

ವೀರರ ಧೀರರ ಸಂಗ್ರಾಮಶೂರರ ವೀರರಘುವಂಶವನ್ನು ಬೆಳಗುವ ರಘುವಂಶಪ್ರದೀಪನಾದ ಅಪ್ರತಿಮ ತೇಜೋವಂತನಾದ ಶ್ರೀರಾಮಚಂದ್ರನ ಜನನದಿಂದ ಹೆರಿಗೆಮನೆ ದೀಪಗಳು ಮಂಕಾದ ತೆರದಲ್ಲಿ ಪ್ರಕಾಶಿಸಿದುವು. ಆ ಸೂತಿಕಾಗೃಹದಲ್ಲಿ ದೀಪಗಳು ಮಿಣಮಿಣನೆ ಮಿನುಗುತ್ತಿದ್ದುವು. (ಮಿಣಮಿಣನೆ ಮಿನುಗಿದುವು ಹೆರಿಗೆಮನೆ ದೀಪಗಳು). ರಘುವಂಶಪ್ರದೀಪನ ಅಪ್ರತಿಮತೇಜನ ತೇಜಸ್ಸಿನಿಂದ ಅವು ಮಂಕಾಗಿ, ಮಸುಕಾಗಿ, ಮುಪ್ಪಾಗಿ, ಬೆಳಗಿದುವು—ಮಹಾದೀಪದ ಮುಂದೆ ಸಣ್ಣಸಣ್ಣ ದೀಪಗಳು ಅಲ್ಪಪ್ರಕಾಶಗಳಿಂದ ಬೆಳಗುವಂತೆ.

ಪ್ರದೀಪೇನ = ಪ್ರಕಾಶಕೇನ—ರಕ್ಷಾಗೃಹಗತಾಃ = ಸೂತಿಕಾಗೃಹಗತಾ—ಪ್ರತ್ಯಾ

ದಿಷ್ಟಾಃ = ಪ್ರತಿಬದ್ಧಾ—ಮಹಾದೀಪಸಮೀಪೇನಾಲ್ಪಾಃ ಸ್ಫುರಂತೀತಿ ಭಾವಃ—ರಕ್ಷಾಗೃಹಃ = ಸೂತಿಕಾಗೃಹಃ ॥

**69. ಶಯ್ಯಾಗತೇನ ರಾಮೇಣ ಮಾತಾ ಶಾತೋದರೀ ಬಭೌ ।**
**ಸೈಕತಾಂಭೋಜಬಲಿನಾ ಜಾಹ್ನವೀವ ಶರತ್ಕೃಶಾ ॥ ೬೯ ॥**

ಆ ಶಾತೋದರಿಯು ತನ್ನ ಶಯನದಲ್ಲಿ ಹೀಗೆ ಶ್ರೀರಾಮಚಂದ್ರನೆಂಬ ಕೂಸನ್ನು ಪಡೆದು ಪರಿಶೋಭಿಸುತ್ತಿದ್ದಳು. ತೆಳ್ಳನೆಯ ಹೊಟ್ಟೆಯ (ತಳೋದರಿ) (ತೆಳ್ಳನೆಯ ಹೊಟ್ಟೆಯುಳ್ಳ) ಕಳಗ್ಗಿದ ಶರೀರವುಳ್ಳ ಕೌಸಲ್ಯೆಯು ತನ್ನ ಶಿಶುವಿನೊಂದಿಗೆ ಸೂತಿಕಾಗೃಹದ ತೆಳುವಾದ ಹಾಸಿಗೆಯಲ್ಲಿ ಶರದೃತುವಿನ ಕಾಲದಲ್ಲಿ ಸ್ವಲ್ಪವೇ ನೀರಿದ್ದು ಮರಳ ರಾಶಿಯಲ್ಲಿ ಮುಗ್ಗುಲಲ್ಲಿ ತಾವರೆಹೂಗಳಿಂದ ಕಂಗೊಳಿಸುತ್ತಿರುವ ದೇವಗಂಗಾನದಿಯಂತೆ, ಆ ಮಾತೆ ಕಾಣಿಸುತ್ತಿದ್ದಳು. ಆ ತಾಯಿ ತನ್ನ ಮಗನೊಂದಿಗೆ (ನದೀತೀರದಲ್ಲಿ, ಮರಳು) (ಪುಳಿನದೆಡೆಯುಬ್ಬಿದಿಂದೆಸೆಯುವ).

ಶಾತೋದರೀ=ಗರ್ಭಮೋಚನಾತ್ ಕೃಶೋದರಿ–ಮಾತಾಶಯ್ಯಾಗತೇನ=ರಾಮೇಣ—ಸೈಕತೇ = ಪುಲಿನೇ—ಯೋಽಮ್ಭೋಜಬಲಿಃ = ಪದ್ಮೋಪಹಾರಸ್ತೇನ—ಜಾಹ್ನವೀ ಗಂಗೇವ—ಪ್ರಬೋಧ = ತತ್ತ್ವಜ್ಞಾನ—ವಿನಯಂ = ಇಂದ್ರಿಯಜಯಂ ॥

**70. ಕೈಕೇಯ್ಯಾಸ್ತನಯೋ ಜಜ್ಞೇ ಭರತೋ ನಾಮ ಶೀಲವಾನ್ ।**
**ಜನಯಿತ್ರೀಮಲಂ ಚಕ್ರೇ ಯಃ ಪ್ರಶ್ರಯ ಇವ ಶ್ರಿಯಮ್ ॥ ೭೦ ॥**

ಕೈಕೆಯ ಮಡಿಲಲ್ಲಿ ಭರತನೆಂಬ ಶಿಶುವು ಸ್ತನ್ಯಪಾನ ಮಾಡುತ್ತಾ ಮಲಗಿತ್ತು. ಭರತನು ಮಹಾಶೀಲವಂತನಾದ ಕುಮಾರನು. ವಿನಯವು ಐಶ್ವರ್ಯದೊಂದಿಗೆ (ಸಿರಿಯೊಂದಿಗೆ) ಮಿಳಿತವಾಗಿರುವಂತೆ ಭರತನು ತಾಯಿಯ ಮಡಿಲನ್ನು ಚಂದಗೊಳಿಸಿದನು (ವಿನಯವೆಂತು ಸಿರಿಯೆನಿಂತವನು).

ಪ್ರಶ್ರಯೋ = ವಿನಯಃ—ಜನಯಿತ್ರೀಂ = ಮಾತರ ॥

**71. ಸುತೌ ಲಕ್ಷ್ಮಣಶತ್ರುಘ್ನೌ ಸುಮಿತ್ರಾ ಸುಷುವೇ ಯಮೌ ।**
**ಸಮ್ಯಗಾರಾಧಿತಾ ವಿದ್ಯಾಪ್ರಬೋಧವಿನಯಾವಿವ ॥ ೭೧ ॥**

ಸುಮಿತ್ರಾದೇವಿಯು ಲಕ್ಷ್ಮಣ, ಶತ್ರುಘ್ನರೆಂಬ ಇಬ್ಬರು ಅವಳಿಮಕ್ಕಳನ್ನು ಪಡೆದಳು. ಚೆನ್ನಾಗಿ ಕಲಿತ ಲಲಿತಕಲೆಗಳು, ವಿಜ್ಞಾನ ಮೊದಲಾದ ಶಾಸ್ತ್ರಗಳು (ಸಕಲ ವಿದ್ಯೆಯು) ವಿನಯದಿಂದ ಶೋಭಿಸುವಂತೆ, ಜಗದ ಆರಾಧನೆಗೆ ಯೋಗ್ಯವೆನಿಸುವಂತೆ, ಆ ಮಕ್ಕಳು ಸೂರ್ಯವಂಶಕ್ಕೆ ಭೂಷಣಪ್ರಾಯ(ಕಲಶಪ್ರಾಯ)ರೆನಿಸಿರ್ದರು. (ಚೆನ್ನಾಗಿ ಕಲಿತ ಕಲೆ ಜ್ಞಾನ ವಿನಯಂಗಳನು ಪಡೆದಸೆಯುವಂತೆ).

ಯಮೌ = ಯುಗ್ಮಜಾತೌ—ಸುತೌ = ಪುತ್ರೌ—ಸಮ್ಯಗಾರಾಧಿತಾ = ಸಭ್ಯಸ್ತಾ—ವಿದ್ಯಾಪ್ರಬೋಧವಿನಯೌ = ತತ್ತ್ವಜ್ಞಾನೇಂದ್ರಿಯಜಾತಾವಿವ ॥

**72. ನಿರ್ದೋಷಮಭವತ್ಸರ್ವಂ ಆವಿಷ್ಕೃತ ಗುಣಂ ಜಗತ್ ।**
**ಅನ್ವಗಾದಿವ ಹಿ ಸ್ವರ್ಗೋ ಗಾಂ ಗತಂ ಪುರುಷೋತ್ತಮಮ್ ॥ ೭೨ ॥**

ಪರಮಾತ್ಮನು ಭೂಲೋಕದಲ್ಲಿ ಅವತರಿಸಿದುದರಿಂದ ಭೂಲೋಕವು ದೋಷಮುಕ್ತ ವಾಯಿತು. ದುರ್ಭಿಕ್ಷ, ಕ್ಷಾಮಡಾಮರಗಳು, ಕೆಟ್ಟ ಗುಣಗಳು ಪರಿದೋಡಿದುವು. ಭೂಮಿಯು ವೈಕುಂಠವೆನಿಸಿತು (ಭೂವೈಕುಂಠ). ಭೂಲೋಕವು ಕೈಲಾಸದಂತೆ ಪುಣ್ಯ ಲೋಕವಾಯಿತು(ಗುಣಪರಿಪೂರ್ಣವೆನಿಸಿದುದು ಜಗವೆಲ್ಲ). ಆರೋಗ್ಯ, ಸೌಭಾಗ್ಯಗಳ ನೆಲೆವೀಡಾಯಿತು. ಪುರುಷೋತ್ತಮನಾದ ಶ್ರೀಮಹಾವಿಷ್ಣುವು ಮಾನವರೂಪಿನಿಂದ ಅವತರಿಸಿದುದರಿಂದ ಭೂಮಿ ಸ್ವರ್ಗವೆನಿಸಿತು. (ಭೂಸ್ವರ್ಗ, ಭೂಕೈಲಾಸ) ಸ್ವರ್ಗದಂತೆ ನಿರ್ದೋಷವಾಯಿತು. ದೋಷಮುಕ್ತವಾಯಿತು. ಆಹ್ಲಾದಕರವಾಗಿ ಎಸೆಯಿತು. ಭೂ ಸ್ವರ್ಗವೆನಿಸಿ ರುಜಿಸಿತು. ಪರಮಾತ್ಮನ ಜನನದಿಂದ ದೇವಲೋಕದ ಸಕಲ ಸದ್ಗುಣಗಳು ಭೂಮಿಯಲ್ಲಿ ನೆಲೆಸಿದುವು (ಬಂದಿಗಿಳಿದ ವಿಷ್ಣುವನು ಅನುಸರಿಸಿ).

ಸರ್ವೇ ಜಗತ್ = ಭೂಲೋಕೋ—ನಿರ್ದೋಷಂ = ದುರ್ಭಿಕ್ಷಾದಿ ದೋಷರಹಿತಂ —ಆವಿಷ್ಕೃತಗುಣಂ = ಪ್ರಕಟೀಕೃತಾರೋಗ್ಯಾದಿ ದೋಷರಹಿತವಾ್—ಗಾಂ = ಭುವಂ— ಪುರುಷೋತ್ತಮಂ = ವಿಷ್ಣುಂ—ಸ್ವರ್ಗತುಲ್ಯಮಭೂದಿತ್ಯರ್ಥಃ ॥

**73. ತಸ್ಯೋದಯೇ ಚತುರ್ಮೂರ್ತೇಃ ಪೌಲಸ್ತ್ಯಚಕಿತೇಶ್ವರಾಃ ।**
**ವಿರಜಸ್ಕೈರ್ನಭಸ್ವದ್ಭಿಃ ದಿಶ ಉಚ್ಛ್ವಸಿತಾ ಇವ ॥ ೭೩ ॥**

ರಾಮಾದಿ ನಾಲ್ಕು ತರದ ರೂಪದಿಂದ ಆ ಚತುರ್ಮೂರ್ತಿಯು ಉದಯವಾಯಿತು. (ಆ ಚತುರ್ಮೂರ್ತಿಯೊಗೆದುದು). ಆಗ ರಜೋಹೀನನಾದ ಶುದ್ಧನಾದ ಮಾರುತನು ಬೀಸಿದನು (ಸುಳಿದನು ರಜೋಹೀನ ಮಾರುತನು). ದಿಶಾಸತಿಯರು ದಿಗಂಗನೆಯರು ಒಲಿದು ಉಸಿರಾಡಿ ನಲಿದಾಡಿದರು. ಪೌಲಸ್ತ್ಯಸತಿಯರು ಭೀತವದನೆಯರಾದರು. ಈ ಹಿಂದೆ ಆ ದಿಗಂಗನೆಯರು ದಶಕಂಠನಿಂದ ಭೀತಿವದನೆಯರಾಗಿದ್ದರು. ಇದೀಗ ಪರಿಶುದ್ಧ ವಾದ ವಾಯುವಿನ ಸೇವನೆಯಿಂದ ದಿಶಾಂಗನೆಯರು ಉಲ್ಲಸಿತರಾದರು. (ದಿಶಾಸತಿಯ ರೊಲಿದು ಉಸಿರಾಡಿದಂತೆ). ಅವರ ಮಾನಸಿಕ, ಅಂತರಂಗದ (ಹೃದಯಾಂತರಂಗದ) ಕ್ಲೇಶಗಳು ದೂರವಾಗತೊಡಗಿದುವು. ಪೌಲಸ್ತ್ಯಭೀತಿಯು ಅವರನ್ನು ತಟ್ಟದಾಯಿತು. ಈ ಹಿಂದೆ ಪೌಲಸ್ತ್ಯನ ಭೀತಿಯಿಂದ ವಾಯುವು ಭೀತನಾಗಿಯೇ ಹೆದರಿ, ಹೆದರಿ (ಅಳುಕಿ) ಬೀಸುತ್ತಿದ್ದನು.

ಚತುರ್ಮೂರ್ತೇಃ = ರಾಮಾದಿರೂಪೇಣ ಚತೂರೂಪಸ್ಯ—ಈಶ್ವರಾನಾಥಾ ಇಂದ್ರಾ ದಯೋ ಯಾಸಾಂ—ದಿಶಸ್ತಾಸ್ತಸ್ತೋ ವಿರಜಸ್ಕೈರಪಧೂಲಿಭಿ—ಚತುರ್ದಿಗೀಶರಕ್ಷಣ ಮೂರ್ತಿ ॥ ಉತ್ಪ್ರೇಕ್ಷಾಲಂಕಾರ ॥

**74. ಕೃಶಾನುರಪಧೂಮತ್ವಾತ್ ಪ್ರಸನ್ನತ್ವಾತ್ ಪ್ರಭಾಕರಃ ।**
**ರಕ್ಷೋ ವಿಪ್ರಕೃತಾದಾಸ್ತಾಂ ಅಪವಿದ್ಧ ಶುಚಾವಿವ ॥ ೭೪ ॥**

ಕೃಶಾನುವೆನಿಸಿದ ಅಗ್ನಿಯು ರಾಕ್ಷಸನ ಬಾಧೆಗೆ ಒಳಗಾಗಿ ನಲುಗಿಹೋಗಿದ್ದನು. ಇದೀಗ ದನುಜನ ಉಪಟಳದಿಂದ ಮುಕ್ತಿಹೊಂದಿ ನೋವು ನೀಗಿದವರಂತೆ ಪೂರ್ಣತೇಜ ದಿಂದ ಹೊಗೆಯಿಲ್ಲದೆ (ಧೂಮರಹಿತನಾಗಿ) ಉರಿಯತೊಡಗಿದನು. (ನೊಂದ ಭಾಸ್ಕರನು

ಮೋಣಾಕೃಶಾನು). ಅದೇ ತೆರದಲ್ಲಿ ಭಗವಾನ್ ಭಾಸ್ಕರನು ಸೂರ್ಯದೇವನು ದಾನವನ ಬಾಧೆಗೆ (ಪೀಡೆಗೆ) ಒಳಗಾಗಿ ಕಳೆಗುಂದಿದ್ದು ಇದೀಗ (ರಾವಣಬಾಧೆ) ಪುನಶ್ಚೇತನ ಗೊಂಡಂತೆ, ಪ್ರಭಾಕರನು ಸುಪ್ರಸನ್ನನಾಗಿ ಪೂರ್ಣತೇಜದಿಂದ ಬಾನುವಿನಲ್ಲಿ ವಿರಾಜಮಾನನಾಗಿ (ರಾರಾಜಿಸುತ್ತ) ಬೆಳಗತೊಡಗಿದನು (ಭಾಸ್ಕರನು ಮೋಣಾಕೃಶಾನು).

ವಿಪ್ರ ಕೃತಾವಪಕೃತೌ = ಪೀಡಿತಾವಿತ್ಯರ್ಥಃ—ಕೃಶಾನು = ಅಗ್ನಿಃ—ಪ್ರಭಾಕರಃ = ಸೂರ್ಯಶ್ಚ—ಅಪವಿದ್ಧಶಂಚೌ—ನಿರಸ್ತದುಃಖಾವಿವ—ಆಸ್ತಾಂ = ಭಗವತಾವಮ್ ॥

75. ದಶಾನನಕಿರೀಟೇಭ್ಯಃ ತತ್ಕ್ಷಣಂ ರಾಕ್ಷಸಶ್ರಿಯಃ ।
ಮಣಿವ್ಯಾಜೇನ ಪರ್ಯಸ್ತಾಃ ಪೃಥಿವ್ಯಾಮಶ್ರುಬಿಂದವಃ ॥ ೭೫ ॥

ಸಚ್ಚಿದಾನಂದಜ್ಯೋತಿಸ್ವರೂಪನಾದ ಪರಮಾತ್ಮನು ನರನಾಗಿ ಜನಿಸಿದ ಆ ಶುಭ ಗಳಿಗೆಯಲ್ಲಿ ರಾವಣರಾಕ್ಷಸಶ್ರೀಯು (ರಾಜ್ಯಶ್ರೀಯು, ರಾಜ್ಯಲಕ್ಷ್ಮಿ) ಇದ್ದಕ್ಕಿದ್ದಂತೆ ಅಶ್ರುಬಿಂದುವನ್ನು ಸುರಿಸಿದಳು ಎಂಬಂತೆ ರಾವಣೇಶ್ವರನ ಹತ್ತು ತಲೆಗಳನ್ನು ಅಲಂಕರಿಸಿದ್ದ ಮುಕುಟಗಳಿಂದ ಮಣಿರತ್ನಗಳು (ಮುಕುಟಗಳಿಂದ ಆ ಮಣಿತತಿಯು) ನೆಲಕ್ಕುರುಳಿ ಬಿದ್ದುವು (ಉದುರಿದುವು). ಇದು ದಶಕಂಠನಿಗೆ ಮುಂದೊದಗಲಿರುವ ದುರ್ನಿಮಿತ್ತಗಳ ಮುನ್ಸೂಚನೆ (ರಾಕ್ಷಸಶ್ರೀಯು ಅಶ್ರುಬಿಂದು ಇಳಿಗಿಳಿದು) ಹೀಗೆ ದುರ್ನಿಮಿತ್ತಗಳು ಗೋಚರವಾದುವು.

ತತ್ಕ್ಷಣ = ತಸ್ಮಿನ್ ಕ್ಷಣೇ—ದಶಾನನಕಿರೀಟೇಭ್ಯೋ ಮಣೀನಾಂ ವ್ಯಾಜೇನ ಮಿಷೇಣ ಪೃಥಿವ್ಯಾಂ ಪರ್ಯಸ್ತಾಃ ಪತಿತಾಃ—ಕಿರೀಟಮಣಿಭ್ರಂಶಲಕ್ಷಣಂ ದುರ್ನಿಮಿತ್ತಮಭೂದಿತ್ಯರ್ಥಃ ॥

76. ಪುತ್ರಜನ್ಮಪ್ರವೇಶ್ಯಾನಾಂ ತೂರ್ಯಾಣಾಂ ತಸ್ಯ ಪುತ್ರಿಣಃ ।
ಆರಂಭಂ ಪ್ರಥಮಂ ಚಕ್ರುಃ ದೇವದುಂದುಭಯೋ ದಿವಃ ॥ ೭೬ ॥

ಆ ದಶರಥಪುತ್ರರ ಜನನಕಾಲದಲ್ಲಿ ದೇವಲೋಕದಲ್ಲಿ, ಅಂಬರದಲ್ಲಿ, ದಿಗ್‌ದಿಗಂತದಲ್ಲಿ ಸತ್ಯಲೋಕ, ತಪಲೋಕಗಳಲ್ಲಿ ದೇವದುಂದುಭಿಗಳು ಮೊಳಗಿದುವು (ಉತ್ಸವದ ಘೋಷಿಸುತ ತೂರ್ಯಘೋಷವನು). ದಶರಥಪುತ್ರರ ಜನ್ಮದಿನೋತ್ಸವವನ್ನು ಸೂಚಿಸುವ ವಾದ್ಯಘೋಷವು ಮೊದಲು ಸ್ವರ್ಗಲೋಕದಲ್ಲಿ ಅಧಿಕವಾಗಿ ಮೊಳಗಿದುವು. ಮಗುವು (ಶಿಶುವು) ಜನಿಸಿದೊಡನೆಯೇ ಗಂಟೆ, ಜಾಗಟೆ, ತಮಟೆ (ನಗಾರಿಗಳನ್ನು) ಬಾರಿಸುವುದು ಗ್ರಾಮಾಂತರಪ್ರದೇಶದಲ್ಲಿ ವಾಡಿಕೆಯಾಗಿದೆ. ಅಂತೆಯೇ ದಶರಥನ ರಾಜಭವನಗಳಲ್ಲಿ ವಾದ್ಯಘೋಷ, ನಾಕದ (ಸ್ವರ್ಗದ) ಘೋಷವನ್ನು ಅನುಮೋದಿಸಿ ಉದ್ಘೋಷಿಸಿದಂತೆ ಅಮೋಘವಾಗಿ ನಡೆಯಿತು. ಎಲ್ಲೆಲ್ಲೂ ಹಬ್ಬದ ವಾತಾವರಣ ವಿಜೃಂಭಿಸಿತು.

ಪುತ್ರಿಣೋ = ಜಾತ ಪುತ್ರಸ್ಯ ತಸ್ಯ ದಶರಥಸ್ಯ—ಪ್ರವೇಶ್ಯಾನಾಂ = ಪ್ರವೇಶಯಿತವ್ಯಾನಾಮ್ = ವಾದನೀಯಾನಾಮಿತ್ಯರ್ಥಃ—ತೂರ್ಯಾಣಾಮ್ = ವಾದ್ಯಾನಾಮ್ ॥

**77. ಸಂತಾನಕಮಯೀ ವೃಷ್ಟಿಃ ಭವನೇ ಚಾಸ್ಯ ಪೇತುಷಿ ।**
**ಸನ್ಮಂಗಲೋಪಚಾರಾಣಾಂ ಸೈವಾದಿರಚನಾಽಭವತ್ ॥ ೭೭ ॥**

ದೇವಲೋಕದ ಅಪರೂಪದ ಹೂಗಳಾದ ಸಂತಾನಕ ಪುಷ್ಪಗಳ ಹೂಮಳೆಯು ದಶರಥನ ರಾಜಭವನದ ಅಂಗಳದಲ್ಲಿ ಸುರಿಯಿತು. ಇದು ಸಕಲ ಸನ್ಮಂಗಳ, ಸೌಭಾಗ್ಯಗಳ, ಭಾಗ್ಯಶ್ರೀಯ ಕುರುಹು. ಹೀಗೆ ಆ ರಾಜಭವನದಲ್ಲಿ ದೇವಲೋಕದ ಅಲರಮಳೆ ಸುರಿಯಲು ಅದು ಮುಂದಿನ ಷೋಡಶೋಪಚಾರಗಳಿಗೆ ಆದಿರಚನೆಯೆನಿಸಂತೆ ನಡೆಯಿತು (ಸುರತರುವಿನ ಅಲರಮಳೆ ಸುರಿಯಿತು ಅತಿಶಯದೆ).

ಪೇತುಷೀ = ಪಪಾತ—ಯೋ ಮಂಗಲೋಪಚಾರಸ್ತೇಷಾಮಾದಿರಚನಾ ಪ್ರಥಮ ಕ್ರಿಯಾ ಅಭವತ್—ಸನ್ಮಂಗಲ=ಪ್ರಶಸ್ತ ॥

**78. ಕುಮಾರಾಃ ಕೃತಸಂಸ್ಕಾರಾಃ ತೇ ಧಾತ್ರೀಸ್ತನ್ಯಪಾಯಿನಃ ।**
**ಆನಂದೇನಾಗ್ರಜೇನೇವ ಸಮಂ ವವೃಧಿರೇ ಪಿತುಃ ॥ ೭೮ ॥**

ಆ ಕುಮಾರರ ಜಾತಕರ್ಮಾದಿ ಸಂಸ್ಕಾರಗಳು ನಡೆದುವು. ಆ ನಾಲ್ಕು ಮಂದಿ ರಾಜಕುಮಾರರು ದಾದಿಯರ ಹಾಲನ್ನು ಕುಡಿದು ದಷ್ಟಪುಷ್ಟರಾಗಿ ಬೆಳೆದು ವರ್ಧಿಸುವುದನ್ನು ಕಂಡು ದಶರಥನ ಹೃದಯದ ಆನಂದವು ಇನ್ನಷ್ಟು ಹೆಚ್ಚಿತು. ಆನಂದದಿಂದ ಹೃದಯವು ಬೀಗಿಹೋಯಿತು (ಅಯ್ಯನಾನಂದದೊಡವೆರೆದು). ಆ ಮಕ್ಕಳ ಆನಂದದಲ್ಲಿ ಪಾಲ್ಗೊಂಡ ದಶರಥನ ಆನಂದವೂ ಒಬ್ಬ ಹಿರಿಯ ಮಗನಂತೆ (ಹಿರಿಯಣ್ಣ, ದೊಡ್ಡಣ್ಣ) ಅಭಿವರ್ಧಿಸುತ್ತಲಿತ್ತು. ಮಕ್ಕಳ ಬೆಳವಣಿಗೆಯೂ ದಶರಥನ ಆನಂದವೂ ಜೊತೆಜೊತೆಯಾಗಿಯೇ ಬೆಳೆಯುತ್ತಲಿತ್ತು. ಆ ಹುಡುಗರ ಹಿರಿಯಣ್ಣನಂತೆ ಅಭಿವರ್ಧಿಸುತ್ತಲಿತ್ತು.

ಜಾತಕರ್ಮಾದಿಸಂಸ್ಕಾರಗಳು : (1) ಗರ್ಭಾದಾನ, (2) ಸೀಮಂತ (ಪುಂಸವನ) (3) ಜಾತಕರ್ಮ, (4) ನಾಮಕರಣ, (5) ಅನ್ನಪ್ರಾಶನ, (6) ಚೂಡಾಕರ್ಮ (ಚೌಲ, ಜುಟ್ಟು). (8) ಉಪನಯನ, (9) ಸಮಾವರ್ತನ, (10) ವಿವಾಹ ಇತ್ಯಾದಿ.

ಧಾತ್ರೀಣಾಮುಪಮಾತೃಣಾಂ — ಕೃತಾಃ ಸಂಸ್ಕಾರಾ = ಜಾತಕರ್ಮಾದಯೋ ಯೇಷಾಂ ತೇ—ಪಿತುರಾನಂದೇನ ಸಮಂ ವವೃಧಿರೇ ॥ ಉತ್ಪ್ರೇಕ್ಷಾಲಂಕಾರ ಮತ್ತು ಸಹೋಕ್ತಿ ಅಲಂಕಾರ.

**79. ಸ್ವಾಭಾವಿಕಂ ವಿನೀತತ್ವಂ ತೇಷಾಂ ವಿನಯಕರ್ಮಣಾ ।**
**ಮುಮೂರ್ಛ ಸಹಜಂ ತೇಜೋ ಹವಿಷೇವ ಹವಿರ್ಭುಜಾಮ್ ॥ ೭೯ ॥**

ಸ್ವಭಾವಜನ್ಯವಾದ ಅವರ ವಿನಯಾದಿಸದ್ಗುಣಗಳು, ಅವರ ವಿದ್ಯೆಯಿಂದ ಶಿಸ್ತು ಮೊದಲಾದ ಜೀವನದ ಮೌಲ್ಯಗಳು ಅಭಿವೃದ್ಧಿಸಿದುವು. ಅಗ್ನಿಯ ತೇಜಸ್ಸು, ತುಪ್ಪ (ಘೃತ, ಆಜ್ಯ). ಸಮಿತ್ತು, ಹವಿಸ್ಸುಗಳಿಂದ ಹವಿರ್ಭುಜನಾದ ಅಗ್ನಿಯ ಕಾಂತಿಯು ಕಳೆಯು ಹೆಚ್ಚುವಂತೆ, ಅಧಿಕಗೊಂಡಿತು. ಆ ಬಾಲಕರಲ್ಲಿ ಹುದುಗಿದ್ದ ಪ್ರಕೃತಿಸಹಜವಾದ, ಮತ್ತು ಆನುವಂಶಿಕ ಗುಣಗಳು ವಿನಯಾದಿ ಸದ್ಗುಣಗಳಿಂದ ಪೆರ್ಚಿದುವು. ವಿದ್ಯೆ,

ಬುದ್ಧಿ, ಶಿಸ್ತು, ಶೀಲ, ಆತ್ಮಸಂಯಮ, ಕಷ್ಟಸಹಿಷ್ಣುತೆ, ಭಕ್ತಿ, ಮಾತೃಭಕ್ತಿ, ಪಿತೃಭಕ್ತಿ, ದೇಶಭಕ್ತಿ, ದೃಢತೆ, ಶೌರ್ಯಧೈರ್ಯಾದಿ ಕ್ಷತ್ರಿಯ ಗುಣಗಳು (ರಾಜಸ). ಸತ್ಯಶೀಲತೆ, ತತ್ತ್ವನಿಷ್ಠೆ, ಭ್ರಾತೃಭಾವನೆ, ವೀರ್ಯ, ಸಮಭಾವನೆ, ಮಾನವೀಯತೆ, ಔದಾರ್ಯ, ಕ್ರಿಯಾಶೀಲತೆ ಅವರಲ್ಲಿ ಬಾಲ್ಯದಿಂದಲೇ ನೆಲೆಗೊಂಡಿದ್ದುವು (ವಿನಯಕರ್ಮಗಳಿಂದ ನಿಜವಿಜಯ ಪಡೆದುದಲ್ತೆ). ದಿನಕಳೆದಂತೆ ಅಭಿವೃದ್ಧಿಹೊಂದಿದುವು, ಪಡೆದುವು (ಬೆಳೆಯು ಸಿರಿ ಮೊಳಕೆಯಲ್ಲಿ ಎಂಬಂತೆ).

ಸ್ವಾಭಾವಿಕಂ = ಸಹಜಂ—ವಿನೀತತ್ವಂ = ವಿನಯಃಕರ್ಮಣಾ ಶಿಕ್ಷಯಾ — ಹವಿರ್ಭುಜಾಮಗ್ನೀನಾಂ ಸಹಜಂ ತೇಜೋ ಹವಿಷಾಽಽಜ್ಯಾದಿಕೇನೇವ—ಮುಮೂರ್ಛ = ವವೃಧೇ = ಪೆರ್ಚಿದುವು.

**80. ಪರಸ್ಪರಾವಿರುದ್ಧಾಸ್ತೇ ತದ್ರಘೋರನಘಂ ಕುಲಮ್ ।**
**ಅಲಮುದ್ದ್ಯೋತಯಾಮಾಸುಃ ದೇವಾರಣ್ಯಮಿವರ್ತವಃ ॥ ೮೦ ॥**

ಜಗತ್ಪ್ರಸಿದ್ಧವಾಗ ಅತ್ಯಂತ ಪರಿಶುದ್ಧವಾದ (ಪಾಪಲೇಶವಿಲ್ಲದ, ನಿಷ್ಪಾಪ ಮನಿಸಿಪ) ರಘುಕುಲವನ್ನು ಆ ನಾಲ್ಕು ಮಂದಿ ಸೋದರರು ಅಲಂಕರಿಸಿದ್ದರು. ಹೇಗೆ ಸ್ವರ್ಗಲೋಕದ ನಂದನವನದಲ್ಲಿ ಆರು ಋತುಗಳು—ವಸಂತ, ಗ್ರೀಷ್ಮ, ವರ್ಷ, ಹೇಮಂತ, ಶಿಶಿರ, ಶರದೃತು ನಲಿದು ಬೆಳಗುವಂತೆ ದಶರಥನ ವಂಶವೆಂಬ ನಂದನವನವನ್ನು ಬೆಳಗಿದರು. ಆ ನಾಲ್ವರು ಚೆನ್ನಾರಿಂದ ರಘುವಂಶದ ವಂಶವೃಕ್ಷವು ಚಿಗುರೊಡೆದು ತೇಜಃಪುಂಜವಾಗಿ ವಿಜೃಂಭಿಸಿತು (ಋತುಗಳಾರುಂ ನಲಿದು ದೇವನಂದನವನುಂಬೆಳಗುವಂತೆ).

ಪರಸ್ಪರ ವಿರುದ್ಧಾ = ಅವಿದ್ವಿಷ್ಟಾಃ—ಸೌಭ್ರಾತ್ರಗುಣವಂತ ಇತ್ಯರ್ಥಃ—ತತ್ಪ್ರಸಿದ್ಧಮನಘಂ = ನಿಷ್ಪಾಪಂ—ರಘೋಃ ಕುಲಮ್—ಋತವೋ = ವಸಂತಾದಯೋ—ದೇವಾರಣ್ಯಂ = ನಂದನಮಿವ—ಉದ್ದ್ಯೋತಯಾಮಾಸುಃ=ಪ್ರಕಾಶಯಾಮಾಸುಃ ॥

**81. ಸಮಾನೇಽಪಿ ಹಿ ಸೌಭ್ರಾತ್ರೇ ಯಥೋಭೌ ರಾಮಲಕ್ಷ್ಮಣೌ ।**
**ತಥಾ ಭರತಶತ್ರುಘ್ನೌ ಪ್ರೀತ್ಯಾ ದ್ವಂದ್ವಂ ಬಭೂವತುಃ ॥ ೮೧ ॥**

ಆ ನಾಲ್ವರಲ್ಲಿ ಸೋದರತೆ ಒಂದೇ ತೆರನಾಗಿದ್ದರೂ, ರಾಮಲಕ್ಷ್ಮಣರು ಎಂಬ ಇರ್ವರು ಒಂದು ದ್ವಂದ್ವವಾಗಿ (ಜೋಡಿ) ಮೆರೆದರೆ, ಭರತಶತ್ರುಘ್ನರು ಇನ್ನೊಂದು ಜೋಡಿಯಾಗಿ ಒಂದೇ ಎರಕದಿಂದ (ಕಟ್ಟೆರಕದಿಂದ), ಒಂದೇ ಒಲುಮೆಯಿಂದ, ಒಂದೇ ಆತ್ಮವು ಒಂದೇ ಪ್ರಾಣವು ಎರಡಾದಂತೆ, ಅನ್ಯೋನ್ಯತೆಯಿಂದ ಮೆರೆದರು. ಒಂದಾಗಿ, ಒಂದೆನಿಸಿದರು. ಆ ಒಂದೊಂದು ಜೋಡಿಯಲ್ಲಿ ಒಂದೊಂದು ತರದ ಅನ್ಯೋನ್ಯತೆಯು, ಸಾದೃಶ್ಯವು ಹೆಚ್ಚಾಗಿ ಬೆಸೆದುಕೊಂಡಿತ್ತು (ರೂಪುಗೊಂಡಿತ್ತು). ಅವರು ಜೊತೆಜೊತೆಯಾಗಿಯೇ ತಮ್ಮ ಆಟಪಾಟಗಳನ್ನು (ಬಾಲಕ್ರೀಡ) ಗೆಳೆತನದಲ್ಲಿ ದೇಹವೆರಡು, ಆತ್ಮವು ಒಂದೇ ಎಂಬಂತೆ ಮಿಳಿತವಾಗಿದ್ದರು. ಜೀವಾತ್ಮ–ಪರಮಾತ್ಮರಂತೆ, ದೇಹವೆಂಬ ಮರದಲ್ಲಿ, ಇರುವ ಆ ಎರಡು ಹಕ್ಕಿಗಳಂತೆ (ದ್ವಾಸುಪರ್ಣಾ) ಅತ್ಯಂತ ಮಿಳಿತವಾಗಿ ಭ್ರಾತೃವಾತ್ಸಲ್ಯದಿಂದ ಮೆರೆಯುತ್ತಿದ್ದರು (ಒಂದೇ ಎರಕದೊಳು ತಳ್ತರು ಸಮಂತು).

ಶೋಭನಾಃ ಸ್ನಿಗ್ಧಾ ಭ್ರಾತರೋ ಯೇಷಾಂ ತೇ ಸುಭ್ರಾತರಃ ಸೌಭ್ರಾತ್ರವಮ್ —ತೇಷಾಂ ಭಾವಃ ಸೌಭ್ರಾತ್ರಮ್ ॥ ಯಥೋಭೌ ರಾಮಲಕ್ಷಣೌ ಪ್ರೀತ್ಯಾ ದ್ವಂದ್ವಂ ಬಭೂವತುಃ । ತಥಾ ಭರತಶತ್ರುಘ್ನೌ ಪ್ರೀತ್ಯಾ ದ್ವಂದ್ವಂ ದ್ವೌ ದ್ವೌ ಸಾಹಚರ್ಯೇಣಾಭಿವ್ಯಕ್ತೌ ಬಭೂವತುಃ ॥

**82. ತೇಷಾಂ ದ್ವಯೋರ್ದ್ವಯೋರೈಕ್ಯಂ ಬಿಭಿದೇ ನ ಕದಾಚನ ।**
**ಯಥಾ ವಾಯುವಿಭಾವಸ್ವೋಃ ಯಥಾ ಚಂದ್ರಸಮುದ್ರಯೋಃ ॥ ೮೨ ॥**

ಹೇಗೆ ವಾಯುವು ವಿಭಾವಸುವೆನಿಸಿದ ಅಗ್ನಿಯಿಂದ ಬೇರೆ ಎನಿಸಲಾರದೋ (ಸುಳಿಗಾಳಿ ಬೆಂಕಿಯುರಿ ಜೊತೆಯೊಂತು) ಆ ತೆರನಾಗಿ ಮಕ್ಕಳಾಟದಲ್ಲಿ (ಜೋಕ್ಯಾಟಗೆ-ತೌಳವ ಭಾಷೆ) ಜೊತೆಗೂಡಿ ಇದ್ದರೆ, ಚಂದ್ರಸಾಗರರ ಸಂಬಂಧವೆಂಬಂತೆ ಭರತಶತ್ರುಘ್ನರು ಇನ್ನೊಂದು ಜೊತೆಯಾಗಿ ಸಾಮರಸ್ಯದಿಂದ ಇರುತ್ತಿದ್ದರು. ಅವರು ಅವಿಭಾಜ್ಯರಾದ ಜೋಡಿಗಳಾಗಿ ಎಸೆದಿದ್ದು ಎಲ್ಲರ ಕಣ್ಮನಗಳನ್ನು ತಣಿಸುತ್ತಿದ್ದರು. ಆ ಇಬ್ಬಿಬ್ಬರು ಬಾಲಕರು ಜೋಡಿಚಂದ್ರಮರಂತೆ ಅಥವಾ ಜೋಡಿಸೂರ್ಯರಂತೆ ಒಬ್ಬರನ್ನೊಬ್ಬರು ಬಿಟ್ಟಿರಲಾರದೆ, ಒಂದೇ ಅಭಿಪ್ರಾಯ ಹೊಂದಿ, ಗಾಢವಾದ ಸ್ನೇಹದ ಸಾಕಾರ ಮೂರ್ತಿಗಳಾಗಿ ಎಸೆದರು. ಸಮಾನಸುಖದುಃಖವನ್ನು ಅನುಭವಿಸುವಂತೆ, ಚಂದ್ರನು ಸಾಗರನನ್ನು ಪೆರ್ಚಿಸುವಂತೆ (ಮೊರೆವ ಕಡಲೊಗೆದ ಶಶಿಯೆಂತು) ಅಗ್ನಿಯು ವಾಯುವಿನಿಂದ ವರ್ಧಿಸುವಂತೆ (ಅಭಿವರ್ಧಿಸುವಂತೆ).

ದ್ವಯೋರ್ದ್ವಯೋಃ — ಯಥಾ ವಾಯುವಿಭಾವಸ್ವೋರ್ವಾತವಹ್ನ್ಯೋರಿವ—ಚಂದ್ರಸಮುದ್ರಯೋರಿವ ಚ—ಕದಾಚನ ನ ಬಿಭಿದೇ—ಏಕಕಾರ್ಯತ್ವಂ ಸಮಾನಸುಖದುಃಖತ್ವಂ—ಚಂದ್ರವೃದ್ಧೌ ಹಿ ವರ್ಧತೇ ಸಿಂಧುಃ, ತತ್ ಕ್ಷಯೇ ಚ ಕ್ಷೀಯತ ಇತಿ ॥

**83. ತೇ ಪ್ರಜಾನಾಂ ಪ್ರಜಾನಾಥಾಃ ತೇಜಸಾ ಪ್ರಶ್ರಯೇಣ ಚ ।**
**ಮನೋ ಜಹ್ರುಃ ನಿದಾಘಾಂತೇ ಶ್ಯಾಮಾಭ್ರಾದಿವಸಾ ಇವ ॥ ೮೩ ॥**

ಬೇಸಗೆಯ ತಾಪದಿಂದ ಬಳಲಿದ ಜನರು ಬೇಸಗೆ ಕಾಲದ ಕೊನೆಕೊನೆಯ ದಿವಸಗಳಲ್ಲಿ ಕಪ್ಪಾದ ಮೋಡಗಳಿಂದ ಆವರಿಸಲ್ಪಟ್ಟ (ಕರಿಮುಗಿಲಿನಿಂದೆಸೆವ) ರಾತ್ರಿಗಳನ್ನು ಇಚ್ಛಿಸುವಂತೆ ಜನರು ವಿನಯ-ತೇಜಗಳಿಂದ ಒಪ್ಪುವ ಆ ಸುಕುಮಾರರನ್ನು ಆದರದಿಂದ ಕಂಡರು. ಆ ಜನನಾಥನ ಬಾಲಕರು ತಮ್ಮ ಶಿಸ್ತು, ಸಹಿಷ್ಣುತೆ, ಸಂಯಮಾದಿ ಗುಣಗಳಿಂದ ಪ್ರಜೆಗಳ ಮನವನ್ನು ಸೆಳೆದರು (ಆ ಜನನಾಥರು) (ವಿನಯತೇಜಂಗಳಿಂ ಜನಮನವ ಸೆಳೆದಪರು).

ಪ್ರಶ್ರಯೇಣ = ವಿನಯೇನ—ನಿದಾಘಾಂತೇ = ಗ್ರೀಷ್ಮಾಂತೇ—ಶ್ಯಾಮಾಭ್ರಾಃ = ಶ್ಯಾಮಾನ್ಯಭ್ರಾಣಿ ಮೇಘಾ ಏಷಾಂ ತೇ । ನಾತಿಶೀತೋಷ್ಣಾ ಇತ್ಯರ್ಥಃ ॥

**84. ಸ ಚತುರ್ಧಾ ಬಭೌ ವ್ಯಸ್ತಃ ಪ್ರಸವಃ ಪೃಥಿವೀಪತೇಃ ।**
**ಧರ್ಮಾರ್ಥಕಾಮಮೋಕ್ಷಾಣಾಂ ಅವತಾರ ಇವಾಂಗವಾನ್ ॥ ೮೪ ॥**

ರಾಮಲಕ್ಷ್ಮಣಭರತಶತ್ರುಘ್ನರೆಂಬ ಆ ನಾಲ್ವರು ರಾಜಕುಮಾರರು ಲೋಕದಲ್ಲಿ ಮೈತಳೆದುಬಂದ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳಂತೆ ತೋರಿದರು. ಅವರು ನಾಲ್ಕುಮಂದಿ ಪುತ್ರರು ಧರ್ಮದ ಸಾಕಾರಮೂರ್ತಿಗಳಂತೆ ಸಾಕಾರಮೂರ್ತಿಗಳಾಗಿ ಅವತರಿಸಿದಂತೆ ಮೇದಿನಿಯಲ್ಲಿ ಕಂಗೊಳಿಸಿದರು (ಮೈತಳೆದ ಧರ್ಮಾರ್ಥಕಾಮಮೋಕ್ಷಂಗಳವತಾರದವೋಲ್ ಎಸೆದರು).

ವ್ಯಸ್ತೋ = ವಿಭಕ್ತಃ—ಪೃಥಿವೀಪತೇಃ = ದಶರಥಸ್ಯ—ಪ್ರಸವಃ = ಸಂತಾನಃ—ಚತುರ್ಧಾಂಗವಾನ್ = ಮೂರ್ತಿಮಾನ್ ॥

**85. ಗುಣೈರಾರಾಧಯಾಮಾಸುಃ ತೇ ಗುರುಂ ಗುರುವತ್ಸಲಾಃ ।**
**ತಮೇವ ಚತುರಂತೇಶಂ ರತ್ನೈರಿವ ಮಹಾರ್ಣವಾಃ ॥ ೮೫ ॥**

ಅವರು ಗುಣವತ್ಸಲರು, ಗುಣನಿಧಿಗಳು, ಗುಣಪಯೋನಿಧಿಗಳು. ಆ ನಾಲ್ಕು ಮಂದಿ ನಾಲ್ಕು ಸಾಗರಗಳಂತೆ ಗುಣಸಾಗರರು. ತಮ್ಮ ಗುಣಗಳೆಂಬ ರತ್ನಗಳಿಂದ, ಸಾಗರವು ಹೇಗೆ ನವರತ್ನ, ವಜ್ರಗಳಿಂದ ಶೋಭಿಸುವಂತೆ ವಿನಯಾದಿ ಸದ್ಗುಣಗಳಿಂದ ಗುಣ ಪರಿಪೂರ್ಣರೆನಿಸಿ ತಮ್ಮ ವಿದ್ಯಾಗುರು ಹಾಗೂ ಪಿತೃಗಳನ್ನು, ಬಂಧುಜನ, ಪರಿಜನರನ್ನು, ಪುರಜನರನ್ನು ತಣಿಸಿದರು. ನಾಲ್ಕು ಸಾಗರಗಳು ತನ್ನ ಸ್ವಾಮಿಯಾದ ನಾಲ್ಕು ದಿಕ್ಕುಗಳನ್ನು (ಚತುರಂತೇಶು) ತನ್ನ ರತ್ನಗಳಿಂದ ಪೂಜಿಸುವಂತೆ ಆ ನಾಲ್ಕು ಮಂದಿ ಬಾಲಕರು ತಮ್ಮ ಸಾರ್ವಭೌಮಪಿತನನ್ನು ಮತ್ತು ಗುರುವನ್ನು ಭಕ್ತಿಯಿಂದ ಆರಾಧಿಸುತ್ತ, ಗುಣಗಳೆಂಬ ರತ್ನ(ಗುಣರತ್ನರಾಗಿ)ಗಳಿಂದ, ಸದ್ಗುಣಗಳಿಂದ ಅವರಿಗೆ ಆನಂದವೀಯುತ್ತಲಿದ್ದರು. ಕೊಂಡಾಟದ ಕಣಿಗಳಾಗಿ ಮುದ(ಮೋದ)ವೀಯುತ್ತಿದ್ದರು (ಗುರುವರನ ಒಲಿಸಿದರು ಗುಣಗಳಿಂದೆ).

ಗುರುವತ್ಸಲಾ = ಪಿತೃಭಕ್ತಾಸ್ತೇ—ಗುರುಂ = ಪಿತರಮ್—ಚತುರಂತೇಶಂ=ದಿಗಂತಾನಾಮೀಶಂ—ಮಹಾರ್ಣವಾ = ಚತ್ವಾರೋ—ಚತುರಂತೇಶಮ್ = ಚತುರ್ಣಾಂ ಅಸ್ತಾನಾಮ್ ಚತ್ವಾರಃ ಅಂತಾಃ ಯಸ್ಯಾಃ ಸಾ ಚತುರಂತಾ (ಮಹೀ, ಪೃಥ್ವೀ) ತಸ್ಯಾಃ ಈಶಃ ತಮ್ ॥

**86. ಸುರಗಜ ಇವ ದಂತೈಃ ಭಗ್ನದೈತ್ಯಾಸಿಧಾರೈಃ ।**
**ನಯ ಇವ ಪಣಬಂಧವ್ಯಕ್ತಯೋಗೈರುಪಾಯೈಃ ॥**
**ಹರಿರಿವ ಯುಗದೀರ್ಘೈಃ ದೋರ್ಭಿರಂಶೈಸ್ತದೀಯೈಃ ।**
**ಪತಿರವನಿಪತೀನಾಂ ತೈಶ್ಚಕಾಶೇ ಚತುರ್ಭಿಃ ॥ ೮೬ ॥**

ಶ್ರೀಹರಿಯ ತೇಜದಿಂದ ಜನಿಸಿದ ಆ ನಾಲ್ವರು ಮಕ್ಕಳು, ದೈತ್ಯರ ಖಡ್ಗಧಾರೆಯನ್ನು ಮೊಂಡುಗೊಳಿಸಿದ ಅಥವಾ ಮುರಿದ ಸುರಗಜವಾದ ಐರಾವತದ ನಾಲ್ಕು ದಂತಗಳಂತೆ ಅರಸನ ಅಂದವನ್ನು ಹೆಚ್ಚಿಸಿದರು. ಆ ನಾಲ್ಕು ಮಂದಿ ಸಹೋದದರು, ನಾಲ್ಕು ವೇದಗಳು, ಆರು ಶಾಸ್ತ್ರಗಳು ಜಗತ್ತಿಗೆ ಸಾರುವ ಸಾಮ, ದಾನ (ದಾನ = ಲಂಚ), ಭೇದ, ದಂಡಗಳೆಂಬ ನಾಲ್ಕು ತರದಚತುರೋಪಾಯಗಳಂತೆ (ನಾಲ್ಕುಪಾಯಮೆರೆದ ನಮವ

ಪರಿಯೊಲು) ಅಥವಾ ಮಹಾವಿಷ್ಣುವಿನ ನೀಳವಾದ, ಅಗಳಿನಂತಿರುವ ಸುಂದರವಾದ ನಾಲ್ಕು ತೋಳುಗಳಂತೆ (ಚತುರ್ಭುಜದಂತೆ) ಎಸೆದಿದ್ದರು. ಅವರು ನಾಲ್ವರು ಹರಿಯ ತೇಜಸ್ಸಿನಿಂದ (ವೈಷ್ಣವತೇಜದಿಂ) ಒಗೆದವರು (ಹರಿಯ ತೇಜದಿಂ ಒಗೆದ). ಅವರಿಂದ ಒಡಗೂಡಿದ ದಶರಥನೃಪಾಲನು ಮಹಾವಿಷ್ಣುವಿನಂತೆ ಅಥವಾ ಸುರಗಜವಾದ ಐರಾವತದಂತೆ ಇಲ್ಲವೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ಪುರುಷಾರ್ಥದ ಫಲಸಿದ್ಧಿಗಳಂತೆ ಅಥವಾ ಫಲಸಿದ್ಧಿಗಳಿಂದ ತಿಳಿದುಬರುವ (ಫಲದ ಸಿದ್ಧಿಯಿಂದ ಅರಿಯಬರ್ಪ) ಚತುರೋಪಾಯದಂತೆ ಜಗತ್ತಿಗೆ ಆದರ್ಶನಾಗಿ, ಕಾಣಿಸುತ್ತಿದ್ದನು (ನಾಲ್ಕು ಉಪಾಯಮೆರೆದ ನಯದ ಪರಿಯೊಲು).

ಸುರಗಜ = ಐರಾವತ ಇವ—ಚಕಾಶೇ=ವಿದಿದ್ಯುತೇ—ಪಣಬಂಧೇನ=ಫಲಸಿದ್ಧ್ಯಾ—ವ್ಯಕ್ತಯೋಗ್ಯೈರನುಮಿತ ಪ್ರಯೋಗ್ಯೈರುಪಾಯೈಃ = ಚತುರ್ಭಿಃ ಸಾಮಾದಿರ್ನಯೋ ನೀತಿರಿವ—ಪಣಬಂಧಃ = ಫಲಸಿದ್ಧಿಃ ॥

## ಏಕಾದಶಃ ಸರ್ಗಃ
## ಹನ್ನೊಂದನೆಯ ಸರ್ಗ

1. **ಕೌಶಿಕೇನ ಸ ಕಿಲ ಕ್ಷಿತೀಶ್ವರೋ ।**
**ರಾಮಮಧ್ವರವಿಘಾತಶಾನ್ತಯೇ ॥**
**ಕಾಕಪಕ್ಷಧರಮೇತ್ಯ ಯಾಚಿತಃ ।**
**ತೇಜಸಾ ಹಿ ನ ವಯಃ ಸಮೀಕ್ಷ್ಯತೇ** ॥ ೧ ॥

ಒಂದು ದಿನ ಕುಶಿಕಪುತ್ರನಾದ ಕೌಶಿಕ, ಚಂಡಕೌಶಿಕ ಮೊದಲಾದ ಹೆಸರುಗಳಿಂದ ಜಗತ್ತಿಗೆ ವಂದನೀಯನೆನಿಸಿದ ವಿಶ್ವಾಮಿತ್ರ ಮಹಾಮುನಿಯು ಕ್ಷಿತೀಶ್ವರನಾದ ದಶರಥ ಸಾರ್ವಭೌಮನ ಬಳಿಗೆ ಬಂದನು. ಯಜ್ಞಯಾಗಾದಿ ವೈದಿಕಕ್ರಿಯೆಗಳಿಗೆ ವಿಘ್ನ ಮಾಡುತ್ತಿದ್ದ ರಾಕ್ಷಸರ ಕಿರುಕುಳವನ್ನು ದೂರಮಾಡಲು, ಕಾಕಪಕ್ಷಧರನಾದ, ಆಗತಾನೆ ಬಾಲ್ಯವನ್ನು ಕಳೆದು ಕಿಶೋರಾವಸ್ಥೆಗೆ ಕಾಲಿಟ್ಟಿರುವ ಕೇವಲ 15 ವರ್ಷದ ವೀರಬಾಲಕನಾದ ಶ್ರೀರಾಮನನ್ನು ಕೇಳಲು ಬಂದನು. ಶಿಖಂಡಕವೆಂಬ ಎರಡನೆಯ ಕರ್ಮವಿಧಿಯನ್ನು ಪೂರೈಸಿ, ಐದು ಶಿಖೆಗಳಿಂದ ಶೋಭಿಸುತ್ತಿರುವ ಇನ್ನೂ ಹದಿನಾರು ವರ್ಷಕ್ಕೆ ಕಾಲಿಡದ ರಾಜಕುಮಾರನಾದ ಶ್ರೀರಾಮನ ಸಹಾಯವನ್ನು ಯಾಚಿಸಿ ಬ್ರಹ್ಮರ್ಷಿ ವಿಶ್ವಾಮಿತ್ರರು ಬಂದರು. ಏಕೆಂದರೆ ತೇಜಸ್ಸು, ಬಲ ಇವು ಪ್ರಾಯಕ್ಕೇ ಸೀಮಿತವಲ್ಲ. ಹಾಲುಗಲ್ಲದ ಹಸುಳೆಯಂತಹ ಶ್ರೀರಾಮಚಂದ್ರನಿಂದ ಪ್ರಚಂಡವಾದ ದನುಜಮರ್ದನ ಕಾರ್ಯವನ್ನು ನಡೆಸಲು ನಿಯೋಜಿಸಿದ್ದರು. ತೇಜಸ್ವಿಯಾದವನು ಬಾಲಕನಾದರೇನು, ಅವನು ಸಾಧಿಸದ ಕೆಲಸವಿಲ್ಲ. ಕತ್ತಿಗೆ ವಯಸ್ಸಾಗಿ ಪ್ರಯೋಜನವೇನು? ಮಹಾವೀರರು ಬಾಲ್ಯದಲ್ಲೇ ಮಹತ್ಕಾರ್ಯಗಳನ್ನು ಮಾಡಿತೋರಿಸುವರು ಎಂಬುದಕ್ಕೆ ಶ್ರೀರಾಮಚಂದ್ರನೇ ಸಾಕ್ಷಿ.

ಕೌಶಿಕೇನ=ಕುಶಿಕಾಪತ್ಯೇನ, ವಿಶ್ವಾಮಿತ್ರೇಣ—ಅಧ್ವರವಿಘಾತಶಾಂತಯೇ=ಯಜ್ಞವಿಘ್ನ ವಿಧ್ವಂಸಾಯ—ಕಾಕಪಕ್ಷಧರಂ = ಬಾಲಕೋಚಿತ ಶಿಖಾಧರಮ್—ತೇಜಸಾಂ= ತೇಜಸ್ವಿನಾಂ—ವಯೋ=ಬಾಲ್ಯಾದಿ—ನ ಸಮೀಕ್ಷ್ಯತೇಹಿ=ಅಪ್ರಯೋಜಕಮಿತ್ಯರ್ಥಃ॥

ಅನ್ವಯ:—ಕೌಶಿಕೇನ ಏತ್ಯ ಸ ಕ್ಷಿತೀಶ್ವರೋಽಧ್ವರವಿಘಾತಶಾಂತಯೇ ಕಾಕಪಕ್ಷಧರಂರಾಮಂ ಯಾಚಿತಃ ಕಿಲ । ತೇಜಸಾಂವಯಃ ನ ಸಮೀಕ್ಷ್ಯತೇ ಹಿ ॥

ಕುಶಿಕಸ್ಯ ಅಪತ್ಯಂ ಪುಮಾನ್ ಕೌಶಿಕಃ—ಅಧ್ವರ = ಅಧ್ವರೇ ವಿಘಾತಾಃ ತೇಷಾಂ ಶಾಂತಯೇ ಅಧ್ವರ=ನ ಧ್ವರಾ ಯಸ್ಮಿನ್ ॥

2. **ಕೃಚ್ಛ್ರಲಬ್ಧಮಪಿ ಲಬ್ಧವರ್ಣಭಾಕ್ ।**
**ತಂ ದಿದೇಶ ಮುನಯೇ ಸಲಕ್ಷ್ಮಣಮ್ ॥**

**ಅಸಂಪ್ರಣಯಿನಾಂ ರಘೋಃ ಕುಲೇ**
**ನ ವ್ಯಹನ್ಯತ ಕದಾಚಿದರ್ಥಿತಾ** ॥ ೨ ॥

ಆ ನರೇಂದ್ರನು ವಿದ್ಯಾಪಕ್ಷಪಾತಿ, ಬುಧಸೇವ್ಯನು, ಧರ್ಮಕಾರ್ಯಧುರಂಧರನು. ಒಳ್ಳೆಯ ಕಾರ್ಯಗಳಿಗೆ ಆಗುವುದಿಲ್ಲ ಎನ್ನುವವನಲ್ಲ. ತನ್ನ ತನು, ಮನ, ಧನವನ್ನು ಪ್ರಜಾಸೇವೆಗೆ ಮೀಸಲಾಗಿಟ್ಟಿರುವ ಯಶೋವಂತನು. ಇಳಿವಯಸ್ಸಿನಲ್ಲಿ ಆ ಮುನಿಯ ಜೊತೆಯಲ್ಲಿ ತನ್ನ ಪ್ರಿಯಸುತನಾದ ರಘುರಾಮನನ್ನು ಲಕ್ಷ್ಮಣಸಮೇತ ಕಳಿಸಲು ತನ್ನ ಮನನೋಯುತ್ತಿದ್ದರೂ ಕಳುಹಿಸುವರೆ ಒಪ್ಪಿಕೊಂಡನು. ಆ ರಘೂದ್ವಹರ (ರಘುವಂಶಜರ) ನಡವಳಿಕೆಯೇ ಅಂತಹದು. ಅವರು ತಮ್ಮ ಪ್ರಾಣವನ್ನು ಕೇಳಿದರೂ ಕೊಡುವವರು, ಅಂತಹ ಉದಾರಿಗಳು. ಬೇಡಿದ ಅರ್ಥಿಗಳಿಗೆ, ಯಾಚಕರಿಗೆ "ಇಲ್ಲ" ಎನ್ನುವವರಲ್ಲ. ಅಂತಹ ದಾನಶೂರರು (ದಾನಶೀಲ). ತ್ಯಾಗಿಗಳ ಗುಣವೇ ಹಾಗೆ (ಪ್ರಾಣಭಿಕ್ಷೆಯು ಬೇಡಿದ ಅರ್ಥಿಗಳಿಗಾದರೂ).

ಅನ್ವಯ :—ಲಬ್ಧವರ್ಣಭಾಕ್ ಕೃಚ್ಛ್ರಲಬ್ಧಮಪಿ ಸಲಕ್ಷ್ಮಣಮ್ ತಂ ಮುನಯೇ ದಿದೇಶ । ಅಸಂಪ್ರಣಯಿನಾಮಪಿ ಅರ್ಥಿತಾ ರಘೋಃ ಕುಲೇ ಕದಾಚಿದ್ ನ ವ್ಯವಹನ್ಯತ ।

ಕೃಚ್ಛ್ರ ಕೃಚ್ಛ್ರೇಣ ಲಬ್ಧಃತಮ್ । ಕೃಚ್ಛ್ರಲಬ್ಧಮಿತಿ—ಲಬ್ಧಾ ವರ್ಣಾಃ ಪ್ರಸಿದ್ಧಯೋ ಯೈಸ್ತೇ ಲಬ್ಧವರ್ಣಾ ವಿಚಕ್ಷಣಾಃ । "ಲಬ್ಧವರ್ಣೋ ವಿಚಕ್ಷಣಃ" ಇತ್ಯಮರಃ—ತಾನ್ "ಭಜತ" ಇತಿ ಲಬ್ಧವರ್ಣಭಾಕ್–ವಿದ್ವತ್ಸೇವೀತ್ಯರ್ಥಃ—ರಘೋಃ ಕುಲೇ ಕದಾಚಿದಪಿ ನ ವ್ಯಹನ್ಯತ ನ ವಿಹತಾ—ನ ವಿಫಲೀಕೃತೇತ್ಯರ್ಥಃ ॥

3. **ಯಾವದಾದಿಶತಿ ಪಾರ್ಥಿವಸ್ತಯೋಃ ।**
**ನಿರ್ಗಮಾಯ ಪುರಮಾರ್ಗಸಂಸ್ಕ್ರಿಯಾಮ್ ॥**
**ತಾವದಾಶು ವಿದಧೇ ಮರುತ್ಸಖೈಃ ।**
**ಸಾ ಸಪುಷ್ಪಜಲವರ್ಷಿಭಿರ್ಘನೈಃ** ॥ ೩ ॥

ತನ್ನ ಮಕ್ಕಳಾದ ರಾಮಲಕ್ಷ್ಮಣರ ನಿರ್ಗಮನಕಾಲದಲ್ಲಿ ಆ ಪೃಥ್ವೀಶನು ತನ್ನ ಪುರದ ಬೀದಿಬೀದಿಗಳನ್ನು ಸ್ವಚ್ಛಗೊಳಿಸಿ ಅಂದವಾಗಿ ಕಾಣುವಂತೆ ಮಾಡಲು ಆಣತಿಯನ್ನಿತ್ತನು. ಧೂಳು ಏಳದಂತೆ, ನೀರನ್ನು ತಳಿದು, ಗಂಧೋದಕವನ್ನು ಸುರಿದು, ಸುಗಂಧಸುವಾಸನೆ ಬರುವಂತೆ, ಹೂರಂಗೋಲೆಗಳಿಂದ ಸಂಸ್ಕಾರಗೊಳಿಸುವಂತೆ, ತಳಿರುತೋರಣಗಳಿಂದ ಶೃಂಗಾರಗೊಳಿಸುವಂತೆ ಆಜ್ಞಾಪಿಸಿದನು. ಅಷ್ಟರಲ್ಲಿ ಆ ಎಲ್ಲ ಕಾರ್ಯವನ್ನು ದೈವವೇ ಮಾಡಿತು ಎಂಬುದಕ್ಕೆ ನಿದರ್ಶನವಾಗಿ ಸುಗಂಧಯುತನಾದ ಮಾರುತನು ಬೀಸಿದನು. ಮೇಘಗಳು ಬಾನಲ್ಲಿ ಕಲೆತು ತುಂತುರುಮಳೆಗರೆದುವು. ಜೊತೆಗೆದೇವತೆಗಳು ಹೂಮಳೆ ಸುರಿದರು. ಏಕೆಂದರೆ ದೇವಕಾರ್ಯಕ್ಕೆ ಹೊರಡುವರೆಂದು ತಿಳಿದು ಅವರಿಗೆ ಅನುಕೂಲವಾಗಲೆಂದು ದೇವತೆಗಳೂ ಹಿತವನ್ನೇ ಬಯಸಿದರು, ಶುಭವನ್ನೇ ಕೋರಿದರು. ದಿಕ್ಕುಗಳೂ ಪ್ರಶಸ್ತವಾಗಿದ್ದುವು.

ಅನ್ವಯ :—ಪಾರ್ಥಿವಃ ತಯೋಃ ನಿರ್ಗಮಾಯ ಪುರಮಾರ್ಗಸಂಸ್ಕ್ರಿಯಾಂ ಯಾವದಾದಿಶತಿ ತಾವನ್‌ಮರುತ್‌ಸಖೈಃ ಸಪುಷ್ಪಜಲವರ್ಷಿಭಿ ಘನೈಃ ಸಾ ಆಶುವಿದಧೇ ॥

ಪಾರ್ಥಿವ = ಪೃಥಿವೀಶ್ವರಃ — ಪುರಮಾರ್ಗಸಂಸ್ಕ್ರಿಯಾಂ = ಧೂಳಿಸಮ್ಮಾರ್ಜನ ಗಂಧೋದಕಸೇಚನ ಪುಷ್ಪೋಪಹಾರರೂಪಸಂಸ್ಕಾರಂ—ಸಪುಷ್ಪಜಲವರ್ಷಿಭಿಃ = ಪುಷ್ಪ ಸಹಿತ ಜಲವರ್ಷಿಭಿಃ—ವಿದಧೇ=ವಿಹಿತಾ—ಯಾವತ್=ತಾವತ್ (ಧೂಳಿಸಮ್ಮಾರ್ಜನ, ಗಂಧೋಧಕಸೇಚನ, ಪುಷ್ಪೋಪಹಾರ) ॥

**4. ತೌ ನಿದೇಶಕರಣೋದ್ಯತೌ ಪಿತುಃ ।**
**ಧನ್ವಿನೌ ಚರಣಯೋರ್ನಿಪೇತತುಃ ॥**
**ಭೂಪತೇರಪಿ ತಯೋಃ ಪ್ರವತ್ಸ್ಯತೋಃ ।**
**ನಮ್ರಯೋರುಪರಿ ಬಾಷ್ಪಬಿಂದವಃ** ॥ ೪ ॥

ಹಿರಿಯರ, ಗುರುಗಳ, ಬಂಧುಗಳ ಆಜ್ಞೆಯನ್ನು ಪಾಲಿಸುವ ಬಾಲಕರಾದ ರಾಮ ಲಕ್ಷ್ಮಣರು, ಕೈಯಲ್ಲಿ ಬಿಲ್ಲುಬಾಣಗಳನ್ನು ಧರಿಸಿ ಹೊರಡಲು ಸಿದ್ಧರಾಗಿ ನಿಂತಿದ್ದರು. ಪಿತೃ ಆಜ್ಞೆಯನ್ನು ನಿರೀಕ್ಷಿಸುತ್ತಾ, ತಲೆಬಾಗಿ ವಂದಿಸುತ್ತಾ ಆ ಈರ್ವರು ಕುಮಾರರು ನಿಂದಿದ್ದರು. ಆ ಈರ್ವರೂ ಬಾಲಕರು ತಂದೆಯ ಕಾಲಿಗೆ ಎರಗಿದಾಗ ತಂದೆಯ ಕಣ್ಣೀರು ತೊಟ್ಟಿಕ್ಕಿತು. ತೆರಳಲಿರುವಾಗ ತಲೆಬಾಗಿ ನಿಂತವರ ತಲೆಯ ಮೇಲೆ (ನೆತ್ತಿಯ ಮೇಲೆ) ದುಃಖಿಸುತ್ತಿರುವ ಭೂಪತಿಯ (ತಂದೆಯ) ಬಾಷ್ಪಜಲಬಿಂದು, ಕಣ್ಣೀರಧಾರೆ ಹನಿಹನಿಯಾಗಿ ಉದುರಿತು (ಉದುರಿದುದು).

ಅನ್ವಯ :— ನಿದೇಶಕರಣೋದ್ಯತೌ ಧನ್ವಿನೌ ತೌ ಪಿತುಃ ಚರಣಯೋಃ ನಿಪೇತತುಃ । ಭೂಪತೇ ಅಪಿ ಬಾಷ್ಪಬಿಂದವಃ ಪ್ರವತ್ಸ್ಯತೋ ನಮ್ರಯೋಃ ತಯೋಃ ಉಪರಿ (ನಿಪೇತುಃ) ॥

ಧನ್ವಿನೌ = ಧನ್ವಾ ಅಸ್ಯ ಅಸ್ತಿ ಇತಿ ಧನ್ವೀ—ನಿದೇಶಕರಣೋದ್ಯತೌ = ಪಿತೃ ಆಜ್ಞಾ ಕರಣೋದ್ಯುಕ್ತೌ—ಅತ ಏವ ನಮ್ರಯೋಃ = ಪ್ರಣತಯೋಃ— ತಯೋರುಪರಿ ನಿಪೇತತುಃ = ಪತಿತಾಃ ॥

**5. ತೌ ಪಿತುರ್ನಯನಜೇನ ವಾರಿಣಾ ।**
**ಕಿಂಚಿದುಕ್ಷಿತ ಶಿಖಂಡಕಾವುಭೌ ॥**
**ಧನ್ವಿನೌ ತಮೃಷಿಮನ್ವಗಚ್ಛತಾಂ ।**
**ಪೌರದೃಷ್ಟಿಕೃತಮಾರ್ಗತೋರಣೌ** ॥ ೫ ॥

ಜನಕದಶರಥನ ಕಣ್ಣೀರಿನಿಂದ ನೆನೆದ ಜುಟ್ಟಿನಿಂದ ಶೋಭೆವಡೆದ (ಜನಕನಯನಾಂಬು ವಿಂದಿನಿಸು ಶಿಖೆ ತೊಯ್ದವರು) ಸೋದರರಾದ ರಾಮಲಕ್ಷ್ಮಣರು, ಬಿಲ್ಲುಬಾಣಗಳನ್ನು ಕೈಯಲ್ಲಿ ಧರಿಸಿಹೋಗುತ್ತಿರುವುದನ್ನು ನೋಡಲು ಅಯೋಧ್ಯೆಯ ಜನ ಹೆದ್ದಾರಿಯ ಇಕ್ಕಡೆಗಳಲ್ಲಿ ನೆರೆದಿದ್ದರು. ಉಭಯಪಾರ್ಶ್ವದಲ್ಲಿ ನೆರೆದ ಪೌರಜನರ ದೃಷ್ಟಿಗಳು ಒಂದಕ್ಕೊಂದು ಮಿಳಿತವಾಗಿ ಮಾರ್ಗದುದ್ದಕ್ಕೂ ತೋರಣಗಳು ಸೃಷ್ಟಿಯಾದುವು (ಪೌರಜನದೃಷ್ಟಿಕೃತಮಾರ್ಗತೋರಣಯುತರು). ಆ ದೃಷ್ಟಿಕೃತಮಾರ್ಗತೋರಣದ ಪಂಥದಿಂದ (ಅದರ ಮೂಲಕ) ಋಷಿಶ್ರೇಷ್ಠರಾದ ವಿಶ್ವಾಮಿತ್ರರನ್ನು ಅನುಸರಿಸುತ್ತಾ

ಆ ಧೀರಬಾಲಕರು ನಡೆದುಹೋದರು. ಜನರು ಅವರನ್ನು ನೋಡಿ ಆನಂದಿಸಿ, ಹರ್ಷೋದ್ಗಾರಮಾಡಿ ಧನ್ಯರಾದರು.

ಅನ್ವಯ :—ಪಿತುಃ ನಯನಜೇನ ವಾರಿಣಾ ಕಿಂಚಿತ್ ಉಕ್ಷಿತ ಶಿಖಂಡಕಾ ಧನ್ವಿನೌ ಉಭೌ ಪೌರದೃಷ್ಟಿಕೃತಮಾರ್ಗತೋರಣೌ ತಮ್ ಋಷಿಮ್ ಅನ್ವಗಚ್ಛತಾಮ್ ॥

ಉಕ್ಷಿತ (ಉಕ್ಷ) ಕಿಂಚಿತ್ ಉಕ್ಷಿತೌ ಶಿಖಂಡೌ ಯಯೋಃ ತೌ ಕಿಂಚಿದುಕ್ಷಿತಶಿಖಂಡಕೌ॥ ಪಿತುರ್ನಯನಜೇನ ವಾರಿಣಾ=ಕಿಂಚಿದುಕ್ಷಿತ ಶಿಖಂಡಕಾ ಈಷತ್ಸಿಕ್ತ ಚೂಡೌ—"ಶಿಖಾ ಚೂಡಾಶಿಖಂಡಃ ಸ್ಯಾತ್" ಇತ್ಯಮರಃ—ಪೌರದೃಷ್ಟಿಭಿಃ ಕೃತಾನಿ ಮಾರ್ಗತೋರಣಾನಿ = ಸಂಪಾದ್ಯಾನಿ ಕುವಲಯಾನಿ ಯಯೋಸ್ತೌ ತಥೋಕ್ತೌ—ಉಕ್ಷಿತ = ಒದ್ದೆಮಾಡು, ತೊಯ್ಯು, ಇನಿಸು ಸಿಖೆ ತೊಯ್ದವರು. ಪೌರದೃಷ್ಟಿ = ಪೌರಜನರದೃಷ್ಟಿ, ಕೃತಮಾರ್ಗ ತೋರಣಯುತರು.

**6. ಲಕ್ಷ್ಮಣಾನುಚರಮೇವ ರಾಘವಂ ।**
**ನೇತುಮೈಚ್ಛದೃಷಿರಿತ್ಯಸೌ ನೃಪಃ ॥**
**ಆಶಿಷಂ ಪ್ರಯುಯುಜೇ ನ ವಾಹಿನೀಂ ।**
**ಸಾ ಹಿ ರಕ್ಷಣವಿಧೌ ತಯೋಃ ಕ್ಷಮಾ ॥ ೬ ॥**

ಲಕ್ಷ್ಮಣನ ಜೊತೆಗೂಡಿದ ರಾಘವನನ್ನು-ಬ್ರಹ್ಮರ್ಷಿ ಕರೆದೊಯ್ಯುವುದು ಅನಿವಾರ್ಯ ವೆಂದು ತಿಳಿದು ಆ ಕುಮಾರರಿಗೆ ಅನುಗ್ರಹ, ಆಶೀರ್ವಾದಗಳಿಂದ ಜನಕನಾದ ದಶರಥನು ಹರಸಿ ಕಳುಹಿಸಿದನು. ಅವರ ಬೆಂಗಾವಲಿಗೆ ಸೈನ್ಯದ ಅಗತ್ಯವಿಲ್ಲವೆಂದು ಒರೇ ಆಶೀರ್ವಾದದ ವಜ್ರಕವಚವೇ ಸಾಕೆಂದು ಬಗೆದು ಹರಕೆಹೊತ್ತು ಅವರನ್ನು ಆಲಿಂಗಿಸಿ ಕಳುಹಿಸಿದನು. ಏಕೆಂದರೆ ಮಹರ್ಷಿ ವಿಶ್ವಾಮಿತ್ರರ ಮಹಿಮೆ ಅಪರಂಪಾರ.

ಪ್ರಯುಯುಜೇ = ಪ್ರಯುಕ್ತವಾನ್— ವಾಹಿನೀಂ = ಸೇನಾಂ—ನ ಪ್ರಯುಯುಜೇ = ನ ಪ್ರೇಷಿತವಾನ್—ವಾಹಿನೀ = ವಾಹಾಃ (ಕುದುರೆಗಳು) ಸಂತಿ ಅಸ್ಯಾಮ್ ಇತಿ—

**7. ಮಾತೃವರ್ಗಚರಣಸ್ಪೃಶೌ ಮುನೇಃ ।**
**ತೌ ಪ್ರಪದ್ಯ ಪದವೀಂ ಮಹೌಜಸಃ ॥**
**ರೇಜತುರ್ಗತಿವಶಾತ್ಪ್ರವರ್ತಿನೌ ।**
**ಭಾಸ್ಕರಸ್ಯ ಮಧುಮಾಧವಾವಿವ ॥ ೭ ॥**

ಆ ಇಬ್ಬರು ತೇಜಸ್ವಿಗಳಾದ ಬಾಲಕರು ತಾಯಂದಿರ ಚರಣಸ್ಪರ್ಶಮಾಡಿ, ಅವರ ಕಾಲಿಗೆರಗಿ ನಮಸ್ಕರಿಸಿದರು. ಮಹಾತೇಜಸ್ವಿಯಾದ ವಿಶ್ವಾಮಿತ್ರಮಹರ್ಷಿಯೊಂದಿಗೆ ಹೊರಡಲುದ್ಯತರಾಗಿರುವ ತಮ್ಮ ಪ್ರಿಯಪುತ್ರರನ್ನು ಆ ಮಾತೆಯರು (ಅಮ್ಮಂದಿರು) ಬೀಳ್ಕೊಟ್ಟರು. ಆ ಋಷಿವರನು ಮಹೌಜಸನು. ಆ ತಪೋಧನನು ಭಾಸ್ಕರನಂತೆ (ಸೂರ್ಯದೇವನಂತೆ) ತೇಜಃಪುಂಜವಿರಾಜಿತನು. ಅವನನ್ನು ಅನುಸರಿಸುತ್ತಿರುವ ರಾಮ ಲಕ್ಷ್ಮಣರು ಮಧು (ವಸಂತ, ಚೈತ್ರ) ಮತ್ತು ವೈಶಾಖಮಾಸದಂತೆ. ಆ ಮಹಾಮುನಿಯ ಹೆಜ್ಜೆಯಲ್ಲಿ ಹೆಜ್ಜೆಯಿಟ್ಟು ಅವನ ಗತಿಯಲ್ಲಿಯೇ ಚರಿಸುತ್ತಿದ್ದರು. ಅವನ ಆಜ್ಞೆಗಳನ್ನು

ಮಾರಡೆ ಅವನಿಗೆ ಅನುಗುಣವಾಗಿ ಆ ರಾಜಪುತ್ರರು ಹಿಂಬಾಲಿಸಿ ದಟ್ಟವಾದ ಗೊಂಡಾರಣ್ಯದಲ್ಲಿ ನಡೆದರು.

ಅನ್ವಯ :—ಮಾತೃವರ್ಗಚರಣಸ್ಪೃಶೌ ತೌ ಮಹೌಜಸಃ ಮುನೇಃ ಪದವೀಂ ಪ್ರಪದ್ಯ ಭಾಸ್ಕರಸ್ಯ ಗತಿವಶಾತ್ ಪ್ರವರ್ತಿನೌ ಮಧುಮಾಧವೌ ಇವ ರೇಜತುಃ ॥

ಮಾತೃವರ್ಗಸ್ಯ ಚರಣೌ ಸ್ಪೃಶತ ಇತಿ=ಮಾತೃವರ್ಗಚರಣಸ್ಪೃಶೌ—ಮಹೌಜಸೋ =ಭಾಸ್ಕರಸ್ಯ—ಮಧುಮಾಧವಾವಿವ=ಚೈತ್ರವೈಶಾಖಾವಿವ—''ವೈಶಾಖೇ ಮಾಧವೋ ರಾಧಃ'' ಇತಿ ಚಾಮರಃ ॥ ಮಾತೃ=ಮಾತೄಣಾಂ ವರ್ಗಃ=ಮಾತೃವರ್ಗಃ—ಮಹೌಜಸಃ = ಮಹತ್ ಓಜೋ ಯಸ್ಯ ಸ ಮಹೌಜಾಃ ತಸ್ಯ ॥

8. ವೀಚಿಲೋಲಭುಜಯೋಸ್ತಯೋರ್ಗತಂ ।
ಶೈಶವಾಚ್ಚ ಫಲಪುಷ್ಪಶೋಭತ ॥
ತೋಯದಾಗಮ ಇವೋದ್ಧ್ಯಭಿದ್ಯಯೋಃ ।
ನಾಮಧೇಯಸದೃಶಂ ವಿಚೇಷ್ಟಿತಮ್ ॥ ೮ ॥

ಆ ಇಬ್ಬರು ಬಾಲಕರ ನಳನಳಿಸುತ್ತಿರುವ ಮಹಾಬಾಹುಗಳು, ಆ ಬಲಶಾಲಿಯಾದ ಕೈಗಳು, ಆ ಭುಜದಂಡಗಳು ಆದಿಶೇಷನಂತೆ ಕಂಗೊಳಿಸುತ್ತಲಿದ್ದರೂ ಎಳೆಯ ಕೈಗಳು ನದಿಯ ಅಲೆಗಳಂತೆ ಅತ್ತಿತ್ತ ಅಲೆಯುತ್ತ, ಎಳಮೆಯಿಂದ ಎಸೆದು ನೋಟಕರ ಕಣ್ಣಿಗೆ ರಮಣೀಯವಾಗಿ ತೋರುತ್ತಲಿದ್ದುವು. ಅವರ ಚೆಲುವಾದ ನಡೆ, ಅವರ ಎರಡು ಬಾಹುಗಳು ಮಳೆಗಾಲದಲ್ಲಿ ಉಕ್ಕಿ ಸೊಕ್ಕಿ ಹರಿವ ಉದ್ಧ್ಯ ಮತ್ತು ಬಿದ್ಧ್ಯ ಎಂಬ ಎರಡು ನದಿಗಳ ಲೀಲೆಗಳನ್ನು ಅನುಕರಿಸುತ್ತಿದ್ದುವು. ಆ ಎರಡು ಕೈಗಳು ಕ್ಷಣಮಾತ್ರದಲ್ಲಿ ಮಹತ್ಕಾರ್ಯಗಳನ್ನು ಮಾಡಬಲ್ಲ ಒರಟಾದ ಕೈಗಳೂ ಹೌದು. ಸೌಮ್ಯವಾಗಿ ಕಂಡರೂ ಭೀಕರವಾದ ಕಾರ್ಯವನ್ನು ಕೈಗೊಳ್ಳಬಲ್ಲವು, ಮಾಡಬಲ್ಲವು, ಶ್ರಮಿಸಬಲ್ಲವು, ದಂಡಿಯು ಬಲ್ಲ ಕೈಗಳು. ಅಂತಹ ಕೈಗಳೇ ದೇವರ ಕೈಗಳು (ಉದ್ಧ್ಯ, ಮೇಣ್ ಬಿದ್ಧ್ಯಗಳ ಲೀಲೆಯಂತೆ).

ವೀಚಿಲೋಲ=ವೀಚೀ ಇವ ಲೋಲೌ ಭುಜೌ ಯಯೋಃ ॥ ವೀಚಿಲೋಲಭುಜಯೋಸ್ತರಂಗಚಂಚಲಬಾಹ್ವೋಃ—ತಯೋಶ್ಚಪಲಂ = ಚಂಚಲಮಪಿ = ಚಂಚಲವಾದ — ಗತಂ = ಗತಿಃ—ಉದ್ಧಯಭಿದ್ಯ ಯೋರ್ನದವಿಶೇಷಯೋರ್ನಾಮಧೇಯಸದೃಶಂ = ನಾಮಾನುರೂಪಂ ವಿಚೇಷ್ಟಿತಮಿವ—ತೋಯದಾಗಮೇ = ವರ್ಷಾಸಮಯೇ ॥ ವೀಚಿಲೋಲ = ವೀಚೀ ಇಯ ಲೋಲೌ ಭುಜೌ ಯಯೋಃ—ಉದ್ಧ್ಯಬಿದ್ಧ್ಯಗಳೆಂಬ ಎರಡು ನದಿಗಳು.

9. ತೌ ಬಲಾತಿಬಲಯೋಃ ಪ್ರಭಾವತೋ ।
ವಿದ್ಯಯೋಃ ಪಥಿ ಮುನಿಪ್ರದಿಷ್ಟಯೋಃ ॥
ಮಮ್ಲತುರ್ನಮಣಿಕುಟ್ಟಿಮೋಚಿತೌ ।
ಮಾತೃಪಾರ್ಶ್ವಪರಿವರ್ತಿನಾವಿವ ॥ ೯ ॥

ವಿಶ್ವಾಮಿತ್ರನು ಬೋಧಿಸಿದ (ಉಪದೇಶಿಸಿದ) ಬಲ ಮತ್ತು ಅತಿಬಲ ಎಂಬ ಮಂತ್ರ ವಿದ್ಯೆಯ ಮಹಿಮೆಯಿಂದ ಆ ಈರ್ವರು ಬಾಲಕರಿಗೆ ಮಾರ್ಗಾಯಾಸವಾಗಲೇ ಇಲ್ಲ. ಅವರು ಕಲ್ಲುಮುಳ್ಳುಗಳಿಂದ ಇಡಿಕಿರಿದ ಕಾನನವನ್ನು ಹೊಕ್ಕು ಸಂಚರಿಸತೊಡಗಿದರು ಅವರು ಅರಮನೆಯ ಮಣಿಬದ್ಧ ಭೂಮಿಯಲ್ಲಿ, ಮೊರೆಷೀಕ್ ಹಾಕಿದ ನೆಲದಲ್ಲಿ ಓಡಾಡಿದವರು. ಸುಖದ ಸುಪ್ಪತ್ತಿಗೆಯಲ್ಲಿ ಇದ್ದವರು. ತಮ್ಮ ತಾಯಂದಿರ ಬಳಿ ನೂರೆಂಟು ಸಲ ಓಡಾಡುತ್ತಿದ್ದವರು. ಇದೀಗ ಕಾಡುಮೇಡುಗಳಲ್ಲಿ, ಗುಂಡ್ಡಗಾಡುಪ್ರದೇಶದಲ್ಲಿ, ಬಂಜರು ಭೂಮಿಯಲ್ಲಿ ಅಲೆಯುತ್ತಿದರೂ ಅವರಿಗೆ ಆಲಸಿಕೆ, ಆಯಾಸ ತೋರದೆ ಸದಾ ಉಲ್ಲಸಿತರಾಗಿದ್ದರು. ಬಲ, ಅತಿಬಲ ಎಂಬ ಮಂತ್ರಗಳ ಉಚ್ಚಾರದಿಂದ ಬಲಗೊಂಡು ಆಯಾಸವರಿಯದೆ ಅರಮನೆಯಲ್ಲಿ ಓಡಾಡಿದಂತೆ ಭೀಕರ ಆರಣ್ಯದಲ್ಲಿ ದಾರಿಸಾಗುತ್ತಿದ್ದರು.

ಅನ್ವಯ :—ಮಣಿಕುಟ್ಟಿಮೋಚಿತೌ ತೌ ಮುನಿಪ್ರದಿಷ್ಟಯೋಃ ಬಲಾತಿಬಲಯೋಃ ವಿದ್ಯಯೋಃ ಪ್ರಭಾವತಃ ಮಾತೃಪಾರ್ಶ್ವಪರಿವರ್ತಿನೌ ಇವ ಪಥಿ ನ ಮಮ್ಲತುಃ ॥

ಮಣಿಕು = ಮಣೀನಾಂ ಕುಟ್ಟಿಮಾಃ ತೇಷಾಮ್—ಉಚಿತೌ—ಉಚಿತ—ವಾಹನೋಚಿತಃ — ಮಣಿಕುಟ್ಟಿಮೋಚಿತೌ = ಮಣಿಬದ್ಧಭೂಮಿಸಂಚಾರೋಚಿತೌ—ಮುನಿಪ್ರದಿಷ್ಟಯೋಃ = ಕೌಶಿಕೇನೋಪದಿಷ್ಟಯೋ—ಬಲಾತಿಬಲಯೋರ್ವಿದ್ಯಯೋ = ಬಲಾತಿಬಲಾಖ್ಯಯೋರ್ವಿದ್ಯಾಯೋ = ಬಲಾತಿಬಲಾಖ್ಯಮಂತ್ರಯೋಃ — ಪ್ರಭಾವತಃ = ಸಾಮರ್ಥ್ಯಹೊಂದಿ—ಪಥಿ ನ ಮಮ್ಲತುಃ = ನ ಮ್ಲಾನಾವಿತ್ಯರ್ಥಃ—ಬಲಾತಿಬಲ = ಬಲ, ಅತಿಬಲವೆಂಬ ಮಂತ್ರಗಳು.

**10. ಪೂರ್ವವೃತ್ತಕಥಿತಃ ಪುರಾವಿದಃ ।**
**ಸಾನುಜಃ ಪಿತೃಸಖಸ್ಯ ರಾಘವ ॥**
**ಉಹ್ಯಮಾನ ಇವ ವಾಹನೋಚಿತಃ ।**
**ಪಾದಚಾರಮಪಿ ನ ವ್ಯಭಾಯತ್ ॥ ೧೦ ॥**

ಅಯೋಧ್ಯಾಪುರದಲ್ಲಿದ್ದಾಗ ಶ್ರೀರಾಮನು ತನ್ನ ಅನುಜನ ಸಹಿತ ರಥದಲ್ಲಿ ಕುಳಿತು ಯಾನಮಾಡುತ್ತಿದ್ದರೂ ಈಗ ಅವನಿಗೆ ಕಾಲ್ನಡಿಗೆ ಬೇಸರವೆನಿಸಲೇ ಇಲ್ಲ. ತನ್ನ ತಂದೆಯ ಸಖನಾದ ಮಹರ್ಷಿ ವಿಶ್ವಾಮಿತ್ರನು ಭಾರತದ ಪೂರ್ವೇತಿಹಾಸ, ಪುರಾಣಕಥನ, ಜಾನಪದ ಕಥನಗಳಲ್ಲಿ ಕೋವಿದನು. ಕಥೆಗಳನ್ನು ಹೇಳುವುದರಲ್ಲಿ ನಿಷ್ಣಾತನು. ಅಪೂರ್ವ ವೃತ್ತಾಂತವನ್ನು, ಸ್ಥಳನಾಮವಿಶೇಷಗಳನ್ನು (ಐತಿಹ್ಯಗಳನ್ನು), ಸ್ಥಳಪುರಾಣ, ಇತಿಹಾಸ, ಮಾಸ್ತಿಕಲ್ಲು, ವೀರಗಲ್ಲುಗಳ ಹಿನ್ನೆಲೆ, ಪ್ರದೇಶ ಸಮಾಚಾರಗಳನ್ನು ಕೇಳುತ್ತ ಕೇಳುತ್ತ ಶ್ರೀರಾಮನಿಗೆ ದಾರಿ ಸಾಗಿದುದೇ ತಿಳಿಯಲಿಲ್ಲ. ಅವನು ಪಾದಚಾರಿಯಾಗಿ ಆಲಸಿಕೆಯು ತಾನರಿಯದೆ ನಡೆಯುತ್ತಿದ್ದನು. ಲಕ್ಷ್ಮಣನಾದರೊ ಎಳ್ಳಷ್ಟು ಬೇಸರವಿಲ್ಲದೆ, ಆಹ್ಲಾದಕರವಾದ ಕಥೆಗಳನ್ನು, ಪೂರ್ವೇತಿಹಾಸಗಳನ್ನು ಕೇಳುತ್ತ, ಹೂಂಗುಟ್ಟುತ್ತಾ ಅಣ್ಣನ ಜೊತೆಯಲ್ಲಿ ಸಾಗುತ್ತಲೇ ಇದ್ದನು.

ಅನ್ವಯ :—ವಾಹನೋಚಿತಃ ಸಾನುಜಃ ರಾಘವಃ ಪುರಾವಿದಃ ಪಿತೃಸಖಸ್ಯ ಪೂರ್ವವೃತ್ತಕಥಿತೈಃ ಉಹ್ಯಮಾನಃ ಇವ ಪಾದಚಾರಮಪಿ ನ ವ್ಯಭಾವಯತ್ ॥

ಪುರಾವಿದಾಂ=ಪುರಾ ವೇತ್ತಿ ಇತಿ ಪುರಾವಿದಃ=ಪೂರ್ವವೃತ್ತಾಭಿಜ್ಞಸ್ಯ—ಪೂರ್ವವೃತ್ತ ಕಥಿತೈಃ = ಪುರಾ ವೃತ್ತಕಥಾಭಿರಂಹ್ಯಮಾನ ಇವ ॥

**11. ತೌ ಸರಾಂಸಿ ರಸವದ್ಭಿರಂಬುಭಿಃ ।**
**ಕೂಜಿತೈಃ ಶ್ರುತಿಸುಖೈಃ ಪತತ್ರಿಣಃ ॥**
**ವಾಯವಃ ಸುರಭಿಪುಷ್ಪರೇಣುಭಿಃ ।**
**ಛಾಯಯಾ ಚ ಜಲದಾಃ ಸಿಷೇವಿರೇ ॥ ೧೧ ॥**

ಅವರ ಬಾಯಾರಿಕೆಯನ್ನು ನೀರಿನ ಕೊಳಗಳು ನೀಗಿದುವು. ಮಧುರವಾದ ನೀರಿನಿಂದ ಸರೋವರಗಳು ಅವರನ್ನು ಓಲೈಸಿದುವು. ಪಕ್ಷಿಗಳು ಮಧುರವಾಗಿ ಹಾಡಿದುವು. ಆ ಪಕ್ಷಿಗಳ ಉಲಿಯನ್ನು ಕೇಳಿ ಅವರು ಶ್ರುತಿಸೌಖ್ಯವನ್ನು ಸವಿದರು. ತಂಪಾದ ತಣ್ಣೆಲರು ಪುಷ್ಪಗಳ ಪರಾಗದಿಂದ ಬೆರೆತು, ಸುವಾಸನೆಯನ್ನು ಬೀರುತ್ತಾ ಹಿತಕರವಾಗಿ ಬೀಸಿ (ಕಮ್ಮೆಲರ ಹಂಡಿ ಬೀಸಿ) ಅವರ ಆಯಾಸ, ಬಳಲಿಕೆಯನ್ನು ನೀಗಿತು. ತಲೆಯ ಮೇಲೆ ಬಾನಲ್ಲಿ ಮೋಡಗಳು ಕಲೆತು ತಂಪಾದ ವಾತಾವರಣವನ್ನು ಸೃಷ್ಟಿಸಿದುವು. ತಂಪಾದ ನೆಳಲು ಸಂತ್ತಲೂ ಕವಿಯುವಂತೆ ಮಾಡಿ ಮುಗಿಲೋಳಿ ಸೇವಿಸಿತು.

ಪತತ್ರಿಣ = ಪಕ್ಷಿಣಃ—ಪತತ್ರಮ್ = ರೆಕ್ಕೆ. ಪತತ್ರಮ್ ಏಷಾಮ್ ಅಸ್ತಿ ಇತಿ—ಪತತ್ರ + ಇನ್—ರಸವದ್ಭಿಃ=ಮಧುರೈರಪ್ಭಿಃ ಸಿಷೇವಿರೇ—ವಾಯವಃ ಸುರಭಿಪುಷ್ಪ ರೇಣುಭಿಃ—ಜಲದಾಶ್ಛಾಯಯಾ ಚ—ಸಿಷೇವಿರೇ ಇತಿ ಸರ್ವತ್ರ ಸಂಬಧ್ಯತೇ ॥

**12. ನಾಂಭಸಾಂ ಕಮಲಶೋಭಿನಾಂ ತಥಾ ।**
**ಶಾಖಿನಾಂ ಚ ನ ಪರಿಶ್ರಮಚ್ಛಿದಾಮ್ ॥**
**ದರ್ಶನೇನ ಲಘುನಾ ಯಥಾ ತಯೋಃ ।**
**ಪ್ರೀತಿಮಾಪುರುಭಯೋಸ್ತಪಸ್ವಿನಃ ॥ ೧೨ ॥**

ಆ ಮನೋಜ್ಞರೂಪರಾದ, ಸಾಧುಜನಪ್ರಿಯರಾದ ರಾಮಲಕ್ಷ್ಮಣರನ್ನು ಕಂಡು ಅವರ ದರ್ಶನದಿಂದ ತಾಪಸಿಗಳ ಕಣ್ಣುಮನಸ್ಸುಗಳು ತಣಿದುವು, ತಮ್ಮ ಪರ್ಣಕುಟೀರಗಳ ಬಳಿ ತಾವರೆಗಳಿಂದ ತುಂಬಿರುವ ಕೊಳಗಳಿದ್ದರೇನು, ನೆರಳನ್ನು ಕೊಡುವ ಮರಗಳು ಎಷ್ಟಿದ್ದರೇನು, ಅವರನ್ನು ಕಾಣಲು, ಅವರು ಬಯಸಿದ ಅಣುಗರನ್ನು ನೋಡಲು ತಾಪಸಗಣವು ಬಲುದೂರದಿಂದ ನಡೆದುಬಂದಿತು. ಅವರೀಗ ಸರ್ವಾಂಗಸುಂದರರಾದ ಆ ಬಾಲಕರನ್ನು ಕಂಡು ನಲಿದಾಡಿದರು. ಅವರ ಮನಸ್ಸಿಗೆ ಹೊಸ ತಂಪು, ತಣಿವು ದೊರಕಿತು (ನಲವಾಂತು ದೊಗೆಯ ಹೊಸ ತಂಪು ಮೇಣ್ ತಣಿವು). ಅವರಿಗೆ ತಾವರೆಯ ಕೊಳಗಳಿಂದ ನೆರಳನ್ನು ಕೊಡುವ ಮರಗಿಡಗಳಿಗಿಂತಲೂ ಹೆಚ್ಚಿನ ಸಂತೋಷಸುಖಗಳು ಆ ಕಿಶೋರರ ಮುಖ ದರ್ಶನಮಾತ್ರದಿಂದ ಲಭಿಸಿದುವು.

ತಪ ಏಷಾಮಸ್ತೀತಿ ತಪಸ್ವಿನಃ—ತಪಃ ಸಹಸ್ರಾಭ್ಯಾಂ ವಿನೀನೀ (ಪಾಣಿನಿ) ಇತಿ ವಿನಿಪ್ರತ್ಯಯಃ—ಲಘುನಾ—"ಕ್ಷಿಪ್ರೇಽಲ್ಪೇ ಲಘುಃ" ಇತ್ಯಮರಃ-ದರ್ಶನೇನ ಯಥಾ ಪ್ರೀತಿಮಾಪುಃ—ತಥಾ ಕಮಲಶೋಭಿನಾಮಂಭಸಾಂ ದರ್ಶನೇನ ನಾಪುಃ ॥

**13. ಸ್ಥಾಣುದಗ್ಧವಪುಷಸ್ತಪೋವನಂ ।**
**ಪ್ರಾಪ್ಯ ದಾಶರಥಿರಾತ್ತಕಾರ್ಮುಕಃ ॥**
**ವಿಗ್ರಹೇಣ ಮದನಸ್ಯ ಚಾರುಣಾ ।**
**ಸೋಽಭವತ್ಪ್ರತಿನಿಧಿರ್ನ ಕರ್ಮಣಾ ॥ ೧೩ ॥**

ಅವರು ಬರಬರುತ್ತ ಪರಮೇಶ್ವರನು ತಪವನೆಸಗಿದ ಪವಿತ್ರ ತಪೋವನಕ್ಕೆ ಬಂದರು. ಅಲ್ಲಿ ಪರಶಿವನು (ಸ್ಥಾಣುವು) ತನ್ನ ತಪೋಭಂಗಮಾಡಿದ ಮದನನನ್ನು (ಪಂಚಶರ) ತನ್ನ ಉರಿಗಣ್ಣಿನ ಜ್ವಾಲೆ ಸುಟ್ಟು ಭಸ್ಮಮಾಡಿದುದು ಅಲ್ಲಿಯೇ. ಅಲ್ಲಿಯೇ ಮನ್ಮಥನು ಅನಂಗನಾದನು. ದೇಹವಿಲ್ಲದ ದೇವನಾದನು. ಇದೀಗ ಪ್ರತಿಮನ್ಮಥನಾದ ಮದನಮೋಹನ ಸುಂದರಾಂಗನಾದ ಶ್ರೀರಾಮಚಂದ್ರನು ಕಾರ್ಮುಕಧರನಾಗಿ ಆಗಮಿಸಿರುವನು (ಸುಂದರ ಶರೀರದಿಂದಂಗಜನಿಗೆಣೆಯುಹನು). ಆ ಸುಂದರಶರೀರನು ಅಂಗಜನಿಗೆಣೆಯಾದ ಸೌಂದರ್ಯ ಶಾಲಿಯಾದರೂ ಆತನ ಕಾರ್ಯದಲ್ಲಿ ಹೋಲವೆ, ಆತನಿಗಿಂತ ಶೀರಾಭಿನ್ನನಾಗಿದ್ದನು.

ದಾಶರಥೀ = ರಾಮಃ—ಸ್ಥಾಣುರ್ಹರಃ = "ಸ್ಥಾಣು, ಕೀಲೇ, ಹರೇ, ಸ್ಥಿರೇ" ಇತಿ ವಿಶ್ವಃ—"ವಿಗ್ರಹ, ಸಮರೇ, ಕಾಯೇ" ಇತಿ ವಿಶ್ವಃ—ಪ್ರತಿನಿಧಿಃ ಪ್ರತಿಕೃತಿ, ಸದೃಶೋಽಭವತ್—ದೇಹೇನ ಮದನಸುಂದರ ಇತಿ ಭಾವಃ ॥

**14. ತಾ ಸುಕೇತುಸುತಯಾ ಖಿಲೀಕೃತೇ ।**
**ಕೌಶಿಕಾದ್ವಿದಿತ ಶಾಪಯಾ ಪಥಿ ॥**
**ನಿನ್ಯತುಃ ಸ್ಥಲನಿವೇಶಿ ತಾಟನೀ ।**
**ಲೀಲ್ಯೈವ ಧನುಷೀ ಅಧಿಜ್ಯತಾಮ್ ॥ ೧೪ ॥**

ಅವರು ಮುಂದುವರೆದು ಸುಕೇತು ಎಂಬ ಗಂಧರ್ವನ ಪುತ್ರಿಯಾದ ತಾಟಕಿಯೆಂಬ ಘೋರರಾಕ್ಷಸಿಯ ವಾಸಸ್ಥಾನವಾದ ಗೊಂಡಾರಣ್ಯವನ್ನು ಪ್ರವೇಶಿಸಿದರು (ಆ ಸುಕೇತು ಜೆಯಿರ್ಪ ಪಥದೊಳೈತರುವಂದು) ಹಿಂದೆ ಅಗಸ್ತ್ಯಮಹರ್ಷಿಯ ಉಗ್ರಕೋಪಕ್ಕೆ ಬಲಿಯಾದ ತಾಟಕಿ ಘೋರರೂಪಿನಿಂದ ಮೆರೆಯುತ್ತಾ ಸುತ್ತುಮುತ್ತಲಿನ ಪ್ರದೇಶವನ್ನು ಹಾಳುಗೆಡವಿದ್ದಳು. ಆ ದನುಜೆ ತಮೋಗುಣದ ಪ್ರತೀಕವೆನಿಸಿ, ನಾಗರಿಕತೆಯ ಶತ್ರುವಾಗಿದ್ದಳು. ಅವಳು ಸಾವಿರ ಆನೆಯ ಬಲ ಹೊಂದಿ ಭೂಭಾರಕಳಾಗಿ ಮೆರೆಯುತ್ತಿದ್ದಳು. ಆ ಪಥದಲ್ಲಿ ಬರುತ್ತಿದ್ದಾಗ ಈ ವಿಷಯಗಳನ್ನು ಅರುಹುತ್ತ, ಆ ಮುನೀಂದ್ರನು ಆಕೆಯ ಶಾಪವೃತ್ತಾಂತವನ್ನು ತಿಳಿಹಿದನು. ಅದನ್ನು ಕೇಳಿದ ಆ ನೃಪಕುಮಾರರು ಬಿಲ್ಲುಗಳ ಕೊನೆಯನ್ನು ನೆಲಕ್ಕೆ ಊರಿ ಲೀಲೆಯಿಂದ ಬಗಿದೆಳೆದು ಮೌರ್ವಿಯನ್ನು ಜೋಡಿಸಿದರು. ಬಿಲ್ಲಿಗೆ ಹೆದೆಯೇರಿಸಿ ಜ್ಯಾನಾದಗೈದರು.

ಪುರುಷಾದೀ ಮಹಾಯಕ್ಷೀ ವಿಕೃತಾ ವಿಕೃತಾನನಾ—ವಿದಿತ ಶಾಪಯಾ ಸುಕೇತುಸುತಯಾ ತಾಡಕಯಾ ಖಿಲೀಕೃತೇ ಪಥಿ—"ಖಿಲಮಪ್ರಹತಂ ಸ್ಥಾನಮ್" ಇತಿ ಹಲಾಯುಧಃ—ಅಧಿಕೃತೇ ಜ್ಯೇಮೌರ್ವ್ಯಯೋಸ್ತೇ ಅಧಿಜ್ಯೇ—"ಜ್ಯಾ ಮೌರ್ವೀ ಮಾತೃಭೂಮಿಷು" ಇತಿ ವಿಶ್ವಃ ॥

15. ಜ್ಯಾನಿನಾದಮಥ ಗೃಹ್ಣತೀ ತಯೋಃ ।
ಪ್ರಾದುರಾಸ ಬಹುಲಕ್ಷಪಾ ಛವಿ ॥
ತಾಡಕಾ ಚಲಕಪಾಲಕುಂಡಲಾ ।
ಕಾಲಿಕೇವ ನಿಬಿಡಾ ಬಲಾಕಿನೀ ॥ ೧೫ ॥

ಆ ಹೆದೆಯ ಬಿರುದನಿಯು ಕೇಳಿಸಿದಾಕ್ಷಣವೆ, ಆ ದನುಜೆಯು ಕ್ರೋಧದಿಂದ ಕಿಡಿಕಿಡಿಯಾಗಿ ಸುಂಟರಗಾಳಿಯು ಬೀಸಿದಂತೆ ಪ್ರಚಂಡ ರಭಸದಿಂದ ಧಾವಿಸಿ ಓಡಿಬಂದಳು. ಅವಳ ರೂಪೋ ಬಣ್ಣವೋ ಎಲ್ಲವೂ ವಿಕಾರವೇ. ಬೆಲ್ಲದ ಬೈಲಿನ ಬೆರ್ಚಪ್ಪನಂತೆ. ಅಮಾವಾಸ್ಯೆಯ ಕಾಳರಾತ್ರಿಯಂತೆ. ಕಾಳಿಕಾ ಎಂಬ ಯೋಗಿನಿಯಂತೆ ವಿಕೃತರೂಪದ ಭಯಂಕರಾಕೃತಿಯು ಪೆಡಂಭೂತವನ್ನು ಹೋಲುವ ಕ್ರೂರ ರಕ್ಕಸಿ. ಅವಳ ಕರ್ಣಕುಂಡಲಗಳು ಮಾನವರ ತಲೆಬುರುಡೆಗಳಿಂದ ರಚಿತವಾದುವು (ತಲೆಯೋಡಿನಲೆವ ಕುಂಡಲದವಳು). ಅಂತಹ ಕಪಾಲಕುಂಡಲಗಳನ್ನು ತೋರುತ್ತ, ಭೀಷಣಾಕೃತಿಯು ಸಹಸ್ರಾರು ಕೊಕ್ಕರೆಗಳ ಸಾಲು ಆಕಾಶಮಾರ್ಗದಲ್ಲಿ ಕಪ್ಪುಮೋಡಗಳ ರಾಶಿಗಳ ಮಧ್ಯೆ ಒಟ್ಟೈಸಿ, ಚೀರುತ್ತ, ಹಾರುತ್ತ, ಭೂಮಿಯನ್ನು ನಡುಗಿಸುತ್ತ, ಅಲ್ಲೋಲಕಲ್ಲೋಲ ಮಾಡುತ್ತ ಬರುತ್ತಿದ್ದಳು. ಭಯವನ್ನು ಹುಟ್ಟಿಸುತ್ತ, ಸಿಡಿಲ ಘರ್ಜನೆ ಮೊಳಗುತ್ತ, ಬರಸಿಡಿಲಂತೆ ಓಡಿಬರುತ್ತಿದ್ದಳು (ಬೆಳ್ವಕ್ಕಿ ಒಟ್ಟೈಸಿದ ಅಭ್ರದೋಳಿಯೊಲು)

ಅನ್ವಯಃ—ಅಥ ತಯೋಃ ಜ್ಯಾನಿನಾದಂ ಗೃಹ್ಣತೀ ಬಹುಲಕ್ಷಪಾಛವಿಃ ಚಲಕಪಾಲಕುಂಡಲಾ ತಾಡಕಾ ನಿಬಿಡಾ ಬಲಾಕಿನೀ ಕಾಲಿಕೇವ ಪ್ರಾದುರಾಸ ॥

ಬಹುಲಕ್ಷಪಾಛವಿಃ = ಕೃಷ್ಣಪಕ್ಷರಾತ್ರಿವರ್ಣಾ—"ಬಹುಲಃ ಕೃಷ್ಣಪಕ್ಷೇ ಚ" ಇತಿ ವಿಶ್ವಃ—ಚಲೇಕಪಾಲೇ ಏವ ಕುಂಡಲೇ ಯಸ್ಯಾಃ ಸಾ ತಥೋಕ್ತಾ ತಾಡಕಾ—ನಿಬಿಡಾ = ಸಾಂದ್ರಾ—ಬಲಾಕಿನೀ = ಬಲಾಕಾವತೀ—"ಕಾಲಿಕಾಯೋಗಿನೀ ಭೇದೇ ಕಾರ್ಷ್ಣ್ಯೇ ಗೌರ್ಯಾಂ ಘನಾ ಬಲೌ" ಇತಿ ವಿಶ್ವಃ—ಪ್ರಾದುರಾಸ=ಪ್ರಾದುರ್ಭಾವ = ಪ್ರಾದುರ್ಭೂವ—ಬಲಾಕಿನೀ = ಕೊಕ್ಕರೆಗಳು—ಬಹುಲ = ಕೃಷ್ಣಪಕ್ಷ ॥

16. ತೀವ್ರವೇಗಧುತಮಾರ್ಗವೃಕ್ಷಯಾ ।
ಪ್ರೇತಚೀವರವಸಾ ಸ್ವನೋಗ್ರಯಾ ॥
ಅಭ್ಯಭಾವಿ ಭರತಾಗ್ರಜಸ್ತಯಾ ।
ವಾತ್ಯಯೇವ ಪಿತೃಕಾನನೋತ್ಥಯಾ ॥ ೧೬ ॥

ಅವಳ ಅಬ್ಬರ ತಾಳ ಹೇಳತೀರದು. ಮಾರ್ಗದಲ್ಲಿ ಬೆಳೆದುನಿಂತ ಬೃಹದಾಕಾರದ ಮರಗಳನ್ನು ಬೀಳಿಸುತ್ತ, ಭಯಂಕರವಾಗಿ ಬೊಬ್ಬಿಡುತ್ತಾ (ಭರದಿಂದ ಊಳಿಟ್ಟು), ಅವಳ ಬೊಬ್ಬೆಗೆ ಇಳೆ (ಭೂಮಿ) ನಡುಗಿತು. ದೊಡ್ಡ ತಾಳೆಮರದಂತಹ ಮಹಾಕಾಯದಿಂದೊಪ್ಪುವ ಆ ದನುಜೆ ಅಸಹ್ಯವಾದ ಶವದ ಬಟ್ಟೆಯನ್ನು ಧರಿಸಿದ್ದಳು. ಆ ಬಟ್ಟೆಯಾದರೋ ಅಲ್ಲಲ್ಲಿ ಹರಿದು ಜೀರ್ಣವಾಗಿತ್ತು. ಚೀರುತ್ತಾ, ಹಾರುತ್ತಾ, ಧೂಳನ್ನು ಎಬ್ಬಿಸುತ್ತಾ, ಅಲ್ಲೋಲಕಲ್ಲೋಲಮಾಡುತ್ತಾ, ಪ್ರೇತಭೂಮಿಯಿಂದ ಹೊರಟ ಪ್ರಬಲವಾದ ಸುಂಟರಗಾಳಿಯಂತೆ, ಪ್ರೇತವಸನಧಾರಿಯಾಗಿ, ಗಬ್ಬುವಾಸನೆ ಸುತ್ತಲೂ ಬೀರುತ್ತ

ಆ ದನುಜೆ ಎದ್ದು ಮಹಾವೇಗದಿಂದ, ನಿಟ್ಟೋಟದಿಂದ ಬಂದು ರಾಘವನನ್ನು ತರುಬಿದಳು. ಸಿಂಹದ ಭೀಕರತೆಯನ್ನು ತೋರುತ್ತಾ, ರೌದ್ರಮೂರ್ತಿಯಾಗಿ ರಾಘವನ ಮೇಲೆ ಹಲ್ಲೆಮಾಡಲು ಮೃತ್ಯುಪಾಶದಂತಹ ಕೈಗಳನ್ನು ಮೇಲಕ್ಕೆ ಎತ್ತಿದಳು.

ಪ್ರೇತಚೀವರಾಣಿ = ವಸ್ತ್ರ ಇತಿ ಚೀವರಮಾಃ ತಯಾ ಪ್ರೇತಚೀವರವಸಾ—ಪಿತೃಕಾನನೇ=ಸ್ಮಶಾನ—ಭರತಾಗ್ರಜೋ ರಾಮೋಽಭ್ಯಭಾವ್ಯಭಿಭೂತಃ—ತೀವ್ರವೇಗೇತ್ಯಾದಿ ವಿಶೇಷಣಾನಿ ವಾತ್ಯಾಮಪಿ ಯೋಜ್ಯಾನಿ ॥

**17.** **ಉದ್ಯತೈಕಭುಜಯಷ್ಟಿಮಾಯತೀಂ ।**
**ಶ್ರೋಣಿಲಂಬಿಪುರುಷಾಂತ್ರಮೇಖಲಾಮ್ ॥**
**ತಾಂ ವಿಲೋಕ್ಯ ವನಿತಾವಧೇ ಘೃಣಾಂ ।**
**ಪತ್ರಿಣಾ ಸಹ ಮುಮೋಚ ರಾಘವ** ॥ ೧೭ ॥

ರಾಘವನನ್ನು ಹೊಡೆಯಲು ಆ ದನುಜೆ ಯಮದಂಡವನ್ನು ಹೋಲುವ ತನ್ನ ನಿಡಿದಾದ ಬಾಹುದಂಡವನ್ನು ಚಾಚಿ ಬರುತ್ತಿರುವುದನ್ನು ಕಂಡು ಕೂಡಲೇ ಒಂದು ಹರಿತವಾದ ಕೂರ್ಗಣೆಯನ್ನು ಎಸೆದನು. ಆ ದನುಜೆ ತನ್ನ ನಿತಂಬದ ಸುತ್ತಲೂ, ಹೂಮಾಲೆಯಂತೆ, ಮಾನವರಕ್ತಸಿಕ್ತ ಕರುಳುಮಾಲೆಯನ್ನು ಧರಿಸಿದ್ದಳು. ಸ್ತ್ರೀವಧೆಯು ಶಾಸ್ತ್ರನಿಷಿದ್ಧ. ಹೆಂಗಸರನ್ನು ಕೊಲ್ಲಬಾರದೆಂದು ಧರ್ಮಶಾಸ್ತ್ರಗಳು ಸಾರುತ್ತಿವೆ. ಸ್ತ್ರೀವಧೆಯು ದಯೆಯನ್ನು ತೊರೆದಂತೆ, ಅಥವಾ ದಯೆಯನ್ನು ಎಸೆದಂತೆ ಶ್ರೀರಾಮನ ಗುರುವಿನ ಆಜ್ಞೆಯನ್ನು ಶಿರಸಾವಹಿಸಿ ಆ ನಿಶಿತಬಾಣವನ್ನು ಎಸೆದನು. ಸ್ತ್ರೀವಧೆಯ ಬಗ್ಗೆ ತನಗಿರುವ, ಸಂಶಯ, ದಯೆ, ಕರುಣೆ ಅನುಕಂಪವನ್ನು ಬದಿಗೊತ್ತಿ ರಾಘವನು ಜಗದ್ಗುರು ವಿಶ್ವಾಮಿತ್ರರ ಆಜ್ಞೆಯನ್ನು ನೆರವೇರಿಸಲು ದಿಟ್ಟಹೆಜ್ಜೆಯನಿಟ್ಟನೆಂದು.

ಶ್ರೋಣಿಲಂಬಿನೀ ಪುರುಷಾಣಾಮಂತ್ರಾಣ್ಯೇವ ಮೇಖಲಾ ಯಸ್ಯಾಸ್ತಾಮ್—ಸ್ತ್ರೀವಧನಿಮಿತ್ತೇ ಘೃಣಾಂ ಜುಗುಪ್ಸಾಂ ಕರುಣಾಂ ವಾ—"ಜುಗುಪ್ಸಾ ಕರುಣೇ ಘೃಣೇ" ಇತ್ಯಮರಃ ॥ ಪತ್ರಿಣೇಷುಣಾ ಸಹ—"ಪತ್ರೀರೋಪ ಇಷುರ್ದ್ವಯೋ" ಇತ್ಯಮರಃ—ಆಯತೀಮ್=ಆಯಾಂತೀಮ್-ಶ್ರೋಣಿ ಶ್ರೋಣಲಂಬಿನೀ ಪುರುಷಾಣಾಂ ಅಂತ್ರಾಣಿ ಇವ ಮೇಖಲಾ ಯಸ್ಯಾಃ ಸಾ ॥

**18.** **ಯಚ್ಚಕಾರ ವಿವರಂ ಶಿಲಾಘನೇ ।**
**ತಾಡಕೋರಸಿ ಸ ರಾಮಸಾಯಕಃ ॥**
**ಅಪ್ರವಿಷ್ಟವಿಷಯಸ್ಯ ರಕ್ಷಸಾಂ ।**
**ದ್ವಾರತಾಮಗಮದನ್ತಕಸ್ಯ ತತ್** ॥ ೧೮ ॥

ಹರಿತವಾದ ರಾಮಬಾಣವು ತಾಟಕಿಯ ಕಲ್ಲೆದೆಯನ್ನು ಕೊರೆದು ಒಳಹೊಕ್ಕಿತು. ಹೀಗೆ ಹೊಕ್ಕಿರಿದು ಉಂಟಾದ ಬಿಲವು ಮೃತ್ಯುಲೋಕಕ್ಕೆ ಒಡೆಯನಾದ ಯಮಧರ್ಮರಾಜನಿಗೆ ಪ್ರವೇಶಿಸಲು ಹೆದ್ದಾರಿಯಾಯಿತು. ಈ ತನಕ ರಾವಣನು ಯಮನೇ ಮೊದಲಾದ ದೇವಾದಿದೇವತೆಗಳನ್ನು ತನ್ನ ಮನೆಯ ಊಳಿಗದವರನ್ನಾಗಿ ಮಾಡಿಕೊಂಡಿ

ದ್ದನು. ಇನ್ನಿಂದ ಯಮನು ರಾಕ್ಷಸರ ಪ್ರಾಣವನ್ನು ಮುಟ್ಟುವಂತಿರಲಿಲ್ಲ. ಹಿಂದೇಟು ಹೊಡೆಯುತ್ತಿದ್ದನು. ಇದೀಗ ದಾರಿಕಾಣದೆ ತೊಳಲಿ ಬಳಲುತ್ತಿರುವ ಅಂತಕನಿಗೆ ಪ್ರವೇಶಿಸಲು ಕದ ತೆರೆದಂತೆ (ಬಾಗಿಲು, ದ್ವಾರ) ಆಯಿತು. ಅಡೆತಡೆಗಳು ನಿವಾರಣೆಯಾಗಿ ದಾರಿಯು ಸುಗಮವಾಯಿತು (ಆದತ್ತ ಕದ ತೆರೆದವೋಲು), ಅನುಕೂಲಪಥವಾಯಿತು.

ಅನ್ವಯ :—ಸ ರಾಮಸಾಯಕಃ ಶಿಲಾಘನೇ ತಾಡಕೋರಸಿ ಯದ್ವಿವರಂ ಚಕಾರ ತತ್ ರಕ್ಷಸಾಮ್ ಅಪ್ರವಿಷ್ಟವಿಷಯಸ್ಯ ಅಂತಕಸ್ಯ ದ್ವಾರತಾಮ್ ಅಗಮತ್ ॥

ತಾಡಕೋರಸಿ ಯದ್ವಿವರಂ ರಂಧ್ರಂ ಚಕಾರ ತದ್ವಿವರಂ ರಕ್ಷಸಾಮಪ್ರವಿಷ್ಟವಿಷಯಸ್ಯ —ಅಪ್ರವಿಷ್ಟರಕ್ಷೋ ದೇಶಸ್ಯೇತ್ಯರ್ಥಃ—ಸಾಪೇಕ್ಷತ್ವೇಽಪಿ ಗಮಕತ್ವಾತ್ ಸಮಾಸಃ —ಅಂತಕಸ್ಯ ಯಮಸ್ಯ ದ್ವಾರತಾಮಗಮತ್ ॥

**19. ಬಾಣಭಿನ್ನಹೃದಯಾ ನಿಪೇತುಷೀ ।**
**ಸಾ ಸ್ವಕಾನನಭುವಂ ನ ಕೇವಲಾಮ್ ॥**
**ವಿಷ್ಟಪತ್ರಯ ಪರಾಜಯ ಸ್ಥಿರಾಂ ।**
**ರಾವಣಶ್ರಿಯಮಪಿ ವ್ಯಕಂಪಯತ್ ॥ ೧೯ ॥**

ಶರಭಿನ್ನಹೃದಯೆಯಾಗಿ, ರಾಮಬಾಣದಿಂದ ಹೃದಯ ಕವಾಟವು ಚೂರು ಚೂರಾಗಿರಲು ಸುತ್ತುಮುತ್ತಲಿನ ಕಾಡುಮೇಡುಗಳನ್ನು ನಡುಗಿಸುತ್ತಾ, ಭಯಂಕರ ಹೆಣ್ಣುತೋಳನಂತೆ ಚೀರಾಡುತ್ತಾ ಆ ರಕ್ಕಸಿ ನೆಲಕ್ಕುರುಳಿದಳು. ಅಷ್ಟುಮಾತ್ರವಲ್ಲ, ಅವಳ ರಂಪಾಟ (ಬೊಬ್ಬಾಟ) ಭೂಮಿ-ಆಕಾಶವನ್ನು ಮಾತ್ರವಲ್ಲ ಮೂರು ಲೋಕ ವನ್ನು ಗೆದ್ದು ಸುಸ್ಥಿರನೆನಿಸಿ ಅಜೇಯನಾದ (ಸುಸ್ಥಿರನೆನಿಸಿದ) ರಕ್ಕಸಸಾರ್ವಭೌಮ ನಾದ ರಾವಣೇಶ್ವರಸಿರಿಯನ್ನು, ವೈಭವಲಕ್ಷ್ಮಿಯನ್ನು (ಭಾಗ್ಯಲಕ್ಷ್ಮಿಯನ್ನು), ಅವನ ಔನ್ನತ್ಯ ಹಾಗೂ ಏಳ್ಗೆಯನ್ನು ಕಂಪಿಸುವಂತೆ ಮಾಡಿತು. ರಾವಣಸಿರಿಯನ್ನು ಅದುರಿಸಿದಳು (ನಡುಗಿಸಿದಳು), ದಾನವಸಾರ್ವಭೌಮನ ಅಟ್ಟಹಾಸದ, ಭಯರಹಿತ ಹೃದಯವನ್ನು ಭಯವು ಆವರಿಸಿತು. ಅವಳು ನೆಲಕ್ಕುರುಳುವುದು ರಾಕ್ಷಸಭಾಗ್ಯಶ್ರೀಯು ಕಂಪಿಸ ತೊಡಗಿದಳು.

ನಿಪೇತುಷೀ = ನಿಪೇತಿವಸ್—ನಿ + ಪತ್—ನಿಪೇತುಷೀ ॥ ನಿಪತಿತಾ ಸತಿ—ಕಿಂತು ವಿಷ್ಟಪತ್ರಯಸ್ಯ ಲೋಕತ್ರಯಸ್ಯ ಪರಾಜಯೇನ ಸ್ಥಿರಾಂ ರಾವಣಶ್ರಿಯಮಪಿ ವ್ಯಕಂಪ ಯತ್ ॥

**20. ರಾಮಮನ್ಮಥಶರೇಣ ತಾಡಿತಾ ।**
**ದುಃಸಹೇನ ಹೃದಯೇ ನಿಶಾಚರೀ ॥**
**ಗಂಧವದ್ರುಧಿರಚಂದನೋಕ್ಷಿತಾ ।**
**ಜೀವಿತೇಶ ವಸತಿಂ ಜಗಾಮ ಸಾ ॥ ೨೦ ॥**

ಶ್ರೀರಾಮನೆಂಬ ಮನ್ಮಥನಿಂದ ಹೂಡಲ್ಪಟ್ಟ ಬಾಣದಿಂದ ಗಾಯಗೊಂಡು ಆ ನಿಶಾಚರಿಯು ಸಹಿಸಲಾರದೆ ಯಾತನೆಗಳನ್ನು ಅನುಭವಿಸುತ್ತ ತನ್ನ ಜೀವಿತ್ತೇಶರನಾದ

ಯಮನ ಆಲಯಕ್ಕೆ ಅಭಿಸಾರಿಕೆಯಂತೆ ಹೋದಳು. ಶ್ರೀರಾಮನ ಸಾಯಕವು ಹೃದಯ ವನ್ನು ಒಳಹೊಕ್ಕು ಭೇದಿಸಿ ಅರುಣರಸಗಂಧವನು (ರಕ್ತವನ್ನು) ತನುವಿನಲ್ಲಿ ಧರಿಸುವಂತೆ ಮಾಡಿತು. ಆಕೆ ರಕ್ತದೋಕುಳಿಯಲ್ಲಿ ಸ್ನಾನವಾಡುತ್ತ, ದುಃಸಹವಾದ ಯಾತನೆಯನ್ನು ಅನುಭವಿಸುತ್ತ ತನ್ನ ಜೀವೇಶನ ವಸತಿಗೆ ತೆರಳಿದಳು (ತನ್ನ ಪ್ರೇಮಿಯ ಮನೆಗೆ). ಆಕೆ ಹಳದಿ ಮತ್ತು ಗಂಧದ (ಚಂದನ ಮತ್ತು ಕುಂಕುಮದ) ಚೂರ್ಣವನ್ನು ಮೈಗೆ ಲೇಪಿಸಿ ಕೊಂಡು ಅಭಿಸಾರಿಕೆಯಂತೆ ತನ್ನ ಪ್ರಾಣಪತಿಯ (ಪ್ರಾಣೇಶನ) ಮನೆಗೆ ನಡೆದಳು ತನ್ನ ಪ್ರಾಣಕ್ಕೆ ಒಡೆಯನಾದ ಯಮಧರ್ಮರಾಯನ ನಗರಿಗೆ ಅಭಿಸಾರಿಕೆಯಂತೆ ನಡೆದಳು (ಯಮನ ಲೋಕವಾದ ಸೈಮಿನೀನಗರಕ್ಕೆ).

ನಿಶಾಸು ಚರತೀತಿ = ನಿಶಾಚರೀ = ರಾಕ್ಷಸೀ—ತಸ್ಯ ಶರೇಣ ಹೃದಯಂ ಉರಸಿ ಮನಸಿ ಚ—''ಹೃದಯಂ ಮನ ಉರಸೋಃ'' ಇತಿ ವಿಶ್ವಃ—ತಾಡಿತಾ ವಿದ್ಧಾಂಗಾ ಗಂಧ ವದ್ದುರ್ಗಂಧಿಯದ್ರುಧಿರಸವ್ಯಕ್ ತದೇವ ಚಂದನಂ ತೇನೋಕ್ಷಿತಾ ಲಿಪ್ತಾ—ಯೇ ರುಂಧಿರಚಂದನೇ, ಕುಂಕುಮಚಂದನೇ—''ರುಂಧಿರೇ ಕುಂಕುಮಹಾ ಸೃಜೋಃ''ಇತ್ಯುಭಯ ತ್ರಾಪಿ ವಿಶ್ವಃ—ಜೀವಿತೇಶ್ವರಃ=ಪ್ರಾಣೇಶ್ವರಸ್ಯ ಚ—ವಸತಿಂ ಜಗಾಮ—ಕಾಂತಾರ್ಥಿನೀ ತುಯಾಯಾತಿ ಸಂಕೇತಂ ಸಾಭಿಸಾರಿಕಾ—ಗಂಧವತ್=ದುರ್ಗಂಧಯುತ್ ರುಧಿರಂ ತದೇವ ಚಂದನಂ ತೇನ ಉಕ್ಷಿತಾ—ಲಿಪ್ತಾ—ಗಂಧವತೀ ಯೇ ರುಧಿರಚಂದನೇ (ರುಧಿಂ = ಕುಂಕುಮ) ಅಭಿಸಾರಿಕಾಃ ತಾಡಕಾಯಾಃ ಅಭಿಸಾರಿಕಾಯಾಃ ಸಮಾಧಿಃ ಅಭಿಧೀಯತೇ —ಯಮ = ಪ್ರಾಣಾಧಿಪತಿ = ಮರಣಾಧಿಪತಿ ॥

**21. ನೈರ್ಋತಘ್ನಮಥಮನ್ತ್ರವನ್ಮುನೇಃ ।**
**ಪ್ರಾಪದಸ್ತ್ರಮವದಾನತೋಷಿತಾತ್ ॥**
**ಜ್ಯೋತಿರಿಂಧನನಿಪಾತಿ ಭಾಸ್ಕರಾತ್ ।**
**ಸೂರ್ಯಕಾನ್ತ ಇವ ತಾಟಕಾನ್ತಕಃ ॥ ೨೧ ॥**

ತಾಟಕಾಂತನಾದ ಶ್ರೀರಾಮಚಂದ್ರನ ಪರಾಕ್ರಮವನ್ನು ಕಂಡು ವಿಶ್ವಾಮಿತ್ರಮುನಿಯು ತೋಷಿದನು (ಹರ್ಷಗೊಂಡನು), ಖುಷಿಪಟ್ಟನು. ಹರ್ಷಗೊಂಡ ಆ ಬ್ರಹ್ಮಋಷಿಯು, ನೈರ್ಋತಸಂಭವರಾದ ರಾಕ್ಷಸರ ಸಂಹಾರಕ್ಕೆ ಸಾಧನವಾಗಿರುವ ಮಹಾಮಂತ್ರಾಸ್ತ್ರ ವೊಂದನ್ನು ಉಪದೇಶಿಸಿದನು. ಆ ಮಂತ್ರಾಸ್ತ್ರದ ಮಹಿಮೆ ಅಪಾರ. ಸೂರ್ಯನಿಂದ ಬಂದ ತೇಜಸ್ಸು, ಬೆಳಕು ಸೂರ್ಯಕಾಂತಶಿಲೆಯ ಮೇಲೆ ಬಿದ್ದು (ಸೂರ್ಯಕಾಂತಮಣಿ, ಸೂರ್ಯಕಾಂತರತ್ನ, ಮಸೂರ, ಭೂತಕನ್ನಡಿ) ಉಂಟಾದ ಕಾಡ್ಗಿಚ್ಚು (ಬೆಂಕಿ) ಕಾಡನ್ನು ಸರ್ವನಾಶ ಮಾಡುವಂತೆ ಆ ಅಸ್ತ್ರವು ಋಷಿಯ ತಪೋಬಲದ ಮತ್ತು ಮಂತ್ರದ (ಮಾಂತ್ರಿಕ) ಬಲದಿಂದ ಅಮಿತತೇಜಸ್ಸನ್ನು ಪಡೆದು ರಕ್ಕಸರ ಸಂತಾನವನ್ನು ನಿಸ್ಸಂತಾನ ಮಾಡುವುದರಲ್ಲಿ ಯಶಸ್ವಿಯಾಗುವುದು. ರಾಮಲಕ್ಷ್ಮಣರಿಗೆ ವಿಶ್ವಾಮಿತ್ರರು ಶಸ್ತ್ರಶಿಕ್ಷಣ ವನ್ನು (ಧನುರ್ವೇದವನ್ನು) ಅನುಗ್ರಹಿಸಿದರು. ಸೂರ್ಯನ ಕಾಂತಿಯು ಮಸೂರದಲ್ಲಿ ಪ್ರತಿಫಲಿಸಿದಾಗ, ಕೇಂದ್ರೀಕರಿಸಿದಾಗವಹನ ಕ್ರಿಯೆಯು ಜಾಗೃತವಾಗುವುದು. ಶಾಖ ಶಕ್ತಿಯು ಉತ್ಪನ್ನವಾಗಿ, ಇಂಧನವಾಗಿ ಪರಿಣಮಿಸುವುದಲ್ಲವೆ ?

ಅನ್ವಯ :—ಅಥ ತಾಟಕಾನ್ತಕಃ ಅವದಾನತೋಷಿತಾತ್ ಮುನೇಃ ನೈರ್ಋತಘ್ನಮ್ ಮನ್ತ್ರವತ್ ಅಸ್ತ್ರಂ ಸೂರ್ಯಕಾಂತಃ ಭಾಸ್ಕರಾತ್ ಇಂಧನನಿಪಾತಿಃ ಜ್ಯೋತಿಃ ಇವ ಪ್ರಾಪತ್ ॥

ನೈರ್ಋತ = ನಿರ್ಋತೇಃ ಅಪತ್ಯಂ ಪುಮಾನ್—ನಿರ್ಋತಿ (ನರಕ) ಅಥ = ಅನಂತರ—ಅವದಾನಂ = ಪರಾಕ್ರಮಃ—''ಪರಾಕ್ರಮೋಽವದಾನಂ ಸ್ಯಾತ್'' ಇತಿ ಬಾಗುರಿಃ—ಮಂತ್ರವತ್ ಮನ್ತ್ರಯುಕ್ತಮಸ್ತ್ರಮ್—ಸೂರ್ಯಕಾಂತೋ = ಮಣಿವಿಶೇಷೋ—ಕಾಷ್ಠದಾಹಕಂ ಜ್ಯೋತಿರಿವ—ಪ್ರಾಪತ = ಪ್ರಾಪ್ತವಾನ್—ನಿರ್ಋತಿ = ನರಕಲೋಕದ ರಕ್ಷಕ—ಸೂರ್ಯಕಾಂತ = ಸ್ಫಟಿಕ ॥

22. ವಾಮನಾಶ್ರಮಪದಂ ತತಃ ಪರಂ ।
ಗಾವನಂ ಶ್ರುತಮೃಷೇರುಪೇಯಿವಾನ್ ॥
ಉನ್ಮನಾಃ ಪ್ರಥಮಜನ್ಮಚೇಷ್ಟಿತಾ ।
ನ್ಯಸ್ಮರನ್ನಪಿ ಬಭೂವ ರಾಘವಃ ॥ ೨೨ ॥

ಆ ಬಳಿಕ ಆ ಮುನಿವರನು ಪವಿತ್ರಧಾಮವಾದ ಪಾವನಾಶ್ರಮವಾದ ವಾಮನಾಶ್ರಮಕ್ಕೆ ಬಂದನು. ಆ ಕ್ಷೇತ್ರದ ಪೂರ್ವೇತಿಹಾಸವನ್ನು ಕೌಶಿಕಮುನಿಯು ಶ್ರೀರಾಮಲಕ್ಷ್ಮಣರಿಗೆ ಸವಿಸ್ತಾರವಾಗಿ ವಿವರಿಸಿ ಹೇಳಿದನು. ಶ್ರೀರಾಮಚಂದ್ರನು ಮುನಿಯ ಆ ಎಲ್ಲ ಮಾತುಗಳನ್ನು ಅತ್ಯಂತ ಕುತೂಹಲದಿಂದಲೇ ಕೇಳಿದನು. ಕಿವಿಗೊಟ್ಟು ಆಲಿಸಿದನು. ತಾನು ಹಿಂದಿನ ಜನ್ಮದಲ್ಲಿ ಮಾಡಿದ ಅದ್ಭುತಲೀಲೆಗಳನ್ನು ಮುನಿಯ ಮುಖದಿಂದ ಏನೂ ತಿಳಿಯದವನಂತೆ ನಟಿಸುತ್ತ ಕೇಳಿ ತಿಳಿದನು. ವಾಮನಾವತಾರವು (ಕುಬ್ಜ, ಕುಂಟ, ಗುಂಜುಕುಂಟ = ವಾಮನ) ಮಹಾವಿಷ್ಣುವಿನ ಐದನೆಯ ಅವತಾರ. ತನಗೆ ಸ್ಮರಣೆಯಿಲ್ಲದಂತೆಯೇ ಆದಿಮೂರ್ತಿಯಾದ, ಪರಮಪುರುಷನಾದ ಶ್ರೀರಾಘವನು ಕೇಳುತ್ತಿದ್ದನು. ಶ್ರೀರಾಮನೂ, ವಾಮನನೂ ಒಂದೇ ಎಂಬುದನ್ನು ಲೋಕವೇ ಬಲ್ಲುದು.

ಶ್ರುತಂ, ಪಾವನಂ = ಶೋಧನಂ—ಪ್ರಥಮಜನ್ಮಚೇಷ್ಟಿತಾನಿ = ರಾಮವಾಮನಯೋರೈಕ್ಯಾತ್ ಸ್ಮೃತಿಯೋಗ್ಯಾನ್ಯಪಿ—ಉನ್ಮನಾ = ಉತ್ಸುಕೋ ಬಭೂವ ॥

23. ಆಸಸಾದಮುನಿರಾತ್ಮನಸ್ತತಃ ।
ಶಿಷ್ಯವರ್ಗಪರಿಕಲ್ಪಿತಾರ್ಹಣಮ್ ॥
ಬದ್ಧಪಲ್ಲವಪುಟಾಂಜಲಿದ್ರುಮಂ ।
ದರ್ಶನೋನ್ಮುಖಮೃಗಂ ತಪೋವನಮ್ ॥ ೨೩ ॥

ಆ ಬಳಿಕ ಆ ಮುನಿವರನು ತನ್ನ ಶಾಂತಿಧಾಮವಾದ ತಪೋವನಕ್ಕೆ ಆಗಮಿಸಿದನು. ಅಲ್ಲಿ ಅವನ ಶಿಷ್ಯವರ್ಗದವರು ಪೂಜಾಸಾಮಗ್ರಿಗಳನ್ನು ಒಟ್ಟುಮಾಡುತ್ತ ತಮ್ಮ ಗುರುವಿನ ದರ್ಶನದಿಂದ ಆನಂದವರ್ಧನರಾಗಿ ಗುರುಪೂಜೆಯನ್ನು ಮಾಡಿ ಸ್ವಾಗತಿಸಿದರು. ಸ್ಥಾವರಜಂಗಮಗಳೂ, ಮರಗಿಡಹೂಬಳ್ಳಿಗಳೂ, ಮೃಗಪಕ್ಷಿಗಳೂ ಹಿಂದುಳಿಯಲಿಲ್ಲ, ವಿಶ್ವಾಮಿತ್ರರನ್ನು ಸ್ವಾಗತಿಸಲು ಎಂಬಂತೆ ಮರಗಿಡಗಳು ತಮ್ಮ ಚಿಗುರೆಲೆಗಳನ್ನು

ಕೈಜೋಡಿಸಿ ಮದಿಸಿದಂತೆ, ಪಲ್ಲವಪುಟಾಂಜಲಿಯಂತೆ ಒಂದುಗೂಡಿಸಿ ಆ ವಿಶ್ವಗುರುವಿಗೆ ತಮ್ಮ ನಮನವನ್ನು ಸಲ್ಲಿಸಿದುವು. ಮರಗಿಡಬಳ್ಳಿಗಳು ಪೂಜ್ಯಭಾವನೆಯಿಂದ ತಮ್ಮ ಎಲೆಗಳನ್ನು ಒಂದನ್ನೊಂದು ಜೋಡಿಸಿ, ಕೈಜೋಡಿಸಿ ಮದಿಸಿದಂತೆ, ಅಂಜಲಿಯಾಕಾರದಲ್ಲಿ ಜೋಡಿಸಿ ತಮ್ಮ ಆದರ, ಪ್ರೀತಿ, ಸಂತಸವನ್ನು ಅಭಿವ್ಯಕ್ತಿಗೊಳಿಸಿದುವು. ಅದೇ ರೀತಿಯಲ್ಲಿ ಹರಿಣಗಳು (ಜಿಂಕೆಗಳು) ಮುನಿಯ ಕಡೆಗೆ ಮೊಗವೆತ್ತಿ ಕಣ್ಣಾಲಿಗಳನ್ನು ಹೊರಳಿಸಿ ನೋಡಿದುವು. ಪ್ರೀತಿಯಿಂದ ಸ್ವಾಗತಿಸಲು ಬಳಿಗೋಡಿದುವು, ದೃಷ್ಟಿಯನ್ನು ಮೇಲಕ್ಕೆ ಮಾಡಿ ದೃಷ್ಟಿಸುತ್ತಾ ತಮ್ಮ ಒಲುಮೆಯನ್ನು ಪ್ರಕಟಿಸಿದುವು. ಹೀಗೆ ಚೇತನ, ಅಚೇತನ, ಅಚೇತನರು ಅಂಜಲಿಬದ್ಧರಾಗಿ ಆದರದ ಸ್ವಾಗತವನ್ನು ಆ ಮಹರ್ಷಿಗೆ ನೀಡಿದರು.

ಅನ್ವಯ :—ತತಃ ಮುನಿಃ ಶಿಷ್ಯವರ್ಗಪರಿಕಲ್ಪಿತಾರ್ಹಣಾಮ್ ಬದ್ಧಪಲ್ಲವಪುಟಾಂಜಲಿ ದ್ರುಮಂ ದರ್ಶನೋತ್ಸುಖಮೃಗಂ ಆತ್ಮನಃ ತಪೋವನಮ್ ಆಸಸಾದ ॥

ಪರಿಕಲ್ಪಿತಾ = ಸಜ್ಜಿತಾ, ಕೃತಾ—ಶಿಷ್ಯವರ್ಗೇಣ ಪರಿಕಲ್ಪಿತಾ, ಸಜ್ಜಿತಾರ್ಹಣಾ ಪೂಜಾಸಾಮಗ್ರೀ ಯಸ್ಮಿಂಸ್ತತ್ತಥೋಕ್ತಂ ॥

**24. ತತ್ರ ದೀಕ್ಷಿತಮೃಷಿಂ ರರಕ್ಷತುಃ ।**
**ವಿಘ್ನತೋ ದಶರಥಾತ್ಮಜೌ ಶರೈಃ ॥**
**ಲೋಕಮಂಧತಮಸಾತ್ಕ್ರಮೋದಿತೌ ।**
**ರಶ್ಮಿಭಿಃ ಶಶಿದಿವಾಕರಾವಿವ** ॥ ೨೪ ॥

ಅನುಕ್ರಮವಾಗಿ (ಪರ್ಯಾಯವಾಗಿ) ಉದಯಿಸಿ ಇಳೆಯನ್ನು ಗಾಢಾಂಧಕಾರದಿಂದ, ಸೂರ್ಯಚಂದ್ರರು ಬೆಳಗಿಸುವಂತೆ, ಶಸ್ತ್ರಸಜ್ಜಿತರಾದ, ಲೋಕರಕ್ಷಕರಾದ, ಆ ಇಬ್ಬರು ಬಾಲಕರು ಯಜ್ಞದೀಕ್ಷಿತರಾದ ತಪೋನಿಧಿಗಳನ್ನು ರಕ್ಷಿಸಿದರು (ದೀಕ್ಷಿತ ತಪೋನಿಧಿಯು) (ಕತ್ತಲೆಯು ದೆಸೆಯಿಂದ ಇಳೆಯು ಪೊರೆವಂದದೊಳು) ತಪೋ ನಿಧಿಗಳಾದ ವಿಶ್ವಾಮಿತ್ರರು ಮಹಾಯಜ್ಞವನ್ನು ನಡೆಸುವ ಸಲುವಾಗಿ ಯಜ್ಞದೀಕ್ಷಿತರಾದರು. ಆ ಯಾಗದ ಎಲ್ಲಾ ನಿಯಮಗಳನ್ನು ಸಾಂಗೋಪಾಂಗವಾಗಿ, ಮೊದಲಿನಿಂದ ಕೊನೆಯತನಕ ತಪ್ಪಿಲ್ಲದಂತೆ ಪಾಲಿಸಬೇಕಾದುದು ದೀಕ್ಷಿತನಾದವನ ಕರ್ತವ್ಯವಾಗಿದೆ. ಯಜ್ಞಭಂಗವಾದರೆ ಫಲ ದೊರೆಯದು. ಯಜ್ಞಕಂಟಕರಾದ ಅಸುರರು ಹಗಲುರಾತ್ರಿಗಳಲ್ಲಿ ಉಪಟಳ ಕೊಡುತ್ತಲೇ ಇದ್ದರು. ಆ ಇಬ್ಬರು ಧೀರಬಾಲಕರು ತಮ್ಮ ಶಸ್ತ್ರಾಸ್ತ್ರಗಳ ನೆರವಿನಿಂದ ನಿಶಾಚರರಾದ ರಾಕ್ಷಸರ ಉಪದ್ರವವನ್ನು ತಡೆಯಬಲ್ಲರು. ನಿಶಾಚರರು ತಮೋಗುಣಪ್ರಧಾನರು. ಸೂರ್ಯ, ಚಂದ್ರಕಿರಣಗಳು (ರಶ್ಮಿ) ತಮಸನ್ನು, ಕತ್ತಲೆಯನ್ನು ಓಡಿಸಿ ಜಗತ್ತಿಗೆ ಆಹ್ಲಾದಕರವಾದ ಬೆಳಕನ್ನು ಇತ್ತು ಪ್ರಕಾಶಗೊಳಿಸುವುದು.

ಅನ್ವಯ :—ತತ್ರ ದಶರಥಾತ್ಮಜೌ ದೀಕ್ಷಿತಮ್ ಋಷಿಂ ಶರೈಃ ವಿಘ್ನತಃ ಕ್ರಮೋದಿತೌ ಶಶಿದಿವಾಕರೌ ರಶ್ಮಿಭಿಃ ಲೋಕಮ್ ಅಂಧತಮಸಾದಿವ ರರಕ್ಷತುಃ ॥

ದೀಕ್ಷಿತಂ = ದೀಕ್ಷಾಸಂಸ್ಕೃತಮೃಷಿಂ—ಶರೈರ್ವಿಘ್ನತೋ = ವಿಘ್ನೇಭ್ಯಃ—ಕ್ರಮೇಣ ಪರ್ಯಾಯೇಣ ರಾತ್ರಿದಿವಸಯೋರುದಿತೌ ಶಶಿದಿವಾಕರೌ ರಶ್ಮಿಭಿರಂಧತಮಸಾದ್ಗಾಢ ಧ್ವಾಂತ್—''ಧ್ವಾಂತೇ ಗಾಢೇಽನ್ಧತಮಸಮ್'' ಇತ್ಯಮರಃ—ದೀಕ್ಷಿತಮ್ = ದೀಕ್ಷಾ ಸಂಸ್ಕೃತಮ್ = ದೀಕ್ಷಾ ಯಸ್ಯ ಸಂಜಾತಾ ಇತಿ + ಇತ(ಚ್).

**25. ವೀಕ್ಷ್ಯ ವೇದಿಮಥ ರಕ್ತಬಿಂದುಭಿಃ ।**
**ಬಂಧುಜೀವಪೃಥುಭಿಃ ಪ್ರದೂಷಿತಾಮ್ ॥**
**ಸಂಭ್ರಮೋಽಭವದಪೋಢಕರ್ಮಣಾಂ ।**
**ಋತ್ವಿಜಾಂ ಚ್ಯುತವಿಕಂಕತ ಸ್ರುಚಾಮ್** || ೨೫ ||

ಯಜ್ಞಕಾರ್ಯವು ಸುಸೂತ್ರವಾಗಿ ನಡೆಯುತ್ತಿದ್ದಾಗ ಒಮ್ಮೆಂದೊಮ್ಮೆಗೆ ರಕ್ತಬಿಂದುಗಳು ಹಸಿಹಸಿಯಾಗಿ ತುಂತುರುಮಳೆ ಬಂದಂತೆ ಯಜ್ಞವೇದಿಯ ಮೇಲೆ ಕಾಣಿಸಿಕೊಂಡುವು. ಬಂದುಗೆಯ ಹೂವಿನಷ್ಟು ಗಾತ್ರದ ದೊಡ್ಡದೊಡ್ಡ ರಕ್ತಬಿಂದುಗಳು ಯಜ್ಞಸ್ಥಳದ ಮೇಲೆ ಅಂಬರದಿಂದ ಪೃಥ್ವಿಗೆ ಬೀಳತೊಡಗಿದುವು. ಇದು ಮಾಯಾವಿಗಳಾದ ರಕ್ಕಸರ ಕೆಲಸ, ಯಜ್ಞಕಾರ್ಯವನ್ನು ಅಪವಿತ್ರಗೊಳಿಸಲು ಮಾಡಿದ ಕುಹಕೋಪಾಯ. ಅದನ್ನು ಕಂಡ ಋತ್ವಿಜರು, ಯಾಜ್ಞಿಕರು, ಅಗ್ನಿಹೋತ್ರಿಗಳು (ಆಚಾರ್ಯರು) ಭಯದಿಂದ ಕಂಪಿಸುತ್ತ ಕೈಯಲ್ಲಿದ್ದ ಖದಿರದ ಸ್ರುಕ್ಕುಗಳನ್ನು (ಸೌಟು) ಗೊಂದಲದಿಂದ ಎಸೆದರು (ಗೊಂದಲದೊಳಾಳಿದರು ಸ್ರುಕ್ಕುಗಳನೆಸೆದು). ಯಜ್ಞಕರ್ಮವನ್ನು ಅಲ್ಲಿಗೇ ನಿಲ್ಲಿಸಿಬಿಟ್ಟರು.

ಅನ್ವಯ :—ಅಥ ಬಂಧುಜೀವಪೃಥುಭಿಃ ರಕ್ತಬಿಂದುಭಿಃ ಪ್ರದೂಷಿತಾಂ ವೇದೀಂ ವೀಕ್ಷ್ಯ ಅಪೋಢಕರ್ಮಣಾಂ ಚ್ಯುತವಿಕಂಕತ ಸ್ರುಚಾಮ್ ಋತ್ವಿಜಾನಂ ಸಂಭ್ರಮಃ ಅಭವತ್ ॥

ಅಥ ಬಂಧುಜೀವ ಪೃಥುಭಿರ್ಬಂಧುಜೀವಕಕುಸುಮಸ್ಥೂಲೈಃ—"ರಕ್ತಕಸ್ತು ಬಂಧೂಕೋ ಬಂಧುಜೀವಕಃ" ಇತ್ಯಮರಃ—ರಕ್ತಬಿಂದುಭಿಃ ಪ್ರದೂಷಿತಮುಪಹತಾಂ ವೇದಿಂ ವೀಕ್ಷ್ಯ—ಅಪೋಢಕರ್ಮಣಾಂ = ತ್ಯಕ್ತವ್ಯಾಪಾರಾಣಾಂ—"ವಿಕಂಕತಃ ಸ್ರುಚಾಂ ವೃಕ್ಷಃ" ಇತ್ಯಮರಃ ॥ ಬಂಧುಜೀವ =ಬಂದುಗೆಯ ಹೂವು. ರಕ್ತಕಪುಷ್ಪ, ಕೆಂಪುಹೂವು = ಅಧರೋಽಯ ಮಧೀರಾಕ್ಷ್ಯಾ ಬಂಧುಜೀವಪ್ರಭಾಹರಃ — ಉಪಮಾಲಂಕಾರ ಅಪೋಢಕರ್ಮಣಾಂ = ತ್ಯಕ್ತ, ಬಿಡಲ್ಪಟ್ಟ.

**26. ಉನ್ಮುಖಃ ಸಪದಿ ಲಕ್ಷ್ಮಣಾಗ್ರಜೋ ।**
**ಬಾಣಮಾಶ್ರಯಮುಖಾತ್ಸಮುದ್ಧರನ್ ॥**
**ರಕ್ಷಸಾಂ ಬಲಮಪಶ್ಯದಂಬರೇ ।**
**ಗೃಧ್ರಪಕ್ಷಪವನೇರಿತಾಧ್ವಜಮ್** || ೨೬ ||

ಆಗ ಲಕ್ಷ್ಮಣಾಗ್ರಜ ಮೇಲಕ್ಕೆ ಆಕಾಶದತ್ತ ನೋಡಲು ಅಂಬರದಲ್ಲಿ ರಕ್ಕಸರ ಪಡೆಯೊಂದು ಜಮಾಯಿಸಿರುವುದನ್ನು ಕಂಡನು. ಹದ್ದಿನ ಗರಿಯಿರುವ ರಕ್ಕಸರ ಪತಾಕೆಯು ರಕ್ಕಸರ ರಥಗಳ ಮೇಲೆ ಎಸೆಯುತ್ತಾ (ಹಳವಿಗೆಯು ಅಂಬರದೊಳು) ಗಾಳಿಯಲ್ಲಿ ಹದ್ದಿನ ಗರಿಯು ಕಂಪಿಸುತ್ತಿರುವುದನ್ನು ಕಂಡು ಶ್ರೀರಾಮನು ಕೂಡಲೇ ಬೆನ್ನ ದೊಣೆಯಿಂದ ಕಣೆಯೊಂದನ್ನು ತೆಗೆದು ಹೂಡಿದನು. ಹದ್ದಿನ ಗರಿಯು ಅಪಶಕುನವನ್ನು ಸೂಚಿಸುವ ಚಿಹ್ನೆ. ಇತರರಿಗೆ ಕೇಡುಂಟಾಗಲು, ದುರುದ್ದೇಶವುಳ್ಳ ರಕ್ಕಸರು ಅದನ್ನು

ತವ್ಮ ಧ್ವಜಪತಾಕೆಗಳಲ್ಲಿ, ಬಾವುಟಗಳಲ್ಲಿ ಅಳವಡಿಸಿಕೊಳ್ಳುವರು. ಅದು ಅಶುಭದ ದ್ಯೋತಕ, ನಾಶದ, ಪ್ರಳಯದ ಸಂಕೇತ.

ಅನ್ವಯ :—ಸಪದಿ ಲಕ್ಷಣಾಗ್ರಜೋ ಬಾಣವ್ ಆಶ್ರಯಮುಖಾತ್ ಸಮುದ್ಧರನ್ ಉನ್ಮುಖಃ ಅಂಬರೇ ಗೃಧ್ರಪವನೇರಿತಧ್ವಜಂ ರಕ್ಷಸಾಂ ಬಲಮಪಶ್ಯತ್ ॥

ಬಾಣಮಾಶ್ರಯಮುಖಾತ್ = ತೂಣೀರಮುಖಾತ್ ಸಮುದ್ಧರನ್—ಉನ್ಮುಖ = ಊರ್ಧ್ವಮುಖೋಽಂಬರೇ—ಗೃಧ್ರಪಕ್ಷಪವನೈರೀರಿತಾ = ಕಂಪಿತಾ ಧ್ವಜಾ ಯಸ್ಯ ತತ್ತಥೋಕ್ತಮ್—ತದುಕ್ತಮ್ ಶಕುನಾರ್ಣವೇಃ "ಆಸನ್ನಮೃತ್ಯೋರ್ನಿಕಟೇ ಚರಂತಿ ಗೃಧ್ರಾದಯೋ ಮೂರ್ಧ್ನಿ ಗೃಹೋರ್ಧ್ವಭಾಗೇ" ಇತಿ । ಗೃಧ್ರ= ರಣಹದ್ದು.

27. ತತ್ರ ಯಾವಧಿಪತೀಮಖದ್ವಿಷಾಂ ।
ತೌ ಶರವ್ಯಮಕರೋತ್ ಸ ನೇತರಾನ್ ॥
ಕಿಂ ಮಹೋರಗವಿಸರ್ಪಿವಿಕ್ರಮೋ ।
ರಾಜಿಲೇಷು ಗರುಡಃ ಪ್ರವರ್ತತೇ ॥ ೨೭ ॥

ಆಗ ವಿಶ್ವತೇಜಸ್ವಿಯಾದ ಮಹಾಚೇತನನಾದ ರಘುವರನು ತಸ್ಕರ ರಕ್ಕಸರ (ದಡಿಗ ರಕ್ಕಸರ) ಪಡೆಯಲ್ಲಿ ಎದ್ದು ಕಾಣಿಸುತ್ತಿರುವ, ಯಜ್ಞಧ್ವಂಸಕರಾದ ಸುಬಾಹು, ಮಾರೀಚ ರೆಂಬ ಆ ಇಬ್ಬರು ಮಹಾಬಲರನ್ನು (ಮಹಾಬಲಾನ್ವಿತರನ್ನು) (ಆಮುಷದ್ವಿಷ ಮುಖ್ಯರಿಬ್ಬರನೆ ತಾನಂದು) ಪತ್ತೆಹಚ್ಚಿ ಅವರ ಕಡೆಗೆ ದಿವ್ಯಾಸ್ತ್ರ ಒಂದನ್ನು ಎಸೆದು ಘಾತಿಸಿದವನು. ಶೂರರಾದ ಅವರು ಇತರ ರಕ್ಕಸರನ್ನು ಲೆಕ್ಕಿಸಲೇ ಇಲ್ಲ. ಮಹಾ ಸಾಮರ್ಥ್ಯವಂತನಾದ ಗರುಡನು (ಸುಪರ್ಣನು) ಮಹೋರಗವನ್ನು ಮಾತ್ರ ಎಮಗಿಸುವಂತೆ, ಉಳಿದ ನೀರುಹಾವು (ಒಳ್ಳೆಗಳನ್ನು) ಕೇರೆಹಾವುಗಳನ್ನು ತರಾಟೆಗೆ ತೆಗೆದುಕೊಳ್ಳದೆ ಇರುವಂತೆ ದನುಜಮುಖಂಡರ ಮೇಲೆ ಮಾತ್ರ ಕೈಮಾಡಿದನು. ದಿವ್ಯಾಸ್ತ್ರವನ್ನು ಅವರ ಮೇಲೆ ಪ್ರಯೋಗಿಸಿದನು. ಉಳಿದವರನ್ನು ಉಪೇಕ್ಷಿಸಿದನು. ಅವರನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ. ಉಳಿದವರು ತರಗೆಲೆಗಳಂತೆ (ಚಿಲ್ಲರೆ ಭೂತಗಳು) ("ಸಗಣಿಗೆ ಸಾವಿರ ಮಕ್ಕಳು, ಮಧ್ಯಾಹ್ನದ ಬಿಸಿಲಿಗೆ ಒಂದೂ ಇಲ್ಲ" ಎಂಬಂತೆ) (ಕಾಸಿಗೊಂದು ಕೊಸ್ರಿಗೊಂದು).

ಶರವ್ಯಂ = ಲಕ್ಷ್ಯಮಕರೋತ್—"ವೇಧ್ಯಂ ಲಕ್ಷ್ಯಂ ಶರವ್ಯಂ ಚ" ಇತಿ ಹಲಾಯುಧಃ —ಗರುಡೋ = ಗರುತ್ಮಾನ್— ರಾಜಿಲೇಷು = ಜಲವ್ಯಾಲೇಷು = ನೀರುಹಾವು— ಅಲಗದ್ದೋಜಲವ್ಯಾಲಃ ಸಮೌ ರಾಜಿಲಡುಂಡುಭೌ" ಇತ್ಯಮರಃ—ಶರವ್ಯಮ್ = ಲಕ್ಷ್ಯಮ್ = ಗುರಿಯಿಟ್ಟು ಹೊಡೆ—ಶರವ್ಯಯೇ = ಶರಾನ್ ವ್ಯಯಂತಿ ಇತಿ— ಮಹೋರಗ = ಮಹಾನ್ ಚ ಅಸೌ ಉರಗಃ ಚ ತಸ್ಮಿನ್—ವಿಸರ್ಪಣಶೀಲಂ ಅಸ್ಯಾಸೌ ವಿಸರ್ಪೀವಿಕ್ರಮಃ ಯಸ್ಯ—ಉರಗ = ಉರಸಾ ಗಚ್ಛತಿ—ರಾಜಿಲ = ದ್ವಿಮುಖೋ, ನಿರ್ವಿಷಃ, ಸರ್ಪಃ—ವಾಯುದೈವತಮ್ = ವಾಯವ್ಯಮ್—ಅಧಿಪತೀಮಖದ್ವಿಷಾಮ್ = ಆ ಇಬ್ಬರು ಯಜ್ಞದ್ವೇಷಿಗಳು.

**28.** **ಸೋಽಸ್ತ್ರಮುಗ್ರಜವಮಸ್ತ್ರಕೋವಿದಃ ।**
**ಸಂದಧೇ ಧನುಷಿ ವಾಯುದೈವತಮ್ ॥**
**ತೇನ ಶೈಲಗುರುಮಪ್ಯಪಾತಯತ್ ।**
**ಪಾಂಡುಪತ್ರಮಿವ ತಾಡಕಾ ಸುತಮ್ ॥ ೨೮ ॥**

ಆ ಶ್ರೀರಾಮಚಂದ್ರನು ವಾಯುದೇವತಾಕವಾದ (ಅಸ್ತ್ರಕೋವಿದನವನು), ವಾಯುವ್ಯ ದೇವತಾಕವಾದ ವಾಯುವ್ಯಶರವನ್ನೆಸೆದು ನರಹರಿಪರ್ವತದಷ್ಟು ಭಾರದವನಾದ ತಾಟಕಿಯ ಪುತ್ರ ಮಾರೀಚನನ್ನು ಘಾತಿಸಿದನು (ಶೈಲನಿಭಭಾರನನು). ಆ ವಾಯುಶರವು ಮಾರೀಚನನ್ನು ತರಗೆಲೆಯಂತೆ ಹಾರಿಸಿಕೊಂಡು ಬಹುದೂರ ಕೊಂಡೊಯ್ದು ಅರಬ್ಬಿ ಸಮುದ್ರದಲ್ಲಿ ಕೆಡವಿತು (ಪಾಂಡುಪತ್ರದವೋಲು).

ಅಸ್ತ್ರಕೋವಿದೋ=ಅಸ್ತ್ರಜ್ಞಃ—ಉಗ್ರಜವ=ಉತ್ಕಟಜವ—ವಾಯುದೈವತಮ್ = ವಾಯುದೇವತಾ ಯಸ್ಯ ತದ್ವಾಯವ್ಯಮಸ್ತ್ರಂ—ಸಂದಧೇ = ಸಂಹಿತವಾನ್—ತಾಡಕಾ ಸುತಮ್ = ಮಾರೀಚಮ್—ಪಾಂಡುಪತ್ರಮಿವ = ತರಗೆಲೆಯಂತೆ—ಅಪಾತಯತ್ = ಪತಿತವಾನ್ = ಕೆಡೆದೆಚ್ಚನವನು.

**29.** **ಯಃ ಸುಬಾಹುರಿತಿ ರಾಕ್ಷಸೋಽಪರಃ ।**
**ತತ್ರ ತತ್ರ ವಿಸಸರ್ಪ ಮಾಯಯಾ ॥**
**ತಂ ಕ್ಷುರಪ್ರಶಕಲೀಕೃತಂ ಕೃತೀ ।**
**ಪತ್ರಿಣಾಂ ವ್ಯಭಜದಾಶ್ರಮಾದ್ಬಹಿಃ ॥ ೨೯ ॥**

ಇನ್ನೊಬ್ಬ ಊಟಿ ಪರ್ವತದಂತೆ ಬೃಹದಾಕಾರದ ಖದೀಮದೈತ್ಯನು ಸುಬಾಹುವೆಂಬವನು ಮಾಯಾವಿದ್ಯಾಚತುರನು. ಅನೇಕ ವಿಧದ ಮಾಯೆಯನ್ನು ಪ್ರದರ್ಶಿಸುತ್ತ ನಾನಾ ಆಕಾರಗಳಲ್ಲಿ (ಸರ್ಪಾಕೃತಿ, ಸಿಂಹದಾಕಾರ) ಆಕಾಶಮಾರ್ಗದಲ್ಲಿ ಸಂಚರಿಸುತ್ತ ತನ್ನ ಶಂಬರವಿದ್ಯಾಕೌಶಲವನ್ನು (ಕಸರತ್ತನ್ನು) ತೋರಿಸುತ್ತಿದ್ದನು (ಮಾಯೆಯಿಂದ ಅತ್ತಿತ್ತ ಸಂಚರಿಸುತ್ತಿರಲು). ಕೂಡಲೇ ರಣಕುಶಲಿ ರಾಘವನು ತನ್ನ ಶಸ್ತ್ರವಿದ್ಯಾಚತುರತೆಯನ್ನು ತೋರಿ ಅವನ ದೇಹವನ್ನು ಚೂರುಚೂರಾಗಿ (ನುಚ್ಚುನೂರು) ಮಾಡಿ, ಆಶ್ರಮದ ಹೊರವಲಯದಲ್ಲಿರುವ ರಣಹದ್ದುಗಳಿಗೆ, ಗಂಡಭೇರುಂಡಗಳಿಗೆ ಆಹಾರವಾಗಿ ಹಂಚಿದನು. ಖಂಡಖಂಡಗಳಾಗಿ ಕತ್ತರಿಸಿ ದಿಗ್ಬಲಿಕೊಟ್ಟನು (ರಣಕುಶಲಿ ಹಂಚಿದನು) ಆ ಶಸ್ತ್ರಪಂಡಿತನು.

ಅನ್ವಯಃ:—ಯಃ ಅಪರಃ ಸುಬಾಹುಃ ಇತಿ ರಾಕ್ಷಸಃ ತತ್ರ ತತ್ರ ಮಾಯಯಾ ವಿಸಸರ್ಪ ಕ್ಷುರಪ್ರಶಕಲೀಕೃತಂ ತಂ ಕೃತೀ ಆಶ್ರಮಾದ್ ಬಹಿಃ ಪತ್ರಿಣಾಂ ವ್ಯಭಜತ್ ॥

ತತ್ರ ಮಾಯಯಾ = ಶಂಬರವಿದ್ಯಯಾ—ವಿಸಸರ್ಪ = ಸಂಚಚಾರ—ಕ್ಷುರಪ್ರೈಃ ಶಕಲೀಕೃತಂ = ಖಂಡೀಕೃತಂ —ಕೃತೀ ಚ ಕುಶಲಃ ಸಮೌ'' ಇತ್ಯಮರಃ—ಪತ್ರಿಣಾಂ = ಪಕ್ಷಿಣಾಮ್—''ಪತ್ರಿಣೌ ಶರಪಕ್ಷಿಣೌ'' ಇತ್ಯಮರಃ—ವ್ಯಭಜತ್ = ವಿಭಜ್ಯ ದತ್ತವಾನಿತ್ಯರ್ಥಃ—ಮಾಯಯಾ ತತ್ರ ತತ್ರ ವಿಸಸರ್ಪ = ಮಾಯೆಯಿಂದ ಅತ್ತಿತ್ತ ಸಂಚರಿಸುತ್ತಿರಲು—ಕೃತೀ = ಕೃತಂ ಪ್ರಶಸ್ತಂ ಕರ್ಮ ಯಸ್ಯ ॥

30. ಇತ್ಯಪಾಸ್ತಮಖವಿಘ್ನಯೋಸ್ತಯೋಃ ।
ಸಾಂಯುಗೀನಮಭಿನಂದ್ಯ ವಿಕ್ರಮಮ್ ॥
ಋತ್ವಿಜಃ ಕುಲಪತೇರ್ಯಥಾಕ್ರಮಂ ।
ವಾಗ್ಯತಸ್ಯ ನಿರವರ್ತಯನ್ ಕ್ರಿಯಾಃ ॥ ೩೦ ॥

ಈ ತೆರನಾಗಿ ಮಖವಿಘ್ನಘಾತಿಗಳಾದ ರಾಕ್ಷಸರನ್ನು ಕೆಡೆದುರುಳಿಸಿದ ಆ ವೀರ ಬಾಲಕರು, ಅವರ ರಣವಿಕ್ರಮವವನ್ನು ಕಣ್ಣಾರೆ ಕಂಡು ನಲಿದು ಯಾಜಕರು, ಋತ್ವಿಜರು ಅವರನ್ನು ಬಾಯಿತುಂಬಾ ಹೊಗಳಿ ಅಭಿನಂದಿಸಿದರು (ಮೆಚ್ಚಿ ರಣವಿಕ್ರಮಕೆ ಸಲೆ ಹೊಗಳಿ ನಲಿದು). ಮೌನವ್ರತಧಾರಿಗಳಾದ, ಮುನಿಕುಲೇಶ್ವರರಾದ ಕುಲಪತಿ ವಿಶ್ವಾಮಿತ್ರರು ಯಜ್ಞಕಾರ್ಯವನ್ನು ಯಥಾವತ್ತಾಗಿ, ವಿಧಿನಿಯಮಗಳಿಗೆ ಅನುಸಾರ ವೇದೋಕ್ತವಾದ ವಿಧಿವಿಧಾನಗಳಿಂದ ಸಮಾರೋಪಗೊಳಿಸಿ ಕೃತಕೃತ್ಯರಾದರು.

ಅನ್ವಯ :—ಇತ್ಯಪಾಸ್ತಮಖವಿಘ್ನಯೋಃ ತಯೋಃ ಸಾಂಯುಗೀನಂ ವಿಕ್ರಮಮ್ ಅಭಿನಂದ್ಯ ಋತ್ವಿಜಃ ವಾಗ್ಯತಸ್ಯ ಕುಲಪತೇಃ ಕ್ರಿಯಾಃ ಯಥಾಕ್ರಮಂ ನಿರವರ್ತಯನ್ ॥

ಋತ್ವಿಜೋ = ಯಾಜಕಾಃ—ಕುಲಪತೇ = ಮುನಿಕುಲೇಶ್ವರಸ್ಯ—ಕ್ರಿಯಾಃ = ಕ್ರತು ಕ್ರಿಯಾ—ಯಥಾಕ್ರಮಂ ನಿರವರ್ತಯನ್ = ನಿಷ್ಪಾದಿತವಂತಃ—ಅಪಾಸ್ತಃ—ಅಪಾಸ್ತಾ ಮಖಸ್ಯ ವಿಘ್ನಾಃ ಯಾಭ್ಯಾಂ ತಯೋಃ—ಸಂಯುಗೇ ಸಾಧುಸಾಂಯುಗೀನಮ್— ಸಂಯುಗ + ಇನ್—ಕುಲಪತಿ = ಋಷ್ಯಾಶ್ರಮದ ಮುಖ್ಯಸ್ಥ, 10,000 ವಿದ್ಯಾರ್ಥಿಗಳ ಮುಖ್ಯಸ್ಥ.

31. ತೌ ಪ್ರಣಾಮ ಚಲಕಾಕಪಕ್ಷಕೌ ।
ಭ್ರಾತರಾವವಭೃಥಾ ಪ್ಲುತೋ ಮುನಿಃ ॥
ಆಶಿಷಾಮನುಪದಂ ಸಮಸ್ಪೃಶತ್ ।
ದರ್ಭಪಾಟಿತ ತಲೇನ ಪಾಣಿನಾ ॥ ೩೧ ॥

ದೀಕ್ಷಾಂತದಲ್ಲಿ (ಯಜ್ಞಾಂತದಲ್ಲಿ) ವಿಶ್ವಾಮಿತ್ರಮಹರ್ಷಿಗಳು ಅವಭೃತಸ್ನಾನವನ್ನು ಮಾಡಿದರು. ಆ ಮುನಿಶ್ರೇಷ್ಠರು ದರ್ಭೆಯನ್ನು ನಿರಂತರ ಕೈಯಲ್ಲಿ ಹಿಡಿದುಕೊಂಡುದ ರಿಂದ ಒರಟಾದ ದಡ್ಡುಕಟ್ಟಿದ ತನ್ನ ಕರಯುಗಗಳಿಂದ ಸ್ಪರ್ಶಿಸಿ ಆವರು ಆ ಬಾಲಕರನ್ನು ಸಂತೋಷದಿಂದ ಹರಸಿದರು. ಆಗ ಬಾಲಕರ ಕಾಕಪಕ್ಷದಂತೆ ಇರುವ ಮನೋಹರವಾದ ಒಂದು ಭಾಗದ ಕೇಶರಾಶಿಯು, ಅವರು ಶಿರಬಾಗಿ ವಂದಿಸುತ್ತಿದ್ದಾಗ ಕಂಪಿಸುತ್ತಾ ಜೋತಾಡುತ್ತಿತ್ತು. ಅವರ ವಂದನೆಗೆ ಪ್ರಮಾಣವೆಂಬಂತೆ, ಸಾಕ್ಷಿಯೆಂಬಂತೆ ಅವರ ಕೇಶರಾಶಿಯು ಅತ್ತಿತ್ತ ತೊನೆದಾಡಿತು (ಪ್ರಣತಿಕಂಪಿತ ಕಾಕಪಕ್ಷರನು). ಬಾಲಕರ ವೀರ್ಯಪರಾಕ್ರಮವನ್ನು ಮಹರ್ಷಿಗಳು ಪ್ರಶಂಸಿಸಿ, ಆನಂದದಿಂದ ಹರಸಿದರು.

ಅವಭೃತೇ ದೀಕ್ಷಾಂತ ಆಪ್ಲುತಃ ಸ್ನಾತೋ ಮುನಿಃ—ದೀಕ್ಷಾಂತೋಽವಭೃಥೋ ಯಜ್ಞೇ'' ಇತ್ಯಮರಃ ॥ ಅವಭೃಥ = ಅವಭೃಥಸ್ನಾನ, ಸೋಮಯಜ್ಞದ ಕೊನೆಗೆ.

32. ತಂ ನ್ಯಮನ್ತ್ರಯತ ಸಂಭೃತಕ್ರತುಃ ।
ಮೈಥಿಲಃ ಸ ಮಿಥಿಲಾಂ ವ್ರಜನ್ವಶೀ ॥

**ರಾಘವಾವಪಿ ನಿನಾಯ ಬಿಭ್ರತೌ ।**
**ತದ್ಧನುಃ ಶ್ರವಣಜಂ ಕುತೂಹಲಮ್** ॥ ೩೨ ॥

ಮಿಥಿಲೆಯ ಅರಸನಾದ ರಾಜಋಷಿ ಜನಕಮಹಾರಾಜನು ಒಂದು ಮಹಾಯಜ್ಞವನ್ನು ನಡೆಸಬೇಕೆಂದು ಆಲೋಚಿಸಿ ಮುನಿಕುಲತಿಲಕನಾದ ವಿಶ್ವಾಮಿತ್ರರನ್ನು ಆಮಂತ್ರಿಸಿದನು. ಜನಕನ ಅರಮನೆಯಲ್ಲಿರುವ ಆಶ್ಚರ್ಯಕರವಾದ, ಲೋಕೋತ್ತರವಾದ ಶಿವಧನುಸ್ಸಿನ ವಿಚಾರ ಜನಜನಿತವಾಗಿತ್ತು. ತಾವು ಕೇಳಿ ತಿಳಿದ ಶಿವಧನುಸ್ಸಿನ ಬಗ್ಗೆ ಕುತೂಹಲಿಗಳಾದ, ಉತ್ಸುಕರಾದ ರಘುವಂಶೋತ್ಪನ್ನರಾದ, ಆ ಇಬ್ಬರು ರಾಘವರನ್ನು ಒಡಗೊಂಡು ಮುನೀಶ್ವರನು ಜನಕನಗರಿಗೆ ಹೊರಟನು (ತದ್ಧನುಃಶ್ರವಣಜನಿತೋತ್ಸುಕರ).

ಸಂಭೃತಕ್ರತುಃ = ಸಂಕಲ್ಪಿತ ಸಂಭಾರೋ—ಯಾಗಕ್ಕೆ ಬೇಕಾದ ಸಕಲಸಿದ್ಧತೆಗಳೊಂದಿಗೆ ಸಿದ್ಧರಾಗಿ—ಮಿಥಿಲಾಂ = ಜನಕನಗರೀಂ—ಬಿಭ್ರತೌ = ಹೊರಟರು—ನಿನಾಯ = ನೀತವಾನ್ ॥

**33. ತೈಃ ಶಿವೇಷು ವಸತಿರ್ಗತಾಧ್ವಭಿಃ ।**
**ಸಾಯಮಾಶ್ರಮತರುಷ್ವಗೃಹ್ಯತ ॥**
**ಯೇಷು ದೀರ್ಘತಪಸಃ ಪರಿಗ್ರಹೋ ।**
**ವಾಸವಕ್ಷಣಕಲತ್ರತಾಂ ಯಯೌ** ॥ ೩೩ ॥

ಅವರು ಬಹಳ ರಮ್ಯವಾದ, ಸಸ್ಯಶ್ಯಾಮಲವಿರಾಜಿತವೆನಿಸಿರ್ಪ, ದೀರ್ಘತಪನೆಂದು ಹೆಸರುಪಡೆದ ಗೌತಮ ಮಹರ್ಷಿಯ ತಪೋವನದ ದಾರಿಯಾಗಿ ಬಂದರು. ಯಾವ ಪುಣ್ಯಾಶ್ರಮದಲ್ಲಿ ಗೌತಮನ ಪತ್ನಿಯಾದ ಅಹಲ್ಯೆಯು ವಾಸವಾಗಿದ್ದಳೋ, ಆ ತಪೋವನಕ್ಕೆ ಅವರು ಆಗಮಿಸಿ ಅಲ್ಲಿಯ ಮಂಗಳ ತಪೋವನದ ತರುಗಳ ನೆರಳಲ್ಲಿ ಅಂದು ಸಾಯಂಕಾಲದ ವೇಳೆ ತಂಗಿದರು. ಆಗ ಮುಸ್ಸಂಜೆಯ ಸಮಯ. ಆ ಅಹಲ್ಯೆಯು, ಕೇವಲ ಕೆಲವೇ ಕ್ಷಣಕಾಲ ವಾಸವನ (ಮಹೇಂದ್ರನ) ಕಾಮಪಾಶಕ್ಕೆ ಬಲಿಯಾಗಿ ಅವನ ಅರ್ಧಾಂಗಿಯಾದಳು. ಹೀಗೆ ತನ್ನ ಪಾತಿವ್ರತ್ಯವನ್ನು ಕಳೆದುಕೊಂಡು ಪತಿತಳಾದಳು. ಪಾಪದ ಹಾದಿಯನ್ನು ತುಳಿದಳು (ವಾಸವಕ್ಷಣಕಳತ್ರತೆಯನಂತವಳು).

ಅನ್ವಯ :—ಗತಾಧ್ವಭಿಃ ತೈಃ ಸಾಯಂ ಶಿವೇಷು ಆಶ್ರಮತರುಷು ವಸತಿಃ ಅಗೃಹ್ಯತ ಯೇಷು ದೀರ್ಘತಪಸಃ ಪರಿಗ್ರಹಃ ವಾಸವಕ್ಷಣಕಲತ್ರತಾಂ ಯಯೌ ॥

ಪರಿಗ್ರಹಃ = ಪತ್ನೀ, ಪಾಡವಿ—"ಪತ್ನೀಪರಿಜನಾದಾನಮೂಲಶಾಪಾಃ ಪರಿಗ್ರಹಾಃ" ಇತ್ಯಮರಃ ॥ ದೀರ್ಘತಪಸ್ = ದೀರ್ಘತಪನೆಂಬ ಹೆಸರುಪಡೆದ ಗೌತಮಮಹರ್ಷಿ.

**34. ಪ್ರತ್ಯಪದ್ಯತ ಚಿರಾಯ ಯತ್ಪುನಃ ।**
**ಚಾರುಗೌತಮವಧೂಃ ಶಿಲಾಮಯೀ ॥**
**ಸ್ವಂ ವಪುಃ ಸ ಕಿಲ ಕಿಲ್ಬಿಷಚ್ಛಿದಾಂ ।**
**ರಾಮಪಾದರಜಸಾಮನುಗ್ರಹಃ** ॥ ೩೪ ॥

ಅಲ್ಲಿ ಆಶ್ರಮದ ಒಂದು ಭಾಗದಲ್ಲಿ ಪತಿಯಾದ ಗೌತಮಋಷಿಯ ಶಾಪದಿಂದ ಅಹಲ್ಯೆಯು ಕಲ್ಲಾಗಿ ಬಿದ್ದಿದ್ದಳು. ಆ ತಪಸ್ವಿನಿ ಶಿಲೆಯಾಗಿ ಜಡಪ್ರಕೃತಿಯಾಗಿ ಮಲಗಿದ್ದಳು. ಚೈತ್ರಋತುವಿನ ಆಗಮನದಿಂದ, ಚೈತ್ರ(ವಸಂತ)ಋತುಲಕ್ಷ್ಮಿಯ ಸ್ಪರ್ಶದಿಂದ ಜಡಜಗತ್ತು ಚೈತನ್ಯವನ್ನು ಪಡೆವಂತೆ, ಪರಮಪಾವನವಾದ ಶ್ರೀರಾಮಪಾದವು ಸೋಂಕಿದ ಕೂಡಲೇ ಜಡವಾಗಿ ಬಿದ್ದಿದ್ದ ಬಂಡೆಕಲ್ಲಿನಿಂದ ಸುಂದರವಾದೊಂದು ಸ್ತ್ರೀರೂಪು ಜನ್ಮತಳೆಯಿತು. ಶಿಲೆಯಾಗಿ ಮಲಗಿದ್ದ ಅಹಲ್ಯೆ ತನ್ನ ಪೂರ್ವದ ರೂಪವನ್ನು ಪಡೆದಳು. ಅವಳ ಕಿಲ್ಬಿಷವು, ಪಾಪರಾಶಿಯು ಶ್ರೀರಾಮನ ಅಡಿದಾವರೆಯ ರೇಣುವಿನ ಅನುಗ್ರಹದಿಂದ ನಾಶವಾಯಿತು. ಕಿಲ್ಬಿಷವನ್ನು ಕಿತ್ತೊಗೆಯಿತು. ಕರ್ಪೂರವು ಬೆಂಕಿಯ ಶಾಖಕ್ಕೆ ಕರಗಿಹೋಗುವಂತೆ ಕರಿಬಂಡೆಯು ಕರಗಿ, ಮಾನವರೂಪೊಂದು ಉದಯಿಸಿತು. ಅದುವೇ ಅಹಲ್ಯೆಯ ತೇಜಸ್ವಿನಿ ರೂಪವಿಗ್ರಹ ಮೈತಳೆಯಿತು. ಜಡವಾದ ಬಂಡೆಯಲ್ಲೂ ಪ್ರಾಣಸಂಚಾರವಾಯಿತು. ಜಡಮಯಕೋಶವು ಅನ್ನಮಯಕೋಶವಾಯಿತು. ಪ್ರಾಣವಾಯು ಸಂಚರಿಸಿ ಸಜೀವವಾದ ಪ್ರಾಣಮಯಕೋಶವಾಯಿತು. ಅದುವೇ ಶ್ರೀರಾಮನ ಪಾದದ ಮಹಿಮೆ. ಅವನ ಕಾಲಿನ ಧೂಳು (ತೀರ್ಥ) ಸೋಂಕಿದೊಡನೆ ಅಹಲ್ಯೆಯು ಪಾಪರಾಶಿಯು ತೊಲಗಿ ನಿರ್ಮಲೆಯಾದಳು. ಅಂತರಂಗವು ಶುಚಿಯಾಯಿತು. ಅವಳು ತನ್ನ ಮುನ್ನಿನ ಸುಂದರವಾದ ಸ್ತ್ರೀರೂಪವನ್ನು ಪಡೆದಳು. ತನ್ನನ್ನು ಉದ್ಧರಿಸಿದ ಪತಿತಪಾವನನಾದ ಆ ಸಚ್ಚಿದಾನಂದಮೂರ್ತಿಯ ಶ್ರೀಪಾದಗಳಿಗೆ ಶಿರಬಾಗಿ ವಂದಿಸಿದಳು. ಆ ಸಮಯದಲ್ಲಿ ದೇವತೆಗಳು ಪುಷ್ಪವೃಷ್ಟಿಗರೆದರು. ಋಷಿಮುನಿಗಳು ಶ್ರೀರಾಮನನ್ನು ಕೊಂಡಾಡಿದರು.

ಶಿಲಾಮಯೀ=ಭರ್ತೃಶಾಪಾಚ್ಛಿಲಾತ್ವಂ ಪ್ರಾಪ್ತಾ–ಪುನಃ ಪ್ರತ್ಯಪದ್ಯತ=ಪ್ರಾಪ್ತವತೀ—ಯತ್ ಸ ಕಿಲ್ಬಿಷ ಚ್ಛಿದಾಂ=ಪಾಪಹಾರಿಣಾಮ್—"ಪಾಪಂ ಕಿಲ್ಬಿಷ ಕಲ್ಮಷಮ್" ಇತ್ಯಮರಃ ॥ ಕಿಲ್ಬಿಷಚ್ಛಿದಾಂ = ಕಲ್ಬಿಷಂ ಛಿಂದಂತಿ ಇತಿ = ಎಲ್ಲಾ ಪಾಪಗಳನ್ನು ದೂರ ಮಾಡಿದ = ಪವಿತ್ರಗೊಳಿಸಿದ.

**35. ರಾಘವಾನ್ವಿತಮುಪಸ್ಥಿತಂ ಮುನಿಂ ।**
**ತಂ ನಿಶಮ್ಯ ಜನಕೋ ಜನೇಶ್ವರಃ ॥**
**ಅರ್ಘಕಾಮಸಹಿತಂ ಸಪರ್ಯಯಾ ।**
**ದೇಹಬದ್ಧಮಿವ ಧರ್ಮಮಭ್ಯಗಾತ್ ॥ ೩೫ ॥**

ಜನೇಶ್ವರನಾದ, ರಾಜರ್ಷಿ, ಜನಕಮಹಾರಾಜನು, ಕೌಶಿಕಮುನಿಯು ಇಕ್ಷ್ವಾಕುವಂಶದ ಇಬ್ಬರು ಕುಮಾರರೊಂದಿಗೆ ಬರುತ್ತಿರುವುದನ್ನು ತಿಳಿದು ಅತ್ಯಂತ ಹರ್ಷಗೊಂಡು ಅರ್ಘ್ಯವನ್ನು ಪೊತ್ತು ಕೌಶಿಕಮುನಿಯನ್ನು ಇದಿರುಗೊಳ್ಳಲು ಸಂಭ್ರಮದಿಂದ ಬಂದನು. ಆ ಇಬ್ಬರು ವೀರಬಾಲಕರು ಅರ್ಥಕಾಮಂಗಳಿಗೆ ಸಮನಾದವರು (ಅರ್ಥಕಾಮಂಗಳಿಂದ ಧರ್ಮಮೈವೆತ್ತುದೆನಲೆಸೆವ). ಕೌಶಿಕಮುನಿಪುಂಗವನು ಸಾಕ್ಷಾತ್ ಧರ್ಮದೇವತೆ. ಧರ್ಮದೇವತೆಯೇ ಮೈತಳೆದು ಇಳೆಗಿಳಿದು ಬಂದಂತೆ, ಅರ್ಥ (ಹಣಕಾಸು, ಐಶ್ವರ್ಯ, ಸಿರಿ) ಮತ್ತು ಕಾಮ(ಇಷ್ಟಾರ್ಥ, ಆಶೆ, ಇಚ್ಛೆ, ಕಾಮನೆಗಳು)ಗಳಿಗೆ ಸಮನಾದ

ಆ ಈರ್ವರು ಬಾಲಕರನ್ನು ಜೊತೆಗೂಡಿ ಬರುತ್ತಿರುವುದನ್ನು ತಿಳಿದು ಆನಂದತುಂದಿಲನಾಗಿ ಅಭ್ಯಾಗತರನ್ನು ಅರ್ಘ್ಯ, ಮಧುಪರ್ಕಾದಿ ಅತಿಥಿಪೂಜಾದ್ರವ್ಯಗಳನ್ನು ಸ್ವತಃ ಹೊತ್ತು ನಡೆದನು.

ಅನ್ವಯ :—ರಾಘವಾನ್ವಿತಂ ತಂ ಮುನಿಂ ಉಪಸ್ಥಿತಂ ಜನೇಶ್ವರಃ ಜನಕಃ ನಿಶಮ್ಯ ಅರ್ಥಕಾಮಸಹಿತಂ ದೇಹಬದ್ಧಂ ಧರ್ಮಮ್ ಇವ ಸಪರ್ಯಯಾ ಅಭ್ಯಗಾತ್ ॥

ಅರ್ಥಕಾಮಾಭ್ಯಾಂ ಸಹಿತಂ—ದೇವಬದ್ಧಂ = ಬದ್ಧದೇಹಂ, ಮೂರ್ತಿಮಂತ ಇತ್ಯರ್ಥಃ— ಸಪರ್ಯಾಽಭ್ಯಗಾತ್ = ಪ್ರತ್ಯುದ್ಗತವಾನ್ ॥

**36. ತೌ ವಿದೇಹನಗರೀನಿವಾಸಿನಾಂ ।**
**ಗಾಂ ಗತಾವಿವ ದಿವಃ ಪುನರ್ವಸೂ ॥**
**ಮನ್ಯತೇ ಸ್ಮ ಪಿಬತಾಂ ವಿಲೋಚನೈಃ ।**
**ಪಕ್ಷ್ಮಪಾತಮಪಿ ವಂಚನಾಂ ಮನಃ ॥ ೩೬ ॥**

ಆ ಇರ್ವರು ಕುಮಾರರು ದಿವಿಯಿಂದ (ಸ್ವರ್ಗಲೋಕದಿಂದ) ಭೂಮಿಗೆ ಇಳಿದು ಮಿನುಗುತ್ತಿರುವ ಜೋಡಿ (ಅವಳಿ) ನಕ್ಷತ್ರಗಳಾದ ಪುನರ್ವಸೂ (ಅಶ್ವಿನೀ) ನಕ್ಷತ್ರಗಳಂತೆ*ಅಥವಾ ಅಶ್ವಿನೀದೇವತೆಗಳಂತೆ, ಪುನರ್ವಸೂ ನಕ್ಷತ್ರದೇವತೆಗಳಂತೆ, ಶೋಭೆಯಾಂತು ಶೋಭಿಸುತ್ತಿದ್ದರು. ಅವರ ಸುಶೋಭೆಯನ್ನು ಕಂಡು ಮಿಥಿಲೆಯ ಪುರಜನರು (ಪೌರರು) ನಲಿದರು. ಆ ಕುಮಾರರ ಅಲೌಕಿಕಸೌಂದರ್ಯ, ನಡೆನುಡಿಯನ್ನು ನೋಡುತ್ತ ಜನಕನಗರಿಯ ನಾಗರಿಕರು ಕಣ್ಣುರೆಪ್ಪೆಗಳನ್ನು ಮುಚ್ಚುವುದನ್ನೇ ಮರೆತರು. ಅವರು ಹಾಗೆಯೇ ದಿಟ್ಟಿಸಿನೋಡುತ್ತ ಕಣ್ಣುರೆಪ್ಪೆಗಳನ್ನು ಮುಚ್ಚುವ ಗೋಜಿಗೆ ಹೋಗಲಿಲ್ಲ. ಅವರ ಸೌಂದರ್ಯಸಾರವನ್ನು ತಮ್ಮ ಕುಡಿನೋಟಗಳಿಂದ ಅತ್ಯಾಸಕ್ತಿಯಿಂದ ಹೀರುತ್ತ ಆನಂದಸಾಗರದಲ್ಲಿ ಓಲಾಡಿದರು (ತೇಲಾಡಿದರು), ಆನಂದಪರವಶರಾದರು (ಕಣ್ಣಿಂದೀಂಟಿದರು).

ಅನ್ವಯ :—ದಿವಃ ಗಾಂ ಗತೌ ಪುನರ್ವಸೂ ಇವ ತೌ ವಿಲೋಚನೈಃ ಪಿಬತಾಂ ವಿದೇಹನಗರೀನಿವಾಸಿನಾಂ ಮನಃ ಪಕ್ಷ್ಮಪಾತಮ್ ಅಪಿ ವಂಚನಾಂ ಮನ್ಯತೇ ಸ್ಮ ॥

"ದ್ಯೌಃ ಸ್ವರ್ಗಪುರವರ್ತ್ಮನೋಃ" ಇತಿ ವಿಶ್ವಃ ॥ ಪುನರ್ವಸೂ ಇವ ತನ್ನಾಮಕ ನಕ್ಷತ್ರಾಧಿದೇವತೇ ಇವ ಸ್ಥಿತೌ—ತೌ ರಾಘವೌ ವಿಲೋಚನೈಃ ಪಿಬತಾಮ್—ಅತ್ಯಾಸ್ಥಯಾ ಪಶ್ಯತಾಮಿತ್ಯರ್ಥಃ ॥

**37. ಯೂಪವತ್ಯವಸಿತೇ ಕ್ರಿಯಾವಿಧೌ ।**
**ಕಾಲವಿತ್ ಕುಶಿಕವಂಶವರ್ಧನಃ ॥**
**ರಾಮಮಿಷ್ವಸನದರ್ಶನೋತ್ಸುಕಂ ।**
**ಮೈಥಿಲಾಯ ಕಥಯಾಂ ಬಭೂವ ಸಃ ॥ ೩೭ ॥**

ಕುಶಿಕವಂಶವರ್ಧನನಾದ ಕೌಶಿಕಮುನಿಯ ನೇತೃತ್ವದಲ್ಲಿ ಘನವಾದ ಯೂಪಗಳನ್ನು ನೆಟ್ಟು ಜನಕಮಹಾರಾಜನು ಅಂದು ಯಾಗವನ್ನು ಪರಿಸಮಾಪ್ತಿಗೊಳಿಸಿ ಹರ್ಷಚಿತ್ತನಾಗಿ

ಕುಳಿತಿದ್ದನು. ಆ ಸಂದರ್ಭದಲ್ಲಿ ಯಥೋಚಿತವಾಗಿ ವಿಶ್ವಾಮಿತ್ರರು ಮೆಲ್ಲನೆ ಬಾಲಕನಾದ ಶ್ರೀರಾಮಚಂದ್ರನ ಅಭಿಲಾಷೆಯನ್ನು ನಿವೇದಿಸಿದರು. ರಾಜರ್ಷಿ ಜನಕನ ಅರಮನೆಯಲ್ಲಿದ್ದ ಶಿವಧನುಸ್ಸನ್ನು ಈಕ್ಷಿಸುವ (ನೋಡುವ, ಪರೀಕ್ಷಿಸುವ, ಪರಿಶೀಲಿಸುವ) ರಾಮನ ಮನೋಭಿಲಾಷೆಯನ್ನು ಮಿಥಿಲೇಶನಿಗೆ ಅಂದು ಅರುಹಿದರು (ಮಿಥಿಲೇಶನಿಗೆ ಉಸುರಿದನು).

ಯಥೋಪಪತ್ತಿಕ್ರಿಯಾವಿಧೌ = ಕರ್ಮಾನುಷ್ಠಾನೇ—ತಸ್ಯ ದರ್ಶನ ಉತ್ಸುಕಂ—ಮೈಥಿಲಾಯ = ಜನಕಸ್ಯ—ಕಥಯಾಂ ಬಭೂವ = ಕಥಿತವಾನ್ ॥

**38. ತಸ್ಯ ವೀಕ್ಷ್ಯ ಲಲಿತಂ ವಪುಃ ಶಿಶೋಃ ।**
**ಪಾರ್ಥಿವಃ ಪ್ರಥಿತವಂಶಜನ್ಮನಃ ॥**
**ಸ್ವಂ ವಿಚಿಂತ್ಯ ಚ ಧನುರ್ದುರಾನಮಂ ।**
**ಪೀಡಿತೋ ದುಹಿತೃಶುಲ್ಕಸಂಸ್ಥಯಾ ॥ ೩೮ ॥**

ಆ ಪಾರ್ಥಿವ (ಕ್ಷತ್ರಿಯ) ಕುಲಜಾತನು ಲಲಿತದೇಹದಿಂದೊಪ್ಪುವ ಶ್ರೀರಾಮಚಂದ್ರನನ್ನು ನೋಡಿ ತನ್ನ ಮನದಲ್ಲಿ ಹೀಗೆ ಚಿಂತಿಸಿದನು. "ನಾನೆಂತಹ ಅಕಾರ್ಯವನ್ನು ಮಾಡಿದೆನು. ಮಗಳಾದ ಸೀತೆಯನ್ನು ಕೊಡಲು ಈ ಮಹಾಧನುವನ್ನು ಎತ್ತಿ ಮುರಿಯುವ ಪಣವನ್ನೇಕೆ ಇಟ್ಟೆನು ? ಇಂತಹ ದುಸ್ತರವಾದ, ದುಸ್ಸಾಧ್ಯವಾದ ಪಣವನ್ನಿಟ್ಟು ನಾನು ಕೆಟ್ಟೆನಯ್ಯೋ" ಎಂದು ಮಿಥಿಲೇಶನು ಡೋಲಾಯಮಾನನಾಗಿ, ಸಂಶಯಗ್ರಸ್ತನಾಗಿ ತನ್ನ ಮನದೊಳಗೆ ಮರುಗಿ ಕೊರಗಿದನು (ಮಣಿಯಲು ಸದಳವೆನಿಸುವ ಶಿವಧನುವ ನೆನೆದು).

ಪಾರ್ಥಿವೋ = ಜನಕಃ—ಪ್ರಥಿತವಂಶೇ ಜನ್ಮ ಯಸ್ಯ ತಸ್ಯ ತಥೋಕ್ತಸ್ಯ—ಶಿಶೋಸ್ತಸ್ಯ = ರಾಮಸ್ಯ—ಲಲಿತಂ = ಕೋಮಲಂ (ವಪುರ್ವೀಕ್ಷ್ಯ)—ದುಹಿತೃಶುಲ್ಕಂ = ಕನ್ಯಾಮೂಲ್ಯಂ ಜಾಮಾತೃದೇಯಮ್—ಪೀಡಿತೋ = ಬಾಧಿತಃ—ದುಷ್ಕರಮಿತಿ = ದುಃಖಿತ ಇತಿ—ಶುಲ್ಕ = ಕನ್ಯಾಶುಲ್ಕ, ವಧೂದಕ್ಷಿಣೆ (ವರದಕ್ಷಿಣೆ).

**39. ಅಬ್ರವೀಚ್ಚ ಭಗವನ್ಮತಂಗಜೈಃ ।**
**ಯದ್ಬೃಹದ್ಭಿರಪಿ ಕರ್ಮದುಷ್ಕರಮ್ ॥**
**ತತ್ರ ನಾಹಮನುಮಂತುಮುತ್ಸಹೇ ।**
**ಮೋಘವೃತ್ತಿ ಕಲಭಸ್ಯ ಚೇಷ್ಟಿತಮ್ ॥ ೩೯ ॥**

ಹೇ ಮಹಾಮುನಿವರನೆ, ಮಂತ್ರದ್ರಷ್ಟಾರನೆ, ನನ್ನೊಂದು ವಿಜ್ಞಾಪನೆಯನ್ನು ಮನ್ನಿಸು ಮಾಡುವೆನು. ದಯವಿಟ್ಟು ಪರಿಹಾರವನ್ನು ಸೂಚಿಸು. ಪೇರಾನೆ ಹಿಂಡುಗಳಿಗೆ, ದಿಗ್ಗಜಗಳಿಗೂ, ಅಥವಾ ಐರಾವತದಂತಹ ಮಹಾಗಜಕ್ಕೂ ಅಸಾಧ್ಯವಾದೊಂದು ಕಾರ್ಯವನ್ನು ಶ್ರೀರಾಮಚಂದ್ರನೆಂಬ ಮರಿಯಾನೆಯೊಂದು, ಪ್ರಯತ್ನಪಡುವ ಸಾಹಸಕ್ಕೆ ನಾನು ಹೇಗೆ ಒಪ್ಪಿಗೆ ಕೊಡಲಿ ? ಇದು ಅಸಾಧ್ಯವಾದ ಕಾರ್ಯ. ಇದನ್ನು ತಿಳಿದು ತಿಳಿದೂ, ನಾನು ಒಪ್ಪಿಗೆಯನ್ನು ಕೊಡಲಾರೆ. ಮರಿಯಾನೆಯು ಈ ಕೆಲಸದಲ್ಲಿ ಸೋಲುವುದು ದಿಟ. ಅದನ್ನು ಕಣ್ಣಾರೆ ಕಂಡು ಹೇಗೆ ಸೈರಿಸಲಿ ? ಇದರಲ್ಲಿ ಗೆಲವು ಅನುಮಾನಾಸ್ಪದ (ಬರಿದೆ ಸಾಹಸಪಡುವ).

ಮತಂಗಜಃ = ಮತಂಗಾತ್ ಜಾತಃ—ಮತಂಗಃ = ಮೇಘಃ—ಸ ಇವ ಜಾಯತೇ ಇತಿ ಮತಂಗಜಃ—ಮೋಘವೃತ್ತಿ=ಮೋಘಾವೃತ್ತಿರ್ಥಸ್ಯ ಮೋಘವೃತ್ತಿ—ವ್ಯರ್ಥವ್ಯಾಪಾರಂ ಚೇಷ್ಟಿತಮ್—ಹೇ ಭಗವನ್ ಮುನೇ—ಬೃಹದ್ಭಿರ್ಮತಂಗಜೈ = ಮಹಾಗಜೈರಪಿ ದುಷ್ಕರಮ್ ಯತ್ ಕರ್ಮ = ತತ್ರ ಕರ್ಮಣಿ—ಕಲಭಸ್ಯ = ಬಾಲಗಜಸ್ಯ—"ಕಲಭಃ ಕರಿಶಾಬಕಃ" ಇತ್ಯಮರಃ ॥—ಚೇಷ್ಟಿತಮ್ = ಸಾಹಸಮ್ ॥

**40. ಹೇ ಪಿತಾ ಹಿ ಬಹವೋ ನರೇಶ್ವರಾಃ ।**
**ತೇನ ತಾತ ಧನುಷಾ ಧನುರ್ಭೃತಃ ॥**
**ಜ್ಯಾನಿಘಾತಕಠಿನತ್ವಚೋ ಭುಜಾನ್ ।**
**ಸ್ವಾನ್ ವಿಧೂಯಧಿಗಿತಿ ಪ್ರತಸ್ಥಿರೇ ॥ ೪೦ ॥**

ಹೇ ಪೂಜ್ಯನಾದ ಪಿತನೇ, ಓ ಗೌರವದ ತಂದೆಯೇ, ಅನೇಕಮಂದಿ ಧನುರ್ವೇದ ಪಾರಂಗತರಾದ ನರೇಶ್ವರರು ಬಂದು, ಆ ಚಾಪದಿಂದ ನೊಂದು, ತಲೆ ಎತ್ತಲಾರದೆ, ಅದನ್ನು ಬಗ್ಗಿಸಲಾರದೆ ನಾಚಿಗೆಗೇಡಾದರು. ಅದರ ಸಿಂಜಿನಿಯನ್ನು ಜೋಡಿಸಲಾರದೆ, ಹೆದೆಹೊಡೆದು ಅವಮಾನಿತರಾದರು. ಅವರ ಗರ್ವಶಿಖರ ಕುಸಿದು ನಾಣನ್ನು ಅನುಭವಿಸಿದರು. ಮುಖ ತೋರಿಸದಾದರು. ತಮ್ಮ ಭುಜಬಲಪರಾಕ್ರಮಕ್ಕೆ ಧಿಕ್ಕಾರವಿರಲಿ ಎಂದು ಶಪಿಸಿ ಬಂದ ದಾರಿಗೆ ಸುಂಕವಿಲ್ಲವೆಂಬಂತೆ (ಹೇಳದೆ ಕೇಳದೆ ಪದ್ರಾಡ್) ಕಾಲಿಗೆ ಬುದ್ಧಿಹೇಳಿದರು. ಅವರು ಸಾಮಾನ್ಯರೇನಲ್ಲ, ಚಾಪವಿದ್ಯಾಪಾರಂಗತರು. ನಿರಂತರ ಬಿಲ್ಲಿನ ಹೆದೆಹೊಡೆದು, ಭುಜದ ತೊಗಲು ಜಡ್ಡಾದ ಧನುರ್ವಿದ್ಯಾವಿಶಾರದರಾದ ಪಾರ್ಥಿವರು. ಅವಮಾನಿತರಾಗಿ ಆ ಬಿಲ್ಲಿನ ಏಟನ್ನು ತಿಂದು ವಿದಾಯ ಹೇಳಿ ಹೋದರು. ಹಿಂದಿರುಗಲೇ ಇಲ್ಲ" (ನಾಣನನುಭವಿಸಿ).

ಹ್ರಿಯಂ ಪ್ರಾಪಿತಾ—ತೇ ನರೇಶ್ವರಾ ಜ್ಯಾನಿಘಾತೈಃ ಕಠಿಣತ್ವಚಃ ಸ್ವಾನ್ಸ್ವಭುಜಾನ್ ಧಿಗಿತಿವಿಧೂಯೇವಮುಕ್ತ್ವಾ—ಪ್ರತಸ್ಥಿರೇ = ಪ್ರಸ್ಥಿತಾಃ ॥

**41. ಪ್ರತ್ಯುವಾಚ ತಮೃಷಿರ್ನಿಶಮ್ಯತಾಂ ।**
**ಸಾರತೋಽಯಮಥವಾ ಗಿರಾಕೃತಮ್ ॥**
**ಚಾಪ ಏವ ಭವತೋ ಭವಿಷ್ಯತಿ ।**
**ವ್ಯಕ್ತಿಶಕ್ತಿರಶನಿರ್ಗಿರಾವಿವ ॥ ೪೧ ॥**

"ಹೇ ರಾಜರ್ಷಿ (ಹೇ ರಾಜೇಂದ್ರ), ಈ ಬಾಲಕನಾದ ಶ್ರೀರಾಮನ ಬಲ ಮತ್ತು ವೀರ್ಯವು ಅಲೌಕಿಕವಾದುದು. ಅವನು ಅಪಾರಗುಣನು, ಅಪಾರವೀರ್ಯನು, ಅವ್ಯಯನು, ಅನಂತನು, ಅಕ್ಷಯಬಲನು (ಅಕ್ಷಯವೀರ್ಯನು). ಅವನ ಬಲ ಮತ್ತು ಸಾಮರ್ಥ್ಯವನ್ನು ಪ್ರಶ್ನಿಸದಿರು (ಪ್ರಶ್ನಾತೀತ). ವಜ್ರಾಯುಧವು, ಅಶನಿಯು ಬಹಳ ಸಣ್ಣದಾದರೂ ಕಠಿಣವಾದ ಉಕ್ಕಿನಂತಹ ಪರ್ವತವನ್ನು ಭೇದಿಸಬಲ್ಲುದು (ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು ಎಂಬಂತೆ). ಬಂಡೆಕಲ್ಲನ್ನು ಸಿಡಿಲು ಎರಗಿದಾಗ ಚೂರುಚೂರಾಗಿ ಸಿಡಿಸಿ ಎಸೆಯುವುದಿಲ್ಲವೆ ? ಭರಸಿಡಿಲಿನ ಶಕ್ತಿ ಎಷ್ಟೆಂದು ಅದರ ಕಾರ್ಯ

ದಿಂದಲ್ಲವೆ ಗೋಚರವಾಗುವುದು ? ದೊಡ್ಡ ದೇಹವಿದ್ದ ಮಾತ್ರಕ್ಕೆ ಬಲವಂತನೆಂದು ಸಾರಬಹುದೇ ? ಈತನು ಧನುರ್ಭಂಗ ಮಾಡುವುದರಲ್ಲಿ ಸಂದೇಹವಿಲ್ಲ. ಆದುದರಿಂದ ಬರಿಯ ಮಾತೇಕೆ ? ಧನುವಿನ ಪರೀಕ್ಷೆ ಕೂಡಲೇ ನಡೆಯಲಿ. ಧನುವನ್ನು ತೋರಿದ ಕೂಡಲೇ ತನ್ನ ಶಕ್ತಿಯನ್ನು ಎಂತು ತೋರಿಸುವನೆಂದು ಪ್ರತ್ಯಕ್ಷವಾಗಿ ಕಾಣಬಹುದು (ಸಾಬೀತಾಗುವುದು) (ಪ್ರತ್ಯಕ್ಷಕ್ಕೆ ಪ್ರಮಾಣವೇಕೆ ಎಂಬಂತೆ).

ಸಾರತೋ= ಬಲೇನ—ನಿಶಮ್ಯತಾಂ=ಶ್ರೂಯತಾಮ್—ಕೃತಂ=ಅಲಂ—ಗೀರ್ವಕ್ತ್ರ ವ್ಯೇತ್ಯರ್ಥಃ—"ಯುಗಪರ್ಯಾಪ್ತಯೋಃ ಕೃತಮ್" ಇತ್ಯಮರಃ—ಅಮ್ಯಯಂಚೈತತ್ —ಚಾಪೇ = ಧನುಷ್ಯೇವ—ಭವತ = ಸ್ತವ—ವ್ಯಕ್ತಶಕ್ತಿ = ದೃಷ್ಟಸಾರೋ ಭವಿಷ್ಯತಿ ||

42. ಏವಮಾಪ್ತವಚನಾತ್ ಸ ಪೌರುಷಂ |
ಕಾಕಪಕ್ಷಧರೇऽಪಿ ರಾಘವೇ ||
ಶ್ರದ್ಧದೇ ತ್ರಿದಶಗೋಪಮಾತ್ರಕೇ |
ದಾಹಶಕ್ತಿಮಿವ ಕೃಷ್ಣವರ್ತ್ಮನಿ || ೪೨ ||

ಆ ರಘುಕುಮಾರನು ಕಾಕಪಕ್ಷಧರನು, ಇನ್ನೂ ಕಿಶೋರಾವಸ್ಥೆಗೆ ಕಾಲಿಟ್ಟಿದ್ದನು ಮಾತ್ರ, ದಾಟಿರಲಿಲ್ಲ. ಹಾಗಿದ್ದರೇನಾಯಿತು ? ಪೌರುಷವುಳ್ಳ ಪುರುಷನು (ಯುವಕನು, ಹೊಂತಕಾರಿ) ಮಾಡಬಲ್ಲ ಕಾರ್ಯಗಳನ್ನು ಲೀಲಾಜಾಲವಾಗಿ ಮಾಡಬಲ್ಲನು. ಆತನು ಅಧಿಕಬಲನು ಎಂಬುದನ್ನು ಜನಕಮಹಾರಾಜನು ಅರಿತುಕೊಂಡನು. ಏಕೆಂದರೆ ಬೆಂಕಿಯು ಕಿಡಿಯು, ಪ್ರಮಾಣದಲ್ಲಿ (ಗಾತ್ರದಲ್ಲಿ) ಸಣ್ಣದಾಗಿದ್ದರೂ ಎಲ್ಲವನ್ನೂ ದಹಿಸಬಲ್ಲದು. ಮಿಣುಕುಹುಳದನಿತಿದ್ದರೂ ಕಿಡಿಯು ಸುಡುವ ಬಲವನ್ನು (ದಹನಶಕ್ತಿಯನ್ನು) ಹೊಂದಿರುವಂತೆ, ಈ ತೆರನಾದ ಮುನಿಕುಲಸಾರ್ವಭೌಮನ ಆಪ್ತವಚನಗಳನ್ನು ಕೇಳಿ ಆ ಜನೇಶ್ವರನು (ಮನುಜೇಶ್ವರನು) ನೆರೆನಂಬಿದನು. ಅವನ ಸಂಶಯಪ್ರವೃತ್ತಿ ದೂರ ವಾಯಿತು (ಕಿಡಿಯೊಳಿರುವಂದದೊಳು ಸುಡುವಂಥ ಬಲವು).

ಕಾಕಪಕ್ಷಧರೇ = ಬಾಲ್ಯೇಽಪಿ, ರಾಘವೇ—ಪುರುಷಸ್ಯ ಕರ್ಮ = ಪೌರುಷಂ = ಪರಾಕ್ರಮಂ—"ಪೌರುಷಂ ಪುರುಷಸ್ಯೋಕ್ತಮ್ ಭಾವೇ ಕರ್ಮಣಿ ತೇಜಸಿ" ಇತಿ ವಿಶ್ವಃ—ತ್ರಿದಶಗೋಪ = ಇಂದ್ರಗೋಪಕೀಟಃ—ತಸ್ಮಿನ್ ಕೃಷ್ಣವರ್ತ್ಮನಿ ವಹ್ನೌ= ಕಿಡಿಯೊಳಿರುವ—ದಾಹಶಕ್ತಿಮಿವ=ಸುಡುವಂಥ ಬಲವು—ಶ್ರದ್ದದೇ=ವಿಶ್ವಸ್ತವಾನ್ ||

43. ವ್ಯಾದಿದೇಶಗಣಶೋऽಥಪಾರ್ಶ್ವಗಾನ್ |
ಕಾರ್ಮುಕಾಭಿಹರಣಾಯ ಮೈಥಿಲಃ ||
ತೈಜಸಸ್ಯ ಧನುಷಃ ಪ್ರವೃತ್ತಯೇ |
ತೋಯದಾನಿವ ಸಹಸ್ರಲೋಚನಃ || ೪೩ ||

ಕೂಡಲೇ ಮಿಥಿಲೆಗೆ ಒಡೆಯನಾದ ಜನಕಮಹಾರಾಜನು ನೂರಾರು ಮಂದಿ ಸೇವಕರನ್ನು ಅಟ್ಟಿದನು. ಆ ಮಹಾಚಾಪವನ್ನು ಸಭಾಭವನಕ್ಕೆ ತರಲು ನೂರಾರು ಮಂದಿ ಪರಿಚಾರಕರು ತೆರಳಿದರು. ಹೇಗೆ ಸಹಸ್ರಲೋಚನನಾದ ಇಂದ್ರನು ಮೋಡಗಳ ಸಾಲು

ಗಳನ್ನು ಕಳುಹಿಸಿ ತನ್ನ ತೇಜೋಮಯವಾದ ಧನುಸ್ಸನ್ನು ಜಗತ್ತಿಗೆ ಪ್ರದರ್ಶಿಸುವ ಸಲುವಾಗಿ ಕಳುಹಿಸುವಂತೆ. ಜಗತ್ತನ್ನು ಬೆಳಕಾಗಿಸುವ ಝುಗಝುಗಿಸುವ ಇಂದ್ರಧನುಸ್ಸು (ಮಿಂಚು) ಅಂಬರದಲ್ಲಿ ಬೆಳಗುತ್ತಿರಲು ಜನರು ನೋಡಿ ಆಶ್ಚರ್ಯಪಡುವರು (ಆ ತೇಜೋಮಯ ಶರಾಸನವನು).

ಸಹಸ್ರಲೋಚನ = ಮಹೇಂದ್ರ—ಇಂದ್ರಸ್ಯೈಜಸ್ಕ = ತೇಜೋಮಯಸ್ಕ—ತೋಯದಾನ್ಮೇಘಾನಿವ—ಗಣಶಃ = ಗಣಾನ್—ವ್ಯಾದಿದೇಶ = ಪ್ರಜಿಘಾಯ—ತ್ರಿದಶಗೋಪ = ಇಂದ್ರಗೋಪ = ಮಿಂಚುಹುಳು.

**44.** **ತತ್ಪ್ರಸುಪ್ತಭುಜಗೇಂದ್ರಭೀಷಣಂ ।**
**ವೀಕ್ಷ್ಯ ದಾಶರಥಿರಾದದೇ ಧನುಃ ॥**
**ವಿದ್ರುತಕ್ರತುಮೃಗಾನುಸಾರಿಣಂ ।**
**ಯೇನ ಬಾಣಮಸೃಜತ್ ವೃಷಧ್ವಜಃ** ॥ ೪೪ ॥

ಆ ದಶರಥಾತ್ಮಜನು ಭೀಷಣಾಕೃತಿಯ (ಭಯಂಕರಾಕೃತಿಯ) ಮಲಗಿರುವ ಮಹಾ ಸರ್ಪದಂತೆ (ಘಟಸರ್ಪದಂತೆ. ಸರೀಸೃಪದಂತೆ) ತೋರುವ ಆ ಮಹಾಧನುಸ್ಸನ್ನು ನೋಡಿದ ಕೂಡಲೇ ಅದರ ಮರ್ಮವನ್ನು ಅರಿತುಕೊಂಡನು. ಈ ಹಿಂದೆ ವೃಷಭ ಧ್ವಜನು ಯಜ್ಞಪುರುಷನನ್ನು ತನ್ನ ಬಾಣದಿಂದ ಅಟ್ಟಿದಂತೆ ದಕ್ಷನು ವಿಶ್ವಜಿತ್ ಮಹಾ ಯಾಗವನ್ನು ಮಾಡಲು ಬಯಸಿ, ಎಲ್ಲ ದೇವತೆಗಳನ್ನು ಆಮಂತ್ರಿಸಿದನು. ಆದರೆ ಶಿವನನ್ನು ಆಮಂತ್ರಿಸಲೇ ಇಲ್ಲ. ದಾಕ್ಷಾಯಿಣಿಯು ದಕ್ಷನ ಮಗಳು. ಶಿವನ ಮನೋ ವಲ್ಲಭೆ. ಆಮಂತ್ರಣವಿಲ್ಲದಿದ್ದರೂ ಯಾಗಕ್ಕೆ ಹೋಗಿ ಅವಮಾನಿತಳಾದಳು, ಅವಳು ಯಜ್ಞಕುಂಡಕ್ಕೆ ಹಾರಿ ಆತ್ಮಹತ್ಯೆ ಮಾಡಿಕೊಂಡಳು, ಕೂಡಲೇ ಶಿವನು ಯಜ್ಞವೇದಿಯ ಬಳಿ ಪ್ರತ್ಯಕ್ಷನಾದನು. ಕ್ರುದ್ಧನಾದ ಶಿವನನ್ನು ಕಂಡು ದೇವತೆಗಳು ಚದರಿ ದಿಕ್ಕುದಿಕ್ಕಿಗೆ ಓಡಿಹೋದರು. ಯಜ್ಞಪುರುಷನು ಜಿಂಕೆಯ ಆಕಾರವನ್ನು ತಳೆದು ನಾಗಾಲೋಟದಿಂದ ಓಡತೊಡಗಿದನು. ಶಿವನು ಒಂದು ಮಾರ್ಗಣವನ್ನು ಹೂಡಲು ಆ ಬಾಣವು ಯಜ್ಞ ಪುರುಷನನ್ನು ಬೆಂಬಿಡದೆ ಬೆನ್ನಟ್ಟುತ್ತಾ ಹೋಯಿತು. ಶಿವನು ದಕ್ಷನ ಶಿರಚ್ಛೇದನ ಮಾಡಿ ಶಿಕ್ಷಿಸಿದನು. ಅಂತೆಯೇ ಶ್ರೀರಾಮಚಂದ್ರನು ದಕ್ಷತೆಯಿಂದ, ಬಲು ಚಾಕಚಕ್ಯತೆಯಿಂದ ಆ ದಿವ್ಯಧನುಸನ್ನೆತ್ತಿದ್ದನು.

ಅನ್ವಯ :—ದಾಶರಥಿಃ ಪ್ರಸುಪ್ತಭುಜಗೇಂದ್ರಭೀಷಣಂ ತತ್ ಧನುಃ ವೀಕ್ಷ್ಯ ಆದದೇ ॥ ವೃಷಧ್ವಜಃ ಯೇನ ವಿದ್ರುತಕ್ರತುಮೃಗಾನುಸಾರಿಣಂ ಬಾಣಮ್ ಅಸೃಜತ್ ॥

ಪ್ರಸುಪ್ತಭುಜಗೇಂದ್ರ ಇವ = ಮಲಗಿರುವ ಘಟಸರ್ಪವಿದು—ಭೀಷಣಂ = ಭಯಂಕರಂ—ವೃಷೋಧ್ವಜಶ್ಚಿಹ್ನಂ ಯಸ್ಯ ಸ ಶಿವೋ = ವೃಷಧ್ವಜಃ—ವಿದ್ರುತಂ = ಪಲಾಯಿತಂ—ವಿದ್ರುತಕ್ರತುಂ = ದಕ್ಷನು ಶಿವನನ್ನು ಆಹ್ವಾನಿಸದೆ ನಡೆದ ಕ್ರತು.

**45.** **ಆತತಜ್ಯಮಕರೋತ್ ಸ ಸಂಸದಾ ।**
**ವಿಸ್ಮಯಸ್ತಿಮಿತನೇತ್ರಮೀಕ್ಷಿತಃ ॥**

**ಶೈಲಸಾರಮಪಿ ನಾತಿಯತ್ನತಃ ।**
**ಪುಷ್ಪಚಾಪಮಿವ ಪೇಶಲಂ ಸ್ಮರಃ ॥ ೪೫ ॥**

ಸ್ಮರನು (ಅನಂಗನು, ಮನ್ಮಥನು, ಕಾಮಚಕ್ರೇಶ್ವರನು) ಕೋಮಲವಾದ ಹೂಗಳಿಂದ ರಚಿತವಾಗಿರುವ ಪುಷ್ಪಚಾಪವನ್ನು ಬಗ್ಗಿಸಿ ಹೆದೆಯೇರಿಸಿ ಕಾಮಿಗಳ (ಪ್ರೇಮಿಗಳ) ಕಡೆಗೆ ಬಾಣ ಹೂಡುವಂತೆ, ಮಹಾಪರ್ವತದಷ್ಟು ಭಾರವಿದ್ದ (ಗಿರಿಬಲವನಾಂತಿರ್ದ ಕಾರ್ಮುಕವನು) ಆ ಮಹಾಧನುಸ್ಸನ್ನು ಲೀಲಾಜಾಲವಾಗಿ ಎತ್ತಿದನು. ಆ ಪೂಜ್ಯವಾದ ಧನುಸ್ಸನ್ನು ಮರುಕ್ಷಣವೇ ಕೈಯೊಳಾಂತು ಅದರ ಕೊಪ್ಪನ್ನು ನೆಲಕ್ಕೂರಿ, ಬಗ್ಗಿಸಿ ಎಲ್ಲರೂ ಎವೆಮಿಡುಕದೆ (ವಿಸ್ಮಯಸ್ತಿಮಿತನೇತ್ರ) ಅಚ್ಚರಿಯಿಂದ ನೋಡುತ್ತಿರಲು (ನೋಡಲು ಎವೆಮಿಡುಕದೆ ಅಚ್ಚರಿಯೊಳು) ರಾಘವನು ಯತ್ನದಿಂದೆಳೆದು ಹೆದೆಯೇರಿಸಿ ಕಾರ್ಮುಕವನ್ನು ಗೆಲಿದನು.

ಆತತಜ್ಯಮ್ ಅಕರೋತ್ = ಆತತಾಜ್ಯಾ ಯಸ್ಮಿನ್—ಅತಿಮಾತ್ರ = ಮಾತ್ರಾಮ್ ಅತಿಕ್ರಾಂತಮ್ ಅತಿಮಾತ್ರಮ್—ಸಂಸದಾ = ಸಭಯಾ—ವಿಸ್ಮಯೇನ = ವಿಸ್ಮಿತೇ—ಶೈಲಸ್ಯೇವ ಸಾರೋ ಯಸ್ಯ = ತಚ್ಛೈಲಸಾರಮಪಿ—ಪೇಶಲಂ = ಕೇವಲಂ—ನಾತಿ ಯತ್ನತೋ = ನಾತಿಯತ್ನಾತ್ ॥

**46. ಭಜ್ಯಮಾನಮತಿಮಾತ್ರಕರ್ಷಣಾತ್ ।**
**ತೇನ ವಜ್ರಪರುಷಸ್ವನಂ ಧನುಃ ॥**
**ಭಾರ್ಗವಾಯ ದೃಢಮನ್ಯವೇ ಪುನಃ ।**
**ಕ್ಷತ್ರಮುದ್ಯತಮಿವ ನ್ಯವೇದಯತ್ ॥ ೪೬ ॥**

ಆ ಮಹಾಧನ್ವಿಯು, ಆ ಧನುಸ್ಸಿನ ಸಿಂಜನಿಯನ್ನು ಅತಿಯಾಗಿ ಎಳೆದಾಗ, ಆ ಶರಾಸನವು ಮುರಿದು ವಜ್ರಕಠೋರವಾದ ನಾದವು ಕೇಳಿಸಿತು. ಸಿಡಿಲಿನ ಘನಘರ್ಜನೆಯನ್ನು ಆ ಶಬ್ದವು ಹೋಲುತ್ತಿತ್ತು. ಆ ಕರ್ಣಕಠೋರವಾದ, ವಜ್ರಪರುಷಧ್ವನಿ ಕ್ಷತ್ರಿಯಕುಲದ ಆಜನ್ಮಶತ್ರುವಾದ ಪರಶುರಾಮರನ್ನು ಕೂಗಿ ಕರೆವಂತೆ, ಆ ಭೀಕರ ಧ್ವನಿಯು ದಿಗಂತವಿಶ್ರಾಂತವಾಗಿ ಕೇಳಿಸಿತು. ದಿಗ್‌ದಿಗಂತದಲ್ಲಿ ಆ ಧ್ವನಿ ಪ್ರತಿಧ್ವನಿಯಾಗಿ ಕೇಳಿಸಿತು. ಮರಳಿ ಕ್ಷತ್ರಿಯಕುಲವು ಹುಟ್ಟಿಬಂದಿದೆ. ನಿನ್ನ ವೈರಿಯು ಮರಳಿ ಹುಟ್ಟಿ ಬಂದಿರುವನು. ಅವನ ನಾಶಕ್ಕಾಗಿ ತ್ವರೆಮಾಡು ಎಂಬುದನ್ನು ಕರೆದು ಹೇಳುವಂತೆ ಆ ಧ್ವನಿ ನಾಲ್ಕು ದಿಸೆಗಳಲ್ಲೂ ಮೊಳಗಿದುದು. ಈ ಹಿಂದೆ ಕ್ಷತ್ರಿಯಕುಲಾಂತಕನಾದ (ವಿಲಯಕೇತು, ಧೂಮಕೇತು) ಪರಶುರಾಮನು ಆಸೇತುಹಿಮಾಚಲ 21 ಸಲ ಸಂಚರಿಸಿ, ಕ್ಷತ್ರಿಯರ ನಾಶಗೈದು ತನ್ನ ಹಗೆಯ ತೀರಿಸಿ, ರಕ್ತತರ್ಪಣವಿತ್ತು, ತೃಪ್ತನಾಗಿದ್ದನು. ಅಂತಹ ಧೀಮಂತ, ಮಹಾತ್ಮನಾದ, ದೃಢಮನ್ಯು ಭಾರ್ಗವನಿಗೆ, ಕ್ಷತ್ರಿಯಕುಲಕುಠಾರನಾದ ಕೊಡಲಿರಾಮನಿಗೆ ಅರುಪುವಂತೆ, ಡಂಗುರ ಸಾರುವಂತೆ ಆ ನಾದ ವಿಶ್ವದ ಎಲ್ಲೆಡೆ, ದಿಗ್‌ದಿಗಂತದಲ್ಲಿ ಮೊಳಗಿತು. ರುದ್ರಧನುಸ್ಸು ಮುರಿದು ಎರಡಾಯಿತು (ಎರಡು ಹೋಳಾಯಿತು).

ವಜ್ರಮಿವ ಪರುಷಃ ಸ್ವನೋ ಯಸ್ಯ ತತ್—ದೃಢಮನ್ಯವೇ =ದೃಢಕ್ರೋಧಾಯ—

"ಮನ್ಯುಃ ಕ್ರೋಧೇ ಕ್ರತೌ ದೈನ್ಯೇ" ಇತಿ ವಿಶ್ವಃ—ಕ್ಷತ್ರಕುಲಂ ಪುನರುದ್ಧೃತ ಮಿತಿ—ನ್ಯವೇದಯದಿವ = ಜ್ಞಾಪಯಾಮಾಸೇವ—ಅತಿಮಾತ್ರ=ಮಾತ್ರಾಮ್ ಅತಿಕ್ರಾಂತಮ್, ಅತಿಮಾತ್ರಮ್ ॥

**47. ದೃಷ್ಟಸಾರಮಥ ರುದ್ರಕಾರ್ಮುಕೇ ।**
**ವೀರ್ಯಶುಲ್ಕಮಭಿನಂದ್ಯ ಮೈಥಿಲಃ ॥**
**ರಾಘವಾಯ ತನಯಾಮಯೋನಿಜಾಂ ।**
**ರೂಪಿಣೀಂ ಶ್ರಿಯಮಿವ ನ್ಯವೇದಯತ್** ॥ ೪೭ ॥

ಸತ್ಯಸಾಗರನಾದ, ಸತ್ಯಪ್ರತಿಜ್ಞನಾದ ಮಿಥಿಲಾದೇಶದ ರಾಜನಾದ ರಾಜರ್ಷಿ ಜನಕನು "ರುದ್ರಕಾರ್ಮುಕಭಂಗ" ಕನ್ಯಾಶುಲ್ಕವನ್ನು ಶ್ರೀರಾಮನಿಂದ ಪಡೆದು ಕೃತಕೃತ್ಯನಾದನು. (ಮಿಥಿಲಾನಗರವು ಭೂಸ್ವರ್ಗವೆನಿಸಿದ ನೇಪಾಳದಲ್ಲಿದೆ. ಕಠ್ಮಂಡುವಿನ ಬಳಿ.) ಶ್ರೀ ರಾಘವನು ನೀಡಿದ ಹರಧನುರ್ಭಂಗವೆಂಬ ಅಮೋಘವಾದ ಕನ್ಯಾಶುಲ್ಕದಿಂದ ತೃಪ್ತಿಹೊಂದಿದ (ಆ ಶೌರ್ಯಶುಲ್ಕದೊಳು ಮೋದವಾಂತವನು) ಮಿಥಿಲಾಧಿಪತಿಯು ತನ್ನ ಮಗಳಾದ ಅಯೋನಿಜೆ, ಮೈತಳೆದ ಮಹಾಲಕ್ಷ್ಮಿಯಂತಿರುವ ಸೀತಾದೇವಿಯನ್ನು ರಾಘವನಿಗರ್ಪಿಸಿದನು, ಮೋದವಾಂತು. ಸಕಲ ಶೀಲಸದ್ಗುಣಗಳ ಸಾರಭೂತಳಾದ, ರೂಪಸೌಂದರ್ಯದಲ್ಲಿ ಶ್ರೀದೇವಿಯಂತಿರುವ ಶುಭದಾಯಕಿಯಾದ ತನ್ನ ಮಗಳನ್ನು ಜನಕಮಹಾರಾಜನು ರಾಘವನಿಗೆ ಅರ್ಪಿಸಿ ನಲಿವಾಂತನು, ಅವನ ಜೀವನವು ಸಾರ್ಥಕ್ಯವೆನಿಸಿತು.

ರುದ್ರಕಾರ್ಮುಕೇ ದೃಷ್ಟಸಾರಂ ವೀರ್ಯಶುಲ್ಕಂ—ಅಯೋನಿಜಾಮ್ = ಸೀತಾದೇವಿ—ದೃಷ್ಟಃ ಸಾರಃ ಸ್ಥಿರಾಂಶೇ ಯಸ್ಯ=ತದ್ದೃಷ್ಟಸಾರಮ್—"ಸಾರೋ, ಬಲೇ, ಸ್ಥಿರಾಂಶೇ ಚ" ಇತ್ಯಮರಃ—ವೀರ್ಯಮೇವ ಶುಲ್ಕಮ್—ಅಯೋನಿಜಾಂ = ದೇವಯಜನ ಸಂಭವಾಂ—ತನಯಾಂ = ಸೀತಾಂ—ರೂಪಿಣೀಶ್ರಿಯಮಿವ = ಸಾಕ್ಷಾಲ್ಲಕ್ಷ್ಮೀಮಿವ ॥

**48. ಮೈಥಿಲಃ ಸಪದಿ ಸತ್ಯಸಂಗರೋ ।**
**ರಾಘವಾಯ ತನಯಾಮಯೋನಿಜಾಮ್ ॥**
**ಸಂವಿಧೌ ದ್ಯುತಿಮತಸ್ತಪೋನಿಧೇ ।**
**ಅಗ್ನಿಸಾಕ್ಷಿಕ ಇವಾತಿ ಸೃಷ್ಟವಾನ್** ॥ ೪೮ ॥

ಸತ್ಯಪ್ರತಿಜ್ಞನಾದ, ಸತ್ಯಸಂಗಿಯೂ, ವೇದಾಂತಿಯೂ ಆದ ಮೈಥಿಲನು (ಜನಕ ಮಹಾರಾಜನು) ತಾನು ನುಡಿದಂತೆಯೇ ಅಯೋನಿಜೆಯಾದ ತನ್ನ (ಸಾಕು)ಮಗಳನ್ನು ಆ ತಪೋನಿಧಿಯ ಸಾನ್ನಿಧ್ಯದಲ್ಲಿ ಅಗ್ನಿಸಾಕ್ಷಿಕವಾಗಿ ರಘುರಾಮನಿಗೆ ಮದುವೆ ಮಾಡಿ ಕೊಡಲು ನಿಶ್ಚಯಿಸಿದನು. ತಪೋನಿಧಿಯಾದ ವಿಶ್ವಾಮಿತ್ರನು ಚತುರ್ವೇದಪಾರಗನು, ವಾಚಸ್ಪತಿ, ಸಕಲಶಾಸ್ತ್ರಪ್ರವೀಣನು, ಮೇಲಾಗಿ ಮಂತ್ರದ್ರಷ್ಟಾರನು, ವೈದಿಕಧರ್ಮ ಪ್ರವರ್ತಕನು, ಕಾರ್ಮುಕಾಚಾರ್ಯನು, ಬಿಲ್ಲೋಜನು. ಸಕಲಮಂತ್ರಾಸ್ತ್ರ, ಮಂತ್ರ, ತಂತ್ರಶಾಸ್ತ್ರಸಿದ್ಧಹಸ್ತನು (ವರದಹಸ್ತನು), ತಪಸ್ಸೇ ಮೂಲಧನವಾಗಿವುಳ್ಳ ಧರ್ಮ

ಮೂರ್ತಿಯಾಗಿದ್ದ ವಿಶ್ವಗುರು, ಬ್ರಹ್ಮಜ್ಞಾನಿ ವಿಶ್ವಾಮಿತ್ರರ ದಿವ್ಯಸನ್ನಿಧಿಯಲ್ಲಿ ಅಗ್ನಿ ಸಾಕ್ಷಿಕವಾಗಿ ಮಗಳನ್ನು ಶ್ರೀರಾಮನಿಗೆ ಪಾಣಿಗ್ರಹಣಮಾಡಿಕೊಡುವುದಾಗಿ ಘೋಷಿಸಿ, ಸಕಲ ಸಿದ್ಧತೆಗಳನ್ನು ಏರ್ಪಾಡುಮಾಡಿದನು. ವಿಶ್ವಾಮಿತ್ರರ ಸನ್ನಿಧಿಯು ಪ್ರತಿ ಅಗ್ನಿಸಾಕ್ಷಿ ಎಂಬಂತೆ ಆ ನೂತನ ಕಾರ್ಯಕ್ರಮಕ್ಕೆ ಕಳೆಯೇರಿಸಿತು (ಅಗ್ನಿಸಾಕ್ಷಿಯು ಪರಿಯಲಿರ್ದುದೆನೆ ಸಾನ್ನಿಧ್ಯಮಾ ತಪೋನಿಧಿಯು).

ಸತ್ಯಸಂಗರಃ = ಸತ್ಯಃ ಸಂಗರಃ (ಪ್ರತಿಜ್ಞಾ) ಯಸ್ಯ = ಸತ್ಯಪ್ರತಿಜ್ಞಃ—"ಅಥ ಪ್ರತಿಜ್ಞಾಜಿಸಂವಿದಾಪತ್ಸು ಸಂಗರಃ" ಇತ್ಯಮರಃ—ಕೌಶಿಕಸ್ಯ ಸಂನಿಧೌ = ಅಗ್ನಿಃ ಸಾಕ್ಷೀ ಯಸ್ಯ ಸೋಽಗ್ನಿಸಾಕ್ಷಿಕಃ ॥

**49. ಪ್ರಾಹಿಣೋಚ್ಚ ಮಹಿತಂ ಮಹಾದ್ಯುತಿಃ ।**
**ಕೋಸಲಾಧಿಪತಯೇ ಪುರೋಧಸಮ್ ॥**
**ಭೃತ್ಯಭಾವಿದುಹಿತುಃ ಪರಿಗ್ರಹಾತ್ ।**
**ದಿಶ್ಯತಾಂ ಕುಲಮಿದಂ ನಿಮೇರಿತಿ ॥ ೪೯ ॥**

ಮಹಾದ್ಯುತಿವಂತನಾದ, ತೇಜೋವಂತನಾದ (ಜ್ಞಾನರವಿ, ಜ್ಞಾನಸಿಂಧು) ಮಿಥಿಲಾಧಿಪತಿ ಜನಕಮಹಾರಾಜನು, ಕೋಸಲಾಧಿಪತಿಯಾದ ದಶರಥನರೇಶ್ವರನ ಬಳಿಗೆ ಪೂಜ್ಯ ಆಚಾರ್ಯರಾದ ಶತಾನಂದರನ್ನು ಕಳುಹಿಸಿ. ವಿನಯಪೂರ್ವಕವಾಗಿ ಈ ತೆರನಾಗಿ ವಿವಾಹದ (ಸೀತಾರಾಮರ ವಿವಾಹದ) ವರ್ತಮಾನವನ್ನು ಅರಿಕೆ ಮಾಡುಮಂತೆ ಬಿನ್ನವಿಸಿದನು, "ಹೇ, ಕೋಸಲಾಧಿಪತೇ, ನನ್ನೊಂದು ಕೊಡಗೂಸನ್ನು, ಏನೂ ಅರಿಯದ ಮುಗ್ಧಳಾದ ಮುದ್ದುಮಗಳನ್ನು ನಿನ್ನ ಸೊಸೆಯಾಗಿ ಸ್ವೀಕರಿಸಿ ಭವಿಷ್ಯದಲ್ಲಿ ನಿಮ್ಮೆಲ್ಲರ ಸೇವೆಮಾಡುವ (ಭೃತ್ಯಭಾವ) ಅವಕಾಶವನ್ನು ಕಲ್ಪಿಸಿ ನಿಮಿಕುಲವನ್ನು ಉದ್ಧರಿಸು. ನಮ್ಮ ಮಗಳನ್ನು ಕೊಂಡು ನಮ್ಮ ಬಾಂಧವ್ಯವನ್ನು ನಲ್ಮೆಯಿಂದ ಸ್ವೀಕರಿಸುವುದು." ಹೀಗೆಂದು ನುಡಿದು ಜನಕಮಹಾರಾಜನು ರಾಜಪುರೋಹಿತರಾದ ಶತಾನಂದರನ್ನು ಅಯೋಧ್ಯೆಗೆ, ದಶರಥನಲ್ಲಿಗೆ ಒಪ್ಪಿಗೆಯನ್ನು ಪಡೆದುಬರುವಂತೆ ಕಳುಹಿಸಿದನು. ನಿಮಿಕುಲವನ್ನು (ಘೂರ್ಕಕುಲ, ಘೂರ್ಕವಂಶ) ಆದರದಿಂದ ಆದರಿಸುವಂತೆ ಕೇಳಿಕೊಂಡನು.

ಮಹಿತಂ = ಪೂಜಿತಂ— ಪುರೋಧಸಂ = ಪುರೋಹಿತಂ—ಪ್ರಾಹಿಣೋತ್ = ಪ್ರಹಿತವಾಂಶ್ಚ—ನಿಮಿರ್ನಾಮ ಜನಕನಾಂ ಪೂರ್ವಜಃ ಕಶ್ಚಿತ್—ಪರಿಗ್ರಹಾತ್=ಸ್ನುಷಾತ್ವೇನ ಸ್ವೀಕಾರಾದ್ಧೇತೋಃ—ಭೃತ್ಯಸ್ಯ ಭಾವೋ = ಭೃತ್ಯತ್ವಮ್ ॥

**50. ಅನ್ವಿಯೇಷ ಸದೃಶೀಂ ಸ ಚ ಸ್ನುಷಾಂ ।**
**ಪ್ರಾಪ ಚೈನಮನುಕೂಲವಾಕ್ ದ್ವಿಜಃ ॥**
**ಸದ್ಯ ಏವ ಸುಕೃತಾಂ ಹಿ ಪಚ್ಯತೇ ।**
**ಕಲ್ಪವೃಕ್ಷಫಲಧರ್ಮಿಕಾಂಕ್ಷಿತಮ್ ॥ ೫೦ ॥**

ಆ ವೇಳೆಗಾಗಲೇ ದಶರಥಸಾರ್ವಭೌಮನು ಶ್ರೀರಾಮಚಂದ್ರನ ವಿವಾಹವನ್ನು ತನ್ನ ಮನದಲ್ಲಿ ಬಯಸಿ ಅನುರೂಪಳಾದ ಸೊಸೆಯು ದೊರೆತೊಡನೆ ವಿವಾಹಮಾಡಬೇಕೆಂದು

ಎಣಿಸುತ್ತಿದ್ದನು. ಅದೇ ವೇಳೆಗೆ ಸರಿಯಾಗಿ, ಅವನ ಎಣಿಕೆಗೆ ಸರಿಯಾಗಿ ಜನಕ ಮಹಾರಾಜನ ಕುಲಪುರೋಹಿತರು ಬಂದು, ಅವನೆದುರು ನಿಂತು ವಿವಾಹದ ಶುಭ ಸಂದೇಶವನ್ನು ಅರುಹಿದರು. ಆ ಅನುಕೂಲಕರವಾದ ಸಂದೇಶವು ಸುಕೃತಿಗಳ ಕಾಂಕ್ಷೆಗಳು, ದೇವತರುವಾದ ಕಲ್ಪವೃಕ್ಷವು ಬೇಡಿದುದನ್ನು ಆ ಕ್ಷಣವೇ ಕೊಡುವಂತೆ, ಸ್ಮರಣೆಮಾತ್ರದಿಂದ ಇಚ್ಛಿತಫಲವು (ಪುಣ್ಯಫಲವು) ಕೈಸೇರುವಂತೆ, ಆಯಿತು (ದೇವತರುಫಲದಂತೆ ಸ್ಮರಣಮಾತ್ರದೊಳೆ ತಾಂ ಫಲ ಬಿಡುವುದಲ್ತೆ). ಇಚ್ಛಿತಕಾರ್ಯವು ಕೈಗೂಡುವಂತೆ ತೋರಿತು. ಮನೋರಥವು ಈಡೇರುವಂತೆ ಕಂಡಿತು. ಕಲ್ಪವೃಕ್ಷಫಲ ಧರ್ಮಕಾಲಾನಪೇಕ್ಷಿತತ್ವವು ಕರ್ಣಾಮೃತವಾದ ಸಂದೇಶದಿಂದ ದೃಢಪಟ್ಟುದರಿಂದ ಅರಸನ ಆನಂದಕ್ಕೆ ಪಾರವೇ ಇರದಂತೆ ಆಯಿತು.

ಸದ್ಯಃಶೀಘ್ರಮನುರೂಪಂ—ರಾಮವಿವಾಹಪರಾಚಕಾಂಕ್ಷೇತ್ಯರ್ಥಃ—ಸುಕೃತಾಂ = ಪುಣ್ಯಕರ್ಮಿಣಾಂ—ಕಾಂಕ್ಷಿತಂ = ಮನೋರಥಂ—ಸ್ವಯಮೇವ ಪಕ್ವಂ, ಭವತೀತ್ಯರ್ಥಃ ॥

**51. ತಸ್ಯ ಕಲ್ಪಿತ ಪುರಸ್ಕ್ರಿಯಾವಿಧೇಃ ।**
**ಶುಶ್ರುವಾನ್ ವಚನಮಗ್ರಜನ್ಮನಃ ॥**
**ಉಚ್ಚಚಾಲ ಬಲಭಿತ್ಸಖೋ ವಶೀ ।**
**ಸೈನ್ಯರೇಣುಮುಷಿತಾರ್ಕದೀಧಿತಿಃ ॥ ೫೧ ॥**

ಆ ಅಗ್ರಜನ್ಮನಾದ ದ್ವಿಜಶ್ರೇಷ್ಠನು ಜನಕಮಹಾರಾಜನ ಮಾತುಗಳನ್ನು ಪ್ರಸ್ತಾಪಿಸಿದನು. ಆ ಮಾತುಗಳನ್ನು ಕೇಳಿ ಬಲವೈರಿಸಖನಾದ ದಶರಥನು ನಲಿದನು. ಆ ಭೂಸುರೋತ್ತಮನಿಗೆ ಅತಿಥಿಸತ್ಕಾರವನ್ನು ಕೈಕೊಂಡು ತಾನು ತನ್ನ ಚತುರಂಗಪಡೆಸಹಿತ ನೇಪಾಳರಾಜ್ಯಕ್ಕೆ ನಡೆದನು. ಭಾಸ್ಕರನ ನಿಜತೇಜದಿಂದ ಮೆರೆಯುವ ಆ ಪಾರ್ಥಿವಾಗ್ರಣಿಯು ತನ್ನ ಪಡೆಯೊಂದಿಗೆ ನಡೆದಾಗ ಸೂರ್ಯಬಿಂಬವನ್ನು ಕೆಂಧೂಳಿಯ ಮೋಡಗಳಿಂದ ಮುಚ್ಚಿದನು. ಸೂರ್ಯನನ್ನು ಧೂಳಿಯೊಳಗದ್ದಿದನು (ಪಡೆಯ ಧೂಳಿಯೊಳದ್ದಿ ಭಾಸ್ಕರನ ತೇಜವನು).

ಅನ್ವಯ :—ಬಲಭಿತ್ಸಖಃ ವಶೀಕಲ್ಪಿತ ಪುರಸ್ಕ್ರಿಯಾವಿಧೇಃ ತಸ್ಯ ಅಗ್ರಜನ್ಮನಃ ವಚನಂ ಶುಶ್ರುವಾನ್ ಸೈನ್ಯರೇಣುಮುಷಿತಾರ್ಕದೀಧಿತಿಃ (ಸನ್), ಉಚ್ಚಚಾಲ ॥

ಕಲ್ಪಿತಃ = ಕಲ್ಪಿತಃ ಪುರಸ್ಕ್ರಿಯಾ ವಿಧಿಃ ಯಸ್ಯ । ಅಗ್ರಜನ್ಮನಃ = ಬ್ರಾಹ್ಮಣ, ವಿಪ್ರ—ಬಲಭಿತ್ಸಖಃ = ಬಲನಿಸೂದನ, ಇಂದ್ರ—ಅಗ್ರಜನ್ಮನ್ = ಅಗ್ರೇ (ಆದೌ) ಅಗ್ರಾತ್ (ಮುಖಾತ್) ವಾ ಜನ್ಮ ಯಸ್ಯ ॥

**52. ಆಸಸಾದ ಮಿಥಿಲಾಂ ಸ ವೇಷ್ಟಯನ್ ।**
**ಪೀಡಿತೋಪವನಪಾದಪಾಂ ಬಲೈಃ ॥**
**ಪ್ರೀತಿರೋಧಮಸಹಿಷ್ಟ ಸಾ ಪುರೀ ।**
**ಸ್ತ್ರೀವ ಕಾನ್ತಪರಿಭೋಗಮಾಯತಮ್ ॥ ೫೨ ॥**

ದಶರಥನ ನಿಜಸೇನೆಯು ಜನಕನಗರಿಯನ್ನು ಆವರಿಸಿ, ಆ ನಗರದ ಉಪವನ, ಉದ್ಯಾನಗಳಲ್ಲಿ ಬೀಡುಬಿಟ್ಟಿತು. ಆನೆಗಳನ್ನು ಸಂಕೋಲೆಗಳಿಂದ ಮರಗಳಿಗೆ ಬಿಗಿದು ಕಟ್ಟುವುದು, ಸೈನಿಕರ ವಸತಿಗೆ ಪಾಳೆಯಾನ, ಡೇರೆಗಳನ್ನು ವಿರಚಿಸುವುದು) (ತಾತ್ಕಾಲಿಕ ವಾಗಿ) ಇವೇ ಮೊದಲಾದ ಕೆಲಸಕಾರ್ಯಗಳಿಂದ (ವಿವಿಧ ಚಟುವಟಿಕೆಗಳಿಂದ ಉಪವನದ ತರುಗಳು. ಮರಮಟ್ಟುಗಳು ಪೀಡೆಗೊಳಗಾದುವು. ಹೇಗೆ ಸ್ತ್ರೀಯರು ಭರ್ತೃಚೇಷ್ಟೆ ಯನ್ನು ಸಹಿಸುವಂತೆ ಆ ಕೋಸಲಾಧಿಪನ ಮಹಾಸೇನೆಯು ಎಲ್ಲಾ ವಿಧದ ಬಾಧೆಗಳನ್ನು ಸದ್ದುಗದ್ದಲವಿಲ್ಲದೆ (ಪ್ರತಿರೋಧವಿಲ್ಲದೆ) ಪುರವೆಂಬ ವನಿತೆಯು ಸಹಿಸಿಕೊಂಡು ಇರುತ್ತಿತ್ತು. ರಮಣಿಯರು ತಮ್ಮ ಪುರುಷರೊಂದಿಗೆ ಬೆರೆತಾಗ ಗಾಢಾಲಿಂಗನ, ನಖಕ್ಷತ, ದಂತಕ್ಷತ ಮೊದಲಾದ ಕಾಮಚೇಷ್ಟೆಗಳನ್ನು ಸಹಿಸಿಕೊಂಡಿರುವಂತೆ ಆ ಪುರಭಾಮಿನಿಯು ಸೇನೆಯ ಕಷ್ಟಕೋಟಲೆಗಳನ್ನು (ಕೀಟಲೆಗಳನ್ನು) ಸಹಿಸಿಕೊಂಡು ಸಹನಭಾವನೆಯನ್ನು ತೋರಿಸಿತು.

ಅನ್ವಯ :—ಸ ಬಲೈಃ ಪೀಡಿತೋಪವನಪಾದಪಾಂ ಮಿಥಿಲಾಂ ವೇಷ್ಟಯನ್ ಆಸಸಾದ ಸಾ ಪುರೀಸ್ತ್ರೀ ಆಯಂತಂ ಕಾಂತಪರಿಭೋಗಮಿವ ಪ್ರತಿರೋಧಮಸಹಿಷ್ಟ ||

ಬಲೈಃ = ಸೈನ್ಯೈಃ—ಸ್ತ್ರೀ = ಯುವತಿ—ಪ್ರೀತ್ಯಾರೋಧಂ = ಪ್ರೀತಿರೋಧವ್—ಅಸಹಿಷ್ಟ=ಸೋಢವತೀ, ದ್ವೇಷರೋಧಂತು ನ ಸಹತ ಇತಿ ಭಾವಃ (ಪ್ರೀತ್ಯಾರೋಧಃ) ಆಲಿಂಗನಾದಿ ಯತ್ರ ತಮ್—ಪೀಡಿತ = ಪೀಡಿತಾಃ ಉಪವನಸ್ಯ ಪಾದಪಾಃ ಯಸ್ಯಾಃ ತಾಮ್ ||

**53. ತೌ ಸಮೇತ್ಯ ಸಮಯೇ ಸ್ಥಿತಾವುಭೌ |**
**ಭೂಪತೀ ವರುಣವಾಸವೋಪಮೌ ||**
**ಕನ್ಯಕಾತನಯಕೌತುಕಕ್ರಿಯಾಂ |**
**ಸ್ವಪ್ರಭಾವಸದೃಶೀಂ ವಿತೇನತುಃ** || ೫೩ ||

ಆ ಉಭಯಭೂಪತಿಗಳಾದ ದಶರಥಜನಕರು ವರುಣ, ವಾಸವನಿಗೆ ಸಮಾನ ರಾದವರು ದೇಶಕಾಲ, ಪದ್ಧತಿಗಳಿಗೆ (ಶಿಷ್ಟಾಚಾರ, ಸಂಪ್ರದಾಯಗಳಿಗೆ) ತಕ್ಕಂತೆ ತಮ್ಮ ಮಕ್ಕಳ ವಿವಾಹದ ಕುರಿತು ಚರ್ಚಿಸಿದರು. ಆ ಬಳಿಕ ಸೀತಾರಾಮರಿಗೆ ತಮ್ಮ ಪ್ರತಿಷ್ಠೆ, ಕುಲಮರ್ಯಾದೆ, ಪ್ರಭಾವಳಿಗೆ ತಕ್ಕಂತೆ (ಆತ್ಮಮಹಿಮಾನುಗುಣವೆನಲು ಅಂದು ತಾ ಒಲಿದು) ವಿವಾಹಮಹೋತ್ಸವವನ್ನು ನಡೆಸಿ ಕೃತಕೃತ್ಯರಾದರು. ಕೌತುಕವೆಂಬ ಪವಿತ್ರ ದಾರವನ್ನು (ಸೂತ್ರವನ್ನು) ವಧೂವರರ ಕೈಗೆ ಕಟ್ಟಿ ಅವರನ್ನು ಹಸೆಮಣೆಯಲ್ಲಿ ಕೂರಿಸಿ ವಿವಾಹೋತ್ಸವದ ಕಾರ್ಯಗಳನ್ನು ಯಥಾವತ್ತಾಗಿ ನೆರವೇರಿಸಿದರು.

ಅನ್ವಯ :—ಸಮಯೇ ಸ್ಥಿತೌ ವರುಣವಾಸವೋಪಮೌ ತೌ ಉಭೌ ಸಮೇತ್ಯ ಸ್ವಪ್ರಭಾವಸದೃಶೀಂ ಕನ್ಯಕಾತನಯಕೌತುಕಕ್ರಿಯಾಂ ವಿತೇನತುಃ ||

ಸ್ವಪ್ರಭಾವಸದೃಶೀಮ್ = ಆತ್ಮಮಹಿಮಾನುರೂಪಾಂ—ಕೌತುಕಕ್ರಿಯಾಂ = ವಿವಾಹೋತ್ಸವಂ—ವಿತೇನತುಃ = ವಿಸ್ತೃತವನ್ತೌ—ಸಮಯೇ ಸ್ಥಿತೌ = ಆಚಾರಧರ್ಮಗಳನ್ನು ನಡೆಸುತ್ತಿ

**54.** **ಪಾರ್ಥಿವೀಮುದವಹದ್ರಘೂದ್ವಹೋ ।**
**ಲಕ್ಷ್ಮಣಸ್ತದನುಜಾಮಥೋರ್ಮಿಲಾಮ್ ॥**
**ಯೌ ತಯೋರವರಜೌ ವರೌಜಸೌ ।**
**ತೌ ಕುಶಧ್ವಜಸುತೇ ಸುಮಧ್ಯಮೇ** ॥ ೫೪ ॥

ಪಾರ್ಥಿವವಂಶಪ್ರಮುಖನಾದ ರಘುರಾಮಚಂದ್ರನು ಭೂಮಿಜಾತೆ ಸೀತಾದೇವಿಯನ್ನು ಪಾಣಿಗ್ರಹಣ ಮಾಡಿಕೊಂಡನು. ಆ ಬಳಿಕ ಭೂಮಿಜೆಯ ತಂಗಿ ಊರ್ಮಿಳೆಯನ್ನು ರಾಘವಾನುಜನಾದ ಲಕ್ಷ್ಮಣನು ಲಗ್ನವಾದನು. ಅವರೀರ್ವರ ಅನುಜಾತರು ತೇಜೋವಂತರಾದ ಭರತಶತ್ರುಘ್ನರೆಂಬವರು ಜನಕಮಹಾರಾಜನ ತಮ್ಮನಾದ ಕುಶಧ್ವಜನ ಪುತ್ರಿಯರಾದ ಮಾಂಡವಿ ಮತ್ತು ಶ್ರುತಕೀರ್ತಿಯರನ್ನು ಅನುಕ್ರಮವಾಗಿ ಲಗ್ನವಾದರು (ಅವರೀರ್ವರನುಜಾತರಾವರೋಜಸರಂದು). ಕುಶಧ್ವಜನ ಈರ್ವರು ಪುತ್ರಿಯರು ಸುಮಧ್ಯಮೆಯರು. ಸರ್ವಲಕ್ಷಣಗಳಿಂದ ಒಪ್ಪುವ ದೇಹ ಐಶ್ವರ್ಯವನ್ನು ಪಡೆದ ರೂಪಸಿಯರು, ಸೌಂದರ್ಯಶಾಲಿನಿಯರು. ಹೀಗೆ ನಾಲ್ವರು ಸೋದರರು ಅನುರೂಪರಾದ ಸತಿಯರನ್ನು ಪಡೆದು ಅಲಂಕೃತವಾದ ಮಂಟಪದಲ್ಲಿ ಶೋಭಿಸಿದರು, ನಲಿದು, ಒಲಿದು, ವಿರಾಜಿಸಿದರು.

ರಘೂಣಾಮುದ್ವಹೋ ರಘೂದ್ವಹೋ ರಾಮಃ—ಪೃಥಿವ್ಯಾ ಅಪತ್ಯಂ ಸ್ತ್ರೀ = ಪಾರ್ಥಿವೀ—ತಾಂ ಸೀತಾಮುದವಹತ್=ಪರಿಣೀತವಾನ್—ಸುಮಧ್ಯಮೇ ಕುಶಧ್ವಜಸ್ಯ. ಜನಕಾನುಜಸ್ಯ ಸುತೇ(ಕನ್ಯಕೇ) ಮಾಂಡವೀ, ಶ್ರುತಕೀರ್ತಿ ಚೋದವಹತಾಮ್—ವಿವಾಹ ಮಾನಯಾಜ್ಞಾದೌ—ರಘೂದ್ವಹ = ಉದ್ವಹ = ಅನುಕೂಲವಾಗಿ ವಂಶವನ್ನು ಮುಂದು ವರಿಸು.

**55.** **ತೇ ಚತುರ್ಥಸಹಿತಾಸ್ತ್ರಯೋ ಬಭುಃ ।**
**ಸೂನವೋ ನವವಧೂಪರಿಗ್ರಹಾಃ ॥**
**ಸಾಮದಾನವಿಧಿಭೇದನಿಗ್ರಹಾಃ ।**
**ಸಿದ್ಧಿಮಂತ ಇವ ತಸ್ಯ ಭೂಪತೇಃ** ॥ ೫೫ ॥

ದಶರಥವಸುಂಧರಾಧೀಶನ ನಾಲ್ಕು ಮಂದಿ ಮಕ್ಕಳು ನವವಧುಯುಕ್ತರಾಗಿ ಸಿದ್ಧಿಯಿಂದೊಡಮೆರೆದ ಸಾಮ, ದಾನ, ಭೇದ, ದಂಡಗಳೆಂಬ ನಾಲ್ಕು ಚತುರೋಪಾಯಗಳಂತೆ ತೋರುತ್ತಿದ್ದರು. ಆ ನೂತನ ನವವಧೂಯುಕ್ತರಾದ ನಾಲ್ವರು ಸುತರು ಧರ್ಮಶಾಸ್ತ್ರದಲ್ಲಿ ಹೇಳಿದ ನಾಲ್ಕು ಉಪಾಯಗಳಂತೆ ಸಿದ್ಧಿ, ಸತ್ಫಲ ಸಮುದಯವ ಹೊಂದಿರುವ ಸಾಮಾದಿಚತುರೋಪಾಯಗಳಂತೆ (ಸಿದ್ಧಿಯಿಂದೊಡಮೆರೆದ ವರಸಾಮ ಭೇದದೊಲು) ಮಂಗಳಮಹಿಮರಾಗಿ, ತಮ್ಮ ಕೈಪಿಡಿದ ಸುಮಂಗಲೆಯರೊಂದಿಗೆ ವಿವಾಹಮಂಟಪದಲ್ಲಿ ಶೋಭಾಯಮಾನರಾಗಿ ವಿರಾಜಿಸುತ್ತಿದ್ದರು.

ಸಾಮದಾನವಿಧಿಭೇದನಿಗ್ರಹಾಃ = ಚತ್ವಾರ ಉಪಾಯಾ ಇವ ಬಭುಃ—ವಿಧೀಯತೇ ಇತಿ ವಿಧಿಃ—ದಾನಮೇವ ವಿಧಿಃ—ನಿಗ್ರಹೋ = ದಂಡಃ ಚತುರ್ಥಸಹಿತಾಸ್ತ್ರಯಃ—ಸಿದ್ಧಿ

ಮಂತಃ = ಸಿದ್ಧಿಯಿಂದೊಡವೆರೆದ—ಭೇದೋ ದಂಡಃ ಸಾಮದಾನಮಿತ್ಯುಪಾಯ ಚತುಷ್ಟಯಮ್ ॥

**56. ತಾ ನರಾಧಿಪಸುತಾ ನೃಪಾತ್ಮಜೈಃ ।**
**ತೇ ಚ ತಾಭಿರಗಮತ್ ಕೃತಾರ್ಥತಾಮ್ ॥**
**ಸೋಽಭವದ್ವರವಧೂಸಮಾಗಮಃ ।**
**ಪ್ರತ್ಯಯಪ್ರಕೃತಿಯೋಗಸನ್ನಿಭಃ ॥ ೫೬ ॥**

ಆ ದಶರಥಕುಮಾರಕರು ಜನಕಪುತ್ರಿಯರನ್ನು ಲಗ್ನವಾಗಿ ಅವರ ಮಿಲನ ಹಾಗೂ ಅನ್ಯೋನ್ಯಸಂಗದಿಂದ ತಾವು ಕೃತಾರ್ಥರಾದರು. ಅವರು ಕುಲಶೀಲ, ವಯಸ್ಸು, ರೂಪಾದಿ ಸಾಫಲ್ಯಸನ್ನಿಭರು. ಆ ವಧೂವರರ ಸಮಾಗಮವು ಪ್ರಕೃತಿಪ್ರತ್ಯಯ ಯೋಗದಂತೆ, ಧಾತುಪ್ರತ್ಯಯಗಳಂತೆ, ನಾಮಪದ, ಕ್ರಿಯಾಪದಗಳು, ನಾಮಪ್ರತ್ಯಯ, ಕ್ರಿಯಾಪ್ರತ್ಯಯಗಳೊಂದಿಗೆ ಸೇರಿ ಪ್ರಾತಿಪದಿಕಗಳಾಗಿ ಸರಿಯಾದ ವಾಕ್ಯಾರ್ಥವನ್ನು ಬಿಂಬಿಸುವಂತೆ ಆ ಸತಿಪತಿಯರು ಸದ್ಗೃಹಸ್ಥರಾಗಿ, ಗೃಹಸ್ಥಾಶ್ರಮದಲ್ಲಿ ಅಡಿಯಿಟ್ಟು ಸ್ವಧರ್ಮಪಾಲಕರಾಗಿ, ಸಂಸಾರಸಾರೋದಯರಾಗಿ, ಮೈತಳೆದುನಿಂತ ಧರ್ಮಮೂರ್ತಿ ಗಳಂತೆ ಎಸೆದಿದ್ದರು. ಪ್ರಕೃತಿ, ಪ್ರತ್ಯಯಗಳ ಸಂಯೋಗವು ಶಾಶ್ವತವಾಗಿರುವಂತೆ, ಆ ಸತಿಪತಿಯರು ತಮ್ಮ ಬಾಳಸಂಗಾತಿಗಳೊಡನೆ, ಬಾಳನೌಕೆಯನ್ನೇರಿ, ಶಾಶ್ವತವಾಗಿ ಒಂದಾಗಿ ಸೇರಿರ್ದರು (ಪ್ರಕೃತಿಪ್ರತ್ಯಯಸಂಮಿಲನದೊಲು).

ಕುಲಶೀಲವಯೋರೂಪಸಾಫಲ್ಯಮಂಗಮನ್—ಕಿಂಚ, ಸ ವರಾಣಾಂ ವಧೂನಾಂ ಚ ಸಮಾಗಮಃ—ಪ್ರತ್ಯಾನಾಂ ಪ್ರಕೃತೀನಾಂ ಚ ಯಂಯೋಗ ಇವ ಸನ್ನಿಭಾತೀತಿ ಸನ್ನಿಭಃ—ಯಥಾ ಪ್ರಕೃತಿಪ್ರತ್ಯಯಯೋಃ ಸಪ್ಯೆಕಾರ್ಥಸಾಧನತ್ವಂ ತದ್ವದತ್ರಾಪ್ರೀತಿಭಾವಃ—ಪ್ರಕ್ರಿಯತೇ ಆದೌ ಕ್ರಿಯತೇ ಇತಿ ಪ್ರಕೃತಿಃ—ಪ್ರತೀಯತೇಽರ್ಥೋಽನೇನೇತಿ ಪ್ರತ್ಯಯಃ—ಪ್ರಕೃತಿಯಂತಾಃ ಪ್ರತ್ಯಯಾ ಇವ ಸಾರ್ಥಕತ್ವಮಿಹಾಯಃ—ಇತಿ ವಾಕ್ಯಾರ್ಥಃ ॥

**57. ಏವಮಾತ್ತರತಿರಾತ್ಮಸಂಭವಾನ್ ।**
**ತಾನ್ನಿವೇಶ್ಯ ಚತುರೋಽಪಿ ತತ್ರ ಸಃ ॥**
**ಅಧ್ವಸು ತ್ರಿಷು ವಿಸೃಷ್ಟ ಮೈಥಿಲಃ ।**
**ಸ್ವಾಂ ಪುರೀಂ ದಶರಥೋ ನ್ಯವರ್ತತ ॥ ೫೭ ॥**

ಅನುರಾಗದಿಂದ ದಶರಥನರೇಶ್ವರನು ತನ್ನ ಮಕ್ಕಳ ವಿವಾಹವನ್ನು ಮಿಥಿಲೆಯಲ್ಲಿ ನಡೆಸಿ ಮೂರು ದಿನ ಪರ್ಯಂತ ಅಲ್ಲಿಯೇ ಉಳಿದುಕೊಂಡು ಜನಕಮಹಾರಾಜನ ಅತಿಥಿಯಾಗಿ ಕಾಲಕಳೆದನು. ಹೀಗೆ ಮಿಥಿಲಾನಗರಿಯಲ್ಲಿ ಮೂರು ರಾತ್ರಿಗಳನ್ನು ಕಳೆದು ಜನಕನ ಒಪ್ಪಿಗೆಯನ್ನು ಪಡೆದು ತನ್ನ ನಿಜರಾಜಧಾನಿಯಾದ ಅಯೋಧ್ಯೆಗೆ ಪಯಣ ಬೆಳೆಸಿದನು. ಜನಕಮಹಾರಾಜನ ಬೀಗರಾದ ಅವರೆಲ್ಲರನ್ನು ಬಹಳ ವೈಭವದಿಂದ, ಆತ್ಮೀಯವಾಗಿ ಬೀಳ್ಕೊಟ್ಟನು.

ಏವಮಾತ್ತರತಿ = ಅನುರಾಗವಾನ್—ಆತ್ಮಸಂಭವ = ಪುತ್ರ—ನಿವೇಶ್ಯ = ವಿವಾಹ್ಯ

—"ನಿವೇಶಃ ಶಿಬಿರೋ ದ್ವಾಹವಿನ್ಯಾಸೇಷು ಪ್ರಕೀರ್ತಿತಃ" ಇತಿ ವಿಶ್ವಃ—ತ್ರಿಷ್ವಧ್ವಸು= ಪ್ರಯಾಣೇಷು ಸತ್ಸು (ವಿಸೃಷ್ಟವ್ಯೈಥಿಲಃ ಸನ್)—ಆತ್ತರತಿ=ಜಾತಪ್ರೀತಿಃ = ಅನುರಾಗ ದಿಂದ.

**58. ತಸ್ಯ ಜಾತು ಮರುತಃ ಪ್ರತೀಪಗಾ।**
**ವರ್ತ್ಮಸು ಧ್ವಜತರುಪ್ರಮಾಥಿನಃ॥**
**ಚಿಕ್ಲಿಶುರ್ಭೃಶತಯಾ ವರೂಥಿನೀಂ।**
**ಉತ್ತಟಾ ಇವ ನದೀರಯಾಃ ಸ್ಥಲೀಮ್** ॥ ೫೮ ॥

ದಿಬ್ಬಣಿಗರು ದಾರಿ ಸಾಗುತ್ತಿದ್ದಾಗ ಇದ್ದಕ್ಕಿದ್ದಂತೆ ಉತ್ಪಾತಗಳು ತಲೆದೋರಿದುವು. ಪ್ರತಿಕೂಲವಾಗಿ ವೇಗದಿಂದ ಪ್ರಚಂಡವಾದ ಚಂಡಮಾರುತವು ಬೀಸತೊಡಗಿತು. ಸೇನಾ ವಾಹಿನಿಯ ಧ್ವಜಪತಾಕೆಗಳು, ದಾರಿಯ ಇಕ್ಕಡೆಗಳಲ್ಲಿ ಬೆಳೆದ ಮರಗಿಡಗಳ ಸಮೂಹವು ಉರುಳಿದುವು. ಪ್ರತಿಕೂಲಮಾರುತನು ವೇಗದಿಂದ ಬೀಸುತ್ತ ಧ್ವಜಕುಜಸಮೂಹವನ್ನು ಸಾರಾಸಗಟು ಕೆಡಹಿತು, ಕೆಡೆದು ಉರುಳಿಸಿತು, ಬೀಳಿಸಿತು. ಭಯಂಕರವಾದ ಉತ್ಪಾತವು ತಲೆದೋರಿತು. ಸೇನಾವಾಹಿನಿಯನ್ನು ಕೆಂಧೂಳಿ ಮುಸುಕಿತು. ತರಗೆಲೆಯಂತೆ ಸೇನೆ ಅಲ್ಲೋಲಕಲ್ಲೋಲವಾಯಿತು. ದಡಮೀರಿ ಹರಿಯುತ್ತಿರುವ ಮಹಾನದಿಯೊಂದು ಬಯಲುಭೂಮಿಯನ್ನು ಆಕ್ರಮಿಸುವಂತೆ ದಶರಥನ ಪಡೆಗೆ ಎಡರನ್ನು ಒಡ್ಡಿ ಗಡಗಡನೆ ನಡುಗಿಸಿತು,

ಪ್ರತೀಪಗಾಃ = ಪ್ರತಿಕೂಲಗಾಮಿನಃ—ವರೂಥಿನೀಂ =ಸೇನಾಂ—ಭೃಶತಯಾ = ಭೃಶಂ—ಚಿಕ್ಲಿಶುಃ = ಕ್ಲಿಶ್ಯಂತಿ ಸ್ಮ—ಜಾತು = ಕದಾಚಿತ್—ಪ್ರತಿಪಗಾ = ಪ್ರತೀಪ = ಪ್ರತಿಪಗಾಃ ಆಪಃ ಅತ್ರ ಇತಿ ಪ್ರತೀಪಮ್—ಪ್ರತಿ + ಅಪ್ (ಪಾಣಿನಿ) ದ್ವಯಾಂತರು ಪಸರ್ಗೇಭ್ಯೋಽಪ ಈತ್)—ಧ್ವಜತರು = ಧ್ವಜ ಏವ ತರವಃ—ಉತ್ತಟಾ=ಉದ್ಗತಾಃ ತಟಾತ್ ॥

**59. ಲಕ್ಷ್ಯತೇ ಸ್ಮ ತದನಂತರಂ ರವಿಃ।**
**ಬದ್ಧಭೀಮಪರಿವೇಷಮಂಡಲಃ॥**
**ವೈನತೇಯಶಮಿತಸ್ಯ ಭೋಗಿನೋ।**
**ಭೋಗವೇಷ್ಟಿತ ಇವ ಚ್ಯುತೋ ಮಣಿಃ** ॥ ೫೯ ॥

ತದನಂತರ ಆಕಾಶಮಾರ್ಗದಲ್ಲಿ ಪ್ರಚಂಡನಾದ ಸೂರ್ಯನು ತನ್ನ ಸುತ್ತಲೂ ಭಯಂಕರಾಕಾರದ, ಭಯಗೊಳಿಪ ಭೀಮಾಕೃತಿಯ ಪರಿವೇಷಮಂಡಲನ್ನು (ಪ್ರಭಾವಳಿ, ಪ್ರಭಾಮಂಡಲ) (ಪರಿಧಿರೂಪ ಸೂರ್ಯಮಂಡಲೇ) ಹೊಂದಿರುವ ರವಿಯು ಪ್ರತ್ಯಕ್ಷ ವಾಗಿ ಕಾಣಿಸಿಕೊಂಡು ವಿಜೃಂಭಿಸಿದನು. ಆ ಸೂರ್ಯದೇವನು, ವಿನತಾಪುತ್ರನಾದ ಗರುಡ ನಿಂದ ಹತನಾದ (ಸಾಯಿಸಲ್ಪಟ್ಟ) ನಾಗೇಂದ್ರನ ಹೆಡೆಯ ಮೇಲೆ ಇರುತ್ತಿರುವ ತಲೆಮಣಿಯು (ಫಣಾಮಣಿಯು) ಉದುರಿಬೀಳುತ್ತಿರುವಂತೆಯೂ, (ಉದುರಿರುವ ತಲೆ ಮಣಿಯು ಮಾಳ್ಕೆಯಿಂದಾ) ಅದರ ಸುತ್ತಲೂ ಆ ಸರ್ಪದ ಕಳೇಬರವು ಬಳೆಯಾಕಾರದಲ್ಲಿ,

ಉಂಗುರದಾಕಾರದಲ್ಲಿ ಸೂರ್ಯನ ಸುತ್ತ ಸುತ್ತುತ್ತಿರುವಂತೆ, ಭಯಂಕರವಾಗಿ ತೋರು ತ್ತಿದ್ದುದು. ಆ ತೆರದಲ್ಲಿ ಆ ಚಂಡಭಾನುವು ಭಯವನ್ನು ಹುಟ್ಟಿಸುತ್ತ ಆಕಾಶದಲ್ಲಿ ಕಾಣಿಸಿ ಕೊಂಡಿತು.

''ಪರಿವೇಷಸ್ತು ಪರಿಧಿರುಪಸೂರ್ಯಕ ಮಂಡಲೇ'' ಇತ್ಯಮರಃ—ವೈನತೇಯ ಶಮಿತಸ್ಯ = ಗರುಡಹತಸ್ಯ ಭೋಗಿನಃ = ಸರ್ಪಸ್ಯ ''ಭೋಗಃ ಸುಖೇಸ್ ಚ್ಯಾದಿಭೃತಾವ ಹೇಶ್ಚ ಫಣಕಾಯಯೋಃ'' ಇತ್ಯಮರಃ—ವೇಷ್ಟಿತಚ್ಯುತಃ = ಶಿರೋಭ್ರಷ್ಟೋ ॥

**60. ಶ್ಯೇನಪಕ್ಷಪರಿಧೂಸರಾಲಕಾಃ ।**
**ಸಾಂಧ್ಯಮೇಘರುಧಿರಾರ್ದ್ರವಾಸಸಃ ॥**
**ಅಂಗನಾ ಇವ ರಜಸ್ವಲಾ ದಿಶೋ ।**
**ನೋ ಬಭೂವುರವಲೋಕನಕ್ಷಮಾಃ ॥ ೬೦ ॥**

ಆಗ ನಾಲ್ಕು ದಿಕ್ಕುಗಳು (ಆಕಾಶದ ನಾಲ್ಕು ವಿಭಾಗಗಳು) ಹದ್ದಿನ ರೆಕ್ಕೆಗಳ ಬಣ್ಣ ವನ್ನು ಹೋಲುತ್ತಿದ್ದುವು. ಬೂದುಬಣ್ಣದಿಂದ ಆವೃತವಾದುವು. ಸಾಯಂಕಾಲದ ಆ ವೇಳೆ ಒಮ್ಮಿಂದೊಮ್ಮೆ ಮೋಡಗಳು ರಕ್ತದಲ್ಲಿ ಅದ್ದಿದ ಬಟ್ಟೆಯಂತೆ, ರಕ್ತಸ್ನಾನಮಾಡಿದಂತೆ ಕಾಣಿಸಿಕೊಂಡುವು (ರಕ್ತಾರ್ದ್ರವಸ್ತ್ರದೊಲು ಮೇಘಂಗಳಿರಲು). ಆ ದಿಶಾರಮಣಿಯರು (ದಿಗಂಗನೆಯರು) ತಾವು ರಜಸ್ವಲೆಯರಾದ (ಮುಟ್ಟಾದಂತೆ) ಸ್ತ್ರೀಯರಂತೆ, ಕೆಂಪು ಬಣ್ಣದ, ರಕ್ತರಂಜಿತ ಸೀರೆಯನ್ನು ಉಟ್ಟುಕೊಂಡಂತೆ (ಧರಿಸಿದಂತೆ) ನೋಟಕ್ಕೆ (ನೋಡಲು, ಅಲೋಕನಕ್ಕೆ) ಅನರ್ಹರಾದರು. ರಜಸ್ವಲೆಯಾದಂತೆ ದಿಕ್ಕುಗಳು ಕಾಣಿಸಿ ಕೊಂಡುದರಿಂದ ಮುಂದೆ ಉತ್ಪಾತಗಳು ಅಥವಾ ಅನಾಹುತಗಳು (ಕೇಡು) ಸಂಭವಿಸ ಬಹುದೆಂದು ಸೂಚಿತವಾಗುವುದು ಸಹಜವಷ್ಟೆ.

ರಜೋಧೂಳಿರಾಸಾಮಸ್ತೀತಿ=ರಜಸ್ವಲಾಃ—ರಜಃ ಕೃಷ್ಯಾಸುತಿಪರಿಷದೋ ವಲಚ್ (ಪಾಣಿನಿ) ಇತಿ ವಲಚ್ ಪ್ರತ್ಯಯಃ—ರಜಸ್ವಲಾ = ಋತುಮಂತ್ಯೋ ಅಂಗನಾ ಇವ— ''ಸ್ಯಾದ್ರಜಃ ಪುಷ್ಪಮಾರ್ತವಮ್'' ಇತ್ಯಮರಃ—ಅವಲೋಕನಕ್ಷಮಾ = ದರ್ಶನಾರ್ಹಾ (ನೋ ಬಭೂವುಃ)—ಅತ್ರ ರಜೋವೃಷ್ಟ್ಯುತ್ಪಾತ ಉಕ್ತಃ ॥

**61. ಭಾಸ್ಕರಶ್ಚ ದಿಶಮಧ್ಯುವಾಸಯಾಂ ।**
**ತಾಂ ಶ್ರಿತಾಃ ಪ್ರತಿಭಯಂ ವವಾಸಿರೇ ॥**
**ಕ್ಷತ್ರಶೋಣಿತ ಪಿತೃಕ್ರಿಯೋಚಿತಂ ।**
**ಚೋದಯಂತ್ಯ ಇವ ಭಾರ್ಗವಂ ಶಿವಾಃ ॥ ೬೧ ॥**

ಅಂದಿನ ಸಂಧ್ಯಾಕಾಲದಲ್ಲಿ (ಮುಸ್ಸಂಜೆ) ಸೂರ್ಯನಿಗೆ ಎದುರಾಗಿ ಹೆಣ್ಣುಗುಳ್ಳೇ ನರಿಗಳು ಊಳಿಡತೊಡಗಿದುವು. ಅವು ಸೂರ್ಯನಿಗೆ ಮುಖಮಾಡಿ ಅನಿಷ್ಟಗಳನ್ನು ಕರೆಯುವಂತೆ ಒಂದೇ ಸಮನೆ ಗಟ್ಟಿಯಾಗಿ ಕೂಗಿದುವು (ರವಿಗೆದುರು ಮೊಗವೆತ್ತಿ ಜಂಬುಕವು ಊಳ್ದುವವು). ಆ ಕೂಗು ಭಾರ್ಗವರಾಮನನ್ನು ಮತ್ತೊಮ್ಮೆ ಕೂಗಿ ಕರೆವಂತೆ, ಕ್ಷತ್ರಿಯಕುಲನಾಶಕ್ಕೆ ನಾಂದಿಯಾಯಿತು. ಜಮದಗ್ನಿಯ ಪುತ್ರನಾದ ಪರಶುರಾಮನು

ಮತ್ತೊಮ್ಮೆ ತನ್ನ ಪಿತೃಗಳಿಗೆ ರಕ್ತತರ್ಪಣವಿತ್ತು ತಣಿಸುವಂತೆ ಎಲ್ಲರಲ್ಲಿ ಮಹಾಯುದ್ಧದ ಭೀತಿ ಹುಟ್ಟಿಸುತ್ತಾ ಭೀಕರತೆಯ ಪಲ್ಲವಿ ಹಾಡಿತು.

ಹಿನ್ನೆಲೆ : (ಪೂರ್ವೇತಿಹಾಸ) ಈ ಹಿಂದೆ ಕಾರ್ತವೀರ್ಯಾರ್ಜುನನು ಜಮದಗ್ನಿಯನ್ನು ಮರಕ್ಕೆ ಕಟ್ಟಿಹಾಕಿ (ಪೂರ್ವಾಪರ ಎಣಿಸದೆ, ದಂಡಿಸಿ) ಹಿಂಸಿಸಿ (ಛಡಿ ಏಟು ಕೊಟ್ಟು) ಆಶ್ರಮದಲ್ಲಿದ್ದ ಕಾಮಧೇನು ಎಂಬ ಸುಪ್ರಸಿದ್ಧ ಹಸುವನ್ನು ಕೊಂಡೊಯ್ದನು. ಈ ಘಟನೆಯಿಂದ ರೊಚ್ಚಿಗೆದ್ದ ಭಾರ್ಗವರಾಮನು ಕ್ಷತ್ರಿಯಕುಲವನ್ನು ಸಮೂಲ ನಾಶಮಾಡುವುದಾಗಿ ಪಣತೊಟ್ಟು ಭರತಖಂಡವನ್ನು 21 ಸಲ ಸುತ್ತಿದ್ದನು. ಪ್ರತಿಭಟಿಸಿದ ಕ್ಷತ್ರಿಯ ರಾಜರನ್ನು ಕೊಡಲಿಗೆ ಆಹುತಿಕೊಟ್ಟು, ಕೊನೆಗೆ ಸಮಂತಪಂಚಕದಲ್ಲಿ ಆ ರಕ್ತಧಾರೆಯ ತರ್ಪಣವಿತ್ತು ಪಿತೃದೇವತೆಗಳನ್ನು ತೃಪ್ತಿಪಡಿಸಿ ತಾನು ಶಾಂತಿಹೊಂದಿದನು. ಈಗ ಮತ್ತೊಮ್ಮೆ ಆ ಜಮದಗ್ನಿ ರಾಮನನ್ನು ಕ್ಷತ್ರಿಯವಧೆಗೆ ಪ್ರಚೋದಿಸುವಂತೆ ಆ ಪ್ರದೋಷಕಾಲದಲ್ಲಿ ಹೆಣ್ಣುನರಿಗಳು ಗಟ್ಟಿಯಾಗಿ ಊಳಿಟ್ಟು ಕರೆದುವು. ಪ್ರಕೃತಿಯಲ್ಲಿ ಏರುಪೇರುಗಳಾದುವು. ದುಃಶಕುನಗಳು ತಾಂಡವವಾಡಿದುವು.

"ಸ್ತ್ರಿಯಾಂ ಶಿವಾ ಭೂರಿಮಾಯುಗೋಮಾಯು ಮೃಗಧೂರ್ತಕಾ" ಇತ್ಯಮರಃ—ಪಿತೃಕ್ರಿಯಾ=ಪಿತೃತರ್ಪಣಂ—ತತ್ರೋಚಿತಂ = ಪರಿಚಿತಂ—ಪ್ರತಿಭಯಂ=ಭಯಂಕರಂ ಮವಾಸಿರೇ=ರುರುವುಃ—"ವಾಸೃ" ಶಬ್ದೇ ಇತಿ ಧಾತೋರ್ಲಿಟ್—"ತಿರಶ್ಚಾಂ ವಾಸಿತಂ ರುತವತ್" ಇತ್ಯಮರಃ ॥

ಅನ್ವಯ :—ಭಾಸ್ಕರೋ ಯಾಂ ದಿಶಮಧ್ಯುವಾಸ ಚ ತಾಂ ಶ್ರಿತಾಃ ಶಿವಾಃ ಕ್ಷತ್ರ ಶೋಣಿತ ಪಿತೃಕ್ರಿಯೋಚಿತಂ ಭಾರ್ಗವಂ ಚೋದಯಂತ್ಯಃ ಇವ ಪ್ರತಿಭಯಂ ಮವಾಸಿರೇ ॥

ಪ್ರತಿಭಯಂ = ಭಯಂಕರಮ್—ಪ್ರತಿಗತ ಭಯಂ ಯಸ್ಮಿನ್ ಕರ್ಮಣಿ ತದ್ಯಥಾ ತಥಾ—ಪಿತೃಕ್ರಿಯಾ—ಸಮಂತಪಂಚಕ ॥

**62. ತತ್ ಪ್ರತೀಪಪವನಾದಿ ವೈಕೃತಂ ।**
**ಪ್ರೇಕ್ಷ್ಯ ಶಾಂತಿಮಧಿಕೃತ್ಯ ಕೃತ್ಯವಿತ್ ॥**
**ಅನ್ವಯುಂಕ್ತ ಗುರುಮೀಶ್ವರಃ ಕ್ಷಿತೇಃ ।**
**ಸ್ವಂತಮಿತ್ಯಲಘಯತ್ಸ ತದ್ವ್ಯಥಾಯಾಮ್ ॥ ೬೨ ॥**

ವಿರುದ್ಧ ದಿಕ್ಕಿನಿಂದ ಬೀಸುತ್ತಿರುವ ಧೂಳುಮಿಶ್ರಿತ ಗಾಳಿಯನ್ನು ನೋಡಿ, ಪ್ರಕೃತಿಯ ವಿಕೃತಿಗಳನ್ನು ಕಂಡು ದಶರಥಭೂವರನು ಚಿಂತಾಮಗ್ನನಾದನು, ತಲ್ಲಣಗೊಂಡನು. ಅವು ದುರ್ನಿಮಿತ್ತದ್ಯೋತಕಗಳು. ಇವರ ಅರ್ಥವೇನೆಂದು ತನ್ನ ನಿಜಗುರುವಾದ (ಕುಲಗುರುಗಳಾದ) ವಸಿಷ್ಠರನ್ನು ಕೇಳಲು ಆ ಜಗದ್ಗುರುವು ಮುಂದೆ ಲೇಸಾಗುವುದೆಂದು ಬೆಸಸಿದರು. ಅರಸನು ಶಾಂತಿಕ್ರಿಯೆಗಳನ್ನು ಹೇಳುವಂತೆ, ಶುಭೋದಯವಾಗುವಂತೆ, ಮಾರ್ಗೋಪಾಯಗಳನ್ನು ಅರುಹುವಂತೆ ಬಿನ್ನವಿಸಿದನು. ಆ ರಾಜಗುರುವು (ಕುಲಪುರೋಹಿತನು) ಕ್ಷಿತೀಶ್ವರಚಿಂತೆಯನ್ನು ಲಘುಗೈದನು. ಮುಂದೆ ಒಳಿತಾಗುವುದೆಂದು ಮುನ್ಸೂಚನೆಯಿತ್ತು ಸಾಂತ್ವನಗೊಳಿಸಿದನು. ಖೇದಗೊಳ್ಳದಂತೆ, ತಲ್ಲಣಿಸದಂತೆ ಬೆಸಸಿದನು.

ವೈಕೃತಂ = ದುರ್ನಿಮಿತ್ತಂ—ಪ್ರೇಕ್ಷ್ಯ ಕೃತ್ಯವಿತ್ = ಕಾರ್ಯಜ್ಞಃ—ಶಾಂತಿಮ್ = ಅನರ್ಥನಿವೃತ್ತಿ—ಅಧಿಕೃತ್ಯ=ಉದ್ದಿಶ್ಯ—ಅನ್ವಯುಂಕ್ತ=ಅಪೃಚ್ಛತ್—"ಪ್ರಶ್ನೋಽನುಯೋಗಃ ಪೃಚ್ಛಾ ಚ" ಇತ್ಯಮರಃ—ವ್ಯಥಾಮಲಘಯತ್ = ಲಘೂಕೃತವಾನ್—ವೈಕೃತಮ್ = ವಿಕೃತಸ್ಯಭಾವಃ—ವಿಕೃತ + ಅ(ಣ್)—ವಿಕೃತಮೇವ ವೈಕೃತಮ್—ಸ್ವಂತಮ್=ಶೋಭನಃ—ಲಘು = ಲಘೂಕೃತವಾನ್—ವೈಕೃತಂ = ವಿಕೃತಸ್ಯ ಭಾವಂ—ವೈಕೃತಂ = ದುಶ್ಶಕುನಗಳು.

**63. ತೇಜಸಃ ಸಪದಿರಾಶಿರುತ್ಥಿತಃ ।**
**ಪ್ರಾದುರಾಸ ಕಿಲ ವಾಹಿನೀ ಮುಖೇ ॥**
**ಯಃ ಪ್ರಮೃಜ್ಯ ನಯನಾನಿ ಸೈನಿಕೈಃ ।**
**ಲಕ್ಷಣೀಯಪುರುಷಾಕೃತಿಶ್ಚಿರಾತ್ ॥ ೬೩ ॥**

ಅಷ್ಟರಲ್ಲಿ ಆ ಸೇನಾವಾಹಿನಿಯ ಮುಂದೆ ಅಮಿತತೇಜೋರಾಶಿಯೊಂದು ಮೂಡಿಬಂತು. ಕೊನೆಗೆ ಆ ತೇಜಃಪುಂಜವು ಹೊಳೆಹೊಳೆದು ಅದರಿಂದ ಒಂದು ಮನುಜರೂಪವು (ಮಾನವಾಕೃತಿಯು) ಮೂಡಿಬಂತು (ಅದುವೆ ತೋರ್ದುದು ಬಳಿಕ ಮನುಜರೂಪ ದೊಳಿಸೆದು). ಪ್ರತಿಸೂರ್ಯನಂತೆ ಬೆಳಗುತ್ತಿರುವ, ಆ ಮನುಜಾಕೃತಿಯನ್ನು, ಅದ್ಭುತ ಗಾತ್ರನನ್ನು, ಸೈನಿಕರು ತಮ್ಮ ಕಣ್ಣುಗಳನ್ನು ಉಜ್ಜುತ ನೋಡಿದರುದು (ಕ್ಷತ್ರಿಯ ಕುಲಾಂತಕ, ಕ್ಷತ್ರಿಯಕುಲವಿಲಯಕೇತು).

ವಾಹಿನೀಮುಖೇ = ಸೇನಾಗ್ರೇ—ಚಿರಾಲ್ಲಕ್ಷಣೀಯಃ = ಭಾವನೀಯಃ—ಯಃ ಸೈನಿಕೈಃ ನಯನಾನಿ ಚಿರಾತ್ ಲಕ್ಷಣೀಯ ಪುರುಷಾಕೃತಿಃ ಬಭೂವ ॥ ಪಿತ್ರ್ಯಮ್ = ಪಿತುವಾಗತಮ್—ಪಿತೃ + ಯತ್—ಸೂತ್ರ:ಪಿತುರ್ಯಚ್ಚ (ಪಾಣಿನಿ) (ಪಿತಾ ದೇವತ ಅಸ್ಯ) ॥

**64. ಪಿತ್ರ್ಯಮಂಶಮುಪವೀತಲಕ್ಷಣಂ ।**
**ಮಾತೃಕಂ ಚ ಧನುರೂರ್ಜಿತಂ ದಧತ್ ॥**
**ಯಃ ಸ ಸೋಮ ಇವ ಘರ್ಮದೀಧಿತಿಃ ।**
**ಸದ್ವಿಜಿಹ್ವ ಇವ ಚಂದನದ್ರುಮಃ ॥ ೬೪ ॥**

ಆ ಘನಪುರುಷನು, ಯುಗಪುರುಷನಾದ ಪರಶುರಾಮನು ತನ್ನ ತಂದೆಯ ಕಡೆಯಿಂದ ಪೂಜ್ಯನಾದ ಬ್ರಾಹ್ಮಣನು, ಯಜ್ಞೋಪವೀತ(ಜನಿವಾರ)ವನ್ನು ಧರಿಸಿದವನು (ಬ್ರಹ್ಮ ಋಷಿ ಜಮದಗ್ನಿಯ ನಂದನನಾದ ಜಾಮದಗ್ನಿ), ತಾಯಿಯ ಕಡೆಯಿಂದ ಗಮನಿಸಿದರೆ ಕ್ಷತ್ರಿಯಕುಲೋದ್ಭವನು (ರೇಣುಕಾನಂದನನು). ಈ ಎರಡು ವಂಶಗಳ ಸಂಸ್ಕಾರವನ್ನು ಪಡೆದ ತೇಜೋವಂತನು. ಇವರಿಂದಾಗಿ ಅವನು ಸೂರ್ಯಚಂದ್ರರು ಒಂದಾಗಿ ರೂಪು ತಳೆದಂತೆ ಅವನ ಸ್ವಭಾವವೂ ಹಾಗೆಯೇ ಸೂರ್ಯನಂತೆ ಉಷ್ಣವಾದ (ಖಾರವಾದ) ಸುಡುವ ಕಿರಣವನ್ನು ಹೊಂದಿರುವನು, ಹಾಗೆಯೇ ಪರಮಪುಣ್ಯವಾದ ಸತ್ವಗುಣದ ಸಾಕಾರಮೂರ್ತಿ. ಶಮ, ದಮ, ಕ್ಷಮೆ, ಕರುಣೆ ಮೊದಲಾದ ಸಾತ್ವಿಕಗುಣಗಳ ತವನಿಧಿ,

ತಪೋನಿಧಿ. ಚಂದ್ರನಂತೆ ಅಮೃತವಾದ, ತುಪಾದ, ಅಮೃತಕಿರಣಗಳನ್ನು, ಶಾಂತಗುಣ ಗಳನ್ನು ಹೊಂದಿದ ಕಾರುಣ್ಯನಿಧಿ ಅಥವಾ ಸರ್ಪವೇರಿದ ಶ್ರೀಗಂಧದ ಮರದಂತೆ, ಎರಡು ನಾಲಗೆಯ ಕ್ರೂರವಾದ ವಿಷಸರ್ಪದಿಂದ ಕೂಡಿದ ಸರ್ವಶ್ರೇಷ್ಠವಾದ ಶ್ರೀಗಂಧದ ವೃಕ್ಷವಂತೆ (ಭುಜಗಭೂಷಣ ಶ್ರೀಗಂಧದ ತರುವಿನಂತೆ), ಚಿತ್ರವಿಚಿತ್ರವಾದ ಅಖಂಡ ಪರಶುಧರನಾಗಿ ಕಂಗೊಳಿಸುತ್ತಿದ್ದನು ಆ ತಾಂಡವಮೂರ್ತಿ.

ಉಪವೀತಂ ಲಕ್ಷಣಂ = ಚಿಹ್ನಮ್ ಯಸ್ಯತಮ್ ಯಜ್ಞೋಪವೀತ (ಬ್ರಾಹ್ಮಣ)— ಪಿತುರಯಂ = ಪಿತ್ರ್ಯಃ—ಧನುಷೋರ್ಜಿತಂ = ಧನುರೂರ್ಜಿತಮ್—ಮಾತುರಯಂ = ಮಾತೃಕಃ—ಸ ಸೋಮ = ಶ್ಚಂದ್ರಯುಕ್ತೌ—ಘರ್ಮದೀಧಿತಿಃ = ಸೂರ್ಯ ಇವ — ಸದ್ವಿಜಿಹ್ವಃ = ಸಸರ್ಪ—ರೇಣುಕಾ ಪ್ರಸೇನಜಿತ್ ಮಹಾರಾಜನ ಕುವರಿ ॥

**65. ಯೇನ ರೋಷಪರುಷಾತ್ಮನಃ ಪಿತುಃ ।**
**ಶಾಸನೇ ಸ್ಥಿತಿಭಿದೋಽಪಿ ತಸ್ಥುಷಾ ॥**
**ವೇಪಮಾನ ಜನನೀ ಶಿರಶ್ಛಿದಾ ।**
**ಪ್ರಾಗಜೀಯತ ಘೃಣಾ ತತೋ ಮಹೀ** ॥ ೬೫ ॥

ಯಾರು ಕೋಪದಿಂದ ಮುಂಗಾಣದೆ (ಹಿಂದುಮುಂದು ಯೋಚಿಸದೆ) ಕಠಿಣನಾದ (ವಜ್ರಮನಸ್ಕನಾದ), ತಂದೆ ಜಮದಗ್ನಿಯ ವಚನಗಳನ್ನು ಪಾಲಿಸಿ, ನಡುನಡುಗುತ್ತಿರುವ ತನ್ನ ಹೆತ್ತಬ್ಬೆಯ ತಲೆಯನ್ನು ಕತ್ತರಿಸಿದನೋ (ಮಾತೃಹಂತುಃ) ಆ ಬಳಿಕ ಸುಪ್ರೀತ ನಾದ ಅದೇ ತಂದೆಯ ಕರುಣೆಗೆ ಪಾತ್ರನಾಗಿ ನಾನಾತರದ ವರಗಳನ್ನು ಪಡೆದು ತನ್ನ ತಾಯಿಯು ಪುನರ್ಜೀವಿಸುವಂತೆ ಮಾಡಿದನೋ, ತದನಂತರ ತನ್ನ ತಂದೆಯ ವರಬಲ ದಿಂದ ಸಮಸ್ತ ಪೃಥ್ವಿಯನ್ನು ತನ್ನ ಬಾಹುಬಲದಿಂದ ಗೆದ್ದು ಬ್ರಾಹ್ಮಣರಿಗೆ ದಾನ ವಿತ್ತನೋ, ಅಂತಹ ಅಪಾರಮಹಿಮನಾದ ಭಾರ್ಗವರಾಮನು ಆ ಸೇನೆಯ ಮುಂದೆ ಎರಡನೆಯ ರುದ್ರನಂತೆ ಅಟ್ಟಹಾಸದಿಂದ ಮೈದೋರ್ದನು. ಹೆತ್ತ ತಾಯಿಯನ್ನೇ ಕೊಂದವನು ಕ್ಷತ್ರಿಯರನ್ನು ಕೊಲ್ಲದಿರುವನೇ ? ಅವನು ಅಳಿಸುವವನಲ್ಲದೆ ಉಳಿಸುವ ವನಲ್ಲ.

ಅನ್ವಯ :—ಯೇನ ರೋಷಪರುಷಾತ್ಮನಃ ಸ್ಥಿತಿಭಿದಃ ಅಪಿ ಪಿತುಃ ಶಾಸನೇ ತಸ್ಥುಷಾ ವೇಪಮಾನಜನನೀ ಶಿರಶ್ಛಿದಾ ಪ್ರಾಗ್ ಘೃಣಾ ಅಜೀಯತ ತತೋ ಮಹೀ ॥

ಸ್ಥಿತಿಭಿದಃ = ಸ್ಥಿತಿಃ—ರೋಷ ಪರುಷ ಆತ್ಮಾ ಬುದ್ಧಿರ್ಯಸ್ಯ ಸಃ = ಪಿತುಃ ಶಾಸನೇ ತಸ್ಥುಷಾ—ರೋಷಪರುಷಾತ್ಮನಾಃ ॥

ಒಮ್ಮೆ ರೇಣುಕೆ, ಜಮದಗ್ನಿಯರ ಪತ್ನಿ, ಸ್ನಾನಕ್ಕೆಂದು ತೊರೆಯ ಬಳಿಗೆ ನಡೆದಳು, ಅಲ್ಲಿ ಮೃತ್ತಿಕಾವತಿಯ ರಾಜ ಚೈತ್ರರಥನೆಂಬವನು ತನ್ನ ರಾಣಿಯರೊಂದಿಗೆ ಅಂತಃಪುರ ಸ್ತ್ರೀಯರ ಜೊತೆಯಲ್ಲಿ ಜಲಕ್ರೀಡೆಯಾಡುತ್ತಿರುವುದನ್ನು ಕಂಡು ರಾಜಕುಮಾರಿಯಾದ ತನಗೆ ಅಂತಹ ಭಾಗ್ಯವಿಲ್ಲದಿರುವುದಕ್ಕೆ ಮರುಗಿದಳು. ತನ್ನ ಮಾನಸಿಕ ಆಂದೋಲನದಿಂದ ಅವಳು ಪತಿತಳಾದಳು. ಅವಳ ನಿತ್ಯದ ವ್ರತಭಂಗವಾಯಿತು. ಅವಳ ಪಾವಿತ್ರ್ಯತೆಯ ತೇಜವು ಮಸುಕಾದುದನ್ನು ಕಂಡ ಬ್ರಹ್ಮರ್ಷಿ ಜಮದಗ್ನಿ ಕೋಪದಿಂದ ಕಿಡಿಕಿಡಿ

ಯಿದ್ದರು. ಕೂಡಲೇ ತನ್ನ ಮಕ್ಕಳಲ್ಲಿ ಹಿರಿಯ ಮಗನಾದ ರುಮಣ್ವಂತನನ್ನು ಕರೆದು ಅಪವಿತ್ರಳಾದ ತಾಯಿಯ ಶಿರಶ್ಛೇದನ ಮಾಡುವಂತೆ ಆಜ್ಞಾಪಿಸಲು ಆತನು ಒಪ್ಪಲಿಲ್ಲ. ತಂದೆಯ ಮಾತನ್ನು ನಡೆಸಿಕೊಡದೆ ಸುಮ್ಮನಿದ್ದನು. ಆ ಬಳಿಕ ಆ ಋಷಿಯು ತನ್ನ ಮಕ್ಕಳಾದ ಸುಶೇಣ, ವಸು ಮತ್ತು ವಿಶ್ವಾವಸು ಎಂಬವರನ್ನು ಒಬ್ಬನಾದಮೇಲೆ ಒಬ್ಬನನ್ನು ಕರೆದು ಆಜ್ಞಾಪಿಸಿದರು. ಇದರಿಂದ ಸಿಟ್ಟಿಗೆದ್ದ ಮಹರ್ಷಿಗಳು ಅವರನ್ನು ಕಿಡಿಗೇಡಿಗಳಾಗುವಂತೆ, ಅಜ್ಞಾನಿಗಳಾಗುವಂತೆ ಶಪಿಸಿದರು. ಅವರು ತಮ್ಮ ಜ್ಞಾನರಾಶಿಯನ್ನು ಕಳೆದುಕೊಂಡು ಮೃಗಸಮಾನರಾದರು.

ಆ ಬಳಿಕ ಅಲ್ಲಿಗೆ ಬಂದ ನಾಲ್ಕನೆಯ ಪುತ್ರನಾದ ರಾಮನನ್ನು ಕರೆದು ತನಗೆ ಎದುರು ಮಾತಾಡದೆ. ಅಪವಿತ್ರಳಾದ ನಿನ್ನ ತಾಯಿಯ ತಲೆಯನ್ನು ತುಂಡರಿಸು ಎಂದು ಆಜ್ಞಾಪಿಸಿದರು. ರಾಮನು ಆ ಭೀಕರವಾದ ಆಜ್ಞೆಯನ್ನು ಪಾಲಿಸಿದನು. ತನ್ನ ಕೊಡಲಿಯಿಂದ ರಾಮನು ಶಿರಶ್ಛೇದ ಮಾಡಿದನು. ರೇಣುಕೆಯ ತಲೆಯು ಧರೆಗಿಳಿಯಿತು. ಮುನಿಯ ಕೋಪತಾಪಗಳೆಲ್ಲವೂ ತಣಿದು ಶಾಂತವಾಯಿತು. ಸುಪ್ರೀತರಾದ ಅವರು ಮಗನನ್ನು ಕರೆದು "ರಾಮಾ, ನಾನು ಸುಪ್ರೀತನಾಗಿದ್ದೇನೆ. ನೀನು ಬೇಕಾದ ವರಗಳನ್ನು ಬೇಡಬಹುದು" ಎಂದರು. ಕೊಡಲಿರಾಮನು ತಂದೆಯಿಂದ ಮೂರು ವರಗಳನ್ನು ಬೇಡಿ ಪಡೆದನು. "ತನ್ನ ತಾಯಿಯು ಜೀವಿಸುವಂತೆ, ಅವಳ ಅಪವಿತ್ರತೆಯು ನಾಶವಾಗುವಂತೆ, ಪಾಪರಾಶಿಯಿಂದ ಮುಕ್ತಳಾಗುವಂತೆ" ಬೇಡಿಕೊಂಡನು. ಎರಡನೆಯದಾಗಿ, "ಹುಚ್ಚರಾದ ತನ್ನ ಅಣ್ಣಂದಿರು ಪ್ರಾಜ್ಞರಾಗುವಂತೆ", ಕೊನೆಯದಾಗಿ "ತಾನು ಯುದ್ಧದಲ್ಲಿ ಅಜೇಯನಾಗುವಂತೆ" ವರಗಳನ್ನು ಬೇಡಿಕೊಂಡನು. ಮಹರ್ಷಿಗಳು ಅಂತೆಯೇ ಆಗಲೆಂದು ಹರಸಿ ಆಶೀರ್ವದಿಸಿದರು. ಆ ಬಳಿಕ ಅವರು ಕೋಪಕ್ಕೆ ತಿಲಾಂಜಲಿಯಿಟ್ಟು ಅಹಿಂಸಾವ್ರತವನ್ನು ಕೈಕೊಂಡರು.

ತಸ್ಯರೋಷಪರುಷಾತ್ಮನಃ—"ಆತ್ಮಾ, ಜೀವೋ, ಧೃತಿರ್ಬುದ್ಧಿಃ" ಇತ್ಯಮರಃ—ಸ್ಥಿತಿಭಿದೋಪಿ = ಮರ್ಯಾದಾಲಂಗಿನೋಽಪಿ—ಪಿತುಃ ಶಾಸನೇ ತಸ್ಥುಷಾ = ಸ್ಥಿತೇನ—ತತೋಽನಂತರಂ ಮಹ್ಯಜ್ಜೀಯಂತ—ಮಾತೃಹಂತುಃ ಕ್ಷತ್ರವಧಾತ್ಕಿಂತೋ ಜುಗುಪ್ಸೇತಿ ಭಾವಃ = ತಾಯಿಯನ್ನು ಕೊಂದವನು ಕ್ಷತ್ರಿಯರನ್ನು ಕೊಲ್ಲದಿರುವನೇ ?

**66. ಅಕ್ಷಬೀಜವಲಯೇನ ನಿರ್ಬಭೌ ।**
**ದಕ್ಷಿಣಶ್ರವಣಸಂಸ್ಥಿತೇನ ಯಃ ॥**
**ಕ್ಷತ್ರಿಯಾಂತಕರಣೈಕವಿಂಶತೇ ।**
**ವ್ಯಾಜಪೂರ್ವಗಣನಾಮಿವೋದ್ವಹನ್ ॥ ೬೬ ॥**

ಧೈರ್ಯಸಾಗರನಾದ ಆ ಮಹಾಧನುರ್ಧರನ ಬಲಕಿವಿಯಲ್ಲಿ ಇಪ್ಪತ್ತೊಂದು ರುದ್ರಾಕ್ಷಿ ಮಣಿಗಳ ಜಪಮಾಲೆಯೊಂದು ತೂಗುತ್ತಿತ್ತು. ಅದು ಮೂರು ಏಳು ಬಾರಿ ($3 \times 7=21$) ತಾನು ಬೃಹದ್ಭಾರತದ ಇಳಾಚಕ್ರವನ್ನು ಸುತ್ತಿ (ಪರ್ಯಟನೆಮಾಡಿ) ಅರಸುಕುಲವನ್ನು ಅರಸುತ್ತಹೋಗಿ ನಿರ್ವಂಶಮಾಡಿ ತನ್ನ ಪಿತೃದೇವತೆಗಳಿಗೆ ರಕ್ತತರ್ಪಣವನ್ನಿತ್ತುದನ್ನು ಎಂದೂ ಮರೆಯದಂತೆ ಸೂಚಿಸುವಂತೆ ಆ ಜಪಮಾಲೆ (ಅಕ್ಷಬೀಜಮಾಲೆ) ಎಸೆದಿತ್ತು.

ಅಂತಹ ಕ್ರೂರಕಾರ್ಯಧುರಂಧರನಾದ ಭಾರ್ಗವರಾಮನು ಕಾಣಿಸಿಕೊಂಡನು. ಅವನು ಎಲ್ಲರ ದೃಷ್ಟಿಯ ಕೇಂದ್ರಬಿಂದುವಾಗಿದ್ದನು.

ಪೂರ್ವೇತಿಹಾಸ (ಪೂರ್ವಚರಿತ್ರೆ) :—ಈ ಹಿಂದೆ ಹೇಹಯರಾಜನಾದ ಕಾರ್ತಿವೀರ್ಯನು, ದತ್ತಾತ್ರೇಯ ಸ್ವಾಮಿಯ ವರಬಲದಿಂದ ಸಾವಿರ ಕೈಗಳನ್ನು ಪಡೆದು ಜಗಜಟ್ಟಿಯಾಗಿದ್ದನು (ಬಲಾಢ್ಯನಾಗಿದ್ದನು). ಅವನು ವರವಾಗಿ ಪಡೆದ ಚಿನ್ನದ ರಥವು ಅವನು ಇಚ್ಛಿಸಿದಂತೆ ಹೋಗಬಲ್ಲ ದಿವ್ಯರಥದಲ್ಲಿ ಕುಳಿತು ಜಮದಗ್ನಿಯ ಆಶ್ರಮಕ್ಕೆ ಬಂದು ಆತಿಥ್ಯವನ್ನು ಪಡೆದು ತೃಪ್ತನಾದನು. ಆ ರಾಜನು ಆಶ್ರಮದಲ್ಲಿರುವ ಸರ್ವಶ್ರೇಷ್ಠವಾದ ಕಾಮಧೇನು ಹಸುವನ್ನು ಅದರ ಕರುವಿನೊಂದಿಗೆ ಬಲಾತ್ಕಾರವಾಗಿ ಕೊಂಡೊಯ್ದನು.

ವಿಷಯವನ್ನು ತಿಳಿದ ಭಾರ್ಗವರಾಮನು ಅರಸನಿದ್ದಲ್ಲಿಗೆ ಹೋಗಿ ದ್ವಂದ್ವಯುದ್ಧಕ್ಕೆ ನಿಂತು ಕಾರ್ತವೀರ್ಯನ ಸಹಸ್ರ ಬಾಹುಗಳನ್ನು ಕಡಿದಿಕ್ಕಿದನು, ಕಾರ್ತವೀರ್ಯನು ರಣರಂಗದಲ್ಲಿ ಮಡಿದು ಯಮಾಲಯವನ್ನು ಸೇರಿದನು. ಈ ವರ್ತಮಾನದಿಂದ ಕುಪಿತರಾದ ಹೇಹಯರಾಜನ ಪುತ್ರರು ಜಮದಗ್ನಿಯ ಆಶ್ರಮಕ್ಕೆ ಬಂದು ಜಮದಗ್ನಿಯ ಋಷಿಯನ್ನು ಹೊಡೆದು, ಬಡಿದು, ಜಡಿದು ಸಾಯಿಸಿದರು. ತಾನೂ ಯಾರ ಮೇಲೂ ಕೋಪಿಸಿಕೊಳ್ಳುವುದಿಲ್ಲವೆಂದು ಪ್ರತಿಜ್ಞೆಮಾಡಿದ್ದ ಆ ಮುನಿಮೌಳಿಯು ಪ್ರತಿಭಟಿಸದೆ ಹಾನಿಗೀಡಾದನು.

ಪರಶುರಾಮನು ಆಶ್ರಮಕ್ಕೆ ಬಂದುನೋಡಲು ಜೀವವಿಲ್ಲದ ತಂದೆಯ ಕಳೇಬರವನ್ನು ಕಂಡು ಕ್ರುದ್ಧನಾಗಿ ತನ್ನ ದಿವ್ಯಾಯುಧಗಳನ್ನು ತೆಗೆದುಕೊಂಡು ಬಂದು ಕಾರ್ತನ ಮಕ್ಕಳೊಡನೆ ಯುದ್ಧಕ್ಕೆ ನಿಂತು ಅವರ ಹುಟ್ಟನ್ನು ಅಡಗಿಸಿದನು. ಅವನ ಕೋಪವು ಅಷ್ಟಕ್ಕೆ ಆರಲಿಲ್ಲ. ಅವನು 21 ಸಲ ಭರತಖಂಡದಲ್ಲಿ ಸುತ್ತಾಡಿ ಕ್ಷತ್ರಿಯಸಮಾಜವನ್ನು ಬಗ್ಗುಬಡಿದು, ಅನಂತರ ಸಮಂತಕಪಂಚಕ ಎಂಬ ಕ್ಷೇತ್ರದಲ್ಲಿ ರಾಜವಂಶಜರ ರಕ್ತದಿಂದ (ತಿಥಿಮಾಡಿ) ಪಿತೃದೇವತೆಗಳಿಗೆ ರಕ್ತತರ್ಪಣವಿತ್ತು ತನ್ನ ವೀರಪ್ರತಿಜ್ಞೆಯನ್ನು (ವೀರಸಂಕಲ್ಪ) ನೆರವೇರಿಸಿಕೊಂಡನು.

ಯೋ ಭಾರ್ಗವೋ ದಕ್ಷಿಣಶ್ರವಣೇ ಸಂಸ್ಥಿತೇನ—ಅಕ್ಷಬೀಜವಲಯೇನ = ಅಕ್ಷಮಾಲಯಾ—ಕ್ಷತ್ರಿಯಾನ್ತಕರಣೇನಾಂ = ಕ್ಷತ್ರಿಯವಧಾನಾಮ್—ಏಕವಿಂಶತೇ = ಏಕವಿಂಶಿತಿ ಸಂಖ್ಯಾಯಾ—ವ್ಯಾಜ = ಅಕ್ಷಮಾಲರೂಪಃ—ಪೂರ್ವೋ=ಯಸ್ಯಾಸ್ತಾಂ ಗಣನಾಮುದ್ವಹನ್ನಿವ—ನಿರ್ಬಭೌ = ಶೋಭಿಸು — ವ್ಯಾಜಪೂರ್ವಗಣನಾಮ್ = ವ್ಯಾಜಃ ಪೂರ್ವಃ ಯಸ್ಯಾಃ ಏತಾದೃಷೀಂ ಗಣನಾಮ್ ॥

**67.** **ತಂ ಪಿತುರ್ವಧಭವೇನ ಮನ್ಯುನಾ ।**
**ರಾಜವಂಶನಿಧನಾಯ ದೀಕ್ಷಿತಮ್ ॥**
**ಬಾಲಸೂನುರವಲೋಕ್ಯ ಭಾರ್ಗವಂ ।**
**ಸ್ವಾಂ ದಶಾಂ ಚ ವಿಷಸಾದ ಪಾರ್ಥಿವಃ** ॥ ೬೭ ॥

ತನ್ನ ತಂದೆಯನ್ನು ಕೊಂದ ಒಬ್ಬ ಕ್ಷತ್ರಿಯನ ಅಕಾರ್ಯಕ್ಕೆ ಕೆರಳಿ ಕ್ರೋಧಮೂರ್ಛಿತನಾದ (ಸಿಟ್ಟಿನಿಂದ ಕೆಂಡವಾಗಿ ಕಣ್ಣು ಕಾಣಿಸದ) ಭಾರ್ಗವನು ತಾನು ಕ್ಷತ್ರಿಯ ರಾಜವಂಶವನ್ನೇ ಸರ್ವನಾಶ ಮಾಡುವುದಾಗಿ ಅಗ್ನಿಸಾಕ್ಷಿಯಾಗಿ ಪ್ರತಿಜ್ಞೆಮಾಡಿ ದೀಕ್ಷಾಬದ್ಧನಾಗಿದ್ದನು (ಕ್ಷತ್ರಿಯವಂಶವನು ತವಿಪ ದೀಕ್ಷೆಯುನಾಂತ). ಈ ವಿಷಯವನ್ನು ಈ ಮೊದಲೇ ತಿಳಿದಿದ್ದ ದಶರಥಸಾರ್ವಭೌಮನು ತನ್ನ ಎಳೆಮಕ್ಕಳ ರಕ್ಷಣೆ ಬಗ್ಗೆ ಚಿಂತಾಕ್ರಾಂತನಾದನು, ತನ್ನ ಚಿಣ್ಣರಿಗಾಗಿ, ವೃದ್ಧಾಪ್ಯದಲ್ಲಿ ಕಾಲಿಟ್ಟ ತನ್ನ ಬಗ್ಗೆ, ತನ್ನ ಅಸಹಾಯಕತೆಯನ್ನು ನೆನೆದು ಮರುಗಿದನು, ಮರುಗಿ ಸಣ್ಣಾದನು, ಒಳಗೊಳಗೇ ಬೆಂದುಹೋದನು. ತನ್ನ ಶೋಚನೀಯ ಸ್ಥಿತಿಯನ್ನು ನೆನೆದು. ತಾನು ಏನು ಮಾಡಬೇಕೆಂಬುದನ್ನು ಅರಿಯದೆ ಚಿಂತಾಕ್ರಾಂತನಾದನು (ತನ್ನಯ ದೆಸೆಯ ನೆನೆನೆನೆದು).

ಮನ್ಯುನಾ = ಕೋಪೇನ—ರಾಜವಂಶಾನಾಂ ನಿಧನಾಯ = ನಾಶಾರ್ಥಮ್ "ನಿಧನಂ ಸ್ಯಾತ್ಕುಲೇ ನಾಶೇ" ಇತಿ ವಿಶ್ವಃ—ದೀಕ್ಷಿತಮ್ = ಪ್ರವೃತ್ತವಿಂತ್ಯರ್ಥಃ—ಪಿತುರ್ವಧಭವೇನ ಮನ್ಯುನಾ = ಪಿತೃವಧೆಯ ಪರಿಣಾಮವಾಗಿ.

**68. ನಾಮ ರಾಮ ಇತಿ ತುಲ್ಯಮಾತ್ಮಜೇ ।**
**ವರ್ತಮಾನಮಹಿತೇ ಚ ದಾರುಣೇ ॥**
**ಹೃದ್ಯಮಸ್ಯ ಭಯದಾಯಿ ಚಾಭವತ್ ।**
**ರತ್ನಜಾತಮಿವ ಹಾರಸರ್ಪಯೋಃ ॥ ೬೮ ॥**

ತನ್ನ ಆತ್ಮಜನಾದ, ಅಕ್ಕರೆಯ ಪ್ರಿಯಪುತ್ರನು ರಾಮನಾಮದಿಂದ ಮೆರೆಯುತ್ತಿದ್ದನು. ಆ ನಾಮಧೇಯದಿಂದಲೇ ದಾರುಣನಾದ, ಅಹಿತನಾದ, ದಾರುಣಪ್ರವೃತ್ತಿಯ, ಪರಶುರಾಮನು ಕರೆಯಲ್ಪಡುತ್ತಿದ್ದನು (ದಾರುಣಾಹಿತನೊಳು). ಆ ಇಬ್ಬರ ನಾಮಧೇಯವೂ ಒಂದೇ. ಇಬ್ಬರೂ ಒಂದೇ ಹೆಸರಿನಿಂದ ಮೆರೆಯುತ್ತಿದ್ದರು. ಇದರಿಂದಾಗಿ ದಶರಥನ ಹೃದಯದಲ್ಲಿ ಒಂದೆಡೆ ಪ್ರೇಮವು ಉಕ್ಕಿ ಹರಿಯುತ್ತಿದ್ದರೆ, ಅಲ್ಲಿಯೇ ಭಯದ ಚಿಲುಮೆಯೂ (ಕಾರಂಜಿಯೂ) ಚಿಮ್ಮುತ್ತಲಿತ್ತು.

ಕಂಠಾಭರಣದಲ್ಲಿ (ಕುತ್ತಿಗೆಯ ಹಾರದಲ್ಲಿ) ಒಪ್ಪುವ ರತ್ನವು ಸಂತೋಷವನ್ನು ಕೊಡುವುದಾದರೆ, ಕ್ರೂರನಾದ ನಾಗೇಂದ್ರನ ಹೆಡೆಯಮೇಲಿರುವ ರಾರಾಜಿಸುವ ಶ್ರೇಷ್ಠವಾದ ರತ್ನವು (ಫಣಾಮಣಿಯು) ಭಯವನ್ನು ಹುಟ್ಟಿಸುವಂತೆ ದಶರಥನು ದ್ವಂದ್ವಭಾವನೆಯಿಂದ ತೊಳಲುವಂತಾಯಿತು (ಹಾವೊಳು ಹಾರದೊಳವಿರುವ ಬೆಲೆಮಣಿಯಂತೆ). ಆ ದಾರುಣಪುರುಷನನ್ನು ಹೇಗೆ ಸಮಜಾಯಿಸುವುದೆಂದು ತಿಳಿಯದೆ ಚಡಪಡಿಸುತ್ತಿದ್ದನು. ಧರ್ಮಸಂಕಟಕ್ಕೆ ಒಳಗಾಗಿ ಮರುಗುತ್ತಿದ್ದನು.

ಆತ್ಮಜೇ = ಪುತ್ರೇ—ದಾರುಣೇ = ಘೋರೇ—ತುಲ್ಯಮ್=ಅವಿಶೇಷೇಣ—ಹಾರಸರ್ಪಯೋರ್ವರ್ತಮಾನಂ ರತ್ನಜಾತಂ ರತ್ನಜಾತೀರಿವ—ಹೃದ್ಯಂ = ಹೃದಯಂಗಮಂ—ಭಯದಾಯಿ = ಭಯಂಕರಮ್—ಹೃದಯಸ್ಯ ಪ್ರಿಯಃ = ಹೃದಯ + ಯ(ತ್) ಹೃದಯಶಬ್ದಾತ್ ಷಷ್ಠೀ ಸಮರ್ಥಾತ್ ಪ್ರಿಯ ಇತ್ಯೇತಸ್ಮಿನ್ನರ್ಥೇ ಪ್ರತ್ಯಯ ಯೋ ಭವತಿ ॥

**69.** **ಅರ್ಘ್ಯಮರ್ಘ್ಯಮಿತಿ ವಾದಿನಂ ನೃಪಂ ।**
**ಸೋಽನವೇಕ್ಷ್ಯ ಭರತಾಗ್ರಜೋ ಯತಃ ॥**
**ಕ್ಷತ್ರಕೋಪದಹನಾರ್ಚಿಷಂ ತತಃ ।**
**ಸಂದಧೇ ದೃಶಮುದಗ್ರತಾರಕಾಮ್** ॥ ೬೯ ॥

"ಅತಿಥಿಗಳಾದ ಭಾರ್ಗವರಿಗೆ ಅರ್ಘ್ಯಪಾದ್ಯವನ್ನು ತನ್ನಿರಿ. ಅರ್ಘ್ಯವೆಲ್ಲಿ, ಮಧುಪರ್ಕವೆಲ್ಲಿ? ಬೇಗನೇ ತನ್ನಿರಿ" ಎಂದು ದಶರಥನೃಪಾಲನು ಕೂಗುತ್ತಲಿದ್ದರೂ ಅದನ್ನು ಲಕ್ಷಿಸದ (ಕಡೆಗಣಿಸಿ) ಕೊಡಲಿರಾಮನು ರೋಷಾಗ್ನಿಯಿಂದ ತಪ್ತನಾಗಿ, ಕ್ಷತ್ರಿಯ ಜಾತಿಯನ್ನೇ ರೋಷಾಗ್ನಿಯಿಂದ ಸುಡುವಂತೆ, ರೋಷಭೀಷಣನಾಗಿ ಕೆಂಪಡರಿದ ಕಡೆಗಣ್ಣ ನೋಟವನ್ನು ಭರತಾಗ್ರಜನ ಮೇಲೆ ಬೀರಿದನು. ಅವನ ದೃಷ್ಟಿಯು ಮಹಾಪೂರವು, ಜ್ವಾಲಾಮುಖಿಯಂತೆ ಶ್ರೀರಾಮನು ನಿಂತ ಭೂಭಾಗವನ್ನು ಆಕ್ರಮಿಸುವಂತೆ ಕಂಡಿತು. ಅವನ ಕಣ್ಣುಗಳ ಕನೀನಿಕೆಯು (ಕಣ್ಣುಗೊಂಬೆ) ಉರಿಯುವ ನಕ್ಷತ್ರದಂತೆ (ತಾರಗೆಯಂತೆ) ಕೆಂಪಾದ ಕೆಂಡದಂತೆ ಪ್ರಜ್ವಲಿಸುತ್ತಿತ್ತು.

ಕೋಪದಹನೋ = ರೋಷಾಗ್ನಿಸ್ತಸ್ಯ—ಅರ್ಚಿಷಂ = ಜ್ವಾಲಾಮಿವ ಸ್ಥಿತಾಮ್— "ಜ್ವಾಲಾಭಾಸೋರ್ನ ಪುಂಸ್ಯರ್ಚಿಃ" ಇತ್ಯಮರಃ—ಉದಗ್ರತಾರಕಾ = ಕನೀನಿಕಾ ಯಸ್ಯಾ ಸ್ತಾಮ್—"ತಾರಕಾಕ್ಷ್ಣಃ ಕನೀನಿಕಾ" ಇತ್ಯಮರಃ—ದೃಶಸಂದಧೇ ॥

**70.** **ತೇನ ಕಾರ್ಮುಕನಿಷಕ್ತಮುಷ್ಟಿನಾ ।**
**ರಾಘವೋ ವಿಗತಭೀಃ ಪುರೋಗತಃ ॥**
**ಅಂಗುಲೀವಿವರಚಾರಿಣಂ ಶರಂ ।**
**ಕುರ್ವತಾ ನಿಜಗದೇ ಯುಯುತ್ಸುನಾ** ॥ ೭೦ ॥

ಭಾರ್ಗವನು ತನ್ನ ವಜ್ರಮುಷ್ಟಿಯಲ್ಲಿ ಕಾರ್ಮುಕವೊಂದನ್ನು ಗಟ್ಟಿಯಾಗಿ ಹಿಡಿದು, ಇನ್ನೊಂದು ಕೈಯಲ್ಲಿ ಬೆರಳುಗಳ ಸಂದಿಯಲ್ಲಿ ಕೂರ್ಗಣೆ(ಶರ, ಬಾಣ)ಯೊಂದನ್ನು ಹಿಡಿದು ಯುದ್ಧಾತುರನಾಗಿ ಕೊಳುಗುಳಕ್ಕೆ ಕಾಲ್ಕೆರೆದು ಶ್ರೀರಾಮನನ್ನು ಕರೆಯುವಂತೆ ಉತ್ಸಾಹಿತನಾಗಿ ಆಹ್ವಾನಿಸಿದನು. ಆ ಭಯಂಕರ ಮೂರ್ತಿಯನ್ನು ಕಂಡು ಶ್ರೀರಾಮನು ಒಂದಿಷ್ಟು ಅಳುಕದೆ, ಭಯರಹಿತನಾಗಿ, ಧೈರ್ಯಮೇರುವಿನಂತೆ ನಿಂದಿರ್ದನು.

ಕಾರ್ಮುಕನಿಷಕ್ತಮುಷ್ಟಿನಾ ಶರಮಂಗುಲೀವಿವರಚಾರಿಣಂ ಕುರ್ವತಾ—ಯೋದ್ಧುಮಿಚ್ಛತಾ = ಯುಯುತ್ಸುನಾ—ವಿಗತಭೀಃ = ನಿರ್ಭೀಕಃ—ಪುರೋಗತಃ=ಉಗ್ರಗತೋ ॥

**71.** **ಕ್ಷತ್ರಜಾತಮಪಕಾರವೈರಿ ಮೇ ।**
**ತನ್ನಿಹತ್ಯ ಬಹುಶಃ ಶಮಂ ಗತಃ ॥**
**ಸುಪ್ತ ಸರ್ಪ ಇವ ದಂಡಘಟ್ಟನಾತ್ ।**
**ರೋಷಿತೋಽಸ್ಮಿ ತವ ವಿಕ್ರಮಶ್ರವಾತ್** ॥ ೭೧ ॥

ಪಿತೃವಧೆಯ ರೂಪದಿಂದ ಉಂಟಾದ ದ್ವೇಷವು ಇಡೀ ಕ್ಷತ್ರಿಯ ಜನಾಂಗವನ್ನೇ ಹೇಸುವಂತೆ ಮಾಡಿತ್ತು, ಅಪಕಾರವಮಾಡಿದ ನೃಪಸಮೂಹವನ್ನು 21 ಬಾರಿ ದೇಶವನ್ನು

ಸುತ್ತಿ ಹತ್ಯಾಕಾಂಡವನ್ನೆಸಗಿ ಶಾಂತನಾದೆನು. ಇದೀಗ ಮಲಗಿ ನಿದ್ರಿಸುತ್ತಿರುವ ಹಾವನ್ನು (ಕಾಳೋರಗನನ್ನು) ಬಡಿಗೆಯಿಂದ ಬಡಿದು ಎಚ್ಚರಿಸಿರುವೆ. ನಿನ್ನ ಅತಿಸಾಹಸದ, ಕರ್ಣ ಕಠೋರದ ವಾರ್ತೆಯನ್ನು ಕೇಳಿ ಕಡುಮುಳಿದು ದುಸ್ಸಾಹಸವೆಸಗಿರುವ ನಿನ್ನನ್ನು ಶಿಕ್ಷಿಸಲು ನೀ ಗೈದ ಹಗರಣಕೆ ನಿನ್ನ ಸೊಕ್ಕನ್ನು ಮುರಿಯಲು ಇದೋ ಶಸ್ತ್ರಧಾರಿಯಾಗಿ ನಾನೇ ಮುಂದೆ ಬಂದಿರುವೆನು.

ಕ್ಷತ್ರಜಾತಂ=ಕ್ಷತ್ರಜಾತಿಮ್—ಅಪಕಾರೇಣ=ಪಿತೃವಧರೂಪೇಣ—ವೈರಿ=ದ್ವೇಷಿ—ಶಮಂ ಗತೋಽಸ್ಮಿ—ಶ್ರವಾದಾ=ಆಕರ್ಣನಾತ್ ರೋಷಿತೋ ರೋಷಂ ಪ್ರಾಪಿತೋಽಸ್ಮಿ—ಶಮಂಗತಃ = ಶಾಂತಿಹೊಂದು.

72. ಮೈಥಿಲಸ್ಯ ಧನುರನ್ಯಪಾರ್ಥಿವೈಃ ।
ತ್ವಂ ಕಿಲಾನಮಿತಪೂರ್ವಮಕ್ಷಣೋಃ ॥
ತನ್ನಿಶಮ್ಯ ಭವತಾ ಸಮರ್ಥಯೇ ।
ವೀರಶೃಂಗಮಿವ ಭಗ್ನಮಾತ್ಮನಃ ॥ ೭೨ ॥

"ನೀನು ಮಿಥಿಲಾನಗರದಲ್ಲಿ ನನ್ನ ಚಾಪವಿದ್ಯಾಗುರುವಿನ ಚಾಪವನ್ನು ಮುರಿದು ಭಂಗಿಸಿರುವುದಾಗಿ ಕೇಳಿರುವೆನು. ಆ ರುದ್ರಧನುಸ್ಸನ್ನು ಯಾವ ರಾಜನೂ ಈತನಕ ಬಗ್ಗಿಸಿದುದೇ ಇಲ್ಲ. ಆ ಧನುರ್ಭಂಗವನ್ನು ನೀನು ಎಸಗಿದೆಯಾದುದರಿಂದ ನನ್ನ ವೀರ್ಯ, ಶೌರ್ಯ, ಹಿರಿಮೆಯ ಕೋಡನ್ನು ಮುರಿದು ಕೆಡಹಿರುವೆ ಎಂದು ನಾನು ಭಾವಿಸಿರುವೆನು. ಧನುರ್ಭಂಗ ಮಾಡಿದುದರಿಂದ ನೀನು ನನ್ನನ್ನು ಅವಮಾನ ಮಾಡಿದಂತೆಯೆ. ಜಾನುವಾರುಗಳು ತಮ್ಮ ಕೋಡನ್ನು ಕಳೆದುಕೊಂಡೊಡನೆ ಬಡವಾಗುವಂತೆ, ನೀನು ನನ್ನ ಪೌರುಷಾಭಿಮಾನವನ್ನು ಖಂಡಿಸಿರುವೆ. ನನಗೆ ಸವಾಲೊಡ್ಡಿ ನನ್ನ ಪ್ರತಿಷ್ಠೆಗೆ ಕಳಂಕವನ್ನೊಡ್ಡಿರುವೆ (ತಿಲಾಂಜಲಿಯನ್ನಿಕ್ಕಿರುವೆ). ನನ್ನ ಆತ್ಮಾಭಿಮಾನವನ್ನು ನೀನು ಕೆಣಕಿದುದರಿಂದ ನಾನು ಎಂದಿಗೂ ಸಹಿಸೆನು ನಿನ್ನನ್ನು ಕ್ಷಮಿಸೆನು."

ಅನಮಿತಪೂರ್ವಂ=ಪೂರ್ವಮನಮಿತಮ್—ಅಸ್ಯ ಮೈಥಿಲಸ್ಯ ಧನುಸ್ತ್ವಮಕ್ಷಣೋಃ ಕ್ಷತವಾನ್—"ಕಿಲ" ಇತಿ ವಾರ್ತಾಯಾಮ್—"ವಾರ್ತಾಸಂಭಾವ್ಯಯೋಃ ಕಿಲ" ಇತ್ಯಮರಃ ॥

73. ಅನ್ಯದಾ ಜಗತಿ ರಾಮ ಇತ್ಯಯಂ ।
ಶಬ್ದ ಉಚ್ಚರಿತ ಏವ ಮಾಮಗಾತ್ ॥
ವ್ರೀಡಮಾವಹತಿ ಮೇ ಸ ಸಂಪ್ರತಿ ।
ವ್ಯಸ್ತವೃತ್ತಿರುದಯೋನ್ಮುಖೇ ತ್ವಯಿ ॥ ೭೩ ॥

"ಹೇ ರಾಜಪುತ್ರ, ರಾಮನೆಂಬ ಹೆಸರು ಈತನಕ ಲೋಕದಲ್ಲಿ ನನಗೊಬ್ಬನಿಗೇ ಸಲ್ಲುತ್ತಿತ್ತು. ಈಗ ಅದೇ ಹೆಸರಿನಿಂದ ಕರೆಯಲ್ಪಡುವ ನೀನು ನನ್ನ ಸಮಿಪಾಪದ ಪ್ರತಿದ್ವಂದ್ವಿಯಾಗಿರುವೆ. ನೀನು ಅದೇ ಹೆಸರಿನಿಂದ ಮೆರೆಯುತ್ತ ಉಚ್ಛ್ರಾಯಸ್ಥಿತಿಯಲ್ಲಿರುವುದರಿಂದ ನನ್ನನ್ನು ನೀನು ನಾಚಿಸುತ್ತಿರುವಂತೆ ತೋರುವುದು. ಆದ್ದರಿಂದ ನಮ್ಮಿಬ್ಬ

ರೊಳಗಿನ ಶಕ್ತಿಪರೀಕ್ಷೆ (ಸತ್ವಪರೀಕ್ಷೆ) ಪೈಪೋಟಿ ಅನಿವಾರ್ಯ. ನೀನು ನನ್ನ ಪ್ರತಿದ್ವಂದ್ವಿ (ಪ್ರತಿಸ್ಪರ್ಧಿ, ಎದುರಾಳಿ) ಎಂದು ನಾನು ಭಾವಿಸಿರುವೆನು."

ವ್ಯಸ್ತವೃತ್ತಿ = ವಿಪರೀತವೃತ್ತಿಃ—ವ್ರೀಡಮಾವಹತಿ = ಲಜ್ಜಾಂ ಕರೋತಿ ॥

**74.** **ಬಿಭ್ರತೋಽಸ್ತ್ರಮಚಲೇಽಪ್ಯಕುಂಠಿತಂ ।**
**ದ್ವೌ ರಿಪೂ ಮಮ ಮತೌ ಸಮಾಗಸೌ ॥**
**ಧೇನುವತ್ಸಹರಣಾಚ್ಚ ಹೈಹಯಃ ।**
**ತ್ವಂ ಚ ಕೀರ್ತಿಮಪಹರ್ತುಮುದ್ಯತಃ** ॥ ೭೪ ॥

ನಾನು ಕೈಯಲ್ಲಿ ಧರಿಸಿರುವ ಈ ಕ್ಷಿಪಣಿಯು ಪರ್ವತಗಳಲ್ಲಿ ಶ್ರೇಷ್ಠವಾದ ಕ್ರೌಂಚ ಪರ್ವತವನ್ನು ಒಳಹೊಕ್ಕು ಇಬ್ಭಾಗವಾಗಿ ಭೇದಿಸಬಲ್ಲುದು. ನನಗೀಗ ಪೃಥ್ವಿಯಲ್ಲಿ ಇಬ್ಬರು ಶತ್ರುಗಳು ಕಣ್ಣಿಗೆ ಗೋಚರಿಸುತ್ತಿರುವರು. ಒಬ್ಬನು ಆ ಮಾಹಿಷ್ಮತಿಯ ರಾಜನಾದ ಕಾರ್ತವೀರ್ಯನು. ಅಹಿಂಸಾವ್ರತವನ್ನು ಪಾಲಿಸುತ್ತಿದ್ದ ನನ್ನ ತಂದೆಯ ಪವಿತ್ರ ಹಸುವಾದ ಕಾಮಧೇನುವಿನ ಕರುವನ್ನು (ತುರುಕರುವನ್ನು) ಬಲಾತ್ಕಾರದಿಂದ, ಬೇಡ ಬೇಡವೆಂದರೂ ಹೇಳದೆ ಕೇಳದೆ ಒಯ್ದವನು. ಇನ್ನೊಬ್ಬನು ಗುರುವಿನ ಧನುರ್ಭಂಗಗೊಳಿಸಿದ ನೀನೇ ಆಗಿರುವೆ. ನನ್ನ ಕೀರ್ತಿಯನ್ನು (ಕೀರ್ತಿಯೆಂಬ ತೇಜಸ್ಸನ್ನು ಪೆರ್ಮೆಯನ್ನು ಜಸವನ್ನು, ಯಶಸನ್ನು) ಅಪಹರಿಸಲುಯತ್ನಿಸುತ್ತಿರುವ ನೀನೋರ್ವನು. ನೀವೀರ್ವರೂ ಸಮಾಪರಾಧಿಗಳು. ಶಿಕ್ಷಿಸಲೇಬೇಕಾದವರು (ಶಿಕ್ಷಾರ್ಹರು).

ಪಿತೃಹೋಮಧೇನೋರ್ವತ್ಸಸ್ಯ ಹರಣಾದ್ಧೇತೋರ್ಹೈಹಯಃ ಕಾರ್ತವೀರ್ಯಶ್ಚ— ಕೀರ್ತಿಮಪಹರ್ತುಮುದ್ಯತ = ಉದ್ಯುಕ್ತಸ್ತ್ವಂ ಚ ॥

**75.** **ಕ್ಷತ್ರಿಯಾಂತಕರಣೋಽಪಿ ವಿಕ್ರಮಃ ।**
**ತೇನ ಮಾಮವತಿ ನಾಜಿತೇ ತ್ವಯಿ ॥**
**ಪಾವಕಸ್ಯ ಮಹಿಮಾ ಸಗಣ್ಯತೇ ।**
**ಕಕ್ಷವಜ್ಜ್ವಲತಿ ಸಾಗರೇಽಪಿ ಯಃ** ॥ ೭೫ ॥

ನನ್ನ ಪ್ರತಿದ್ವಂದ್ವಿಯಾದ, ಕ್ಷತ್ರಿಯನಾದ ನಿನ್ನನ್ನು ಗೆಲ್ಲದೆ ನಾನು ಶಾಂತನಾಗೆನು. ಕ್ಷತ್ರಿಯನು ವಿಕ್ರಮದ ಪ್ರತೀಕವಾಗಿರುವೆನು. ನಿನ್ನನ್ನು ನನ್ನ ವಿಕ್ರಮಾಗ್ನಿಯಿಂದ ಸುಟ್ಟು ಬೂದಿಮಾಡದೆ ನಾನು ತಣಿಯೆನು. ಹೇಗೆ ಪಾವಕನು (ಅಗ್ನಿಯು) ಸಮುದ್ರಕಿನಾರೆಯಲ್ಲಿ ಬೆಳೆದಿರುವ ಜೊಂಡುಹುಲ್ಲಿನ ಮೆಂದೆಯನ್ನು ದಹಿಸಿ ತೃಪ್ತಿಹೊಂದದೋ, ಅದು ವಡಬಾನಲನ ರೂಪವನ್ನು ಧರಿಸಿ ಸಾಗರದ ನೀರನ್ನು ಜ್ವಾಲಾಮುಖಿಯ ರೂಪದಲ್ಲಿ ಕುದಿಸಿ ಅಪಾರಜಲರಾಶಿಯನ್ನು ಬತ್ತಿಸಿ, ತನ್ನ ವಿಶೇಷ ಮಹಿಮೆಯನ್ನು ಜಗತ್ತಿಗೆ ತೋರಿಕೊಳ್ಳುವುದೋ (ಪ್ರಕಟಿಸುವುದೋ) ಅದೇ ರೀತಿಯಲ್ಲಿ ನನ್ನ ಶಕ್ತಿಸಾಮರ್ಥ್ಯವನ್ನು ನಿನ್ನಲ್ಲಿ ತೋರಿ ಸಾಫಲ್ಯಹೊಂದುವೆನು. ನಿನ್ನನ್ನು ಗೆಲ್ಲದೆ ನಾನು ಮುದಗೊಳ್ಳೆನು (ಮೋದಗೊಳ್ಳೆನು).

ತೇನ ಕಾರಣೇನ ಕ್ರಿಯಂತೇ ಏನ ಸೌ ಕರಣಃ—ಕ್ಷತ್ರಿಯಾಸ್ತಸ್ಯ ಕರಣೋಽಪಿ ವಿಕ್ರಮಃ —ಕಕ್ಷವತ್ = ಕಕ್ಷ ಇವ—ತತ್ರ ತಸ್ಯೇವ (ಪಾಣಿನಿ) ಇತಿ ಸಪ್ತಮ್ಯರ್ಥೇವತಿಃ ॥

**76. ವಿದ್ಧಿ ಚಾತ್ತಬಲಮೋಜಸಾ ಹರೇಃ ।**
**ಐಶ್ವರಂ ಧನುರಭಾಜಿ ಯತ್ತ್ವಯಾ ॥**
**ಖಾತಮೂಲಮನಿಲೋ ನದೀರಯೈಃ ।**
**ಪಾತಯತ್ಯಪಿ ಮೃದುಸ್ತಟದ್ರುಮಮ್ ॥ ೭೬ ॥**

ಆ ಲೋಕಪೂಜ್ಯವಾದ, ಭೀಮಾಕೃತಿಯ ಮಹಾಧನಸ್ಸಿನ ಶಕ್ತಿಯನ್ನು ಶ್ರೀಹರಿಯು (ಮಹಾವಿಷ್ಣುವು) ಸೆಳೆದುಕೊಂಡಿರುವನು (ಹರಿಯಿಂದ ಹೃತಸಾರವಾಗಿರ್ಪುದೆಂದು). ಆದರಿಂದ ಶಕ್ತಿಸಾರರಹಿತವಾದ ರುದ್ರಧನುಸನ್ನು (ಬಿಲ್ಲನ್ನು) ನೀನು ಮುರಿದಿರುವೆ. ಹೇಗೆ ವೇಗವಾಗಿ ಹರಿಯುವ ನದಿಯ ಕೊರೆತದಿಂದ ಬುಡಕೊರೆದ ಮಹಾವೃಕ್ಷವು ಬಿರುಸಿಲ್ಲದ (ಬಿರುಸಿಲ್ಲದೆಲರು) ಸಾಧಾರಣ ಗಾಳಿಯು ಬೀಸಿದೊಡನೆ ದಢಾರನೆ ಧರೆಗೆ ಉರುಳಿ ಬೀಳುವಂತೆ, ನಿನ್ನ ಕೈಯಿಂದ ಧನುಸ್ಸು ಮುರಿಯಿತು. ಈ ವಿಷಯವನ್ನು ನೀನು ಮೊದಲು ಜಾಗ್ರತೆಯಾಗಿ ಅರಿವುದು ಲೇಸು.

ಅನ್ವಯ :—(ಕಿಂ) ಚ ಐಶ್ವರಂ ಧನುಃ ಹರೇಃ ಓಜಸಾ ಆತ್ತಬಲಂ ವಿದ್ಧಿ ಯತ್ ತ್ವಯಾ ಅಭಾಜಿ ನದೀರಯೈಃ. ಖಾತಮೂಲಂ ತಟದ್ರುಮಂ ಮೃದುರಪ್ಯನಿಲಃ ಪಾತಯತಿ ॥

ಖಾತಮೂಲಮ್ = ಅವದಾರಿತಪಾದಂ—ತಟದ್ರುಮಮ್ ಮೃದುರಪ್ಯನಿಲಃ ಪಾತಯತಿ ॥

**77. ತನ್ಮದೀಯಮಿದಮಾಯುಧಂ ಜ್ಯಯಾ ।**
**ಸಂಗಮಯ್ಯ ಸಶರಂ ವಿಕೃಷ್ಯತಾಮ್ ॥**
**ತಿಷ್ಠತು ಪ್ರಧನಮೇವಮಪ್ಯಹಂ ।**
**ತುಲ್ಯಬಾಹುತರಸಾ ಜಿತಸ್ತ್ವಯಾ ॥ ೭೭ ॥**

ಇಗೋ ನನ್ನ ಕೈಯಲ್ಲಿರುವ ವೈಷ್ಣವಕಾರ್ಮುಕವನ್ನು ನೋಡು. ಈ ನನ್ನ ಚಾಪವನ್ನು ಕಿಶೋರನಾದ ನೀನು ತಿರುವಿಟ್ಟು, ಕಣೆದೊಟ್ಟು ಸೆಳೆದು ನೋಡು. ಇಷ್ಟನ್ನು ಮಾಡಿದರೆ ಸಾಕು (ತಿರುವಿಟ್ಟು, ಕಣೆದೊಟ್ಟು, ಸೆಳೆನೋಳ್ಪೆ ನಾನು). ನೀನು ನನ್ನೊಡನೆ ಉಗ್ರವಾದ ಸಂಗ್ರಾಮದಲ್ಲಿ ಸಮಬಲನಾಗಿ ಸೆಣಸಾಡಿದಂತೆಯೆಂದು ನಾನು ತಿಳಿದುಕೊಳ್ಳುವೆನು. ಈ ಧನುರ್ಭಂಗವನ್ನು ಮಾಡಿದೆಯಾದರೆ, ನೀನು ಹೆದೆಯೇರಿಸಿ ಶರವೊಂದನ್ನು ಹೂಡಿದೆಯಾದರೆ ನಾನು ನಿನ್ನ ತೋಳ್ಬಲದೆ ಸೋಲನೊಪ್ಪಿಕೊಳ್ಳುವೆ. ನೀನು ಆ ಮಹಾಕಾರ್ಯವನ್ನು ಎಸಗಿದೆಯಾದರೆ ಮಾರುಮಾತಿಲ್ಲದೆ ಇಲ್ಲಿಂದ ಈ ಕೂಡಲೇ ನಿರ್ಗಮಿಸುವೆನು (ಸಾಕು ರಣಮಂತಿರಲಿ ಇದನೆಸಗಿದೊಡೆ ಸಾಕು).

ಮದೀಯಮಿದಮಾಯುಧಂ=ಕಾರ್ಮುಕಂ—ಜ್ಯಯಾಸಂಗಮಯ್ಯ=ಸಂಯೋಜ್ಯ— "ಪ್ರಧನಂ ಮಾರಣೇ ರಣೇ" ಇತಿ ವಿಶ್ವಃ—ತುಲ್ಯಬಾಹುತರಸಾ=ಸಮಬಾಹುಬಲೇನ—

"ಶರಸೀ ಒಲರಂಹಸೀ" ಇತ್ಯಮರಃ—ತ್ವಯಾ ಜಿತಃ=ನಿನ್ನಿಂದ ಸೋಲಿಸಲ್ಪಟ್ಟವನೆಂದು—
ಮದೀಯಾಯುಧಮ್ = ವಿಷ್ಣುಕಾರ್ಮುಕ ॥

**78.** **ಕಾತರೋಽಸಿ ಯದಿ ವೋದ್ಗತಾರ್ಚಿಷಾ ।**
**ತರ್ಜಿತಃ ಪರಶುಧಾರಯಾ ಮಮ ॥**
**ಜ್ಯಾನಿಘಾತಕಠಿನಾಂಗುಲಿರ್ವೃಥಾ ।**
**ಬಧ್ಯತಾಮಭಯಯಾಚನಾಂಜಲಿಃ** ॥ ೭೮ ॥

"ಹೇ ದಾಶರಥಿ, ನೀನು ಅಷ್ಟನ್ನೂ ಮಾಡಲಾಗದಿದ್ದರೆ, ರ್ಭುಗರ್ಭುಗಿಸುತ್ತಾ ಕಿಡಿಯನ್ನುಗುಳುವ ಈ ಪರಶುಧಾರೆಗೆ ಅಳುಕುವುದಾದರೆ, ಇನ್ನುಳಿದುದು ಒಂದೇ ಒಂದು ಮಾರ್ಗ (ಈ ಪರಶುಧಾರೆಗಿಂದು ಅಳುಕುವರೆ ನೀನು). ನೀನು ಬಿಲ್ಲಿನ ಸಿಂಜಿನಿಯನ್ನೆಳೆದು ದಡ್ಡುಗಟ್ಟಿ ಒರಟಾದ ನನ್ನ ಕೈಬೆರಳುಗಳನ್ನು ಬೊಗಸೆಯಾಕಾರದಲ್ಲಿ ನಿನ್ನ ಕಿರು ಕೈಗಳಿಂದ ಹಿಡಿದು ಅಂಜಲಿಬದ್ಧನಾಗಿ ನನ್ನಲ್ಲಿ ಪ್ರಾಣಭಿಕ್ಷೆಯನ್ನು ಬೇಡು (ಪ್ರಾರ್ಥಿಸು) (ಶರಣಾಗತನಾಗು). ದುರ್ಬಲನಾದ, ಅವಿವೇಕಿಯಾದ ನಿನ್ನನ್ನು ನಾನು ಕಾಪಾಡುವೆನು.

ಕಾತರೋಽಸಿ = ಭೀತೋಽಸಿ—ಭಯಯಾಚನಾಂಜಲಿ=ಅಭಯಪ್ರಾರ್ಥನಾಂಜಲಿ—"ತೌ ಯುತಾವಂಜಲಿಃ ಪುಮಾನ್" ಇತ್ಯಮರಃ ॥

**79.** **ಏವಮುಕ್ತವತಿ ಭೀಮದರ್ಶನೇ ।**
**ಭಾರ್ಗವೇ ಸ್ಮಿತಕಂಪಿತಾಧರಃ ॥**
**ತದ್ಧನುರ್ಗ್ರಹಣಮೇವ ರಾಘವಃ ।**
**ಪ್ರತ್ಯಪದ್ಯತ ಸಮರ್ಥಮುತ್ತರಮ್** ॥ ೭೯ ॥

ಆ ರಾಕ್ಷಸಾಕಾರದ, ಭೀಮರೂಪಿಯಾದ ಕೊಡಲಿರಾಮನು (ಪರಶುರಾಮನು) ಈ ತೆರನಾಗಿ ನುಡಿದ ಮಾತುಗಳನ್ನು ದಶರಥಾತ್ಮಜನು ಕೇಳಿ (ನುಡಿಯಲಿಂತು ಅತಿ ಭೀಮದರ್ಶನನು ಭಾರ್ಗವನು) ಮುಖದಲ್ಲಿ ನಸುನಗೆಯೊಂದು ಮಿನುಗಿತು (ಸ್ಮಿತಕಂಪಿತಾ ಧರನು ದಶರಥಾತ್ಮಜನು). ಕೆಳತುಟಿಯು ಅದುರಿತು. ಗಂಭೀರಮುದ್ರೆಯು ಮಾಯವಾಗಿ ಶ್ರೀರಾಮನ ಶ್ರೀ ಮುಖದಲ್ಲಿ ನಸುನಗೆ ಮೂಡಿದುದರಿಂದ ತುಟಿಯ ಕೆಳಭಾಗ ಕಂಪಿಸಿತು. ಈ ಭೃಗುನಂದನನಿಗೆ ಸರಿಯಾದ ಸಮುಚಿತವಾದ (ಸಮರ್ಥವಾದ) ಉತ್ತರವೆಂದರೆ ಆ ದಿವ್ಯಕಾರ್ಮುಕವನ್ನು ಕೈಯಲ್ಲಿ ಗ್ರಹಣವಾಡಿ ಗಟ್ಟಿಯಾಗಿ ಧರಿಸಿಕೊಳ್ಳುವುದು.

ಸ್ಮಿತೇನ = ಹಾಸೇನ—ಪ್ರತ್ಯಪದ್ಯತ=ಅಂಗೀಚಕಾರ—ವಿಕಂಪಿತಾಧರಃ=ಸ್ಮಿತಕಂಪಿತಾ ಧರನು, ಭೀಮದರ್ಶನೇ = ಭೀಮದರ್ಶನನು ॥

**80.** **ಪೂರ್ವಜನ್ಮಧನುಷಾ ಸಮಾಗತಃ ।**
**ಸೋಽತಿಮಾತ್ರಲಘುದರ್ಶನೋಽಭವತ್ ॥**
**ಕೇವಲೋಽಪಿ ಸುಭಗೋ ನವಾಂಬುಧಃ ।**
**ಕಿಂ ಪುನಃ ತ್ರಿದಶಚಾಪಲಾಂಛಿತಃ** ॥ ೮೦ ॥

ಆ ರಾಘವನು ತನ್ನ ಹಿಂದಿನ ನಾರಾಯಣಾವತಾರದಲ್ಲಿ ಉಪಯೋಗಿಸಿದ ಆ ಭೀಕರಾಕೃತಿಯ ದಿವ್ಯಧನುಸ್ಸು ಇದೀಗ ಅವನ ಕೈಗೆ ರಾಮಾವತಾರದಲ್ಲಿ ಪುನಃ ಬಂದಿತು. ಅದು ಬಲು ಲಘುವಾಗಿ (ಹಗುರವಾಗಿ), ಅದರ ದರ್ಶನವು ಪ್ರಿಯವಾಗಿ, ಮನೋಹರವಾಗಿ, ಮನೋಜ್ಞವಾಗಿ ಕಂಡಿತು. ಶ್ರೀರಾಮನ ಕೈಯಲ್ಲಿ ಅದು ಕಾಂತಿಪೂರ್ಣವಾಗಿ, ಕಮನೀಯವಾಗಿ ರಾರಾಜಿಸಿತು. ಶ್ರೀರಾಮಚಂದ್ರನಾವರೋ ಹೊಸ ಮುಗಿಲಿನಂತೆ (ಮೋಡದಂತೆ) ರೂಪೈಶ್ವರ್ಯಮನೋಹರಗಾತ್ರನು. ಇದೀಗ ಹೊಸ ಮುಗಿಲು ಇಂದ್ರಧನುಸ್ಸಿನಿಂದ (ಕಾಮನಬಿಲ್ಲಿನಿಂದ) ಪರಿಶೋಭಿಸಿದರೆ ಆ ಮೋಡದ ಕಾಂತಿ, ಮೋಡದ ಸೌಂದರ್ಯವು ಇನ್ನಷ್ಟು ಹೆಚ್ಚುವಂತೆ, ಆ ಧನುವನ್ನು ಕೈಯಲ್ಲಿ ಹಿಡಿದಾಗ ರಾಘವನು ಹೆಚ್ಚಾದ ಕಮನೀಯ ಕಾಂತಿಯಿಂದ ವಿರಾಜಿಸಿದನು. ಅವನ ಅಂದಚಂದವನ್ನು ಬಣ್ಣಿಸಲು ಸಾಧ್ಯವಾಗದು. ಅವನ ಶೋಭೆ ಹೆಚ್ಚಿತು, ಅವರ್ಣನೀಯ (ವರ್ಣನಾತೀತ)ವೆನಿಸಿತು.

ಪೂರ್ವಜನ್ಮ=ಪೂರ್ವಸ್ಮಿನ್ ಜನ್ಮನಿ ನಾರಾಯಣಾವತಾರೇ—ಸಮಾಗತಃ=ಸಂಗತಃ—ಲಘುದರ್ಶನಃ = ಪ್ರಿಯದರ್ಶನಃ—ಕೇವಲೋ = ರಿಕ್ತೋऽಪಿ—ತ್ರಿದಶಚಾಪೇ = ಇಂದ್ರಧನುಷಾ, ಕಾಮನಬಿಲ್ಲು—ಲಾಂಛಿತಃ = ಚಿಹ್ನಿತಃ—ಉಭಯೋರಪಿ ವಿಷ್ಣುರೂಪತ್ವಾತ್ ಪೂರ್ವಜನ್ಮಪರಶುರಾಮರೂಪು ತಸ್ಯ ಧನುಷಾ ॥ ದೃಷ್ಟಾಂತ ಅಲಂಕಾರ ॥

**81. ತೇನ ಭೂಮಿನಿಹಿತೈಕಕೋಟಿ ತತ್ ।**
**ಕಾರ್ಮುಕಂ ಚ ಬಲಿನಾಧಿರೋಪಿತಮ್ ॥**
**ನಿಷ್ಪ್ರಭಶ್ಚ ರಿಪುರಾಸ ಭೂಭೃತಾಂ ।**
**ಧೂಮಶೇಷ ಇವ ಧೂಮಕೇತನಃ** ॥ ೮೧ ॥

ಬಿಲ್ಗಾಣನಾದ, ಧನುರ್ವಿದ್ಯಾ(ಧನುರ್ವೇದ)ಪಾರಂಗತನಾದ, ಬಿಲ್ವಿದ್ಯೆಯಲ್ಲಿ ಬಲ್ಲಿದನಾದ ಶ್ರೀರಾಮಚಂದ್ರನು, ಭೃಗುರಾಮನು ನೀಡಿದ ಕಾರ್ಮುಕದ ಒಂದು ತುದಿಯನ್ನು ನೆಲಕ್ಕೆ ಊರಿ ಹೆದೆಯನ್ನೇರಿಸಿ ಎಳೆದು ಟಂಕಾರವನ್ನು ಮಾಡಿದನು. ಯಾವ ಕ್ಷಣದಲ್ಲಿ ಭಾರ್ಗವನ ಕಿವಿಗೆ ಧನುಸ್ಸಿನ ಜ್ಯಾನಾದ ಕೇಳಿಸಿತೋ, ಆ ಕ್ಷಣವೇ ಭಾರ್ಗವರಾಮನು, ಶ್ರೀರಾಮನ ಅಸಮಾಸಾಹಸವನ್ನು ಕಂಡು ಬೆರಗಾದನು. ಅವನು, ಅಗ್ಗಿಷ್ಟಿಕೆಯಲ್ಲಿ, ಬೆಂಕಿಯು ಆರಿಹೋಗಿ, ಬರೇ ಬೆಂಕಿಯನ್ನು ಉಗುಳುವ ಬೆಂಕಿಯಂತೆ, ಪ್ರಕಾಶರಹಿತವಾದ, ಬರೇ ಹೊಗೆಯನ್ನು ಉಗುಳುವ. ನಂದಿಹೋದ ಜ್ವಾಲೆರಹಿತವಾದ ಬೆಂಕಿಯಂತೆ ಆತನು ನಿಸ್ತೇಜನೆನಿಸಿದನು. ಬರೇ ಹೊಗೆಯಿಂದ ಕಂಗೊಳಿಸುವ (ಧೂಮಕೇತನಃ) ಕಾಂತಿರಹಿತವಾದ ಅಗ್ನಿಯಂತೆ ಆತನ ತೇಜಸ್ಸು ಮಸುಳಿಸಿತು. ಆ ತೆರನಾಗಿ ಕಂಡನು ರಾಜವಂಶಕ್ಕೆ ಕಂಟಕನಾದ, ನರೇಶ್ವರಕುಲಕ್ಕೆ ಯಮನಂತಿದ್ದ, ನರಪಕುಲದ ಆಜನ್ಮಶತ್ರುವಾದ ಜಮದಗ್ನಿಯ ಸುತ ಭಾರ್ಗವರಾಮನು. ಪ್ರಭೆಯಿಲ್ಲದ, ನಿಸ್ತೇಜವಾದ ಅಗ್ನಿಯಂತೆ (ಧೂಮಕೇತನಃ).

ಕರ್ಮಣೇ ಪ್ರಭವತೀತಿ ಕಾರ್ಮುಕಂ ಧನುಶ್ಚ—ಭೂಭೃತಾಂ ರಿಪು = ಭಾರ್ಗವಶ್ಚ—ಧೂಮಶೇಷೌ = ಧೂಮಕೇತನೋऽಗ್ನಿರಿವ—ನಿಷ್ಪ್ರಭೋ = ನಿಸ್ತೇಜಸ್ಕ ॥

**82. ತಾವುಭಾವಪಿ ಪರಸ್ಪರ ಸ್ಥಿತೌ ।**
**ವರ್ಧಮಾನಪರಿಹೀನತೇಜಸೌ ॥**
**ಪಶ್ಯತಿ ಸ್ಮ ಜನತಾದಿನಾತ್ಯಯೇ ।**
**ಪಾರ್ವಣೌ ಶಶಿದಿವಾಕರಾವಿವ ॥ ೮೨ ॥**

ದ್ವಂದ್ವಿ, ಪ್ರತಿದ್ವಂದ್ವಿಗಳಾದ ಭೃಗುರಾಮ, ರಘುರಾಮರು ಮುಖಾಮುಖಿಯಾಗಿ, ಅನ್ಯೋನ್ಯಸಮ್ಮುಖರಾಗಿ, ಎದುರುಬದುರಾಗಿ. ಕುಸ್ತಿ ಅಖಾಡದಲ್ಲಿ ಕುಸ್ತಿಪಟುಗಳಂತೆ ನಿಂತಿದ್ದರು. ಆ ದೃಶ್ಯವನ್ನು ಸುಭಟಪರಿವಾರ ಕಂಡು ಆನಂದಿಸಿತು. ಸಂಧಿಕಾಲದಲ್ಲಿ, ಪರ್ವಕಾಲದಲ್ಲಿ, ಮುಸ್ಸಂಜೆ, ಮುಂಜಾವದ ಸಮಯ ಬಾನಂಚಿನಲ್ಲಿ, ಪೂರ್ವಪಶ್ಚಿಮದ ಕೊನೆಯಲ್ಲಿ, ಉದಯರವಿಯಂತೆ ಶ್ರೀರಾಮಚಂದ್ರನೂ, ಅಸ್ತಂಗತನಾಗುವ ಚಂದ್ರಮನಂತೆ ಭಾರ್ಗವರಾಮನೂ, ಜನರ ಕಣ್ಣಿಗೆ ಕಾಣಿಸುತ್ತಿದ್ದರು. ಒಬ್ಬನ ತೇಜಸ್ಸು ಹೆಚ್ಚುತ್ತಿದ್ದಂತೆ, ಇನ್ನೊಬ್ಬನ ತೇಜಸ್ಸು ಕ್ಷೀಣಿಸುತ್ತಾ, ಕಳೆಗುಂದಿದಂತೆ ತೋರಿತು. ಅವರು ಮುಳುಗುವ ಮತ್ತು ಉದಯಿಸುವ ಶಶಿದಿವಾಕರರಂತೆ ಕಾಣಿಸುತ್ತಿದ್ದರು.

ದಿನಾತ್ಯಯೇ = ಸಾಯಂಕಾಲೇ—ಪರ್ವಣಿಭವೌ = ಪಾರ್ವಣೌ ಶಶಿದಿವಾಕರಾವಿವ—ಜನತಾ = ಜನಸಮೂಹ—ಪಶ್ಯತಿ = ಸ್ಮಾಪಶ್ಯತ್—ತಾವುಭೌ=ರಾಘವಭಾರ್ಗವಾವಪಿ—ಅತ್ರ ರಾಘವಸ್ಯ ಶಶಿನಾ, ಭಾರ್ಗವಸ್ಯ ಭಾನುನೌಪಮ್ಯಂ ದೃಷ್ಟವ್ಯಮ್—ಪಾರ್ವಣೌ = ಪರ್ವಣಿ ಭವಃ ಪಾರ್ವಣಃ ॥

**83. ತಂ ಕೃಪಾಮೃದುರವೇಕ್ಷ್ಯ ಭಾರ್ಗವಂ ।**
**ರಾಘವಃ ಸ್ಖಲಿತವೀರ್ಯಮಾತ್ಮನಿ ॥**
**ಸ್ವಂ ಚ ಸಂಹಿತಮಮೋಘಮಾಶುಗಂ ।**
**ವ್ಯಾಜಹಾರ ಹರಸೂನುಸನ್ನಿಭಃ ॥ ೮೩ ॥**

ಸ್ಖಲಿತವೀರ್ಯನಾದ. ತನ್ನ ಬಲವನ್ನು ಕಳೆದುಕೊಂಡ ತೇಜೋಹೀನನಾದ, ಭಾರ್ಗವನ ಮುಖಾರವಿಂದವನ್ನು, ಕೈಯಲ್ಲಿ ಹೆದೆಯೇರಿಸಿದ ಧನುಸನ್ನು ಹಿಡಿವ, ಅಮೋಘವಾದ ಸಾಯಕವನ್ನು ಕೈಯಲ್ಲಿ ಹಿಡಿದಿರುವ, ಕರುಣಾಮುದ್ರಿತನಾದ, ಕರುಣಾಳುವಾದ ರಾಘವನು (ಕರುಣಾರ್ದ್ರಚೇತಸನು ದಶರಥಾತ್ಮಜನು) ಮಧುರಗಂಭೀರಭಾವದಿಂದ ನೋಡುತ್ತ ಹೀಗೆ ಉಸುರಿದನು. ಹರಪುತ್ರನಾದ, ಕಾರ್ತಿಕೇಯ ಸ್ವಾಮಿಯಂತೆ ಶೋಭಿಸುತ್ತ ದಾಶರಥಿಯು ಮಧುರವಾದ ವಚನಗಳಿಂದ ಭಾರ್ಗವನ ವಕ್ತ್ರವನ್ನು ನೋಡುತ್ತ ಹೀಗೆಂದು ನುಡಿದನು.

ಹರಸೂನುಸನ್ನಿಭಃ = ಸ್ಕಂಧಸಮಃ—ಸ್ಖಲಿತವೀರ್ಯ = ಕುಂಠಿತಶಕ್ತಿಂ—ಸ್ವಂ = ಸ್ವಕೀಯಂ—ಅಮೋಘಮಾಶುಗಂ = ಬಾಣಂ—ವ್ಯಾಜಹಾರ = ಬಭಾಷೇ=ಉಸುರಿದನು.

**84. ನ ಪ್ರಹರ್ತುಮಲಮಸ್ಮಿ ನಿರ್ದಯಂ ।**
**ವಿಪ್ರ ಇತ್ಯಭಿಭವತ್ಯಪಿ ತ್ವಯಿ ॥**
**ಶಂಸ ಕಿಂ ಗತಿಮನೇನ ಪತ್ರಿಣಾ ।**
**ಹನ್ಮಿ ಲೋಕಮುತ ತೇ ಮಖಾರ್ಜಿತಮ್ ॥ ೮೪ ॥**

"ನೀನು ಬ್ರಹ್ಮಜ್ಞಾನಿಯಾದ ಬ್ರಾಹ್ಮಣನಾದುದರಿಂದ ನಿನ್ನನ್ನು ನಿರ್ದಯದಿಂದ ಕೊಲ್ಲಲಾರೆನು. ಆದುದರಿಂದ ಈ ದಿವ್ಯಶಸ್ತ್ರಕ್ಕೆ ಯಾವುದನ್ನು ಲಕ್ಷ್ಯವಾಗಿ ಮಾಡಲಿ ಹೇಳು? ಒಂದೋ ನಿನ್ನ ಗತಿಶಕ್ತಿಯನ್ನು, ಚಲನವಲನದ ಓಡಾಟದ ಶಕ್ತಿಯನ್ನು (ಚಲನೆಯನ್ನು ಅಳಿಯಿಸಲೋ) ಇಲ್ಲವೆ ನೀನು ಯಜ್ಞಯಾಗಾದಿ ವೈದಿಕಕ್ರಿಯೆಗಳಿಂದ, ತಪಃಶಕ್ತಿಯಿಂದ ಆರ್ಜಿಸಿದ (ಸಂಪಾದಿಸಿದ) ಪುಣ್ಯಲೋಕಗಳನ್ನು ಸುಡಲೋ—ಏನೆಂದು ಹೇಳು" (ಮೋಕ್ಷ ಮಾರ್ಜಿತ ಲೋಕದದನೆ ಸುಡಲೊ).

ವಿಪ್ರ ಇತಿ ಹೇತೋಃ—ಪತ್ರಿಣಾ ಶರೇಣ ತೇ ಗತಿಂ ಗಮನಂ ಹನ್ಮಿ, ಉತ ಮಾರ್ಜಿತಂ ಲೋಕಂ ಸ್ವರ್ಗೇ ಹನ್ಮಿ ಶಂಸ ಬ್ರೂಹಿ ॥

**85. ಪ್ರತ್ಯುವಾಚ ತಮೃಷಿರ್ನ ತತ್ತ್ವತಃ ।**
**ತ್ವಾಂ ನ ವೇದ್ಮಿ ಪುರುಷಂ ಪುರಾತನಮ್ ॥**
**ಗಾಂ ಗತಸ್ಯ ತವ ಧಾಮ ವೈಷ್ಣವಂ ।**
**ಕೋಪಿತೋ ಹ್ಯಸಿ ಮಯಾ ದಿದೃಕ್ಷುಣಾ ॥ ೮೫ ॥**

ಜಮದಗ್ನಿಸೂನುವು ಪ್ರತಿಯಾಗಿ ಉತ್ತರಿಸಿದನು. "ಹೇ ರಘುಕುಲವತಂಸ. ನಾನು ಅರಿತಿಹೆನು ನಿನ್ನ ನಿಜತತ್ತ್ವವನ್ನು. ನೀನು ಪುರಾಣಪುರುಷನಾದ ನಾರಾಯಣನೆಂದು, ವಿಶ್ವದ ಆದಿಚೇತನನೆಂದು, ವಿಶ್ವದ ಪ್ರಧಾನ ಪುರುಷನೆಂಬುದನ್ನು (ಭುವಿಗಿಳಿದ ವೈಷ್ಣವದ ತೇಜವನು ನಿರುಕಿಸಲು) ನಾನು ತಿಳಿದಿರುವೆನು. ನೀನು ವೈಕುಂಠಧಾಮದಿಂದ ಭೂಮಿಗಿಳಿದಿರುವ ನಿನ್ನ ವೈಷ್ಣವತೇಜಸನ್ನು, ಆ ದಿವ್ಯಶಕ್ತಿಯ ಮಹಿಮೆಯನ್ನು ಪ್ರತ್ಯಕ್ಷವಾಗಿ ತಿಳಿಯುವ ಸಲುವಾಗಿ ಪ್ರಕಟನಾಗುವಂತೆ (ನಾಂ ಗೈದೆನಿಂತು ನೀಂ ಕುಪಿತನಾಗುವೊಲು) ನೀನು ಕೋಪಗೊಳ್ಳುವಂತೆ ಮಾಡಿದೆನು. ನೀನು ಕೋಪಿಸುವಂತೆ ಪ್ರಚೋದಿಸಿದೆನು ನೀನು ಏಕಮೇವಾದ್ವಿತೀಯನಾದ ವಿರಾಟ್‌ಪುರುಷನೆಂಬುದನ್ನು ನಾನು ಅರಿತಿರುವೆನು.

ಅನ್ವಯ:—ಋಷಿಃ ತಂ ಪ್ರತ್ಯುವಾಚ ತತ್ತ್ವ, ತಃ ತ್ವಾಂ ಪುರಾತನಂ ಪುರುಷಃ ನ ಕಿಂತು ಗಾಂ ಗತಸ್ಯ ತವ ವೈಷ್ಣವಂ ಧಾಮ ದಿದೃಕ್ಷುಣಾ ಮಯಾ ಕೋಪಿತೋಹ್ಯಸಿ ॥

ಋಷಿಭಾರ್ಗವಸ್ತಂ ರಾಮಂ ಪ್ರತ್ಯುವಾಚ—ಕಿಮಿತಿ?—ತತ್ತ್ವತಃ ಸ್ವರೂಪತಸ್ತ್ವಾಂ ಪುರಾತನಂ ಪುರುಷಂ ನ ವೇದ್ಮೀತಿನ—ಕಿಂತು ವೇದ್ಮ್ಯೇವೇತ್ಯರ್ಥಃ—ತವ ವೈಷ್ಣವಂ ಧಾಮ ತೇಜೋದಿದೃಕ್ಷುಣಾ ದ್ರಷ್ಟುಮಿಚ್ಛುನಾ ಮಯಾ ಕೋಪಿತೋಹ್ಯಸಿ— ಪುರಾತನಂ ಪುರುಷಮ್=ಸನಾತನಪುರುಷ. ಆದಿಮೂಲ, ಜಗತ್‌ಕಾರಣ=ಮಹಾವಿಷ್ಣು ॥

**86. ಭಸ್ಮಸಾತ್ ಕೃತವತಃ ಪಿತೃದ್ವಿಷಃ ।**
**ಪಾತ್ರಸಾಚ್ಚ ವಸುಧಾಂ ಸಸಾಗರಾಮ್ ॥**
**ಆಹಿತೋ ಜಯವಿಪರ್ಯಯೋಽಪಿ ಮೇ ।**
**ಶ್ಲಾಘ್ಯ ಏವ ಪರಮೇಷ್ಠಿನಾ ತ್ವಯಾ ॥ ೮೬ ॥**

ನನ್ನ ತಂದೆಯ ವೈರಿಗಳನ್ನು ನಾನಂದು ನನ್ನ ಕೋಪಾಗ್ನಿಯಿಂದ ಸುಟ್ಟುಬಿಟ್ಟೆನು. ನನ್ನ ಸಿಟ್ಟಿನ ಉರಿಯಲ್ಲಿ ಅವರು ಸುಟ್ಟುಹೋದರು (ಬೆಂದು ಬೂದಿಯಾದರು). ಅಬಳಿಕ

ನಾಲ್ಕು ಸಮುದ್ರಗಳಿಂದ ಆವರಿಸಲ್ಪಟ್ಟ ಈ ವಸುಂಧರೆಯನ್ನು ಜಗದ ಸಜ್ಜನರಾದ ಭೂಸುರರಿಗೆ (ವಿಪ್ರರಿಗೆ, ಬ್ರಾಹ್ಮಣರಿಗೆ) ದಾನವಮಾಡಿ ಕೃತಕೃತ್ಯನಾದೆನು. ಆದರೆ ನಾನು ಇದೀಗ ನಿನ್ನಿಂದ ಪರಾಜಿತನಾಗಿದ್ದೇನೆ ದಿಟ. ಆದರೆ ಆ ಬಗ್ಗೆ ಎಳ್ಳನಿತೂ ನಾಚಿಕೆಗೊಳ್ಳ ಬೇಕಾಗಿಲ್ಲ. ಕಾರಣ ಜಗತ್ತಿನ ಪರಮೇಷ್ಠಿಯಾದ ನಿನ್ನ ಕೈಯಲ್ಲಿ ಸೋಲನ್ನು ಅನುಭವಿ ಸಿದರೂ ಅದು ಶ್ಲಾಘ್ಯವೆನಿಸದಿರುವುದೇ. ನೀನಲ್ಲವೆ ವಿಶ್ವನಾಯಕ, ಪರಮೇಶ್ವರ, ಸರ್ವೇಶ್ವರ. ಸರ್ವಮೂಲ. ನಿನ್ನ ಹತ್ತಿರ ಸೋತರೂ ಗೆದ್ದಂತೆ" (ಸೋಲಾದರೂ ಶ್ಲಾಘ್ಯವೆಂದೆನಿಸದಿಹುದೆ).

ಪಿತೃದ್ವಿಷಃ = ಪಿತೃವೈರಿಣೋ—ಭಸ್ಮಸಾತ್ಕೃತವತಃ = ಕೋಪೇನ ಭಸ್ಮೀಕುರ್ವತಃ— ಜಯವಿಪರ್ಯಯಃ = ಪರಾಜಯೋsಪಿ—ಶ್ಲಾಘ್ಯ=ಶಸ್ಯ ಏವ—ಭಸ್ಮಸಾತ್ = ಪ್ರತ್ಯಯಸಾತ್ = ಚ್ವಿ (ವಿಭಾಷಾಸಾತಿ ಕಾರ್ತ್ಸ್ನ್ಯರ್ಥೇ) — ಪರಮೇಷ್ಠಿನ್ = ಪರಮೇ (ಸ್ಥಾನೇ) ತಿಷ್ಠತಿ ಇತಿ॥

**87. ತದ್ಗತಿಂ ಮತಿಮತಾಂ ವರೇಪ್ಸಿತಾಂ।**
**ಪುಣ್ಯತೀರ್ಥಗಮನಾಯ ರಕ್ಷ ಮೇ॥**
**ಪೀಡಯಿಷ್ಯತಿ ನ ಮಾಂ ಖಿಲೀಕೃತಾ।**
**ಸ್ವರ್ಗಪದ್ಧತಿರಭೋಗಲೋಲುಪಮ್ ॥ ೮೭ ॥**

"ಹೇ ರಾಘವಾ, ಓ ಸರ್ವಜ್ಞಮೂರ್ತಿಯೇ, ಓ ಮಹಾಮತಿಯೇ, ಮತಿವಂತನೇ, ನನ್ನ ಚಲನವಲನದ ಶಕ್ತಿಯನ್ನು ರಕ್ಷಿಸು. (ಮತಿಯಂತರೊಳು ಉತ್ತಮನೆ) ನಾನು ಬಯಸುವ ತೀರ್ಥಯಾತ್ರೆಗಳನ್ನು (ಕ್ಷೇತ್ರದರ್ಶನ, ದೇಶಪರ್ಯಟನೆ), ಗಮಿಸುವ ಪುಣ್ಯ ಕ್ಷೇತ್ರಗಳನ್ನು, ಸಂಚರಿಸುವ ಶಕ್ತಿಯನ್ನು ಪೂರೆವುದಯ್ ನೀನು. ಆದರೆ ನಾನು ನನ್ನ ತಪೋಬಲದಿಂದ ಆರ್ಜಿಸಿದ ಪುಣ್ಯಫಲದಿಂದ ದೊರಕುವ ಸ್ವರ್ಗಾದಿಭೋಗಗಳನ್ನು ಸನ್ಯಾಸಿಯಾದ ನಾನು ಬಯಸೆನು. ಮೋಕ್ಷಕಾಂಕ್ಷಿಯಾದ ನಾನು ಮುಮುಕ್ಷುವಾಗಲು ಬಯಸುವೆನು. ವಿಷಯಲಾಲಸೆಯು ಜಿಜ್ಞಾಸೆಯಾಗಲಿ ಭೋಗಲಾಲಸೆ ಎನಗಿಲ್ಲ ಆದ್ದರಿಂದ ನಿನ್ನ ಶರದಿಂದ ಅದನ್ನು ನೀನು ಸ್ವರ್ಗಭೋಗಫಲಗಳನ್ನು ತಡೆಗಟ್ಟಬಹುದು. ಅದನ್ನು ನಿನ್ನ ದಿವ್ಯಶರಕ್ಕೆ ಆಹುತಿಯಾಗಿ ಪಡೆಯಬಹುದು. ಆದರಿಂದ ನನಗೆ ಬೇಸರವಾಗದು. ಅದಕ್ಕಾಗಿ ನಾನು ಪರಿತಪಿಸೆನು. ಆದರೆ ನನ್ನ ಚಲನವಲನಗಳ ವೇಗ, ಗತಿ ಎಂದಿನಂತೆ ಇರಲಿ, ಅದನ್ನು ಎನಗೆ ಕರುಣಿಸೈ ಕಾರುಣ್ಯಸಿಂಧು. ಅಳಿಸದಿರು."

ಹೇ ಮತಿಮತಾಂ ವರ!—ಪುಣ್ಯತೀರ್ಥಗಮನಾಯಾಪ್ಯುಮಿಷ್ಟಾ ಈಪ್ಸಿತಾಂ— ಮೇಗತಿಂ ರಕ್ಷ=ಪಾಲಯ—ಕಿಂತು ಖಿಲೀಕೃತಾ=ದುರ್ಗಮೀಕೃತಾಪಿ—ಸ್ವರ್ಗಪದ್ಧತಿರ ಭೋಗಲೋಲುಪಂ = ಭೋಗನಿಃಸ್ಪೃಹಂ ಮಾಂ ನ ಪೀಡಯಿಷ್ಯತಿ—ಖಿಲೀಕೃತಾ = ತಡೆ, ಮುಚ್ಚು.

**88. ಪ್ರತ್ಯಪದ್ಯತ ತಥೇತಿ ರಾಘವಃ।**
**ಪ್ರಾಙ್ಮುಖಶ್ಚ ವಿಸಸರ್ಜ ಸಾಯಕಮ್ ॥**

**ಭಾರ್ಗವಸ್ಯ ಸುಕೃತೋಽಪಿ ಸೋಽಭವತ್ ।**
**ಸ್ವರ್ಗಮಾರ್ಗಪರಿಘೋ ದುರತ್ಯಯಃ ॥ ೮೮ ॥**

ಅಂತೆಯೇ ಆಗಲೆಂದು ಆ ನುಡಿಗೆ ಒಪ್ಪಿ ರಾಘವನು ಇಂದ್ರದಿಕ್ಕಿಗೆ ಮುಖಮಾಡಿ ನಿಂತು (ಪೂರ್ವದಿಕ್ಕಿಗೆ) ಮಾರ್ಗಣವೊಂದನ್ನು ಬಿಲ್ಲಿಗೆ ಹೂಡಿ ಎಚ್ಚನು. ಆ ಬಾಣವು ಇಂದ್ರನ ಸ್ವರ್ಗಲೋಕವನ್ನು (ಸುರಲೋಕವನ್ನು) ಹೊಕ್ಕು ಪರಶುರಾಮನು ಪ್ರವೇಶಿಸ ದಂತೆ ದಾರಿಯನ್ನು (ಪ್ರತಿಬಂಧವಾಗಿ) ಅಡ್ಡಗಟ್ಟಿ ಕಾವಲಾಗಿ ನಿಂತಿತು (ದ್ವಾರವನ್ನು ಪ್ರವೇಶಿಸದಂತೆ). ಆ ಮಹರ್ಷಿಯು ಮಹಾತಪೋಧನನು. ಜಿತೇಂದ್ರಿಯನಾಗಿ ತನ್ನ ಸಾದಾ ಜೀವನದಿಂದ, ಜಪ, ತಪ, ಸ್ವಾಧ್ಯಾಯ, ವ್ರತ, ಅನುಷ್ಠಾನದಿಂದ, ಭಕ್ತಿ, ಜ್ಞಾನ, ವೈರಾಗ್ಯದಿಂದ ಸುಕೃತಫಲವನ್ನು ಗಳಿಸಿದ್ದನು, ಆದರೆ ಆ ಪುಣ್ಯಫಲಗಳನ್ನೆಲ್ಲವನ್ನು ಇದೀಗ ತ್ಯಾಗಮಾಡಿ ರಾಮಬಾಣಕ್ಕೆ ಆಹುತಿಯಾಗಿ ಕೊಟ್ಟನು. ಭಾರ್ಗವನು ಸುರಲೋಕ ವನ್ನು ಪೊಗದಂತೆ ಆ ರಾಮಶರವು ಇದೀಗ ಪರಿಘದಂತೆ, ತಡೆಯಾಗಿ ನಿಂತಿತು (ಸುರಪಥಕೆ ತಡೆಯಾದುದಂಬು ಪರಿಘದೊಲು).

ಪ್ರತ್ಯಪದ್ಯತ = ಅಂಗೀಕೃತವಾನ್—ಪ್ರಾಙ್ಮುಖ = ಇಂದ್ರದಿಙ್ಮುಖಃ (ಸಾಯಕಂ ವಿಸಸರ್ಜ ಚ)—ಭಾರ್ಗವಸ್ಯ ದುರತ್ಯಯೋ=ದುರತಿಕ್ರಮಃ—ಸ್ವರ್ಗಮಾರ್ಗಸ್ಯ ಪರಿಘಃ = ಪ್ರತಿಬಂಧೋಽಭವತ್— ಸುಕೃತೋಽಪಿ = ಸುಶೋಭನಂ ಕರೋತಿ ಇತಿ ಸುಕೃತ್ ತಸ್ಯ—ದುರತ್ಯಯಃ ಪರಿಘಃ = ದುಃಖೇನ ಅತ್ಯಯಃ ಯಸ್ಯ = ಅಡೆತಡೆ—ಪರಿಘ = ಅಡ್ಡಣಿ.

89. **ರಾಘವೋಽಪಿ ಚರಣೌ ತಪೋನಿಧೇಃ ।**
**ಕ್ಷಮ್ಯತಾಮಿತಿ ವದನ್ ಸಮಸ್ಪೃಶತ್ ॥**
**ನಿರ್ಜಿತೇಷು ತರಸಾ ತರಸ್ವಿನಾಂ ।**
**ಶತ್ರುಷು ಪ್ರಣತಿರೇವ ಕೀರ್ತಯೇ ॥ ೮೯ ॥**

ಆ ದಶರಥಾತ್ಮಜನು (ಶ್ರೀರಾಮಚಂದ್ರನು) ಆ ತಪೋನಿಧಿಯ ಕಾಲುಗಳನ್ನು ಮುಟ್ಟಿ ನಮಸ್ಕರಿಸಿದನು. ಹಿರಿಯನೂ, ಲೋಕಪೂಜ್ಯನೂ ಆದ ಆ ಮುನಿಕುಲ ಮೌಳಿಯ ಪದಕಮಲಗಳಿಗೆರಗಿ "ಕ್ಷಮಿಸುವುದು ನೀನೆಂದು" ಬೇಡಿಕೊಂಡನು. ಏಕೆಂದರೆ ಮಹಾವೀರರು ತಮ್ಮ ಬಲಪರಾಕ್ರಮಗಳಿಗೆ ಮಣಿದ ಶತ್ರುಗಳಿಗೆ ಸೌಹಾರ್ದಭಾವವನ್ನು ತೋರುವರಲ್ಲದೆ ಅವಮರ್ಯಾದೆಯನ್ನು ಮಾಡರು. ವೀರಾಧಿವೀರರಿಗೆ ವಿನಯವೇ ಭೂಷಣವು. ಸೋತ ಶತ್ರುಗಳಿಗೆ (ಶರಣಾಗತರಾದವರಿಗೆ) ವಿನಯವನ್ನು ತೋರುವುದ ರಿಂದ ಆಚಂದ್ರಾರ್ಕವಾದ ಕೀರ್ತಿಗೆ ಅವರು ಪಾತ್ರರಾಗುವರು (ಶಕ್ತಿಜಿತ ರಿಪುಗಳೊಳು ವಿನಯವನು ತೋರುವುದೆ).

ಚರಣೌ ಸಮಸ್ಪೃಶತ್=ಪ್ರಣನಾಮ—ತರಸ್ವಿನಾಮ್ = ಬಲವತಾಂ—ತರಸಾ = ಬಲೇನ—ನಿರ್ಜಿತೇಷು=ಶತ್ರುಷು (ಪ್ರಣತಿರೇವ ಕೀರ್ತಯೇ)—ಪ್ರಣತಿ=ವಂದಿಸು.

ಅರ್ಥಾಂತರನ್ಯಾಸ ಅಲಂಕಾರ ॥

**90. ರಾಜಸತ್ವಮವಧೂಯ ಮಾತೃಕಂ ।**
**ಪಿತ್ರ್ಯಮಸ್ಮಿ ಗಮಿತಃ ಶಮಂ ಯದಾ ॥**
**ನನ್ವನಿಂದಿತಫಲೋ ಮಮ ತ್ವಯಾ ।**
**ನಿಗ್ರಹೋಽಪ್ಯಯಮನುಗ್ರಹೀಕೃತಃ ॥ ೯೦ ॥**

ಹೇ ರಘುರಾಮ. ಹೇ ದಯಾಳು (ಉದಾತ್ತಗುಣಸಾಗರನೆ), ಹೇ ಉದಾತ್ತ ಪುರುಷೋತ್ತಮನೆ, ನೀನೀಗ ಎನಗೆ ಬಹುದೊಡ್ಡ ಉಪಕೃತಿಯನ್ನು ಎಸಗಿದಂತಾಯ್ತು. ನನ್ನ ಸೋಲಿನಲ್ಲೂ ನಾನು ಅಮೂಲ್ಯವಾದ, ಮರೆಯಲಾಗದ, ನಾಶರಹಿತವಾದ ಫಲವನ್ನು ಪಡೆಯುವಂತಾಯಿತು. ನಾನೀಗ ಅಹಂಭಾವ, ಅಹಂಕಾರ, ಗರ್ವ, ಕೋಪ. ತಾಪ, ದೊಡ್ಡಸ್ತಿಕೆ ಇವುಗಳಿಂದ ಮೆರೆಯುವ ರಾಜಸಗುಣವನ್ನು ನಾನು ನನ್ನ ತಾಯಿಯ ಕಡೆಯಿಂದ ಪಡೆದಿದ್ದೆ. ಅದನ್ನು ಇದೀಗ ನಾನು ನಿನ್ನಿಂದ ಕಳೆದುಕೊಂಡು ಪುನೀತನಾದೆ, ನಾನೀಗ ಸಾತ್ವಿಕನಾಗಿ, ನಿರ್ವೈರಭಾವದಿಂದ ಮುದ್ರಿತನಾಗಿರುವೆನು (ತಾಯ ಕಡೆಯಿಂ ಬಂದ ರಾಜಸವ ನೀಂ ಕಳೆದು). ತಂದೆಯ ಕಡೆಯಿಂದ ಬಂದಿರುವ ಹುಟ್ಟುಗುಣವಾದ ಶಮ, ದಮ, ಶಾಂತಗುಣಕ್ಕೆ ನೀನು ಎಳೆದು ನಿಲಿಸಿದೆ (ಹಿಂದಿರುಗಿಸಿದೆ). ನನ್ನಲ್ಲಿ ತಪಸ್ಸು, ಸ್ವಾಧ್ಯಾಯಕ್ಕೆ ಅನುಕೂಲವಾದ ಸಾತ್ವಿಕಗುಣಗಳನ್ನು ನೀನು ಶಾಶ್ವತವಾಗಿ ಉಳಿಸಿದೆ (ತಂದೆಕಡೆಯಿಂ ಬಂದ ಶಾಂತಗುಣ ಕೆಳೆದು ನೀಂ). ಇದರಿಂದ ನೀನು ನೆಗಳಿದ ನಿಗ್ರಹವು ನನಗೆ ಅನುಗ್ರಹವಾಗಿ ಪರಿಣಮಿಸಿದೆ. ಅದರ ಪರಿಣಾಮವಾಗಿ ಉತ್ತಮೋತ್ತಮ ಫಲಗಳನ್ನು ನಾನು ಪಡೆವೆ. ಇದಕ್ಕೆ ಹೇ ಪರಮಪುರುಷನೆ, ನಿನಗೆ ನನ್ನ ನಮನಗಳು. ನಾನೀಗ ಸುಸಂಸ್ಕೃತನಾದೆ. ಸಾತ್ವಿಕನಾಗಿ ನಿರ್ವೈರಭಾವದಿಂದ ಮುದ್ರಿತನಾಗಿರುವೆನು, ಧನ್ಯನಾದೆ'' (ನಿಗ್ರಹವೆ ನನಗನುಗ್ರಹವಾದುದಲ್ತೆ).

ಮಾತುರಾಗತಂ = ಮಾತ್ರೃಕಂ—ರಾಜಸತ್ವಂ = ರಜೋಗುಣಪ್ರಧಾನಸತ್ವಮವಧೂಯ —ಪಿತುರಾಗತಂ = ಪಿತ್ರ್ಯಂ ಶಮಃ ಯದೋಗಮಿತೋಽಸ್ಮಿ—ಫಲಂ = ಸ್ವರ್ಗಹಾನಿ ಲಕ್ಷಣಂ—ಯಸ್ಯ ಸೋಽಯಂ ನಿಗ್ರಹೋಽಪಕಾರೋಽಪ್ಯನುಗ್ರಹೀಕೃತೋ ನನೂಪಕಾರೀ ಕೃತಃ ಖಲು—ರಾಜಸಃ = ರಜಃ ಪ್ರಧಾನಮ್ ಅಸ್ಯ ಇತಿ ರಾಜಸಃ—ತಸ್ಯ ಭಾವಃ ರಾಜ ಸತ್ವಮ್ ॥

**91. ಸಾಧಯಾಮ್ಯಹಮವಿಘ್ನಮಸ್ತು ತೇ ।**
**ದೇವಕಾರ್ಯಮುಪಪಾದಯಿಷ್ಯತಃ ॥**
**ಊಚಿವಾನಿತಿ ವಚಃ ಸಲಕ್ಷ್ಮಣಂ ।**
**ಲಕ್ಷ್ಮಣಾಗ್ರಜಮೃಷಿಸ್ತಿರೋದಧೇ ॥ ೯೧ ॥**

''ಸುರಕಾರ್ಯಸಿದ್ಧಿಗಾಗಿ ಭೂಮಿಗಿಳಿದು ಬಂದಿರುವ ನೀನು ಸಫಲತೆಯನ್ನು ಹೊಂದುವಂತಾಗಲಿ. ನಿನಗೆ ನಿನ್ನ ಕಾರ್ಯದಲ್ಲಿ ವಿಘ್ನಗಳು ಬಾರದಿರಲಿ (ಸುರಕಾರ್ಯ ಸಿದ್ಧಿಯೊಳು ತೊಡಗಿರುವ ನಿನಗಿಂದು). ನಾನೀಗ ತೆರಳುವೆನು'' ಎಂದು ಲಕ್ಷ್ಮಣನಿಂದೊಡ ಗೂಡಿದ, ಸಕಲಸಲ್ಲಕ್ಷಣಗಳಿಂದೊಪ್ಪುವ ಲಕ್ಷಣಾಗ್ರಜನಿಗೆ ನುಡಿದು ಭಾರ್ಗವರಾಮನ ಅದೃಶ್ಯನಾದನು (ತನ್ನ ದಾರಿಹಿಡಿದನು) (ಲಕ್ಷ್ಮಣಾನ್ವಿತಲಕ್ಷ್ಮಣಾಗ್ರಜನಿಗೆ ಇಂತೊರೆದು).

ಅಹಂ ಸಾಧಯಾಮಿ = ಗಚ್ಛಾಮಿ—ಸಹಲಕ್ಷ್ಮಣೇನ = ಸಲಕ್ಷ್ಮಣಃ—ವಚ ಊಚಿವಾನ್ = ಉಕ್ತವಾನ್—ಖಂಪಿಸ್ತಿರೋದಧೇ = ಅಂತರ್ದಧೇ — ಅವಿಘ್ನವಮ್ = ವಿಘ್ನಾನಾವಮ್ ಅಭಾವಃ (ಅವ್ಯಯಿಭಾವ)— ದೇವಕಾರ್ಯಮ್=ದೇವತೆಗಳ ಕೆಲಸಕಾರ್ಯ.

**92. ತಸ್ಮಿನ್ ಗತೇ ವಿಜಯಿನಂ ಪರಿರಭ್ಯ ರಾಮಂ ।**
**ಸ್ನೇಹಾದಮನ್ಯತ ಪಿತಾ ಪುನರೇವ ಜಾತಮ್ ॥**
**ತಸ್ಯಾಭವತ್ ಕ್ಷಣಶುಚಃ ಪರಿತೋಷಲಾಭಃ ।**
**ಕಕ್ಷಾಗ್ನಿಲಂಘಿತ ತರೋರಿವ ವೃಷ್ಟಿಪಾತಃ ॥ ೯೨ ॥**

ಅಂತು ಭಾರ್ಗವನು ಹೀಗೆ ನುಡಿದು ಅತ್ತ ತೆರಳಲು ವಿಜಯಿರಾಘವನನ್ನು ತಂದೆಯಾದ ದಶರಥಸಾರ್ವಭೌಮನು, ಪುನಃ ಮಗನನ್ನು ಪಡೆದಂತೆ (ಮರಳಿ ಪಡೆದಂತೆ) ಬಿಗಿದಾಗಿ ಅಪ್ಪಿಕೊಂಡು ಸುತಸ್ಪರ್ಶದ ಆನಂದಸಾಗರದಲ್ಲಿ ಓಲಾಡಿದನು (ವಿಜಯರಾಘವನ ಎದೆಯೊಳು ಅವಚಿತ ಮರಳಿ ಮಗನನು ಪಡೆದವೊಲು). ಅವನ ಮಮತೆಯ ಕಣ್ಣಿಗೆ ಮಗನು ಪುನಃ ಬದುಕಿಬಂದಂತೆ, ಪುನರ್ಜನ್ಮತಳೆದಂತೆ ಭಾಸವಾಯಿತು. ಒಂದು ಕ್ಷಣದಲ್ಲಿ ದುಃಖದ ಉರಿಯಲ್ಲಿ ಸಿಲುಕಿ ಬೆಂದು ಬೇಗುದಿಯಾದನು (ಬೆಂಬೂದಿಯಾಗಿ). ಆದರೆ ಮರುಕ್ಷಣವೇ ನಲವಾಂತು, ಗೆಲವಾಂತು, ಒಲವಾಂತು, ಚೆಲುವಾಂತು ನಕ್ಕು ನಲಿದನು. ಕಾಡುಕಿಚ್ಚಿನಲ್ಲಿ ಸಿಕ್ಕಿ ಉರಿಯುತ್ತಿದ್ದ ಮಹಾವೃಕ್ಷಕ್ಕೆ ಸೋನೆಮಳೆಯು ಬಿದ್ದಂತೆ ಆಯಿತು. ದಶರಥನೃಪಾಲನ (ಕೋಸಲೇಶ್ವರನ) ಕಷ್ಟಕೋಟಲೆಗಳು (ಅಂತಃಖೇದಗಳು) (ಅಂತಸ್ತಾಪ) ನಿಮಿಷಾರ್ಧದಲ್ಲಿ ಮಾಯವಾಗಿ ಸಂತಸ, ಸಂಭ್ರಮದ ನಿರ್ಮಲ ವಾತಾವರಣವು ನೆಲೆಗೊಂಡುದು (ಮರುಜಣ ನಲವನಾಂತುದು).

ಅನ್ವಯಃ—ತಸ್ಮಿನ್ ಗತೇ (ಸತಿ) ವಿಜಯಿನಂ ರಾಮಂ ಪಿತಾ ಸ್ನೇಹಾತ್ ಪರಿರಭ್ಯ ಪುನರ್ಜಾತಮೇವ ಅಮನ್ಯತ। ಕ್ಷಣಶುಚಃ ತಸ್ಯ ಪರಿತೋಷಲಾಭಃ ಕಕ್ಷಾಗ್ನಿಲಂಘಿತ ತರೋಃ ವೃಷ್ಟಿಪಾತಃ ಇವಾಭವತ್ ॥

ಪರಿರಭ್ಯ = ಆಲಿಂಗ್ಯ—ಪುನರ್ಜಾತಮೇವಾಮನ್ಯತ—ಪರಿತೋಷಲಾಭಃ=ಸಂತೋಷಪ್ರಾಪ್ತಿಃ—ಕಕ್ಷಾಗ್ನಿನಾ = ದಾವಾನಲೇನ=ದಾವಾಗ್ನಿ, ಕಕ್ಷ=ಕಾಡು—"ಕಕ್ಷಃ ಶುಷ್ಕಕಾನನವೀರುಧೋಃ" ಇತಿ ವಿಶ್ವಃ—ಲಂಘಿತಸ್ಯ = ಅಭಿಹತಸ್ಯ—ಲಂಘಿತವಾದ = ನಾಶವಾದ.

**93. ಅಥ ಪಥಿ ಗಮಯಿತ್ವಾ ಕ್ಲಪ್ತರಮ್ಯೋಪಕಾರ್ಯೇ ।**
**ಕತಿಚಿದವನಿಪಾಲಃ ಶರ್ವರೀಃ ಶರ್ವಕಲ್ಪಃ ॥**
**ಪುರಮವಿಶದಯೋಧ್ಯಾಂ ಮೈಥಿಲೀದರ್ಶನೀನಾಂ ।**
**ಕುವಲಯಿತ ಗವಾಕ್ಷಾಂ ಲೋಚನೈರಂಗನಾನಾಮ್ ॥ ೯೩ ॥**

ಆ ಅವನಿಪಾಲನು ಸರ್ವಶ್ರೇಷ್ಠನಾದ, ಸರ್ವಶಕ್ತನಾದ, ಚಂದ್ರಚೂಡ(ಚಂದ್ರಮೌಳಿ) ಶಿವನಂತೆ ಶೋಭಾಯಮಾನನಾಗಿ ಎಸೆಯುತ್ತಾ, ನಿಜನಗರಿಯ ಕಡೆಗೆ ಪಯಣವನ್ನು ಮುಂದುವರಿಸಿದನು. ಆ ಕೋಸಲಾಧಿಪನು ಜಗನ್ಮಂಗಳಮೂರ್ತಿಯ ಪ್ರತಿಬಿಂಬವೋ ಎಂಬಂತೆ ರಾರಾಜಿಸುತ್ತ, ಅನೇಕ ರಾತ್ರಿಗಳನ್ನು ದಾರಿಯೆಡೆಯ ವಿಶ್ರಮಂತಾಣಗಳಲ್ಲಿ

ಪಟಗೃಹಗಳನ್ನು, ಶಿಬಿರಗಳನ್ನು, ಡೇರೆಗಳನ್ನು ವಿರಚಿಸಿ ತಂಗಿದರು. ಹೀಗೆ ಬಹಳ ವಿಜೃಂಭಣೆಯಿಂದ ಪಯಣಿಸಿ ಅನೇಕ ರಾತ್ರಿಗಳನ್ನು ಕಳೆದು ಅಯೋಧ್ಯಾನಗರಿಯನ್ನು ಮರಳಿ ಪ್ರವೇಶಿಸಿದನು. ಆ ಪುರದ ಪುರಾಂಗನೆಯರು ತಮ್ಮ ಉಪ್ಪರಿಗೆಯಲ್ಲಿ ಕುಳಿತು ಗವಾಕ್ಷಿಗಳನ್ನು ತೆರೆದು ಸೀತೆಯ (ವೈದೇಹಿಯ) ದರ್ಶನನಾಕಾಂಕ್ಷಿಗಳಾಗಿ ನೋಡಲೆಳಸಿದರು. ಆ ನಗರಾಂಗನೆಯರ ಕಣ್ಣುಗಳೆಂಬ ನೈದಿಲೆಹೂಗಳು (ಕುವಲಯ) ಗವಾಕ್ಷಿಗಳನ್ನೆಲ್ಲಾ ಸಾಲುಸಾಲಾಗಿ ಅಲಂಕರಿಸಿದುವೋ ಎಂಬಂತೆ ಮೆರೆಯುತ್ತಿರುವ ಸಾಕೇತ ಪುರವನ್ನು ಅವರು ಪ್ರವೇಶಿಸಿದರು. ಮಿಥಿಲಾರಾಜಕುಮಾರಿಯಾದ ಮೈಥಿಲಿಯನ್ನು ನೋಡಲು ತವಕಿಸುವ ಅಕ್ಷಿಕುವಲಯಗಳಿಂದ ಅಲಂಕೃತವಾಗಿರುವ ಗವಾಕ್ಷಗಳ ಸಮೂಹದಿಂದ ಶೋಭಿಸುವ (ಮೆರೆಯುವ, ಶೋಭಾಯಮಾನವಾಗಿ ಕಾಣುವ) ಅಯೋಧ್ಯಾನಗರಿಯನ್ನು ಅವರು ಮರಳಿ ಪ್ರವೇಶಿಸಿದರು.

ಅನ್ವಯ :—ಅಥ ಶರ್ವಕಲ್ಪಃ ಅವನಿಪಾಲಃ ಕ್ಲೃಪ್ತರಮ್ಯೋಪಕಾರ್ಯೇ ಪಥಿ ಕತಿಚಿತ್ ಶರ್ವರೀಃ ಗಮಯಿತ್ವಾ ಮೈಥಿಲೀದರ್ಶನೀನಾಂ ಅಂಗನಾನಾಂ ಲೋಚನೈಃ ಕುವಲಯಿತ ಗವಾಕ್ಷಾಂ ಪುರಮ್ ಅಯೋಧ್ಯಾಮ್ ಅವಿಶತ್ ॥

ರಮ್ಯಾ = ನವಾ—ಕತಿಚಿತ್ ಶರ್ವರೀಃ = ರಾತ್ರೀರ್ಗಮಯಿತ್ವಾ—ಕುವಲಯಾನಿ ಯೇಷಾಂ ಸಂಜಾತಾನಿ ಕುವಲಯಿತಾಃ—ಕುವಲಯಿತಾ ಗವಾಕ್ಷಾ = ಯಸ್ಯಾಸ್ತಾ ಪುರಮಯೋಧ್ಯಾಮವಿಶತ್=ಪ್ರವಿಶ್ಟವಾನ್—ಉಪಕಾರ್ಯ=ರಾಜಯೋಗ್ಯಂ ಪಟಭವನಮ್, ಡೇರೆ, ಶಿಬಿರ.

# ದ್ವಾದಶಃ ಸರ್ಗಃ

## ಹನ್ನೆರಡನೆಯ ಸರ್ಗ

**1. ನಿರ್ವಿಷ್ಟವಿಷಯಸ್ನೇಹಃ ಸದಶಾಂತಮುಪೇಯಿವಾನ್ ।**
**ಆಸೀದಾಸನ್ನನಿರ್ವಾಣಃ ಪ್ರದೀಪಾರ್ಚಿರಿವೋಷಸಿ ॥ ೧ ॥**

ದಶರಥನೀಗ ವಾರ್ಧಕ್ಯವನ್ನು ಹೊಂದಿರುವ ಧರಾಧೀಶನು. ಜೀವನದ ಕೊನೆಯ ಘಟ್ಟವನ್ನು (ಎಲ್ಲೆಯನ್ನು) ಮುಟ್ಟಿದ್ದನು. ಜೀವನದ ಭೋಗಭಾಗ್ಯಗಳನ್ನು ಉಂಡವನು. ಸ್ನೇಹ, ಅನುರಾಗದಿಂದ ಪುಷ್ಕಲಗೊಂಡು ತುಂಬುಜೀವನ ನಡೆಸಿದ ಜೀವ ಇದೀಗ ಜೀವನದಿ ಬತ್ತುತ್ತಾ ಬಂದಿದೆ. ಜೀವನ ಎಂಬ ಎಣ್ಣೆ ಆರುತ್ತಾ ಬಂದಿದೆ. ರಾತ್ರಿಯಿಡೀ ಉರಿದ ದೀಪ ಬೆಳಗ್ಗಿನ ಜಾವದಲ್ಲಿ (ಹೊತ್ತಾರೆ) ಮಂಕಾಗಿ, ಮಬ್ಬಾಗಿ ಕಾಣಿಸುವಂತೆ ಎಣ್ಣೆ ಆರುತ್ತಾಬಂದಿದೆ. ಇನ್ನೇನು ನಂದಿಹೋಗುವುದರಲ್ಲಿದೆ ಎನ್ನುವಂತೆ (ಪೊಳ್ತರೆಯ ದೀಪದುರಿವೋಲ್) ಬತ್ತಿ ಪೂರ್ತಿ ಹೊತ್ತಿ ಮುಗಿಯುತ್ತಾ ಬಂದಿದೆ.

ಅವನೀಗ ಮಹಾಸ್ನಾನಕ್ಕೆ (ಗಜಸ್ನಾನ, ಮಹಾಮಸ್ತಕಾಭಿಷೇಕ) (ಕೊನೆಯ ಸ್ನಾನ) ತಯಾರಾಗಿದ್ದಾನೆ. ನಿರ್ವಾಣವನ್ನು, ಮೋಕ್ಷವನ್ನು ಬಯಸಿ ಸಂಸಾರಬಂಧನವನ್ನು ಕಳಚಿ, ಬಂಧನವನ್ನು ಸಡಿಲಿಸಿ, ಒಂದೊಂದೇ ಕಟ್ಟುಗಳನ್ನು (ಪಾಶ, ಹಗ್ಗ) ಕಳಚಿ (ಹರಿದೊಗೆದು) ಮುಕ್ತಿಧಾಮಕ್ಕೆ ನಡೆಯಲಿದ್ದಾನೆ. ಅವನು ನಿರ್ವಾಣವನ್ನು ಹೊಂದಲಿದ್ದಾನೆ. ಪ್ರಪಂಚದಿಂದ ನಿವೃತ್ತಿಯಾಗಲಿದ್ದಾನೆ. ಅವನ ಕರ್ಮಕಾಂಡ ಅಥವಾ ಕರ್ಮಯೋಗ ಮುಗಿದಿದೆ ಯಥಾವತ್ತಾಗಿ.

ಸ್ನೇಹಯಂತಿ, ಪ್ರೀಣಯಂತಿ ಪುರುಷಮಿತಿ ಸ್ನೇಹಾಃ—ಏವ ಸ್ನೇಹಾಃ ನಿರ್ವಿಷ್ಟಾ= ಮುಕ್ತಾ—ವಿಷಯಸ್ನೇಹಾ ಯೇನ ಸ ತಥೋಕ್ತಃ—''ನಿರ್ವೇಶೋ ಭೃತಿಭೋಗಯೋಃ'' ಇತಿ ವಿಶ್ವಃ—ಉಷಸಿ ಪ್ರದೀಪಾರ್ಚಿರಿವ = ದೀಪಜ್ವಾಲೇವ—ಆಸನ್ನಂ, ನಿರ್ವಾಣಂ, =ಮೋಕ್ಷೋ ಯಸ್ಯ ಸ ತಥೋಕ್ತಃ—ಆಸೀತ್–''ವಿಷಯಃ ಸ್ಯಾದಿಂದ್ರಿಯಾರ್ಥೇ ದೇಶೇ ಜನಪದೇऽಪಿ ಚ'' ಇತಿ ವಿಶ್ವಃ—''ಸ್ನೇಹಸ್ತೈಲಾದಿಕರಸೇದ್ರವೇ ಸ್ಯಾತ್ಸೌಹೃದೇऽಪಿ ಚ'' ಇತಿ ವಿಶ್ವಃ—''ದಶಾವರ್ತ್ಯಾವವಸ್ಥಾಯಾವರ್''—ಇತಿ ವಿಶ್ವಃ—''ನಿರ್ವಾಣಂ ವಿನಾಶಃ — ನಿರ್ವಾಣಂ, ನಿರ್ವೃತ್ತೌ, ಮೋಕ್ಷೋ, ವಿನಾಶೇ ಗಜಮಜ್ಜನೇ'' ಇತಿ ಯಾದವಃ ॥ ನಿರ್ವಿಷ್ಟ= ವಿಷಯ ಮತ್ತು ಸ್ನೇಹ ವಿರೋಧಾರ್ಥದಲ್ಲಿ—ನಿರ್ವಿಷ್ಟಾಃ ವಿಷಯಾಃ ಏವ ಸ್ನೇಹಾ ಯೇನ—ಇಂದ್ರಿಯಸುಖ, ಅವುಗಳಿಂದಾಗುವಸುಖ—ಅಂತಮ್=ವಾರ್ಧಕಮ್ —ದಶಾ=ವರ್ತಿಕಾ=ಬತ್ತಿ, ಆಸನ್ನನಿರ್ವಾಣಃ=ನಿರ್ವಾಣ (ನಿರ್ + ವಾ)—ನಿರ್ವಾಣ, ದೀಪ, ಅಗ್ನಿ, ಮನುಷ್ಯೋ ವಾ—ದಶಾಂತಮ್ (ಶ್ಲೇಷಾಲಂಕಾರ,ಶ್ಲೇಷೆ)–ಅನುಷ್ಟುಪ್ ಛಂದಸ್ಸು ॥

**2. ತಂ ಕರ್ಣಮೂಲಮಾಗತ್ಯ ರಾಮೇ ಶ್ರೀರ್ನ್ಯಸ್ಯತಾಮಿತಿ ।**
**ಕೈಕೇಯೀ ಶಂಕಯೇವಾಹ ಪಲಿತಚ್ಛದ್ಮನಾ ಜರಾ ॥ ೨ ॥**

ದಶರಥನ ತಲೆಯ ಕೂದಲೀಗ ನರೆತಿದೆ. ಅವನೀಗ ಮುದುಕ (ಅಜ್ಜ). ಕೂದಲು ಬಿಳಿಯದಾಗಿದೆ. ಶುಕ್ಲಬಣ್ಣದಿಂದ ಎಸೆದಿದೆ (ಬೆಳ್ಳಿಕೂದಲು). ಜರೆಯು ಆವರಿಸಿದೆ. ಆ ಜರೆ ಕೂದಲು (ನರೆಕೂದಲು) ಕಿವಿಯವರೆಗೂ ಹರಡಿದೆ. ಅದೀಗ ದಶರಥನ ಕಿವಿಯಲ್ಲಿ ಪಿಸುಗುಟ್ಟಿ ಹೇಳುತ್ತಿದೆ : "ಅಯ್ಯಾ ಮಹಾಸ್ವಾಮಿ, ಮುದಿತನ ಬಾಗಿಲಲ್ಲಿ ಬಂದು ನಿಂತಿದೆ. ಬಾಗಿಲು ಬಡಿಯುತ್ತಿದೆ (ಮಾರಾಪುಕಟ್ಟು ಎಂದು). ನೀನು ನಿನ್ನ ಪ್ರಿಯಪುತ್ರನಾದ ಶ್ರೀರಾಮನಲ್ಲಿ ಸಮಸ್ತ ರಾಜ್ಯದ ಸಿರಿಸಂಪದವನ್ನು ಇರಿಸಿ ನಿವೃತ್ತನಾಗು. ಅವನಿಗೆ ಯುವರಾಜರಾಜ್ಯಪಟ್ಟಾಭಿಷೇಕ ಮಾಡಿಸಿ ನಿಶ್ಚಿಂತನಾಗಿರು." ಹೀಗೆ ಕಿರಿಯರಾಣಿ ಕೈಕೇಯಿಯ ಬೆದರಿಕೆಗೆ ಬೆದರಿ ಜರೆಕೂದಲಿನ ನೆವದಿಂದ ಜರೆಯು "ರಾಜ್ಯಲಕ್ಷ್ಮಿಯನ್ನು (ರಾಜ್ಯಾಧಿಕಾರ, ಪರಮಾಧಿಕಾರ) ರಾಮನಿಗೆ ಒಪ್ಪಿಸು" ಎಂಬ ಹಿತೋಕ್ತಿಯನ್ನು (ಹಿತನುಡಿ) ನುಡಿದು ಎಚ್ಚರಿಸಿದಳು (ರಾಮನೊಳು ಸಿರಿಯನಿರಿಸೆಂದು).

ಜರಾ = ಕೇಶಾದಿಶೌಕ್ಲ್ಯಸ್ಯ ಛದ್ಮನಾಮಿಷೇಣ—"ಪಲಿತಂ ಜರಸಾ ಶೌಕ್ಲ್ಯಂ ಕೇಶಾದೌ" ಇತ್ಯಮರಃ—ಕರ್ಣಮೂಲ = ಕರ್ಣೋಪಕಂಠಮ್—ಶ್ರೀರಾಜ್ಯಲಕ್ಷ್ಮೀರ್ನ್ಯಸ್ಯತಾಂ = ನಿಧೀಯತಾಮಿತಿ—ದಶರಥೋ "ವೃದ್ಧೋಽಹಮ್" ಇತಿ ವಿಚಾರ್ಯ ರಾಮಯೌವರಾಜ್ಯಾಭಿಷೇಕಂ ಚಕಾಂಕ್ಷೇತ್ಯರ್ಥಃ—ಪಲಿತಛದ್ಮನಾ=ಜರೆಕೂದಲಿನ ನೆವದಿಂದ, ಅಪಹನುತಿ=ಮುಚ್ಚುಮರೆಯಾಗಿಡುವುದು. ಉತ್ಪ್ರೇಕ್ಷಾಲಂಕಾರ ॥

**3. ಸಾ ಪೌರಾನ್ ಪೌರಕಾನ್ತಸ್ಯ ರಾಮಸ್ಯಾಭ್ಯುದಯಶ್ರುತಿಃ ।**
**ಪ್ರತ್ಯೇಕಂ ಹ್ಲಾದಯಾಂ ಚಕ್ರೇ ಕುಲ್ಯೇವೋದ್ಯಾನಪಾದಪಾನ್ ॥ ೩ ॥**

ರಾಮನ ಅಭಿಷೇಕವಾರ್ತೆಯು ಜನಜನಿತವಾಯ್ತು. ಜನಗಳಿಗೆ ಅದು ಬಹುಪ್ರಿಯವಾಗಿತ್ತು. ಶ್ರೀರಾಮನು ಅವರ ಆರಾಧ್ಯದೈವವಾಗಿದ್ದನು. ಅವನ ಅಭ್ಯುದಯವನ್ನು, ಏಳಿಗೆಯನ್ನು, ಉತ್ಕರ್ಷೆಯನ್ನು ಆ ಪೌರಜನರು (ನಾಗರಿಕರು), ಆಬಾಲವೃದ್ಧರು, ಯುವಕರು, ಯುವತಿಯರು, ಹುಡುಗರು, ಮಕ್ಕಳು, ಸರ್ವಜನರು ಬಯಸಿದ್ದರು. ಆ ವಾರ್ತೆಯಿಂದ ಅವರೆಲ್ಲರೂ ಮುದಗೊಂಡರು. ಹೇಗೆ ಕಾಲುವೆಯ ನೀರು ಉದ್ಯಾನದಲ್ಲಿ ಸಮಸ್ತ ಗಿಡಮರಗಳನ್ನು (ಸಸ್ಯಕೋಟಿಯನ್ನು), ಉದ್ಯಾನವೃಕ್ಷಗಳನ್ನು ಮುದಗೊಳಿಸುವಂತೆ ಅವರು ಮುದಗೊಂಡರು.

ಕುಲ್ಯಾ = ಕೃತ್ರಿಮಾ ಸರಿತ್—"ಕುಲ್ಯಾಽಲ್ಪಾ ಕೃತ್ರಿಮಾ ಸರಿತ್" ಇತ್ಯಮರಃ—ಪಾದಪ = ಮರಮಟ್ಟು, ಸಸ್ಯಾಳಿ—ಪೌರಾನ್ ಪ್ರತ್ಯೇಕಂ ಹ್ಲಾದಯಾಂಚಕ್ರೇ—ಪೌರಕಾನ್ತಸ್ಯ = ಪೌರಾಣಾಂ ಕಾಂತಃ ತಸ್ಯ—ಕುಲ್ಯಾ = ಕುಲ್ಯಾ ಸಾಧುಃ—ಕುಲ + ಯತ್ ॥ ಉಪಮಾಲಂಕಾರ ॥

**4. ತಸ್ಯಾಭಿಷೇಕಸಂಭಾರಂ ಕಲ್ಪಿತಂ ಕ್ರೂರನಿಶ್ಚಯಾ ।**
**ದೂಷಯಾಮಾಸ ಕೈಕೇಯೀ ಶೋಕೋಷ್ಣೈಃ ಪಾರ್ಥಿವಾಶ್ರುಭಿಃ ॥ ೪ ॥**

ಆದರೆ ಆ ಶುಭವಾರ್ತೆಯು ಮೋಹದ ರಾಣಿ ಕೈಕೆಗೆ ಮಾತ್ರ ಶೂಲಪ್ರಾಯವಾಗಿತ್ತು (ವ್ಯತ್ಯಯವಾಗಿತ್ತು), ಕರ್ಣಕಠೋರವಾಗಿತ್ತು. ಕರ್ಣಕರ್ಕಶಮಾತ್ರವಲ್ಲ ಅತ್ಯಂತ ಕ್ರೂರವಾಗಿತ್ತು. ಆ ಹೆಮ್ಮಾರಿಯು ಅಭಿಷೇಕದ ವಸ್ತುನಿಚಯವನ್ನು (ಪರಿಕರವನ್ನು), ಸಂಭಾರ ಜೀನಸುಗಳನ್ನು ತನ್ನ ಬಿಸಿಯಾದ ಕಂಬನಿಯ ಜಲದಿಂದ. ಬಾಷ್ಪವಾರಿಯಿಂದ, ಕಣ್ಣೀರಿನಿಂದ ಮಲಿನಗೊಳಿಸಿದಳು. ತನ್ನ ದುಃಖವನ್ನು ತಡೆಯದಾದಳು. ಕಣ್ಣೀರಧಾರೆಯಿಂದ ಅಶುದ್ಧಗೊಳಿಸಿದಳು. ಎಡೆಬಿಡದೆ ಸುರಿಯುತ್ತಿರುವ, ಬಿಸಿಯಾದ ಕಣ್ಣೀರಧಾರೆಯಿಂದ ಎಲ್ಲವನ್ನೂ ಮಲಿನಗೊಳಿಸಿದಳು. ಎಲ್ಲವನ್ನೂ ಪ್ರತಿಬಂಧಿಸಿದಳು (ಶೋಕೋಷ್ಣವಾದಂಥ ಪಾರ್ಥಿವಾಶ್ರುಗಳಿಂದ) (ಒಲಿದರೆ ನಾರಿ ಮುನಿದರೆ ಮಾರಿ ಎಂಬಂತೆ).

ಶೋಕೋಷ್ಣೈಃ = ಪಾರ್ಥಿವಾಶ್ರುಭಿರ್ದೂಷಯಾಮಾಸ — ಸ್ವದುಃಖಮೂಲೇನ ರಾಜಶೋಕೇನ ಪ್ರತಿಬಬಂಧೇತ್ಯರ್ಥಃ ॥

**5. ಸಾ ಕಿಲ ಶ್ವಾಸಿತಾ ಚಂಡೀ ಭರ್ತ್ರಾ ತತ್ ಸುಶ್ರುತೌ ವರೌ ।**
**ಉದ್ವವಾಮೇಂದ್ರಸಿಕ್ತಾ ಭೂಃ ಬಿಲಮಗ್ನಾವಿವೋರಗೌ ॥ ೫ ॥**

ಕೈಕೇಯಿಯು ಚಂಡಿಯಾದಳು. ಹಟ, ಗರ್ವ, ಮಾತ್ಸರ್ಯ (ನಂಜು) (ನಂಜುಂಡಿಯಾದಳು) ಮತ್ತು ಕೋಪದಿಂದ ಕೂಡಿ ಮಂಚದಲ್ಲಿ ಹಾವಿನಂತೆ ಹೊರಳಾಡುತ್ತಾ ತನಗೆ ಈ ಹಿಂದೆ ಮಾತುಕೊಟ್ಟಂತೆ ಎರಡು ವರಗಳನ್ನು ಕೊಡುವಂತೆ ಜ್ಞಾಪಿಸಿದಳು. ದಶರಥನು ಶ್ರೀರಾಮಚಂದ್ರನ ಆಣೆಗೂ ಕೊಡುವೆನೆಂದು ಭರವಸೆಯಿತ್ತನು. ಇಂದ್ರನ ಮೇಘಗಳು ಹಸನಾದ ಮಳೆಬಂದ ಬಳಿಕ ಭೂಮಿಯು ಹದವಾಗುವುದು. ಆಗ ಹುತ್ತದಲ್ಲಿ (ವಲ್ಮೀಕದಲ್ಲಿ) ಅಡಗಿದ್ದ ಎರಡು ಹಾವುಗಳು ವರಗಳ ರೂಪದಿಂದ ಹೊರಬಂದುವು. ಕೈಕೇಯಿಯು ತನ್ನ ಭರ್ತೃವಿನೊಡನೆ ಅತ್ಯಂತ ಕ್ರೂರವಾದ ಎರಡು ವರಗಳನ್ನು ಬೇಡಿದಳು. ಹುತ್ತದ ರೂಪದಲ್ಲಿದ್ದ ಅವಳ ಬಾಯಿಯಿಂದ, ಹಾವಿನ ರೂಪದ ಎರಡು ವರಗಳು ಹೊರಬಂದುವು. ಕೈಕೇಯಿ ಚಂಡಿಹಿಡಿದಳು. ಅಪ್ಪಯ್ಯ ಎಂದರೂ ಬಿಡದೆ ಗಂಡನನ್ನು ಕಾಡಿ ಬೇಡಿದಳು (ಕುಂಬಾರನಿಗೆ ವರುಷ, ದೊಣ್ಣೆಗೆ ನಿಮಿಷ ಎಂಬಂತೆ).

ಚಂಡ್ಯತಿಕೋಪನಾ—"ಚಂಡಸ್ತ್ವತ್ಯಂತಕೋಪನಃ" ಇತ್ಯಮರಃ—ತೇನ ಭರ್ತ್ರಾ ಸಂಶ್ರುತೌ—ಪ್ರತಿಜ್ಞಾತೌ ವರೌ—ಸಿಕ್ತಾಭಿಸ್ಸೃಷ್ಟಾ—ವಲ್ಮೀಕಾದೌ ಮಗ್ನಾವುರಗಾವಿವ—ಉದ್ವವಾಮೋಜ್ಜಗಾರ ॥

**6. ತಯೋರೇಕ್ಕೆ ಚತುರ್ದಶೈಕೇನ ರಾಮಂ ಪ್ರವ್ರಾಜಯತ್ಸಮಾಃ ।**
**ದ್ವಿತೀಯೇನ ಸುತಸ್ಯೈಚ್ಛತ್ ವೈಧವ್ಯೈಕ ಫಲಾಂ ಶ್ರಿಯಮ್ ॥ ೬ ॥**

ಅವಳು ಆ ಕಿರಿಯ ರಾಣಿ ಕೈಕಾದೇವಿ ಆತ್ಮಘಾತುಕವಾದ ಎರಡು ವರಗಳನ್ನು ಅನುಗ್ರಹಿಸೆಂದು (ಕರುಣಿಸೆಂದು) ತನ್ನ ಭರ್ತೃವನ್ನು (ಗಂಡನನ್ನು) ಯಾಚಿಸಿದಳು. ಒಂದರಿಂದ—ಈರೇಳು ಹದಿನಾಲ್ಕು ವರ್ಷ ಪರ್ಯಂತ ಶ್ರೀರಾಮಚಂದ್ರನನ್ನು ಕಾಡಿಗೆ ಕಳುಹಿಸುವಂತೆ ಬೇಡಿದಳು. ಎರಡನೆಯ ವರದಿಂದ ತನ್ನ ಮಗನಾದ ಭರತನಿಗೆ ರಾಜ್ಯ ಸಂಪದವನ್ನೂ, ತನಗೆ ವೈಧವ್ಯಜೀವನದ ಕಹಿಫಲವನ್ನು ತಾನು ಉಣ್ಣುವಂತೆಯೂ

ಬೇಡಿಕೊಂಡಳು. ಅದರ ಫಲವಾಗಿ ಅವಳಿಗೆ ಪತಿವಿಯೋಗ, ಮಕ್ಕಳಿಗೆ ಪಿತೃವಿಯೋಗ, ದಶರಥನ ಪ್ರಾಣತ್ಯಾಗ ಸಂಪ್ರಾಪ್ತವಾಯಿತು. ತನಗೆ ಕೇಡನ್ನು ತಾನೇ ಬಗೆದಳು. ತನ್ನನ್ನು ತಾನು ಕೊಂದುಕೊಳ್ಳುವ, ಆತ್ಮಹತ್ಯೆಯ, ಆತ್ಮಘಾತುಕದ ವರಗಳವು.

ಪ್ರಾವ್ರಾಜಯತ್ = ಪ್ರಾವಾಸಯತ್—ಸುತಸ್ಯ = ಭರತಸ್ಯ—ವೈಧವ್ಯಕಫಲಾಂ = ಸ್ವವೈಧವ್ಯಪುತ್ರಫಲಾಮ್ ॥

**7. ಪಿತ್ರಾ ದತ್ತಾಂ ರುದನ್ ರಾಮಃ ಪ್ರಾಙ್ಮಹೀಂ ಪ್ರತ್ಯಪದ್ಯತ ।**
**ಪಶ್ಚಾದ್ವನಾಯ ಗಚ್ಛೇತಿ ತದಾಜ್ಞಾಂ ಮುದಿತೋಽಗ್ರಹೀತ್ ॥ ೭ ॥**

ಅಂದು ದಶರಥನು ಸಾಮ್ರಾಜ್ಯವನ್ನು ಅರ್ಪಿಸಿದಾಗ ವಿನೀತನಾಗಿ, ಕಣ್ಣುಗಳಲ್ಲಿ ಬಾಷ್ಪಗಳನ್ನು ಸುರಿಸುತ್ತಾ ಶ್ರೀರಾಮಚಂದ್ರನು ಸ್ವೀಕರಿಸಿದನು. ಆದರೆ ಇಂದು "ನೀನು ವನಕ್ಕೆ ನಡೆದು ನನ್ನ ಸತ್ಯಪ್ರತಿಜ್ಞೆಯನ್ನು ಪಾಲಿಸು" ಎಂದಾಗ ಸಂತಸದಿಂದ ವನಕ್ಕೆ ನಡೆದನು. ತಂದೆಯ ಆಜ್ಞೆಯನ್ನು ಪಾಲಿಸುವುದರಲ್ಲಿ ಅದೆಂತಹ ಆತುರವೋ ಆ ಪರಮ ಪುರುಷನಿಗೆ. ಕೈಕೇಯಿಯ ಆ ಮಾತಿಗೆ ಕಟ್ಟುಬಿದ್ದು ಚಡಪಡಿಸುತ್ತಿದ್ದ ತನ್ನ ತಂದೆಯನ್ನು ಮಾತಿನ ಬಂಧನದಿಂದ ಬಿಡಿಸಲು ತನ್ನ ಸರ್ವಸ್ವವನ್ನು ತ್ಯಾಗಮಾಡಿ, ತಂದೆಯ ಆಜ್ಞೆಯನ್ನು ತಲೆಯಲ್ಲಿ ಧರಿಸಿ (ಶಿರಸಾವಹಿಸಿ) ಕೂಡಲೇ ವನಕ್ಕೆ ನಡೆದನು. ಏನೊಂದೂ ದುಃಖವಿಲ್ಲದೆ,ನಗುನಗುತ್ತಲೇ ವನಕ್ಕೆ ನಡೆದನು. ಪಿತೃ ಆಜ್ಞೆಯ ಪಾಲನೆಯು ಸಾಮ್ರಾಜ್ಯಕ್ಕಿಂತ ಹೆಚ್ಚು ಲಾಭದಾಯಕವೆಂದು ಪರಿಗಣಿಸಿದ್ದನು ಆ ಮಹಾನುಭಾವ.

ರುದನ್ ಪ್ರತ್ಯಪದ್ಯತ = ಅಂಗೀಚಕಾರ = ಸ್ವತ್ಯಾಗದುಃಖಾದಿತಿ ಭಾವಃ—ತದಾಜ್ಞಾಂ = ಪಿತ್ರಾಜ್ಞಾಂ — ಮುದಿತೋಽಗ್ರಹೀತ್ = ಪಿತ್ರಾಜ್ಞಾಕರಣಲಾಭಾದಿತಿ ಭಾವಃ — ರುದನ್ = ಕಣ್ಣೀರು ಸುರಿಸುತ್ತಾ.

**8. ದಧತೋ ಮಂಗಲಕ್ಷೌಮೇ ವಸಾನಸ್ಯ ಚ ವಲ್ಕಲೇ ।**
**ದದೃಶುರ್ವಿಸ್ಮಿತಾಸ್ತಸ್ಯ ಮುಖರಾಗಂ ಸಮಂ ಜನಾಃ ॥ ೮ ॥**

ಜನರು ಯುವರಾಜನಾದ ಶ್ರೀರಾಮನನ್ನು ಕಂಡಾಗ ಅವನು ರತ್ನಾಭರಣಗಳಿಂದ ಅಲಂಕೃತ ಹಸನ್ಮುಖನಾದ (ಮಂದಸ್ಮಿತನಾದ) ಶ್ರೀರಾಮನನ್ನು ಕಂಡಿದ್ದರು, ಆದರೆ ಇದೀಗ ನಾರುಡೆಯುಟ್ಟು, ಆಭರಣಗಳಿಲ್ಲದೆ ವನವಾಸಕ್ಕೆ ತೆರಳುವಾಗ ಮಂದಸ್ಮಿತನಾದ ರಾಘವನನ್ನು ಕಂಡು ಅಚ್ಚರಿಗೊಂಡರು. ಒಂದಿಷ್ಟು ಬೇಸರವಿಲ್ಲದೆ ಅಚಲವಾದ ಧ್ಯೇಯೋದ್ದೇಶಗಳಿಂದ ರಘುವರನು ನಗುನಗುತ್ತಲೇ ಕಾಡಿಗೆ ನಡೆದನು. ಒಂದೇ ತೆರನಾದ ಮುಖರಾಗವನ್ನು (ಮುಖದ ವರ್ಣ ಮುಖಭಾವ) ಕಂಡ ಅಯೋಧ್ಯೆಯ ಜನರು ಬೆರಗಾದರಂದು, ಸುಖದುಃಖವನ್ನು ಒಂದೇ ತರದ ಭಾವನೆಯಿಂದ ಸ್ವೀಕರಿಸಿದ್ದನು ಸ್ಥಿತಪ್ರಜ್ಞನಾದ ಕೋಸಲರಾಮನು.

ಸಮಮ್ = ಏಕವಿಧಮ್—ಮುಖರಾಗಂ = ಮುಖವರ್ಣೇ— ಸುಖದುಃಖಯೋರವಿಕೃತ ಇತಿ ಭಾವಃ ॥

**9. ದಧತೋ ಮಂಗಲಕ್ಷೌಮೇ ವಸಾನಸ್ಯ ಚ ವಲ್ಕಲೇ ।**
**ದದೃಶುರ್ವಿಸ್ಮಿತಾಸ್ತಸ್ಯ ಮುಖರಾಗಂ ಸಮಂಜನಾಃ ॥ ೯ ॥**

ಪಿತೃವಾಕ್ಯಪರಿಪಾಲನಾರ್ಥವಾಗಿ ರಘುರಾಮನು ಸಮಸ್ತ ಸಾಮ್ರಾಜ್ಯವನ್ನು ಸಂತೋಷದಿಂದ ಪರಿತ್ಯಾಗಮಾಡಿ ಸೀತಾ, ಲಕ್ಷ್ಮಣರ ಜೊತೆಯಲ್ಲಿ ಕಾಡಿಗೆ ನಡೆದನು. ಅವನು ಹದಿನಾಲ್ಕು ವರ್ಷ ವನವಾಸಕ್ಕೆಂದು ದಂಡಕಾರಣ್ಯಕ್ಕೆ ಹೊರಟನು. ಒಂದೇ ಒಂದು ಚಕಾರವನ್ನು ಎತ್ತದೆ ಅಂಗೀಕರಿಸಿ ನಡೆದನು. ದುಃಖಕೋಪವನ್ನು ಪ್ರಕಟಿಸಲಿಲ್ಲ. ಅದು ತನ್ನ ಪಿತೃವಿನ ಆಜ್ಞೆ. ತನ್ನ ತಂದೆ ಸತ್ಯವಚನಭ್ರಷ್ಟನಾಗದಂತೆ ಸೀತಾಲಕ್ಷ್ಮಣರ ಜೊತೆಯಲ್ಲಿ ದಂಡಕಾರಣ್ಯವನ್ನು ಪ್ರವೇಶಿಸಿದ ಪಿತೃಭಕ್ತಿಯನ್ನು ಪಾಲಿಸುತ್ತ ಪ್ರತಿಯೊಬ್ಬ ಮಾನವನ ಸಾಧುಜನರ ಮನವನ್ನು, ದಂಡಕಾರಣ್ಯವನ್ನು ಏಕಕಾಲದಲ್ಲಿ ಆ ಮಹಾತ್ಮನು ಒಳಹೊಕ್ಕನು (ಪ್ರವೇಶಿಸಿದನು); ಸತ್ಯವಿಖ್ಯಾತನೆನಿಸದೆ ಎಲ್ಲರ ಹೃದಯವನ್ನು (ಜನಮನವನ್ನು) ಮತ್ತು ದಂಡಕವನವನ್ನು ಒಮ್ಮೆಯೇ ಪ್ರವೇಶಿಸಿದನು.

ದಂಡಕಾರಣ್ಯವು ವಿಂಧ್ಯಾಪರ್ವತ ಮತ್ತು ಕೃಷ್ಣಾನದಿಯ ಮಧ್ಯೆ ಆವರಿಸಿರುವ ದಟ್ಟವಾದ ಕಾಡು. ಚಿತ್ರಕೂಟವು ತ್ರಿವೇಣೀಸಂಗಮದಿಂದ (ಪ್ರಯಾಗ ಅಥವಾ ಅಲ್ಲಹಾಬಾದಿನಿಂದ 95 ಮೈಲು—142 ಕಿ.ಮಿ.) ವಾಯುವ್ಯಕ್ಕಿದೆ. ಚಿತ್ರಕೂಟ ಹಾಗೂ ಅತ್ರಿ ಋಷಿಗಳ ಆಶ್ರಮವನ್ನು ತೊರೆದು ಸೀತಾರಾಮರು ದಕ್ಷಿಣಕ್ಕೆ ಬಂದರು. ಅವರು ನರ್ಮದೆಯನ್ನು ದಾಟಿ "ಪಂಚಾಪ್ಸರ" ಐದು ಮಂದಿ ಜಲದೇವತೆಗಳ (ಜಲಕನ್ಯೆಯರ) ಸರೋವರದ ಬಳಿ ಬಂದು ಕೊಂಚಕಾಲ ಅಲ್ಲಿ ತಂಗಿದರು. ಅಲ್ಲಿಯೇ ಗೋದಾವರಿಯ ಬಳಿ ಪಂಚವಟಿಯಲ್ಲಿ ಪರ್ಣಕುಟೀರವನ್ನು ಕಟ್ಟಿ ವಾಸಿಸತೊಡಗಿದರು. ದಂಡಕಾರಣ್ಯಕ್ಕೆ ಜನಸ್ಥಾನವೆಂಬ ಇನ್ನೊಂದು ಹೆಸರೂ ಇದೆ. ಶೂರ್ಪನಖಿಯ ಮೂಗು ಕೊಯ್ದ ಇಂದಿನ ನಾಸಿಕ್. ಇದೊಂದು ಪುಣ್ಯಕ್ಷೇತ್ರ (ಮಹಾರಾಷ್ಟ್ರದಲ್ಲಿದೆ).

ಗುರುಂ = ಪಿತರಂ—ಅಲೋಪಯನ್ನಭ್ರಂಶಯನ್—ಸೀತಾಲಕ್ಷ್ಮಣಯೋಃ ಸಖೇತಿ ವಿಗ್ರಹಃ—ಸತಾಂ ಮನಃ = ಪ್ರತ್ಯೇಕಂ ವಿವೇಶ ॥

**10. ರಾಜಾಪಿ ತದ್ವಿಯೋಗಾರ್ತಃ ಸ್ಮೃತ್ವಾ ಶಾಪಂ ಸ್ವಕರ್ಮಜಮ್ ।**
**ಶರೀರತ್ಯಾಗಮಾತ್ರೇಣ ಶುದ್ಧಿಲಾಭಮಮನ್ಯತ ॥ ೧೦ ॥**

ಪುತ್ರವಿಯೋಗಪೀಡಿತನಾದ ಮಹಾರಾಜನು ತಾನು ಈ ಹಿಂದೆ ಎಸಗಿದ ಮುನಿಪುತ್ರನ ಕ್ರೂರ ಮರಣವನ್ನು ನೆನೆದನು. ತಾನು ಮಾಡಿದ ಮುನಿಪುತ್ರವಧಾರೂಪದ ತಪ್ಪಿಗೆ ತನಗೆ ಮರಣವೊಂದೇ ಬಿಡುಗಡೆ (ಪ್ರಾಯಶ್ಚಿತ್ತ) ಎಂದು ಅರಿತನು. ತಾಂಡವಮುನಿಯು ಕಣ್ಣೀರಿನ ಕೈಗಳಿಂದ ತನ್ನನ್ನು ಈ ಹಿಂದೆ ಶಪಿಸಿದುದನ್ನು ಅವನು ಬಾರಿಬಾರಿಗೂ ನೆನೆದು ಪರಿತಪಿಸಿದನು, ಶರೀರತ್ಯಾಗವೆಂಬ ಸಂಸ್ಮರಣಮಾತ್ರದಿಂದ ದೊರಕುವ ಲಾಭವನ್ನು ನೆನೆದನು. ದೇಹತ್ಯಾಗದಿಂದ ತನ್ನ ಪಾಪರಾಶಿಯು ಶುದ್ಧವಾಗಿ ಪ್ರಾಯಶ್ಚಿತ್ತವು ದೊರೆಯುವುದೆಂಬ ಘನವಾದ ಭರವಸೆಯಲ್ಲಿ ತನ್ನ ಆತ್ಮಶಕ್ತಿಯನ್ನು ಹೆಚ್ಚಿಸಿಕೊಂಡನು. ತನ್ನ ಮರಣವನ್ನು ತಾನು ಅಪ್ಪಿಕೊಳ್ಳಲು (ಸ್ವಾಗತಿಸಲು) ಸಿದ್ಧನಾದನು (ತಚ್ಛರೀರತ್ಯಾಗಸಂಸ್ಮರಣಮಾತ್ರದೊಳೆ).

ತದ್ವಿಯೋಗಾರ್ಹಃ = ಪುತ್ರವಿಯೋಗದುಃಖಿತೋ—ಸ್ವಕರ್ಮಣಾ ಮುನಿಪುತ್ರವಧ ರೂಪೇಣ ಜಾತಃ—ಸ್ವಕರ್ಮಜಸ್ತಂ ಶಾಪಂ ಪುತ್ರಶೋಕಜಂ—ಶರೀರತ್ಯಾಗಮಾತ್ರೇಣ = ದೇಹತ್ಯಾಗೇನೈವ—ಶುದ್ಧಿಲಾಭು = ಪ್ರಾಯಶ್ಚಿತ್ತಂ ॥

**11. ವಿಪ್ರೋಷಿತಕುಮಾರಂ ತತ್ ರಾಜ್ಯಮಸ್ತಮಿತೇಶ್ವರಮ್ ।**
**ರಂಧ್ರಾನ್ವೇಷಣದಕ್ಷಾಣಾಂ ದ್ವಿಷಾಮಾಮಿಷತಾಂ ಯಯೌ ॥ ೧೧ ॥**

ದೇಶದ ಮಹಾನಾಯಕನಾದ ದಶರಥಸಾರ್ವಭೌಮನ ಮರಣದಿಂದ (ಅಸ್ತಮಿಸಲು) ರಾಜ್ಯವು ಅನಾಥವಾಯಿತು (ಬಡವಾಯಿತು). ಇತ್ತ ಮಕ್ಕಳೂ ಇಲ್ಲ, ಅತ್ತ ರಾಜನೂ ಇಲ್ಲ. ಭರತಶತ್ರುಘ್ನರು ದೂರದ ಊರಿನಲ್ಲಿರುವ ಮಾವನ ಮನೆಯಲ್ಲಿದ್ದರು. ಇದನ್ನೆಲ್ಲಾ ಅರಿತ ಶತ್ರುಗಳು (ಹಿತಶತ್ರುಗಳು) ರಾಜಧಾನಿಯು ಬಲಹೀನವಾದುದನ್ನು ತಿಳಿದು ತಮ್ಮ ಬೇಳೆಬೇಯಿಸಿಕೊಳ್ಳಲು, ಸ್ವಾರ್ಥಸಾಧನೆಗಾಗಿ ಕಾರ್ಯತತ್ಪರರಾದರು. ದುರ್ಬಲವಾದ ರಾಜ್ಯವನ್ನು ಕಬಳಿಸಲು (ಭೋಗಿಸಲು) ಶತ್ರುರಾಜರು ಹೊಂಚುಹಾಕು ತ್ತಿರುವುದು ಸ್ವಾಭಾವಿಕವಷ್ಟೆ. ಅವರಿಗೆ ಇದೀಗ ನೂರಾರು ರಂಧ್ರಗಳು ಅಥವಾ ಛಿದ್ರಗಳು (ಬಿರುಕುಗಳು) ಗೋಚರಿಸಿದುವು (ರಂಧ್ರಾನ್ವೇಷಣಕ್ರಮರು—ಶತ್ರುಗಳು). ಆ ರಂಧ್ರಗಳೇ ಅವರಿಗೆ ಮುಂದೆ ನುಗ್ಗಲು ಮಾರ್ಗಗಳಾದುವು. ಆಕ್ರಮಣಶೀಲರಾದ ಅವರಿಗೆ ಆಕ್ರಮಣದ ರಾಜಮಾರ್ಗಗಳು ತಾವಾಗಿಯೇ ತೋರಿದುವು. ಅವರ ಪಥವು ಸುಗಮವಾಯಿತು. ಎಲ್ಲಿ ದುರ್ಬಲತೆಯಿರುವುದೋ ಅಲ್ಲಿಯೇ ಒಳಗೆ ನುಗ್ಗಿ ದಾಂಧಲೆ ನಡೆಸಿದರು. ಅರಾಜಕತೆ ತಲೆದೋರಿತು. ಒಡೆಯರಿಲ್ಲದ ವಸ್ತುವನ್ನು ಭೋಗಿಸಲು ಜನರು ಇಷ್ಟಪಡುವುದು ಸ್ವಾಭಾವಿಕವೇ.

ಅಸ್ತಮಿತೋ=ಮೃತ—ಈಶ್ವರೋ=ರಾಜಾ—ರಂಧ್ರಾನ್ವೇಷಣದಕ್ಷಾಣಾಂ ದ್ವಿಷಾಮಾಮಿಷತಾಂ=ಭೋಗ್ಯವಸ್ತುತಾಂ ಯಯೌ—ಆಮಿಷಂ ಭೋಗ್ಯವಸ್ತುನಿ" ಇತಿ ಕೇಶವಃ ॥

**12. ಅಥಾನಾಥಾಃ ಪ್ರಕೃತಯೋ ಮಾತೃಬಂಧುನಿವಾಸಿನಮ್ ।**
**ಮೌಲೈರಾ ನಾಯಯಾಮಾಸುಃ ಭರತಂ ಸ್ತಂಭಿತಾಶ್ರುಭಿಃ ॥ ೧೨ ॥**

ಆ ಬಳಿಕ ತಬ್ಬಲಿಗಳಾದ ಅಮಾತ್ಯರು, ಆಡಳಿತಾಧಿಕಾರರು, ಸಚಿವರು ಮಾತೃ ಬಂಧುಗಳ ಕಡೆಗೆ ತೆರಳಿದ್ದ ಭರತನನ್ನು ಕೂಡಲೇ ಬರುವಂತೆ ದೂತರ ಮೂಲಕ ಕರೆ ಕಳುಹಿಸಿದರು. ರಾಜಧಾನಿಗೆ ಕೂಡಲೇ ಬರುವಂತೆ ಬೇಹುಗಾರರನ್ನು ಅಟ್ಟಿದರು. ಅವರು ದಶರಥನ ಮರಣವಾರ್ತೆಯನ್ನು ಗೋಪ್ಯವಾಗಿರಿಸಿದ್ದರು. ಇದರಿಂದ ಭರತನು ಸ್ತಂಭಿತಾ ಶ್ರುವಾಗಿದ್ದನು. ಪಿತೃಮರಣ ಗುಪ್ತವಾಗಿರಿಸಿದ ನಿಮಿತ್ತ, ತಿಳಿಸದೆ ಗೋಪ್ಯವಾಗಿರಿಸಿದ ಕಾರಣ, ತಡೆಹಿಡಿಯಲ್ಪಟ್ಟ ಕಂಬನಿಯುಳ್ಳವನಾಗಿದ್ದನು. ವಾಸ್ತವ ವಿಷಯ ತಿಳಿಯ ದಿದ್ದನು (ಧೃತಿಯಿಂದೆ ಕಂಬನಿಯನು ತಡೆಯುವಾಪ್ತರನು). ಧೃತಿಯಿಂದ ತಡೆಹಿಡಿಯ ಲ್ಪಟ್ಟ ಕಂಬನಿಯುಳ್ಳ ಆಪ್ತಜನರು, ರಾಜಸೇವಾನಿಷ್ಠರು ಭರತನ ಆಗಮನದ ದಾರಿ ಯನ್ನು ಕಾಯುತ್ತಲೇ ಇದ್ದರು. ಇದೀಗ ಸಾಕೇತನಗರಿಗೆ ಭರದಿಂದ ಭರತನು ಆಗಮಿಸಿದನು.

ಪ್ರಕೃತಯೋಽಮಾತ್ಯಾಃ—"ಪ್ರಕೃತಿಸಹಜೇಯೋನಾವಮಾತ್ಯೇ ಪರಮಾತ್ಮನಿ" ಇತಿ ವಿಶ್ವಃ—ಸ್ತಂಭಿತಾಶ್ರುಭಿಃ = ಪಿತೃಮರಣಗುಪ್ತ್ಯರ್ಥಮಿತಿ ಭಾವಃ—ಮೌಲೈರಾಪ್ತೈಃ = ಸಚಿವೈಃ ॥

**13. ಶ್ರುತ್ವಾ ತಥಾ ವಿಧಂ ಮೃತ್ಯುಂ ಕೈಕೇಯೀತನಯಃ ಪಿತುಃ ।**
**ಮಾತುರ್ನ ಕೇವಲಂ ಸ್ವಸ್ಯಾಃ ಶ್ರಿಯೋಽಪ್ಯಾಸೀತ್ಪರಾಙ್ಮುಖಃ ॥ ೧೩ ॥**

ಕೈಕೇಯಿಯ ತನಯನಾದ ಭಕ್ತಿಭಂಡಾರಿ ಭರತನು ಇದೀಗ ತಂದೆಯ ಮರಣವಾರ್ತೆಯನ್ನು ಅರಿತು ಅಳಲಿದನು. ತನ್ನ ತಂದೆಯು ತಾಯಿಯ ಹಟಮಾರಿತನದಿಂದ ಮರಣವನ್ನಪ್ಪಿದನು ಎಂದು ಅರಿತು ತಾಯಿಯ ಮೇಲೆ ಸಿಟ್ಟಾದನು. ತನ್ನ ತಾಯಿಯೇ ತನ್ನ ತಂದೆಯ ಮೃತ್ಯುವಿಗೆ ಕಾರಣಳಾದಳೆಂದು ತಿಳಿದು ತನ್ನ ತಾಯಿಯ ಮೊಗವನ್ನು ನೋಡಲು, ಆಕೆಯ ಮುಖದರ್ಶನ ಪಡೆಯಲು ಇಚ್ಛಿಸದೆ ಮೊಗತಿರುಹಿದನು, ಒಲವು ತೋರಲಿಲ್ಲ. ಭಕ್ತಿ, ಜ್ಞಾನ, ವೈರಾಗ್ಯದ ಸಾಕಾರಮೂರ್ತಿಯಾದ ಆ ಕೇಕಯಾಪುತ್ರನು ಬಾರಿಬಾರಿಗೂ ತನ್ನ ಅಣ್ಣನನ್ನೇ ನೆನೆಯುತ್ತಾ ರಾಜ್ಯಲಕ್ಷ್ಮಿಯನ್ನು ಒಲ್ಲದೆ ಅವಳತ್ತಣಿಗೂ ಮನಕೊಡದೆ, ಸಾಮ್ರಾಜ್ಯಪಟ್ಟಾಭಿಷೇಕವನ್ನು ಒಪ್ಪದೆ ಮೊಗತಿರುಹಿದನು. ತಾಯಿಯನ್ನು ಹೇಗೋ ಹಾಗೆ ಸಾಮ್ರಾಜ್ಯಸುಖವನ್ನು ಬಯಸದೆ ಪರಾಙ್ಮುಖನಾದನು (ಜನನಿಯೊಳು ಮಾತ್ರವಲ್ಲ ಆ ರಾಜ್ಯರಮೆಯೊಳು ಮೊಗತಿರುಗಿಸಿದನು).

ಸ್ವಪಿತೃಮೂಲಂ ಮೃತ್ಯುಂ ಮರಣಂ ಶ್ರುತ್ವಾ ಸ್ವಸ್ಯಾ ಮಾತುಃ ಕೇವಲಂ ಮಾತುರೇವ ಪರಾಙ್ಮುಖೋ ನ—ಕಿಂತು ಶ್ರಿಯೋಽಪಿ ಪರಾಙ್ಮುಖ ಆಸೀತ್ ॥

**14. ಸ ಸೈನ್ಯಶ್ಚಾನ್ವಗಾದ್ರಾಮಂ ದರ್ಶಿತಾನಾಶ್ರಮಾಲಯೈಃ ।**
**ತಸ್ಯ ಪಶ್ಯನ್ ಸ ಸೌಮಿತ್ರೇಃ ಉದಶ್ರುರ್ವಸತಿ ದ್ರುಮಾನ್ ॥ ೧೪ ॥**

ಭಕ್ತಾಗ್ರೇಸರನೂ, ಭ್ರಾತೃವತ್ಸಲನೂ ಆದ ಭರತನು ಸೈನ್ಯಸಮೇತನಾಗಿ ರಾಜ್ಯಲಕ್ಷ್ಮಿಯನ್ನು ಹಸ್ತಾಂತರಿಸಲು ರಾಮನನ್ನು ಅರಸುತ್ತಾ ಕಾಡಿಗೆ ನಡೆದನು. ಅಲ್ಲಿ ತಾಪಸರು ಸೀತಾಸಮೇತನಾದ ಶ್ರೀರಾಮನು ಸೌಮಿತ್ರಿಯೊಡಗೂಡಿ ಮರಗಳಡಿಯಲ್ಲಿ ರಾತ್ರಿ ತಂಗಿ ವೇಳೆ ಕಳೆದುದನ್ನು ನೆನೆದು ಕಣ್ಣೀರಕೋಡಿ ಹರಿಸಿದನು—"ಇದೆ ಏನು ಶ್ರೀರಾಮ ಮಲಗಿದ ಜಾಗ ಶ್ರೀರಾಮನ ತಲ್ಪ." ಭವ್ಯಭಾರತದ ಮಹಾನ್‌ಸಾಮ್ರಾಟನು ಮರದಡಿಯ ತಳಿರಹಾಸಿಗೆಯಲ್ಲಿ ಭಾರ್ಯಾಸಮೇತನಾಗಿ ರಾತ್ರಿಯನ್ನು ಕಳೆದುದನ್ನು ನೆನೆದು ಪರಿತಪಿಸಿದನು. ಆ ಮಹಾತ್ಮನ ವನವಾಸಿಜೀವನವನ್ನು ತಾನೂ ಸ್ವೀಕರಿಸಿ ಅನ್ವೇಷಣಾ ಕಾರ್ಯವನ್ನು ಮುಂದುವರಿಸಿದನು. ಘೋರಕಾಂತಾರದಲ್ಲಿ ಮುನ್ನಡೆದನು. ಶ್ರೀರಾಮನ ಕಾರ್ಯವನ್ನು ಅನುಸರಿಸುತ್ತಾ ಅವನ ಹಾದಿಯಲ್ಲಿ ಹೆಜ್ಜೆಯಿಟ್ಟನು.

ಭರತೋ ರಾಮಮನ್ವಗಾಚ್ಛ—"ಏತೇ ರಾಮನಿವಾಸಾಃ" ಇತಿ ಕಥಿತಾನ್ ಸ ಸೌಮಿತ್ರೇ ಲಕ್ಷ್ಮಣಸಹಿತಸ್ಯ ತಸ್ಯ ರಾಮಸ್ಯ ವಸತಿದ್ರುಮಾನ್ನಿವಾಸವೃಕ್ಷಾನ್ ಪಶ್ಯನ್ನು ದಶ್ರೂರಭವನ್"—ಆಶ್ರಮಾಲಯೈಃ ದರ್ಶಿತಾನ್ ವಸತಿ ದ್ರುಮಾನ್ ಉದಶ್ರುಃ ಪಶ್ಯನ್ ॥

**15. ಚಿತ್ರಕೂಟವನಸ್ಥಂ ಚ ಕಥಿತ ಸ್ವರ್ಗತಿರ್ಗುರೋಃ ।**
**ಲಕ್ಷ್ಮ್ಯಾ ನಿಮನ್ತ್ರಯಾಂಚಕ್ರೇ ತಮನುಚ್ಛಿಷ್ಟಸಂಪದಾ ॥ ೧೫ ॥**

ಮಹಾತ್ಮನಾದ ಶ್ರೀರಾಮಚಂದ್ರನನ್ನು ಚಿತ್ರಕೂಟಪರ್ವತದ ವನಸ್ಥಲದಲ್ಲಿ ಭರತನು ಭೇಟಿಯಾಗಿ ತಂದೆಯಾದ ದಶರಥನ ಅತ್ಯಂತ ದುಃಖಕರವಾದ ಮರಣವಾರ್ತೆಯನ್ನು (ಗುರುಮರಣವಾರ್ತೆಯನ್ನು) (ಸ್ವರ್ಗಸ್ಥನಾದುದನ್ನು) ತಿಳಿಸಿದನು. ಆ ಬಳಿಕ ಅವನು ತನ್ನ ಅಣ್ಣನನ್ನು ಅನನುಭುಕ್ತ್ರಯಾದ, ತಾನು ಸೇವಿಸದ, ತಾನು ಅನುಭವಿಸದ (ತಾನು ಮುಟ್ಟದ) ರಾಜ್ಯಲಕ್ಷ್ಮಿಯನ್ನು ವರಿಸುವಂತೆ ದುಂಬಾಲುಬಿದ್ದನು. ಶ್ರೀರಾಮನನ್ನು ರಾಜಧಾನಿಯಾದ ಅಯೋಧ್ಯೆಗೆ ಹಿಂದಿರುಗುವಂತೆ ವಿನಯದಿಂದ ಪ್ರಾರ್ಥಿಸಿದನು ಜ್ಯೇಷ್ಠನಾದ ಅವನು ಸಂಪದ್ಭರಿತವಾದ ಸಾಮ್ರಾಜ್ಯಲಕ್ಷ್ಮಿಯನ್ನು ಆಳುವಂತೆ ಅಂಗಲಾಚಿ ಬೇಡಿದನು. ಅವನ ಮನ ಒಲಿಸಲು ಶತಪ್ರಯತ್ನಪಟ್ಟನು.

ಚಿತ್ರಕೂಟವನಸ್ಥಂ ತಂ ರಾಮಂ ಚ ಗುರೋಃ ಪಿತುಃ ಕಥಿತ ಸ್ವರ್ಗತಿ—ಕಥಿತ ಪಿತೃ ಮರಣಃ — ಅನುಚ್ಛಿಷ್ಟಾsನನುಭೂತಶಿಷ್ಟಾಸಂಪದ್ಗುಣೋತ್ಕರ್ಷೇ ಯಸ್ಯಾಃ ಸಾ। "ಸಂಪದ್ಭೂತೌ ಗುಣೋತ್ಕರ್ಷೇ" ಇತಿ ಕೇಶವಃ ॥

**16. ಸ ಹಿ ಪ್ರಥಮಜೇ ತಸ್ಮಿನ್ ಅಕೃತಶ್ರೀಪರಿಗ್ರಹೇ ।**
**ಪರಿವೇತ್ತಾರಮಾತ್ಮಾನಂ ಮೇನೇ ಸ್ವೀಕರಣಾದ್ಭುವಃ ॥ ೧೬ ॥**

"ಅಣ್ಣನು ಇರುವಾಗ, ಅಣ್ಣನಿಗಿಂತ ಮುಂಚಿತವಾಗಿ ತಮ್ಮನು ಮದುವೆಯಾಗುವುದು ಉಚಿತವೆನಿಸದು. ಅಂತೆಯೇ ಅಣ್ಣನಿಗೆ ಸೇರಬೇಕಾದ ರಾಜ್ಯಶ್ರೀಯನ್ನು ದುರಾಶೆಯಿಂದ ತಾನು ಸೇವಿಸಿದರೆ ತಾನೊಬ್ಬ ಪರಿವೇತ್ತಾ (ಪರಿವೇತ್ತೃವೆನಿಸುವನು) ಪರಿವೇತ್ತೃ ಎಂದೆನಿಸುವನು (ದಾಟಿದವನು ಕಟ್ಟುಕಟ್ಟಲೆ). ಅಂತಹ ದೂಷಣೆಗೆ, ದೋಷಕ್ಕೆ, ಮಹಾ ಅಪರಾಧಕ್ಕೆ ತಾನು ಒಳಗಾಗಲೇ? ನಾನು ಸಾಮ್ರಾಜ್ಯದ ಸಿರಿಗೆ ಸೋಲುವವನಲ್ಲ. ಸಾಮ್ರಾಜ್ಯವನ್ನು ನೀನೇ ಪತಿಕರಿಸಿ ಆಳುವುದು. ಇದು ಲೋಕಧರ್ಮ. ನಿನ್ನಿಂದ ದೇಶ ದಲ್ಲಿ ಶಾಂತಿ ನೆಲಸುವುದು. ಸುಜನರ ರಕ್ಷಣೆಯಾಗುವುದು. ನೀನಿರಲು ನಾನು ಸಿಂಹಾಸನ ವೇರುವುದು ಅರಣ್ಯದ ನೀತಿ. ಮನಸ್ಸಾಕ್ಷಿ ಒಪ್ಪದು. ತಂದೆಯನಂತರ ಅಣ್ಣನೇ ತಂದೆಗೆ ಸಮಾನ. ಅತ್ತಿಗೆ ತಾಯಿಗೆ ಸಮಾನ. ನಿಮ್ಮಿಬ್ಬರನ್ನು ಕಾಡಿಗೆ ಕಳುಸಿ ತನಗೇಕೆ ಸಂಪತ್ತಿಗೆ, ತನಗೇಕೆ ಸಾಮ್ರಾಜ್ಯ, ತಾನು ನಿಮ್ಮ ಬದಲಿಗೆ ಅರಣ್ಯಕ್ಕೆ ಹೋಗುವುದಾಗಿ ಘೋಷಿಸಿ ದನು. ಅಣ್ಣನ ಆಜ್ಞೆಯನ್ನು ದೃಢಭಕ್ತಿಯಿಂದ ಪಾಲಿಸುವುದಾಗಿ ಬೇಡಿದನು.

ಸ್ವೀಕರಣಾದಾತ್ಮಾನಂ ಪರಿವೇತ್ತಾರಂ ಮೇನೇ—"ಪರಿವೇತ್ತಾನುಜೋsನೂಢೇ ಜ್ಯೇಷ್ಠೇ ದಾರಪರಿಗ್ರಹಾತ್" ಇತ್ಯಮರಃ—ಭೂಪರಿಗ್ರಹೋsಪಿ, ದಾರಾಪರಿಗ್ರಹ ಸಮಂ ಇತಿ ಭಾವಃ ॥

**17. ತದು ತಕ್ಯಮುಪಾಕ್ರಷ್ಟುಂ ನಿದೇಶಾತ್ ಸ್ವರ್ಗಿಣಃ ಪಿತುಃ ।**
**ಯಯಾಚೇ ಪಾದುಕೇ ಪಶ್ಚಾತ್ ಕರ್ತುಂ ರಾಜ್ಯಾಧಿದೇವತೇ ॥ ೧೭ ॥**

ಸ್ವರ್ಗಸ್ಥನಾದ ತನ್ನ ಜನಕನ ಆಜ್ಞೆಯನ್ನು ತಾನು ತಿರಸ್ಕರಿಸಲಾರೆನೆಂದೆನ್ನುವ ಅಣ್ಣನ ನುಡಿಗೆ ಭರತನು ತಲೆಬಾಗಿದನು. ಬಳಿಕ ರಾಜ್ಯಾಧಿದೇವತೆಯನ್ನು ಪೂಜಿಸುವ ಸಲುವಾಗಿ, ಶ್ರೀರಾಮನ ಪರವಾಗಿ, ಅವನ ಪಾದುಕೆಗಳನ್ನು ಬೇಡಿದನು. ಶ್ರೀರಾಮನ ಹೆಸರಲ್ಲಿ ಭಕ್ತಾಗ್ರೇಸರನಾದ, ಭ್ರಾತೃವತ್ಸಲನಾದ ಭರತನು ಸಮ್ಮತಿಸಿದನು. ಶ್ರೀರಾಮನ ಶ್ರೀಪಾದುಕೆಗಳೇ ಭರತನಿಗೆ ರಾಜ್ಯಾಧಿದೇವತೆಯಾಯಿತು. ಭರತನ ಬಂಧುಪ್ರೇಮವು ವಿಶ್ವಕ್ಕೆ ಮಾದರಿಯಾಗಿದೆ. ಆದರ್ಶವೆನಿಸಿತು. ಧನ್ಯ ಭರತ, ಧನ್ಯ. ನೀನು ವಿಶ್ವಮಾನ್ಯನೈ. ನಿನ್ನಂತಹ ಸುತನನ್ನು ಪೆತ್ತ ಭಾರತಾಂಬೆ ಧನ್ಯಳು!

ಯಯಾಚೇ = ಯಾಚಿತವಾನ್ ॥

**18. ಸ ವಿಸೃಷ್ಟಸ್ತಥೇತ್ಯುಕ್ತ್ವಾ ಭ್ರಾತ್ರಾ ನೈವಾವಿಶತ್ಪುರೀಮ್ ।**
**ನಂದಿಗ್ರಾಮುಗತಸ್ತಸ್ಯ ರಾಜ್ಯಂ ನ್ಯಾಸಮಿವಾಭುನಕ್ ॥ ೧೮ ॥**

ಅಣ್ಣನ ಮಾತನ್ನು ಅಂತಾಗಲೆಂದು ಹೇಳಿ ಭರತನು ದೃಢಭಕ್ತಿಯಿಂದ ಒಪ್ಪಿಕೊಂಡು ಸಾಕೇತನಗರಿಗೆ ಪಾದುಕೆಗಳನ್ನು ನೆತ್ತಿಯ ಮೇಲೆ ಹೊತ್ತು ನಡೆದನು. ಅವನು ರಾಜಧಾನಿಯಾದ ಅಯೋಧ್ಯಾನಗರವನ್ನು ಹೊಗದೆ ಅದರ ಸಮೀಪವಿರುವ ನಂದಿಗ್ರಾಮದಲ್ಲಿ ಜಟಾವಲ್ಕಲಧಾರಿಯಾಗಿ ನೆಲೆನಿಂತು ಅಣ್ಣನ ಶ್ರೀಪಾದುಕೆಗೆ ಪಟ್ಟಾಭಿಷೇಕವನ್ನು ಮಾಡಿ ಸಾಮ್ರಾಜ್ಯವನ್ನು ನ್ಯಾಸರೂಪವಾಗಿ ಬಗೆದು ಅಣ್ಣನ ಪೆಸರಲ್ಲಿ, ಅಣ್ಣನ ಆಜ್ಞಾನುಸಾರ, ಅಣ್ಣನ ಪ್ರತಿನಿಧಿಯಾಗಿ ರಾಜ್ಯವನ್ನಾಳಿದ. ರಾಜ್ಯದ ಆಡಳಿತೆಯನ್ನು ಸುಸೂತ್ರವಾಗಿ ನಡೆಸಿದ. ಅಣ್ಣನ ಶ್ರೀಪಾದುಕೆಗಳೇ ಅವನಿಗೆ ಸ್ವಾಮಿರೂಪಾಗಿ ಇತ್ತು. ಭರತನು ಈ ತೆರನಾಗಿ ತನ್ನ ಭ್ರಾತೃವಾತ್ಸಲ್ಯವನ್ನು ವಿಶ್ವವು ಅಚ್ಚರಿಗೊಳ್ಳುವಂತೆ ಮೆರೆಸಿದ ಮಹಾನ್ ಭಾರತೀಯ. ಪಾದುಕೆಗೆ ತಾನು ಅಧೀನನಾಗಿ, ನಿಧಿಯಂತಿರುವ ಸಾಮ್ರಾಜ್ಯಕ್ಕೆ ಋಣಿಯಾಗಿ, ಧರ್ಮದಿಂದ ನ್ಯಾಯದಿಂದ ಪಾಲಿಸಿದನು.

ತಸ್ಯ ರಾಮಸ್ಯ ರಾಜ್ಯಂ ನ್ಯಾಸಮಿವ ನಿಕ್ಷೇಪಮಿವ—ನಂದಿಗ್ರಾಮ=ಅಯೋಧ್ಯೆಯ ಬಳಿಯಿರುವ ಒಂದು ಕುಗ್ರಾಮ.

**19. ದೃಢಭಕ್ತಿರಿತಿ ಜ್ಯೇಷ್ಠೇ ರಾಜ್ಯತೃಷ್ಣಾಪರಾಙ್ಮುಖಃ ।**
**ಮಾತುಃ ಪಾಪಸ್ಯ ಭರತಃ ಪ್ರಾಯಶ್ಚಿತ್ತಮಿವಾಕರೋತ್ ॥ ೧೯ ॥**

ಹೀಗೆ ಭರತನು ತನ್ನ ತಾಯಿಯು ಗೈದ ಮಹಾ ಅಪರಾಧಕ್ಕೆ ತಾನು ಪ್ರಾಯಶ್ಚಿತ್ತವನ್ನು ಮಾಡುವಂತೆ, ತನ್ನ ಅಣ್ಣನ ಮೇಲೆ ದೃಢಭಕ್ತಿಯಿರಿಸಿ, ಭಕ್ತಿ, ಜ್ಞಾನ, ವೈರಾಗ್ಯದಿಂದ ನಡೆದನು. ಪ್ರಾಯಶ್ಚಿತ್ತವೇ ಮಾನವಮನಃಶುದ್ಧಿಗೆ ಬೇಕಾದ ದಿವ್ಯ ಔಷಧ. ಅದುವೇ ತಪಸ್ಸು. ಮನಸ್ಸನ್ನು ಕೇಂದ್ರೀಕರಿಸಿ ನಿಶ್ಚಲತೆಯಿಂದ ನಡೆದನು. ಕರ್ಮಸಾಧನೆಗೆ ಭಕ್ತಿಯೇ ಮೂಲ. ಕಾವಿಬಟ್ಟೆಯನ್ನು ಧರಿಸಿ, ರಾಜ್ಯತೃಷ್ಣೆಗೆ ಪರಾಙ್ಮುಖನಾಗಿ, ತಾಯಿಯ ಪಾಪಶುದ್ಧಿಗಾಗಿ, ಕರ್ಮಕಾರ್ಯದಲ್ಲಿ ಮಗ್ನನಾದನು. ಭಕ್ತಿಯಿಂದ ಅಣ್ಣನ ಹೆಸರಿನಲ್ಲಿ, ರಾಜಪ್ರತಿನಿಧಿಯಾಗಿ ರಾಜ್ಯವಾಳಿದನು ಆ ದೀನಜನಬಂಧು. ಜನರ ಶ್ರೇಯೋಭಿವೃದ್ಧಿಗಳನ್ನು ಕೈಕೊಂಡನು. ಅಧಿಕಾರವನ್ನು ಜನರ ಅಭ್ಯುದಯಕ್ಕಾಗಿ

ಯಲ್ಲದೆ ತನ್ನ ಸ್ವಾರ್ಥಕ್ಕಾಗಿ ಅಲ್ಲವೆಂಬುದನ್ನು ಜಗತ್ತಿಗೆ ತೋರಿಕೊಟ್ಟ ಧೀಮಂತ ನಾಯಕ ಭರತ,

ಪಾಪಸ್ಯ ಪ್ರಾಯಶ್ಚಿತ್ತಂ — ಇತ್ಯತ್ರಪ್ರೇಕ್ಷಾ — "ದೃಢಭಕ್ತಿಃ" ಇತ್ಯತ್ರ—"ಭಕ್ತಿ" ಶಬ್ದಸ್ಯ ಪ್ರಿಯಾದಿಷು ಪಾಠಾತ್—"ದೃಢಭಕ್ತಿರಿತ್ಯಾದೌ ಭಾವಸಾಧನತ್ವಾತ್ಪುಂವದ್ಭಾವಸಿದ್ಧಿಃ ಪೂರ್ವಪದಸ್ಯ" ಇತ್ಯಾಹ ॥

**20. ರಾಮೋಽಪಿ ಸಹ ವೈದೇಹ್ಯಾ ವನೇ ವನ್ಯೇನ ವರ್ತಯನ್ ।**
**ಚಚಾರ ಸಾನುಜಃ ಶಾಂತೋ ವೃದ್ಧೇಕ್ಷ್ವಾಕುವ್ರತಂ ಯುವಾ ॥ ೨೦ ॥**

ಶಾಂತಮೂರ್ತಿಯಾದ ಶ್ರೀರಾಮನು ವೈದೇಹಿ ಮತ್ತು ಅನುಜನಾದ ಲಕ್ಷ್ಮಣನಿಂದ ಒಡಗೂಡಿ ಅರಣ್ಯದಲ್ಲಿ ಸಿಗುವ ಕಂದಮೂಲಾದಿಗಳನ್ನು (ಗೆಡ್ಡೆಗೆಣಸು) ತಮ್ಮ ಆಹಾರವಾಗಿ ಸ್ವೀಕರಿಸುತ್ತಾ, ಇಕ್ಷ್ವಾಕುವಂಶದ ವೃದ್ಧರಂತೆ ತನ್ನ ಹರಯದಲ್ಲಿ (ಯೌವನದಲ್ಲಿ ತಾರುಣ್ಯದಲ್ಲಿ) ವಾನಪ್ರಸ್ಥಾಶ್ರಮದ ವಿಧಿವಿಧಾನಗಳನ್ನು ವ್ರತಗಳನ್ನು ಅನುಷ್ಠಾನಗೈಯುತ್ತ ಅರಣ್ಯದಲ್ಲಿ ಕಾಲಕಳೆಯುತ್ತಲಿದ್ದನು. ಇಕ್ಷ್ವಾಕುವಂಶದ ಹಿರಿಯರು, ವಯೋವೃದ್ಧರು ಪ್ರಪಂಚದ ಸರ್ವಸುಖಭೋಗಗಳನ್ನು ತ್ಯಾಗಮಾಡಿ ತುರೀಯ ಆಶ್ರಮವನ್ನು ಸ್ವೀಕರಿಸಿ (ನಾಲ್ಕನೆಯ, ಕೊನೆಯ, ವಾನಪ್ರಸ್ಥ ಆಶ್ರಮ) ಮಾನವಧರ್ಮದ ಮೇಲೆ ಮನಸಿಟ್ಟು (ನಿಗಾ ಇಟ್ಟು) ಪರಮಾತ್ಮನ ಧ್ಯಾನದಲ್ಲಿ ಮಗ್ನರಾಗಿ, ಶಾಂತಾತ್ಮರಾಗಿ, ಭೇದಭಾವವನ್ನು ತೊರೆದು, ಶಮ ದಮ ಮೊದಲಾದ ವ್ರತಗಳನ್ನು ಪಾಲಿಸುತ್ತ ಚಿತ್ತಶುದ್ಧಿ ಮಾಡಿಕೊಳ್ಳುವರು. ಅವರು ಹಣಕಾಸು, ರಾಜ್ಯ, ಮಕ್ಕಳುಮರಿಗಳ ಆಸೆ, ಆಮಿಷಗಳನ್ನು ತೊರೆದು ಆತ್ಮೋದ್ಧಾರದ ಕಡೆಗೆ ಲಕ್ಷ್ಯವಿಟ್ಟು ಮೋಕ್ಷವನ್ನು (ಬಿಡುಗಡೆ) ಬಯಸಿ ಆತ್ಮಚಿಂತನೆಯನ್ನು ಮಾಡುತ್ತಿದ್ದರು (ಹರೆಯದೊಳೆ ಇಕ್ಷ್ವಾಕುವೃದ್ಧರ ವ್ರತಂಗಳನು). ಅವರಂತೆ ಶ್ರೀರಾಮನು, ಹಾಗೆಯೇ ಭರತನು ತಮ್ಮ ಯೌವನದಲ್ಲಿಯೇ ತಮ್ಮ ಹಿರಿಯರಂತೆ ನಡೆಯತೊಡಗಿದರು.

ವನ್ಯೇನ = ವನಭವೇನ = ವನ + ಯ (ತ್) ॥

**21. ಪ್ರಭಾವಸ್ತಂಭಿತಚ್ಛಾಯಮ್ ಆಶ್ರಿತಃ ಸ ವನಸ್ಪತಿಮ್ ।**
**ಕದಾಚಿದಂಕೇ ಸೀತಾಯಾಃ ಶಿಶ್ಯೇ ಕಿಂಚಿದಿವ ಶ್ರಮಾತ್ ॥ ೨೧ ॥**

ಒಮ್ಮೆ ಶ್ರೀರಾಮನು ತುಸು ಬಳಲಿಕೆಯಿಂದ ಸೀತೆಯ ತೊಡೆಯ ಮೇಲೆ ತಲೆಯನಿಟ್ಟು ವಿರಮಿಸಿದನು. ಆಗ ಅವರು ಕುಳಿತಿದ್ದ ವೃಕ್ಷದ ಛಾಯೆಯು (ನೆರಳು) ಶ್ರೀರಾಮನ ಮಹಿಮೆಯಿಂದ ಒಂದಿಷ್ಟೂ ಅಲುಗಾಡದೆ ಸ್ತಬ್ಧವಾಗಿತ್ತು. ಹೀಗೆ ಗೈದು ಶ್ರೀರಾಮನು ಸೀತೆಯ ಉತ್ಸಂಗದಲ್ಲಿ ಇನಿಸು ಒರಗಿ ವೇಳೆಗೈಯುತಲಿದ್ದನು. ವಿರಮಿಸಿ, ವಿಶ್ರಾಂತಿ ಪಡೆಯುತ್ತಿದ್ದನು.

ವನಸ್ಪತಿಮಾಶ್ರಿತಃ ಸನ್—ಪ್ರಭಾವೇಣ=ಸ್ವಮಹಿಮ್ನಾ—ಸ್ತಂಭಿತಾ=ಸ್ಥಿರೀಕೃತಾ ॥

**22. ಐಂದ್ರಿಃ ಕಿಲ ನಖೈಸ್ತಸ್ಯಾಃ ವಿದದಾರ ಸ್ತನೌ ದ್ವಿಜಃ ।**
**ಪ್ರಿಯೋಪಭೋಗಚಿಹ್ನೇಷು ಪೌರೋಭಾಗ್ಯಮಿವಾಚರನ್ ॥ ೨೨ ॥**

ಆಗ ಇಂದ್ರಕುಮಾರನಾದ ಜಯಂತನು ಸೀತೆಯ ಮೋಹಕರೂಪಿಗೆ ಮರುಳಾಗಿ ಕಾಗೆಯ ರೂಪವನ್ನು ತಾಳಿ ಅವಳ ಕುಚಗಳನ್ನು ಕೂರುಗುರುಗಳಿಂದ ಗಾಯಗೊಳಿಸಿದನು. ಪ್ರಿಯನಾದ ಶ್ರೀರಾಮನು ಮಾಡಿದ ನಖಕ್ಷತಗಳಲ್ಲಿ ದೋಷವನ್ನು ಕಂಡುಹಿಡಿದು ತಾನು ಹೆಚ್ಚು ಗಾಯಗೊಳಿಸಿ (ಶ್ರೀರಾಮ ಮಾಡಿದ ನಖಕ್ಷತದ ಅಲ್ಪ ಗಾಯವನ್ನು ತಾನು ಹೆಚ್ಚುಮಾಡಿ ತೋರುವಂತೆ) ಬಲವಾಗಿ ಪೀಡಿಸಿದನು. ಮೋಹಾಂಧನಾಗಿ (ಕಾಮಾಂಧನಾಗಿ).

ಐಂದ್ರಿ = ಇಂದ್ರಸ್ಯ ಪುತ್ರ—ದ್ವಿಜಃ=ಪಕ್ಷಿ = ಕಾಕಸ್ತಸ್ಯಾ—ಪ್ರಿಯಸ್ಯ ರಾಮಸ್ಯೋಪಭೋಗಚಿಹ್ನೇಷು-ತತ್ಕೃತ ನಖಕ್ಷತೇಷ್ವಿತ್ಯರ್ಥಃ-ಪುರೋ ಭಾಗಿನೋ ದೋಷೈಕದರ್ಶಿನಃ ಕರ್ಮ ಪೌರೋಭಾಗ್ಯಮ್—"ದೋಷೈಕ ದೃಕ್ ಪುರೋಭಾಗೀ" ಇತ್ಯಮರಃ—ಐಂದ್ರಃ = ಇಂದ್ರಸ್ಯ ಪುತ್ರಃ—ಇಂದ್ರ + ಇ(ಇಞ್) ॥

**23. ತಸ್ಮಿನ್ ಆಸ್ಥದಿಷೀಕಾಸ್ತ್ರಂ ರಾಮೋ ರಾಮಾವಬೋಧಿತಃ ।**
**ಆತ್ಮಾನಂ ಮುಮುಚೇ ತಸ್ಮಾತ್ ಏಕನೇತ್ರವ್ಯಯೇನ ಸಃ ॥ ೨೩ ॥**

ಸೀತಾದೇವಿಯನ್ನು ರಗಳೆಗೊಳಿಸುವ ಜಯಂತನ ದುಷ್ಟಚೇಷ್ಟೆಯನ್ನು ಶ್ರೀರಾಮನು ಎಚ್ಚೆತ್ತು ನೋಡಿ ಕಿಡಿಕೆಂಡವಾದನು (ಬೆಂಕಿಯ ಕೆಂಡವಾದನು). ಕ್ರುದ್ಧನಾಗಿ, ಕೂಡಲೇ ಅಲ್ಲೇ ಬಿದ್ದಿರುವ ದರ್ಭೆಹುಲ್ಲನ್ನು ಬ್ರಹ್ಮಾಸ್ತ್ರಮಂತ್ರದಿಂದ ಅನುಸಂಧಾನಗೈದು ಕಾಗೆಯ ಕಡೆಗೆ ಎಸೆದನು. ಆ ಇಷೀಕಾಸ್ತ್ರವು ಕಾಗೆಯ ವೇಷದಲ್ಲಿದ್ದ ಜಯಂತನನ್ನು ಬೆನ್ನಟ್ಟುತ್ತಾ ಹೋಯಿತು. ಜಯಂತನು ಲೋಕಪಾಲರ ರಕ್ಷಣೆಯನ್ನು ಬೇಡಿ ಅವರ ಮೊರೆಹೊಕ್ಕನು. ಮೂರು ಲೋಕವನ್ನು ಸುತ್ತಿಯಾಯಿತು. ಕೊನೆಗೆ ಕೈಲಾಸಪತಿಯಾದ ಪರಶಿವನ ಮೊರೆಹೊಕ್ಕನು. ಆ ಉಮಾಪತಿಯು "ನೀನು ರಾಮನನ್ನೇ ಮೊರೆಹೊಗುವುದು ಲೇಸೆಂದು" ಹೇಳಿದಾಗ ಶ್ರೀರಾಮನ ಬಳಿಗೆ ಬಂದು ತನ್ನನ್ನು ಕ್ಷಮಿಸೆಂದು ಬೇಡಿದನು. ದುಷ್ಟಶಿಕ್ಷಕನಾದ ಶ್ರೀರಾಮನು ಈ ತೆರನಾಗಿ ಶಿಕ್ಷಿಸಿ ಅವನ ಪ್ರಾಣವನ್ನು ಉಳಿಸಿದನು. ಆ ಬಾಣಕ್ಕೆ ತನ್ನ ಒಂದು ಕಣ್ಣನ್ನು ದಾನವಾಗಿ ತೆತ್ತು ತನ್ನ ಪ್ರಾಣವನ್ನು (ಜೀವವನ್ನು) ಉಳಿಸಿಕೊಂಡನು. ಅವನ ಕಣ್ಣೊಂದು ನಷ್ಟವಾಯಿತು. ಮಾಡಿದ್ದುಣ್ಣೋ ಮಾರಾಯ ಎಂಬಂತೆ ದುಷ್ಟಚೇಷ್ಟೆಗೆ ತಕ್ಕ ಪ್ರತಿಫಲ.

ಇಷೀಕಾಸ್ತ್ರಮ್ = ಕಾಶಾಸ್ತ್ರಮ್—"ಇಷೀಕಾ ಕಾಶಮುಚ್ಯತೇ" ಇತಿ ಹಲಾಯುಧಃ—ಮುಮುಚೇ = ಮುಕ್ತವಾನ್—ಮುಚೇ ಕರ್ತರಿ ಲಿಜ್—"ಧೇನುಂ ಮುಮೋಚ" ಇತಿ ವತ್ ಪ್ರಯೋಗಃ ॥

**24. ರಾಮಸ್ತ್ವಾಸನ್ನದೇಶತ್ವಾತ್ ಭರತಾಗಮನಂ ಪುನಃ ।**
**ಆಶಂಕ್ಯೋತ್ಸುಕಸಾರಂಗಾಂ ಚಿತ್ರಕೂಟಸ್ಥಲೀಂ ಜಹೌ ॥ ೨೪ ॥**

ಶ್ರೀರಾಮನು ಚಿತ್ರಕೂಟಪರ್ವತಪ್ರಾಂತ್ಯವನ್ನು ತ್ಯಜಿಸಲು ತೀರ್ಮಾನಿಸಿದನು. ಆ ಚಿತ್ರಕೂಟವು ತನ್ನತ್ತ ಉತ್ಸುಕತೆಯಿಂದ ನೋಡುವ ಜಿಂಕೆಯ ಹಿಂಡುಗಳಿಂದ (ಹರಿಣ, ಸಾರಂಗ) ಮೆರೆಯುತ್ತಿರುವ ತಾಣವಾಗಿತ್ತು. ಆ ಪ್ರದೇಶವು ಕೋಸಲ ದೇಶಕ್ಕೆ

ಸಮೀಪವಿದ್ದುದರಿಂದ ಬಂಧುಪ್ರೇಮಿಯಾದ ಭರತನು ಪುನಃ ಬಂದು ನಿರ್ಬಂಧಿಸಬಹುದೆಂದು, ಪುನಃ ಊರಿಗೆ ಬರುವಂತೆ ಪ್ರಾರ್ಥಿಸಬಹುದೆಂಬ ಶಂಕೆಯಿಂದ (ಭರತಾಗಮನಶಂಕೆಯಿಂದ) ಶ್ರೀರಾಮನು ಸುಂದರವಾದ, ರಮ್ಯತಾಣವಾದ ಚಿತ್ರಕೂಟವನ್ನು ತ್ಯಜಿಸಿ ಪಯಣವನ್ನು ದಕ್ಷಿಣದಿಕ್ಕಿಗೆ ಮುಂದುವರಿಸಿದನು.

ಪುನರ್ಭರತಾಗಮನಶಂಕೋತ್ಸು—ಚಿತ್ರಕೂಟಸ್ಥಲೀ ಜಹೌ ತ್ಯಾಜ ॥

**25. ಪ್ರಯಯಾ ವಾತಿಥೇಯೇಷು ವಸನ್ ಋಷಿಕುಲೇಷು ಸಃ ।**
**ದಕ್ಷಿಣಾ ದಿಶಮೃಕ್ಷೇಷು ವಾರ್ಷಿಗೇಷ್ವಿವ ಭಾಸ್ಕರಃ ॥ ೨೫ ॥**

ದಾರಿಯುದ್ದಕ್ಕೂ ಅತಿಥೇಯರಾದ ಸಾಧುಸಜ್ಜನರಾದ ಋಷಿಮುನಿಗಳ ಆತಿಥ್ಯದಲ್ಲಿದ್ದು (ಅತಿಥೇಯರ್ಕಳೆನಿಪಾ) ಸೀತಾರಾಘವಲಕ್ಷ್ಮಣರು ದಕ್ಷಿಣಾಪಥದತ್ತ (ದಕ್ಷಿಣ ಭಾರತದತ್ತ) ತಮ್ಮ ಪಯಣವನ್ನು ಮುಂದುವರಿಸಿದರು. ಆರ್ದ್ರಾ, ಪುನರ್ವಸು, ಪುಷ್ಯ, ಆಶ್ಲೇಷಾ, ಮಘಾ, ಪೂರ್ವಾ, ಉತ್ತರಾ, ಹಸ್ತಾ, ಚಿತ್ರಾ, ಸ್ವಾತಿ ಎಂಬ ಹತ್ತು ಮಳೆಯ ನಕ್ಷತ್ರಗಳು ರಾಶಿಯಲ್ಲಿದ್ದು ವರ್ಷಾಕಾಲವನ್ನು ಕಳೆದು ಸೂರ್ಯದೇವನು (ರವಿ, ಮಿತ್ರರಶ್ಮಿ, ಭಾನು, ಖಗ, ಪೂಷ, ಹಿರಣ್ಯಗರ್ಭ, ಮರೀಚಿ, ಆದಿತ್ಯ, ಪವಿತ್ರ, ಅರ್ಕ, ಭಾಸ್ಕರ, ಸೂರ್ಯನಾರಾಯಣ) ತೆಂಕಣದಿಶೆಗೆ ತೆರಳುವಂತೆ ರಾಘವನು ದಕ್ಷಿಣ ದಿಕ್ಕಿಗೆ ತನ್ನ ಪಯಣವನ್ನು ಮುಂದುವರಿಸಿದನು(ಮಳೆಯ ನಕ್ಷತ್ರಗಳಲ್ಲಿರ್ದ ರವಿಯಂತೆ).

ಅತಿಥಿಷು ಸಾಧೂನಿ ಆತಿಥೇಯಾನಿ—ಋಷಿಕುಲೇಷ್ವೃಷ್ಯಾಶ್ರಮೇಷು—"ಕುಲಂ ಕುಲ್ಯೇ, ಗಣೇ ದೇಹೇ, ಗೇಹೇ ಜನಪದೇऽನ್ವಯೇ ಇತಿ ಹೇಮಃ—ವರ್ಷಾಸಂಭವಾನಿ ವಾರ್ಷಿಕಾಣಿ—ವಾ ಭಾಸ್ಕರ ಇವ ವಸನ್ ದಕ್ಷಿಣಾಂ ದಿಶಂ ಪ್ರಯಯೌ ॥ ಆತಿಥೇಯಾ= ಅತಿಥಿಷು ಸಾಧುಃ ಆತಿಥೇಯಃ = ಅತಿಥಿ + ಏಯ (ಢಞ್) ॥

**26. ಬಭೌ ತಮನುಗಚ್ಛಂತೀ ವಿದೇಹಾಧಿಪತೇಃ ಸುತಾ ।**
**ಪ್ರತಿಷಿದ್ಧಾಪಿ ಕೈಕೇಯ್ಯಾ ಲಕ್ಷ್ಮೀರಿವ ಗುಣೋನ್ಮುಖೀ ॥ ೨೬ ॥**

ವಿದೇಹಾಧಿಪನ ಸುತೆ ಗುಣವಂತೆ ಸೀತೆಯು ಸಾಮ್ರಾಜ್ಯರಾಜಲಕ್ಷ್ಮಿಯಂತೆ. ಶ್ರೀರಾಮನನ್ನು ನೆರಳಿನಂತೆ ಅನುಸರಿಸುತ್ತಾ, ಅವನ ಬೆನ್ನಹಿಂದೆಯೇ ಅವನ ಹೆಜ್ಜೆಯಲ್ಲೇ ನಡೆಯುತ್ತಿದ್ದಳು. ಅವಳು ಮಹಾಲಕ್ಷ್ಮಿಯಂತೆ ಸರ್ವಗುಣಸಂಪನ್ನೆಯಾಗಿ ರಾರಾಜಿಸುತ್ತಿದ್ದಳು. ಸೀತೆ ಐಶ್ವರ್ಯದ ಪ್ರತೀಕಳಾಗಿದ್ದಳು. ಕೈಕೇಯಿಯು ಶ್ರೀರಾಮನ ಕೈಯಿಂದ ಸಾಮ್ರಾಜ್ಯವನ್ನು ಕಸಿದುಕೊಂಡಿದ್ದರೂ ಸೌಭಾಗ್ಯವತಿಯಾದ ಸೀತಾದೇವಿಯು ಅದೃಷ್ಟಲಕ್ಷ್ಮಿಯಂತೆ ಅವನ ಪಡಿನೆಳಲಾದಿ ಅತ್ತಿತ್ತ ಅಗಲದೆ, ಹಿಂದಿನಿಂದ ಅನುಸರಿಸುತ್ತಾ ನಡೆದಳು. ಪತಿವ್ರತಾ ವನಿತೆಯರ ಸ್ವಭಾವವೇ ಹಾಗೆ. "ಗಂಡನಿಗೆ ಬಂದ ಗತಿ ತನಗೂ ಬರಲಿ" ಎಂದು (ಶ್ರೀರಾಮ : ಏಳು ಜನ್ಮಾಂತರದಿ ತಪವಗೈದರು ಇಂಥ ಬಾಲೆ ಕೈಸೇರುವಳೆ, ತಮ್ಮ ! (ಯಕ್ಷಗಾನ ಪ್ರಸಂಗ—ಪಂಚವಟಿ).

ವಿದೇಹಾಧಿಪತೇಃ ಸುತಾ = ಸೀತಾ—ಪ್ರತಿಷಿದ್ಧಾ = ನಿವಾರಿತಾ—ಗುಣೋನ್ಮುಖೀ = ಗುಣೋತ್ಸುಕಾ—ಲಕ್ಷ್ಮೀ = ರಾಜಲಕ್ಷ್ಮೀರಿವ ॥

**27. ಅನಸೂಯಾತಿಸೃಷ್ಟೇನ ಪುಣ್ಯಗಂಧೇನ ಕಾನನಮ್ ।**
**ಸಾ ಜಿಹಾಠಾಂಗರಾಗೇಣ ಪುಷ್ಪೋಚ್ಛಲಿತಷಟ್ಪದಮ್ ॥ ೨೭ ॥**

ಮಹಾಸತಿಯಾದ ಅನಸೂಯಾದೇವಿಯು ಸೀತೆಯ ಮೇಲಿನ ಅಧಿಕಪ್ರೀತಿಯಿಂದ ಅಂಗರಾಗವೆಂಬ ಸುಗಂಧದ್ರವ್ಯವನ್ನು ಒಲಿದಿತ್ತಳು. ಅದನ್ನು ಸೀತೆಯು ಮೈಗೆ ಲೇಪಿಸಿಕೊಂಡಳು. ಅದರ ಮಹಿಮೆಯಿಂದ ಕಾನನವು ಸುಗಂಧಭರಿತವಾಯಿತು. ಕಾನನದಲ್ಲಿದ್ದ ತುಂಬಿಗಳ ದಂಡು ಹೂವನ್ನು ತೊರೆದು ಸೀತೆಯನ್ನು ಅನುಸರಿಸುತ್ತಿದ್ದುವು (ಅಂಗರಾಗದ ಪುಣ್ಯಗಂಧದಿಂದವಳು).

ಶ್ರೀರಾಮಸೀತಾಲಕ್ಷ್ಮಣರು ದಂಡಕಾರಣ್ಯವನ್ನು ಪ್ರವೇಶಿಸುವ ಮೊದಲು ಮಹರ್ಷಿ ಅತ್ರಿಯ ತಪೋವನಕ್ಕೆ ಆಗಮಿಸಿ. ಅವರ ಆತಿಥ್ಯವನ್ನು ಸ್ವೀಕರಿಸಿದರು. ಅನಸೂಯೆಯು ಸೀತಾದೇವಿಗೆ ದಿವ್ಯಾಭರಣ, ಪುಷ್ಪಮಾಲಿಕೆ, ಅಂಗರಾಗವೆಂಬ ಸುಗಂಧ ಅನುಲೇಪನ ಮತ್ತು ವಸ್ತ್ರವನ್ನಿತ್ತು ಗೌರವಿಸಿದಳು.

ಅತಿಸೃಷ್ಟೇನ = ದತ್ತೇನ—ಪುಣ್ಯಗಂಧೇನ = ಅಂಗರಾಗೇಣ—ಕಾನನಂ = ವನಂ—ಉಚ್ಛಲಿತಾ = ನಿರ್ಗಲಿತಾ ॥

**28. ಸಂಧ್ಯಾಭ್ರಕಪಿಶಸ್ತಸ್ಯ ವಿರಾಧೋ ನಾಮ ರಾಕ್ಷಸಃ ।**
**ಅತಿಷ್ಠನ್ಮಾರ್ಗಮಾವೃತ್ಯ ರಾಮಸ್ಯೇಂದೋರಿವ ಗ್ರಹಃ ॥ ೨೮ ॥**

ಹೀಗೆ ದಟ್ಟವಾದ ಕಾಡಿನ ಮಧ್ಯೆ ಹೋಗುತ್ತಿರಲು ಸಂಧ್ಯಾಕಾಲದ ಕಪ್ಪುಮಿಶ್ರಿತ ಕೆಂಬಣ್ಣದ ಮೋಡದಂತೆ (ಕಂದುಬಣ್ಣದಿಂದ) (ಸಂಧ್ಯಾಭ್ರಕಪಿಶನು) ಕಂಗೊಳಿಸುವ ಮಹಾಬಲಾಢ್ಯನಾದ ಬೃಹದಾಕಾರದ (ದೈತ್ಯಾಕಾರದ) ರಾಕ್ಷಸನು ಮಾರ್ಗಮಧ್ಯದಲ್ಲಿ ಶ್ರೀರಾಮನನ್ನು ತಡೆದನು. ಅವನು ರಾಹುವು ಚಂದ್ರನನ್ನು ತಡುಕುವಂತೆ (ಹಿಡಿದು ಆಕ್ರಮಿಸುವಂತೆ) ಆಕ್ರಮಿಸಿ ದಾರಿಯನ್ನು ಅಡ್ಡಗಟ್ಟಿದನು. ಅವರು ಮುಂದೆ ಹೋಗದಂತೆ ತಡೆದು ನಿಲ್ಲಿಸಿದನು.

ಸಂಧ್ಯಾಭ್ರಕಪಿಶೋ ವಿರಾಧೋ ನಾಮ ರಾಕ್ಷಸಃ—ಗ್ರಹೋ=ರಾಹುರಿಂದೋರಿವ—ಮಾರ್ಗಮಧ್ವಾನಮಾವೃತ್ಯಾವರುಧ್ಯಾ ತಿಷ್ಠತ್—ಕಪಿಶ = ಕಂದುಬಣ್ಣ ॥

**29. ಸ ಜಹಾರ ತಯೋರ್ಮಧ್ಯೇ ಮೈಥಿಲೀಂ ಲೋಕಶೋಷಣಃ ।**
**ನಭೋ ನಭಸ್ಯಯೋರ್ವೃಷ್ಟಿಂ ಅವಗ್ರಹ ಇವಾನ್ತರೇ ॥ ೨೯ ॥**

ಲೋಕಶೋಷಕನಾದ (ಲೋಕಕಂಟಕನಾದ, ಲೋಕವನ್ನು ಬತ್ತಿಸಬಲ್ಲ, ಒಣಗಿಸಬಲ್ಲ, ಲೋಕಹಿಂಸಕನಾದ) ಆ ರಾಕ್ಷಸನು ರಾಮಲಕ್ಷ್ಮಣರ ಮಧ್ಯದಲ್ಲಿರುವ ಸೀತೆಯನ್ನು ಬಲಾತ್ಕಾರದಿಂದ ಕೊಂಡೊಯ್ದನು. ಶ್ರಾವಣ ಮತ್ತು ಭಾದ್ರಪದ ಮಾಸಗಳಲ್ಲಿ ಬೀಳುವ ಮಳೆಯನ್ನು ಅವಗ್ರಹವು (ಅನಾವೃಷ್ಟಿಯು) ಕೊಂಡೊಯ್ಯುವಂತೆ, ವಿಧಾತನ ಅವಕೃಪೆಯಿಂದ ಪ್ರಕೃತಿಯಲ್ಲಿ ಕ್ಷಾಮವು ತಲೆದೋರುವಂತೆ, ಸೀತಾದೇವಿಯು ಅದೃಶ್ಯಳಾದಳು. ವಿರಾಧನ ಭದ್ರಮುಷ್ಟಿಯಲ್ಲಿ ಸೀತೆ ಸಿಲುಕಿದಳು; ಬಿಸಿಲಿನ ಬೇಗೆ ಹೆಚ್ಚಾದಾಗ ಜಗವು, ಸ್ಥಾವರ-ಜಂಗಮಾತ್ಮಕ ಜಗತ್ತು ಸಂಕಟಪಡುವಂತೆ ಶ್ರೀರಾಮಲಕ್ಷ್ಮಣರ ಸ್ಥಿತಿಯಾ

ಯಿತು. ಶ್ರಾವಣ ಭಾದ್ರಪದ ಮಾಸದ ಮಳೆಯು ಮಾಯವಾಗುವಂತೆ ಕಣ್ಣು ತೆರೆಯುವಷ್ಟರಲ್ಲಿ ಸೀತೆಯು ಮಾಯವಾದಳು. ಜಗನ್ಮಂಗಳಕಾರಿಣಿಯಾದ ಸೀತಾಮಾತೆ ವಿರಾಧನ ಕೈಗೆ ಸಿಕ್ಕಿ ಚಡಪಡಿಸುವ ಶೋಚನೀಯ ಪರಿಸ್ಥಿತಿ ಉದ್ಭವಿಸಿತು.

ನಭೋ ನಭಸ್ಯಯೋಃ = ಶ್ರಾವಣಭಾದ್ರಪದಯೋರಂತರೇ = ಮಧ್ಯೇ—ವೃಷ್ಟಿಮಿವ ಗ್ರಹೋ = ವರ್ಷಪ್ರತಿಬಂಧ ಇವ ''ವೃಷ್ಟಿರ್ವರ್ಷತದ್ವಿಘಾತೇಽವಗ್ರಾಹಾವಗ್ರಹೌ ಸಮೌ'' ಇತ್ಯಮರಃ—ಯಥಾ ಶ್ರಾವಣ ಭಾದ್ರಪದಯೋರ್ಮಧ್ಯೇಽವಗ್ರಹಃ ಮೇಘ ವರ್ಷಣಂ ಹರತಿ'' ಇತಿ ಸುಮತಿ ॥ ಜಹಾರ=ನಾಶಹೊಂದು.

**30. ತಂ ವಿನಿಷ್ಪಿಷ್ಯ ಕಾಕುತ್ಸ್ಥೌ ಪುರಾ ದೂಷಯತಿ ಸ್ಥಲೀಮ್ ।**
**ಗಂಧೇನಾಶುಚಿನಾ ಚೇತಿ ವಸುಧಾಯಾಂ ನಿಚಖ್ನತುಃ ॥ ೩೦ ॥**

ಆ ಇಬ್ಬರು ಕಾಕುತ್ಸ್ಥರು(ರಾಮಲಕ್ಷ್ಮಣರು) ಪರ್ವತಾಕಾರದ ರಾಕ್ಷಸವಿರಾಧನೊಡನೆ ಹೋರಾಡಿ ಅವನನ್ನು ಮೃತ್ಯುಲೋಕಕ್ಕೆ ಕಳುಹಿದರು, ಆ ರಾಕ್ಷಸನ ಮಹಾಕಾಯವು ಕೊಳೆತು ಮುಂದೆ ಆ ಋಷ್ಯಾಶ್ರಮಗಳೆಲ್ಲಾ ದುರ್ಗಂಧಮಯವಾಗಬಹುದೆಂದು ಅವನ ಕಳೇಬರವನ್ನು ನೆಲದಡಿಯಲ್ಲಿ ಹೂಳಿದರು. ಅಡವಿಯ ಭೂಮಿಯನ್ನು ಅಗೆದು ಅವನನ್ನು ಮಣ್ಣಿನ ಅಡಿಯಲ್ಲಿ(ದಫನ್ ಮಾಡಿದರು)ಸಮಾಧಿಮಾಡಿದರು(ಆಳದೊಳು ಹೂಳಿದರು.)

ಕಾಕುತ್ಸ್ಥೌ = ಕಾಕುತ್ಸ್ಥಸ್ಯ ಗೋತ್ರಾಪತ್ಯೇ ಪುಮಾಂಸೌ, ರಾಮಲಕ್ಷ್ಮಣೌ — ಅಶುಚಿನಾ = ಅಪವಿತ್ರೇಣ—ಪುರಾ ದೂಷಯತಿ = ದೂಷಯಿಷ್ಯತೀತಿ ಹೇತೋಃ— ವಸುಧಾಯಾಂ ನಿಚಖ್ನತುರ್ಭೂಮೌ=ಖನಿತ್ವಾ ನಿಕ್ಷಿಪ್ತವಂತೌ ಚ ॥

**31. ಪಂಚವಟ್ಯಾಂ ತತೋ ರಾಮಃ ಶಾಸನಾತ್ ಕುಂಭಜನ್ಮನಃ ।**
**ಅನಪೋಢಸ್ಥಿತಿಸ್ತಸ್ಥೌ ವಿಂಧ್ಯಾದ್ರಿಃ ಪ್ರಕೃತಾವಿವ ॥ ೩೧ ॥**

ಕುಂಭಸಂಭವರಾದ ಅಗಸ್ತ್ಯಮಹರ್ಷಿಗಳ ಉಪದೇಶದಂತೆ ಮಾನವಮರ್ಯಾದೆಗೆ ಅನುಸಾರವಾಗಿ ಮರ್ಯಾದಾಪುರುಷೋತ್ತಮನಾದ ಶ್ರೀರಾಮನು ದಂಡಕಾರಣ್ಯದ ಒಂದು ಭಾಗವಾದ ಪಂಚವಟಿಯಲ್ಲಿ ಪರ್ಣಕುಟೀರವನ್ನು ವಿರಚಿಸಿ ವನವಾಸಜೀವನವನ್ನು ಆರಂಭಿಸಿದನು. ಹೇಗೆ ವಿಂಧ್ಯಾದ್ರಿಯು ಕುಂಭಸಂಭವರಾದ ಅಗಸ್ತ್ಯರ ಶಾಸನವನ್ನು ಮೀರಲಾರದೆ(ಉಲ್ಲಂಘಿಸದೆ) ತನ್ನ ಪೂರ್ವಾವಸ್ಥೆಯಲ್ಲಿ ನೆಲಸಿರುವುದೋ ಅದರಂತೆಯೇ ಶ್ರೀರಾಮನು ಅಗಸ್ತ್ಯರ ವಚನದಂತೆ ಪಂಚವಟಿಯಲ್ಲಿ ನೆಲಸಿದನು. ಅಗಸ್ತ್ಯರ ಮಾತಿನ ಮರ್ಯಾದೆ ಮೀರದಂತೆ, ಮಾನವಧರ್ಮಕ್ಕನುಸಾರವಾಗಿ. ಸೀತಾಲಕ್ಷ್ಮಣಸಮೇತ ನಾಸಿಕಕ್ಕೆ ಬಂದು ಶಾಂತಿಸ್ಥಾಪನೆಯ ಕಾರ್ಯವನ್ನು ಮುಂದುವರಿಸಿದನು : ಪಂಚವಟಗಳು, ಐದು ಜಾತಿಯ ಮರಗಳು ಅಶ್ವತ್ಥ, ಬಿಲ್ವ, ವಟ, ಧಾತ್ರೀ ಮತ್ತು ಅಶೋಕ ಮರಗಳು ಇರುವ ಜಾಗವೇ ಪಂಚವಟಿ. ಮಾಯಾಂಗನೆ ಶೂರ್ಪನಖಿಯ ಮೂಗು ಕೊಯ್ದ ಜಾಗ (ನಾಸಿಕ್).

ಕುಂಭಜನ್ಮನೋಽಗಸ್ತ್ಯಸ್ಯ—ಪಂಚಾನಾಂ ವಟಾನಾಂ ಸಮಾಹಾರಃ ಪಂಚವಟೀ— ತದ್ಧಿತಾರ್ಥ—(ಪಾಣಿನಿ) ಇತಿ ತತ್ಪುರುಷಃ—ಸಂಖ್ಯಾಪೂರ್ವೋ ದ್ವಿಗುಃ—ಇತಿ ದ್ವಿಗು

ಸಂಜ್ಞಾಯಾಂ — ಅನಪೋಢಸ್ಥಿತಿರನತಿಕ್ರಾಂತಮರ್ಯಾದಸ್ತುಸ್ಥೌ ॥ ಕುಂಭಜನ್ಮನಃ = ಕುಂಭಯೋನಿಃ = ಕೊಡದಲ್ಲಿ ಜನಿಸಿದ ಅಗಸ್ತ್ಯರು.

**32. ರಾವಣಾ ವರಜಾ ತತ್ರ ರಾಘವಂ ಮದನಾತುರಾ ।**
**ಅಭಿಪೇದೇ ನಿದಾಘಾರ್ತಾ ವ್ಯಾಲೀವ ಮಲಯದ್ರುಮವತ್ ॥ ೩೨ ॥**

ಶ್ರೀರಾಮನ ರೂಪಲಾವಣ್ಯವನ್ನು ಕಂಡು ಮದನಾತುರಳಾಗಿ ರಾವಣನ ತಂಗಿ ಶೂರ್ಪನಖೆ, ವೇಷಮರೆಸಿ ರಾಘವನ ಬಳಿಗೆ ಬಂದು ತನ್ನನ್ನು ವರಿಸುವಂತೆ ಅಂಗಲಾಚಿ ಬೇಡಿಕೊಂಡಳು. ಆ ರಾಕ್ಷಸಸ್ತ್ರೀಯು ಚಿತ್ತಚಾಂಚಲ್ಯದಿಂದ, ಮನ್ಮಥನ ಬಾಧೆಗೆ ಒಳಗಾಗಿದ್ದಳು. ಹೇಗೆ ಬೇಸಿಗೆಯ ನಡುಹಗಲಿನಲ್ಲಿ ಸೆಕೆಯ ಉರಿಗೆ ಆರಬೇದ ಹೆಣ್ಣುಹಾವು (ಸೆಕೆಯುರಿಯೊಳು ಆರೆಬೆಂದ ಉರಗಿ) ಶ್ರೀಗಂಧದ ವೃಕ್ಷದ ಬಳಿಗೆ ಬಂದು (ಚಂದನವ ಸಾರುವ್ರೊಲು) ಅದನ್ನು ಮೇಲೇರಲು ಯತ್ನಿಸುವಂತೆ ಆಕೆ ಶ್ರೀರಾಮನ ಬಳಿಗೆ ಬಂದು ಮನಸೋತು ತನ್ನ ಅಂತರಂಗದ ಕಷ್ಟವನ್ನು ನಿವೇದಿಸಿಕೊಂಡಳು (ಸಮಸ್ಯೆಗಳನ್ನು ಬಿಚ್ಚಿಕೊಂಡಳು).

ರಾವಣಾವರಜಾ = ರಾವಣನ ತಂಗಿ = ಶೂರ್ಪಣಖಾ, ಶೂರ್ಪನಖಿ—ನಿದಾಘಾರ್ತಾ ಘರ್ಮತಪ್ತಾ, ವ್ಯಾಕುಲನಾದ—ವ್ಯಾಲೀ = ಭುಜಂಗೀ, ಹೆಣ್ಣುಹಾವು (ಉರಿಸಿಂಗಿ)— ಮಲಯದ್ರುಮಂ = ಚಂದನದ್ರುಮಂ ಇವ—ಅಭಿಪೇದೇ = ಪ್ರಾಪ, ಬಳಿಸಾರು.

**33. ಸಾ ಸೀತಾಸನ್ನಿಧಾವೇವ ತಂ ವವ್ರೇ ಕಥಿತಾನ್ವಯಾ ।**
**ಅತ್ಯಾರೂಢೋ ಹಿ ನಾರೀಣಾಂ ಅಕಾಲಜ್ಞೋ ಮನೋಭವಃ ॥ ೩೩ ॥**

ಶೂರ್ಪನಖಿಯು ಕಾಮಬಾಧೆಗೆ ಒಳಗಾಗಿ ಲಜ್ಜೆಗೆಟ್ಟು, ಕಾಲಜ್ಞಾನದ ಪರಿವೆಯಿಲ್ಲದೆ ಸ್ತ್ರೀಮರ್ಯಾದೆಯ ಎಲ್ಲೆಯನ್ನು ಮೀರಿ, ಸೀತೆಯ ಎದುರಲ್ಲಿ ತನಗಾಗುವ ಕಾಮಬಾಧೆಯನ್ನು ವಿವರಿಸತೊಡಗಿದಳು. ಆ ಗಂಡುಬೀರಿ ತನ್ನ ಅನ್ವಯವನ್ನು (ವಂಶವನ್ನು) ಹೇಳಿ ತಾನು ಶ್ರೀರಾಮನನ್ನು ಬಯಸಿರುವುದಾಗಿ ಜನಕಸುತೆಯ ಎದುರಲ್ಲೇ ನಾಚಿಕೆಯಿಲ್ಲದೆ ಹೇಳಿದಳು. ಇದರಿಂದ ಒಂದು ವಿಷಯವು ಸ್ಪಷ್ಟವೆನಿಸುವುದು. ಮನೋಭವನಾದ (ಮನಸಿಜನಾದ ಕಾಮದೇವನಿಗೆ ಮನ್ಮಥನಿಗೆ) ಕಾಲಜ್ಞಾನದ, ವಯಸ್ಸ, ಮರ್ಯಾದೆ, ಗೌರವ ಇದರ ಪರಿವೆಯೇ ಇಲ್ಲವೆಂದು ವೇದ್ಯವಾಗುವುದು. ಸಮಯಾಸಮಯದ ಪರಿವೆಯಿಲ್ಲದೆ ಪುಷ್ಪಬಾಣನು ಕಾಮಬಾಣಗಳನ್ನು ಎಸೆಯುತ್ತಲೇ ಇರುವನು. ಪ್ರೇರಣೆ ಮಾಡುತ್ತಲೇ ಇರುವನು, ಸ್ಫುರಿಸುತ್ತಲೇ ಇರುವನು. ಅವನ ಕಾರ್ಯಚಟುವಟಿಕೆ ನಡೆಯುತ್ತಲೇ ಇದೆ. ಕಾಮಾಂಧರಿಗೆ ಕಣ್ಣು ಕಾಣಿಸದು. ಕಿವಿಯೂ ಕೇಳಿಸದು. ಆತ್ಮಗೌರವ, ಆತ್ಮಾಭಿಮಾನವನ್ನು ಅವರು ಗಾಳಿಯಲ್ಲಿ ತೇಲಬಿಡುವರು, ಮರೆತುಬಿಡುವರು (ನಾರೀಮನೋಭವನು ಕಾಲವನು ತಾನರಿಯನಲ್ತೆ).

ಕಥಿತಾನ್ವಯಾ =ಕಥಿತಾ ಸ್ವ ಮಶಾ ಸತೀ—ವವ್ರೇ=ವೃತವತೀ—ಅತ್ಯಾರೂಢೋ = ಅತಿಪ್ರವೃದ್ಧೋ— ನಾರೀಣಾಂ ಮನೋಭವಃ = ಕಾಮಃ—ಕಾಲಜ್ಞೋऽವಸರ ಜ್ಞೋ ನ ಭವತೀತ್ಯಕಾಲಜ್ಞೋ ಹಿ = ಕಾಲದ ಪರಿವೆಯಿಲ್ಲ.

**34. ಕಲತ್ರವಾನಹಂ ಬಾಲೇ ಕನೀಯಾಂಸಂ ಭಜಸ್ವ ಮೇ ।**
**ಇತಿ ರಾಮೋ ವೃಷಸ್ಯಂತೀಂ ವೃಷಸ್ಕಂಧಃ ಶಶಾಸ ತಾಮ್ ॥ ೩೪ ॥**

"ಎಲೆ ಬಾಲೆ (ಎಲೆ ಕಿಶೋರಿ), ನಾನು ಲಗ್ನವಾಗಿರುವ ಗೃಹಸ್ಥನು.ನನ್ನ ಸಹಧರ್ಮಿಣಿ ಇಲ್ಲೇ ಬಳಿಯಲ್ಲಿರುವಳು. ಆದ್ದರಿಂದ ಹೇ ಸುಂದರಾಂಗಿ, ನೀನು ನನ್ನ ತಮ್ಮನ ಬಳಿಗೆ ಹೋಗಿ ಆತನನ್ನು ಒಲಿಸಿಕೊಳ್ಳುವುದು ಲೇಸು. ಆತನು ಏಕಾಂಗಿಯಾಗಿರುವನು" ಎಂದು ವೃಷಭ ಸ್ಕಂಧನಾದ, ಸಕಲಕಲಾವಲ್ಲಭನಾದ, ಸಕಲಪುರುಷಲಕ್ಷಣಗಳಿಂದ ಮೆರೆಯುವ, ಕೋಟಿ ಮನ್ಮಥರೂಪಧರನಾದ ಶ್ರೀರಾಮಚಂದ್ರನು ನುಡಿದು ಆ ರಾಕ್ಷಸ ಸ್ತ್ರೀಯನ್ನು ಸಮಜಾಯಿಸಿ ಲಕ್ಷ್ಮಣನ ಬಳಿಗೆ ಅಟ್ಟಿದನು. ರಾಮನು ವೃಷಸ್ಕಂಧನು, ಪೂರ್ಣಕಾಮನು, ಪೂರ್ಣಜಿತಸೋಮನು. ಸೌಭಾಗ್ಯಸೋಮನು. ಬಲಸಾರಸಂಭೂತನು. ಆಜಾನುಬಾಹು ವಾದ ಶ್ರೀರಾಮಚಂದ್ರನ ಬಾಹುಯುಗಗಳು ವೃಷಭನ ಕೈಕಾಲುಗಳಂತೆ (ವೃಷಸ್ಕಂತಿಯಸು) ಅತ್ಯಂತ ಸುದೃಢವಾದುವು.

ವೃಷಃ ಪುಮಾನ್—ವೃಷಃ ಸ್ಯಾದ್ವಾಸವೇ ಧರ್ಮೇ ಸೌರಭೇಯೇ ಚ ಶುಕ್ರಲೇ— "ಪುಂರಾಶಿಭೇದಯೋಃ ಶೃಂಗಯಾಂ ಮೂಷಕಶ್ರೇಷ್ಠಯೋರಪಿ" ಇತಿ ವಿಶ್ವಃ—ವೃಷಂ ಪುರುಷಮಾತ್ಮಾರ್ಥಮಿಚ್ಛತೀತಿ ವೃಷಸ್ಯಂತೀ ಕಾಮುಕೀ–"ವೃಷಸ್ಯಂತೀ ತು ಕಾಮುಕೀ" ಇತ್ಯಮರಃ—ವೃಷಸ್ಕಂಧೋ ರಾಮೋ ವೃಷಸ್ಯಂತೀಂ ತಾಂ ರಾಕ್ಷಸೀಮ್ "ಹೇ ಬಾಲೆ, ಅಹಂ ಕಲತ್ರವಾನ್, ಮೇ ಕನೀಯಾಂಸಂ ಕನಿಷ್ಠಂ ಭಜಸ್ವ" ಇತಿ ಶಶಾಸಾಜ್ಞಾಪಿತವಾನ್ ॥ ವೃಷಸ್ಯಂತೀ = ವೃಷಂ ಪುರುಷಮ್ ಆತ್ಮಾರ್ಥಂ ಇಚ್ಛತೀತಿ ॥

**35. ಜ್ಯೇಷ್ಠಾಭಿಗಮನಾತ್ ಪೂರ್ವಂ ತೇನಾಪ್ಯನಭಿನಂದಿತಾವ್ ।**
**ಸಾಭೂದ್ರಾಮಾಶ್ರಯಾ ಭೂಯೋ ನದೀವೋಭಯಕೂಲಭಾಕ್ ॥ ೩೫ ॥**

"ಜ್ಯೇಷ್ಠನಾದ (ಅಣ್ಣನಾದ) ನನ್ನ ಹಿರಿಯನನ್ನು ಈ ಮೊದಲೇ ಪ್ರೀತಿಸಿ ನಿನ್ನ ಇಚ್ಛೆಯನ್ನು ಪ್ರಕಟಿಸಿರುವೆ. ಆದ್ದರಿಂದ ಕಿರಿಯನಾದ ನಾನು ನಿನ್ನನ್ನು ಹೇಗೆ ವರಿಸಲಿ ?" ವರಿಸಲು ಸಾಧ್ಯವಿಲ್ಲವೆಂದು ನೆವನವನ್ನೊಡ್ಡಿ ಲಕ್ಷ್ಮಣನು ಆ ರಕ್ಕಸಿಯನ್ನು ಶ್ರೀರಾಮನ ಬಳಿಗೆ ಹಿಂದಕ್ಕಟ್ಟಿದನು. ಧಾರ್ಮಿಕವಾಗಿ ಅಣ್ಣನ ಹೆಂಡತಿಯಾಗತಕ್ಕವಳು ತನ್ನ ತಾಯಿಗೆ ಅಥವಾ ಅತ್ತಿಗೆಗೆ ಇಲ್ಲವೆ ಅಕ್ಕನಿಗೆ ಸಮಾನಳು. ಆದ್ದರಿಂದ ಪೂಜನೀಯಳು ಎಂದು ಅಂತರಾರ್ಥ. ಈ ಸಕಾರಣಗಳನ್ನೊಡ್ಡಿ ಲಕ್ಷ್ಮಣನು ಬೀಸುವ ದೊಣ್ಣೆಯನ್ನು ತಪ್ಪಿಸಿಕೊಂಡನು (ಹಿರಿಯನನು ಈ ಮೊದಲೆ ಸಾರ್ದೆ ಎಂದೂ). ಆಗಲಾ ರಕ್ಕಸಮಹಿಳೆ ನದಿಯ ಪ್ರವಾಹವು ಎರಡು ದಡಗಳನ್ನು ಸೋಂಕುತ್ತ ಹರಿವಂತೆ ಮರಳಿ ರಾಮಾಶ್ರಯವನ್ನು ಬಯಸಿ ಅವನ ಬಳಿಯಲ್ಲಿ ಸುಳಿದು ಪ್ರೇಮಭಿಕ್ಷೆಯನ್ನು ಯಾಚಿಸುತ್ತ (ಇತ್ತಡಿಯ ಸೋಂಕುತಿಹ ತೊರೆಯು ಒಲು) ನಿಂದಳು (ಅರುಟುತ್ತ= ಪಟ್ಟುಹಿಡಿದು).

ನ ಅಭಿನಂದಿತಾ = ನ ಅಂಗೀಕೃತಾ—ಉಭೇ ಕೂಲೇ ಭಜತೀತ್ಯುಭಯಕೂಲಭಾಕ್— ನದೀವಾಭೂತ್—ಸಾ ಹಿ ಯಾತಾಯಾ ತಾಭ್ಯಾಂ ಪರ್ಯಾಯೇಣ ಕೂಲದ್ವಯಂ

ಗಾಮಿನೀ ನದೀ ಸದೃಶ್ಯಭೂದಿತ್ಯರ್ಥಃ—ಉಭಯಂ = ಉಭೇ ಕೂಲೇ ಭಜತಿ ಇತಿ ॥ ಉಪಮಾಲಂಕಾರ ॥

**36. ಸಂರಂಭಂ ಮೈಥಿಲೀಹಾಸಃ ಕ್ಷಣಸೌಮ್ಯಾಂ ನಿನಾಯ ತಾಮ್ ।**
**ನಿವಾತಸ್ತಿಮಿತಾಂ ವೇಲಾಂ ಚಂದ್ರೋದಯ ಇವೋದಧೇಃ ॥ ೩೬ ॥**

ಆಗ ಮೈಥಿಲಿಗೆ ತಡೆಯಲಾಗಲಿಲ್ಲ. ಆಕೆಯ ಹೃದಯದೌರ್ಬಲ್ಯವನ್ನು ನೆನೆದು, ಬೇಡಿ ಕಾಡುವ ಆಕೆಯನ್ನು ಕಂಡು ಬಲವಾಗಿ ನಕ್ಕಳು. ಮಾಯಾಂಗನೆಯಾದ ಆ ರಾಕ್ಷಸಿಯು ಇದೀಗ ತನ್ನ ಬಣ್ಣವನ್ನು ಬದಲಾಯಿಸಿಕೊಂಡಳು. ಕೂಡಲೇ ಘೋರರೂಪವನ್ನು ಧರಿಸಿ ಘರ್ಜಿಸಿದಳು. ಗಾಳಿಯ ಓಡಾಟವಿಲ್ಲದ ತೆರೆಗಳ ಏಳುಬೀಳುಗಳಿಲ್ಲದೆ ಶಾಂತವಾಗಿದ್ದ ಸಾಗರವು (ಅನಿವಾತಸ್ತಿಮಿತದ ಬಂಧಿಯು) ಚಂದ್ರೋದಯವಾದೊಡನೆಯೇ (ಶಶಿಯುದಯ) ಪೆರ್ಚುವಂತೆ, ಕ್ಷೋಭೆಗೆ ಒಳಗಾಗುವಂತೆ ಬೃಹದಾಕಾರದ ಪೆರ್ದೆರೆಗಳನ್ನು ಎಬ್ಬಿಸಿ ಅಲ್ಲೋಲಕಲ್ಲೋಲ(ತಳಮಳಗೊಳ್ಳುವಂತೆ)ವಾಗುವಂತೆ ರಾಕ್ಷಸಿಯ ಸ್ಥಿತಿಯಾಯಿತು. ಆಕೆಯ ರೌದ್ರ, ಅಟ್ಟಹಾಸ, ರೌದ್ರ ಕ್ಷೋಭೆಗೊಂಡ ಮಹಾಸಾಗರದಂತೆ ಭುಗಿಲೆದ್ದಿತು (ವಿಕ್ಷೋಭಿಪಂತೆ).

ಮೈಥಿಲೀಹಾಸಃ ಕ್ಷಣ ಸೌಮ್ಯಾಂ ಸೌಮ್ಯಾಕಾರಾಂ ತಾಂ ರಾಕ್ಷಸೀಮ್=ನಿವಾತೇನ ಸ್ತಿಮಿತಾಂ ನಿಶ್ಚಲಾಂಬುವಿಕೃತೀಮ್—"ಅಬ್ಧ್ಯಂಬುವಿಕೃತೌ ವೇಲಾ" ಇತ್ಯಮರಃ—ಚಂದ್ರೋದಯ ಇವ—ಸಂರಂಭಂ ಸಂಕ್ಷೋಭಂ ನಿನಾಯ—ಕ್ಷಣಸೌಮ್ಯಾ = ರಾಕ್ಷಸಿಯ ಕ್ಷಣಸೌಮ್ಯದಾಕೃತಿಯು— ವಿಕೃತಾ = ಮಾಯಾವಿನಿ ॥

**37. ಫಲಮಸ್ಯೋಪಹಾಸಸ್ಯ ಸದ್ಯಃ ಪ್ರಾಪ್ಸ್ಯಸಿ ಪಶ್ಯ ಮಾಮ್ ।**
**ಮೃಗ್ಯಾಃ ಪರಿಭವೋ ವ್ಯಾಘ್ರ್ಯಾಂ ಇತ್ಯವೇಹಿ ತ್ವಯಾ ಕೃತಮ್॥ ೩೭ ॥**

ರಾಕ್ಷಸಿಯು ಅಟ್ಟಹಾಸದಿಂದ ಘರ್ಜಿಸುತ್ತ "ಎಲೆ ತರುಣಿ, ನಿನ್ನ ನಗೆಯೇ ನಿನಗೆ ದಗೆಯಾಗದಿರದು (ಹಗೆಯಾಗದಿರದು). ಈ ನಿನ್ನ ಹಾಸ್ಯದ ಫಲವನ್ನು ನೀನು ಈ ಕ್ಷಣವೇ ಉಣ್ಣಲಿರುವೆ, ನೋಡುತ್ತಿರು. ಎಲೆ ಮೆಳ್ಳಿ (ಮೂದೇವಿ) ಈ ನಿನ್ನ ಪರಿಹಾಸವು ಹೆಣ್ಣು ಹುಲಿಯನ್ನು, ಹುಲ್ಲನ್ನು ತಿನ್ನುವ ಹುಲ್ಲೆ ಕೆಣಕಿದಂತೆ (ಪರಿಭವಿಸಿದಂತೆ). ಎಂದು ತಿಳಿ" (ನೋಡೆನ್ನ ಪೆರ್ಮೆ). ಈ ತೆರದಿ ನುಡಿದು ಆ ರಕ್ಕಸಿ ಕರ್ಣಕಠೋರವಾಗುವಂತೆ ಘರ್ಜಿಸಿದಳು (ಪರಿಭವಿಸಿದಂತೆಂದು ತಿಳಿ ನಿನ್ನ ಗೆಯ್ಮೆ).

ಮಾಂಪಶ್ಯ-ಅಸ್ಯೋಪಹಾಸಸ್ಯ ಫಲಂ ಸದ್ಯಃ ಸಂಪ್ರತ್ಯೇವ ಪ್ರಾಪ್ಸ್ಯಸಿ—ವ್ಯಾಘ್ರ್ಯಾಂ = ವಿಷಯೇ ॥

**38. ಇತ್ಯುಕ್ತ್ವಾ ಮೈಥಿಲೀಂ ಭರ್ತುಃ ಅಂಕೇ ನಿವಿಶತೀಂ ಭಯಾತ್ ।**
**ರೂಪಂ ಶೂರ್ಪಣಖಾ ನಾಮ್ನಃ ಸದೃಶಂ ಪ್ರತ್ಯಪದ್ಯತ ॥ ೩೮ ॥**

ಸೀತೆ ಭಯಾಕುಲೆಯಾಗಿ ತನ್ನ ಪತಿಯ ತೊಡೆಯನ್ನೇರಿ ಕುಳಿತು ಪತಿಯನ್ನು ಗಾಢವಾಗಿ ಅಪ್ಪಿಕೊಂಡಳು. ಶೂರ್ಪಣಖಿಯು ತನ್ನ ಹೆಸರಿಗೆ ತಕ್ಕಂತೆ ಶೂರ್ಪಣಖಿಯೇ ಆದಳು. ಅವಳು ತನ್ನ ನೈಜವಾದ ವಿಡಂಭೂತವಂತಹ ಘೋರರೂಪನ್ನು ಧರಿಸಿದಳು.

ಅಬ್ಬಬ್ಬಾ ! ಅವಳ ಗೆರಸಿಯಂತಹ, ಚಪ್ಪಟೆಯಾದ ಕೊರಕಲ ಮೂಗು, ಸೊಟ್ಟ ಕಣ್ಣುಗಳು, ತಾಳೆಹಣ್ಣಿನ ಗಾತ್ರದ ಕಣ್ಣುಗಳು, ಮೊರದಂತಹ, ಆನೆಯ ಕಿವಿಗಳ ಗಾತ್ರದ, ಅಗಲವಾದ ಕಿವಿಗಳು, ಒರಟೊರಟಾದ ಉಗುರುಗಳು—ಇಂತಹ ವಿಕಾರರೂಪಿನ, ಬೃಹದಾಕಾರದ ರಕ್ಕಸಿ ಬಾಯ್ತೆರೆದು ಸೀತೆಯ ಮುಂದೆ ಮಾರಿದೇವತೆಯಂತೆ ನಿಂತಳು.

ಭಯಾತ್ ಭರ್ತುರಂಕೇ ನಿವಿಶಂತೀಮಾಲಿಂಗಂತೀಂ—ಶೂರ್ಪಣಖಾ ನಾಮ್ನಃ ಸದೃಶಮ್—ಶೂರ್ಪಾಕಾರನಖಯುಕ್ತೇತ್ಯರ್ಥಃ ॥

**39. ಲಕ್ಷ್ಮಣಃ ಪ್ರಥಮಂ ಶ್ರುತ್ವಾ ಕೋಕಿಲಾಮಂಜುವಾದಿನೀಮ್ ।**
**ಶಿವಾಘೋರಸ್ವನಾಂ ಪಶ್ಚಾದ್ಬುಬುಧೇ ವಿಕೃತೇತಿ ತಾಮ್ ॥ ೩೯ ॥**

ಲಕ್ಷ್ಮಣನು ಆ ಸ್ತ್ರೀಯ ಕುತಂತ್ರವನ್ನು ಕೂಡಲೇ ಅರಿತನು. ಮೊದಲು ಮಂಜುಭಾಷಿಣಿಯಂತೆ, ಕೋಗಿಲೆಯ ನುಡಿಯಲ್ಲಿ ಮಾತನಾಡಿದವಳು, ಸ್ಮಶಾನದಲ್ಲಿ ಹೆಣವನ್ನು ಎಳೆದಾಡುತ್ತ ಕಿರುಚಾಡುವ ಹೆಣ್ಣುನರಿಯಂತೆ ಅರಚಾಡುತ್ತಿರುವಳು, ಕರ್ಕಶಧ್ವನಿಯು ಇವಳಿಗೆ (ಶಿವೆಯುವೋಲು ಕಿರುಚುತಿರಲು) ತಕ್ಕ ಪಾಠವನ್ನು ಕಲಿಸಬೇಕೆಂದು, ಮದ್ದರೆಯು ಬೇಕೆಂದು ಸೌಮಿತ್ರಿ ತನ್ನ ಮನದಲ್ಲಿ ನಿರ್ಧರಿಸಿದನು. ಕರ್ಕಶಧ್ವನಿಯುವಳನ್ನು ವಿಕೃತಗೊಳಿಸಲು ತೀರ್ಮಾನಿಸಿದನು (ಕರ್ಕಶಧ್ವನಿಯುವಳು ವಿಕೃತಿದಲ್ ಎಂದ).

ಪ್ರಥಮಂ ಕೋಕಿಲಾಮಂಜುವಾದಿನೀಂ ಪಶ್ಚಾಚ್ಛಿವಾವದ್ ಘೋರಸ್ವನಾಂ ತಾಂ ಶೂರ್ಪಣಖಾಂ ಶ್ರುತ್ವಾ—ತಸ್ಯಾಃ ಸ್ವನಂ ಶ್ರುತ್ವೇತ್ಯರ್ಥಃ—"ಸಂಸ್ವನಃ ಶಂಖಃ ಶ್ರೂಯತೇ" ಇತಿ ವತ್ ಪ್ರಯೋಗಃ—ವಿಕೃತಾ = ಮಾಯಾವಿನೀತಿ ॥

**40. ಪರ್ಣಶಾಲಾಮಥ ಕ್ಷಿಪ್ರಂ ವಿಕೃಷ್ಟಾಸಿಃ ಪ್ರವಿಶ್ಯ ಸಃ ।**
**ವೈರೂಪ್ಯಪೌನರುಕ್ತ್ಯೇನ ಭೀಷಣಾಂ ತಾಮಯೋಜಯತ್ ॥ ೪೦ ॥**

ಕೂಡಲೇ ಲಕ್ಷ್ಮಣನು ಖಡ್ಗವನ್ನು ಒರೆಯಿಂದ ಸೆಳೆದು, ಖಡ್ಗಪಾಣಿಯಾಗಿ ಪರ್ಣಶಾಲೆಯ ಒಳಕ್ಕೆ ನಡೆದನು. ಆ ಭಯಂಕರಾಕೃತಿಯ ದನುಜೆಯನ್ನು ಭರದಿಂದ ಸೆಳೆದು ಒಯ್ದು, ಆಕೆಯನ್ನು ಕುಟ್ಟಿ ಕೆಡಹಿ ಕಿವಿ, ಮೂಗನ್ನು ಕತ್ತರಿಸಿ, ಮೊದಲೇ ವಿಕಾರರೂಪಿನವಳಾದ ಅವಳನ್ನು ಮತ್ತಷ್ಟು ವಿಕಾರಗೊಳಿಸಿದನು (ಭೀಷಣಾಕೃತಿಯು ದ್ವಿಗುಣಗೊಳಿಸಿದನು).

ವಿಕೃಷ್ಟಾಸಿಃ ಕೋಶೋದ್ಧೃತ ಖಡ್ಗಃ ಸನ್ ಕ್ಷಿಪ್ರಂ ಪರ್ಣಶಾಲಾಂ ಪ್ರವಿಶ್ಯ—ಭೀಷಯತೀತಿ ಭೀಷಣಾಮ್—ದ್ವೈಗುಣ್ಯಂ ಲಕ್ಷಣಯಾ—ಕರ್ಣಾದಿಚ್ಛೇದೇನ ಪುನರತಿ ವಿಕೃತಾಮಕರೋದಿತ್ಯರ್ಥಃ ॥

**41. ಸಾ ವಕ್ರನಖಧಾರಿಣ್ಯಾ ವೇಣುಕರ್ಕಶಪರ್ವಯಾ ।**
**ಅಂಕುಶಾಕಾರಯಾಂಗುಲ್ಯಾ ತಾವತರ್ಜಯದಂಬರೇ ॥ ೪೧ ॥**

ಆ ದನುಜೆ ಅಂಬರವನ್ನಡರಿ ತನ್ನ ನಿಡಿದಾದ ತೋಳುಗಳನ್ನು ಚಾಚಿ ವಕ್ರವಾದ ಕೂರುಗಳಿಂದ ರಾಮಲಕ್ಷ್ಮಣರನ್ನು ಗಾಯಗೊಳಿಸಲು ಬಗೆದಳು. ಅವಳ ಕೈಬೆರಳುಗಳು

ದಪ್ಪವಾದ ಉದ್ದನೆ ಬೆಳೆದ ಗಿಣ್ಣುಗಳಿಂದ ಬಿದಿರಿನಂತೆ ಬಲವಾಗಿದ್ದುವು. ಕೂರುಗುರು ಗಳಿಂದ ಕೂಡಿದ ಕರ್ಕಶವಾದ ಅವಳ ಚಾಚಿದ ಕೈಯು ಆನೆಯ ಮಾವುತನ ಕೈಯಲ್ಲಿರುವ ಅಂಕುಶವನ್ನು ಹೋಲುತ್ತಿದ್ದಿತು (ಕೊಂಕಿರುವ ಕೂರುಗುರು) (ಗಿಣ್ಣುಗಳಿರುವ). ಅವಳು ಆ ದಿಟ್ಟೆ ರಕ್ಕಸಿ ಆಕಾಶಮಾರ್ಗದಲ್ಲಿ ನಿಂತು ಆರ್ಭಟಿಸುತ್ತಾ ರಾಮಲಕ್ಷ್ಮಣರನ್ನು ಅಂಜಿಸಲು ಬಗೆದಳು.

ಸಾ ವಕ್ರನಖಂ ಧಾರಯತೀತಿ ವಕ್ರನಖಧಾರಿಣೀ ತಯಾ ವೇಣುಕರ್ಕಶಪರ್ವಯಾ— ಅತ ಏವಾಂಕುಶಸ್ಯಾಕಾರ ಇವಾಕಾರೋ ಯಸ್ಯಾಃ—"ಅಂಬರಂ ವ್ಯೋಮ್ನಿ ವಾಸಸಿ" ಇತ್ಯಮರಃ—ವೇಣು = ವೇಣೋರಿವ ಕರ್ಕಶಾನಿ ಪರ್ವಾಣಿ ಯಸ್ಯಾಃ ಸಾ = ಗಿಣ್ಣು ಗಳಿರುವ (ಪರ್ವ) ಬಿದಿರು.

**42. ಪ್ರಾಪ್ಯ ಚಾಶು ಜನಸ್ಥಾನಂ ಖರಾದಿಭ್ಯಸ್ತಥಾ ವಿಧಮ್ ।**
**ರಾಮೋಪಕ್ರಮಮಾಚಖ್ಯೌ ರಕ್ಷಃ ಪರಿಭವಂ ನವಮ್ ॥ ೪೨ ॥**

ಶೂರ್ಪನಖಿಯು ರಾಕ್ಷಸರ ಸ್ಥಾನವಾದ (ಪಾಳ್ಯವಾದ) ಜನಸ್ಥಾನಕ್ಕೆ ತೆರಳಿ ಖರಾದಿ ಗಳನ್ನು ಕಂಡು (ಖರ, ದೂಷಣ, ತ್ರಿಶಿರ) ಅವರಲ್ಲಿ ಶ್ರೀರಾಮನಿಂದಾದ ಪರಿಭವವನ್ನು ವಿವರಿಸಿದಳು. ಶ್ರೀರಾಮನು ತನಗೆ ಮಾಡಿದ ಅವಮರ್ಯಾದೆಯನ್ನು, ಅನ್ಯಾಯವನ್ನು, ಬರ್ಬರಕೃತ್ಯವನ್ನು ಬಣ್ಣಿಸಿ ಹೇಳಿದಳು. ಆ ರಾಕ್ಷಸರು ತಮ್ಮ ನೆಲೆಯಲ್ಲಿ ಅಂತಹ ದಿಟ್ಟತನದ ಆಕ್ರಮಣಕಾರಿ (ಕ್ರಾಂತಿಕಾರಿ, ದಮನಕಾರಿ) ಕೃತ್ಯವನ್ನು ಕೇಳಿ ಅಚ್ಚರಿ ಗೊಂಡರು. ಇದು ರಾಕ್ಷಸರ ದರ್ಪವನ್ನು (ಕೋಡನ್ನು) ಮುರಿಯುವ ಮೊದಲ ಹಂತದ ಕೆಲಸವಾಗಿತ್ತು. ರಾಮಾನುಜನು ಶೂರ್ಪಣಖಿಯ ಕಿವಿಮೂಗುಗಳನ್ನು ಕೊಯ್ದು ವಿರೂಪಗೊಳಿಸಿ ಕಾಲುಕೆರೆದು ರಾಕ್ಷಸರನ್ನು ಜಗಳಕ್ಕೆ ಕರೆದಂತಾಯಿತು (ಜುಟ್ಟನ್ನು ಹಿಡಿದು ಸೆಳೆದಂತೆ). ಇದರ ಪರಿಣಾಮವನ್ನು ಕಾದುನೋಡಬೇಕಷ್ಟೆ, ಇದು ಆಕ್ರಮಣ ಕಾರಿಕೃತ್ಯವೆಂದು ರಕ್ಕಸರು ತಿಳಿದು ಪ್ರತೀಕಾರಭಾವನೆಯಿಂದ (ಮೆಯ್ಯಿಗೆ ಮೆಯ್ಯಿ, ಹಗೆಗೆ ಹಗೆ, ಹಗೆಯು ಹೋಗೆ, ಸೇಡು ತೀರಿಸು) ಉರಿದೆದ್ದರು. ಯುದ್ಧಕ್ಕೆ ಸಜ್ಜಾದರು. ರಾಕ್ಷಸರು ಯುದ್ಧಪ್ರಿಯರು. ಶ್ರೀರಾಮನ ಪಂಥಾಹ್ವಾನವನ್ನು (ಸವಾಲನ್ನು) ಸ್ವೀಕರಿ ಸಿದರು. ಜನಸ್ಥಾನವು ರಾವಣಸಾಮ್ರಾಜ್ಯದ ಬಲಿಷ್ಠಸೀಮೆಯಾಗಿತ್ತು (ಠಾಣ್ಯ).

ರಾಕ್ಷಸೇಭ್ಯಸ್ತಥಾ ವಿಧಂ ಸ್ವಾಂಗಚ್ಛೇದಾತ್ಮಕಂ—ಉಪಕ್ರಮ್ಯತ ಇತ್ಯುಪಕ್ರಮಃ— ರಾಮಸ್ಯ ಕರ್ತುರುಪಕ್ರಮಃ ರಾಮೋಪಕ್ರಮಮ್—ರಾಮೇಣಾದಾವುಪಕ್ರಾಂತ ಮಿತ್ಯರ್ಥಃ—ಜನಸ್ಥಾನಂ = ದಂಡಕಾರಣ್ಯದ ಒಂದು ಭಾಗ—ರಾಮೋಪಕ್ರಮಮ್ = ರಾಮೇಣಾದೌ ಉಪಕ್ರಾಂತಮ್ = ಉಪಕ್ರಮ = ಪ್ರಾರಂಭ.

**43. ಮುಖಾವಯವಲೂನಾಂ ತಾಂ ನೈರ್ಋತಾ ಯತ್ಪುರೋ ದಧುಃ ।**
**ರಾಮಾಭಿಯಾಯಿನಾಂ ತೇಷಾಂ ತದೇವಾಭೂದಮಂಗಲಮ್ ॥ ೪೩ ॥**

ವಿರೂಪಹೊಂದಿರುವ ಆ ರಕ್ತಸಿಕ್ತ ರಕ್ಕಸಿಯನ್ನು ಮುಂದಿಟ್ಟು ಶ್ರೀರಾಮನ ಬಳಿಗೆ ಯುದ್ಧೋತ್ಸಾಹದಿಂದ ಓಡೋಡಿಬಂದವರು ಆ ಧಾಂಡಿಗರು. ಮೂಗು, ಕಿವಿ, ಮೂಗು

ಗಳನ್ನು ಕೊಯ್ಸಿಕೊಂಡಿರುವವಳನ್ನು, ಅಮಂಗಲಕರವಾದ ರೂಪ, ಅವಲಕ್ಷಣ ಹೊಂದಿರುವ ಆ ದೈತ್ಯೆಯನ್ನು ಮುಂದಿರಿಸಿಕೊಂಡು ಬಂದುದು ಅವರ ಮುಂದಿನ ಯುದ್ಧೋದ್ಯಮಕ್ಕೆ ಅಮಂಗಲವೇ ನಾಂದಿಯಾಯಿತು. ಹೇತುವಾಯಿತು (ಎಲ್ಲಾ ಬಣ್ಣ ಮಸಿ ನುಂಗಿತು ಎಂಬಂತೆ).

ನೈರ್ಋತಾ ರಾಕ್ಷಸಾಃ—"ನೈರ್ಋತೋ ಯಾತು ರಕ್ಷಸೀ" ಇತ್ಯಮರಃ—ಮುಖಾ ಪಯಾವೇಷು ಕರ್ಣಾದಿಷು—ಲೂನಾಂ = ಛಿನ್ನಾಂ ॥

**44. ಉದಾಯುಧಾನಾಪತತಸ್ತಾನ್ ದೃಪ್ತಾನ್ ಪ್ರೇಕ್ಷ್ಯ ರಾಘವಃ ।**
**ನಿದಧೇ ವಿಜಯಾಶಂಸಾಂ ಚಾಪೇ ಸೀತಾಂ ಚ ಲಕ್ಷ್ಮಣೇ ॥ ೪೪ ॥**

ಆ ವಿರೂಪಾಕೃತಿಯು ಮುಖಾವಯವವು ಊನಹೊಂದಿರುವ ನೈಋುತಸ್ತ್ರೀಯು (ದಾನವಸ್ತ್ರೀ, ದಾನವಿ) ಅವರ ಮಾರ್ಗಸಂಚಾಲಕಳಂತೆ, ಮುಖಂಡಳಂತೆ ಶೋಭಿಸುತ್ತ 14,000 ದೈತ್ಯರ ಪಡೆಯನ್ನು ಏಕಕಾಲದಲ್ಲಿ ಕರೆದುಕೊಂಡು ಜನಸ್ಥಾನಕ್ಕೆ, ಶ್ರೀರಾಮನ ಪರ್ಣಕುಟೀರದ ಬಾಗಿಲ ಬಳಿಗೇ ಕರೆತಂದಳು, ತ್ರಿಲೋಕವೀರರಾದ ಖರ, ದೂಷಣ, ತ್ರಿಶಿರರ ಸಹಿತ.

ಕೈದುಗಳನ್ನು ಕೈಯಲ್ಲಿ ಹಿಡಿದು ಮೇಲೆತ್ತಿ ಝಳಪಿಸಿ ತೋರಿಸುತ್ತಿರುವ ದೈತ್ಯ ಪಡೆಯು ತನ್ನತ್ತ ಬರುತ್ತಿರುವುದನ್ನು ಶ್ರೀರಾಮಚಂದ್ರನು ನೋಡಿದನು. ಕೂಡಲೇ ತನ್ನ ಇನಿಯಳಾದ ಜನಕಜೆಯನ್ನು ಲಕ್ಷ್ಮಣನ ರಕ್ಷಣೆಯಲ್ಲಿರಿಸಿ (ಲಕ್ಷ್ಮಣನೊಳು ಇನಿಯಳನು) ತಾನು ವಿಜಯದಾಶೆಯನ್ನು ಕೈಹಿಡಿಯುವಂತೆ ಧನುಸ್ಸನ್ನು (ಕೋದಂಡ ವನ್ನು) ಕೈಯಲ್ಲಿ ಧರಿಸಿ ಪ್ರಕಾಶಿಸಿದನು (ಚಾಪದೊಳು ವಿಜಯದಾಶೆಯನು). ರಾಘವನು ವಿಜಯಾಕಾಂಕ್ಷಿತನಾಗಿ ಚಾಪಧರನಾದನು ಜಗದೇಕಧನುರ್ಧರನಾದ ದಶರಥರಾಮನು.

ಉದಾಯುಧಾನುದ್ಯತಾಯುಧಾ ನಾಪಗತ ಆಗಚ್ಛತೋ—ರಾಘವಶ್ಚಾಪೇ ವಿಜಯ ಸ್ಯಾಶಂ ಸಾಮಾಶಾಂ ಲಕ್ಷ್ಮಣೇ ಸೀತಾಂ ಚ ನಿದಧೇ—ಸೀತಾರಕ್ಷಣೇ ಲಕ್ಷ್ಮಣಾಂ ನಿಯುಜ್ಯ ಸ್ವಯಂ ಯುದ್ಧಾಯ ಸನ್ನದ್ಧ ಇತಿ ಭಾವಃ—ಉದಾಯುಧಾನ್ = ಉದ್‌ಗತಾನಿ ಆಯುಧಾನಿ ಯೇಷಾಂ ತಾನ್ ॥ ದೀಪಕ ಅಲಂಕಾರ ॥

**45. ಏಕೋ ದಾಶರಥಿಃ ಕಾಮಂ ಯಾತುಧಾನಾಃ ಸಹಸ್ರಶಃ ।**
**ತೇ ತು ಯಾವನ್ತ ಏವಾಜೌ ತಾವಾಂಶ್ಚ ದದೃಶೇ ಸ ತೈಃ ॥ ೪೫ ॥**

ಶ್ರೀರಾಮನಾದರೋ ಏಕಾಕಿ, ಒಬ್ಬನೇ ಒಬ್ಬ, ಏಕಾಂಗಿ. ರಾಕ್ಷಸರಾದರೋ 14,000 ಮಂದಿ ಕಟ್ಟಾಳುಗಳು. ಖರ, ದೂಷಣ, ತ್ರಿಶಿರರು ಲೋಕೈಕವೀರರು, ಜಗಜಟ್ಟಿಗಳು. ಈ ತನಕ ಸೋಲನ್ನರಿಯದ ಯಾರಿಗೂ ಹಿಮ್ಮೆಟ್ಟದ ಉದ್ಧತರು. ಆದರೆ ಯುದ್ಧವು ಆರಂಭವಾದೊಡನೆಯೇ, ಅವರೊಬ್ಬೊಬ್ಬರೊಡನೆಯೂ ಒಬ್ಬೊಬ್ಬ ರಾಮನು ಬಿಲ್ಹಿಡಿದು ಹೋರಾಡುವುದನ್ನು ಕಂಡರು (ಏಕೋ ಸದ್ವಿಪ್ರಾ ಬಹುಧಾ ವದಂತಿ). ಆ ರಣರಂಗವು ಶ್ರೀರಾಮನ ಶಸ್ತ್ರವಿದ್ಯಾಮಹಿಮೆಯಿಂದ 14,000 ಮಂದಿ ಶ್ರೀರಾಮ ರನ್ನು ಏಕಕಾಲದಲ್ಲಿ ಕಂಡಿತು. ರಣರಂಗವು ಶ್ರೀರಾಮಮಯವಾಯಿತು ("ಅಲ್ಲಿ

ನೋಡಿದರು ರಾಮ, ಇಲ್ಲಿ ನೋಡಿದರು ರಾಮ, ಎಲ್ಲಿ ನೋಡಿದರೂ ರಾಮ" ಎಂಬಂತೆ) (ತಮ್ಮನಿತೆ ಸಂಖ್ಯೆಯಿಂದಿರ್ಪ ರಾಮರ್ಕಳನು).

ದಾಶರಥೀರಾಮ ಏಕೋ ದ್ವಿತೀಯಃ—ಯಾತುಧಾನಾಃ ರಾಮಂ ಸಹಸ್ರಶಃ—ಏವ ತಾವಾಂಸ್ತಾವತ್ಸಂಖ್ಯಾಕಶ್ಚ ದದೃಶೇ ॥

**46. ಅಸಜ್ಜನೇನ ಕಾಕುತ್ಸ್ಥಃ ಪ್ರಯುಕ್ತಮಥ ದೂಷಣಮ್ ।**
**ನ ಚಕ್ಷಮೇ ಶುಭಾಚಾರಃ ಸ ದೂಷಣಮಿವಾತ್ಮನಃ ॥ ೪೬ ॥**

ಸ್ವಭಾವದಿಂದ ದುಷ್ಟರಾದ, ದುರ್ಜನರಾದ ಕಾಳಭೈರವರಂತಿರುವ ರಕ್ಕಸಯೋಧರು ತಮ್ಮ ಸೇನಾಧಿಪತಿಯಾಗಿ ದೂಷಣನೆಂಬ ರಕ್ಕಸವೀರನನ್ನು ಆರಿಸಿ ರಘೂದ್ವಹನೊಡನೆ, ಪ್ರತಿದ್ವಂದ್ವಿಯಾಗಿ ಹೋರಾಡಲು ಕಳುಹಿಸಿದರು. ಆ ದುರ್ಜನರ ದೂಷಣೆಗಳನ್ನು, ಕೆಟ್ಟ ವಚನಗಳು, ಅಶುಭ ಆಚಾರಗಳನ್ನು ಸಜ್ಜನರು ಸಹಿಸದಿರುವಂತೆ ಸಜ್ಜನಶ್ರೇಷ್ಠನಾದ ರಘುಪುಂಗವನು ದೂಷಣನೊಡನೆ ನಿಖರವಾಗಿ ಹೋರಾಡಿ ಅವನಿಗೆ ತಕ್ಕ ಶಾಸ್ತಿಯನ್ನು ಮಾಡಿದನು. ಯುದ್ಧನೀತಿವಿಶಾರದನಾದ ರಾಘವನು ಧರ್ಮಯುದ್ಧದ ನಿಯಮದಂತೆ ಕಾದಾಡಿ ಹೋರಾಡಿ ವಿಜಯಿಯಾದನು. ತನ್ನ ಹೆಸರಿಗೆ ಕಳಂಕ ಬಾರದಂತೆ, ರಣಪಂಡಿತನಾದ ರಾಘವನು ಹೋರಾಡಿದನು. ಅದು ಸಜ್ಜನನಾದ, ಸದಾಚಾರಿ ಓರ್ವ ಮಾನವಶ್ರೇಷ್ಠನ ವಿಜಯವಾಗಿತ್ತು. ದುರಾಚಾರಿಗಳೂ, ಅಶುಭಕರ್ಮಾಚಾರಿಗಳೊಡನೆ ಹೋರಾಡುವುದು ಅಷ್ಟೇನೂ ಸುಲಭವಲ್ಲ. ರಾಕ್ಷಸರ ದೋಷಗಳ ಸಾಕಾರಮೂರ್ತಿಯಾದ ದೂಷಣನು ರಾಕ್ಷಸರ ಆತ್ಮದಂತಿದ್ದನು. ಅದು ಅಸತ್ಯದೊಡನೆ ಸತ್ಯವು ಹೋರಾಡಿದಂತೆ ಶ್ರೀರಾಮನ ಹೋರಾಟವಾಗಿತ್ತು. ನಿಶಾಚರರಿಗೆ ಯುದ್ಧ ನಿಯಮವೇ ಇರಲಿಲ್ಲ. ಮನಬಂದಂತೆ (ಲಂಗುಲಗಾಮಿಲ್ಲ) (ಅಶುಭಾಚಾರರತನವನು).

ಅಸಜ್ಜನೇನ = ದುರ್ಜನೇನ, ರಕ್ಷೋಜನೇನ—ದೂಷಣಂ = ದೂಷಣಾಖ್ಯಂ—ರಾಕ್ಷಸಮಾತ್ಮನೋ ದೂಷಣಂ = ದೋಷಮಿವ—ನ ಚಕ್ಷಮೇ = ನ ಸೇಹೇ ॥

**47. ತಂ ಶರೈಃ ಪ್ರತಿಜಗ್ರಾಹ ಖರತ್ರಿಶಿರಸೌ ಚ ಸಃ ।**
**ಕ್ರಮಶಸ್ತೇ ಪುನಸ್ತಸ್ಯ ಚಾಪಾತ್ಸಮಮಿವ್ರೋದ್ಯಯುಃ ॥ ೪೭ ॥**

ರಾಕ್ಷಸಮುಖಂಡನಾದ ಖರಾಸುರ (ರಾವಣನ ಚಿಕ್ಕಮ್ಮನ ಮಕ್ಕಳು), ಇನ್ನೊಬ್ಬ ಮಹಾವೀರಾಧಿವೀರ, ತೇಜಸ್ವಿ ತ್ರಿಶಿರ (ಮೂರು ತಲೆಯುವ), ಅವರು ಏಕಕಾಲದಲ್ಲಿ ಶ್ರೀರಾಮನನ್ನು ಮುತ್ತಿದರು. ಶ್ರೀರಾಮನು ತನ್ನ ಚಾಪದಿಂದ ಏಕಕಾಲದಲ್ಲಿ ಅವರನ್ನು ಪ್ರತಿಭಟಿಸಿ ಪುಂಖಾನುಪುಂಖವಾಗಿ ಅವರ ಮೇಲೆ ಬಾಣಗಳ ಮಳೆಗರೆದನು. ಅವರ ಕೈಮೈ ಸುಟ್ಟುಹೋದುವು. ರಾಮಬಾಣದಿಂದ ಅವರ ದೇಹ ಸೀಳಿಹೋದುವು. ಶ್ರೀರಾಮನ ಕೈಚಳಕವು ಅತ್ಯಂತ ಲಘುವಾಗಿತ್ತು. ಹಸ್ತಲಾಘವವು ಅಲೌಕಿಕವಾಗಿತ್ತು. ಅತಿಲಘುಹಸ್ತನಾಗಿ ಶರಗಳನ್ನು ಹೂಡುವ, ಬಿಡುವ, ಖಂಡಿಸುವ ರೀತಿಯು ಅಲೌಕಿಕವಾಗಿತ್ತು. ಶ್ರೀರಾಮನು ಜಗದೇಕಧನುರ್ಧರನೆಂಬ ಕೀರ್ತಿಗೆ ಪಾತ್ರನಲ್ಲವೆ ?

ಶರೈಃ ಪ್ರತಿಜಗ್ರಾಹ=ಪ್ರತಿಜಹಾರೇತ್ಯರ್ಥಃ—ಸೋಲಿಸು=ತೊತ್ತಳತುಳಿ—ಕ್ರಮಶಃ

= ಯಥಾಕ್ರಮಮ್—ಪುನಶ್ಚ ಪಾತ್ರಮ=ಯುಗಪದಿವೋಧ್ಯಾಯಃ=ಅತಿಲಘುಹಸ್ತ ಇತಿ ಭಾವಃ ॥

**48. ತೈಸ್ತ್ರಯಾಣಾಂ ಶಿತೈರ್ಬಾಣೈಃ ಯಥಾ ಪೂರ್ವವಿಶುದ್ಧಿಭಿಃ ।**
**ಆಯುರ್ದೇಹಾತಿಗೈಃ ಪೀತಂ ರುಧಿರಂ ತು ಪತತ್ರಿಭಿಃ ॥ ೪೮ ॥**

ಶ್ರೀರಾಮನು ಎಸೆದ ಮೂರು ಕೂರಂಬುಗಳು ಅತ್ಯಂತ ವೇಗದಿಂದ ಆ ಮೂವರು ದೈತ್ಯರ ದೇಹವನ್ನು ಸೀಳಿ ಅವರ ಪ್ರಾಣವನ್ನು ಮಾತ್ರ ಹೀರಿ (ಆಯುಸ್ಸನ್ನು) ಮಾತ್ರ ಹೀರಿ ದೇಹವನ್ನು ಭೇದಿಸಿ ಹೊರಬಂದುವು. ಆದರೆ ಆ ಮೂರು ಮಂದಿ ದೈತ್ಯರ ಎದೆಯ ಗಾಯದಿಂದ ಒಂದು ತೊಟ್ಟು (ಒಂದು ಬಿಂದು) ನೆತ್ತರೂ ಹೊರಹರಿಯಲಿಲ್ಲ. ಆ ರಾಮಬಾಣಗಳು ರಕ್ತವನ್ನು ಹೀರದೆ ರಣಹದ್ದು, ಕಾಗೆ, ಗೂಗೆಗಳೇ ಮೊದಲಾದ ಮಾಂಸಾಹಾರಿ ಪಕ್ಷಿಗಳಿಗೆ, ನರಿ, ತೋಳಗಳಿಗೆ ಉಣಲು ಉಳಿಸಿ ಹೊರಬಂದುವು. ಆ ತೀಕ್ಷ್ಣವಾದ ಬಾಣಗಳು ಅತ್ಯಂತ ವೇಗದಿಂದ ಹೊರಬಂದುದರಿಂದ ಅವುಗಳಿಗೆ ರಕ್ತಲೇಪನವಾಗಲಿಲ್ಲ. ಖರಾದಿಗಳು ಮೃಗಪಕ್ಷಿಗಳಿಗೆ ಆಹಾರವಾಗಿ ಭೂಮಿಯಲ್ಲಿ ಕೊಳೆಯುತ್ತಾ ಪವಡಿಸಿದರು.

ದೇಹಮತೀತ್ಯಭಿತ್ವಾ ಗಚ್ಛಂತೀತಿ ದೇಹಾತಿಗಾಃ—ರುಧಿರಲೇಪರಹಿತೈರಿತ್ಯರ್ಥಃ—ಶಿತೈಸ್ತೀಕ್ಷ್ಣೈಃ—ರುಧಿರಂ ತು ಪತತ್ರಿಭಿಃ ಪೀತಮ್—ಯಥಾಪೂರ್ವವಿಶುದ್ಧಿಭಿಃ = ಯಥಾಪೂರ್ವಾ ವಿಶುದ್ಧಿಃ—ಪತತ್ರಿಭಿಃ = ಪತತ್ರ (ರೆಕ್ಕೆ) + ಇನ್ = ಪಕ್ಷಿ.

**49. ತಸ್ಮಿನ್ ರಾಮಶರೋತ್ಕೃತ್ತೇ ಬಲೇ ಮಹತಿ ರಕ್ಷಸಾಮ್ ।**
**ಉತ್ಥಿತಂ ದದೃಶೇಽನ್ಯಚ್ಚ ಕಬಂಧೇಭ್ಯೋ ನ ಕಿಂಚನ ॥ ೪೯ ॥**

ರಾಮಶರವು ಅಸುರಪಡೆಯನ್ನು ತರಿದೊಡ್ಡಿತು. ರಣರಂಗವು ಹೆಣಮಯವಾಯಿತು. ಆ ರಣರಂಗವನ್ನು ಈಕ್ಷಿಸಿದರೆ ರುಂಡವಿಲ್ಲದ ಮುಂಡವಲ್ಲದ ಬೇರೇನೂ ಕಣ್ಣಿಗೆ ಕಾಣಿಸುತ್ತಿರಲಿಲ್ಲ (ನಿಂದುದು ಕಬಂಧಾಳಿ). ಕಬಂಧಗಳು (ರುಂಡವಿಲ್ಲದ ದೇಹ) ಶಿರೋಹೀನವಾದ ದೈತ್ಯರ ದೇಹ ಮಾತ್ರ ರಣರಂಗದಲ್ಲಿ ನಿಂತಿರುವ ದೃಶ್ಯ ಕಾಣಬರುತ್ತಿತ್ತು. ದೈತ್ಯರ ಶಸ್ತ್ರಾಸ್ತ್ರಗಳು, ರಥಗಳು, ಬಾವುಟಗಳು ಚೂರುಚೂರಾಗಿ ಕೆಡೆದು ಬಿದ್ದಿದ್ದುವು. ರಾಕ್ಷಸ ಬಲವು ರಾಮಬಾಣದ ಮಹತ್ತಿನಿಂದ ನಿರ್ನಾಮಹೊಂದಿತು. ನಿಶ್ಶೇಷಗೊಂಡಿತು.

ಕಬಂಧೇಭ್ಯಃ = ಶಿರೋಹೀನಶರೀರೇಭ್ಯಃ — "ಕಬಂಧೋಽಸ್ತ್ರೀಕ್ರಿಯಾಯುಕ್ತಮಪಮೂರ್ಧಕಲೇವರಮ್" ಇತ್ಯಮರಃ—ನಿಃಶೇಷಂ ಹತಮಿತ್ಯರ್ಥಃ—ಉತ್ಥಿತಂ=ಉದ್+ಕೃತ್ ॥ ಉತ್ಪ್ರೇಕ್ಷಾಲಂಕಾರ ॥

**50. ಸಾ ಬಾಣವರ್ಷಿಣಂ ರಾಮಂ ಯೋಧಯಿತ್ವಾ ಸುರದ್ವಿಷಾಮ್ ।**
**ಅಪ್ರಬೋಧಾಯ ಸುಷ್ವಾಪ ಗೃಧ್ರಚ್ಛಾಯೇ ವರೂಥಿನೀ ॥ ೫೦ ॥**

ರಾಮನನ್ನು ಕೆಣಕಿ ಯುದ್ಧಕೆಳಸಿದ ರಕ್ಕಸಬಲವ ಮೇಲೆ ರಾಮನು ಬಾಣಗಳ ಮಳೆಯನ್ನೇ ಸುರಿಸಿದನು. ಆ ರಕ್ಕಸರು ಹತರಾಗಿ ಮತ್ತೇಳದಂತಹ ದೀರ್ಘನಿದ್ರೆಯಲ್ಲಿ

ಮೈಮರೆತು ಆ ಬಯಲಿನಲ್ಲಿ ಮಲಗಿದರು. ಅವರು ಹದ್ದುಗಳ ರೆಕ್ಕೆಗಳ ನೆರಳಿನಲ್ಲಿ ಒರಗಿ ನಿದ್ರಿಸಿದರು. ಹೀಗೆ ಮಲಗಿದವರು ಮತ್ತೆ ಏಳಲೇ ಇಲ್ಲ. ಅವರಿಗೆ ಎಚ್ಚರಿಕೆ ಆಗಲೇ ಇಲ್ಲ. ಮಾತೃಭೂಮಿಯಾದ ದಂಡಕಾರಣ್ಯವು ಅವರಿಗೆ ಸಮಾಧಿಭೂಮಿಯಾಗಿ ಪರಿಣಮಿಸಿತು (ಮೃತ್ಯುಭೂಮಿಯಾಯಿತು) (ಮತ್ತೇಳದಂತಹ ನಿದ್ರೆಯೊಳು).

ಬಾಣವರ್ಷಿಣೀಂ ರಾಮಂ ಯೋಧಯಿತ್ವಾ=ಯುದ್ಧಂ ಕಾರಯಿತ್ವಾ—ಗೃಧ್ರಾಣಾಂ ಛಾಯಾ = ಗೃಧ್ರಛಾಯಮ್—ಛಾಯಾಬಾಹುಲ್ಯೇ—(ಪಾಣಿನಿ)—ಇತಿ ಕ್ಲೀಬತ್ವಮ್ ತಸ್ಮಿನ್—ಅಪ್ರಬೋಧಾಯ=ಪುನರ್ ಬೋಧಾಯ ಸುಷ್ವಾಪ—ವರೂಥಿನೀ=ಸೇನಾ = ವರೂಥೋ ನಾಮ್ ರಥಗುಪ್ತಿಃ ಅಸ್ತಿ ಆಸ್ಯಾಮ್ ಇತಿ=ಸೇನೆ, ಸೈನ್ಯ—ಯೋಧಯಿತ್ವಾ = ಯುದ್ಧಂ + ಕಾರಯಿತ್ವಾ ॥

**51. ರಾಘವಾಸ್ತ್ರವಿದೀರ್ಣಾನಾಂ ರಾವಣಂ ಪ್ರತಿ ರಕ್ಷಸಾಮ್ ।**
**ತೇಷಾಂ ಶೂರ್ಪಣಖೈವೈಕಾ ದುಷ್ಪ್ರವೃತ್ತಿಹರಾಭವತ್ ॥ ೫೧ ॥**

ರಾಮಾಸ್ತ್ರದಿಂದ ದೈತ್ಯಸೇನೆಯು ಚೂರುಚೂರಾಗಿ ಹತವಾಗಿ ಶೂರ್ಪಣಖಿ ಓರ್ವಳೇ ಉಳಿದಳು. ಆ ದುಷ್ಟವಾರ್ತೆಯನ್ನು ರಾವಣೇಶ್ವರನಿಗೆ ಕೊಂಡೊಯ್ಯುವ ದೂತಿಯಂತೆ ತಾನೊಬ್ಬಳೇ ಉಳಿದು, ತಾನೂ ರಾಘವಾಸ್ತ್ರದಿಂದ ಗಾಯಗೊಂಡು ಕಿವಿ, ಮೂಗು ಕತ್ತರಿಸಿಕೊಂಡು, ಆ ದುರ್ವಾರ್ತೆಯನ್ನು ಕೊಂಡೊಯ್ದಳು. ದುಷ್ಟಪ್ರವೃತ್ತಿಗೆ ಸೋಲು ಅನಿವಾರ್ಯವಲ್ಲವೆ (ರಾವಣನಿಗೊರೆವ ದೂತಿಯೊಬ್ಬಳಾದಳೆಂದು) ?

ಸಾ ಶೂರ್ಪಣಖಾ—ಪೂರ್ವಪದಾತ್ಸಂಜ್ಞಾಯಾಮ್—ಇತಿ ಣತ್ವಮ್—"ನಖಮುಖಾತ್ಸಂಜ್ಞಾಯಾಮ್" ಇತಿ ಙೀಷ್ ಪ್ರತಿಷೇಧಃ—ದುಷ್ಪ್ರವೃತ್ತಿವಾರ್ತಾಹರತಿ ಪ್ರಾಪಯಂತೀತಿ ದುಷ್ಪ್ರವೃತ್ತಿಹರಾಽಭವತ್ ॥

**52. ನಿಗ್ರಹಾತ್ ಸ್ವಸುರಾಪ್ತಾನಾಂ ವಧಾಚ್ಚ ಧನದಾನುಜಃ ।**
**ರಾಮೇಣ ನಿಹಿತಂ ಮೇನೇ ಪದಂ ದಶಸು ಮೂರ್ಧಸು ॥ ೫೨ ॥**

ದಶಕಂಠ ರಾವಣನಿಗೆ ಆ ಸೋಲಿನ ವರ್ತಮಾನವನ್ನು ಕೇಳಿ ರಾಘವನು ತನ್ನ ತಲೆಯನ್ನು ಕಾಲಿನಿಂದ ಮೆಟ್ಟಿದಂತಾಯಿತು. ಖರಾದಿಬಾಂಧವರ ಸಾವು ಒಂದೆಡೆ, ರಾಕ್ಷಸ ಸೇನೆಯ ಅಧಃಪತನ, ಮೇಲಾಗಿ ಪ್ರೀತಿಯ ತಂಗಿ, ವಿದ್ಯುಜ್ಜಿಹ್ವನ ಮಡದಿ ಶೂರ್ಪಣಖಿಯನ್ನು ದುಡಿಸಿ, ವಿಕೃತಗೊಳಿಸಿ ಅವಮಾನಮಾಡಿ ಕಳುಹಿಸಿದುದನ್ನು ಕೇಳಿ ಕುಬೇರನ ತಮ್ಮನಾದ ರಾವಣನು ಸಿಡಿದೆದ್ದನು. ಶ್ರೀರಾಮನು ತನ್ನ ಈರೈದು ಹತ್ತು ತಲೆಗಳ ಮೇಲೆ ಅಡಿಯಿಟ್ಟನೆಂದೇ ಆ ಕುಬೇರಾನುಜನು ಬಗೆದನು (ಹಲ್ಲಿಗೆ ಹಲ್ಲು ಕೀಳುವೆನೆಂದು).

ಸ್ವಸುಃ=ಶೂರ್ಪಣಖ್ಯಾಯಾ-ನಿಗ್ರಹಾದ್=ಅಂಗಚ್ಛೇದ—ಆಪ್ತಾನಾಂ=ಬಂಧೂನಾಂ ಖರಾದೀನಾಂ—ಧನದಾನುಜೋ = ರಾವಣೋ—ರಾಮೇಣ ದಶಸುಮೂರ್ಧಸು ಪದಂ ಪಾದಂ ನಿಹಿತಂ ಮೇನೇ=ಈರೈದು ಮುಡಿಗಳಲಿ ಅಡಿಯಿಟ್ಟನೆಂದೆ—ಧನದ=ಕುಬೇರ, ಪುಲಸ್ತ್ಯಮಹರ್ಷಿಯ ಪುತ್ರನಾದ ವಿಶ್ರಾವಸುವಿನ ಪುತ್ರ.

**53. ರಕ್ಷಸಾ ಮೃಗರೂಪೇಣ ವಂಚಯಿತ್ವಾ ಸ ರಾಘವೌ ।**
**ಜಹಾರ ಸೀತಾಂ ಪಕ್ಷೀಂದ್ರ ಪ್ರಯಾಸ ಕ್ಷಣವಿಘ್ನಿತಃ ॥ ೫೩ ॥**

ಕೂಡಲೇ ದಶಕಂಠನು ತಪಸ್ಸುಮಾಡುತ್ತಿದ್ದ ಸೋದರಮಾವನಾದ ಮಾರೀಚನ ಬಳಿಗೆ ಬಂದು ಅವನನ್ನು ಬಲಾತ್ಕಾರದಿಂದ ಒಡಂಬಡಿಸಿ ಮೃಗರೂಪವನ್ನು ಧರಿಸುವಂತೆ ಪ್ರೋತ್ಸಾಹಿಸಿದನು. ಮಾರೀಚನು ಧರಿಸಿದ ಮಾಯಾಜಿಂಕೆಯು (ಮೃಗರೂಪಿ ಸುರನು) ರಾಘವರನ್ನು ವಂಚಿಸಿ ವಿಪಿನದಲ್ಲಿ ಬಲುದೂರಕ್ಕೆ ಒಯ್ದಿತು, ಆ ಸಮಯವನ್ನು ಸಾಧಿಸಿ ರಾವಣನು ಸೀತೆಯನ್ನು ವಂಚಿಸಿ ತನ್ನ ದಿವ್ಯರಥದಲ್ಲಿ ಕದ್ದೊಯ್ದನು. ಅವನ ಕಳ್ಳ ವ್ಯಾಪಾರವನ್ನು ಕಂಡ ಪ್ರತ್ಯಕ್ಷದರ್ಶಿಯಾದ ಹದ್ದುಗಳ ರಾಜನಾದ (ಪಕ್ಷಿರಾಜ, ಸಂಪಾತಿಯ ತಮ್ಮ) ಜಟಾಯುವು ಪ್ರತಿಭಟಿಸಿ ಅಂತರಿಕ್ಷದಲ್ಲಿ ಕಾದಿದನು. ಘೋರ ಯುದ್ಧವು ಪಕ್ಷೀಂದ್ರನಿಗೂ ದನುಜೇಂದ್ರನಿಗೂ ಒಂದು ಕ್ಷಣಕಾಲ ನಡೆಯಿತು. ಜಯಾಪಜಯವು ತೂಗುಯ್ಯಾಲೆಯಲ್ಲಿ ಓಲಾಡುತ್ತ ಅನಿಶ್ಚಿತವಾಗಿತ್ತು, ಆದರೆ ಕಪಟರಾವಣ ಮೋಸ, ಷಡ್ಯಂತ್ರದಿಂದಲೇ ವಿಜಯ ಸಾಧಿಸಿದನು. ಪಕ್ಷಿರಾಜನು ಹೋರಾಡಿ ಗಾಯಗೊಂಡನು, ತೀವ್ರಗಾಯಗೊಂಡು ರಕ್ತಸಿಕ್ತನಾಗಿ, ಗತಪ್ರಾಣನಾಗಿ ಆ ದಶರಥಬಂಧು ನೆಲದ ಮೇಲೆ ದೊಪ್ಪನೆ ಬಿದ್ದನು. ರಾವಣನು ಜಾನಕಿದೇವಿಯನ್ನು ಒಯ್ಯುವುದರಲ್ಲಿ ಯಶಸ್ವಿಯಾದನು. ಬಂದ ವಿಘ್ನವನ್ನು ಪರಿಹರಿಸಿಕೊಂಡು ಲಂಕಾನಗರಿಯನ್ನು ಸುರಕ್ಷಿತವಾಗಿ ಸೇರಿದನು.

ಮೃಗರೂಪೇಣ ರಕ್ಷಸಾ=ಮಾರೀಚೇನ—ವಂಚಯಿತ್ವಾ=ಪ್ರತಾರ್ಯ—ಪಕ್ಷೀಂದ್ರಸ್ಯ = ಜಟಾಯುಷಃ—ಪ್ರಯಾಸೇನ = ಯುದ್ಧರೂಪೇಣ—ಕ್ಷಣಂ ವಿಘ್ನಿತಃ = ಸಂಜ್ಞಾತ ವಿಘ್ನಃ ಸನ್—ಸೀತಾಂ ಜಹಾರ = ಸೀತೆಯನು ತಾನೊಯ್ದನೆಂದು.

**54. ತೌ ಸೀತಾನ್ವೇಷಿಣೌ ಗೃಧ್ರಂ ಲೂನಪಕ್ಷಮಪಶ್ಯತಾಮ್ ।**
**ಪ್ರಾಣೈರ್ದಶರಥಪ್ರೀತೇರನೃಣಂ ಕಂಠವರ್ತಿಭಿಃ ॥ ೫೪ ॥**

ಸೀತಾನ್ವೇಷಣೆಯ ಕಾರ್ಯದಲ್ಲಿ ಆ ರಾಘವರು (ಶ್ರೀರಾಮಲಕ್ಷ್ಮಣರು) ಮಗ್ನರಾದರು. ಸೀತೆಯನ್ನು ಹುಡುಕುತ್ತ ಬರುತ್ತಿರಲು ತಮ್ಮ ಪರ್ಣಕುಟೀರದ ಬಳಿಯಲ್ಲಿ ಮಿತ್ರಋಣಪರಿಹಾರಕ್ಕೆಂದು ಕಂಠಗತಪ್ರಾಣನಾಗಿ ನೆಲದಲ್ಲಿ ಬಿದ್ದಿರುವ ಪಕ್ಷಿರಾಜನಾದ ದಶರಥಮಿತ್ರ, ಲೋಕಬಂಧು, ವಯೋವೃದ್ಧ ಜಟಾಯುವನ್ನು ಕಂಡರು. ಗರಿಗಳು ಕೆದರಿ, ಪುಕ್ಕಗಳು ಉದುರಿ, ಬಲದ ರೆಕ್ಕೆಯು ರಾವಣನ ಚಂದ್ರಾಯುಧದ ಪೆಟ್ಟಿನಿಂದ ಛೇದಿಸಲ್ಪಟ್ಟು ರಕ್ತದ ಮಡುವಿನಲ್ಲಿ ಬಿದ್ದಿರುವ (ಅರೆಮುಗಿದ ಲೋಚನ) ಹದ್ದುಗಳ ರಾಜನನ್ನು (ಯಜಮಾನ,ಮುಖ್ಯ, ಮೊದಲಾಳಿ) ಕರುಣಾರ್ದ್ರದೃಷ್ಟಿಯಿಂದ ಈಕ್ಷಿಸಿದರು. ಜಟಾಯುವು ದಶರಥನ ಆಪ್ತಮಿತ್ರ (ಗಳಸ್ಯಕಂಠಸ್ಯ), ಆ ಮಿತ್ರಋಣದ ಪರಿಹಾರಕ್ಕೆಂದು ತಾನು ಅಲ್ಪಬಲನಾದರೂ, ಕೆಚ್ಚೆದೆಯ ವೀರನಂತೆ ಹೋರಾಡಿ (ಹೆಣ್ಣಿನ ಮಾನ ರಕ್ಷಣೆಗೆ) ತನ್ನ ಆತ್ಮವನ್ನೇ ಬಲಿದಾನಕೊಟ್ಟ (ಆಹುತಿ) ಮಹಾಜೀವಿ (ಹುತಾತ್ಮ). ಕಂಠಾರ್ಪಿತಪ್ರಾಣನಾಗಿ, ಮೃತ್ಯುಮುಖನಾಗಿ ಬಿದ್ದಿದ್ದ ದಶರಥನ ಮಿತ್ರನಿಂದ ಸೀತಾಪಹರಣದ ವಾರ್ತೆಯನ್ನು ಅವರು ಆ ಕೊನೆಯ ಗಳಿಗೆಯಲ್ಲಿ ತಿಳಿದುಕೊಂಡರು.

ಲೂನಪಕ್ಷಂ = ರಾವಣೇನ ಛಿನ್ನಪಕ್ಷಂ—ಪ್ರಾಣೈರ್ದಶರಥಪ್ರೀತೇ = ದಶರಥಸಖ್ಯಸ್ಯಾನೃಣಮುರ್ವಿಮುಕ್ತಂ—ಗೃಧ್ರಂ = ಜಟಾಯುಷಮಪಶ್ಯತಾಂ = ದೃಷ್ಟವಂತೌ—ಲೂನಪಕ್ಷಮ್ = ಲೂನೌ ಛಿನ್ನೌ ಪಕ್ಷೌ ಯಸ್ಯ ತಮ್ ॥

**55. ಸ ರಾವಣಹೃತಾಂ ತಾಭ್ಯಾಂ ವಚಸಾಚಷ್ಟ ಮೈಥಿಲೀಮ್ ।**
**ಆತ್ಮನಃ ಸುಮಹತ್ಕರ್ಮ ವ್ರಣೈರಾವೇದ್ಯ ಸಂಸ್ಥಿತಃ ॥ ೫೫ ॥**

ಪರಸ್ತ್ರೀ ಅಪಹರಣದಲ್ಲಿ ವ್ಯಾಪಕ ಮನೋಭಾವನೆಯುಳ್ಳ ರಾಕ್ಷಸಸಾಮ್ರಾಟ ದಶಕಂಠನು ಮಾಡಿದ ಅನ್ಯಾಯಕೃತ್ಯವನ್ನು (ಚಾಂಡಾಲಕೃತ್ಯ) ನೋಡಿ ರೋಷಿಹೋಗಿ ಸಾಮಾನ್ಯಜೀವಿಯಾದ ಜಟಾಯುವು ಕೂಡಲೇ ಪ್ರತಿಭಟಿಸಿ ಆತ್ಮಾರ್ಪಣೆಮಾಡಿದನು. ರಾಕ್ಷಸಶಿರೋಮಣಿಯ ಖಡ್ಗದ ಏಟಿಗೆ ಅಳುಕದೆ ತನ್ನ—ಅಮೂಲ್ಯವಾದ ಜೀವವನ್ನೇ ಪಣವಾಗಿಟ್ಟು (ಬಲಿದಾನಗೈದು) ಕೊನೆಯ ಗಳಿಗೆಯತನಕ (ಕೊನೆಯ ಉಸಿರು) ಹೋರಾಡಿ ಪೂರಾ ಗಾಯಗೊಂಡು ಭೂಮಿಗೆ ಬಿದ್ದನು. ಸೀತೆಯನ್ನು ಕಳ್ಳರಾವಣನು ಕಳ್ಳತನದಿಂದ ಕದ್ದೊಯ್ದನೆಂದು ಹೇಳಿ ಆ ಮಹಾವೀರನು ವೀರಗತಿಯನ್ನು ಪಡೆದನು. ಅವನ ಸಾಹಸದ ಕತೆಯನ್ನು ಕೇಳಿ ರಾಮಲಕ್ಷ್ಮಣರು ಆ ಆತ್ಮಬಂಧುವಿನ ದೇಹತ್ಯಾಗಕ್ಕೆ ಮರುಕಪಟ್ಟರು.

"ಕ್ರಿಯಾಗ್ರಹಣಮಪಿ ಕರ್ತವ್ಯಮ್" ಇತಿ ಸಂಪ್ರದಾನತ್ವಾಚ್ಚತುರ್ಥೀ—ವಚಸಾ ವಾಗ್ವ್ಯತ್ಯಯಂಚಷ್ಟ—ಆತ್ಮನಃ ಸುಮಹತ್ಕರ್ಮ = ಯುದ್ಧರೂಪಂ—ಸಂಸ್ಥಿತಃ = ಗತಾಯು, ಸಾಯು.

**56. ತಯೋಸ್ತಸ್ಮಿನ್ನವಿಭೂತಪಿತೃವ್ಯಾಪತ್ತಿಶೋಕಯೋಃ ।**
**ಪಿತರೀವಾಗ್ನಿಸಂಸ್ಕಾರಾತ್ ಪರಾ ವವೃತಿರೇ ಕ್ರಿಯಾಃ ॥ ೫೬ ॥**

ತಮ್ಮ ಪಿತನ ಅಳಿವಿನಿಂದಾದ ದುಃಖವು ಇದೀಗ ಮರುಕಳಿಸಿತು. ಅವರು ಈರ್ವರು ರಾಘವರು ತಂದೆಯ ಮಿತ್ರನ ಅಳಿವಿಗೆ ಶೋಕಿಸಿದರು. ತಂದೆಗೆ ತೋರಿದ ಪ್ರೀತಿಯನ್ನು ಆ ಗೃಧ್ರರಾಜನ ಮೇಲೂ ತೋರಿದರು. ಮಾನವಧರ್ಮದಂತೆ ದೇಹಾಂತ್ಯದ ಬಳಿಕ ಮಾಡಿದ ಅಪರಕ್ರಿಯೆಗಳನ್ನು. ವಹ್ನಿಕ್ರಿಯಾದಿಗಳನ್ನು ಸ್ವತಃ ತಮ್ಮ ಕೈಯಿಂದಲೇ ಮಾಡಿ ಗೌರವಿಸಿ (ಅಯ್ಯನಳಿವಿನೊಳಾದ ಅಳಲು ಮರುಕಳಿಸಿತು ಎನಲು) ತಮ್ಮ ಪ್ರೀತಿಯನ್ನು ಮೆರೆದರು. ತಂದೆಯ ಮಿತ್ರನನ್ನು ತಂದೆಯಂತೆಯೇ ಕಂಡರು. ಅಗ್ನಿಸಂಸ್ಕಾರಾದಿ ಕಾರ್ಯಗಳನ್ನು ಎಸಗಿದರು (ಅಂತ್ಯಕ್ರಿಯೆ, ಉತ್ತರಕ್ರಿಯೆ, ಊರ್ಧ್ವದೈಹಿಕಕ್ರಿಯೆ (ವಹ್ನಿಕ್ರಿಯಾದಿಗಳ ವಿರಚಿಸಿ).

ಪರಾ = ಉತ್ತರಾಃ—ಕ್ರಿಯಾವವೃತಿರೇಽ ವರ್ತನ್ತ = ತಸ್ಯ ಪಿತೃವದೌರ್ಧ್ವದೈಹಿಕಂ ಚಕ್ರತುರಿತ್ಯರ್ಥಃ—ಪಿತೃವ್ಯಾಪತ್ತಿ = ತಂದೆಯ ಮರಣ—ಅಗ್ನಿಸಂಸ್ಕಾರಾತ್ = ಅಗ್ನಿಸಂಸ್ಕಾರಾದಿ ಅಪರಕ್ರಿಯೆಗಳು.

**57. ವಧನಿರ್ಧೂತಶಾಪಸ್ಯ ಕಬಂಧಸ್ಯೋಪದೇಶತಃ ।**
**ಮುಮೂರ್ಛ ಸಖ್ಯಂ ರಾಮಸ್ಯ ಸಮಾನವ್ಯಸನೇ ಹರೌ ॥ ೫೭ ॥**

ಶ್ರೀರಾಮನು ಕಬಂಧನ ಒಂದು ಯೋಜನ (4,5 ಕಿ.ಮಿ.) ಉದ್ದವಾದ ಕೈಗಳನ್ನು ಕತ್ತರಿಸಿದಾಗ ಅವನ ಶಾಪವು ವಿಮೋಚನೆಯಾಗಿ ಅವನ ಮುನ್ನಿನ ರೂಪವು ಪ್ರಾಪ್ತವಾಯಿತು. ಅವನು ಸ್ವರ್ಗಲೋಕಕ್ಕೆ ನಡೆಯುವ ಮೊದಲು ಶ್ರೀರಾಮನಿಗೆ ವಂದಿಸಿ, ಪ್ರತ್ಯುಪಕಾರಮಾಡುವ ವಿಶೇಷವಾದ ಬಯಕೆಯಿಂದ ಉಪದೇಶವನ್ನು ಮಾಡಿದನು : "ಹೇ ರಘುನಂದನ, ನೀನು ಋಷ್ಯಮೂಕಪರ್ವತಕ್ಕೆ ನಡೆ. ಅಲ್ಲಿ ನಿನ್ನಂತೆಯೇ ಪತ್ನೀವಿಯೋಗದಿಂದ ನವೆಯುತ್ತಿರುವ, ಸಮಾನವ್ಯಸನಿಯಾದ ಸುಗ್ರೀವನೊಂದಿಗೆ ಸಖ್ಯವನ್ನು ಬೆಳೆಸಿ ನಿನ್ನ ಕಾರ್ಯಸಾಧನೆಯನ್ನು ಮಾಡು (ಸಮದುಃಖಿ ಸುಗ್ರೀವನೊಳ್). ಇದರಿಂದ ನಿನ್ನ ಕಾರ್ಯವು ಕೈಗೂಡುವುದೆಂದು" ಹೇಳಿ ತನ್ನ ವಿಮೋಚನೆ ಮಾಡಿದ ಶ್ರೀರಾಮನಿಗೆ ಬಾರಿಬಾರಿಗೂ ಕೈಮುಗಿಯುತ್ತ ಕಬಂಧನು ಮುನ್ನಿನ ದಿವ್ಯದೇಹವನ್ನು ಧರಿಸಿ ದೇವಲೋಕಕ್ಕೆ ತೆರಳಿದನು.

ಪೂರ್ವಚರಿತ್ರೆ :—ಕಬಂಧನು ದನು ಎಂಬ ಗಂಧರ್ವನ ಪುತ್ರನು. ಅವನು ರೂಪ, ಸೌಂದರ್ಯಕ್ಕೆ ಹೆಸರಾಗಿದ್ದನು. ಅವನು ಸ್ಥೂಲಶಿರನೆಂಬ ಋಷಿಯ ಶಾಪಕ್ಕೆ ಒಳಗಾದನು. ಘೋರ ರೂಪವನ್ನು ಧರಿಸಿ ಆ ಮುನಿಯನ್ನು ಭಯಪಡಿಸಲು ಯತ್ನಿಸಿದಾಗ ಆ ಋಷಿಯು ಕಡುಮುಳಿದು ಘೋರ ರೂಪವನ್ನು ಧರಿಸೆಂದು ಶಪಿಸಿದನು. ಮುಂದೆ, ಘೋರನಾದ ತನ್ನನ್ನು ಇಂದ್ರನು ಏನು ಮಾಡಲು ಬಲ್ಲನೆಂದು ಗರ್ವಿಸಿ ಮಹೇಂದ್ರನೊಡನೆ ದ್ವಂದ್ವಯುದ್ಧಕ್ಕೆ ನಿಂತನು.

ಇಂದ್ರನು ವಜ್ರಾಯುಧದಿಂದ ಕಬಂಧನ ಕಾಲನ್ನು ಸುಟ್ಟುಬಿಟ್ಟನು. ಕಬಂಧನು ಅಂಗವಿಕಲನಾಗಿ ಬಿದ್ದನು. ವಜ್ರಾಯುಧದಿಂದ ಅವನ ನೆತ್ತಿಗೆ ಬಡಿಯಲು, ಶಿರವು ಎದೆಯೊಳಕ್ಕೆ ಹೋಯಿತು. ಆಗ ಕಬಂಧನು ಇಂದ್ರನನ್ನು ಹೀಗೆ ಪ್ರಾರ್ಥಿಸಿದನು : "ಹೇ ಲೋಕಪಾಲಾ, ನನಗೆ ಇನ್ನು ಜೀವಿಸಲು ಇಚ್ಛೆಯಿಲ್ಲ. ನನ್ನನ್ನು ಒಮ್ಮೆಯೇ ಕೊಂದುಬಿಡು" ಎನಲು ಇಂದ್ರನು ನಕಾರಾತ್ಮಕವಾದ ಉತ್ತರವಿತ್ತನು. ಆಗ ಕಬಂಧನು "ನನ್ನ ಜೀವನೋಪಾಯಕ್ಕೆ ಮಾರ್ಗವೇನೆಂದು ?" ಕೇಳಲು ಇಂದ್ರನು ಅವನಿಗೆ ಒಂದು ಯೋಜನದಷ್ಟು (4,5 ಕಿ.ಮಿ.) ಉದ್ದವಾದ ಬಾಹುಗಳನ್ನು ಅನುಗ್ರಹಿಸಿ ಮರೆಯಾದನು. ಅಂದಿನಿಂದ ಕಬಂಧನು ಆ ಕಾಡಿನಲ್ಲಿ ಓಡಾಡುವ ಸಿಂಹ, ಹುಲಿ, ಆನೆ, ಕತ್ತೆ, ಕಿರುಬ, ಶರಭ, ಕಾಡುಹಂದಿ, ಕೋತಿ, ಬಲಿಪ (ಹೆಬ್ಬುಲಿ), ಶಾರ್ದೂಲ ಮೊದಲಾದ ಪ್ರಾಣಿಗಳನ್ನು ಹಿಡಿದು ತನ್ನ ಹೊಟ್ಟೆಯನ್ನು ಹೊರೆದುಕೊಳ್ಳುತ್ತಿದ್ದನು. ಶ್ರೀರಾಮನು ಕಬಂಧನನ್ನು ಆ ಭಯಂಕರಾಕೃತಿಯ ರಾಕ್ಷಸ ದೇಹದಿಂದ ಬಿಡುಗಡೆಗೊಳಿಸಿದನು.

ರಾಮಸ್ಯ ಸಮಾನವ್ಯಸನೇ ಸಮಾನಾಪದಿ—ಸಖ್ಯಾರ್ಥಿನೀತ್ಯರ್ಥಃ—"ಶುಕಾಹಿ ಕಪಿಲೇ ಭೇಕೇಷು ಹರಿರ್ನಾಕಪಿಲೇತಿಷು" ಇತ್ಯಮರಃ—ಸಖ್ಯಮುಮಾಚರ್ಯ = ವ್ಯಧೇ.

**೬೮. ಸ ಹತ್ವಾ ವಾಲಿನಂ ವೀರಃ ತತ್ಪದೇ ಚಿರಕಾಂಕ್ಷಿತೇ ।**
**ಧಾತೋಃ ಸ್ಥಾನ ಇವಾದೇಶಂ ಸುಗ್ರೀವಂ ಸಂನ್ಯವೇಶಯತ್ ॥ ೬೮ ॥**

ವೀರನಾದ ಶ್ರೀರಾಮಚಂದ್ರನು ಸುಗ್ರೀವನೊಡನೆ ಸಖ್ಯವನ್ನು ಬೆಳೆಸಿ, ಒಂದೇ ಒಂದು ಬಾಣದಿಂದ ಲೋಕೈಕ ವೀರನಾದ ವಾಲಿಯನ್ನು ಉರುಳಿಸಿ ಮೃತ್ಯುದಂಡವನಿತ್ತನು

(ಮಣ್ಣು ಮುಕ್ಕಿಸಿದನು) ಸುಗ್ರೀವಾಗ್ರಜನು ಹತನಾದಬಳಿಕ ಅವನ ಸ್ಥಾನದಲ್ಲಿ ಸುಗ್ರೀವನನ್ನು ಶ್ರೀರಾಮನು ಕಿಷ್ಕಿಂಧೆಯಲ್ಲಿ ನೆಲೆಗೊಳಿಸಿದನು. ಹೇಗೆ ಧಾತುವಿನ ಸ್ಥಾನದಲ್ಲಿ ಆದೇಶವಾಗಿ ಬರುವ ಧಾತುವಿನ ರೂಪಗಳು ನೆಲೆಯಾಗಿ ನಿಲ್ಲುವಂತೆ ಸುಗ್ರೀವನು ನೆಲೆಗೊಂಡನು. ವ್ಯಾಕರಣಶಾಸ್ತ್ರದಲ್ಲಿ ಒಂದು ವರ್ಣದ ಅಥವಾ ಧಾತುವಿನ ಸ್ಥಾನದಲ್ಲಿ ಮತ್ತೊಂದು ವರ್ಣವು ಅಥವಾ ಧಾತುವು ಬರುವುದು ಸ್ವಾಭಾವಿಕವಷ್ಟೆ. "ಅಸ್ತೇರ್ಭೂಃ" ಸೂತ್ರದಿಂದ ''ಅಸ'' ಧಾತುವಿನ ಸ್ಥಾನದಲ್ಲಿ ''ಭೂ'' ಧಾತುವಿನ ಆದೇಶವು ಬಂದು ಬಭೂವ, ಭವಿತಾ, ಭೂಯಾತ್ ರೂಪಗಳಾಗುವುವು. ಅದೇ ರೀತಿಯಲ್ಲಿ ಅಣ್ಣನಾದ ವಾಲಿಯ ಸ್ಥಾನದಲ್ಲಿ ಸುಗ್ರೀವನು ತಳವೂರಿದನು. ಅವನು ಸಕಲ ವಾನರರ ಅಧಿಪತಿಯಾಗಿ ಮುಂದುವರಿದನು.

ವಾಲಿಸುಗ್ರೀವರ ಜನ್ಮವೃತ್ತಾಂತ :—ಒಮ್ಮೆ ಲೋಕಪಿತಾಮಹರಾದ ಬ್ರಹ್ಮದೇವರ ಕಣ್ಣಿಂದ ಆನಂದಬಾಷ್ಪವೊಂದು ತೊಟ್ಟಿಕ್ಕಿತು. ಆದರಿಂದ ಒಂದು ಕಪಿಯು ಹುಟ್ಟಿತು. ಆ ಕಪಿಯೇ ಆದಿವಾನರ ಅಥವಾ ಆದಿಕಪಿಯೆನಿಸಿತು. ಒಮ್ಮೆ ಆ ಗೋಲಾಂಗೂಲ (ಗೊರಿಲ್ಲಾ, ಚಿಂಪಾಂಜಿ) ತೃಷೆಯನ್ನು ತಾಳಲಾರದೆ ನೀರನ್ನು ಅರಸುತ್ತಾ ಮೇರುಗಿರಿಗೆ ನಡೆಯಿತು. ಅಲ್ಲಿ ಮಾನಸ ಸರೋವರದಂತೆ ಸುಂದರವಾದ ಜಲಾಶಯವನ್ನು ಕಂಡು ಸಂತಸದಿಂದ (ಕಪಿಬುದ್ಧಿ, ಮಂಗಚೇಷ್ಟೆ) ಜಲಾಶಯವನ್ನು ಇಣಿಕಿ ನೋಡಿ ತನ್ನ ಪ್ರತಿಬಿಂಬವನ್ನು ಕಂಡಿತು. ಆ ವಾನರ ಅನ್ಯಕಪಿಯೆಂದು ಭಾವಿಸಿ ಅಸೂಯೆಯಿಂದ ನೀರಿಗೆ ಧುಮುಕಿತು. ಅದು ನೀರಿನಿಂದ ಹೊರಬಂದಾಗ ಆ ನರವಾನರ ಸುಂದರಳಾದ, ಸುರೂಪಿಯಾದ ನರವಾನರಿಯಾಯಿತು. ಆ ಸರ್ವಾಂಗಸುಂದರಿಯಾದ ವಾನರಸ್ತ್ರೀಯನ್ನು ಏಕಕಾಲದಲ್ಲಿ ನೋಡಿದ ಸೂರ್ಯಪುರುಷನೂ, ಇಂದ್ರನೂ ನೋಡಿ ಕಾಮವಶರಾದರು, ಇಂದ್ರನು ಆಕೆಯ ತಲೆಯನ್ನು ಕಂಡು ಮೋಹಿತನಾದರೆ ಸೂರ್ಯದೇವನು ಅವಳ ಕಂಠವನ್ನು ಕಂಡು ವಿವಶನಾಗಿ ತನ್ನ ಶಕ್ತಿಯನ್ನು (ಸೌರಶಕ್ತಿಯನ್ನು) ಕೇಂದ್ರೀಕರಿಸಿದನು. ಹೀಗೆ ಅವರಿಬ್ಬರಿಂದ, ಅವರ ಅಂಶದಿಂದ ಇಬ್ಬರು ಜನಿಸಿದರು. ಹಿರಿಯನಾದ ವಾಲಿಯು ಇಂದ್ರನಿಂದ ಮೊದಲು ಜನಿಸಿದನು. ಸೂರ್ಯನಿಂದ ಸೂರ್ಯಕುಮಾರನಾದ ಸುಗ್ರೀವನು ಜನಿಸಿ ಲೋಕವಿಖ್ಯಾತನಾದನು.

ತತ್ಪದೇ = ವಾಲಿಸ್ಥಾನೇ—ಧಾತೋಃ ಸ್ಥಾನ ಆದೇಶಮಿವ—ಆದೇಶಭೂತಂ ಧಾತ್ವಂತರಮಿವೇತ್ಯರ್ಥಃ—ಸುಗ್ರೀವಂ ಸಂನ್ಯವೇಶಯತ ಸ್ಥಾಪಿತವಾನ್—ಆದೇಶೋ ನಾಮ ಶಬ್ದಾಂತರಸ್ಯ ಸ್ಥಾನೇ ವಿಧೀಯಮಾನಂ ಶಬ್ದಾಂತರಮಭಿಧೀಯತೇ ॥

**59. ಇತಸ್ತತಶ್ಚ ವೈದೇಹೀಮನ್ವೇಷ್ಟುಂ ಭರ್ತೃಚೋದಿತಾಃ ।**
**ಕಪಯಶ್ಚೇರುರಾರ್ತಸ್ಯ ರಾಮಸ್ಯೇವ ಮನೋರಥಾಃ ॥ ೫೯ ॥**

ಸುಗ್ರೀವನ ಆಜ್ಞಾಧಾರಿಗಳಾದ ವಾನರರು ವೈದೇಹಿಯ ಶೋಧನೆಗಾಗಿ ದಶದಿಕ್ಕುಗಳಿಗೂ ತೆರಳಿದರು. ಆ ಕಪೀಶ್ವರರು ಶ್ರೀರಾಮನ ಮನೋರಥವೇ, ಸಹಸ್ರಾರು ಮಾನಸಿಕ ರಥಗಳಾಗಿ, ವಿವಿಧ ದಿಕ್ಕುಗಳಲ್ಲಿ ಹೊರಟಂತೆ ಜಗದ ಉದ್ದಗಲದಲ್ಲಿ ನಾನಾ ದೇಶಗಳಲ್ಲಿ ಅಲೆದಾಡಿದರು (ಸುತ್ತಿದವು ಸುತ್ತುವೊಲು) ವಿರಹಾರ್ತ ರಾಘವನ ಆ ಮನೋ

ರಥಗಳ್).ವೈದೇಹಿಯ ಅನ್ವೇಷಣೆಯ ಕಾರ್ಯದಲ್ಲಿ ಅಂಗದ, ಜಾಂಬವ, ಹನುಮಂತನೇ ಮೊದಲಾದ ಕಪಿಯೂಥಪರು ಕಪಿಸಾಮ್ರಾಟನಾದ ಸುಗ್ರೀವನ ಆಜ್ಞೆಯನ್ನು ಶಿರಸಾ ವಹಿಸಿ ಹೊರಹೊರಟರು ಪತ್ನೀವಿರಹಪೀಡಿತನಾದ ಶ್ರೀರಾಮಚಂದ್ರನ ಮಾನಸಿಕ ತುಮುಲವೇ ಕಪಿಗಳಾಗಿ ವಿವಿಧ ದಿಕ್ಕಿಗೆ ಹೊರಟಿವೆ ಎಂಬಂತೆ ಅಥವಾ ಶ್ರೀರಾಮನ ಪತಿವಿರಹದ ನಾನಾತರದ ಆಲೋಚನೆಗಳು, ಕಾಮನೆಗಳು, ಅಭಿಲಾಷೆಗಳು, ಮನೋರಥಗಳು, ರಥಗಳಾಗಿ ವಿವಿಧ ದಿಕ್ಕಿಗೆ ಹೊರಟುಹೋದುವು ಎಂಬಂತೆ ಕಪಿಮುಖ್ಯರು ನಾನಾದೇಶಗಳಿಗೆ ಹೊರಟರು.

ಕಪಯೋ=ಹನುಮತ್ಪ್ರಮುಖಾಃ—ಆರ್ತಸ್ಯ=ವಿರಹಾತುರಸ್ಯ ರಾಮಸ್ಯ ಮನೋರಥಾ ಕಾಮಾ ಇವ—ರಾಮಸ್ಯೇವ ಮನೋರಥಾ=ಮನೋರಥಾ ನಾಮ ಗತಿರ್ನ ವಿದ್ಯತೇ = ರಾಮನ ವಿರಹಾರ್ತಮನೋರಥಗಳು. ಉತ್ಪ್ರೇಕ್ಷಾಲಂಕಾರ ॥

**60. ಪ್ರವೃತ್ತಾವುಪಲಬ್ಧಾಯಾಂ ತಸ್ಯಾಃ ಸಂಪಾತಿದರ್ಶನಾತ್ ।**
**ಮಾರುತಿಃ ಸಾಗರಂ ತೀರ್ಣಃ ಸಂಸಾರಮಿವ ನಿರ್ಮಮಃ ॥ ೬೦ ॥**

ಅವರಿಗೆ ಸಂಪಾತಿಯ ದರ್ಶನವಾಯಿತು. ಸಂಪಾತಿಯು ದಶಕಂಠನು ಆಕಾಶಮಾರ್ಗದಲ್ಲಿ ಸೀತೆಯನ್ನು ಕೊಂಡೊಯ್ಯುವುದನ್ನು ಸ್ವತಃ ಕಂಡಿದ್ದನು. ಅವನು ಕಪಿಗಳು ಪರಸ್ಪರ ಮಾತನಾಡುವ ವಿಚಾರಕ್ಕೆ ಕಿವಿಗೊಟ್ಟಾಗ ತಮ್ಮನಾದ ಜಟಾಯುವು ಹತನಾದುದನ್ನು ತಿಳಿದು ಶೋಕಿಸಿದನು. ಆ ಬಳಿಕ ಅವರಿಗೆ ರಾಕ್ಷಸನ ನಿಲಯವಿರುವ ಶ್ರೀಲಂಕೆಯು ಇರುವ ದಿಕ್ಕನ್ನು ತೋರಿದನು.

ಅವನಿಜೆಯ ಅಪಹರಣದ ವಾರ್ತೆಯನ್ನು ಜಟಾಯುವಿನ ಜ್ಯೇಷ್ಠನಾದ ಸಂಪಾತಿಯಿಂದ ತಿಳಿದು ವಾನರಶ್ರೇಷ್ಠನಾದ ವಾಯುಪುತ್ರ ಹನುಮಂತನು ಮಮತಾರಹಿತನು (ನಿರ್ಮಮನು) ನಿಃಸ್ಪೃಹನೂ ಆದ ಓರ್ವ ಮುಮುಕ್ಷುವು ಸಂಸಾರವನ್ನು ದಾಟುವಂತೆ ಸಾಗರವನ್ನು ದಾಟಿದನು. ಸಂಸಾರದ ಬಂಧನಗಳನ್ನು, ಮಮತೆಯ ಕಟ್ಟುಗಳನ್ನು ಕಡಿದೊಗೆದು ಅವ್ಯಯವಾದ, ಅಕ್ಷಯವಾದ ಸಂಸಾರಸಾಗರವನ್ನು ದಾಟುವಂತೆ ಯೋಗಿರಾಜನಾದ ಆಂಜನೇಯನು (ಮಾರುತಿ) ತನ್ನ ಯೋಗವಿದ್ಯಾಬಲದಿಂದ ಸಾಗರವನ್ನು ದಾಟಿ ಲಂಕಾನಗರಿಯನ್ನು ಸೇರ್ದನು.

ತಸ್ಯಾಃ ಸೀತಾಯಾಃ ಪ್ರವೃತ್ತೌ ವಾರ್ತಾಯಾಮ್-"ವಾರ್ತಾಪ್ರವೃತ್ತಿರ್ವೃತ್ತಾಂತಃ" ಇತ್ಯಮರಃ—ಉಪಲಬ್ಧಾಯಾಂ = ಜ್ಞಾತಾಯಾಂ ಸತ್ಯಾಮ್—ಮರುತಸ್ಯಾಪತ್ಯಂ ಪುಮಾನ್ = ಮಾರುತಿರ್ಹನುಮಾನ್—ತದ್ರಹಿತೋ = ನಿರ್ಮಮೋ ನಿಃಸ್ಪೃಹಃ—ಸಂಸಾರಮ್ ವಿದ್ಯಾಬಂಧನಮಿವ—ತೀರ್ಣಸ್ತತಾರ—ತರತೇಃ ಕರ್ತರಿಕ್ತಃ—ಸಂಪಾತಿದರ್ಶನಾತ್=ಸಂಪಾತಿಯ ದರ್ಶನದಿಂದ, ಸಂಪಾತಿ ಮುಖದಿಂದ—ನಿರ್ಮಮಃ = ಮಮತ್ವಾತ್ ನಿರ್ಗತೋ ನಿರ್ಮಮಃ—ಮಮ ಇತಿ ವಿಭಕ್ತಿಪ್ರತಿರೂಪಕಮವ್ಯಯಮ್ ॥

**61. ದೃಷ್ಟ್ವಾ ವಿಚಿನ್ವತಾ ತೇನ ಲಂಕಾಯಾಂ ರಾಕ್ಷಸೀವೃತಾ ।**
**ಜಾನಕೀ ವಿಷವಲ್ಲೀಭಿಃ ಪರೀತೇವ ಮಹೌಷಧಿಃ ॥ ೬೧ ॥**

ರಾವಣೇಶ್ವರನ ರಾಜಧಾನಿಯಾದ ಲಂಕಾನಗರಿಯಲ್ಲಿ ಆಂಜನೇಯನು ಮಹಾಸತಿ ಸೀತಾದೇವಿಯನ್ನು ರಾಕ್ಷಸಸ್ತ್ರೀಯರ ಸಮೂಹದ ಮಧ್ಯೆ ಕಂಡನು. ವಿಷದ ಬಳ್ಳಿಗಳ ಮಧ್ಯೆ ಶೋಭಿಸುತ್ತಿರುವ ಮಹೌಷಧಿಯಾದ ಸಂಜೀವಿನೀಲತೆಯಂತೆ (ವಿಷವಲ್ಲಿಗಳ ನಡುವೆ ಎಸೆಯುವ ಮಹೌಷಧಿಯುವೊಲು) ರಾಕ್ಷಸಸ್ತ್ರೀಯರ ಕಾಟಿನಲ್ಲಿ ಪ್ರಕಾಶಿಸುತ್ತಿರುವ ವೈದೇಹಿಯನ್ನು ಮಾರುತಿಯು ಕಂಡು ಪುಲಕಿತನಾದನು. ಅವನಿಗೆ ಬದುಕು ಸಾರ್ಥಕ ವೆನಿಸಿತು. ಕ್ರೂರಮೃಗಗಳಾದ ಸಿಂಹ, ಶಾರ್ದೂಲ, ತೋಳಗಳ ಮಧ್ಯೆ ನೆಲಸಿರುವ ಧರ್ಮದೇವತೆಯಾದ ಗೋಮಾತೆಯಂತೆ ಕಂಡನು. ಕುರೂಪಿಗಳಾದ, ಮಾತ್ರವಲ್ಲ ಘೋರರೂಪಿನ ರಾಕ್ಷಸಸ್ತ್ರೀಯರ ಮಧ್ಯದಲ್ಲಿ ಸಿಕ್ಕಿಬಿದ್ದು ಶೋಚನೀಯ ಸ್ಥಿತಿಯಲ್ಲಿರುವ ಮಹಾಸತಿಯನ್ನು ವಾಯುಪುತ್ರನು ಕಣ್ಣಾರೆ ಕಂಡನು. ಆ ತೇಜಸ್ವಿನಿಯಾದ ಶ್ರೀರಾಮ ಕುಟುಂಬಿನಿಯು ವಿಷವೃಕ್ಷಗಳ ಮಧ್ಯೆ ನೆಲಸಿರುವ ಕಲ್ಪವೃಕ್ಷದಂತೆ ಕಾಣಿಸುತ್ತಿದ್ದಳು. ಪತಿಭಕ್ತಿಪರಾಯಣೆಯಾದ ಆ ಮಹಾದೇವಿಯನ್ನು ಕಂಡೊಡನೆಯೇ ಮಾರುತಿಯು ಅವಳ ಶ್ರೀಪಾದಗಳಿಗೆ ಮನದಲ್ಲಿಯೇ ನಮಿಸಿದನು. ಹೀಗೆ ನಮಿಸುತ್ತಿದ್ದಂತೆಯೇ ತನ್ನ ಅಂತರಂಗದಲ್ಲಿ ತನ್ನ ಮುಂದಿನ ಕಾರ್ಯವೈಖರಿಗಳ ಬಗ್ಗೆ ತನ್ನ ಅಂತರಂಗದಲ್ಲಿ ಯೋಚಿಸತೊಡಗಿದನು.

ಲಂಕಾಯಾಂ=ರಾವಣರಾಜಧಾನ್ಯಾಂ–ವಿಚಿನ್ವತಾ=ಮೃಗಯಮಾಣೇನ—ವಿಷವಲ್ಲೀಭಿಪರೀತಾ = ಪರಿವೃತಾ—ಮಹೌಷಧಿಃ = ಸಂಜೀವಿನೀಲತೇವ—ದೃಷ್ಟಾ = ನೋಡಿದ.

**62. ತಸ್ಯೈ ಭರ್ತುರಭಿಜ್ಞಾನಂ ಅಂಗುಲೀಯಂ ದದೌ ಕಪಿಃ ।**
**ಪ್ರತ್ಯುದ್ಗತಮಿವಾನುಷ್ಣೈಃ ತದಾನಂದಾಶ್ರುಬಿಂದುಭಿಃ ॥ ೬೨ ॥**

ಪತಿಯು ನೆನಪಿಗೆ ಕೊಟ್ಟಿರುವ ನೆನಪಿನ ಕಾಣಿಕೆಯಾದ ಮುದ್ರೆ ಉಂಗುರವನ್ನು ಹನುಮಂತನು (ಅಂಜನಾಸುತನು) ಸೀತಾದೇವಿಗೆ ಕೊಟ್ಟನು. ಅದನ್ನು ಆ ತನ್ನ ಪ್ರಾಣ ಪತಿಯ ಅಭಿಜ್ಞಾನದ ಮುದ್ರೆಯುಂಗುರವನ್ನು ಅವನಿಸುತೆ ಜನಕಜೆಯು, ಶ್ರೀರಾಮನ ಪ್ರಾಣವಲ್ಲಭೆಯು, ಅತ್ಯಂತ ದೃಢಭಕ್ತಿ, ದೃಢಭಾವದಿಂದ ಸ್ವೀಕರಿಸಿದಳು. ಅದನ್ನು ಕಂಡೊಡನೆ ತನ್ನೆರಡು ಕಣ್ಣುಗಳಿಂದ ಧಾರಾಪೂರ್ವಕವಾಗಿ ಆನಂದಬಾಷ್ಪಗಳು ಉದುರಿದುವು. ಆನಂದಭಾಷ್ಪಗಳೇ ಆ ಮುದ್ರೆಯುಂಗುರವನ್ನು ಅಭಿಷೇಕಮಾಡಿ ಸ್ವಾಗತಿಸಿದುವೋ ಎಂಬಂತೆ ಪತಿಭಿಕ್ಷೆಯನ್ನು ಆ ದೇವಿಯು ಸ್ವೀಕರಿಸಿದಳು. ಭರ್ತೃವಾದ ಶ್ರೀರಾಮನ ದರ್ಶನವಾದಂತೆ. ಕಣ್ಣಿನಲ್ಲಿ ಆನಂದಾಶ್ರುಗಳ ಬಿಂದುಗಳು ಕಂಗೊಳಿಸು ತ್ತಿರಲು, ಪುಲಕಿತಳಾಗಿ, ಅಭಿಜ್ಞಾನದ ಅಂಗುಲೀಯಕವನ್ನು ತನಗಿತ್ತುದನ್ನು ಭಕ್ತಿ, ಪ್ರೇಮ, ವಿನಯದಿಂದ ಸ್ವೀಕರಿಸಿದಳು (ಶೀತಳಾನಂದಾಶ್ರುಬಿಂದುಗಳಿಂದಿಗೊಂಡು).

ರಾಮಸ್ಯ ಸಂಬಂಧ್ಯಭಿಜ್ಞಾನಂ = ಪ್ರತ್ಯಭಿಜ್ಞಾಸಾಧಕಮ್ "ಅಂಗುಲೀಯ ಮಾರ್ವಿಕಾಮ್"—"ಅಂಗುಲೀಯಕ ಮಾರ್ವಿಕಾ" ಇತ್ಯಮರಃ— ಅನುಷ್ಣೈಃ ಶೀತಲೈ ಸ್ತಸ್ಯಾ ಆನಂದಾಶ್ರುಬಿಂದುಭಿಃ ಪ್ರತ್ಯುದ್ಗತಮಿವ ಸ್ಥಿತಮ್ ॥

**63. ನಿರ್ವಾಪ್ಯ ಪ್ರಿಯಸಂದೇಶೈಃ ಸೀತಾಮಕ್ಷವದೋದ್ಧತಃ ।**
**ಸ ದದಾಹ ಪುರೀಂ ಲಂಕಾಂ ಕ್ಷಣಸೋಢಾರಿನಿಗ್ರಹಃ ॥ ೬೩ ॥**

ಪ್ರಿಯನಾದ ಶ್ರೀರಾಮಚಂದ್ರನ ಸಂದೇಶವನ್ನು ತಿಳಿದು ಅವನಿಜೆಯ ಮನಸ್ಸು ಹರ್ಷಗೊಂಡಿತು. ಅವನಿಜೆಗೆ ಶ್ರೀರಾಮಚಂದ್ರನ ವಾರ್ತೆಯನ್ನು ತಿಳಿಸಿದ, ತನಗೆ ಎದುರಾಗಿ ಬಂದ ರಾವಣನ ತನುಜಾತನಾದ ಅಕ್ಷಯಕುಮಾರನನ್ನು ಕಾದಾಡಿ ಆಂಜನೇಯನು ಅವನನ್ನು ಸದೆಬಡಿದು ಮೃತ್ಯುಲೋಕಕ್ಕೆ ಕಳುಹಿಸಿದನು. ಅನಂತರ ರಾವಣನ ಪುತ್ರನಾದ ಮಹಾವೀರನೂ, ಸಕಲವಿದ್ಯಾಪಾರಾವಾರನೂ ಆದ ಇಂದ್ರಜಿತುವಿನೊಡನೆ ಹಾಡಾಹಾಡಿ ಹೋರಾಡಿದನು. ಇಂದ್ರಾರಿಯು ಹನುಮಂತನನ್ನು ಬ್ರಹ್ಮಾಸ್ತ್ರದಿಂದ ಬಂಧಿಸಿ ರಾವಣನ ಸಮ್ಮುಖಕ್ಕೆ ಒಯ್ಯುವುದರಲ್ಲಿ ಯಶಸ್ವಿಯಾದನು. ಆಂಜನೇಯನು ಒಂದು ಕ್ಷಣಕಾಲ ಎಲ್ಲವನ್ನು ಸಹಿಸಿದನು. ರಾವಣನ ಅಶೋಕವನವನ್ನು ಹಾಳುಗೆಡವಿದ ಚಂಚಲಬುದ್ಧಿಯ ಕೋಡಗನಿಗೆ ಬಾಲವನ್ನು ಸುಡುವಂತೆ ರಾವಣನ ಮಂತ್ರಿ ಪ್ರಹಸ್ತನು ಆಜ್ಞಾಪಿಸಿದನು. ಏಕೆಂದರೆ ಕಪಿಗಳಿಗೆ ಬಾಲವೇ ಬಲುಮುದ್ದು. ಬಾಲವಿಲ್ಲದ ಕಪಿಯನ್ನು ಯಾರೂ ಗೌರವಿಸಲಾರರು. ಅನಂತರ ಆಂಜನೇಯನು ತನ್ನ ಬಾಲಕ್ಕೆ ಹಚ್ಚಿದ ಬೆಂಕಿಯಿಂದ ಲಂಕಾನಗರಿಯ ಕೋಟೆಪೇಟೆಗಳನ್ನು, ರಾಜಭವನಗಳನ್ನು ಭಸ್ಮಮಾಡಿ ಬಾಲದ ಬೆಂಕಿಯನ್ನು ಸಾಗರದಲ್ಲಿ ನಂದಿಸಿ, ತನ್ನ ಒಡೆಯನಲ್ಲಿಗೆ ಯಶಸ್ವಿಯಾಗಿ ಹಿಂದಿರುಗಿದನು.

ಸದೇಶೈರ್ವಾಚಿಕೈಃ ಸೀತಾಂ ನಿರ್ವಾಪ್ಯ ಸುಖಯಿತ್ವಾ—ಅಕ್ಷಸ್ಯ ರಾವಣಕುಮಾರಸ್ಯ ವಧೇನೋದ್ಧೃಪ್ತಃ ಸನ್—ಕ್ಷಣಂ ಸೋಢೋಽರೇರಿಂದ್ರಜಿತಃ ಕರ್ತುಃ ನಿಗ್ರಹೋ ಬಾಧೋ ಬ್ರಹ್ಮಾಸ್ತ್ರಬಂಧನರೂಪೋ ಯೇನ ಸ ತಥೋಕ್ತಃ ಸನ್—ಲಂಕಾಂ ಪುರೀಂ ದದಾಹ=ಭಸ್ಮೀಚಕಾರ ॥

**64. ಪ್ರತ್ಯಭಿಜ್ಞಾನರತ್ನಂ ಚ ರಾಮಾಯಾದರ್ಶಯತ್ ಕೃತೀ ।**
**ಹೃದಯಂ ಸ್ವಯಮಾಯಾತಂ ವೈದೇಹ್ಯಾ ಇವ ಮೂರ್ತಿಮತ್**
**॥ ೬೪ ॥**

ಹನುಮಂತನು ತನ್ನ ಸಾಹಸಕೃತಗಳಲ್ಲಿ ಕೃತಕೃತ್ಯನಾಗಿ ಶ್ರೀರಾಮನ ಬಳಿಗೆ ಹಿಂದಿರುಗಿ ಬಂದು ಸೀತಾಮಾತೆಯು ನೀಡಿರುವ ತನ್ನ ಹೃದಯರತ್ನದಂತಿರುವ ಚೂಡಾಮಣಿಯನ್ನು ಶ್ರೀರಾಮನಿಗಿತ್ತನು. ಅದನ್ನು, ಆ ಚೂಡಾರತ್ನವನ್ನು, ಪ್ರತ್ಯಭಿಜ್ಞಾನ ರತ್ನವನ್ನು, ಕೈಯಲ್ಲಿ ಹಿಡಿದಾಗ ಸ್ವಯಂ ಸೀತಾದೇವಿಯ ದರ್ಶನ, ಆ ಮಹಾಸತಿಯೂ ಪ್ರತ್ಯಕ್ಷಳಾಗಿ ತನ್ನ ಎದುರಲ್ಲಿ ನಿಂತಂತೆ, ಪುಲಕಿತನಾಗಿ ಹರ್ಷಗೊಂಡನು. ಕ್ಷಣಕಾಲ ಶ್ರೀರಘುನಂದನನು ಪತ್ನೀವಿರಹದ ಘನಶೋಕವನ್ನು ಮರೆತನು. ಆ ನೆನಪಿನ ಕಾಣಿಕೆಯನ್ನು ಕೈಯಲ್ಲಿ ಧರಿಸಿದಾಗ ಪತಿಭಕ್ತಿಪರಾಯಣೆಯಳಾದ ಆ ಮಹಾದೇವಿಯ ಹೃದಯವೇ ತನ್ನ ಕೈಗೆ ಬಂದಂತಾಯಿತು ದಾಶರಥಿಗೆ.

ಕೃತೀ = ಕೃತಕೃತ್ಯಃ ಕಪಿಃ—ಸ್ವಯಮಾಯಾತಂ ಮೂರ್ತಿಮದ್ವೈದೇಹ್ಯಾ ಹೃದಯಮಿವ ಸ್ಥಿತಂ ತಸ್ಮಾ ಏವ—ಪ್ರತ್ಯಭಿಜ್ಞಾನರತ್ನ= ಸೀತೆ ತನ್ನ ಜ್ಞಾಪಕಾರ್ಥ ಕೊಟ್ಟ ಚೂಡಾಮಣಿ—ನಿಮೀಲಿತಃ = ಮೋದಿತಃ—ಪರಿಕ್ಷೇಪಃ = ಪರಿವೇಷ ॥

**65. ಸ ಪ್ರಾಪ ಹೃದಯನ್ಯಸ್ತ ಮಣಿಸ್ಪರ್ಶನಿಮೀಲಿತಃ ।**
**ಅಪಯೋಧರಸಂಸರ್ಗಾಂ ಪ್ರಿಯಾಲಿಂಗನನಿರ್ವೃತಿಮ್ ॥ ೬೫ ॥**

ಆ ಕಾಕುತ್ಸ್ಥನು ಎದೆಗಪ್ಪಿತ ಮಣಿಯನ್ನು (ಚೂಡಾರತ್ನವನ್ನು) ಅದರ ಸೋಂಕಿನ ಸ್ಪರ್ಶಸುಖಕ್ಕೆ ಕಣ್ಣುಗಳನ್ನು ಅರೆಮುಚ್ಚಿ, ಮೈಮರೆತು, ಆನಂದಿಸಿದನು. ಆದರೆ ಇನಿಯಳ ಅಪ್ಪುಗೆಯನ್ನು, ಆಲಿಂಗನದ ಸೌಖ್ಯವನ್ನು, ಕುಚಸೋಂಕಿನ ಸುಖದ ಸವಿಯನ್ನು ಅನುಭವಿಸದಾದನು (ಎದೆಗಪ್ಪಿತಾ ಮಣಿಯ ಸೋಂಕು ಸೊಗದಿಂದ ಅರೆಗಣ್ಣು ಮುಚ್ಚಿತ್ತ).

ಹೃದಯೇ = ವಕ್ಷಸಿ—ನ್ಯಸ್ತಸ್ಯ = ಧೃತಸ್ಯ ಮಣೇರಭಿಜ್ಞಾನರತ್ನಸ್ಯ—ಸ್ಪರ್ಶೇನ ನಿಮೀಲಿತೋ = ಮೋಹಿತಃ—ಪಯೋಧರಸಂಸರ್ಗಃ = ಸ್ತನಸ್ಪರ್ಶೋ—ಯಸ್ಯಾಸ್ತಾಂ ತಥಾಭೂತಾಂ = ಪ್ರಿಯಾಯಾ ಆಲಿಂಗನೇನ—ನಿರ್ವೃತಿ = ಆನಂದಸ್ತಾ ಪ್ರಾಪ ॥

**66. ಶ್ರುತ್ವಾ ರಾಮಃ ಪ್ರಿಯೋದನ್ತಂ ಮೇನೇ ತತ್ಸಂಗಮೋತ್ಸುಕಃ ।**
**ಮಹಾರ್ಣವಪರಿಕ್ಷೇಪಂ ಲಂಕಾಯಾಃ ಪರಿಖಾಲಘುಮ್ ॥ ೬೬ ॥**

ತನ್ನ ಕಾಂತೆಯ, ತನ್ನ ಹೃದಯೇಶ್ವರಿಯ (ತನ್ನ ಪ್ರಿಯೆಯ, ಪ್ರಾಣನಾಯಕಿಯ) ಕುಶಲವಾರ್ತೆಯನ್ನು ಕೇಳಿ ರಘುರಾಮಚಂದ್ರನು ಆಕೆಯ ಸಂಗಮಸುಖವನ್ನು (ಸಂಗಸುಖವನ್ನು) ಬಯಸುವ ಉತ್ಸಾಹದಲ್ಲಿ (ಆಕೆಯನ್ನು ಸೇರುವ, ಒಂದಾಗುವ) ಲಂಕಾನಗರಿ ಮತ್ತು ಅವರ ಮಧ್ಯೆ ಇರುವ ಅಗಾಧವಾದ ಮಹಾಸಾಗರವೂ ಒಂದು ಸಣ್ಣ ಹೊಳೆಯನ್ನು (ತೊರೆಯನ್ನು) ದಾಟಿದಂತೆ ತೋರಿತು, ಹಾಗೆ ಅನಿಸಿತು. ಲಂಕೆಯನ್ನು ಬಳಸಿನಿಂದ ಅಗಾಧವಾದ ಹಿಂದೂ ಮಹಾಸಾಗರವು ಒಂದು ಕೋಟೆಯನ್ನು ಬಳಸಿನಿಂದ ನೀರಿನ ಕಂದಕದಂತೆ (ಕಾಲುವೆನೀರಿನಂತೆ, ಕೈತೋಡಿನಂತೆ) ತೋರಿತು. ಅದನ್ನು ದಾಟುವುದು ಬಹಳ ಸುಲಭವೆನಿಸಿತು, ಲಘುವಾಗಿ ಕಂಡಿತು, ತೀರಾ ಅಲ್ಪವೆನಿಸಿತು.

ಉದಂತಂ = ವಾರ್ತಾಮ್—"ಉದಂತಃ ಸಾಧುವಾರ್ತಯೋಃ"—ಇತಿ ವಿಶ್ವಃ ॥ ಶ್ರುತ್ವಾ ತಸ್ಯಾಃ = ಸೀತಾಯಾಃ—ಮಹಾರ್ಣವ ಏವ ಪರಿಕ್ಷೇಪಃ = ಪರಿವೇಷ್ಟಸ್ತಂ—ಪರಿಖಾಲಘುಂ = ದುರ್ಗವೇಷ್ಟನವತ್ಸುಕರಂ ಮೇನೇ ॥

**67. ಸ ಪ್ರತಸ್ಥೇಽರಿನಾಶಾಯ ಹರಿಸೈನ್ಯೈರನುದ್ರುತಃ ।**
**ನ ಕೇವಲಂ ಭುವಃ ಪೃಷ್ಠೇ ವ್ಯೋಮ್ನಿ ಸಂಬಾಧವರ್ತಿಭಿಃ ॥ ೬೭ ॥**

ತನ್ನ ವೈರಿಯ ನಾಶಕ್ಕಾಗಿ ಕಪಿಸೇನೆಯನ್ನು ಶ್ರೀರಾಮನು ಸಜ್ಜುಗೊಳಿಸಿದನು. ಆ ಅನಂತಸಂಖ್ಯೆಯ ಕಪಿಸೇನೆಯು (ವಾನರಸೇನೆ) ಭೂಮಿ ಮತ್ತು ಆಕಾಶಮಂಡಲಗಳೆರಡನ್ನೂ ತನ್ನ ಸಂಖ್ಯಾಬಲದಿಂದ (ತೋಳ್ಬಲದಿಂದ) ತುಂಬಿಕೊಂಡಿತು (ನೆಲದೊಳಲ್ಲದೆ ಮತ್ತೆ ಬಾನಿನೊಳು ಇಟ್ಟಳಿಸಿ). ಆ ಸೇನೆಯು ಭೂಮಿಯಲ್ಲಿ ಮಾತ್ರವಲ್ಲ, ಬಾನಮಾರ್ಗವಲ್ಲೂ ಮುನ್ನಡೆಯಿತು. ಆ ಸೇನೆಗೆ ಭೂಮಿಯು ಸಾಕಾಗದೆ ಬಾನಲ್ಲೂ ಸಾಗಿ ನಡೆಯಿತು. ಅಂತಹ ಅಪಾರಸೇನೆ ಶ್ರೀರಾಮನ ನೇತೃತ್ವದಲ್ಲಿ (ನಾಯಕತ್ವದಲ್ಲಿ) ಶತ್ರುಹನನಕಾರ್ಯಕ್ಕೆ (ಶತ್ರುದಮನ) ಕಾರ್ಯೋನ್ಮುಖವಾಯಿತು (ಅರಿನಾಶಪಡೆಯ).

ಭುವಃ ಪೃಷ್ಠೇ = ಭೂತಲೇ—ವ್ಯೋಮ್ನಿ ಚ = ಬಾನಲ್ಲೂ—ಸಂಬಾಧವರ್ತಿಭಿಃ =

ಸಂಕಟಾಃ ವಿಘಃ—ಪರಿಶ್ಯೈನ್ಯಃ = ಕಪಿಸೈನ್ಯ = ಕಪಿಬಲೈಃ—ಅನುದ್ರುತೋ = ಅನ್ವಿತಃ—ರಾವಣೋ ಅರಿನಾಶಾಯ ಪ್ರತಸ್ಥೇ = ಚಚಾಲ ॥

**68. ವಿವಿಕ್ಷುಮುದಧೇಃ ಕೂಲೇ ತಂ ಪ್ರಪೇದೇ ವಿಭೀಷಣಃ ।**
**ಸ್ನೇಹಾದ್ರಾಕ್ಷಸಲಕ್ಷ್ಮ್ಯೇವ ಬುದ್ಧಿಮಾವಿಶ್ಯ ಚೋದಿತಃ ॥ ೬೮ ॥**

ವಿಭೀಷಣನು ರಾವಣಾನುಜನು. ಭಕ್ತಿಪ್ರಿಯನು, ಭಕ್ತಪ್ರಿಯನು, ಮಹಾಬುದ್ಧಿಶಾಲಿಯಾದ. ಬುದ್ಧಿಜೀವಿಯಾದ. ಸದ್ಗುಣಸಾಂದ್ರನಾದ ವಿಭೀಷಣನು ಸಮಯಕ್ಕೆ ಸರಿಯಾಗಿ ತನ್ನ ಅಣ್ಣನನ್ನು ಎಚ್ಚರಿಸಿದನು. ವೈದೇಹಿಯನ್ನು ಹಿಂದೆ ಕಳುಹಿಸಿ ಸಂಧಾನ (ಒಪ್ಪಂದ) ಮಾಡಿಕೊಂಡು ರಾಕ್ಷಸರಿಗೆ ಬರಬಹುದಾದ ವಿಪತ್ತನ್ನು ದೂರಮಾಡಲು ಪ್ರಾರ್ಥಿಸಿದನು. ಆದರೆ ಕಾಲಪಾಶ(ಭವಿಷ್ಯ)ಚೋದಿತನಾದ ರಾವಣನು ಖಡ್ಗವನೆತ್ತಿ ಬೀಸಿ ರಾಕ್ಷಸಬಂಧುವಾದ ವಿಭೀಷಣನನ್ನು ವಧಿಸಲು ಹೋದನು (ಸಾರಿದನು ಆ ವಿಭೀಷಣನನ್ನು). ತನ್ನ ಒಡಹುಟ್ಟಿದ ತಮ್ಮನಾದದ್ದಕ್ಕೆ, ಕೈಕಸೆಯ ಬಸುರಿಂದ ಇಳಿದುಬಂದುದರಿಂದ, ವಧಿಸದೆ ಸುಮ್ಮಗಾದನು. ಅವನನ್ನು ಸಭೆಯಿಂದ (ಕತ್ತಿಗೆ ಕೈಹಾಕಿ) ಹೊರದಬ್ಬುವಂತೆ ಆಜ್ಞಾಪಿಸಿದನು. ಆಗ ವಿಭೀಷಣನು, ಏನೊಂದನೂ, ತನ್ನ ಹಿತೈಷಿಗಳೊಂದಿಗೆ ತಾನಾಗಿ ಹೊರಟು ಶ್ರೀರಾಮನ ಶಿಬಿರಕ್ಕೆ ಆಗಮಿಸಿದನು (ದೊಡಲೇತಕೆ ನಮ್ಮ ಸಾವೇ ದೂಡಿಕೊಂಬೆವು ಎನುತ).

ವಿಭೀಷಣನು ಸಮುದ್ರತಡಿಯಲ್ಲಿ ಬೀಡುಬಿಟ್ಟಿರುವ ಶ್ರೀರಾಮನ ಸನ್ನಿಧಿಗೆ ಬಂದು ಶರಣಾಗತನಾಗಿ ಒಳಿತನ್ನೇ ಮಾಡಿದನು. ವಿವೇಕಿಯೂ, ಬುದ್ಧಿವಂತಿಯಾದ (ಜಾಣಾಕ್ಷ) ವಿಭೀಷಣನನ್ನು ರಾಕ್ಷಸಶ್ರೀಯು (ರಾಕ್ಷಸಸಾಮ್ರಾಜ್ಯಲಕ್ಷ್ಮಿಯು) ತನ್ನ ಅಳಿವು ಸಮೀಪಿಸುತ್ತಿದೆಯೆಂದು ಅರಿತು ತನ್ನನ್ನು ಉಳಿಸುವಂತೆ ಸ್ವಯಂಪ್ರೇರಿತಳಾಗಿ ಕಳುಹಿಸಿದಳೋ ಎಂಬಂತೆ ತೋರಿತು.

ರಾವಣನ ಸರ್ವನಾಶವನ್ನು ಮುಂದಾಗಿ ತಿಳಿದ ರಾಕ್ಷಸರ ಅದೃಷ್ಟಲಕ್ಷ್ಮಿಯು, ರಾಕ್ಷಸರ ಮೇಲಿನ ಸ್ನೇಹಬುದ್ಧಿಯಿಂದ, ಮಮತೆಯಿಂದ ವಿಭೀಷಣನನ್ನು ಪ್ರಚೋದಿಸಿ, ರಾವಣನಿಗೆ ಸಮಯೋಚಿತವಾದ ಕರ್ತವ್ಯಜ್ಞಾನವನ್ನು ಅರುಹುವಂತೆ ಮಾಡಿದಳು, ಸೀತೆಯನ್ನು ಹಿಂದಿರುಗಿಸಿ ರಾಕ್ಷಸಕುಲವನ್ನು ಉಳಿಸುವಂತೆ ಪ್ರಾರ್ಥಿಸಿದಾಗ ರಾವಣನ ಅವಕೃಪೆಗೆ (ಸಿಟ್ಟಿಗೆ) ಪಾತ್ರನಾದನು. "ರಾಕ್ಷಸಾಧಮ"ನೆಂಬ ಹೆಸರಿನಿಂದ ರಾಕ್ಷಸಕುಲವತಂಸನನ್ನು ಕರೆದನು. ಸಮಯಚೋದಿತನಾದ ರಾವಣನನ್ನು ತ್ಯಜಿಸಿ ಕರ್ತವ್ಯಜ್ಞಾನಿಯಾದ ವಿಭೀಷಣನು, ಶ್ರೀರಾಮಾಶ್ರಯವನ್ನು ಪಡೆದು ರಾಕ್ಷಸಕುಲದ ಹಿತವನ್ನು ಸಾಧಿಸಿದನು.

ಉದಧೇಃ = ಸಮುದ್ರಸ್ಯ—ಕೂಲೇ = ತಟೇ—ಪ್ರಪೇದೇ = ಪ್ರಾಪ್ತಃ—ವಿಭೀಷಣೋ = ರಾವಣಾನುಜಃ—ಸ್ನೇಹಾದ್ಬುದ್ಧಿಂ = ಕರ್ತವ್ಯತಾಜ್ಞಾನಂ — ಭವಿಷ್ಯಚೋದಿತಃ = ಪ್ರೇರಿತ ಇವ ॥

**69. ತಸ್ಮೈ ನಿಶಾಚರೈಶ್ವರ್ಯಂ ಪ್ರತಿಶುಶ್ರಾವ ರಾಘವಃ ।**
**ಕಾಲೇ ಖಲು ಸಮಾರಬ್ಧಾಃ ಫಲಂ ಬಧ್ನಂತಿ ನೀತಯಃ ॥ ೬೯ ॥**

ರಾಘವನು ರಾಕ್ಷಸರ ಐಶ್ವರ್ಯ, ಸಿರಿವಂತಿಗೆ, ರಾಕ್ಷಸಾಧಿಪತ್ಯವನ್ನು ವಿಭೀಷಣನಿಗೆ ನೀಡುವುದಾಗಿ ವಾಗ್ದಾನವನ್ನು ಮಾಡಿದನು (ಅಸುರರೈಶ್ವರ್ಯವನು ಕೊಡಲೆಂದು ಪೂಣ್ದನ್). ಇದರಿಂದ ರಾಕ್ಷಸಸಾಮ್ರಾಜ್ಯವು ಅಬಾಧಿತವಾಗಿ ಮುಂದುವರಿಯಲು ಸಾಧ್ಯವಾಯಿತು. ಸರಿಯಾದ ರಾಜನೀತಿಯು, ವಿಹಿತವಾದ ಸಮಯದಲ್ಲಿ ಒಳ್ಳೆಯ ಫಲವನ್ನು ಕೊಡುವಂತೆ, ರಾಕ್ಷಸಕುಲಕ್ಕೆ ಶ್ರೇಯಸ್ಸು ಉಂಟಾಯಿತು. ಶ್ರೀರಾಮ ವಿಭೀಷಣರ ಸಖ್ಯತನದಿಂದ ನಿಶಾಚರ ಐಶ್ವರ್ಯವು (ಐಸಿರಿ) ಪತನವಾಗದೆ ಶಾಶ್ವತವಾಗಿ ಉಳಿಯಿತು. ನೇಮದಿಂದ ಮಾಡಿದ ವ್ರತ, ದೇವಪೂಜೆ, ಯಜ್ಞಯಾಗಾದಿಗಳು, ಸರಿಯಾದ ನೀತಿಶಾಸ್ತ್ರ, ಧರ್ಮಶಾಸ್ತ್ರಾದಿಗಳ ಅನುಸರಣೆ, ಸರಿಯಾದ ಸಮಯ ಕೂಡಿ ಬಂದಾಗ, ಕಾಲ ಒದಗಿಬಂದಾಗ, ಉತ್ತಮವಾದ ಫಲ ನೀಡುವುದರಲ್ಲಿ ಅನುಮಾನವಿಲ್ಲ ("ಕಾಲನಾದರು ಬೆದರುತಿಹನು ಉದ್ಯೋಗಶೀಲನಿಗೆ" ಎಂಬಂತ).

ನಿಶಾಚರೈಶ್ವರ್ಯಂ = ರಾಕ್ಷಸಾಧಿಪತ್ಯಂ—ಪ್ರತಿಶುಶ್ರಾವ = ಪ್ರತಿಜ್ಞಾತವಾನ್—ಕಾಲೇऽವಸರೇ—ಸಮಾರಬ್ಧಾಃ = ಪ್ರಕ್ರಾಂತಾ—ನೀತಯಃ ಫಲಂಬಧ್ನಂತಿ = ಗೃಹ್ಣಂತಿ = ಜನಯಂತೀತ್ಯರ್ಥಃ—ಖಲು = ನಿಶ್ಚಿತಂ ॥

**70. ಸ ಸೇತುಂಬಂಧಯಾಮಾಸ ಪ್ಲವಗೈರ್ಲವಣಾಂಭಸಿ ।**
**ರಸಾತಲಾದಿವೋನ್ಮಗ್ನಂ ಶೇಷಂ ಸ್ವಪ್ನಾಯ ಶಾರ್ಙ್ಗಿಣಃ ॥ ೭೦ ॥**

ಶಾರ್ಙ್ಗಧರನಾದ ಮಹಾವಿಷ್ಣುವು ಪವಡಿಸಲೆಂದು ಆವಾಸಸ್ಥಾನವಾದ ರಸಾತಲದಿಂದ (ಪಾತಾಳದಿಂದ) ಎದ್ದುಬಂದ ಆದಿಶೇಷನೋ ಎಂಬಂತೆ ಕಪಿಗಳಿಂದ ಸಮುದ್ರದ ಮೇಲೆ, ಅಗ್ನಿ, ನೀಲ ಮೊದಲಾದ ವಾನರ ಅಭಿಯಂತರರ ಪರಿಶ್ರಮದಿಂದ ಬಲಿದ ಕಡಲ ಸೇತುವೆಯು ಎಸೆಯುತ್ತಿತ್ತು. ಆ ಸೇತುವೆಯು ಆದಿಶೇಷನಂತೆ ಪ್ರಕಾಶಮಾನವಾಗಿ ಬೆಳಗುತ್ತಿತ್ತು. ಆದಿಶೇಷನ ಮೇಲೆ ಕ್ಷೀರಸಾಗರದಲ್ಲಿ (ವೈಕುಂಠದಲ್ಲಿ) ಶ್ರೀಹರಿಯು ಯೋಗನಿದ್ರೆಯಲ್ಲಿದ್ದು ಈ ಸಮಸ್ತಬ್ರಹ್ಮಾಂಡದ ಆಗುಹೋಗುಗಳನ್ನು ಅವಲೋಕಿಸುತ್ತಿರುವನು. ಇದೀಗ ತ್ರೇತಾಯುಗದಲ್ಲಿ ಪುಂಡರೀಕಾಕ್ಷನಾದ ಮಹಾವಿಷ್ಣುವು ಮಾನವ ಧರ್ಮಸ್ಥಾಪನೆಗಾಗಿ ದಶರಥರಾಮನಾಗಿ ಅವತರಿಸಿದ್ದಾನೆ. ತನ್ನ ಸ್ವಾಮಿಯ ಸೇವೆಗೈಯಲು ಪಾತಾಳದಲ್ಲಿರುವ ಆದಿಶೇಷನು, ವಿಷ್ಣುವಿನ ಶಯನಕ್ಕಾಗಿ ಭೂಲೋಕಕ್ಕೆ ಎದ್ದುಬಂದನೋ ಎಂಬಂತೆ ಆ ಮಹಾಸೇತುವೆಯು ಮೆರೆಯುತ್ತಿತ್ತು, ಜನಮನವ ಕಣ್ಣಿಗೆ ಭಾಸವಾಗುತ್ತಿತ್ತು.

ಲವಣಂ ಕ್ಷಾರಮಂಭೋಯಸ್ಯಾಸೌ ಲವಣಾಂಭಸ್ತಸ್ಮಿಂಲ್ಲವಣಾಬ್ಧೌ—ಪ್ರವಗೈಃ = ಪ್ರಯೋಜ್ಯೈಃ—ಶಾರ್ಙ್ಗಿಣೋ = ವಿಷ್ಣೋಃ, ವಿಷ್ಣುವಿನ—ಸ್ವಪ್ನಾಯ=ಶಯನಾಯ —ರಸಾತಲಾತ್ = ಪಾತಾಲದುನ್ಮಗ್ನ=ಉತ್ಥಿತಂ=ಶೇಷಮಿವ ಸ್ಥಿತಂ ಸೇತುಂಬಂಧಯಾಮಾಸ—ಪ್ಲವಗೈಃ =ಪ್ಲವೇನ ಗಚ್ಛತಿ ಇತಿ ಪ್ಲವಗಃ = ಕೋತಿಗಳಿಂದ—ಶಾರ್ಙ್ಗಿಣಃ = ಶಾರ್ಙ್ಗಿನ್ = ಮಹಾವಿಷ್ಣುನ ಬಿರುದು, ಮಹಾವಿಷ್ಣುನ ಧನುಸ್ಸು (ಶೃಂಗಸ್ಯ ವಿಕಾರಃ ಶಾರ್ಙ್ಗಮ್ ॥

**71. ತೇನೋತ್ತೀರ್ಯ ಪಥಾ ಲಂಕಾಂ ರೋಧಯಾಮಾಸ ಪಿಂಗಲೈಃ ।**
**ದ್ವಿತೀಯಂ ಹೇಮಪ್ರಾಕಾರಂ ಕುರ್ವದ್ಭಿರಿವ ವಾನರೈಃ ॥ ೭೧ ॥**

ಸೇತುವೆಯ ಸಹಾಯದಿಂದ ಶ್ರೀರಾಮನು ಸಾಗರವನ್ನು ದಾಟಿ ರಾವಣನ ರಾಜಧಾನಿಯಾದ ಸುವರ್ಣಲಂಕೆಗೆ ದಾಳಿಯಿಟ್ಟನು. ಸಾಲುಸಾಲಾಗಿ ನಡೆಯಿತು ಕಪಿಗಳ ಮಹಾಸೇನೆ. ಯುವಕರಾದ ಕಪಿಗಳು ಲಂಕಾನಗರಿಯನ್ನು ಮುತ್ತಲು ಧಾವಿಸಿ ಹೊರಟರು. ಹಳದಿ ಬಣ್ಣದ (ಅರಶಿನ ಬಣ್ಣದ) ಮಂಗಗಳು ಧಾವಿಸುವುದನ್ನು ಕಂಡರೆ ಲಂಕಾನಗರಿಗೆ ಎರಡನೆಯ ಕನಕಕೋಟೆಯನ್ನು (ಬಂಗಾರದ ಕೋಟೆಯನ್ನು) ಶ್ರೀರಾಮನು ರಚಿಸಿದನೋ ಎಂಬಂತೆ ಕಪಿಗಳು ಲಗ್ಗೆ ಇಟ್ಟವು. ಈಗ ಲಂಕಾನಗರಿಗೆ ಹೋಗಲು ಸುಗಮವಾದ ಭೂಮಾರ್ಗವು ಏರ್ಪಟ್ಟಿತು. ದುರ್ಭೇದ್ಯವಾದ ಲಂಕಾನಗರಿ ಭೇದ್ಯವೆನಿಸಿತು. ಕೋಟಿಗಟ್ಟಲೆ ಸಂಖ್ಯೆಯ ಆ ಕಪಿಸೇನೆ ಎರಡನೆಯ ಸೇತುವೆಯೋ ಎಂಬಂತೆ ಭಾಸವಾಗುತ್ತಿತ್ತು.

ರಾಮಸ್ತೇನ ಪಥಾ=ಸೇತುಮಾರ್ಗೇಣೋತ್ತೀರ್ಯ, ಸಾಗರಮಿತಿ ಶೇಷಃ—ಪಿಂಗಲೈಃ =ಸುವರ್ಣವರ್ಣೈರತ ಏವ—ಹೇಮಪ್ರಾಕಾರಂ = ಕನಕಕೋಟೆ—ರೋಧಯಾಮಾಸ ॥

**72. ರಣಃ ಪ್ರವವೃತೇ ತತ್ರ ಭೀಮಃ ಪ್ಲವಗರಕ್ಷಸಾಮ್ ।**
**ದಿಗ್ವಿಜೃಂಭಿತ ಕಾಕುತ್ಸ್ಥ ಪೌಲಸ್ತ್ಯ ಜಯಘೋಷಣಃ ॥ ೭೨ ॥**

ಲಂಕಾನಗರಿಯಲ್ಲಿ ಭೀಮಕಾಯದ ವಾನರರಿಗೂ, ಬೃಹದಾಕಾರದ ದೈತ್ಯರಿಗೂ, ವಾನರಸೇನಾಸಾಗರಕ್ಕೂ, ರಾಕ್ಷಸಸೇನಾಸಾಗರಕ್ಕೂ ಭೀಮಸಂಗ್ರಾಮವು ತಲೆದೋರಿತು. ಎರಡು ಮಹಾಸಾಗರಗಳು ಒಂದಕ್ಕೊಂದು ಢೀರ್ ಢೀರ್ ಡಿಕ್ಕಿಹೊಡೆದಂತೆ ಯುದ್ಧವು ಆರಂಭವಾಯಿತು. ಒಂದೆಡೆ ಕಾಕುತ್ಸ್ಥ ಶ್ರೀರಾಮಚಂದ್ರನಿಗೆ ಜಯವಾಗಲಿ ಎಂಬ ಜಯಘೋಷ ಕೇಳಿಬರುತ್ತಿದ್ದರೆ, ರಕ್ಕಸರ ಪಾಳಯದಲ್ಲಿ ರಾಕ್ಷಸಸಾರ್ವಭೌಮ ರಾವಣನಿಗೆ ಜಯವಾಗಲಿ ಎಂಬ ಘೋಷಣೆಯು ದಶದಿಕ್ಕುಗಳಲ್ಲಿ ಮೊಳಗಲಾರಂಭಿಸಿತು. ಎಲ್ಲೆಲ್ಲೂ ಜಯಘೋಷ, ವೀರರ ಸಿಂಹನಾದ, ಆರ್ಭಟ, ಅಟ್ಟಹಾಸ, ಆನೆಗಳ ಬೃಂಹಿತ, ವಾಜಿಗಳ ಹೇಷಾರವ, ರಥಗಳ ಚೀತ್ಕಾರ, ಪದಾತಿಗಳ ಆರ್ಭಟ, ರಂಪಾಟ ದಶದಿಶೆಗಳನ್ನು ತುಂಬಿತು. ರಕ್ತದ ಹೊನಲು ನದಿಯಾಗಿ ಹರಿಯಿತು. ಆ ರಣಭೂಮಿಯು ಸ್ಮಶಾನದಂತೆ ಹೆಣಮಯ. ರುದ್ರಭಯಂಕರದ ದೃಶ್ಯ—ಮುರಿದ ರಥ, ಛಿದ್ರಛಿದ್ರವಾದ ಪ್ಲವಗ, ರಾಕ್ಷಸರ ದೇಹಗಳಿಂದ ತುಂಬಿರುವ, ಬೀಭತ್ಸವಾದ ರಣರಂಗವು, ರುದ್ರಭಯಂಕರ ದೃಶ್ಯ. ಯಮನ ಬಾಣಸದ ಮನೆಯಂತೆ, ಯಮನ ಅಡುಗೆಯ ಮನೆಯಂತೆ. ಕಸಾಯಿಖಾನೆಯಂತೆ ಕೋಟ್ಯಾನುಕೋಟಿ ಜೀವರಾಶಿಗಳು ಮಡಿದುಬಿದ್ದರು. ಭೂಭಾರ ತಗ್ಗಿತು, ಜನಸಂಖ್ಯಾ ನಿಯಂತ್ರಣಕ್ಕೆ ವಿಧಿ ನಡೆಸಿದೆ ಹುನ್ನಾರು ಎಂಬಂತೆ.

ಭೀಮೋ = ಭಯಂಕರೋ—ದಿಗ್ವಿಜೃಂಭಿತಂ ಕಾಕುತ್ಸ್ಥಪೌಲಸ್ತ್ಯೋಃ =ರಾಮರಾವಣಯೋರ್ಜಯಘೋಷಣಾ = ಜಯಶಬ್ದೋ ಯಸ್ಮಿನ್ ಸ ತಥೋಕ್ತರಣಃ—ಪ್ರವವೃತೇ = ಪ್ರವೃತ್ತಃ "ಅಸ್ತ್ರೀಯಾಂ ಸಮರಾನೀಕರಣಾಃ ಕಲಹವಿಗ್ರಹೌ" ಇತ್ಯಮರಃ ॥

**73. ಪಾದಪಾವಿದ್ಧ ಪರಿಘಃ ಶಿಲಾನಿಷ್ಪಿಷ್ಟಮುದ್ಗರಃ ।**
**ಅತಿಶಸ್ತ್ರನಖನ್ಯಾಸಃ ಶೈಲರುಗ್ಣಮತಂಗಜಃ ॥ ೭೩ ॥**

ಅದು ವಾನರರಾಕ್ಷಸರಿಗೆ ನಡೆದ ಘೋರಸಂಗ್ರಾಮ. ವಾನರರು ದೊಡ್ಡದೊಡ್ಡ ಮರಗಳಿಂದ, ಬಂಡೆಕಲ್ಲುಗಳಿಂದ, ತಮ್ಮ ನಖಾಯುಧಗಳಿಂದ ಸಜ್ಜಾಗಿದ್ದರು. ರಾಕ್ಷಸರು ಲೋಹದ (ಕಬ್ಬಿಣದ, ಉಕ್ಕಿನ) ಗದೆಗಳಿಂದ, ಮುದ್ಗರಗಳಿಂದ, ಪರಿಘಗಳಿಂದ ಹೊಡೆಯುತ್ತಿದ್ದರು. ಕಲ್ಲು, ಬಂಡೆಗಳೇ, ಗಿರಿಗಳೇ ವಾನರರ ಕ್ಷಿಪಣಿಗಳು. ಅವರು ತಮ್ಮ ಉಗುರುಗಳಿಂದ ಮಾಡಿದ ಗಾಯವು ಖಡ್ಗದ ಗಾಯಕ್ಕಿಂತಲೂ ಆಳವಾಗಿತ್ತು (ನಖಘಾತದಿಂದ ಅಸ್ತ್ರಗಳ ಮೀರಿದ್ದು). ಆ ವಾನರರು ರಕ್ಕಸರು ಏರಿಬರುತ್ತಿರುವ ಮದ್ದಾನೆಗಳನ್ನು, ಅವುಗಳನ್ನು ಹೋಲುವ ಬಂಡೆಕಲ್ಲುಗಳನ್ನು ಎಸೆದು ಜಜ್ಜುಬಜ್ಜು ಮಾಡಿಬಿಡುತ್ತಿದ್ದರು. ಹೊಡೆದು, ಬಡಿದು ಯಮಸದನಕ್ಕೆ ಅಟ್ಟುತ್ತಿದ್ದರು (ಕರಿಗಳನು ಗಿರಿಗಳಿಂದ ಇರಿದರು). ಹೀಗೆ ರಣರಂಗವು ರೌದ್ರಗಂಭೀರವಾಗಿ ಮೆರೆಯುತ್ತಿತ್ತು.

ಪಾದಪೈಃ=ವೃಕ್ಷೌ—ಪರಿಘಾ = ಲೋಬಹದ್ಧ ಕಾಷ್ಠಾನಿ ಯಸ್ಮಿನ್ ಸ ತಥೋಕ್ತಃ— "ಪರಿಘಃ ಪರಿಘಾತನಃ" ಇತ್ಯಮರಃ—ಶಿಲಾಭಿರ್ನಿಷ್ಪಿಷ್ಟಾಶ್ಚೂರ್ಣಿತಾ ಮುದ್ಗರಾ = ಅಯೋಘನಾ ಯಸ್ಮಿನ್ ಸ ತಥೋಕ್ತಃ—"ದ್ರುಘಣೋ ಮುದ್ಗರಘನೌ" ಇತ್ಯಮರಃ —ಅತಿಶಸ್ತ್ರಾಃ=ಶಸ್ತ್ರಾಣ್ಯತಿಕ್ರಾಂತಾ—ನಖನ್ಯಾಸಾಯಸ್ಮಿ ಸ ತಥೋಕ್ತಃ—ಶೈಲೈರುಗ್ಣಾ ಭಗ್ನಾ ಮತಂಗಜಾ ಯಸ್ಮಿನ್ ಸ ತಥೋಕ್ತಃ ॥

**74. ಅಥ ರಾಮಶಿರಚ್ಛೇದದರ್ಶನೋದ್ಭ್ರಾಂತಚೇತನಾಮ್ ।**
**ಸೀತಾಂ ಮಾಯೇತಿ ಶಂಸಂತೀ ತ್ರಿಜಟಾಸಮಜೀವಯತ್ ॥ ೭೪ ॥**

ರಾಕ್ಷಸರಾಜನಾದ ರಾವಣನು ವಿದ್ಯುಜ್ಜಿಹ್ವನು ನಿರ್ಮಿಸಿದ ಮಾಯಾರಾಮನನ್ನು ಸೀತೆಯು ಎದುರಲ್ಲಿ (ಶ್ರೀರಾಮನ) ಶಿರಚ್ಛೇದನ ಮಾಡಿದನು. ಇದೊಂದು ರಾವಣನ ಸಮರತಂತ್ರ. ಶ್ರೀರಾಮನು ತನ್ನ ಕಣ್ಣ ಎದುರಲ್ಲೇ ಮಡಿದುಬಿದ್ದುದು ನಿಜವೆಂದು ನಂಬಿ ಸೀತಾದೇವಿಯು ಭ್ರಾಂತಳಾಗಿ ಹಾಹಾಕಾರವಮಾಡಿದಳು. ತನ್ನ ಅಳಿವು ಸಮೀಪಿಸಿತೆಂದು ತಿಳಿದು ಮೂರ್ಛೆಗೆ ಸಂದಳು. ಆಕೆ ಅದು ಮಾಯಾರಾಮನೆಂದು ತಿಳಿಯದಾದಳು. ಆಗ ಕಾವಲಿನಲ್ಲಿದ್ದ ವಿಭೀಷಣನ ಪತ್ನಿ ತ್ರಿಜಟೆ ಅದು ಮಾಯಾಶಿರವೆಂದು ಹೇಳಿ ಸಂತೈಸಿದಳು. ಅದು ರಾವಣನು ಹೂಡಿದ ತಂತ್ರವೆಂದು ಹೇಳಿ ಗುಟ್ಟನ್ನು ರಟ್ಟುಗೊಳಿಸಿದಳು. ಇದರಿಂದ ಸೀತೆಯು ಜೀವಿಸುವಂತಾದಳು. ಅವಳ ಹೋದ ಪ್ರಜ್ಞೆ ಮರುಕಳಿಸಿತು. ಆಕೆ ಮೆಲ್ಲಮೆಲ್ಲನೆ ಚೇತರಿಸಿಕೊಂಡಳು. ಅದು ಮಾಯಾಕಲ್ಪಿತವೆಂದು (ಸುವರ್ಣಮೃಗದಂತೆ) ಅರಿತಳು. ರಕ್ಕಸರ ಠಕ್ಕು ಬಯಲಾಯಿತು. ಮೋಸದ ಅರಿವಾಯಿತು.

ಛಿದ್ಯತ ಇತಿ ಛೇದಃ=ಖಂಡಃ—"ಶಿರ ಏವ ಛೇದ" ಇತಿ ವಿಗ್ರಹಃ—ರಾಮಶಿರಛೇದಸ್ಯ—ದರ್ಶನೇನೋದ್ಭ್ರಾಂತಚೇತನಾಂ=ಗತಸಂಜ್ಞಾಂ ಸೀತಾಂ—ತ್ರಿಜಟಾನಾಮ ಕಾಚಿತ್ಸೀತಾಪಕ್ಷಪಾತಿನೀ ರಾಕ್ಷಸೀ ಮಾಯಾಕಲ್ಪಿತಂ ನ ತ್ವೇತ್ಸತ್ಯಮಿತಿ—ಶಂಸಂತಿ = ಬ್ರುವಾಣಾ—ಶಂಶ್ಯನೋರ್ನಿತ್ಯಮ್ (ಪಾಣಿನಿ) ಇತಿ ನಿತ್ಯಂ ನುಮಾಗಮಃ—ಸಮಜೀವಯತ್ = ಸಂತಯಿಸಲು ಜೀವಿಸಿದಳಲ್ಲ.

**75. ರಾಮಂ ಜೀವತಿ ಮೇ ನಾಥ ಇತಿ ಸಾ ವಿಜಹೌ ಶುಚಮ್ ।**
**ಪ್ರಾಙ್ಮೃತಾ ಸತ್ಯಮಸ್ಮ್ಯಾಂತಂ ಜೀವಿತಾಸ್ಮೀತಿ ಲಜ್ಜಿತಾ ॥ ೭೫ ॥**

ತನ್ನ ಇನಿಯನು ಬದುಕಿರುವುದು ನಿಜವೆಂದು ಅರಿತು ಸೀತೆ ತನ್ನ ಅಳಲನ್ನು ಮರೆತಳು. ಆದರೆ ಅಂತಹ ದುಃಸಹವಾದ ದುಃಖವನ್ನು ಸಹಿಸಿಯೂ ಪತಿಯು ಗತಿಸಿದನೆಂದು ನಂಬಿಯೂ, ತಾನು ಜೀವಿಸಿರುವುದನ್ನು ನೆನೆದು ಆ ಮಹಾಸತಿ ನಾಚಿದಳು, ಲಜ್ಜಿತಳಾದಳು. ತನ್ನ ಪತಿಯ ಮರಣಾನಂತರವೂ ತಾನು ಜೀವಿಸಿರುವೆನಲ್ಲಾ ಎಂದು ಅರಿತೂ, ಪತಿಯ ಮರಣವು ಯಥಾರ್ಥವೆಂದು ತಿಳಿದೂ, ಸೀತೆಯಂತಹ ಪತಿವ್ರತಾ ವನಿತೆಗೆ, ಮಹಾಸಾಧ್ವಿಗೆ, ಸತೀಶಿರೋಮಣಿಗೆ ಬದುಕಿರಲು ಸಾಧ್ಯವೆ ? ಒಂದು ಕ್ಷಣವೂ ಜೀವಿಸಿರಲು ಸಾಧ್ಯವಾಗಲಾರದು. ತನ್ನ ಇನಿಯನ ಮರಣವಾರ್ತೆಯನ್ನು ಕೇಳಿ ಸೀತೆ ಸಿಟ್ಟಿನಿಂದ ಕಿಡಿಕೆಂಡವಾದಳು. ಅವಳ ದೇಹವು ಬೆಂಕಿಯ ಉಂಡೆಯಾಯಿತು, ದಹಿಸಲಾರಂಭಿಸಿತು. ಆದರೆ ತ್ರಿಜಟೆಯ ಸಮಯೋಚಿತವಾದ ಮಾತಿನಿಂದ ಸೀತೆ ಉಳಿದುಕೊಂಡಳು. ಎಷ್ಟಾದರೂ ಸತ್ಯಕ್ಕೆ ಜಯವಷ್ಟೆ (ಸತ್ಯಮೇವ ಜಯತೇ ನಾನೃತಂ ಎಂಬ ತೆರದೆ).

ಶುಚಾ=ಶೋಕದ ನಾಥಸ್ಯ ಅಂತಂ=ನಾಶಂ ಸತ್ಯಂ=ಯಥಾರ್ಥಂ

**76. ಗರುಡಾಪಾತಾ ವಿಶ್ಲಿಷ್ಟ ಮೇಘನಾದಾಸ್ತ್ರಬಂಧನಃ ।**
**ದಾಶರಥ್ಯೋಃ ಕ್ಷಣಕ್ಲೇಶಃ ಸ್ವಪ್ನವೃತ್ತ ಇವಾಭವತ್ ॥ ೭೬ ॥**

ಇಂದ್ರವಿಜಯಿ ಮೇಘನಾದನು ರಾಮಲಕ್ಷ್ಮಣರ ಮೇಲೆ ಅಮೋಘವಾದ ನಾಗಾಸ್ತ್ರವನ್ನು ಎಸೆದು ಅವರನ್ನು ಮೂರ್ಛೆಗೊಳಿಸಿ ಬಾಧಸಕ್ಕೀಡುಮಾಡಿದ. ಒಂದು ಕ್ಷಣಕಾಲ ರಾಮಲಕ್ಷ್ಮಣರು ದುಸ್ಸಹವಾದ, ಸಹಿಸಲಸದಳವಾದ ಕಷ್ಟವನ್ನು ಅನುಭವಿಸಿದರು ಆಗ ಕ್ಷೀರಸಾಗರದಿಂದ ಗರುಡನು ಆಗಮಿಸಿದನು. ಅವನ ದರ್ಶನಮಾತ್ರದಿಂದ ನಾಗಬಾಣವು ತಾನಾಗಿ ಕಳಚಿ ನಾಗಪಾಶ (ನಾಗಬಂಧನದಿಂದ) ಬಿಡುಗಡೆಹೊಂದಿದರು. ಸುಪರ್ಣನ ಆಗಮನದಿಂದ ಆ ಕ್ಷಣವೇ ಕ್ಲೇಶವನ್ನು ಕನಸಂತೆ ಕಳೆದು ಉಭಯರಾಘವರು ಮುನ್ನಿನ ಶೋಭೆಯನ್ನು ಪಡೆದು ರಾರಾಜಿಸಿದರು (ತತ್ಕ್ಷಣ ಕ್ಲೇಶವನು ಕನಸಂತೆ ಕಳೆದರು).

ಗರುಡಸ್ತಾರ್ಕ್ಷ್ಯಃ—ತಸ್ಯ ಪಾತೇನಾಗಮನೇನ ವಿಶ್ಲಿಷ್ಟಂ ಮೇಘನಾದಸ್ಯೇಂದ್ರಜಿತೋಽಸ್ತ್ರೇಣ ನಾಗಪಾಶೇನ ಬಂಧನಂ—ಕ್ಷಣಕ್ಲೇಶೋ ದಾಶರಥ್ಯೋಃ = ರಾಮಲಕ್ಷ್ಮಣಯೋಃ—ಸ್ವಪ್ನವೃತ್ತಃ = ಸ್ವಪ್ನಾವಸ್ಥಾನುಭೂತ ಇವಾಭವತ್ ॥

**77. ತತೋ ಬಿಭೇದ ಪೌಲಸ್ತ್ಯಃ ಶಕ್ತ್ಯಾ ವಕ್ಷಸಿ ಲಕ್ಷ್ಮಣಮ್ ।**
**ರಾಮಸ್ತ್ವನಾಹತೋಽಪ್ಯಾಸೀತ್ ವಿದೀರ್ಣಹೃದಯಃ ಶುಚಾ ॥ ೭೭ ॥**

ಪೌಲಸ್ತ್ಯ ರಾವಣನು ಲಕ್ಷ್ಮಣನ ಮೇಲೆ ಶಕ್ತ್ಯಾಯುಧವನ್ನು ಪ್ರಯೋಗಿಸಿ ಘಾತಿಸಿದನು. ಲಕ್ಷ್ಮಣನ ಉರಃಸ್ಥಲವನ್ನು (ಎದೆಯನ್ನು) ಆ ಶಕ್ತ್ಯಾಯುಧವು ಭೇದಿಸಿತು ಅಮಿತಶಕ್ತಿಯ ಆ ಶಕ್ತ್ಯಾಯುಧವು ಎಂಟು ಘಂಟೆಗಳಿಂದ ಅಲಂಕೃತವಾದ ಮಹಾ ಆಯುಧ. ಅದರ ಕರ್ತೃ ಮಯಾಸುರ. ಅದು ಶತ್ರುಸಂಹಾರಮಾಡುವುದು ನಿಶ್ಚಿತ. ಲಕ್ಷ್ಮಣನ ಎದೆಯಲ್ಲಿ ಹೂತುಹೋಗಿ ರಕ್ತವನ್ನು ಹೀರಿತು. ಲಕ್ಷ್ಮಣನು ಪ್ರಜ್ಞಾಹೀನನಾಗಿ ಧರೆಗೆ ಉರುಳಿದನು. ಎದೆಯೊಡೆದು ಲಕ್ಷ್ಮಣನು ಇಳೆಯಲ್ಲಿ ಪ್ರಜ್ಞಾಶೂನ್ಯನಾಗಿ, ಮೈಮರೆತು ಒರಗಿದನು. ತನಗಾಗಿ ತನ್ನ ಪ್ರಾಣವನ್ನು ಅರ್ಪಿಸಿದ ಲಕ್ಷ್ಮಣನನ್ನು ಕಂಡು ಶೋಕದಿಂದ ಎದೆಯೊಡೆದು ರಾಘವನು ಅಜ್ಞರಂತೆ ಅತ್ತನು. ಅವನು ಶೋಕವನ್ನು

ಸಹಿಸಲಾರದೆ ಬಾರಂಬಾರಿಗೂ ಅವನ ಗುಣಗಳನ್ನು ನೆನೆನೆನೆದು ನಿಟ್ಟುಸಿರುಬಿಡುತ್ತಾ ಚಿಂತಿಸಿದನು.

ತತಃ ಪೌಲಸ್ತ್ಯಃ = ರಾವಣಃ—ಶಕ್ತ್ಯಾ = ಕಾಸೂನಾಮಕೇನಾಯುಧೇನ—"ಕಾಸೂ ಸಾಮರ್ಥ್ಯಯೋಃ ಶಕ್ತಿಃ" ಇತ್ಯಮರಃ—ಲಕ್ಷ್ಮಣಂ ವಕ್ಷಸಿ ಬಿಭೇದ—ವಿದಾರಣಯಾಮಾಸ—ರಾಮಸ್ತ್ವನಾಹತೋಽಪ್ಯಾಹತೋಽಪಿ—ಶುಚಾ = ಶೋಕೇನ—ವಿದೀರ್ಣ ಹೃದಯಃ ಆಸೀತ್ ॥

**78. ಸ ಮಾರುತಿಸಮಾನೀತ ಮಹೌಷಧಿ ಹತವ್ಯಥಃ ।**
**ಲಂಕಾಸ್ತ್ರೀಣಾಂ ಪುನಶ್ಚಕ್ರೇ ವಿಲಾಪಾಚಾರ್ಯಕಂ ಶರೈಃ ॥ ೭೮ ॥**

ಸುಷೇಣನೆಂಬ ವಾನರವೈದ್ಯರಾಜನು ಮೂರ್ಛಾಗತನಾದ ಲಕ್ಷ್ಮಣದೇವನನ್ನು ಪರೀಕ್ಷಿಸಿ ಹಿಮಾಲಯದ ಚಂದ್ರದ್ರೋಣಪರ್ವತದಲ್ಲಿ ಬೆಳೆಯುವ ಸಂಜೀವಿನಿಯೆಂಬ ಗಿಡಮೂಲಿಕೆಯನ್ನು ತರುವಂತೆ ಸೂಚಿಸಿದನು. ಕೂಡಲೇ ರಾಮಾಜ್ಞೆಯನ್ನು ಶಿರದಲ್ಲಿ ಧರಿಸಿ ಆಂಜನೇಯನು ಹೊರಟನು. ಅವನು ದಾರಿಯಲ್ಲಿ ನಾನಾತರದ ವಿಘ್ನಗಳನ್ನು ಎದುರಿಸಿ ಚಂದ್ರದ್ರೋಣಪರ್ವತವನ್ನು ಪತ್ತೆಮಾಡಿದನು. ಆದರೆ ಆ ವೇಳೆಗಾಗಲೇ ಸುಷೇಣನು ಹೇಳಿದ ಮಹೌಷಧಿಯ ಗುರುತು ಮರೆತುಹೋಗಿತ್ತು. ಆ ಕೂಡಲೇ ವಾಯುಪುತ್ರನು ಚಂದ್ರದ್ರೋಣಗಿರಿಯನ್ನೇ ಹೊತ್ತುತಂದು ಲಂಕೆಯ ಬಯಲಲ್ಲಿಟ್ಟನು. ಸುಷೇಣನು ಔಷಧಿಯನ್ನು ಆರಿಸಿ ತೆಗೆದು ಲಕ್ಷ್ಮಣನ ಮೇಲೆ ಪ್ರಯೋಗಿಸಿದನು. ಲಕ್ಷ್ಮಣನ ನರನಾಡಿಗಳಲ್ಲಿ ಜೀವ (ಪ್ರಾಣ) ಸಂಚಾರವಾಯಿತು. ಆ ಮಹೌಷಧಿಯನ್ನು ಮೂಸಿದ ಕೂಡಲೇ ಲಕ್ಷ್ಮಣನ ಮೂರ್ಛೆ ಅಳಿದು ಪುನಃ ಬಾಲಸೂರ್ಯನಂತೆ ಚೇತನಭರಿತನಾಗಿ ಯುದ್ಧರಂಗಕ್ಕೆ ನಡೆದನು. ಲಕ್ಷ್ಮಣನ ಪುನರಾಗಮನದಿಂದ ರಕ್ಕಸರ ಜಂಘಾಬಲವೇ ಉಡುಗಿಹೋಯಿತು. ಅವನು ಲಂಕಾನಗರದ ಮಹಿಳೆಯರಿಗೆ, ತನ್ನ ಅಂಬುಗಳ ಮೂಲಕ ಅಳುಕಲಿಸುವ ಆಚಾರ್ಯನಾದನು. ತನ್ನ ಶರಜಾಲಗಳಿಂದ ಲಂಕಾಸ್ತ್ರೀಯರಿಗೆ ವೈಧವ್ಯ ದೀಕ್ಷೆಯನ್ನು ಇತ್ತು ಅವರು ವಿಲಪಿಸುವಂತೆ ಮಾಡಿದನು. ಹೀಗೆ ಸೌಮಿತ್ರಾತನುಜನು ಅವರ ಪಾಲಿಗೆ ವಿಲಾಪಾಚಾರ್ಯನಾದನು. ಅಳುಕಲಿಸುವ ಓಜ(ಗುರು)ವಾದನು. ಅವನ ಶರಗಳಿಂದ ಅವರು ವ್ಯಥಿತರಾದರು, ಪತಿವಿಹೀನರಾದರು.

ಮಾರುತಿನಾ = ಮರುತ್ಸುತೇನ—ಮಹೌಷಧ್ಯಾ = ಸಂಜೀವಿನ್ಯಾ—ಪುನಃ ಶರೈ ಲಂಕಾಸ್ತ್ರೀಣಾಂ ವಿಲಾಪೇ = ಪರಿದೇವನೇ "ವಿಲಾಪಃ ಪರಿದೇವನಮ್" ಇತ್ಯಮರಃ—ಆಚಾರ್ಯಕಮಾಚಾರ್ಯಕರ್ಮ—ಪುನರಪಿ ರಾಕ್ಷಸಜಂಘಾನೇತಿ ವ್ಯಜ್ಯತೇ ॥

**79. ಸನಾದಂ ಮೇಘನಾದಸ್ಯ ಧನುಶ್ಚೇಂದ್ರಾಯುಧಪ್ರಭಮ್ ।**
**ಮೇಘಸ್ಯೇವ ಶರತ್ಕಾಲೋ ನ ಕಿಂಚಿತ್ ಪರ್ಯಶೇಷಯತ್ ॥ ೭೯ ॥**

ಈ ತನಕ ಮೇಘನಾದನ ಕೈಯಲ್ಲಿ ಆತನ ದಿವ್ಯಚಾಪವು ಸುರಚಾಪದಂತೆ ಅಥವಾ ಕಾಮನಬಿಲ್ಲಿನಂತೆ ರಂಜಿಸುತ್ತಾ, ಅವನ ಸಿಂಹನಾದವು ನಿರಂತರವಾಗಿ ಈ ತನಕ ಕೇಳಿಸುತ್ತಿತ್ತು. ಮೇಘರವವನ್ನು ಹೊರಹೊಮ್ಮಿಸುತ್ತಿತ್ತು (ಮೋಡದ ರವವನ್ನ್). ಇದೀಗ ಆ ಇಂದ್ರಚಾಪದ ಅರ್ಭಟಮೇಳಗಳು ಒಮ್ಮಿಂದೊಮ್ಮೆಗೇ ನಿಂತಿತು. ಮಳೆಬಿಲ್ಲು

ಶರತ್ಕಾಲವಲ್ಲಿ ಮಾಯವಾಗುವಂತೆ ಸೌಮಿತ್ರಿಯು ಮೇಘನಾದನ ಪ್ರತಾಪವನ್ನು (ಅಧಟನ್ನು) ಅಳಿಸಿದನು. ಶರತ್ಕಾಲದಲ್ಲಿ ಇಂದ್ರಧನುಸ್ಸು ಕಾಣಿಸಲು ಮೋಡಗಳ ಸದ್ದಾಗಲೀ, ಗುಡುಗುಗಳ ಆರ್ಭಟವಾಗಲಿ ಕೇಳಿಸದು (ಮೊಳಗುಗಳ ಮುರಿವ ಶಾರದದೊಲ್). ಹೀಗೆ ಲಕ್ಷ್ಮಣನು ತನ್ನ ಮಹಾಧನುಸ್ಸನ್ನು ಜೇಗೈದು ಇಂದ್ರಜಿತುವಿನ ಏರಾಟವನ್ನು ನಿಲಿಸಿದನು. ಅವನ ಏರಾಟ ತೂರಾಟವಾಯಿತು. ಅವನ ಅಳಿವು ಸನ್ನಿಹಿತವಾಯಿತು ("ಅಪ್ಪ ತಿಂಡೆ ಬಾಯಿ ಅಡಂಗಿಪೋಯಿ" ಎಂಬಂತೆ—(ಮಲಯಾಳಿ ಗಾದೆ).

ಸ ಲಕ್ಷ್ಮಣಃ ಶರತ್ಕಾಲೋ ಮೇಘಸ್ಯೇವ—ಮೇಘನಾದಸ್ಯೇಂದ್ರಜಿತೋ—ನಾದಂ = ಸಿಂಹನಾದಮ್—ಇಂದ್ರಾಯುಧಪ್ರಭಂ = ಶಕ್ರಧನುಃ ಪ್ರಭಂ—ಧನುಶ್ಚ ಕಿಂಚಿದಲ್ಪಮಪಿ ನ ಪರ್ಯಶೇಷಯನ್ನಾವಶೇಷಿತವಾನ್ = ತಮವಧೀತ್ಯರ್ಥಃ ॥

**80. ಕುಂಭಕರ್ಣಃ ಕಪೀಂದ್ರೇಣ ತುಲ್ಯಾವಸ್ಥಃ ಸ್ವಸುಃ ಕೃತಃ ।**
**ರುರೋಧ ರಾಮಂ ಶೃಂಗೀವ ಟಂಕಚ್ಛಿನ್ನಮನಃಶಿಲಃ ॥ ೮೦ ॥**

ಮಹಾಬಲಶಾಲಿಯಾದ ಕುಂಭಕರ್ಣನು ಮಹಾಕಾಳಗ ಹೂಡಿ ಕಪಿರಾಜನಾದ ಸುಗ್ರೀವನನ್ನು ಕೈಸೆರೆಹಿಡಿದು, ಕುಂಕುಳಡಿಯಲ್ಲಿ ಅದುಮಿ ಹಿಡಿದು, ತನ್ನ ಅಣ್ಣನಾದ ದಶಕಂಠನಿಗೆ ತೋರಲು ಲಂಕಾನಗರಿಗೆ ತೆರಳಿದನು. ರಾವಣನಿಗೆ ಉಡುಗೊರೆಯಾಗಿ ನೀಡಲು, ವೈರಿಯನ್ನು ಕೊಂಡೊಯ್ಯುತ್ತಿರಲು ಪ್ರಜ್ಞೆ ಮರುಕಳಿಸಲು ವಾನರೇಶ್ವರನು ಕಾರ್ಯೋನ್ಮುಖನಾದನು. ಅವನು ಬಹಳ ಕಷ್ಟದಿಂದ ಆ ನಿಶಾಚರನ ಕೈಯಿಂದ ತಪ್ಪಿಸಿಕೊಳ್ಳುವುದರಲ್ಲಿ ಯಶಸ್ವಿಯಾದನು. ಆ ವೇಳೆಗಾಗಲೇ ಶೂರ್ಪಣಖಿಗೆ ಲಕ್ಷ್ಮಣನು ದಂಡಿಸಿದಂತೆ ಅವನ ಕಿವಿಮೂಗುಗಳನ್ನು ಹರಿದು, ಕಿತ್ತುಹಾಕಿ ಗಾಯಗೊಳಿಸಿದನು. ಹರಿದುಹೋದ ಕಿವಿಮೂಗುಗಳಿಂದ ರಕ್ತವು ಧಾರೆಧಾರೆಯಾಗಿ ಸುರಿಯುತ್ತಿತ್ತು. ಆಗ ಆ ರಾಕ್ಷಸೇಂದ್ರನು ಭಯಂಕರವಾಗಿ ಘರ್ಜಿಸುತ್ತಿದ್ದನು. ಮಹಾಕಾಯನಾದ ಕುಂಭಕರ್ಣನು ಇನ್ನೊಂದು ಮಂದರಪರ್ವತದಂತೆಯೇ ಇದ್ದನು. ಕೆಂಪಾದ ಶಿಲಾಧಾತುವು (ಶಿಲಾರಸವು) ಪರ್ವತಶಿಖರದಿಂದ ಕೆಳಕ್ಕೆ ಹರಿಯುತ್ತಿರುವಂತೆ ರಕ್ತಸ್ನಾನವಮಾಡುತ್ತಾ ಬಾನಮಾರ್ಗದಲ್ಲಿ ಧಾವಿಸಿಬರುತ್ತಿರುವ ಘೋರದೈತ್ಯನನ್ನು ಶ್ರೀರಾಮನು ಕಂಡು ದುಷ್ಟಮರ್ದನಕ್ಕಾಗಿ ತನ್ನ ಕೋದಂಡವನ್ನು ಜೇಗೈದನು. ಸೂರ್ಯದೇವನನ್ನು ನುಂಗಲು ಬಾಯ್ದೆರೆದು ಬರುತ್ತಿರುವ ಸರ್ಪಾಕೃತಿ ರಾಹುವೋ ಎಂಬಂತೆ ಅವನು ಬಾಯಿ ತೆರೆದು ರಾಮಲಕ್ಷ್ಮಣರನ್ನು ನುಂಗಲು ಬರುತ್ತಿದ್ದನು.

ಕಪೀಂದ್ರೇಣ=ಸುಗ್ರೀವೇಣ—ಸ್ವಸುಃ ಶೂರ್ಪಣಖಾಯಾಸ್ತುಲ್ಯಾವಸ್ಥೋ=ನಾಸಾಕರ್ಣಭೇದೇನ ಸದೃಶಃ ಕೃತಃ—ಕುಂಭಕರ್ಣಷ್ಟಂಕೇನ, ಶಿಲಾಭೇದಕ ಶಸ್ತ್ರೇಣ ಛಿನ್ನಾ ಮನಃ ಶಿಲಾರಕ್ತವರ್ಣಧಾತುವಿಶೇಷೋ ಯಸ್ಯ ಸ ತಥೋಕ್ತಃ—"ಧಾತುರ್ಮನಃ ಶಿಲಾದ್ಯದ್ರೇ" ಇತಿ ಚಾಮರಃ—ಶೃಂಗೀ=ಶಿಖರೀವ—ರಾಮಂ ರುರೋಧ ॥

**81. ಅಕಾಲೇ ಬೋಧಿತೋ ಭ್ರಾತ್ರಾ ಪ್ರಿಯಸ್ವಪ್ನೋ ವೃಥಾ ಭವಾನ್ ।**
**ರಾಮೇಷುಭಿರಿತೀವಾಸೌ ದೀರ್ಘನಿದ್ರಾಂ ಪ್ರವೇಶಿತಃ ॥ ೮೧ ॥**

"ಅಯ್ಯಾ, ರಾವಣಾನುಜ, ನೀನು ರಾವಣನಿಂದ ಅಕಾಲದಲ್ಲಿ ಎಬ್ಬಿಸಲ್ಪಟ್ಟಿರುವೆ. ನೀನಾದರೋ ನಿದ್ರಾಪ್ರಿಯನು (ನಿದ್ರಾಲೋಲನು). ಆದ್ದರಿಂದ ನಿನಗೆ ಪ್ರಿಯವಾಗಿರುವ ದೀರ್ಘನಿದ್ರೆಯನ್ನೇ ನಾನು ನನ್ನ ದಿವ್ಯಶರಗಳ ಮೂಲಕ ನೀಡುತ್ತಿರುವೆನು. ನೀನು ಸ್ವೀಕರಿಸಿ ನೆಮ್ಮದಿಯಿಂದ ನಿದ್ರಿಸು" ಎಂಬಂತೆ ಶ್ರೀರಾಮನ ಅಂಬುಗಳು ಕುಂಭಕರ್ಣನಿಗೆ ಶಾಶ್ವತನಿದ್ರೆಯಲ್ಲಿ ಒರಗುವಂತೆ ನಿದ್ರಾಗುಳಿಗೆಗಳನ್ನು ಇತ್ತುವು (ದೀರ್ಘನಿದ್ರೆಯನಿತ್ತುದಾ ಕುಂಭಕರ್ಣಂಗೆ). ಅಲ್ಲಿಗೆ ಕುಂಭಕರ್ಣನ ಅಧ್ಯಾಯವು ಸಂಪೂರ್ಣವಾಗಿ ಕೊನೆಗೊಂಡಿತು.

ಪ್ರಿಯಸ್ವಪ್ನ = ಇಷ್ಟನಿದ್ರೋऽನುಜೋ—ದೀರ್ಘನಿದ್ರಾಂ = ಮರಣಂ—ಪ್ರವೇಶಿಸಿತೋ = ಗಮಿತಃ—ಯಥಾ ಲೋಕೇऽಪ್ಯಿಷ್ಟವಸ್ತುವಿನಾಶದುಃಖಿತಸ್ಯ ತತೋऽಪಿ ಭೂಯಿಷ್ಠ ಮುಪಪಾದ್ಯತೇ ತದ್ವದಿತಿ ಭಾವಃ ॥

**82. ಇತರಾಣ್ಯಪಿ ರಕ್ಷಾಂಸಿ ಪೇತುರ್ವಾನರಕೋಟಿಷು ।**
**ರಜಾಂಸಿ ಸಮುದ್ಧೂತಾನಿ ತಚ್ಛೋಣಿತನದೀಷ್ವಿವ ॥ ೮೨ ॥**

ಕೋಟಿಕೋಟಿ ಕಪಿಗಳ ನಡುವೆ ಹತರಾದ ರಾಕ್ಷಸರು ತೊಪತೊಪನೆ ತಾಳೆಹಣ್ಣು ಬೀಳುವಂತೆ ಬೀಳುತ್ತಿದ್ದರು. ಯುದ್ಧದ ಆಸ್ಫೋಟದಿಂದ ಎದ್ದ ರಣರಂಗದ ಧೂಳಿನಂತೆ ಅವರು ಪ್ರವಾಹವಾಗಿ ಹರಿಯುತ್ತಿರುವ ತಮ್ಮ ರಕ್ತನದಿ (ರುಧಿರನದಿಯಲ್ಲಿ) ತಾವು ಪತನಗೊಂಡು ಬೀಳುತ್ತಿದ್ದರು. ಅವರು ಬಾನಿನಿಂದ ಭೂಮಿಗೆ ಬೀಳುವ ಯುದ್ಧರಂಗದ ರಜವೋ, ಧೂಳಿನ ಕಣವೋ ಎಂಬಂತೆ ಆ ಶೋಣಿತನದಿಯಲ್ಲಿ, ಮೈನೆತ್ತರಿನ ಮಡುವಿನಲ್ಲಿ ಬೀಳುತ್ತಿದ್ದರು. ಅವರ ಮೈನೆತ್ತರಿನ ತೊರೆಗಳು, ರಕ್ತಪ್ರವಾಹವು ಆ ರಣಭೂಮಿಯಲ್ಲಿ ಎಲ್ಲೆಂದರಲ್ಲಿ ಹರಿಯುತ್ತಿದ್ದುವು. ಅವರ ಶವಗಳು ರುಧಿರಪ್ರವಾಹದಲ್ಲಿ ತೇಲಾಡುತ್ತ ಭಯವನ್ನು ಹುಟ್ಟಿಸುತ್ತಿದ್ದುವು. ಕಳೇಬರಗಳು ಶೋಣಿತನದಿಯಲ್ಲಿ ತೇಲುತ್ತ ಮುಳುಗುತ್ತಾ ಅಮಂಗಳಕರವಾಗಿ ಕಾಣುತ್ತಿದ್ದುವು. ಲಂಕಾನಗರಿ ಇನ್ನೊಂದು ಯಮಲೋಕದಂತೆ ಕಾಣುತ್ತಿತ್ತು.

ಸಮುದ್ಧೂತಾನಿ ರಜಾಂಸಿ ತೇಷಾಂ ರಕ್ಷಸಾಂ ಶೋಣಿತನದೀಷು =ರಕ್ತಪ್ರವಾಹೇಷ್ವಿವ —ಪೇತುಃ = ನಿಪತ್ಯ ಮೃತಾನೀತ್ಯರ್ಥಃ ॥

**83. ನಿರ್ಯಯಾವಥ ಪೌಲಸ್ತ್ಯಃ ಪುನರ್ಯುದ್ಧಾಯ ಮಂದಿರಾತ್ ।**
**ಅರಾವಣಮರಾಮಂ ವಾ ಜಗದದ್ಯೇತಿ ನಿಶ್ಚಿತಃ ॥ ೮೩ ॥**

ರಾವಣನು ತನ್ನ ಕೊನೆಯ ಯುದ್ಧಕ್ಕೆ, ಕೊನೆಯ ಉಸಿರು ಇರುವ ತನಕ ಹೋರಾಡಲು ಸಿದ್ಧನಾಗಿ ಬಂದನು. ಒಂದೋ ಜಗತ್ತು ಅರಾವಣವಾಗಲಿ ಇಲ್ಲವೆ ಅರಾಮವಾಗಲಿ, ರಾಮನಾಮಶೂನ್ಯವಾಗಲಿ.ನಮ್ಮಿಬ್ಬರಲ್ಲಿ ಒಬ್ಬರು ಲಯವಾಗಿ ಒಬ್ಬರು ಮಾತ್ರ ಲೋಕದಲ್ಲಿ ಶಾಶ್ವತವಾಗಿ ಉಳಿಯುವಂತಾಗಲಿ, ವಿಜಯವೋ ಮರಣವೋ ಎರಡರಲ್ಲಿ ಒಂದು (ಜಗಮಿಂದು ಅರಾವಣಂ ಮೇಣ್ ಅರಾಮಂ ಅಕ್ಕೆ). ಹೀಗೆಂದು ಮನದಲ್ಲಿ ದೃಢಸಂಕಲ್ಪಮಾಡಿ ಮಹಾವೀರನಾದ ರಾವಣನು ರಣರಂಗವನ್ನು ಪ್ರವೇಶಿ

ಇರಿಸು. ಹೋರಾಡು ಇಲ್ಲವೆ ಮಡಿ—ಎರಡರಲ್ಲಿ ಒಂದು. ಹೀಗೆನ್ನುತ್ತಾ ರಣರಂಗವ ಪ್ರವೇಶಿಸಿದನು, ಸಹಸ್ರಾರು ಯುದ್ಧಗಳ ವೀರ, ಸಮರೈಕಮೋಹಿ ದಶಾನನ.

ಪೌಲಸ್ತ್ಯಃ = ರಾವಣಃ—ಅದ್ಯ ಜಗದರಾವಣಂ ಅರಾಮಂ ವಾ (ರಾವಣಶೂನ್ಯಂ ರಾಮಶೂನ್ಯಂ ವಾ) ಭವೇತ್—ಇತಿ ನಿಶ್ಚಿತಃ=ನಿಶ್ಚಿತವಾನ್—ವಿಜಯಮರಣಯೋರನ್ಯತರ ನಿಶ್ಚಯವಾನ್=ಪುನರ್ಯುದ್ಧಾಯ ಮಂದಿರಾನ್ನಿರ್ಯಯೌ=ನಿರ್ಜಗಾಮ ॥

**84. ರಾಮಂ ಪದಾತಿಮಾಲೋಕ್ಯ ಲಂಕೇಶಂ ಚ ವರೂಥಿನಮ್ ।**
**ಹರಿಯುಗ್ಯಂ ರಥಂ ತಸ್ಮೈ ಪ್ರಜಿಘಾಯ ಪುರಂದರಃ ॥ ೮೪ ॥**

ಯುದ್ಧಸನ್ನದ್ಧನಾಗಿ ಶ್ರೀರಾಮನು ನೆಲದಮೇಲೆ ಕೋದಂಡಪಾಣಿಯಾಗಿ ನಿಂತಿದ್ದನು. ಲಂಕೇಶ್ವರನಾದರೋ ತನ್ನ ದಿವ್ಯರಥವನ್ನೇರಿ ಶ್ರೀರಾಮನ ಮುಂದೆ ವಿಜೃಂಭಿಸುತ್ತಿದ್ದನು. ಶ್ರೀರಾಮನು ಭೂಮಿಯ ಮೇಲೆ ನಿಂತಿರುವುದನ್ನು ಕಂಡು ಮನನೊಂದು ದೇವೇಂದ್ರನು ಕೂಡಲೇ ಶ್ರೀರಾಮನ ಕಾರ್ಯಕ್ಕೆ ತನ್ನ ದೇವರಥವನ್ನು ಕಳುಹಿಕೊಟ್ಟನು. ಶ್ರೀರಾಮನು ರಥವನ್ನೇರಿ ಸಮಾನಸ್ಕಂಧನಾಗಿ ಯುದ್ಧವನ್ನು ಮುನ್ನಡೆಸುವ ಸಲುವಾಗಿ ದೇವಸಾರಥಿಯಾದ ಮಾತಲಿಯು ದೇವಾಶ್ವದಿಂದ ಸುಸಜ್ಜಿತವಾದ ಸುಂದರರಥವನ್ನು ದಾಶರಥಿಗೆಂದು ತಂದು, ಅದನ್ನು ಏರುವಂತೆ ಕೈಮುಗಿದು ಪ್ರಾರ್ಥಿಸಿಕೊಂಡನು.

ಪದಾತಿಃ = ಪಾದಾಭ್ಯಾಮತತೀತಿ =ಪಾದಚಾರಿ—ತಂ ಪಾದಚಾರಿಣಂ ರಾಮಮ್—ವರೂಥೋ ರಥಗುಪ್ತಿಃ—"ರಥಗುಪ್ತಿರ್ವರೂಥೋನಾ" ಇತ್ಯಮರಃ—ವರೂಥಿನಂ ರಥಿನಂ ಲಂಕೇಶಂ ಚಾಲೋಕ್ಯ ಪುರಂದರಃ ಇಂದ್ರಃ—ಯುಗಂ ವಹಂತೀತಿ ಯುಗ್ಯಾ ರಥಾಶ್ವಾಃ—ತದ್ವಹತಿ ರಥಯುಗ ಪ್ರಾಸಂಗಮ್ (ಪಾಣಿನಿ) ಇತಿ ಯತ್ ಪ್ರತ್ಯಯಃ—ಹರಿಯುಗ್ಯಂ=ಕಪಿಲವರ್ಣಾಶ್ವಮ್—"ಶುಕಾ ಹಿ ಕಪಿಭೇಕೇಷು ಹರಿರ್ನಾಕಪಿಲೇ ತ್ರಿಷು" ಇತ್ಯಮರಃ ॥

**85. ತಮಾಧೂತಧ್ವಜಪಟಂ ವ್ಯೋಮಗಂಗೋರ್ಮಿವಾಯುಭಿಃ ।**
**ದೇವಸೂತಭುಜಾಲಂಬೀ ಜೈತ್ರಮಧ್ಯಾಸ್ತ ರಾಘವಃ ॥ ೮೫ ॥**

ಕಕುತ್ಸ್ಥವಂಶಾವತಂಸನಾದ ದೇವಮಾನವಧರ್ಮ (ವಿಶ್ವಮಾನವಧರ್ಮ)ಸಂಸ್ಥಾಪಕನಾದ (ವೇದಧರ್ಮಪ್ರತಿಷ್ಠಾಪನಾಚಾರ್ಯನಾದ) ಶ್ರೀರಾಮಚಂದ್ರನು ದೇವಸಾರಥಿಯಾದ ಮಾತಲಿಯ ಕೈಯ ಹಿಡಿದು ಕರಾವಲಂಬಿಯಾಗಿ, ಹಸ್ತಾವಲಂಬಿಯಾಗಿ) ಆ ದೇವರಥವನ್ನೇರಿ ದಿವ್ಯಾಸನವನ್ನು ಗ್ರಹಣಮಾಡಿದನು. ಸುರನದಿಯಾದ ಗಂಗಾನದಿಯ ತೆರೆಗಳಿಂದ ಏಳುವ ಗಾಳಿಯಿಂದ ಗಂಗೆಯ ತುಂತುರು ಹನಿಗಳು ಬೆರೆತಿರುವ ಮಾರುತ, ಅತ್ತಿತ್ತ ಚಲಿಸುವ (ತೆರೆಗಾಳಿ ಬೀಳಿದರ್ಲ ಮಿಳ್ಳಿಸುತಿರುವ) ಪಟಪಟನೆ ಶಬ್ದಿಸುತ್ತಿರುವ ಧ್ವಜಪತಾಕೆಗಳಿಂದ, ಬಾವುಟಗಳಿಂದ ಅಲಂಕೃತವಾದ ವಿಜಯರಥವನ್ನೇರಿ ಯುದ್ಧಕಾಂಕ್ಷಿಯಾಗಿ, ಕೋದಂಡಧಾರಿಯಾಗಿ, ಜಗದೇಕಧನುರ್ಧರನಾದ ಕೋದಂಡರಾಮನು ವಿಜಯರಥವೇರಿ ನಿಂತನು. ಆಗ ಸುರರು "ಘೋ" ಎಂದರು (ಉಘೇ ಎಂದರು). ಶ್ರೀರಾಮಚಂದ್ರನಿಗೆ ವಿಜಯವಾಗಲೆಂದು ಜಯಘೋಷಗೈದರು.

ರಾಘವೋ ವ್ಯೋಮಗಂಗೋರ್ಮಿವಾಯುಭಿರಾಧೂತಧ್ವಜಪಟಮ್—ಜೇತ್ರೈವ ಜೈತ್ರೋ ಜಯನಶೀಲಃ, ತಂ ಜೈತ್ರಮ್–"ಜೇತೃಶಬ್ದಾತ್ಪ್ರಜ್ಞಾದಿಭ್ಯಷ್ಟ್" (ಪಾಣಿನಿ) ಇತಿ ಸ್ವಾರ್ಥೇಽಣ ಪ್ರತ್ಯಯಃ—ತಂ ರಥಂ ದೇವಸೂತಭುಜಾವಲಂಬೀ ಮಾತಲೀ ಹಸ್ತಾವಲಂಬಃ ಸನ್, ಅಧ್ಯಾಸ್ತಾಧಿಷ್ಠಿತವಾನ್—ಆಸೇರ್ಲಙ್ ॥

**86. ಮಾತಲಿಸ್ತಸ್ಯ ಮಾಹೇಂದ್ರಮಾಮುಮೋಚ ತನುಚ್ಛದಮ್ ।**
**ಯತ್ರೋತ್ಪಲದಲಕ್ಲೈಬ್ಯಮಸ್ತ್ರಾಣ್ಯಾಪುಃ ಸುರದ್ವಿಷಾಮ್ ॥ ೮೬ ॥**

ಮಹೇಂದ್ರನು ಕಳುಹಿಸಿಕೊಟ್ಟಿರುವ ವಜ್ರಕವಚವನ್ನು (ತನುಚ್ಛದವನ್ನು) ಮಾತಲಿಯು ಕೈಯಿಂದ ಶ್ರೀರಾಮನು ಸ್ವೀಕರಿಸಿದನು. ಆ ತನುತ್ರದ (ಕವಚದ) ಮಹಿಮೆ ಅಪಾರವಾದುದು. ರಾಕ್ಷಸರ ಮಾಟ, ಮಂತ್ರ, ಮೋಡಿ, ಮಾಯಾವಿದ್ಯೆಗಳನ್ನು (ಇಂದ್ರಜಾಲ, ಐಂದ್ರಜಾಲ, ತಂತ್ರ, ಮಂತ್ರ, ಜಾದೂ) ಕುಟಿಲವಿದ್ಯೆಗಳನ್ನು (ಕಂತ್ರಿವಿದ್ಯೆ) ಪಾಪಾಚಾರಗಳನ್ನು ಮತ್ತು ದಿವ್ಯಾಸ್ತ್ರಗಳ ಸೋಂಕಿನಿಂದಾಗುವ ಕ್ಲೈಬ್ಯತೆಗಳನ್ನು (ಕಷ್ಟಗಳನ್ನು) ತಡೆಯುವಲ್ಲ ಇಂದ್ರನ ದಿವ್ಯಕವಚವನ್ನು (ತನುಚ್ಛದವನ್ನು) ರಾಘವನಿಗೆ ಅಮರಸಾರಥಿಯಾದ ಮಾತಲಿಯು ತನ್ನ ಕೈಗಳಿಂದಲೇ ತೊಡಿಸಿದನು. ಆ ಕವಚದ ಮುಂದೆ ಅಸುರರ ವಿಷಮವಾದ ಶಸ್ತ್ರಗಳು ತಾವರೆ ಹೂಗಳಂತೆ ಅಥವಾ ನೈದಿಲೆಹೂಗಳ ಎಸಳುಗಳಂತೆ ಅವುಗಳ ಆಟವು (ಹೆಣ್ತನ, ಐಲಾಟ) ಏನೇನೂ ಸಾಗದು. ಅವುಗಳು ನಪುಂಸಕತೆಯನ್ನು ಅಥವಾ ನಿಷ್ಫಲತೆಯನ್ನು ಹೊಂದುವುದಂತೂ ಖಚಿತ.

ಮಾತಲಿ = ಮಹೇಂದ್ರನ ಸಾರಥಿ—ತನುಶ್ಛಾದ್ಯತೇಽನೇನೇತಿ=ತನುಚ್ಛದೋವರ್ಮ= ವಜ್ರಕವಚ, ತನುತ್ರ—ಯತ್ರ ತನುಚ್ಛದೇ ಸುರದ್ವಿಷಾಮಸ್ತ್ರಾಣ್ಯುತ್ಪಲದಲಾನಾಂ ಯತ್ ಕ್ಲೈಬ್ಯಂ ನಪುಂಸಕತ್ವಂ ನಿರರ್ಥಕತ್ವಂ ತದಾಪುಃ ॥

**87. ಅನ್ಯೋನ್ಯದರ್ಶನಪ್ರಾಪ್ತ ವಿಕ್ರಮಾವಸರಂ ಚಿರಾತ್ ।**
**ರಾಮರಾವಣಯೋರ್ಯುದ್ಧಂ ಚರಿತಾರ್ಥಮಿವಾಭವತ್ ॥ ೮೭ ॥**

ಈಗ ರಾಮರಾವಣರ ಸರದಿ. ಅವರು ಮುಖಾಮುಖಿಗಳಾಗಿ, ದ್ವಂದ್ವಯುದ್ಧಕ್ಕೆ ಕಂಕಣಬದ್ಧರಾಗಿ ಎದುರುಬದುರಾಗಿ ನಿಂತಿದ್ದರು. ಅವರ ಬಹುಕಾಲದ ಆಶೆಯು ಇದೀಗ ಈಡೇರಿತು. ಜಗತ್ತಿಗೆ ಹೊಸದಾದ, ಜಗತ್ತು ಆಶ್ಚರ್ಯಪಡಬಹುದಾದ, ಜಗತ್ತಿನ ಚರಿತ್ರೆಯಲ್ಲೆ ಅಂತಹ ಭೀಕರ ಮಹಾಯುದ್ಧ ಈ ಹಿಂದೆ ನಡೆದಿರಲಿಲ್ಲ. ತಮ್ಮ ಭುಜಬಲ ಪರಾಕ್ರಮವನ್ನು ಪರಸ್ಪರ ಪ್ರದರ್ಶಿಸುವ ಸಲುವಾಗಿ ಸನ್ನದ್ಧರಾಗಿ ನಿಂತಿದ್ದರು. ಇದೊಂದು ಅವರಿಗೆ ದೊರೆತ ಸುವರ್ಣಾವಕಾಶ. ರಾಮರಾವಣರ ಯುದ್ಧವೆಂದರೆ ಅದು ರಾಮರಾವಣಯುದ್ಧವೇ. ಅದು ಉಪಮಾತೀತ. ಹಿಂದೆ ನಡೆದಿಲ್ಲ, ಮುಂದೆ ನಡೆಯುವಂತಿಲ್ಲ, ಸುವರ್ಣಾಕ್ಷರಗಳಿಂದ ಬರೆದಿಡತಕ್ಕ ಮಹಾಸಂಗ್ರಾಮ (ಅವರ ಯುದ್ಧವೇ ಒಂದು ಚರಿತ್ರೆ ಎಂಬಂತೆ).

ಅನ್ಯೋನ್ಯೇತಿ—ಚಿರಾದನ್ಯೋನ್ಯದರ್ಶನೇನ ಪ್ರಾಪ್ತವಿಕ್ರಮಾವಸರಂ ರಾಮ ರಾವಣಯೋರ್ಯುದ್ಧಮಾಯೋಧನಂ ಚರಿತಾರ್ಥಂ ಸಫಲಮಭವದಿವ ॥ ಅನ್ಯೋನ್ಯ = ಅನ್ಯೋನ್ಯದರ್ಶನೇನ ಪ್ರಾಪ್ತಃ ವಿಕ್ರಮಸ್ಯ ಅವಸರಃ ಯಸ್ಮಿನ್ ॥

**88. ಭುಜಮೂರ್ಧೋರುಬಾಹುಲ್ಯಾದೇಕೋಽಪಿ ಧನದಾನುಜಃ ।**
**ದದೃಶೇ ಹ್ಯಯಥಾ ಪೂರ್ವೋ ಮಾತೃವಂಶ ಇವ ಸ್ಥಿತಃ ॥ ೮೮ ॥**

ಧನಾಧ್ಯಕ್ಷನಾದ ಕುಬೇರನ ತಮ್ಮನಾದ ರಾವಣನದು ಬ್ರಹ್ಮವಂಶ; ತಂದೆಯು ಮೂಲಕ ಅವನು ಮಹಾಬ್ರಾಹ್ಮಣ : ತಾಯಿಯ ಮೂಲಕ ಮಹಾರಾಕ್ಷಸ. ಅವನು ಈಗ ಒಂಟಿಯಾದರೂ, ತಾಯಿತಂದೆಯರ, ಬಂಧುಗಳ ಮಧ್ಯದಲ್ಲಿದ್ದಂತೆಯೇ ಯುದ್ಧಲೀಲೆಯಲ್ಲಿ ಬೆರೆತುಹೋಗಿದ್ದನು. ಅವನಿಗೆ ಯುದ್ಧವೆಂಬುದು ಕ್ರೀಡೆಯಂತೆ, ಆಟದಂತೆ. ಅನೇಕ ಕೈಗಳು, ಅನೇಕ ತಲೆಗಳಿಂದ ಮೆರೆಯುತ್ತ, ಏಕಮೇವಾದ್ವಿತೀಯನಾಗಿ. ಮಹಾಭುಜನಾಗಿ, ಏಕಾಂಗವೀರನಾಗಿ, ವಿಶ್ವವನ್ನೇ ಎದುರಿಸಬಲ್ಲೆನು ಎಂಬ ಛಲದಿಂದ ಮೆರೆಯುತ್ತ(ಹಲವರೇಕೆ ಒಬ್ಬ ಸಾಕು ಎಂಬಂತೆ)ಲಿದ್ದನು. ಶ್ರೀರಾಮಚಂದ್ರನೊಡನೆ ಸಮರಾಂಗಣದಲ್ಲಿ ಸಮದಂಡಿಯಾಗಿ ನಿಂತು ಕಾದಾಡುವ ಕುತೂಹಲಭರಿತನು ತಾನಾಗಿದ್ದನು. ಅವನ ಅಚ್ಚುಮೆಚ್ಚಿನ ಬಂಧುಗಳೆಲ್ಲರೂ ನಾಶವಾಗಿದ್ದರೂ ಅಚಲನಾಗಿ ಮೆರೆಯುತ್ತಿದ್ದನು. ಅಳಿದುಳಿದ ಸೈನಿಕರಿಂದ ಪರಿವೃತನಾಗಿ ರಾಕ್ಷಸಧರ್ಮಕ್ಕೆ ಅನುಸಾರವಾಗಿ ಹೋರಾಟಕ್ಕೆ ಸಿದ್ಧನಾಗಿದ್ದ ಆ ಸಮರೈಕವೀರು (ಕಾಡ್ಗಿಚ್ಚಿಗೆ ಬಲಿಯಾಗಿ, ಕಡೆಗುಳಿದ ಕಾಸರಕನ ಮರದಂತೆ).

ಯಥಾಪೂರ್ವಃ=ಯಥಾಭೂತಃ ಪೂರ್ವಂ (ಸುಪ್ಸುಪೇತಿಸಮಾಸಃ)—ನಿಹತಬಂಧುತ್ವಾದ್ರಕ್ಷಃ ಪರಿಚಾರಶೂನ್ಯಃ ಇತ್ಯರ್ಥಃ—ಮಾತೃವಂಶೇ = ಮಾತೃಸಂಬಂಧಿನಿ ವರ್ಗೇ—"ವಂಶೇ, ವೇಣೌ, ಕುಲೇ, ವರ್ಗೇ" ಇತಿ ವಿಶ್ವಃ—ಭುಜಮೂರ್ಧೋರು = ಭುಜೋತ್ತಮಾಂಗಬಾಹುಲ್ಯಾತ್—ಅಯಥಾಪೂರ್ವಃ (ಬಂಧುವರ್ಗಃ) ॥

**89. ಜೇತಾರಂ ಲೋಕಪಾಲಾನಂ ಸ್ವಮುಖೈರರ್ಚಿತೇಶ್ವರಮ್ ।**
**ರಾಮಸ್ತುಲಿತ ಕೈಲಾಸಮರಾತಿಂ ಬಹ್ವಮನ್ಯತ ॥ ೮೯ ॥**

ಆ ರಾವಣನೇನು ಸಾಮಾನ್ಯನೆ? ತ್ರಿಲೋಕಾಧಿಪತಿ. ಲೋಕಪಾಲಕರಾದ ಇಂದ್ರ, ವಾಯು, ಅಗ್ನಿ, ಮರುತ್ತುಗಳೇ ಮೊದಲಾದವರನ್ನು ಗೆಲ್ಲಲು ಸಾಕ್ಷಾತ್ ಶಿವನಿಂದ ವರಪಡೆದ ಬಲಾನ್ವಿತ. ಶಿವನನ್ನು ಮೆಚ್ಚಿಸಲು ಕೈಲಾಸಗಿರಿಯನ್ನೇ ಎತ್ತಿದ ಅವನ ಬಲ ಹಿಮಾಲಯದಂತೆ ಅನಂತ. ತನ್ನ ಬಾಹುಬಲದಿಂದ ಕೈಲಾಸವನ್ನೆತ್ತಿ ತನ್ನ ತಲೆಯ ಮೇಲೆ ಧರಿಸಿದ ಬಲಸಾಗರನು. ಆಗ ಅವನ ಅಹಂಕಾರವನ್ನು ಮುರಿಯಲು ಶಿವನು ತನ್ನ ಉಂಗುಷ್ಠವನ್ನು ಒತ್ತಲು ಮೂರು ಲೋಕಗಳಿಗೂ ಕೇಳುವಂತೆ ಕಿರುಚಾಡಿದ ಶಿವಭಕ್ತನವನು. ಶಿವನೇ ಅವನಿಗೆ ಮೆಚ್ಚಿ "ರಾವಣ"ನೆಂಬ ಅಭಿಧಾನವನ್ನಿತ್ತು (ಹೆಸರನ್ನಿತ್ತು) ಮನ್ನಿಸಿದ. ಅಜಾತಶತ್ರುವಾದ, ಶ್ರೀರಾಮನು ವರಬಲಭೈರವನಾದ ರಾವಣೇಶ್ವರನ ಅಚಲನಿರ್ಧಾರವನ್ನು ಕಂಡು ಮೆಚ್ಚಿ ಮುಕ್ತಕಂಠದಿಂದ ಹೊಗಳಿದನು. ರಾವಣ ಸಮರೈಕವೀರು-ತನ್ನ ಹತ್ತು ತಲೆಗಳನ್ನೇ ಪರಶಿವನಿಗೆ ಅರ್ಪಿಸಿದ ಮಹಾಬಾಹುವೆಂದು ಪ್ರಶಂಸಿಸಿ ಘೋಷಿಸಿದನು. ಹಿಮಾಚಲವನ್ನೆತ್ತಿದ ಮಹಾಭುಜನೆಂದು ಹೆಸರಿಸಿದನು. ಶೌರ್ಯ ಧೈರ್ಯ ಸಮುತ್ಪನ್ನನೆಂದು ಗೌರವದಿಂದ ಕರೆದು ಶ್ಲಾಘಿಸಿ ಕರೆದನು. ಅಸಹಾಯಶೂರನೆಂದು, ದೋರ್ದಂಡಪರಾಕ್ರಮಿ, ಧೈರ್ಯತ್ರಿವಿಕ್ರಮನೆಂದು ಮನಸಾರೆ ಹೊಗಳಿದನು.

ಜೇತಾರಮಿತಿ—ಲೋಕಪಾಲಾನಾಂ=ಇಂದ್ರಾದೀನಾಂ ಜೇತಾರಂ=ಕರ್ತೃಕರ್ಮಣೋಃ ಇತಿ (ಪಾಣಿನಿ) ಕರ್ಮಣಿ ಷಷ್ಠೀ—ಸ್ವಮೂರ್ಧ್ನೈಃ = ಸ್ವಶಿರೋಭಿರರ್ಚಿತೇಶ್ವರಂ—ತುಲಿತ ಕೈಲಾಸಮಂತ್ಕ್ಷಿಪ್ತ ರುದ್ರಾದ್ರಿಂ—ಶೌರ್ಯ, ವೀರ್ಯ, ಸತ್ವಸಂಪನ್ನಂ—ಮಹಾ ವೀರ್ಯಮರಾತಿಂ=ಶತ್ರುಂ — ಸಾಧುಮದ್ವಿಕ್ರಮಸ್ಯಾಯಂ ಪರ್ಯಾಪ್ತೋ ವಿಷಯ—ವಚ್ಚಿಕ್ರಿಯಾ ವಿಶೇಷಣಮ್ ॥

**90. ತಸ್ಯ ಸ್ಫುರತಿ ಪೌಲಸ್ತ್ಯಃ ಸೀತಾಸಂಗಮಶಂಸಿನೀ ।**
**ನಿಚಖಾನಾಧಿಕಕ್ರೋಧಃ ಶರಂ ಸವ್ಯೇತರೇ ಭುಜೇ ॥ ೯೦ ॥**

ಆಗ ಶ್ರೀರಾಮನ ಬಲಭುಜವು ಅದುರಿ ಶುಭವನ್ನು ಸೂಚಿಸಿತು. ಆ ಭುಜಸ್ಪಂದನವು ಮುಂದೆ ಸೀತೆಯ ಸಮಾಗಮವನ್ನು (ಮೈಥಿಲೀಸಂಗಮವ ಸೂಚಿಸುವೊಲು) (ಸಂಗಮ, ಆಲಿಂಗನ) ಸೂಚಿಸುವಂತಹದಾಗಿತ್ತು. ಆ ವೇಳೆಗಾಗಲೆ ಅಧಿಕಕ್ರೋಧೋನ್ಮತ್ತನಾದ ದಶಶಿರನು ಶ್ರೀರಾಮಚಂದ್ರನ ಬಲಭುಜ, ಎಡಭುಜ, ಎದೆ, ಬೆನ್ನು, ಪಾರ್ಶ್ವಗಳಲ್ಲಿ ಕೂರಂಬನ್ನು ಊರಿ ತನ್ನ ಪುರುಷಪೌರುಷವನ್ನು ತೋರಿ ಮೆರೆದನು.

ಸ್ಫುರತಿ = ಸ್ಪಂದಮಾನೇ‌ತ ಏವ—ರಾಮಸ್ಯ ಸವ್ಯ ಇತರೋ ಯಸ್ಮಾತ್ ಸವ್ಯೇತರೇ ದಕ್ಷಿಣೇ—''ನ ಬಹುವ್ರೀಹೌ'' (ಪಾಣಿನಿ) ಇತಿ ''ಇತರ '' ಶಬ್ದಸ್ಯ ಸರ್ವನಾಮಸಂಜ್ಞಾ ಪ್ರತಿಷೇಧಃ—ಭುಜೇ ಶರಂ ನಿಚಖಾನ = ನಿಖಾತವಾನ್—ಸ್ಫುರತಿ ಸವ್ಯೇತರೇ ಭುಜೇ= ವಾಮೇತರಭುಜಸ್ಪಂದೋ ವರಸ್ತ್ರೀ ಲಾಭಸೂಚಕಃ = ಮೈಥಿಲಿಯ ಸಂಗಮವ ಸೂಚಿಸುವವೊಲು ಅದುರುತಿಪ ರಾಮ ಬಲಭುಜದೆ.

**91. ರಾವಣಸ್ಯಾಪಿ ರಾಮಾಸ್ತೋಃ ಭಿತ್ವಾ ಹೃದಯಮಾಶುಗಃ ।**
**ವಿವೇಶ ಭುವಮಾಖ್ಯಾತುಮುರಗೇಭ್ಯ ಇವ ಪ್ರಿಯಮ್ ॥ ೯೧ ॥**

ತ್ರಿಲೋಕಾಧಿಪತಿ, ವೈಶ್ರವಣವಂಶೋದ್ಭವನಾದ ರಾವಣನ ಎದೆಗೆ ಗುರಿಯಿಟ್ಟು ಶ್ರೀರಾಘವನು ಒಂದು ಕೂರಂಬನೆಸೆದನು. ಆ ಬಾಣವು ತೀವ್ರಗತಿಯಿಂದ ಬಂದು ರಾವಣನ ಹೃದಯವನ್ನು ಸೀಳಿ ಭೂಮಿಯ ಒಳಕ್ಕೆ ನುಗ್ಗಿ ಪಾತಾಳ ಸೇರಿತು. ನಾಗಗಳಿಗೆ ಒಳ್ಳೆಯ ಶುಭವರ್ತಮಾನವನ್ನು ತಿಳಿಸಲೋ ಎಂಬಂತೆ ನಾಗಲೋಕವನ್ನು ಸೇರಿ ಶಾಂತ ವಾಯಿತು. ರಾವಣನು ಪಾತಾಳದಲ್ಲಿ ವಾಸಿಸುವ ಸರ್ಪಗಳ ರಾಜ್ಯವಾದ ನಾಗಲೋಕಕ್ಕೂ ದಂಡೆತ್ತಿಹೋಗಿ ಅಲ್ಲಿ ದಾಂಧಲೆ ನಡೆಸಿ ಸುಂದರಿಯರಾದ ನಾಗಕನ್ಯೆಯರನ್ನು, ಕಪ್ಪ ಕಾಣಿಕೆಗಳ ಸಮೇತ ತಂದಿದ್ದನು. ಇದರಿಂದ ನಾಗರಿಗೂ ರಾಕ್ಷಸರಿಗೂ ಒಳಗಿಂದೊಳಗೇ ಹಳೆಯ ದ್ವೇಷವಿತ್ತು. ಈಗ ಅವರಿಗೆ ಸಂತಸದ ಸುಗ್ಗಿ. ಬಿಸಿಬಿಸಿ ಸುದ್ದಿ. ರಾವಣನಿಗೆ ಆಪತ್ತು ; ನಾಗಲೋಕದವರಿಗೆ ಮುಘತ್ತು.

ರಾಮೇಣಾಸ್ತಃ = ಕ್ಷಿಪ್ತಃ—ಆಶುಗೋ = ಬಾಣಃ—ವಿಶ್ರವಸೋಽಪತ್ಯಂ ಪುಮಾನ್ ರಾವಣಃ—''ವಿಶ್ರವಃ''ಶಬ್ದಾದಪತ್ಯೇಽರ್ಥೇಣ ಪ್ರತ್ಯಯೇ ಸತಿ ''ವಿಶ್ರವಸೋ ವಿಶ್ರವಣ ರವಣೌ'' ಇತಿ ರಾವಣಾದೇಶಃ—ಹೃದಯಂ = ವಕ್ಷೀ—ಭಿತ್ವಾ = ವಿದೀರ್ಯ— ಉರಗೇಭ್ಯಃ = ಪಾತಾಲವಾಸಿಭ್ಯಃ—ಭುವಂ ವಿವೇಶ = ಭೂಮಿಯ ಒಳಹೊಕ್ಕು.

**92. ವಚಸ್ಯೈವ ತಯೋರ್ವಾಕ್ಯಂ ಅಸ್ತ್ರಂ ಅಸ್ತ್ರೇಣ ನಿಘ್ನತೋಃ ।**
**ಅನ್ಯೋನ್ಯಜಯಸಂರಂಭೋ ವವೃಧೇ ವಾದಿನೋರಿವ ॥ ೯೨ ॥**

**ಮಾತಿಗೆ ಮಾತು, ನುಡಿಗೆ ಮರುನುಡಿ, ಬಾಣಕ್ಕೆ ಪ್ರತಿಬಾಣ ಕೊಡುತ್ತ ರಾಮರಾವಣರು.** ಅವರಿಬ್ಬರು ಮಹಾವಾಗ್ಮಿಗಳಂತೆ, ಮಹಾವಾದಿಗಳಂತೆ, ತರ್ಕಿಸುವ ಇಬ್ಬರು ವಕೀಲರಂತೆ. ಇಲ್ಲವೆ ಇವರದು ಸಿದ್ಧಾಂತಿಗಳಂತೆ, ಇಬ್ಬರು ಪಂಡಿತರಂತೆ ಮಾತಿಗೆ ಪ್ರತಿಮಾತು, ಉತ್ತರಕ್ಕೆ ಪ್ರತ್ಯುತ್ತರ ಕೊಡುತ್ತ, ಒಬ್ಬರನ್ನೊಬ್ಬರು ಗೆಲುವ ಆಶೆಯಿಂದ ಸಂಭ್ರಮದಿಂದ ಕಾಳಗದ ಕಣದಲ್ಲಿ ಕೈಮೈ ಮನ್ನಿಸದೆ ಕಾದಿದರು. ಆ ಇವರು ಮಹಾನ್ ನಾಯಕರು, ಮಹಾರಾಜಕಾರಣಿಗಳಂತೆ ತಾಳಮದ್ದಳೆಯ ಅರ್ಥಧಾರಿಗಳಂತೆ (ಲಾವಣಿಗಾರರಂತೆ, ಕಾನೂನುಕೋಟಿಗಳಂತೆ) ನುಡಿಗೆ ಮರುನುಡಿ ಕೊಡುತ್ತ ವಿಜಯಾಕಾಂಕ್ಷಿತರಾಗಿ, ಅಮಿತೋತ್ಸಾಹದಿಂದ ಕಾದಿದರು. ಅವರು ಅನ್ಯೋನ್ಯಜಯಾಕಾಂಕ್ಷಿಗಳು. ಕಣೆಗೆ ಮರುಕಣೆ ತೊಡುತ ಅವರ ಯುದ್ಧದ ತೀವ್ರತೆ, ರಣದ ಕಾವು ಏರಿತು. ಯಾರೂ ಸೋಲುವ ಲಕ್ಷಣಗಳೇ ಕಾಣಿಸುತ್ತಿರಲಿಲ್ಲ. ಒಬ್ಬರನ್ನೊಬ್ಬರು ತಿರಸ್ಕರಿಸುತ್ತಾ ಕಾದಿದರು.

ವಾಕ್ಯಂ = ವಚಸ್ಯೈವ—ಅಸ್ತ್ರಮಸ್ತ್ರೇಣ ನಿಘ್ನತೋಃ = ಪ್ರತಿಕುರ್ವತೋಃಸ್ತಯೋಃ—ವಾದಿನೋಃ = ಕಥಕಯೋರಿವ—ಸಂರಂಭಃ = ತವಕ, ಉತ್ಸಾಹ.

**93. ವಿಕ್ರಮವ್ಯತಿಹಾರೇಣ ಸಾಮಾನ್ಯಾಭೂದ್ವಯೋರಪಿ ।**
**ಜಯಶ್ರೀರಂತರಾವೇದಿರ್ಮತ್ತವಾರಣಯೋರಿವ ॥ ೯೩ ॥**

ಅವರಿಬ್ಬರು ಮಹಾನ್ ಯೋಧರು(ಪಟುಗಳು) ವಿಕ್ರಮಶೀಲವಾದ ಎರಡು ಮದ್ದಾನೆಗಳಂತೆ ಕಲಿತನದಿಂದ ಹೋರಾಡುತ್ತಿದ್ದರು. ಜಯಶ್ರೀಯು (ಜಯವನಿತೆ) ಯಾರ ಕಡೆಗೂ ಒಲಿಯದೆ ತಟಸ್ಥವಾಗಿದ್ದು ಎರಡು ಕಾಡಾನೆಗಳ ಮಧ್ಯೆಯಿರುವ ವೇದಿಯಂತೆ ಅಥವಾ ಗೋಡೆಯಂತೆ (ವೇದಿ = ಗೋಡೆ = ಮರಳಿನ ರಾಶಿ, ಮರಳಿನ ದಿಣ್ಣೆ) ವಿಜಯಲಕ್ಷ್ಮಿಯು ತಟಸ್ಥಳಾಗಿ ಕಂಗೊಳಿಸುತ್ತಿದ್ದಳು. ಒಮ್ಮೆ ಶ್ರೀರಾಮನು ವಿಜಯಿಯಾದರೆ, ಮರುಗಳಿಗೆಯಲ್ಲಿ ದಶಾಸ್ಯನು ಮೇಲ್ಗೈ ಸಾಧಿಸುತ್ತಿದ್ದನು. ಜಯಶೀಲನಾಗಿ ಅವನೇ ಹೆಚ್ಚಿಂದು ಪ್ರಶಂಸೆಗೆ ಪಾತ್ರನಾಗುತ್ತಿದ್ದನು. ಅವರ ವಿಕ್ರಮವ್ಯತಿಹಾರದಿಂದ ಜಯವನಿತೆ, ಗಜಯುದ್ಧದಲ್ಲಿ ಕಾದಾಡುತ್ತಿರುವ ಎರಡು ಮದಿಸಿದ ಕಾಡಾನೆಗಳ ನಡುವೆಯಿರುವ ವೇದಿಯಂತೆ. ಇಬ್ಬರಿಗೂ ಒಂದೇ ಸಮನಾಗಿ ತೋರುತ್ತ, ಒಂದೇ ಅಂತರದಲ್ಲಿ ಇದ್ದಂತೆ, ಒಂದೇ ಸಮನಾಗಿ ತೋರುತ್ತ ಎಸೆದಿದ್ದಳು. ಜಯಶ್ರೀಯು ವಿಕ್ರಮದಿಂದಲ್ಲವೆ ವಶವಾಗುವವಳು ? ಇಬ್ಬರ ಪರಾಕ್ರಮವು ಒಂದೇ ಹಂತದಲ್ಲಿ, ಒಂದೇ ತೆರನಾಗಿತ್ತು. ಜಯಶ್ರೀಯು ಯಾರ ವಶವೂ ಆಗಲಿಲ್ಲ.

ಪರ್ಯಾಯ = ಕ್ರಮೇಣ—ಅಂತರಾ = ಮಧ್ಯೇ—ಅವ್ಯಯಮೇತತ್—ವೇದಿರ್ವೇದ್ಯಾಕಾರಾಭಿತ್ತಿರ್ಮತ್ತವಾರಣಯೋರಿವ — ಸಾಮಾನ್ಯಾ = ಸಾಧಾರಣಾಭೂತ್—ಗಜಯುದ್ಧ = ಆನೆ ಯುದ್ಧ.

**94. ಕೃತಪ್ರತಿಕೃತ ಪ್ರೀತೈಃ ತಯೋರ್ಮುಕ್ತಾಂ ಸುರಾಸುರೈಃ ।**
**ಪರಸ್ಪರಶರವ್ರಾತಾಃ ಪುಷ್ಪವೃಷ್ಟಿಂ ನ ಸೇಹಿರೇ ॥ ೯೪ ॥**

ಸಮಸತ್ವರಾದ ರಾಮರಾವಣರು ಎಸೆಗೆ, ಮಾರೆಸುಗೆಯೊಳು ಶರವೃಷ್ಟಿಯನ್ನು ಸುರಿಸಿ ಕಾದುತ್ತಿರಲು, ಸುರರು, ಅಸುರರು ಅವರ ಮೇಲೆ ಹೂಮಳೆಗರೆಯುತ್ತಿದ್ದರು. ಆ ಉಭಯವೀರರು ಎಸೆದ ಅನ್ಯೋನ್ಯಶರಸಮೂಹದಿಂದ ಆಕಾಶವು ಮುಚ್ಚಿಹೋದು ದರಿಂದ ಅವರ ಮೇಲೆ ಸುರಿಸಿದ ಪುಷ್ಪವೃಷ್ಟಿ ಅವರ ಮೈಮೇಲೆ ಬೀಳುತ್ತಿರಲಿಲ್ಲ. ಅವರು ಪುಂಖಾನುಪುಂಖವಾಗಿ ತೊಡುವ ಮತ್ತು ಬಿಡುವ ಬಾಣಗಳು, ಬಾಣಗಳಿಗೆ ಪ್ರತಿಬಾಣ, ಎಸೆದ ಬಾಣವನ್ನು ಖಂಡಿಸುವುದು—ಅವರ ಕೈಚಳಕ ಅಸದೃಶವಾದುದು (ಸಮಸತ್ವ ರೆಸುಗೆ ಮಾರೆಸುಗೆಯೊಳು) ರಣರಂಗವು ಉಭಯರ ಬಾಣದಿಂದ ದಟ್ಟವಾಗಿ ಕವಿದು ಹೋಯಿತು. ದಿಕ್ಕುಗಳು ಕಾಣಸದಾದುವು.

ಸ್ವಯಂ ಅಸ್ತ್ರಪ್ರಯೋಗಃ ಕೃತಂ ಪ್ರತಿಕೃತಂ = ಪರಕೃತಪ್ರತೀಕಾರಸ್ತಾಭ್ಯಾಂ — ಪರಸ್ಪರಂ ಶರವ್ರಾತಾ ನ ಸೇಹಿರೇ ॥

**95. ಅಯಃ ಶಂಕುಚಿತಾಂ ರಕ್ಷಃ ಶತಘ್ನೀಮಥ ಶತ್ರವೇ ।**
**ಹೃತಾಂ ವೈವಸ್ವತಸ್ಯೇವ ಕೂಟಶಾಲ್ಮಲಿಮಕ್ಷಿಪತ್ ॥ ೯೫ ॥**

ಕೊನೆಗೆ ರಾವಣನು ವೈರಿನಾಶಕ್ಕಾಗಿ ಶತಘ್ನಿ ಎಂಬ ಕ್ಷಿಪಣಿಯಂತಹ ದಿವ್ಯಾಸ್ತ್ರವನ್ನು ತೆಗೆದು ಗುರಿಯಿಟ್ಟು ಎಸೆದ. ಶತಘ್ನಿ ಎಂಬುದು ಗದೆಯ ಆಕಾರದ ದಿವ್ಯಾಸ್ತ್ರ. ಅದು ಕೂಟಶಾಲ್ಮಲಿಯಂತೆ ಶೋಭಿಸುತ್ತಿತ್ತು. ಅದರ ಹೊರಮೈಯ ಕವಚವು ಲೋಹದಿಂದ ರಚಿತವಾದುದು. ಹೊರಮೈಯಲ್ಲಿ ಲೋಹದ ಅನೇಕ ಮುಳ್ಳುಗಳಿಂದ ಅಲಂಕೃತವಾದ ಮಹಾ ಆಯುಧ. ಅದು ಶಿಲಾವರ್ಷವನ್ನು ಸುರಿಸಿ ನೂರಾರು ಮಂದಿಯನ್ನು ಫಿರಂಗಿ ಯಂತೆ ಏಕಕಾಲದಲ್ಲಿ ಆಹುತಿ ತೆಗೆದುಕೊಳ್ಳುವ ದಿವ್ಯಾಯುಧ. ವೈವಸ್ವತನಾದ ಯಮ ಧರ್ಮರಾಯನು ತನ್ನ ಯಮಲೋಕದಲ್ಲಿ ಘೋರ ಅಪರಾಧಿಗಳನ್ನು ಶಿಕ್ಷಿಸಲು ಇರಿಸಿದ ಕೂಟಶಾಲ್ಮಲಿವೃಕ್ಷಕ್ಕೆ (ಮುಳ್ಳಿನ ಮರ) ಸಮಾನವಾಗಿದ್ದು ರಾವಣನಿಗೆ ವಿಜಯವನ್ನು ತಂದುಕೊಡುವುದರಲ್ಲಿ ಸಂಶಯವಿರಲಿಲ್ಲ. ಕೂಟಶಾಲ್ಮಲಿವೃಕ್ಷವು ಮುಳ್ಳಿನಿಂದ ಮುಚ್ಚಿರು ವಂತೆ, ಶತಘ್ನಿಯೆಂಬ ಮಹಾಗದೆಯು ಕಬ್ಬಿಣದ ಮುಳ್ಳುಗಳಿಂದ ಆವೃತವಾಗಿ ಭಯಂಕರ ವಾಗಿ ಕಾಣುತ್ತಿತ್ತು. ಅದು ವೈರಿಯ ಎದೆಯ ರಕ್ತವನ್ನು ಪಾನಮಾಡಲು ಹಾತೊರೆಯು ತ್ತಿತ್ತು.

ಶತಘ್ನೀಂ = ಲೋಹಕಂಟಕಕೀಲಿತ ಯಷ್ಟಿವಿಶೇಷಮ್—"ಶತಘ್ನೀ ತು ತು ಸ್ಯಾಲಾ ಲೋಹಕಂಟಕಸಂಚಿತಾಯಷ್ಟಿಃ"—ಇತಿ ಕೇಶವಃ—ಕೂಟಶಾಲ್ಮಲಿರಿವ ಕೂಟಶಾಲ್ಮಲಿರಿತಿ ವ್ಯುತ್ಪತ್ತ್ಯಾ ವೈವಸ್ವತ ಗದಾಯಾ ಗೌಣೀಸಂಜ್ಞಾ—ಕೂಟಶಾಲ್ಮಲಿರ್ನಾಮೈಕಮೂಲ ಪ್ರಕೃತಿಃ ಕಂಟಕೀವೃಕ್ಷವಿಶೇಷಃ—"ರೋಚನಃ ಕೂಟಶಾಲ್ಮಲಿ" ಇತ್ಯಮರಃ—ದೀಪಕ ಅಲಂಕಾರ ॥

**96. ರಾಘವೋ ರಥಮಪ್ರಾಪ್ತಾಂ ತಾಮಾಶಾಂ ಚ ಸುರದ್ವಿಷಾಮ್ ।**
**ಅರ್ಧಚಂದ್ರಮುಖೈರ್ಬಾಣೈಶ್ಚಿಚ್ಛೇದ ಕದಲೀಸುಖಮ್ ॥ ೯೬ ॥**

ನಾಲ್ಕು ಅಡಿ ಉದ್ದದ ಶತಘ್ನಿಯೆಂಬ ಆ ಲೋಹದ ಶಕ್ತ್ಯಾಯುಧವನ್ನು ಶ್ರೀರಾಮ ಚಂದ್ರನು ತನ್ನ ರಥದೆಡೆಗೆ ಬರುವ ಮುನ್ನವೇ ಅರ್ಧಚಂದ್ರಾಸ್ತ್ರಶರದಿಂದ ಶತಚೂರು

ಮಾಡಿ ಬಿಸುಟನು. ಬಾಳೆದಿಂಡನ್ನು ಕೊಡಗರು ಮದುವೆ ದಿನ ಕಡಿದು ಬಿಸುಡುವಂತೆ ಛಿನ್ನವಿಚ್ಛಿನ್ನಮಾಡಿ ಎಸೆದನು. ಇದರಿಂದ ದೈತ್ಯನ ಗೆಲುವ ಆಶೆ ಆಕಾಂಕ್ಷೆಗಳು, ಆ ಅಸ್ತ್ರದೊಂದಿಗೆ ಅವಸಾನಹೊಂದಿದುವು. ಅಸುರನ (ಅಸುರರ) ಗೆಲುವ ಆಶೆಯನ್ನೂ, ಅಸ್ತ್ರವನ್ನೂ ಏಕಕಾಲದಲ್ಲಿ, ಒಮ್ಮೆಗೇ ಖಂಡಿಸಿದನು. ಆಹಹ! ರಾಘವನ ರಣ ಶೌರ್ಯದ ವೈಶಿಷ್ಟ್ಯವೆ! ಧನುರ್ವಿದ್ಯೆಯಲ್ಲಿ ರಾಘವನು ಲೋಕದಲ್ಲೇ ಏಕಮೇವ ಧನುರ್ಧರ. ಇದರಿಂದ ಸುರರ ಆಶೆಯು ಕುದುರಿತು, ಅಸುರರ ಆಶೆಯು ಕಮರಿತು.

ರಕ್ಷಸಾಮಾಶಾಂ ವಿಜಯತೃಷ್ಣಾಂ ಚ—"ಆಶಾತೃಷ್ಣಾದಿಶೋಃ ಪ್ರೋಕ್ತಾ" ಇತಿ ವಿಶ್ವಃ—ಅರ್ಧಚಂದ್ರ ಇವ ಮುಖಂ ಯೇಷಾಂತೈರ್ಬಾಣೈಃ ಕದಲೀವತ್ಸುಖಂ ಯಥಾ ತಥಾ ಚಿಚ್ಛೇದ॥

**97. ಅಮೋಘಂ ಸಂದಧೇ ಚಾಸ್ಮೈ ಧನುಷ್ಯೇಕಧನುರ್ಧರಃ।**
**ಬ್ರಾಹ್ಮಮಸ್ತ್ರಂ ಪ್ರಿಯಾಶೋಕಶಲ್ಯನಿಷ್ಕರ್ಷಣೌಷಧಮ್ ॥೯೭॥**

ಇದೀಗ ಸೀತಾರಾಮನು ಶತ್ರುನಾಶಕ್ಕೆಂದು ಮನಮಾಡಿದನು. ಆ ಅನುಪಮಧನುರ್ಧರನು, ಹುಸಿಯಿಲ್ಲದ, ಎಂದೂ ತಪ್ಪದ, ಎದುರಿಲ್ಲದ ಬ್ರಹ್ಮದೇವತಾಕವಾದ ಬ್ರಹ್ಮಾಸ್ತ್ರವನ್ನು ಶತ್ರುಮರ್ದನಕ್ಕಾಗಿ ಕೈಯಲ್ಲಿ ಹಿಡಿದನು (ಬ್ರಾಹ್ಮ ಎಂಬ ಅಸ್ತ್ರ). ಪ್ರಕಾಶಮಾನವಾದ ಆ ದಿವ್ಯಾಸ್ತ್ರವು ಶ್ರೀರಾಮನ ಕೈಯಲ್ಲಿ ಶೋಭಿಸಿತು. ಆ ಅಸ್ತ್ರವನ್ನು ತೆಗೆದು ಶಿಂಜಿನಿಗೆ ಜೋಡಿಸಿದನು. ಆ ಮಹಾಸ್ತ್ರವು (ಬ್ರಹ್ಮಾಸ್ತ್ರವು) ಸೀತೆಯ ದುಃಖಶಲ್ಯವನ್ನು ಕಿತ್ತೊಗೆಯುವ, ಗುಣಪಡಿಸುವ ದಿವ್ಯೌಷಧಿಯಂತೆ ಕಂಡಿತು. ಸೀತೆಯ ಹೃದಯದಲ್ಲಿ ಹೊಕ್ಕಿರುವ ವಿಷಬಾಣವನ್ನು ಕಿತ್ತೊಗೆದು, ಗುಣಪಡಿಸುವ, ಹೃದಯವೇದನೆಯನ್ನು (ಹೃದಯಶೂಲೆಯನ್ನು) ಪರಿಹರಿಸುವ ಮಹಾಔಷಧಿಯೆಂಬತೆ ಶ್ರೀರಾಮಚಂದ್ರನ ಕೈಯಲ್ಲಿ ರಾರಾಜಿಸಿತು. ರಾವಣನ ವಧೆಗೆ ತಕ್ಕ ಔಷಧಿ.

ಏಕೋಽದ್ವಿತೀಯೋ ಧನುರ್ಧರೋ ರಾಮಃ—ಶೋಕ ಏವ ಶಲ್ಯಂ ತಸ್ಯ—ಯದೌಷಧಂ ತದಮೋಘಂ ಬ್ರಾಹ್ಮ್ಯಂಬ್ರಹ್ಮದೇವತಾಕಮಸ್ತ್ರಾಭಿಮಂತ್ರಿತಂ ಬಾಣಮಸ್ಮೈ ರಾವಣಾಯ ಚಮಸ್ತ್ರ—ತದ್ವಧಾರ್ಥಮಿತ್ಯರ್ಥಃ—ಧನುಷಿ ಸಂದಧೇ—ಏಕಧನುರ್ಧರಃ = ಜಗದೇಕ ಧನುರ್ಧರ, ಸರಿಸಾಟಿಯಿಲ್ಲದ ಬಿಲ್ಲಾಳು.

**98. ತದ್ವ್ಯೋಮ್ನಿ ಶತಧಾ ಭಿನ್ನಂ ದದೃಶೇ ದೀಪ್ತಿಮನ್ಮುಖಮ್।**
**ವಪುರ್ಮಹೋರಗಸ್ಯೇವ ಕರಾಲಫಣಮಂಡಲಮ್ ॥೯೮॥**

ಆ ಮಹಾಸ್ತ್ರವು ಹತ್ತು ಮುಖಗಳಿಂದ ವಿರಾಜಿಸುತ್ತ, ಫಣಾಮಂಡಲದಿಂದ ರಾರಾಜಿಸುವ ಮಹಾಉರಗನಾದ ಆದಿಶೇಷನಂತೆ ಕಾಣುತ್ತ ಕಿಡಿಗಳನ್ನು ಉಗುಳುತ್ತ (ಫೂತ್ಕರಿಸುತ್ತ) ರಾವಣನ ಬಳಿಗೆ ಐದಿತು. ಅದು ಶತಶತ ಛಿದ್ರ ಎನುವಂತೆ ಆಕಾಶದಲ್ಲಿ ಉರಿಕಾರುತ್ತ, ಕೆಂಡಗಳನ್ನು ಉಗುಳುತ್ತಾ, ತೊಳಗಿ ಬೆಳಗುತ್ತ (ಶತಶತಛಿದ್ರ. ಮುಗಿಲು ಅಂಬರದೊಳು) ಹೆಡೆ ಬಿಚ್ಚಿದ ಆದಿಶೇಷನ ಕರಾಲವಾದ, ಅನಂತವಾದ (ಮಹತ್ತಾದ) ದೇಹವೋ ಎಂಬಂತೆ ದಶದಿಕ್ಕುಗಳನ್ನು ಫಳಫಳನೆ ಬೆಳಗುತ್ತ ಸುತ್ತಲೂ ವ್ಯಾಪಿಸುತ್ತಾ ದಶಕಂಧರನ ಸನಿಹಕ್ಕೆ ಘೂರ್ಮಿಸಿತು.) ಬಿಚ್ಚಿದ ಕರಾಲ ಫಣಮಂಡಲವುಳ್ಳ ಶರೀರವು).

ತದಿತಿ—ಪ್ರೋವಿಷ್ಣಿ ಶತಧಾ ಭಿನ್ನಂ ಪ್ರಸೃತಂ ದೀಪ್ತಿಮಂತಿ ಮುಖಾನಿ ಯಸ್ಯ ತತ್ ಬ್ರಹ್ಮಾಸ್ತ್ರಂ—ಕರಾಲಂ = ಭೀಷಣಂ ತುಂಗಂ—ವಾ ಕರಾಲೋದಂತುರೇ "ತುಂಗೇ ಕರಾಲೋಭೀಷಣೋऽಪಿ ಚ" ಇತಿ ವಿಶ್ವಃ—ಮಹೋರಗಸ್ಯ = ಶೇಷಸ್ಯ ವಪುರಿವ—ದದೃಶೇ = ದೃಷ್ಟಮ್ ॥

**99. ತೇನ ಮಂತ್ರಪ್ರಯುಕ್ತೇನ ನಿಮೇಷಾರ್ಧಾದಪಾತಯತ್ ।**
**ಸ ರಾವಣಶಿರಃ ಪಂಕ್ತಿಂ ಅಜ್ಞಾತವ್ರಣವೇದನಾಮ್ ॥ ೯೯ ॥**

ಬರೇ ಅರೆಕ್ಷಣದಲ್ಲಿ, ಕಣ್ಣುಮುಚ್ಚಿಬಿಡುವಷ್ಟರಲ್ಲಿ ಆ ಬ್ರಹ್ಮಾಸ್ತ್ರವು ತನ್ನ ಕಾರ್ಯವನ್ನು ಸಾಧಿಸಿ ರಕ್ಕಸನ ತಲೆಯ ರಾಶಿಯನ್ನು ಕತ್ತರಿಸಿ ತರಗೆಲೆಗಳಂತೆ ಉರುಳಿಸಿತು (ರಕ್ಕಸನ ತಲೆಯ ಹಂತಿಯನ್ನು), ಅವನಿಗೆ ಒಂದಿಷ್ಟು ವೇದನೆಯಾಗದಂತೆ (ಏರ್ಪಟ್ಟ ವೇದನೆಯ ಅರಿಯದೊಲು) ನಿಮಿಷಾರ್ಧದಲ್ಲಿ ತನ್ನ ಕಾರ್ಯವನ್ನು ಪೂರೈಸಿತು. ಇದರಿಂದ ರಾವಣನಿಗೆ ತನ್ನ ಶಿರ (ತಲೆ) ಹೋದುದೇ ತಿಳಿಯಲಿಲ್ಲ. ಅದಕ್ಕಾಗಿ ಅವನು ದುಃಖಿಸಲೇ ಇಲ್ಲ. ಆ ತಲೆಗಳಿಗೂ ನೋವಿನ ಅರಿವಾಗಲಿಲ್ಲ. ಇಂದ್ರಿಯಂಗಳಿಗೆ ನೋವಿನ ಬಾಧೆ ತೋರಲಿಲ್ಲ. ಆ ಬ್ರಹ್ಮಾಸ್ತ್ರದಿಂದ ಅಭಿಮಂತ್ರಿಸಲ್ಪಟ್ಟ ಮಹಾಶರವು ಧನುರ್ವೇದಪಾರಾವಾರನಾದ, ಸಿದ್ಧಹಸ್ತನಾದ ರಾಘವನಿಂದ ಅಂದು ಪ್ರಯೋಗಿಸಲ್ಪಟ್ಟಿತು.

ಸ ರಾಮೋ ಮಂತ್ರಪ್ರಯುಕ್ತೇನ ತೇನಾಸ್ತ್ರೇಣ, ಜ್ಞಾತವ್ರಣವೇದನಾಮಿತಿ ಶೈತ್ಯಾದನಸಂಭೂತವ್ರಣದುಃಖಾಂ ರಾವಣಶಿರಪಂಕ್ತಿಂ ನಿಮೇಷಾರ್ಧ ಪಾತಯಾತ್ = ಪಾತಯಾಮಾಸ ॥

**100. ಬಾಲಾರ್ಕಪ್ರತಿಮೇವಾಪ್ಸು ವೀಚಿಭಿನ್ನಾ ಪತಿಷ್ಯತಃ ।**
**ರರಾಜ ರಕ್ಷಃ ಕಾಯಸ್ಯ ಕಂಠಚ್ಛೇದಪರಂಪರಾ ॥ ೧೦೦ ॥**

ದಶಕಂಧರನ ಹತ್ತು ತಲೆಗಳು ಕಂಠಛೇದನವಾಗಲು ಬಾಲಸೂರ್ಯನಂತೆ ಉರುಳಿ ಧರೆಗೆ ಬಿದ್ದುವು (ನೀರಿನ ಬಿಂಬವೊಲಾಯ್ತು). ಕತ್ತಿಗೆಯ ಕಂಠನಾಳಗಳಿಂದ (ರಕ್ತನಾಳಗಳಿಂದ) ಒಮ್ಮೆಯೇ ಉಕ್ಕಿ ಮೇಲಕ್ಕೆ ಚಿಮ್ಮುತ್ತಿರುವ ರಕ್ತದ ಹೊನಲು, ರಕ್ತಸ್ನಾನ ಮಾಡಿದ. ರಕ್ತಮಿಶ್ರಿತ ರುಂಡಗಳು ಇಳೆಗೆ ಒರಗಲಿರುವ ತಲೆಗಳ ಸಾಲು ಸಾಲು ಕಂಪಿಸುವ ಜಲದಲ್ಲಿ ಬಾಲಸೂರ್ಯನ ಬಿಂಬದಂತೆ ಕಾಣುತ್ತಿದ್ದುವು (ಕಂಪಿಸುವ ಜಲದಲೆಯೊಳೆಸೆವ).

ಪತಿಷ್ಯತ = ಆಸನ್ನಪಾತಸ್ಯ—ರಕ್ಷಃ ಕಾಯಸ್ಯ=ರಾವಣಕಲೇವರಸ್ಯ—ಛಿದ್ಯಂತೇ ಇತಿ ಛೇದಾಃ ಖಂಡಾಃ—ಕಂಠಾನಾಂ ಛೇದಾಸ್ತೇಷಾಂ ಪರಂಪರಾ = ಪಂಕ್ತಿಃ—ವೀಚಿಭಿರ್ಭಿನ್ನಾ ನಾನಾಕೃತಾಪ್ಸು ಬಾಲಾರ್ಕಸ್ಯ-ಪ್ರತಿಮಾ=ಪ್ರತಿಬಿಂಬಮಿವ—ರರಾಜ ॥

**101. ಮರುತಾಂ ಪಶ್ಯತಾಂ ತಸ್ಯ ಶಿರಾಂಸಿ ಪತಿತಾನ್ಯಪಿ ।**
**ಮನೋನಾತಿವಿಶಶ್ವಾಸ ಪುನಃ ಸಂಧಾನಶಂಕಿನಾಮ್ ॥ ೧೦೧ ॥**

ರಾವಣನ ಶಿರಗಳು ಹತ್ತಿಯ ಉಂಡೆಯಂತೆ ಉರುಳುತ್ತಿರುವುದನ್ನು ಕಂಡು ಇಂದ್ರ, ವರುಣ, ಅಗ್ನಿ, ವಾಯು, ಯಮ ಮೊದಲಾದ ದೇವಶ್ರೇಷ್ಠರು ಸಂಶಯಗೊಂಡು

ನಂಬದಾದರು. ಪುನಃ ರಾವಣನು ಜೀವತಳೆಯಬಹುದೆಂದು, ಪುನಃ ಶ್ವಾಸೋಚ್ಛ್ವಾಸ ನಡೆಯಬಹುದೆಂದು ಶಂಕಿಸಿದರು. ಆದರೆ ಮಹೇಶನ ಇಚ್ಛೆಯಂತೆ, ಲೋಕಪಿತಾಮಹನ ಇಚ್ಛೆಯಂತೆ, ರಾವಣನ ಸಾವು ನಿಶ್ಚಿತವಾಗಿತ್ತು. ಮಹೇಶ್ವರನು ಸಂತುಷ್ಟನಾದನು. ರಾವಣನ ಕಳೇಬರವು ಇಳೆಯಲ್ಲಿ ಒರಗಿತು. ಮರಳಿ ತಲೆ ಸೇರಲೇ ಇಲ್ಲ. ರಾಕ್ಷಸರ ಭಾಗ್ಯರವಿ ಕಂತಿದನು. ಇದೀಗ ಸಮಸ್ತದೇವಾದಿದೇವತೆಗಳು, ಮಾನವರು, ಪನ್ನಗರು, ಕಿಂಪುರುಷರು, ಗಂಧರ್ವರು, ಸುರರು, ಕಿನ್ನರರು, ಉತ್ತಮರಾದ ಅಸುರರು, ಸ್ಥಾವರ, ಜಂಗಮಾದಿಗಳು, ಋಷಿಮುನಿಗಳು, ಭೂಮಿನವಗ್ರಹಗಳು, ದಿಕ್ಕುಗಳು, ಸೂರ್ಯ ಚಂದ್ರರು, ನಕ್ಷತ್ರಗಳು, ಸಮಸ್ತ ಲೋಕಗಳು (ಬ್ರಹ್ಮಾಂಡವೇ, ವಿಶ್ವವೇ) ಮುದ ಗೊಂಡುವು. ಪರಮಾತ್ಮನಾದ ಶ್ರೀರಾಮನ ಕಾರ್ಯವು ಪೂರ್ಣಗೊಂಡಿತು.

ಶಿರಾಂಸಿ ಪಶ್ಯತಾಮಪಿ ಪುನಃ ಸಂಧಾನಶಂಕಿನಾಮ್—ಪೂರ್ವಂ ತಥಾ ದರ್ಶನಾದಿತಿ ಭಾವಃ—ಮರುತಾಮ್ = ಅಮರಾಣಾಮ್—"ಮರುತೌ ಪವನಾಮರೌ" ಇತ್ಯಮರಃ—ಮನೋನಾತಿವಿಶ್ವಾಸ = ಅತಿವಿಶ್ವಾಸಸಪ್ರಾಪ ॥

**102. ಅಥ ಮದಗುರುಪಕ್ಷೈಃ ಲೋಕಪಾಲದ್ವಿಪಾನಾಂ ।**
**ಅನುಗತಮಲಿವೃಂದೈಃ ಗಂಡಭಿತ್ತೀರ್ವಿಹಾಯ ॥**
**ಉಪನತಮಣಿಬಂಧೇ ಮೂರ್ಧ್ನಿ ಪೌಲಸ್ತ್ಯಶತ್ರೋಃ ।**
**ಸುರಭಿಸುರವಿಮುಕ್ತಂ ಪುಷ್ಪವರ್ಷಂ ಪಪಾತ** ॥ ೧೦೨ ॥

ಇದೀಗ ದೇವಾದಿದೇವತೆಗಳು ತಮ್ಮ ವಿಮಾನದಲ್ಲಿ ಕುಳಿತು ಪೌಲಸ್ತ್ಯಶತ್ರುವಾದ ಶ್ರೀರಾಮಚಂದ್ರನ ತಲೆಯ ಮೇಲೆ ಸುಗಂಧಯುತವಾದ ಸುರಲೋಕದ ಪುಷ್ಪಗಳನ್ನು ಸುರಿದರು (ಸುರವಿಮುಕ್ತ ಪುಷ್ಪವರ್ಷ). ಹೂಮಳೆ ಸುರಿದು ತಾವು ಕೃತಾರ್ಥರಾದೆ ವೆಂದು ಸಂತಸ ಪ್ರಕಟಿಸಿದರು. ಆಗ ಹೂಗಳ ವಾಸನೆಗೆ ಮರುಳಾಗಿ ಐರಾವತವೇ ಮೊದಲಾದ ಲೋಕಪಾಲಕರ (ದೇವಲೋಕದ) ಮದ್ದಾನೆಗಳು ಸುರಿಸುವ ಮದಜಲ ಧಾರೆಯನ್ನು ತ್ಯಜಿಸಿ ಸುರಲೋಕದ ತುಂಬಿಗಳು, ಮದಜಲದಿಂದ ಒದ್ದೆಯಾದ ಭಾರ ವಾದ ರೆಕ್ಕೆಗಳನ್ನು ಬಡಿಯುತ್ತಾ ಭೂಲೋಕದ ಮಾರ್ಗ ಹಿಡಿದು ಭೂಮಿಗಿಳಿದು ಬಂದುವು. ತುಂಬಿವಿಂಡು ಮೊರೆಯುತ್ತ, ಗಾನಮಾಡುತ್ತ, ಸುರವಿಮುಕ್ತ ಪುಷ್ಪವೃಷ್ಟಿ ಯೊಂದಿಗೆ ಮುದದಿಂದ (ಕುಂಪಿನೊಂದು ಅಲುಪು ಸೂಸುತಿರಲು) ಭರದಿಂದ ಶ್ರೀರಾಮ ಚಂದ್ರನ ಬಳಿಗೆ ಬಂದುವು. ಇನ್ನೇನು ಶ್ರೀರಾಮಚಂದ್ರನ ಪಟ್ಟಾಭಿಷೇಕ, ಕಿರೀಟಧಾರಣೆ ಮೊದಲಾದ ಕಾರ್ಯಗಳು ಅತಿಶೀಘ್ರದಲ್ಲೇ ನಡೆಯಲಿದೆಯಷ್ಟೆ. ದೇವತೆಗಳು ಶ್ರೀರಾಮನ ತಲೆಯ ಮೇಲೆ ಸುರಿಸಿದ ಹೂಮಳೆ ಶುಭೋದಯಗಳ ಶುಭಪ್ರಾರಂಭದ ಮೊದಲ ಹೆಜ್ಜೆ.

ಅಥ ಮದೇನ ಗಜಗಂಡಸುಕ್ರಾಂತೇನ ಗುರುಪಕ್ಷೈರ್ಭಾರಾಯಮಾಣಪಕ್ಷೈ ರಲಿವೃಂದೈ— ಅನುಗತ = ಅನುದ್ರುತಂ—ಸುರಭಿ = ಸುಗಂಧಿ—ಮಣಿಬಂಧೋ = ರಾಜ್ಯಾಭಿಷೇಕಸಮಯೋ ಭಾವೀ ಯಸ್ಯ ತಸ್ಮಿನ್—ರಾಮಸ್ಯ ಮೂರ್ಧ್ನಿ ಪಪಾತ— ಇದಮೇವ ರಾಜ್ಯಾಭಿಷೇಕಸೂಚಕಮಿತಿ ಭಾವಃ ॥

**103. ಯಂತಾ ಹರೇಃ ಸಪದಿ ಸಂಹೃತ ಕಾರ್ಮುಕಜ್ಯಂ ।**
**ಆಪೃಚ್ಛ್ಯ ರಾಘವಮನುಷ್ಠಿತ ದೇವಕಾರ್ಯಮ್ ॥**
**ನಾಮಾಂಕರಾವಣಶರಾಂಕಿತ ಕೇತುಯಷ್ಟಿಂ**
**ಊರ್ಧ್ವಂ ರಥಂ ಹರಿಸಹಸ್ರಯುಜಂ ನಿನಾಯ ॥ ೧೦೩ ॥**

ಇದೀಗ ರಾಮಕಾರ್ಯವು ಮುಗಿಯಿತು. ವಿಶ್ವದಲ್ಲಿ ಶಾಂತಿಸ್ಥಾಪನೆ ಹಾಗೂ ಧರ್ಮಸಂಸ್ಥಾಪನೆಯು ಕಾರ್ಯವು ಏಕಕಾಲದಲ್ಲಿ ನೆಲೆಗೊಂಡಿತು. ಅಧರ್ಮವು ಅಳಿಯಿತು. ಲೋಕಕಂಟಕನು ಕಾಲಗರ್ಭದಲ್ಲಿ ಸೇರಿಹೋದನು. ಶ್ರೀರಾಮಚಂದ್ರನು ತನ್ನ ಅಜೇಯವಾದ ಕೋದಂಡಮಹಾಧನುಸ್ಸಿನ ನಾರಿಯನ್ನು ಬಿಚ್ಚಿ ಯುದ್ಧನಿಲುಗಡೆಯನ್ನು ಸೂಚಿಸಿದನು (ಹೆದೆಯನ್ನಿಳಿಸಿದ ರಾಮನು). ಸುರರ ಕಜ್ಜವು ನೆರವೇರಿತು. ಮಾತಲಿಯು ಶ್ರೀರಾಮನ ಅಪ್ಪಣೆಪಡೆದು ಸಾವಿರ ಕುದುರೆಗಳನ್ನು ಹೂಡಿರುವ ತನ್ನ ದಿವ್ಯರಥವನ್ನು ಸುರಲೋಕದತ್ತ ತಿರುಗಿಸಿದನು. ರಾವಣನ ಹೆಸರಿನ ಕಣೆಗಳು, ನಾನಾವಿಧದ ಶಕ್ತಿ ಆಯುಧಗಳು, ಕ್ಷಿಪಣಿಗಳು, ಶತಘ್ನಿಗಳು, ಸುರರ ರಥದ ಕೇತುದಂಡದಲ್ಲಿ ಊರಿದಂತಹ ಗುರುತುಗಳುಳ್ಳ ಆ ಮಹಾರಥವು ಬಹಳ ಸಂಭ್ರಮದಿಂದ ಅಮರಾವತಿಗೆ ಹಿಂದಿರುಗಿತು. ಭೂಮಿಗೆ ಮಂಗಳವಾದುದು ಅಂದು. ಮಂಗಳದ ಬೆಳದಿಂಗಳು ವಿಶ್ವದೆಲ್ಲೆಲ್ಲ ಹರಡಿತು. ನಗೆಯು ಪನ್ನೀರು ಸುತ್ತಲೂ ಚೆಲ್ಲಿತು. ಅಂಧಕಾರ ಕಳೆದು ನವಯುಗದ ಆರಂಭವಾಯಿತು.

ನಾಮಾಂಕೈರ್ನಾಮಾಕ್ಷರಚಿಹ್ನೈಃ—ರಾವಣಶರೈರಂಕಿತಾ ಚಿಹ್ನಿತಾ—ಕೇತುಯಷ್ಟಿಃ = ಧ್ವಜದಂಡೋ ಯಸ್ಯ ತಮ್—ಹರೀಣಾಂ = ವಾಜಿನಾಂ—ಸಹಸ್ರೇಣ ಯುಜ್ಯತ ಇತಿ = ಹರಿಸಹಸ್ರಯುಕ್ತ—"ಯಮಾನಿಲೇಂದ್ರಚಂದ್ರಾರ್ಕವಿಷ್ಣುಸಿಂಹಾಂಶು ವಾಜಿಷು ಹರಿಃ" ಇತ್ಯುಭಯತ್ರಾಪ್ಯಮರಃ—ರಥಮೂರ್ಧ್ವಂ ನಿನಾಯ = ನೀತವಾನ್ ॥

**104. ರಘುಪತಿರಪಿ ಜಾತವೇದೋ ವಿಶುದ್ಧಾಂ ಪ್ರಗೃಹ್ಯ ಪ್ರಿಯಾಂ ।**
**ಪ್ರಿಯಸುಹೃದಿ ವಿಭೀಷಣೇ ಸಂಗಮಯ್ಯ ಶ್ರಿಯಂ ವೈರಿಣಃ ॥**
**ರವಿಸುತಸಹಿತೇನ ತೇನಾನುಯಾತಃ ಸ ಸೌಮಿತ್ರಿಣಾ ।**
**ಭುಜವಿಜಿತವಿಮಾನರತ್ನಾಧಿರೂಢಃ ಪ್ರತಸ್ಥೇ ಪುರೀಮ್ ॥ ೧೦೪ ॥**

ರಘುಪತಿಯು ಜಾತವೇದ ಅಗ್ನಿಯಿಂದ ಪರಿಶುದ್ಧಳಾದ ತನ್ನ ಇನಿಯಳಾದ ಜಾನಕಿಯೊಂದಿಗೆ ಪುಷ್ಪಕವಿಮಾನವನ್ನು ಏರಿದನು. ಪ್ರಿಯಸಖನಾದ ವಿಭೀಷಣನಿಗೆ ಲಂಕಾ ಸಾಮ್ರಾಜ್ಯದ ಪಟ್ಟವನ್ನು ಕಟ್ಟಿ, ಸಮಸ್ತ ವೈಭವವನ್ನು, ಸಿರಿತನವನ್ನು, ಒಡೆತನವನ್ನು ಅವನೊಳಿರಿಸಿ (ಅನುಗ್ರಹಿಸಿ), ಮಿತ್ರವಾಕ್ಯವಾಕ್ಯಪರಿಪಾಲನೆಯನ್ನು ಮಾಡಿದನು. ಆ ಬಳಿಕ ಸೀತಾರಾಘವರು ಸಂತಸದಿಂದ ಪುಷ್ಪಕವನ್ನೇರಿದರು. ಅವರೊಂದಿಗೆ ಸೌಮಿತ್ರಿ, ಸುಗ್ರೀವ ಮೊದಲಾದ ಕಪಿನಾಯಕರು. ವಿಭೀಷಣನೇ ಮೊದಲಾದ ರಾಕ್ಷಸಕುಲಶ್ರೇಷ್ಠರ ಜತೆಗೂಡಿ ತನ್ನ ಭುಜವಿಜಿತ ಪುಷ್ಪಕವಿಮಾನರತ್ನದಲ್ಲಿ ಅಯೋಧ್ಯೆಯನ್ನು ಸೇರಲೆಂದು ಶ್ರೀರಾಮನು ಬಿಜಯಂಗೈದನು.

ರಘುಪತಿರಪಿ ಜಾತವೇದಸ್ಯಗ್ನೌ ವಿಶುದ್ಧಾಂ = ಜಾತಶುದ್ಧಿಂ—ಪ್ರಿಯಾಂ = ಸೀತಾಂ

—ಪ್ರಗೃಹ್ಯ=ಸ್ವೀಕೃತ್ಯ—ಪ್ರಿಯಸುಹೃದಿ ವಿಭೀಷಣೇ ವೈರಿಣೋ ರಾವಣಸ್ಯ ಶ್ರೀಯಂ ರಾಜಲಕ್ಷ್ಮೀಂ ಸಂಗಮಯ್ಯ—ಸಂಗತಾಂ ಕೃತ್ವಾ—ರವಿಸುತಸಹಿತೇನ = ಸುಗ್ರೀವಯುಕ್ತೇನ—ಸ ಸೌಮಿತ್ರಿಣಾ = ಸಲಕ್ಷ್ಮಣೇನ—ವಿಮಾನಂ ರತ್ನಮಿವ = ವಿಮಾನರತ್ನಮಿತ್ಯುಪಮಿತಸಮಾಸಃ—ಭುಜವಿಜಿತಂ ಯದ್ವಿಮಾನರತ್ನಂ = ಪುಷ್ಪಕಂ ತದಾರೂಢಃ ಸನ್—ಪುರೀಮಯೋಧ್ಯಾಂ ಪ್ರತಸ್ಥೇ—ಅತ್ರ ಪ್ರಸ್ಥಾನಕ್ರಿಯಾಯಾ—ಜಾತವೇದೋವಿಶುದ್ಧಾಮ್ = ಜಾತವೇದಸ = ಅಗ್ನಿ—ಜಾತಂ ವೇದಃ ಧನಂ ಶಾಸೇ ವಾ ಯಸ್ಮಾತ್ —ಜಾತ + ವಿದ್ + ಪ್ರತ್ಯಯಂ ಅಸ್ (ಅಸುನ್) ಜಾತವೇದಸಿ ವಿಶುದ್ಧಾ ॥

# ತ್ರಯೋದಶಃ ಸರ್ಗಃ

## ಹದಿಮೂರನೆಯ ಸರ್ಗ

**1. ಅಥಾತ್ಮನಃ ಶಬ್ದಗುಣಂ ಗುಣಜ್ಞಃ ।**
**ಪದಂ ವಿಮಾನೇನ ವಿಗಾಹಮಾನಃ ॥**
**ರತ್ನಾಕರಂ ವೀಕ್ಷ್ಯಮಿಥಃ ಸಜಾಯಾಂ ।**
**ರಾಮಾಭಿಧಾನೋ ಹರಿರಿತ್ಯುವಾಚ ॥ ೧ ॥**

ದಂಡಕಾರಣ್ಯಕ್ಕೆ ಶ್ರೀರಾಮನ ಪುನರಾಗಮನ:—ಆ ಬಳಿಕ ಆ ಗುಣಜ್ಞನಾದ ಪರಮಾತ್ಮನಾದ ಶ್ರೀಹರಿಯು ಅವತಾರಿಯಾದ ರಾಘವನು, ತನ್ನ ಭಾಮಿನಿಯಾದ ಸೀತಾದೇವಿಯೊಂದಿಗೆ ಪುಷ್ಪಕವನ್ನು ಏರಿ, ತನ್ನ ಮುಂದೆ ಭರತಖಂಡವನ್ನು ಬಳಸಿ ನಿಂತಿರುವ ದಕ್ಷಿಣ ಸಾಗರವನ್ನು ದಾಟಲು (ನೋಡಿ ರತ್ನಾಕರವ) ಆಸೀವಾದನು. ಆ ಆಕಾಶವನ್ನು ಆ ಶ್ರೀಹರಿಯು (ನರಹರಿ) ಈ ಹಿಂದೆ ತನ್ನ ವಾಮನಾವತಾರದಲ್ಲಿ ಒಂದೇ ಒಂದು ಹೆಜ್ಜೆಯಿಂದ ಅಳೆದಿರುವನು. ಆ ವಿಮಾನವು "**ಶಬ್ದಗುಣಮಾಕಾಶ**". ಶಬ್ದಗುಣದಿಂದ ಮೆರೆಯುತ್ತಿರುವ ಆಕಾಶದಲ್ಲಿ ಶ್ರೀರಾಮನ ಇಚ್ಛೆಯಂತೆ, ಅಭ್ರಮಾರ್ಗದಲ್ಲಿ ಚಲಿಸಬಲ್ಲ, ವಾಯುವಿಗಿಂತಲೂ ವೇಗಶಾಲಿಯಾಗಿ ಓಡಾಡಬಲ್ಲ ದೇವನಿರ್ಮಿತ ಪುಷ್ಪಕ ವಿಮಾನ. ಆ ವಿಮಾನವನ್ನು ತನ್ನ ಜಾಯೆ ಸಮೇತ ಏರಿ ಸಾಗರವನ್ನು ನೋಡುತ್ತಾ ರಾಮಾಭಿಧಾನ ಹರಿ ಈ ತೆರ ಏಕಾಂತದಲ್ಲಿ ನುಡಿದನು.

ಅನ್ವಯ:—ಅಥ ಗುಣಜ್ಞಃ ಸ ರಾಮಾಭಿಧಾನೋ ಹರಿಃ ಆತ್ಮನಃ ಶಬ್ದಗುಣಂ ಪದಂ ವಿಮಾನೇನ ವಿಗಾಹಮಾನಃ (ಸನ್) ರತ್ನಾಕರಂ ವೀಕ್ಷ್ಯ ಮಿಥಃ ಜಾಯಾಮ್ ಇತಿ ಉವಾಚ ॥

ಜಾನಕೀತಿಪ್ಪಃ—ಗುಣಾನಾಂ ಜ್ಞೋ ಗುಣಜ್ಞಃ—ಸರಾಮಾಭಿಧಾನೋ ಹರಿರ್ವಿಷ್ಣುಃ ಶಬ್ದೋ ಗುಣೋ ಯಸ್ಯ ತಚ್ಛಬ್ದಗುಣಮಾತ್ಮನಃ ಸ್ವಸ್ಯ ಪದಂ ವಿಷ್ಣುಪದಮ್—ಪದಂ = ವಿಷ್ಣುಪದಂ—"ವಿಯದ್ವಿಷ್ಣುಪದಂ" ಇತ್ಯಮರಃ—"ಶಬ್ದಗುಣಮಾಕಾಶಮ್" ಇತಿ ತಾರ್ಕಿಕಾಃ—ವಿಮಾನೇನ = ಪುಷ್ಪಕೇಣ—"ಮಿಥೋಽನ್ಯೋನ್ಯಂ ರಹಸ್ಯಪಿ" ಇತ್ಯಮರಃ ॥

**2. ವೈದೇಹಿ ಪಶ್ಯಾಮಲಯಾದ್ವಿಭಕ್ತಂ ।**
**ಮತ್ಸೇತುನಾ ಫೇನಿಲಮಂಬುರಾಶಿಮ್ ॥**
**ಛಾಯಾಪಥೇನೇವ ಶರತ್ಪ್ರಸನ್ನಂ ।**
**ಆಕಾಶಮಾವಿಷ್ಕೃತ ಚಾರುತಾರಮ್ ॥ ೨ ॥**

"ಹೇ ವೈದೇಹಿ (ಸೀತೆ, ಸೀತಾ, ಸೀತಮ್ಮ), ನಮ್ಮ ಮುಂದೆ ಹರಡಿರುವ ಸಾಗರದ ಜಲರಾಶಿಯನ್ನು ನೋಡು. ಹೇ ಪ್ರಿಯೆ, ಈ ಸಾಗರವು ಭರತಖಂಡದ ದಕ್ಷಿಣತುದಿಯಲ್ಲಿರುವ ಮಲಯಪರ್ವತದ ತನಕ ಹರಡಿದೆ. ನಾನು ಲಂಕಾದ್ವೀಪವನ್ನು ಆಕ್ರಮಿಸಲು ನಿರ್ಮಿಸಿರುವ ಮಹಾಸೇತುವೆಯು (ಸೇತುಬಂಧನ) ಈ ಮಹಾಸಾಗರವನ್ನು ಎರಡಾಗಿ ವಿಭಜಿಸುತ್ತಾ ನಿಂತಿದೆ, ಫೇನರಾಶಿಯಿಂದ (ನೊರೆ) ಒಪ್ಪುವ ಈ ಸಾಗರವು (ಅಂಬುರಾಶಿ) ಕಣ್ಣಿಗೆ ಎರಡು ವಿಭಾಗವಾಗಿ (ಎರಡಾಗಿ) ತೋರುತ್ತಿದೆ. ಈ ಅಂಬುಧಿಯು ಥಳಥಳನೆ ಹೊಳೆಯುವ ನಕ್ಷತ್ರಗಳ ಗಡಣದಿಂದ ಇಡಿಕಿರಿದ ಶುಭ್ರವಾದ ಶರತ್ಕಾಲದ ಆಕಾಶದಂತೆಯೇ ತೋರುತ್ತಿದೆ, ನೋಡು. ಬಣ್ಣವೂ ನೀಲ ನೀಲಮೇಘಶ್ಯಾಮನಂತೆ, ನೀಲವಾದ ಸಾಗರ. ಪರಮಾತ್ಮನು ಮಲಗಿರುವುದು ಸಾಗರದಲ್ಲಿ (ವಿಷ್ಣು ಕ್ಷೀರಸಾಗರಶಯನನು). ಮಹಾಲಕ್ಷ್ಮಿಯು ಸಾಗರದಿಂದ ಉದಿಸಿಬಂದವಳು (ಸಮುದ್ರಮಥನಕಾಲದಲ್ಲಿ) (ಕ್ಷೀರಸಾಗರರಾಜತನಯೆ, ಸೌಂದರ್ಯಮುದ್ರಾಂಕಿತೆ, ಶ್ರೀಮಹಾಲಕ್ಷ್ಮಿ).

ಅನ್ವಯ :—ವೈದೇಹಿ ಆಮಲಯಾತ್ ಮತ್ಸೇತುನಾ ವಿಭಕ್ತಂ ಫೇನಿಲಂ ಅಂಬುರಾಶಿಮ್ ಛಾಯಾಪಥೇನ (ವಿಭಕ್ತಂ) ಶರತ್‌ಪ್ರಸನ್ನಮ್ ಆವಿಷ್ಕೃತ ಚಾರುತಾರಮ್ ಆಕಾಶಮ್ ಇವ ಪಶ್ಯ ॥

ಫೇನಿಲಂ = ಫೇನವಂತಮ್—ಛಾಯಾಪಥೇನ ವಿಭಕ್ತಂ ಶರತ್‌ಪ್ರಸನ್ನಮಾವಿಷ್ಕೃತಚಾರುತಾರಮಾಕಾಶಮಿವ—ಜ್ಯೋತಿಶ್ಚಕ್ರಮಧ್ಯವರ್ತೀ—ಆಮಲಯಾತ್ = ಮಲಯಪರ್ವತದ ತನಕ—ಫೇನಿಲಮ್ = ಫೇನವಂತಮ್, ಫೇನ—ಇಲ(ಚ್) ಷಷ್ಠೀವಿಭಕ್ತಿ (ಸ್ವಾಮಿತ್ವವಾಚಕ ಸರ್ವನಾಮ), ಪ್ರತ್ಯಯ—ಛಾಯಾಪಥ = ಆಕಾಶಗಂಗಾ = ಬೆಳಕಿನ ದಾರಿ.

3. **ಗುರೋರ್ಯಿಯಕ್ಷೋಃ ಕಪಿಲೇನ ಮೇಧ್ಯೇ ।**
**ರಸಾತಲಂ ಸಂಕ್ರಮಿತೇ ತುರಂಗೇ ॥**
**ತದರ್ಥಮುರ್ವೀಮವದಾರಯದ್ಭಿಃ ।**
**ಪೂರ್ವೈಃ ಕಿಲಾಯಂ ಪರಿವರ್ಧಿತೋ ನಃ ॥ ೩ ॥**

"ಹೇ ರಾಣಿ, ಈ ಸಾಗರವು ನಮ್ಮ ವಂಶೋದ್ಭವರಾದ 60,000 ಮಂದಿ ಸಗರಪುತ್ರರಿಂದ ಅಗೆಯಲ್ಪಟ್ಟು ಅಭಿವೃದ್ಧಿಯಾಯಿತು. ಹಿಂದೆ ಸಗರಚಕ್ರವರ್ತಿಯು ಅಶ್ವಮೇಧಯಾಗಮಾಡುತ್ತಿರಲು 'ಶತಕ್ರತು'ವೆನಿಸಿದ ಇಂದ್ರನು ಭಯಭೀತನಾದನು. ಅವನು ಹೊಟ್ಟೆಕಿಚ್ಚಿನಿಂದ ಕೂಡಲೇ ಸಗರನ ಯಾಗಾಶ್ವವನ್ನು ಅಪಹರಿಸಿ ರಸಾತಳ, ಪಾತಾಳದಲ್ಲಿ (ಅಧೋಲೋಕದಲ್ಲಿ) ಉಗ್ರತಪಸ್ಸನ್ನು ಆಚರಿಸುತ್ತ ಕುಳಿತಿರುವ ಕಪಿಲಮುನಿ ಬಳಿಯಲ್ಲಿ ಬಿಟ್ಟನು. ಸಗರನು ತನ್ನ ಪುತ್ರರಿಗೆ ಯಾಗದ ಕುದುರೆಯನ್ನು ಹುಡುಕಿ ತರುವಂತೆ ಆಜ್ಞಾಪಿಸಲು, ಸಗರಪುತ್ರರು ಕುದುರೆಯ ಹೆಜ್ಜೆಯನ್ನು ಅನುಸರಿಸುತ್ತಾ ಸಮುದ್ರತೀರವನ್ನು ಸೇರಿದರು. ಸಮುದ್ರವನ್ನು ಅಗೆದು ವಿಶಾಲಗೊಳಿಸಿದರು. ಇದರಿಂದ ಸಮುದ್ರಕ್ಕೆ ಸಾಗರವೆಂಬ ಹೆಸರು ಜನಜನಿತವಾಯಿತು. ಸಗರಪುತ್ರರು ತಮ್ಮ ಸಾಹಸವನ್ನು ಮುಂದುವರಿಸಿ ಮುಂದೆ ರಸಾತಳವನ್ನು ಸೇರಿದರು. ಅಲ್ಲಿ ಅವರು ತಪೋನಿರತ

ನಾದ ಕಪಿಲಮುನಿಯು ಬಳಿಯಲ್ಲಿ ಓಡಾಡುತ್ತಿರುವ ಕುದುರೆಯನ್ನು ಕಂಡು ಅವನೇ ಕುದುರೆಕಳ್ಳನೆಂದು ತೀರ್ಮಾನಿಸಿ ಅವನನ್ನು ಹಿಡಿಯಲು, ಬಡಿಯಲು, ಕಟ್ಟಿಹಾಕಲು (ಮರಕ್ಕೆ) ಮುಂದೆ ಹೋದರು.

ಕಪಿಲಮುನಿಯು ಕಡುಬೇಸಗೆಯ ಸೂರ್ಯನಂತೆ ಪ್ರಚಂಡತೇಜದಿಂದ ಪ್ರಕಾಶಿಸುತ್ತ ಲಿದ್ದನು. ಆತನು ಕಣ್ಣು ತೆರೆದು ಮೂರ್ಖಶಿಖಾಮಣಿಗಳಾದ ಸಗರಪುತ್ರರನ್ನು ಸುಟ್ಟು ಭಸ್ಮಮಾಡಿದನು (ಅಲ್ಲಿಗೆ ಸಗರಪುತ್ರರ ಕತೆ ಮುಗಿಯಿತು). ಹೇ ದೇವಿ, ನಮ್ಮ ಇಕ್ಷ್ವಾಕು ವಂಶದಲ್ಲಿ ಈ ಹಿಂದೆ ಜನಿಸಿದ ನಮ್ಮ ಪೂರ್ವಿಜರಿಂದ ಈ ಸಾಗರವು ಎಳ್ಳಿಪಡೆದು ಮತ್ತಷ್ಟು ವಿಶಾಲಹೊಂದಿತು. ಅವರಿಂದಲೇ ಪೂಜ್ಯವೆನಿಸಿದ ಈ ಕಡಲಿಗೆ ಸಾಗರವೆಂಬ ನಾಮವು ಲೋಕಪ್ರಸಿದ್ಧವಾಯಿತು.

ಅನ್ವಯ:—ಈಯಕ್ಷ್ಣೋಃ ಗುರೋಃ ಮಧ್ಯೇ ತುರಂಗೇ ಕಪಿಲೇನ ರಸಾತಲಂ ಸಂಕ್ರಮಿತೇ ತದರ್ಥಮುರ್ವೀಮ್ ಅವಧಾರಯದ್ಭಿಃ ನಃ ಪೂರ್ವೈಃ ಪರಿವರ್ಧಿತಃ ಕಿಲ ॥

ಈರ್ಯಕ್ಷ್ಣೋರ್ಯಷ್ಟ್ವಮಿಚ್ಛೋಃ—ತುರಂಗೇ ಹಯೇ ಕಪಿಲೇನ ಮುನಿನಾ ರಸಾತಲಂ ಪಾತಾಲಂ ಸಂಕ್ರಮಿತೇಽಸತಿ—ಸ್ವನದ್ಭಿರ್ನೋಽಸ್ಮಾಕಂ ಪೂರ್ವೈರ್ವೃದ್ಧೈಃ —''ಕಿಲ'' ಇತ್ಯೈತಿಹ್ಯೇ—ಅತೋ ನ ಪೂಜ್ಯ ಇತಿ ಭಾವಃ ॥

4. ಗರ್ಭಂ ದಧತ್ಯರ್ಕಮರೀಚಯೋಽಸ್ಮಾತ್ ।
ವಿವೃದ್ಧಿಮತ್ರಾಶ್ನುವತೇ ವಸೂನಿ ॥
ಅಬಿಂಧನಂ ವಹ್ನಿಮಸೌ ಬಿಭರ್ತಿ ।
ಪ್ರಹ್ಲಾದನಂ ಜ್ಯೋತಿರಜನ್ಯನೇನ ॥ ೪ ॥

ಹೇ ಚತುರೆ, ಈ ಅಮಿತಫೇನಾಂಬುರಾಶಿಯನ್ನು ನೋಡು. ಈ ಸಾಗರನು ಜಲರಾಶಿ, ರವಿಕಿರಣಗಳಿಂದ ಆವಿಯಾಗಿ ಮೋಡವಾಗಿ ನೀರಿನ ಗರ್ಭವನ್ನು ಧರಿಸಿ ಮೆರೆಯುತ್ತಿದೆ. ಇದರಿಂದ ಲೋಕಕ್ಕೆ ಮಳೆಯಾಗಿ ಬೆಳೆಯಾಗುವುದು ಸ್ವಾಭಾವಿಕವಷ್ಟೆ. ಇದರಿಂದ ಸಾಗರನೂ ಲೋಕೋಪಕಾರಿ. ಇದು ಸಕಲ ನವರತ್ನಗಳ ನಿಧಿಯು. ಈ ಸಾಗರನಲ್ಲಿ ಹವಳ, ಮುತ್ತು, ರತ್ನ, ವಜ್ರ, ವೈಢೂರ್ಯ, ಗೋಮೇಧಿಕಾ, ಕೆಂಪು, ಪಚ್ಚೆ ಮೊದ ಲಾದ ನವರತ್ನಗಳು ಅಭಿವೃದ್ಧಿಹೊಂದುತ್ತಿವೆ, ಸಕಲ ಐಶ್ವರ್ಯಗಳ ಕಡವರವು, ರತ್ನದ ಆಗರವು, ಧನವೇರತ್ನವು, ಅದುವೇ ವಸುವು. ಈ ಸಾಗರನ ಗರ್ಭದಲ್ಲಿ ಬಡಬಾಗ್ನಿಯು (ಸಲಿಲೇಂಧನಾಗ್ನಿ) ವಾಸಿಸುತ್ತಿರುವುದು (ಧರಿಸಿದವುದೀ ಶರಧಿ ಸಲಿಲೇಂಧನಾಗ್ನಿಯನು) (ಜ್ವಾಲಾಮುಖಿ). ಈ ಸಾಗರದಿಂದ ಅಂದು ಜ್ಯೋತಿರೂಪಧರನಾದ ಚಂದ್ರನು ಉದಿಸಿದನು. ಆ ಚಂದ್ರನು ಲೋಕಕ್ಕೆ ಸುಖದಾಯಕ ತಂಪಾದ ಕಿರಣಗಳನ್ನು ಕೊಡುತ್ತ ಓಷಧಿಗಳನ್ನು ಪೊರೆಯುವನು. ಲೋಕಕ್ಕೆ ಆಹ್ಲಾದಕರನು, ನಮಗಿಂದು ಮುದವೀಯು ತ್ತಿರುವನು.

ಅತ್ರಾಬ್ಧೌ ವಸೂನಿ = ಧನಾನಿ—''ಧನೇ ರತ್ನೇ ವಸು ಸ್ಮೃತಮ್'' ಇತಿ ವಿಶ್ವಃ— ವಿವೃದ್ಧಿಮಶ್ನುವತೇ ಪ್ರಾಪ್ನುವಂತಿ–ಸಂಪದ್ಯನ್ತ ಇತ್ಯರ್ಥಃ ಅಸೌ–ಅಪ ಇಂಧನಂ ದಾಹ್ಯಂ

ಯಸ್ಯ ತದ್ಬಾಹಕಂ ವಹ್ನಿಂ ಬಿಭರ್ತಿ—ಅನೇನ ಪ್ರಹ್ಲಾದನಮಾಹ್ಲಾದಕಂ ಜ್ಯೋತಿಶ್ಚಂದ್ರೋಽಜನಜನಿತಮ್—ಗರ್ಭದದತಿ = ಸಮುದ್ರದ ನೀರು ಆವಿಯಾಗಿ ಮೋಡದ ರೂಪದಲ್ಲಿ (ಗರ್ಭಧರಿಸಿ) ವಾಯುಮಂಡಲದಲ್ಲಿ ನೇತಾಡುವುದು (ತೂಗಾಡುತ್ತಿರುವುದು)

**5. ತಾಂ ತಾಮವಸ್ಥಾಂ ಪ್ರತಿಪದ್ಯಮಾನಂ ।**
**ಸ್ಥಿತಂ ದಶವ್ಯಾಪ್ಯ ದಿಶೋ ಮಹಿಮ್ನಾ ॥**
**ವಿಷ್ಣೋರಿವಾಸ್ಯಾನವಧಾರಣೀಯಂ ।**
**ಈದೃಕ್ತಯಾ ರೂಪಮಿಯತ್ತಯಾ ವಾ ॥ ೫ ॥**

ಹೇ ಕಮಲನಯನೆ, ಈ ಸಾಗರನು ಮಹಾವಿಷ್ಣುವಿನಂತೆ ಅನೇಕ ರೂಪವನ್ನು ಧರಿಸಬಲ್ಲನು. ಮಹಾವಿಷ್ಣುವು ತನ್ನ ಮಹಿಮೆಯಿಂದ ಸತ್ವ, ರಜ, ತಮಂಗಳೆಂಬ ಮೂರು ಗುಣಗಳನ್ನು ಪಡೆದು ವಿಜೃಂಭಿಸುತ್ತ ಲೋಕವನ್ನು ಸಲಹುತ್ತಿರುವನು ಈ ಕಡಲಾದರೋ ಬಗೆಬಗೆಯ ಹಲತೆರದ ಅವಸ್ಥೆಗಳನ್ನು ಹೊಂದುತ್ತ, ತನ್ನ ದೈವಮಹಿಮೆಯಿಂದ ಹತ್ತು ದಿಕ್ಕುಗಳನ್ನು ವ್ಯಾಪಿಸುತ್ತ ಸಾಕ್ಷಾತ್ ವಿಷ್ಣುವಿಗೆ ಸಮಾನವಾಗಿದೆ. ತನ್ನ ಗುಣದಿಂದ ಮತ್ತು ಪರಿಮಾಣದಿಂದ ಪರಂಧಾಮನಾದ ಮಹಾವಿಷ್ಣುವನ್ನು ಹೋಲುತ್ತಿದೆ. ಈ ಸಾಗರವು ವಿಸ್ತಾರದಲ್ಲಿ ಅನಂತವಾಗಿದೆ. ಅನಂತನಾದ ಪರಮಾತ್ಮನಿಗೆ ಸಾಟಿಯಾಗಿದೆ. ಇದರ ಮಹಿಮೆಗಳನ್ನು ವರ್ಣಿಸಲು ಸಾವಿರ ನಾಲಗೆಯ ಆದಿಶೇಷನಿಗೂ ಅಸಾಧ್ಯವೆನಿಸುತ್ತಿದೆ (ನಿರೂಪಿಸಲು ಸಾಧ್ಯವಾಗದ).

ತಾಂ ತಾಮನೇಕಮ್—"ನಿತ್ಯವೀಪ್ಸಯೋಃ" ಇತಿ ವೀಪ್ಸಾಯಾಂ ದ್ವಿರುಕ್ತಿಃ (ಪಾಣಿನಿ) —ಅವಸ್ಥಾಂ ಸಂಕ್ಷೋಭಾದ್ಯವಸ್ಥಾಮ್—ವಿಷ್ಣುಪಕ್ಷೇ—ಸತ್ತ್ವಾದ್ಯವಸ್ಥಾಮ್—ಪ್ರತಿಪದ್ಯಮಾನಮ್ ಭಜಮಾನಂ ಮಹಿಮ್ನಾ ದಶದಿಶೋ ವ್ಯಾಪ್ಯ ಸ್ಥಿತಮ್ ವಿಷ್ಣೋರಿವಾಸ್ಯ ರತ್ನಾಕರಸ್ಯ ರೂಪಂ ಸ್ವರೂಪಮೀದೃಕ್ತಯೇತ್ಯ—ಇಯತ್ತಯಾವಾ ಪ್ರಕಾರತಃ ಪರಿಮಾಣತಶ್ಚಾನವಧಾರಣೀಯಂ ದುರ್ನಿರೂಪಮ್ ॥

**6. ನಾಭಿಪ್ರರೂಢಾಂಬುರುಹಾಸನೇನ ।**
**ಸಂಸ್ತೂಯಮಾನಃ ಪ್ರಥಮೇನ ಧಾತ್ರಾ ॥**
**ಅಮುಂ ಯುಗಾಂತೋಚಿತ ಯೋಗನಿದ್ರಃ ।**
**ಸಂಹೃತ್ಯ ಲೋಕಾನ್ ಪುರುಷೋಽಧಿಶೇತೇ ॥ ೬ ॥**

ಆ ಪರಮಾತ್ಮನಾದ (ಪರಮಪುರುಷ, ಜಗದಾದಿಪುರುಷ) ಮಹಾವಿಷ್ಣುವಿನ ನಾಭಿಯಿಂದ ಹೊರಟ ಕಮಲದ ಆಸನದಲ್ಲಿ (ತಾವರೆಯ ಪೀಠದಲ್ಲಿ) ಲೋಕಶಿಲ್ಪಿಯಾದ, ಲೋಕಪಿತಾಮಹನಾದ ಬ್ರಹ್ಮನು (ಪರಬ್ರಹ್ಮನು, ಸೃಷ್ಟಿಕರ್ತನು) ಕೇವಲ ಶ್ರೀಹರಿಯ ಮಹಿಮೆಗಳನ್ನು ಹೊಗಳುತ್ತಿರುವನು. ಯುಗದ ಅಂತ್ಯದಲ್ಲಿ ಆ ಪರಮಪುರುಷನಾದ, ಪುರುಷೋತ್ತಮನಾದ, ಪುರಾಣಪುರುಷನು (ವಿರಾಟ್ ಪುರುಷನು, ಮಹಾವಿಷ್ಣುವು)

ಮೂರು ಲೋಕಗಳನ್ನು (ವಿಶ್ವವನ್ನು) ಪ್ರಳಯದಲ್ಲಿ ಮುಳುಗಿಸಿ (ನಾಶಮಾಡಿ) ಕಲ್ಪಾಂತ ಪರಿಚಿತದ ಯೋಗನಿದ್ರೆಯಲ್ಲಿ ಪವಡಿಸಿರುವನು (ಕಲ್ಪಾಂತಪರಿಚಿತದ ಯೋಗನಿದ್ರೆಯೊಳು). ಹೀಗೆ ಲೋಕಾಲೋಕಗಳನ್ನು ತನ್ನ ಒಳಗೆ (ತನ್ನೊಳಗೆ) ಸೇರಿಸಿಕೊಂಡು ಶ್ರೀಹರಿಯು ಯೋಗನಿದ್ರೆಯಲ್ಲಿ ಮಲಗಿರುವನು (ಲೋಕಗಳ ಒಳಗೆಲ್ಲ ಹರಿ ಪವಡಿಸಿಹನು).

ಯುಗಾಂತೇ = ಕಲ್ಪಾಂತ—ಉಚಿತಾ = ಪರಿಚಿತಾ—ಯೋಗಃ = ಸ್ವಾತ್ಮನಿಷ್ಠೈವ—ನಿದ್ರೇವ = ನಿದ್ರಾ ಯಸ್ಯ ಸ—ಯುಗಾಂತೋಚಿತಯೋಗನಿದ್ರಃ ಪುರುಷಃ ಲೋಕಾನ್ ಸಂಹೃತ್ಯ ಅಮುಮ್ ಅಧಿಶೇತೇ—ಯುಗಾಂತೇ ಉಚಿತಾ (ಪರಿಚಿತಾ) ಯೋಗನಿದ್ರಾ ಯಸ್ಯ ಸಃ ॥

7. ಪಕ್ಷಚ್ಛಿದಾ ಗೋತ್ರಭಿದಾತ್ತಗಂಧಾಃ ।
ಶರಣ್ಯಮೇನಂ ಶತಶೋ ಮಹೀಧ್ರಾಃ ॥
ನೃಪಾ ಇವೋಪಪ್ಲವಿನಃ ಪರೇಭ್ಯೋ ।
ಧರ್ಮೋತ್ತರಂ ಮಧ್ಯಮಮಾಶ್ರಯಂತೇ ॥ ೭ ॥

ಅಂದು ಇಂದ್ರನ ಭಯದಿಂದ ತತ್ತರಿಸಿಹೋದ ನೂರಾರು ಪರ್ವತಗಳು ಓಡೋಡಿ ಬಂದು ಈ ಸಾಗರವನ್ನು ಮರೆಹೊಕ್ಕು ಸಾಗರದ ಜಲರಾಶಿಯಲ್ಲಿ ಅಡಗಿನಿಂದುವು (ರೆಕ್ಕೆ ತರಿದಿಂದ್ರನಿಂದ ಅದ್ರಿಗಳು ನೂರಾರು). ಇಂದ್ರನು ತನ್ನ ವಜ್ರಾಯುಧದಿಂದ ಲೋಕ ಕಂಟಕಿಗಳಾಗಿ ಇತ್ತಿಂದತ್ತ, ಅತ್ತಿಂದಿತ್ತ ಓಡಾಡುತ್ತಲಿದ್ದ ಪರ್ವತಗಳ, ಗಂಡ್ಡಬೆಟ್ಟಗಳ (ಬಾಣೆಗಳ—ಕೊಡವ ಭಾಷೆ) ರೆಕ್ಕೆಪುಕ್ಕಗಳನ್ನು ಕತ್ತರಿಸಿ ಅವು ಓಡಾಡದಂತೆ (ತಡೆಹಿಡಿದಿದ್ದ) ಮಾಡುತ್ತಿದ್ದ. ಆ ಗಿರಿಗಳು ನೂರಾರು ಮದವಳಿದು (ಸೊಕ್ಕು ಇಳಿದು) ಸಾಲು ಸಾಲಾಗಿ ಬಂದು ಸಾಗರನನ್ನು ಮರೆಹೊಕ್ಕವು. ಹೇಗೆ ಶತ್ರುವಿನ ಆಟೋಪಕ್ಕೆ, ಅಟ್ಟಹಾಸಕ್ಕೆ ಅಂಜಿದ ರಾಜರು ಬಂದು ಸಾಮ್ರಾಟನನ್ನು ಬಂದು ಶರಣುಹೊಗುವಂತೆ ಅದ್ರಿಗಳು ಶರಣಾಗತರಕ್ಷಕನಾದ ಆರ್ತಬಂಧುಶರಣ್ಯನಾದ ಸಾಗರನನ್ನು ಮರೆಹೊಕ್ಕವು. ಧರ್ಮಪ್ರಧಾನನಾದ ಸಾಗರರಾಜನು ಅವರಿಗೆ ಅಭಯವನ್ನಿತ್ತು—ಅವರೆಲ್ಲರನ್ನು ರಕ್ಷಿಸಿದನು.

ಅನ್ವಯ :—ಪಕ್ಷಚ್ಛಿದಾಗೋತ್ರಭಿದಾ ಆತ್ತಗಂಧಾಃ ಮಹೀಧ್ರಾಃ ಶತಶಃ ಶರಣ್ಯಮ್ ಏನಂ ಪರೇಭ್ಯಃ ಉಪಪ್ಲವಿನಃ ನೃಪಾಃ ಧರ್ಮೋತ್ತರಂ ಮಧ್ಯಮಮ್ ಇವ ಆಶ್ರಯಂತೇ॥

ಆತ್ತಗಂಧಾಃ = ಹೃತಗರ್ವಾಃ—"ಗಂಧೋ ಗಂಧಕ ಆಮೋದೇ ಲೇಶೇ ಸಂಬಂಧ ಗರ್ವಯೋಃ" ಇತಿ ವಿಶ್ವಃ—"ಆತ್ತಗಂಧೋಽಭಿಭೂತಃ ಸ್ಯಾತ್" ಇತ್ಯಮರಃ—ಮಹೀಂ ಧಾರಯಂತೀತಿ ಮಹೀಧ್ರಾಃ ಪರ್ವತಾಃ—ಪರೇಭ್ಯಃ = ಶತ್ರುಭ್ಯಃ— ಉಪಪ್ಲವಿನೋ= ಭಯವಂತೋ—ನೃಪಾ ಧರ್ಮೋತ್ತರು = ಧರ್ಮಪ್ರಧಾನು—ಮಧ್ಯಮಂ = ಮಧ್ಯಮ ಭೂಪಾಲಮಿವ—"ಅರೇಶ್ಚ ವಿಜಿಗೀಷೋಶ್ಚ ಮಧ್ಯಮೋ ಭೂಮ್ಯನಂತರಃ" ಇತಿ ಕಾಮಂದಕಃ—ಆರ್ತಬಂಧುರಿತಿ ಭಾವಃ—ಪಕ್ಷಾನ್ ಛಿನತ್ತಿ ಇತಿ ಪಕ್ಷಚ್ಛಿದಾ—ಗೋತ್ರಾನ್ = ಪರ್ವತಗಳು = ಭಿನತ್ತಿ ಇತಿ ಗೋತ್ರಭಿದ್ ॥

**8. ರಸಾತಲಾದಾದಿ ಭವೇನ ಪುಂಸಾ ।**
**ಭುವಃ ಪ್ರಯುಕ್ತೋದ್ವಹನಕ್ರಿಯಾಯಾಃ ॥**
**ಅಸ್ಯಾಚ್ಛಮಂಭಃ ಪ್ರಲಯಪ್ರವೃದ್ಧಂ ।**
**ಮುಹೂರ್ತವಕ್ತ್ರಾಭರಣಂ ಬಭೂವ ॥ ೮ ॥**

ಆದಿಪುರುಷನಾದ ಮಹಾವಿಷ್ಣುವು ಹಿಂದೆ ಕಲ್ಪಾಂತದಲ್ಲಿ ನಡೆದ ಮಹಾಪ್ರಳಯದಲ್ಲಿ (ಜಲಪ್ರಳಯದಲ್ಲಿ) ಭೂಲೋಕವು ಸಮುದ್ರದಲ್ಲಿ ಮುಳುಗಿಹೋಗಿರಲು, ರಸಾತಳಕ್ಕಿಳಿದು ಅದನ್ನು ಎತ್ತಲು ಆದಿವರಾಹನಾಗಿ ಜನ್ಮತಳೆದನು. ಭೂಮಿಯು ಸಾಗರಜಲದಿಂದ ಆವರಿಸಲ್ಪಟ್ಟು ಮದುಮಗಳು ಮದುವೆಮುಹೂರ್ತದಲ್ಲಿ ಮುಖಪದ್ಮವನ್ನು ಸೀರೆಯ ಸೆರಗಿನ ಅವಗುಂಠನದಿಂದ (ಮುಸುಕುಬಟ್ಟೆ, ಬುರ್ಖಾ) ಮರೆಮಾಡುವಂತೆ, ಭೂಮಿಯನ್ನು ಜಲವು ಆವರಿಸಿತು. ಇದರಿಂದ ಭೂಮಿಯು ಮರೆಯಾಯಿತು. ಆಗ ಮಹಾವಿಷ್ಣುವು ಭೂಮಿಯನ್ನು ಎತ್ತಲು ಆದಿವರಾಹನಾಗಿ ಅವತರಿಸಿದನು. ಆ ಪುರಾಣ ಪುರುಷೋತ್ತಮನು ಆ ಪ್ರಳಯಜಲದಲ್ಲಿ ಅರೆಗಳಿಗೆ ಭಯಂಕರವಾಗಿ ನೀರಾಟ (ಜಲಕ್ರೀಡೆ)ಮಾಡಿದನು. ಕಾಡುಹಂದಿಗೆ ನೀರಿನಲ್ಲಿ ಆಡಲು ಪರಮ ಇಷ್ಟವಷ್ಟೆ. ಅಂತೆಯೇ ಆದಿವರಾಹದ ಪ್ರವೃತ್ತಿಗೆ ಅನುಗುಣವಾಗಿ ತಾನು ಪ್ರಾಣಿಜನ್ಯವಾದ ಲೀಲೆಯನ್ನು ಆಡಿ ಮೆರೆದನು. ಅಂಬುಧಿಯಿಂದ ಆವರಿಸಲ್ಪಟ್ಟ ಭೂಮಿ, ಸಾಗರದ ಜಲರಾಶಿಯಿಂದ ಆವರಿಸಲ್ಪಟ್ಟು ಬೆಳಗುತ್ತಿದ್ದಿತು—ಲಜ್ಜಿತಸ್ತ್ರೀಯ ಅವಗುಂಠನದಂತೆ.

ಅನ್ವಯ :—ಆದಿಭವೇನ ಪುಂಸಾ ರಸಾತಲಾತ್ ಪ್ರಯುಕ್ತೋದ್ವಹನಕ್ರಿಯಾಯಾಃ ಭುವಃ ಪ್ರಲಯಪ್ರವೃದ್ಧಂ ಅಸ್ಯ ಅಚ್ಛಮ್ ಅಂಭಃ ಮುಹೂರ್ತಂ ವಕ್ತ್ರಾಭರಣಂ ಬಭೂವ ॥

ರಸಾತಲಾತ್ಪ್ರಯುಕ್ತೋದ್ವಹನಸಕ್ರಿಯಾಯಾಃ = ಕೃತೋದ್ಧರಣಕ್ರಿಯಾಯಾಃ = ವಿವಾಹಕ್ರಿಯಾಯಾ ಚ ವ್ಯಜ್ಯಂತೇ—ಭುವೋ = ಭೂದೇವತಾಯಾಃ—ವಕ್ತ್ರಾಭರಣಂ = ಲಜ್ಜಾರಕ್ಷಣಾರ್ಥಂ ಮುಖಾವಗುಂಠನಂ ಬಭೂವ—ತದುಕ್ತಮ್—"ಉದ್ಧೃತಾಸಿ ವರಾಹೇಣ ಕೃಷ್ಣೇನ ಶತಬಾಹುನಾ" ಇತಿ ॥

**9. ಮುಖಾರ್ಪಣೇಷು ಪ್ರಕೃತಿಪ್ರಗಲ್ಭಾಃ ।**
**ಸ್ವಯಂ ತರಂಗಾಧರದಾನದಕ್ಷಃ ॥**
**ಅನನ್ಯಸಾಮಾನ್ಯಕಲತ್ರವೃತ್ತಿಃ ।**
**ಪಿಬತ್ಯಸೌ ಪಾಯಯತೇ ಚ ಸಿಂಧೂಃ ॥ ೯ ॥**

**ಹೇ ಪ್ರಾಣನಾಯಕಿ** (ಹೇ ಚತುರೆ), ಸಮುದ್ರರಾಜನು ತನ್ನ ಪತ್ನಿಯರಾದ ನದೀದೇವತೆಗಳನ್ನು ಚುಂಬಿಸುವ ರೀತಿಯೇ ತೀರಾ ಭಿನ್ನವಾದುದು. ಸಾಗರವು ತನ್ನ ತೆರೆಗಳೆಂಬ ತುಟಿಗಳಿಂದ ತನ್ನ ಕಾಂತೆಯರಾದ ನದಿಗಳ ಅಧರಪಾನವನ್ನು ತನ್ನನ್ನು ತಾನು ಚುಂಬಿಸಿಕೊಂಡಂತೆ ತನ್ನ ಮುಖವನ್ನೇ ಅರ್ಪಿಸುತ್ತಿರುವನು ಎಂಬಂತೆ ತೋರುತ್ತಿದೆ. ಅದೇ ತರನಾದ ಉತ್ಸುಕತೆಯನ್ನು (ಉತ್ಕಟೇಚ್ಛೆಯನ್ನು) ನದೀರಾಣಿಯರೂ ತೋರಿಸಿ

ಪ್ರೌಢನಾಯಿಕೆಯರಂತೆ ವರ್ತಿಸಿ, ತಮ್ಮನ್ನು ತಮ್ಮ ಪ್ರಿಯಕರನಾದ (ಸಕಲಕಲಾವಲ್ಲಭನಾದ) ಸಾಗರನು ಪೂರ್ಣವಾಗಿ ಕುಡಿದು ತೃಪ್ತಿಗೊಳ್ಳುವಂತೆ ಪೂರ್ಣವಾಗಿ ತಮ್ಮನ್ನು ಅರ್ಪಿಸುತ್ತಿರುವರು. ಪರಸ್ಪರ ಅಧರಪಾನ ದಂಪತಿಗಳ ಅನ್ಯೋನ್ಯದಾಂಪತ್ಯದ ಸಂಕೇತ. ಹೀಗೆ ಸಮುದ್ರನದಿಗಳು ಒಂದಾಗಿ ಬೆಸೆದು, ದಾಂಪತ್ಯಸುಖವನ್ನು (ಮಿಲನ) ನೂರಕ್ಕೆ ನೂರರಷ್ಟು ಅನುಭವಿಸಿ ಸುಖಿಸುತ್ತಿರುವುವು.

"ಸಿಂಧುಸಮುದ್ರೇ ನದ್ಯಾಂ ಚ" ಇತಿ ವಿಶ್ವಃ—"ನ ಪಾದಮ್ಯಾಙ್ಯಮಾ" ಇತ್ಯಾದಿನಾ ಪಿಬತೇಃ ಣ್ಯಂತಾನ್ನಿತ್ಯಂ ಪರಸ್ಮೈಪದನಿಷೇಧಃ—"ಗತಿಬುದ್ಧಿಪ್ರತ್ಯವಸಾನಾರ್ಥ" ಇತ್ಯಾದಿನಾ ಸಿಂಧೂನಾಂ ಕರ್ಮತ್ವಮ್-ದಂಪತ್ಯೋರ್ಯುಗಪತ್ಪರಸ್ಪರಾಧರಪಾನಮನನ್ಯಸಾಧಾರಣಮಿತಿ ಭಾವಃ-ಪ್ರೌಢನಾಯಿಕಾ × ಮುಗ್ಧಾ—ಪ್ರೌಢನಾಯಿಕೆಯರು ತಮ್ಮ ಕಾಮಚೇಷ್ಟೆಗಳಲ್ಲಿ ಪ್ರಬಲವಾಗಿ,ಮುಚ್ಚುಮರೆಯಿಲ್ಲದೆ (ಸ್ವೇಚ್ಛೆಯಿಂದ) ವರ್ತಿಸುವರು.

**10. ಸಸತ್ತ್ವಮಾದಾಯ ನದೀಮುಖಾಂಭಃ ।**
**ಸಂಮೀಲಯಂತೋ ವಿವೃತಾನನತ್ವಾತ್ ॥**
**ಅಮೀ ಶಿರೋಭಿಸ್ತಿಮಯಃ ಸರಂಧ್ರೈಃ ।**
**ಊರ್ಧ್ವಂ ವಿತನ್ವಂತಿ ಜಲಪ್ರವಾಹಾನ್** ॥ ೧೦ ॥

ಹೇ ಭಾಗ್ಯವಂತಳೆ, ನೋಡಿಲ್ಲಿ, ತಿಮಿಂಗಿಲದ ನೆತ್ತಿಯಿಂದ ಚಿಮ್ಮುತ್ತಿರುವ ಜಲಧಾರೆಯನ್ನು ನೋಡು. ನಾನಾ ಜಾತಿಯ ಮೀನುಗಳಿಂದ (ಜಲಚರಗಳಿಂದ) ತುಂಬಿರುವ ನದಿಯು ತನ್ನ ಪತಿಯಾದ ಸಾಗರವನ್ನು ಸಂಗಮಿಸುತ್ತಿರಲು ಶತಯೋಜನ ವಿಸ್ತೀರ್ಣವಾದ ತಿಮಿ, ತಿಮಿಂಗಿಲಗಳು ಅವುಗಳನ್ನು ನೋಡಿದು ಸುಂಗಲು ಅಗಲವಾಗಿ ತೆರೆದ ಬಾಯಿಗಳನ್ನು ಒಡ್ಡಿ ಓಡೋಡಿಬರುತ್ತಿವೆ. ಆ ಮೀನುಗಳೊಂದಿಗೆ ಜಲವನ್ನು ಕುಡಿದು ಕೂಡಲೇ ಬಾಯನ್ನು ಮುಚ್ಚಿದೊಡನೆಯೇ, ಅವುಗಳ ತಲೆಯ ರಂಧ್ರಗಳಿಂದ ನೀರು (ತಲೆಯ ತೂತುಗಳಿಂದ) ನೀರು, ಕಾರಂಜಿಯಂತೆ ಎತ್ತರಕ್ಕೆ ಹಾರುತ್ತಿರುವುದನ್ನು ಕಂಡು ಹೃದಯವು ಪುಲಕಿಸುತ್ತಿದೆ. ಆನಂದವನ್ನು ಉಂಟುಮಾಡುತ್ತಿರುವ ದೃಶ್ಯವನ್ನು ನೋಡು ಕಾಂತೆ. ಇದೆಂತಹ ಸುಂದರ ನೋಟ! ಇದು ಹೋಳಿಹಬ್ಬದ ಸಮಯ ಸಮ್ಮೋರ ಜವ್ವನಿಗರು ಜಲಯಂತ್ರದಿಂದ ಜಲಕ್ರೀಡೆಯಾಡುವ ದೃಶ್ಯವನ್ನು ಮನಸ್ಸಿಗೆ ತರುತ್ತಿದೆ.

ತಿಮಯೋ=ಮತ್ಸ್ಯವಿಶೇಷಾಃ—ತದುಕ್ತಮ್— "ಅಸ್ತಿಮತ್ಸ್ಯಸ್ತಿಮಿರ್ನಾಮಶತಯೋಜನಮಾಯತಃ" ಇತಿ—ವಿವೃತಾನನತ್ವಾ = ದ್ವ್ಯಾತ್ತಮುಖತ್ವಾದ್ಧೇತೋಃ—ಆನನವಿವೃತ್ತೇತ್ಯರ್ಥಃ—ಯಾನ್ತ ಚಂಚುಪುಟಾನಿ ಸಂಘಟ್ಟಯಂತಃ ಸಂತಃ—ಶಿರೋಭಿರ್ಜಲಪ್ರವಾಹಾನೂರ್ಧ್ವಂ ವಿತನ್ವಂತಿ—ಜಲಯಂತ್ರಕ್ರೀಡಾಸಮಾಧಿರ್ವ್ಯಜ್ಯತೇ ॥

**11. ಮಾತಂಗನಕ್ರೈಃ ಸಹಸೋತ್ಪತದ್ಭಿಃ ।**
**ಭಿನ್ನಾನ್ದ್ವಿಧಾ ಪಶ್ಯ ಸಮುದ್ರಫೇನಾನ್ ॥**
**ಕಪೋಲಸಂಸರ್ಪಿ ಯ ಏಷಾಂ ।**
**ವ್ರಜಂತಿ ಕರ್ಣಕ್ಷಣಚಾಮರತ್ವಮ್** ॥ ೧೧ ॥

ಹೇ ಮಂದಸ್ಮಿತಳೆ, ನೋಡು, ಸಮುದ್ರದ ಮೇಲ್ಭಾಗದಲ್ಲಿ ಹರಡಿರುವ ಫೇನಾಂಬು ರಾಶಿಯನ್ನು ನೋಡು. ಆ ನೀರಾನೆಗಳು (ಜಲಮಾತಂಗನಕ್ರಗಳು) (ಗಜನಕ್ರಂಗಳೆದ್ದು ಬಿದ್ದ ಅಂಬುಧಿಯು) ಅಂಬುಧಿಯ ಮೇಲೆ ಬಿದ್ದು ಎದ್ದು ಚಲಿಸುವಾಗ ಸಾಗರದ ಬಿಳಿ ನೊರೆಯು ಎರಡು ವಿಭಾಗವಂತೆ (ಇಬ್ಭಾಗವಾದಂತೆ) ತೋರುತ್ತಿದೆ. ಆಗ ಒಂದು ಕ್ಷಣ (ಅರೆಘಳಿಗೆ) ಬಿಳಿನೊರೆಯ ರಾಶಿ (ಫೇನರಾಶಿ) ಗಜನಕ್ರಗಳ ಕಿವಿಯನ್ನು ಅಂಟಿಕೊಂಡು ಕೆನ್ನೆಯನ್ನು ಆವರಿಸಿರುವ ಚಾಮರದಂತೆ ಎಸೆಯುವುದು. ಆ ಚಾಮರವು ಅಗಲವಾದ ಮೊರದಂತೆಯಿರುವ ಆನೆಯ ಕಿವಿಯನ್ನು ಹೋಲುತ್ತ ಎಸವವುದು (ಶೋಭಿಸುವುದು).

ಮಾತಂಗೇತಿ—ಸಪದೋತ್ಪತದ್ಭಿರ್ಮಾತಂಗನಕ್ರೈಃ ಮಾತಂಗಾಕಾರೈರ್ಗ್ರಾಹೈರ್ದ್ವಿಧಾ ಭಿನ್ನಾನ್ಸಮುದ್ರ ಫೇನಾನ್ ಪಶ್ಯ—ಯೇ ಫೇನಾಃ ಏಷಾಂ ಜಲಮಾತಂಗನಕ್ರಾಣಾಂ ಕಪೋಲೇಷು ಸಂಸರ್ಪಿತಯಾ ಸಂಸರ್ಪಿಣಃ ಸ ಹೇತುನಾ ಕರ್ಣೇಷು ಕ್ಷಣಂ ಚಾಮರತ್ವಂ ಪ್ರಪನ್ನಾ—ಮಾತಂಗನಕ್ರೈಃ=ಮಾತಂಗಾಕಾರೈಃ ನಕ್ರೈಃ=ದೊಡ್ಡ ಜಾತಿಯ ಮೊಸಳೆಗಳು.

**12. ವೇಲಾನಿಲಾಯ ಪ್ರಸೃತಾ ಭುಜಂಗಾ ।**
**ಮಹೋರ್ಮಿ ವಿಸ್ಫೂರ್ಜಥು ನಿರ್ವಿಶೇಷಾಃ ॥**
**ಸೂರ್ಯಾಂಶುಸಂಪರ್ಕಸಮೃದ್ಧರಾಗೈಃ ।**
**ವ್ಯಜ್ಯಂತ ಏತೇ ಮಣಿಭಿಃ ಫಣಸ್ಥೈಃ** ॥ ೧೨ ॥

ಹೇ ಜಲಜಾಕ್ಷಿ, ಈ ಸಾಗರದ ತೀರದಲ್ಲಿ ಮಲಗಿರುವ ಸಮುದ್ರದ ಹಾವುಗಳು ಮೇಲೆ ಅಪ್ಪಳಿಸಿ ಬರುತ್ತಿರುವ ದೊಡ್ಡ ದೊಡ್ಡ ಸಮುದ್ರದ ಅಲೆಗಳನ್ನೇ ಹೋಲುತ್ತ ಅವುಗಳಂತೆಯೇ ತೋರುತ್ತವೆ. ಈ ಹಾವುಗಳು ಸಮುದ್ರದ ಗಾಳಿಗೆ ಮೈಯೊಡ್ಡಿ [illegible] ಸಮುದ್ರದ ಬೀಸುಗಾಳಿಯಲ್ಲಿ ಉಸಿರಾಡುತ್ತವೆ. ಈ ಅಹಿಗಳು ಗಾಳಿಯನ್ನು ಉಣ್ಣಲು ಹೀಗೆ ಸಮುದ್ರತೀರದಲ್ಲಿ ಮಲಗಿರುವುವು. ಆದರೆ ಅವುಗಳ ಹೆಡೆಯ ಮೇಲಿರುವ ಮಣಿಯು (ಕಾಂತಿಯುತವಾದ) ಸೂರ್ಯನ ರಶ್ಮಿಯ ಮಿಲನದಿಂದ ಉಂಟಾದ ಹೆಚ್ಚಿನ ಕಾಂತಿಯಿಂದ ಪ್ರಜ್ವಲಿಸುತ್ತಿದೆ. ಈ ಮಣಿಯು (ಫಣಾಮಣಿ, ಮಾಣಿಕ್ಯ, ರತ್ನ) ದೆಸೆಯಿಂದಾಗ ಆ ಫಣಿಗಳು ಸಮುದ್ರದ ಅಲೆಗಳಿಂದ ಪ್ರತ್ಯೇಕಿಸಿ ತೋರಿಸಬಹುದಾಗಿದೆ (ರವಿಕಿರಣಸಂಗದಿಂದುಜ್ವಲಿಸಿ ಫಣಿಗರಿಸೆಯೆ).

ಅನ್ವಯ :—ವೇಲಾನಿಲಾಯ ಪ್ರಸೃತಾಃ ಮಹೋರ್ಮಿವಿಸ್ಫೂರ್ಜಥು ನಿರ್ವಿಶೇಷಾಃ ಏತೇ ಭುಜಂಗಾಃ ಸೂರ್ಯಾಂಶುಸಂಪರ್ಕಸಮೃದ್ಧರಾಗೈಃ ಫಣಸ್ಥೈಃ ಮಣಿಭಿಃ ವ್ಯಜ್ಯಂತೇ ॥

ವೇಲಾನಿಲಂ ಪಾತುಮಿತಿ ಶೇಷಃ—"ಕ್ರಿಯಾರ್ಥೋಪಪದಸ್ಯ" ಇತ್ಯಾದಿನಾ ಚತುರ್ಥೀ—ಪ್ರಸೃತಾಃ = ನಿರ್ಗತಾಃ—ಮಹೋರ್ಮೀಣಾಂ ವಿಸ್ಫೂರ್ಜಥುರಾವಿರ್ಭಾವಃ—"ಟ್ವಿತೋಥುಚ್" ಇತ್ಯಥುಚ್ ಪ್ರತ್ಯಯಃ (ಪಾಣಿನಿ) ತಸ್ಮಿನ್ನಿರ್ವಿಶೇಷಾ ದುರ್ಗ್ರಹಭೇದಾ ಏತೇ ಭುಜಂಗಾಃ ಸೂರ್ಯಾಂಶುಸಂಪರ್ಕೇಣ—ಸಮೃದ್ಧರಾಗೈಃ = ಪ್ರವೃದ್ಧಕಾಂತಿಭಿಃ ಫಣಸ್ಥೈರ್ಮಣಿಭಿರ್ವ್ಯಜ್ಯಂತ = ಅಭಿವ್ಯಜ್ಯಂತೇ ॥

**13. ತವಾಧರಸ್ಪರ್ಧಿಷು ವಿದ್ರುಮೇಷು ।**
**ಪರ್ಯಸ್ತಮೇತತ್ ಸಹಸೋರ್ಮಿವೇಗಾತ್ ॥**
**ಊರ್ಧ್ವಾಂಕುರಪ್ರೋತಮುಖಂ ಕಥಂಚಿತ್ ।**
**ಕ್ಲೇಶಾದಪಕ್ರಾಮತಿ ಶಂಖಯೂಥಮ್ ॥ ೧೩ ॥**

ಹೇ ಕಂಬುಕಂಠಿನಿ, ಹೇ ಪ್ರಿಯೆ, ನಿನ್ನ ಹವಳದಂತಹ ತುಟಿಗಳಿಗೆ ಸಾಟಿಯಾದ ಚೆಂಬವಳದ ಬಣ್ಣದ ಶಂಖಗಳನ್ನು ನೋಡು. ಅವುಗಳು ಸಾಲುಸಾಲಾಗಿ ವೇಗದಿಂದ ಉರುಳುತ್ತ, ಉರುಳುತ್ತ (ಹೊರಳುತ್ತ) ಬಂದು ಅವರ ಮೇಲ್ಮೊಗದ ಅಂಕುರವು (ಕುಡಿಯು) ಶಂಖಗಳ, ಹವಳಗಳ ಬಂಡೆಗಳನ್ನು ಬಂದು ಕಚ್ಚುವುವು. ಅನಂತರ ನೀರು ಹಿಂದಕ್ಕೆ ಸರಿಯಲು ಬಹಳ ಕಷ್ಟದಿಂದ ಹಿಂದಕ್ಕೆ ಸರಿಯುತ್ತಿವೆಯೆಂಬಂತೆ ಮೆಲ್ಲಮೆಲ್ಲನೆ ಮರಳದಿಣ್ಣೆಗಳಲ್ಲಿ ಜಾರುತ್ತ ಕೆಳಗಡೆ ಸರಿಯುತ್ತಿವೆ.

ತವಾಧರಸ್ಪರ್ಧಿಷು = ಅಧರಸದೃಶೇತ್ಯರ್ಥಃ—ವಿದ್ರುಮೇಷು = ಪ್ರವಾಲೇಷು—ಸಹಸೋರ್ಮಿವೇಗಾತ್ಪರ್ಯಸ್ತಂ ಪ್ರೋತ್ ಕ್ಷಿಪ್ತ ಮೂರ್ಧ್ವಾಂಕುರೈರ್ವಿದ್ರುಮ ಪ್ರರೋಹೈಃ—ವಿಲಂಬ್ಯಾ ಪಸರತೀತ್ಯರ್ಥಃ—ಅಧರಸ್ಪರ್ಧಿಷು = ಅಧರೇಣ ಸ್ಪರ್ಧಂತೇ ಇತಿ ಅಧರಸ್ಪರ್ಧಿನಃ ತೇಷು—ಊರ್ಧ್ವಾಂಕುರ = ಊರ್ಧ್ವಾಶ್ಚ ಅಂಕುರಾಃ ಚ ತೇಷು ಪ್ರೋತಂ ಮುಖಂ ಯಸ್ಯ ॥

**14. ಪ್ರವೃತ್ತಮಾತ್ರೇಣ ಪಯಾಂಸಿ ಪಾತುಮ್ ।**
**ಆವರ್ತವೇಗಾದ್ಭ್ರಮತಾ ಘನೇನ ॥**
**ಆಭಾತಿ ಭೂಯಿಷ್ಠಮಯಂ ಸಮುದ್ರಃ ।**
**ಪ್ರಮಥ್ಯಮಾನೋ ಗಿರಿಣೇವ ಭೂಯಃ ॥ ೧೪ ॥**

ಹೇ ಭಾಮಿನಿ, ಸಮುದ್ರದ ನೀರನ್ನು ಕುಡಿಯಲು ಬಾಯಾರಿ ಬರುತ್ತಿರುವ ಮೋಡಗಳ ರಾಶಿಗಳನ್ನು ನೋಡು. ಅವುಗಳು ಸಮುದ್ರದ ಸುಳಿಯ ವೇಗಕ್ಕೆ ಸಿಲುಕಿ ಆ ಮುಗಿಲುಗಳು ತಾವೂ ತಿರ್ರನೆ ಬುಗರಿಯಂತೆ ತಿರುಗುತ್ತಿವೆ. ಹಿಂದೆ ಕೃತಯುಗದ ಪ್ರಾರಂಭದಲ್ಲಿ ಅಮರರೂ ರಾಕ್ಷಸರರೂ ಸೇರಿ ಕ್ಷೀರಸಾಗರವನ್ನು ಕಡೆದರಲ್ಲವೆ. ಆಗ ಅವರು ಮಂದರ ಪರ್ವತವನ್ನು ಕಡೆಗೋಲನ್ನಾಗಿ ಮಾಡಿದರು. ವಾಸುಕಿಯೆಂಬ ಸರ್ಪರಾಜನನ್ನು ಹಗ್ಗವನ್ನಾಗಿ ಮಾಡಿ ಮೊಸರನ್ನು ಕಡೆದಂತೆ ಸಾಗರವನ್ನು (ಕಡಲನ್ನು) ಕಡೆದರು. ಬಲವಂತರಾದ ಅವರು ಬಹಳ ವೇಗದಿಂದ ಕಡೆಯುತ್ತಿರಲು ಮಂದರಪರ್ವತವು ಬಹಳ ವೇಗದಿಂದ ಸುತ್ತುತ್ತಿದ್ದಂತೆ ಈ ಮೋಡಗಳು ಎರಡನೆಯ ಮಂಥನಕ್ಕೆ ಸಿಲುಕಿತೆಂಬಂತೆ. ಮರಳಿ ಮೂವರದ ಮಾಳ್ಕೆಯನ್ನು ಮಾಡಿ ತೋರುವಂತೆ ಅತಿಶಯದಿಂದ ತಿರುಗುತ್ತಿವೆ. ಕಡಲ ಮೇಲ್ಗಡೆ ಕಪ್ಪಾದ ಮೇಘಗಳು ಚಕ್ರಾಕಾರದಲ್ಲಿ ಗಿರಿಯಂತೆ ತಿರುಗುತ್ತಲಿರುವುದನ್ನು ನೋಡು. ರಮಣಿ (ನೋಡು ಕಾಂತೆ).

ಪಯಾಂಸಿ ಪಾತುಂ ಪ್ರವೃತ್ತ ಏವ ಪ್ರವೃತ್ತಮಾತ್ರೋ ನ ತು ಪೀತವಾನ್, ತೇನ ಆವರ್ತವೇಗಾತ್—"ಸ್ಯಾದಾವರ್ತೋಽಂಭಸಾಂ ಭ್ರಮಃ" ಇತ್ಯಮರಃ–ಗಿರಿಣಾ=ಮಂದರೇಣ—ಪ್ರಮಥ್ಯಮಾನ ಇವ ಭೂಯಿಷ್ಠಮತ್ಯಂತಮಾಭಾತಿ ॥

**15. ದೂರಾದಯಶ್ಚಕ್ರನಿಭಸ್ಯ ತನ್ವೀ ।**
**ತಮಾಲತಾಲೀವನರಾಜಿನೀಲಾ ॥**
**ಆಭಾತಿ ವೇಲಾ ಲವಣಾಂಬುರಾಶೇಃ ।**
**ಧಾರಾನಿಬದ್ಧೇವ ಕಲಂಕರೇಖಾ ॥ ೧೫ ॥**

ಹೇ ಮುವಿರಾಕ್ಷಿ, ವೈದೇಹಿ, ನಾವು ಆಕಾಶಮಾರ್ಗದಲ್ಲಿ ಯಾನಮಾಡುತ್ತಾ ಸುತ್ತಲೂ ನೋಡುತ್ತಿರಲು ದೂರದಲ್ಲಿ ತೋರುವ ಉಪ್ಪುನೀರಿನ ಕಡಲಿನ (ಲವಣಾಂಬುರಾಶಿ) ತೀರಪ್ರದೇಶವು ಲೋಹದ ಗಾಲಿಯಂತೆ. ಉಕ್ಕಿನ (ಕಬ್ಬಿಣದ) ಚಕ್ರದಂತೆ ಕಣ್ಣಿಗೆ ಅಂದವಾಗಿ ತೋರುವುದು ಆ ತೀರಪ್ರದೇಶದ ಸುತ್ತಲೂ ಬೆಳೆದಿರುವ ಹೊಂಗೆ (ತಮಾಲ) ಮತ್ತು ತಾಳೆಮರಗಳ ವನರಾಜಿ ನೀಲಬಣ್ಣದಿಂದ ಕಂಗೊಳಿಸುತ್ತ, ಗಾಲಿಯ ಸುತ್ತ ಅಂಟಿದ ಕಲಂಕರೇಖೆಯು(ಮಾಲಿನ್ಯರೇಖೆಯಂತೆ)ಹೋಲುವುದು. ಕಬ್ಬಿಣದ ಚಕ್ರದ ಸುತ್ತಲೂ ತೆಳುವಾದ ತುಕ್ಕುಹಿಡಿದಂತೆ. ನೀಲಬಣ್ಣದ ಗೆರೆಯಂತೆ ತೋರುತ್ತಿರುವ ತಮಾಲ ಮತ್ತು ತಾಳೆಗಳ ವನರಾಜಿಯನ್ನು ನೋಡು. ಸಾಲುಸಾಲಾಗಿ ಬೆಳೆದಿರುವ ತರುಲತೆಗಳನ್ನು ನೋಡು, ಸ್ಮಿತೇ.

ಅಯಶ್ಚಕ್ರನಿಭಸ್ಯ ಲವಣಾಂಬುರಾಶೇರ್ದೂರಾತ್ತನ್ವ್ಯಣುತ್ವೇನಾವಭಾಸಮಾನಾ ತಮಾಲತಾಲೀವನರಾಜಿಭಿರ್ನೀಲಾ ವೇಲಾ ತೀರಭೂಮಿರ್ಧಾರಾ ನಿಬದ್ಧಾ ಚಕ್ರಾಶ್ರಿತಾ— ಕಲಂಕರೇಖಾ = ಮಾಲಿನ್ಯರೇಖೇವ—"ಮಾಲಿನ್ಯರೇಖಾ ತು ಕಲಂಕಮಾಹುಃ" ಇತಿ ದಂಡೀ ॥

**16. ವೇಲಾನಿಲಃ ಕೇತಕರೇಣುಭಿಸ್ತೇ ।**
**ಸಂಭಾವಯತ್ಯಾನನಮಾಯತಾಕ್ಷಿ ॥**
**ಮಾಮಕ್ಷಮಂ ಮಂಡನಕಾಲಹಾನೇ ।**
**ವೇತ್ತೀವ ಬಿಂಬಾಧರಬದ್ಧತೃಷ್ಣಮ್ ॥ ೧೬ ॥**

ಓ ಆಯತಾಕ್ಷಿ (ಮೃಗಾಕ್ಷಿ), ಓ ಚೆನ್ನೆ, ನಿನ್ನ ವದನವನ್ನು, ಕರಾವಳಿಯಿಂದ ಬೀಸುವ (ತುಂಬಿಲರು) ಕಡಲ ಗಾಳಿಯು ನಿನ್ನನ್ನು ಸಿಂಗರಿಸುವ ಸಲುವಾಗಿ ಬೀಸುತ್ತ ಕೇತಕೀ ಪುಷ್ಪಗಳ ಪರಾಗರೇಣುಗಳನ್ನು ನಿನ್ನ ಮುಖದ ಮೇಲೆ ಸಣ್ಣಗೆ ಚೆಲ್ಲುತ್ತಿರುವನು. ನಾನು ನಿನ್ನಿಂದ ದೂರವಿರಲು ಬಯಸದೆ ನಿನ್ನ ಬಿಂಬಾಧರಬದ್ಧತೃಷ್ಣನಾಗಿ, ನಿನ್ನ ಚೆಂದುಟಿಯನ್ನು ಬಯಸಿ (ಮುತ್ತನ್ನು ಬಯಸಿ) ಮಂಡನವಿಳಂಬವನ್ನು ಸಹಿಸದೆ ನಿನ್ನ ಸಾನ್ನಿಧ್ಯವನ್ನು ಬಯಸುತ್ತಿರುವೆನು ಎಂಬುದಕ್ಕೆ ಈ ವೇಲಾನಿಲನೇ (ಕಡಲ ಗಾಳಿ) ಸಾಕ್ಷಿಯಾಗಿರುವನು. ನನ್ನ ಮನಸ್ಸೆಳೆತವನ್ನು (ಹೃದಯದ ತುಡಿತವನ್ನು) ತಿಳಿದು ಕೇತಕೀಧೂಳಿಯಿಂದ ನಿನ್ನ ಮುಖಚಂದ್ರಮನನ್ನು ಸಿಂಗರಿಸುತ್ತಿರುವನು.

ಹೇ ಆಯತಾಕ್ಷಿ! "ವೇಲಾಸ್ಯಾತ್ತೀರನೀರಯೋಃ" ಇತಿ ವಿಶ್ವಃ—ವೇಲಾನಿಲಃ ಕೇತಕರೇಣುಭಿಸ್ತೇ ಆನನಂ ಸಂಭಾವಯತಿ ಉತ್ಪ್ರೇಕ್ಷ್ಯತೇ—ಬಿಂಬಾಧರೇ ಬದ್ಧತೃಷ್ಣಾಂ ಮಾಂ ಮಂಡನೇನಾಭರಣಕ್ರಿಯಯಾ ಕಾಲಹಾನಿವಿಲಂಬಸ್ತಸ್ಯಾ ಅಕ್ಷಮಮಸಹಮಾನಮ್

—ಶರ್ವಾಣಿ ಷಷ್ಠಿ—ನೋಚೇತ್ ಕಥಂ ಸಂಭಾವಯೇದಿತ್ಯರ್ಥಃ—ಸಂಭಾವತಿ = ಮಂಡಯಂತಿ = ಸಿಂಗರಿಸು—ಆಯತಾಕ್ಷಿ = ಆಯತೇ ಅಕ್ಷಿಣೀ ಯಸ್ಯಾಃ ಸಾ ಆಯತಾಕ್ಷೀ—ಬಿಂಬಾಧರ = ಬಿಂಬಾಕಾರೋ ಬಿಂಬತುಲ್ಯೋ ವಾ ಅಧರಃ ಬಿಂಬಾಧರಃ ॥

**17. ಏತೇ ವಯಂ ಸೈಕತಭಿನ್ನಶುಕ್ತಿಃ ।**
**ಪರ್ಯಸ್ತಮುಕ್ತಾಪಟಲಂ ಪಯೋಧೇಃ ॥**
**ಪ್ರಾಪ್ತಾ ಮುಹೂರ್ತೇನ ವಿಮಾನವೇಗಾತ್ ।**
**ಕೂಲಂ ಫಲಾವರ್ಜಿತ ಪೂಗಮಾಲಮ್** ॥ ೧೭ ॥

ಓ ಮನಃಪ್ರಿಯಳೆ, ನಾವು ಈ ದೇವನಿರ್ಮಿತ ಪುಷ್ಪಕವಿಮಾನದಲ್ಲಿ ಅದೆಷ್ಟು ಬೇಗನೆ ಸಮುದ್ರತೀರದ ಮೇಲ್ಭಾಗಕ್ಕೆ ಬಂದು ಸೇರಿದೆವು. ಕೇವಲ ಒಂದು ಮುಹೂರ್ತಕಾಲದಲ್ಲಿ (ಒಂದರೆಕ್ಷಣದಲ್ಲಿ) ಕಡಲ ದಡವನ್ನು ಸೇರಿದೆವು. ಈ ಸಾಗರದ ಕರಾವಳಿಯಲ್ಲಿರುವ (ಕಿನಾರೆಯಲ್ಲಿರುವ) ಮರಳಿನ ರಾಶಿಯ ಮೇಲೆ ಚಿಪ್ಪೊಡೆದು ಚೆಲ್ಲಿರುವ ಅಸಂಖ್ಯಾತ ಮುತ್ತುಗಳು ಕಣ್ಣಿಗೆ ಕಾಣಿಸುತ್ತ ವಸುಂಧರೆಯ ಸೌಂದರ್ಯವನ್ನು ಹೆಚ್ಚಿಸಿವೆ ನೋಡು. ಈ ವಿಮಾನದಲ್ಲಿ ಕುಳಿತು ಫಲಭರದೆ ಬಾಗಿರುವ ಅಡಿಕೆಮರಗಳ ಸಾಲುಸಾಲಾಗಿ ಕಂಗೊಳಿಸುತ್ತಿರುವ ಈ ದೃಶ್ಯ ಅದೆಷ್ಟು ಮನೋಜ್ಞವಾಗಿದೆ. ರಮಣಿ (ಗೊನೆಯ ಭಾರಕೆ ಬಳುಕುವ ಅಡಕೆತೋಟಗಳು),

ಏತೇ ವಯಂ ಸೈಕತೇಷು—ಭಿನ್ನಾಭಿಃ = ಸ್ಫುಟಿತಾಭಿಃ—ಶುಕ್ತಿಭಿಃ ಪರ್ಯಸ್ತಾನಿ ಪರಿತಃ ಕ್ಷಿಪ್ತಾನಿ ಮುಕ್ತಾನಾಂ ಪಟಲಾನಿ ಯಸ್ಮಿಂಸ್ತತ್ತಥೋಕ್ತಂ—ಫಲೈರಾವರ್ಜಿತಾ = ಆನಮಿತಾ—ಪೂಗಮಾಲಾ ಯಸ್ಮಿಂಸ್ತತ್ ಪಯೋಧೇಃ ಕೂಲಂ ವಿಮಾನವೇಗಾನ್ ಮುಹೂರ್ತೇನ ಪ್ರಾಪ್ತಾಃ ॥

**18. ಕುರುಷ್ವ ತಾವತ್ ಕರಭೋರು ಪಶ್ಚಾತ್ ।**
**ಮಾರ್ಗೇ ಮೃಗಪ್ರೇಕ್ಷಿಣಿ ದೃಷ್ಟಿಪಾತಮ್ ॥**
**ಏಷಾ ವಿದೂರೀ ಭವತಃ ಸಮುದ್ರಾತ್ ।**
**ಸಕಾನನಾ ನಿಷ್ಪತತೀವ ಭೂಮಿಃ** ॥ ೧೮ ॥

ಎಲೆ ಕರಭೋರು (ಕರಭೋರು = ಆನೆಯ ಸೊಂಡಿಲಿನಂತೆ ಅಂದವಾದ ಕೈಕಾಲುಗಳುಳ್ಳ ಚೆಲುವೆ), ಎಲೆ ಜಿಂಕೆಕಣ್ಣಿನ ಹೆಣ್ಣೆ (ಹರಿಣನಯನೆ, ಮೃಗನಯನೆ), ನೀನೊಮ್ಮೆ ಹಿಂದಿರುಗಿ ನೋಡು (ಜಿಂಕೆಕಣ್ಣಿನ ಹೆಣ್ಣೆ ನೋಡು, ನೋಟವ ಬೀರು). ನಾವು ಈಗಾಗಲೆ ದಾಟಿಬಂದಿರುವ ದಾರಿಯನ್ನು ಮತ್ತೊಮ್ಮೆ ತಿರುಗಿನೋಡು. ನೋಟವ ಬೀರು. ನಾವು ವಿಮಾನದಲ್ಲಿ ಕುಳಿತು ಮುಂದೆ ಮುಂದೆ ಹೋದಂತೆ ಕಾನನಸಮೇತವಾದ ಭೂಭಾಗವು ಹಿಂದೆ ಉಳಿದ ಸಮುದ್ರದಿಂದ ಹೊರಹೊರಟಂತೆ ತೋರುತ್ತಿದೆಯಲ್ಲವೆ (ನೂಲಿನ ಉಂಡೆಯಿಂದ ದಾರ ಹೊರಟಂತೆ). ಈಗ ಸಾಗರವು ನಮ್ಮಿಂದ ಬಹಳ ದೂರ ಹಿಂದೆ ಉಳಿದಿದೆ ಎಂದು ಸ್ಪಷ್ಟವಾಗಿ ತೋರುತ್ತಿದೆ (ಹಿಂಮುಳಿದ ಕಡಲಿಂದ ಉಣ್ಮುವೋಲ್ ಇಂದು).

"ಮಣಿಬಂಧಾದಾ ಕನಿಷ್ಠಂ ಕರಸ್ಯ ಕರಭೋಽವಹಿಃ" ಇತ್ಯಮರಃ—ಕರಭ ಇವೋರೂ ಯಸ್ಯಾಃ ಸಾ ಕರಭೋರ್ರೂಃ—ಊರೂತ್ತರಪದಾದೌಪಮ್ಯೇ" (ಪಾಣಿನಿ) ಇತ್ಯೂಙ್—ತಸ್ಯಾಃ ಸಂಬುದ್ಧಿರ್ಹೇಕರಭೋರು—ಮೃಗವತ್ ಪ್ರೇಕ್ಷತ ಇತಿ ವಿಗ್ರಹಃ—ಹೇ ಮೃಗಪ್ರೇಕ್ಷಿಣೇ—ಏಷಾ ಸ ಕಾನನಾ ಭೂಮಿರ್ವಿದೂರೀ ಭವತಃ ಸಮುದ್ರಾ ನಿಷ್ಪತತಿ ನಿಷ್ಕ್ರಾಮತೀವ—ವಿದೂರಶಬ್ದಾ ವಿಶೇಷ್ಯ ನಿಘ್ನಾತ್ಸ್ತ್ರೀವಃ ॥

**19. ಕ್ವಚಿತ್ಪಥಾ ಸಂಚರತೇ ಸುರಾಣಾಂ ।**
**ಕ್ವಚಿದ್ಘನಾನಾಂ ಪತತಾಂ ಕ್ವಚಿಚ್ಚ ॥**
**ಯಥಾ ವಿಧೋ ಮೇ ಮನಸೋಽಭಿಲಾಷಃ**
**ಪ್ರವರ್ತತೇ ಪಶ್ಯ ತಥಾ ವಿಮಾನಮ್ ॥ ೧೯ ॥**

ಹೇ ಪುನೀತೆ (ಹೇ ನಿರ್ಮಲೆ, ಹೇ ಪಾವನಚರಿತೆ), ನೋಡಿದೆಯೋ, ಈ ದೇವನಿರ್ಮಿತ ರಥವು ಓಡಾಡುವ (ಹಾರಾಡುವ) ರೀತಿಯನ್ನು ಅವಲೋಕಿಸು. ಈ ಪುಷ್ಪಕವು ನನ್ನ ಮನದ ಇಚ್ಛೆಯಂತೆ, ನನ್ನ ಮನದ ಅಭಿಲಾಷೆಯಂತೆ ಸಂಚರಿಸುತ್ತಿದೆ. ಒಮ್ಮೆ ಇದು ದೇವತೆಗಳು ಚರಿಸುತ್ತಿರುವ ಸುರಪಥದಲ್ಲಿ ಓಡಾಡುವುದು. ಮತ್ತೊಮ್ಮೆ (ಮರುಕ್ಷಣವೆ) ಮೋಡಗಳು (ಮೇಘಗಳು) ಸಂಚರಿಸುವ ಘನಪಥದಲ್ಲಿ (ವಾಯುಮಾರ್ಗ) ಯಾನ ಮಾಡುತ್ತಿದೆ. ಕೆಲವೊಮ್ಮೆ ಪಕ್ಷಿಗಳು (ವಿಹಗಗಳು) ಸಂಚರಿಸುವ ಸಾಮಾನ್ಯ ಪಥದಲ್ಲಿ (ಖಗಪಥದಲ್ಲಿ) ಹೀಗೆ ಒಟ್ಟು ಮೂರು ಪಥಗಳಲ್ಲಿ ನಾನು ಹೇಗ ಎಣಿಸುವೆನೋ ಹಾಗೆ ಚರಿಸುತ್ತಾ ನಮಗೆ ಆನಂದವನ್ನು ತರುತ್ತಿದೆ.

ಕ್ವಚಿದಿತಿ—ಹೇ ದೇವಿ ವಿಮಾನಂ=ಪುಷ್ಪಕಂ—ಮೇ ಮನಸೋಽಭಿಲಾಷೋ—ಕ್ವಚಿತ್ ಸುರಾಣಾಂ ಪಥಾ ಸಂಚರತೇ—ಕ್ವಚಿದ್ಘನಾನಾಂ ಕ್ವಚಿತ್ಪತತಾಂ ಪಕ್ಷಿಣಾಂ ಪಥಾ ಸಂಚರತೇ—ಸುರಾಣಾಂ ಪಥಾ = ದೇವತೆಗಳ ಮಾರ್ಗ = ವಾಯುಪಥಗಳ್ಳಿಂದ ಹೋಲಿಸದು.

**20. ಅಸೌ ಮಹೇಂದ್ರದ್ವಿಪದಾನಗಂಧಿಃ ।**
**ತ್ರಿಮಾರ್ಗಗಾವೀಚಿವಿಮರ್ದಶೀತಃ ॥**
**ಆಕಾಶವಾಯುರ್ದಿನಯೌವನೋತ್ಥಾನ್ ।**
**ಆಚಾಮತಿ ಸ್ವೇದಲವಾನ್ ಮುಖೇ ತೇ ॥ ೨೦ ॥**

ಹೇ ಪ್ರಾಣನಾಯಕಿ, ಇಂದಿನ ಮಧ್ಯಾಹ್ನದ ನಡುಹಗಲಿನ ಹೊತ್ತಿನಲ್ಲಿ ಬೀಸುತ್ತಿರುವ ಶೀತಮಾರುತನು ನಿನ್ನ ಮುಖದಲ್ಲಿ ಎದ್ದಿರುವ ಬೆವರ ಹನಿಯನ್ನು ಹೀರುತ್ತಲಿವೆ, ಎಳೆ ಘೀರುವ, ಈ ತ್ರಿಪಥಗಾಮಿನಿಯಾಗಿ ಹರಿಯುತ್ತಿರುವ ದೇವಗಂಗಾನದಿಯ ತೆರೆತೆರೆಯು ತಂಪಾದ ನೀರಹನಿಗಳಿಂದ ತಂಪಾಗಿರುವ ಆಕಾಶಮಾರುತನು ಬೀಸುತ್ತಿರುವನು. ಆ ಮಾರುತನು ದೇವರಾಜನಾದ ಮಹೇಂದ್ರನ ಐರಾವತ ಎಂಬ ಹೇರಾನೆಯ ಕಪೋಲಗಳಿಂದಿಳಿವ ಮದಜಲಧಾರೆಯಿಂದ ಸುವಾಸನೆಯನ್ನು ಪಡೆದು (ಸುರಗಜದ ಮದಜಲದ ಸುಗಂಧನಾಂತರ) ಸುಗಂಧಮಯನಾಗಿ ಬೀಸುತ್ತ, ಗಂಗೆಯ ನೀರ್ಹನಿಗಳಿಂದ ಶೀತ ಪಡೆದು ನಿನ್ನ ಮುಖಪದ್ಮದ ಬೆವರ ಹನಿಗಳನ್ನು ಹೀರುತ್ತಿರುವನು. ನಾವೀಗ ಸುರಪಥದಲ್ಲಿ, ಸುರಮಾರ್ಗದಲ್ಲಿ ಚರಿಸುತ್ತಿರುವೆವು (ಯಾನಮಾಡುತ್ತಿರುವೆವು)

ದ್ವಿಪದಾನಗಂಧಿರ್ೈರಾವತಮದಗಂಧಿಃ—ತ್ರಿಭಿರ್ಮಾರ್ಗೈರ್ಗಚ್ಛತೀತಿ = ತ್ರಿಮಾರ್ಗಗಾ ಗಂಗಾ—"ತದ್ಧಿತಾರ್ಥ" ಇತ್ಯಾದಿನೋತ್ತರಪದಸಮಾಸ—ವಿಮರ್ದೇನ=ಸಂಪರ್ಕೇಣ —ಶೀತೋತ್ಪಾದಕಾಶವಾಯುರ್ದಿನಯೌವನೋತ್ಥಾನ್ಮಧ್ಯಾಹ್ನಸಂಭವಾಂಸ್ತೇ ಮುಖೇ ಸ್ವೇದಲವಾನಾಚಾಮತಿ ಹರತಿ—ಅನೇನ ಸುರಪಥಸಂಚಾರೋ ದರ್ಶಿತಃ ॥

21. ಕರೇಣ ವಾತಾಯನಲಂಬಿತೇನ ।
ಸ್ಪೃಷ್ಟಸ್ತ್ವಯಾ ಚಂಡಿಕುತೂಹಲಿನ್ಯಾ ॥
ಆಮುಂಚತೀವಾಭರಣಂ ದ್ವಿತೀಯಂ ।
ಉದ್ಭಿನ್ನವಿದ್ಯುದ್ವಲಯೋ ಘನಸ್ತೇ ॥ ೨೧ ॥

ಹೇ ವಿನೋದಿನಿ (ವಿನೋದಪ್ರಿಯಳೆ), ಹೇ ಚಂಡಿ (ಚಂಡಿಯಂತೆ ಕೋಪಿಷ್ಠಳೆ. ದುರ್ದುಂಡಿ—ಮುನೆಮಾತು), ನೀನು ಕುತೂಹಲದಿಂದ ವಿಮಾನದ ಕಿಟಕಿಗಳಿಂದ ಕೈಗಳನ್ನು ಉದ್ದಕ್ಕೆ ಹೊರಕ್ಕೆ ಚಾಚಿದಾಗ ವಿದ್ಯುಲ್ಲತೆಯಂತೆ ಪ್ರಕಾಶಿಸುವ ಮೋಡದ ಭಾಗಗಳು (ವಿದ್ಯುತ್‌ಲತೆಯಿಂದ ಯುಕ್ತವಾದ ಮೇಘಮಾಲೆಗಳು) ಕಡಗದಂತೆ, ಕೈಯನ್ನು ಆವರಿಸಿ ಕೊಂಡು ಕೈಬಳೆಗಳಂತೆ ತೋರುತ್ತಿದೆ. ಇದು ಪ್ರಕಾಶಿಸುತ್ತಿರುವ ನಿನ್ನ ಕೈಗಳಿಗೆ ತೊಡಿಸಿದ (ಮುಣಿಗಂಟಿಗೆ—ತೋಳ್‌ಬಂದಿ) ಎಳೆಯ ಮಿಂಚಿನಿಂದ ಎಸೆಯುತ್ತಿರುವ ಎರಡನೆಯ ಆಭರಣವೋ ಎಂಬಂತೆ (ಎರಡನೆಯ ಬಳೆಯೋ ಎಂಬಂತೆ) ತೋರುತ್ತಿದೆ.

ಹೇ ಚಂಡಿ=ಕೋಪನೇ—"ಚಂಡಸ್ತ್ವತ್ಯಂತಕೋಪನಃ" ಇತ್ಯಮರಃ—ಕುತೂಹಲಿನ್ಯಾ —ವಿನೋದಾರ್ಥಿನ್ಯಾ—ವಾತಾಯನೇ = ಗವಾಕ್ಷೇ—ಲಂಬಿತೇನಾವಸ್ರಂಸಿತೇನ ಕರೇಣ ಸ್ಪೃಷ್ಟ ಉದ್ಭಿನ್ನವಿದ್ಯುದ್ವಲಯೋ ಘನಸ್ತೇ ದ್ವಿತೀಯಮಾಭರಣಂ ವಲಯಮಾ ಮುಂಚತೀವಾರ್ಪತೀವ—ಚಂಡಿ = ಹಟಮಾರಿ—ಆಮುಂಚತಿ = ಕೊಡು, ನೀಡು, ತೊಡಿಸು.

22. ಅಮೀ ಜನಸ್ಥಾನಮಪೋಢವಿಘ್ನಂ ।
ಮತ್ವಾ ಸಮಾರಬ್ಧ ನವೋಟಜಾನಿ ॥
ಅಧ್ಯಾಸತೇ ಚೀರಭೃತೋ ಯಥಾ ಸ್ವಂ ।
ಚಿರೋಜ್ಝಿತಾನ್ಯಾಶ್ರಮಮಂಡಲಾನಿ ॥ ೨೨ ॥

ಹೇ ಸುಶೀಲೆ, ಓ ಅಲಂಕಾರಪ್ರಿಯೆ (ಶೃಂಗಾರಶೀಲೆ), ಓ ಜಗತ್‌ಸಂಚಾರಿಣಿದೇವಿ, ಇದೀಗ ರಕ್ಕಸರನ್ನು ನಾನು ಉಚ್ಚಾಟಿಸಿದುದರಿಂದ ಜನಸ್ಥಾನವು ನಿರ್ವಿಘ್ನವಾಗಿದೆ. ಇದೀಗ ಕೆಂಪಾದ ಚೀರವಸ್ತ್ರಗಳಿಂದ (ಕಾವಿಬಟ್ಟೆ) ಅಲಂಕೃತರಾದ ಋಷಿಮುನಿಗಳು ತಾವು ರಕ್ಕಸರ ಬಾಧೆಗೆ ಹೆದರಿ ಕಂಗಾಲಾಗಿ ಬಿಟ್ಟೋಡಿದ ಜನಸ್ಥಾನಕ್ಕೆ (ದಂಡಕಾರಣ್ಯ) ವಾಪಸಾಗುತ್ತಿರುವರು. ಅವರು ನೆಮ್ಮದಿಯಿಂದ ಹಿಂದಿರುಗಿ ಭಯಲೇಶವಿಲ್ಲದೆ ತಮ್ಮ ಪರ್ಣಕುಟೀರಗಳನ್ನು (ಎಲೆಮನೆಗಳನ್ನು) ಕಟ್ಟುತ್ತಿರುವರು. ಈಗ ಋಷ್ಯಾಶ್ರಮಗಳು, ಋಷಿಗಳ ಪುನರ್ವಸತಿಗಳು ತಲೆ ಎತ್ತುತ್ತಿವೆ.

ಅಮೀ ಇತಿ—ಅಮೀ ಚೀರಭೃತಸ್ತಾಪಸಾ ಜನಸ್ಥಾನಮಪೋಢವಿಘ್ನಮಪಸ್ತ ವಿಘ್ನಂ

ಮತ್ವಾ ಜ್ಞಾತ್ವಾ ಸಮಾರಬ್ಧಾ ನವಾ ಉಟಜಾಃ ಪರ್ಣಶಾಲಾಯೇಷಾಂ ತಾನಿ "ಪರ್ಣಶಾಲೋಟಜೋಸ್ತ್ರಿಯಾಮ್" ಇತ್ಯಮರಃ—ಆಶ್ರಮಮಂಡಲಾನ್ಯಾಶ್ರಮವಿಭಾಗಾನ್—ಅಧ್ಯಾಸ್ತೇ = ಅಧಿತಿಷ್ಠಂತಿ ॥

23. ಸೈಷಾ ಸ್ಥಲೀ ಯತ್ರ ವಿಚಿನ್ವತಾ ತ್ವಾಂ ।
ಭ್ರಷ್ಟಂ ಮಯಾ ನೂಪುರಮೇಕಮುರ್ವ್ಯಾಮ್ ॥
ಅದೃಶ್ಯತತ್ವಚ್ಚರಣಾರವಿಂದ ।
ವಿಶ್ಲೇಷದುಃಖಾದಿವ ಬದ್ಧಮೌನಮ್ ॥ ೨೩ ॥

ಎಲೌ ಭಯಶೀಲೆಯೆ, ಕಾಲ್ಗೆಜ್ಜೆಯು ನಾದದವಳೇ, ಇದೊಂದು ತಾಣವನ್ನು ನೋಡು. ಈ ತಾಣವು ನಮ್ಮ ಹಿಂದಣ ಕತೆಯು ಹೇಳುತ್ತಿದೆಯೋ ಎಂಬಂತೆ ತೋರುತ್ತಿದೆ. ನಾನು ನಿನ್ನನ್ನು ಅರಸುತ್ತಾ ಈ ತಾಣಕ್ಕೆ ಬಂದಾಗ ಅಲ್ಲಿ ನಿನ್ನ ಕಾಲಿನ ನೂಪುರವನ್ನು ಕಂಡೆನು. ಆ ನೂಪುರವು (ಮಣಿಮಂಜೀರ, ಕಾಲ್ಗೆಜ್ಜೆಯು) ನಿನ್ನ ತಾವರೆ ಅಡಿಯ ವಿಯೋಗದುಃಖವನ್ನು ಸೂಚಿಸುವಂತೆ ಶಬ್ದಿಸದೆ ಬದ್ಧಮೌನವನ್ನು ತಳೆದು ಇಳೆಯಲ್ಲಿ ಬಿದ್ದಿತ್ತು. ನಿನ್ನ ಕಾಲಿನ ಅಂದುಗೆಯು ಅಲ್ಲಿ ಬಿದ್ದಿರುವುದನ್ನು ನಾನಲ್ಲಿ ಕಂಡು ಈ ದಾರಿಯಾಗಿ ನಿನ್ನನ್ನು ಅಮರರಿಪುವು (ಖಳನು) ಒಯ್ದಿರುವುದನ್ನು ನಾನಂದು ಗ್ರಹಿಸಿಕೊಂಡೆನು (ಅದುವೆ ತಾಣವದಿತ್ತ ನೋಡುತ್ತಿದೆ, ನೋಡು).

ದೃಶ್ಯತ ಇತ್ಯರ್ಥಃ—ವಿಚಿನ್ವತಾಽನ್ವಿಷ್ಯತಾ—ಬದ್ಧಮೌನಂ = ನಿಃಶಬ್ದಮ್—ಮಂಜೀರೋ ನೂಪುರೋಽಸ್ತ್ರಿಯಾಮ್" ಇತ್ಯಮರಃ—ಉತ್ಪ್ರೇಕ್ಷಾಲಂಕಾರ ॥

24. ತ್ವಂ ರಕ್ಷಸಾ ಭೀರು ಯತೋಽಪನೀತಾ ।
ತಂ ಮಾರ್ಗಮೇತಾ ಕೃಪಯಾ ಲತಾ ಮೇ ॥
ಅದರ್ಶಯನ್ ವಕ್ತುಮಶಕ್ನುವತ್ಯಃ ।
ಶಾಖಾಭಿರಾವರ್ಜಿತಪಲ್ಲವಾಭಿಃ ॥ ೨೪ ॥

"ಎಲೆ ಭೀರು, ಹೇ ಕೋಮಲಾಂಗಿ, ಹೇ ಲತಾಲತಿಕೆ (ಹೇಮಲತೆ, ಲತಾಂಗೀ), ನೀನಂದು ಘೋರ ಆಪತ್ತಿನಲ್ಲಿ ಸಿಕ್ಕಿರುವುದನ್ನು ವಾಕ್ ಇಂದ್ರಿಯಗಳು (ಮಾತನಾಡಲು) ಇಲ್ಲದಿದ್ದರೂ ಈ ಸಸ್ಯಾದಿಗಳು (ಸ್ಥಾವರಗಳು) ನಿನ್ನ ಇರವನ್ನು ನಿನ್ನನ್ನು ದೇವರಿಪು ಕೊಂಡೊಯ್ದ ಮಾರ್ಗವನ್ನು ತಮ್ಮ ಅಮಿತಪಲ್ಲವಶಾಖೆಗಳಿಂದ, ನನ್ನ ಮೇಲಿನ ಅಮಿತ ಕೃಪೆಯಿಂದ ತೋರಿದವು. ಹೇ ಶೋಭನಾಂಗಿ, ದುಷ್ಟರಕ್ಕಸನಾದ ರಾವಣನು, ನಿನ್ನನ್ನು ಯಾವ ಮಾರ್ಗದಿಂದ ಕೊಂಡೊಯ್ದನೆಂದು ಅರಸುತ್ತಾ ದುಃಖತಪ್ತನಾದ ನಾನು ಇಲ್ಲಿಗೆ ಬಂದೆನು. ಆಗ ನನ್ನ ಮೇಲೆ ಅನುಕಂಪವನ್ನು ತಳೆದು ಗಿಡಮರಬಳ್ಳಿಗಳು, ಮಾತಿನಿಂದ ಹೇಳಲು ಅಶಕ್ತವಾದರೂ ತಮ್ಮ ಚಿಗುರುಗಳ ಭಾರದಿಂದ ಒಂದೆಡೆಗೆ ತೊನೆದು, ಕೈಗಳೆಂಬ ಗೆಲ್ಲು(ರೆಂಬೆ, ಟೊಂಗೆ)ಗಳಿಂದ, ಮತ್ತು ಅವುಗಳಲ್ಲಿರುವ ಎಲೆಗಳನ್ನು ಜೋಡಿಸಿ, ದಕ್ಷಿಣದಿಕ್ಕಿಗೆ ಬಾಗಿ ಅವನು ಹೋದ ಮಾರ್ಗವನ್ನು ಸೂಚಿಸಿದುವು. ಆ ಲತೆಗಳು ತಮ್ಮ ಕೈಗಳೆಂಬ ಎಳೆಕುಡಿಗಳಿಂದ (ದಾಂಗುಡಿಗಳಿಂದ) ದಕ್ಷಿಣದಿಕ್ಕಿಗೆ ಬಾಗಿ (ಮುಖ

ಮಾಡಿ) ನನಗೆ ಕೃಪೆಯಿಂದ, ನಿನ್ನನ್ನು ಒಯ್ದ ದಾರಿಯನ್ನು ತೋರಿದವು. ಅವುಗಳ ಸಂಜ್ಞೆಯನ್ನು ನಾನು ಕೂಡಲೇ ಅರಿತೆನು. ಅವುಗಳೂ ನನ್ನ ಸುಖದುಃಖದಲ್ಲಿ ಸಮಭಾಗಿಯಾದುವು.

ಅಪನೀತಾಽಪಹೃತಾ ತಂ ಮಾರ್ಗಂ ವಾಗಿಂದ್ರಿಯಾಭಾವಾದ್ವಕ್ತುಮಶಕ್ನುವತ್ಯ— ಆವರ್ಜಿತಾ = ನಮಿತಾ—ಪಲ್ಲವಾಃ ಪಾಣಿಸ್ಥಾನೀಯಾಯಾಭಿಸ್ತಾಭಿಃ ಶಾಖಾಭಿಃ ಸ್ವಾವಯವಭೂತಾಭಿಃ ಕೃಪಯಾ ಮೇಽದರ್ಶಯನ್—ಹಸ್ತಚೇಷ್ಟಯಾಽಸೂಚಯನ್ನಿತ್ಯರ್ಥಃ" —"ಶಾಖಾವೃಕ್ಷಾನ್ತರೇ ಭುಜೇ" ಇತಿ ವಿಶ್ವಃ—ಲತಾದೀನಾಮಪಿ ಜ್ಞಾನಮಸ್ತ್ಯೇವ— ತದುಕ್ತಂ ಮನುನಾ—"ಅಂತಃಸಂಜ್ಞಾ ಭವನ್ತ್ಯೇತೇ ಸುಖದುಃಖಸಮನ್ವಿತಾಃ" ಇತಿ ॥

**25. ಮೃಗ್ಯಶ್ಚ ದರ್ಭಾಂಕುರನಿರ್ವ್ಯಪೇಕ್ಷಾಃ ।**
**ತವಾಗತಿಜ್ಞಂ ಸಮಬೋಧಯನ್ಮಾಮ್ ॥**
**ವ್ಯಾಪಾರಯಂತ್ಯೋ ದಿಶಿ ದಕ್ಷಿಣಸ್ಯಾಂ ।**
**ಉತ್ಪಕ್ಷ್ಮರಾಜೀನಿ ವಿಲೋಚನಾನಿ** ॥ ೨೫ ॥

ಹೇ ಉತ್ಪಲಾಕ್ಷಿ (ಹೇ ಸರ್ವಗುಣನಿಲಯೆ), ಮೃಗನಯನೆಯಾದ ನಿನ್ನ ಇರವನ್ನು ಹರಿಣಗಳು ಸೂಕ್ಷ್ಮವಾಗಿ ನನಗೆ ಅರುಹಿದವು. ಅವು ದುಃಖಭರದಿಂದ ದರ್ಭಾಂಕುರಗಳನ್ನು (ಎಳೆಯ ಕುಶಸೂಚಿಯನ್ನು) ಮೇಯುವುದನ್ನು ಬಿಟ್ಟು ತಮ್ಮ ಕಣ್ಣುಗಳನ್ನು ದಕ್ಷಿಣದಿಕ್ಕಿಗೆ ತಿರುಗಿಸುತ್ತ ನೀನು ಹೋದ ಮಾರ್ಗವನ್ನು ದಯೆಯಿಂದ ನನಗೆ ಅರುಹಿದವು (ಎಳೆಯ ಕುಶಸೂಚಿಯನು ನಲಿದು ಮೇವುದನುಳಿದು), ಅವು ತಮ್ಮ ಕಣ್ಣೆವೆಗಳನ್ನು, ತಮ್ಮ ದೃಷ್ಟಿಯನ್ನು ತೆಂಕಣದಿಶೆಯತ್ತ ತಿರುಗಿಸುತ್ತ ನಿನ್ನ ಗತಿಯನ್ನು, ನೀನು ಹೋದ ದಾರಿಯನ್ನು ಅರುಹಿದುವು. ಅವುಗಳ ಇಂಗಿತವನ್ನು ನಾನು ಕೂಡಲೇ ಅರಿತುಕೊಂಡೆನು, ಅವು ಬಾರಿಬಾರಿಗೂ ದಕ್ಷಿಣದಿಕ್ಕಿಗೆ ಮುಖಮಾಡಿ ನೋಡುತ್ತಿದ್ದುವು (ಜಂಗಮಾದಿಗಳು) (ಕಣ್ಣೆವೆಯ ತಿರುಗಿಸುತೆ).

ನಿರ್ವ್ಯಪೇಕ್ಷಾ = ನಿಃಸ್ಪೃಹಾ—ಮೃಗ್ಯೋ = ಮೃಗಾಂಗನಾ—ವ್ಯಾಪಾರಯನ್ತ್ಯಃ = ಪ್ರವರ್ತಯನ್ತ್ಯಃ—ಗತ್ಯನಭಿಜ್ಞಂ ಮಾಂ ಸಮಬೋಧಯನ್ ॥

**26. ಏತದ್ಗಿರೇರ್ಮಾಲ್ಯವತಃ ಪುರಸ್ತಾತ್ ।**
**ಆವಿರ್ಭವತ್ಯಂಬರಲೇಖಿಶೃಂಗಮ್ ॥**
**ನವಂ ಪಯೋ ಯತ್ರ ಘನೈರ್ಮಯಾ ಚ ।**
**ತ್ವದ್ವಿಯೋಗಾಶ್ರು ಸಮಂ ವಿಸೃಷ್ಟಮ್** ॥ ೨೬ ॥

ಹೇ ಮದಿರಾಕ್ಷಿ, ಅದೋ ಅಲ್ಲಿ ನೋಡು. ಗಗನವನ್ನು ಚುಂಬಿಸುತ್ತಿರುವ ಮಾಲ್ಯವದ್ ಗಿರಿಯನ್ನು. ಆ ಎತ್ತರ ಗಿರಿಯ ನೆತ್ತಿಯ ಮೇಲೆ ಮುಗಿಲುಗಳು ಹೊಸ ಮಳೆಯನ್ನು ಸುರಿಸುತ್ತಿರುವುದನ್ನು ನಾನು ಅಂದು ಕಂಡು ನಿನ್ನ ಅಗಲಿಕೆಯ ಕಂಬನಿಯನ್ನು ನಾನು ಅವು ಜೊತೆಯಲ್ಲೇ ಸುರಿಸಿದೆನು. ಮಳೆಯ ದರ್ಶನದಿಂದ, ನನ್ನಲ್ಲಿ ಕಣ್ಣೀರು ಉಕ್ಕಿ ಬಂದು ಧಾರೆಧಾರೆಯಾಗಿ, ಹೊಸದಾಗಿ ಹರಿಯಿತು. ವಿರಹದುಃಖವನ್ನು ನಾನು ತಡೆಯು

ಲಾರದೆಹೋದೆನು. ಹೇ ಮುಗ್ಧೆ, ನೋಡಲ್ಲಿ, ಬೃಹದಾಕಾರದ ಎತ್ತರದ ಒಂಟೆಯಂತೆ ತೋರುವ ಮಾಲ್ಯವದ್ಗಿರಿಯು ನಮ್ಮ ಮುಂದೆ ಎದ್ದುನಿಂತಿರುವುದನ್ನು ನೋಡು. ನೀಲಿ ಮುಗಿಲು ಮುಚ್ಚಿದ ಆ ಎತ್ತರದ ಗಿರಿಶಿಖರವನ್ನು ನೋಡು, ದೇವಿ.

ಮಾಲ್ಯವತೋ ನಾಮ ಗಿರೇ—ಯತ್ರ ಶೃಂಗೇ ಘನೈರ್ಮೇಘೈರ್ನವಂ ಪಯೋಮಯಾ ತ್ವದ್ವಿಪ್ರಯೋಗೇಣ ಯದಶ್ರುತಚ್ಚ ಸಮಂ ಯುಗಪದ್ವಿಸೃಷ್ಟಮ್—ಮೇಘದರ್ಶನಾದ್ವರ್ಷಕಲ್ಪಮಶ್ರುವಿಮುಕ್ತಮಿತಿ ಭಾವಃ ॥

**27. ಗಂಧಶ್ಚ ಧಾರಾಹತಪಲ್ವಲಾನಾಂ ।**
**ಕಾದಂಬಮರ್ಧೋದ್ಗತ ಕೇಸರಂ ಚ ॥**
**ಸ್ನಿಗ್ಧಾಶ್ಚ ಕೇಕಾಃ ಶಿಖಿನಾಂ ಬಭೂವುಃ ।**
**ಯಸ್ಮಿನ್ನಸಹ್ಯಾನಿ ವಿನಾ ತ್ವಯಾ ಮೇ ॥ ೨೭ ॥**

ಓ ಸೌಂದರ್ಯಶಿಲ್ಪಳೇ (ಸೌಂದರ್ಯವಲ್ಲರಿಯೆ, ಸೌಂದರ್ಯಶೀಲಳೆ). ನಿನ್ನ ಸಹವಾಸದಿಂದ ದೂರವಿದ್ದ ನನಗೆ ನವಿಲುಗಳ ಕೇಕಾರವವಾಗಲಿ, ರೆಕ್ಕೆಬಿಚ್ಚಿದ ನವಿಲುಗಳ ನರ್ತನವಾಗಲಿ ಸಂತೋಷವನ್ನು ತಾರದೆ ದುಮ್ಮಾನಪಡಿಸಿತು. ಸ್ನೇಹಮಯಿಯಾದ ನಿನ್ನ ಅಗಲಿಕೆಯು, ಅರೆಬಿರಿದ ಕಾದಂಬ ಹೂಗಳ ನರುಗಂಪು ಬೆರೆತ, ಸುಗಂಧಯುತವಾದ ವಾಯುವು ಸಂತೋಷವನ್ನು ತಾರದೆಹೋಯಿತು. ಸುಗಂಧಯುತವಾದ ಜಲಾಶಯಗಳು ಮೇಲಿನಿಂದ ಸುರಿಯುತ್ತಿರುವ ಬಿರುಮಳೆಯ ಧಾರೆಯಿಂದ ಕಾದಂಬಪುಷ್ಪಗಳು ಅರಳಿ, ಅರ್ಧಬಿರಿದು, ಹೂವಿನ ಒಳಗಣ ಕೇಸರವು ಅಂದವಾಗಿ ಕಾಣಿಸುತ್ತಿತ್ತು. ಆದರೆ ನಿನ್ನ ವಿಯೋಗದಿಂದ ಪೀಡಿತವಾದ ನನ್ನ ಮನಸ್ಸು, ಅಧರ ಪ್ರಫುಲ್ಲಿತಗೊಳ್ಳದೆ ಮನಸ್ಸಿಗೆ ಬೇಸರ ಕವಿದಿತ್ತು (ಗರಬಡಿದಂತೆ).

ಅರ್ಧೋದ್ಗತಕೇಸರಂ ಕಾದಂಬಂ ನೀಪಕುಸುಮಂ ಚ—ಸ್ನಿಗ್ಧಾ ಮಧುರಾಃ—ಶಿಖಿನಾಂ ಬರ್ಹಿಣಾಮ್—"ಶಿಖಿನೌ ವಹ್ನಿ ಬರ್ಹಿಣೌ" ಇತ್ಯಮರಃ ॥

**28. ಪೂರ್ವಾನುಭೂತಂ ಸ್ಮರತಾಂ ಚ ಯತ್ರ ।**
**ಕಂಪೋತ್ತರಂ ಭೀರುಂ ತವೋಪಗೂಢಮ್ ॥**
**ಗುಹಾ ವಿಸಾರೀಣ್ಯತಿವಾಹಿತಾನಿ ।**
**ಮಯಾ ಕಥಂ ಚಿದ್ಘನಗರ್ಜಿತಾನಿ ॥ ೨೮ ॥**

ಓ ಭೀರುವೆ, ನಯ, ವಿನಯ, ಗಂಭೀರಗುಣಶೀಲಳೆ, ಸಾತ್ವಿಕಗುಣನಿಧಿಯೇ, ನನ್ನ ಪರಮಶಕ್ತಿಯೇ, ಹೇ ಗುಣಸಾಗರಿ, ನಾನು ಈ ಹಿಂದೆ ನಿನ್ನಿಂದ ಅನುಭವಿಸಿದ ಒಂದು ಗಾಢವಾದ ಅಪ್ಪುಗೆಯನ್ನು ನೆನೆದು ವಿವಶನಾದೆನು (ನಿನ್ನ ಆದಿರಪ್ಪುಗೆಯ ನೆನೆಯುತಿರಲು). ನೀನು ಈ ಹಿಂದೆ ಮಳೆಗಾಲದ ಸಮಯದಲ್ಲಿ ಬಾನಲ್ಲಿ ಮೇಘಗಳ ಗುಡುಗಾಟವನ್ನು ಕೇಳಿ ಭಯದಿಂದ ನಡುಗುತ್ತಾ, ಭರದಿಂದ ನನ್ನನ್ನು ಅಪ್ಪಿದೆಯಲ್ಲವೆ ? ಅನಂತರ ನಿನ್ನ ವಿಯೋಗಕಾಲದಲ್ಲಿ ಈ ಪವಿತ್ರವಾದ ಮಾಲ್ಯವದ್ಗಿರಿಯ ಗುಹೆಯೊಂದರಲ್ಲಿ ವರ್ಷಾಕಾಲವನ್ನು ಕಳೆಯುತ್ತಿರಲು ಅಲ್ಲಿ ಗಿರಿಸಾಲುಗಳಲ್ಲಿ ಮೋಡಗಳು ಓಡಾಡುತ್ತ

ಮೊಳಗುತ್ತ, ಭಯಂಕರವಾದ ಶಬ್ದವನ್ನು ಕೇಳಿಸಿಕೊಂಡರೂ ಮಳೆಯು ಧಾರಾಕಾರ ಸುರಿಯುತ್ತಲಿದ್ದರೂ ಆನಂದವೆನಿಸಲಿಲ್ಲ. ಆ ಮೋಡಗಳ ರವವು ನನಗೆ ಕರ್ಣಕಠೋರವೆನಿಸಿತು. ನಮ್ಮ ಹಿಂದಿನ ಸವಿನೆನಪುಗಳು ಮರುಕಳಿಸಿ ನಾನು ಬಹಳವಾಗಿ ನಿನ್ನ ಗಾಢಾಲಿಂಗನಸುಖವನ್ನು ನೆನೆದು ಕಷ್ಟದಿಂದ ಹೇಗೋ ಸಹಿಸಿಕೊಂಡೆನು. ನಾನಾಗ ಗವಿಯು ಒಳಹೊಕ್ಕು ನಿನ್ನ ಧ್ಯಾನದಲ್ಲೇ ತಲ್ಲೀನನಾಗಿ ಸಮಯವನ್ನು ಕಳೆದೆ. ವಿರಹದಿಂದ ಪರಿತಪಿಸಿದೆ.

**ಪೂರ್ವೇತಿ—ಕಿಂಚ, ಹೇ ಭೀರು ! ಯತ್ರ ಶೃಂಗಂ ಪೂರ್ವಾನುಭೂತಂ—ಕಂಪೋತ್ತರಂ** =ಕಂಪಪ್ರಧಾನಂತವೋಪಗೂಢಮುಪಗೂಹನಂ ಸ್ಮರತಾ ಮಯಾ—ಗುಹಾವಿಸಾರಿಣಿ= ಘನ ಗರ್ಜಿತಾನಿ ಕಥಂ ಚಿದತಿ ವಾಹಿತಾನಿ—ಸ್ಮಾರಕತ್ವೇನೋದ್ದೀಪಕತ್ವಾ ಕ್ಲೇಶೇನ ಗಮಿತಾ ನೀತ್ಯರ್ಥಃ ॥

**29. ಆಸಾರಸಿಕ್ತಕ್ಷಿತಿಬಾಷ್ಪಯೋಗಾನ್ ।**
**ಮಾಮಕ್ಷಿಣೋದ್ಯತ್ರ ವಿಭಿನ್ನಕೋಶೈಃ ॥**
**ವಿಡಂಬ್ಯಮಾನಾ ನವಕಂದಲೈಸ್ತೇ ।**
**ವಿವಾಹಧೂಮಾರುಣಲೋಚನಶ್ರೀಃ** ॥ ೨೯ ॥

ಹೇ ಉತ್ಪಲಾಕ್ಷಿ (ಮಯೂರಾಕ್ಷಿ), ನಾನಂದು ಈ ಗಿರಿಯಲ್ಲಿ ನೆಲಸಿದ್ದಾಗ ಆಕಾಶವು ಕಣ್ಣೀರು ಸುರಿಸಿದಂತೆ ಧಾರಾಕಾರವಾದ ಮಳೆಯಿಂದ ಭೂಮಿಯು ಕೆಸರಾಯಿತು. ಆಗ ಮೇಲಕ್ಕೆದ್ದ ನೀರಾವಿಯಿಂದ ನಸುಕೆಂಪು ಬಣ್ಣದ ನವಕಂದಳೀ ಪುಷ್ಪಗಳ ಮೊಗ್ಗುಗಳು (ಕದಳೀಪುಷ್ಪಗಳು) ಪೂರ್ಣಬಿರಿದು ಅರಳಿನಿಂದಿರುವುದನ್ನು ನಾನು ಕಂಡು ನನ್ನ ಮನಸ್ಸನ್ನು ಕದಡಿತು. ಮನವು ಕಡುನೊಂದಿತು, ಆ ಕೆಂಪಾದ ಕುಸುಮನಿಚಯವು ಮದುವೆಯ ಕಾಲದ (ಪಾಣಿಗ್ರಹಣಕಾಲದ ಹೋಮದ ಹೊಗೆಯಿಂದ ಕೆಂಪಾದ ನಿನ್ನ ಕಣ್ಣುಗಳ ಮೋಹಕತೆಯನ್ನು ಅನುಸರಿಸಿ ನನ್ನನ್ನು ಪೀಡಿಸಿದುವು. ನನ್ನ ಮನವನ್ನು ಹಿಂಡಿದುವು.

ಓ ಮನೋಹರಿ, ನಮ್ಮ ಲಗ್ನಕಾಲದ ಹೋಮಧೂಮದಿಂದ ನಿನ್ನ ಕಣ್ಣುಗಳು ತಾಮ್ರದಂತೆ ಕೆಂಪಾಗಿ ತೋರಿದುವು. ಹೇ ಆಯತಾಕ್ಷಿ, ನಿನ್ನ ಮೋಹಬೀರುವ ಕೆಂಪಾದ ಅರಳುಗಣ್ಣುಗಳ ಬಿರುನೋಟವು ನನ್ನ ಮನಸ್ಸಿಗೆ ಅಂದು ಆನಂದವನಿತ್ತಿತು. ಈ ಗಿರಿಸಾಲುಗಳಲ್ಲಿ ನಾನು ಬಂದು ನೆಲಸಿದಾಗ ಕೆಂಪು ಬಣ್ಣದ ಅರಳಿನಿಂದಿರುವ ಕಂದಳೀ ಹೂಗಳನ್ನು ಕಂಡು ಲಗ್ನಕಾಲದ ನಿನ್ನ ಅಕ್ಷಿಗಳ ನೋಟವನ್ನು ಸ್ಮರಿಸಿ ಮನಸ್ಸು ಚಡಪಡಿಸಿತು, ಖೇದಗೊಂಡಿತು. ನಿನ್ನ ಇರವನ್ನು ಬಯಸಿತು.

ಅನ್ವಯಃ:—ಯತ್ರ ವಿಭಿನ್ನಕೋಶೈಃ ನವಕಂದಲೈಃ ಆಸಾರಸಿಕ್ತಕ್ಷಿತಿಬಾಷ್ಪಯೋಗಾತ್ ವಿಡಂಬ್ಯಮಾನಾ ತೇ ವಿವಾಹಧೂಮಾರುಣಲೋಚನಶ್ರೀಃ ಮಾಮಕ್ಷಿಣೋತ್ ॥

ಯತ್ರ ಶೃಂಗೈಃ—ವಿಭಿನ್ನಕೋಶೈಃ = ವಿಕಸಿತಕುಡ್ಮಲೈಃ—ನವಕಂದಲೈಃ = ಕದಲೀ ಪುಷ್ಪೈರರುಣವರ್ಣೈಃ—ಆಸಾರೇಣ=ಧಾರಾಸಂಪಾತೇನ—"ಧಾರಾಸಂಪಾತ ಆಸಾರಃ" ಇತ್ಯಮರಃ—ಸಿಕ್ತಾಯಾಃ = ಕ್ಷಿತೇಃ ಬಾಷ್ಪಸ್ಯ = ಧೂಮವರ್ಣಸ್ಯ—ಯೋಗಾದ್ಧೇತೋಃ ವಿಡಂಬ್ಯಮಾನಾನುಕ್ರಿಯಮಾಣಾ—ತೇ ವಿವಾಹಧೂಮೇನಾರುಣಲೋಚನಶ್ರೀಃ ॥

**30. ಉಪಾಂತವಾನೀರವನೋಪಗೂಢಾ ।**
**ನ್ಯಾಲಕ್ಷ್ಯಪಾರಿಪ್ಲವಸಾರಸಾನಿ ॥**
**ದೂರಾವತೀರ್ಣಾಪಿಬತೀವ ಖೇದಾತ್ ।**
**ಅಮೂನಿಪಂಪಾಸಲಿಲಾನಿ ದೃಷ್ಟಿಃ ॥ ೩೦ ॥**

ಹೇ ಚಕೋರಿ, ಹೇ ನಲ್ಲೆ, ಅದೋ ನೋಡು, ದೂರದಲ್ಲಿ ತೋರುತ್ತಿದೆ ನಿಸರ್ಗ ಸುಂದರರಮ್ಯ ತಾಣವೆನಿಪ ಪಂಪಾಸರೋವರವು. ಈ ಪವಿತ್ರವಾದ, ಸುಂದರ ಸರೋವರದ ದಡದಲ್ಲಿ ದಟ್ಟವಾಗಿ ಬೆಳೆದುನಿಂತ ಬೆತ್ತದ ಬನವು ಹೃದಯವನ್ನು ಆಕರ್ಷಿಸುತ್ತಿದೆ. ಅದರ ಎಡೆಎಡೆಯಿಂದ ಪಾರಿಪ್ಲವದ, ಚಂಚಲತೆಗೆ ಹೆಸರಾದ ಸಾರಸಪಕ್ಷಿಗಳು ಹೊರ ಬರುತ್ತ ನಮ್ಮ ದೃಷ್ಟಿಗೆ ನಸುತೋರಿ ಬಾನ ಮರೆಯಲ್ಲಿ ತೇಲುತ್ತ ಮರೆಯಾಗುತ್ತಿರುವ ಹೃದಯಂಗುತ್ತಿರುವ ದೃಶ್ಯವನ್ನು ನೋಡು. ನಾವು ಬಹುದೂರದಿಂದ ಬಂದಿರುವ ಕತದಿಂದ ನಮ್ಮ ದೃಷ್ಟಿಯು ಪಯಣದ ಶ್ರಮದಿಂದ ಈಗಾಗಲೇ ದಣಿದಿರುವುದು. ನಾವೀಗ ಅಂತರಿಕ್ಷದಲ್ಲಿ ವಿಮಾನದ ಜಾಲಮಾರ್ಗದಲ್ಲಿ ನಿಂತು ಬಹಳ ಕೆಳಕ್ಕಿರುವ ಜಲಮಟ್ಟವನ್ನು ನೋಡುತ್ತಿರುವುದರಿಂದ ಕಣ್ಣುಗಳಿಗೆ ಬಳಲಿಕೆಯಾಗುವುದು ಸಹಜವಷ್ಟೆ. ಹೀಗೆ ದಣಿದಿರುವ ನನ್ನ ದೃಷ್ಟಿಯು ಸಾರಸವ್ರಜದಿಂದ ಮೆರೆಯುವ ಪಂಪಾಸರೋವರದ ನಿರ್ಮಲಜಲವನ್ನು ಕುಡಿಯಲು ಬಯಸಿದಂತೆ ಅದರ ಮೇಲೆ ಎರಗಿದಂತೆ ಭಾಸವಾಗುತ್ತಿದೆ.

ಉಪಾಂತವಾನೀರವನೋಪಗೂಢಾನಿ = ಪಾರ್ಶ್ವಜಲವನಚ್ಛನ್ನಾನ್ಯಾಲಕ್ಷ್ಯಾ ಈಶ ದೃಶ್ಯಾಃ—ಪಾರಿಪ್ಲವಾ = ಚಂಚಲಾ—ಪಂಪಸಲಿಲಾನಿ = ಪಂಪಾಸರೋವರಜಲಾನಿ—ದೂರಾವತೀರ್ಣಾದೃಷ್ಟಿರತ ಪಾರಿಪ್ಲವಾಃ = ಚಂಚಲಾಃ—ಸಾರಸಾಃ ಯೇಷಾಂ ತಾನಿ ॥

**31. ಅತ್ರಾವಿಯುಕ್ತಾನಿ ರಥಾಂಗನಾಮ್ನಾಂ ।**
**ಅನ್ಯೋಽನ್ಯದತ್ತೋತ್ಪಲಕೇಸರಾಣಿ ॥**
**ದ್ವಂದ್ವಾನಿ ದೂರಾಂತರವರ್ತಿನಾ ತೇ ।**
**ಮಾಯಾಪ್ರಿಯೇ ಸಸ್ಪೃಹವೀಕ್ಷಿತಾನಿ ॥ ೩೧ ॥**

ಓ ಇನಿಯಳೆ, ರಸಿಕರುಜನಮನೋವಿಹಾರಿಣಿ, ಓ ವಿಶ್ವಕುಟುಂಬಿನಿ, ನಿನ್ನ ಅಗಲಿಕೆಯಿಂದ ಬೆಂಡಾದ ನಾನು ಇಲ್ಲಿ ಈ ತಾಣದಲ್ಲಿ ಇನ್ನೊಂದು ದೃಶ್ಯವನ್ನು ಕಂಡೆನು. ಈ ತಾಣವಲ್ಲಿ ಎಂದೂ ಅಗಲದೆಯಿರುವ ಚಕ್ರವಾಕಪಕ್ಷಿಗಳು (ಜಕಿವಕ್ಕಿಗಳು, ಜಕ್ಕವಕ್ಕಿಗಳು) ತಾವರೆತಂತುಗಳನ್ನು ಒಂದನ್ನೊಂದು ಬದಲಿಸುತ್ತಾ, ನೈದಿಲೆಯ ಕೇಸರಗಳನ್ನು ಒಂದಕ್ಕೊಂದು ಉಣಿಸುತ್ತಾ ವೇಳೆ ಕಳೆಯುತ್ತಿರುವುದನ್ನು ನಾನು ಆಸೆಯಿಂದಲೇ ಈಕ್ಷಿಸಿದೆನು. ಆ ಪಕ್ಷಿಯುಗಗಳು ಒಂದನ್ನೊಂದು ನೆಚ್ಚಿಕೊಂಡು ಸುಖಿಸುವುದನ್ನು ಕಂಡು, ಬಹುದೂರದಲ್ಲಿರುವ ನಿನ್ನನ್ನು ನೆನೆಯುತ್ತಾ, ಈ ತಾಣದಲ್ಲಿ ಮೈಮರೆತು ನಿಂತು ವೇಳೆ ಕಳೆದೆನು.

ರಥಾಂಗನಾಮ್ನಾಂ ದ್ವಂದ್ವಾನಿ = ಚಕ್ರವಾಕಮಿಥುನಾನಿ—ತೇ ತವ ದೂರಾಂತವವರ್ತಿನಾ = ದೂರದೇಶವರ್ತಿನಾ—ಸಸ್ಪೃಹಂ = ಸಾಭಿಲಾಷವೀಕ್ಷಿತಾನಿ ॥

**32.** **ಇಮಾಂ ತಟಾಶೋಕಲತಾಂ ಚ ತನ್ವೀಂ ।**
**ಸ್ತನಾಭಿರಾಮಸ್ತಬಕಾಭಿನಮ್ರಾಮ್ ॥**
**ತ್ವತ್ಪ್ರಾಪ್ತಿಬುದ್ಧ್ಯಾ ಪರಿರಬ್ಧುಕಾಮಃ ।**
**ಸೌಮಿತ್ರಿಣಾ ಸಾಶ್ರುರಹಂ ನಿಷಿದ್ಧಃ** ॥ ೩೨ ॥

ಹೇ ಮಧುರಭಾಷಿಣಿ (ಹೇ ಭಾಮಿನಿ, ಮದಿರಾಕ್ಷಿ, ಕಾಮಾಕ್ಷಿ), ಅಲ್ಲಿ ದಡದೆಡೆಯಲ್ಲಿ ಬೆಳೆದಿರುವ ಅಶೋಕದ ಎಳೆಗಿಡವನ್ನು ನೋಡು. ನಾವಿಬ್ಬರೂ ನಿನ್ನನ್ನು ಅರಸುತ್ತಾ ಆ ಅಶೋಕ ತರುವಿನ ಬಳಿಗೆ ಬಂದೆವು. ಅದರ ಒಂದು ಶಾಖೆಯು ತುಂಬಿರುವ ಎಳೆ ಚಿಗುರುಗಳಿಂದ ತೊನೆಯುತ್ತಾ, ಬಳುಕುತ್ತ ಎರಡು ಹೂಗೊಂಚಲುಗಳಿಂದ ಮೆರೆಯುತ್ತ ಭಾರವಾಗಿ ಬಾಗಿದ್ದುದನ್ನು ಕಂಡು ನಮ್ರಗುಣಚಿಂತಾಮಣಿಯಾದ ಸೀತೆ ಕೈಸಾರಿದೆ ಎಂದು ನಿನ್ನನ್ನು ಅಪ್ಪಿಕೊಳ್ಳಲು ನಾನು ಮುಂದೆ ನುಗ್ಗಿದೆನು. ಕಮನೀಯ ಹೂಗೊಂಚಲುಗಳು ಬಿಣ್ಮೊಲೆಯನ್ನು ಅನುಕರಿಸುತ್ತ ಚಾರುಸ್ತನಸ್ತಬಕಭಾರದಿಂದ, ನೀನೇ ಬಳ್ಳಿಯಂತೆ ಬಳುಕುತ್ತ, ಮಳ್ಳಿಯಂತೆ ಸೊರಗುತ್ತ, ನಮ್ರತೆಯಿಂದ ಬಾಗಿ ಸಮೀಪಕ್ಕೆ ಬಂದೆಯೆಂದು ಭ್ರಮಿಸಿ ನಿನ್ನನ್ನು ತಬ್ಬಿಕೊಳ್ಳಲು, ಕಾಮವಶನಾಗಿ ನಾನು ಕೈಚಾಚಿದೆನು. ನನ್ನ ದುರವಸ್ಥೆಯನ್ನು ಕಂಡು ಅಶ್ರುಮುಖನಾದ (ಬಾಷ್ಪಲೋಚನನಾದ) ಸೌಮಿತ್ರಿಯು ತಾನು ಮುಂದೆ ಬಂದು ತನ್ನ ಕೈಗಳಿಂದ ನನ್ನನ್ನು ತಡೆದನು.

ಲತಾಂ = ಶಾಖಾಮ್—ಅತಸ್ತ್ವತ್ ಪ್ರಾಪ್ತಿಬುದ್ಧ್ಯಾ, ತ್ವಮೇವ ಪ್ರಾಪ್ತೇತಿ ಭ್ರಾಂತ್ಯಾ ಪರಿರಬ್ಧುಮಾಲಿಂಗಿತುಂ—ಪರಿರಬ್ಧುಕಾಮ "ಇತ್ಯತ್ರ ತುಂ ಕಾಮಮನಸೋರಪಿ" ಇತಿ ವಚನಾನ್ಮಕಾರಲೋಪಃ ॥

**33.** **ಅಮೂರ್ವಿಮಾನಾಂತರಲಂಬಿನೀನಾಂ ।**
**ಶ್ರುತ್ವಾ ಸ್ವನಂ ಕಾಂಚನಕಿಂಕಿಣೀನಾಮ್ ॥**
**ಪ್ರತ್ಯುದ್ವ್ರಜಂತೀವ ಖಮುತ್ಪತಂತ್ಯೋ ।**
**ಗೋದಾವರೀಸಾರಸಪಂಕ್ತಯಸ್ತ್ವಾಮ್** ॥ ೩೩ ॥

ಹೇ ಅಜ್ಞಾನತಿಮಿರನಾಶಿನಿ (ಜ್ಞಾನಪ್ರಕಾಶಿನಿ, ಹೇ ವಿಶ್ವಮಾನವಿ), ಈ ದಿವ್ಯ ವಿಮಾನದಲ್ಲಿ ಜೋಲ್ದ (ಚಿನ್ನದ ಕಿರುಗಂಟೆಗಳ) ಕಿಂಕಿಣಿಗಳ ದನಿ ಕೇಳ್ದು ಸಾರಸಪಕ್ಷಿಗಳ ಒಂದು ಗುಂಪು, ನಿನ್ನನ್ನು ಇದಿರುಗೊಳ್ಳಲು (ಸ್ವಾಗತಿಸಲು) ವೇಗದಿಂದ ಹಾರಾಡಿ ಬರುತ್ತಿವೆ. ಆ ಪಕ್ಷಿನಿಚಯ ಈ ವಿಮಾನದ ಚಿಕ್ಕಚಿಕ್ಕ ಗಂಟೆಗಳ ಝೇಂಕೃತಿಯ, ಕಲಕಲ ದನಿ ಕೇಳ್ದು ಭ್ರಮಿಸಿ ವೇಗದಿಂದ ಬಾನಮಾರ್ಗದಲ್ಲಿ ನುಗ್ಗಿಬರುತ್ತಿವೆ. ಈ ಕೊಕ್ಕರೆಗಳ ಸಮೂಹವು ಸಾಲುಸಾಲಾಗಿ ಹೂಮಾಲೆ ಆಕಾರದಲ್ಲಿ ಹಾರುತ್ತ ಗೋದಾವರೀ ನದಿಯ ಕಡೆಯಿಂದ ಬಾನಿಗೇರುತ್ತ ನಿನ್ನನ್ನು ಸುಸ್ವಾಗತಿಸಲು ಬಂಧುಜನರು ಬರುವಂತೆ ಬರುತ್ತಿವೆ ನೋಡು ರಮಣಿ.

ವಿಮಾನಸ್ಯಾಂತರೇಚ್ಛವಕಾಶೇಷು—ಲಂಬಂತೇ=ಯಾಸ್ತಾಸಾಂ ಕಾಂಚನಕಿಂಕಿಣೀನಾಂ ಸ್ವನಂ ಶ್ರುತ್ವಾ ಸ್ವಯೂಥಶಬ್ದಭ್ರಮಾತ್ ಸ್ವಮಾಕಾಶಮುತ್ಪತನ್ತ್ಯೋಽಮೂ ಗೋದಾವರೀ ಸಾರಸಪಂಕ್ತಯಸ್ತ್ವಾಂ ಪ್ರತ್ಯುದ್ವ್ರಜಂತೀವ ॥

34. ಏಷಾ ತ್ವಯಾ ಪೇಶಲಮಧ್ಯಯಾಪಿ।
ಘಟಾಂಬು ಸಂವರ್ಧಿತ ಬಾಲಚೂತಾ ॥
ಆನಂದಯತ್ಯುನ್ಮುಖಕೃಷ್ಣಸಾರಾ ।
ದೃಷ್ಟ್ವಾ ಚಿರಾತ್ಪಂಚವಟೀ ಮನೋ ಮೇ ॥ ೩೪ ॥

ಹೇ ಸೌಂದರ್ಯವಲ್ಲರಿಯೆ (ಕುಸುಮಗಂಧಿ, ವಸಂತಿ, ವಾಸಂತಿ, ಹೇ ಮಂದಾರದ ಹೂವೆ), ನೀನು ತೆಳುವಾದ ಹೊಟ್ಟೆಯುಳ್ಳವಳೂ, ಶೂನ್ಯವಾದ ನಡುವಿನಿಂದ ಶೋಭಿಸುತ್ತಲಿದ್ದರೂ (ನಡುಸಣ್ಣ) ದೊಡ್ಡದೊಡ್ಡ ಕೊಡಗಳಲ್ಲಿ ನೀರನ್ನು ಕೊಂಡೊಯ್ದು ಬಹಳ ಅಕ್ಕರೆಯಿಂದ ಬೆಳೆಸಿದ ಮಾವಿನ ಎಳೆಸಸಿಗಳಿಂದ ಪಂಚವಟಿಯು ಶೋಭೆವಡೆದು ಬಹಳ ದಿನಗಳ ಅನಂತರ ಬಂದಿರುವ ನನಗೆ ಮುದವೀಯುತ್ತಿದೆ. ನಮ್ಮ ಪುಷ್ಪಕದ ದನಿ ಕೇಳಿದ್ದು ಕಪ್ಪು ಮಚ್ಚೆಗಳಿಂದ ಚೆಂದವಾಗಿ ಕಾಣುವ ಸಾರಂಗಗಳು (ಜಿಂಕೆಗಳು) ಅಲ್ಲಲ್ಲಿ ತಮ್ಮ ತಲೆಯನ್ನೆತ್ತಿ ಮೇಲಕ್ಕೆ ನೋಡುತ್ತ ನಮ್ಮ ಹೃದಯವನ್ನು ಸೂರೆಗೊಳ್ಳುತ್ತಿವೆ. ಹೇ ಮೃಗನಯನೆ, ಈ ಪಂಚವಟಿಯಲ್ಲಿ ಅಲ್ಲಲ್ಲಿ ಮೊಗವೆತ್ತಿ ನೋಡುತ್ತಿರುವ ಏಣವೃಂದಗಳನ್ನು (ಗಮನಿಸಿ) ನೋಡು, ಪ್ರಿಯೆ.

ತ್ವಯಾ ಘಟಾಂಬುಭಿಃ ಸಂವರ್ಧಿತಾ—ಬಾಲಚೂತಾ ಯಸ್ಯಾಃ ಸಾ—ಉನ್ಮುಖಾ = ಅಸ್ಮದಭಿಮುಖಾತ್ತ್ವತ್ಸಂವರ್ಧಿತಾ ಏವ—ಕೃಷ್ಣಸಾರಾ ಯಸ್ಯಾಃ ಸಾ ಚಿರಾದ್ದೃಷ್ಟ್ವೈಷಾ ಪಂಚವಟೀ ಮೇ ಮನ ಆನಂದಯತ್ಯಾಹ್ಲಾದಯತಿ—ಪಂಚವಟೀ ಶಬ್ದಃ ಪೂರ್ವ ಭೇದವ್ಯಾಖ್ಯಾತಃ—ಪೇಶಲ = ಪೇಶಲಃ ಮಧ್ಯಃ ಯಸ್ಯಾಃ = ತೆಳ್ಳಡು.

35. ಅತ್ರಾನುಗೋದಂ ಮೃಗಯಾ ನಿವೃತ್ತಃ।
ತರಂಗವಾತೇನ ವಿನೀತಖೇದಃ ॥
ರಹಸ್ತ್ವದುತ್ಸಂಗನಿಷಣ್ಣಮೂರ್ಧಾ ।
ಸ್ಮರಾಮಿ ವಾ ನೀರಗೃಹೇಷು ಸುಪ್ತಃ ॥ ೩೫ ॥

ಹೇ ಸಂಪಿಗೆಯ ಮೂಗಿನವಳೆ, ಮದ್ದಾನೆಯ ನಡಿಗೆಯವಳೆ, ಹೇ ಮತಿವಂತಳೆ (ಭಾಮಿನಿ, ಪದ್ಮಿನಿ, ಚಿತ್ರಿನಿ, ಹರ್ಷಿಣಿ), ಈ ಗೋದಾವರೀತಟದಲ್ಲಿರುವ ಈ ನಾಸಿಕ ಕ್ಷೇತ್ರವನ್ನು (ಪಂಚವಟಿ) ನೋಡು. ನಾವಿಲ್ಲಿ ಗೋದಾವರಿ ತೀರದ ಈ ಪಂಚವಟಿಯಲ್ಲಿ ವಾಸಿಸುತ್ತಲಿದ್ದೆವು. ನಾನಾದರೋ ಮೃಗಯಾವಿಹಾರಕ್ಕೆಂದು (ಮೃಗಬೇಟೆಗೆಂದು) ತೆರಳಿ ಆಯಾಸಗೊಂಡು ಹಿಂತಿರುಗಿದಾಗ ಬೆತ್ತದಿಂದ ರಚಿತವಾದ ಒಳಮನೆಗೆ ನಡೆದು ನಿನ್ನ ತೊಡೆಯ ಮೇಲೆ ತಲೆಯಿಟ್ಟು ವಿರಮಿಸುತ್ತಿದ್ದೆನು. ಆಗ ನದಿಯ ಮೇಲ್ಗಡೆಯಿಂದ ತಂಪಾದ ನೀರ್ವನಿಮಿಶ್ರಿತ ಗಾಳಿಯು ಬೀಸಿ ನನ್ನ ಆಯಾಸವನ್ನು ಹೋಗಾಡಿಸುತ್ತಿತ್ತು. ಆ ಮಾರುತವು ಗೋದಾವರೀ ನದಿಯ ತೆರೆಗಳ ಮೇಲಿಂದ ಹಾಯ್ದು ಬರುತ್ತ ತಂಪಾದ ನೀರಾವಿಯಿಂದ ಬೆರೆತು ತಂಪಾಗಿ ಅತ್ಯಂತ ಹಿತಕರವಾಗಿ ಇರುತ್ತಿತ್ತು.

ಗೋದಾ = ಗೋದಾವರೀ ಸಮೀಪೇ = ಅನುಗೋದಮ್–"ಅನುರ್ಯತ್ಸಮಯಾ"

ಇತ್ಯವ್ಯಯೀಭಾವಃ (ಪಾಣಿನಿ)—ತ್ವದಂತ್ಸಂಗನಿಷಣ್ಣಮೂರ್ಧಾಸನ್ನಹಂ ವಾ ನೀರ ಗೃಹೇಷು ಸುಪ್ತ, ಸ್ಮರಾಮಿ—ಸುಪ್ತ ಇತಿ ಯತ್ರಾತ್ ಸ್ಮರಾಮಿತ್ಯರ್ಥಃ ॥

36. ಭ್ರೂಭೇದಮಾತ್ರೇಣ ಪದಾನ್ಮಘೋನಃ ।
ಪ್ರಭ್ರಂಶಯಾಂ ಯೋ ನಹುಷಂ ಚಕಾರ ॥
ತಸ್ಯಾವಿಲಾಂಭಃ ಪರಿಶುದ್ಧಿಹೇತೋಃ ।
ಭೌಮೋ ಮುನೇಃ ಸ್ಥಾನಪರಿಗ್ರಹೋಽಯಮ್ ॥ ೩೬ ॥

ಹೇ ಮಂಗಳರೂಪಳೆ (ಹೇ ಸುಗುಣೆ), ಅದೋ, ಕೆಳಗೆ ತೋರುವ ಆ ಭೂಭಾಗದಲ್ಲಿ ಈ ಮುನ್ನ ಮಹರ್ಷಿ ಅಗಸ್ತ್ಯರು ತನ್ನ ಪುಣ್ಯಾಶ್ರಮವನ್ನು ನೆಲೆಗೊಳಿಸಿ ತಪವನೆಸಗಿದರು. ಯಾವ ಮಹರ್ಷಿಯು ಬರೀ ತನ್ನ ಹುಬ್ಬಿನ ಚಲನೆಮಾತ್ರದಿಂದ ಇಂದ್ರಪದವಿಗೆ ಏರಿದ (ದೇಹಸಮೇತ) ನಹುಷಮಹಾರಾಜನನ್ನು ನಾಕಲೋಕದಿಂದ (ಉಚ್ಚಾಟಿಸಿ) ಭೂಮಿಗೆ ಬೀಳಿಸಿದರೋ ಅಂತಹ ಮಂತ್ರದ್ರಷ್ಟಾರರೆನಿಸಿದ, ವಿಶ್ವಕರ್ತನಾದ ಮಹಾಮುನಿ ಅಗಸ್ತ್ಯರ (ದ್ರಾವಿಡಮುನಿ) ಸಿದ್ಧಾಶ್ರಮವನ್ನು ನೋಡು. ಇದುವೇ ಆ ವೇದವೇತ್ತರ ದಿವ್ಯಾಶ್ರಮ. ಆ ಮಹಾಮುನಿಯ ಪದಪ್ರಭಾವದಿಂದ ಪರಿಸರವಹಾಲಿನ್ಯವು ಅಡಗಿ ನೀರು ಜಲಶುದ್ಧಿಯಾಗುವುದು. ಆ ಮುನಿಯು ಜಲಶುದ್ಧಿಗೆ ಕಾರಣನಾದವನು. ಆ ಭಗವಾನ್ ಅಗಸ್ತ್ಯರ ಪರ್ಣಕುಟೀರವು ತೇಜಃಪುಂಜವಾದ ಪುಣ್ಯಲೋಕದಂತೆ ಅಲ್ಲಿ ತೋರುತ್ತಿದೆ. ಬಾನಲ್ಲಿ ಅಗಸ್ತ್ಯನಕ್ಷತ್ರವು ಉದಯವಾದರೆ ಸಾಕು ಜಲಶುದ್ಧಿಯಾಗುವುದೆಂದು ಬಲ್ಲವರ ಮಾತು. ಸಮುದ್ರವು ಪ್ರಸನ್ನವಾಗುವುದು ಹಾಗೆಂದು ಪುರಾತನರು ಹೇಳುತ್ತಾರೆ.

ಅನ್ವಯ :—ಯೋ ಭ್ರೂಭೇದಮಾತ್ರೇಣ ನಹುಷಂ ಮಘೋನಃ ಪದಾತ್ ಪ್ರಭ್ರಂಶಯಾಂಚಕಾರ ತಸ್ಯ ಆವಿಲಾಂಭಃ ಪರಿಶುದ್ಧಿಹೇತೋಃ ಮುನೇಃ ಭೌಮಃ ಸ್ಥಾನಪರಿಗ್ರಹಃ ಅಯಮ್ ॥ ಪ್ರಭ್ರಂಶಯಾಂ ಯೋ ಇತ್ಯಾದಿ ॥

ಭ್ರೂಭೇದಮಾತ್ರೇಣೈವ — ಮಘೋನಃ ಪದಾದಿಂದ್ರತ್ವಾತ್—ಪ್ರಭ್ರಂಶಯಾಂ ಚಕಾರ = ಪ್ರಭ್ರಂಶಯತಿ ಸ್ಮ—ಆವಿಲಾಂಭಃ ಪರಿಶುದ್ಧಿ ಹೇತೋಃ=ಕಲುಷಜಲಪ್ರಸಾದ ಹೇತೋಸ್ತಸ್ಯ—ಅಗಸ್ತ್ಯೋದಯೇ ಶರದಿ ಪ್ರಸೀದತೀತ್ಯುಕ್ತಂ ಪ್ರಾಕ್—ಭೂಮೌ ಭವೋ ಭೌಮಃ ಸ್ಥಾನಪರಿಗ್ರಹ ಆಶ್ರಮೋಽಯಮ್—"ಭೌಮಃ" ಇತ್ಯನೇನ ದಿವ್ಯೋಽಪ್ಯಸ್ತೀತ್ಯುಕ್ತಮ್-ಪರಿಗೃಹ್ಯತ ಇತಿ ಪರಿಗ್ರಹಃ, ಸ್ಥಾನಮೇವ ಪರಿಗ್ರಹ ಇತಿ ವಿಗ್ರಹಃ ॥

37. ತ್ರೇತಾಗ್ನಿಧೂಮಾಗ್ರಮನಿಂದ್ಯಕೀರ್ತೇಃ ।
ತಸ್ಯೇದಮಾಕ್ರಾಂತವಿಮಾನಮಾರ್ಗಮ್ ॥
ಘ್ರಾತ್ವಾಹವಿರ್ಗಂಧಿರಜೋವಿಮುಕ್ತಃ ।
ಸಮಶ್ನುತೇ ಮೇ ಲಘಿಮಾನಮಾತ್ಮಾ ॥ ೩೭ ॥

ಎಲೌ ಫಣಿವೇಣಿ, ಧ್ರುಮುರಕುಂತಳೆ (ಅನಿಂದಿತಕೀರ್ತೆ), ನಮ್ಮ ವಿಮಾನಮಾರ್ಗವನ್ನು ಆಕ್ರಮಿಸಿ ಆ ಮಹಾತ್ಮನಾದ ಅಗಸ್ತ್ಯನ ಹವಿರ್ಗಂಧಯುತವಾದ ಯಾಗದ ಹೊಗೆಯು

ವನ್ನು ಸುತ್ತಲೂ ಕವಿದಿದೆ. ಆ ಕುಟಿಸಿಂದ ಎಸೆವ ಯಾಗಧೂಮವು ಆ ಮಹರ್ಷಿಯು ಗಾರ್ಹಪತ್ಯ, ದಾಕ್ಷಿಣಾಗ್ನಿ ಮತ್ತು ಆವಹನೀಯಾಗ್ನಿಗಳೆಂಬ ಮೂರು ತರದ (ತ್ರೇತಾಗ್ನಿ) ಅಗ್ನಿಗಳಿಂದ ಹೊರಟಿದೆ. ಅದು ನನ್ನ ದೇಹವನ್ನು ಸ್ಪರ್ಶಿಸಿದ ಕೂಡಲೇ ನಾನು ರಜೋಮುಕ್ತನಾಗಿ ಪೂತನಾದೆನು. ಆತ್ಮದಲ್ಲಿ ಅಡಗಿದ್ದ ಭಾರವಾದ ಪಾಪರಾಶಿಯು ತೊಲಗಿ ನನ್ನ ಆತ್ಮವೀಗ ಹಗುರವಾಗಿದೆ. ನಾನೀಗ ತೊಡುತೊಳಸುಗಳು ತೊಲಗಿ ನಿರ್ಮಲನಾಗಿದ್ದೇನೆ. ಆ ತಪೋಧನನು ಅಪಾರಕೀರ್ತಿಶಾಲಿಯಾದ, ಅಪಾರಮಹಿಮನಾದ ಕಲಶದಲ್ಲಿ ಹುಟ್ಟಿದ ಬ್ರಹ್ಮಋಷಿಯಾದ ವಿಶ್ವಗುರು ಅಗಸ್ತ್ಯನು, ಮಹಾವಿಭೂತಿಪುರುಷನು, ಅತ್ರಿ (ಲಘುವಾದುದೆನ್ನಾತ್ಮವಿದೂರಜವಸುಳಿದು).

ಅನ್ವಯ :-ಅನಿಂದ್ಯಕೀರ್ತೇಸ್ತಸ್ಯ ಆಕ್ರಾಂತವಿಮಾನಮಾರ್ಗಮ್ ಹವಿರ್ಗಂಧ ತ್ರೇತಾಗ್ನಿಧೂಮಾಗ್ರಂ ಘ್ರಾತ್ವಾ ರಜೋವಿಮುಕ್ತಃ ಮೇ ಆತ್ಮಾ ಲಘಿಮಾನಂ ಸಮಶ್ನುತೇ॥

ಅನಿಂದ್ಯಕೀರ್ತೇಸ್ತಸ್ಯಾಗಸ್ತ್ಯಸ್ಯ—ಆಕ್ರಾಂತವಿಮಾನಮಾರ್ಗಮ್—ಹವಿರ್ಗಂಧೋಽಸ್ಯಾಸ್ತೀತಿ ಹವಿರ್ಗಂಧಿತ್ರೇತಾಗ್ನಿರಗ್ನಿತ್ರಯಮ್—"ಅಗ್ನಿತ್ರಯಮಿದಂ ತ್ರೇತಾ" ಇತ್ಯಮರಃ॥ ತ್ರೇತಾಗ್ನೇರ್ಧೂಮಾಗ್ರಮಿದಂ ಘ್ರಾತ್ವಾಽಽಘ್ರಾಯ ರಜಸೋ ಗುಣಾದ್ವಿಮುಕ್ತೋ ಮೇ ಮಮ—ಲಘಿಮಾನಂ = ಲಘುತ್ವಗುಣಂ—ಸಮಶ್ನುತೇ=ಪ್ರಾಪ್ನೋತಿ
—ತ್ರೇತಾಗ್ನಿ= ಮೂರು ಅಗ್ನಿಗಳು ಒಟ್ಟಾಗಿ (ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿ)
—ರಜೋಮುಕ್ತ = ಪಾಪವಿದೂರ ॥

**38. ಏತನ್ಮುನೇರ್ಮಾನಿನಿ ಶಾತಕರ್ಣೇಃ ।**
**ಪಂಚಾಪ್ಸರೋ ನಾಮ ವಿಹಾರವಾರಿ ॥**
**ಆಭಾತಿಪರ್ಯಂತ ವನಂ ವಿದೂರಾತ್**
**ಮೇಘಾಂತರಾಲಕ್ಷ್ಯಮಿವೇಂದುಬಿಂಬಮ್ ॥ ೩೮ ॥**

ಹೇ ಅಂತರಂಗಪ್ರಿಯಳೆ (ಹೇ ಗಾನಲೋಲೆ, ಖರಹರಪ್ರಿಯೆ, ಸಿಂಧುಭೈರವಿರಾಗಪ್ರಿಯಳೆ), ಸುತ್ತಲೂ ಉಪವನಗಳಿಂದ ರಾರಾಜಿಸುತ್ತಿರುವ ಪಂಚಾಪ್ಸರ ಸರೋವರವನ್ನು ನೋಡು. ಅದು ಮಹಾಮುನಿಶ್ರೇಷ್ಠರಾದ ಶಾತಕರ್ಣಿ ಕ್ರೀಡಿಸುವ ಕೊಳವು. ಆ ಋಷಿಯು ಉಗ್ರತಪಸ್ಸಿಗೆ ಹೆದರಿ ದೇವರಾಜನಾದ ಇಂದ್ರನು ಐದು ಮಂದಿ ಅಪ್ಸರೆಯರನ್ನು ಕಳುಹಿಸಿದನು. ಆದರಿಂದ ಆ ಮುನೀಂದ್ರನ ಚಿತ್ತವು ಬೇರೆಡೆಗೆ ಹರಿಯುವಂತೆ ಮಾಡಿ ತಪೋಭಂಗಮಾಡಲೆಳಸಿದನು. ಅವನ ಎಣಿಕೆಯಂತೆ ಮುನಿ ಶಾತಕರ್ಣಿಯು ಆ ಸರೋವರದ ಜಲರಾಶಿಯಲ್ಲಿಳಿದು ಆ ಅಪ್ಸರೆಯರೊಂದಿಗೆ ಜಲಕ್ರೀಡೆಯಾಡುತ್ತ ವೇಳೆ ಕಳೆಯುತ್ತಲಿದ್ದನು. ಹೇ ಪರಿಶುದ್ಧಾತ್ಮಳೆ, ನಾವು ಯಾನಮಾಡುತ್ತಬರುತಿರಲು ದೂರದಲ್ಲಿ ಪಂಚಾಪ್ಸರ ಸರೋವರವು ಥಳಥಳನೆ ಹೊಳೆಯುತ್ತ ಚಂದ್ರನ ಬಿಂಬದಂತೆ ತೋರುತ್ತಿದೆ. ಆದರೆ ಮೇಘಮಾಲಿಗಳು ನಮ್ಮ ದೃಷ್ಟಿಪಥವನ್ನು ಅಡ್ಡೈಸಿಬರುವುದರಿಂದ, ಸುತ್ತಲೂ ಮರಗಿಡಗಳಿಂದ ಆವರಿಸಿರುವ ಪಂಚಾಪ್ಸರ ಸರೋವರವು ಸ್ಪಷ್ಟವಾಗಿ ತೋರದೆ, ನಸುತೋರುತ್ತ ಮುಗಿಲ ಮರೆಯಿಂದ ಇಣುಕುವ ಚಂದ್ರನಂತೆ (ಶಶಿಯಂತೆ, ಇಂದುವಿನಂತೆ) ತೋರುವುದು.

"ಹೇ ಮಾನಿನಿ, ಶಾತಕರ್ಣೇ, ಮುನೇಃ ಸಂಬಂಧಿ ನಾಮ "ಪಂಚಾಪ್ಸರಃ" ಇತಿ ಪ್ರಸಿದ್ಧಮ್—ಪಂಚ ಅಪ್ಸರಸೋ ಯಸ್ಮಿನ್ನಿತಿ ವಿಗ್ರಹಃ—ವಿಹಾರವಾರಿ = ಕ್ರೀಡಾ ಸರೋವರ—ಮೇಘಾನಾಮಂತರೇ ಮಧ್ಯ ಆಲಕ್ಷ್ಯಮಿಷದೃಶ್ಯಮ್—ಇಂದುಬಿಂಬ ಮಿವ—ಆಭಾತಿ ॥

**39. ಪುರಾ ಸ ದರ್ಭಾಂಕುರಮಾತ್ರವೃತ್ತಿಃ ।**
**ಚರನ್ ಮೃಗೈಃ ಸಾರ್ಧಮೃಷಿರ್ಮಘೋನಾ ॥**
**ಸಮಾಧಿಭೀತೇನ ಕಿಲೋಪನೀತಃ ।**
**ಪಂಚಾಪ್ಸರೋ ಯೌವನಕೂಟಬಂಧಮ್ ॥ ೩೯ ॥**

ಓ ಸ್ತ್ರೀರತ್ನಳೆ (ಓ ರತ್ನಪ್ರಿಯೆ). ಆ ಶ್ರೇಷ್ಠನಾದ, ಉಗ್ರತಪಸ್ವಿಯಾದ ಶಾತಕರ್ಣಿ ಮುನಿವರೇಣ್ಯನು ದರ್ಭೆಹುಲ್ಲಿನ ಕುಡಿಗಳನ್ನು ಮೆಲ್ಲುತ್ತಾ, ಹರಿಣಗಳ ಜೊತೆ ಅಲೆಯುತ್ತಾ (ಓಡಾಡುತ್ತಾ) ಘೋರತಪಸನ್ನು ಆಚರಿಸತೊಡಗಿದನು. ಆದರಿಂದ ಭಯಭೀತನಾದ ಇಂದ್ರನು ಶಾತಕರ್ಣಿ ಮುನಿಶ್ರೇಷ್ಠನ ಸಮಾಧಿಸ್ಥಿತಿಯನ್ನು ಭಂಗ ಗೊಳಿಸಲು ಉಪಾಯ (ಹುನ್ನಾರು) ಹೂಡಿದನು. ಮಘವಂತನು ಆ ಮುನಿಯ ತಪಕಂಜಿ ಒಂದು ಷಡ್ಯಂತ್ರವನ್ನು ಹೂಡಿ ಸೌಂದರ್ಯದ ಸಾಕಾರಮೂರ್ತಿಗಳಾದ ಐದು ಮಂದಿ ಚಿರಯೌವನಶಾಲಿಗಳಾದ ಅಪ್ಸರೆಯರನ್ನು ಕಳಿಸಿದನು. ಪುರಂದರನ ಎಣಿಕೆಯಂತೆ ಆ ಮುನಿಯು ಅವರ ಕೂಟಬಂಧವನ್ನು (ದೇಹಸುಖವನ್ನು) ಬಯಸಿ ವಿಷಯಲಂಪಟ ನಾದನು. ಇದರಿಂದ ಮಘವಂತನ ಇಚ್ಛೆ ಫಲಿಸಿತು. ಶಾತಕರ್ಣಿ ಅಡ್ಡದಾರಿ ಹಿಡಿದನು.

ಪುರಾ ಪೂರ್ವಸ್ಮಿನ್ ಕಾಲೇ ದರ್ಭಾಂಕುರಮಾತ್ರವೃತ್ತಿಸ್ಸನ್ ಮಾತ್ರಾಹಾರೋ ಮೃಗೈಃ ಸಾರ್ಧಂ ಸಹಚರನ್—ಸಮಾಧೇ = ಸ್ತಪಸೋ—ಮಘೋನೇಂದ್ರೇಣ—ಪಂಚಾನಾಮಪ್ಸರಸಾಂ ಯೌವನಮ್—ತದ್ಧಿತಾರ್ಥಃ—ಇತ್ಯಾದಿನೋತ್ತರಪದಸಮಾಸಃ (ಪಾಣಿನಿ) ತದೇವ ಕೂಟಬಂಧಮ್ ಕಪಟಯಂತ್ರಮುಪನೀತಃ—"ಉನ್ಮಾಥಂ ಕೂಟ ಯಂತ್ರಂ ಸ್ಯಾತ್" ಇತ್ಯಮರಃ ॥

**40. ತಸ್ಯಾಯಮಂತರ್ಹಿತಸೌಧಭಾಜಃ ।**
**ಪ್ರಸಕ್ತಸಂಗೀತಮೃದಂಗಘೋಷಃ ॥**
**ವಿಯದ್ಗತಃ ಪುಷ್ಪಕಚಂದ್ರಶಾಲಾಃ ।**
**ಕ್ಷಣಂ ಪ್ರತಿಶ್ರುನ್ಮುಖರಾಃ ಕರೋತಿ ॥ ೪೦ ॥**

ಹೇ ಭಕ್ತಕುಟುಂಬಿನಿ, (ಹೇ ಭಾಗ್ಯ), ಹೇ ದೇವಿ, ಪುಷ್ಪಕದ ಶಿರೋಭಾಗದಲ್ಲಿರುವ ಚಂದ್ರಶಾಲೆಯಲ್ಲಿ ಸಂಗೀತದ ನಾದವು ಕೇಳಿಬರುವುದನ್ನು ಆಲಿಸು. ಮೃದಂಗದ ಶಬ್ದವು (ಚಂಡೆಮದ್ದಳೆ ಸದ್ದು, ಅಬ್ಬರ ತಾಳ) ಮೇಘದ ನಾದದಂತೆ ಪ್ರತಿಧ್ವನಿಯಾಗುತ್ತಿದೆ. ಆ ಮುನಿಪನು (ಶಾತಕರ್ಣಿ) ಪಂಚಾಪ್ಸರೆಯರೊಂದಿಗೆ ಆ ಸರೋವರದ ಒಳಭಾಗದಲ್ಲಿ ಒಂದು ಸೌಧವನ್ನು ಕಟ್ಟಿ ವಾಸಿಸುತ್ತಿರುವನು. ಅಲ್ಲಿ ಅವನು ಹಗಲುರಾತ್ರಿಯೆಂಬ ಸಮಯದ ಗೊಡವೆಯಿಲ್ಲದೆ, ಸಂಗೀತನೃತ್ಯಲೋಲನಾಗಿ ಸಮಯವನ್ನು ಕಳೆಯುತ್ತಿರು

ಪನು. ಅವರ ಗಾಯನದ ಮೊಳಗು (ಅಬ್ಬರತಾಳ) ಅಂಬರವನ್ನು ಆಕ್ರಮಿಸುತ್ತ ರಣ ರಣಿಸುತ್ತಿದೆ, ಮೊಳಗುತ್ತಿದೆ. ಪುಷ್ಪಕದ ಶಿರೋಗೃಹದಲ್ಲಿ ಅದನ್ನು ಆಲಿಸಿದೋ ಭರದೆ.

ಅಂತರ್ಹಿತಸೌಧಭಾಜೋ = ಜಲಾಂತರ್ಗತ ಪ್ರಾಸಾದಗತಸ್ಯ—ವಿಯದ್ಗತಃ ಸನ್ ಪುಷ್ಪಕಸ್ಯ—ಚಂದ್ರಶಾಲಾ = ಶಿರೋಗೃಹಾಣಿ—''ಚಂದ್ರಶಾಲಾಶಿರೋಗೃಹಮ್'' ಇತಿ ಹಲಾಯುಧಃ—ಕ್ಷಣಂ ಪ್ರತಿಶ್ರುದ್ಭಿಃ = ಪ್ರತಿಧ್ವನ್ಯೈ—ಮುಖರಾ = ಧ್ವನಂತೀಃ— ''ಸ್ತ್ರೀಪ್ರತಿಶ್ರುತ್ಪ್ರತಿಧ್ವಾನೇ'' ಇತ್ಯಮರಃ—ಅಂತರ್ಹಿತ = ಅಂತರ್ಹಿತಃ ಸೌಧಃ ತಂ ಭಜತೇ ಇತಿ ॥

**41. ಹವಿರ್ಭುಜಾಮೇಧವತಾಂ ಚತುರ್ಣಾಂ ।**
**ಮಧ್ಯೇ ಲಲಾಟಂ ತಪಸಪ್ತಸಪ್ತಿಃ ॥**
**ಅಸೌ ತಪಸ್ಯತ್ಯ ಪರಸ್ತಪಸ್ವೀ ।**
**ನಾಮ್ನಾ ಸುತೀಕ್ಷ್ಣಶ್ಚರಿತೇನ ದಾಂತಃ ॥ ೪೧ ॥**

ಹೇ ಭ್ರಮರಕುಂತಳೆ, ಜಾನಕಿ (ಹೇ ಬ್ರಾಹ್ಮಿ) (ಹೇ ಬ್ರಹ್ಮಸ್ವರೂಪಿಣಿ), ಅದೋ ಅಲ್ಲಿ ಕಾಣುತ್ತಿದೆ ಸುತೀಕ್ಷ್ಣನೆಂಬ ತಾಪಸೋತ್ತಮನ ಆಶ್ರಮ. ಆ ಮಹಾತ್ಮನು ತನ್ನ ಸುತ್ತ ನಾಲ್ಕು ದೆಸೆಗಳಲ್ಲಿ ಕಟ್ಟಿಗೆಯು ಬೆಂಕಿಯು ಉರಿಯನ್ನು ರಾಶಿಹಾಕಿ ಮಧ್ಯದಲ್ಲಿ ನಿಂದು ದಾರುಣವಾದ ಕಠಿಣತಪಸ್ಸನ್ನು ಆಚರಿಸುತ್ತಿರುವವನು. ಅವನ ನೆತ್ತಿಯ ಮೇಲೆ ಸಹಸ್ರ ಕಿರಣನಾದ (ಸಪ್ತಾಶ್ವ) ಸೂರ್ಯದೇವನು ಉರಿಬಿಸಿಲನ್ನು ಕಾರುತ್ತಿರುವನು. ಆ ತಾಪ ಗಳೆಲ್ಲವನ್ನು ಸಹಿಸಿಕೊಂಡು ಸೌಮ್ಯನಾಗಿ, ಸದಾಚಾರಸಂಪನ್ನನಾದ ಋಷಿವರನು ಅತ್ಯಂತ ಘೋರತಪವೆಸಗುತ್ತಿರುವನು.

ದಾಂತಃ=ಸೌಮ್ಯೋ—ಅಸಾವಪರಸ್ತಪಸ್ವೀ—ಏಧಿವತಾಮಿಂಧನವತಾಮ್—''ಕಾಷ್ಠ ದಾರ್ವಿಂಧನಂತ್ವೇದಃ'' ಇತ್ಯಮರಃ॥ ಲಲಾಟಂತಪತೀತಿ ಲಲಾಟಂ ತಪಃ ಸಪ್ತಸಪ್ತಿಃ ಸಪ್ತಾಶ್ವಃ ಸೂರ್ಯೋಯಸ್ಯ ಸ ತಥೋಕ್ತಃ ಸನ್—ಏಧವತಾಮ್=ಏಧಾಂಸಿ ವಿದ್ಯತೇ = ಏಧಸ್ (ನಾಮಪದ) ಏಧ = ಅಗ್ನಿ ॥

**42. ಅಮುಂ ಸಹಾಸಪ್ರಹಿತೇಕ್ಷಣಾನಿ ।**
**ವ್ಯಾಜಾರ್ಧಸಂದರ್ಶಿತ ಮೇಖಲಾನಿ ॥**
**ನಾಲಂ ವಿಕರ್ತುಂ ಜನಿತೇಂದ್ರಶಂಕಂ ।**
**ಸುರಾಂಗನಾ ವಿಭ್ರಮಚೇಷ್ಟಿತಾನಿ ॥ ೪೨ ॥**

ಹೇ ಜನಕಸಂಜಾತೆ (ಭೂಜಾತೆ, ಹೇ ಪರಮಪುನೀತೆ), ಸುತೀಕ್ಷ್ಣಮುನಿಯ ಉಗ್ರ ತಪಸನ್ನು ಕಂಡು ಶಂಕಿಸಿದ ಸುರಲೋಕದ ಶಾಸಕ ಮಹೇಂದ್ರನು ಸುರಸುಂದರಿಯರಾದ ಅಪ್ಸರೆಯರನ್ನು ಕಳುಹಿಸಿ ಅವನ ತಪೋಭಂಗಕ್ಕೆ ವಿಶ್ವಪ್ರಯತ್ನಮಾಡಿದನು. ಆ ಮಾಯಾಂಗನೆಯರು ತಮ್ಮ ಒನಪುಒಯ್ಯಾರದಿಂದ, ಬೆಡಗುಬಿನ್ನಾಣದಿಂದ ವಿಚಲಿತ ನನ್ನಾಗಿ ಮಾಡಲು ಪೇಚಾಡಿದರು, ತಿಪ್ಪರಲಾಗಹಾಕಿದರು. ತಮ್ಮ ದಟ್ಟಪುಷ್ಟ ಅಂಗಾಂಗ

ಗಳನ್ನು ಒಂದಲ್ಲ ಒಂದು ನೆಪದಿಂದ ತೋರುವುದು (ಪ್ರದರ್ಶಿಸು), ಕುಡಿನೋಟ
ಬೀರುವುದು, ಬೇಕೆಂತಲೇ ಮುಗುಳುನಗುವುದು, ಚೆಲ್ಲಾಟವಾಡುವುದು, ಲಲ್ಲೆಗರೆವುದು
ಮೊದಲಾದ ಸ್ತ್ರೀಸಹಜವಾದ ಹಾವಭಾವ ತೋರಿದರು. ಬೆಡಗಿಯರಾದ ಅವರು
ಸೊಂಟದೊಡ್ಯಾಣವನ್ನು ಸರಿಪಡಿಸುವ ನೆವದೆ ಕಟಿಯನ್ನು ನಸುತೋರಿ ಚಿತ್ತಸೂರೆ
ಮಾಡಲು ಬಗೆದರೂ ಆ ಮುನೀಂದ್ರನು ಅಚಲನಾಗಿ ಅಭೇದ್ಯನಾಗಿಯೇ ತಪವೆಸಗುತ್ತ
ಗುರಿಯತ್ತ ಸಾಗಿದನು (ಬಿಂಕಗೊಂಡ ಅಮರಿಯರ ಬೆಡಗಿನಿಂದ ಅವಿಚಲನು).

ಪ್ರಹಿತಾನೀಕ್ಷಣಾನಿ = ದೃಷ್ಟಯೋ ಯೇಷು ತಾನಿ—ವ್ಯಾಜೇನ = ಕೇನಚಿನ್ಮಿಷೇಣ
—"ಪುಂಸ್ಯರ್ಧೋಽರ್ಧಸಮೇಂಽಶಕೇ" ಇತಿ ವಿಶ್ವಃ ॥ ಅರ್ಧವಿಹಾಷತ್ ಸಂದರ್ಶಿತಾ
ಮೇಖಲಾ ಯೇಷು ತಾನಿ ಸುರಾಂಗನಾನಾಮಿಂದ್ರಪ್ರೇಷಿತಾನಾಂ — ವಿಭ್ರಮಾ =
ವಿಲಾಸಾ ಏವ ಚೇಷ್ಟಿತಾನಿ—ವಿಕರ್ತುಂ = ಸ್ಖಲಯಿತುಂ—ಅಮಲಂ ಸಮರ್ಥೋಽನಿನ ॥

43. ವಿಷೋಽಕ್ಷಮಾಲಾವಲಯಂ ಮೃಗಾಣಾಂ ।
ಕಂಡೂಯಿತಾರಂ ಕುಶಸೂಚಿಲಾವಮ್ ॥
ಸಭಾಜನೇ ಮೇ ಭುಜಮೂರ್ಧ್ವಬಾಹುಃ ।
ಸವ್ಯೇತರಂ ಪ್ರಾಧ್ವಮಿತಃ ಪ್ರಯುಂಕ್ತೇ ॥ ೪೩ ॥

ಹೇ ಮೋಹನೆ (ಹೇ ಮನೋಜ್ಞೆ), ಆ ಮಹಾತ್ಮನಾದ, ರಾಜಯೋಗಿ(ಹಠಯೋಗಿ)
ಯಾದ ಸುತೀಕ್ಷ್ಣಮುನಿಸಾರ್ವಭೌಮನು ನಮ್ಮನ್ನು ಕಂಡೊಡನೆಯೇ, ನಮ್ಮ ದರ್ಶನ
ದಿಂದ ಪುಲಕಿತನಾಗಿ, ಭಕ್ತಿಭಾವದಿಂದ ಹರ್ಷಗೊಂಡು, ತನ್ನ ಬಲಗೈಯನ್ನೆತ್ತಿ ಗೌರವಿಸು
ತ್ತಿರುವನು. ಅಹಿಂಸಾಧರ್ಮಪರಾಯಣನಾದ ಆ ವಿಶ್ವಬಂಧುವು, ಯಾವ ತನ್ನ ಪವಿತ್ರ
ವಾದ ಕೈಯಿಂದ ಸಾಧುಪ್ರಾಣಿಗಳಾದ ಜಿಂಕೆಗಳ ಮೈನವೆಯನ್ನು ತುರಿಸಿ ಕಳೆಯುತ್ತ
ಲಿರುವನೋ, ಎಳೆಯ ಕುಶಸೂಚಿಗಳನ್ನು (ಎಳೆಯ ದರ್ಭಾಂಕುರಗಳನ್ನು) ಆಯ್ದು
ಕೊಳ್ಳುತ್ತಿರುವನೋ, ಪವಿತ್ರವಾದ ರುದ್ರಾಕ್ಷಿಮಾಲೆಯ ಬಳೆಗಳನ್ನು ಧರಿಸಿ ಮೆರೆಯುತ್ತ
ಲಿರುವನೋ ಅಂತಹ ಪರಮಪವಿತ್ರವಾದ ತನ್ನ ಬಲದ ವರದಹಸ್ತವನ್ನು ಮೇಲಕ್ಕೆತ್ತಿ
ಅದೋ ಆದರವನ್ನು ಪ್ರಕಟಿಸುತ್ತಿರುವನು, ಆ ಮಹಾತಪೋಧನನು.

ಏಭಿರ್ವಿಶೇಷಣೈರ್ದಯಾಶೀಲತ್ವಮ್ ಭೂತದಯಾಕರ್ಮಕ್ಷಮತ್ವಂ ಚ ಧ್ವನ್ಯತೇ
—ಸವ್ಯಾದಿತರಂ ದಕ್ಷಿಣಂ ಭುಜಂ ಮೇ ಮಮ ಸಭಾಜನೇ ಸಮ್ಮಾನನಿಮಿತ್ತೇ—
"ನಿಮಿತ್ತಾತ್ ಕರ್ಮಯೋಗೇ" ಇತಿ ಸಪ್ತಮೀ (ಪಾಣಿನಿ)—ಪ್ರಾಧ್ವಂ = ಪ್ರಕೃತಾನು
ಕೂಲಬಂಧಂ—"ಅನುಕೂಲ್ಯಾರ್ಥಕಂ ಪ್ರಾಧ್ವಮ್" ಇತ್ಯಮರಃ ॥

44. ವಾಚಂ ಮತ್ವಾತ್ ಪ್ರಣತಿಂ ಮಮೈಷ ।
ಕಂಪೇನ ಕಿಂಚಿತ್ ಪ್ರತಿಗೃಹ್ಯ ಮೂರ್ಧ್ನಃ ॥
ದೃಷ್ಟಿಂ ವಿಮಾನವ್ಯವಧಾನಮುಕ್ತಾಂ ।
ಪುನಃ ಸಹಸ್ರಾರ್ಚಿಷಿ ಸನ್ನಿಧತ್ತೇ ॥ ೪೪ ॥

ಆ ಮುನಿಮೌಳಿ ಮೌನವ್ರತಿಯಾದುದರಿಂದ (ಮುನಿ ಮೌನಿಯಾದುದರಿಂ) ನನ್ನ ನಮನಗಳನ್ನು ತನ್ನ ತಲೆಯನ್ನು ಸ್ವಲ್ಪ ಅಲುಗಾಡಿಸುತ್ತಾ (ನಸುಕಂಪಿಸುತಾ) ಸ್ವೀಕರಿಸುತ್ತಿರುವನು, ಪುಷ್ಪಕವಿಮಾನ ಒಂದರೆಕ್ಷಣ ಸೂರ್ಯನನ್ನು ಮರೆಮಾಡಿ ಬಂದಿದ್ದು ಈದೀಗ ತನ್ನ ದೃಷ್ಟಿಯನ್ನು (ವ್ಯವಧಾನವನ್ನು) ಸಹಸ್ರಾರ್ಚಿಯಾದ ರವಿಯ ಕಡೆಗೆ ಕೇಂದ್ರೀಕರಿಸಿ, ರವಿಯಲ್ಲೇ ದೃಷ್ಟಿಯ ನೆಟ್ಟು ತನ್ನ ಮಹಾತಪಸ್ಸನ್ನು ಮುಂದುವರಿಸುತ್ತಿರುವನು (ಆ ಸಹಸ್ರಾರ್ಚಿಯೊಳು ನೆಟ್ಟಿರುವನು ಇವನು).

ವಾಚಂ ಯಚ್ಛತೀತಿ ವಾಚಂಯಮೋ ಮೌನವ್ರತೀ—"ವಾಚಿ ಯಮೋ ವ್ರತೇ"—ಇತಿ ಖಚ್ ಪ್ರತ್ಯಯಃ—ವಾಚಂಯಮಪುರಂದರೌ" ಚ ಇತಿ ಮುಮ್ (ಪಾಣಿನಿ)—ತಸ್ಯ ಭಾವಸ್ತತ್ತ್ವಾನ್ ಮಮ ಪ್ರಣತಿಂ ಕಿಂಚಿನ್ ಮೂರ್ಧ್ನಃ ಕಂಪೇನ ಪ್ರತಿಗೃಹ್ಯ ವಿಮಾನೇನ ವ್ಯವಧಾನಂ ತಿರೋಧಾನಂ ತಸ್ಮಾನ್ ಮುಕ್ತಾಮ್—ದೃಷ್ಟಿಂ ಪುನಃ ಸಹಸ್ರಾರ್ಚಿಷಿ ಸೂರ್ಯೇ ಸನ್ನಿಧತ್ತೇ ॥

45. ಅದಃ ಶರಣ್ಯಂ ಶರಭಂಗನಾಮ್ನಃ ।
ತಪೋವನಂ ಪಾವನಮಾಹಿತಾಗ್ನೇಃ ॥
ಚಿರಾಯ ಸಂತರ್ಪ್ಯ ಸಮಿದ್ಭಿರಗ್ನಿಂ ।
ಯೋ ಮಂತ್ರಪೂತಾಂ ತನುಮಪ್ಯಹೌಷೀತ್ ॥ ೪೫ ॥

ಹೇ ಮೈಥಿಲಿ (ಹೇ ಸುಮಂಗಲಿ, ಹೇ ಸಾಧ್ವಿ), ಅದೋ ಕೆಳಗೆ ಭೂತಲದಲ್ಲಿ ಶರಭಂಗ ಋಷಿಯ ಮಂಗಳತಪೋಭೂಮಿಯು. ಆ ಆಶ್ರಮದಲ್ಲಿ ಆ ಋಷಿಯ ನೆನಪಿಗೆ ಸಾಂಕೇತಿಕವಾಗಿ ಹಗಲುರಾತ್ರಿ ನಿರ್ಮಲವಾದ ಆಹಿತಾಗ್ನಿಯು ಉರಿಯುತ್ತಲೇ ಇದೆ. ಹೇ ಸುಭಗೆ, ಶರಭಂಗಋಷಿಯು ಮಹಾತೇಜಸು. ಆತನು ಸಕಲಮಾನವರಿಗೆ ಮಾರ್ಗದರ್ಶಕನು, ಆಶ್ರಯದಾತನು, ವಿಶ್ವಬಂಧು, ವಿಶ್ವಮಾನವ, ದೀನಜನಬಂಧು, ಭಕ್ತಕುಟುಂಬಿ, ಆರ್ತಜನರಕ್ಷಕ, ಆಪದ್ಬಂಧು. ಮಹಾತೇಜನಾದ ಅವನು (ಸೂರ್ಯನಂತೆ) ಅಗ್ನಿಯಂತೆ ಉರಿಯುತ್ತಿರುವನು. ಅವನು ಭಗವಂತನ ಶರಣನು, ಶರಣಜನಮಂದಾರನು. ಆತನು ತನ್ನ ಈ ಆಶ್ರಮದಲ್ಲಿ ಆಹಿತಾಗ್ನಿಯನ್ನು ನಿತ್ಯವೂ ಬೆಳಗುತ್ತಾ, ಬಹುಕಾಲ ತಣಿಸಿ, ಪವಿತ್ರವಾದ ಸಮಿತ್ತುಗಳಿಂದ ಅಗ್ನಿಯನ್ನು ತೃಪ್ತಿಗೊಳಿಸುವಂತೆ ತನ್ನ ಪವಿತ್ರವಾದ ನಿಜತನುವನ್ನು (ತನ್ನ ದೇಹವನ್ನು) ಮಂತ್ರಗಳಿಂದ ಪವಿತ್ರಗೊಳಿಸಿ (ಶುದ್ಧಿಗೊಳಿಸಿ) ಕೊನೆಗೆ ಅಗ್ನಿಗೇ ಅರ್ಪಿಸಿದ ಅವಧೂತನು. ಹೀಗೆ ಪವಿತ್ರಾಗ್ನಿಯಲ್ಲಿ ತನ್ನ ದೇಹವನ್ನು ಹೋಮಿಸಿ ಇಷ್ಟಲೋಕಕ್ಕೆ ತೆರಳಿದ ಮಹಾತಪಸ್ವಿ. ಹೇ ಸೀತೆ, ಇಂತಹ ಮಹತ್ಕಾರ್ಯವನ್ನು ಯಾವ ಮಾನವನು ಮಾಡಲು ಲೋಕತ್ರಯಗಳಲ್ಲಿ ಸಮರ್ಥನಾದಾನು (ಅಗ್ನಿಯನು ಬೇಳಿದನು ಮನುಪೂತ ನಿಜತನುವನು) ?

ಶರಣೇ ರಕ್ಷಣೇ ಸಾಧು ಶರಣ್ಯಮ್—ಪಾವಯತೀತಿ ಪಾವನಮ್—ದೃಶ್ಯಮಾನಮ್ ತಪೋವನಮಾಹಿತಾಗ್ನೇಃ ಶರಭಂಗನಾಮ್ನೋ ಮುನೇ ಸಂಬಂಧಿ—ಯಃ ಶರಭಂಗಶ್ಚಿರಾಯ ಚಿರಮಗ್ನಿಂ ಸಮಿದ್ಭಿಃ ಸಂತರ್ಪ್ಯ ತರ್ಪಯಿತ್ವಾ ತತೋ ಮಂತ್ರೈಃ ಪೂತಾಂ ಶುದ್ಧಾಂ ತನುಮಪ್ಯಹೌಷೀದ್ಧುತವಾನ್ ॥

46. ಛಾಯಾವಿನೀತಾಧ್ವಪರಿಶ್ರಮೇಷು ।
ಭೂಯಿಷ್ಠ ಸಂಭಾವ್ಯ ಫಲೇಷ್ವಮೀಷು ॥
ತಸ್ಯಾತಿಥೀನಾಮಧುನಾ ಸಪರ್ಯಾ ।
ಸ್ಥಿತಾ ಸುಪುತ್ರೇಷ್ವಿವ ಪಾದಪೇಷು ॥ ೪೬ ॥

ಹೇ ಚಂಡಿ (ಹಟಮಾರಿ, ಚರ್ಪಟೆ-ಮುನಿವವಳು), ಈ ಉಪವನದಲ್ಲಿರುವ ತರುಗಳು ಆ ಋಷಿಯ ಮಕ್ಕಳಂತೆ ಅತಿಥಿ ಅಭ್ಯಾಗತರಿಗೆ ಆಶ್ರಯವಿತ್ತು ಅತಿಥಿಪೂಜೆಯನ್ನು ಮಾಡುತ್ತಿವೆ. ಹೇ ಚೆನ್ನೆ, ಹೇ ಚೆಲುವೆ, ಆ ಮರಗಳು ತಂಪಾದ ನೆರಳಿತ್ತು ಪಥಿಕರಿಗೆ ಹಾದಿ ನಡೆದ ಆಯಾಸವನ್ನು ಹೋಗಲಾಡಿಸುತ್ತಿವೆ. ಅಲ್ಲದೆ ಹೊಟ್ಟೆಹಸಿವನ್ನು ತಮ್ಮ ಅಮೃತದಂತಹ ಹಣ್ಣುಗಳಿಂದ ತಣಿಸುತ್ತಿವೆ (ತನಿವಣ್ಣುಗಳನ್ನಿತ್ತು), ಹಸಿವನ್ನು ನೀಗುತ್ತಿವೆ. ಸದಾಕಾಲವೂ ಯಥೇಚ್ಛವಾಗಿ ಫಲಬಿಡುವ ಮರಗಳಿಂದ ಇಡಿಕಿರಿದ ವನಭೂಮಿಯನ್ನು ನೋಡು, ಸತಿ. ಆ ಮರಗಳು ಋಷಿಯ ಕರ್ತವ್ಯನಿಷ್ಠರಾದ ಸುಪುತ್ರರಂತೆ (ಮಕ್ಕಳಂತೆ) ಅತಿಥಿಗಳ ಸೇವೆಯನ್ನು ಮಾಡುತ್ತ ತೃಪ್ತಿಪಡಿಸುತ್ತಿವೆ. ಅಲ್ಲಿಯ ಕೆರೆಕುಂಟೆಗಳು, ಜಲಾಶಯಗಳು ಒದಗಿಸುವ ಶುದ್ಧವಾದ ಪಾನೀಯವನ್ನು, ಶುದ್ಧೋದಕವನ್ನು ಕುಡಿಯಲು ಬಾಯಾರಿಕೆಯನ್ನು ತಣಿಸುತ್ತಿವೆ.

ಸಪರ್ಯಾ = ಅತಿಥಿಪೂಜಾ—"ಪೂಜಾನಮಸ್ಯಾಪಚಿತಿಃ : ಸಪರ್ಯಾರ್ಚಾರ್ಹಣಾಃ ಸಮಾಃ" ಇತ್ಯಮರಃ ॥ ಭೂಯಿಷ್ಠಾನಿ = ಬಹುತಮಾನಿ—ಸಂಭಾವ್ಯಾನಿ = ಶ್ಲಾಘ್ಯಾನಿ—ಪಾದಪೇಷ್ವಾಶ್ರಮವೃಕ್ಷೇಷು—ತತ್ಪುತ್ರೈರಿವ ಪಾದಪೈರನುಷ್ಠೀಯತ ಇತ್ಯರ್ಥಃ—ಭೂಯಿಷ್ಠ ಸಂಭಾವ್ಯ ಫಲೇಷು = ಸಂಭಾವ್ಯ = ಶ್ಲಾಘ್ಯ—ಅತಿಶಯೇನ ಪ್ರಾಪ್ಯಾನಿ ಫಲಾನಿ ಯೇಷಾಂ ತೇ ತೇಷು ॥

47. ಧಾರಾಸ್ವನೋದ್ಗಾರಿದರೀಮುಖೋಽಸೌ ।
ಶೃಂಗಾಗ್ರಲಗ್ನಾಂಬುದವಪ್ರಪಂಕಃ ॥
ಬಧ್ನಾತಿ ಮೇ ಬಂಧುರಗಾತ್ರಿ ಚಕ್ಷುಃ ।
ದೃಪ್ತಃ ಕಕುದ್ಮಾನಿವ ಚಿತ್ರಕೂಟಃ ॥ ೪೭ ॥

ಹೇ ಮಧುರಭಾಷಿಣಿ, ಹೇ ಕಲಕಂಠೆ (ಕೋಗಿಲೆಯ ದನಿಯವಳೇ), ಕೊಬ್ಬಿರುವ ಗೂಳಿಯು ಮಲೆತುನಿಂತಿರುವಂತೆ, ಚಿತ್ರಕೂಟಗಿರಿಯು ದೂರದಲ್ಲಿ ತೋರುತ್ತ ನನ್ನ ಸಕಲೇಂದ್ರಿಯಗಳಿಗೆ ಸಂತೋಷವನ್ನುಂಟುಮಾಡುತ್ತಿದೆ. ಹೇ ಸಾಧ್ವಿ, ನೋಡಲ್ಲಿ, ಅದರ ತೆರೆದ ಬಾಯಿಗಳಂತಿರುವ ಗವಿಗಳ ಒಳಿಯಲ್ಲಿ ಕಲಕಲನಾದವನ್ನು ಮಾಡುತ್ತಾ ಹರಿಯುತ್ತಿರುವ ಬೆಟ್ಟದ ಝರಿಗಳನ್ನು, ತೊರೆಗಳನ್ನು ನೋಡು. ಹೇ ಬಂಧುರಗಾತ್ರಿ (ಹೇ ಸುಮತಿ), ಬೆಟ್ಟದ ಇಳಿಜಾರುಗಳಲ್ಲಿ ಧಾರೆಧಾರೆಯಾಗಿ, ಕವಲುಕವಲಾಗಿ ಶಬ್ದಿಸುತ್ತ ಹರಿಯುತ್ತಿವೆ. ಬೆಟ್ಟದ ಕೋಡುಗಳು, ಮೋಡಗಳ ಕೆಸರಿನಿಂದ ಅಂಟಿಕೊಂಡಿವೆ. ಆ ಬೆಟ್ಟದ ವಿವಿಧ ಭಾಗಗಳಲ್ಲಿ ಮೋಡಗಳ ಕರ್ಣಕಠೋರವಾದ ಗುಡುಗಿನ ರವವು ಕೊಬ್ಬಿದ ಗೂಳಿಯ ಗುಟುರಿನ ನಾದದಂತೆ ಕೇಳಿಸುತ್ತಿದೆ. ಉನ್ನತವಾದ ಹಿಣಿಲುಳ್ಳ

ಕಾಡುಕೋಣವು (ಗೂಳಿಯು) ವಪ್ರಕ್ರೀಡೆಯಲ್ಲಿ ತನ್ಮಯವಾಗಿರುವಂತೆ ತೋರುತ್ತಿದೆ. ಪವಿತ್ರಧಾಮವಾದ ಚಿತ್ರಕೂಟವು ಕೊಬ್ಬಿದ ದೊಡ್ಡ ಕೋಣದಂತೆ ನನ್ನ ಕಣ್ಣಿಗೆ ಇಂಬಾಗಿ ಗೋಚರಿಸುತ್ತಾ ಆತ್ಮಾನಂದವೀಯುತ್ತ ನನ್ನ ಕಣ್ಣುಮನಸ್ಸುಗಳನ್ನು ಸೆಳೆಯುತ್ತಿದೆ (ಸೂರೆಗೊಳ್ಳುತ್ತಿದೆ).

ಧಾರಾ = ನಿರ್ಝರಧಾರಾ—ಯದ್ವಾ ಧಾರಯಾ ಸಾತತ್ಯೇನ ಸ್ವನೋದ್ಗಾರಿ ದರ್ಯೋವ ಮುಖಂ ಯಸ್ಯ ಸಃ—ಶೃಂಗಂ=ಶಿಖರಂ—ವಪ್ರಕ್ರೀಡಾಸಕ್ತಂ ಕೋ ಯಸ್ಯ ಸಃ—ಅಸೌ ಚಿತ್ರಕೂಟೋ ಹೇ ಬಂಧುರಗಾತ್ರಿ—ಉನ್ನತಾನತಾಂಗಿ=ಬಂಧುರಂ ತೂನ್ನತಾನತಮ್" ಇತ್ಯಮರಃ ॥ ದೃಪ್ತಃ ಕಕುದ್ಮಾನ್ ವೃಷಭ ಇವ—ಧಾರಾಸ್ವನೋ = ಧಾರಾಣಾಂ ಸ್ವನಾಃ ತೈಃ ಉದ್ಗಾರಿದರೀ ಏವ ಮುಖ್ಯಂ ಯಸ್ಯ—ಧಾರಯಾ ಸ್ವನೋದ್ಗಾರಿದರೀ ಇವ ಮುಖಂ ಯಸ್ಯ—ಬಂಧುರಗಾತ್ರಿ = ಸರ್ವಾಂಗಸುಂದರಿ (ಅಂಗಾಂಗಗಳು ಯೋಗ್ಯ ಪ್ರಮಾಣದಲ್ಲಿರುವ ಸ್ತ್ರೀ).

**48. ಏಷಾ ಪ್ರಸನ್ನಸ್ತಿಮಿತಪ್ರವಾಹಾ ।**
**ಸರಿದ್ವಿದೂರಾಂತರಭಾವತನ್ವೀ ॥**
**ಮಂದಾಕಿನೀ ಭಾತಿ ನಗೋಪಕಂಠೇ ।**
**ಮುಕ್ತಾವಲೀ ಕಂಠಗತೇವ ಭೂಮೇಃ** ॥ ೪೮ ॥

ಹೇ ಕೋಮಲೆ (ಹೇ ವಿಮಲೆ), ಅದೋ ದೂರದಲ್ಲಿ ಹರಿಯುವ ಮಂದಾಕಿನೀ ನದಿಯನ್ನು ನೋಡು. ನಿರ್ಮಲಜಲದಿಂದ ಒಪ್ಪುವ ಮಂದಾಕಿನಿಯು ಪ್ರಸನ್ನತೆಯನ್ನು ಪ್ರಕಟಿಸುವಂತೆ ತೋರಿ ಪ್ರವಹಿಸುತ್ತಿದೆ. ಬಹಳ ದೂರದಿಂದ ಹರಿದುಬರುವುದರಿಂದ ಆ ನದಿಯ ದೇಹವು (ತನುವು) ಅಥವಾ ಅದರ ಪಾತ್ರವು ತೆಳುವಾಗಿ ಅದರ ಪ್ರವಾಹದ ಓಟವು ನಿಧಾನವಾಗಿದೆ. ಮಂದಮಂದವಾಗಿ ಪ್ರವಹಿಸುತ್ತಿದೆ. ಅದರಲ್ಲಿರುವ ಜಲರಾಶಿಯು ಸ್ವಲ್ಪವಾಗಿ ಹರಿಯುತ್ತಾ ಚಿತ್ರಕೂಟ ಪರ್ವತದ ಕಂಠಹಾರದಂತೆ ಎಸೆಯುತ್ತಿದೆ. ಅದು, ಆ ನದಿಯು, ಚಿತ್ರಕೂಟಗಿರಿಯ ಬಳಿಯ ಭೂದೇವಿಯ (ವಸುಂಧರೆಯ) ಕೊರಳಿನ ಮುತ್ತಿನ ಹಾರದಂತೆ (ಪದಕಹಾರದಂತೆ) ಪ್ರಕಾಶಮಾನವಾಗಿ ಸೊಗಸಾಗಿ ಕಂಗೊಳಿಸುತ್ತಿದೆ.

ಪ್ರಸನ್ನೋ = ನಿರ್ಮಲವಾದ—ಸ್ತಿಮಿತೋ = ನಿಃಸ್ಪಂದಃ—ವಿದೂರಸ್ಯಾಂತರಸ್ಯ = ಮಧ್ಯವರ್ತ್ಯವಕಾಶಸ್ಯ—ಗೋಪಕಂಠೇನ ಭೂಮೇಃ=ಕಂಠಗತಾ ಮುಕ್ತಾವಲೀವ-ಭಾತಿ = ಶೋಭತೇ—ಅತ್ರ ನಗಸ್ಯ ಶಿರಸ್ತ್ವಂ ತದುಪಕಂಠಸ್ಯ ಚ ಗಮ್ಯತೇ—ಮುಕ್ತಾವಲೀ = ಮುತ್ತಿನ ಹಾರ.

**49. ಅಯಂ ಸುಜಾತೋಽನುಗಿರಂ ತಮಾಲಃ ।**
**ಪ್ರವಾಲಮಾದಾಯ ಸುಗಂಧಿ ಯಸ್ಯ ॥**
**ಯವಾಂಕುರಾಪಾಂಡುಕಪೋಲಶೋಭೀ ।**
**ಮಯಾವತಂಸಃ ಪರಿಕಲ್ಪಿತಸ್ತೇ** ॥ ೪೯ ॥

ಹೇ ಚಾರುಸ್ಮಿತಳೆ (ಭೂರಮೆಯ ಮಗಳೆ, ನಗುಮುಖದ ಚೆಲುವೆ, ಸುಂದರಿ) ಆ ಬೆಟ್ಟದ ಎಡೆಯಲ್ಲಿ ಬೆಳೆದುನಿಂತಿರುವ ಶ್ರೇಷ್ಠವಾದ, ರಮಣೀಯವಾದ ತಮಾಲವೃಕ್ಷಗಳ ಸಾಲನ್ನು ನೋಡು (ತಮಾಲ = ಹೊಂಗೆ). ಅದರ ಪರಿಮಳಯುಕ್ತವಾದ, ಘಮಘಮಿಸುವ ಹೂಗಳನ್ನು ಆಯ್ದು ಮುಗ್ಧೆ, ನಿನ್ನ ಕಿವಿಗಳಿಗೆ ಕರ್ಣಾಭರಣವಾಗಿ ನಾನು ತೊಡಿಸುತ್ತಿದ್ದೆನಲ್ಲವೆ? ಬೆಳಚಿದ ನಿನ್ನ ಮುಖಕಮಲಕ್ಕೆ ಯವಾಂಕುರದಂತೆ, ನಸುಬೆಳ್ಪಾಂತಿರುವ ಆ ಕಿವಿಯಲ್ಲಿ ಒಪ್ಪುತ್ತಿರುವ ನರುಗಂಪು ಬೀರುತ್ತಿರುವ ಹೊನ್ನೆಯ ಚಿಗುರುಕೊನೆಗಳು ನಿನ್ನ ಕೆನ್ನೆಯನ್ನು (ಕಪೋಲಗಳನ್ನು) ಹೊಳೆಯುವಂತೆ ಮಾಡುತ್ತ, ಕರ್ಣಾಭರಣದಂತೆ (ಓಲೆ, ಬೆಂಡೋಲೆ, ಬಿಚ್ಚೋಲೆ, ಹರಳೋಲೆ) ಸೌಂದರ್ಯವನ್ನು ಹೆಚ್ಚಿಸುತ್ತಿದ್ದುವು.

ಗಿರೇಃ ಸಮೀಪೇಽನುಗಿರಮ್–"ಗಿರೇಶ್ಚ ಸೇನಕಸ್ಯ" ಇತಿಸಮಾಸಾನ್ತಷ್ಟ ಚ ಪ್ರತ್ಯಯಃ —ಸಂಜಾತಃ ಸ ತಮಾಲೋಽಯಂ ದೃಶ್ಯತೇ—ಯಸ್ಯ ತಮಾಲಸ್ಯ—ಶೋಭನೋ ಗಂಧೋ ಯಸ್ಯ ತತ್ಸುಗಂಧಿ—"ಗಂಧಸ್ಯ" ಇತ್ಯಾದಿ ನೇಕಾರಃ ಸಮಾಸಾಂತಃ (ಪಾಣಿನಿ) —ಪ್ರವಾಲಂ=ಪಲ್ಲವಮಾದಾಯ–ಶೋಭೀ ಶೋಭತೇಯಃ ಸೋಽವತಂಸಃ ಪರಿಕಲ್ಪಿತಃ —ಯವಾಂಕುರಾ = ಯವದ ಅಂಕುರದಂತೆ ನಸುಹಳದಿ ಬಣ್ಣವನ್ನು ಹೊಂದಿರುವ.

**50.** **ಅನಿಗ್ರಹತ್ರಾ ಸ ವಿನೀತಸತ್ತ್ವಂ ।**
**ಅಪುಷ್ಪಲಿಂಗಾತ್ ಫಲಬಂಧಿವೃಕ್ಷಮ್ ॥**
**ವನಂತಪಃ ಸಾಧನಮೇತದತ್ರೇಃ ।**
**ಆವಿಷ್ಕೃತೋದಗ್ರತರಪ್ರಭಾವಮ್** ॥ ೫೦ ॥

ಹೇ ಮಂದಗಮನೆ, ಅದೋ ನೋಡು, ಮುಂದೆ ಎಸೆದು ಶೋಭಿಸುತ್ತಿರುವ ಅತ್ರಿಋಷಿಯ ಉಜ್ವಲತಪೋವನವನ್ನು. ಆ ಮುನಿಯ ಅಪಾರತಪಸಿನ ಮಹಿಮೆಯಿಂದ ಆ ಕಾಡಿನಲ್ಲಿರುವ ಸಿಂಹ, ಶಾರ್ದೂಲ, ವೃಕಾದಿ ಕ್ರೂರಮೃಗಗಳು, ತಮ್ಮ ಉಗ್ರ ಗುಣಗಳನ್ನು ತೊರೆದು ಸಾಧುಪ್ರಾಣಿಗಳಾಗಿವೆ. ಹಿಂಸೆಯನ್ನು ತೊರೆದು ಪಳಗಿರುವ ಸಾಕುಮೃಗಗಳಂತೆ ಒಡನಾಡುತ್ತಿವೆ. ಆ ಮಹಾಮುನಿಯ ತಪಃಪ್ರಭಾವದಿಂದ ಆ ತಪೋ ವನವಲ್ಲಿರುವ ಮರಗಳು ಪುಷ್ಪಗಳನ್ನು ಬಿಡದೆಯೆ (ಹೂವು ಬಿಡದೆ) ಫಲಗಳನ್ನು ಕೊಡುತ್ತಿವೆ. ಹೂವು ಬಿಡದೆಯೇ ತನಿವಣ್ಣುಗಳನ್ನು (ಹಣ್ಣುಗಳನ್ನು) ಕೊಡುತ್ತಿವೆ. ಇದು ಆ ಮಹಾಮಹಿಮನ ಮಹಿಮೆಗಳನ್ನು ಮರಗಳೇ ಜಗತ್ತಿಗೆ ಸಾರುತ್ತಿವೆ. ಆ ರಮಣೀಯ ಜಾಗವೇ ಮಹಾಮುನಿ ಅತ್ರಿಯ ತಪಃಸಿದ್ಧಿಯ ವನವು.

ಅನಿಗ್ರಹತ್ರಾಸಾ = ದಂಡಭಯರಹಿತಾ—ಫಲಬಂಧಿನಃ=ಫಲಗ್ರಹಿಣೋ—ಮುನೇಃ ತಪಸಃ ಸಾಧನಂ ವನಮೇತತ್ ॥

**51.** **ಅತ್ರಾಭಿಷೇಕಾಯ ತಪೋಧನಾನಾಂ ।**
**ಸಪ್ತರ್ಷಿಹಸ್ತೋದ್ಧೃತ ಹೇಮಪದ್ಮಾತ್ ॥**
**ಪ್ರವರ್ತಯಾಮಾಸ ಕಿಲಾನಸೂಯಾ ।**
**ತ್ರಿಸ್ರೋತಸಂ ತ್ರ್ಯಂಬಕಮೌಲಿಮಾಲಾಮ್** ॥ ೫೧ ॥

ಹೇ ಋಷಿಮುನಿವನಿತಾಪ್ರಿಯೆ, ಅದೋ, ಅತ್ರಿಮಹರ್ಷಿಯ ಅರ್ಧಾಂಗಿಯಾದ ಪರಮಸಾಧ್ವಿ, ಅದಿತಿಸಮಾನಳಾದ ಅನಸೂಯಾದೇವಿಯು ಈ ದೇವನದಿ ಭಾಗೀರಥಿಯನ್ನು ಈ ಎಡೆಯಲ್ಲಿ ಹರಿಯುವಂತೆ ಮಾಡಿದಳು. ಆ ಜಾಹ್ನವಿಯು ತ್ರಿಪಥಗೆ, ದೇವನದಿ. ತ್ರ್ಯಂಬಕನಾದ (ಮುಕ್ಕಣ್ಣನಾದ) ಶಿವನ ಜಡೆಯಲ್ಲಿ ಶಿರೋಭೂಷಣದಂತೆಯಿದ್ದು, ಶಿವನಿಗೆ ಸದಾ ಅಭಿಷೇಕಮಾಡುತ್ತ, ಆ ಬಳಿಕ ಭೂಮಿಗಿಳಿದು ಹರಿಯುತ್ತಿರುವ ಪರಮಪವಿತ್ರವಾದ ದೇವನದಿ. ಈ ನದಿಯಲ್ಲಿ ಬೆಳೆಯುತ್ತಿರುವ ಹೊನ್ನಿನ ತಾವರೆ ಹೂಗಳನ್ನು ಸಪ್ತರ್ಷಿಗಳು ಬಂದು (ಮರೀಚಿ, ವಸಿಷ್ಠ, ಅಂಗೀರಸ, ಅತ್ರಿ, ಪುಲಸ್ತ್ಯ, ಪುಲಹ, ಕ್ರತು) (ಶಿವಪೂಜೆಗೆಂದು) ಆಯ್ದುಕೊಂಡು ಹೋಗುತ್ತಿರುವರು. ಮುನಿಜನರ ಸ್ನಾನಕ್ಕೆಂದು ಆ ದೇವನದಿಯನ್ನು ಈ ಎಡೆಯಲ್ಲಿ ಹರಿಯುವಂತೆ ಮಹಾಮಹಿಮಳಾದ ಅನಸೂಯೆ ಮಾಡಿರುವಳು.

ಅನಸೂಯಾ = ಅತ್ರಿಪತ್ನೀ—"ದಿಕ್ ಸಂಖ್ಯೇ ಸಂಜ್ಞಾಯಾಮ್" ಇತಿ ತತ್ಪುರುಷ ಸಮಾಸಃ (ಪಾಣಿನಿ)—ತ್ರ್ಯಂಬಕಮೌಳಿಮಾಲಾಂ ಹರಶಿರಃ ಸ್ರಜಂತ್ರೀಸ್ರೋತ ಸಂಭಾಗೀರಥೀಃ ತಪೋಧನಾನಾಮ್ಮ್ಯಷೀಣಾ ಮಭಿಷೇಕಾಯ=ಸ್ನಾನಾಯ–ಪ್ರವರ್ತಯಾಮಾಸ = ಪ್ರವಾಹಯಾಮಾಸ ||

**52. ವೀರಾಸನೈರ್ಧ್ಯಾನಜುಷಾಮೃಷೀಣಾಂ |**
**ಅಮೀ ಸಮಧ್ಯಾಸಿತ ವೇದಿಮಧ್ಯಾಃ ||**
**ನಿವಾತನಿಷ್ಕಂಪತಯಾ ವಿಭಾಂತಿ |**
**ಯೋಗಾಧಿರೂಢಾ ಇವ ಶಾಖಿನೋಽಪಿ** || ೫೨ ||

ಹೇ ಪ್ರಿಯೆ, ಹೇ ಸಸ್ಯಕುಲ (ಸಂಜಾತ) ಸಂಪ್ರೀತೆ, ವೃಕ್ಷತಲದ ವೇದಿಮಧ್ಯದಲ್ಲಿ, ವೀರಾಸನದಲ್ಲಿ ಕುಳಿತು ಘನತಾಪಸೋತ್ತಮರು ಯೋಗಾರೂಢರಾಗಿ ಧ್ಯಾನಾಸಕ್ತರಾಗಿರುವರು. ಈ ಮಹರ್ಷಿಯ ಆಶ್ರಮದಲ್ಲಿ ಬೆಳೆದಿರುವ ಗಿಡಮರಗಳನ್ನು ನೋಡು, ಹೇ ಪುಷ್ಪವಲ್ಲಿ, ಮಾರುತನ ಸಂಚಾರವಿರದ ಕಾರಣ ವೃಕ್ಷಗಳು (ಮರಗಳು) ನೆಟ್ಟಗೆ ನಿಂತು ಅವುಗಳೂ ಅಲುಗಾಡದೆ ಮಾನವರಂತೆ, ಯೋಗಾರೂಢರಾದ ಮುನಿಪುಂಗವರಂತೆ, ಸ್ತಬ್ಧವಾಗಿ, ಪ್ರತಿಮೆಗಳಂತೆ, ಅತ್ತಿತ್ತ ಅಲುಗಾಡದೆ ಕೇಂದ್ರೀಕೃತರಾಗಿ ಧ್ಯಾನಮಾಡುವ, ಯೋಗಾಭ್ಯಾಸಮಾಡುವ ಮುನಿಪುಂಗವರಂತೆ (ಯೋಗಕಲಾನಿಧಿಗಳಂತೆ) ಯೋಗಾಭ್ಯಾಸ ಮಾಡುತ್ತಿರುವಂತೆ ಭಾಸವಾಗುತ್ತಿದೆ. ಹೇ, ಹಿತಚಿಂತಕಳೆ, ಋಷಿಗಳ ಸಂಬಂಧದಿಂದ, ಸಂಪರ್ಕದಿಂದ ಸಸ್ಯಗಳಾದ ತಾವೂ ಭಗವಂತನ ಪ್ರಾರ್ಥನೆ ಮಾಡುತ್ತಿರುವಂತೆ, ಯೋಗಾರೂಢರಾಗಿ ಧ್ಯಾನಮಾಡುವಂತೆ ತೋರುತ್ತಿದೆ, ರಮಣಿ (ಧ್ವನಿ).

ಅನ್ವಯ :–ವೀರಾಸನೈಃ ಧ್ಯಾನಜುಷಾಮ್ ಋಷೀಣಾಂ ಸಮಧ್ಯಾಸಿತ ವೇದಿಮಧ್ಯಾಃ ಅಮೀ ಶಾಖಿನೋಽಪಿ ನಿವಾತನಿಷ್ಕಂಪತಯಾ ಯೋಗಾಧಿರೂಢಾ ಇವ ವಿಭಾಂತಿ ||

ವೀರಾಸನೈರ್ಜಯಸಾಧನೈಃ—ಧ್ಯಾನಂ ಜುಷಂತೇ ಸೇವಂತ ಇತಿ ಧ್ಯಾನಜುಷಃ—ತೇಷಾಂತೈರುಪವಿಷ್ಯ ಧ್ಯಾಯಂತಾಮ್ಮ್ಯಷೀಣಾಂ = ಸಂಬಂಧಿನಃ—ಯೋಗಾಧಿರೂಢಾ ಇವ =ಧ್ಯಾನಭಾಜ ಇವ ವಿಭಾನ್ತಿ—ಧ್ಯಾಯನ್ತೋಽಪಿ ನಿಶ್ಚಲಾಂಗಾ ಭವಂತಿ" ವೀರಾಸನೇ

ವಸಿಷ್ಠಃ—ಏಕಪಾದಮಥೈಕಸ್ಮಿನ್ ವಿನ್ಯಸ್ಯೋರುಣೀ ಸಂಸ್ಥಿತಮ್—ಇತರಸ್ಮಿಂಸ್ತಥಾ ಚಾನ್ಯಂ ವೀರಾಸನಮುದಾಹೃತಮ್ ಇತಿ ॥

53. ತ್ವಯಾ ಪುರಸ್ತಾದುಪಯಾಚಿತೋ ಯಃ ।
ಸೋಽಯಂ ವಟಃ ಶ್ಯಾಮ ಇತಿ ಪ್ರತೀತಃ ॥
ರಾಶಿರ್ಮಣೀನಾಮಿವ ಗಾರುಡಾನಾಂ ।
ಸಪದ್ಮರಾಗಃ ಫಲಿತೋ ವಿಭಾತಿ ॥ ೫೩ ॥

ಹೇ ಸುಗಾತ್ರಿ, ಹೇ ಮನೋಹರಿ (ಪರಮೈಶ್ವರ್ಯನಿಧಿಯೆ, ಜ್ಞಾನಜ್ಯೋತಿಯೆ ಕಾಮಿತಾರ್ಥಪ್ರದಾಯಿನಿಯೆ) ನೀನು ಈ ಹಿಂದೆ ಪೂಜಿಸುತ್ತಿದ್ದ ಆಲದ ಮರವನ್ನು ನೋಡು (ಆಲ, ವಟವೃಕ್ಷ. ನ್ಯಗ್ರೋಧ). ಅದನ್ನು ನೀನು ''ಶ್ಯಾಮ'' ಎಂಬ ಪವಿತ್ರ ನಾಮದಿಂದ ಕರೆದು ಕೈಜೋಡಿಸಿ ವಂದಿಸುತ್ತಿದ್ದೆ. ನಿನ್ನ ಮನೋರಾಜ್ಯದಲ್ಲಿ ಆ ಮಹಾ ವೃಕ್ಷಕ್ಕೂ ಸ್ಥಾನ ಕಲ್ಪಿಸಿದ್ದೆಯಲ್ಲವೆ ? ಅದು ಜಸವಡೆದು ಕಾಂತಿಯಿಂದ ಪ್ರಕಾಶಿಸುತ್ತಿದೆ. ಅದು ಹಣ್ಣು, ಕಾಯಿ, ಹೂಗಳನ್ನು ಬಿಟ್ಟು ಫಲಭರಿತವಾಗಿದೆ. ಅಂದಿನ ಗಿಡ ಇಂದು ಮಹಾವೃಕ್ಷವಾಗಿ ಬೆಳೆದುನಿಂತು ಪದ್ಮರಾಗವು ಬೆರೆತ ಮರಕತದ ಮಣಿಗಳಂತೆ ಹಣ್ಣುಗಳಿಂದ ಇಡಿಕಿರಿದು ರಾರಾಜಿಸುತ್ತಿದೆ. ನೀನು ಬೆಳೆಸಿದ ಆ ಮಹಾವೃಕ್ಷಕ್ಕೆ ಇದೋ ನಾನು ನಮಸ್ಕರಿಸುತ್ತಿದ್ದೇನೆ. ''ಓ ಮಹಾವೃಕ್ಷವೇ, ನಿನಗೆ ಇದೋ ನನ್ನ ನಮನ'' (ವಂದನೆಗಳು).

ಉಪಯೋಚಿತಃ=ಪ್ರಾರ್ಥಿತಃ–''ನಮಸ್ತೇಽಸ್ತು ಮಹಾವೃಕ್ಷ, ಪಾಲಯೇನ್ಮೇ ವ್ರತಂ ಪ್ರತಿ''–ಸಪದ್ಮರಾಗೋಗಾರುಡಾನಾಂ ಮಣೀನಾಂ ಮರಕತಾನಾಂ ರಾಶಿರಿವ—ವಿಭಾತಿ ॥

54. ಕ್ವಚಿತ್ಪ್ರಭಾಲೇಪಿಭಿರಿಂದ್ರನೀಲೈಃ ।
ಮುಕ್ತಮಯೀ ಯಷ್ಟಿರಿವಾನುವಿದ್ಧಾ ॥
ಅನ್ಯತ್ರ ಮಾಲಾಸಿತ ಪಂಕಜಾನಾಂ ।
ಇಂದೀವರೈಃ ಉತ್ಖಚಿತಾಂತರೇವ ॥ ೫೪ ॥

ಹೇ ವಿಮಲಾಂಗಿ, ಅದೋ ದೂರದ ಪ್ರಯಾಗದಲ್ಲಿ ಯಮುನಾನದಿಯ ಕರಿದಾದ ಅಲೆಗಳಿಂದ ಬೆರೆತಿರುವ ಅಮಲವಾದ, ಪರಮಪಾವನ ನೀಲಗಂಗಾನದಿಯನ್ನು ನೋಡು. ಈ ಎರಡು ನದಿಗಳೂ ಸಂಗಮಿಸಿ ಒಂದಾದರೂ ಎರಡರ ಅಂದವೂ ಎದ್ದು ತೋರುತ್ತಿದೆ. ಅದು ಮನಸ್ಸಿಗೆ ವಿಂತಾನಂದವನ್ನುಂಟುಮಾಡುತ್ತದೆ. ಹೇ ವಾರಿಜಾಕ್ಷಿ, ಹೇ ಅನವದ್ಯಾಂಗಿ, ಅತ್ತ ನೋಡು, ಆ ಎರಡು ನದಿಗಳ ಜಲರಾಶಿಯು ಬೆರೆತು ಮಿಶ್ರವಾಗಿ ಪುನಃ ಪ್ರವಾಹವು ಬೇರೆಬೇರೆಯಾಗಿ ಇಂದ್ರನೀಲಮಣಿಯಂತೆ ಪ್ರಕಾಶಿಸುತ್ತಿದೆ. ಒಂದು ಕಡೆ ನೋಡುತ್ತಿರಲು ಕೋದ ಮುತ್ತಿನ ಮಣಿಯ ಮಾಲೆಯಂತೆ, ಇನ್ನೊಂದು ಕಡೆಯಲ್ಲಿ ನೈದಿಲೆಹೂಗಳ ಮಾಲೆಗಳ ಮಧ್ಯದಲ್ಲಿ ಹೆಣೆದಿರುವ ಬೆಳ್ದಾವರೆ ಹೂಗಳ ಹಾರದಂತೆ ತೋರುತ್ತ ರಮಣೀಯವಾಗಿ ತ್ರಿವೇಣೀಸಂಗಮದಲ್ಲಿ ಕಾಣುತ್ತಿದೆ (ಹೆಣೆದ ಬೆಳ್ದಾವರೆಯ ಹಾರವೆನುವಂತೆ).

ಮುಕ್ತಾಮಯೀ ಯಷ್ಟಿರಿವ=ಹಾರಾವಲಿರಿವ ವಿಭಾತಿ—ಇಂದೀವರೈ=ನೀಲೋತ್ಪಲೈ —ಉತ್ಖಚಿತಾಂತರಾ=ಸಹಗ್ರಥಿತಾ—ಸಿತಪಂಕಜಾನಾಂ = ಪುಂಡರೀಕಾಣಾಂ ಮಾಲೇವ —ಕಲಾಪಕ = ಕಲಾಪಕಂ ಚತುರ್ಭಿಃ ಸ್ಯಾತ್—ಪ್ರಭಾಲೇಪಿಭಿಃ = ಹೊಳೆಹೊಳೆಯುವ.

**55. ಕ್ವಚಿತ್ಖಗಾನಾಂ ಪ್ರಿಯಮಾನಸಾನಾಂ ।**
**ಕಾದಂಬಸಂಸರ್ಗವತೀವ ಪಂಕ್ತಿಃ ॥**
**ಅನ್ಯತ್ರ ಕಾಲಾಗುರುದತ್ತಪತ್ರಾ ।**
**ಭಕ್ತಿರ್ಭುವಶ್ಚಂದನಕಲ್ಪಿತೇವ ॥ ೫೫ ॥**

ಹೇ ಉತ್ಪಲಾಕ್ಷಿ, ಯಮುನಾನದಿಯು ಭಿನ್ನವಾದ ರಂಗುಗಳಿಂದ ಕಾಣಿಸುತ್ತಿದೆ. ಒಂದು ಕಡೆ ಕಾದಂಬದ ಸಂಸರ್ಗಪಡೆದ ನೀಲಬಣ್ಣದ (ಕಪ್ಪು, ಕಾಡಿಗೆಬಣ್ಣದ, ಶ್ಯಾಮಲ ವರ್ಣದ) ಹಂಸಪಕ್ಷಿಗಳ ಸಮೂಹದಂತೆ, ಇನ್ನೊಂದೆಡೆಯಲ್ಲಿ, ನದಿಯ ಬೇರೊಂದು ಭಾಗ ಮಾನಸಸರೋವರದಲ್ಲಿ ರಾರಾಜಿಸುವ ಬಿಳಿಯ ಬಣ್ಣದ ರಾಜಹಂಸಗಳ ಸಾಲಿನಂತೆ ವಿರಾಜಿಸುತ್ತಿದೆ. ರಾಜಹಂಸದ ಕೊಕ್ಕು (ಚುಂಚುಪುಟ), ಪಾದಗಳು ಕೆಂಬಣ್ಣದಿಂದ ಶೋಭೆಪಡೆದಿವೆ. ಯಮುನಾನದಿಯ ಉಳಿದ ಭಾಗಗಳಲ್ಲಿ ಹಸುರಾದ ಎಲೆಗಳನ್ನು ಭೂಮಿಯ ಮೇಲೆ ಹರಡಿ, ಮಕರಿಕಾಪತ್ರರಚನೆಯಲ್ಲಿ ಕಪ್ಪುಗಂಧದ (ಕಾಲಾಗುರು) ಲೇಪನದ ಚಿತ್ರದಲ್ಲಿ (ಭೂಮಿಯಲ್ಲಿ, ಸ್ಥಳದಲ್ಲಿ) ಬಿಳಿಯ ಗಂಧದ ಲೇಪನದ ಪುಡಿಯು (ಬಿಳಿಯ ಚಂದನ) ಬೆರೆದು, ಅಲಂಕಾರಮಾಡಿದಂತೆ ಸೊಗಯಿಸುತ್ತದೆ (ಚಂದನದ ಭೂಮಿಯ ಅಲಂಕಾರ ಬೆರೆದಂತೆ).

ಕ್ವಚಿತ್ ಕಾದಂಬರಿಸಂಸರ್ಗವತೀ = ನೀಲಹಂಸಸಂಸ್ಪೃಷ್ಟಾ—ಪ್ರಿಯಂಮಾನಸಂ ನಾಮ ಸರೋ ಯೇಷಾಂ ತೇಷಾಂ—ಖಗಾನಾಂ = ರಾಜಹಂಸಾನಾಂ—"ರಾಜಹಂಸಾಸ್ತುತೇ ಚಂಚುಚರಣೈರ್ಲೋಹಿತೈಃ ಸಿತಾಃ" ಇತ್ಯಮರಃ—ಅನ್ಯತ್ರ ಕಾಲಾಗುರೂಣಾಂ ದತ್ತ ಪತ್ರಾರಚಿತ ಮಕರಿಕಾಪತ್ರ ಭುವಶ್ಚಂದನಕಲ್ಪಿತಾ ಭಕ್ತಿರಿವ ॥

**56. ಕ್ವಚಿತ್ಪ್ರಭಾಚಾಂದ್ರಮಸೀತಮೋಭಿಃ ।**
**ಛಾಯಾವಿಲೀನೈಃ ಶಬಲೀಕೃತೇವ ॥**
**ಅನ್ಯತ್ರ ಶುಭ್ರಾ ಶರದಭ್ರಲೇಖಾ ।**
**ರಂಧ್ರೇಷ್ವಿವಾಲಕ್ಷ್ಯ ನಭಃ ಪ್ರದೇಶಾಃ ॥ ೫೬ ॥**

ಹೇ ಕುಂದಕುಟ್ಮಲರದನೆ, ಪೆರತೊಂದು ಎಡೆಯಲ್ಲಿ ನೆರಳಿನೊಳಗೆ ಅದ್ದಿರುವ ಕತ್ತಲೆಯೊಳು ಅಲ್ಲಲ್ಲಿ ಬಿದ್ದಿರುವ, ಅಲ್ಲಲ್ಲಿ ನೆಲಸಿರುವ ಚಂದ್ರಮನ ಬೆಳದಿಂಗಳಂತೆ ಕಾಣಿಸುತ್ತಿದೆ (ಒಂದು ಕಡೆ ನೆರಳಿನೊಳಗದ್ದಿರುವ ಕತ್ತಲೊಳು). ಆ ಎರಡು ನದಿಗಳ ಪ್ರವಾಹಗಳು ಪೆರತೊಂದು ತಾಣದಲ್ಲಿ ವಿಶಾಲವಾದ ನೀಲಬಾನಲ್ಲಿರುವ ಸಹಸ್ರಾರು ರಂಧ್ರಗಳಿರುವ ಬಿಳಿಯ ಬಣ್ಣದ (ಶುಭ್ರಧವಳ) ಶರತ್ಕಾಲದ ಮೋಡಗಳ ಪಂಕ್ತಿಗಳು ಮುಚ್ಚಿರುವಂತೆ ತೋರುತ್ತ ಕಣ್ಮನಂಗಳನ್ನು ಸೆಳೆಯುತ್ತಿದೆ (ನೀಲಿಯ ಬಣ್ಣದ ಆಕಾಶದಲ್ಲಿ ಬಿಳಿಯ ಮುಗಿಲ್ಗಳು ಪರಡಿದಂತೆ) (ನೀಲಿನಭರಂಧ್ರದೊಳು ಹೊಳೆವಮಲಶರದಭ್ರಲೇಖೆಯೆಸುವಂತೆ).

ಕ್ವಚಿಚ್ಛಾಯಾಸು ವಿಲೀನೈಃ ಸ್ಥಿತೈಸ್ತಮೋಭಿಃ ಶಬಲೀಕೃತಾ ಕರ್ಬುರೀಕೃತಾ ಚಾಂದ್ರಮಸೀ ಪ್ರಭಾಚಂದ್ರಿಕೇವ—ಅನ್ಯತ್ರ ರಂಧ್ರೇಷ್ವಾಲಕ್ಷ್ಯ ನಭಃ ಪ್ರದೇಶಾ ಶುಭ್ರಶರದಭ್ರಲೇಖಾ = ಶರನ್ಮೇಘಾವಂಕ್ತಿರಿವ ॥

**57.** **ಕ್ವಚಿಚ್ಚ ಕೃಷ್ಣೋರಗ ಭೂಷಣೇವ ।**
**ಭಸ್ಮಾಂಗರಾಗಾತನುರೀಶ್ವರಸ್ಯ ॥**
**ಪಶ್ಯಾನವದ್ಯಾಂಗಿ ವಿಭಾತಿ ಗಂಗಾ ।**
**ಭಿನ್ನಪ್ರವಾಹಾ ಯಮುನಾತರಂಗೈಃ ॥ ೫೭ ॥**

ಹೇ ವಿಮಲಾಂಗಿ, ಯಮುನಾತರಂಗವನ್ನು ಒಂದುಗೂಡಿದ ಈ ಗಂಗೆಯು, ಭಸ್ಮವನ್ನು ಲೇಪಿಸಿಕೊಂಡ, ಕೊರಳಿನಲ್ಲಿ ಕೃಷ್ಣೋರಗವನ್ನು ಸುತ್ತಿಕೊಂಡು ನೀಲಿಬಣ್ಣದ ಶಿವನಂತೆ ತಾನು ಎಸೆಯುತ್ತಿಹಳು. ತನ್ನ ಮೈಮೇಲೆ ಕೃಷ್ಣಸರ್ಪಗಳನ್ನು ತನ್ನ ಆಭರಣವಾಗಿ ಧರಿಸಿಕೊಂಡ ಭಸ್ಮಲೇಪಿತನಾದ (ನಾಗಭೂಷಣ) ಶಿವನಂತೆ (ಈಶ್ವರನಂತೆ, ಜಗದೀಶ್ವರನಂತೆ) ರಾರಾಜಿಸುತ್ತ (ರಂಜಿಸುತ್ತ) ಆ ಜೋಡುನದಿಗಳು ಒಂದನ್ನೊಂದು ಈ ಸಂಗಮದಲ್ಲಿ ಬೆರತಾಗ ಗಂಗೆಯಮುನೆಯರು (ಯಮುನಾತರಂಗಸುಕಲಿತವಾದೀ ಗಂಗೆ) ಎರಡು ವಿಧದ (ದ್ವೈತ, ದ್ವಂದ್ವ) ಹಲವಾರು ತೆರದಲ್ಲಿ ಶೋಭಿಸುತ್ತಿರುವುದನು ನೋಡು, ಕಾಂತೆ" (ನೋಡು ಚೆನ್ನಾ, ರನ್ನಾ, ಬಣ್ಣಾ ಇತ್ಯಾದಿ).

ಕ್ವಚಿತ್ ಕೃಷ್ಣೋರಗಭೂಷಣಾ ಭಸ್ಮಾಂಗರಾಗೇಶ್ವರಸ್ಯ ತನುರಿವ ವಿಭಾತಿ । ಶೇಷೋವ್ಯಾಖ್ಯಾತಃ—ಕಲಾಪಕಮ್ ॥

**58.** **ಸಮುದ್ರಪತ್ನ್ಯೋರ್ಜಲಸನ್ನಿಪಾತೇ ।**
**ಪೂತಾತ್ಮನಾಮತ್ರ ಕಿಲಾಭಿಷೇಕಾತ್ ॥**
**ತತ್ತ್ವಾವಬೋಧೇನ ವಿನಾ ಹಿ ಭೂಯಃ ।**
**ತನುತ್ಯಜಾಂ ನಾಸ್ತಿ ಶರೀರಬಂಧಃ ॥ ೫೮ ॥**

ಹೇ ವಸಂತಲಕ್ಷ್ಮಿ, ಈ ಎರಡು ಮಂದಿ ಸಮುದ್ರರಾಜನ ರಾಣಿಯರಾದ (ಕಡಲ ಅರಸಿಯರು) ನದಿಗಳು ಒಂದಾಗಿ ಸಂಗಮವಾಗಿರುವ ಈ ಪ್ರಯಾಗದ ಪವಿತ್ರಕ್ಷೇತ್ರದಲ್ಲಿ ಸ್ನಾನಮಾಡುವವರು ಪವಿತ್ರರಾಗುವರು. ಅವರು ತಮ್ಮ ಪಾಪರಾಶಿಯಿಂದ ಮುಕ್ತರಾಗಿ ಪೂತಾತ್ಮರಾಗುವರು. ಈ ಜಲರಾಶಿಯ ಬರಿಯ ಸ್ನಾನದಿಂದ ಅವರ ದೇಹ ಮತ್ತು ಆತ್ಮಗಳೆರಡೂ ಶುದ್ಧಗೊಳ್ಳುವವು. ಪಾರಮಾರ್ಥಿಕ ತತ್ತ್ವಾವಬೋಧವಿರದೆಯೇ ಜೀವನ್ಮುಕ್ತರಾಗುವರು. ಪರಮಾತ್ಮನ ದಿವ್ಯದರ್ಶನ ಪಡೆಯಲು ಅರ್ಹರಾಗುವರು. ಅವರು ತಮ್ಮ ಪಂಚಭೂತಗಳಿಂದ ನಿರ್ಮಿತವಾದ ಈ ದೇಹವನ್ನು (ಮರಣಾನಂತರ) ತ್ಯಜಿಸಿದ ಬಳಿಕ ದೇಹಸಂಬಂಧಿಗಳಾಗಿ (ಪ್ರಾರಬ್ಧಶರೀರಸಂಬಂಧದಿಂದ ಕಳಚಿಹೋಗಿ) ಮರಳಿ ಜನ್ಮಕ್ಕೆ ಬಾರರು. ಅವರು ಪರಿಶುದ್ಧಾತ್ಮರಾಗುವರು, ಮುಕ್ತರಾಗುವರು, ಪರಮಾತ್ಮನ ಶ್ರೀಪಾದ ಶ್ರೀಚರಣ ಸೇರುವರು (ಮುಕ್ತಿಯನ್ನು ಪಡೆಯುವರು). ಬರೇ ಸ್ನಾನದ ಮೂಲಕ ಮುಕ್ತರಾಗುವರು.

ಅತ್ರ ಸಮುದ್ರಪತ್ನ್ಯೋರ್ಗಂಗಾಯಮುನಯೋರ್ಜಲಸಂನಿಪಾತೇ ಸಂಗಮೇಽಭಿಷೇಕಾತ್=ಸ್ನಾನಾತ್—ಪೂತಾತ್ಮನಾಂ ತನುತ್ಯಜಾಂ=ಶುದ್ಧಾತ್ಮನಾಂ ಪುಂಸಾಂ—ತತ್ತ್ವಾವಬೋಧೇನ=ತತ್ತ್ವಜ್ಞಾನೇನ—ವಿನಾಽಪಿ = ಪ್ರಾರಬ್ಧಶರೀರತ್ಯಾಗಾನಂತರಂ—ಭೂಯಃ = ಪುನಃ—ಶರೀರಬಂಧಃ = ಶರೀರಯೋಗೋ—ನಾಸ್ತಿ ಕಿಲ—ಅನ್ಯತ್ರ ಜ್ಞಾನಾದೇವ ಮುಕ್ತಿಃ—ಅತ್ರ ತು ಸ್ನಾನಾದೇವ ಮುಕ್ತಿರಿತ್ಯರ್ಥಃ—ಸಮುದ್ರಪತ್ನ್ಯೋಃ = ಕಡಲ ಅರಸಿಯರು.

**59. ಪುರಂ ನಿಷಾದಾಧಿಪತೇರಿದಂ ತತ್ ।**
**ಯಸ್ಮಿನ್ಮಯಾ ಮೌಲಿಮಣಿಂ ವಿಹಾಯ ॥**
**ಜಟಾಸು ಬದ್ಧಾಸ್ವರುದತ್ ಸುಮಂತ್ರಃ ।**
**ಕೈಕೇಯಿ ಕಾಮಾಃ ಫಲಿತಾಸ್ತವೇತಿ ॥ ೫೯ ॥**

ಹೇ ವಾರಿಜಾಕ್ಷಿ, ಅದೋ ನೋಡು, ಶೃಂಗಬೇರಪುರವು ಒಂದು ಸಣ್ಣ ಗ್ರಾಮದಂತೆ ತೋರುತ್ತಿದೆ. ಇದು ಆ ಬೇಡರಾಜನಾದ ಗುಹನ ಬೀಡು. ಈ ಹಿಂದೆ ನಾವಿಲ್ಲಿಗೆ ಬಂದು ಗುಹನ ಆತಿಥ್ಯವನ್ನು ಸ್ವೀಕರಿಸಿದೆವು. ಇಲ್ಲಿ ನಾನು ಮೊದಲ ಬಾರಿ ನನ್ನ ತಲೆಯ ಕಿರೀಟವನ್ನು ತೆಗೆದಿಟ್ಟು ಜಡೆಗಳನ್ನು ಹೆಣೆದು ಮುಡಿಕಟ್ಟಿ ವನವಾಸಕ್ಕೆ ಋಷಿಮುನಿಗಳಂತೆ ಸಿದ್ಧನಾಗಿ ನಿಂತೆನು. ನನ್ನನ್ನು ಅನುಸರಿಸಿ ಲಕ್ಷ್ಮಣನೂ ಮುಡಿಕಟ್ಟಿ ಶೋಭಿಸಿದನು. ಅದನ್ನು ಕಂಡು (ಅವಲೋಕಿಸಿದ) ಆಪ್ತಮಂತ್ರಿ ಸುಮಂತ್ರನು ದುಃಖವನ್ನು ತಡೆಯಲಾರದೆ ಹೀಗೆ ಉದ್ಗರಿಸಿದನು : "ಹೇ ಮಾತೆ, ಕೈಕೇಯಿ, ಇಂದಿಗೆ ನಿನ್ನ ಇಷ್ಟಾರ್ಥವು ಕೈಗೂಡಿತಲ್ಲವೆ ? ಇಂದು ನೀನು ಕೃತಾರ್ಥಳಾದೆ, ಮಹಾತಾಯೇ. ನಿನ್ನ ಇಚ್ಛೆಯು ಫಲಿಸಿತು" ಎಂದು ನುಡಿದು ಗಳಗಳನೆ ಕಣ್ಣೀರನ್ನು ಸುರಿಸುತ್ತಾ ಸಾಮಾನ್ಯಲೋಗರಂತೆ ಅತ್ತುಬಿಟ್ಟನು. ಆತನು ಅಂದು ಅತ್ತ ಜಾಗವು ಇದೇ, ಓ ಭ್ರಮರಕುಂತಳೆ.

ನಿಷಾದಾಧಿಪತೇ = ಗುಹಸ್ಯ, ಬೇಡರಾಜ—ಯಸ್ಮಿನ್ ಪುರೇ ಮಯಾ ಮೌಲೀಮಣಿಂ ವಿಹಾಯ ಜಟಾಸು ಬದ್ಧಾಸುರಚಿರಥಾಃ—ಫಲಿತಾಃ = ಸ ಫಲಾಜಾತಾಃ "ಇತ್ಯರುದತ್—ರುದಿರಶ್ರುವಿಮೋಚನೇ" ಇತಿ ಧಾತೋರ್ಲಙ್ ॥

**60. ಪಯೋಧರೈಃ ಪುಣ್ಯಜನಾಂಗನಾನಾಂ ।**
**ನಿರ್ವಿಷ್ಟ ಹೇಮಾಂಬುಜರೇಣು ಯಸ್ಯಾಃ ॥**
**ಬ್ರಾಹ್ಮಂ ಸರಃ ಕಾರಣಮಾಪ್ತವಾಚೋ ।**
**ಬುದ್ಧೇರಿವಾವ್ಯಕ್ತಮುದಾಹರಂತಿ ॥ ೬೦ ॥**

ಹೇ ಮಂಜುಳಗಾತ್ರಳೇ, ಹೇ ಏಣಾಕ್ಷಿ (ಕಾಮಾಕ್ಷಿ, ಮಂದಿರಾಕ್ಷಿ), ಈ ಸರಯೂ ನದಿಯು ಬ್ರಹ್ಮಮಾನಸಸರೋವರದಿಂದ ಉದಿಸಿಬಂತೆಂದು ವೇದವಿದರು ಹೇಳುತ್ತಿರುವರು. ಸಹಸ್ರದಳಕಮಲದಲ್ಲಿ ಕುಳಿತಿರುವ ಲೋಕಪಿತಾಮಹನಾದ ಬ್ರಹ್ಮನು ಸೃಷ್ಟಿಕಾರ್ಯವನ್ನು ಸಹಸ್ರದಳದ ಮಧ್ಯೆ ನಡೆಸುತ್ತಲೇ ಇರುವನು. ಆ ಮಾನಸಸರೋವರದ ನಿರ್ಮಲದ ಜಲದಲ್ಲಿ ಹೊಂಬಣ್ಣದ ತಾವರೆಹೂಗಳ ಚಿನ್ನದ (ಹೇಮದ) ಬಣ್ಣದ

ಪರಾಗರೇಣು ಬೆರೆತಿರುವುದಷ್ಟೆ. ಆ ಸರೋವರದ ಪಾವನಜಲದಲ್ಲಿ ಯಕ್ಷಕನ್ಯೆಯರು ಕ್ರೀಡಿಸುತ್ತ ಆನಂದಿಸುವರು. ಆ ಪುಣ್ಯಜನಾಂಗನೆಯರಾದ ಯಕ್ಷಕನ್ಯೆಯರ ಕುಚಭುಕ್ತ ಹೇಮಾಬ್ಜರವವೆರೆದು (ಹೊನ್ನಿನ ತಾವರೆಯ ಪರಾಗಧೂಳು ಯಕ್ಷಕನ್ಯೆಯರ ಪಯೋಧರ ಗಳನ್ನು ಸಂಪರ್ಕಿಸಿ ಉಪಭುಕ್ತವಾಗಿರುವ ಪಯೋಧರ = ಸ್ತನ = ಕುಚ) ಪೊರೆಯುವ ಬ್ರಹ್ಮಮಾನಸ ಸರೋವರದಿಂದ ಹುಟ್ಟಿಬರುವ ಸರಯೂ ನದಿಯು ಪರಮಾತ್ಮನ ಮೂಲಪ್ರಕೃತಿಯಿಂದ ಹುಟ್ಟಿಬಂದಿದೆ. ಇದು ವೇದಗಳಂತೆ, ಮೂಲಪ್ರಕೃತಿಯಂತೆ (ಅವ್ಯಾಕೃತ), ನಿಸರ್ಗದಂತೆ (ಪ್ರಾಕೃತ) ಪವಿತ್ರವೆಂದು ವೇದವನ್ನು ಬಲ್ಲ ಪರಮ ಋಷಿಗಳು ಹೇಳುತ್ತಿರುವರು. ಇದು ಮೂಲತಃ ಬ್ರಹ್ಮದೇವರ ಕಮಂಡಲಿನಿಂದಲೇ ಆವಿರ್ಭವಿಸಿದ ಜಲಧಾರೆ, ನೀರಿನ ಹೊನಲು.

ಪುಣ್ಯಜನಾಂಗನಾನಾಂ = ಯಕ್ಷಸ್ತ್ರೀಣಾಂ—ನಿರ್ವಿಷ್ಟ = ಉಪಭುಕ್ತೋ—ತತ್ರ ತಾಃ ಕ್ರೀಡಂತೀತಿ ವ್ಯಜ್ಯತೇ—ಬ್ರಹ್ಮಣ ಇದಂ ಬ್ರಹ್ಮಮ್—"ನಸ್ತದ್ಧಿತೇ" ಇತಿ ಟಿಲೋಪಃ (ಪಾಣಿನಿ)–ಬ್ರಾಹ್ಮಸರೋ=ಮಾನಸಾಖ್ಯಂ ಯಸ್ಯಾಃ ಸರಯೂ ಪಾಹುಃ–ಅವ್ಯಕ್ತಸ್ಯ ವಾಚ ಆಪ್ತವಾಚೋ ವೇದಾಃ—ಉದಾಹರಂತಿ = ಪ್ರಚಕ್ಷತೇ—ಪುಣ್ಯಜನಾಂಗನಾನಾಂ = ಯಕ್ಷಿಯರು, ಯಕ್ಷಪತ್ನಿಯರು, ಕುಬೇರನ ಪ್ರಜೆಗಳು—ಅಲಕಾ = ಕುಬೇರನ ರಾಜಧಾನಿ (ಹಿಮನಗರಿ), ಸಾಂಖ್ಯತತ್ತ್ವಜ್ಞಾನ (ಪ್ರಕೃತಿ + ಪುರುಷ) ಅವ್ಯಕ್ತ, ಪ್ರಧಾನ—ಮಹತ್ ಅಥವಾ ಬುದ್ಧಿ ಅಹಂಕಾರ— ಪಂಚತನ್ಮಾತ್ರೆಗಳು—ವಿಕಾರಗಳು — ಜ್ಞಾನೇಂದ್ರಿಯ-ಕರ್ಮೇಂದ್ರಿಯ—ಐದು ಮಹಾಭೂತಗಳು (ಪಂಚಭೂತಗಳು).

61. ಜಲಾನಿ ಯಾ ತೀರನಿಖಾತಯೂಪಾ ।
ವಹತ್ಯಯೋಧ್ಯಾಮನುರಾಜಧಾನೀಮ್ ॥
ತುರಂಗಮೇಧಾವಭೃಥಾವತೀರ್ಣೈಃ ।
ಇಕ್ಷ್ವಾಕುಭಿಃ ಪುಣ್ಯತರೀಕೃತಾನಿ ॥ ೬೧ ॥

ಹೇ ಜಾಣೆ (ಜಾಣೆ, ಕೋಣೆ), ಅದೋ ದೂರದಲ್ಲಿ ನಮ್ಮ ರಾಜಧಾನಿಯಾದ ಅಯೋಧ್ಯಾನಗರವು ನಮ್ಮನ್ನು ಸ್ವಾಗತಿಸಲು ಎದ್ದುನಿಂತಂತೆ ಭಾಸವಾಗುತ್ತಿದೆ. ಅದರ ಬಳಿಯಲ್ಲೇ ಪವಿತ್ರವಾದ ಸರಯೂ ನದಿಯು ಹರಿಯುತ್ತ ನಯನಮನೋಹರವಾಗಿ ಕಂಗೊಳಿಸುತ್ತಿದೆ. ಸರಯೂ ನದಿಯ ಕಿನಾರೆಯಲ್ಲಿ ಯಜ್ಞಯಾಗಾದಿ ವೈದಿಕಕ್ರಿಯೆಗಳನ್ನು ನಡೆಸುವ ಸಲುವಾಗಿ ನೂರಾರು ಯೂಪಗಳನ್ನು ನೆಟ್ಟಿರುವರು. ಆ ಯಜ್ಞದ ಯೂಪ ಗಳನ್ನು ಯಜ್ಞಪಶುಗಳನ್ನು ಕಟ್ಟಿಹಾಕಲು ವಿರಚಿಸುವರು. ನಮ್ಮ ವಂಶಜರಾದ ಇಕ್ಷ್ವಾಕು ವಂಶದ ಮಹಾರಾಜಾಧಿರಾಜರು ದಿಗ್ವಿಜಯವನ್ನು ಮಾಡಿದ ಬಳಿಕ ಪುಣ್ಯಕರವಾದ ಅಶ್ವಮೇಧಯಾಗವನ್ನು ಮಾಡುವ ಸಲುವಾಗಿ ಅವಭೃತಸ್ನಾನವನ್ನು ಈ ನದಿಯಲ್ಲಿ ಮಾಡುವರು. ಅವರ ಅವಭೃತಸ್ನಾನದಿಂದ ಈ ನದಿಯ ಉದಕವು ಮತ್ತಷ್ಟು ಪುಣ್ಯತರ ವಾಯಿತು (ಪಾವನವಾಯಿತು). ಪುಣ್ಯಕರವಾದ ಉದಕದಿಂದ ಎಸೆಯುತ್ತಾ, ಅಶ್ವಮೇಧ, ವಿಶ್ವಜಿತ್, ಪುತ್ರಕಾಮೇಷ್ಟಿ, ವಾಜಪೇಯ ಮೊದಲಾದ ಯಾಗಯೂಪಗಳು ದಡದೆಡೆ

ಯಲ್ಲಿ ವಿರಾಜಿಸುತ್ತಿರಲು ದೇವನದಿಯಾದ ಈ ಸರಯೂ ನದಿಯು ಚಿತ್ತಾಕರ್ಷಕವಾಗಿ ಹರಿಯುತಿಹುದು.

ಯೂಪೈಃ = ಪಶುಬಂಧನಾರ್ಹೈಃ ದಾರುವಿಶೇಷೈಃ—ತೀರನಿಖಾತಯೂಪವಾಯಥಾ ಸರಯೂ—ತುರಂಗಮೇಧಾ = ಅಶ್ವಮೇಧಾ—ಸ್ನೇಷ್ವಭೃಥಾರ್ಥಮೇವಾವತೀರ್ಣೈರವ ರೂಢೈರಿಕ್ಷ್ವಾಕುಭಿರಿಕ್ಷ್ವಾಕುಗೋತ್ರಾಪತ್ಯೈರ್ನಃ ಪೂರ್ವೈಃ — ಪುಣ್ಯತರೀಕೃತಾನ್ಯತಿ ಶಯೇನ ಪುಣ್ಯಾನಿ ಕೃತಾನಿ—ಅನು=ಸಮೀಪೇ–''ಅನು'' ಶಬ್ದಸ್ಯ ಲಕ್ಷಣೇತ್ಥಂ ಭೂತ'' ಇತ್ಯಾದಿನಾ ಕರ್ಮಪ್ರವಚನೀಯತ್ವಾತ್ತದ್ಯೋಗೇ ದ್ವಿತೀಯಾ (ಪಾಣಿನಿ)—ವಹತಿ = ಪ್ರಾಪಯತಿ—ತೀರನಿಖಾತಯೂಪಾ = ತೀರಯೋಃ ನಿಖಾತಾಃ ಯೂಪಾಃ ಯಸ್ಯಾಃ— ಯಾ ಜಲಾನಿ ರಾಜಧಾನೀಮ್ ಅಯೋಧ್ಯಾಮ್ ಅನುವಹತಿ ॥

62. ಯಾಂ ಸೈಕತೋತ್ಸಂಗಸುಖೋಚಿತಾನಾಂ ।
ಪ್ರಾಜ್ಯೈಃ ಪಯೋಭಿಃ ಪರಿವರ್ಧಿತಾನಾಮ್ ॥
ಸಾಮಾನ್ಯಧಾತ್ರೀಮಿವ ಮಾನಸಂ ಮೇ ।
ಸಂಭಾವಯತ್ಯುತ್ತರಕೋಸಲಾನಾಮ್ ॥ ೬೨॥

ಹೇ ಸರಸಭಾಷಿಣಿ, ಕ್ರೀಡಾಮನೋಹರಿ (ಆಟದ ರಾಣಿ, ಕನಸಿನ ರಾಣಿ), ಈ ಸರಯೂ ವನ್ನು ನೆನೆಯುತ್ತಾ ನೆನೆಯುತ್ತಾ ನನ್ನ ತಲೆಯು ತಾನಾಗಿ ಮಣಿಯುತ್ತಿದೆ. ಹೇ ಭ್ರಮರ ವೇಣಿ, ಹೇ ಏಣಾಕ್ಷಿ, ಭಾರತದ ಜನಮನಮಂದಾರವೆ, ಈ ನಮ್ಮ ಸರಯೂ ನದಿಯು ಉತ್ತರಕೋಸಲದ ಮೂಲಕ ಹರಿದುಬರುತ್ತಿದೆ. ಅದರ ಹಾಲಿನಂತಹ ನೀರನ್ನು ಕುಡಿದು, ವಿಶಾಲವಾದ, ನದೀತಾಯಿಯ ತೊಡೆಗಳೆಂಬ ಮರಳರಾಶಿಯಿಂದ ತುಂಬಿರುವ ನದೀ ಕಿನಾರೆಯಲ್ಲಿ ಕ್ರೀಡಿಸುತ್ತ, ಆಟವಾಡುತ್ತ, ನಲಿಯುತ್ತ, ಉಲಿಯುತ್ತ ಕೋಸಲದ ಮಹಾಜನತೆ, ರಾಜವಂಶೀಯರು, ದೊರೆಗಳು, ಬೆಳೆದು, ಅಭಿವೃದ್ಧಿ ಹೊಂದಿ ಕೀರ್ತಿಶಾಲಿ ಗಳಾದರು. ಈ ಪವಿತ್ರನದಿಯು ಅವರೆಲ್ಲರ ತಾಯಿಯಾಗಿ (ಮಾತೆಯಾಗಿ) ಕಾಪಾಡುತ್ತಾ ಬಂದಿದೆ. ಇವಳಿಂದ ಅವರು ಸುಖಿಸಿ, ಆನಂದಿಸಿದರು, ಸೊಗವಡೆದರು. ಜಗತ್ತಿನಲ್ಲಿ ಕೀರ್ತಿಶಾಲಿಗಳಾದರು. ಅವರೆಲ್ಲರ ಸಾಮಾನ್ಯ ತಾಯಿಯಾದ, ಸಾಮಾನ್ಯಧಾತ್ರಿಯಾದ (ದಾದಿಯಾದ) ಈ ಸರಯುವನ್ನು ನೆನೆದಷ್ಟು ನನ್ನ ಮನಸ್ಸು ಹಿಗ್ಗುತ್ತಿದೆ. ನನ್ನ ಇನ್ನೊಬ್ಬ ತಾಯಿಯಾದ ಅವಳ ಬಗ್ಗೆ ಭಕ್ತಿಯಿಂದ ಮಾತೃಪ್ರೇಮ(ದೇಶಪ್ರೇಮ)ದಿಂದ ಶಿರವು ತಾನಾಗಿ ಮಣಿಯುತ್ತಿದೆ (ಜನನೀಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ). ಇದೋ ಅವಳಿಗೆ ನನ್ನ ನಮನಗಳನ್ನು ಬಲುದೂರದಿಂದಲೇ ಸಲ್ಲಿಸುತ್ತಿರುವೆನು.

ಯಾಂ ಸರಯೂಂ ಮೇ ಮಾನಸಂಕರ್ತೃ — ಸೈಕತಂ = ಪುಲಿನಂ — ತದೇವೋತ್ಸಂಗಃ ತತ್ರ ಯತ್ಸುಖಂ ತತ್ರೋಚಿತಾನಾಂ — ಪ್ರಾಜ್ಯೈಃ = ಪ್ರಭೂತೈಃ — ಪಯೋಭಿಃ = ಅಂಬುಭಿಃ—ಕ್ಷೀರೈಶ್ಚ—''ಪಯಃ ಕ್ಷೀರಂ ಪಯೋಽಂಬು ಚ'' ಇತ್ಯಮರಃ—ಸಾಮಾನ್ಯ ಧಾತ್ರೀಂ = ಸಾಧಾರಣಮಾತರಮಿವ — ''ಧಾತ್ರೀಜನನ್ಯಾಮಲಕೀವಸುಮತ್ಯುಪಮಾ ತೃಷು'' ಇತಿ ವಿಶ್ವಃ ॥

63. ಸೇಯಂ ಮದೀಯಾ ಜನನೀವ ತೇನ ।
ಮಾನ್ಯೇನ ರಾಜ್ಞಾ ಸರಯೂರ್ವಿಮುಕ್ತಾ ॥
ದೂರೇ ವಸಂತಂ ಶಿಶಿರಾನಿಲೈರ್ಮಾಂ ।
ತರಂಗಹಸ್ತೈರುಪಗೂಹತೀವ ॥ ೬೩ ॥

ಹೇ ಕಕುತ್ಸ್ಥವಂಶಸುಶೋಭಿತೆ (ಹೇ ಶೋಭನಾಂಗಿ), ನನ್ನ ಮಾತೆಯಾದ ಕೌಸಲ್ಯೆಯಂತೆ, ರಾಜನಾದ ನಮ್ಮನ್ನಗಲಿದ, ನನ್ನ ತೀರ್ಥರೂಪರಾದ ದಶರಥಮಹಾರಾಜರಂತೆ, ಈ ಸರಯೂ ನದಿಯು ದೂರದಿಂದಲೇ ನನ್ನನ್ನು ತನ್ನ ತೆರೆಗಳೆಂಬ ಕೈಗಳಿಂದ ಅಪ್ಪಿಕೊಳ್ಳುವಂತೆ ಭಾಸವಾಗುತ್ತಿದೆ. ಆ ಪುಣ್ಯನದಿಯು ತಂಬೆಲರ ತೀಟದಲಿ, ತೆರೆಕೈಗಳಾಟದಲಿ ನನ್ನನ್ನು ಅಪ್ಪಿಕೊಳ್ಳುತ್ತಿದೆ ಎಂಬಂತೆ ನನ್ನನ್ನು ಎತ್ತಿ ಮುದ್ದಾಡುವಂತೆ ನನಗೆ ಅನಿಸುತ್ತಿದೆ. ಆ ನದಿಯ ಮೇಲಿಂದ ಬೀಸುವ ತಂಪಾದ ತಣ್ಣೆಲರು (ತಂಬೆಲರು) ನನ್ನ ದೇಹಕ್ಕೆ ಎಷ್ಟೊಂದು ಹಿತಕರವಾಗಿ ಬೀಸುತ್ತಿದೆ, ನೋಡಾ. ಅಮೃತಸಮಾನವಾದ ಅದರ ಸ್ಪರ್ಶದಿಂದ ಮೈ ಪುಲಕಿತಗೊಳ್ಳುತ್ತಿದೆ. ಅದರ ಸ್ಪರ್ಶದಿಂದ ನನ್ನ ಮಾನಸಿಕ, ದೈಹಿಕ ಕಷ್ಟಕಾರ್ಪಣ್ಯಗಳು, ಪಾಪಗಳು ನಷ್ಟವಾಗಿ ನಾನು ರಜೋಮುಕ್ತನಾದೆನು, ಪ್ರಿಯೆ.

ಸೇಯಮಿತಿ—ಮದೀಯಾ ಜನನೀ ಕೌಸಲ್ಯೇವ ಮಾನ್ಯೇನ=ಪೂಜ್ಯೇನ ತೇನ ರಾಜ್ಞಾ ದಶರಥೇನ ವಿಯುಕ್ತಾ ಸೇಯಂ ಸರಯೂರ್ದೂರೇ ವಸಂತಮ್—ಮಾಂ ಪುತ್ರಭೂತಂ ಶಿಶಿರಾನಿಲೈಸ್ತರಂಗೈರೇವ ಹಸ್ತೈಃ—ಉಪಗೂಹತೀ = ಆಲಿಂಗತೀವ ॥

64. ವಿರಕ್ತಸಂಧ್ಯಾಕಪಿಶಂ ಪುರಸ್ತಾತ್ ।
ಯತೋ ರಜಃ ಪಾರ್ಥಿವಮುಜ್ಜಿಹೀತೇ ॥
ಶಂಕೇ ಹನೂಮತ್ಕಥಿತಪ್ರವೃತ್ತಿಃ ।
ಪ್ರತ್ಯುದ್ಗತೋ ಮಾಂ ಭರತಃ ಸಸೈನ್ಯಃ । ॥ ೬೪ ॥

ಹೇ ಜನಕನಂದಿನಿ, ನನ್ನ ಅನುಜನಾದ ಭರತನು, ಹನುಮಂತನಿಂದ ನನ್ನ ಪ್ರಸಂಗ ಮನದ ಸುದ್ದಿಯನ್ನು ತಿಳಿದು ಸೈನ್ಯಸಮೇತನಾಗಿ ಬರುತ್ತಿರುವುದನ್ನು ನಾನು ಊಹಿಸುತ್ತಿರುವೆನು. ಅದೋ ನೋಡು, ಸಂಜೆಯ ಕೆಂಬಣ್ಣದಂತೆ, ಕಪಿಶವರ್ಣದಂತೆ, ತಾಮ್ರವರ್ಣದಂತೆ, ಹೊಳೆಯುತ್ತ ಕೆಂಧೂಳು ಆಕಾಶಕ್ಕೇರುತ್ತಿರುವುದನ್ನು ನೋಡು. ಅನುಜಶ್ರೇಷ್ಠನಾದ ಭರತನು ಚತುರಂಗಸೇನಾಸಮೇತ ನಗರದ ಹೊರ ಆವರಣಕ್ಕೆ ಬರುತ್ತಿರುವನು. ಕುದುರೆಗಳ ಕಾಲ ಒದೆತದಿಂದ ಎದ್ದ ಕೆಂಪಾದ ಧೂಳು ಭೂಮಿ-ಆಕಾಶವನ್ನು ಮೋಡದಂತೆ ದಟ್ಟವಾಗಿ ಕವಿಯುವುದನ್ನು ಆ ದಿಸೆಯಲ್ಲಿ ನೋಡು, ರಮಣಿ.

ಕಪಿಶಂ = ತಾಮ್ರವರ್ಣಂ—ಪೃಥಿವ್ಯಾ ಇದಂ = ಪಾರ್ಥಿವಮ್—ರಜೋ = ಧೂಲಿಃ—ಹನುರಸ್ಯಾಸ್ತೀತಿ=ಹನುಮಾನ್—ಮಾಂ ಪ್ರತ್ಯುದ್ಗತ ಇತಿ—ಶಂಕೇ = ತರ್ಕಯಾಮಿ—"ಶಂಕಾಭಯವಿತರ್ಕಯೋಃ" ಇತಿ ಶಬ್ದಾರ್ಣವೇ—ಉಜ್ಜಿಹೀತೇ = ಮೇಲಕ್ಕೇಳು, ಏರು.

**65. ಅದ್ಯಾತ್ರಿಯಂ ಪಾಲಿತ ಸಂಗರಾಯ ।**
**ಪ್ರತ್ಯರ್ಪಯಿಷ್ಯತ್ಯನಘಾಂ ಸ ಸಾಧುಃ ॥**
**ಹತ್ವಾ ನಿವೃತ್ತಾಯ ಮೃಧೇ ಖರಾದೀನ್ ।**
**ಸಂರಕ್ಷಿತಾಂ ತ್ವಾಮಿವ ಲಕ್ಷ್ಮಣೋ ಮೇ** ॥ ೬೫ ॥

ಹೇ ನಲ್ಲೆ, ಪರಿಶುದ್ಧಾತ್ಮನಾದ ಭರತನು ಆತ್ಮಾನುರಾಗದಿಂದ ಕೋಸಲರಾಜ್ಯವನ್ನು ನನಗೊಪ್ಪಿಸುವನು, ಇದರಲ್ಲಿ ಅನುಮಾನವಿಲ್ಲ. ನಾನು ತಂದೆಯ ಪ್ರತಿಜ್ಞೆಯನ್ನು ಪೂರ್ಣಗೊಳಿಸಿ ಹಿಂದಿರುಗಿರುವೆನು. ಅನಘನಾದ ಲಕ್ಷ್ಮಣನು ರಕ್ಕಸರ ಮೇಲೆ ಕೈಗೊಂಡ ಕಾರ್ಯಾಚರಣೆಯಲ್ಲಿ ತನ್ನ ಸ್ವಾಮಿಭಕ್ತಿಯನ್ನು ತೋರಿ ರಕ್ಕಸರನ್ನು ಉಚ್ಚಾಟಿಸಿ ಚಾಕಚಕ್ಯತೆಯಿಂದ ಸಂರಕ್ಷಣೆಯು ಯುದ್ಧಹೂಡಿ ಕ್ಷೇಮದಿಂದ ಹಿಂತಿರುಗುವಲ್ಲಿ ನಾವೀಗ ಯಶಸ್ವಿಯಾದೆವು. ನಾನೀಗ ನಿನ್ನನ್ನು ಪಡೆದಂತೆ, ಅನುಜ ಲಕ್ಷ್ಮಣನು ನಿನ್ನನ್ನು ನನಗೆ ಒಪ್ಪಿಸಿದಂತೆ, ನನ್ನ ಪಿತೃರಾಜ್ಯಲಕ್ಷ್ಮಿಯನ್ನು ಸಾಧುಭರತನು ಇಂದು ಖಂಡಿತವಾಗಿಯೂ ಹಿಂದಕ್ಕೊಪ್ಪಿಸುವನು. ಅವನು ರಾಜ್ಯವ್ಯಾಮೋಹದಿಂದ(ಲೋಭತ್ವದಿಂದ), ಅಧಿಕಾರಲಾಲಸೆಯಿಂದ ಬಂಧಿತನಾಗದೆ ತನಗೆ ಒಪ್ಪಿಸಿದ ರಾಜ್ಯರಮೆಯನ್ನು ಹಿಂದಕ್ಕೆ ಒಪ್ಪಿಸುವನು.

''ಸಾಧುರ್ವಾರ್ಧುಷಿಕೇ ಚಾರೌ ಸಜ್ಜನೇ ಚಾಪಿ ವಾಚ್ಯವತ್'' ಇತಿ ವಿಶ್ವಃ—ಪಾಲಿತಸಂಗರಾಯ = ಪಾಲಿತಪಿತೃಪ್ರತಿಜ್ಞಾಯ—ಅನಘಾಮದೋಷಾಂ—ಮೃಧೇ = ಯುದ್ಧೇ—''ಸತ್ಯೇತ್ವದ್ಧಾಂ ಜಸಾಧ್ವಯುಮಪ್'' ಇತ್ಯಮರಃ ॥

**66. ಅಸೌ ಪುರಸ್ಕೃತ್ಯ ಗುರುಂ ಪದಾತಿಃ ।**
**ಪಶ್ಚಾದವಸ್ಥಾಪಿತ ವಾಹಿನೀಕಃ ॥**
**ವೃದ್ಧೈರಮಾತ್ಯೈಃ ಸಹ ಚೀರವಾಸಾ ।**
**ಮಾಮರ್ಘ್ಯಪಾಣಿರ್ಭರತೋಽಭ್ಯುಪೈತಿ** ॥ ೬೬ ॥

ಹೇ ಸಾಧುಗುಣಚರಿತಳೆ, ಅಂತರಂಗಪ್ರಿಯಳೆ, ಅದೋ ಅಲ್ಲಿ ಸೈನ್ಯವನ್ನು ಹಿಂದಕ್ಕೆ ನಿಲ್ಲಿಸಿ ನನ್ನನ್ನು ಭೇಟಿಯಾಗಲು ಕಾಲುನಡಿಗೆಯಿಂದ ಭರತನು ಬರುತ್ತಿರುವನು. ಆ ಬಂಧುಜನಸುಪ್ರೀತನು ಕೈಯಲ್ಲಿ ಅರ್ಘ್ಯಪಾತ್ರೆಯನ್ನು ಹಿಡಿದಿರುವನು. ಸಚಿವಸಂಪುಟದ ರಾಜ್ಯನೀತಿಶಾಸ್ತ್ರವಿಚಕ್ಷಣರಾದ, ಆರ್ಥಿಕತಜ್ಞರಾದ, ವೃದ್ಧರಾದ ಅಮಾತ್ಯಮುಖ್ಯರು ಅವನ ಸುತ್ತಲೂ ನೆರೆದಿರುವರು. ಕುಲಗುರುಗಳಾದ ಅಧ್ಯಾತ್ಮತತ್ತ್ವನಿಧಿಗಳಾದ ಪೂಜ್ಯರಾದ ವಸಿಷ್ಠರನ್ನು ಮುಂದಿಟ್ಟು ನನ್ನನ್ನು ಇದಿರುಗೊಳ್ಳಲು ಭ್ರಾತೃವತ್ಸಲನಾದ, ಭಾಗವತಶಿರೋಮಣಿಯಾದ ಸಾಧುಭರತನು ಕಾಲ್ನಡಿಗೆಯಲ್ಲಿ (ನಡೆದು) ಬರುತ್ತಿರುವನು. ಅವನು ಆರಣ್ಯವಾಸಿಗಳಂತೆ ನಾರುಡೆಯನ್ನು ಉಟ್ಟಿರುವನು.

ಅಸೌ ಪದಾತಿಃ = ಪಾದಚಾರೀ—ಚೀರವಾಸಾ = ವಲ್ಕಲವಸನ—ಪಶ್ಚಾತ್ = ಪೃಷ್ಠಭಾಗೇ—ವಾಹಿನೀ=ಸೇನಾ—''ನ ದ್ಯುತಶ್ಚ'' ಇತಿ ಕಪ್ (ಪಾಣಿನಿ)—ವೃದ್ಧೈರಮಾತ್ಯೈಃ ಸಹಾರ್ಘ್ಯಪಾಣಿಃ ಸನ್ ಮಾಮಭ್ಯುಪೈತಿ ॥

67. ಪಿತ್ರಾ ವಿಸೃಷ್ಟಾಂ ಮದಪೇಕ್ಷಯಾ ಯಃ ।
ಶ್ರಿಯಂ ಯುವಾಪ್ಯಂಕಗತಾಮಭೋಕ್ತಾ ॥
ಇಯನ್ತಿ ವರ್ಷಾಣಿ ತಯಾ ಸಹೋಗ್ರಂ ।
ಅಭ್ಯಸ್ಯತೀವ ವ್ರತಮಾಸಿಧಾರಮ್ ॥ ೬೭ ॥

ನನ್ನ ಮೇಲಿನ ಆ ಒಂದು ಭಕ್ತಿಯಿಂದ ತನ್ನ ಸುಖವನ್ನೇ ತ್ಯಾಗಮಾಡಿ ಭರತನು ವ್ರತನಿಷ್ಠನಾಗಿ, ಮತಿವಂತನಾಗಿ ರಾಜ್ಯಭಾರಮಾಡಿದನು. ತಾನು ಯುವಕನಾದರೂ, ಇಂದ್ರಿಯನಿಗ್ರಹಮಾಡಿಕೊಂಡು, ತಂದೆಯಿತ್ತ, ತನ್ನ ತೊಡೆಯೇರಿಬಂದ ರಾಜ್ಯಲಕ್ಷ್ಮಿಯನ್ನು ಅನುಭವಿಸದೆ ಕಠಿಣವಾದ ಅಸಿಧಾರಾವ್ರತವನ್ನು ಇಷ್ಟೊಂದು ದೀರ್ಘಕಾಲ ಆಚರಿಸಿದಂತೆ, ನೋಂಪಿಯನ್ನು ನಡೆಸಿದಂತೆ, ಕರ್ತವ್ಯಪರಾಯಣನಾಗಿ, ಇಷ್ಟೊಂದು ದೀರ್ಘಕಾಲ ಭಕ್ತಿ, ಶ್ರದ್ಧೆ, ವೈರಾಗ್ಯದಿಂದ ರಾಜ್ಯವಾಳಿದ, ಶ್ರೇಷ್ಠನವನು. ಈರೇಳು ಹದಿನಾಲ್ಕು ವರ್ಷಗಳ ಇಷ್ಟೊಂದು ದೀರ್ಘಕಾಲ ಕಠಿಣವ್ರತವನ್ನು ಅಭ್ಯಾಸಮಾಡಿದಂತೆ ಸುಖೋಪಭೋಗಗಳನ್ನು ತ್ಯಾಗಮಾಡಿ (ಅಸಿಧಾರಾವ್ರತ = ತನ್ನ ಸಹಧರ್ಮಿಣಿಯೊಂದಿಗೆ ಜೊತೆಯಾಗಿ ಇರದೆ ವ್ರತಸ್ಥನಾಗಿದ್ದು), ತನ್ನ ಮೇಲೆ ಹೊರಿಸಿದ ರಾಜ್ಯಾಡಳಿದ ಹೊಣೆಯನ್ನು ಹೊತ್ತು ಇದೀಗ ನನಗೆ ಅರ್ಪಿಸಲು (ವರ್ಗಾಯಿಸಲು, ಹಸ್ತಾಂತರಿಸಲು) ಮುಂದಾಗಿರುವನು. ಹರೆಯದಲ್ಲಿ, ಹಿರಿಯನಾಗಿ ತೋರುವ ಶ್ರೇಷ್ಠ ರಾಜಕಾರಣಿ, ತ್ಯಾಗಶೀಲನಾದ ಭರತನು ಆಚಂದ್ರಾರ್ಕಕೀರ್ತಿಗೆ ಪಾತ್ರನು. ನಮ್ಮ ವಂಶದ ಅತ್ಯಂತಶ್ರೇಷ್ಠನು, ಈ ಕೈಕೇಯಿಪುತ್ರನು.

ಯೋ ಭರತಃ ಪಿತ್ರಾ ವಿಸೃಷ್ಟಾಂ ದತ್ತಾಮಂಕಮುತ್ಸಂಗಂ ಚ ಗತಾಮಪಿ—ಮದ್ಭಕ್ತ್ಯಯಾಽಭೋಕ್ತಾಸನ್—ತೃನ್ನನ್ತತ್ವಾತ್ "ನಲೋಕ" ಇತಿ ಷಷ್ಠೀನಿಷೇಧಃ—"ಯುವಾಯುವತ್ಯಾಸಾರ್ಧಂ ಯನ್ ಮುಗ್ಧಭರ್ತೃವದಾಚರೇತ್—"ಅಂತರ್ನಿವೃತ್ತಸಂಗಃ ಸ್ಯಾದಾಸಿಧಾರವ್ರತಂ ಹಿತಮ್ ಹಿತತ್"—ಇತಿ ॥

68. ಏತಾವದುಕ್ತವತಿ ದಾಶರಥೌ ತದೀಯಾಂ ।
ಇಚ್ಛಾಂ ವಿಮಾನಮಧಿದೇವತಯಾ ವಿದಿತ್ವಾ ॥
ಜ್ಯೋತಿಷ್ಪಥಾವತತಾರ ಸವಿಸ್ಮಯಾಭಿಃ ।
ಉದ್ವೀಕ್ಷಿತಂ ಪ್ರಕೃತಿಭಿರ್ಭರತಾನುಗಾಭಿಃ ॥ ೬೮ ॥

ದಾಶರಥಿಯು (ದಶರಥನ ಪುತ್ರ ಶ್ರೀರಾಮಚಂದ್ರನು) ತನ್ನ ಸತಿಯೊಡನೆ ಈ ತೆರ ನುಡಿಯುತ್ತಿರಲು, ತನ್ನ ಅಧಿದೇವತೆಯಾದ ಶ್ರೀರಾಮನ ಮನದ ಇಂಗಿತವನ್ನು ಅರಿತ ಆ ದೇವವಿಮಾನವಾದ ಪುಷ್ಪಕವು ಜ್ಯೋತಿಮಂಡಲದಿಂದ ಭೂಮಿಯ ಕಡೆಗೆ ಇಳಿಯತೊಡಗಿತು. ಭರತನನ್ನು ಅನುಸರಿಸಿಬಂದ ಸಮಸ್ತರೂ ಬಾನತ್ತ ದೃಷ್ಟಿಬೀರಿ ವಿಸ್ಮಯದಿಂದ ನೋಡತೊಡಗಿದರು. ಆಕಾಶಕಾಯಗಳಾದ ನವಗ್ರಹಗಳು, ನಕ್ಷತ್ರಗಳು ಬೆಳಗುತ್ತ ಭೂಮಿಗಿಳಿದಂತೆ, ಶುಕ್ರಗ್ರಹದಂತೆ ಬೆಳ್ಳಿಯಂತೆ ಪ್ರಕಾಶಮಾನವಾಗಿ ಬೆಳಗುತ್ತ ಆ ಪುಷ್ಪಕ ವಿಮಾನವು ಭೂಸ್ಪರ್ಶಮಾಡಲು ಆಕಾಶಮಾರ್ಗದಿಂದ (ಬಾಂದಳದಿಂದ) ಭೂಮಿಯತ್ತ ಮೆಲ್ಲಮೆಲ್ಲನೆ ಕೆಳಗಿಳಿಯತೊಡಗಿತು.

ದಶರಥಿಃ=ಶ್ರೀರಾಮಃ—ವಿಮಾನಂ=ಪುಷ್ಪಕಂ—ಕರ್ತೃ ತದೀಯಾಂ ರಾಮಸಂಬಂಧಿನೀಮಿಚ್ಛಾಮಧಿದೇವತಯಾವಿಶೇಷೇಣ ವಿದಿತ್ವಾ — ಸವಿಸ್ಮಯಾಭಿ ರ್ಭರತಾನುಗಾಭಿಃ—ಪ್ರಕೃತಿಭಿಃ = ಪ್ರಜಾದಿಭಿರುದ್ವೀಕ್ಷಿತಂ ಸಜ್ಜಯೋತಿಷ್ಪಥಾದಕಾಶಾವತತಾರ ॥

69. ತಸ್ಮಾತ್ಪುರಃ ಸರಬಿಭೀಷಣದರ್ಶಿತೇನ ।
ಸೇವಾವಿಚಕ್ಷಣಹರೀಶ್ವರದತ್ತಹಸ್ತಃ ॥
ಯಾನಾದವಾತರದದೂರಮಹೀತಲೇನ ।
ಮಾರ್ಗೇಣ ಭಂಗಿರಚಿತಸ್ಫಟಿಕೇನ ರಾಮಃ ॥ ೬೯ ॥

ರಾಮಸೇವಾಕಾರ್ಯದಲ್ಲಿ ವಿಚಕ್ಷಣನಾದ, ಹರೀಶ್ವರನಾದ, ಕಪಿಗಳ ಒಡೆಯನಾದ (ವಾನರಸಾಮ್ರಾಟ)ಕಿಷ್ಕಿಂಧಾಧಿಪತಿ ಸುಗ್ರೀವನು ಶ್ರೀರಾಮನ ಬಳಿಗೆ ಬಂದು ಶ್ರೀರಾಮನ ಕೈಯನ್ನು ಹಿಡಿದು ಮೆಲ್ಲನೆ ಯಾನದಿಂದ ಇಳಿಸಿದನು. ಸೇವಾವಿಚಕ್ಷಣನಾದ ವಾನರೇಶ್ವರನು ವಿಮಾನದಿಂದ ಸ್ಪಟಿಕದ ಮೆಟ್ಟಿಲುಗಳ ಮೂಲಕ ದಾರಿತೋರುತ್ತ ಶ್ರೀರಾಮನನ್ನು ಗೌರವದಿಂದ ಕೆಳಕ್ಕೆ ಕರೆತಂದನು. ಆ ಬಳಿಕ ಸ್ಪಟಿಕಸೋಪಾನದಿಂದ ವಿಭೀಷಣಾದಿಗಳು ಸಮಸ್ತವಾನರರಾಕ್ಷಸವರೇಣ್ಯರು ಧರೆಗೆ ಇಳಿದರು.

ವಿಚಕ್ಷಣಃ = ಕುಶಲೋ—ಹರೀಶ್ವರ = ಕಪಿಗಳ ಯಜಮಾನನಾದ ಸುಗ್ರೀವ (ಕಪಿಮುಖಂಡ)—ದತ್ತಹಸ್ತೋ = ದತ್ತಾವಲಂಬೋ ಯಸ್ಯ ತಾದೃಶಃ ಸನ್—ರಚಿತಸ್ಪಟಿಕೇನ ಬದ್ಧಸ್ಪಟಿಕೇನ ಸೋಪಾನಪರ್ವಣಾ—ಪುಷ್ಪಕಾದವಾತರದವತೀರ್ಣಾತ್—ಭಂಗಿರಚಿತಸ್ಪಟಿಕೇನ = ಭಂಗಿಭಿಃ ರಚಿತ ಸ್ಪಟಿಕೇನ = ಸ್ಪಟಿಕದ ಮೆಟ್ಟಿಲುಗಳುಳ್ಳ.

70. ಇಕ್ಷ್ವಾಕುವಂಶಗುರವೇ ಪ್ರಯತಃ ಪ್ರಣಮ್ಯ ।
ಸ ಭ್ರಾತರಂ ಭರತಮರ್ಘ್ಯಪರಿಗ್ರಹಾನ್ತೇ ॥
ಪರ್ಯಶ್ರುರಸ್ವಜತಮೂರ್ಧನಿ ಚೋಪಜಘ್ರೌ ।
ತದ್ ಭಕ್ತ್ಯಪೋಢ ಪಿತೃರಾಜ್ಯಮಹಾಭಿಷೇಕೇ ॥ ೭೦ ॥

ದೇಹ ಮತ್ತು ಆತ್ಮ ಇವೆರಡರಲ್ಲೂ ಪವಿತ್ರರಾದ ಇಕ್ಷ್ವಾಕುವಂಶದ ಕುಲಗುರುಗಳಾದ ವಸಿಷ್ಠರಿಗೆ ಶ್ರೀರಾಮನು ಮೊದಲು ಅವರ ಅಡಿಗಳಿಗೆ ಎರಗಿ ಅವರ ಆಶೀರ್ವಾದಗಳನ್ನು ಪಡೆದು ಕೃತಕೃತ್ಯನಾದನು. ಅನಂತರ ಸಾಧುಭರತನ ಕೈಯಿಂದ ಅರ್ಘ್ಯವನ್ನು ಸ್ವೀಕರಿಸಿ ಸ್ನೇಹವು ಉಕ್ಕಿಬರಲು ಆ ಅಶ್ರುಮುಖನು ಭ್ರಾತೃವಾತ್ಸಲ್ಯದಿಂದ ಬಿಗಿದಪ್ಪಿದನು. ಅಲ್ಲದೆ ಹಿರಿಯನಾದುದರಿಂದ ತಲೆಯನ್ನು ಮೂಸುತ್ತಾ ಹೆಚ್ಚಿನ ವಾತ್ಸಲ್ಯವನ್ನು ತೋರಿದನು. ತನಗಾಗಿ ಪಿತೃರಾಜ್ಯಾಭಿಷೇಕವನ್ನು ಪಡೆದರೂ ತನ್ನಂತೆಯೇ ಜಟಾವಲ್ಕಲಧಾರಿಯಾಗಿ ಅಸಿಧಾರಾವ್ರತಿಯಾಗಿ ನೇಮದಿಂದ ಭರತನು ರಾಜ್ಯವನ್ನು ಆಳಿದನು. ಈಗ ಜಟಾವಲ್ಕಲಧಾರಿಯಾದ ಭರತನ ತಲೆಯನ್ನು ತನ್ನ ಕಣ್ಣೀರಿನ ಜಲದಿಂದ ಶ್ರೀರಾಮನು ತೊಳೆದನು. ಹರ್ಷಾಶ್ರುಗಳಿಂದ ಅಭಿಷೇಕಮಾಡಿದನು.

ಇಕ್ಷ್ವಾಕುವಂಶಗುರವೇ = ವಸಿಷ್ಠಾಯ ಪ್ರಣಮ್ಯ = ನಮಸ್ಕೃತ್ಯಾರ್ಘ್ಯಸ್ಯ ಪರಿಗ್ರಹಃ ಸ್ವೀಕಾರಸ್ತಸ್ಯಾಂತೇ ಪರ್ಯಶ್ರುಃ ಪರಿಗತಾನಂದಬಾಷ್ಪಃ ಸನ್—ಭ್ರಾತರಂ ಭರತಮ

ಸ್ವಜತಾಲಿಂಗತ್ । ತಸ್ಮಿನ್ ರಾಮೋ ಭರ್ತ್ರಾಽಪೋಢಪರಿಹೃತಃ ಪಿತೃರಾಜ್ಯಂ ಮಹಾಭಿಷೇಕೋ ಯೇನ ತಸ್ಮಿನ್ ಮೂರ್ಧನ್ಯುಪಜಘೌ ಚ—"ಘ್ರಾ ಗಂಧೋಪಾದಾನೇ" ಲಿಟಿರೂಪಮ್ ॥

71. ಶ್ಮಶ್ರುಪ್ರವೃದ್ಧಿಜನಿತಾನನವಿಕ್ರಿಯಾಂಶ್ಚ ।
ಪ್ಲಕ್ಷಾನ್ ಪ್ರರೋಹಜಟಿಲಾನಿವ ಮಂತ್ರಿವೃದ್ಧಾನ್ ॥
ಅನ್ವಗ್ರಹೀತ್ ಪ್ರಣಮತಃ ಶುಭದೃಷ್ಟಿಪಾತೈಃ ।
ವಾರ್ತಾನುಯೋಗಮಧುರಾಕ್ಷರಯಾ ಚ ವಾಚಾ ॥ ೭೦ ॥

ಕರುಣಾರ್ದ್ರಹೃದಯನೂ, ಶಮ, ದಮ, ಕ್ಷಮಾದ್ಯಷ್ಟಿಯನ್ನು ಬೀರುತ್ತಾ ಶ್ರೀರಾಮಚಂದ್ರನು ಮಧುರವಚನದಿಂದ ಅಲ್ಲಿ ನೆರೆದವರೆಲ್ಲರನ್ನು ವಿಚಾರಿಸಿ ಕುಶಲಪ್ರಶ್ನೆಯನ್ನು ಕೇಳಿದನು. ಆಲದ ಮರದ ಬೀಳಲುಗಳಂತೆ ಜಡೆಕಟ್ಟಿದ ಕೂದಲುಗಳಿಂದ ವಿಕೃತವದನವಾಂತ ವೃದ್ಧಮಂತ್ರಿಗಳನ್ನು ಆ ಪುರುಷೋತ್ತಮನು ಬಹಳ ದೀನತೆಯಿಂದ ಕೃಪೆಯ ದೃಷ್ಟಿಯ ಹೊನಲನ್ನು ಹರಿಸುತ್ತಾ ಕುಶಲವನ್ನು ಕೇಳಿ ಅವರನ್ನು ಸಂತಯಿಸಿದನು. ಅವರೆಲ್ಲರೂ ಆ ಮಹಾತ್ಮನಿಗೆ ತಲೆಬಾಗಿ ನಮಸ್ಕರಿಸುತ್ತಿದ್ದರು. ಅವರೆಲ್ಲರ ಒಳಿತನ್ನು ಆ ದಯಾಸಾಗರನು ಹಾರೈಸಿದನು. ಬಹಳ ವರ್ಷದನಂತರ ಅವರ ಮೊದಲ ಭೇಟಿ ಹಿಂದೆ ಚಿರಪರಿಚಿತರಾದ ಅವರ ಪರಿಚಯ ಸಿಗದಂತೆ (ಗುರುತು ಸಿಗದಂತೆ) ತಿಯುಸ್ಸು ದಾಟುತ್ತ (ದಾಳಿ ನಡೆಸಿ) ಅವರ ಬಡಕಲು ದೇಹವನ್ನು ವಿಕಾರಗೊಳಿಸಿತ್ತು.

ಶ್ಮಶ್ರೂಣಾಂ ಮುಖರೋಮ್ಣಾಂ ಪ್ರವೃದ್ಧ್ಯಾ ಸಂಸ್ಕಾರಾಭಾವಾದಭಿವೃದ್ಧ್ಯಾ ಜನಿತಾ ವನೇಷು ವಿಕ್ರಿಯಾ=ವಿಕೃತಿರ್ಯೇಷಾಂ ತಾನತ ಏವ ಪ್ರರೋಹೈಃ ಶಾಖಾವಲಂಬಿಭಿರಧೋಮುಖೈರ್ಮೂಲೈರ್ಜಟಿಲಾ=ಜ್ಜಟಾವತಃ ಪ್ಲಕ್ಷಾ=ನ್ಯಗ್ರೋಧಾನಿವ — ಪ್ರಣಮತೋ ಮಂತ್ರಿವೃದ್ಧಾಂಶ್ಚ ಶುಭೈಃ ಕೃಪಾರ್ದ್ರೈರ್ದೃಷ್ಟಿಪಾತೈರ್ವಾರ್ತಾಸ್ಯಾನುಯೋಗೇನ ಕುಶಲಪ್ರಶ್ನೇನ ಮಧುರಾಕ್ಷರಯಾ ವಾಚಾ ಚಾನ್ವಗ್ರಹೀದನುಗೃಹೀತವಾನ್ —ಶ್ಮಶ್ರುಪ್ರವೃದ್ಧಿ = ಗಡ್ಡ, ಮೀಸೆ, ಜುಟ್ಟು ಬಿಟ್ಟು (ಬೋಳಿಸಿಕೊಳ್ಳದೆ) ರಾಮನ ಮೇಲಿನ ಮಮತೆಯಿಂದ—ಮಂತ್ರಿವೃದ್ಧಾನ್ = ವೃದ್ಧಾಃ ಮಂತ್ರಿಣಃ ತಾನ್ ॥

72. ದುರ್ಜಾತಬಂಧುರಯಮೃಕ್ಷಹರೀಶ್ವರೋ ಮೇ ।
ಪೌಲಸ್ತ್ಯ ಏಷ ಸಮರೇಷು ಪುರಃ ಪ್ರಹರ್ತಾ ॥
ಇತ್ಯಾದೃತೇನ ಕಥಿತೌ ರಘುನಂದನೇನ ।
ವ್ಯುತ್ಕ್ರಮ್ಯ ಲಕ್ಷ್ಮಣಮುಖೌ ಭರತೋ ವವಂದೇ ॥ ೭೧ ॥

ಆ ರಘುನಂದನನು ಅವರೆಲ್ಲರ ಪರಿಚಯವನ್ನು ಮಾಡುತ್ತಾ, "ಈತನು ರಣರಂಗದಲ್ಲಿ ಎಲ್ಲರಿಗಿಂತ ಮುಂದಾಗಿ ಮುನ್ನುಗ್ಗಿ ಪ್ರಹರಿಸುತ್ತಿದ್ದ ಮಹಾವೀರನಾದ, ಪುಲಸ್ತ್ಯನ ನಂದನನಾದ ವಿಭೀಷಣನು. ಈತನಲ್ಲದೆ ಆಪದ್ಬಂಧು, ಪ್ರಾಣಸಖ, ಹರೀಶ್ವರನಾದ, ಋಕ್ಷವಾನರಮಹಾಸಾಮ್ರಾಟನಾದ ಕಿಷ್ಕಿಂಧಾಧಿಪತಿ ಸುಗ್ರೀವನು" ಎಂದು ಭರತನಿಗೆ ಆದರಪೂರ್ವಕ ಹೇಳಲು ಆ ಭರತನು ಅವರನ್ನು ಮೊದಲು ವಂದಿಸಿ, ಆಲಿಂಗಿಸಿ ಕುಶಲ

ವನ್ನು ವಿಚಾರಿಸಿದನು. ಅನಂತರ ತನ್ನ ಅನುಜನಾದ ಸಮರವೀರಾಗ್ರಣಿ ಲಕ್ಷ್ಮಣನನ್ನು ಕಂಡನು.

ದುರ್ಜಾತಬಂಧುಃ = ಆಪದ್‌ಬಂಧುಃ=ದುರ್ಜಾತೇ ಬಂಧುಃ—"ದುರ್ಜಾತಂ ವ್ಯಸನಂ ಪ್ರೋಕ್ತಮ್" ಇತಿ ವಿಶ್ವಃ—ಋಕ್ಷಹರೀಶ್ವರಃ = ಸುಗ್ರೀವಃ—ರಘೂಣಾಂ ನಂದನೇ ರಾಮೇಣ ಕಥಿತಾವುಭೌ ವಿಭೀಷಣಸುಗ್ರೀವೌ—ವ್ಯುತ್ಕ್ರಮ್ಯಾಲಿಂಗನಾದಿಭಿರಸಂಭಾವ್ಯ ಭರತೋ ವವಂದೇ ॥

**73. ಸೌಮಿತ್ರಿಣಾ ತದನುಸಂಸಸೃಜೇ ಸ ಚೈನಂ।**
**ಉತ್ಥಾಪ್ಯ ನಮ್ರಶಿರಸಂ ಭೃಶಮಾಲಿಲಿಂಗ॥**
**ರೂಢೇಂದ್ರಜಿತ್ಪ್ರಹರಣವ್ರಣಕರ್ಕಶೇನ।**
**ಕ್ಲಿಶ್ನನ್ನಿವಾಸ್ಯ ಭುಜಮಧ್ಯಮುರಃಸ್ಥಲೇನ ॥ ೭೩ ॥**

ಹೀಗೆ ತನ್ನ ಮುಂದೆ ನಮ್ರತೆಯಿಂದ ಶಿರಬಾಗಿ ನಿಂತಿರುವ ಬಂಧುಜನಪ್ರೀತಿ ಗುಣ ಸಾಗರನಾದ ಭರತನನ್ನು ಕಂಡು ಸುಮಿತ್ರಾನಂದನನು ಮೇಲೆತ್ತಿ, ಎದೆನೋಯುವಂತೆ ಆಲಿಂಗಿಸಿದನು. ಅವನು ಸಂತಸದ ಭರದಲ್ಲಿ ಬಿಗಿಯಾಗಿ ಅಪ್ಪಿದಾಗ ಅವರೀರ್ವರ ಎದೆಯೂ ಒಂದೇ ಎರಕವಾಗಿ, ಒಂದೇ ಎದೆಯೋ ಎಂಬಂತೆ ಕಂಡಿತು. ಇಂದ್ರಜಿತುವು ಹೊಡೆದ ಮಾರಕವಾದ ದಿವ್ಯಾಸ್ತ್ರಗಳ ಗಾಯದಿಂದ ಕಠಿಣತೆಯನ್ನು ಹೊಂದಿದ ವ್ರಣಕರ್ಕಶವಾದ ಎದೆಯಿಂದ ಭರಸೆಳೆದು ಭುಜಮಧ್ಯದಲ್ಲಿ ಒಲುಮೆಯಿಂದ ಬಲುನಲ್ಮೆಯಿಂದ ಭರದಿಂದ ಬಲವಾಗಿ ಬಿಗಿದಪ್ಪಿದನು, ಎದೆ ನೋಯುವಂತೆ ಮಹಾವೀರನಾದ ಸುಮಿತ್ರಾಸೂನು.

ಅನ್ವಯ:—ತದನು ಸ ಸೌಮಿತ್ರಿಣಾ ಸಂಸಸೃಜೇ। ನಮ್ರಶಿರಸಂ ಪ್ರಣತಮೇನಂ ಚ ಉತ್ಥಾಪ್ಯ ರೂಢೇಂದ್ರಜಿತ್ಪ್ರಹರಣವ್ರಣಕರ್ಕಶೇನ ಉರಃಸ್ಥಲೇನ ಅಸ್ಯ ಭುಜಮಧ್ಯಂ ಕ್ಲಿಶ್ನನ್ ಇವ ಭೃಶಂ ಆಲಿಲಿಂಗ॥

ಸಂಸೃಜೇಃ = ಸಂಗತಃ—"ಸೃಜ ವಿಸರ್ಗೇ" ದೈವಾದಿಕಾತ್ಕರ್ತರಿ ಲಿಟ್—ನಮ್ರ ಶಿರಸಂ = ಪ್ರಣತಮೇನಂ—ಭೃಶಂ=ಗಾಢಮಾಲಿಲಿಂಗ ಚ—ರೂಢೇಂದ್ರಜಿತ್ ಪ್ರಹರಣ ವ್ರಣೈಃ = ಕರ್ಕಶೇನಾಸ್ಯ—ಸೌಮಿತ್ರೇರುರಃಸ್ಥಲೇನ=ಭುಜಮಧ್ಯಂ—ಕ್ಲಿಶ್ನನ್ನಿವ= ಪೀಡಯನ್ನಿವ—"ಕ್ಲಿಶ್ನಾತಿ ಭುವನತ್ರಯಮ್" ಇತಿ ದರ್ಶನಾತ್॥

**74. ರಾಮಾಜ್ಞಯಾ ಹರಿಚಮೂಪತಯಸ್ತದಾನೀಂ।**
**ಕೃತ್ವಾ ಮನುಷ್ಯವಪುರಾರುರುಹುರ್ಗಜೇಂದ್ರಾನ್॥**
**ತೇಷು ಕ್ಷರತ್ಸು ಬಹುಧಾ ಮದವಾರಿಧಾರಾಃ।**
**ಶೈಲಾಧಿರೋಹಣಸುಖಾನ್ಯುಪಲೇಭಿರೇ ತೇ ॥ ೭೪ ॥**

ಶ್ರೀರಾಮನ ಆಜ್ಞೆಯಂತೆ ಆ ಕಪಿಯೂಥಪರು (ಕಪೀಶ್ವರರು, ಕಪಿಮುಖ್ಯರು, ಕಪಿನಾಯಕರು) ಮಾನವರೂಪನ್ನು ಧರಿಸಿ ದೊಡ್ಡ ದೊಡ್ಡ ಅಂಬಾರಿ ಆನೆಗಳ ಮೇಲೇರಿ ಕುಳಿತು ಮೆರವಣಿಗೆಯಲ್ಲಿ ಪಾಲ್ಗೊಂಡರು (ಆನೆಗಳನೇರಿದರು ನರರೂಪತಳೆದು). ಆಗ

ಅವರಿಗೆ ಪರ್ವತವನ್ನೇರಿದಂತೆ, ಮಳೆಗಾಲದಲ್ಲಿ ಸುರಿವ ಮಳೆಯ ಧಾರೆಯಿಂದ ರಂಜಿಸುವ ಗಿರಿಯನ್ನು ಅಡರಿ ಸಂಚರಿಸಿದ ಸುಖವು ಲಭಿಸಿತು. ಆ ಮದಗಜಗಳು ತಮ್ಮ ಕೆನ್ನೆಗಳಿಂದ ಸುವಾಸನೆಬೀರುವ ಮದಜಲವನ್ನು ಸುರಿಸುತ್ತಾ ಅಯೋಧ್ಯಾನಗರಿಯ ರಾಜಬೀದಿಗಳಲ್ಲಿ ದಾರಿಸಾಗುತ್ತಿದ್ದುವು. ಆ ವಾನರೇಶ್ವರರು ಶೈಲಾಧಿರೋಹಣದ ಸುಖವನ್ನು ಪಡೆದು ಹರ್ಷಗೊಂಡರು.

ತದಾನೀಂ ಹರಿಚಮೂಪತಯೋ ರಾಮಾಜ್ಞಯಾ ಮನುಷ್ಯವಪುಃ ಕೃತ್ವಾ ಗಜೇಂದ್ರಾನಾರುರುಹುಃ—ಶೈಲಾಧಿರೋಹಣಸುಖಾನ್ಯುಪಲೇಭಿರೇಽನುಬಭೂವುಃ—ತೇಷು ಕ್ಷರತ್ಸು = ಶೈಲಾದಿ ಅರೋಹಣದ.

**75. ಸಾನುಪ್ಲವಃ ಪ್ರಭುರಪಿ ಕ್ಷಣದಾಚರಾಣಾಂ ।**
**ಭೇಜೇ ರಥಾನ್ ದಶರಥಪ್ರಭವಾನುಶಿಷ್ಟಃ ॥**
**ಮಾಯಾವಿಕಲ್ಪರಚಿತೈರಪಿ ಯೇ ತದೀಯೈಃ ।**
**ನ ಸ್ಯಂದನೈಸ್ತುಲಿತಕೃತ್ರಿಮ ಭಕ್ತಿಶೋಭಾಃ ॥ ೭೫ ॥**

ದಾಶರಥಿಯ ಅಪ್ಪಣೆಯಂತೆ ಅಸುರೇಶ್ವರನಾದ ವಿಭೀಷಣನು ತನ್ನ ಅನುಚರರೊಂದಿಗೆ ಮಾನವನಿರ್ಮಿತ ರಥವನ್ನೇರಿ ಆಗಮನೋತ್ಸವದಲ್ಲಿ ಪಾಲ್ಗೊಂಡನು. ಮಾಯಾವಿಗಳಾದ ರಾಕ್ಷಸರು ಮಾಯಾವಿದ್ಯೆಯ ಬಲದಿಂದ ಮಾಯಾರಥಗಳನ್ನು ರಚಿಸಬಲ್ಲರಾದರೂ, ಆ ದನುಜರಥಗಳು ಶ್ರೀರಾಮನಿರ್ಮಿತ ರಥಗಳನ್ನು ಸರಿಗಟ್ಟಲಾರವು. ದನುಜರಥಗಳು ಬರೇ ಮಾಂತ್ರಿಕ ರಥಗಳು. ಅವು ಬರೇ ಕಾಲ್ಪನಿಕ. ಅವುಗಳು ಕಲಾಪೂರ್ಣವಲ್ಲ. ಆದರೆ ಶ್ರೀರಾಮರಾಜ್ಯದ ಕಾರ್ಮಿಕರು, ಶಿಲ್ಪಿಗಳು, ಬಡಗಿಗಳು, ಕಮ್ಮಾರರು, ಯಂತ್ರತಂತ್ರ ಕರ್ಮಚಾರಿಗಳು ವಿರಚಿಸಿದ ರಥಗಳು ಮಾಯಾರಥಗಳಿಂದ ಉತ್ತಮವಾದವುಗಳು ಎಂಬುದರಲ್ಲಿ ಎರಡು ಮಾತಿಲ್ಲ (ನಿರ್ವಿವಾದ), ರಕ್ಕಸರ ರಥಗಳಿಗಿಂತ ಪಂಚಭೂತಾತ್ಮಕವಾದ (ಪಾಂಚಭೌತಿಕ) ಮಾನವನಿರ್ಮಿತ ರಥಗಳು ಸರ್ವಶ್ರೇಷ್ಠವಾದವುಗಳು. ಅಂತಹ ದಿವ್ಯರಥವನ್ನೇರಿ ಅಸುರೇಶ್ವರನಾದ ವಿಭೀಷಣಾದಿಗಳು ಸ್ವಾಗತ ಉತ್ಸವದಲ್ಲಿ ಭರ್ಜರಿಯಿಂದ ಪಾಲ್ಗೊಂಡರು. ಬಿರುಸುಬಾಣಪಟಾಕಿಗಳನ್ನು ಮೋಜಿನಿಂದ ಉಡಾಯಿಸಿದರು.

ಅನ್ವಯ :—ಸಾನುಪ್ಲವಃ ಕ್ಷಣದಾಚರಾಣಾಂ ಪ್ರಭುರಪಿ ದಶರಥಪ್ರಭವಾನುಶಿಷ್ಟಃ ರಥಾನ್ ಭೇಜೇ ಯೇ (ರಥಾ) ಮಾಯಾವಿಕಲ್ಪರಚಿತೈಃ ಅಪಿ ತದೀಯೈಃ ಸ್ಯಂದನೈಃ ತುಲಿತಕೃತ್ರಿಮಭಕ್ತಿಶೋಭಾಃ ನ (ಆಸನ್) ॥

ಸಾನುಪ್ಲವಃ = ಸಾನುಗಃ—"ಅಭಿಸಾರಸ್ತ್ವನುಸರಃ" ಇತಿ ಯಾದವಃ—ಪ್ರಭವಸ್ಮಾದಿತಿ—ಪ್ರಭವೋ = ಜನಕಃ—ದಶರಥಃ ಪ್ರಭವೋ ಯಸ್ಯ ಸ ದಶರಥಪ್ರಭವೋ ರಾಮಃ ತೇನಾನುಶಿಷ್ಟ ಆಜ್ಞಪ್ತಃ ಸನ್—ತಾನೇವ ವಿಶಿನಷ್ಟಿ—ಯೇ ರಥಾ ಮಾಯಾವಿಕಲ್ಪರಚಿತೈಃ ಸಂಕಲ್ಪವಿಶೇಷನಿರ್ಮಿತೈರಪಿ ತದೀಯೈ ವಿಭೀಷಣೀಯೈಃ ಸ್ಯಂದನೈರಥೈಸ್ತುಲಿತ ಕೃತ್ರಿಮಭಕ್ತಿಶೋಭಾಸ್ತುಲಿತಾ ಸಮೀಕೃತಾ ಕೃತ್ರಿಮಾ ಕ್ರಿಯಯಾ ನಿರ್ವೃತ್ತಾ ಭಕ್ತೀನಾಂ ಶೋಭಾ ಯೇಷಾಂ ತೇ ತಥೋಕ್ತಾ ನ ಭವಂತಿ—ಕೃತ್ರಿಮೇತ್ಯತ್ರ—"ದ್ವಿತಃ ತ್ರಿಕ್ರಃ" ಇತಿ ತ್ರಿಕ್ರಪ್ರತ್ಯಯಃ — ಸಾನುಪ್ಲವಃ = ಅನುಪ್ಲವ = ಪುಷ್ಟ = ಅನುಪ್ಲವೈಃ ಸಹಿತಃ ॥

**76. ಭೂಯಸ್ತತೋ ರಘುಪತಿರ್ವಿಲಸತ್ಪತಾಕಂ ।**
**ಅಧ್ಯಾಸ್ತ ಕಾಮಗತಿ ಸಾವರಜೋ ವಿಮಾನಮ್ ॥**
**ದೋಷಾತನಂ ಬುಧಬೃಹಸ್ಪತಿಯೋಗದೃಶ್ಯಃ ।**
**ತಾರಾಪತಿಸ್ತರಲವಿದ್ಯುದಿವಾಭ್ರವೃಂದಮ್ ॥ ೭೬ ॥**

ಪುನಃ ರಘುಪತಿಯು ಮನದ ಇಚ್ಛೆಯಂತೆ ಹೋಗಬಲ್ಲ, ಶೋಭಿಸುವ ತ್ರಿವರ್ಣ ರಂಜಿತ ಪತಾಕೆಗಳಿಂದ ಮೆರೆಯುತ್ತಿರುವ ಕಾಮಚರಯಾನವೆಂದು ಲೋಕಪ್ರಸಿದ್ಧವಾದ ಪುಷ್ಪಕವಿಮಾನವನ್ನು, ಭರತ, ಲಕ್ಷ್ಮಣ, ಶತ್ರುಘ್ನರ ಸಮೇತ ಏರಿದನು ಪಟ್ಟಾಭಿರಾಮ. ಆಗ ಆ ಭಾರತದ ಸಾಮ್ರಾಟನು ರಾತ್ರಿಕಾಲದ ಚಂದ್ರಮನಂತೆ ಶೋಭಿಸಿದನು. ನಕ್ಷತ್ರಗಳ ಅಧಿಪತಿಯಾದ ತಾರಾಪತಿಯಾದ (ರೋಹಿಣೀಪತಿಯಾದ) ಚಂದ್ರನು, ಬೃಹಸ್ಪತಿ ಮತ್ತು ಬುಧಗ್ರಹಗಳಿಂದ ಕೂಡಿರುವ ನಕ್ಷತ್ರಪುಂಜಗಳ ಮಧ್ಯೆ ರಾತ್ರಿಕಾಲದಲ್ಲಿ ಮೋಡಮೆರೆದ ಬಾನವರ್ಗದಲ್ಲಿ ಶೋಭಿಸುವಂತೆ ಆ ಪುಷ್ಪಕವಿಮಾನದಲ್ಲಿ ಭಾನುವಂಶ ಲಲಾಮನು ಶೋಭಿಸುತ್ತಲಿದ್ದನು. ಆ ಪುಷ್ಪಕವು ನಾನಾ ವಿಧದ ಪತಾಕೆಗಳಿಂದ ಒಡಮೆರೆದು ರಾತ್ರಿಕಾಲದಲ್ಲಿ ಬಾನಲ್ಲಿ ಮಿಂಚು ಮಿಂಚುತ್ತಿರಲು ಪಯಣಿಸಲು ಹೊರಟ ರಾತ್ರಿಯ ರಾಜನಾದ ಚಂದ್ರಮನಂತೆ ಪ್ರಕಾಶಿಸುತ್ತ ಯಾನಮಾಡಿದನು.

ಭೂಯ ಇತಿ—ತತೋ ರಘುಪತಿಃ ಸಾವರಜೋ = ಭರತಲಕ್ಷ್ಮಣಸಹಿತಃ ಸನ್— ವಿಲಸತ್ ಪತಾಕಂ ಕಾಮೇನೇಚ್ಛಾನುಸಾರೇಣ—ಭೂಯಃ = ಪುನರಪಿ—ಯೋಗೇನ ದೃಶ್ಯೋ ದರ್ಶನೀಯಸ್ತಾರಾಪತಿಶ್ಚಂದ್ರೋ—ದೋಷಾಭವಂ = ದೋಷಾತನಮ್— "ಸಾಯಂ ಚಿರಂ ಪ್ರಾಹ್ಣೇ" ಇತ್ಯಾದಿನಾ "ದೋಷಾ" ಶಬ್ದಾದವ್ಯಯಾ ಟ್ಯುಲ ಪ್ರತ್ಯಯಃ—ಅಧ್ಯಾಸ್ತಾಧಿಷ್ಠಿತವಾನ್—ವಿಲಸತ್ ಪತಾಕಮ್ = ವಿಲಸಂತ್ಯಃ ಪತಾಕಾಃ ಯಸ್ಮಿನ್ ತತ್—ಕಾಮಗತಿಃ = ಸ್ವೇಚ್ಛಾಚಾರ = ತನ್ನ ಇಚ್ಛೆಯಂತೆ = ಮನದ ಕಾಮನೆಯಂತೆ (ಲಂಗುಲಗಾಮಿಲ್ಲದೆ).

**77. ಶಕ್ತೀಶ್ವರೇಣ ಜಗತಾಂ ಪ್ರಲಯಾದಿವೋರ್ವೀಂ ।**
**ವರ್ಷಾತ್ಯಯೇನ ರುಚಮಭ್ರಘನಾದಿವೇಂದೋಃ ॥**
**ರಾಮೇಣ ಮೈಥಿಲಸುತಾಂ ದಶಕಂಠಕೃಚ್ಛ್ರಾತ್ ।**
**ಪ್ರತ್ಯುದ್ಧೃತಾಂ ಧೃತಿಮತೀಂ ಭರತೋ ವವಂದೇ ॥ ೭೭ ॥**

ಭಕ್ತಿಗುಣಪರಿಪೂರ್ಣನಾದ ಭರತನು ಮಿಥಿಲರಾಜಸುತೆಯಾದ ತನ್ನ ಅತ್ತಿಗೆಗೆ ಅಂದು ವಂದಿಸಿದನು. ಪ್ರಳಯಕಾಲದಲ್ಲಿ ಭೂಮಿಯು ಜಲದಲ್ಲಿ ಪೂರ್ಣವಾಗಿ ಮುಳುಗಿರಲು ಜಗದೀಶ್ವರನಾದ ಮಹಾವಿಷ್ಣುವು ಆದಿವರಾಹನಾಗಿ ಭೂಮಿಯನ್ನೆತ್ತಿ ಮೇಲಕ್ಕೆ ತಂದಂತೆ ಶ್ರೀರಾಮನು ಮೈಥಿಲಿಯನ್ನು ಬಂಧನದಲ್ಲಿಟ್ಟು ಹಿಂಸಿಸುತ್ತಿದ್ದ ದಶಕಂಠನನ್ನು ಮರ್ದಿಸಿ ಉದ್ಧರಿಸಿದನು. ಚಂದ್ರನ ಬೆಳಕನ್ನು ಮರೆಮಾಡುತ್ತಿದ್ದ ಮೋಡರಾಶಿಗಳಿಂದ ಹೊರಬಂದ ಚಂದ್ರಮನಂತೆ, ಪತಿಯನ್ನು ಸೇರಿ ಸಂತಸವಾಂತ ಸೀತಾದೇವಿಯನ್ನು ಆ ದೇವವಿಮಾನದಲ್ಲಿ ಭರತನು ಶಿರಬಾಗಿ ವಂದಿಸಿದನು (ನಮಿಸಿದನು).

ಜಗತಾಮೀಶ್ವರೇಣ = ಆದಿಮಾಹೇಣ—ಶರದಾಗಮೇನಾಭ್ರಘನಾತ್ ಮೇಘಸಂಘಾತದಿಂದೋರುಚಂದ್ರಿಕಾಮಿವ—ಏವ ಕೃಚ್ಛ್ರಂ—ಧೃತಿಮತೀಂ=ಸಂತೋಷವತೀಂ—ಮೈಥಿಲಸಂತಾಂ = ಸೀತಾಂ—ಭರತೋ ವವಂದೇ ॥

**78. ಲಂಕೇಶ್ವರಪ್ರಣತಿಭಂಗದೃಢವ್ರತಂ ತತ್ ।**
**ವಂದ್ಯಂ ಯುಗಂ ಚರಣಯೋರ್ಜನಕಾತ್ಮಜಾಯಾಃ ॥**
**ಜ್ಯೇಷ್ಠಾನುವೃತ್ತಿಜಟಿಲಂ ಚ ಶಿರೋಽಸ್ಯ ಸಾಧೋಃ ।**
**ಅನ್ಯೋನ್ಯಪಾವನಮಭೂದುಭಯಂ ಸಮೇತ್ಯ ॥ ೭೮ ॥**

ಆ ಜನಕಜಾತೆಯ ಶ್ರೀಪಾದಗಳು ಲಂಕೇಶ್ವರನ ನಾನಾವಿಧದ ಪ್ರಣಯಭಿಕ್ಷೆಗಳನ್ನು ಮೀರಿದಿದ್ದುವು. ಆ ದೃಢಪತಿವ್ರತೆಯು (ಅಖಂಡಪತಿವ್ರತೆಯು) ಎಲ್ಲಾ ವಿಧದ ಕಷ್ಟಗಳನ್ನು ಸಹಿಸಿಕೊಂಡು ತನ್ನ ಸ್ತ್ರೀಧರ್ಮವನ್ನು ರಕ್ಷಿಸಿಕೊಂಡು ಅಜೇಯಳೆನಿಸಿದಳು (ಪಾತಿವ್ರತ್ಯವನ್ನು). ಅಂತಹಳ ಶ್ರೀಪಾದಕ್ಕೆ ನಮಿಸಿ ಭರತನು, ಅವಲನೆನಿಸಿದನು.ತನ್ನ ಅಣ್ಣನಂತೆಯೇ ಜಟಾವಲ್ಕಲಧಾರಿಯಾಗಿ, ಭ್ರಾತೃವತ್ಸಲನಾಗಿ, ಅಣ್ಣನ ಪಾದುಕೆಗಳಿಗೆ ಪಟ್ಟಾಭಿಷೇಕಮಾಡಿ, ಆ ಪಾದುಕೆಗಳ ಹೆಸರಿನಲ್ಲಿ ರಾಜ್ಯವಾಳಿ, ಎಲ್ಲಾ ವಿಧದ ಸಾಂಸಾರಿಕ ಸುಖದಿಂದ ದೂರವಿದ್ದ ಭರತನು ಶ್ರೀರಾಮನಂತೆಯೇ ಕಾಣಿಸುತ್ತಲಿದ್ದನು (ಪ್ರಕಾಶಿಸುತ್ತಿದ್ದನು). ಅನ್ಯೋನ್ಯವಿಮಲತೆಯ ಸಾಮ್ಯವಾಂತ ಆ ಸಹೋದರರು (ಪುಣ್ಯಶ್ಲೋಕರು) ಆ ಪುಷ್ಪಕದಲ್ಲಿ ದೇದೀಪ್ಯಮಾನರಾಗಿ ವಿರಾಜಿಸುತ್ತಿದ್ದರು.

ಲಂಕೇಶ್ವರಸ್ಯ = ರಾವಣಸ್ಯ—ಪ್ರಣತೀನಾಂ ಭಂಗೇನ = ನಿರಾಸೇನ—ದೃಢವ್ರತಮಖಂಡಿತಪತಿವ್ರತ್ಯಮಂತ ಏವ ವಂದ್ಯಂ ತಜ್ಜನಕಾತ್ಮಜಾಯಾಶ್ಚರಣಯೋರ್ಯುಗಂ ಜ್ಯೇಷ್ಠಾನುವೃತ್ತ್ಯಾ—ಜಟಿಲಂ = ಜಟಾಯುಕ್ತಂ—ಸಾಧೋಸಜ್ಜನಸ್ಯಾಸ್ಯ ಭರತಸ್ಯ—ಶಿರಶ್ಚೇತ್ಯುಭಯಂ ಸಮೇತ್ಯ ಮಿಲಿತ್ವಾಽನ್ಯೋನ್ಯಸ್ಯ ಪಾವನಂಶೋಧಕಮಭೂತ್—ಲಂಕೇಶ್ವರ = ಲಂಕೇಶ್ವರಸ್ಯ ಪ್ರಣತೀನಾಂ ಭಂಗೇನ ದೃಢವ್ರತಮ್ ॥

**79. ಕ್ರೋಶಾರ್ಧಂ ಪ್ರಕೃತಿಪುರಃಸರೇಣ ಗತ್ವಾ ।**
**ಕಾಕುತ್ಸ್ಥಃ ಸ್ತಿಮಿತ ಜವೇನ ಪುಷ್ಪಕೇಣ ॥**
**ಶತ್ರುಘ್ನಪ್ರತಿಹಿತೋಪಕಾರ್ಯಮಾರ್ಯಃ ।**
**ಸಾಕೇತೋಪವನಮುದಾರಮಧ್ಯುವಾಸ ॥ ೭೯ ॥**

ಮರ್ಯಾದಾಪುರುಷೋತ್ತಮನಾದ ಶ್ರೀರಾಮಚಂದ್ರನು ಪುಷ್ಪಕವಿಮಾನದಲ್ಲಿ ಪತ್ನೀಸಮೇತ (ಜಾಯಾಸಮೇತ) ಆರೂಢಿಸಿದ್ದನು. ವಿಮಾನವು ಆಕಾಶದಲ್ಲಿ ಮಂದಗತಿಯಿಂದ ಹೊರಟಿತು. ಮುಂದೆ ಪುರಜನರು ನಲಿದು ನಡೆಯುತ್ತಿರಲು ಪುಷ್ಪಕವು ಮೆಲ್ಲಮೆಲ್ಲನೆ ಬರುತ್ತಿತ್ತು. ಹೀಗೆ ಅವರು ಅಯೋಧ್ಯೆಯ ಹೊರಗಡೆಯಿರುವ ಉಪವನದೆಡೆಗೆ ಹೋಗುತ್ತಿದ್ದರು. ಅಲ್ಲಿ ಶತ್ರುಘ್ನನ ಆದೇಶದಂತೆ ಶಿಬಿರಗಳನ್ನು, ಪಟಮಯವ ಆಲಯಗಳನ್ನು, ಶಾಮಿಯಾನಗಳನ್ನು, ಕೃತಕ ಮಂದಿರಗಳನ್ನು ರಚಿಸಿದ್ದರು. ಅವರೆಲ್ಲರೂ ಅರ್ಧಕ್ರೋಶದಷ್ಟು ದೂರ (ಒಂದೂವರೆ ಕಿಲೋಮೀಟರ್) ನಡೆದುಬಂದು ಆ ಸಾಕೇತೋಪವನದಲ್ಲಿ (ಸಾಕೇತನಗರದ ಉಪವನದಲ್ಲಿ) ಬೀಡುಬಿಟ್ಟರು.

ಅನ್ವಯಃ :—ಆರ್ಯಃ ಕಾಕುತ್ಸ್ಥಃ ಪ್ರಕೃತಿಪುರಃಸರೇಣ ಸ್ತಿಮಿತಜವೇನ ಪುಷ್ಪಕೇಣ ಕ್ರೋಶಾರ್ಧಂ ಗತ್ವಾ ಶತ್ರುಘ್ನಪ್ರತಿವಿಹಿತೋಪಕಾರ್ಯಮ್ ಉದಾರಂ ಸಾಕೇತೋಪವನಮ್ ಅಧ್ಯುವಾಸ ॥

ಆರ್ಯಃ = ಪೂಜ್ಯಃ—ಪ್ರಕೃತಯಃ = ಪ್ರಜಾಃ—ಸ್ತಿಮಿತಜವೇನ = ಮಂದವೇಗೇನ—ಕ್ರೋಶೋಽಧ್ವಪರಿಮಾಣವಿಶೇಷಃ—ಸಾಕೇತಸ್ಯಾಯೋಧ್ಯಾಯಾ ಉಪವನಮುಪಕಾರ್ಯಾ ಸಾಧಿತಪ್ರೌ—ಸಾಕೇತಃ "ಸ್ಯಾದಯೋಧ್ಯಾಯಾಂ ಕೋಸಲಾನಂದಿನೀ ತಥಾ" ಇತಿ ಯಾದವಃ—ಕ್ರೋಶಾರ್ಧಮ್ = ಕ್ರೋಶೈಕದೇಶಂ ॥

# ಚತುರ್ದಶಃ ಸರ್ಗಃ

## ಹದಿನಾಲ್ಕನೆಯ ಸರ್ಗ

**1. ಭರ್ತುಃ ಪ್ರಣಾಶಾದಥ ಶೋಚನೀಯಂ ।**
**ದಶಾಂತರಂ ತತ್ರ ಸಮಂ ಪ್ರಪನ್ನೇ ॥**
**ಅಪಶ್ಯತಾಂ ದಾಶರಥೀ ಜನನ್ಯೌ ।**
**ಛೇದಾದಿವೋಪಘ್ನತರೋರ್ವ್ರತತ್ಯೌ ॥ ೧ ॥**

ಅಲ್ಲಿ ನಗರದ ಉಪವನದಲ್ಲಿ ದಶರಥನ ಪುತ್ರರಾದ (ದಾಶರಥಿಗಳು) ರಾಮಲಕ್ಷ್ಮಣರು ತಮ್ಮ ಇಬ್ಬರು ತಾಯಂದಿರಾದ ಕೌಸಲ್ಯೆ, ಸುಮಿತ್ರೆಯರನ್ನು ಏಕಕಾಲದಲ್ಲಿ ಕಂಡರು. ಅವರೀರ್ವರು ಆಸರೆಯನ್ನು ಕಳೆದುಕೊಂಡ ಬಳ್ಳಿಯಂತೆ (ಆಸರೆಯ ಮರ ಮುರಿದ ಬಳ್ಳಿ) ದಶರಥನೆಂಬ ಮರಕ್ಕೆ ಹಬ್ಬಿದ ಜೊತೆಬಳ್ಳಿ ಇದೀಗ ಮರ ಮುರಿದು ಹೋಗಿ ಮಣ್ಣಿನಲ್ಲಿ ತಮ್ಮ ಅಂದವನ್ನು ಕಳೆದುಕೊಂಡು ಬಿದ್ದಿವೆ. ಆ ಇಬ್ಬರು ತಾಯಂದಿರು ಪತಿವಿಯೋಗದಿಂದ ಹಿರಿದಾದ ಅಳಲಿನಿಂದ (ದುಃಖದಿಂದ) ಕಂದಿ ಕುಂದಿ ಬೆಂದು ಹೋಗಿದ್ದರು (ಇನಿಯನಳಿವಿನೊಳು ನವೆಯುತಿರುವ ಅಬ್ಬೆಯರ). ಅಂತಹ ದುಃಸ್ಥಿತಿಯಲ್ಲಿರುವ ತಮ್ಮ ಪ್ರೀತಿಯ ತಾಯಂದಿರನ್ನು ದಶರಥನ ಅಣುಗರಾದ ಶ್ರೀರಾಮಲಕ್ಷ್ಮಣರು ಪುರದ ಹೊರದೋಟದಲ್ಲಿ ಏಕಕಾಲದಲ್ಲಿ ಕಂಡರು.

ಅನ್ವಯಃ :—ಅಥ ದಾಶರಥೀ ಉಪಘ್ನತರೋಃ ಛೇದಾತ್ ಇವ ಭರ್ತುಃ ಪ್ರಣಾಶಾತ್ ಶೋಚನೀಯಂ ದಶಾಂತರಂ ಪ್ರಪನ್ನೇ ಜನನ್ಯೌ ತತ್ರ ಸಮಂ ಅಪಶ್ಯತಾಂ ॥

ದಾಶರಥೀ = ರಾಮಲಕ್ಷ್ಮಣೌ — ಉಪಘ್ನತರೋರಾಶ್ರಯವೃಕ್ಷಸ್ಯ—''ಉಪಘ್ನ ಆಶ್ರಯೇ'' (ಪಾಣಿನಿ) ಇತಿನಿಪಾತಃ—ತಸ್ಯ ಛೇದಾಹೃತತ್ಯೌ ಲತೇಇವ—''ವಲ್ಲೀ ತು ವ್ರತ ತೀರ್ಲತಾ'' ಇತ್ಯಮರಃ—ಭರ್ತುಃ=ದಶರಥಸ್ಯ ದಶಾನ್ತರಮವಸ್ಥಾನ್ತರಮ್''— ಅವಸ್ಥಾಯಾಂ ಪಸ್ತ್ರಾನ್ತೇ ಸ್ಯಾದ್ದೃಶಾಪಿ'' ಇತಿ ವಿಶ್ವಃ—ಪ್ರಪನ್ನೇ = ಪ್ರಾಪ್ತೇ— ಜನನ್ಯೌ = ಕೌಸಲ್ಯಾಸುಮಿತ್ರೇ—ದೃಶೇಃ ಕರ್ತರಿ ಲಙ್—ಯುಗಪದಪಶ್ಯತಾಮ್— ದಶಾಂತರೇ = ಮುಂಚಿನಿಂದ, ದುಃಖದಿಂದ ಉಂಟಾದ-ರೂಪಾಂತರಂ ಉಪಘ್ನತರುಃ= ಆಶ್ರಯ ನೀಡುವ ಮರ—ಅಥ=ಅನಂತರ—ದಾಶರಥೀ=ದಶರಥಸ್ಯ ಅಪತ್ಯಂ ಪುಮಾನ್ ದಾಶರಥಿಃ—ದಶಾಂತರಮ್ = ಅನ್ಯಾ ದಶಾ ದಶಾಂತರಮ್ ॥

**2. ಉಭಾವುಭಾಭ್ಯಾಂ ಪ್ರಣತೌ ಹತಾರೀ ।**
**ಯಥಾಕ್ರಮಂ ವಿಕ್ರಮಶೋಭಿನೌ ತೌ ॥**
**ವಿಸ್ಪಷ್ಟಮಸ್ರಾಂಧತಯಾ ನ ದೃಷ್ಟೌ ।**
**ಜ್ಞಾತೌ ಸುತಸ್ಪರ್ಶಸುಖೋಪಲಂಭಾತ್ ॥ ೨ ॥**

ಆ ಉಭಯವಿಕ್ರಮಶೋಭಿತರಾದ ಮಹಾವೀರರು ಯಥಾಕ್ರಮದಿಂದ (ಪರಿವಿಡಿಯೊಳು ಅಬ್ಬೆಯರಿಗೆ) ತಮ್ಮ ತಾಯಂದಿರಿಗೆ ಎರಗಿದರು. ಅವರು ಶತ್ರುಗಳನ್ನು ಕೊಂದ ಅಸದೃಶ ಪರಾಕ್ರಮಶಾಲಿಗಳು, ವಿಕ್ರಮಶೀಲರು. ಅವರ ಮಾತೆಯರು ಕಣ್ಣೀರಧಾರೆ ಹರಿಸುತ್ತಾ ಕಣ್ಣನ್ನು ಮಂಜುಗೊಳಿಸಿ (ಕಂಬನಿಯ ಮಬ್ಬಿನೊಳು) ಅವರ ಮುಖವನ್ನು ಕಾಣದಿದ್ದರೂ, ನೋಡದ ಹಾಗಾದರೂ ಬರೇ ಮೈಯನ್ನು ಕೈಯಿಂದ ತಡವರಿಸುತ್ತ, ಮೈಯ ಸೋಂಕಿನ ಸೊಗದಿಂದಲೇ ಅವರನ್ನು ಗುರುತಿಸಿಕೊಂಡರು. ಅವರ ಒಡಲ ಸೋಂಕಿನ (ಮೈಯ ಸೋಂಕಿನ ಸೊಗದೊಳು) ಅನುಭವವನ್ನು ಪಡೆದು ಆನಂದಿಸಿದರು.

ಅನ್ವಯ :—ಯಥಾಕ್ರಮಂ ಪ್ರಣತೌ ಹತಾರೀ ವಿಕ್ರಮಶೋಭಿನೌ ತೌ ಉಭೌ ಉಭಾಭ್ಯಾಂ ಅಸ್ರೈಃ ಅಂಧತಯಾ ವಿಸ್ಪಷ್ಟಂ ನ ದೃಷ್ಟೌ ಸುತಸ್ಪರ್ಶಸುಖೋಪಲಂಭಾತ್ ಜ್ಞಾತೌ ॥

ಪ್ರಣತೌ = ನಮಸ್ಕೃತವಂತೌ—ಉಭಯಾಭ್ಯಾಂ = ಉಭಯಮಾತೃಭ್ಯಾಮ್—ವಿಕ್ರಮಶೋಭಿನೌ ತಾವುಭೌ=ರಾಮಲಕ್ಷ್ಮಣೌ—ಅಸ್ರೈರಶ್ರುಭಿರಂಧತಯಾ ಹೇತುನಾ = ಕಂಬನಿಯ ಮಬ್ಬಿನೊಳು ನೋಡದೊಡಮ್—"ಅಸ್ರಮಶ್ರು ಚ ಶೋಣಿತಮ್" ಇತಿ ಯಾದವಃ—ವಿಸ್ಪಷ್ಟಂ=ನ ದೃಷ್ಟೌ—ಕಿಂತು ಸುತಸ್ಪರ್ಶೇನ ಯತ್ ಸುಖಂ = ತಸ್ಯೋಪಲಂಭಾದನುಭವಾ ಜ್ಞಾತೌ= ಮೈಯ ಸೋಂಕಿನ ಸೊಗದೊಳು—ಸುತಸ್ಪರ್ಶಸುಖೋಪಲಂಭಾತ್ = ಸುತಸ್ಪರ್ಶೇನ ಯತ್ ಸುಖಂ ತಸ್ಯ ಉಪಲಂಭಾತ್ = ಮಗನ ಸ್ಪರ್ಶದ ಆನಂದದ ಅನುಭವದಿಂದ—ಯಥಾಕ್ರಮಮ್ = ಸ್ವಸ್ವಮಾತೃಪೂರ್ವಕಮ್—ಪರಿವಿಡಿಯೊಳು = ಅನುಕ್ರಮದಲ್ಲಿ.

**3. ಆನಂದಜಃ ಶೋಕಜಮಶ್ರುಬಾಷ್ಪಃ ।**
**ತಯೋರಶೀತಂ ಶಿಶಿರೋ ಬಿಭೇದ ॥**
**ಗಂಗಾಸರಯ್ವೋರ್ಜಲಮುಷ್ಣತಪ್ತಂ ।**
**ಹಿಮಾದ್ರಿನಿಸ್ಯಂದ ಇವಾವತೀರ್ಣಃ ॥ ೩ ॥**

ಆ ಇಬ್ಬರು ಮಾತೆಯರು ತಮ್ಮ ಪುತ್ರರ ದರ್ಶನದಿಂದ ಪುಳಕಿತರಾಗಿ ತಂಪಾದ ಆನಂದಬಾಷ್ಪವನ್ನು ಸುರಿಸಿದರು. ಅವರು ಈವರೆಗೆ ಪುತ್ರವಿಯೋಗದ, ಪತಿವಿಯೋಗದ ಕಣ್ಣೀರು ಸುರಿಸುತ್ತಿದ್ದರು. ಇದೀಗ ಪುತ್ರದರ್ಶನದಿಂದ ಪುನರ್ಜನ್ಮ ಪಡೆದಂತಾಯಿತು. ಹೇಗೆ ಗಂಗೆ ಮತ್ತು ಸರಯೂನದಿಗಳು ಬೇಸಿಗೆಕಾಲದಲ್ಲಿ ಹರಿಯುತ್ತಿರಲು, ಬಿಸಿಲು ಆಕ್ರಮಿಸಿದ ಬಿಸಿಯಾದ ಜಲವು, ಹಿಮಾಲಯದ ಹಿಮ ಕರಗಿ ಬಂದು ಸೇರುವ ತಂಪಾದ ಜಲದಿಂದ ತಂಪೆಸಗುವಂತೆ, ಅವರ ಉಮ್ಮಳದ ಕಂಬನಿ ಅಳಿದುಹೋಯಿತು. ಅವರು ನಲವಿನಿಂದ ಒಗೆತಂದ ತಂಪು ಕಂಬನಿ ಮಿಂದಿದರು (ನಲವಿನಿಂದೊಗೆತಂದ ತಣ್ಪುಪನಿಯಿಳಿದು).

ಅನ್ವಯ :—ತಯೋಃ ಆನಂದಜಃ ಶಿಶಿರಃ ಬಾಷ್ಪಃ ಶೋಕಜಂ ಅಶೀತಂ ಅಶ್ರು ಉಷ್ಣತಪ್ತ ಗಂಗಾಸರಯ್ವೋಃ ಜಲಂ ಅವತೀರ್ಣಃ ಹಿಮಾದ್ರಿನಿಷ್ಯಂದಃ ಇವ ಬಿಭೇದಃ ॥

ಉಷ್ಣತಪ್ತಂ = ಗ್ರೀಷ್ಮತಪ್ತಂ—ಅವತೀರ್ಣೋ ಹಿಮಾದ್ರೇರ್ನಿಸ್ಯಂದೋ ನಿರ್ಝರ

ಇವ ॥ ಉಪಮಾಲಂಕಾರ ॥ ಆನಂದಜನೇ ಶೋಕಃ ತಿರಸ್ಕೃತಃ ಇತ್ಯರ್ಥಃ—ನಿಷ್ಯಂದಃ = ಪ್ರವಾಹಃ

4. ತೇ ಪುತ್ರಯೋಃ ನೈರ್ಋತಶಸ್ತ್ರಮಾರ್ಗಾನ್ ।
ಆರ್ದ್ರಾನಿವಾಂಗೇ ಸದಯಂ ಸ್ಪೃಶಂತ್ಯೌ ॥
ಅಪೀಪ್ಸಿತಂ ಕ್ಷತ್ರಕುಲಾಂಗನಾನಾಂ ।
ನ ವೀರಸೂಶಬ್ದಕಾಮಯೇತಾಮ್ ॥ ೪ ॥

ಅವರು (ಆ ಇಬ್ಬರು ರಾಣಿಯರು) ತಮ್ಮ ಮಕ್ಕಳ ದೇಹವನ್ನು ಪುತ್ರಪ್ರೇಮದಿಂದ ಸವರಿದರು. ಆಗ ಅವರು ರಕ್ಕಸರ ಶಸ್ತ್ರಗಳಿಂದಾದ ಗಾಯಗಳನ್ನು ಕಂಡು ಅವು ಹಸಿಯಾದ ಗಾಯಗಳೆಂದೇ ಭ್ರಮಿಸಿ ಮೆಲ್ಲನೆ ಕೈಯಾಡಿಸಿದರು (ನೋವುದೆಂದು ಭಾವಿಸಿ). ಅವರು ವೀರಮಾತೆಯರು, ವೀರಕ್ಷತ್ರಿಯ ನಾರಿಯರು. ಅವರ ದಮನಿಯಲ್ಲಿ ಹರಿಯುತ್ತಿರುವ ರಕ್ತದ ಬಿಂದುಬಿಂದುಗಳಲ್ಲಿ (ಕಣಕಣಗಳಲ್ಲಿ) ಅಭಿಮಾನ, ಗೌರವ, ಶೌರ್ಯ, ಧೈರ್ಯ ಬೆರೆತಿದ್ದರೂ ಪುತ್ರಪ್ರೇಮದಿಂದ (ಮಕ್ಕಳ ಮೇಲಿನ ಅಕ್ಕರೆಯಿಂದ) ತಾವು ವೀರಕ್ಷತ್ರಿಯ ಮಾತೆಯರಾಗದೆ ಇರುವುದನ್ನೇ ಬಯಸಿದರು. ವೀರಪುತ್ರರನ್ನು, ವೀರನಾದ ಪತಿಯನ್ನು ಹೊಂದುವುದು ಕ್ಷತ್ರಿಯಕುಲನಾರಿಯರಿಗೆ ಹೆಮ್ಮೆಯ ವಿಷಯವಾದ್ದರೂ (ವೀರಸೂ ಶಬ್ದವನು ತಾವೆಳಸದಿಹರು) ತಾವು ಸಾಮಾನ್ಯ ವನಿತೆಯರಾಗಿದ್ದರೆ ಬಹಳ ಲೇಸೆಂದು ಬಗೆದರು. ಏಕೆಂದರೆ ವೀರಮಾತೆಯರಾದವರು ದುಃಖಭಾಗಿನಿಯರಾಗುವುದು ಸ್ವಾಭಾವಿಕವೆ. ವೀರಪುರುಷರು ಮರಣವನ್ನು ಮಹಾನವಮಿಯೆಂದು ತಿಳಿವರು, "ಅಡಿಯು ಮುಂದಿಡೆ ಸ್ವರ್ಗ" ಎಂಬ ಕಟುಸತ್ಯವನ್ನು ಮಹಾವೀರರು ಅಕ್ಷರಶಃ ಪಾಲಿಸುವರು.

ಅನ್ವಯ :—ತೇ ಪುತ್ರಯೋಃ ಅಂಗೇನೈರ್ಋತಶಸ್ತ್ರಮಾರ್ಗಾನ್ ಆರ್ದ್ರಾನ್ ಇವ ಸದಯಂ ಸ್ಪೃಶಂತ್ಯೌ ಕ್ಷತ್ರಕುಲಾಂಗನಾನಾಂ ಈಪ್ಸಿತಂ ಅಪಿ ವೀರಸೂ ಶಬ್ದಮ್ ನ ಅಕಾಮಯೇತಾಮ್ ॥

ಪುತ್ರಯೋರಂಗೇ = ಶರೀರೇ—ನೈರ್ಋತ ಶಸ್ತ್ರಾಣಾಂ = ರಾಕ್ಷಸಶಸ್ತ್ರಾಣಾಂ—ಮಾರ್ಗಾನ್ = ವ್ರಣಾನ್—ಆರ್ದ್ರಾನ್ = ಸರಸಾನಿವ—ಸದಯಂ = ಸ್ಪೃಶಂತ್ಯೌ—ವೀರಸೂ = ವೀರಮಾತೇತಿ—ವೀರಪ್ರಸವೋ ದುಃಖಹೇತುರಿತಿ ಭಾವಃ—ನೈರ್ಋತಾನಾಂ ಶಸ್ತ್ರಾಣಾಂ ಮಾರ್ಗಾನ್ = ರಾಕ್ಷಸರ ಅಸ್ತ್ರಗಳಿಂದಾದ (ವ್ರಣಗಳ) ಕಲೆಗಳು—ನೈರ್ಋತ ಶಸ್ತ್ರಮಾರ್ಗಮ್ = ರಕ್ಕಸರ ಕೈದುಗಳಿಂದಾದ ಗಾಯಗಳು—ಕ್ಷತ್ರಕುಲಾಂಗನಾನಾಮ್ = ಕುಲಪಾಲಿಕಾಃ ಅಂಗನಾಃ ಕುಲಾಂಗನಾಃ ॥

5. ಕ್ಲೇಶಾವಹಾಭರ್ತುರಲಕ್ಷಣಾಹಂ ।
ಸೀತೇತಿ ನಾಮ ಸ್ವಮುದೀರಯಂತೀ ॥
ಸ್ವರ್ಗಪ್ರತಿಷ್ಠಸ್ಯ ಗುರೋರ್ಮಹಿಷ್ಯಾ ।
ಅಭಕ್ತಿಭೇದೇನ ವಧೂಃ ವವಂದೇ ॥ ೫ ॥

"ನಾನು ಭರ್ತಾವಿನ ಮನೆಗೆ ಕ್ಲೇಶಕಾರಕಳಾದ, ಕಂಟಕಪ್ರಾಯಳಾದ, ಅಲಕ್ಷಣೆ,

ಸೀತೆಯೆಂಬ ವಧು. ನಾನು ನನ್ನ ಗಂಡನಿಗೆ ನಾನಾ ವಿಧದ ಸಂಕಟಗಳನ್ನು ತಂದು ತೊಂದರೆಪಡಿಸಿದ ಹೆಣ್ಣು. ಹೇಳಲಾಗದ ಕಷ್ಟಕೋಟಲೆಗಳನ್ನು ಭರ್ತೃಕ್ಲೇಶಾವಹಳು (ಕ್ಲೇಶಕಾರಕಳು). ಹೀಗೆಂದು ತನ್ನನ್ನು ತಾನು ಕರೆದುಕೊಳ್ಳುತ್ತಾ, ಸೀತಾದೇವಿಯು ದಿವಂಗತ (ಸ್ವರ್ಗಸ್ಥ) ದಶರಥಮಹೀಪತಿಯ ಈರ್ವರೂ ರಾಣಿಯರಿಗೂ, ಒಂದೇ ವಿಧವಾದ ಭಕ್ತಿಯನ್ನು, ಪ್ರೀತಿ, ಸ್ನೇಹ, ಗೌರವ, ಆದರ, ಶ್ರದ್ಧೆಗಳನ್ನು (ಶ್ರದ್ಧಾ ಪರಮಾ ಗತಿಃ) ತೋರುತ್ತ ಸೊಸೆಯಾದ, ಪತಿವ್ರತಾವನಿತೆಯರ ಶಿರೋರತ್ನವೆನಿಸಿದ ಜಗದ್ವಂದ್ಯೆ ಸೀತಾದೇವಿಯು ಆತ್ರೇಯಂದಿರಿಗೆ ವಂದಿಸಿದಳು.

ಅನ್ವಯ :—"ಭರ್ತುಃ ಕ್ಲೇಶಾವಹಾ ಅಲಕ್ಷಣಾ ಅಹಂ ಸೀತಾ" ಇತಿ ಸ್ವಂ ನಾಮ ಉದೀರಯಂತೀ ವಧೂಃ ಸ್ವರ್ಗಪ್ರತಿಷ್ಠಸ್ಯ ಗುರೋಃ ಮಹಿಷ್ಯೌ ಅಭಕ್ತಿಭೇದೇನ ವವಂದೇ ॥

ಭರ್ತುಃ ಕ್ಲೇಶಾವಹಾ ಕ್ಲೇಶಕಾರಿಣೀ—ಅತ ಏವ ಅಲಕ್ಷಣಾ ಹಂಸೀತೇತಿ ಸ್ವಂ ನಾಮೋದೀರಯಂತೀ ಸ್ವರ್ಗಃ ಪ್ರತಿಷ್ಠಾಸ್ಪದಂ ಯಸ್ಯ ತಸ್ಯ ಸ್ವರ್ಗಸ್ಥಿತಸ್ಯ ಗುರೋಃ ಶ್ವಶುರಸ್ಯ ಮಹಿಷ್ಯೌ ಶ್ವಶ್ರ್ವೌ ಸ್ನುಷಾ "ವಧೂಃ ಸ್ನುಷಾ ವಧೂರ್ಜಾಯಾ" ಇತ್ಯಮರಃ —ಅಭಕ್ತಿಭೇದೇನ ವವಂದೇ—ಸ್ವರ್ಗಪ್ರತಿಷ್ಠಸ್ಯ "ಇತ್ಯನೇನ ಶ್ವಶ್ರೂವೈಧವ್ಯದರ್ಶನ ದುಃಖಸೂಚಿತವ್" ॥ ಕಂಶಃ ತಾ ಪ್ರಾಚೇತಸಾಂತೇವಾಸೀ ಕಂಶೋಽಭಿವಾದಯಂತೇ— ಅಲಕ್ಷಣಾ = ಅಲಕ್ಷಣಾ ನ ವಿದ್ಯಂತೇ—ಲಕ್ಷಣಾನಿ (ಅರ್ಥಾತ್ ಶುಭಲಕ್ಷಣಾನಿ) ಯಸ್ಯಾಃ ಸಾ—ಮಹಿಷೀ = ಪಟ್ಟಮಹಿಷೀ = ಮಹಾರಾಣಿ = ಮಹ್ಯತೇ ನಾಮ ಪೂಜ್ಯತೇ ಇತಿ ಮಹಿಷಿ ॥

**6. ಉತ್ತಿಷ್ಠ ವತ್ಸೇ ನನು ಸಾನುಜೋಽಸೌ ।**
**ವೃತ್ತೇನ ಭರ್ತಾ ಶುಚಿನಾ ತವೈವ ॥**
**ಕೃಚ್ಛ್ರಂ ಮಹತ್ತೀರ್ಣ ಇತಿ ಪ್ರಿಯಾರ್ಹಾಂ ।**
**ತಾಮೂಚತುಸ್ತೇ ಪ್ರಿಯಮಪ್ಯಮಿಥ್ಯಾ ॥ ೬ ॥**

ಆಗ ಆ ಆತ್ರೇಯಂದಿರು: "ಓ ಮಗಳೆ, ಏಳು, ಪತಿಧರ್ಮಪರಾಯಣೆಯಾದ ನಿನ್ನ ಅಮಲಪತಿವ್ರತಧರ್ಮದಿಂದ ಕಷ್ಟಸಹಿಷ್ಣುವಾದ ಸಕಲಸದ್ಗುಣಗಳ ಸಾರಭೂತಳಾದ ನಿನ್ನ ಶೀಲಸಚ್ಚಾರಿತ್ರ್ಯದಿಂದ ನಿನ್ನ ಪತಿಯು ದುರ್ಭರವಾದ ಕ್ಲೇಶರಾಶಿಗಳನ್ನು (ಕಷ್ಟ ಸಾಗರವನ್ನು) ದಾಟಿಬಂದಿರುವನು. ನೀನು ಸ್ತ್ರೀಧರ್ಮದ ಸಾಕಾರಮೂರ್ತಿ. ನಿನ್ನ ಇನಿಯನು ತನ್ನ ಅನುಜನೊಂದಿಗೆ ಶೀಲಗುಣಸಂಪನ್ನಳಾದ, ಶುಚಿಯಾದ ಮನೋಧರ್ಮ ದಿಂದ ಪ್ರಕಾಶಿಸುತ್ತಿರುವ ನಿನ್ನೊಂದಿಗೆ ಸದ್ವೃತ್ತಿಪರಾಯಣನಾದ, ಮಾನವಧರ್ಮ ರಕ್ಷಕನಾದ ನಿನ್ನ ಪ್ರಭು ಎಲ್ಲಾ ಕಷ್ಟಕಾರ್ಪಣ್ಯಗಳನ್ನು ಕಳೆದು ಜಯಶೀಲನಾಗಿ ಬಂದಿರುವನು" ಎಂದು ಪ್ರೀತಿಗೆ ಅರ್ಹಳಾದ (ಪ್ರೀತ್ಯಾರ್ಹಳಾದವಳಿಗೆ ಒರೆದರು) ಆ ಮಹಾಸತಿಯನ್ನು. ಪ್ರೀತಿ, ಆದರಗಳಿಂದ ಸಂತಯಿಸುತ್ತಾ, ನುಡಿದು ಸಾಂತ್ವನ ಗೊಳಿಸಿದರು.

ಅನ್ವಯ :—"ನನು ವತ್ಸೇ, ಉತ್ತಿಷ್ಠ, ಅಸೌ ಸಾನುಜಃ ಭರ್ತಾ ತವ ಏವ ಶುಚಿನಾ

ವೃತ್ತೇನ ಮಹತ್ ಕೃಚ್ಛ್ರಂ ತೀರ್ಣಃ ಇತಿ ಪ್ರಿಯಾರ್ಹಾಂ ತಾಂ ಪ್ರಿಯಂ ಅಪಿ ಅವಿಥ್ಯಾ ತೇ ಊಚತುಃ ॥

ನನು ವತ್ಸೇ ! ಉತ್ಕ್ರಿಷ್ಟ—ಮಹತ್‌ಕೃಚ್ಛ್ರಂ= ದುಃಖಂ ತ್ರೀರ್ಣ = ತ್ರೀರ್ಣವಾನ್ ॥

ಸತ್ಯಂ ಬ್ರೂಯಾತ್, ಪ್ರಿಯಂ ಬ್ರೂಯಾತ್, ನ ಬ್ರೂಯಾತ್ ಸತ್ಯಮಪ್ರಿಯಂ ॥

7. **ಅಥಾಭಿಷೇಕಂ ರಘುವಂಶಕೇತೋಃ ।**
**ಪ್ರಾರಬ್ಧಮಾನಂದಜ ಲೈರ್ಜನನ್ಯೋಃ ॥**
**ನಿರ್ವರ್ತಯಾಮಾಸುರಮಾತ್ಯವೃದ್ಧಾಃ ।**
**ತೀರ್ಥಾಹೃತೈಃ ಕಾಂಚನಕುಂಭತೋಯೈಃ ॥ ೭ ॥**

ಆ ರಘುವಂಶಕೇತುವಿನ ತಲೆಯನ್ನು ಆಗ್ರಾಣಿಸುತ್ತ (ಶ್ರೀರಾಮಚಂದ್ರನ ಆ ಮೂವರು ತಾಯಂದಿರು ಆನಂದಬಾಷ್ಪವನ್ನು ಹನಿಹನಿಯಾಗಿ ಸುರಿಸಿ ಅಭಿಷೇಕ ಮಾಡಿದರು (ಜನನಿಯರ ಆನಂದಜಲದಿಂದ). ಆ ಬಳಿಕ ಶ್ರೀರಾಮನ ರಾಜ್ಯಪಟ್ಟಾಭಿಷೇಕ ಕಾಲದಲ್ಲಿ ಗಂಗಾದಿ ಭಾರತದ ಪುಣ್ಯನದಿಗಳ ಜಲವನ್ನು ಹೊನ್ನಕಲಶಗಳಲ್ಲಿ ತರಿಸಿ ಈ ಮೊದಲೇ ತಾಯಂದಿರು ಆರಂಭಿಸಿದ ಅಭಿಷೇಕಕಾರ್ಯವನ್ನು ವೃದ್ಧಮಂತ್ರಿಗಳು, ಪುರೋಹಿತರು ಪೂರ್ಣಗೊಳಿಸಿದರು ನಲಿದು.

ಅನ್ವಯ :—ಅಥ ಜನನ್ಯೋಃ ಆನಂದಜಲೈಃ ಪ್ರಾರಬ್ಧಮ್ ರಘುವಂಶಕೇತೋಃ ಅಭಿಷೇಕಂ ಅಮಾತ್ಯವೃದ್ಧಾಃ ತೀರ್ಥಾಹೃತೈಃ ಕಾಂಚನ ಕುಂಭತೋಯೈಃ ನಿರ್ವರ್ತಯಾಮಾಸುಃ ॥

ರಘುವಂಶಕೇತೋ = ರಾಮಸ್ಯ ಕೇತು—ಅಥ ಜನನ್ಯೋರಾನಂದಜಲೈಃ = ಆನಂದ ಬಾಷ್ಪೈಃ–ಪ್ರಾರಬ್ಧಂ=ಪ್ರಕ್ರಾಂತಂ–ರಘುವಂಶಕೇತೋ=ಶ್ರೀರಾಮಸ್ಯ–ತೀರ್ಥೇಭ್ಯೋಃ = ಗಂಗಾಪ್ರಮುಖೇಭ್ಯಃ—ನಿರ್ವರ್ತಯಾಮಾಸು = ನಿಷ್ಪಾದಯಾಮಾಸು ॥

8. **ಸರಿತ್ಸಮುದ್ರಾನ್ ಸರಸೀಶ್ಚ ಗತ್ವಾ ।**
**ರಕ್ಷಃ ಕಪೀಂದ್ರೈರುಪಪಾದಿತಾನಿ ॥**
**ತಸ್ಯಾಪತನ್ ಮೂರ್ಧ್ನಿ ಜಲಾನಿ ಜಿಷ್ಣೋಃ ।**
**ವಿಂಧ್ಯಸ್ಯ ಮೇಘಪ್ರಭವಾ ಇವಾಪಃ ॥ ೮ ॥**

ಆ ವಿಜಯರಾಘವನ ತಲೆಯ ಮೇಲೆ ಕಪೀಂದ್ರರು ಮತ್ತು ರಕ್ಕಸಪ್ರಮುಖರು ಗಂಗಾ, ಸರಯೂ, ನರ್ಮದಾ, ಸಿಂಧೂ, ಬ್ರಹ್ಮಪುತ್ರ ಮೊದಲಾದ ಪವಿತ್ರನದಿಗಳಿಂದ, ಕೆರೆಸರೋವರಗಳಿಂದ, ಸಪ್ತಸಾಗರಗಳಿಂದ ತಂದ ಪವಿತ್ರತೀರ್ಥಾಂಬುವನ್ನು ಸುರಿದು ಅಭಿಷೇಕಮಾಡಿ ಕೃತಕೃತ್ಯರಾದರು. ಆ ಕಪಿಮುಖ್ಯರು, ರಾಕ್ಷಸವಂಶಮಹೋದಯರು ನದಿ, ಕೆರೆ, ತಟಾಕಗಳಿಗೆ, ಸಾಗರಗಳಿಗೆ ತೆರಳಿ ಪವಿತ್ರಜಲವನ್ನು ತಂದು ವಿಂಧ್ಯಗಿರಿಯ ನೆತ್ತಿಯ ಮೇಲೆ (ವಿಂಧ್ಯಗಿರಿಮೂರ್ಧ್ನಿಯೊಳು) ಮೋಡಗಳು ಮಳೆಗಾಲದಲ್ಲಿ ವಾರಿರಾಶಿ ಯನ್ನು ಸುರಿಸುವ ಮಳೆಗರೆಯುವಂತೆ ರಘುಕುಲಮಣಿದೀಪನ ಶಿರದ ಮೇಲೆ ಆ ತೀರ್ಥ ಜಲವನ್ನು ಸುರಿದು ಅಭಿಷೇಕಮಾಡಿ ತಣಿದರು.

ಅನ್ವಯಃ :—ರಕ್ಷಃ ಕಪೀಂದ್ರೈಃ ಸರಿತ್ ಸಮುದ್ರಾನ್ ಸರಸೀಶ್ಚ ಗತ್ವಾ ಉಪಪಾದಿತಾನಿ ಜಲಾನಿ ಜಿಷ್ಣೋಃ ತಸ್ಯ ಮೂರ್ಧ್ನಿ ವಿಂಧ್ಯಸ್ಯ (ಮೂರ್ಧ್ನಿ) ಮೇಘಪ್ರಭವಾ ಆಪಃ ಇವ ಆಪತನ್ ॥

ಸರಿತೋ = ಗಂಗಾದ್ಯಾಃ—ಜಲಾನಿ ಜಿಷ್ಣೋ = ಜಯಶೀಲಸ್ಯ—ತಸ್ಯ ರಾಮಸ್ಯ ಮೂರ್ಧ್ನಿ—ವಿಂಧ್ಯಸ್ಯ=ವಿಂಧ್ಯಾದ್ರೇಃ ಮೂರ್ಧ್ನಿ=ಮೇಘಪ್ರಭವಾ ಆಪ ಇವ—ಆಪತನ್ —ಮಹಾಂತಿ ಸರಾಂಸಿ ಸರಸ್ಯಃ ಇತಿ ನ್ಯಾಸಕಾರಃ = ದೊಡ್ಡ ಸರೋವರಗಳನ್ನು ಸರಸಿ ಎಂದೂ ಕರೆಯುವುದು ರೂಢಿ—ರಕ್ಷಃ ಕಪೀಂದ್ರೈಃ = ರಕ್ಷಸಾಂ ಕಪೀನಾಂ ಚ ಇಂದ್ರೈಃ (ಮುಖ್ಯೈಃ)—ಸರಸೀಃ = ಮಹಾಂತಿ ಸರಾಂಸಿ = ಮಹಾಸರೋವರಗಳು — ಜಿಷ್ಣು (ಜಿ + ಸ್ನುಃ) = ಸೋಲಿಲ್ಲದ.

9. **ತಪಸ್ವಿವೇಷಕ್ರಿಯಯಾಪಿ ತಾವತ್ ।**
**ಯಃ ಪ್ರೇಕ್ಷಣೀಯಃ ಸುತರಾಂ ಬಭೂವ ॥**
**ರಾಜೇಂದ್ರನೇಪಥ್ಯವಿಧಾನಶೋಭಾ ।**
**ತಸ್ಯೋದಿತಾಸೀತ್ ಪುನರುಕ್ತದೋಷಾ** ॥ ೯ ॥

ಆ (ಸೀತಾಪತಿ) ರಘುರಾಮಚಂದ್ರನು, ತಾಪಸರ ವೇಷದಲ್ಲೂ ರಮಣೀಯನಾಗಿ ಕಾಣಿಸುತ್ತಿದ್ದನು (ಮುನಿವೇಷದಿಂದೆಯೂ ಪ್ರೇಕ್ಷಣೀಯನು ತಾನು). ಇದೀಗ ರಾಜರಾಜನ ವೇಷಭೂಷಣಗಳಲ್ಲಿ ರಾಜಗುಣಗಾಂಭೀರ್ಯದಿಂದ (ರಾಜೇಂದ್ರನೇಪಥ್ಯವಿಧಿಯಿಂದ) ಇನ್ನೂ ಶೋಭಾಕರನಾಗಿ, ಪ್ರೇಕ್ಷಣೀಯನಾಗಿ, ಸೌಂದರ್ಯಸಾರಭೂತನಾಗಿ ಶೋಭಿಸಿದನು, ಅಧಿಕ ಶೋಭೆಯಿಂದ ರಾರಾಜಿಸಿದನು. ಎರಡು ಪಾಲಷ್ಟು ಸೊಬಗುವಡೆದು ರಂಜಿಸಿದನು.

ಅನ್ವಯಃ :—ಯಃ ತಪಸ್ವಿವೇಷಕ್ರಿಯಯಾ ಅಪಿ ಸುತರಾಂ ಪ್ರೇಕ್ಷಣೀಯಃ ತಾವತ್ ಬಭೂವ, ತಸ್ಯ ರಾಜೇಂದ್ರನೇಪಥ್ಯವಿಧಾನಶೋಭಾ ಉದಿತಾ ಪುನರುಕ್ತದೋಷಾ ಆಸೀತ್ ॥

ಯೋ ರಾಮಸ್ತಪಸ್ವಿವೇಷಕ್ರಿಯಯಾಪಿ = ತಪಸ್ವಿವೇಷರಚನಯಾಽಪಿ—ಸುತರಾಂ = ಅತ್ಯಂತಂ—ಪ್ರೇಕ್ಷಣೀಯಸ್ತಾವತ್ = ದರ್ಶನೀಯ ಏವ ಬಭೂವ—ರಾಜೇಂದ್ರ ನೇಪಥ್ಯವಿಧಾನೇನ = ರಾಜವೇಷರಚನಯಾ—ಪುನರುಕ್ತದೋಷಾ = ದ್ವಿಗುಣಾಸೀತ್— ಪುನರುಕ್ತಂ ದೋಷಃ ಯಸ್ಯಾಃ ಸಾ ಪುನರುಕ್ತದೋಷಾ=ಪುನರುಕ್ತವಾದ ದೋಷವುಳ್ಳ, ರಾಜೇಂದ್ರಾಣಾಂ ನೇಪಥ್ಯಸ್ಯ ವಿಧಾನೇನ ಯಾ ಶೋಭಾ ಸಾ = ರಾಜರ ಉಡುಪಿನ ರಚನೆಯಿಂದುಂಟಾದ ಕಾಂತಿಯು.

10. **ಸ ಮೌಲರಕ್ಷೋ ಹರಿಭಿಃ ಸಸೈನ್ಯಃ ।**
**ತೂರ್ಯಸ್ವನಾನಂದಿತ ಪೌರವರ್ಗಃ ॥**
**ವಿವೇಶ ಸೌಧೋದ್ಗತಲಾಜವರ್ಷಾಂ ।**
**ಉತ್ತೋರಣಾಮನ್ವಯರಾಜಧಾನೀಮ್** ॥ ೧೦ ॥

ಆ ರಾಜೇಂದ್ರನು ತನ್ನ ಮೇಲೆ ಪೌರಕನ್ಯೆಯರು ಹೂಮಳೆ ಮತ್ತು ಅರಳಮಳೆಯನ್ನು ಸುರಿಸುತ್ತಿರಲು ಅಯೋಧ್ಯಾಪುರ ಪ್ರವೇಶವನ್ನು ಮಾಡಿದನು. ವೃದ್ಧರಾದ ಮಂತ್ರಿ ಮತ್ತು ಪುರೋಹಿತರ ಗಡಣದಲ್ಲಿ ಒಂದೆಡೆ ರಕ್ಕಸಪ್ರಭೃತಿಗಳು, ಇನ್ನೊಂದು ಕಡೆ ಕಪಿಕುಲಬಲಾನ್ವಿತರು (ವಾನರಯೂಥಪರು) ಸಾಲುಸಾಲಾಗಿ ಬರುತ್ತಿರಲು ವಾದ್ಯ ಘೋಷವು ಉಕ್ಕೇರಿ ದಿಗಂತದ ತನಕ ವ್ಯಾಪಿಸಿರಲು (ತೂರ್ಯರವದಿಂದ ಉಕ್ಕೇರುತಿರೆ) ಪುರಜನರ ಜಯಘೋಷವು ಮುಗಿಲುಮುಟ್ಟುತ್ತಿರಲು, ತೋರಣಗಟ್ಟಿರುವ, ನಿಜರಾಜಧಾನಿಯನ್ನು ತನ್ನ ಸತಿಸಹಿತ, ಪುರುಷಸೌಂದರ್ಯದ ಸಾಕಾರಮೂರ್ತಿಯಾದ ಆ ರಘುರಾಮಚಂದ್ರನು ಪುರಪ್ರವೇಶಮಾಡಿದನು (ತೋರಣಗಟ್ಟಿರುವ ನಿಜರಾಜಧಾನಿಯನು). ಅಯೋಧ್ಯಾನಗರಿಯ ರಾಜಬೀದಿಯಲ್ಲಿ ಕಾಣಿಸಿಕೊಂಡನು.

ಅನ್ವಯ :— ಸಃ ಸಸ್ಯೈಸ್ತೂರ್ಯಸ್ವನಾನಂದಿತ ಪೌರವರ್ಗಃ ಮೌಲರಕ್ಷೋ ಹರಿಭಿಃ ಸೌಧೋದ್ಗತಲಾಜವರ್ಷಾಂ ಉತ್ತೋರಣಾಂ ಅನ್ವಯರಾಜಧಾನೀಂ ವಿವೇಶ ॥

ಮೂಲೇ ಭವಾ ಮೌಲಾ = ಮಂತ್ರಿವೃದ್ಧಾಸ್ತೈ—ರಾಜಧಾನೀಮ್ = ಅಯೋಧ್ಯಾನಗರೀಮ್—ವಿವೇಶ = ಪ್ರವಿಷ್ಟವಾನ್ = ಪ್ರವೇಶಿಸು—ಮೌಲ=ಮೂಲೇ ಭವಃ ಮೌಲಃ ॥

11. **ಸೌಮಿತ್ರಿಣಾ ಸಾವರಜೇನ ಮಂದಂ ।**
**ಆಧೂತಬಾಲವ್ಯಜನೋ ರಥಸ್ಥಃ ॥**
**ಧೃತಾತಪತ್ರೋ ಭರತೇನ ಸಾಕ್ಷಾತ್ ।**
**ಉಪಾಯಸಂಘಾತ ಇವ ಪ್ರವೃದ್ಧಃ ॥ ೧೧ ॥**

ಶ್ರೀರಾಮಚಂದ್ರನು ತೇರಲ್ಲಿ ಕುಳಿತು ಅಯೋಧ್ಯೆಯ ಬೀದಿಗಳಲ್ಲಿ ಯಾನಮಾಡುತ್ತ ಬರುತ್ತಿದ್ದನು. ಆ ದಿವ್ಯರಥದಲ್ಲಿ ಶ್ರೀರಾಮಚಂದ್ರನ ಎಡಬಲದಲ್ಲಿ ನಿಂತು ಲಕ್ಷ್ಮಣ ಶತ್ರುಘ್ನರು ಮೃದುವಾಗಿ ಚಾಮರ ಬೀಸುತ್ತಿದ್ದರು (ಲಲಿತಚಾಮರವಿಡಿದು). ಆ ರಾಜೇಂದ್ರನ ತೇರಲ್ಲಿ ಬೆನ್ನಹಿಂದೆ ನಿಂತು ಭಕ್ತಾಗ್ರೇಸರನಾದ ಭರತನು ರಾಜಚಿಹ್ನೆಯಾದ ಬೆಳ್ಗೊಡೆಯನ್ನು ಹಿಡಿದಿದ್ದನು. ಹೀಗೆ ಆ ರಾಘವನು ಮೂವರು ಸಹೋದರರು ಸಹಿತ ಒಂದೇ ರಥವಲ್ಲಿ ಬರುತ್ತಿರಲು, ನಾಲ್ಕು ತರದ ಉಪಾಯಗಳ ತೆರವಲ್ಲಿ, ಚತುರೋಪಾಯದ ಸಂಘಾತದಂತೆ (ಸಮೂಹದಂತೆ) (ಆ ನಾಲ್ವರು ರಾಘವರು) (ರಘುವಂಶಸಂಜಾತರು) ಜನರ ಕಣ್ಮನಗಳಿಗೆ ಇಂಬಾಗಿ ಕಂಡರು.

ಅನ್ವಯ :—ಸಾವರಜೇನ ಸೌಮಿತ್ರಿಣಾ ಮಂದಂ ಆಧೂತಬಾಲವ್ಯಜನಃ ರಥಸ್ಥಃ ಭರತೇನ ಧೃತಾತಪತ್ರಃ ಪ್ರವೃದ್ಧಃ ಸಾಕ್ಷಾತ್ ಉಪಾಯಸಂಘಾತಃ ಇವ (ವಿವೇಶ) ॥

ಸಾವರಜೇನ=ಶತ್ರುಘ್ನಯುಕ್ತೇನ—ಸೌಮಿತ್ರಿಣಾ=ಲಕ್ಷ್ಮಣೇನ—ಮಂದಮಾಧೂತೇ ವಾಲವ್ಯಜನೇ = ಚಾಮರೇ ಯಸ್ಯ ಸ—ರಥಸ್ಥೋ ಭರತೇನ ಧೃತಾತಪತ್ರ ಏವ ಚತುರ್ವ್ಯೂಹೋ ರಾಮಃ ಪ್ರವೃದ್ಧ। ಸಾಕ್ಷಾದುಪಾಯಾನಾಂ=ಸಾಮಾದೀನಾಂ ಸಂಘಾತಃ =ಸಮಷ್ಟಿರಿವ—"ವಿವೇಶ" ಇತಿ ಪೂರ್ವೇಣ ಸಂಬಂಧಃ—ಸಾವರಜೇನ=ಶ್ರೀರಾಮನು ಲಕ್ಷ್ಮಣನ ಸಮೇತ—ಉಪಾಯಸಂಘಾತ = ಸಾಮ, ದಾನ, ಭೇದ, ದಂಡಗಳೆಂಬ

ಉಪಾಯಗಳು (ತಂತ್ರಗಳು)—ಸಂಘಾತಃ = ನಾಲ್ಕು ಉಪಾಯಗಳು ಒಟ್ಟಾಗಿ ಸೇರಿ ಒಂದಾದಂತೆ—ಧೃತ ಆತಪತ್ರಂ ಯಸ್ಯ ಸಃ ಧೃತಾತಪತ್ರಃ = ರಾಜಚಿಹ್ನೆಯ ಛತ್ರವು ಹಿಡಿಯಲ್ಪಟ್ಟ.

**12. ಪ್ರಾಸಾದಕಾಲಾಗುರುಧೂಮರಾಜಿಃ ।**
**ತಸ್ಯಾಃ ಪುರೋ ವಾಯುವಶೇನ ಭಿನ್ನಾ ॥**
**ವನಾನ್ನಿವೃತ್ತೇನ ರಘೂತ್ತಮೇನ ।**
**ಮುಕ್ತಾ ಸ್ವಯಂ ವೇಣಿರಿವಾಬಭಾಸೇ ॥ ೧೨ ॥**

ಆರಮನೆಯ ಉಪ್ಪರಿಗೆಯ ಮೇಲಿಂದ (ಪ್ರಾಸಾದದ ಅಗ್ರಭಾಗದಿಂದ) ಮೇಲಕ್ಕೆದ್ದ ಕಾಲಾಗರುವಿನ ಹೊಗೆರೇಖೆಯು (ಪ್ರಾಸಾದದಗ್ರದಿಂದ ಅಗರುಧೂಪದ ರೇಖೆ) ವಾಯುವಿನಿಂದ ಚದುರಿಸಲ್ಪಟ್ಟಾಗ (ವಾಯುವಶದೊಳು ಮುರಿದು) ಆ ಧೂಮ ರಾಜಿಯು (ಅಯೋಧ್ಯಾ) ಪುರವಧುವಿನ ಬಿಚ್ಚಿದ ಜಡೆಯಂತೆ ತೋರಿತು. ರಘು ಕುಲೋತ್ತಮನಾದ ಶ್ರೀರಾಮಚಂದ್ರನು ಕಾಡಿನಿಂದ ಬಂದು ಒಲಿದು ಬಿಚ್ಚಿದ ಪುರವನಿತೆಯ ಜಡೆಯೆಂಬಂತೆ ಕಾಲಾಗುರುವಿನ ಹೊಗೆಯ ಪಂಕ್ತಿಯು, ಹೊಗೆಯ ರಾಜಿಯು (ಹೊಗೆಯ ಸಾಲುಸಾಲು) ಮನೋಹರವಾಗಿ ಕಂಡಿತು.

ಅನ್ವಯ :—ವಾಯುವಶೇನ ಭಿನ್ನಾ ಪ್ರಾಸಾದಕಾಲಾಗುರುಧೂಮರಾಜಿಃ ವನಾತ್ ನಿವೃತ್ತೇನ ರಘೂತ್ತಮೇನ ಸ್ವಯಂ ಮುಕ್ತಾ ತಸ್ಯಾಃ ಪುರಃ ವೇಣಿಃ ಇವ ಆಬಭಾಸೇ ॥

ವಾಯುವಶೇನ ಭಿನ್ನಾ ಪ್ರಾಸಾದೀಯಃ ಕಾಲಾಗುರುಧೂಮಸ್ತಸ್ಯ ರಾಜೀರೇಖಾ—ವನಾನ್ನಿವೃತ್ತೇನ ರಘೂತ್ತಮೇನ ರಾಮೇಣ ಸ್ವಯಂ ಮುಕ್ತಾ ತಸ್ಯಾಃ ಪುರಃ ಪುರ್ಯಾ ವೇಣಿರಿವ—ಪುರೋಽಪಿ ಪತಿ = ಪತಿವ್ರತಾಸಮಾಧಿರುಕ್ತಃ—"ನ ಪ್ರೋಷಿತೇ ತು ಸಂಸ್ಕುರ್ವಾನ್ನ ವೇಣೀಂ ಚ ಪ್ರಮೋಚಯೇತ್" ಇತಿ ಹಾರೀತಃ—ಪ್ರಾಸಾದಕಾಲಾಗುರು = ಉಪ್ಪರಿಗೆಯ ಮೇಲಿಂದ ಮೇಲಕ್ಕೇಳುವ. ಪ್ರೋಷಿತಭರ್ತೃಕಾ = ಗಂಡನು ದೂರ ಹೋಗಿದ್ದಾಗ ವಿರಹವೇದನೆಪೀಡಿತಳಾದ ಪುರಾಂಗನೆಯೆಂಬ ಕಾಮಿನಿ. ಯಥಾ ದೇಶಾಂತರಗತೋ ನಾಯಕೋ ನಾಯಿಕಾಯಾಃ ವೇಣಿ ಮೋಚಯಂತಿ — ಪ್ರಾಸಾದೀಯಃ ಕಾಲಾಗುರುಧೂಮಃ ತಸ್ಯ ರಾಜಿಃ ಪ್ರಾಸಾದಕಾಲಾಗುರುಧೂಮರಾಜೀ=ಉಪ್ಪರಿಗೆಯಲ್ಲಿ ಕಪ್ಪು ಅಗರುವಿನ ಹೊಗೆಯ ರೇಖೆ—ಅಗುರು = ಧೂಪ.

**13. ಶ್ವಶ್ರೂಜನಾನುಷ್ಠಿತ ಚಾರುವೇಷಾಂ ।**
**ಕರ್ಣೀರಥಸ್ಥಾಂ ರಘುವೀರಪತ್ನೀಂ ॥**
**ಪ್ರಾಸಾದವಾತಾಯನ ದೃಶ್ಯಬಂಧೈಃ ।**
**ಸಾಕೇತನಾರ್ಯೋಽಂಜಲಿಭಿಃ ಪ್ರಣೇಮುಃ ॥ ೧೩ ॥**

ಅತ್ತೆಯಂದಿರು ಪ್ರೀತಿಯಿಂದ ಕೊಟ್ಟ ಶ್ರೇಷ್ಠವಾದ ದುಕೂಲದಿಂದ ಅಲಂಕರಿಸಿಕೊಂಡು ಕರ್ಣೀರಥದಲ್ಲಿ (ಸ್ತ್ರೀಯರು ಕುಳಿತುಕೊಳ್ಳಲು ಯೋಗ್ಯವಾದ ಪುಟ್ಟರಥದಲ್ಲಿ) ಯಾನಮಾಡುತ್ತಾ ಸೀತಾದೇವಿ ಸಾಕೇತಪುರದಲ್ಲಿ ಬರುತ್ತಿದ್ದಳು. ಹೀಗೆ ಬರುತ್ತಿರುವ

ಆ ಮಹಾಸತಿಯನ್ನು ನೋಡಲು ಸಾಕೇತನಗರದ ರಾಜಬೀದಿಯ ಇಕ್ಕೆಡೆಯಲ್ಲಿರುವ ಉಪ್ಪರಿಗೆಯಲ್ಲಿ ನೋಡಲು ನಿಂತಿದ್ದ ಸ್ತ್ರೀಯರು ಕುತೂಹಲದಿಂದ ಕಿಟಕಿಬಾಗಿಲುಗಳನ್ನು, ವಾತಾಯನಗಳನ್ನು ತೆರೆದು ಸ್ತ್ರೀಸಹಜವಾದ ಕುತೂಹಲದಿಂದ ಈಕ್ಷಿಸುತ್ತಿದ್ದರು. ಆ ಮಹಿಳೆಯರು ನೋಡುತ್ತ ಕೈಜೋಡಿಸಿ ನಮಿಸಿ ಗೌರವ ಸೂಚಿಸಿದರು. ಆ ಸಾಕೇತ ನಾರಿಯರು ಬೊಗಸೆಕೈಗಳನ್ನು ತೋರುತ್ತ ಮಣಿದರು ಭಯಭರಿತ ಭಕ್ತಿಯಿಂದ ಆ ಪೂಜ್ಯ ಭಾವಿನಿಗೆ.

ಶ್ವಶ್ರೂಜನಾನುಷ್ಠಿತ ಚಾರುವೇಷಾಂ = ಕೃತಸೌಮ್ಯನೇಪಥ್ಯಾಮ್—"ಆಕಲ್ಪವೇಷೌ ನೇಪಥ್ಯಂ'' ಇತ್ಯಮರಃ—ಕರ್ಣೀರಥಃ ಸ್ತ್ರೀಯೋಗ್ಯೋಽಲ್ಪರಥಃ—''ಕರ್ಣೀರಥಃ ಪ್ರವಹಣಂಡಯಾನಂ ರಥಗರ್ಭಕೇ'' ಇತಿ ಯಾದವಃ—ಸಾಕೇತನಾರ್ಯಾಃ ಪ್ರಾಸಾದ ವಾತಾಯನೇಷು ದೃಶ್ಯಬಂಧೈರ್ಲಕ್ಷ್ಯಪುಟೈರಂಜಲಿಭಿಃ ಪ್ರಣೇಮುಃ ॥

ಅನ್ವಯ :—ಶ್ವಶ್ರೂಜನಾನುಷ್ಠಿತ ಚಾರುವೇಷಾಂ ಕರ್ಣೀರಥಸ್ಥಾಂ ರಘುವೀರ ಪತ್ನೀಂ ಸಾಕೇತನಾರ್ಯಃ ಪ್ರಾಸಾದವಾತಾಯನದೃಶ್ಯಬಂಧೈಃ ಅಂಜಲಿಭಿಃ ಪ್ರಣೇಮುಃ ॥

ಕರ್ಣೀರಥ = ಒಂದು ವಿಧವಾದ ವಾಹನ, ಮೇನೆ ಕರ್ಣೀರಥಪ್ರವಹಣಮ್—ಅನುಷ್ಠಿತಃ ರಚಿತಃ ಚಾರುಹೃದ್ಯಃ ವೇಷಃ ನೇಪಥ್ಯಂ ಯಸ್ಯಾ ತಾಂ—ದೃಶ್ಯಬಂಧಃ = ಕಾಣುವಂತೆ ಕೈಮುಗಿದು ವಂದಿಸುವುದು.

**14. ಸ್ಫುರತ್ ಪ್ರಭಾಮಂಡಲಮಾನಸೂಯಂ ।**
**ಸಾ ಬಿಭ್ರತೀ ಶಾಶ್ವತಮಂಗರಾಗಮ್ ॥**
**ರರಾಜ ಶುದ್ಧೇತಿ ಪುನಃ ಸ್ವಪುರ್ಯೈ ।**
**ಸಂದರ್ಶಿತಾ ವಹ್ನಿಗತೇವ ಭರ್ತ್ರಾ ॥ ೧೪ ॥**

ಆ ಕಮಲಾನನೆ ಅತ್ರಿಪತ್ನಿಯಾದ ಅನಸೂಯಾದೇವಿಯಿತ್ತ ಅಂಗರಾಗವನ್ನು ತಳೆದು ರಾರಾಜಿಸುತ್ತಿದ್ದಳು. ಅದು ಶಾಶ್ವತವಾದ ಮತ್ತು ಅಕ್ಷಯಗುಣಗಳುಳ್ಳ ಅಂಗರಾಗ. ಪರಮಪತಿವ್ರತೆ ಸೀತಾದೇವಿಯು ಆ ಅಂಗರಾಗದಿಂದ ಆಕೆಯ ಮುಖಮಂಡಲವು ಕಾಂತಿಯುತವಾದ ಪ್ರಭಾಮಂಡಲದಿಂದ ಶೋಭಾಯಮಾನವಾಗಿ ಕಾಣುತ್ತಲಿತ್ತು (ಕಾಂತಿ ಮಂಡಲದಿಂದಲಿ ಅನಿಶ ಎಸೆದೊಪ್ಪುತಿರುವ). ಆಕೆಯು ಪರಿಶುದ್ಧಳು. ಈ ಹಿಂದೆ ಅಗ್ನಿಯನ್ನು ಹೊಕ್ಕು ಹೊರಬಂದ ಅಯೋನಿಜೆ, ಭೂಜಾತೆ, ಜನಕನಂದಿನಿ (ವಸುಂಧರಾ ಸಂಜಾತೆ). ಇದೀಗ ಆಕೆಯ ಮುಖಮಂಡಲವು ಅಗ್ನಿಯ ತೇಜೋಮಂಡಲದಂತೆ ಪುನಃ ಅಗ್ನಿಯನ್ನು ಪ್ರವೇಶಿಸಿರುವಳೋ ಎಂಬಂತೆ ಆಕೆ ಅತ್ಯಂತ ಕಾಂತಿಯುತಳಾಗಿ ಕಂಗೊಳಿಸಿದಳು. ನಿಜಪುರವನ್ನು ಸಂದರ್ಶಿಸುತ್ತಿರುವಾಗ ಆಕೆಯು ಶುದ್ಧಳೆಂದು, ಪವಿತ್ರಳೆಂದು, ನಿಜನಗರಿ ಅಯೋಧ್ಯೆಗೆ ಅರುಹಲು ಆಕೆ ಇನ್ನೊಮ್ಮೆ ಅಗ್ನಿಪ್ರವೇಶ ಮಾಡಿರುವಳೋ ಎಂಬಂತೆ, ಅಥವಾ ಅಗ್ನಿಯ ಮಧ್ಯದಲ್ಲಿ ನಿಂತಿರುವಳೋ ಎಂಬಂತೆ (ಮರಳಿ ಅಗ್ನಿಗತಳಾದ ತೆರದೆ) ಜ್ಯೋತಿರ್ಲತೆಯಂತೆ (ವಿದ್ಯುಲ್ಲತೆ) ಪ್ರಕಾಶಿಸುತ್ತಿದ್ದಳು.

ಅನ್ವಯ :–ಸ್ಫುರತ್ ಪ್ರಭಾಮಂಡಲಂ ಆನಸೂಯಂ ಶಾಶ್ವತಂ ಅಂಗರಾಗಂ ಬಿಭ್ರತೀ ಸಾ ಭರ್ತ್ರಾ ಪುನಃ ಸ್ವಪುರ್ಯೈ ವಹ್ನಿಗತಾ ಶುದ್ಧಾ ಇತಿ ಸಂದರ್ಶಿತಾ ಇವ ರರಾಜ ॥

ಅನಸೂಯಾಮ್ = ಅನಸೂಯಯಾದತ್ತಂ (ಅನಸೂಯೆಯಿತ್ತ ಅಂಗರಾಗ)—ಸ್ಫುರತ್ ಪ್ರಭಾಮಂಡಲಮನಸೂಯಮನಸೂಯಯಾದತ್ತಂ—ಶಾಶ್ವತಂ = ಸದಾತನವಾ್—ಅಂಗರಾಗಂ ಬಿಭ್ರತೀ—ಸಾ ಸೀತಾ ಭರ್ತ್ರಾ ಸ್ವಪುರ್ಯ್ಯೈ ಶಂದ್ದೇತಿ ಸಂದರ್ಶಿತಾ ಪುನರ್ವಹ್ನಿಗತೇವ ರರಾಜ ॥

15. ವೇಶ್ಮಾನಿ ರಾಮಃ ಪರಿಬರ್ಹವಂತಿ ।
ವಿಶ್ರಾಣ್ಯ ಸೌಹಾರ್ದನಿಧಿಸುಹೃದ್ಭ್ಯಃ ॥
ಬಾಷ್ಪಾಯಮಾಣೋ ಬಲಿಮನ್ನಿಕೇತಂ ।
ಆಲೇಖ್ಯ ಶೇಷಸ್ಯ ಪಿತುರ್ವಿವೇಶ ॥ ೧೫ ॥

ಸೌಹಾರ್ದ, ಸೌಜನ್ಯಗಳ ನಿಧಿಯಾದ, ಸಜ್ಜನಿಕೆಯ ಸಾರಸರ್ವಸ್ವನಾದ, ಲೋಕನಾಯಕನಾದ ಶ್ರೀರಾಮಚಂದ್ರನು, ಎಲ್ಲಾ ಅನುಕೂಲತೆಗಳಿಂದ ಭೋಗಪರಿಕರವಸ್ತುಗಳಿಂದ ಸಜ್ಜಾಗಿರುವ (ಭೋಗಪರಿಕರಯುಕ್ತ ಸದ್ಮಗಳಲಿರಿಸಿದನು) ನಿಲಯಗಳನ್ನು ಸುಗ್ರೀವ, ಅಂಗದ ಮೊದಲಾದ ಕಪೀಶ್ವರರಿಗೆ ಮತ್ತು ವಿಭೀಷಣ ಮೊದಲಾದ ರಾಕ್ಷಸಾಧಿಪರಿಗೆ ಒದಗಿಸಿ ಅವರು, ಆ ಸಹೃದಯರ್ಯಾರು (ಸುಹೃದರು) ವಿರಮಿಸುವಂತೆ ಮಾಡಿದನು (ಸುಹೃದರನು ಸೌಹಾರ್ದನಿಧಿರಘೂದ್ವಹನು). ಆ ಬಳಿಕ ಆ ಕೋದಂಡರಾಮನು (ಕೌಸಲ್ಯಾಸುಪ್ರಜಾರಾಮ) ತನ್ನ ತಂದೆಯಾದ ದಶರಥಮಹಾರಾಜನು ವಾಸಿಸುತ್ತಿದ್ದ ಅರಮನೆಗೆ ಬಾಷ್ಪಲೋಚನನಾಗಿ ಭೇಟಿಯಿತ್ತನು. ಆ ಪ್ರಾಸಾದವು ಬರಿದಾಗಿತ್ತು. ದಶರಥಸಾರ್ವಭೌಮನ ಪೂಜಾಸಾಮಗ್ರಿಗಳು ಮಾತ್ರ ಅಲ್ಲಿಯೇ ಇದ್ದುವು. ಅಲ್ಲದೆ ಅಲ್ಲಿ ಆ ಗುಣಶೀಲಪ್ರಭುವಿನ (ಆ ಪವಿತ್ರಾತ್ಮನ) ಒಂದು ಭಾವಚಿತ್ರ ಮಾತ್ರವೇ ಇತ್ತು. ಅದನ್ನು ಕಂಡೊಡನೆ ಬರಿಯ ನೆನಪು ಮತ್ತು ಚಿತ್ರಮಾತ್ರದಿಂದಲೇ ಉಳಿದುಕೊಂಡಿರುವ ಭವ್ಯಭವನವನ್ನು ನೋಡಿದೊಡನೆ ಶ್ರೀರಾಮಚಂದ್ರನು ಭಾವಪರವಶನಾದನು. ಅವನ, ಆ ಮಹಾತ್ಮನ ಕಣ್ಣಲ್ಲಿ ಕಂಬನಿ ತೊಟ್ಟಿಕ್ಕುತ್ತಿತ್ತು (ಆಲೇಖಶೇಷನಾದ ದಶರಥನ).

ಅನ್ವಯ :—ಸೌಹಾರ್ದನಿಧಿಃ ರಾಮಃ ಸುಹೃದ್ಭ್ಯಃ ಪರಿಬರ್ಹವಂತಿ ವೇಶ್ಮಾನಿ ವಿಶ್ರಾಣ್ಯ ಆಲೇಖ್ಯಶೇಷಸ್ಯ ಪಿತುಃ ಬಲಿಮಂತ್ ನಿಕೇತಂ ಬಾಷ್ಪಾಯಮಾಣಃ ವಿವೇಶ ॥

ಸುಹೃದೋ ಭಾವಃ = ಸೌಹಾರ್ದ, ಸೌಜನ್ಯವಾ್—"ಹೃದ್ಭಗಸಿಂಧ್ವನ್ತೇ ಪೂರ್ವಪದಸ್ಯ" (ಪಾಣಿನಿ) ಇತ್ಯುಭಯಪದವೃದ್ಧಿಃ—ಸೌಹಾರ್ದನಿಧಿ=ರಾಮಃ—ಸುಹೃದ್ಭ್ಯಃ= ಸುಗ್ರೀವಾದಿಭ್ಯಃ—ಪರಿಬರ್ಹವಂತಿ=ಉಪಕರಣವನ್ತಿ—ವಿಶ್ರಾಣ್ಯ=ದತ್ತ್ವಾ—ಆಲೇಖ್ಯಶೇಷಸ್ಯ = ಚಿತ್ರಮಾತ್ರಶೇಷಸ್ಯ—ನಿಕೇತಂ = ಗೃಹಂ—ಬಾಷ್ಪಾಯಮಾಣೋ = ಬಾಷ್ಪಮುದ್ವಮನ್ವಿವೇಶ—"ಭಾಷ್ಪೋಷ್ಮಭ್ಯಾಮುದ್ವಮ್ಯಗೇ" (ಪಾಣಿನಿ) ಇತಿ ಕ್ಯಜ್ ಪ್ರತ್ಯಯಃ—ಆಲೇಖ್ಯಶೇಷಸ್ಯ = ಗೋಡೆಯ ಮೇಲೆ ಬರೆದ ಚಿತ್ರದಲ್ಲುಳಿದ—ಸುಹೃದಃ ಭಾವಃ ಸೌಹಾರ್ದಂ = ಸು ಮತ್ತು ಹೃದ ಎರಡು ಶಬ್ದಗಳೂ ತದ್ಧಿತದಲ್ಲಿ ವೃದ್ಧಿಯಾಗಿ ಸೌಹಾರ್ದ ಎಂದಾಗುತ್ತದೆ—ಉಕ್ಕಿಬರುವುದು ಅರ್ಥದಲ್ಲಿ ಬಾಷ್ಪಶಬ್ದವನ್ನು ಬಳಸಿದಾಗ ಕ್ಯಙ್ ಪ್ರತ್ಯಯವು ಸೇರಿ ಬಾಷ್ಪಾಯತೇ ಎಂಬ ರೂಪವು ಬರುತ್ತದೆ—ಪರಿಬರ್ಹವಂತಿ

=ಭೋಗಪರಿಕರಯುಕ್ತ—ವಿಶ್ರಾಣ್ಯ=ಕೃನ್ನಾಮ (ವಿ + ಶ್ರಾಣ್)—ನೀಡು (ನಾಮಪದ) = ವಿಶ್ರಾಣನ ॥

**16. ಕೃತಾಂಜಲಿಸ್ತತ್ರ ಯದಂಬಸತ್ಯಾತ್ ।**
**ನಾಭ್ರಶ್ಯತ ಸ್ವರ್ಗಫಲಾದ್ಗುರುರ್ನಃ ॥**
**ತಚ್ಚಿಂತ್ಯಮಾನಂ ಸುಕೃತಂ ತವೇತಿ ।**
**ಜಹಾರ ಲಜ್ಜಾಂ ಭರತಸ್ಯ ಮಾತುಃ ॥ ೧೬ ॥**

ಕರುಣಾಸಾಂದ್ರನಾದ ಶ್ರೀರಾಮಚಂದ್ರನು ಕೈಜೋಡಿಸಿ (ಬೊಗಸೆಕೈಗಳಿಂದ) ನಮಸ್ಕರಿಸುತ್ತಾ, ಭರತನ ಜನನಿಯಾದ ಕೈಕೆಗೆ ವಂದಿಸಿ ಹೀಗೆಂದು ನುಡಿದನು: "ಎಲೆ ತಾಯೇ, ನನ್ನ ಪೂಜ್ಯಪಿತನು ತನ್ನ ಮಾತನ್ನು ಕೊನೆಯತನಕ ಉಳಿಸಿಕೊಂಡು ತನ್ನ ಸತ್ಯ ಪಥದಿಂದ ವಿಚಲಿತನಾಗದೆ, ವಚನಭ್ರಷ್ಟನಾಗದೆ ಇದ್ದನು. ಪ್ರತಿಜ್ಞಾಪಾಲನೆಯೇ ಸ್ವರ್ಗ ಸಾಧನೆ. ಅದರಿಂದ ಆ ನನ್ನ ಪೂಜ್ಯಪಿತನು ಅನಾಯಾಸವಾಗಿ ಸ್ವರ್ಗವನ್ನೇ ಪಡೆದನು. ಅದಕ್ಕೆ ಕಾರಣ ನಿಮ್ಮ ಸತ್ಕರ್ಮವೇ ಸಾಕ್ಷಿಯಾಗಿದೆ (ತವ ಸುಕೃತವೆಂದು), ನೀವೆಸಗಿದ ಪುಣ್ಯಕಾರ್ಯಗಳು, ಸತ್ಕರ್ಮಗಳು. ಹೀಗೆ ಮನಸ್ಸಿಗೆ ನೋವಾಗದಂತೆ ನುಡಿದು ರಾಮ ಭದ್ರನು ಆ ಮಾತೆಯು ಲಜ್ಜಾವಶಳಾಗದಂತೆ, ನಾಚಿಕೆಗೊಳ್ಳದಂತೆ, ಆಕೆಯ ಲಜ್ಜೆಯನ್ನು ಕಳೆದನು. ಆಕೆಯ ಮನದಲ್ಲಿ ಅಡಗಿರುವ ನಡುಕವನ್ನು ಅಳಿಸಿದನು (ಕುಂಬಳಕಾಯಿ ಕಳ್ಳ ಹೆಗಲು ಮುಟ್ಟಿ ನೋಡದಂತೆ).

ಅನ್ವಯ:—ತತ್ರ ಕೃತಾಂಜಲಿಃ (ಸನ್) "ಹೇ ಅಂಬ. ನಃ ಗುರುಃ ಸ್ವರ್ಗಫಲಾತ್ ಸತ್ಯಾತ್ ನ ಅಭ್ರಶ್ಯತ ಇತಿ ತಚ್ಚಿಂತ್ಯಮಾನಂ ತವ ಸುಕೃತಂ ಇತಿ ಭರತಸ್ಯ ಮಾತುಃ ಲಜ್ಜಾಂ ಜಹಾರ ॥

ಕೃತಾಂಜಲಿರಿತಿ = ತತ್ರ ನಿಕೇತನೇ ಕೃತಾಂಜಲಿಃ ಸನ್ ರಾಮಃ—ಗುರುಃ = ಪಿತಾ—ತಚ್ಚಿಂತ್ಯಮಾನಂ = ವಿಚಾರ್ಯಮಾಣಂ—ಭರತಸ್ಯ ಮಾತುಃ = ಕೈಕೇಯ್ಯಾ—ರಾಜ್ಞಾಂ ಪ್ರತಿಜ್ಞಾಪರಿಪಾಲನಂ ಸ್ವರ್ಗಸಾಧನಮಿತ್ಯರ್ಥಃ ॥

**17. ತಥೈವ ಸುಗ್ರೀವವಿಭೀಷಣಾದೀನ್ ।**
**ಉಪಾಚರತ್ ಕೃತ್ರಿಮಸಂವಿಧಾಭಿಃ ॥**
**ಸಂಕಲ್ಪಮಾತ್ರೋದಿತಸಿದ್ಧಯಸ್ತೇ ।**
**ಕ್ರಾಂತಾ ಯಥಾ ಚೇತಸಿ ವಿಸ್ಮಯೇನ ॥ ೧೭ ॥**

ಸುಗ್ರೀವ, ವಿಭೀಷಣಾದಿಗಳಿಗೆ ನಾನಾರೀತಿಯಲ್ಲಿ ಉಪಚಾರವೆಸಗಿ ಆ ರಾಜೇಂದ್ರನು ಅವರ ತನುಮನಗಳನ್ನು ತಣಿಸಿದನು. ಬರೇ ಸಂಕಲ್ಪಮಾತ್ರದಿಂದ, ಇಚ್ಛಾಮಾತ್ರದಿಂದ ಅವರು ಬಯಸುವ ವಸ್ತುವಿಶೇಷಗಳನ್ನೆಲ್ಲಾ ಕ್ಷಣಮಾತ್ರದಲ್ಲಿ ಒದಗಿಸಿ ಅವರು ವಿಸ್ಮಯಾ ಕ್ರಾಂತರಾಗುವಂತೆ ಉಪಚಾರವೆಸಗಿದನು. ಅವರು ಇಚ್ಛಿಸುವ ಅಪರೂಪದ ಕೃತಕವಸ್ತು ಗಳನ್ನು ಸಿದ್ಧಿಯಿಂದ ಪಡೆದು (ನಾನಾವಿಧವಾದ ಭೋಗಸಾಮಗ್ರಿಗಳನ್ನು) ಅವರನ್ನು

ದಂಗುಬಡಿಯುವಂತೆ ಮಾಡಿದನು. ಆ ಸಾರ್ವಭೌಮನ ಆತಿಥ್ಯದಿಂದ ಅವರು ಸಂಪೂರ್ಣವಾಗಿ ತೃಪ್ತಿಹೊಂದಿದರು. ಅವರೆಲ್ಲರೂ ಆಶ್ಚರ್ಯಚಕಿತರಾಗುವಂತೆ ಸಾಕೇತಪುರದಲ್ಲಿ ಅದ್ದೂರಿಯ ಆತಿಥ್ಯ ನಡೆದಿತ್ತು.

ಅನ್ವಯಃ :—ಸುಗ್ರೀವವಿಭೀಷಣಾದೀನ್ ಕೃತ್ರಿಮಸಂವಿಧಾಭಿಃ ಉಪಾಚರತ್ ಯಥಾ ಸಂಕಲ್ಪಮಾತ್ರೋದಿತಸಿದ್ಧಯಃ ತೇಚೇತಾಸಿ ವಿಸ್ಮಯೇನಕ್ರಾಂತಾಃ

ಸಂವಿಧೀಯಂತೇ ಇತಿ ಸಂವಿಧಾ = ಭೋಗ್ಯವಸ್ತೂನೇ—ಯಥಾ ಸಂಕಲ್ಪಮಾತ್ರೇಣ= ಇಚ್ಛಾಮಾತ್ರೇಣ—ವಿಸ್ಮಯೇನ ಕ್ರಾಂತಾ = ವ್ಯಾಪ್ತಾಃ—ಕೃತ್ರಿಮಸಂವಿಧಾಭಿಃ=ಉಪಾಚರತ್ = ಉಪಚರಿಸು.

18. ಸ ಭಾಜನಾಯೋಪಗತಾನ್ ಸ ದಿವ್ಯಾನ್ ।
ಮುನೀನ್ ಸ್ಫುರತ್ಕೃತ್ಯ ಹತಸ್ಯ ಶತ್ರೋಃ ॥
ಶುಶ್ರಾವ ತೇಭ್ಯಃ ಪ್ರಭವಾದಿವೃತ್ತಂ ।
ಸ್ವವಿಕ್ರಮೇ ಗೌರವಮಾದಧಾನಮ್ ॥ ೧೮ ॥

ಶ್ರೀರಾಮಚಂದ್ರನನ್ನು ಅಭಿನಂದಿಸಲು ಅಗಸ್ತ್ಯಾದಿ ಮಹಾಮುನಿಗಳು ಬಂದಿದ್ದರು. ಆ ದಿವ್ಯಮುನಿಗಳನ್ನು ಆ ರಘುಕುಲೋತ್ತಮನು ಗೌರವಾದರಗಳಿಂದ ಮನ್ನಿಸಿದನು. ಅವರಾದರೋ ಶ್ರೀರಾಮನು ಕೊಂದಿರುವ ಶತ್ರುವಿನ ಜನನಾದಿವೃತ್ತಾಂತ ಮೊದಲ್ಗೊಂಡು ಅವನ ವಿಕ್ರಮದ ಅವಿಂತಸಾಧನೆಗಳು, ಅವರ ಸಾವುನೋವು ಎಲ್ಲವನ್ನೂ ವಿವರಿಸಿದರು. ಜಗತ್ತನ್ನು ಆವರಿಸುವ ವಿಕ್ರಮದಲ್ಲಿ ನೆಟ್ಟಿರುವ ಗೌರವದ ಸುದ್ದಿಯೆಲ್ಲವನು ರಘುರಾಮನು ನಸ್ನಿಯಿಂದ ಕಿವಿಗೊಟ್ಟು ಆಲಿಸಿದನು (ನಿಜಶೌರ್ಯ ಗೌರವಾಸ್ಪದ ಮನವನದನು).

ಅನ್ವಯಃ :—ಸಃ ಸಭಾಜನಾಯ ಉಪಾಗತಾನ್ ದಿವ್ಯಾನ್ ಮುನೀನ್ ಪುರಸ್ಕೃತ್ಯ ಹತಸ್ಯ ಶತ್ರೋಃ ಪ್ರಭವಾದಿ ಸ್ವವಿಕ್ರಮೇ ಗೌರವಂ ಆದಧಾನಂ ವೃತ್ತಂ ತೇಭ್ಯಃ ಶುಶ್ರಾವ ॥

ಸಂವಿಧೀಯಂತೇ ಇತಿ ಸಂವಿಧಾ = ಭೋಗ್ಯವಸ್ತೂನೇ—ಯಥಾ ಸಂಕಲ್ಪಮಾತ್ರೇಣ = ಇಚ್ಛಾಮಾತ್ರೇಣ—ವಿಸ್ಮಯೇನ ಕ್ರಾಂತಾ = ವ್ಯಾಪ್ತಾಃ—ಸಭಾಜನಾಯ = ಗೌರವಿಸು, ಅಭಿವಂದಿಸು.

19. ಪ್ರತಿಪ್ರಯಾತೇಷು ತಪೋಧನೇಷು ।
ಸುಖಾದವಿಜ್ಞಾತಗತಾರ್ಧಮಾಸಾನ್ ॥
ಸೀತಾಸ್ವಹಸ್ತೋಪಹೃತಾಗ್ರ್ಯಪೂಜಾನ್ ।
ರಕ್ಷಃ ಕಪೀಂದ್ರಾನ್ ವಿಸಸರ್ಜ ರಾಮಃ ॥ ೧೯ ॥

ಆ ತಪೋಧನರು, ತಪಸ್ಸೇ ತಮಗೆ ಹಿರಿದೆಂದು ತಿಳಿದ ಋಷಿಮುನಿಗಳು, ರಾಜನ ಒಪ್ಪಿಗೆಯನ್ನು ಪಡೆದು ವನಕ್ಕೆ ಮರಳಿದರು. ರಾಕ್ಷಸ ಹಾಗೂ ಕಪಿಮುಖ್ಯರನ್ನು ಸೌಹಾರ್ದಯುತವಾದ ಅತಿಥಿಸತ್ಕಾರದಿಂದ ತಣಿಸಿದನು. ಅವರೆಲ್ಲರೂ ಹದಿನೈದು ದಿನಗಳ ತನಕ ಸುಖದ ಸುಪ್ಪತ್ತಿಗೆಯಲ್ಲಿ ಓಲಾಡಿದರು. ಅವರಿಗೆ ಮಾಸಾರ್ಧ ಉರುಳಿದುದು

ತಿಳಿಯಲೇ ಇಲ್ಲ. ಆ ಇನಕುಲೇಂದ್ರನು ಭೂಜಾತೆಯು (ವೈದೇಹಿಯು) ಕೈಯಿಂದ ಅವರೆಲ್ಲರಿಗೆ ಬಹುಬೆಲೆಬಾಳುವ ಉಡುಗೊರೆಯನ್ನು (ನೆನಪಿನ ಕಾಣಿಕೆಯನ್ನು) ಕೊಡಿಸಿ ಅವರವರ ಸ್ವಸ್ಥಾನಕ್ಕೆ ಗೌರವದಿಂದ ಬೀಳ್ಕೊಟ್ಟು ಕಳುಹಿದನು.

ಅನ್ವಯಃ :–ತಪೋಧನೇಷು ಪ್ರತಿಪ್ರಯಾತೇಷು ಸುಖಾತ್ ಅಭಿಜ್ಞಾತಗತಾರ್ಧಮಾಸಾನ್ ಸೀತಾಸ್ವಹಸ್ತೋಪಹೃತಾಗ್ರ್ಯಪೂಜಾನ್ ರಕ್ಷಃ ಕಪೀಂದ್ರಾನ್ ರಾಮಃ ವಿಸಸರ್ಜ ॥

ಪ್ರತಿಪ್ರಯಾತೇಷು = ಪ್ರತಿನಿವೃತ್ತ—ಸಂಭಾವನಾ ಏತೇನ ಸೌಹಾರ್ದಾತಿಶಯಃ ಉಕ್ತಃ—ವಿಸಸರ್ಜ = ವಿಸೃಷ್ಟವಾನ್—ಅವಿಜ್ಞಾತಃ ಏವ ಗತಃ ಅರ್ಧಮಾಸಃ ಯೇಷಾಂ ತೇ = ಅವಿಜ್ಞಾತಗತಾರ್ಧಮಾಸಾಃ, ತಾನ್ = ಅವರಿಗೆ ಅರಿವಿಲ್ಲದೆಯೇ ಅರ್ಧತಿಂಗಳು ಕಳೆದುಹೋಯಿತು—ಸೀತಾಯಾ ಸ್ವಹಸ್ತೇನ ಅಪಹೃತಾ ಅಗ್ರ್ಯಪೂಜಾಯೇಭ್ಯಃ ತೇ. ತಾನ್ = ಸೀತೆಯು ಸ್ವಹಸ್ತದಿಂದ ನೀಡಲ್ಪಟ್ಟ ಸಂಭಾವನೆಯುಳ್ಳ ಅವರು—ವಿಸಸರ್ಜ = ಬೀಳ್ಕೊಂಡನು.

20. ತಚ್ಚಾತ್ಮಚಿಂತಾ ಸುಲಭಂ ವಿಮಾನಂ ।
ಹೃತಂ ಸುರಾರೇಃ ಸಹಜೀವಿತೇನ ॥
ಕೈಲಾಸನಾಥೋದ್ವಹನಾಯ ಭೂಯಃ ।
ಪುಷ್ಪಂ ದಿವಃ ಪುಷ್ಪಕಮನ್ವಮಂಸ್ತ ॥ ೨೦ ॥

ತನ್ನ ಆತ್ಮಚಿಂತನೆಯಂತೆ, ಮನದ ಇಚ್ಛೆಯಂತೆ ನಡೆಸಲ್ಪಡಬಹುದಾದ (ಆತ್ಮಚಿಂತಾ ಸುಲಭವೆನಿಸಿದ) ಪುಷ್ಪಕವಿಮಾನವನ್ನು ದಶಕಂಠನ ಪ್ರಾಣಸಹಿತ (ಅಸುರನಸು ಸಹಿತ) ಶ್ರೀರಾಮಚಂದ್ರನು ಪಡೆದುಕೊಂಡುದು ನಿಜವಷ್ಟೆ (ಜೀವಿತಹರಣ, ವಿಮಾನಹರಣ). ಆದರೆ ಇದೀಗ ಧರ್ಮಾತ್ಮನಾದ ರಾಘವನು ಅದರ ನಿಜವಾದ ಒಡೆಯನಾದ, ಕೈಲಾಸ ನಾಥನಾದ ಕುಬೇರನಲ್ಲಿಗೆ ಅದನ್ನು ಹಿಂದಕ್ಕೆ ಅಟ್ಟಿದನು. ಆ ಪುಷ್ಪಕವು ಸುರಲೋಕದ ಆಕಾಶ ಪುಷ್ಪವೆಂಬಂತೆ (ಗಗನಕುಸುಮ,ಆಕಾಶಕುಸುಮ. ದೇವಲೋಕದ ಹೂ) ಹಿರಿದಾದ ಗುಣಗಳಿಂದ ಕೂಡಿದ ದೇವ ರಥವಾಗಿತ್ತು.

ಅನ್ವಯಃ :—ತತ್ ಚ ಆತ್ಮಚಿಂತಾ ಸುಲಭಂ ಸುರಾರೇಃ ಜೀವಿತೇನ ಹೃತಂ ದಿವಃ ಪುಷ್ಪಂ ಪುಷ್ಪಕಂ ವಿಮಾನಂ ಭೂಯಃ ಕೈಲಾಸನಾಥೋದ್ವಹನಾಯ ಅನ್ವಮಂಸ್ತ ॥

ತಚ್ಚಾತ್ಮಚಿಂತಾಸುಲಭಂ = ಸ್ವೇಚ್ಛಾಮಾತ್ರ ಲಭ್ಯಂ—ದಿವಃ ಪುಷ್ಪಂ = ಪುಷ್ಪವದಾ ಭರಣಭೂತಂ ಪುಷ್ಪಕಂ ವಿಮಾನಂ—ಭೂಯಃ = ಪುನರಪಿ = ಕೈಲಾಸನಾಥಸ್ಯ = ಕುಬೇರಸ್ಯೋ "ಭೂಯೋ" ಗ್ರಹಣೇನ ಪೂರ್ವಮಪ್ಯೇತತ್ ಕೌಬೇರಮೇವೇತಿ ಸೂಚ್ಯತೇ—ಪುಷ್ಪಂ ಇವ ಪ್ರತಿಕೃತಿಃ ಪುಷ್ಪಕಃ—ಆತ್ಮಚಿಂತಾ = ನೆನೆದಾಕ್ಷಣ—ಕೈಲಾಸ ನಾಥ = ಕುಬೇರ. ಸಹೋಕ್ತಿ ಅಲಂಕಾರ ॥

21. ಪಿತುರ್ನಿಯೋಗಾದ್ವನವಾಸಮೇವಂ ।
ನಿಸ್ತೀರ್ಯ ರಾಮಃ ಪ್ರತಿಪನ್ನ ರಾಜ್ಯಃ ॥
ಧರ್ಮಾರ್ಥಕಾಮೇಷು ಸಮಾಂ ಪ್ರಪೇದೇ ।
ಯಥಾ ತಥೈವಾವರಜೇಷು ವೃತ್ತಿಮ್ ॥ ೨೧ ॥

ಜನಕನಾದ ದಶರಥನ ನಿಯೋಗದಂತೆ (ಜನಕನ ನಿಯೋಗದಿಂದ) ಅರಣ್ಯವಾಸವನ್ನು ರಘುರಾಮನು ಪಡೆದು ಧರ್ಮದಿಂದ ರಾಜ್ಯದ ಆಡಳಿತೆಯನ್ನು ನಡೆಸತೊಡಗಿದನು. ತನ್ನ ಮೂವರು ತಮ್ಮಂದಿರಾದ ಭರತ, ಲಕ್ಷ್ಮಣ, ಶತ್ರುಘ್ನರೊಂದಿಗೆ ಸಮಭಾವನೆಯಿಂದ, ಅನ್ಯೋನ್ಯತೆಯಿಂದ, ಸಮರಸ, ಸಮಾನತೆ, ಸಮದರ್ಶಿಯಾಗಿ, ಯಾವ ವೈಷಮ್ಯ, ಭೇದಗಳಿಗೆ ಆಸ್ಪದ ಕೊಡದೆ ವಿನೀತವಾಗಿಯೇ ಇದ್ದನು, ಧರ್ಮ, ಅರ್ಥ, ಕಾಮಗಳಲ್ಲಿ ಎಂತೋ ಅಂತು (ಧರ್ಮಾರ್ಥಕಾಮಗಳಲ್ಲಿಂತಂತು ಅನುಜರೊಳು) ಮನಸ್ಸು ಅವುಗಳಲ್ಲಿ ನೆಟ್ಟಿರುವಂತೆ, ತನ್ನ ಮೂವರು ಅನುಜರಲ್ಲಿ ಸಮಭಾವನೆಯಿಂದ, ಸಮವೃತ್ತಿಯಿಂದ, ಔದಾರ್ಯದಿಂದ ಕಿಂಚಿತು ವೈಷಮ್ಯವಿಲ್ಲವೆ ನಡೆದುಕೊಳ್ಳುತ್ತಿದ್ದನು.

ಅನ್ವಯ :—ರಾಮಃ ಏವಂ ಪಿತುಃ ನಿಯೋಗಾತ್ ವನವಾಸಂ ನಿಸ್ಪೃಯ್ಯ ಪ್ರತಿಪನ್ನ ರಾಜ್ಯಃ ಧರ್ಮಾರ್ಥಕಾಮೇಷು ಯಥಾ ತಥಾ ಅವರಜೇಷು ಸಮಾಂ ವೃತ್ತಿಂ ಪ್ರಪೇದೇ ||

ಪಿತುರ್ನಿಯೋಗಾದ್ವ್ಯಸನಾದ್ವನವಾಸಂ—ಪ್ರತಿಪನ್ನರಾಜ್ಯಃ = ಪ್ರಾಪ್ತರಾಜ್ಯಃ ಸನ್ —ತಥೈವಾವರಜೇಷ್ವನುಜೇಷು—ಸಮಾಂ ವೃತ್ತಿಂ ಪ್ರಪೇದೇ—ಅನುಜೇಷು ಸಮಾಂ ತುಲ್ಯಾಂ ಅವಸ್ಥಾಂ ಪ್ರಾಪ । ಯದುಕ್ತಂ—''ಧರ್ಮಾರ್ಥಕಾಮಮೋಕ್ಷಾಃ ಸಮಮೇವ ಸೇವ್ಯಾಃ'' ಇತಿ ವಲ್ಲಭಃ—ಪ್ರತಿಪನ್ನಂ ರಾಜ್ಯಂ ಯೇನ ನಃಪ್ರತಿಪನ್ನರಾಜ್ಯಃ = ರಾಜ್ಯವನ್ನು ಪಡೆದವನು. ಪ್ರಪೇದೇ = ಪ್ರ ಉಪಸರ್ಗ, ಪದ್ ಧಾತು, ಲಿಟ್, ಭೂತಕಾಲ—ನಿಯೋಗ = ಶಾಸನ ಆಣತಿ—ಧರ್ಮಾರ್ಥಕಾಮೇಷು = ಚತುರ್ವಿಧ ಪುರುಷಾರ್ಥಗಳು.

**22. ಸರ್ವಾಸು ಮಾತೃಷ್ವಪಿ ವತ್ಸಲತ್ವಾತ್ ।**
**ಸ ನಿರ್ವಿಶೇಷ ಪ್ರತಿಪತ್ತಿರಾಸೀತ್ ॥**
**ಷಡಾನನಾ ಪೀತಪಯೋಧರಾಸು ।**
**ನೇತಾ ಚಮೂನಾಮಿವ ಕೃತ್ತಿಕಾಸು ॥ ೨೨ ॥**

ವಾತ್ಸಲ್ಯಮಯನಾದ ಶ್ರೀರಾಮಚಂದ್ರನು ನಿರ್ಭೇದಭಾವದಿಂದ ತನ್ನ ಮೂವರು ಜನನಿಯರ ಜೊತೆಯಲ್ಲಿ ನಡೆದುಕೊಂಡು ಸದಾ ಅವರ ಪ್ರೀತಿಗೆ ಪಾತ್ರನಾಗಿದ್ದನು. ಅವರನ್ನು ಅತ್ಯಂತ ಗೌರವಭಾವದಿಂದ ಕಾಣುತ್ತ, ಅವರ ಆಶೋತ್ತರಗಳನ್ನು ಈಡೇರಿಸಿ ಸತ್ಕಾರ್ಯವೆಸಗುತ್ತಲಿದ್ದು ಈ ಹಿಂದೆ ಮಹೇಶ್ವರನ ಪುತ್ರನಾದ ಕಾರ್ತಿಕೇಯಸ್ವಾಮಿಯು ತನ್ನ ಆರು ಮುಖಗಳಿಂದ (ಆರು ಬಾಯ್ಗಳಿಂದ) ಮೂರು ಮಂದಿ ಕೃತ್ತಿಕಾಜನನಿಯರ ಆರು ಸ್ತನಗಳಿಂದ ಎದೆಹಾಲನ್ನು ಸಮದೃಷ್ಟಿಯಿಂದ ಸಮಾನವಾಗಿ ಹೀರಿ ಕುಡಿಯುತ್ತಿದ್ದಂತೆ ವಾತ್ಸಲ್ಯದಿಂದ ಏಕಪ್ರಕಾರವಾಗಿ ಅವರೆಲ್ಲರನ್ನು ಸಲಹುತ್ತಿದ್ದನು. ಇವನು ಆ ದೇವಸೇನಾನಿಯಾದ ಆ ಕಾರ್ತಿಕೇಯನೋ ಎಂಬಂತೆ ನಿಷ್ಪಕ್ಷಪಾತಬುದ್ಧಿಯಿಂದ ಏಕಪ್ರಕಾರವಾಗಿ ಆ ಮೂರು ಮಂದಿ ಜನನಿಯರನ್ನು ಮಾತೃಭಕ್ತಿಯಿಂದ ಸಲಹುತ್ತಿದ್ದನು (ಕೃತ್ತಿಕಾಜನನಿಯರನು ಒಲಿದವೊಲು).

ಅನ್ವಯ :—ಸವತ್ಸಲತ್ವಾತ್ ಸರ್ವಾಸು ಮಾತೃಷು ಅಪಿ ನಿರ್ವಿಶೇಷ ಪ್ರತಿಪತ್ತಿಃ ಆಸೀತ್ ಚಮೂನಾಂ ನೇತಾ ಷಡಾನನಾ ಪೀತಪಯೋಧರಾಸು ಕೃತ್ತಿಕಾಸು ಇವ ॥

ಸ ರಾಮೋ ವಾತ್ಸಲತ್ವಾತ್ = ಸ್ನಿಗ್ಧತ್ವಾತ್ "ಸ್ನಿಗ್ಧಸ್ತು ವತ್ಸಲಃ" ಇತ್ಯಮರಃ—ಚಮೂನಾಂ ನೇತಾ = ಷಣ್ಮುಖಃ—ನಿರ್ವಿಶೇಷ = ನಿರ್ಗತೋ ವಿಶೇಷಃ ಯಸ್ಯಾಃ ಸಾ ನಿರ್ವಿಶೇಷಾ ಪ್ರತಿಪತ್ತಿಃ—ಪ್ರತಿಪತ್ತಿಃ = ಗೌರವಮ್ ॥

**23. ತೇನಾರ್ಥವಾಂ ಲ್ಲೋಭಪರಾಙ್ಮುಖೇನ ।**
**ತೇನ ಘ್ನತಾ ವಿಘ್ನಭಯಂ ಕ್ರಿಯಾವಾನ್ ॥**
**ತೇನಾಸ ಲೋಕಃ ಪಿತೃಮಾನ್ ವಿನೇತ್ರಾ ।**
**ತೇನೈವ ಶೋಕಾಪನುದೇನ ಪುತ್ರೀ ॥ ೨೩ ॥**

ಅವನು ಲೋಭಪರಾಙ್ಮುಖನು (ತನ್ನ ಔದಾರ್ಯದೊಳು). ಲೋಭತ್ವವು ಅವನಲ್ಲಿ ಲವಲೇಶವೂ ಇರಲಿಲ್ಲ. ಇದರಿಂದಾಗಿ ಪ್ರಜೆಗಳು ಧನವಂತರಾದರು (ಸಿರಿವಂತರಾದರು). ಧನವು ಅವರಲ್ಲಿ ನೆಲಸಿತು. ಅವನು ಪ್ರಜಾರಂಜಕನು. ಪ್ರಜೆಗಳ ಕಷ್ಟವನ್ನು ತನ್ನ ಸತ್ಕರ್ಮಗಳಿಂದ ದೂರಮಾಡಿದನು. ಜನರಿಗೆ ವಿಘ್ನದ ಭಯಾವಳಿಯಲು (ವಿಘ್ನಭಯಾವಳಿಯೆ) ಅವರು ಕರ್ಮಯೋಗಿಗಳಾಗಿ ದುಡಿದರು. ಇದರಿಂದ ರಾಷ್ಟ್ರದ ಸಂಪತ್ತು ಹೆಚ್ಚಿತು. ಶ್ರೀರಾಮಚಂದ್ರನು ತನ್ನ ಪ್ರಜೆಗಳಿಗೆ ಪಿತೃಸಮಾನನಾಗಿದ್ದನು. ಆ ತೆರನಾಗಿ ಪ್ರಜಾಕೋಟಿಯನ್ನು ಪ್ರೀತಿಯಿಂದ ಸಹನೆಯಿಂದ ಪರಿಪಾಲಿಸುತ್ತಿದ್ದನು, ಅವರ ದುಃಖವನ್ನು, ಕಷ್ಟಕಾರ್ಪಣ್ಯಗಳನ್ನು ದೂರಮಾಡುವುದರಲ್ಲಿ ಓರ್ವ ಮಗನಂತಿದ್ದನು. ಪ್ರಜಾವತ್ಸಲನಾದ ಸೀತಾರಾಮನು ಪ್ರಜೆಗಳ ಸುತನಂತಿದ್ದು ಅವರ ಸಂಕಷ್ಟಗಳನ್ನು ದೂರಮಾಡುತ್ತಿದ್ದನು (ತನ್ನೊಂದಿಗೆ ಶಿಕ್ಷಣವೆ). ಮಗಳ ಅಥವಾ ಮಗನ ಮೊಗವನ್ನು ನೋಡಿದೊಡನೆ ತಂದೆತಾಯಿಗಳ ದುಃಖವು ದೂರವಾಗುವಂತೆ(ತಾನಳಲ ಕಳೆದನು) ಶ್ರೀರಾಮನು ಪ್ರಜಾರಂಜಕನಾಗಿ, ಮಂಗಳಪ್ರದನಾದ ಸ್ವಾಮಿಯಾಗಿದ್ದನು. ಅವನು ಪ್ರಜೆಗಳಿಗೆ ತಂದೆಯೂ ಹೌದು, ಮಗನೂ ಹೌದು. ಅಂತಹ ಪ್ರಭು ವಿಶ್ವಬಂಧು, ವಿಶ್ವನಾಯಕ ಶ್ರೀರಾಮಚಂದ್ರನು.

ಅನ್ವಯ :—ಲೋಕಃ ಲೋಭಪರಾಙ್ಮುಖೇನ, ತೇನ ಅರ್ಥವಾನ್ ಆಸ । ವಿಘ್ನಭಯಂ ಘ್ನತಾ ತೇನ ಕ್ರಿಯಾವಾನ್ (ಆಸ) ವಿನೇತ್ರಾ ತೇನ ಪಿತೃಮಾನ್ (ಆಸ) ಶೋಕಾಪನುದೇನ ಪುತ್ರೀ (ಆಸ) ॥

ಅರ್ಥವಾನ್ = ಧನಿಕ — ವಿನೇತ್ರಾ = ನಿಯಾಮಕೇನ — ಶೋಕಮಪನುದತೀತಿ = ಶೋಕಾಪನುದೋ = ದುಃಖಸ್ಯ ಹರ್ತಾ ತೇನ—ತೇನ ಪುತ್ರೀ = ಪುತ್ರವಾನಾಸ— ಉತ್ಪ್ರೇಕ್ಷಾಲಂಕಾರ ॥

ಶೋಕಂ ಅಪನುದತಿ ಇತಿ—"ಕ" ಪ್ರತ್ಯಯವೂ ಸೇರಿ ಶೋಕಾಪನುದಃ ಎಂದಾಗಿದೆ.

**24. ಸ ಪೌರಕಾರ್ಯಾಣಿ ಸಮೀಕ್ಷ್ಯ ಕಾಲೇ ।**
**ರೇಮೇ ವಿದೇಹಾಧಿಪತೇರ್ದುಹಿತ್ರಾ ॥**
**ಉಪಸ್ಥಿತಶ್ಚಾರುವಪುಸ್ತದೀಯಂ ।**
**ಕೃತ್ವೋಪಭೋಗೋತ್ಸುಕಯೇವ ಲಕ್ಷ್ಮ್ಯಾಃ ॥ ೨೪ ॥**

ದೇಶದ ಆಡಳಿತದ ಸೂತ್ರವನ್ನು ಕೈಯಲ್ಲಿ ಹಿಡಿದುಕೊಂಡು ಸಮಸ್ತ ಪೌರಕಾರ್ಯಗಳನ್ನು ಕಾಲಕಾಲಕ್ಕೆ ಸರಿಯಾಗಿ (ಕ್ಲೃಪ್ತಕಾಲದಲ್ಲಿ) ನಡೆಸುತ್ತಬರುತ್ತಿದ್ದನು. ಚಾರುಮೂರ್ತಿಯಾದ. ವಿದೇಹರಾಜನ ಸುತೆ ವೈದೇಹಿಯಲ್ಲಿ ಸಾಂಸಾರಿಕ ಸುಖವನ್ನು ಅನುಭವಿಸುತ್ತ ಆದರ್ಶಗೃಹಸ್ಥನಾಗಿದ್ದನು. ಸಮಸ್ತಭೋಗಾಭಿಲಾಷೆಗೆ ಅನುಗುಣಗಳಾದ ಸೌಂದರ್ಯಗುಣಮಾಧುರ್ಯಗಳ ಖನಿಯಾದ ಚಾರುಗಾತ್ರಿ, ಸಾಕ್ಷಾತ್ ಲಕ್ಷ್ಮೀದೇವಿಯಂತೆ ಅಥವಾ ಮಹಾಲಕ್ಷ್ಮಿಯೇ ಅವತರಿಸಿದಂತಿರುವ ಪಟ್ಟಮಹಿಷಿ ಸೀತೆಯೊಂದಿಗೆ ಸುಖಿಸಿ ಶ್ರೀರಾಮಚಂದ್ರನು ಆಮೋದಪಡೆದನು (ಚಾರುವಪು ತಳೆದು ಲಕ್ಷ್ಮಿಯವತರಿಸಿದಪೊಲಿರುವ ಆ ಸೀತೆಯೊಳು).

ಅನ್ವಯ :—ಸಃ ಕಾಲೇ ಪೌರಕಾರ್ಯಾಣಿ ಸಮೀಕ್ಷ್ಯ ವಿದೇಹಾಧಿಪತೇಃ ದುಹಿತ್ರಾ ಉಪಭೋಗೋತ್ಸುಕಯಾ ತದೀಯಮ್ ಚಾರುವಪುಃ ಕೃತ್ವಾ ಲಕ್ಷ್ಮ್ಯಾ ಇವ ಉಪಸ್ಥಿತಃ ರೇಮೇ ॥

ಕಾಲೇ = ಅವಸರೇ—ಪೌರಾಣಾಂ ಕಾರ್ಯಾಣಿ=ಪ್ರಯೋಜನಾನಿ—ವಿದೇಹಾಧಿಪತೇ ದುಹಿತ್ರಾ = ಸೀತಯಾ—ಚಾರುವಪುಃ ಕೃತ್ವಾ ಸ್ಥಿತಯಾ ಲಕ್ಷ್ಮ್ಯೇವ ಉಪಸ್ಥಿತಃ = ಸಂಗತಃ ಸನ್—ರೇಮೇ = "ಉಪಸ್ಥಾನಂ ತು ಸಂಗತಿಃ" ಇತಿ ಯಾದವಃ ॥

**25.** **ತಯೋರ್ಯಥಾ ಪ್ರಾರ್ಥಿತಮಿಂದ್ರಿಯಾರ್ಥಾನ್ ।**
**ಆಸೇದುಷೋಃ ಸದ್ಮಸು ಚಿತ್ರವತ್ಸು ॥**
**ಪ್ರಾಪ್ತಾನಿ ದುಃಖಾನಪಿ ದಂಡಕೇಷು ।**
**ಸಂಚಿಂತ್ಯಮಾನಾನಿ ಸುಖಾನ್ಯಭೂವನ್ ॥ ೨೫ ॥**

ಆ ರಾಜದಂಪತಿಗಳು (ಸೀತಾರಾಮರು) ದಂಡಕಾರಣ್ಯದಲ್ಲಿ ತಾವು ಅನುಭವಿಸಿದ ಕಷ್ಟಕೋಟಲೆಗಳನ್ನು ತೋರ್ವ ಚಿತ್ರಪಟಗಳಿಂದ ಅಲಂಕೃತವಾದ ರಾಜಭವನಗಳಲ್ಲಿ ಇಂದ್ರಿಯಸುಖವನ್ನು ಅನುಭವಿಸುತ್ತಲಿದ್ದರು. ಅವರು ಈ ಹಿಂದೆ ದಂಡಕಾರಣ್ಯದಲ್ಲಿ ಅನುಭವಿಸಿದ ಕಷ್ಟಗಳನ್ನು ಆ ಚಿತ್ರಪಟಗಳನ್ನು ನೋಡಿದಾಕ್ಷಣ ಅವರು ಕೂಡಲೇ ಸ್ಮರಿಸಿಕೊಂಡರೂ ಅವರಿಗೆ ದುಃಖವೆನಿಸಲಿಲ್ಲ. ಅವರಿಗೆ ಹಿಂದಿನ ಕಹಿನೆನಪುಗಳು ಸವಿನೆನಪುಗಳಾಗಿಯೇ ಉಳಿದುವು. ಅವರಿಗೆ ಬೇಸರವೆನಿಸಲಿಲ್ಲ. ಆ ದುಃಖವು ಸೀತಾರಾಘವರಿಗೆ ಸುಖವಾಗಿ, ಸುಖಪ್ರದವಾಗಿ, ಆಪ್ಯಾಯಮಾನವಾಗಿ ಕಂಡಿತು.

ಅನ್ವಯ :—ಚಿತ್ರವತ್ಸು ಸದ್ಮಸು ಯಥಾ ಪ್ರಾರ್ಥಿತಂ ಇಂದ್ರಿಯಾರ್ಥಾನ್ ಆಸೇದುಷೋಃ ತಯೋಃ ದಂಡಕೇಷು ಪ್ರಾಪ್ತಾನಿ ದುಃಖಾನಿ ಅಪಿ ಸಂಚಿಂತ್ಯಮಾನಾನಿ ಸುಖಾನಿ ಅಭೂವನ್ ॥

ಚಿತ್ರವತ್ಸು = ವನವಾಸವೃತ್ತಾಂತಾಲೇಖ್ಯವತ್ಸು—ಯಥೇಷ್ಟಮಿಂದ್ರಿಯಾರ್ಥಾನಿ = ಇಂದ್ರಿಯವಿಷಯಾಞ್ ಶಬ್ದಾದೀನಾ ಸೇದುಷೋಃ ಪ್ರಾಪ್ತವತೋಸ್ತಯೋಃ—ಪ್ರಾಪ್ತಾನಿ ದುಃಖಾನ್ಯಪಿ ವಿರಹವಿಲಾಪಾನ್ವೇಷಣಾದೀನಿ—ಸಂಚಿಂತ್ಯಮಾನಾನಿ = ಸ್ಮರ್ಯಮಾಣಾನಿ ॥

ಯಥಾ ಪ್ರಾರ್ಥಿತವಮ್ = ಪ್ರಾರ್ಥಿತವಮ್ ಅನತಿಕ್ರಮ್ಯ (ಅವ್ಯಯೀಭಾವಸಮಾಸ)= ಇಂದ್ರಿಯಾರ್ಥಂಗಳನು ಮನವೆಳಸಿದಂದದೊಳಂ.

26. **ಅಥಾಧಿಕಸ್ನಿಗ್ಧವಿಲೋಚನೇನ ।**
**ಮುಖೇನ ಸೀತಾ ಶರಪಾಂಡುರೇಣ ॥**
**ಆನಂದಯಿತ್ರೀ ಪರಿಣೇತುರಾಸೀತ್ ।**
**ಅನಕ್ಷರವ್ಯಂಜಿತದೋಹದೇನ ॥ ೨೬ ॥**

ಆ ಬಳಿಕ ಸೀತೆಯು ಗರ್ಭವತಿಯಾಗಿ ಗರ್ಭಲಕ್ಷಣಗಳನ್ನು ತಳೆದಳು. ಕಣ್ಣುಗಳು ತುಸು ಬಿಳಿಚಿಕೊಂಡು ಶರತ್ತೃಣದ ಬಣ್ಣದಂತೆ ಕಂಡುವು. ಮುಖಪದ್ಮವು ಬೆಳ್ಪಡರಿ ಶರಶಂಭ್ರ ವದನೆಯಾಗಿ ತೋರ್ದಳು (ಸಂಸ್ನಿಗ್ಧನೇತ್ರದೊಳು ಶರಶಂಭ್ರವದನದೊಳು). ಹೀಗೆ ಗರ್ಭಸಲ್ಲಕ್ಷಣದ ಅಂದದಿಂದ ಕಾಣಿಸುತ್ತಿರುವ ಅವನಿಜಾತೆಯು ಬಾಯ್ಬಿಟ್ಟು ಹೇಳದೆ ಇದ್ದರೂ, ಎಲ್ಲವನ್ನೂ ಸೂಚಿಸುತ್ತ, ತಾನು ಗರ್ಭಿಣಿಯೆಂಬುದನ್ನು ಶ್ರೀರಾಮಚಂದ್ರನು ಅರಿಯುವಂತೆ ಮಾಡುತ್ತ ಆತನ ಆನಂದವನ್ನು ಅಧಿಕಗೊಳಿಸುತ್ತಲಿದ್ದಳು. ಪತಿಯ ಹೃದಯಕ್ಕೆ ಹರ್ಷದ ಹೊನಲನ್ನೇ (ಒಲವನ್ನು, ಅಲಂಪನ್ನು) ಹರಿಸಿದಳು.

ಅನ್ವಯ :—ಅಥ ಸೀತಾ ಅಧಿಕಸ್ನಿಗ್ಧವಿಲೋಚನೇನ ಶರಪಾಂಡುರೇಣ ಅನಕ್ಷರ ವ್ಯಂಜಿತದೋಹದೇನ ಮುಖೇನ ಪರಿಣೇತುಃ ಆನಂದಯಿತ್ರೀ ಆಸೀತ್ ॥

ಅಧಿಕಸ್ನಿಗ್ಧವಿಲೋಚನೇನಾತ್ಯಂತಮಸೃಣಲೋಚನೇನ — ಶರವತ್ತೃಣವಿಶೇಷವತ್ =ಪಾಂಡುರೇಣಾತ್ ಏವ—ಅನಕ್ಷರಮವಾಗ್ ವ್ಯಾಪಾರಂ ಯಥಾ ಭವತಿ ತಥಾ ವ್ಯಂಜಿತಂ ದೋಹದಂ=ಗರ್ಭೋ ಯೇನ ತೇನ ಮುಖೇನ ಪರಿಣೇತುಃ ಪತ್ಯುರಾನಂದಯಿತ್ರ್ಯಾಸೀತ್ —ಅನಕ್ಷರಂ ಯಥಾ ಭವತಿ ತಥಾ ವ್ಯಂಜಿತಂ ದೋಹದಂ ಯೇನ ತತ್ (ಮುಖಂ) = ಮಾತಿಲ್ಲದೆ ಬಯಕೆಯ ಸೂಚನೆಯನ್ನು ನೀಡುವ (ಮುಖಭಾವ, ಮಾತಿಲ್ಲದೆ ಕೆಲಸ ಎಂಬಂತೆ), ಸಂಸ್ನಿಗ್ಧನೇತ್ರದೊಳು = ಶರಶಂಭ್ರವದನದೊಳಂ.

27. **ತಾಮಂಕಮಾರೋಪ್ಯ ಕೃಶಾಂಗಯಷ್ಟಿಂ ।**
**ವರ್ಣಾಂತರಾಕ್ರಾಂತ ಪಯೋಧರಾಗ್ರಾಮ್ ॥**
**ವಿಲಜ್ಜಮಾನಾಂ ರಹಸಿ ಪ್ರತೀತಃ ।**
**ಪಪ್ರಚ್ಛ ರಾಮಾಂ ರಮಣೋಽಭಿಲಾಷಮ್ ॥ ೨೭ ॥**

ಒಂದು ದಿನ ಕೃಶಳಾದ ತನ್ನ ಪತ್ನಿಯನ್ನು ತೊಡೆಯಲ್ಲಿ ಕುಳ್ಳಿರಿಸಿ ಅವಳ ದೋಹದ ವೇನೆಂದು ಶ್ರೀರಾಮಚಂದ್ರನು ಏಕಾಂತದಲ್ಲಿ ಕೇಳಿದನು. ಕೃಶಾಂಗಳಾಗಿ ಮೆರೆಯುತ್ತ, ನೀಲಬಣ್ಣಕ್ಕೆ ತಿರುಗಿದ ಕುಚಚೂಚುಕವುಳ್ಳ, ಪೀನಪಯೋಧರಗಳಿಂದ ಕೂಡಿದ (ವರ್ಣಾಂ ತರಾಕ್ರಾಂತಪೀನಸ್ತನಾಗ್ರೆಯನು) ನಾಚಿಕೆಯ ಸ್ವಭಾವದವಳಾದ ತನ್ನ ಇನಿಯಳನ್ನು (ಚಾರುತರಕಾರ್ಶ್ಯೆಯನು ಪರಲಜ್ಜಿತೆಯನು) ತನ್ನ ತೊಡೆಯಲ್ಲಿ ಕುಳ್ಳಿರಿಸಿ ಏಕಾಂತದಲ್ಲಿ ಅವಳ ಬಯಕೆ (ಅಭಿಲಾಷೆ, ಮನೋರಥ) ಏನೆಂದು ಹೇಳು ಎಂದು ಕೇಳಿದನು. (ಗರ್ಭ

ದೋಷವನ್ನು ಹೋಗಾಡಿಸಲು ದೋಹದವೇನೆಂದು ಕೇಳಿ ತಿಳಿಯಬೇಕೆಂದು ಶಾಸ್ತ್ರ ವಚನವಿದೆ).

ಅನ್ವಯ :—ಪ್ರತೀತಃ ರಮಣಃ ಕೃಶಾಂಗಯಷ್ಟಿಂ ವರ್ಣಾಂತರಾಕ್ರಾಂತಪಯೋಧರಾಗ್ರಾಂ ವಿಲಜ್ಜಮಾನಾಂ ತಾಂ ರಾಮಾಂ ರಹಸಿ ಅಂಕಂ ಆರೋಪ್ಯ ಅಭಿಲಾಷಂ ಪಪ್ರಚ್ಛ ॥

ರಮಯತೀತಿ = ರಮಣಃ—ನೀಲಿಮ್ನಾ=ಆಕ್ರಾಂತಪಯೋಧರಾಗ್ರಾಮ್—ಅಭಿಲಾಷಂ = ಮನೋರಥಂ—ಪಪ್ರಚ್ಛ — "ಏತಶ್ಚ ದೋಹದಸ್ಯಾಗ್ರದಾನೇನ ಗರ್ಭೋಷಮ ವಾಪ್ನುವಾತ್" ಇತಿ ಶಾಸ್ತ್ರಾತ್ ॥

**28. ಸಾ ದಷ್ಟನೀವಾರಬಲೀನಿ ಹಿಂಸ್ರೈಃ ।**
**ಸಂಬದ್ಧವೈಖಾನಸಕನ್ಯಕಾನಿ ॥**
**ಇಯೇಷ ಭೂಯಃ ಕುಶವಂತಿ ಗಂತುಂ ।**
**ಭಾಗೀರಥೀತೀರತಪೋವನಾನಿ ॥ ೨೮ ॥**

ಅಲ್ಲಿ ಆ ಭಾಗೀರಥೀ ನದಿಯ ತೀರದೆಡೆಯಲ್ಲಿ, ಕುಶದರ್ಭೆ ಮೊದಲಾದ ತೃಣಗಳು ಹುಲುಸಾಗಿ ಬೆಳೆದಿರುವಲ್ಲಿ, ಎಲ್ಲಿ ವೈಖಾನಸರ, ಋಷಿಮುನಿಗಳ ವಧುಗಳು, ಋಷಿ ಪತ್ನಿಯರು, ಋಷಿಕನ್ಯೆಯರು, ಮುನಿಸುತೆಯರು ಇರುವಲ್ಲಿ, ಎಲ್ಲಿ ನೀವಾರಧಾನ್ಯವನ್ನು ಬೆಳೆಸುವರೋ (ದುಷ್ಟಸತ್ವಗಳಗಿದ ನೀವಾರಬಲಿಯಿರುವ), ಎಲ್ಲಿ ನೀವಾರಧಾನ್ಯಗಳನ್ನು ಕಾಡುಮೃಗಗಳು ಹಿಂಡುಹಿಂಡಾಗಿ ಬಂದು ಮೆಲ್ಲುತ್ತಿರುವುವೋ, ಎಲ್ಲಿ ಋಷಿಪುತ್ರಿಯರು ತನ್ನನ್ನು ಸುತ್ತುಗಟ್ಟಿ ಪ್ರೀತಿಯಿಂದ ಮಾತಾಡಿಸಿ, ಸ್ನೇಹಾಭಿಲಾಷೆಯಿಂದ ಕುಶಲಪ್ರಶ್ನೆ ಯನ್ನು ಕೇಳುವಲ್ಲಿ, ಅಂತಹ ಸುಂದರವಾದ ಭವ್ಯತಪೋವನಭೂಮಿಗೆ (ಪುಣ್ಯಾಶ್ರಮ ಗಳಿಗೆ ಭೇಟಿಯಿತ್ತು) ಹೋಗಿ ಸಾಧುಸಂತರನ್ನು ಸಂದರ್ಶಿಸಿ ಆಶೀರ್ವಾದಪಡೆದು ಬರುವ ಸದಿಚ್ಛೆಯನ್ನು ಭೂಜಾತೆ (ಮೇದಿನಿಯ ಸುತೆ, ಆ ಭವ್ಯಭಾರತದ ರಾಣಿ) ವ್ಯಕ್ತ ಪಡಿಸಿದಳು.

ಅನ್ವಯ :—ಸಾ ಹಿಂಸ್ರೈಃ ದಷ್ಟನೀವಾರಬಲೀನಿ ಸಂಬದ್ಧವೈಖಾನಸಕನ್ಯಕಾನಿ ಕುಶವಂತಿ ಭಾಗೀರಥೀತೀರತಪೋವನಾನಿ ಭೂಯಃ ಗಂತುಂ ಇಯೇಷ ॥

ಸಾ ಸೀತಾ ಹಿಂಸ್ರೈರ್ದಷ್ಟಾ ನೀವಾರ ಏವ ಬಲಯೋ ಯೇಷಾಂ ತಾನಿ—ಬಲಿಃ = ತಿರ್ಯಗ್‌ಭಿಕ್ಷುಕಾದಿ ದಾನಂ — ಸಂಬದ್ಧಾಃ = ಕೃತಸಂಬಂಧಾಃ, ಕೃತಸಖ್ಯಾ — ವೈಖಾನಸಾನಾಂ ಕನ್ಯಕಾ—ಸಾ ದಷ್ಟನೀವಾರಬಲೀನಿ ಹಿಂಸ್ರೈಃ = ದುಷ್ಟಸತ್ವಗಳಡಗಿದ ನೀವಾರ ಬಲಿಯಿರುವ—ಕುಶವನ್ನು ಭಾಗಿರಥೀತೀರತಪೋವನಾನಿ ಭೂಯಃ = ಕುಶವನ್ನು ಬಾಗೀರಥೀತೀರದೊಳು ಮೆರೆವ.

**29. ತಸ್ಯೈ ಪ್ರತಿಶ್ರುತ್ಯ ರಘುಪ್ರವೀರಃ ।**
**ತದೀಪ್ಸಿತಂ ಪಾರ್ಶ್ವಚರಾನುಯಾತಃ ॥**

**ಆಲೋಕಯಿಷ್ಯನ್ ಮುದಿತಾಮಯೋಧ್ಯಾಂ ।**
**ಪ್ರಾಸಾದಮಭ್ರಂಲಿಹಮಾರುರೋಹ ॥ ೨೯ ॥**

ಆ ರಘುವೀರನು ತನ್ನ ಸತಿಗೆ ಅವಳ ಮನೋರಥವನ್ನು (ಇಚ್ಛೆಯನ್ನು) ಪೂರೈಸುವುದಾಗಿ ವಚನವಿತ್ತನು. ಆ ಬಳಿಕ ಆ ನೃಪಕುಲಲಲಾಮನು ಮುದವಾಂತು ತನ್ನ ಆಳ್ವಿಕೆಯಲ್ಲಿ ಸೌಭಾಗ್ಯದ ಶಿಖರವನ್ನೇರಿದ ತನ್ನ ಪ್ರೀತಿಯ ರಾಜಧಾನಿಯನ್ನು ನೋಡುವೆನೆಂದು ಬಗೆದು ತನ್ನ ಅನುಚರರ ಜೊತೆಯಲ್ಲಿ ಉನ್ನತವಾದ ಪ್ರಾಸಾದವನ್ನು ಏರಿದನು. ಆ ಸೌಧವು ಅತ್ಯಂತ ಎತ್ತರವಾಗಿದ್ದು ಅಂತರಿಕ್ಷವನ್ನು ಮುಟ್ಟುವಂತಿತ್ತು ಅಥವಾ ಗಗನವನ್ನು ಚುಂಬಿಸುತ್ತಿತ್ತು (ಗಗನಚುಂಬಿ). ನಭಕೆಣೆವ ಸೌಧಾಗ್ರಕೇರಿದನು ನಲಿದು.

ಅನ್ವಯ:—ರಘುಪ್ರವೀರಃ ತಸ್ಯೈ ತದೀಪ್ಸಿತಂ ಪ್ರತಿಶ್ರುತ್ಯ ಪಾರ್ಶ್ವಚರೈಃ ಅನುಯಾತಃ ಮುದಿತಾಂ ಅಯೋಧ್ಯಾಂ ಅವಲೋಕಯಿಷ್ಯನ್ ಅಭ್ರಂಲಿಹಂ ಪ್ರಾಸಾದಂ ಆರುರೋಹ ॥

ರಘುಪ್ರವೀರೋ = ರಾಮಸ್ತಸ್ಯೈ—ಪೂರ್ವೋಕ್ತವಿಪ್ಸಿತಂ = ಮನೋರಥಂ—ಪ್ರತಿಶ್ರುತ್ಯ = ಅಲೋಕಯಿಷ್ಯನ್ = ನೋಳ್ಪ ಕತದಿಂದ—ಅಭ್ರಂ ಲೇಢೀತ್ಯಭ್ರಂಲಿಹಮಭ್ರಂಕಷಂ—ವಹಾಭ್ರೇ ಲಿಹಃ'' (ಪಾಣಿನಿ) ಇತಿ ಖಶ್ ಪ್ರತ್ಯಯಃ—ಅಭ್ರಂ ಪದವು ಲಿಹ ಧಾತುವಿನೊಡನೆ ಸೇರಿದಾಗ ಖಶ್ (ಅ)ಪ್ರತ್ಯಯವು ಸೇರುತ್ತದೆ. ಅಭ್ರಂ ಲೇಢಿ ಇತಿ ಅಭ್ರಂಲಿಹಃ । ಪ್ರತಿಶ್ರುತ್ಯ = ಮಾತುಕೊಟ್ಟು.

**30. ಋದ್ಧಾಪಣಂ ರಾಜಪಥಂ ಸ ಪಶ್ಯನ್ ।**
**ವಿಗಾಹ್ಯಮಾನಾಂ ಸರಯೂಂ ಚ ನೌಭಿಃ ॥**
**ವಿಲಾಸಿಭಿಶ್ಚಾಧ್ಯುಷಿತಾನಿ ಪೌರೈಃ ।**
**ಪುರೋಪಕಂಠೋಪವನಾನಿ ರೇಮೇ ॥ ೩೦ ॥**

ಆ ರಾಜವಮೌಳಿಯು ಅಯೋಧ್ಯೆಯ ವಿಸ್ತಾರವಾದ ಹೆದ್ದಾರಿಗಳನ್ನು, ರಾಜಪಥಗಳನ್ನು ನೋಡಿದನು. ಆ ರಾಜಬೀದಿಗಳ (ರಾಜಮಾರ್ಗಗಳ) ಎರಡೂ ಕಡೆಗಳಲ್ಲೂ ಸಮೃದ್ಧವಾದ ಅಂಗಡಿಗಳ ಸಾಲು ಕಾಣಿಸುತ್ತಿತ್ತು (ಋದ್ಧಾಪಣಗಳಿಂದೆಸೆವ). ಅಂಗಡಿಗಳು, ಮಹಲುಗಳು, ಸಹಕಾರಭವನಗಳು, ಕಲಾಭವನಗಳು, ಗುಡಿಗೋಪುರಗಳು ಕಿಕ್ಕಿರಿದು ಎಸೆಯುತ್ತಿದ್ದುವು. ಅಲ್ಲಿ ಅಯೋಧ್ಯೆಯ ಬಳಿಯ ಸಾಗರಗಳಿಗೆ ಹೋಗಿಬರುವ ನೌಕೆಗಳಿಂದ ವಿಜೃಂಭಿಸುತ್ತಿರುವ ಸುಂದರವಾದ ಸರಯೂ ನದಿಯು (ನೌಲುಲಿತ ಸರಯುವನು) ಹರಿಯುತ್ತಿತ್ತು. ನಗರದ ಹೊರಗಡೆ ಉಪವನಗಳು (ನಗರೋಪಕಂಠದಿಂದುಪವನದೊಳು) ವಿರಾಜಿಸುತ್ತಲಿದ್ದುವು. ಅಲ್ಲಿ ನಗರದ ಉದ್ಯಾನಗಳಲ್ಲಿ ಪುರದ ವಿಲಾಸಿನಿಯರು ತಮ್ಮ ಪುರುಷರೊಂದಿಗೆ ರಮಿಸುತ್ತಿದ್ದರು.

ಅನ್ವಯ:—ಸಃ ಋದ್ಧಾಪಣಂ ರಾಜಪಥಂ ನೌಭಿಃ ವಿಗಾಹ್ಯಮಾನಾಂ ಸರಯೂಂ ಚ ವಿಲಾಸಿಭಿಃ ಪೌರೈಃ ಅಧ್ಯುಷಿತಾನಿ ಪುರೋಪಕಂಠೋಪವನಾನಿ ಚ ಪಶ್ಯನ್ ರೇಮೇ ॥

ಋದ್ಧಾಃ=ಸಮೃದ್ಧಾ—ಆಪಣಾಃ=ಪಣ್ಯಭೂಮಯೋ ಯಸ್ಮಿಂಸ್ತಂ ರಾಜಪಥಮ್—ನೌಭಿಃ=ಸಮುದ್ರವಾಹಿನೀಭಿರ್ವಿಗಾಹ್ಯಮಾನಾಂ ಸರಯೂಂ ಚ—ಪೌರೈಃ ವಿಲಾಸಿಭಿಃ

—ವಿಲಾಸಿನಶ್ಚ ವಿಲಾಸಿನ್ಯಶ್ಚ ವಿಲಾಸಿನಃ—"ಪುಮಾನ್‌ಸ್ತ್ರಿಯಾ"(ಪಾಣಿನಿ) ಇತ್ಯೇಕಶೇಷಃ —ಋದ್ಧಾಃ ಆಪಣಾಃ ಯಸ್ಮಿನ್ ತಮ್ (ರಾಜಪಥಂ)=ಸಮೃದ್ಧವಾದ ಅಂಗಡಿಗಳಿಂದ ತುಂಬಿದ (ದ್ವಂದ್ವಸಮಾಸ)—ವಿಲಾಸಿನಃ ವಿಲಾಸಿನ್ಯಃ ಚ ವಿಲಾಸಿನಃ ॥

**31. ಸ ಕಿಂ ವದಂತೀಂ ವದತಾಂ ಪುರೋಗಃ ।**
**ಸ್ವವೃತ್ತಮುದ್ದಿಶ್ಯ ವಿಶುದ್ಧವೃತ್ತಃ ॥**
**ಸರ್ಪಾಧಿರಾಜೋರುಭುಜೋಽಪಸರ್ಪಂ ।**
**ಪಪ್ರಚ್ಛ ಭದ್ರಂ ವಿಜಿತಾರಿಭದ್ರಃ ॥ ೩೧ ॥**

ಲೋಕಭದ್ರನಾದ ಶ್ರೀ ರಘುರಾಮಚಂದ್ರನು (ಶ್ರೀರಾಮಭದ್ರನು, ಲೋಕಾಭಿರಾಮನು) ಭದ್ರನೆಂಬ ಗೂಢಚಾರನನ್ನು ಬಳಿಗೆ ಕರೆದು ತನ್ನ ಸ್ವಂತ ವಿಷಯದಲ್ಲಿ (ಆತ್ಮೀಯ, ವೈಯಕ್ತಿಕ) (ಆತ್ಮವೃತ್ತಾಂತವನು) ಅಯೋಧ್ಯೆಯ ನಾಗರಿಕರು ಏನೆಂದು ಆಡಿಕೊಳ್ಳುತ್ತಿದ್ದಾರೆ, ಮುಚ್ಚುಮರೆಯಿಲ್ಲದೆ ಹೇಳು. ತನ್ನ ನಡತೆಯ ಬಗ್ಗೆ, ದಾಂಪತ್ಯದ ಕೌಟುಂಬಿಕ ಜೀವನದ ಬಗ್ಗೆ ತನ್ನನ್ನು ಹೊಗಳುವರೋ, ತೆಗಳುವರೋ ನಿರ್ಭಯವಾಗಿ ನುಡಿ. ತನ್ನನ್ನು ಬಯ್ಯುವರೋ, ಶಪಿಸುವರೋ, ಪೂಜಿಸುವರೋ ಇಲ್ಲವೆ ಲೇವಡಿ ಮಾಡುತ್ತಿರುವರೋ ಏನೆಂದು ಮುಚ್ಚುಮರೆಯಿಲ್ಲದೆ ಹೇಳು. ಹೀಗೆಂದು ವಾಗ್ವೈಭವದ (ಶುಚಿವೃತ್ತನಾ ವಾಗ್ಮಿವರನು) ಶ್ರೀಮಂತವಾದ ಮಧುರವಾಕ್ಯಗಳಿಂದ, ಸರ್ಪರಾಜನಾದ, ಆದಿಶೇಷನಂತೆ, ಭದ್ರವಾದ, ದೀರ್ಘಬಾಹುಭುಜಗಳಿಂದ ಒಪ್ಪುವ, ತನ್ನ ಭುಜಬಲದ ಆಧಿಕ್ಯದಿಂದ ಸಮಸ್ತವೈರಿಗಳನ್ನು ಮಟ್ಟಹಾಕಿದವನು (ವಿಜಿತಾರಿಭದ್ರನು, ಅಳಿಸಿದವನು) ಆದ ಆ ರಘುಕುಲಶ್ರೇಷ್ಠನು ಪ್ರಶ್ನಿಸಿದನು.

ಅನ್ವಯ :—ವದತಾಂ ಪುರೋಗಃ ವಿಶುದ್ಧವೃತ್ತಃ ಸರ್ಪಾಧಿರಾಜೋರುಭುಜಃ ವಿಜಿತಾರಿಭದ್ರಃ ಸಃ ಸ್ವವೃತ್ತಂ ಉದ್ದಿಶ್ಯಭದ್ರಂ ಅಪಸರ್ಪ ಕಿಂ ವದಂತೀಂ ಪಪ್ರಚ್ಛ ॥

ವದತಾಂ = ವಾಗ್ಮಿನಾಂ—ಪುರೋಗಃ=ಶ್ರೇಷ್ಠೋ, ವಿಶುದ್ಧಾತ್ಮಾ—ಸರ್ಪಾಧಿರಾಜಃ =ಶೇಷಃ—ವಿಜಿತಾರಿಭದ್ರೋ = ವಿಜಿತಾರಿಶ್ರೇಷ್ಠಃ ಸ ರಾಮಃ—ಭದ್ರಂ = ಭದ್ರನಾಮಕ ಮಪಸರ್ಪಂ ಚರಂ—ಕಿಂ ವದಂತೀಂ = ಜನವಾದಂ ಪಪ್ರಚ್ಛ—"ಅಪಸ್ಪರಃ ಸ್ಪಶಃ" ಇತಿ "ಕಿಂ ವದಂತೀಂ ಜನಶ್ರುತಿಃ" ಇತಿ ಚಾಮರಃ ॥

**32. ನಿರ್ಬಂಧಪೃಷ್ಟಃ ಸ ಜಗಾದ ಸರ್ವಂ ।**
**ಸ್ತುವಂತಿ ಪೌರಾಶ್ಚರಿತಂ ತ್ವದೀಯಮ್ ॥**
**ಅನ್ಯತ್ರ ರಕ್ಷೋ ಭವನೋಷಿತಾಯಾಃ ।**
**ಪರಿಗ್ರಹಾನ್ಮಾನವದೇವದೇವ್ಯಾಃ ॥ ೩೨ ॥**

ಹೀಗೆ ಆ ಯಶೋಧನನು ತನ್ನ ಗೂಢಚಾರನನ್ನು ಬಹಳ ಬಲವಂತದಿಂದ ಕೇಳಲು ಅವನು ನಡುಗುತ್ತಾ ಹೇಳಿದನು : "ಹೇ ಮಾನವದೇವ, ನಿನ್ನ ಚರಿತೆಯನ್ನು ಲೋಕದಲ್ಲಿರುವ ಸಮಸ್ತ ಜನರೂ ಹೊಗಳುತ್ತಿರುವರು. ಆದರೆ ಅಯೋಧ್ಯೆಯ ನಿವಾಸಿಯಾದ, ಅಯೋಗ್ಯನಾದ (ಅನಾಗರಿಕ) ಪಾಮರನಾದ ಓರ್ವ ಅಗಸನು : "ರಾಕ್ಷಸನ ಭವನದಲ್ಲಿ

ನೆಲಸಿರ್ದ ದೇವಿಯನ್ನು ಕರೆತಂದ ಕಾರ್ಯವನ್ನು ಅನುಚಿತ ಹಾಗೂ ತಪ್ಪೆಂದು, ಲೋಕ ಮರ್ಯಾದೆಗೆ ವಿರುದ್ಧವೆಂದು ಬಾಯಿಗೆ ಬಂದಹಾಗೆ ಬೊಗಳುತ್ತಿದ್ದರು" ಎಂದನು.

ಅನ್ವಯ :—ನಿರ್ಬಂಧಪೃಷ್ಟಃ ಸಃ ಜಗಾದ, ಮಾನವದೇವ, ರಕ್ಷೋಭವನೇ ಉಷಿತಾಯಾಃ ದೇವ್ಯಾಃ ಪರಿಗ್ರಹಾತ್ ಅನ್ಯತ್ರ ತ್ವದೀಯಂ ಸರ್ವಚರಿತಂ ಪೌರಾಃ ಸ್ತುವಂತಿ ॥

ನಿರ್ಬಂಧೇನ = ಆಗ್ರಹೇಣ—ರಕ್ಷೋಭವನ ಉಷಿತಾಯಾ ದೇವ್ಯಾಃ = ಸೀತಾಯಾಃ —ಪರಿಗ್ರಹಾತ್ = ಸ್ವೀಕಾರಾತ್—ಅನ್ಯತ್ರೇತರಾಂಶೇ—ತ್ವದೀಯಂ ಸರ್ವಂ ಚರಿತಂ ಪೌರಾಃ ಸ್ತುವಂತಿ ॥ ನಿರ್ಬಂಧಪೃಷ್ಟಃ = ಭದ್ರನು ವಿಷಯವನ್ನು ತಿಳಿಸಲು ಅನುಮಾನಿಸಿದಾಗ "ಏನೋ ಅಳುಕುತ್ತಿದ್ದಾನೆ" ಎಂದು ತನ್ನ ಬಗ್ಗೆ ಕೆಟ್ಟುದಾದರೂ ಅರಿಯಲು ಕುತೂಹಲದಿಂದ ಒತ್ತಾಯಮಾಡಿದನು. ಮಾನವದೇವಿ = ಜನಗಳೊಡೆಯ—ಅನ್ಯತ್ರ= ಅದನ್ನು ಬಿಟ್ಟು.

33. ಕಲತ್ರನಿಂದಾ ಗುರುಣಾ ಕಿಲೈವಂ ।
ಅಭ್ಯಾಹತಂ ಕೀರ್ತಿವಿಪರ್ಯಯೇಣ ॥
ಅಯೋಘನೇನಾಯ ಇವಾಭಿತಪ್ತಂ ।
ವೈದೇಹಿಬಂಧೋರ್ಹೃದಯಂ ವಿದದ್ರೇ ॥ ೩೩ ॥

ತನ್ನ ಪ್ರಿಯ ಪತ್ನಿಯ ಮೇಲಿನ ದೂಷಣೆಯ ಮಾತುಗಳನ್ನು ಕೇಳಿ ಆ ವೈದೇಹಿ ಬಂಧುವಿನ ಹೃದಯಕ್ಕೆ ಮರ್ಮಾಘಾತವಾಯಿತು. ಆ ಸಂಕಟಕರವಾದ ಲೋಕಾಪವಾದದ ಕ್ಷುಲ್ಲಕ ಮಾತುಗಳನ್ನು ಶ್ರೀರಾಮನು ಸಹಿಸದಾದನು. ಆ ಲೋಕಹೃದಯೀಯ ಹೃದಯವು ವಿದೀರ್ಣವಾಯಿತು. ಹೃದಯವೊಡೆದು ಚೂರುಚೂರಾಯಿತು. ಬಿಸಿಯಾದ ಕಬ್ಬಿಣದ ಸಲಾಕೆಯ ಚಮ್ಮಟಿಕೆಯಿಂದ ಎದೆಗೆ ಬಡಿದಂತಾಯಿತು. ಎದೆಯೊಡೆದು (ಹೃದಯ) ಸೀಳುಸೀಳಾಯಿತು (ನಿಜಭಾರ್ಯೆಯ ಅಪವಾದವೆನುವ ದುರ್ಭರದೊಂದು ಕೀರ್ತಿಯ ವಿಪರ್ಯಯಾಘಾತದೊಳು ನೊಂದು) ತನ್ನ ಕೀರ್ತಿ ಕಳಂಕವಾಯಿತು, ಮಲಿನವಾಯಿತು. ತಾನು ಜೀವಿಸಿಯೂ ನಿಷ್ಫಲವೆಂಬ ಕಟುಸತ್ಯಕ್ಕೆ, ಘೋರ ನಿರ್ಧಾರಕ್ಕೆ ಬಂದನು. "ಪುರುಷಾರ್ಥವಿಲ್ಲದ ಜೀವನವಾಯಿತೇ ?" ಎಂದು ಕಡುನೊಂದನು.

ಅನ್ವಯ :—ಏವಂ ಕಿಲ ಕಲತ್ರನಿಂದಾ ಗುರುಣಾ ಕೀರ್ತಿವಿಪರ್ಯಯೇಣ ಅಭ್ಯಾಹತಂ ವೈದೇಹಿಬಂಧೋಃ ಹೃದಯಂ ಅಯೋಘನೇನ ಅಭಿತಪ್ತಂ ಅಯಃ ಇವ ವಿದದ್ರೇ ॥

ಕಲತ್ರನಿಂದಯಾ ಗುರುಣಾ = ದುರ್ವಹೇಣ—ಕೀರ್ತಿವಿಪರ್ಯಯೇ=ಅಪಕೀರ್ತ್ಯಾಽಭ್ಯಾಹತಂ—ವೈದೇಹಿಬಂಧೋ = ವೈದೇಹಿವಲ್ಲಭಸ್ಯ—ಅಯೋಘನೇನಾಭಿತಪ್ತಂ = ಸಂತಪ್ತಮಯ ಇವ—ವಿದದ್ರೇ = ವಿದೀರ್ಣಂ—ವೈದೇಹಿಬಂಧು = ಶ್ರೀರಾಮ ॥

ವೈದೇಹೀ ಪದವು ಸಮಾಸದಲ್ಲಿ ಹ್ರಸ್ವವಾಗಿ ವೈದೇಹಿಬಂಧುಃ ಎಂದಾಗಿದೆ. ವಿದದ್ರೇ =ಒಡೆದು ಚೂರಾಗು—ವಿ + ದೃ ಲಿಟ್ ರೂಪ—ಕೀರ್ತಿವಿಪರ್ಯಯಃ = ಅಪಕೀರ್ತಿ ॥

34. ಕಿಮಾತ್ಮನಿರ್ವಾದ ಕಥಾಮುಪೇಕ್ಷೇ ।
ಜಾಯಾಮದೋಷಾಮುತ ಸಂತ್ಯಜಾಮಿ ॥
ಇತ್ಯೇಕಪಕ್ಷಾಶ್ರಯವಿಕ್ಲವತ್ವಾತ್ ।
ಆಸೀತ್ಸ ಡೋಲಾಚಲಚಿತ್ತವೃತ್ತಿಃ ॥ ೩೪ ॥

"ಹಾಯ್ ! ನಾನೀಗ ಏನು ಮಾಡಲಿ ? ಅವಹೇಳನದ, ಅವಮರ್ಯಾದೆಯ ಮಾತುಗಳನ್ನು ಕೇಳುತ್ತಲೇ ಇರಲೇನು ಅಥವಾ ಉಪೇಕ್ಷಿಸಲೇನು ? ನಿರ್ದೋಷಿಯಾದ ಪ್ರಿಯ ಪತ್ನಿ ಜಾನಕಿಯನ್ನು (ನಿರ್ದೋಷಿ ಜಾಯೆಯನ್ನು ನಾನು ತ್ಯಜಿಸಿಬಿಡಲೆ) ತ್ಯಜಿಸಲೇನು ?" ತಾನು ಏನನ್ನು ಮಾಡಲಿ, ಏನನ್ನು ಮಾಡದೆ ಇರಲಿ ಎಂಬುದರ ಬಗ್ಗೆ ನಿಶ್ಚಯವಾದ, ನಿಖರವಾದ ನಿರ್ಧಾರವನ್ನು ಕೈಗೊಳ್ಳಲಾರದೆ ಶ್ರೀರಾಮಚಂದ್ರನು ಡೋಲಾಯಮಾನನಾದನು. ಅವನ ಚಿತ್ತವೃತ್ತಿಯು ಚಂಚಲವಾಯಿತು. ತಾನು ಏಕಪಕ್ಷೀಯವಾಗಿ ನಿರ್ಧಾರವನ್ನು ಕೈಗೊಳ್ಳಲಿಯೋ, ಬೇಡವೋ ? ಲೋಕಾಪವಾದವನ್ನು ಹೇಗೆ ಹೋಗಾಡಿಸಲಿ ? ಎಂಬುದನ್ನು ತಿಳಿಯದೆ ಚಂಚಲಮನಸ್ಕನಾಗಿ (ತೂಗುಯ್ಯಾಲೆಯಂತೆ ಮನಸುಳ್ಳವನಾಗಿ) ದೀರ್ಘವಾಗಿ ಯೋಚಿಸತೊಡಗಿದನು.

ಅನ್ವಯ :— "ಆತ್ಮನಿರ್ವಾದಕಥಾಂ ಕಿಂ ಉಪೇಕ್ಷೇ ; ಉತ ಅದೋಷಾಂ ಜಾಯಾಂ ಸಂತ್ಯಜಾಮಿ" ಇತಿ ಏಕಪಕ್ಷಾಶ್ರಯವಿಕ್ಲವತ್ವಾತ್ ಸಃ ಡೋಲಾಚಲಚಿತ್ತವೃತ್ತಿಃ ಆಸೀತ್ ॥

ಆತ್ಮನೋ ನಿರ್ವಾದೋ = ಅಪವಾದ ಏವ ಕಥಾ ತಾಂ ಕಿಮುಪೇಕ್ಷೇ ? ಉತ್ ಅದೋಷಾಂ = ಸಾಧ್ವೀಂ ಜಾಯಾಂ ಸಂತ್ಯಜಾಮಿ—ಇತ್ಯೇಕಪಕ್ಷಾಶ್ರಯೋ = ಅನ್ಯತರ ಪಕ್ಷಪರಿಗ್ರಹೇ—ವಿಕ್ಲವತ್ವಾದಪರಿಚ್ಛೇತೃತ್ವಾತ್ಸ ರಾಮೋ ಡೋಲೇವ ಚಲಾಚಿತ್ತವೃತ್ತಿರ್ಯಸ್ಯ ಸ ಆಸೀತ್ ॥ ಡೋಲಾ ಇವ ಚಲಾಚಿತ್ತವೃತ್ತಿಃ ಯಸ್ಯ ಸಃ ಡೋಲಾಚಲಚಿತ್ತವೃತ್ತಿಃ = ತೂಗುಯ್ಯಾಲೆಯಂತೆ ಮನಸುಳ್ಳ—ಆತ್ಮನಃ ನಿರ್ವಾದಃ ಏವ ಕಥಾ= ಆತ್ಮನಿರ್ವಾದಕಥಾ, ತಾಮ್ = ತನ್ನ ಅಪವಾದಕಥೆಯನ್ನು.

35. ನಿಶ್ಚಿತ್ಯ ಚಾನನ್ಯನಿವೃತ್ತಿವಾಚ್ಯಂ ।
ತ್ಯಾಗೇನ ಪತ್ನ್ಯಾಃ ಪರಿಮಾಷ್ರ್ಟುಮೈಚ್ಛತ್ ॥
ಅಪಿ ಸ್ವದೇಹಾತ್ ಕಿಮುತೇಂದ್ರಿಯಾರ್ಥಾತ್ ।
ಯಶೋಧನಾನಾಂ ಹಿ ಯಶೋ ಗರೀಯಃ ॥ ೩೫ ॥

ಇದೀಗ ಶ್ರೀರಾಮಚಂದ್ರನಿಗೆ ಖಚಿತವಾಯಿತು. ತನಗೆ ಬಂದ ಅಪಕೀರ್ತಿಯನ್ನು ಹೋಗಲಾಡಿಸಲು ಪತ್ನಿಯನ್ನು ಪರಿತ್ಯಾಗಮಾಡುವುದೊಂದೇ ಮಾರ್ಗವೆಂದು ತಿಳಿದು ಕಠಿಣಮನಸ್ಕನಾದನು. ಯಾಕೆಂದರೆ ಅವನು ಯಶೋಧನರಾದವರು (ಕೀರ್ತಿಧನನೆನಲಿತರ ಸುಖದಿಂದಲೇನು) ತಮ್ಮ ದೇಹಸುಖಕ್ಕಾಗಲಿ, ಇಂದ್ರಿಯಸುಖಕ್ಕಾಗಲಿ ಬಯಸರು. ಕೊನೆಗೆ ತಮ್ಮ ಪ್ರಾಣವನ್ನಾದರೂ ಅರ್ಪಿಸಲು ಕಟಿಬದ್ಧರಾಗುವರು (ನಿಜತನುವಿನಿಂ ಹಿರಿದು ಕೀರ್ತಿ). ಅವರಿಗೆ ಮಾನಮರ್ಯಾದೆ, ಗೌರವ, ಯಶಸ್ಸು, ಕೀರ್ತಿಸಂಪಾದನೆಯೇ ಹಿರಿದು. ಇದಕ್ಕಿಂತ ಹಿರಿದಾದುದು ಲೋಕದಲ್ಲಿ ಬೇರಾವುದಿದೆ ? ಅದುವೇ ಗರೀಯ

ಮಾದುದು. ಪ್ರಾಣವೂ ತೃಣಸಮಾನ, ಅದುವೇ ಗರಿಷ್ಠ ಹಾಗೂ ವರಿಷ್ಠ, ಗುರುತರ ಮಾದುದು.

ಅನ್ವಯಃ :—ವಾಚ್ಯಂ ಅನನ್ಯನಿವೃತ್ತಿ (ಇತಿ) ನಿಶ್ಚಿತ್ಯ ಪತ್ನ್ಯಾಃ ತ್ಯಾಗೇನ ಪರಿಮಾರ್ಷ್ಟುಂ ಐಚ್ಛತ್, ಹಿ ಯಶೋಧನಾನಾಂ ಸ್ವದೇಹದಪಿ ಯಶಃ ಗರೀಯಃ ಕಿಮುತ ಇಂದ್ರಿಯಾರ್ಥಾತ್ ॥

ಕಿಂಚ ವಾಚ್ಯಮಪವಾದಮ್—ನಾಸ್ತ್ಯನ್ಯೇನ ತ್ಯಾಗಾತಿರಿಕ್ತೋಪಾಯೇನ ನಿವೃತ್ತಿರ್ಯಸ್ಯ ತದನನ್ಯನಿವೃತ್ತಿ—ನಿಶ್ಚಿತ್ಯ ಪತ್ನ್ಯಾಸ್ತ್ಯಾಗೇನ ಪರಿಮಾರ್ಷ್ಟುಂ = ಪರಿಹರ್ತುಮೈಚ್ಛತ್—ತಥಾ ಹಿ—ಯಶೋಧನಾನಾಂ ಪುಂಸಾಂ ಸ್ವದೇಹಾದಪಿ ಯಶೋ ಗರೀಯೋ = ಗುರುತರಮ್—ಯಶೋಧನಾನಾಂ ಹಿ ಯಶೋ ಗರೀಯಃ = ಕೀರ್ತಿಯನ್ನು ಉಳಿಸಿ ಕೊಳ್ಳಲು ಯಾವ ತ್ಯಾಗವೂ ಹೆಚ್ಚಲ್ಲ ಎಂಬುದು ಶ್ರೀರಾಮಚಂದ್ರನ ಮನೋದಾರ್ಢ್ಯತೆ (ಅಚಲನಿರ್ಧಾರ).

**36.** **ಸ ಸಂನಿಪಾತ್ಯಾವರಜಾನ್ ಹತೌಜಾಃ ।**
**ತದ್ವಿಕ್ರಿಯಾದರ್ಶನಲುಪ್ತಹರ್ಷಾನ್ ॥**
**ಕೌಲೀನಮಾತ್ಮಾಶ್ರಯಮಾಚಚಕ್ಷೇ ।**
**ತೇಭ್ಯಃ ಪುನಶ್ಚೇದಮುವಾಚ ವಾಕ್ಯಮ್** ॥ ೩೬ ॥

ಆ ಮೂವರು ಸಹೋದರರು ಬಾಡಿದ ಮೊಗದ, ನಿಸ್ತೇಜನಾಗಿರುವ, ಆತ್ಮನಾಶನಾದಂತೆ ತೋರುವ ತಮ್ಮ ಅಣ್ಣನನ್ನು ಕಂಡರು. ಆ ತಮ್ಮಂದಿರು ಅಂತಹ ದೈನ್ಯಾವಸ್ಥೆಯಲ್ಲಿರುವ ಅಣ್ಣನನ್ನು ಕಂಡೊಡನೆ ತಮ್ಮ ಹರ್ಷವನ್ನು ಕಳೆದುಕೊಂಡು ಭಯತಪ್ತರಾದರು. ಆ ಬಳಿಕ ಅಪವಾದದ ಮಾತಿನಿಂದ ಜರ್ಝರಿತನಾದ ರಾಘವೇಂದ್ರನು ಮೆಲ್ಲನೆ ಈ ತೆರನಾಗಿ ತನ್ನ ಅಭಿಪ್ರಾಯವನ್ನು ಹೊರಗೆಡಹಿದನು: ''ನಾಡಮಂದಿಯ ನಿಂದೆ ನಮಗೀಗ ಕೇಡನ್ನು ತಂದಿದೆ. ಜನರು ನನ್ನ ಬಗ್ಗೆ ಹಗುರವಾಗಿ, ತುಚ್ಛವಾಗಿ, ನಿಂದಿಸುತ್ತಾ ಮಾತನಾಡುತ್ತಿರುವರು.''

ಅನ್ವಯ :—ಹತೌಜಾಃ ಸಃ ತಸ್ಯ ವಿಕ್ರಿಯಾದರ್ಶನಲುಪ್ತಹರ್ಷಾನ್ ಅವರಜಾನ್ ಆತ್ಮಾಶ್ರಯಂ ಕೌಲೀನಂ ತೇಭ್ಯಃ ಆಚಚಕ್ಷೇ, ಪುನಃ ಇದಂ ವಾಕ್ಯಂ ಉವಾಚ ॥

ಹತೌಜಾ = ನಿಸ್ತೇಜಸ್ಕಃ—ವಿಕ್ರಿಯಾದರ್ಶನೇನ = ಲುಪ್ತಹರ್ಷಾನವರಜಾನ್—ಸನ್ನಿಪಾತ್ಯ= ಸಮಾಗಮಯ್ಯ—ಆತ್ಮಾಶ್ರಯಂ = ಸ್ವವಿಷಯಕಂ—ಕೌಲೀನಂ = ನಿಂದಾಂ ತೇಭ್ಯ ಆಚಚಕ್ಷೇ—ಆತ್ಮಾ ಆಶ್ರಯಃ ಯಸ್ಯ ತತ್ (ಕೌಲೀನಂ)=ತಾನೇ ಆಶ್ರಯವಾಗಿರುವ (ನಿಂದೆ)-ಹತಂ ಓಜಃ ಯಸ್ಯ ಸಃ ಹತೌಜಾಃ=ತನ್ನ ತೇಜೋವಿಶೇಷವನ್ನು ಕಳೆದುಕೊಂಡ.

**37.** **ರಾಜರ್ಷಿವಂಶಸ್ಯ ರವಿಪ್ರಸೂತೇಃ ।**
**ಉಪಸ್ಥಿತಃ ಪಶ್ಯತ ಕೀದೃಶೋಽಯಮ್ ॥**
**ಮತ್ತಃ ಸದಾಚಾರಶುಚೇಃ ಕಲಂಕಃ ।**
**ಪಯೋದವಾತಾದಿವ ದರ್ಪಣಸ್ಯ** ॥ ೩೭ ॥

"ಹೇ ಅನುಜರಿರಾ, ನಮ್ಮದು ಪ್ರಸಿದ್ಧವಾದ ಸೂರ್ಯವಂಶ. ಪರಿಶುದ್ಧನಾದ ರವಿಯೇ ನಮ್ಮ ಪೂರ್ವಜನು. ನಮ್ಮದು ಸದಾಚಾರಸಂಪನ್ನರಾದ ರಾಜಋಷಿಗಳ ವಂಶ, ಸದಾಚಾರ, ಸದ್ವೃತ್ತಿಗೆ ಈ ಹಿಂದಿನ ರಾಜರ್ಷಿಗಳು ಪ್ರಖ್ಯಾತರೆಂಬುದನ್ನು ನೀವೆಲ್ಲರೂ ಬಲ್ಲಿರಷ್ಟೆ? ಹೇಗೆ ದರ್ಪಣವು (ಕನ್ನಡಿಯು) ಬೀಸುಗಾಳಿಯಿಂದ ಧೂಳಿಡಿದು, ಜಲದ ಕಣಗಳಿಂದ ಮಲಿನವಾಗುವಂತೆ, ಅಡಿಗಡಿಗೆ ಜನರಾಡುವ ಗೇಲಿ(ಪೋಲಿ)ಮಾತಿನಿಂದ, ಅಪಹಾಸ್ಯದ ಕಂಟುಕ (ಚುಟುಕು) ನುಡಿಗಳಿಂದ ನಾನಿಂದು ಅಪವಾದಕ್ಕೆ ಗುರಿಯಾಗಿದ್ದೇನೆ. ನಮ್ಮ ವಂಶಕ್ಕೆ ಕಳಂಕವು ನನ್ನಿಂದ ಉಂಟಾಗಿದೆ ಎಂಬುದನ್ನು ಅರಿತು ಮಾತನಾಡುತ್ತಿರುವೆನು. ಜನಾಪವಾದದ ಭೀತಿ ನನ್ನ ಮನಸ್ಸು, ಹೃದಯಗಳೆರಡನ್ನೂ ಆವರಿಸಿದೆ. ಇಂದಿನ ತನಕ ಪರಿಶುದ್ಧವಾಗಿ ಬಾಳಿರುವ, ವಿಶ್ವವಿಖ್ಯಾತವಾಗಿರುವ ನಮ್ಮ ರಘುವಂಶವು ಇದೀಗ ನನ್ನಿಂದ, ನನ್ನ ದೆಸೆಯಿಂದ ಮಲಿನಗೊಂಡಿದೆ. ಅಪಕೀರ್ತಿ ಹೊಂದಿದೆ. ಇದನ್ನು ಹೇಗೆ ಸಹಿಸಲಿ? ನಿಮ್ಮಾರಿಗೂ ಸಹಿಸಲಾರೆನು. ಇದಕ್ಕೆ ನನ್ನ ನಡತೆಯೇ ಕಾರಣವಲ್ಲವೆ?" (ಒಳ್ಳೆಡೆಯಿಂನತಿಶುದ್ಧ ಮೆನಿಪ್ಪ ಅನ್ವಯದೊಳು).

ಅನ್ವಯ :—ರವಿಪ್ರಸೂತೇಃ ರಾಜರ್ಷಿವಂಶಸ್ಯ ಸದಾಚಾರಶುಚೇಃ ಮತ್ತಃ ದರ್ಪಣಸ್ಯ ಪಯೋದವಾತಾತ್ ಇವ ಕೀದೃಶಃ ಅಯಂ ಕಲಂಕಃ ಉಪಸ್ಥಿತಃ ಪಶ್ಯತ ॥

ರವೇಃ ಪ್ರಸೂತಿರ್ಜನ್ಮ ಯಸ್ಯ ತಸ್ಯ—ರಾಜರ್ಷಿವಂಶಸ್ಯ—ಸದಾಚಾರ = ಶುಚೇಃ ಸದ್ವೃತ್ತಶುದ್ಧಾನ್ ಮತ್ತೋ ಮತ್ಸಕಾಶಾತ್—ಕೀದೃಶೋऽಯಂ = ಕಲಂಕ—ಉಪಸ್ಥಿತಃ = ಪ್ರಾಪ್ತಃ ॥

**38. ಪೌರೇಷು ಸೋऽಹಂ ಬಹುಲೀಭವಂತಂ ।**
**ಅಪಾಂತರಂಗೇಷ್ವಿವ ತೈಲಬಿಂದುಮ್ ॥**
**ಸೋಢುಂ ನ ತತ್ಪೂರ್ವಮವರ್ಣಮೀಶೇ ।**
**ಆಲಾನಿಕಂ ಸ್ಥಾಣುಮಿವ ದ್ವಿಪೇಂದ್ರಃ ॥ ೩೮ ॥**

ನೀರಿನ ತರಂಗದ ಮೇಲೆ ಬಿದ್ದಿರುವ ತೈಲಬಿಂದುವು ನೀರಿನಲ್ಲಿ ಹರಡುವಂತೆ (ನೀರಿನ ತರಂಗದೊಳು ತೈಲಬಿಂದುವದೆಂತು) ಪೌರಜನರ ವದಂತಿಯು ಸರಮಾಲೆಯು ಅಪವಾದವನ್ನು ಬಲಪಡಿಸುತ್ತಾಹೋಗುತ್ತಿದೆ. ಇದು ನಮ್ಮ ವಂಶಕ್ಕೆ ಬಂದ ಕಳಂಕವೆಂದೇ ನನ್ನ ಎಣಿಕೆಯಾಗಿದೆ. ನಾನಿದನ್ನು ಕೇಳಿಯೂ ಕೇಳದಂತೆ ಇರಲಾರೆನು. ನಾನಿನ್ನು ತಾಳಲಾರೆನು. ಎಲೈ ಸೋದರರಿರಾ, ಕಂಬಕ್ಕೆ ಬಿಗಿಯಾಗಿ ಕಟ್ಟಿರುವ ಒಂಟಿಸಲಗನು, ಸರಪಳಿಯನ್ನು ಮತ್ತು ಸ್ತಂಭವನ್ನು ಕಿತ್ತೊಗೆಯಲೆತ್ನಿಸುವಂತೆ (ಮುರಿಯಲು) ನಾನೀಗ ಒಂದು ಕಠಿಣವಾದ ನಿರ್ಣಯವನ್ನು ಕೈಗೊಳ್ಳಲು ನಿರ್ಧರಿಸುವೆನು (ಸಹಿಸದೊಲು ನಾಗೇಂದ್ರನಾಲಾನವದನು).

ಅನ್ವಯ :—ಸಃ ಅಹಂ ಅಪಾಂ ತರಂಗೇಷು ತೈಲಬಿಂದುಂ ಇವ, ಪೌರೇಷು ಬಹುಲೀಭವನ್ತಂ ತತ್—ಪೂರ್ವಂ ಅವರ್ಣಂ ದ್ವಿಪೇಂದ್ರಃ ಆಲಾನಿಕಂ ಸ್ಥಾಣುಂ ಇವ ಸೋಢುಂ ನ ಈಶೇ ॥

ಅಪಾಂತರಂಗೇಷು ತೈಲಬಿಂದುಮಿವ—ಪೌರೇಷು ಬಹುಲೀಭವಂತಂ ಪ್ರಸರಂತಮ್

—ದ್ವಿಪೇಂದ್ರಃ—ಆಲಾನಮೇವಾಲಾನಿಕಮ್—ಸ್ಥಾಣುಂ = ಸ್ತಂಭಮಿವ ಸೋಢುಂ ನೇಶೇ = ನ ಶಕ್ನೋಮಿ—ಸ ಏವ ಪೂರ್ವಃ ಪ್ರಥಮಃ ಯಸ್ಯ ತತ್ಪೂರ್ವ ಆಲಾನಂ ಪ್ರಯೋಜನಂ ಅಸ್ಯ ಅಸ್ತಿ ಇತಿ ಆಲಾನಿಕಮ್—ಆಲಾನಂ = ಆನೆಯನ್ನು ಕಟ್ಟುವ ಸ್ತಂಭ —ಆಲಾನವನ್ನು ಪ್ರಯೋಜನವಾಗುಳ್ಳ ಎಂಬರ್ಥದಲ್ಲಿ ಠಕ್ (ಇಕ್) ಪ್ರತ್ಯಯವು ಸೇರಿ ಆಲಾನಿಕಂ ಎಂದಾಗಿದೆ. ಉಪಮಾಲಂಕಾರ ॥

**39. ತಸ್ಯಾಪನೋದಾಯ ಫಲಪ್ರವೃತ್ತಾ-**
**ಉಪಸ್ಥಿತಾಯಾಮಪಿ ನಿರ್ವ್ಯಪೇಕ್ಷಃ ॥**
**ತ್ಯಕ್ಷ್ಯಾಮಿ ವೈದೇಹಸುತಾಂ ಪುರಸ್ತಾತ್ ।**
**ಸಮುದ್ರನೇಮಿಂ ಪಿತುರಾಜ್ಞಯೇವ ॥ ೩೯ ॥**

"ನನಗೆ ತೋರುವುದು ಒಂದೇ ಒಂದು ಮಾರ್ಗ. ಜನಾಪವಾದದಿಂದ ಹೊರಗುಳಿಯಲು ತುಂಬುಗರ್ಭಿಣಿಯಾದ ನಿರ್ಮಲೆಯೂ, ಪರಿಶುದ್ಧಳೂ, ಸತಿಶಿರೋಮಣಿಯರಾದ, ಸತ್ಯ ಸಂಧಳಾದ ಸಕಲಸ್ತ್ರೀಗುಣಸಂಪನ್ನಳಾದ ವೈದೇಹಿಯನ್ನು ನಾನಿಂದು ತ್ಯಜಿಸಲು (ತ್ಯಾಗ ಮಾಡಲು) ನಿರ್ಧರಿಸಿರುವೆನು. ಒಸರುತಲ್ಲಿರುವ ವಂಶದ ಚಿಗುರನ್ನು (ಕರುಳ ಕುಡಿಯನ್ನು) ನಾನು ಅಲಕ್ಷಿಸುವೆನು (ಆಸನಸಂತಾನಫಲನಿರಂಜನನು). ಹೇಗೆ ನಾನು ಈ ಹಿಂದೆ ಪಿತೃವಚನಪರಿಪಾಲನೆಗೆ (ತಂದೆಯ ಆಜ್ಞೆಗೆ ಕಟ್ಟುಬಿದ್ದು) ವಿಧಿವತ್ತಾಗಿ ನನಗೆ ಸೇರ ಬೇಕಾದ ಸಾಮ್ರಾಜ್ಯಲಕ್ಷ್ಮಿಯನ್ನು ತೊರೆದು ಕಾಡಿಗೆ ನಡೆದೆನೋ (ವನಚರನಾಗಿ) ಆ ತೆರ (ಉದಧಿನೇಮಿಯ ಧರೆಯನು ಉಳಿದಂತೆವೋಲು).

ಅನ್ವಯ :—ತಸ್ಯ ಅಪನೋದಾಯಫಲಪ್ರವೃತ್ತೌ ಉಪಸ್ಥಿತಾಯಾಂ ಅಪಿ ನಿರ್ವ್ಯಪೇಕ್ಷಃ ವೈದೇಹಸುತಾಂ ಪುರಸ್ತಾತ್ ಪಿತುಃ ಆಜ್ಞಯಾ ಸಮುದ್ರನೇಮಿಂ ಇವ ತ್ಯಕ್ಷ್ಯಾಮಿ ॥

ಫಲಪ್ರವೃತ್ತಾವಪತ್ಯೋತ್ಪತ್ತಾ—ಉಪಸ್ಥಿತಾಯಾಂ=ಸತ್ಯಾಮಪಿ—ನಿರ್ವ್ಯಪೇಕ್ಷೋ = ನಿಃಸ್ಪೃಹಃ ಸನ್—ವೈದೇಹಸುತಾಂ—ಪುರಸ್ತಾತ್ = ಪೂರ್ವಸಮುದ್ರನೇಮಿಮ್ = ಸಮುದ್ರನೇಮಿರಿವಸ್ಯಾಃ ಸಾ ಭೂಮಿಃ—ತ್ಯಕ್ಷ್ಯಾಮಿ=ತ್ಯಜಿಸು—ಸಮುದ್ರಃ ಏವ ನೇಮಿಃ ಯಸ್ಯಾಃ ಸಾ ಸಮುದ್ರನೇಮಿಃ (ಭೂಮಿಃ) ಸಮುದ್ರವೇ ಆವರಣವಾಗಿರುವ— ಪುರಸ್ತಾತ್ = ಹಿಂದೆ.

**40. ಅವೈಮಿ ಚೈನಾಮನಘೇತಿ ಕಿಂತು ।**
**ಲೋಕಾಪವಾದೋ ಬಲವಾನ್ ಮತೋ ಮೇ ॥**
**ಛಾಯಾ ಹಿ ಭೂಮೇಃ ಶಶಿನೋ ಮಲಶ್ಚೇ ।**
**ನಾರೋಪಿತಾ ಶುದ್ಧಿಮತಃ ಪ್ರಜಾಭಿಃ ॥ ೪೦ ॥**

"ನನ್ನ ಹೃದಯವಲ್ಲಭೆ, ಸೀತೆ, ಪರಮಪತಿವ್ರತೆ, ಸಾಧ್ವಿ, ಶುದ್ಧಿಮತಿ, ಪಾಪ ದೂರಳು, ಅನಘೆ, ನಿರ್ಮಲೆ, ಪುನೀತೆ ಎಂಬುದನ್ನು ಅರಿತಿರುವೆನು (ಅನಘೆಯೆಂದಾನು ತಿಳಿದಿರುವೆನು). ಆದರೂ ನನ್ನನ್ನು ಹೀನಾಯವಾದ ಲೋಕಾಪವಾದವು ಅರ್ಜದ

ರೋಗದಂತೆ ನನ್ನ ಮನಸನ್ನು ವ್ಯಾಕುಲಗೊಳಿಸಿ ದುರ್ಬಲಗೊಳಿಸುತ್ತಿದೆ. ಬಹಳ ಶಕ್ತಿಯುತವಾಗಿ ನನ್ನನ್ನು ಪೀಡಿಸುತ್ತಿದೆ. ಹೇಗೆ ಅಮಳವಾದ ಚಂದ್ರಬಿಂಬದ ಮೇಲೆ ಗ್ರಹಣಕಾಲದಲ್ಲಿ, ಭೂಮಿಯ ನೆರಳು ಬಿದ್ದಾಗ ಶಶಿಬಿಂಬವು ಅಪವಿತ್ರಗೊಂಡಿತೆಂದು ಜನರು ಭ್ರಾಂತಿಯಿಂದ ಕರೆವಂತೆ ನಾನೀಗ ಸಂಕಟಕರವಾದ ಲೋಕಾಪವಾದಕ್ಕೆ (ಜನರ ಆರೋಪಕ್ಕೆ), ಅಪಕೀರ್ತಿಗೆ, ಅಪಯಶಸ್ಸಿಗೆ, ತುಚ್ಛವಾದ ನಿಂದೆಯ ಮಾತಿಗೆ (ಚುಚ್ಚು ಮಾತು) ಬಲಿಯಾಗಿರುವೆನು (ಬಲಿಪಶು). ಇದರಿಂದ ನಾನು ವ್ಯಾಕುಲಗೊಂಡಿರುವೆನು (ಜನರ ಮಳಿಯಿಂದನು).

ಅನ್ವಯ:—ಏನಾಂ ಅನಘಾ ಇತಿ ಚ ಅವೈಮಿ । ಕಿಂತು ಮೇ ಲೋಕಾಪವಾದಃ ಬಲವಾನ್ ಮತಃ । ಹಿ ಪ್ರಜಾಭಿಃ ಭೂಮೇಃ ಛಾಯಾ ಶುದ್ಧಿಮತಃ ಮಲತ್ವೇನ ಆರೋಪಿತಾ ॥

ಏನಾಂ ಸೀತಾಮನಘಾ ಸಾಧ್ವೀತಿ ಚಾವೈಮಿ—ಕಿಂತು ಮೇ ಮಮ ಲೋಕಾಪವಾದೋ ಬಲವಾನ್ಮತಃ—ಪ್ರಜಾಭಿರ್ಭೂಮೇಶ್ಛಾಯಾ=ಪ್ರತಿಬಿಂಬಂ—ಶುದ್ಧಿಮತೋ =ನಿರ್ಮಲಸ್ಯ—ಮಲತ್ವೇನ=ಕಲಂಕತ್ವೇನ—ಅನಘಾ=ಸಾಧ್ವಿ, ಪಾಪರಹಿತೆ, ನಿರ್ದೋಷಿ.

**41. ರಕ್ಷೋ ವಧಾಂತೋ ನ ಚ ಮೇ ಪ್ರಯಾಸೋ ।**
**ವ್ಯರ್ಥಃ ಸ ವೈರಪ್ರತಿಮೋಚನಾಯ ॥**
**ಅಮರ್ಷಣಃ ಶೋಣಿತಕಾಂಕ್ಷಯಾ ಕಿಂ ।**
**ಪದಾ ಸ್ಪೃಶಂತಂ ದಶತಿ ದ್ವಿಜಿಹ್ವಃ ॥ ೪೧ ॥**

ರಾಕ್ಷಸನ ಹತ್ಯಾಕಾಂಡದಲ್ಲಿ ಕೊನೆಗೊಂಡ ನನ್ನ ಪ್ರಯತ್ನವು ವ್ಯರ್ಥವಾಗಲಿಲ್ಲ. ನನ್ನ ಹಗೆಯು ಅಂದು ನನ್ನ ಕೈಯಿಂದಲೇ ಮುಕ್ತನಾದನು. ಹೇಗೆ ಎರಡು ನಾಲಗೆಯ ಫಣೀಶನು (ದ್ವಿರಸನನು) ತನ್ನನ್ನು ತುಳಿದಾತನನ್ನು ಅತ್ಯಂತ ಕೋಪದ ಭರದಿಂದ ಕಚ್ಚಿ ಕೊಲ್ಲುವಂತೆ ನಾನು ದಂಡಪ್ರಯೋಗ ಮಾಡಿದೆನು. ಆದರೆ ಹಾವು, ತುಳಿದಾತನನ್ನು ರಕ್ತದಾಶೆಯಿಂದ (ಶೋಣಿತಾಕಾಂಕ್ಷೆಯೊಳು) ಎಂದಾದರೂ ಕಡಿಯುವುದೇನು? ಶೋಣಿತದ ಆಕಾಂಕ್ಷೆಯಿಂದ ಅಲ್ಲವಲ್ಲ.

ಅನ್ವಯ :—ಮೇ ರಕ್ಷೋ ವಧಾಂತಃ ಪ್ರಯಾಸಃ ವ್ಯರ್ಥ ನಃ । ಸಃ ವೈರಪ್ರತಿಮೋಚನಾಯ ಅಮರ್ಷಣಃ ದ್ವಿಜಿಹ್ವಃ ಪದಾಸ್ಪೃಶಂತಂ ಶೋಣಿತಕಾಂಕ್ಷಯಾ ದಶತಿ ಕಿಮ್ ॥

ರಕ್ಷಸಾಂ ವಧಃ ಏವ ಅಂತಃ ಯಸ್ಯ ಸಃ—ದ್ವಿಜಿಹ್ವ=ಹಾವು (ಪಾಂಬು—ಮಲೆಯಾಳ) —ಶೋಣಿತಂ = ರಕ್ತ—ವೈರಪ್ರತಿಮೋಚನಾಯ = ವೈರಶೋಧನಾಯ—ಅಮರ್ಷಣಃ = ಅಸಹನೋ—ದ್ವಿಜಹ್ವಃ = ಸರ್ಪಃ—ಪದಾ = ಪಾದೇನ—ಸ್ಪೃಶನ್ತಂ = ಪುರುಷಂ— ಶೋಣಿತಕಾಂಕ್ಷಯಾ ದಶತಿ ಕಿಮ್ ॥

**42. ತದೇಷ ಸರ್ಗಃ ಕರುಣಾರ್ದ್ರಚಿತ್ತೈಃ ।**
**ನ ಮೇ ಭವದ್ಭಿಃ ಪ್ರತಿಷೇಧನೀಯಃ ॥**
**ಯದ್ಯರ್ಥಿತಾ ನಿರ್ಹೃತವಾಚ್ಯಶಲ್ಯಾನ್ ।**
**ಪ್ರಾಣಾನ್ಮಯಾ ಧಾರಯಿತುಂ ಚಿರಂ ವಃ ॥ ೪೨ ॥**

ಇದು ನನ್ನ ಅಚಲನಿರ್ಧಾರ. ಹೃದಯವನ್ನು ಒಳಹೊಕ್ಕು ಬಾಧಿಸುತ್ತಿರುವ, ನನ್ನ ಮಾನಸಿಕ ಸ್ತಿಮಿತವನ್ನು ಕದಡಿಸುತ್ತಿರುವ ಹಿಂಸಾರೂಪವಾದ ಈ ಶಲ್ಯವನ್ನು ಕಿತ್ತು ಬಿಡುವೆನು. ನೀವು ಏನೊಂದನ್ನೂ ಪ್ರತಿಯಾಗಿ ನಡೆಯದೆ, ನನ್ನನ್ನು ವಿರೋಧಿಸದೆ, ಪ್ರತಿಯಾಗಿ ನುಡಿಯದೆ (ನನ್ನನ್ನು ತಡೆಯದೆ. ಪ್ರತಿಭಟಿಸದೆ, ಸಂಘರ್ಷಕ್ಕೆ ಎಡೆಕೊಡದೆ) ಕರುಣಾರ್ದ್ರಹೃದಯರಾಗಿ, ವಸ್ತುಸ್ಥಿತಿಯನ್ನು ಅರಿತು, ನನ್ನ ತೀರ್ಮಾನಕ್ಕೆ ತಲೆಬಾಗುವುದು. ನಿಮ್ಮ ಮನೋವೇದನೆಯನ್ನು ನಾನು ಅರಿತಿರುವೆನು. ಮಾತು ಮಾತುಗಳೆಲ್ಲ ತೂತಾದ ಮಡಿಕೆಯಂತೆ. ಯಾವುದಕ್ಕೂ ಹಿಮ್ಮೆಟ್ಟದ ನಾನು, ಇಂದು, ನನ್ನ ಪ್ರಾಣಕ್ಕೆ ನಿಂದೆಯ ಮಾತು ಆಘಾತವನ್ನುಂಟುಮಾಡುತ್ತಿದೆ (ಮಹಾನ್ ವಿಚ್ಛಿದ್ರಕಾರಿಶಕ್ತಿ ಮಾತಿನಲ್ಲಿ ಅಡಗಿದೆ). ಮಾತಿನಿಂದಲೆ ಸ್ವರ್ಗ, ಮಾತಿನಿಂದಲೆ ನರಕ, ಲೋಕದಲ್ಲಿ ಮಾತೆ ಮಾಣಿಕ್ಯ. ಎಲೆ ಅನುಜರಿರಾ, ಎಲ್ಲವನ್ನೂ ನನ್ನ ನಿರ್ಧಾರಕ್ಕೆ ಬಿಟ್ಟುಬಿಡಿರಿ. ಪ್ರತಿಷೇಧ ನುಡಿಯದೆ ನನ್ನನ್ನು ಬೆಂಬಲಿಸುವುದು'' (ಪ್ರತಿಷೇಧವನ್ನು ನುಡಿದು ಕೆಡಿಸುವುದು ತಗದು).

ಅನ್ವಯ :—ತತ್ ಏಷಃ ಮೇ ಸರ್ಗಃ ಕರುಣಾರ್ದ್ರಚಿತ್ತೈಃ ಭವದ್ಭಿಃ ನ ಪ್ರತಿಷೇಧನೀಯಃ ನಿರ್ಹೃತವಾಚ್ಯಶಲ್ಯಾನ್ ಪ್ರಾಣಾನ್ ಮಯಾ ಚಿರಂ ಧಾರಯಿತುಂ ವಃ ಅರ್ಥಿತಾ ಯದಿ (ಅಸ್ತಿ)—ಸರ್ಗಃ = ನಿರ್ಧಾರಃ ''ಸರ್ಗಃ ಸ್ವಭಾವನಿರ್ಮೋಕ್ಷನಿಶ್ಚಯಾಧ್ಯಾಯ ಸೃಷ್ಟಿಷು'' ಇತ್ಯಮರಃ — ಕರುಣಾರ್ದ್ರಚಿತ್ತೈರ್ಭವದ್ಭಿರ್ನ ಪ್ರತಿಷೇಧನೀಯಃ — ನಿರ್ಹೃತಂ ವಾಚ್ಯಮೇವ ಶಲ್ಯಂ ಏಷಾ ತಾನ್ ಪ್ರಾಣಾನ್ಮಯಾ ಚಿರಂ ಧಾರಯಿತುಂ ಧಾರಣಂ ಕಾರಯಿತುಂ ವೋ ॥

**43. ಇತ್ಯುಕ್ತವಂತಂ ಜನಕಾತ್ಮಜಾಯಾಂ ।**
**ನಿತಾಂತರೂಕ್ಷಾಭಿನಿವೇಶಮೀಶಮ್ ॥**
**ನ ಕಶ್ಚನ ಭ್ರಾತೃಷು ತೇಷು ಶಕ್ತೋ ।**
**ನಿಷೇದ್ಧುಮಾಸೀದನುಮೋದಿತುಂ ವಾ ॥ ೪೩ ॥**

ಲೋಕವೇ ಮುನಿದಾಗ, ಅಥವಾ ದೇವರೇ ರೂಕ್ಷನಾದಾಗ (ಕಠಿಣನಾದಾಗ), ಕ್ರೂರನಾದಾಗ, ವ್ಯಗ್ರನಾದಾಗ ಯಾರೇನು ಮಾಡಬಲ್ಲರು (ಯಾರೇನು ಮಾಡಬಲ್ಲರು ತಾನು ಪಾಪಿಯಾದಾಗ—ದಾಸರ ನುಡಿ) (ಒಲೆಹೊತ್ತಿ ಉರಿದರೆ ನಿಲಬಹುದಣ್ಣಾ, ಧರೆಹೊತ್ತಿ ಉರಿದರೆ ನಿಲಬಹುದೇನಯ್ಯಾ?—ಭಕ್ತಿಭಂಡಾರಿ ಬಸವಣ್ಣ) (ತಾನಂತು ರೂಕ್ಷಾಗ್ರಹಂದಳೆದ ಪತಿಯೊಳು ಸಮಂತು) ಅದರಂತೆ ಜನಕಜಾತೆಯ ವಿಷಯದಲ್ಲಿ ಮಾತನಾಡಲು, ವಿರೋಧಿಸಲು ತಮ್ಮಂದಿರಲ್ಲಿ ಯಾರೊಬ್ಬನೂ ಶಕ್ತನಾಗಲಿಲ್ಲ. ಯಾರೊಬ್ಬನೂ ಚಕಾರ ಶಬ್ದ ಎತ್ತಿ ನಿಷೇಧಿಸಲಿಲ್ಲ (ನಪುಂಸಕರಂತೆ ಅನ್ಯಾಯಕ್ಕೆ ತಲೆಬಾಗಿದರು). ಜನಕಜೆಯನ್ನು ಗಡೀಪಾರು ಮಾಡುವುದು (ಬಿಡುವುದು, ದೂರ ಅಟ್ಟುವುದು) ಸರಿಯಲ್ಲವೆಂದು ಕಟುವಾಗಿ ಖಂಡಿಸದೆ ಮೃದುಧೋರಣೆಯನ್ನು ಅನುಸರಿಸಿದರು. ಕಾರಣವಿಷ್ಟೆ—ಅವರೆಲ್ಲ ಆ ಮೂವರು ರಾಮಸಹೋದರರು ಭಗವಾನ್ ಶ್ರೀರಾಮನ ಅಂಶಸಂಭೂತರು. ಒಂದೇ ವೈಷ್ಣವಶಕ್ತಿ (ತೇಜಸ್ಸು) ವಿಭಜಿಸಿಬಂದವರು. ಆದ್ದರಿಂದ ಅನ್ಯಾಯ, ಅಧರ್ಮ, ಅನಾಗರಿಕವೆಂದು ತಿಳಿದಿದ್ದರೂ ದಿಟ್ಟತನದಿಂದ (ಖಂಡಿಸದೆ) ಪ್ರತಿಭಟಿಸದೆ ಮೌನಪ್ರೇಕ್ಷಕ

ರಾಗಿಯೇ ಉಳಿದರು. ಮೂಕಸಾಕ್ಷಿಗಳಾಗಿ ಇದ್ದುಬಿಟ್ಟರು. ಒರೆಯಲು, ಗೋಗರೆಯಲು ಶಕ್ತರಾಗಲಿಲ್ಲ. ಅವರೆಲ್ಲರೂ ಅಗ್ರಜನ ಕ್ರೌರ್ಯವನ್ನು ಅನುಮೋದಿಸಿದರು (ಒತ್ತಾಯಕ್ಕೆ ಒಟ್ಟಾರೆ ಶಂಭಟ್ಟನ ರುಜು ಎಂಬಂತೆ ಅಥವಾ ಊರಿನ ಮೇಲೆ ಊರು ಬಿದ್ದರೆ ಶ್ಯಾನುಭಾಗರಿಗೆ ಆಗುವ ನಷ್ಟವೇನು ?)

ಅನ್ವಯ :--ಇತ್ಥಂಕೃತವನ್ತಂ ಜನಕಾತ್ಮಜಾಯಾಂ ನಿತಾಂತರೂಕ್ಷಾಭಿನಿವೇಶಂ ಈಶಂ ತೇಷು ಕಶ್ಚನ ಅಪಿ ನಿಷೇದ್ಧುಂ ಅನುಮೋದಿತುಂ ವಾ ಶಕ್ತಃ ನ ಆಸೀತ್ ॥

ಯುಷ್ಮಾಕಮರ್ಥಿತಾಽರ್ಥಿತ್ವಮಿಚ್ಛಾ ಯದಿ-ನಿತಾಂತರೂಕ್ಷಾಭಿನಿವೇಶಮತಿಃ ಕ್ರೂರಾಗ್ರಹಮ್—ಈಶಂ = ಸ್ವಾಮಿನಂ—ನಿಷೇದ್ಧುಂ = ನಿವಾರಯಿತುಂ—ಅನುಮೋದಿತುಂ= ಪ್ರವರ್ತಯಿತುಂ ॥

44. ಸ ಲಕ್ಷ್ಮಣಂ ಲಕ್ಷ್ಮಣಪೂರ್ವಜನ್ಮಾ ।
ವಿಲೋಕ್ಯ ಲೋಕತ್ರಯಗೀತಕೀರ್ತಿಃ ॥
ಸೌಮ್ಯೇತಿ ಚಾಭಾಷ್ಯ ಯಥಾರ್ಥಭಾಷೀ ।
ಸ್ಥಿತಂ ನಿದೇಶೇ ಪೃಥಗಾದಿದೇಶ ॥ ೪೪ ॥

ಸತ್ಯಸಂಧನಾದ ಶ್ರೀರಾಮಚಂದ್ರನ ಮಾತನ್ನು ಮಹಾಬಾಹುವಾದ ಲಕ್ಷ್ಮಣನು ಸೌಮ್ಯಚಿತ್ತನಾಗಿ, ವಿಧೇಯತೆಯಿಂದಲೇ ಲಾಲಿಸಿದನು. ಲಕ್ಷ್ಮಣನ ಹಿರಿಯನಾದ ಶ್ರೀರಾಮಚಂದ್ರನು ಸತ್ಯವನ್ನು ನುಡಿವಾತನು. ಯಾವನ ಕೀರ್ತಿಯನ್ನು ಲೋಕತ್ರಯವು (ಭುವನತ್ರಯವು) ಹಾಡಿ ಹೊಗಳುವುದೋ, ಗೀತಿಸುವುದೋ, ಕೀರ್ತಿಸುವುದೋ ಅಂತಹ ಯಶಸ್ತಿಲಕನಾದ ರಘುರಾಮಚಂದ್ರನ ಮಾತನ್ನು ಆಜ್ಞಾನುವರ್ತಿಯಾಗಿ ಎಕ್ಕಟಿಯಿಂದ ಲಾಲಿಸಿದನು (ರಾಘವನು ಲೋಕತ್ರಯಿಗಾಗೀತಯಶನು). ಶ್ರೀ ರಾಘವೇಂದ್ರನು ಬೆಸಸಿದನು ಹೀಗೆಂದು : ''ಎಲೆ ಸೌಮ್ಯ'' ಎನುತ (ಪ್ರಾರಂಭಿಸಿ) ನುಡಿದನು.

ಅನ್ವಯ :—ಲೋಕತ್ರಯಗೀತಕೀರ್ತಿಃ ಯಥಾರ್ಥಭಾಷೀ ಲಕ್ಷ್ಮಣಪೂರ್ವಜನ್ಮಾ ಸಃ ನಿದೇಶೇ ಸ್ಥಿತಂ ಲಕ್ಷ್ಮಣಂ ವಿಲೋಕ್ಯ ''ಹೇ ಸೌಮ್ಯ'' ಇತಿ ಆಭಾಷ್ಯ ಚ ಪೃಥಕ್ ಆದಿದೇಶ ॥

ನಿದೇಶೇ ಸ್ಥಿತಮಾಜ್ಞಾಕಾರಿಣಂ—ಹೇ ಸೌಮ್ಯ=ಹೇ ಸುಭಗ—ಆದಿದೇಶಾಜ್ಞಾಪಯಾಮಾಸ—ಲಕ್ಷ್ಮಣಪೂರ್ವಜನ್ಮಾ=ಪೂರ್ವಜನ್ಮ ಯಸ್ಯ ಸ ಪೂರ್ವಜನ್ಮಾ—ಲಕ್ಷ್ಮಣಸ್ಯ ಪೂರ್ವಜನ್ಮಾ ಲಕ್ಷ್ಮಣಪೂರ್ವಜನ್ಮಾ=ಶ್ರೀರಾಮಚಂದ್ರನ, ಲಕ್ಷ್ಮಣನ ಪೂರ್ವಜನು ರಾಘವನು = ಲಕ್ಷ್ಮಣಾಗ್ರಜಃ ॥

46. ಪ್ರಜಾವತೀದೋಹದಶಂಸಿನೀ ತೇ ।
ತಪೋವನೇಷು ಸ್ಪೃಹಯಾಲುರೇವ ॥
ಸ ತ್ವಂ ರಥೀ ತದ್ವ್ಯಪದೇಶನೇಯಾಂ ।
ಪ್ರಾಪಯ್ಯ ವಾಲ್ಮೀಕಿಪದಂ ತ್ಯಜೈನಾಮ್ ॥ ೪೫ ॥

"ನಿನ್ನ ಅತ್ತಿಗೆ ದೋಹದದ ನಿಮಿತ್ತ (ತುಂಬುಗರ್ಭಿಣಿಯು ತುಂಬುಮನಸಿನ ಮನೋರಥದಂತೆ) ನನ್ನಲ್ಲಿ ಒಂದು ಬೇಡಿಕೆಯನ್ನು ಬೇಡಿದಳು (ಮುನಿವನದೊಳಿ ರುವುವನು). ಋಷ್ಯಾಶ್ರಮಕ್ಕೆ ತೆರಳಿ ಆ ತಪೋವನಭೂಮಿಯಲ್ಲಿದ್ದು ಋಷಿಕನ್ನಿಕೆಯರ ಸಹವಾಸದಲ್ಲಿದ್ದು ಬರುವೆನೆಂಬ ಕೋರಿಕೆಯಂತೆ (ಆ ನೆಪದೊಳಾಕೆಯನು) ಆಕೆಯನ್ನು ನೀನು ರಥದಲ್ಲಿ ಕುಳ್ಳಿರಿಸಿ ವಾಲ್ಮೀಕಿಮುನಿಯ ತಪೋವನದ ಬಳಿಯಲ್ಲಿರುವ (ವಾಲ್ಮೀಕಿ ಪದದೆಡೆಯೊಳುಳಿದು) ಗೊಂಡಾರಣ್ಯದಲ್ಲಿ ಬಿಟ್ಟುಬಾರೆಂದನು."

ಅನ್ವಯ :—ದೋಹದಶಂಸಿನೀ ತೇ ಪ್ರಜಾವತೀ ತಪೋವನೇಷು ಸ್ಪೃಹಯಾಲುಃ ಏವ । ಸಃ ತ್ವಂ ರಥೀ ಸನ್ ತದ್ವ್ಯಪದೇಶನೇಯಾಂ ಏನಾಂ ವಾಲ್ಮೀಕೇಃ ಪದಂ ಪ್ರಾಪಯ್ಯ ತ್ಯಜ ॥

ದೋಹದೋ = ಗರ್ಭಿಣೀಮನೋರಥಃ—ತೇ ಪ್ರಜಾವತೀ = ಭ್ರಾತೃಜಾಯಾ—"ಪ್ರಜಾವತೀ ಭ್ರಾತೃಜಾಯಾ" ಇತ್ಯಮರಃ—ತಪೋವನೇಷು ಸ್ಪೃಹಯಾಲುರೇವ = ಸಸ್ಪೃಹೇವ—"ಸ್ಪೃಹೀ ಗೃಹಿ" ಇತ್ಯಾದಿ ನಾಲುಚ್‌ಪ್ರತ್ಯಯಃ (ಪಾಣಿನಿ)—ವಾಲ್ಮೀಕೇ ಪದಂ= ಸ್ಥಾನಂ ಪ್ರಾಪಯ್ಯ = ಗಮಯಿತ್ವಾ—ಸ್ಪೃಹ್ ಧಾತುವು ಆಲುಚ್ ಪ್ರತ್ಯಯವು ಸೇರಿ ಸ್ಪೃಹಯಾಲುಃ ಎಂದಾಗುತ್ತದೆ. ಆಪ್ ಧಾತುವು ಪ್ರೇರಣಾರ್ಥಕದಲ್ಲಿ ಆಪ್ಯ, ಆಪಯ್ಯ ಎಂಬ ಎರಡು ರೂಪಗಳನ್ನು ಪಡೆಯುತ್ತದೆ—ವ್ಯಪದೇಶ = ನೆಪ.

**46. ಸ ಶುಶ್ರುವಾನ್ ಮಾತರಿ ಭಾರ್ಗವೇಣ ।**
**ಪಿತುರ್ನಿಯೋಗಾತ್ ಪ್ರಹೃತಂ ದ್ವಿಷದ್ವತ್ ॥**
**ಪ್ರತ್ಯಗ್ರಹೀದಗ್ರಜಶಾಸನಂ ತತ್ ।**
**ಆಜ್ಞಾ ಗುರೂಣಾಂ ಹ್ಯವಿಚಾರಣೀಯಾ ॥ ೪೬ ॥**

ಅಂದು ಆ ಭಾರ್ಗವರಾಮನು ತನ್ನ ತಂದೆಯಾದ ಜಮದಗ್ನಿಯ ಆಜ್ಞೆಯಂತೆ ಹಿಂದುಮುಂದು ಆಲೋಚಿಸದೆ ತಾಯಿಯಾದ ರೇಣುಕೆಯ ಶಿರಚ್ಛೇದನ ಮಾಡಲಿಲ್ಲವೆ ? ಹೀಗಿರಲು ಇಂದು ಲಕ್ಷ್ಮಣನು (ಸುಮಿತ್ರಾತನಯನು) ತನ್ನ ಪ್ರೀತಿಯ ಅತ್ತಿಗೆಯನ್ನು ಕಾಡಿನಲ್ಲಿ ನಾಡಾಡಿಯಂತೆ ಬಿಟ್ಟುಬರಲು ಒಪ್ಪಿಕೊಂಡನು. ಅಣ್ಣನನ್ನು ಪ್ರಶ್ನಿಸದೆ ಕೃತ್ಯ ವನ್ನು ಶಿರಸಾವಹಿಸಲು ಒಪ್ಪಿಕೊಂಡನು. ಅಣ್ಣನ ಶಾಸನಕ್ಕೆ ಬದ್ಧನಾದನು. ಏಕೆಂದರೆ ಗುರ್ವಾಜ್ಞೆಯನ್ನು (ಹಿರಿಯರ ಆಜ್ಞೆಯನ್ನು) ಶಿರಸಾವಹಿಸಬೇಕಲ್ಲದೆ ಪ್ರಶ್ನಿಸುವಂತಿಲ್ಲ. ಅದು ರಾಘವನ ಅಂತರಂಗವ, ಆಂತರಿಕ, ವೈಯಕ್ತಿಕ ವಿಚಾರವೆಂದೋ ಏನೋ, ಗುರ್ವಾ ಜ್ಞೆಯು ವಿಚಾರಣೀಯವಲ್ಲ. ಸಕಾರಣವಿರಲಿ, ಅಕಾರಣವಿರಲಿ, ಅನುಸರಿಸತಕ್ಕುದು (ಅವಿಚಾರಣೀಯಮಹುದಲ್ತೆ).

ಅನ್ವಯ :—ಪಿತುಃ ನಿಯೋಗಾತ್ ಭಾರ್ಗವೇಣ ಮಾತರಿ ದ್ವಿಷದ್ವತ್ ಪ್ರಹೃತಮ್ ಶುಶ್ರುವಾನ್ ಸ ಲಕ್ಷ್ಮಣಃ ತತ್ ಅಗ್ರಜಶಾಸನಂ ಪ್ರತ್ಯಗ್ರಹೀತ್, ಹಿ ಗುರೂಣಾಂ ಆಜ್ಞಾ ಅವಿಚಾರಣೀಯಾ ॥

ಭಾರ್ಗವೇಣ = ಜಾಮದಗ್ನ್ಯೇನ—ಸಲಕ್ಷ್ಮಣಸ್ತದಗ್ರಜಶಾಸನಂ ಪ್ರತ್ಯಗ್ರಹೀತ್—ಹಿ ಯಸ್ಮಾದ್ಗುರೂಣಾಮಾಜ್ಞಾ ಅವಿಚಾರಣೀಯಾ—ಭಾರ್ಗವೇಣ ಪ್ರಹೃತಂ = ದ್ವಿಷತಿ

ಇವ (ಶತ್ರುವಿನಲ್ಲಿದ್ದಂತೆ) ಎಂಬರ್ಥದಲ್ಲಿ ದ್ವಿಷದ್ವತ್ ಎಂಬ ಪ್ರಯೋಗವಿದೆ. "ಶ್ರು" ಧಾತುವಿಗೆ "ಕ್ವಸು" ಪ್ರತ್ಯಯವು ಸೇರಿ ಶುಶ್ರುವಾನ್ ಎಂದಾಗಿದೆ.

**47. ಅಥಾನುಕೂಲಶ್ರವಣಪ್ರತೀತಾಂ।**
**ಅತ್ರಸ್ನುಭಿರ್ಯುಕ್ತಧುರಂ ತುರಂಗೈಃ॥**
**ರಥಂ ಸುಮಂತ್ರಪ್ರತಿಪನ್ನರಶ್ಮಿಂ।**
**ಆರೋಪ್ಯ ವೈದೇಹಸುತಾಂ ಪ್ರತಸ್ಥೇ ॥ ೪೭॥**

ಆ ರಥವನ್ನು ಗರ್ಭಿಣಿಯಾದ, ಮುಂದೆ ತಾಯಿಯಾಗಲಿರುವ ಸೀತಾದೇವಿಯು ವನದ ತನ್ನ ಇಚ್ಛೆಯನ್ನು ತನ್ನ ಪತಿದೇವನು ಪೂರೈಸಿದನೆಂಬ ಸಂತೋಷವನ್ನು ಪ್ರಕಟಿಸುತ್ತಾ ಅತ್ಯಂತ ಆನಂದಭಾವದಿಂದ ರಥವನ್ನೇರಿದಳು. ಆಗ ರಥದ ಕಡಿವಾಣಗಳನ್ನು ಸುಮಂತ್ರನು ಹಿಡಿದಿದ್ದನು, ತೇರಿನೊಳಗೆ ಲಕ್ಷ್ಮಣನು ಡೋಲಾಯಮಾನನಾಗಿ ಕುಳಿತಿದ್ದನು. ಆ ರಥಕ್ಕೆ ಕಟ್ಟಿದ ಅಶ್ವಗಳು ಅನೇಕ ಯುದ್ಧದಲ್ಲಿ ಪಾಲ್ಗೊಂಡ, ಅತ್ಯಂತ ಸುದೃಢವಾದ, ಬೆದರದ, ಹೆದರದ, ಅಂಜದ, ಕಾಂಭೋಜದೇಶದ ಉತ್ತಮ ಜಾತಿಯ ಅಶ್ವಗಳು. ಇಷ್ಟವಾರ್ತಾಶ್ರವಣಸುಖಿಯಾದ ವೈದೇಹಿಯು ರಥದಲ್ಲಿ ಮಂಡಿಸಿದ್ದಳು (ಕರೆದೊಯ್ದನು ಇಷ್ಟವಾರ್ತಾಶ್ರವಣಸುಖಿಯ).

ಅನ್ವಯ :—ಅಥ ಅನುಕೂಲಶ್ರವಣಪ್ರತೀತಾಂ ವೈದೇಹಸುತಾಂ ಅತ್ರಸ್ನುಭಿಃ ತುರಂಗೈಃ ಯುಕ್ತಧುರಂ ಸುಮಂತ್ರಪ್ರತಿಪನ್ನರಶ್ಮಿಂ ರಥಂ ಆರೋಪ್ಯ ಪ್ರತಸ್ಥೇ॥

ಪ್ರತೀತಾಮಿಷ್ಟಾಕರ್ಣನೇನ ತುಷ್ಟಾಂ — ಗೃಹೀತ = ಪ್ರಗ್ರಹಂ — ಭಾರ್ಗವೇಣ ಪ್ರಹೃತಂ ದ್ವಿಷತಿ ಇವ (ಶತ್ರುವಿನಲ್ಲಿದ್ದಂತೆ) ಎಂಬ ಅರ್ಥದಲ್ಲಿ ದ್ವಿಷದ್ವತ್ ಎಂಬ ಪ್ರಯೋಗವಿದೆ, "ಶು"ಧಾತುವಿಗೆ "ಕ್ವಸು" ಪ್ರತ್ಯಯವು ಸೇರಿ ಶುಶ್ರುವಾನ್ ಎಂದಾಗಿದೆ—"ತ್ರಸ್" ಧಾತುವಿಗೆ "ಕ್ನು"ಪ್ರತ್ಯಯ ಸೇರಿ "ತ್ರಸ್ನುಃ" ಎಂದಾಗಿದೆ—ಯುಕ್ತಧುರಂ = ಯುಕ್ತಾ ಧೂಃ ಯಸ್ಯ ತವಮ್ = ಕಟ್ಟಿತಂದಿರುವ.

**48. ಸಾ ನೀಯಮಾನಾ ರುಚಿರಾನ್ ಪ್ರದೇಶಾನ್।**
**ಪ್ರಿಯಂಕರೋ ಮೇ ಪ್ರಿಯ ಇತ್ಯನಂದತ್॥**
**ನಾಬುದ್ಧ ಕಲ್ಪದ್ರುಮತಾಂ ವಿಹಾಯ।**
**ಜಾತಂ ತಮಾತ್ಮನ್ಯಸಿತಪತ್ರವೃಕ್ಷಮ್ ॥ ೪೮॥**

ಆ ಚಾರುರಥವು ಸುಂದರವಾದ ಭೂಪ್ರದೇಶದ ಮೇಲೆ ಶಬ್ದಿಸುತ್ತಾ ಹೊರಟಿತು. ತನ್ನ ಪ್ರಿಯಂಕರನು ಸದಾ ತನಗೆ ಕ್ಷೇಮಂಕರನು, ತನಗೆ ಪ್ರಿಯವಾದುದನ್ನು ಅಲ್ಲದೆ ಅನ್ಯಥಾ ಬೇರೆ ವಿಚಾರಗಳು ಅವನ ಸ್ಮೃತಿಪಟಲದಲ್ಲಿ ಸುಳಿಯದು. ಆದರೆ ತನ್ನ ಪತಿಯೆಂಬ ಕಲ್ಪವೃಕ್ಷವು (ಬೇಡಿದುದನ್ನು ಕೊಡುವ ವೃಕ್ಷ) ಕತ್ತಿಗಳೆಂಬ (ಖಡ್ಗ) ಎಲೆಗಳನ್ನು ಬಿಟ್ಟಿದೆ ಎಂಬುದನ್ನು ಆ ತ್ರಿಲೋಕವಮಾನ್ಯಳು ಕನಸಲ್ಲೂ, ಮನಸಲ್ಲೂ ಭಾವಿಸಿರಲಿಲ್ಲ (ಅಸಿಪತ್ರವಾದುದನು ಅರಿಯದಿಹಳು) ಖಡ್ಗಗಳೆಂಬ ಎಲೆಗಳನ್ನು ಬಿಟ್ಟಿರುವ

ಮರಗಳೂ, ಯಮಧರ್ಮರಾಜನ ಸಾಮ್ರಾಜ್ಯವಾದ ನರಕಲೋಕದಲ್ಲಿ (ಕೈವಿಸೀನಗರ) ಇವೆಯಂತೆ.

ಅನ್ವಯ :—ಸಾ ರುಚಿರಾನ್ ಪ್ರದೇಶಾನ್ ನೀಯಮಾನಾ ಮೇ ಪ್ರಿಯಃ ಪ್ರಿಯಂ ಕರಃ ಇತಿ ಅನಂದತ್ । ತಂ ಆತ್ಮನಿ ಕಲ್ಪವೃಕ್ಷತಾಂ ವಿಹಾಯ ಅಸಿಪತ್ರವೃಕ್ಷಂ ಜಾತಂ ನ ಅಬುದ್ಧ ॥

ರುಚಿರಾನ್ ಪ್ರದೇಶಾನ್ನೀಯಮಾನಾ=ಪ್ರಾಪ್ಯಮಾಣಾ ಸತೀ—ಪ್ರಿಯಂ ಕರೋತೀತಿ = ಪ್ರಿಯಂಕರಃ = ಪ್ರಿಯಕಾರೀತ್ಯನಂದತ್–ನಾಬುದ್ಧ ನಾಜ್ಞಾಸೀತ್–ಬುಧ್ಯತೇರ್ಲುಙ್ —ಅಸಿಪತ್ರವೃಕ್ಷಃ=ಖಡ್ಗಕಾರದಲಃ ಕೋಽಪ್ಯಪೂರ್ವೋ ವೃಕ್ಷವಿಶೇಷಃ—ಅಸಿಪತ್ರೋ ಭವೇತ್ "ಕೋಷಾಕಾರೇ ಚ ನರಕಾಂತರೇ" ಇತಿ ವಿಶ್ವಃ—ಖಚ್ ಪ್ರತ್ಯಯವು ಸೇರಿ ಪ್ರಿಯಂಕರ ಎಂದಲ್ಲದೆ ಪ್ರಿಯಕರ್ ಎಂದೂ ಆಗುತ್ತದೆ—ಸವ್ಯೇತರೇಣ = ದಕ್ಷಿಣಾಕ್ಷಿ ಸ್ಫುರಣ ॥

49. ಜುಗೂಹ ತಸ್ಯಾಃ ಪಥಿ ಲಕ್ಷ್ಮಣೋ ಯತ್ ।
ಸವ್ಯೇತರೇಣ ಸ್ಫುರತಾ ತದಕ್ಷ್ಣಾ ॥
ಆಖ್ಯಾತಮಸ್ಯೈ ಗುರುಭಾವಿದುಃಖಂ ।
ಅತ್ಯಂತಲುಪ್ತಪ್ರಿಯದರ್ಶನೇನ ॥ ೪೯ ॥

ತನ್ನ ಪತಿದೇವನ ದಿವ್ಯದರ್ಶನದಿಂದ ವಂಚಿತಳಾಗುವ ದೀರ್ಘರದ ದುಃಖವನ್ನು ಮರೆಮಾಚಿ ಲಕ್ಷ್ಮಣನು ಸೀತೆಯನ್ನು ಒಯ್ಯುತ್ತಿದ್ದನು. ಆದರೂ ದೈವನಿಮಿತ್ತದಿಂದ ಸೀತಾದೇವಿಯು ಕೂಡಲೇ ಅರಿತುಕೊಂಡಳು. (ದುಃಶಕುನದಿಂದ) ಆಕೆಯ ಬಲಗಣ್ಣು ಅದುರಿತು. ಭವಿಷ್ಯದ ದುಃಖದ ಮುನ್ಸೂಚನೆಯಿಂದ ತಾನಾಗಿಯೇ ತಿಳಿದುಕೊಂಡಳು. ಕೂಡಲೇ ಮರುಕ್ಷಣವೇ ತನ್ನ ಗಂಡನು ಸುಖವಾಗಿರಲೆಂದು ತನ್ನ ಮನಸ್ಸಿನಲ್ಲಿಯೇ ಪ್ರಾರ್ಥಿಸಿಕೊಂಡಳು. (ದಕ್ಷಿಣಾಕ್ಷಿಸ್ಫುರಣಮಾಭಾವಿಶೋಕವನು ತಾನೋರೆವುದು ಅದನು.)

ಅನ್ವಯ :—ಪಥಿ ಲಕ್ಷ್ಮಣಃ ಯತ್ ತಸ್ಯಾಃ ಜುಗೂಹ ತತ್ ಗುರುಭಾವಿದುಃಖಂ ಅತ್ಯಂತಲುಪ್ತಪ್ರಿಯದರ್ಶನೇನ ಸ್ಫುರತಾ ಸವ್ಯೇತರೇಣ ಅಕ್ಷ್ಣಾ ಅಸ್ಯೈ ಆಖ್ಯಾತಮ್ ॥

ಜುಗೂಹ = ಪ್ರತಿಸಂವೃತವಾನ್—ತದ್ಗುರುಭಾವಿ ಭವಿಷ್ಯ ದುಃಖಮತ್ಯಂತಲುಪ್ತಂ ಪ್ರಿಯಂದರ್ಶನಂ ಯಸ್ಯ ತೇನ—ಸ್ಫುರತಾ ಸವ್ಯೇತರೇಣ = ದಕ್ಷಿಣೇನಾಕ್ಷ್ಣಾಸ್ಯೈ ಸೀತಾಯಾ ಆಖ್ಯಾತಮ್—ಸವ್ಯೇತರ = ಎಡವಲ್ಲದ, ಬಲಗಡೆಯ—ಆಖ್ಯಾತಮ್— ತಿಳಿಸಲ್ಪಟ್ಟಿತು.

50. ಸಾ ದುರ್ನಿಮಿತ್ತೋಪಗತಾ ದ್ವಿಷಾದಾತ್ ।
ಸದ್ಯಃ ಪರಿಮ್ಲಾನಮುಖಾರವಿಂದಾ ॥
ರಾಜ್ಞಃ ಶಿವಂ ಸಾವರಜಾಯ ಭೂಯಾತ್ ।
ಇತ್ಯಾಶಶಂಸೇ ಕರಣೈರಬಾಹ್ಯೈಃ ॥ ೫೦ ॥

ದುಶ್ಶಕುನಗಳಿಂದ, ದುರ್ನಿಮಿತ್ತದಿಂದ ಭವಿಷ್ಯದಲ್ಲಿರುವ ದುಃಖವನ್ನು ಅರಿತು ಮನದಲ್ಲಿ ಬಹಳ ಸಂಕಟಗೊಂಡಳು. (ದುಃಖದಿಂದ ಒಡನೆ ಉರಿದು) ಆಕೆಯು ಆಹ್ಲಾದ ಸೂಸುವ ಮೊಗವು ಕೂಡಲೇ ಬಾಡಿತು. ಮೊಗತಾವರೆಯು ಸೊಂಪು ಅಡಗಿತು. ಭರತ ಖಂಡದ ಸಮ್ರಾಟನಿಗೆ ಮಂಗಳವಾಗಲಿ. ತನ್ನ ಪ್ರಾಣಪತಿಯು ತನ್ನ ಅನುಜರಿಂದೊಡ ಗೂಡಿ ಮಂಗಳವಾಗಿರಲಿ, ಎಂದು ತ್ರಿಕರಣಪೂರ್ವಕ (ಬಾಹ್ಯ ಹಾಗೂ ಅಂತಃಕರಣ ಪೂರ್ವಕ) ಹಾರೈಸಿದಳು. ಶಿವಮಸ್ತು ಅನುಜರಿಂದ ಒಡಗೂಡಿದ ಸಾನುಜಮಹಾರಾಜ ನಿಗೆಂದು ಆ ಪರಮಪತಿವ್ರತೆಯು ಸ್ತ್ರೀಲೋಕಮಾರ್ಗದರ್ಶಿನಿ ಹಾರೈಸಿದಳೆಂದು (ಶಿವ ಮಸ್ತು ಸಾನುಜಮಹಾರಾಜನಿಗೆಂದು).

ಅನ್ವಯ :—ಸಾ ದುರ್ನಿಮಿತ್ತೋಪಗತಾತ್ ವಿಷಾದಾತ್ ಸದ್ಯಃ ಪರಿಮ್ಲಾನ ಮುಖಾರವಿಂದಾ ಸಾವರಜಸ್ಯ ರಾಜ್ಞಾ ಶುಭಂ ಭೂಯಾದಿತಿ ಅಬಾಹ್ಯೈಃ ಆಶಶಂಸೇ ॥

ಸಾವರಜಸ್ಯ = ಅನುಜಸ್ಯ—"ಶಿವಂ ಭೂಯಶಾತ್" ಇತ್ಯಬಾಹ್ಯೈಃ ಕರಣೈರನ್ತಃ ಕರಣೈಃ—ಆಶಶಂಸೇ—ಶಂಸತೇರಪೇಕ್ಷಾಯಾಮಾತ್ಮನೇಪದಮಿಷ್ಯತೇ—ಕರಣೈಃ ಇತಿ ಬಹುವಚನಮ್ ಕ್ರಿಯಾವೃತ್ತ್ಯಭಿಪ್ರಾಯಮ್—ಅಬಾಹ್ಯೈಃ ಕರಣೈಃ = ಅಂತಃಕರಣ ಗಳಿಂದ (ಮನಸ್ಸು, ಬುದ್ಧಿ, ಅಹಂಕಾರ ಇವು ಅಂತಃಕರಣಗಳು)—ಕರಣೈಃ ಇತಿ ಬಹುವಚನಮ್—ಕ್ರಿಯಾವೃತ್ತ್ಯಭಿಪ್ರಾಯಮ್ ॥ "ಶಂಸ್" ಧಾತುವಿಗೆ ಇಚ್ಛಿಸು ಎಂಬ ಅರ್ಥ ಬಂದಾಗ ಆತ್ಮನೇಪದಿಯಾಗುತ್ತದೆ ಮುಖ ಅರವಿಂದು ಇವ ಮುಖಾರ ವಿಂದಂ—ಪರಿಮ್ಲಾನಂ ಮುಖಾರವಿಂದಂ ಯಸ್ಯಾಃ ಸಾ = ಬಾಡಿದ ಕಮಲದಂತಹ ಮುಖದಿಂದೊಪ್ಪುವ—ಕರಣೈಃ ಅಬಾಹ್ಯೈಃ ಆಶಶಂಸೇ = ಶುಭವಾಗಲೆಂದು ಬಾಹ್ಯ ಹಾಗೂ ಅಂತಃಕರಣಪೂರ್ವಕ ಕೋರಿದಳು.

**51. ಗುರೋರ್ನಿಯೋಗಾದ್ವನಿತಾಂ ವನಾಂತೇ ।**
**ಸಾಧ್ವೀಂ ಸುಮಿತ್ರಾತನಯೋ ವಿಹಾಸ್ಯನ್ ॥**
**ಅವಾರ್ಯತೇವೋತ್ಥಿತವೀಚಿಹಸ್ತೈಃ ।**
**ಜಹ್ನೋರ್ದುಹಿತ್ರಾ ಸ್ಥಿತಯಾ ಪುರಸ್ತಾತ್ ॥ ೫೧ ॥**

ಸುಮಿತ್ರಾತನಯನು (ಲಕ್ಷ್ಮಣನು) ತನ್ನ ಅಗ್ರಜಾತನ (ಅಣ್ಣನ) ನೇಮವನ್ನು ಮೀರಲಾರದೆ ಹದಿಬದೆಯರಲ್ಲಿ ಪತಿವ್ರತಾವನಿತೆಯರಲ್ಲಿ ಅಗ್ರಳಾದ, ಅತ್ಯಂತ ಶ್ರೇಷ್ಠ ಳಾದ, ಅಬಲೆಯರಾದ ತನ್ನ ಅತ್ತಿಗೆಯನ್ನು ಘೋರಾರಣ್ಯದಲ್ಲಿ ತೊರೆದು ಬರಲು ಹೋಗುತ್ತಿರುವುದನ್ನು, ಅದನ್ನು ಮಾಡಬೇಡವೆಂದು ಪ್ರತಿಭಟಿಸುವಳೋ ಎಂಬಂತೆ ಜಹ್ನುತನಯೆಯಾದ ಜಾಹ್ನವಿಯು (ಗಂಗಾನದಿಯು) ತನ್ನ ತೆರೆಕೈಗಳಿಂದ ತಡೆಯುಲೆಳಸಿ ದಳು ಎಂಬಂತೆ. ದೊಡ್ಡ ದೊಡ್ಡ ತೆರೆಗಳನ್ನು ಎಬ್ಬಿಸುತ್ತಾ ಎದುರಲ್ಲಿ ಗಂಗಾನದಿಯು ಹರಿಯುತ್ತಲಿತ್ತು. ಆ ದೇವಗಂಗಾನದಿಯು (ಭಾಗೀರಥೀ ನದಿ) ಲಕ್ಷ್ಮಣನು ಹೋಗು ತ್ತಿದ್ದ ದಾರಿಯಲ್ಲಿ ದೊಡ್ಡ ದೊಡ್ಡ ತೆರೆಗಳಿಂದ ಕಂಗೊಳಿಸುತ್ತಾ ಪ್ರವಹಿಸುತ್ತಿತ್ತು. ಆ ನದೀದೇವತೆಯು ಸುರುಳಿಸುರುಳಿಯಾಗಿ ಉರುಳಿಬರುತ್ತಾ "ಎಲೈ ಸುಮಿತ್ರಾ

ನಂದನನೇ, ನೀನು ಅಕಾರ್ಯವನ್ನು ಮಾಡದಿರು" ಎಂಬಂತೆ, ತನ್ನ ದೊಡ್ಡ ದೊಡ್ಡ ತೆರೆಕೈಗಳಿಂದ ಪ್ರತಿಭಟಿಸುವಂತೆ, ಲಕ್ಷ್ಮಣನ ಉಗ್ರಕ್ರಮವನ್ನು, ಜಗನ್ಮಾತೆಯಾದ ಗಂಗಾ ಮಾತೆಯು ತಡೆಯುವಂತೆ ತೋರಿದಳು.

ಅನ್ವಯ :—ಗುರೋಃ ನಿಯೋಗಾತ್ ಸಾಧ್ವೀಂ ವನಿತಾಂ ವನಾನ್ತೇ ವಿಹಾಸ್ಯನ್ ಸುಮಿತ್ರಾತನಯಃ ಪುರಸ್ತಾತ್ ಸ್ಥಿತಯಾ ಜಹ್ನೋಃ ದುಹಿತ್ರಾ ಉತ್ಥಿತವೀಚಿಹಸ್ತೈಃ ಅವಾರ್ಯತ ಇವ ||

ಗುರೋರ್ಜ್ಯೇಷ್ಠಸ್ಯ—ಸುಮಿತ್ರಾತನಯೋ=ಲಕ್ಷ್ಮಣಃ—ಪುರಸ್ತದಾಗ್ರೇ—ಜಹ್ನೋರ್ದುಹಿತ್ರಾ = ಜಾಹ್ನವೀ—ಉತ್ಥಿತೈರ್ವೀಚಿಹಸ್ತೈರವಾರ್ಯತೇವ — "ಅಕಾರ್ಯಂ ಮಾ ಕುರು"—ಇತ್ಯವಾಯತೇವ ಇತ್ಯುತ್ಪ್ರೇಕ್ಷಾ—ಕೆಡುಕನ್ನು ಮಾಡದಿರು ಎಂಬಂತೆ ಎಂದು ತೆರೆಕೈಗಳಿಂದ ತಡೆದಳೋ ಎಂದು ಹೇಳುವಲ್ಲಿ ಉತ್ಪ್ರೇಕ್ಷಾಲಂಕಾರ.

**52. ರಥಾತ್ ಸ ಯನ್ತ್ರಾನಿಗೃಹೀತ ವಾಹಾತ್ |**
**ತಾಂ ಭ್ರಾತೃಜಾಯಾಂ ಪುಲಿನೇಽವತಾರ್ಯ ||**
**ಗಂಗಾಂ ನಿಷಾದಾಹೃತ ನೌವಿಶೇಷಃ |**
**ತತಾರ ಸಂಧಾಮಿವ ಸತ್ಯಸಂಧಃ || ೫೨ ||**

ಆ ಸತ್ಯರತನು (ಸತ್ಯಸಂಧನು) ಕುದುರೆಗಳನ್ನು ನಿಲಿಸಿ ಅತ್ತಿಗೆಯನ್ನು ತೇರಿನಿಂದ ಇಳಿಸಿದನು. ಅವರು ಗಂಗಾನದಿಯ ತೀರಪ್ರದೇಶದಲ್ಲಿರುವ ಮರಳರಾಶಿಯಲ್ಲಿ ನಡೆದು ಸಾಗಿದರು. ಆ ಬಳಿಕ ಅವರು ನಿಷಾದನೊಬ್ಬನು ನಡೆಸಿದ ದೋಣಿಯಲ್ಲಿ ಕುಳಿತು ವಿಶಾಲ ವಾಗಿ ಹರಿಯುತ್ತಿರುವ ಪವಿತ್ರವಾದ ಗಂಗಾನದಿಯನ್ನು ದಾಟಿದರು. ಆ ಸತ್ಯವ್ರತನು ತನ್ನ ಅಣ್ಣನ ಆಜ್ಞೆಯನ್ನು ಪಾಲಿಸಿದಂತೆ ತೆರೆಗಳಿಂದ ಘರ್ಜಿಸುತ್ತಿರುವ ಗಂಗೆಯನ್ನು ಉತ್ತರಿಸಿದನು (ದಾಟಿದನು) (ದಾಟಿದನು ಗಂಗೆಯನು ದಾಟುವೊಲು ಮೇರೆಯನು ಆ ಸತ್ಯರತನು).

ಅನ್ವಯ :—ಸತ್ಯಸಂಧಃ ಸಃ ಯನ್ತ್ರಾನಿಗೃಹೀತವಾಹಾತ್ ರಥಾತ್ ಭ್ರಾತೃಜಾಯಾಂ ಪುಲಿನೇ ಅವತಾರ್ಯ ನಿಷಾದಾಹೃತನೌವಿಶೇಷಃ ಗಂಗಾಂ ಸಂಧಾಂ ಇವ ತತಾರ ||

ಸತ್ಯಸಂಧಃ = ಸತ್ಯಪ್ರತಿಜ್ಞಃ—ಪುಲಿನೇಽವತಾರ್ಯಾರೋಪ್ಯ—ನಿಷಾದೇನ = ಕಿರಾತೇನಾಹೃತವಿಶೇಷ ಆನೀತದೃಢನೌಕಃ ಸನ್—ಗಂಗಾಂ = ಭಾಗೀರಥೀಮ್—ಸಂಧಾಂ = ಪ್ರತಿಜ್ಞಾಮಿವ ತತಾರ—"ಸಂಧಾ ಪ್ರತಿಜ್ಞಾ ಮರ್ಯಾದಾ" ಇತ್ಯಮರಃ—ಸಂಧಾ = ಪ್ರತಿಜ್ಞೆ, ಮರ್ಯಾದೆ—ಯಂತೃ = ಸಾರಥಿ, ಪುಲಿನ = ಮರಳದಂಡೆ—ತನ್ನ ಪ್ರತಿಜ್ಞೆಯನ್ನೇ ದಾಟುವಂತೆ ಗಂಗೆಯನ್ನು ದಾಟಿದನು—ಸತ್ಯಸಂಧಃ = ಸತ್ಯಸಂಧಾ ಯಸ್ಯ ಸಃ ||

**53. ಅಥ ವ್ಯವಸ್ಥಾಪಿತವಾಕ್ಕಥಂಚಿತ್ |**
**ಸೌಮಿತ್ರಿರಂತರ್ಗತಬಾಷ್ಪಕಂಠಃ ||**
**ಔತ್ಪಾತಿಕಂ ಮೇಘ ಇವಾಶ್ಮವರ್ಷಂ |**
**ಮಹೀಪತೇಃ ಶಾಸನಮುಜ್ಜಗಾರ || ೫೩ ||**

ಆ ಬಳಿಕ ಸೌಮಿತ್ರಿಯು ಬಹಳ ಕಷ್ಟದಿಂದ ಕಂಬನಿಗಳ ಮಳೆ ಸುರಿಸುತ್ತಾ, ಗದ್ಗದ ಕಂಠದಿಂದ ಮೇದಿನೀಪತಿಯಾದ ತನ್ನ ಅಣ್ಣನ (ರಾಮಣ್ಣನ) ಆಜ್ಞೆಯನ್ನು (ಅಣತಿಯನ್ನು) ಮೆಲ್ಲಮೆಲ್ಲನೆ ತೊದಲುನುಡಿಯಿಂದ (ತೊದಲುತ್ತಾ) ಹೇಳತೊಡಗಿದನು. ಶಬ್ದಗಳನ್ನು ಜೋಡಿಸುತ್ತಾ, ತಡವರಿಸುತ್ತಾ ನುಡಿದನು. ಉತ್ಪಾತವನ್ನು ಹಾನಿಯನ್ನುಂಟುಮಾಡುವ ಮೇಘಮಾಲೆಗಳು (ಮೋಡರಾಶಿಗಳು) ಸುಂಟರಗಾಳಿಯಿಂದೊಡಗೂಡಿ (ಬಿರುಗಾಳಿ, ತೂಫಾನ್) ಆಲಿಕಲ್ಲಿನ ಮಳೆಯನ್ನು ಸುರಿಸುವಂತೆ (ಉತ್ಪಾತ ಮೇಘತಾನಶ್ಮವನು ಕರೆವಂತೆ), ಕಾರ್ಮುಗಿಲು ಉಬ್ಬಿ ಸುರಿಯುವಂತೆ ಮರ್ಮಾಘಾತಕವಾದ ನುಡಿಗಳನ್ನು ಕಂಠಸ್ತಂಭಿತಾಶ್ರುಮುಖಿ ಸೌಮಿತ್ರಿ ನುಡಿದನು. (ಕಷ್ಟದಿಂದೆಂತೆಂತೋ ನುಡಿಗಳನ್ನು ಪೋಣಿಸುತ್ತೆ).

ಅನ್ವಯ :—ಅಥ ಕಥಂಚಿತ್ ವ್ಯವಸ್ಥಾಪಿತವಾಕ್ ಅಂತರ್ಗತ ಬಾಷ್ಪಕಂಠಃ ಸೌಮಿತ್ರಿಃ ಮಹೀಪತೇಃ ಶಾಸನಂ ಮೇಘಃ ಔತ್ಪಾತಿಕಂ ಅಶ್ಮವರ್ಷಂ ಇವ ಉಜ್ಜಗಾರ ||

ಸ ಅಂತರ್ಗತಬಾಷ್ಪಃ ಕಂಠೋ ಯಸ್ಯ ಸಃ = ಕಂಠಸ್ತಂಭಿತಾಶ್ರುರಿತ್ಯರ್ಥಃ—ಅಶ್ಮವರ್ಷಂ = ಶಿಲಾವರ್ಷಮಿವ—ಉಜ್ಜಗಾರೋ = ಉದ್ಗೀರ್ಣವಾನ್—"ದಾರುಣತ್ವೇನಾವಾಚ್ಯತ್ವಾನ್ "ಉಜ್ಜಗಾರ" ಇತ್ಯುಕ್ತಮ್—ಔತ್ಪಾತಿಕಃ = ಉತ್ಪಾತೋ ಅಶುಭ ಸೂಚನಂ ಪ್ರಯೋಜನಂ ಯಸ್ಯ ಸಃ । ಅಂತರ್ಗತಬಾಷ್ಪಃ ಕಂಠಃ ಯಸ್ಯ ಸಃ = ತಡೆ ಹಿಡಿದ ಕಣ್ಣೀರಿನಿಂದ ಕೂಡಿದ ಗಂಟಲುಳ್ಳ—ಉಜ್ಜಗಾರ = ಉತ್ + ಗೃ ಧಾತು ಲಿಟ್ (ಭೂತಕಾಲ) ವ್ಯವಸ್ಥಾಪಿತವಾಕ್ = ಕಷ್ಟದಿಂದ ಎಂತೆಂತೋ ನುಡಿಗಳನು ಪೋಣಿಸುತೆ —ಅಂತರ್ಗತಬಾಷ್ಪಕಂಠಂ = ಅಂತರ್ಗತಃ ಬಾಷ್ಪಃ ಯಸ್ಯ ಏತಾದೃಶಃ ಕಂಠಃ ಯಸ್ಯ ಸಃ= ಕಂಠಸ್ತಂಭಿತಾಶ್ರು ||

**54.** **ತತೋಽಭಿಷಂಗಾನಿಲ ವಿಪ್ರವಿದ್ಧಾ ।**
**ಪ್ರಭ್ರಶ್ಯಮಾನಾಭರಣಪ್ರಸೂನಾ ॥**
**ಸ್ವಮೂರ್ತಿಲಾಭಪ್ರಕೃತಿಂ ಧರಿತ್ರೀಂ ।**
**ಲತೇವ ಸೀತಾ ಸಹಸಾ ಜಗಾಮ** || ೫೪ ||

ಆ ಮಾತನ್ನು ಕೇಳಿದ ಕೂಡಲೇ ಆಘಾತಹೊಂದಿ ಸೀತಾದೇವಿಯು ನೆಲದಲ್ಲಿ ಉರುಳಿಬಿದ್ದಳು. ಚಂಡಮಾರುತದಿಂದ ಘಾತಿಗೊಂಡ (ಹೊಡೆಯಲ್ಪಟ್ಟ) ಒಂದು ಬಳ್ಳಿಯು ಸೀತೆಯೆಂಬ ಲತೆ (ಅಭಿಷಂಗಜಂಝಾನಿಲಾಭಿಹತೇ) ತನ್ನ ಹೂಗಳು ನೆಲದಲ್ಲಿ ಚೆಲ್ಲಿರಲು ಭೂತಳದ ಮೇಲೆ ಸೀತೆ ಹೆಮ್ಮೈಸಿ ಬಿದ್ದಿದ್ದಳು. ಅವಳ ಆಭರಣಗಳು, ಲತೆಯ ಹೂಗಳು ಜಂಝಾವಾತದಿಂದ ರಭಸದಿಂದ ಚೆಲ್ಲಾಪಿಲ್ಲಿಯಾಗಿ ಬಿದ್ದಿರುವಂತೆ (ಜಗುಳುತಿರಲಾಭರಣಕುಸುಮಂಗಳಿಂದು) ನೆಲದಲ್ಲಿ ಅಲ್ಲಲ್ಲಿ ಬಿದ್ದಿದ್ದುವು. ಆ ದೇವಿಯು ಯಾರಿಂದ ಜನಿಸಿಬಂದಳೋ (ಅವಳ ಜನನಕ್ಕೆ ಕಾರಣವಾದ) (ನಿಜಮೂರ್ತಿಯುದ್ಭವದ ನೆಲೆಯುಹ) ಅಂತಹ ಭೂಮಾತೆಯ ಮೈಮೇಲೆ (ಪ್ರಕೃತಿಮಾತೆ, ವಸುಂಧರೆ) ಪ್ರಜ್ಞಾಶೂನ್ಯಳಾಗಿ ಮಲಗಿದಳು. ಸ್ತ್ರೀಯರಿಗೆ ತಾಯಿಯಲ್ಲದೆ ಹೆಚ್ಚಿನ ಬಂಧು ಲೋಕದಲ್ಲಿ ಯಾರಿರುವರು ? (ತಾಯಿಗಿಂತ ಬಂಧುವಿಲ್ಲ, ಉಪ್ಪಿಗಿಂತ ರುಚಿಯಿಲ್ಲ) (ತಾಯಿ ಸತ್ತ

ಮೇಲೆ ತವರಾಸೆಯೆ ?) ಕೈಹಿಡಿದ ಗಂಡನು ತೊರೆದಾಗ ಆಕೆ ತಾಯಿಗೇ ಶರಣು ಹೋಗುವುದು ಸ್ವಾಭಾವಿಕವಷ್ಟೆ ?

ಅನ್ವಯ :—ತತಃ ಅಭಿಷಂಗಾನಿಲವಿಪ್ರವಿದ್ಧಾ ಪ್ರಭ್ರಶ್ಯಮಾನಾಭರಣಪ್ರಸೂನಾ ಸೀತಾ ಲತಾ ಇವ ಸಹಸಾ ಸ್ವಮೂರ್ತಿಲಾಭಪ್ರಕೃತಿಂ ಧರಿತ್ರೀಂ ಜಗಾಮ ॥

ಅಭಿಷಂಗಃ = ಪರಾಭವಃ—"ಶಾಪೇತ್ವಭಿಷಂಗಃ ಪರಾಭವೇ" ಇತ್ಯಮರಃ—ವಿಪ್ರವಿದ್ಧಾ = ಅಭಿಹತಾ—ಪ್ರಭ್ರಶ್ಯಮಾನಾನಿ ಪತಂತ್ಯಾಭರಣಾನ್ಯೇವ ಪ್ರಸೂನಾನಿ ಯಸ್ಯಾಃ ಸಾ ಸೀತಾ ಲತೇವ—ಸ್ವಶರೀರಲಾಭಸ್ಯ ಸ್ವೋತ್ಪತ್ತೇಃ ಪ್ರಕೃತಿಂ ಕಾರಣಂ ಧರಿತ್ರೀಂ ಜಗಾಮ—ಸ್ತ್ರೀಣಾಮಾಪದಿ ಮಾತೈವ ಶರಣಮಿತಿ ಭಾವಃ—ಅಭಿಷಂಗಃ = ಅನಿರೀಕ್ಷಿತ ಆಘಾತ—ಶಾಪೇತ್ವಭಿಷಂಗಃ ಪರಾಭವೇ—ಅನಿಲ = ಜುಂಝಾವಾತ—ಸ್ವಮೂರ್ತಿಲಾಭಪ್ರಕೃತಿ=ನಿಜಮೂರ್ತಿಯುದ್ಭವದ ನೆಲೆಯಾದ ವಸುಂಧರೆಯು. ಉಪಮಾಲಂಕಾರ॥

**55. ಇಕ್ಷ್ವಾಕುವಂಶಪ್ರಭವಃ ಕಥಂ ತ್ವಾಂ ।**
**ತ್ಯಜೇದಕಸ್ಮಾತ್ಪತಿರಾರ್ಯವೃತ್ತಃ ॥**
**ಇತಿ ಕ್ಷಿತಿಃ ಸಂಶಯಿತೇವ ತಸ್ಯೈ ।**
**ದದೌ ಪ್ರವೇಶಂ ಜನನೀ ನ ತಾವತ್ ॥ ೫೫ ॥**

ಇಕ್ಷ್ವಾಕುವಂಶಸಂಭವನಾದ ಶ್ರೀರಾಮಚಂದ್ರನು ಉತ್ತಮ ನಡತೆಯ ಸಾಕಾರ ಮೂರ್ತಿ. ಹಾಗಿರುವಾಗ ಮಹಾಕುಲಪ್ರಸೂತಳಾದ, ಆರ್ಯೆಯಾದ, ಸಾಧುಚರಿತಳಾದ, ಪತಿಪರಾಯಣೆಯಾದ, ಸತಿಕುಲತಿಲಕಳಾದ ಸೀತೆಯು ಶ್ರೀರಾಮಚಂದ್ರನಿಗಾಗಿ ಪ್ರಕೃತಿಯಿಂದಲೇ ಹುಟ್ಟಿಬಂದವಳು, ಅಯೋನಿಜೆ. ಅಂತಹ ಪತಿವ್ರತೆಯನ್ನು, ಪರಮಪವಿತ್ರೆಯನ್ನು, ಧರ್ಮರಕ್ಷಕನಾದ ಸೀತಾರಾಮನು ಕಾರಣವಿಲ್ಲದೆ ಅಲ್ಪಾಗಸನ ಕ್ಷುಲ್ಲಕ ಮಾತಿಗಾಗಿ ತ್ಯಜಿಸುವುದೆಂತು. ಆಕೆಯಾದರೋ ಸಂಶಯಾತೀತಳು. ಶ್ರೀರಾಮನು ಪರಮಾತ್ಮನಾದ ಸಾಕ್ಷಾತ್ ಆತ್ಮಪುರುಷನು (ವಿರಾಟ್‌ಪುರುಷನು), ದಯಾಳು. ಸೀತೆ ಮಹಾಲಕ್ಷ್ಮಿ. ಆಕೆ ಪ್ರಕೃತಿಲಕ್ಷ್ಮಿ. ಹೀಗಿರಲು ನಿಷ್ಕಾರಣವಾಗಿ ತ್ಯಜಿಸುವುದು ಅಸಂಭವವೆಂಬುದನ್ನು ತಿಳಿದು ಭೂದೇವಿಯು ತನ್ನ ಮಗಳನ್ನು, ತನ್ನ ಒಡಲಲ್ಲಿ ಸೇರಿಸಿಕೊಳ್ಳಲಿಲ್ಲ. ಸೀತೆಯು ಕತ್ತರಿಸಿದ ಬಳ್ಳಿಯೊಂದು ನೆಲದ ಮೇಲೆ ಹರಡಿಬಿದ್ದಂತೆ ಎಚ್ಚರತಪ್ಪಿ ನೆಲದ ಮೇಲೆ ಮಲಗಿದ್ದಳು.

ಅನ್ವಯ :—"ಇಕ್ಷ್ವಾಕುವಂಶಪ್ರಭವ ಆರ್ಯವೃತ್ತಃ ಪತಿಃ ತ್ವಾಂ ಅಕಸ್ಮಾತ್ ಕಥಂ ತ್ಯಜೇತ್" ಇತಿ ಸಂಶಯಿತಾ ಇವ ತಾವತ್ ಜನನೀ ಕ್ಷಿತಿಃ ಅಸ್ಯೈ ಪ್ರವೇಶಂ ನ ದದೌ ॥

ಇಕ್ಷ್ವಾಕುವಂಶಪ್ರಭವಃ-ಆರ್ಯವೃತ್ತಃ = ಸಾಧುಚರಿತಃ—ಪತಿ = ಭರ್ತಾ-ಅಸಂಭಾವಿತಮಿತ್ಯರ್ಥಃ—ಇತಿ ಸಂಶಯಿತೇವ ಸಂದಿಹಾನೇವ ತಾವತ್—ಜನನೀ ಕ್ಷಿತಿಸ್ತಸ್ಯೈ ಸೀತಾಯೈ ಪ್ರವೇಶಮ್—ನ ದದೌ— ಆರ್ಯವೃತ್ತಃ = ಸಾಧುಚರಿತಃ ॥ ಉತ್ಪ್ರೇಕ್ಷಾಲಂಕಾರ ॥

**56. ಸಾ ಲುಪ್ತಸಂಜ್ಞಾ ನ ವಿವೇದ ದುಃಖಂ ।**
**ಪ್ರತ್ಯಾಗತಾಸುಃ ಸಮತಪ್ಯತಾಂತಃ ॥**

**ತಸ್ಯಾಃ ಸುಮಿತ್ರಾತ್ಮಜಯತ್ನಲಬ್ಧೋ ।**
**ಮೋಹಾದಭೂತ್ಕಷ್ಟತರಃ ಪ್ರಬೋಧಃ ॥ ೫೬ ॥**

ಧರೆಯಲ್ಲಿ ಹಮ್ಮೈಸಿಬಿದ್ದಾಗ, ನಷ್ಟಚೇತನಳಾಗಿದ್ದಾಗ ಆಕೆಯು ದುಗುಡವನ್ನು ಒಂದಿಷ್ಟೂ ಅರಿಯದೆಯಿದ್ದಳು. ಆದರೆ ಮೈದುನನ (ಸುಮಿತ್ರಾನಂದನನ) ಶೈತ್ಯೋಪಚಾರದಿಂದ, ಆತನ ಪ್ರಯತ್ನದಿಂದ ಮೂರ್ಛೆ ಅಳಿದು ಎಚ್ಚರಗೊಂಡಾಗ ಹೋದ ಪ್ರಾಣ ಮರಳಿ ಬಂದಾಗ ದುಃಖಸಂತಾಪವು ಉಮ್ಮಳಿಸಿ ಆಕೆಯು ಪುನಃ ಬೆಂದು ಬೇಗುದಿ ಹೋದಳು. ದುಃಖದಿಂದ ತಪ್ತಳಾದಳು. ಲಕ್ಷ್ಮಣನ ಸಹಾಯದಿಂದ ಮರಳಿ ಎಚ್ಚರವಾದುದನ್ನರಿತು ಆಕೆಯ ದುಃಖವು (ಗಂಡನ ಮೇಲಿನ ಅತಿಯಾದ ಪ್ರೇಮದಿಂದ) ಸಹಿಸಲು ಅಸದಳವಾದುದು ಆ ಮಹಾಸತಿಗೆ ಅಂದು (ಲಬ್ಧ ಮಾದೆಚ್ಚರವು ಮೋಹದಿಂದ ಅತಿಕಷ್ಟವೆನಿಸಿರ್ಪುದು.)

ಅನ್ವಯಃ :—ಲುಪ್ತಸಂಜ್ಞಾ ಸಾ ದುಃಖಂ ನ ವಿವೇದ। ಪ್ರತ್ಯಾಗತಾಸುಃ ಅಂತಃ ಸಮತಪ್ಯತ। ತಸ್ಯಾಃ ಸುಮಿತ್ರಾತ್ಮಜಯತ್ನಲಬ್ಧಃ ಪ್ರಬೋಧಃ ಮೋಹಾತ್ ಕಷ್ಟತರಃ ಅಭೂತ್ ॥

ಲುಪ್ತಸಂಜ್ಞಾ = ನಷ್ಟಚೇತನಾ, ಮೂರ್ಛಿತಾ (ಸಾ ದುಃಖ ನ ವಿವೇದ)—ಸುಮಿತ್ರಾತ್ಮಜಯತ್ನಲಬ್ಧಃ ಪ್ರಬೋಧೋ ಮೋಹಾತ್ಕಷ್ಟತರೋಽತಿದುಃಖದೋಽಭೂತ್। ದುಃಖವೇದನಾಸಂಭವಾದಿತಿ ಭಾವಃ—ಪ್ರತ್ಯಾಗತಾಃ ಅಸವಃ ಯಸ್ಯಾಃ ಸಾ ಪ್ರತ್ಯಾಗತಾಸುಃ = ಪ್ರಾಣವನ್ನು ಹಿಂತಿರುಗಿ ಪಡೆದವಳಾಗಿ—ಅಂತಃ ಸಮತಪ್ಯತ = ಮನಸ್ಸಿನಲ್ಲೇ ನೋಯಿಸಲ್ಪಟ್ಟವಳು—ಲುಪ್ತಸಂಜ್ಞಾ = ನಷ್ಟಚೇತನಳು (ಲುಪ್ತಸಂಜ್ಞಾ ಯಸ್ಯಾಃ ಸಾ) ॥

**57. ನ ಚಾವದದ್ಭರ್ತುರವರ್ಣಮಾರ್ಯಾ ।**
**ನಿರಾಕರಿಷ್ಣೋರ್ವೃಜಿನಾದೃತೇಽಪಿ ॥**
**ಆತ್ಮಾನಮೇವ ಸ್ಥಿರದುಃಖಭಾಜಂ ।**
**ಪುನಃಪುನಃ ದುಷ್ಕೃತಿನಂ ನಿನಿಂದ ॥ ೫೭ ॥**

ಆ ಮಹಾಸಾಧ್ವಿಯು ತಾನು ಕಲುಷವಿದೂರಳಾದರೂ, ಜನರ ನಿಂದೆಗೆ ಪಾತ್ರಳಾದುದಕ್ಕೆ ತನ್ನ ಪ್ರಿಯಪತಿಯನ್ನು ಒಮ್ಮೆಯೂ ದೂರಲಿಲ್ಲ, ಬಯ್ಯಲಿಲ್ಲ, ಶಪಿಸಲಿಲ್ಲ. ಅದು ತನ್ನ ಹಿಂದಿನ ಜನ್ಮದ ಹೇತು, ಕರ್ಮಫಲ(ಪ್ರಾಕೃತಕರ್ಮಫಲ)ವೆಂದೇ ಭಾವಿಸಿ ತನ್ನನ್ನೇ ತಾನು ಹಳಿದುಕೊಂಡಳು. ತನ್ನ ಜೀವಿತಕ್ಕೆ ಅಂಟಿಕೊಂಡಿರುವ ಜನನಿಂದೆಯು, ಜನಾಪವಾದವು ತನ್ನನ್ನು ಸ್ಥಿರದುಃಖಕ್ಕೆ ತಳ್ಳುವುದನ್ನು ಅರಿತುಕೊಂಡಳು. ಆದರಿಂದ ತನಗೆ ಜೀವಿತವೇ ನಷ್ಟವಾದಂತೆ, ಮಾನಸಿಕ ಯಾತನೆಗೆ ಒಳಗಾದಂತೆ, ತನಗೆ ಆ ಚಿರದುಃಖದಿಂದ ಮೋಕ್ಷವಿಲ್ಲವೆಂದು ಅರಿತರೂ ತನ್ನ ಪತಿಯ ಬಗ್ಗೆ ಅಭಿಮಾನದ ಸ್ವರದಲ್ಲೇ ಮುನ್ನಡೆದಳು. ಗಂಡನನ್ನು ಮಾತ್ರ ತುಚ್ಛೀಕರಿಸಲಿಲ್ಲ. ಅವನಲ್ಲೇ ತನ್ನ ನೆಲೆಯನ್ನು ಇರಿಸಿರ್ದಳು. (ತನ್ನನೇ ಸಲಸಲಕೆ ಜರಿದುಕೊಳುತಿಹಳು.)

ಅನ್ವಯಃ :—ಆರ್ಯಾ ವೃಜಿನಾತ್ ಋತೇ ಅಪಿ ನಿರಾಕರಿಷ್ಣೋಃ ಭರ್ತುಃ ಅವ

ರ್ಣಂನ ಚ ಅವದತ್, ಸ್ಥಿರದುಃಖಭಾಜಂ ಆತ್ಮಾನಂ ದುಷ್ಕೃತಿನಂ ಪುನಃಪುನಃ ನಿನಿಂದ ॥
"ಕಲುಷಂ ವೃಜಿನೈನೋಽಘವತ್" ಇತ್ಯಮರಃ—ನಿರಾಕರಿಷ್ಣೋರ್ನಿರಾಸಕಸ್ಯ—ಭರ್ತುರ್ಗರ್ವಾರ್ಣವೇಪವಾದಂ ನ ಚಾವದನ್ನ್ಯವಾ ವಾದೀತ್ ॥

ಸ್ಥಿರದುಃಖಭಾಜಂ=ಯಾವಾಗಲೂ ದುಃಖಭಾಗಿನಿಯಾದ—ವೃಜಿನಾತ್=ಋ "ಅನ್ಯ" ಮುಂತಾದ ಪದಗಳ ಪ್ರಯೋಗದಲ್ಲಿ ಪಂಚಮೀವಿಭಕ್ತಿ ಬರುತ್ತದೆ. ಆದ್ದರಿಂದ ಋತೇ ಪದಪ್ರಯೋಗದಲ್ಲಿ "ವೃಜಿನಾತ್" ಎಂದಿದೆ. "ನಿರಾಕೃ" ಪದಕ್ಕೆ "ಇಷ್ಣುಚ್" ಪ್ರತ್ಯಯವು ಸೇರಿ "ನಿರಾಕರಿಷ್ಣುಃ" ಎಂದಾಗುತ್ತದೆ. ನಿರಾಕರಿಷ್ಣುಃ = ನಿರಾಕೃ + ಇಷ್ಣು (ಚ) ॥

**58.** **ಆಶ್ವಾಸ್ಯ ರಾಮಾವರಜಃ ಸತೀಂ ತಾಂ ।**
**ಆಖ್ಯಾತವಾಲ್ಮೀಕಿನಿಕೇತಮಾರ್ಗಃ ॥**
**ನಿಘ್ನಸ್ಯ ಮೇ ಭರ್ತೃನಿದೇಶರೌಕ್ಷ್ಯಂ ।**
**ದೇವಿ ಕ್ಷಮಸ್ವೇತಿ ಬಭೂವ ನಮ್ರಃ** ॥ ೫೮ ॥

ರಾಮಾನುಜನು (ಲಕ್ಷ್ಮಣನು) ಆ ಬಳಿಕ ಸಂತವಿಸುತ್ತಾ ನುಡಿದು ವಾಲ್ಮೀಕಿಮಹರ್ಷಿಯ ತಪೋವನಕ್ಕೆ ಹೋಗುವ ಆಶ್ರಮದ ದಾರಿಯನ್ನು ತೋರಿದನು. "ಹೇ ಮಾತೆ (ಹೇ ತಾಯೆ) (ಓ ಅಪ್ಪೆ—ತೌಳವಪದ) ನಾನು ಸ್ವಾಮಿಯ ಅಧೀನನು. ಅಣ್ಣನ ಆಜ್ಞೆಯನ್ನು ಪಾಲಿಸಿದೆನು. ಅಣ್ಣನ ರಾಜಾಜ್ಞೆಯನ್ನು ವಿಚಾರಲಾರದೆ ಬಲು ಕಠಿಣನಾಗಿ ನಡೆದುಕೊಂಡೆನು. ನನ್ನ ದೌರ್ಜನ್ಯವನ್ನು ಮನ್ನಿಸು ತಾಯೆ" ಎಂದು ಬಹಳ ನಮ್ರತೆಯಿಂದ ನುಡಿದು, ಕ್ಷಮೆಯನ್ನು ಬೇಡುತ್ತ ಅತ್ತಿಗೆಯ ಪವಿತ್ರವಾದಪದ್ಮಂಗಳಿಗೆ ಶಿರಸಾಷ್ಟಾಂಗ ವಂದಿಸಿದನು. ತನ್ನ ಅಸಹಾಯಕತೆಯನ್ನು ಹೇಳುತ್ತಾ ಕ್ಷಮಿಸುವುದೆಂದು ಪ್ರಾರ್ಥಿಸಿದನು.

ಅನ್ವಯ :–ರಾಮಾವರಜಃ ಸತೀಂ ತಾಂ ಆಶ್ವಾಸ್ಯ ಆಖ್ಯಾತವಾಲ್ಮೀಕಿನಿಕೇತ ಮಾರ್ಗಃ ನಿಘ್ನಸ್ಯ ಮೇ ಭರ್ತುಃ ನಿದೇಶ ರೌಕ್ಷ್ಯಂ, ದೇವಿ ಕ್ಷಮಸ್ವ ಇತಿ ನಮ್ರಃ ಬಭೂವ ॥
ರಾಮಾವರಜೋ = ಲಕ್ಷ್ಮಣಃ—ಸತೀಂ = ಸಾಧ್ವೀಂ—ಆಖ್ಯಾತ = ಉಪದಿಷ್ಟೋ—ವಾಲ್ಮೀಕಿರ್ನಿಕೇತಸ್ಯ = ಆಶ್ರಮಸ್ಯ—ನಿಘ್ನಸ್ಯ = ಪರಾಧೀನಸ್ಯ—"ಅಧೀನೋ ನಿಘ್ನ ಆಯತ್ತಃ" ಇತ್ಯಮರಃ—ಮೇ ಭರ್ತುರ್ನಿದೇಶೇನ = ಸ್ವಾಮ್ಯಾನುಜ್ಞಯಾ ಹೇತುನಾ—ಯಂದ್ರೌಕ್ಷ್ಯಂ = ಪಾರುಷ್ಯಂ—ತದ್ದೇ ದೇವಿ ! ಕ್ಷಮಸ್ವ ! ಇತಿ ನಮ್ರಃ = ಪ್ರಣತೋ ಬಭೂವ—ಅಧೀನೋ ನಿಘ್ನ ಆಯತ್ತಃ । ಅಧೀನ, ನಿಘ್ನ, ಆಯತ್ತ ಸಮಾನಾರ್ಥಕ ಪದಗಳು. ರೌಕ್ಷ್ಯ = ಕಠೋರತೆ—ನಿಘ್ನಸ್ಯ = ಪರಾಧೀನಸ್ಯ—ಭರ್ತೃನಿದೇಶ = ಭರ್ತುಃ ನಿದೇಶೇನ ರೌಕ್ಷ್ಯಂ, ಭರ್ತೃನಿದೇಶೇನ ರೌಕ್ಷ್ಯಮ್ ॥

**59.** **ಸೀತಾ ಸಮುತ್ಥಾಪ್ಯ ಜಗಾದ ವಾಕ್ಯಂ ।**
**ಪ್ರೀತಾಸ್ಮಿ ತೇ ಸೌಮ್ಯ ಚಿರಾಯ ಜೀವ ॥**

**ಬಿಡೌಜಸಾ ವಿಷ್ಣುರಿವಾಗ್ರಜೇನ ।**
**ಭ್ರಾತ್ರಾ ಯದಿತ್ಥಂ ಪರವಾನಸಿ ತ್ವಮ್** ॥ ೫೯ ॥

ಸೀತೆ ಆತನನ್ನು ಮೈದಡವಿ ಎತ್ತಿ ಹೇಳ್ದಳೀ ವಾಕ್ಯವನು : "ಹೇ ಸೌಮ್ಯನೆ (ಹೇ ಸೌಮ್ಯ ಚಿತ್ತನೆ, ಹೇ ಮೈದುನಾ), ನೀನು ಚಿರಕಾಲ ಬದುಕು. ನಾನು ನಿನ್ನ ಬಗ್ಗೆ ಸಂಪ್ರೀತಳಾಗಿರುವೆನು. ಪ್ರೀತಳಾದೆನು ಸೌಮ್ಯ, ಚಿರಕಾಲ ಬದುಕು). ನನ್ನ ವಿಧಿಗಾಗಿ, ದುರದೃಷ್ಟಕ್ಕಾಗಿ ನಿನ್ನನ್ನು ನಾನು ದೂರಲಾರೆನು. ನಿನ್ನ ಸಂಕಷ್ಟಗಳನ್ನು ನಾನು ಅರಿತಿರುವೆನು. ನೀನು ನಿನ್ನ ಅಣ್ಣನ (ಯಜಮಾನ-ಕಿಂಕರ) ಅಧೀನನು. ಹೇಗೆ ಮಹಾವಿಷ್ಣುವು ದೇವೇಂದ್ರನ ಇಚ್ಛೆಗೆ ಅಧೀನನಾಗಿ ನಡೆದುಕೊಂಡಂತೆ ನೀನು ನಿನ್ನ ಅಣ್ಣನ, ಜ್ಯೇಷ್ಠಭ್ರಾತೃವಿನ ವಾಕ್ಯವನ್ನು ವೇದವಾಕ್ಯದಂತೆ ಪರಿಪಾಲಿಸಿರುವೆ. ನೀನು ಪರತಂತ್ರನು (ದಾಸಾನುದಾಸನು) —ಅಗ್ರಜನ ಆಣತಿಯಂತೆ ನಡೆದುಕೊಂಡಿರುವೆ." (ನೀನು ಅಗ್ರಜಾತಂಗೆ ಅಧೀನನಹೆ ಯೆಂತು).

ಅನ್ವಯ :—ಸೀತಾ ತಂ ಉತ್ಥಾಪ್ಯ ವಾಕ್ಯಂ ಜಗಾದ "ಹೇ ಸೌಮ್ಯ, ತೇ ಪ್ರೀತಾ ಅಸ್ಮಿ। ಚಿರಾಯು ಜೀವ। ಯತ್ ಬಿಡೌಜಸಾ ವಿಷ್ಣುಃ ಇವ ಅಗ್ರಜೇನ ಭ್ರಾತ್ರಾ ತ್ವಂ ಇತ್ಥಂ ಪರವಾನ್ ಅಸಿ ॥"

ಹೇ ಸೌಮ್ಯ = ಸಾಧೋ—ತೇ ಪ್ರೀತಾಸ್ಮಿ—ಚಿರಾಯು ಚಿರಂಜೀವ—ಬಿಡೌಜಸ = ಇಂದ್ರ—ವಿಷ್ಣುರುಪೇಂದ್ರ ಇವ—ಅಗ್ರಜೇನ = ಜ್ಯೇಷ್ಠೇನ—ಪರವಾನ್ = ಪರತಂತ್ರೋಽಸಿ—ಉಪೇಂದ್ರ ಇಂದ್ರಾವರಜಃ—ವಿಟ್ ವ್ಯಾಪಕಂ, ಓಜಃ ಯಸ್ಯ ಸಃ ವಿಡೌಜಾಃ = ಇಂದ್ರ = ಪೇವೇಷ್ಟಿ ಇತಿ ವಿಟ್—ವಿಟ್ = ಓಜಃ ಯಸ್ಯ ಇತಿ ॥

60. **ಶ್ವಶ್ರೂಜನಂ ಸರ್ವಮನುಕ್ರಮೇಣ ।**
**ವಿಜ್ಞಾಪಯ ಪ್ರಾಪಿತ ಮತ್ಪ್ರಣಾಮಃ ॥**
**ಪ್ರಜಾನಿಷೇಕಂ ಮಯಿ ವರ್ತಮಾನಂ ।**
**ಸೂನೋರನುಧ್ಯಾಯತ ಚೇತಸೇತಿ** ॥ ೬೦ ॥

ಆ ಬಳಿಕ ಸೀತೆ ತನ್ನ ಮೂವರು ಅತ್ತೆಯಂದಿರನ್ನು ಜ್ಞಾಪಿಸಿಕೊಂಡಳು. ಹಿರಿಯತ್ತೆ ಕೌಸಲ್ಯೆ, ಕಿರಿಯತ್ತೆ ಕೈಕೇಯಿ, ನಡುವಣ ಅತ್ತೆ ಸುಮಿತ್ರಾದೇವಿ. ಆ ದೇವಿಯು ತನ್ನೊಂದು ಹೃದಯವೇದನೆಯನ್ನು ಹೀಗೆ ತೋಡಿಕೊಂಡಳು : "ಎಲೈ ಮೈದುನಾ, ನಾನು ನನ್ನ ಅತ್ತೆಯಂದಿರ ಪವಿತ್ರಪಾದಕಮಲಗಳಿಗೆ ಕ್ರಮವತ್ತಾಗಿ ಮಣಿದು, ಆಶೀರ್ವಾದವನ್ನು ಬೇಡಿರುವುದಾಗಿ ತಿಳಿಸು. ನನ್ನದೊಂದು ಬಿನ್ನಪವನ್ನು ಅವರಿಗೆ ಹೀಗೆಂದು ಬಿನ್ನವಿಸು. ಅವರು ತಮ್ಮ ಮನದಲ್ಲಿ ಆಶೀರ್ವಾದ ಮಾಡಿ ಹರಸಲಿ. ಅವರ ಸುತನಿಂದ ಉತ್ಪತ್ತಿ (ಸೃಷ್ಟಿ, ಬೀಜೋತ್ಪತ್ತಿ) ಒಂದು ಶಿಶುವು ನನ್ನ ಗರ್ಭದಲ್ಲಿ ಬೆಳೆಯುತ್ತಿದೆ ಯೆಂಬ ವಾರ್ತೆಯನ್ನು ಆ ಮಾತೆಯರಿಗೆ ತಿಳಿಸುವವನಾಗು. ಆ ಗರ್ಭಸ್ಥ ಶಿಶುವಿಗೆ ಕ್ಷೇಮವಾಗುವಂತೆ, ಮಂಗಳವಾಗುವಂತೆ ಅವರು ಆ ವಂಶದ ಕುಡಿಯನ್ನು (ಬೆಳೆದ ನನ್ನೀ ಬಸುರಿಗೊಳಿತಕ್ಕೆ ಎಂದು) ಹರಸಲಿ. ಇಕ್ಷ್ವಾಕುವಂಶದ ಚಿಗುರನ್ನು ಹರಸಿ ಕಾಪಾಡಲಿ."

ಅನ್ವಯಂ :— "ಸರ್ವಶ್ವಶ್ರೂಜನಂ ಅನುಕ್ರಮೇಣ ಪ್ರಾಪಿತ ಮತ್ಪ್ರಣಾಮಃ ವಿಜ್ಞಾಪಯ" ಮಯಿ ವರ್ತಮಾನಂ ಸೂನೋಃ ಪ್ರಜಾನಿಷೇಕಂ ಚೇತಸಾ ಅನುಧ್ಯಾಯಂತ ಇತಿ ॥

ಮತ್ಪ್ರಣಾಮಮುಕ್ತ್ವೇತ್ಯರ್ಥಃ—ವಿಜ್ಞಾಪಯ—ನಿಷಿಚ್ಯತ ಇತ = ನಿಷೇಕಃ—ಮಯಿ ವರ್ತಮಾನಂ ಸೂನೋಸ್ತ್ವತ್ ಪುತ್ರಸ್ಯ ಪ್ರಜಾನಿಷೇಕಂ ಗರ್ಭಂಚೇತಸಾನುಧ್ಯಾಯಂತ "ಶಿವಮಸ್ತು" ಇತಿ ಚಿಂತಯಂತೇತಿ—ಚಿಂತಯತ ಇತಿ—ಪ್ರಾಪಿತ ಮತ್ಪ್ರಣಾಮಃ = ನನ್ನ ವಂದನೆಗಳನ್ನು ಸಲ್ಲಿಸಿ.

**61. ವಾಚ್ಯಸ್ತ್ವಯಾ ಮದ್ವಚನಾತ್ಸ ರಾಜಾ ।**
**ವಹ್ನೌ ವಿಶುದ್ಧಾಮಪಿ ಯತ್ಸಮಕ್ಷಮ್ ॥**
**ಮಾಂ ಲೋಕವಾದಶ್ರವಣಾದಹಾಸೀಃ ।**
**ಶ್ರುತಸ್ಯ ಕಿಂ ತತ್ಸದೃಶಂ ಕುಲಸ್ಯ ॥ ೬೧ ॥**

"ಎಲೈ ಸೌಮ್ಯನೇ, ನೀನು ನನ್ನ ಮಾತುಗಳಲ್ಲೇ, ನನ್ನ ಪರವಾಗಿ ನಿನ್ನ (ನಿನ್ನ-ನನ್ನ) ಸ್ವಾಮಿಯನ್ನು ಈ ರೀತಿಯಾಗಿ ಕೇಳು. ಈ ತೆರನಾಗಿ ಪ್ರಶ್ನಿಸಿ ಉತ್ತರವನ್ನು ಪಡೆಯಬೇಕು. ಶ್ರೇಷ್ಠಕುಲದಲ್ಲಿ ಜನಿಸಿ, ಸಕಲಮಾನವಧರ್ಮಶಾಸ್ತ್ರಗಳನ್ನು ಅರಿತು ಲೋಕಾಪವಾದಕ್ಕೆ ಹೆದರಿ, ತನ್ನ ಧರ್ಮಪರಾಯಣಳಾದ ಕೈಹಿಡಿದ ಧರ್ಮಪತ್ನಿಯನ್ನು ತೊರೆಯುವುದು (ಶಿಕ್ಷಿಸುವುದು) ಎತರ ನ್ಯಾಯವೆಂದು ? (ತೊರೆದದ್ದು ತತ್ ಸದೃಶ ಕುಲಕೆ ತಕ್ಕುದೆಂತು). ಅಂದು ತನ್ನ ಎದುರಲ್ಲೇ, ತನ್ನ ಸಮಕ್ಷಮದಲ್ಲೇ, ಪ್ರತ್ಯಕ್ಷವಾಗಿ ಅಗ್ನಿಯನ್ನು ಹೊಕ್ಕು ಹೊರಬಂದ ಪರಿಶುದ್ಧಳಾದ ನನ್ನನ್ನು ಅಂದು ಸ್ವೀಕರಿಸಿ, ಇಂದು ಅಜ್ಞಾನಿಯೊಬ್ಬನ ಅಪಹೇಳನದ ಮಾತಿಗೆ ಕಟ್ಟುಬಿದ್ದು ನನ್ನನ್ನು ತೊರೆದು ಕಾಡಿಗೆ ಅಟ್ಟುವುದು ಸೂರ್ಯವಂಶದ ಪ್ರಭುವಿಗೆ ಒಪ್ಪುವ ಕೆಲಸವೆ ? ಆ ಕುಲದಲ್ಲಿ ಜನಿಸಿದ ರಾಜರಿಗೆ ಇದು ತಕ್ಕುದಾದ (ಸ್ತುತ್ಯವಾದ) ಕಾರ್ಯವೇ ಏನೆಂದು ವಿಚಾರಿಸು. ಅಂದಿನ ಅಗ್ನಿಪರೀಕ್ಷೆಯು ನಡೆದುದು ಲೋಕಾಪವಾದಕೆ ಹೆದರಿ ನಡೆದುದು ಅಲ್ಲವೇನು ? ಮಿಥ್ಯಾಪವಾದದ ಬೆದರಿಕೆ ಅಂದಿಗೆ ಅದು ಸುದಿದೆ. ಇಂದಿಗೆ ಅದು ಮರುಕಳಿಸಲು ಕಾರಣವಾದರೂ ಏನು ? ಎಂದು ನನ್ನ ಮಾತಿನಲ್ಲಿ ನೀನು ನನ್ನ ಪ್ರಭುವನ್ನು ಕೇಳು."

ಅನ್ವಯಃ ;—ಸಃ ರಾಜಾ ಮದ್ವಚನಾತ್ ವಾಚ್ಯಃ" ಸಮಕ್ಷಂ ವಹ್ನೌ ವಿಶುದ್ಧಾಂ ಅಪಿ ಮಾಂ ಲೋಕವಾದಶ್ರವಣಾತ್ ಅಹಾಸೀಃ" ಇತಿ ಶ್ರುತಸ್ಯ ಕುಲಸ್ಯ ಸದೃಶಂ ಕಿಮ್ ? ॥

ವಾಚ್ಯೋ = ವಕ್ತವ್ಯಃ—ಸಮೀಪೇ = ಸಮಕ್ಷಮ್—ಸಮಕ್ಷಮಗ್ರೇ ವಹ್ನೌ ವಿಶುದ್ಧಮಪಿ ಮಾಂ ಲೋಕಾಪವಾದಸ್ಯ, ಮಿಥ್ಯಾಪವಾದಸ್ಯ—ಅಕ್ಷ್ಣೋಃ ಸಮಂ ಸಮಕ್ಷಂ = ಕಣ್ಣ ಎದುರಿನಲ್ಲಿ.

**62. ಕಲ್ಯಾಣಬುದ್ಧೇರಥವಾ ತವಾಯಂ ।**
**ನ ಕಾಮಚಾರೋ ಮಯಿ ಶಂಕನೀಯಃ ॥**

**ಮಮೈವ ಜನ್ಮಾಂತರಪಾತಕಾನಾಂ ।**
**ವಿಪಾಕವಿಸ್ಫೂರ್ಜಥುರಪ್ರಸಹ್ಯಃ** ॥ ೬೨ ॥

ನನ್ನ ಪ್ರಿಯತಮನು ಪುಣ್ಯಗಳುಳ್ಳವನು, ಮರ್ಯಾದಾ ಪುರುಷೋತ್ತಮನು. ಕಲ್ಯಾಣಗುಣಬುದ್ಧಿಯುಳ್ಳವನು, ಷಡ್ಗುಣ ಐಶ್ವರ್ಯಸಂಪನ್ನನು. ಕಲ್ಯಾಣಗುಣಪರಿಪೂರ್ಣನು. ಗುಣನಿಧಿ. ಅವನು ಚಂಚಲಬುದ್ಧಿಯುಳ್ಳವನಲ್ಲ. ತನ್ನ ಇಷ್ಟದಂತೆ ನಡೆಯುವವನಲ್ಲ. ಆರ್ತರಕ್ಷಕನು. ಇತರರಿಗೆ ಒಳ್ಳೆಯದನ್ನು ಮಾಡುವುದರಲ್ಲಿ ನನ್ನ ಪತಿದೇವನು ಸದಾ ನಿರತನು. ಹೀಗಿರುತ್ತ ನನ್ನನ್ನು ಪರಿತ್ಯಜಿಸಲು ಕಾರಣವಾದರೂ ಏನು ? ಬಹುಶಃ ಇದು ನನ್ನ ಜನ್ಮಾಂತರದ, ದುರ್ಘರವಾದ ಪಾಪಕರ್ಮದ ಫಲ (ಅಲ್ಲದೊಡೆ ಕಲ್ಯಾಣ ಬುದ್ಧಿಯಿಂದ ನನ್ನ ಇನಿಯು) ಹಿಂದಿನ ಜನ್ಮದ ಹೇತು. ನನ್ನ ಬೆನ್ನ ಬಿಡದು. ಅದು ಈಗ ವಜ್ರಾಘಾತದಂತೆ (ಬರಸಿಡಿಲಿನಂತೆ, ಭೂತದಂತೆ) ನನ್ನನ್ನು ಹೊಡೆದು ನೆಲಕ್ಕೆ ಅಪ್ಪಳಿಸುತ್ತಿದೆ (ಅಶನಿ ನಿರ್ಘೋಷವಿರದೆರಗಿರುವುದಿಂತು). ಆ ವಜ್ರದ ಏಟಿನಿಂದ ನಾನು ಬದುಕಿ ಉಳಿಯುವಂತಿಲ್ಲ. ಪತಿವಿರಹವು ನನಗೆ ಮರಣವನ್ನು ನಿಶ್ಚಯವಾಗಿಯೂ ತಂದು ಕೊಡುವುದು (ಮಾರಕವಾಗಿರುವುದು)'' ಎಂದು ಸೀತೆ ಬಗೆಬಗೆಯಾಗಿ ಹಲುಬಿದಳು. (ಕಣ್ಣೀರಿಕ್ಕುವವಳಾಗಿ ಬಿಕ್ಕಿಬಿಕ್ಕಿ ಅತ್ತಳು, ಸೀತೆ ಪ್ರಾರ್ಥಿಸಿಕೊಂಡಳು.)

ಅನ್ವಯ :—ಅಥವಾ ಕಲ್ಯಾಣಬುದ್ಧೇಃ ತವ ಮಯಿ ಅಯಂ ಕಾಮಚಾರಃ ನ ಶಂಕನೀಯಃ ಮಮ ಏವ ಜನ್ಮಾಂತರಪಾತಕಾನಾಂ ಅಪ್ರಸಹ್ಯಃ ವಿಪಾಕವಿಸ್ಫೂರ್ಜಥುಃ ॥

ಕಲ್ಯಾಣೇತಿ ಅಥವಾ ಕಲ್ಯಾಣಬುದ್ಧೇಃ—ಕಿಂತು ಮಮೈವ ಜನ್ಮಾಂತರಪಾತಕಾನಾಮಪ್ರಸಹ್ಯೋ ವಿಪಚ್ಯತ ಇತಿ ವಿಪಾಕಃ ಫಲಮ್—ಸ ಏವ ವಿಸ್ಫೂರ್ಜಥುರಶನಿನಿರ್ಘೋಷಃ — "ಸ್ಫೂರ್ಜಥುರ್ವಜ್ರನಿರ್ಘೋಷಃ" ಇತ್ಯಮರಃ — ವಿಪಾಕಃ ಏವ ವಿಸ್ಫೂರ್ಜಥುಃ = ಕರ್ಮಾಂತರಫಲವು (ಜನ್ಮಾಂತರಫಲವು) ಸಿಡಿಲಾಗಿ ಪರಿಣಮಿಸಿದೆ —ಕಲ್ಯಾಣಬುದ್ಧೇ = ಪರೋಪಕಾರಿ, ಅನಾಥರಕ್ಷಕ—ಜನ್ಮಾಂತರಪಾತಕಾನಾಂ ವಿಪಾಕ ವಿಸ್ಫೂರ್ಜಥುಃ = ಜನ್ಮಾಂತರಪಾಪಕರ್ಮದ ಅಶನಿ (ಅಶನಿ = ಸಿಡಿಲು = ಬರಸಿಡಿಲು).

**63. ಉಪಸ್ಥಿತಾಂ ಪೂರ್ವಮಪಾಸ್ಯ ಲಕ್ಷ್ಮೀಂ ।**
**ವನಂ ಮಯಾ ಸಾರ್ಧಮಸಿ ಪ್ರಪನ್ನಃ ॥**
**ತದಾಸ್ಪದಂ ಪ್ರಾಪ್ಯ ತಯಾತಿರೋಷಾತ್ ।**
**ಸೋಢಾಸ್ಮಿ ನ ತ್ವದ್ಭವನೇ ವಸಂತೀ** ॥ ೬೩ ॥

"ಅಂದು ಯುವರಾಜಪಟ್ಟಾಭಿಷೇಕಕಾಲದಲ್ಲಿ ಪ್ರಾಪ್ತಳಾದ ರಾಜ್ಯಲಕ್ಷ್ಮಿಯನ್ನು ನೀನು ನಲವಿಂದ ತೊರೆದು ನನ್ನ ಜೊತೆಯಲ್ಲಿ ಸಂತಸದಿಂದ ಅರಣ್ಯವಾಸಕ್ಕೆ ನಡೆದೆಯಲ್ಲವೆ ? (ನಿನ್ನ ಭವನದೊಳಿಂದು ಮರಳಿ ನಾನಿರುವುದು ಸಹಿಸದಾದಳು ಲಕ್ಷ್ಮಿ ನನ್ನಿರವನೆಂದು.) ಅದಕ್ಕಾಗಿ ನನ್ನ ಮೇಲೆ ಇಂದು ಸೇಡುತೀರಿಸಿಕೊಂಡಿರಬೇಕೆಂದು ಭಾವಿಸುವೆನು. ಮರಳಿ ನಾನು ಬಂದಿರಲು ನನ್ನನ್ನು ಭವನದಲ್ಲಿ ಇರಗೊಡದೆ ನಾಡಾಡಿಯಂತೆ (ಪರದೇಶಿಯಂತೆ) ಹೊರಗಟ್ಟಿರುವಳು (ಸವತಿಮತ್ಸರದಿಂದ). ನನ್ನ ಜೀವನಕ್ಕೆ ಮುಳುವಾಗಿರುವಳು. ನನ್ನ ಜೀವನಕ್ಕೆ ಬೇಕಾದುದನ್ನು "ಭವತಿ ಭಿಕ್ಷಾಂ ದೇಹಿ" ಎಂದು

ಭಿಕ್ಷುಕರಂತೆ, ಬೇಡಿ ಕಾಡಿ ತಿರಿದುಣ್ಣಬೇಕಾಗಿದೆ. ಭಾರತದ ಭವ್ಯಸಾಮ್ರಾಟನ ರಾಣಿಯಾದ ನಾನಿಂದು ಒಂದು ಹಿಡಿ (ಒಂದು ತುತ್ತು, ಒಂದು ಕವಳ) ಅನ್ನಕ್ಕೆ (ಕೈಯೊಡ್ಡಬೇಕಾಗಿದೆ) (ಹೆಕ್ಕುಂಜಲು) ತೊಳಲಬೇಕಾದ ಸಂದಿಗ್ಧ (ದಾರುಣ) ಸ್ಥಿತಿಯಲ್ಲಿರುವೆನು. ಆಹಾ! ನನ್ನ ಜೀವಿತವೆ ?" (ಹೆಣ್ಣುಜನ್ಮವೆ ಸಾಕು, ಏನ ಕುಡು ಮರೆಯಾದಿರೋ, ರಾಮ, ರಾಮಾ!")

ಅನ್ವಯ :—ಪೂರ್ವಂ ಉಪಸ್ಥಿತಾಂ ಲಕ್ಷ್ಮೀಂ ಅಪಾಸ್ಯ ಮಯಾ ಸಾರ್ಧಂ ವನಂ ಪ್ರಪನ್ನಃ ಅಸಿ। ತತ್ ತಯಾ ಅತಿರೋಷಾತ್ ತ್ವದ್ಭವನೇ ಆಸ್ಪದಂ ಪ್ರಾಪ್ಯ ವಸಂತೀ ಅಹಂ ನ ಸೋಢಾ ಅಸ್ಮಿ ॥

ಪೂರ್ವಮುಪಸ್ಥಿತಾಂ = ಪ್ರಾಪ್ತಾಂ — ಪ್ರಪನ್ನೋಽಸಿ = ಪ್ರಾಪ್ತೋಽಸಿ — ತತ್ತ ಸ್ಮಾತ್ತಯಾ = ಲಕ್ಷ್ಮ್ಯಾ—"ಆಸ್ಪದಮ್ ಪ್ರತಿಷ್ಠಾಯಾಮ್" ಇತಿ ನಿಪಾತಃ (ಪಾಣಿನಿ) ಪ್ರಾಪ್ಯ ವಸಂತ್ಯಹಂ ಸೋಢಾನಾಸ್ಮಿ" ತ್ವಯಿ ಆಸ್ಪದಂ ಪ್ರಾಪ್ಯ = ನಿನ್ನ ಹೃದಯದಲ್ಲಿ ಸ್ಥಾನವನ್ನು ಉಳಿಸಿ—ತ್ವದ್ಭವನೇ ವಸಂತೀಂ ಎಂಬರ್ಥವಾಗುವುದು. ಪೂರ್ವಮ್ ಉಪಸ್ಥಿತಾಂ ಲಕ್ಷ್ಮೀಂ ಅಪಾಸ್ಯ = ನಿನ್ನ ಪಟ್ಟಮಹಿಷಿಯಾದ (ಪಟ್ಟರಾಣಿ) ರಾಜ್ಯಲಕ್ಷ್ಮಿಯನ್ನು ನೀನು ತೊರೆದು ಎನ್ನೊಡವರೆಮ ವನಕ್ಕೈದಿದೆಯೆಂದು ಸವತಿಮತ್ಸರದಿಂದ ಮುಳಿದು ನನ್ನನ್ನು ಇದೀಗ ಕಾಡಿಗೆ ಅಟ್ಟಿದಳು.

64. **ನಿಶಾಚರೋಪಪ್ಲುತ ಭರ್ತೃಕಾಣಾಂ ।**
**ತಪಸ್ವಿನೀನಾಂ ಭವತಃ ಪ್ರಸಾದಾತ್ ॥**
**ಭೂತ್ವಾ ಶರಣ್ಯಾ ಶರಣಾರ್ಥಮನ್ಯಂ ।**
**ಕಥಂ ಪ್ರಪತ್ಸ್ಯೇ ತ್ವಯಿ ದೀಪ್ಯಮಾನೇ ॥ ೬೪ ॥**

ಅಂದು ನಿಶಾಚರರಾದ ರಾಕ್ಷಸರ ಕೀಟಲೆಗೆ (ಕಿರುಕುಳ, ದಾಂಧಲೆ, ದಬ್ಬಾಳಿಕೆ) ಒಳಗಾದ ಹೆಣ್ಣುಮಕ್ಕಳು, ಋಷಿಪತ್ನಿಯರು, ನನ್ನಲ್ಲಿ ಮೊರೆಯಿಟ್ಟಾಗ "ದುಷ್ಟಶಿಕ್ಷಕನಾದ, ಶಿಷ್ಟಸಂರಕ್ಷಕನಾದ (ಶಾಂತಿಸ್ಥಾಪಕ) ನಿನ್ನ ಅನುಗ್ರಹಬಲದಿಂದ ಅವರಿಗೆ ಅಭಯುವನ್ನು) ಆಶ್ರಯುವನ್ನು ಇತ್ತು ಆ ತಪಸ್ವಿಯರನ್ನು ರಕ್ಷಿಸಿದೆ. (ದನುಜರಲೆಯೊಳು ನೊಂದ ಋಷಿಪತ್ನಿಯರಿಗಂದು.) ಆದರೆ ಇಂದು ನಾನು ಅನಾಥಳಾಗಿ ಅನ್ಯರಿಗೆ ಶರಣುಹೋಗಬೇಕಾಗಿದೆ. ಅನ್ಯರ ಆಶ್ರಯುವನ್ನು ನಾನೀಗ ಬೇಡಬೇಕಾಗಿದೆ. ಹತಜೀವಿಯಾದ ನಾನು ಬೇರೆಯವರ ಆಶ್ರಯದ ನೆರವಿನಿಂದ ಜೀವಿಸಬೇಕಾಗಿದೆ. ಲೋಕರಕ್ಷಕನಾದ, ಪತಿಯಾದ, ದೈವಸ್ವರೂಪನಾದ ನೀನು ಜೀವಿಸಿರಲು, ನಾನು ಇತರರ ಆಶ್ರಯವನ್ನಾದರೂ ಹೇಗೆ ಬೇಡಲಿ ? ಇದು ನ್ಯಾಯಸಮ್ಮತವೆ (ವಿಧಿಲೀಲೆಯೆ) ?

ಅನ್ವಯ :—ನಿಶಾಚರೋಪಪ್ಲುತ ಭರ್ತೃಕಾಣಾಂ ತಪಸ್ವಿನೀನಾಂ ಭವತಃ ಪ್ರಸಾದಾತ್ ಶರಣ್ಯಾಭೂತ್ವಾ ತ್ವಯಿ ದೀಪ್ಯಮಾನೇ ಶರಣಾರ್ಥಂ ಅನ್ಯಂ ಕಥಂ ಪ್ರಪತ್ಸ್ಯೇ ॥

ನಿಶಾಚರೈರುಪಪ್ಲುತಾ=ಭರ್ತಾರೋಽಯಾಸಾಂತಾ + ನಿಶಾಚರೋಪಪ್ಲುತ ಭರ್ತೃಕಾಃ –ಪ್ರಸಾದಾದನುಗ್ರಹಾಚ್ಛರಣ್ಯಾ=ಶರಣಸಮರ್ಥಾ ಭೂತ್ವಾ। ಅದ್ಯ ತ್ವಯಿ ದೀಪ್ಯಮಾನೇ = ಪ್ರಕಾಶಮಾನೇ ಸತ್ಯೇವ—ಕಥಂ ಪ್ರಪತ್ಸ್ಯೇ = ಪ್ರಾಪ್ಸ್ಯಾಮಿ = ಹೊಂದುವೆನು—

ನಿಶಾಚರೀ = ರಾಕ್ಷಸಸ್ತ್ರೀ — ನಿಶಾಚರೋಪಪ್ಲುತ = ದನುಂಜರಲೆಯೊಳು — ತ್ವಯಿ ದೀಪ್ಯಮಾನೇ = ನೀನು ತೊಳಗುತಿರುವಂದು—ಶರಣ್ಯಾ = ರಕ್ಷಕಳು—ನಿಶಾಚರೈಃ ಉಪಪ್ಲುತಾಃ ಭರ್ತಾರಃ ಯಾಸಾಂ ತಾಃ = ರಾಕ್ಷಸರ ಪೀಡಗೆ ಒಳಗಾದ ಗಂಡಂದಿರುಳ್ಳ ಸ್ತ್ರೀಯರು.

**65.** **ಕಿಂ ವಾ ತವಾತ್ಯಂತವಿಯೋಗಮೋಘೇ ।**
**ಕುರ್ಯಾಮುಪೇಕ್ಷಾಂ ಹತಜೀವಿತೇಽಸ್ಮಿನ್ ॥**
**ಸ್ಯಾದ್ರಕ್ಷಣೀಯಂ ಯದಿ ಮೇ ನ ತೇಜಃ ।**
**ತದೀಯಮಂತರ್ಗತಮಂತರಾಯಃ** ॥ ೬೫ ॥

"ಇದೀಗ ನಿನ್ನ ತೇಜಸ್ಸು ನನ್ನ ಒಡಲನ್ನು ಹೊಕ್ಕು ಗರ್ಭಾಶಯದಲ್ಲಿ ಗರ್ಭಾಂಕುರವಾಗಿ (ಬೀಜಾಂಕುರವಾಗಿ) ಬೆಳೆಯುತ್ತಲಿದೆ. ಅದನ್ನು ನಾನು ಮನಸಾ, ವಾಚಾ, ಕಾಯಾ ಕಾಪಾಡಲೇಬೇಕು (ಕಾಪಾಡವೇಳ್ಕುಂ ಎನುವೀ ನಿನ್ನ ತೇಜವಿಂದು). ರಕ್ಷಿಸಲೇಬೇಕು. ಇದರಿಂದ ನೀನೀಗ ನನ್ನ ಜೊತೆಯಲ್ಲಿ ಇಲ್ಲವೆನ್ನುವಂತಿಲ್ಲ. ಇದೊಂದು ಮಾನಸಿಕ ಆಭಾಸ. ನಾನೀಗ ಗರ್ಭಿಣಿಯಲ್ಲದೇ ಇರುತ್ತಿದ್ದರೆ, ಹತಜೀವಿಯಾದ ನಾನು ನಿನ್ನ ಚಿರವಿರಹದಿಂದ ಬೆಂದ ಬಾಳ್ವಿಕೆಯನ್ನು ಆತ್ಮಹತ್ಯೆಯಿಂದಲಾದರೂ ಕೊನೆಗೊಳಿಸುತ್ತಿದ್ದೆನು. ಪಂಚಭೂತದಿಂದ ಒಗೆದ ಕಾರ್ಯವನ್ನು ಕಡೆಗಣಿಸಿ, ಕೊನೆಗೊಳಿಸಿ, ಉಗಿಯುತ್ತಲಿರ್ದ ನಾನಿಂದು (ನಿನ್ನ ಕಟ್ಟುಗಲಿಕೆಯೊಳು ಇಂತು ನಿಷ್ಫಲವೆನುವ ಹತಜೀವವಿದನಿಂದು) ನಿನ್ನ ವಿರಹವೂ ನನ್ನ ಪಾಲಿಗೆ ಶಾಪವಾಗಿ ಬಂದಿದ (ವರವಾಗದೆ)" ಎಂದು ಬಾಷ್ಪಲೋಚನಳಾಗಿ (ಕಣ್ಣನೀರ ಅಂಬುಧಿಯೊಳು) ಭೂಜಾತೆ, ಗದ್ಗದಕಂಠದಿಂದ ತನ್ನ ಅಂತರಂಗವನ್ನು ಬಹಿರಂಗಪಡಿಸುತ್ತಿದ್ದಳು.

ಅನ್ವಯ :—ಕಿಂ ವಾ ತವ ಅತ್ಯಂತ ವಿಯೋಗಮೋಘೇ ಅಸ್ಮಿನ್ ಹತಜೀವಿತೇ ಉಪೇಕ್ಷಾಂ ಕುರ್ಯಾಂ। ರಕ್ಷಣೀಯಂ ಅಂತರ್ಗತಂ ತ್ವದೀಯಂ ತೇಜಃ ಯದಿ ಮೇ ಅಂತರಾಯಃ ನ ಸ್ಯಾತ್ ॥

ಕಿಂ ವಾ = ಅಥವಾ—ಪುನಃಪ್ರಾಪ್ತಿರಹಿತೇನ—ವಿಯೋಗೇನ ಮೋಘೇ = ನಿಷ್ಫಲೇ—ಹತಜೀವಿತೇನ = ತುಚ್ಛಜೀವಿತೇನ—ರಕ್ಷಣೀಯಂ = ರಕ್ಷಣಾರ್ಹಂ—ಕುಕ್ಷಿಸ್ಥಂ = ಅಂತರ್ಗತಂ—ತ್ವದೀಯಂ ತೇಜಃ = ಶುಕ್ರಂ ಗರ್ಭರೂಪಮ್— "ಶುಕ್ರಂ ತೇಜೋರೇತಸೀ ಚ ಬೀಜವೀರ್ಯೇಂದ್ರಿಯಾಣಿ ಚ" ಇತ್ಯಮರಃ—ಅತ್ಯಂತೇನ ವಿಯೋಗೇನ ಮೋಘೇ ಅತ್ಯಂತವಿಯೋಗಮೋಘಂ = ವಿಯೋಗದಿಂದ ನಿಷ್ಫಲವಾದ—ಅಂತರಾಯ = ಅಡ್ಡಿ, ರಕ್ಷಣೀಯಂ = ಹುಟ್ಟಲಿರುವ ಶಿಶುವನ್ನು ಕಾಪಾಡುವ ಭಾರ.

**66.** **ಸಾಹಂ ತಪಃ ಸೂರ್ಯನಿವಿಷ್ಟದೃಷ್ಟಿಃ ।**
**ಊರ್ಧ್ವಂ ಪ್ರಸೂತೇಶ್ಚರಿತುಂ ಯತಿಷ್ಯೇ ॥**
**ಭೂಯೋ ಯಥಾ ಮೇ ಜನನಾಂತರೇಽಪಿ ।**
**ತ್ವಮೇವ ಭರ್ತಾ ನ ಚ ವಿಪ್ರಯೋಗಃ** ॥ ೬೬ ॥

ನನ್ನ ಸುಖಪ್ರಸವವಾದಬಳಿಕ ನಾನು ನಿನ್ನನ್ನೇ ಸೇರಲು ಕಠಿಣತಪವೆಸಗುವೆನು. (ಪ್ರಸವೋತ್ತರಾವಧಿಯೊಳಾನು) ಜನ್ಮಜನ್ಮಾಂತರಕ್ಕೂ ಶ್ರೀರಾಮನೇ ಪತಿಯಾಗಲೆಂದು ಸೂರ್ಯನಲ್ಲಿ ನೆಟ್ಟದೃಷ್ಟಿಯನ್ನಿಟ್ಟು ಕೃಚ್ಛ್ರಾದಿವ್ರತನೇಮಗಳನ್ನು ಆಚರಿಸುತ್ತಾ ನಿಷ್ಠೆಯಿಂದ ಕಠಿಣ ತಪವೆಸಗಿ ದೇಹವನ್ನು ಶೋಷಿಸುವೆನು. ನೀನೇ ಜನ್ಮಾಂತರದಲ್ಲಿ ಪತಿಯಾಗಬೇಕೆಂಬ ಧ್ಯೇಯದಿಂದ (ನೀನೇ ಜನ್ಮಾಂತರದೊಳಾದೊಡಂ ಪತಿಯಾಗಬೇಕೆಂದು) ಮುಂದೆ (ಮುಂದಿನ ಜನ್ಮದಲ್ಲಾದರೂ, ಮುಂದಿನ ಜೀವನದಲ್ಲಾದರೂ) ವಿರಹ ಮೇಣ್ ಒದಗದಿರಲೆಂದು ತಪವನಾಚರಿಸುವೆನು.

ಅನ್ವಯ :—ಸಾ ಅಹಂ ಪ್ರಸೂತೇಃ ಊರ್ಧ್ವಂ ಸೂರ್ಯನಿವಿಷ್ಟದೃಷ್ಟಿಃ ತಪಃ ಚರಿತುಂ ಯತಿಷ್ಯೇ, ಯಥಾ ಭೂಯಃ ಮೇ ಜನನಾಂತರೇ ಅಪಿ ತ್ವಂ ಏವ ಭರ್ತಾ ನ ಚ ವಿಪ್ರಯೋಗಃ ॥

ತಪಶ್ಚರಿತುಂ—ಮೇ ಮಮ ಜನನಾಂತರೇಽಪಿ ತ್ವಮೇವ ಭರ್ತಾ ಸ್ಯಾಃ— ಸಾಹವುಸ್ = ಈ ಕಾರಣಗಳಿಂದಾಗಿ—ಸೂರ್ಯೇನಿವಿಷ್ಟ = ಸೂರ್ಯನಿವಿಷ್ಟ = ಸೂರ್ಯನಲ್ಲಿ ನೆಟ್ಟಕಣ್ಣು—ಸೂರ್ಯೇನಿವಿಷ್ಟಾ ದೃಷ್ಟಿಃ ಯಯಾ ಸಾ—ಸೂರ್ಯನಿವಿಷ್ಟದೃಷ್ಟಿಯುಳ್ಳ = ಸೂರ್ಯನಲ್ಲಿ ನೆಟ್ಟಕಣ್ಣುಳ್ಳವಳಾಗಿ.

67. ನೃಪಸ್ಯ ವರ್ಣಾಶ್ರಮಪಾಲನಂ ಯತ್ ।
ಸ ಏವ ಧರ್ಮೋ ಮನುನಾ ಪ್ರಣೀತಃ ॥
ನಿರ್ವಾಸಿತಾಪ್ಯೇವ ಮತಸ್ತ್ವಯಾಹಂ ।
ತಪಸ್ವಿಸಾಮಾನ್ಯಮವೇಕ್ಷಣೀಯಾ ॥ ೬೭ ॥

"ಆ ಯಾವ ಮನುವೆಂಬ ಸೂರ್ಯವಂಶಪ್ರಭವನಾದ ಧರ್ಮಶಾಸ್ತ್ರನಿಯಾಮಕನು ಹೇಳಿದ ಮಾತಿನಂತೆ ಲೋಕದಲ್ಲಿ ನಾಲ್ಕು ತರದ ಆಶ್ರಮದ ಧರ್ಮಗಳನ್ನು ನಿರೂಪಿಸಿರುವನು. ಅವನು ತತ್ತ್ವವೇದಿಯು (ತತ್ತ್ವಬೋಧಕನು). ಧರ್ಮಶಾಸ್ತ್ರಗಳ ಆದ್ಯಪವರ್ತಕನು. ರಾಜನಾದವನು ವರ್ಣಾಶ್ರಮಧರ್ಮಗಳ ಮೂಲಕ ರಾಜ್ಯಭಾರಮಾಡಬೇಕೆಂದು ಮನುವು ತನ್ನ ರಾಜಧರ್ಮದಲ್ಲಿ ನಿರೂಪಿಸಿರುವನು. ನೀನೀಗ ನನ್ನನ್ನು ತ್ಯಾಜ್ಯವಸ್ತುವೆಂದು (ತ್ಯಕ್ತೆಯೆಂದು) ಭಾವಿಸಿ (ರಸ್ತೆಗೆ) ಎಸೆದಿದ್ದರೂ (ಬೀದಿಪಾಲುಮಾಡಿದ್ದರೂ) ನಾನು ನಿನ್ನನ್ನೇ ಸೇರಲು ತಪವನೆಸಗುವೆನು. ಈ ಹಿಂದೆ ಉಮೆಯು ಕಠಿಣತಪವೆಸಗಿ ಶಿವನನ್ನು ಪಡೆದಂತೆ, ನಾನು ಮುನಿಕನ್ಯೆಯಾಗಿ ಮುನಿವೃತ್ತಿಯನ್ನು ಕೈಹಿಡಿದು ನೀನೇ ಪತಿಯಾಗಬೇಕೆಂದು ತಪವನ್ನಾಚರಿಸುವೆನು. ಮುನಿಗಳಿಗೆ, ಋಷಿಗಳಿಗೆ ದೇವತೆಗಳೂ ಒಲಿಯುವರಷ್ಟೆ. ತಪಸನ್ನು ಆಚರಿಸುವವರಿಗೆ ಸಮಳೆಂದು ಭಾವಿಸಿ ನೀನು ಕಾಪಾಡುವೆಯಲ್ಲ, ನನ್ನನ್ನು ಪೊರೆಯುವೆ ಎಂಬ ನಂಬುಗೆಯನ್ನು ತಳೆದಿರುವೆನು. ಅದನ್ನೇ ನಾನು ನಿರೀಕ್ಷಿಸುತ್ತಿರುವೆನು."

ಅನ್ವಯ :—ವರ್ಣಾಶ್ರಮಪಾಲನಂ ಯತ್ ಸ ಏವ ನೃಪಸ್ಯ ಧರ್ಮಃ ಮನುನಾ ಪ್ರಣೀತಃ । ಅತಃ ತ್ವಯಾ ನಿರ್ವಾಸಿತಾ ಅಪಿ ಅಹಂ ತಪಸ್ವಿಸಾಮಾನ್ಯಂ ಅವೇಕ್ಷಣೀಯಾ ॥

ವರ್ಣಾನಾಂ ಬ್ರಾಹ್ಮಣಾದೀನಾಮಾಶ್ರಮಾಣಾಂ ಬ್ರಹ್ಮಚರ್ಯಾದೀನಾಂ ಚ

ಪಾಲನಂ ಯತ್ಸ ಏವ ನೃಪಸ್ಯ ಧರ್ಮೋ ಮನುನಾ ಪ್ರಣೀತ=ಉಕ್ತಃ—ನಿರ್ವಾಸಿತಾ =ನಿಷ್ಕಾಸಿತಾಪ್ಯಹಂ—ಕಲತ್ರದೃಷ್ಟ್ಯಾ = ಭಾವೇSಪಿ—ನಿರ್ವಾಸಿತಾ ಅಪಿ = ನೆಲೆಯಿಂದ ಹೊರದೂಡಲ್ಪಟ್ಟ—ರಾಮಾನುಜೇ ವ್ಯತೀತೇ = ಸತಿಸಪ್ತಮಿ—ವರ್ಣಾಶ್ರಮಃ—ಬ್ರಹ್ಮ, ಕ್ಷತ್ರಿಯ, ವೈಶ್ಯ, ಶೂದ್ರರೆಂಬ ನಾಲ್ಕು ಸಾಮಾಜಿಕ ಪಂಗಡಗಳು—ನಾಲ್ಕು ಆಶ್ರಮಧರ್ಮಗಳು ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ.

**68. ತಥೇತಿ ತಸ್ಯಾಃ ಪ್ರತಿಗೃಹ್ಯ ವಾಚಂ ।**
**ರಾಮಾನುಜಂ ದೃಷ್ಟಿಪಥಂ ವ್ಯತೀತೇ ॥**
**ಸಾ ಮುಕ್ತಕಂಠಂ ವ್ಯಸನಾತಿಭಾರಾತ್ ।**
**ಚಕ್ರಂದ ವಿಗ್ನಾ ಕುರರೀವ ಭೂಯಃ ॥ ೬೮ ॥**

ಹೀಗೆಂದು ಶೋಕಾರ್ತಳಾದ ಸೀತಾದೇವಿ ನುಡಿದ ಮಾತುಗಳನ್ನು ಹಾಗೆಯೇ ಅಣ್ಣನಿಗೆ ತಿಳಿಸುವೆನೆಂದು ಲಕ್ಷ್ಮಣನು ನುಡಿದು (ಇಂತಾಕೆಯಿಂದು ಸುಂದರಿತಿರಲು ಅಂತಾಗ ಲೆಂದೋರೆದು) ಹೊರಡಲುದ್ಯುಕ್ತನಾದನು. ಇತ್ತ ಅತ್ತಿಗೆಯನ್ನು ಚಿಂತಾಜನಕಸ್ಥಿತಿಯಲ್ಲಿ ಬಿಟ್ಟುಹೋಗಲಾರದೆ ಲಕ್ಷ್ಮಣನ ಮನಸ್ಸು ಒಳಗೊಳಗೇ ಕುದಿಯುತ್ತಲಿತ್ತು. ಅವನು ಮರೆಂಗುತ್ತ ಅತ್ತಿಗೆಯ ಮಾತನ್ನು ನೆತ್ತಿಯಲ್ಲಿ ಹೊತ್ತು ಹೊರಟ. ಸೀತೆಯಾದರೆ ತನ್ನ ಮೈದುನನು ಕಣ್ಮರೆಯಾಗುವ ತನಕ ಕಣ್ಣನ್ನು ಹೊರಳಿಸಿ ನೋಡುತ್ತ, ಕಣ್ಮರೆ ಯಾದೊಡನೆ ಭಯದಿಂದ ನಡುಗಿದಳು. ದುಃಖಾರ್ತಳಾಗಿ ದಾರಿಕಾಣದೆ ಬಾಯ್ತೆರೆದು ಗಟ್ಟಿಯಾಗಿ ರೋದಿಸತೊಡಗಿದಳು. ಅವಳ ದುಃಖದ ಕಟ್ಟೆ ಒಡೆಯಿತು. (ಒಡ್ಡು, ಕಟ್ಟೆ ಅಣೆಕಟ್ಟು) (ಬಾಯ್ದೆರೆದು ರೋದಿಸಿದಳು). ಆ ಕೂಗು ಆ ಅರಣ್ಯಪ್ರದೇಶದಲ್ಲಿ ಬಹಳ ದೂರದ ತನಕ ಕೇಳಿಸುತ್ತಿತ್ತು. ಆ ಸೀಮಂತಿನಿಯು ಭಯಗೊಂಡು ಚೀರುತ್ತಿರುವ ಹೆಣ್ಣುಚಕ್ರವಾಕಪಕ್ಷಿಯಂತೆ (ಕುರರಿಯಂತೆ) ಭೂಮಿಯಲ್ಲಿ ಬಿದ್ದು ಹೊರಳಾಡುತ್ತ ಗತಿ ಗೋತ್ರವಿಲ್ಲದ ಅನಾಥ ಮಹಿಳೆಯಂತೆ ರೋದಿಸುತ್ತಿದ್ದಳು.

ಅನ್ವಯ :—ತಥಾ ಇತಿ ತಸ್ಯಾಃ ವಾಚಂ ಪ್ರತಿಗೃಹ್ಯ ರಾಮಾನುಜೇ ದೃಷ್ಟಿಪಥಂ ವ್ಯತೀತೇ ಸಾ ವ್ಯಸನಾತಿಭಾರಾತ್ ಮುಕ್ತಕಂಠಂ ವಿಗ್ನಾ ಕುರರೀವ ಭೂಯಃ ಚಕ್ರಂದ ॥

ಪ್ರತಿಗೃಹ್ಯ= ಅಂಗೀಕೃತ್ಯ—ರಾಮಾನುಜೇ = ಲಕ್ಷ್ಮಣೇ—ದೃಷ್ಟಿಪಥಂ ವ್ಯತೀತೇ = ಅತಿಕ್ರಾಂತೇ—ವ್ಯಸನಾತಿಭಾರಾತ್ = ದುಃಖಾತಿರೇಕಾತ್ — ಮುಕ್ತಕಂಠಂ ಯಥಾ ಸ್ಯಾತ್ತಥಾ—ವಿಗ್ನಾ = ಭೀತಾ—ಕುರರೀವೋತ್ಕ್ರೋಶೀವ—''ಉತ್ಕ್ರೋಶಾ ಕುರರೌ ಸಮೌ'' ಇತ್ಯಮರಃ—ಭೂಯೋ=ಭೂಯಿಷ್ಠಂ ಚಕ್ರಂದ=ಚುಕ್ರೋಶ—ಮುಕ್ತಕಂಠಂ = ಮುಕ್ತಕಂಠೋ ಯಸ್ಯಾಂ ಕ್ರಿಯಾಯಾಂ ಯಥಾ ಭವತಿ ತಥಾ—ವಿಗ್ನಾ = ಬೆದರಿದ —(ಕಾಳಿದಾಸ ಮಹಾಕವಿಯು ಪ್ರಕೃತಿಯಲ್ಲೂ ಮಾನವೀಯ ಗುಣಗಳನ್ನು ಕಾಣುವ ಮಹಾಕವಿ).

**69. ನೃತ್ಯಂ ಮಯೂರಾಃ ಕುಸುಮಾನಿ ವೃಕ್ಷಾಃ ।**
**ದರ್ಭಾನುಪಾತ್ತಾನ್ವಿಜಹುರ್ಹರಿಣ್ಯಃ ॥**

**ತಸ್ಯಾಃ ಪ್ರಪನ್ನೇ ಸಮದುಃಖಭಾವಂ ।**
**ಅತ್ಯಂತಮಾಸೀದ್ರುದಿತಂ ವನೇಽಪಿ ॥ ೬೯ ॥**

ಸೀತೆಯು (ಮೈಥಿಲಿಯು) ಅಳಲನ್ನು ಕಂಡು ಆಡಲಾರದು ನವಿಲು. ಮಯೂರವು ತನ್ನ ನರ್ತನವನ್ನು ನಿಲ್ಲಿಸಿತು. ಮರಗಿಡಬಳ್ಳಿಗಳು ಕೂಗುವಂತೆ, ಕಂಬನಿ ಸುರಿಸುವಂತೆ ಹೂಗಳನ್ನು ಎಲೆಗಳನ್ನು ಉದುರಿಸತೊಡಗಿದುವು (ವೃಕ್ಷಗಳು ಸುಮಗಳನು). ಹೆಣ್ಣು ಹರಿಣಗಳು (ಜಿಂಕೆಗಳು) ತಮ್ಮ ಬಾಯಲ್ಲಿರುವ ಕುಶಕವಳಗಳನ್ನು ಮೆಲುಕಾಡದೆ ನೆಲದಲ್ಲಿ ಹಾಗೆಯೇ ಚೆಲ್ಲುತ್ತಾ ನಡೆದುವು (ಹರಿಣಗಳು ಕುಶಕಬಳಗಳನು). ಹೀಗೆ ಆ ಕಾಡಿನಲ್ಲಿರುವ ಸ್ಥಾವರಜಂಗಮ (ಚರಾಚರ) ವಸ್ತುನಿಚಯವು, ಗಿಡಮರಬಳ್ಳಿ, ಮೃಗ ಪಕ್ಷಿ ಕೀಟಗಳು ಸಮದುಃಖಭಾವದಿಂದ ಶೋಕವಾಂತುವು. ಸಮದುಃಖಭಾವದಿಂದ ವರ್ತಿಸಿದುವು. ಇಡೀ ಕಾಡಿಗೆ ಕಾಡೇ (ನಾಡಿಗೆ ನಾಡೇ) ಕಣ್ಣೀರು ಮಿಡಿಯುತ್ತಾ ದುಃಖ ಸಂತಾಪವನ್ನು ಸಗುಣವ್ಯಕ್ತಿಗಳಂತೆ ಪ್ರದರ್ಶಿಸಿದವು (ಸಮದುಃಖಭಾವದೊಳು).

ಅನ್ವಯ :—ಮಯೂರಾಃ ನೃತ್ಯಂ ವಿಜಹ್ರುಃ, ವೃಕ್ಷಾಃ ಕುಸುಮಾನಿ, ಹರಿಣ್ಯಃ ಉಪಾತ್ತಾನ್ ದರ್ಭಾನ್ ಇತ್ಥಂ ತಸ್ಯಾಃ ಸಮದುಃಖಭಾವಂ ಪ್ರಪನ್ನೇವನೇ ಅಪಿ ಅತ್ಯಂತಂ ರುದಿತಂ ಆಸೀತ್ ॥

ಮಯೂರಾ ನೃತ್ಯಂ ವಿಜಹುಸ್ತ್ಯಕ್ತವಂತಃ—ಹರಿಣ್ಯ ಉಪಾತ್ತಾನ್ ದರ್ಭಾನ್—ಸಮದುಃಖಭಾವಂ ಪ್ರಪನ್ನೇ=ತುಲ್ಯ ದುಃಖಿತ್ವಂ ಪ್ರಾಪ್ತೇ—ನೃತ್ಯಂ ಮಯೂರಾಃ = ನವಿಲುಗಳು ನೃತ್ಯವನು—ದೀಪಕಾಲಂಕಾರ ॥

70. **ತಾಮಭ್ಯಗಚ್ಛದ್ರುದಿತಾನುಸಾರೀ ।**
**ಕವಿಃ ಕುಶೇಧ್ಮಾಹರಣಾಯ ಯಾತಃ ॥**
**ನಿಷಾದ ವಿದ್ಧಾಂಡಜ ದರ್ಶನೋತ್ಥಃ ।**
**ಶ್ಲೋಕತ್ವಮಾಪದ್ಯತ ಯಸ್ಯ ಶೋಕಃ ॥ ೭೦ ॥**

ಆ ಘೋರ ಅಡವಿಯಲ್ಲಿ (ವಿಪಿನದಲ್ಲಿ) ಹೆಣ್ಣೊಬ್ಬಳು ಕೂಗುವ (ಅಳುವ) ದನಿಯನ್ನು ಕೇಳಿ ಮಹಾಮುನಿ ಪ್ರಾಚೇತಸನು (ವಾಲ್ಮೀಕಿ) ಆ ದಾರಿಯಾಗಿ ಬಂದನು. ಅವನು ಸ್ತ್ರೀಯೊಬ್ಬಳ ಆಕ್ರಂದನವನ್ನು (ಆರ್ತನಾದ) ಕಿವಿಗೊಟ್ಟು ಆಲಿಸಿ ಜಲದಿಂದ ನಡೆದುಬಂದನು. ಯಜ್ಞಯಾಗಾದಿ ವೈದಿಕ ಕ್ರಿಯೆಗಳಿಗೆ ಬೇಕಾದ ಸಮಿತ್ತುಗಳನ್ನು (ಸೌದೆ, ಕಟ್ಟಿಗೆ), ಕುಶ (ದರ್ಭೆ)ಯನ್ನು ಅರಸುತ್ತಾ ಬರುತ್ತಿದ್ದನು. ಬೇಡನೊಬ್ಬನು ವಿಚಾರರಹಿತನಾಗಿ ಹೆಣ್ಣುಗಂಡು ಕ್ರೌಂಚಪಕ್ಷಿಗಳು ಜೊತೆಯಲ್ಲಿರುವ ವೇಳೆ (ಮಿಲನ)ದಲ್ಲಿ ಬಾಣವೊಂದನ್ನು ಸೆಳೆದುಬಿಟ್ಟಾಗ ಜೊತೆಯ ಹಕ್ಕಿ ರಕ್ತದ ಮಡುವಿನಲ್ಲಿ ಮುಳುಗಿ ಅಸುದೊರೆಯಿತು. ಆಗ ತನ್ನ ಜೊತೆಯ ಹಕ್ಕಿ, ತನ್ನ ಕಣ್ಣ ಎದುರಿನಲ್ಲಿ ಸಾಯುತ್ತಿರುವುದನ್ನು ಕಂಡ ಗಂಡುಪಕ್ಷಿಯು (ಪತಿಯು) ಸಂಕಟಪಟ್ಟು ಚೀರಾಡುವ ದೃಶ್ಯವನ್ನು ವಾಲ್ಮೀಕಿಮಹರ್ಷಿ ಕಂಡು ಅವರ ಹೃದಯವನ್ನು ಹಿಂಡಿತು. ಅವರ ಹೃದಯಾಪೇ ಶೋಕಸಾಗರವು ಶ್ಲೋಕರೂಪವಾಗಿ (ಶೋಕಿತಾಂ ಶ್ಲೋಕಮಾಯಾತ್ರಿಂದಲೂ) ವಾಗ್ವೈಭವದಿಂದ (ವಾಗ್ವಿಲಾಸದಿಂದ) ಹೊರಹರಿಯಿತು, ಹೊರಹೊಮ್ಮಿತು. ಯಾರು

ರಾಮಾಯಣ ಮಹಾಕಾವ್ಯವನ್ನು ರಚಿಸಿದರೋ ಅಂತಹ ಆದಿಕವಿಯೆನಿಸಿದ, ಕೃಪಾ ಸಾಗರರಾದ ವಾಲ್ಮೀಕಿಮಹರ್ಷಿಯು ಆ ದಾರಿಯಾಗಿ, ಮೈಥಿಲಿಯ ಕಡೆಗೆ ನಡೆ ತಂದರು (ಅನುಸರಿಸುತ್ತಿದ್ದನು ಆಕ್ರಂದನವನ್ನು).

ಅನ್ವಯ :—ಕುಶೇಧ್ಮಾಹರಣಾಯ ಯಾತಃ ಕವಿಃ ರುದಿತಾನುಸಾರೀ ತಾಂ ಅಭ್ಯ ಗಚ್ಛತ್ ನಿಷಾದ ವಿದ್ಧಾಂಡಜದರ್ಶನೋತ್ಥಃ ಯಸ್ಯ ಶೋಕಃ ಶ್ಲೋಕತ್ವಮಾಪದ್ಯತ ॥

ಕವಿ = ವಾಲ್ಮೀಕೀ—ರುದಿತಾನುಸಾರೀ ಸನ್, ತಾಂ ಸೀತಾಮಭ್ಯಗಚ್ಛತ್—ನಿಷಾದೇನ = ವ್ಯಾಧೇನ—ವಿದ್ಧಸ್ಯ=ಅಂಡಜಸ್ಯ, ಕ್ರೌಂಚಸ್ಯ—ದರ್ಶನೇನೋತ್ಥ = ಉತ್ಪನ್ನೋ ಯಸ್ಯ ಶೋಕಃ ಶ್ಲೋಕತ್ವಮಾಪದ್ಯತ—ಶ್ಲೋಕರೂಪೇಣಾಶೋಚದಿತ್ಯರ್ಥಃ ಯಸ್ಯ ಶೋಕಃ ಶ್ಲೋಕತ್ವಮಾಪದ್ಯತ ॥

71. ತಮಶ್ರುನೇತ್ರಾವರಣಂ ಪ್ರಮೃಜ್ಯ ।
ಸೀತಾವಿಲಾಪಾದ್ವಿರತಾ ವವಂದೇ ॥
ತಸ್ಯೈ ಮುನಿರ್ದೋಹದಲಿಂಗದರ್ಶೀ ।
ದಾಶ್ವಾನ್ ಸುಪುತ್ರಾಶಿಷಮಿತ್ಯುವಾಚ ॥ ೭೦ ॥

ಕಣ್ಣಿಂದ ಉಕ್ಕಿ ಧಾರೆಧಾರೆಯಾಗಿ ಹರಿದು ಕಣ್ಣು ಕಾಣಿಸದಂತೆ (ಕವಿದ ಕಂಬನಿಯೊರಸಿ) ಮಾಡುತ್ತಿರುವ ಬಿಸಿಯಾದ, ಬಸಿಯುತ್ತಿರುವ ಕಣ್ಣೀರನ್ನು ಸೀತೆ ಒರಸಿ ಕೊಂಡು ಅಳುವುದನ್ನು ನಿಲ್ಲಿಸಿ, ಜಾನಕಿಯು ವಾಲ್ಮೀಕಿಯ ಪಾದಕಮಲಗಳಿಗೆ ನಮಿಸಿದಳು (ನಮಿಸಿದಳು ಸೀತೆ). ಆ ಮಹಾಮುನಿಪುಂಗವರು ಆಕೆಯು ಬಸುರಾಗಿರುವುದನ್ನು ಅರಿತು "ಸತ್ಪುತ್ರವತಿಯಾಗು ಮಗಳೇ" ಎಂದು ಆಶೀರ್ವಾದಮಾಡಿ ಆ ಬಳಿಕ ಹೀಗೆಂದರು (ಸತ್ಪುತ್ರ ವತಿಯಾಗು ಎಂದು ಆಶೀರ್ವದಿಸಿ).

ಅನ್ವಯ :—ಸೀತಾವಿಲಾಪಾತ್ ವಿರತಾ (ಸತೀ) ನೇತ್ರಾವರಣಂ ಅಶ್ರುಪ್ರಮೃಜ್ಯತಂ ಮುನಿಂ ಒಬನ್ದೇ । ದೋಹದಲಿಂಗದರ್ಶೀ ಮುನಿಃ ತಸ್ಯೈ ಸುಪುತ್ರಾಶಿಷಂ ದಾಶ್ವಾನ್ ಇತಿ ಉವಾಚ ॥

ನೇತ್ರಾವರಣಂ = ದೃಷ್ಟಿಪ್ರಬಂಧಕಮಶ್ರುಪ್ರಮೃಜ್ಯ ತಂ ಮುನಿಂ ವವಂದೇ — ದೋಹದಲಿಂಗದರ್ಶೀ=ಗರ್ಭಚಿಹ್ನದರ್ಶೀ=ಗರ್ಭದ ಚಿಹ್ನೆಗಳನ್ನು ಕಂಡ—ಮುನಿಸ್ತಸ್ಯೈ ಸೀತಾಯೈ ಸುಪುತ್ರಾಶಿಷಂ—ದಾಶ್ವಾನ್ = ನೀಡಿದನು.

72. ಜಾನೇ ವಿಸೃಷ್ಟಾಂ ಪ್ರಣಿಧಾನತಸ್ತ್ವಾಂ ।
ಮಿಥ್ಯಾಪವಾದಕ್ಷುಭಿತೇನ ಭರ್ತ್ರಾ ॥
ತನ್ಮಾ ವ್ಯಥಿಷ್ಠಾ ವಿಷಯಾಂತರಸ್ಥಂ ।
ಪ್ರಾಪ್ತಾಸಿ ವೈದೇಹಿ ಪಿತುರ್ನಿಕೇತನಮ್ ॥ ೭೧ ॥

"ಎಲೌ ವೈದೇಹಿ, ನೀನು ಬೇರೆ ಊರಿನಲ್ಲಿರುವ ನಿನ್ನ ತಂದೆಯ ಮನೆಗೆ ಬಂದಿರುವೆಯೆಮ್ಮಾ. ನೀನು ಹೆದರದಿರು, ಬೆದರದಿರು, ಮಗಳೇ. ನಿನ್ನ ವ್ಯಥೆಯನ್ನು ದೂರಮಾಡು. ಹುಸಿಯಾದ ಲೋಕಾಪವಾದಕ್ಕೆ ಅನೃತಾಪವಾದದೊಳು ಜನರ ನಿಂದೆಯ ಮಾತಿನಿಂದ

ನೊಂದು, ನೆರೆಬೆಂದು ಚಿತ್ತಕ್ಷೋಭೆಗೊಂಡು (ಕ್ಷೋಭೆಗೊಂಡ ಎರೆಯನಿಂದ ಉಳಿದವಳು) ನಿನ್ನ ಪತಿಯು ನಿನ್ನನ್ನು ಇಂದು ತೊರೆದಿಹನು. ನಾನು ಈ ಎಲ್ಲಾ ವಿಚಾರಗಳನ್ನು ಯೋಗಬಲದಿಂದ ಅರಿತಿರುವೆನು. ಭರ್ತೃವು ದೂರವಾಗಿ (ಕೈಬಿಟ್ಟಾಗ) ಬೇರೆ ದೇಶದಲ್ಲಿರುವ ತಂದೆಯ ಮನೆಗೆ ಬಂದಿರುವೆ ಎಂದು ತಿಳಿದು ನಮ್ಮ ಆಶ್ರಮಕ್ಕೆ ಬಾ ಮಗಳೆ, ಜಾನಕಿ. ಧೈರ್ಯವನ್ನು ತಳೆದು ವ್ಯಥೆಯನ್ನು ಅಳಿದು ಇನ್ನುಳಿಪುದೌ, ವೈದೇಹಿ'' ಎಂದರು ಆ ತಪೋಧನರು.

ಅನ್ವಯ :—ತ್ವಾಂ ಮಿಥ್ಯಾಪವಾದಕ್ಷುಭಿತೇನ ಭರ್ತ್ರಾ ವಿಸೃಷ್ಟಾಂ ಪ್ರಣಿಧಾನತಃ ಜಾನೇ, ವೈದೇಹಿ, ವಿಷಯಾಂತರಸ್ಥಂ ಪಿತುಃ ನಿಕೇತಂ ಪ್ರಾಪ್ತಾಸಿ, ತತ್ ಮಾ ವ್ಯಥಿಷ್ಠಾಃ॥

ತ್ವಾಂ ಮಿಥ್ಯಾಪವಾದೇನ ಕ್ಷುಭಿತೇನ ಭರ್ತ್ರಾ ವಿಸೃಷ್ಟಾಂ=ತ್ಯಕ್ತಾಂ—ಪ್ರಣಿಧಾನತಃ =ಸಮಾಧಿದೃಷ್ಟ್ಯಾ ಜಾನೇ—ಹೇ ವೈದೇಹಿ ! ವಿಷಯಾಂತರಸ್ಥಂ=ದೇಶಾಂತರಸ್ಥಂ—ಪಿತುರ್ಜನಕಸ್ಯ ನಿಕೇತಂ = ಗೃಹಂ—ಪ್ರಾಪ್ತಾಸಿ—ಭರ್ತ್ರೋಪೇಕ್ಷಿತಾನಾಂ ಪಿತೃಗೃಹವಾಸವಿಹಿತ ಇತಿ ಭಾವಃ—ವಿಲಾಪಾತ್ ವಿರತಾ = ರೋದಿಸುವುದನ್ನು ನಿಲ್ಲಿಸಿ—ಪ್ರಣಿಧಾನತಃ = ಪ್ರಣಿಧಾನದಿಂದ ಅರಿತು, ಸಮಾಧಿಸ್ಥಿತಿಯಲ್ಲಿ, ದೈವಿಕಶಕ್ತಿಯಿಂದ, (ಯೋಗಶಕ್ತಿಯಿಂದ) ಅರಿತು, ಮಾ (ಅ)ವ್ಯಥಿಷ್ಠಾಃ = ಮಾ (ನಿಷೇಧಾತ್ಮಕ ಅವ್ಯಯ) ಬಂದಾಗ ಲುಙ್ ಭೂತಕಾಲದ ರೂಪಗಳಲ್ಲಿ ಅಕಾರ ಲೋಪವಾಗುತ್ತದೆ.

73. ಉತ್ಖಾತ್ಯಲೋಕತ್ರಯಕಂಟಕೇಽಪಿ ।
ಸತ್ಯಪ್ರತಿಜ್ಞೇಽಪ್ಯ ವಿಕತ್ಥನೇಽಪಿ
ತ್ವಾಂ ಪ್ರತ್ಯಕಸ್ಮಾತ್ಕಲುಷ ಪ್ರವೃತ್ತಾ ।
ಅಸ್ತ್ಯೇವ ಮನ್ಯುರ್ಭರತಾಗ್ರಜೇ ಮೇ ॥ ೭೩ ॥

''ಲೋಕತ್ರಯಂಗಳಲ್ಲಿ ಉತ್ಪಾತವಮಾಡುತ್ತ. ಕಂಟಕನಾದ ದಶಕಂಠನಾದ ರಾವಣನನ್ನು ಶ್ರೀರಾಮನು ಮೂರುಲೋಕದ ಮುಳ್ಳನ್ನು ಎಳೆದು ತೆಗೆದು ಲೋಕೋದ್ಧಾರವನ್ನು ಮಾಡಿದ ಲೋಕಪೂಜ್ಯನು (ಮೂರುಲೋಕದ ಮುಳ್ಳನೆಳೆದು ಕಿತ್ತಿರಲೇನು). ಆದರೆ ಲೋಕಪಾವನೆಯೂ, ಸದ್ಧರ್ಮ ಸದಾಚಾರಗಳ ಪ್ರತೀಕಗಳಾಗಿರುವ, ಪತಿವ್ರತೆಯರಲ್ಲಿ ಅಗ್ರಗಣ್ಯಳಾಗಿರುವ ನಿನ್ನ ಬಗ್ಗೆ ಲೋಕನಿಂದೆಯ ನೆಪದಿಂದ ಅನುಚಿತವಾಗಿ ನಡೆದ ಬಗ್ಗೆ ನಾನು ಕಳವಳಗೊಂಡಿರುವೆನು. ಆ ಬಗ್ಗೆ ನಾನು ಭರತಾಗ್ರಜನನ್ನು ದೂರಲೇಬೇಕಾಗಿದೆ. ಅಗ್ನಿಯನ್ನು ಪ್ರವೇಶಿಸುವಂತೆ ಮಾಡಿ ಅಗ್ನಿಪರೀಕ್ಷೆ ನಡೆಸಿಯೂ ಆದಮೇಲೆ ನಿನ್ನ ಲೋಕೋತ್ತರವಾದ ಕೀರ್ತಿಯನ್ನು ತಿಳಿದೂ ತಿಳಿದೂ ಹೀಗೆ ವರ್ತಿಸುವುದರ ಬಗ್ಗೆ ನಾನು ನನ್ನ ದ್ವೇಷದ ಮೇಲೆ ಕೋಪಿಸಿಕೊಳ್ಳದೆ ವಿಧಿಯಿಲ್ಲ. ಅವನು ಲೋಕೋತ್ತರವಾದ ಕಾರ್ಯಗಳನ್ನು ಎಸಗಿರುವವನು, ನಿಜ. ಅವನು ಕಲುಷವಿದೂರನು. ಸರ್ವಗುಣಸಂಪನ್ನನು. ಸತ್ಯಪ್ರತಿಜ್ಞನಾಗಿ ಹೀಗೆ ಕಾರಣವಿಲ್ಲದೆ (ಅಕಾರಣವಾಗಿ) ನಿಷ್ಕಾರಣವಾಗಿ ಪಾಪರಹಿತಳಾದ ನಿನ್ನನ್ನು ಕಾಡಿಗೆ ಅಟ್ಟುವುದು (ದೇಶಾಂತರ ಕಳುಹಿಸುವುದು) ತಪ್ಪೆಂದೇ ಎಣಿಸಿ ಲಕ್ಷ್ಮಣಾಗ್ರಜನೊಳು ಮುನಿದಿಹೆನು ನಾನು''

ಅನ್ವಯಃ :—ಉತ್ಖಾತಲೋಕತ್ರಯಕಂಟಕೇ ಅಪಿ ಸತ್ಯಪ್ರತಿಜ್ಞೇ ಅಪಿ ಅವಿಕತ್ಥನೇ ಅಪಿ ತ್ವಾಂ ಪ್ರತಿ ಅಕಸ್ಮಾತ್ ಕಲುಷಪ್ರವೃತ್ತೌ ಭರತಾಗ್ರಜೇ ಮೇ ಮನ್ಯುಃ ಅಸ್ತಿ ಏವ ।

ಉತ್ಖಾತಲೋಕತ್ರಯಕಂಟಕೇಽಪಿ=ರಾವಣಾದಿಕಂಟಕೋದ್ಧರಣೇನ ಸರ್ವಲೋಕೋಪಕಾರಿಣ್ಯಪೀತ್ಯರ್ಥಃ-ಸತ್ಯಪ್ರತಿಜ್ಞೇ= ಸತ್ಯಸಂಧೇಽಪಿ—ಅವಿಕತ್ಥನೇಽನಾತ್ಮಶ್ಲಾಘಿನ್ಯಪಿ—ಭರತಾಗ್ರಜೇ ಮೇ ಮನ್ಯುಃ = ಕೋಪೋಽಸ್ತ್ಯೇವ ಸರ್ವಗುಣಾಚ್ಛಾದಕೋಽಯಂ ದೋಷ ಇತ್ಯರ್ಥಃ—ಸೀತಾನುನಯಾರ್ಥೋಽಯಂ ರಾಮೋಪಾಲಂಭಃ—ಲೋಕತ್ರಯಕಂಟಕ=ರಾವಣ=ಪ್ರಜಾತಂತ್ರವಿರೋಧಿ=ಸಮಾಜಘಾತುಕ (ಅಪಪೋಲಿ–ಮಾನವಘಾತುಕ) — ಅವಿಕತ್ಥನ = ಆತ್ಮಪ್ರಶಂಸೆ ಮಾಡಿಕೊಳ್ಳದ.

**74. ತವೋರುಕೀರ್ತಿಃ ಶ್ವಶುರಃ ಸಖಾ ಮೇ ।**

> **ಸತಾಂ ಭವೋಚ್ಛೇದಕರಃ ಪಿತಾ ತೇ ॥**
> **ಧುರಿ ಸ್ಥಿತಾ ತ್ವಂ ಪತಿದೇವತಾನಾಂ ।**
> **ಕಿಂ ತನ್ನ ಯೇನಾಸಿ ಮಮಾನುಕಂಪ್ಯಾ ॥ ೭೪ ॥**

''ಮಗಳೇ. ಯಶೋವಂತನಾದ, ಕೀರ್ತಿಶಾಲಿಯಾದ ನಿನ್ನ ಮಾವನು ನನ್ನ ಮಿತ್ರನು. ನಿನ್ನ ಪಿತನಾದರೋ ಜ್ಞಾನಸಂಪನ್ನನಾದ ಬ್ರಹ್ಮಜ್ಞಾನಿ. ಮುಮುಕ್ಷುವೆಂದೇ ಕರೆಯಲ್ಪಡುವನು. ವಿಶ್ವವೇದಾಂತಿ, ಲೋಕಪೂಜ್ಯನಾದ ರಾಜಋಷಿ. ಭವಸಾಗರದ ಕಷ್ಟಗಳನ್ನು ಬಿಡಿಸಲು ಸಮರ್ಥನಾದ ವೇದಾಂತಿ. ನೀನಾದರೋ ಪತಿಯೇ ಪರದೈವವೆನ್ನುವ (ದೇವರೆನ್ನುವ) ಶಿರೋರತ್ನಳು. ಪತಿವ್ರತೆಯರಿಗೆಲ್ಲ ಅಗ್ರಗಣ್ಯಳು. ಮಾರ್ಗದರ್ಶಿನಿ (ಅಗ್ರಗಣ್ಯಳು ನೀನು ಪತಿವ್ರತಾ ಸ್ತ್ರೀಯರೊಳು). ವಿಶ್ವಮಾನ್ಯಳಾದ ಸತಿ ಶಿರೋಮಣಿ. ಅಂತಹ ಸದ್ಗುಣಸಂಪನ್ನಳಾದ ನಿನ್ನಂತಹ ಮಾನ್ಯಳಿಗೆ ಆಪತ್ಕಾಲದಲ್ಲಿ ನಾನು ಸಹಾಯ ಮಾಡದೆ, ಮನದ ಅನುಕಂಪವನು ತೋರದೆ ಇರುವೆನೆ ? ನನ್ನ ಮಗಳಂತೆ ನಿನ್ನನ್ನು ಸಲಹುವೆನು. ಇಂತಹ ಕಿಂಚಿತ್ತು ಉಪಕಾರವನ್ನು ತೋರದೆ ನಾನು ಇರಲು ಸಾಧ್ಯವೆ ? ಯಾವುದೋ ನಿಮಿತ್ತದಿಂದ ನೀನಿಲ್ಲಿಗೆ ಬಂದಿರುವೆ. ಮಾನವೀಯ ಸೌಜನ್ಯವು ನಿನ್ನಂತಹ ಸದ್ಧರ್ಮದಲ್ಲಿ ನಡೆಯುವ ಪತಿವ್ರತಾವನಿತೆಗೆ ಇಲ್ಲವೆನ್ನುವುದುಂಟೇ ? ನೀನು ನನ್ನ ಅನುಕಂಪವನ್ನು ಹೊಂದಿರಲು ಸಾಧ್ಯವೆ ? (ನೀನೆನ್ನ ದಯೆಗೆ ಅರ್ಹಳು) ಪಡೆದೇ ಪಡೆಯುವೆ. ನೀನು ನನ್ನೊಲುಮೆಗೆ ಅರ್ಹಳಲ್ತೆ. ಸ್ತ್ರೀಧರ್ಮದ ಸಾಕಾರಮೂರ್ತಿಯಾದ ಆದರ್ಶಸತಿಯಾದ ನಿನಗೆ ನನ್ನ ಆಶ್ರಮವೇ ಪಿತೃಗೃಹ. ಚಿಂತಿಸದಿರು. ನಿನ್ನ ಬಾಳಿಗೆ ಬೆಳಕನ್ನು ಕೊಡುವ ಪುತ್ರರತ್ನರನ್ನು ಪಡೆದು ರಂಜಿಸುವೆ.

ಅನ್ವಯಃ :—ಉರುಕೀರ್ತಿಃ ತವ ಶ್ವಶುರಃ ಮೇ ಸಖಾ, ತೇ ಪಿತಾ ಸತಾಂ ಭವೋಚ್ಛೇದಕರಃ, ತ್ವಂ ಪತಿದೇವತಾನಾಂ ಧುರಿ ಸ್ಥಿತಾ, ಯೇನ ಮಮ ಅನುಕಂಪ್ಯಾ ನ ಅಸಿ ತತ್ ಕಿಮ್ ॥

ಶ್ವಶುರೋ = ದಶರಥೋ (ಮಾವಯ್ಯ)—ಪಿತಾ = ಜನಕಃ—ಸತಾಂ = ವಿದುಷಾಂ —ಭವಚ್ಛೇದಕರೋ = ಜ್ಞಾನೋಪದೇಶಾದಿನಾಂ ಸಂಸಾರದುಃಖಧ್ವಂಸಕಾರಿ—ತ್ವಂ

ಪತಿದೇವತಾನಾಂ = ಪತಿವ್ರತಾನಾಂ—ಧುರಿ = ಅಗ್ರೇ ಸ್ಥಿತಾ—ಯೇನ = ನಿಮಿತ್ತೇನ ಮಾಮನುಕಂಪ್ಯಾ = ಅನುಗ್ರಹ್ಯಾ ಸಾಸಿತತ್ರಿಮ್—ಸತಾಂ ಮುಮುಕ್ಷೂಣಾಂ ಭವಸ್ಯ ಸಂಸಾರಸ್ಯ ಧ್ವಂಸೇ ಗುರುಃ —ಬ್ರಹ್ಮವಿದ್ಯೋಪದೇಷ್ಟೇತ್ಯರ್ಥಃ—ಪತಿದೇವತಾ = ಪತಿವ್ರತೆ—ಧುರಿ = ಮೊದಲು, ಅಗ್ರಪಂಕ್ತಿಯಲ್ಲಿ—ಉರುಕೀರ್ತಿಃ = ಉರ್ವೀ ಕೀರ್ತಿಃ ಯಸ್ಯ = ಯಶೋಧನನು—ತದಯಂ ಬ್ರಹ್ಮವಾದೀ ಪುರಾಣರಾಜರ್ಷಿ ಜನಕಃ ॥

75. ತಪಸ್ವಿಸಂಸರ್ಗ ವಿನೀತಸತ್ವೇ ।
ತಪೋವನೇ ವೀತಭಯಾ ವಸಾಸ್ಮಿನ್ ॥
ಇತೋ ಭವಿಷ್ಯತ್ಯನಘ ಪ್ರಸೂತೇ ।
ಅಪತ್ಯ ಸಂಸ್ಕಾರಮಯೋ ವಿಧಿಸ್ತೇ ॥ ೭೫ ॥

ಎಲೈ ಮಂಗಳೇ, ನೀನು ಅಂಜದಿರು. ''ಧೈರ್ಯಂ ಸರ್ವತ್ರ ಸಾಧನಮ್ (ಸರ್ವಾರ್ಥ ಸಾಧನಮ್). ಎಂಬ ಮಾತ್ರದಂತೆ, ಎದ್ದೇಳು. ಕರ್ತವ್ಯಪರಳಾಗು. ನಿನ್ನ ಬದುಕನ್ನು ಸಾರ್ಥಕಗೊಳಿಸು. ಇಲ್ಲಿ ನನ್ನ ಈ ಸಿದ್ಧಾಶ್ರಮದಲ್ಲಿ ಋಷಿ, ಮುನಿಗಳ, ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿರುವ ಸಾಧುಸಂತರ, ವಿರಕ್ತರ, ಭಗವದ್ಭಕ್ತರ, ಋಷಿಕನ್ಯೆಯರ ಸಹವಾಸದಲ್ಲಿ ನೀನು ನೆಮ್ಮದಿಯನ್ನು ಪೊಂದುವೆ. ಅಲ್ಲಿ ಆ ತಪೋವನದಲ್ಲಿ ಸಾಧು ಮೃಗಗಳಾದ ಆಕಳು, ಎರಳೆ, ಮೊಲ ಮೊದಲಾದುವು ವಿನಯಶೀಲಳಾದ ನಿನ್ನ ಮನಸ್ಸನ್ನು ಆಮೋದ(ಆಹ್ಲಾದ)ಗೊಳಿಸುವುವು. ಅಲ್ಲಿ ಭಯಭೀತಿಗಳಿಗೆ ಎಡೆಯಿಲ್ಲ. ಸತ್ಕರ್ಮ, ಸದಾಚಾರ, ಆಧ್ಯಾತ್ಮಚಿಂತನೆಗಳಿಗೆ ನೆಲೆವೀಡಾದ ಆ ತಪೋವನದಲ್ಲಿ ನೀನು ಮನದ ಅಂಜಿಕೆ, ಬೇಸರವನ್ನು ಕಳೆದು ಸುಖಸಾಂತ್ವನವನ್ನು ಪೊಂದುವೆ. ನಿನಗೆ ಅಡಿಗಡಿಗೆ ಮಂಗಳವಾಗುವುದು. ನಿನಗೆ ಮುಂದೆ ಸುಖಪ್ರಸವವಾಗಿ ಅವಳಿಮಕ್ಕಳನ್ನು ಪಡೆಯುಲಿರುವೆ. ಆ ತಪೋವನದಲ್ಲಿಯೇ ಮಕ್ಕಳ ಪ್ರಶಸ್ತವಾದ, ಶುಭಕರವಾದ ಜಾತ ಕರ್ಮಾದಿವಿಧಿಗಳು ನನ್ನಿಂದಲೇ ನಡೆಯಲಿರುವುದು. ಭವಿಷ್ಯದಲ್ಲಿ ನಿನಗೆ ಒಳಿತಾಗುವುದು (ಸುಖಪ್ರಸವವಾದಂದು ಜಾತಕರ್ಮಗಳ ನಾನೆಸಗಿದಪೆ ಒಲಿದು). ಸ್ತ್ರೀಧರ್ಮ ಪರಾಯಣಳಾದ ನೀನು ಭಯಭೀತಳಾಗದೆ ನಿಶ್ಚಿಂತೆಯಿಂದ ಇರು. ನಿನಗೆ ಶುಭೋದಯ ವಾಗಲಿ.'' ಎಂದು ವಾಲ್ಮೀಕಿ ಮುನಿಯು ತನ್ನ ಅಮೃತದಂತಹ ಮಾತಿನಿಂದ, ಅಮೃತಾ ನಂದಮಯಿಯಾದ ಜಗನ್ಮಾತೆಯಾದ ಸೀತಾದೇವಿಯನ್ನು ಸಂತಯಿಸಿದರು.

ಅನ್ವಯ :—ತಪಸ್ವಿಸಂಸರ್ಗವಿನೀತಸತ್ವೇ ಅಸ್ಮಿನ್ ತಪೋವನೇ ವೀತಭಯಾವಸ । ಇತಃ ಅನಘಪ್ರಸೂತೇಃ ತೇ ಅಪತ್ಯಸಂಸ್ಕಾರಮಯಃ ವಿಧಿಃ ಭವಿಷ್ಯತಿ ॥

ತಪಸ್ವಿಸಂಸರ್ಗೇಣ—ತಪಸ್ವಿಗಳ ಸಂಸರ್ಗದಿಂದ (ಸಂಪರ್ಕದಿಂದ)—ಅಪತ್ಯ=ಸಂತಾನ —ವಿಧಿಃ = ಅನುಷ್ಠಾನ—ಅನಘಂ ಯಥಾ ತಥಾ ಪ್ರಸೂತಿಃ = ನೋವಿಲ್ಲದ ಹೆರಿಗೆ. ವಿನೀತಸತ್ವೇ = ಶಾಂತಜಂತುಕೇ—ಅಸ್ಮಿಂಸ್ತಪೋವನೇ ವೀತಭಯಾ = ನಿರ್ಭೀತಾವಸ— ಅನಘಪ್ರಸೂತೇಃ = ಸುಖಪ್ರಸೂತೇ—ಅಪತ್ಯಸಂಸ್ಕಾರಮಯೋ = ಜಾತಕರ್ಮಾದಿ ರೂಪೋ—ವಿಧಿ=ಅನುಷ್ಠಾನಂ—ಭವಿಷ್ಯತಿ—ತಪಸ್ವಿ ಸಂಸರ್ಗ=ಸಾಧುಸಂಪರ್ಕದೊಳು.

76. ಅಶೂನ್ಯತೀರಾಂ ಮುನಿಸಂನಿವೇಶೈಃ ।
ತಮೋಽಪಹಂತ್ರೀಂ ತಮಸಾಂ ವಗಾಹ್ಯ ॥
ತತ್ಸೈಕತೋತ್ಸಂಗಬಲಿಕ್ರಿಯಾಭಿಃ ।
ಸಂಪತ್ಸ್ಯತೇ ತೇ ಮನಸಃ ಪ್ರಸಾದಃ ॥ ೭೬ ॥

"ಹೇ ಮಗಳೇ, ಸೀತಾಭಾಮಾ, ಅಲ್ಲಿ ಪಾಪನಾಶಿನಿಯಾದ ತಮಸಾ ನದಿಯ ನಿರ್ಮಲೋದಕದಲ್ಲಿ ನೀನು ಮಿಂದು ಶುಚಿರ್ಭೂತಳಾಗುವೆ. (ತಮಸೆಯನ್ನು ಮಿಂದೀ ತಮೋಹಾರಿಣಿಯನ್ನು) ಬಳಿಯಲ್ಲಿರುವ ತಮಸಾನದಿಯ ಪಾವನತೀರದಲ್ಲಿ ಋಷಿ ಮುನಿಗಳ, ಮರಗಿಡಗಳಿಂದ ಅಲಂಕೃತವಾಗಿರುವ ಪರ್ಣಕುಟೀರಗಳು ಎಡೆಬಿಡದೆ ತುಂಬಿರುವುವು (ಉಟಜಂಗಳಿರುವ ತಟನಿಯನ್ನು). ಅಲ್ಲಿನ ಶುಭ್ರವಾದ ಶಾಂತಮಯ ಹಾಗೂ ಅಮೃತಂಗಮಯವಾದ ವಾತಾವರಣದಲ್ಲಿ ನೀನು ಮನಃಶಾಂತಿಯನ್ನು ಹೊಂದುವೆ. ಆ ತಮಸೆಯ ಪವಿತ್ರತೀರ್ಥದಲ್ಲಿ ಮಿಂದು ಋಷಿಮುನಿಗಳು ಕಾಲಕಾಲಕ್ಕೆ ಮಾಡಬೇಕಾದ ಬಲಿಕರ್ಮಗಳನ್ನು (ಪುಳಿನದುತ್ಸಂಗದೊಳು ದೇವತಾರ್ಚನೆಗಳನು) ಹೋಮಹವನಗಳನ್ನು ಯಜ್ಞಯಾಗಗಳನ್ನು ನಡೆಸುತ್ತಾ ಭಗವಂತನ ನಾಮಸಂಕೀರ್ತನೆ ಯಲ್ಲಿ ಕಾಲಕಳೆಯುತ್ತಿರುವರು. ದೇವತಾರ್ಚನೆಗಳನ್ನು ಆಧ್ಯಾತ್ಮಚಿಂತನೆಯನ್ನು ನಡೆಸುತ್ತಿರುವರು. ಅಲ್ಲಿ ನೀನು ನಿನ್ನ ಮನಃಪ್ರಸಾದವನ್ನು ಪಡೆಯಲಿರುವೆ. ಇದರಲ್ಲಿ ಎಳ್ಳಷ್ಟು ಸಂಶಯವಿಲ್ಲ" (ನಡೆಸುತಿರೆ ಪಡೆವೆ ಮನಃಪ್ರಸಾದವನು).

ಅನ್ವಯ :—ಮುನಿಸನ್ನಿವೇಶೈಃ ಅಶೂನ್ಯತೀರಾಂ ತಮೋಽಪಹಂತ್ರೀಂ ತಮಸಾಂ ವಗಾಹ್ಯ ತಸ್ಯ ಸೈಕತೋತ್ಸಂಗಬಲಿಕ್ರಿಯಾಭಿಃ ತೇ ಮನಸಃ ಪ್ರಸಾದಃ ಸಂಪತ್ಸ್ಯತೇ ॥

ಮುನೀನಾಂ ಸನ್ನಿವೇಶೈರುಟಜೈಶೂನ್ಯತೀರು ಪೂರ್ಣತೀರಾಂ ತಮಸಃ ಶೋಕಸ್ಯ ಪಾಪಸ್ಯ ಚಾಪಹಂತ್ರೀಮ್—"ತಮಸ್ತು ಕ್ಲೀಬೇ ನರಕಶೋಕಯೋಃ" ಇತ್ಯಮರಃ—ತಮಸಾಂ ನದೀಮವಗಾಹ್ಯ ತತ್ರ ಸ್ನಾತ್ವಾ—ತಸ್ಯಾಃ ಸೈಕತೋತ್ಸಂಗೇಷು ಬಲಿಕ್ರಿಯಾ ಭಿರಿಷ್ಟದೇವತಾಪೂಜಾವಿಧಿಭಿಸ್ತೇ ಮನಸಃ ಪ್ರಸಾದಃ ಸಂಪತ್ಸ್ಯತೇ ಭವಿಷ್ಯತಿ – ಸೈಕತೋತ್ಸಂಗೇಷು ಬಲಿಕ್ರಿಯಾಭಿಃ = ಮರಳ ದಂಡೆಗಳಲ್ಲಿ ಮಾಡಿದ ಪೂಜೆಗಳಿಂದ— ತಮ = ಪಾಪ, ನರಕ, ಶೋಕ— ಸನ್ನಿವೇಶೈಃ = (ಮುನಿಗಳ) ಪರ್ಣಶಾಲೆಗಳಿಂದಲೂ.

77. ಪುಷ್ಪಂ ಫಲಂ ಚಾರ್ತವಮಾಹರಂತ್ಯೋ ।
ಬೀಜಂ ಚ ಬಾಲೇಯಮಕೃಷ್ಟರೋಹಿ ॥
ವಿನೋದಯಿಷ್ಯಂತಿ ನವಾಭಿಷಂಗಾಂ ।
ಉದಾರವಾಚೋ ಮುನಿಕನ್ಯಕಾಸ್ತ್ವಾಮ್ ॥ ೭೭ ॥

ಎಲೌ ಮಗಳೇ (ಮೋಲೀ–ಮಲಯಾಳಮ್) ಕಾಲಕಾಲಕೆ ದೊರೆಯುವ ಆಯಾಯ ಕಾಲದಲ್ಲಿ, ಆಯಾಯ ಋತುಗಳಲ್ಲಿ ಮರಗಿಡ, ಬಳ್ಳಿಗಳಲ್ಲಿ ಬಿಟ್ಟಿರುವ ಹೂ, ಹಣ್ಣು, ಕಾಯಿಗಳನ್ನು ಋಷಿಕುಮಾರಿಯರು ಕೊಯ್ದು ಪೂಜಾರ್ಥವಾಗಿ ನಿನಗೆ ಒದಗಿಸುವರು,

ಅವರು ಆಹಾರಕ್ಕಾಗಿ ನೀವಾರಧಾನ್ಯಗಳನ್ನು, ಗೆಡ್ಡೆಗೆಣಸುಗಳನ್ನು ಸಂಗ್ರಹಿಸುವರು. ಅವರು ನಿನ್ನ ನಿತ್ಯ(ಸತ್ಯ)ಸಂಗಾತಿಗಳು. ಆ ಮುಗ್ಧೆಯರಾದ ಮುನಿಬಾಲೆಯರು ವಚನ ರಚನಾಚತುರರು (ಮಾತಿನಮಲ್ಲಿಯರು) (ವಚನಚತುರರು ನಮ್ಮ ಮುನಿಕನ್ನಿಕೆಯರು). ಅವರು ನಿನ್ನನ್ನು ತಮ್ಮ ವಿನೋದಗೊಳಿಸುವ ಮಾತುಗಳಿಂದ ತೃಪ್ತಿಪಡಿಸುವರು (ನಾನಾಬಿನದಗಳಿಂದ). ಅವರ ಗೆಳೆತನದಲ್ಲಿ ನೀನು ನಿನ್ನ ದುಃಖವನ್ನು ಮರೆಯಲಿರುವೆ. ಅವರು ನಿನ್ನ ಹೊಸತಾದ ಅಳಲನ್ನು (ಪತಿವಿರಹ), ತಮಗೆ ಅನುಭವವಿಲ್ಲದಿದ್ದರೂ ನಿನ್ನನ್ನು ಸಂತೈಸಿ, ನಿನ್ನ ಅಳಲನ್ನು ಆರಿಸಬಲ್ಲರು.

ಅನ್ವಯ :—ಆರ್ತವಂ ಪುಷ್ಪಂ ಫಲಂ ಚ ಅಕೃಷ್ಟರೋಹಿಬಾಲೇಯಂ ಬೀಜಂ ಚ ಆಹರಂತ್ಯಃ ಉದಾರವಾಚಃ ಮುನಿಕನ್ಯಕಾಃ ನವಾಭಿಷಂಗಾಂ ತ್ವಾಂ ವಿನೋದಯಿಷ್ಯಂತಿ॥

ಋತುರಸ್ಯ ಪ್ರಾಪ್ತ ಆರ್ತವಮ್—ಸಕಾಲಪ್ರಾಪ್ತಮಿತ್ಯರ್ಥಃ—ಪುಷ್ಪಂ ಫಲಂ ಚ —ಅಕೃಷ್ಟರೋಹ್ಯಾಕೃಷ್ಟಕ್ಷೇತ್ರೋತ್ಪನ್ನಮ್—ಅಕೃಷ್ಟಪಚ್ಯ ಮಿತ್ಯರ್ಥಃ—ಬಲಯೇ ಹಿತಂ ಬಾಲೇಯಂ ಪೂಜಾಯೋಗ್ಯಂ—ಉದಾರವಾಚಃ = ಪ್ರಗಲ್ಭಗಿರೋ—ಮುನಿ ಕನ್ಯಕಾ ನವಾಭಿಷಂಗಾಂ = ನೂತನದುಃಖಾಂ—ತ್ವಾಂ ವಿನೋದಯಿಷ್ಯಂತಿ—ಉದಾರ ವಾಚಃ = ನಿರ್ಮಲವಾದ ಮನಸ್ಸಿನಿಂದ ನುಡಿಯುತ್ತಿರುವ—ಋತಾಭವಂ = ಆರ್ತವಂ ಬಲಯೇ ಹಿತಂ = ಬಾಲೇಯಂ = ಪೂಜೆಗೆ ಅರ್ಹವಾದ—ನವಾಭಿಷಂಗಾಂ = ಹೊಸ ಅಳಲು.

78. ಪಯೋಘಟೈರಾಶ್ರಮಬಾಲ ವೃಕ್ಷಾನ್ ।
ಸಂವರ್ಧಯಂತೀ ಸ್ವಬಲಾನುರೂಪೈಃ ॥
ಅಸಂಶಯಂ ಪ್ರಾಕ್ತನಯೋಪಪತ್ತೇಃ ।
ಸ್ತನಂಧಯ ಪ್ರೀತಿ ಅವಾಪ್ಸ್ಯಸಿ ತ್ವಮ್ ॥ ೭೮ ॥

"ಹೇ ಜನಕಸುತೆ, ನಿನ್ನ ಶಕ್ತಿಗೆ ತಕ್ಕಂತೆ ಅಮೃತದಂತಹ ನೀರನ್ನು ಕೊಡಗಳಲ್ಲಿ ತುಂಬಿಕೊಂಡು, ಆಶ್ರಮದ ಅಕ್ಕಪಕ್ಕದಲ್ಲಿ ಬೆಳೆವ ಮಕ್ಕಳಂತಹ ಗಿಡಗಳಿಗೆ ನೀರೆರೆ ಯುತ್ತಾ ನೀನು ಮಕ್ಕಳನ್ನು ಬೆಳೆಸುವಂತೆ ಬೆಳೆಸಲಿರುವೆ. ಎದೆಹಾಲನ್ನು ಕೊಟ್ಟು ಎಳೆ ಕಂದನನ್ನು (ಕುವರನ್ನು, ಪಾಪು) ಪೋಷಿಸುವ ಪೂರ್ವಾನುಭವವು ನಿನಗೆ ಮರ, ಗಿಡ, ಹೂಬಳ್ಳಿಗಳಿಂದ ದೊರೆಯುವುದು (ಮಗನ ಮೊಗವನು ಕಾಣ್ಬ ಮೊದಲೆ ನಿನಗರಿವಹುದು) ನಿನಗೆ ತಿಳಿಯುವುದು ಕೂಸಿನೊಳು ತಾಯೊಲುಮೆ (ಪ್ರೀತಿ) ಎಂತಹುದೆಂದು. ಯಾವ ರೀತಿಯದೆಂದು ತರುಲತೆಗಳಿಂದ ತಿಳಿಯಲಿರುವೆ.

ಅನ್ವಯ :—ಸ್ವಬಲಾನುರೂಪೈಃ ಪಯೋಘಟೈಃ ಆಶ್ರಮಬಾಲವೃಕ್ಷಾನ್ ಸಂವರ್ಧಯನ್ತೀಂ ತ್ವಂ ತನಯೋಪಪತ್ತೇಃ ಪ್ರಾಕ್ ಅಸಂಶಯಂ ಸ್ತನಂಧಯಪ್ರೀತಿಂ ಅವಾಪ್ಸ್ಯಸಿ॥

ಸ್ವಬಲಾನುರೂಪೈಃ = ಸ್ವಶಕ್ತ್ಯನುಸಾರಿಭಿಃ — ಪಯಸಾಮಂಭಸಾಂ ಘಟೈಃ — ಆಶ್ರಮಬಾಲವೃಕ್ಷಾನ್ ಸಂವರ್ಧಯಂತೀ ತ್ವಂ ತನಯೋಪಪತ್ತೇಃ—ಪ್ರಾಕ್ = ಪೂರ್ವಮ್—ಸ್ತನಂ ಧಯತಿ ಪಿಬತೀತಿ ಸ್ತನಂಧಯಃ ಶಿಶುಃ—ತಸ್ಮಿನ್ಪ್ರೀತಿಸ್ತಾಮವಾಪ್ಸ್ಯಸಿ ॥

79. ಅನುಗ್ರಹಪ್ರತ್ಯಭಿನಂದಿನೀಂ ತಾಂ ।
ವಾಲ್ಮೀಕಿರಾದಾಯ ದಯಾರ್ದ್ರಚೇತಾಃ ॥
ಸಾಯಂ ಮೃಗಾಧ್ಯಾಸಿತ ವೇದಿಪಾರ್ಶ್ವಂ ।
ಸ್ವಮಾಶ್ರಮಂ ಶಾಂತಮೃಗಂ ನಿನಾಯ ॥ ೭೯ ॥

ಕರುಣಾಳುವಾದ (ದಯಾರ್ದ್ರಚೇತನನಾದ) ವಾಲ್ಮೀಕಿಮಹಾಮುನಿಯು ಅನುಗ್ರಹಕ್ಕೆ ಪಾತ್ರಳಾದುದಕ್ಕೆ ಆ ದೇವಿಯು ಆ ಮುನಿವರನನ್ನು ಅಭಿನಂದಿಸುತ್ತಾ ಸಂತಸದಿಂದ ಆಶ್ರಮದತ್ತ ಮಹಾಮುನಿಯ ಜೊತೆಯಲ್ಲಿ ನಡೆದಳು. ಆಗ ಸಾಯಂಕಾಲವಾಗಿತ್ತು ಅಲ್ಲಿ ಎಲೆಮನೆಗಳ ಯಜ್ಞಕುಂಡದ ಬಳಿಯಲ್ಲಿ (ಪಾರ್ಶ್ವದಲ್ಲಿ) ಜಿಂಕೆಗಳು (ಮಲಗಿ ಕೊಂಡು) ಮೆಲುಕುಹಾಕುತ್ತ (ಹರಿಣಗಳು ಮಲಗಿರುವ ಶಾಂತಮೃಗದಾಶ್ರಮಕೆ) ಇರುತ್ತಿದ್ದುವು. ಆ ಶಾಂತವಾದ (ಪ್ರಶಾಂತವಾದ) ಆಶ್ರಮದಲ್ಲಿ ಕ್ರೂರಮೃಗಗಳು ತಮ್ಮ ಜಾತಿವೈರವನ್ನು ಬಿಟ್ಟು ಶಾಂತಿಯಿಂದ ಸಹಬಾಳ್ವೆಮಾಡುತ್ತಾ ನೆಲೆಸಿದ್ದುವು.

ಅನ್ವಯ :—ದಯಾರ್ದ್ರಚೇತಾಃ ಅನುಗ್ರಹಪ್ರತ್ಯಭಿನಂದಿನೀಂ ತಾಂ ಆದಾಯ ಸಾಯಂ ಮೃಗಾಧ್ಯಾಸಿತವೇದಿಪಾರ್ಶ್ವಂ. ಶಾಂತಮೃಗಂ ಸ್ವಮಾಶ್ರಮಂ ನಿನಾಯ ॥

ದಯಾರ್ದ್ರಚೇತಾ = ವಾಲ್ಮೀಕಿಃ—ಮೃಗೈರಧ್ಯಾಸಿತವೇದಿಪಾರ್ಶ್ವ=ಮಧಿಷ್ಠಿತವೇದಿ ಪ್ರಾಂತಾ—ಶಾಂತಮೃಗಂ ಸ್ವಮಾಶ್ರಮಂ ನಿನಾಯ—ಅನುಗ್ರಹ=ಅನುಗ್ರಹಂ ಪ್ರತ್ಯಭಿ ನಂದತಿ ತಾವತ್ ॥ ದಯಯಾ ಆರ್ದ್ರಚೇತಃ ಯಸ್ಯ ಸಃ = ದಯಾರ್ದ್ರಚೇತಾಃ=ಕರುಣೆ ಯಿಂದ ನೆನೆದ ಮನಸುಳ್ಳ—ಅನುಗ್ರಹಂ ಪ್ರತ್ಯಭಿನಂದತೀತಿ=ಅನುಗ್ರಪ್ರತ್ಯಭಿನಂದಿನೀ = ಅನುಗ್ರಹಕ್ಕಾಗಿ ಅಭಿನಂದಿಸುವ—ಮೃಗೈಃ ಅಧ್ಯಾಸಿತಾನಿ ವೇದಿಪಾರ್ಶ್ವಾಣಿ ಯಸ್ಮಿನ್ ಸಃ = ಯಜ್ಞಭೂಮಿಯ ಸಮೀಪದಲ್ಲಿ ಕುಳಿತಿರುವ ಜಿಂಕೆಗಳಿಂದ ಕೂಡಿರುವ.

80. ತಾಮರ್ಪಯಾಮಾಸ ಚ ಶೋಕದೀನಾಂ ।
ತದಾಗಮಪ್ರೀತಿಷು ತಾಪಸೀಷು ॥
ನಿರ್ವಿಷ್ಟಸಾರಾಂ ಪಿತೃಭಿರ್ಹಿಮಾಂಶೋಃ ।
ಅಂತ್ಯಾಂಕಲಾಂ ದರ್ಶ ಇವೌಷಧೀಷು ॥ ೮೦ ॥

ಶೋಕಾದೀನೆಯಾದ ಆ ಮಹಾಸತಿಯನ್ನು ವಾಲ್ಮೀಕಿಮುನಿಯು ತಾಪಸ ಸ್ತ್ರೀಯ ರೊಂದಿಗೆ ಜೊತೆಗೂಡಿಸಿದರು. ಆ ತಾಪಸಿಯರು ಸೀತೆಯ ಬರುವಿಕೆಗೆ ಒಲಿದು ಪ್ರೀತಿ ಯಿಂದ ಅವಳನ್ನು ನಯವಾಗಿ ನಡೆಸಿಕೊಂಡರು (ಆ ಶೋಕದೀನೆಯನ್ನು). ಹೇಗೆ ಪಿತೃ ದೇವತೆಗಳು ದರ್ಶ ಅಮಾವಾಸ್ಯೆಯ ಚಂದ್ರನ ವಿಶಿಷ್ಟವಾದ ಕಲೆಯನ್ನು (ದರ್ಶತಾನೋ ಪಧಿವ್ರಾತಕಿರದೆ ಅರ್ಚಪೊಲು) ಓಷಧಿಗಳ ಮೂಲಕ ಪಡೆದು ಸಂತುಷ್ಟರಾಗುವಂತೆ, ಆ ತಾಪಸಿಯರು ಸೀತಾದೇವಿಯ ಆಗಮನದಿಂದ ಸಂತೋಷತಾಳ್ದರು. ಅಮೃತಮಯ ನಾದ ಚಂದ್ರನ ಕಲೆಯನ್ನು (ಕಾಂತಿಯನ್ನು) ದರ್ಶ ಅಮಾವಾಸ್ಯೆಯಂದು ಹೀರಿ ಓಷಧಿ ಗಳು ಪುಷ್ಟಿಗೊಳ್ಳುತ್ತವೆ, ಆ ಹಿಮಾಂಶುವಿನ ಅಮೃತಕಲೆಯನ್ನು ಸೋಮರಸದ ಮೂಲಕ ಪಿತೃದೇವತೆಗಳಿಗೆ ಅರ್ಪಿಸಲ್ಪಟ್ಟಾಗ ಅವರು (ಹೀರಿ) ಸ್ವೀಕರಿಸಿ ಸಂತೃಪ್ತ ರಾಗುತ್ತಾರೆ (ಪಿತೃಭುಕ್ತಚಂದ್ರನೊಂದವಶಿಷ್ಟಕಲೆಯು)

ಅನ್ವಯ :—ಶೋಕಾದೀನಾಂ ತಾಂ ತದಾಗಮಸಂಪ್ರೀತಿಷು ತಾಪಸೀಷು ಪಿತೃಭಿಃ ನಿರ್ವಿಷ್ಟಸಾರಾಂ ಹಿಮಾಂಶೋಃ ಅಂತ್ಯಾಂ ಕಲಾಂ ದರ್ಶಃ ಓಷಧೀಷು ಇವ ಅರ್ಪಯಾಮಾಸ ಚ ॥

ದರ್ಶಃ = ಅಮಾವಾಸ್ಯೆ—ನಿರ್ವಿಷ್ಟಃ ಸಾರಃ ಯಸ್ಯಾಃ ಸಾ ನಿರ್ವಿಷ್ಟಸಾರಾ ತಾಂ = ಸೇವಿಸಲ್ಪಟ್ಟಸಾರವುಳ್ಳ (ಚಂದ್ರನ ಕಲೆಯನ್ನು) ಶೋಕಾದೀನಾಂ ತಾಂ ಸೀತಾಂ ತಸ್ಯಾಃ ಸೀತಾಯಾ ಆಗಮೇನ ಪ್ರೀತಿಯರ್ಯಾಸಾಂ ತಾಸು ತಾಪಸೀಷು—ಪಿತೃಭಿರಗ್ನಿಷ್ವಾತ್ತಾದಿ ಭಿರ್ನಿರ್ವಿಷ್ಟಸಾರಾಂ = ಭುಕ್ತಸಾರಾಂ—ಹಿಮಾಂ ಶೋರಂತ್ಯಾಮವಶಿಷ್ಟಾಂ ಕಲಾಂ—ದರ್ಶೋರ್=ಅಮಾವಾಸ್ಯಾಕಾಲ—ಓಷಧೀಷ್ವಿವ ಅರ್ಪಯಾಮಾಸ ಚ—ಅತ್ರ ಪರಾಶರಃ "ಪಿಬಂತಿ ವಿಮಲಂ ಸೋಮಂ ವಿಶಿಷ್ಟಾ ತಸ್ಯಾಯಾ ಕಲಾ—ಸುಧಾಮೃತಮಯೀಂ ಪುಣ್ಯಾಂ ತಾಮಿಂದೋಃ ಪಿತರೋ ಮುನೇ" ಇತಿ—ವ್ಯಾಸಶ್ಚ "ಅಮಾಯಾಂತು ಸದಾ ಸೋಮಃ ಓಷಧೀಃ ಪ್ರತಿಪದ್ಯತೇ ಇತಿ ॥

**81. ತಾ ಇಂಗುದೀಸ್ನೇಹಕೃತಪ್ರದೀಪಂ ।**
**ಆಸ್ತೀರ್ಣಮೇಧ್ಯಾಜಿನತಲ್ಪಮಂತಃ ॥**
**ತಸ್ಯೈ ಸಪರ್ಯಾನುಪದಂ ದಿನಾಂತೇ ।**
**ನಿವಾಸಹೇತೋರುಟಜಂ ವಿತೇರುಃ ॥ ೮೧ ॥**

ಆ ತಾಪಸಿಯರು ಸೀತಾದೇವಿಯನ್ನು ಯೋಗ್ಯರೀತಿಯಲ್ಲಿ ಉಪಚರಿಸಿ, ಸತ್ಕರಿಸಿದ ಬಳಿಕ ನಿವಾಸಕ್ಕೆ ಯೋಗ್ಯವಾದೊಂದು ಎಲೆಮನೆಯನ್ನು ತೋರಿಸಿಕೊಟ್ಟರು. ಆಗ ಸಾಯಂಕಾಲದ ಹೊತ್ತು. ಆ ಪರ್ಣಕುಟೀರದಲ್ಲಿ ಇಂಗುದೀತೈಲದಿಂದ ಉರಿಯುವ ದೀಪವೊಂದು ಉರಿಯುತ್ತಿತ್ತು. (ಬೈಗುವೊಳ್ತರ್ಚನೆಯ ಕೊನೆಯೊಳ್ ಅವರು ಅವನಿಜೆಯ ವಾಸಾರ್ಥಕೆ). ಶುದ್ಧವಾದ, ಶಯನಕ್ಕೆ ಯೋಗ್ಯವಾದ ಕೃಷ್ಣಾಜಿನದ ಹಾಸು ಸಿದ್ಧವಾಗಿತ್ತು. ಆ ಮುನಿಸತಿಯರು ಇವೆಲ್ಲವುಗಳನ್ನು ಗಮನಿಸಿ ಒದಗಿಸಿ ಕೊಟ್ಟರು ಆ ಮಹಾತಾಯಿಗೆ (ಮಾತಾಯಿ, ಪೂತಾತ್ಮೆಗೆ)

ಅನ್ವಯ :—ತಾಃ ತಸ್ಯೈ ಸಪರ್ಯಾನುಪದಂ ದಿನಾಂತೇ ನಿವಾಸಹೇತೋ ಇಂಗುದೀ ಸ್ನೇಹಪ್ರದೀಪ ಆಸ್ತೀರ್ಣಮೇಧ್ಯಾಜಿನತಲ್ಪಂ ಉಟಜಂ ವಿತೇರುಃ ॥

ಸಪರ್ಯಾನುಪದಂ = ಪೂಜಾನಂತರಂ—ದಿನಾಂತೇ = ಸಾಯಂಕಾಲೇ ನಿವಾಸ ಏವ ಹೇತುಸ್ತಸ್ಯ=ನಿವಾಸಹೇತೋಃ = ನಿವಾಸಾರ್ಥಮಿತ್ಯರ್ಥಃ—ಷಷ್ಠೀ ಹೇತುಪ್ರಯೋಗೇ (ಪಾಣಿನಿ) ಇತಿ ಷಷ್ಠೀ—"ಇಂಗುದೀ ತಾಪಸತರುಃ" ಇತ್ಯಮರಃ—ತಲ್ಪಂ = ಶಯ್ಯಾ—ಸಪರ್ಯಾನು ಪದಂ = ಅರ್ಚನೆಯ ಕೊನೆಯೊಳ್ = ಬೈಗುವೊಳ್ತು. ಸಪರ್ಯಾ=ಪೂಜೆ —ಅನುಪದಂ = ಅನಂತರಂ—ಆಸ್ತೀರ್ಣಮೇಧ್ಯಂ ಅಜಿನಂ ಏವ ತಲ್ಪಂ ಯಸ್ಮಿನ್ ತತ್ ಆಸ್ತೀರ್ಣಮೇಧ್ಯಾಜಿನತಲ್ಪಂ—ಇಂಗುದೀ = ಗಾರೆಗಿಡ.

**82. ತತ್ರಾಭಿಷೇಕಪ್ರಯತಾ ವಸಂತೀ ।**
**ಪ್ರಯುಕ್ತಪೂಜಾವಿಧಿನಾತಿಥಿಭ್ಯಃ ॥**

**ವನ್ಯೇನ ಸಾ ವಲ್ಕಲಿನೀ ಶರೀರಂ ।**
**ಪತ್ಯುಃ ಪ್ರಜಾಸಂತತಯೇ ಬಭಾರ ॥ ೮೨ ॥**

ಆ ವಸಂತಿಯು ಮಿಂದು ಮಡಿಯಾದಳು. ನಾರುಡೆಯನುಟ್ಟು (ನಾರುಡೆಯನ್ನಾಂತವಳು) ತಾಪಸಿಯಂತೆ ಎಸೆದಳು. ಅಲ್ಲಿ ನೆಲಸಿ ಅತಿಥಿಪೂಜೆಗೆಯ್ಯುತ್ತ (ಸಂದವಳು ಶಾಸ್ತ್ರದಂತೆ ಅತಿಥಿಪೂಜೆಯೊಳು) ಭಾನುಕುಲಸಂತತಿಯ ಕರುಳ ಕುಡಿಯನ್ನು ಬೆಳೆಸಲು ಕಾಡಿನಲ್ಲಿ ದೊರೆಯುವ ಸಾತ್ವಿಕ ಆಹಾರಗಳಾದ ಕಂದಮೂಲಾದಿಗಳನ್ನು (ಗೆಡ್ಡೆಗೆಣಸು) ಉಂಡು ತನ್ನ ಒಡಲನ್ನು ಪೊರೆಯುತ್ತಲಿದ್ದಳು. ಪ್ರಜಾಪಾಲನೆಗೆ ತನ್ನ ಭರ್ತೃವಿನ ಸಂತಾನಾಭಿವೃದ್ಧಿಗೆಂದು ತನ್ನ ಜೀವನವನ್ನೇ ಮುಡುಪಾಗಿಟ್ಟು ಕರ್ತವ್ಯಪಾಲನೆಯಲ್ಲಿ ದಿನಗಳನ್ನು ಕಳೆಯುತ್ತಿದ್ದಳು. ಆದರೆ ಬದುಕಬೇಕೆಂದಲ್ಲ. (ಭರ್ತೃವಿನ ಸಂತಾನದ ಅಭಿವೃದ್ಧಿಗೆಂದವಳು.)

ಅನ್ವಯ :—ತತ್ರ ಅಭಿಷೇಕಪ್ರಯತಾ ವಸಂತೀ ವಿಧಿನಾ ಅತಿಥಿಭ್ಯಃ ಪ್ರಯುಕ್ತಪೂಜಾವಲ್ಕಲಿನೀ ಸಾ ಪತ್ಯುಃ ಪ್ರಜಾಸಂತತಯೇ ವನ್ಯೇನ ಶರೀರಂ ಬಭಾರ ॥

ತತ್ರಾಶ್ರಮೇಽಭಿಷೇಕೇಣ = ಸ್ನಾನೇನ—ಪ್ರಯತಾ = ನಿಯತಾ—ವಸಂತೀ ವಿಧಿನಾ ಶಾಸ್ತ್ರೇಣಾತಿಥಿಭ್ಯಃ—ಪ್ರಯುಕ್ತಪೂಜಾ=ಕೃತಸತ್ಕಾರಾ–ವಲ್ಕಲಿನೀ ಸಾ ಸೀತಾ ಪತ್ಯುಃ । ಪ್ರಜಾಸಂತತಯೇ = ಸಂತಾನ + ಅವಿಚ್ಛೇದಾಯ ಹೇತೋಃ—ವನ್ಯೇನ ಕಂದಮೂಲಾದೀನಾ ಶರೀರಂ ಬಭಾರ = ಪುಪೋಷ ॥ ಶಾತಹೃದವತ್ = ಶಾತಹೃದಯಾಃ ಸಂಬಂಧಿ = ವಿದ್ಯುತ್ ಜ್ಯೋತಿಯಂತೆಸೆವ—ಪ್ರಜಾಯಾಃ ಸಂತತೇ ಅವಿಚ್ಛೇದಾಯ, ನ ತು ಜೀವಿತೇಚ್ಛಯಾ—ಅಭಿಷೇಕಪ್ರಯತಾ = ಮಿಂದು ಮಡಿಯಾದವಳು—ವನ್ಯೇನ = ಕಾಡಿನಲ್ಲಿ ದೊರೆಯುವ ಗೆಡ್ಡೆಗೆಣಸುಗಳಿಂದ

**83. ಅಪಿ ಪ್ರಭುಃ ಸಾನುಶಯೋಽಧುನಾ ಸ್ಯಾತ್ ।**
**ಕಿಮುತ್ಸುಕಃ ಶಕ್ರಜಿತೋಽಪಿ ಹಂತಾ ॥**
**ಶಶಂಸ ಸೀತಾ ಪರಿದೇವನಾಂತಂ ।**
**ಅನುಷ್ಠಿತಂ ಶಾಸನಮಗ್ರಜಾಯ ॥ ೮೩ ॥**

ಇಂದ್ರಜಿತುವಿನ ವಿಜೇತೃವಾದ ಲಕ್ಷ್ಮಣನು ತಾನು ಇದೀಗ ಅಣ್ಣನಾಜ್ಞೆಯನ್ನು ಸಾಂಗವಾಗಿ ನೆರವೇರಿಸಿದುದರಿಂದ ಅಣ್ಣದೇವನು ಸಾನುಶಯನಾದವನೋ, ತಾನೂ ಪರಿತಪಿಸುವನೋ ಇಲ್ಲವೋ. ಪ್ರತಿಕ್ರಿಯೆ ಏನೆಂದು ತಿಳಿಯಲು ಉತ್ಸುಕನಾಗಿದ್ದನು. ಅದಕ್ಕಾಗಿ ಶಕ್ರಾರಿಯು ಎಲ್ಲಾ ವಿವರಗಳನ್ನು ಬಣ್ಣಿಸಿ ಹೇಳಿದನು. ಸೀತೆಯ ವಿಲಾಪ, ಅಸಹಾಯಕಸ್ಥಿತಿ, ಅಗ್ರಜನ ಶಾಸನದಂತೆ ಸೀತೆಯನ್ನು ಅಸಹಾಯಕಸ್ಥಿತಿಯಲ್ಲಿ ಘೋರ ಅಡವಿಯಲ್ಲಿ ಒರ್ವಳನ್ನೇ ಬಿಟ್ಟುಬಂದುದನ್ನು ಕಣ್ಣಿಗೆಕಟ್ಟುವಂತೆ ಕೂಲಂಕಷವಾಗಿ ವಿವರಿಸಿ ತನ್ನ ಅಗ್ರಜನಿಗೆ (ಶ್ರೀರಾಮಚಂದ್ರನಿಗೆ) ಹೇಳಿದನು. (ಈಗಲಾದೊಡೆ ಅರಸು ಸಾನುಶಯನಾದವನೊ).

ಅನ್ವಯ :—ಪ್ರಭುಃ ಅಧುನಾ ಅಪಿ ಸಾನುಶಯಃ ಸ್ಯಾತ್ ಕಿಂ (ಇತಿ) ಉತ್ಸುಕಃ

ಶಕ್ರಜಿತಃ ಹಂತಾ ಅಪಿ ಸೀತಾ ಪರಿದೇವನಾನ್ತಮ್ ಅನುಷ್ಠಿತಶಾಸನಂ ಅಗ್ರಜಾಯ ಶಶಂಸ ॥

ಪ್ರಭೂ=ರಾಜಾ—ಅಧುನಾಽಪಿ ಸಾನುಶಯಃ=ಸಾನುತಾಪಃ—ಸ್ಯಾತ್ಕಿಮಿತ್ಯುತರ್ಕಃ—ಶಕ್ರಜಿತಃ=ಇಂದ್ರಜಿತೋ ಹನ್ತಾ, ಲಕ್ಷ್ಮಣೋಽಪಿ—ಸೀತಾಪರಿದೇವನಾನ್ತಂ=ಸೀತಾವಿಲಾಪಾನ್ತಮನುಷ್ಠಿತಂ ಶಾಸನಮಗ್ರಜಾಯ ಶಶಂಸ—ಶಕ್ರಜಿತಃ ಹಂತ=ಇಂದ್ರಜಿತುವನ್ನು ಹತಗೈದವ (ಲಕ್ಷ್ಮಣ)—ಅಧುನಾ ಅಪಿ ಸಾನುಶಯಃ ಸ್ಯಾತ್ = ಈಗಲಾದರೂ ಮರುಕ ತೋರುವನೋ ಇಲ್ಲವೋ ಸಂಶಯದಿಂದ—ಪರಿದೇವನಂ=ಗೋಳಾಟ.

**84.** **ಬಭೂವ ರಾಮಃ ಸಹಸಾ ಸಬಾಷ್ಪಃ ।**
**ತುಷಾರವರ್ಷೀವ ಸಹಸ್ಯಚಂದ್ರಃ ॥**
**ಕೌಲೀನಭೀತೇನ ಗೃಹಾನ್ನಿರಸ್ತಾ ।**
**ನ ತೇನ ವೈದೇಹಸುತಾ ಮನಸ್ತಃ** ॥ ೮೪ ॥

ಆ ಮಾತುಗಳನ್ನು ಕೇಳುತ್ತಿದ್ದಂತೆಯೇ ಶ್ರೀರಾಮಚಂದ್ರನು ಬಾಷ್ಪಲೋಚನನಾಗಿ, ಪೌಷಮಾಸದಲ್ಲಿ ಚಂದ್ರನು ಹಿಮದ ಮಳೆಯನ್ನು ಸುರಿಸುವಂತೆ ಸೀತೆಯನ್ನು ನೆನೆನೆನೆದು ಬಾರಿಬಾರಿಗೂ ಅತ್ತನು. (ತುಹಿನವೃಷ್ಟಿಯು ಕರೆವ ಪೌಷಶಶಿಯಂತೆ) ಜನನಿಂದೆಗೆ ಹೆದರಿ ತನ್ನ ಹೆಂಡತಿಯನ್ನು ಮನೆಯಿಂದ ಓಡಿಸಿದನಲ್ಲದೆ ತನ್ನ ಮನದಿಂದ ಅಲ್ಲವು. ಆ ಜಗದೀಶ್ವರನ ಹೃದಯಮಂದಿರದಲ್ಲಿ ಈಶ್ವರಿಯಾದ ಸೀತಾದೇವಿಯು ಸದಾ ಆರಾಧ್ಯ ದೈವವಾಗಿ, ಚಿರಸ್ಥಾಯಿಯಾಗಿ, ನೆಲೆಗೊಂಡಿದ್ದಳು (ರೂಪುಗೊಂಡಿದ್ದಳು) (ಮನೆಯಿಂದ ಅಟ್ಟಿದನು ಮನದಿಂದ ಅಲ್ಲ).

ಅನ್ವಯ :— ಸಹಸಾ ಸಬಾಷ್ಪಃ ರಾಮಃ ತುಷಾರವರ್ಷೀ ಸಹಸ್ಯಚಂದ್ರಃ ಇವ ಬಭೂವ । ಕೌಲೀನಭೀತೇನ ತೇನ ವೈದೇಹಸುತಾ ಗೃಹಾನ್ನಿರಸ್ತಾ, ನ ಮನಸ್ತಃ ॥

ಸಹಸಾ = ಸಪದಿ—ಸಬಾಷ್ಪೋ ರಾಮಃ—ತುಷಾರವರ್ಷೀ ಸಹಸ್ಯ ಚಂದ್ರ ಇವ ಬಭೂವ—ಅತ್ಯಶ್ರುತಯಾ ತುಷಾರವರ್ಷಿಣಾ ಪೌಷಚಂದ್ರೇಣ ತುಲ್ಯೋಽಭೂತ್—ಪೌಷೇತ್ಯೈಷ ಸಹಸ್ಯೌ ದ್ವೌ" ಇತ್ಯಮರಃ—ಕೌಲೀನ = ಲೋಕಾಪವಾದಭೀತೇನ ರಾಮೇಣ ವೈದೇಹಸುತಾ=ಸೀತಾ—ಗೃಹಾನ್ನಿರಸ್ತಾ—ನ ಮನಸ್ತೋ ಮನಸಾಶ್ಚಿತ್ತಾನ್ನ ನಿರಸ್ತಾ—ತುಷಾರವರ್ಷೀ ಸಹಸ್ಯ ಚಂದ್ರ ಇವ = ತುಹಿನ (ಮಂಜು, ಇಬ್ಬನಿ, ಹಿಮ) ವೃಷ್ಟಿಯ ಕರೆವ ಪೌಷಶಶಿಯಂತೆ (ಚಂದ್ರನಂತೆ). ತೈಷಃ ಸಹಸ್ಯಃ = ಪುಷ್ಯಮಾಸ—ಮನಸ್ತಃ ಈ ಪದದಲ್ಲಿ ಮನಃ ಪದದೊಡನೆ ತಸಿಲ್ ಪ್ರತ್ಯಯವು ಪಂಚಮ್ಯರ್ಥದಲ್ಲಿ ಪ್ರಯೋಗಿಸಲ್ಪಟ್ಟಿದೆ.

**85.** **ನಿಗೃಹ್ಯ ಶೋಕಂ ಸ್ವಯಮೇವ ಧೀಮಾನ್ ।**
**ವರ್ಣಾಶ್ರಮಾವೇಕ್ಷಣಜಾಗರೂಕಃ ॥**
**ಸ ಭ್ರಾತೃಸಾಧಾರಣಭೋಗಮೃದ್ಧಂ ।**
**ರಾಜ್ಯಂ ರಜೋರಿಕ್ತಮನಾಃ ಶಶಾಸ** ॥ ೮೫ ॥

ಪ್ರಭು ಶ್ರೀರಾಮಚಂದ್ರನು ತ್ರೇತಾಯುಗದಲ್ಲಿ ಅನುಸರಣೆಯಲ್ಲಿದ್ದ ಚಾತುರ್ವರ್ಣಾಶ್ರಮದ ನಿಯಮಾವಳಿಗಳನ್ನು ಜಾಗರೂಕತೆಯಿಂದ ಪಾಲಿಸುತ್ತ ತನ್ನ ಸಾಮ್ರಾಜ್ಯವನ್ನು ಜಾಗರೂಕತೆಯಿಂದ ಪಾಲಿಸುತ್ತ ತನ್ನ ಸಾಮ್ರಾಜ್ಯವನ್ನು ಸಮೃದ್ಧಿಯಿಂದ ಆಳತೊಡಗಿದನು. ತನ್ನ ದುಃಖವನ್ನು ತನ್ನಲ್ಲಿಯೇ ಇಂಗಿಸಿಕೊಂಡು (ತನ್ನಳಲ ತಾನೆ ಸಂತವಿಸಿಕೊಳುತಂದು) ಸ್ಥಿತಪ್ರಜ್ಞನಾಗಿ, ರಾಜಸಗುಣವರ್ಜಿತನಾಗಿ, (ರಜೋಗುಣ) ಸಾತ್ವಿಕಗುಣ (ಸತ್ವಗುಣ)ದ ಸಾಕಾರಮೂರ್ತಿಯಾಗಿ, ಅನುಜರನ್ನು ಪ್ರಜೆಗಳನ್ನು, ಭಾರತಸಾಮ್ರಾಜ್ಯವನ್ನು ಸಾನುರಾಗದಿಂದ ಧೀಮಂತರಾಜಕಾರಣಿಯಾಗಿ ಆಳುತ್ತಿದ್ದನು. ಅವನ ಕೀರ್ತಿ ಮುಗಿಲನ್ನು ಮುಟ್ಟಿತು. (ಭ್ರಾತೃಜನಸಾಮಾನ್ಯಭೋಗಸಾಮ್ರಾಜ್ಯವನು).

ಅನ್ವಯ :—ಧೀಮಾನ್ ವರ್ಣಾಶ್ರಮಾವೇಕ್ಷಣಜಾಗರೂಕಃ ರಜೋರಿಕ್ತಮನಾಃ ಸಃ ಸ್ವಯಂ ಏವ ಶೋಕಂ ನಿಗೃಹ್ಯ ಭ್ರಾತೃಸಾಧಾರಣಭೋಗಂ ಋದ್ಧಂ ರಾಜ್ಯಂ ಶಶಾಸ ॥

ಧೀಮಾನ್ ವರ್ಣಾನಾಮಾಶ್ರಮಾಣಾಂ ಚಾವೇಕ್ಷಣೇಽನುಸಂಧಾನೇ ಜಾಗರೂಕಃ = ಅಪ್ರಮತ್ತಃ—"ಜಾಗರೂಕಃ (ಪಾಣಿನಿ) ಇತ್ಯೂಕಪ್ರತ್ಯಯಃ—ರಜೋರಿಕ್ತಮನಾ = ರಜೋಗುಣಶೂನ್ಯಚೇತಾಃ ಸ ರಾಮಃ—ಸ್ವಯಮೇವ ಶೋಕಂ ನಿಗೃಹ್ಯ ನಿರೂಪ್ಯ ಭ್ರಾತೃಭಿಃ ಸಾಧಾರಣಭೋಗಮ್—ಋದ್ಧಂ ರಾಜ್ಯಂ ಶಶಾಸ ॥

**86\. ತಾಮೇಕಭಾರ್ಯಾಂ ಪರಿವಾದಭೀರೋಃ ।**
**ಸಾಧ್ವೀಮಪಿ ತ್ಯಕ್ತವತೋ ನೃಪಸ್ಯ ॥**
**ವಕ್ಷಸ್ಯ ಸಂಘಟ್ಟಸುಖಂ ವಸಂತೀ ।**
**ರೇಜೇ ಸಪತ್ನೀರಹಿತೇವ ಲಕ್ಷ್ಮೀಃ ॥ ೮೬ ॥**

ಆ ನೃಪವರನು ಲೋಕಾಪವಾದದ ಭೀತಿಯಿಂದ ಪತಿವ್ರತೆಯಾದ ತನ್ನ ಏಕಮಾತ್ರಪತ್ನಿಯನ್ನು ತೊರೆದು ಕಾಡಿಗೆ ಅಟ್ಟಿ ಪತ್ನಿಪರಿತ್ಯಾಗದ (ಪತ್ನೀವಿಚ್ಛೇದನದ) ಮಹಾನ್ ದುಃಖವನ್ನು ಅನುಭವಿಸುತ್ತಿದ್ದನು. ಇದರಿಂದ ಆ ಸಾಮ್ರಾಟನ ಹೃದಯೇಶ್ವರಿಯಾಗಿ ರಾಜ್ಯಲಕ್ಷ್ಮಿಯು ಏಕಭಾರ್ಯೆಯಾಗಿ ಮೆರೆಯುತ್ತಿದ್ದಳು. ಅವಳಿಗೆ ಯಾವ ಸವತಿಯರ ಕಾಟವೂ ಇರಲಿಲ್ಲ, ಯಾವ ತೊಂಡುತೊಳಸೂ ಇರಲಿಲ್ಲ. ಇದರಿಂದ ರಾಜ್ಯಲಕ್ಷ್ಮಿಯು ನಿಶ್ಚಿಂತೆಯಿಂದ, ಸೊಗದಿಂದ, ನವೋಲ್ಲಾಸದಿಂದ, ವಿರಾಜಮಾನಳಾಗಿ ಬೆಳಗುತ್ತಿದ್ದಳು (ಸೊಗದೆ ಲಕ್ಷ್ಮಿ ತಾಂ ನೆಲಸಿರಂತೆ).

ಅನ್ವಯ :—ಪರಿವಾದಭೀರೋಃ ಏಕಭಾರ್ಯಾಂ ಅಪಿ ತಾಂ ತ್ಯಕ್ತವತಃ ನೃಪಸ್ಯ ವಕ್ಷಸಿ ಅಸಂಘಟ್ಟಸುಖಂ ವಸಂತೀಂ ಲಕ್ಷ್ಮೀಃ ಸಪತ್ನೀ ರಹಿತಾ ಇವ ರೇಜೇ ॥

ದಶಮುಖರಿಪುಃ = ಶ್ರೀರಾಮಃ—ಉಪಾದ್ಯಮಃ ಸ್ವಕರಣೇ (ಪಾಣಿನಿ) ಇತ್ಯಾತ್ಮನೇಪದಮ್—ಶ್ರವಣವಿಷಯಪ್ರಾಪಿಣಾ = ಶ್ರೋತ್ರದೇಶಗ್ರಾಹಿಣಾ—ಭರ್ತುರ್ವೃತ್ತಾನ್ತೇನ = ವಾರ್ತಯಾ ಹೇತುನಾ—ದುರ್ವಾರಂ = ದುರ್ನಿರೋಧಮ್—ಪರಿತ್ಯಾಗೇನಯದುಃಖಂ—ಧೀಮಾನ್ = ಜಾಗರೂಕಃ—ಪರಿವಾದಭೀರೋಃ = ಪರಿವಾದಾತ್ ಭೀರುಃ ಪರಿವಾದಭೀರುಃ ತಸ್ಯ—ಲೋಕಾಪವಾದದ ಭೀತಿಯಿಂದ. ಅಸಂಘಟ್ಟಸುಖಂ=

ಆಸು ಘಟ್ಟನೇನ ಸುಖಂ ಯಥಾ ತಥಾ ವಸಂತೀ = ತಿಕ್ಕಾಟವಿಲ್ಲದೆ ದೊರೆಯುವಸುಖ ದಿಂದ ಜೀವಿಸುತ್ತಾ, ಪರಿವಾದ=ನಿಂದೆ, ರೇಜೇ="ರಾಜ್ ಧಾತು, ಲಿಟ್ ಭೂತಕಾಲದಲ್ಲಿ ರೇಜೇ ಎಂದಾಗುತ್ತದೆ."

**87. ಸೀತಾಂ ಹಿತ್ವಾ ದಶಮುಖರಿಪುರ್ನೋಪಯೇಮೇ ಯದನ್ಯಾಂ।**
**ತಸ್ಯಾ ಏವ ಪ್ರತಿಕೃತಿಸಖೋ ಯತ್ಕ್ರತೂನಾಜಹಾರ॥**
**ವೃತ್ತಾಂತೇನ ಶ್ರವಣವಿಷಯ ಪ್ರಾಪಿಣಾ ತೇನ ಭರ್ತುಃ।**
**ಸಾ ದುರ್ವಾರಂ ಕಥಮಪಿ ಪರಿತ್ಯಾಗದುಃಖಂ ವಿಷೇಹೇ ॥ ೮೭ ॥**

ದಶಮುಖನ ವೈರಿಯಾದ ಕೋದಂಡರಾಮನು ಲೋಕಾಪವಾದಕ್ಕೆ ಹೆದರಿ ಸೀತೆಯನ್ನು ಪರಿತ್ಯಾಗಮಾಡಿ ಬೇರೊಬ್ಬಳನ್ನು ಲಗ್ನವಾಗದೆ, ತನ್ನ ಮೂರ್ತಿಯನ್ನು ಚಿನ್ನದಿಂದ ಮಾಡಿಸಿ, ಕನಕಪ್ರತಿಮೆಯನ್ನು ಇರಿಸಿಕೊಂಡು (ತನ್ನ ಪ್ರತಿಕೃತಿಯು ಕನಕಪ್ರತಿಮೆಯನ್ನಿರಿಸಿ) ಅಶ್ವಮೇಧಯಾಗವನ್ನು ಕೈಕೊಂಡಿರುವುದನ್ನು ತಿಳಿದು ಆ ಸಾಧ್ವಿಯು ಹರ್ಷವನು ತಾಳಿದಳು. ಆ ವಾರ್ತೆಯು ಕಿವಿಗೆ ಬಿದ್ದೊಡನೆ (ಪತಿವಿರಹದ) ತನ್ನ ದುಃಖದಲ್ಲಿಯೂ ಜನಕರಾಜನ ಸುತೆಯು ಸಂತಸವನ್ನು ತಾಳ್ದಳು. ತನ್ನ ಪತಿಯನ್ನು ಬಿಟ್ಟಿರಲಾರದೆ ಪರಿತ್ಯಾಗದುಃಖವು ದಹಿಸುತ್ತಲಿದ್ದರೂ ಹೇಗೋ ಕಷ್ಟವನ್ನು ಸಹಿಸುತ್ತ, ಮೂಕಶೋಕವನ್ನು ಅನುಭವಿಸುತ್ತ ತನ್ನ ಮಕ್ಕಳಿಗಾಗಿ ಜೀವವನ್ನು ಹಿಡಿದಿಟ್ಟು ಕೊಂಡು (ಮುಡುಪಾಗಿಟ್ಟು) ಆ ಆದರ್ಶಸತಿಯು ವಾಲ್ಮೀಕಿ ಆಶ್ರಮದಲ್ಲಿ ಪುತ್ರಜನನದ ಶುಭಘಳಿಗೆಯನ್ನು ನಿರೀಕ್ಷಿಸುತ್ತಾ ದಿನಕಳೆಯುತ್ತಲಿದ್ದಳು.

ಅನ್ವಯಃ :—ದಶಮುಖರಿಪುಃ ಸೀತಾಂ ಹಿತ್ವಾ ಅನ್ಯಾಂ ನ ಉಪಯೇಮೇ ತಸ್ಯಾಃ ಏವ ಪ್ರತಿಕೃತಿಸಖಃ (ಸನ್) ಕ್ರತೂನ್ ಆಜಹಾರ, ಯತ್ ತೇನ ಶ್ರವಣವಿಷಯಂ ಪ್ರಾಪಿಣಾ ಭರ್ತುಃ ವೃತ್ತಾಂತೇನ ಸಾದುರ್ವಾರಕ ಪರಿತ್ಯಾಗದುಃಖಂ ಕಥಮಪಿ ವಿಷೇಹೇ ॥

ಮಂದಾಕ್ರಾನ್ತಾವೃತ್ತ ॥ ವಿಷೇಹೇ = ವಿ+ಸಹ್ ಧಾತು ಲಿಟ್ (ಭೂತಕಾಲ) ॥

# ಪಂಚದಶಃ ಸರ್ಗಃ

# ಹದಿನೈದನೆಯ ಸರ್ಗ

## ಶ್ರೀರಾಮ ವೈಕುಂಠ ಆರೋಹಣ

**1. ಕೃತಸೀತಾಪರಿತ್ಯಾಗಃ ಸ ರತ್ನಾಕರಮೇಖಲಾಮ್ ।**
**ಬುಭುಜೇ ಪೃಥಿವೀಪಾಲಃ ಪೃಥಿವೀಮೇವ ಕೇವಲಾಮ್ ॥ ೧ ॥**

ಭೂಮಾತೆಯು (ಭರತಮಾತೆಯು, ಕ್ಷಿತಿ, ಪೃಥಿವಿ, ಭೂದೇವಿ) ಮಗಳಾದ ಸೀತಾದೇವಿಯನ್ನು ಪರಿತ್ಯಾಗಮಾಡಿ ಪೃಥ್ವೀಪತಿಯಾದ ಶ್ರೀರಾಮಚಂದ್ರನು ನಾಲ್ಕುಸಾಗರಗಳಿಂದ (ರತ್ನಾಕರನಿಂದ) ಸೊಂಟದ ಒಡ್ಯಾಣದಂತೆ ಆವರಿಸಲ್ಪಟ್ಟ ಮೇದಿನಿಯನ್ನು, ಓರ್ವಳನ್ನೇ ಭೋಗಿಸಿದನು. ರಾಜ್ಯಲಕ್ಷ್ಮಿ(ರಾಜ್ಯಶ್ರೀ)ಯೋರ್ವಳನ್ನು ಮಾತ್ರ ಒಲಿದು ಅನುಭವಿಸಿದನು. ತನ್ನ ಸ್ವಭುಜಸಾಮರ್ಥ್ಯದಿಂದ ಸಹಜವಾಗಿ ಆ ರತ್ನಖಚಿತಮೇಖಲೆ ಧರಿಸಿದ ಮೇದಿನಿಯು ರಾಜ್ಯವಾಳ್ದನು.

ರತ್ನಾಕರ ಏವ ಮೇಖಲಾ ಯಸ್ಯಾಸ್ತಾಮ್—ಕೇವಲಾಮ್—ಏಕಾಮಿತ್ಯರ್ಥಃ— ಬುಭುಜೇ = ಭುಕ್ತವಾನ್ ॥

**2. ಲವಣೇನ ವಿಲುಪ್ತೇಜ್ಯಾಸ್ತಾಮಿಸ್ರೇಣ ತಮಭ್ಯಯುಃ ।**
**ಮುನಯೋ ಯಮುನಾಭಾಜಃ ಶರಣ್ಯಂ ಶರಣಾರ್ಥಿನಃ ॥ ೨ ॥**

ಲವಣಾಸುರನೆಂಬ ರಾತ್ರಿಂಚರನ ಬಾಳಿಗೆ ತುತ್ತಾಗಿ ಯಜ್ಞಯಾಗಾದಿವೇದಕರ್ಮಗಳನ್ನು ನಡೆಸಲು ಅಸಮರ್ಥರಾದ ಮುನಿಜನರು ವಿಶ್ವಶರಣ್ಯನಾದ, ಆಪದ್ಬಾಂಧವನಾದ, ವಿಶ್ವರಕ್ಷಕನಾದ (ಧರ್ಮರಕ್ಷಕನಾದ) ಶ್ರೀರಾಮಚಂದ್ರನ ಬಳಿಗೆ ಶರಣಾರ್ಥಿಗಳಾಗಿ ಬಂದರು. ಅವರು [illegible]. ಯಮುನಾ ನದೀತೀರದಲ್ಲಿ ವಾಸಿಸುವ ಪರಮಮುನಿಗಳು. ವಾನಪ್ರಸ್ಥಾಶ್ರಮಿಗಳು. ಸಂಕಷ್ಟಕ್ಕೆ ಒಳಗಾಗಿ ಶರಣಾರ್ಥಿಗಳು ಶರಣ್ಯನ ಬಳಿಗೆ ಬಂದು ಮೊರೆಯಿಟ್ಟರು. ಆ ನಿಶಾಚರನಾದ ಲವಣಾಸುರನು ಯಜ್ಞಕ್ರಿಯೆಯನ್ನು ಅಳಿಸಿ ತನ್ನ ರಾಕ್ಷಸಸ್ವಭಾವವನ್ನು (ತಾಮಸಗುಣವನ್ನು) ಮೆರೆಯುತ್ತಿದ್ದನು.

ಲವಣಾಖ್ಯೇನ = ಲವಣೇನ—ತಾಮಿಸ್ರೇಣ=ತಮಿಸ್ರಚಾರಿಣಾ (ರಕ್ಷಸೇತ್ಯರ್ಥಃ)— ವಿಲುಪ್ತೇಜ್ಯಾ = ಲುಪ್ತಯಾಗಕ್ರಿಯಾ ವಿಲುಪ್ತಾ ಇಜ್ಯಾ ಯೇಷಾಮ್ (ಬ.ವ್ರೀ)— ಶರಣ್ಯಂ = ಶರಣಾರ್ಹಂ ರಕ್ಷಣಸಮರ್ಥಂ—ಅಭ್ಯಯುಃ = ಪ್ರಾಪ್ತಾಃ ॥

**3. ಅವೇಕ್ಷ್ಯ ರಾಮಂ ತೇ ತಸ್ಮಿನ್ನ ಪ್ರಜಹ್ರುಃ ಸ್ವತೇಜಸಾ ।**
**ತ್ರಾಣಾಭಾವೇ ಹಿ ಶಾಪಾಸ್ತ್ರಾಃ ಕುರ್ವಂತಿ ತಪಸೋವ್ಯಯಮ್ ॥ ೩ ॥**

ಆ ತಮೋಗುಣಕೇತುವಾದ ರಾಕ್ಷಸೇಶ್ವರನನ್ನು ತಾಪಸಿಗಳು ತಮ್ಮ ತಪೋಬಲದಿಂದ (ಸ್ವತೇಜಸಾ) ಶಪಿಸಿ ನಾಶಮಾಡಬಹುದಾದರೂ ಮಾಡುವಂತಿಲ್ಲ. ಅವರು

ಶಾಪಾಸ್ತ್ರಧರರೂ, ಸಾಧುಸಂತರೂ, ಸಂನ್ಯಾಸಿಗಳು, ಅವಧೂತರೂ ಶಾಪವೆಂಬ ಶರದಿಂದ ತಮ್ಮನ್ನು ತಾವು ರಕ್ಷಿಸಿಕೊಳ್ಳಲು ಸಮರ್ಥರು. ಆದರೆ ಹಾಗೆ ಮಾಡಿದರೆ ಅವರ ತೇಜಸ್ಸು, ತಪಶ್ಶಕ್ತಿ, ಯೋಗಶಕ್ತಿಯು ಕ್ಷಯವಾಗುವುದು. ಆದ್ದರಿಂದಲೇ ಅವರು ದುಷ್ಟನಾಶಕ್ಕೆ ರಾಜರನ್ನು ಕೇಳಿಕೊಳ್ಳುವರು. ಇದರಿಂದಲೇ ಕ್ಷತ್ರಿಯರು ಮತ್ತು ಬ್ರಾಹ್ಮಣರು ಒಬ್ಬರಿಗೊಬ್ಬರು (ಪರಸ್ಪರ) ಪೂರಕರು. ಸಹಾಯಕರು. ಹಿತಚಿಂತಕರು. ಬ್ರಾಹ್ಮಣತ್ವದ (ಬ್ರಾಹ್ಮಣಿಕೆಯ) ರಕ್ಷಕರು ಕ್ಷತ್ರಿಯರು. ಅವರಿಂದಲೂ ಸಾಧ್ಯವಾಗ ದಾಗ ಋಷಿಮುನಿಗಳು ಪರಮಾತ್ಮನಿಂದಲೇ ಮಾರ್ಗದರ್ಶನ ಪಡೆಯುವರು. ಆ ರೀತಿಯ ಸಾಮಾಜಿಕ ವ್ಯವಸ್ಥೆ ಪೂರ್ವದಲ್ಲಿ ಕಂಡುಬಂದಿದೆ.

ತಸ್ಮಿನ್ಲವಣೇ ಸ್ವತೇಜಸಾ = ಶಾಪರೂಪೇಣನಪ್ರಜಹ್ರುಃ—ತ್ರಾಯತ ಇತಿ ತ್ರಾಣಂ ರಕ್ಷಕಮ್—ತದ್ ಭಾವೇ ಶಾಪ ಏವಾಸ್ತ್ರಂ ಯೇಷಾಂ ತೇ ಶಾಪಾಸ್ತ್ರಾಃ ಸನ್ನಸ್ತ್ರಪಸೋ ವ್ಯರ್ಥಂ ಕುರ್ವಂತಿ—ಶಾಪಾದಾನಾತ್ತಪಸೋ ವ್ಯಯಂ ಇತಿ ಪ್ರಸಿದ್ಧೇಃ ॥

4. ಪ್ರತಿಶುಶ್ರಾವ ಕಾಕುತ್ಸ್ಥಸ್ತೇಭ್ಯೋ ವಿಘ್ನಪ್ರತಿಕ್ರಿಯಾಮ್ ।
ಧರ್ಮಸಂರಕ್ಷಣಾರ್ಥೈವ ಪ್ರವೃತ್ತಿರ್ಭುವಿ ಶಾರ್ಙ್ಗಿಣಃ ॥ ೪ ॥

ಆ ಮುನಿಗಳ ಮಾತುಗಳಿಗೆ ಶ್ರೀರಾಮನು ತಾನು ವಿಘ್ನವನ್ನು ತೊಡೆದುಹಾಕುವೆ ನೆಂದು ಪ್ರತಿವಚನವನಿತ್ತನು. ಏಕೆಂದರೆ ಮಹಾವಿಷ್ಣು ಶ್ರೀರಾಮರೂಪವನ್ನು ಧರಿಸಿ ಜಗದಲ್ಲಿ ಅವತರಿಸಿಬಂದುದು. ಶಾರ್ಙ್ಗಿಯು ಭೂಮಿಯಲ್ಲಿ ಅವತಾರ ತಾಳಿದುದು ಧರ್ಮರಕ್ಷಣಾರ್ಥವಾಗಿ. ಧರ್ಮರಕ್ಷಣೆ ಎಂದರೆ ಧರ್ಮಾತ್ಮರ ರಕ್ಷಣೆ, ನ್ಯಾಯದ ರಕ್ಷಣೆ, ಸತ್ಯದ ರಕ್ಷಣೆ, ಸಾಧುಸಂತರ, ಸತ್ಯವಂತರ, ಅಬಲೆಯರ, ಅನಾಥರ, ಗತಿವಿಹೀನರ, ದೀನ ದಲಿತರ ಶೋಷಣೆಗೆ ಒಳಗಾದವರ, ಸಜ್ಜನರ, ಸಾತ್ವಿಕರ ರಕ್ಷಣೆಗಾಗಿ (ರಕ್ಷಣಾರ್ಥ).

ವಿಘ್ನಪ್ರತಿಕ್ರಿಯಾಂ = ಲವಣವಧರೂಪಾಂ ಪ್ರತಿಶುಶ್ರಾವ ಪ್ರತಿಜಜ್ಞೇ— ಶಾರ್ಙ್ಗಿಣೋ = ವಿಷ್ಣೋಃ—ಪ್ರವೃತ್ತಿರಾಮರೂಪೇಣಾವತರಣಂ ಧರ್ಮಸಂರಕ್ಷಣ ಮೇವಾರ್ಥಃ=ಪ್ರಯೋಜನಂ ಯಸ್ಯಾಃ ಸಾ ತಥೈವ.

5. ತೇ ರಾಮಾಯ ವಧೋಪಾಯಂ ಆಚಖ್ಯುರ್ವಿಬುಧದ್ವಿಷಃ ।
ದುರ್ಜಯೋ ಲವಣಃ ಶೂಲೀ ವಿಶೂಲಃ ಪ್ರಾರ್ಥ್ಯತಾಮಿತಿ ॥ ೫ ॥

ಶೂಲಿಯು, ರುಂಡಮಾಲನಾದ ಪರಶಿವನು ನೀಡಿದ ತ್ರಿಶೂಲವನ್ನು ಧರಿಸಿರುವ ಆ ರಾಕ್ಷಸನು, ದುರ್ಜಯನಾಗಿರುವನು. ಅವನು ಅಜೇಯನು. ಅವನನ್ನು ಗೆಲ್ಲಲಾಗದು. ಆದುದರಿಂದ ಯಾವ ಘಳಿಗೆಯಲ್ಲಿ ಅವನ ಕೈಯಲ್ಲಿ ತ್ರಿಶೂಲವಿಲ್ಲದಿದ್ದಾಗ, ಶತ್ರು ಮರ್ದನ(ಶತ್ರುಹನನ)ಕಾರ್ಯವನ್ನು ನಡೆಸುವುದೆಂದು ಮಹರ್ಷಿಗಳು ರಕ್ಕಸನ ಕೊಲೆಯ ತಂತ್ರವನ್ನು ವಿಶದವಾಗಿ ಅರುಹಿದರು (ನಿರೂಪಿಸಿದರು). ಈ ತೆರನಾಗಿ ವಿಬುಧಜನರು ಶ್ರೀರಾಮಚಂದ್ರನಿಗೆ ಲವಣಾಸುರನ ವಧೆಯ ಮಾರ್ಗೋಪಾಯವನ್ನು ಒರೆದರು.

ವಿಬುಧದ್ವಿಷಃ ಸುರಾರೇರ್ಲವಣಸ್ಯ—ಲುನಾತೀತಿ ಲವಣಃ—ಲವಣಃ ಶೂಲೀ =

ಶೂಲವಾನ್—ದುರ್ಜಯಃ=ಅಜೇಯಃ—ವಿಶೂಲಃ = ಶೂಲರಹಿತಃ—ಪ್ರಾರ್ಥಿತಾಂ = ಅಭಿಗಮ್ಯತಾಮ್—"ಯಾಂ ಚ ಯಾಚಾಭಿಮಾನೇ ಚ ಪ್ರಾರ್ಥನಾ ಕಥ್ಯತೇ ಬುಧೈಃ" ಇತಿ ಕೇಶವಃ ॥

**6. ಆದಿದೇಶಾಥ ಶತ್ರುಘ್ನಂ ತೇಷಾಂ ಕ್ಷೇಮಾಯ ರಾಘವಃ ।**
**ಕರಿಷ್ಯನ್ನಿವ ನಾಮಾಸ್ಯ ಯಥಾರ್ಥಮರಿ ನಿಗ್ರಹಾತ್ ॥ ೬ ॥**

ರಘುಕುಲನಾಯಕನು ಶತ್ರುಘ್ನನಿಗೆ ಶತ್ರುನಿಗ್ರಹವನ್ನು ಕೈಗೊಳ್ಳುವಂತೆ ಆದೇಶವನ್ನು ನೀಡಿದನು. ವೈಷ್ಣವತೇಜದಿಂದ ಹುಟ್ಟಿರುವ ಶತ್ರುಘ್ನನು ಬ್ರಹ್ಮಘಾತಕರ ನಿಗ್ರಹಕ್ಕಾಗಿಯೇ ಜನಿಸಿದ್ದನು. ಶತ್ರುನಿಗ್ರಹದಿಂದ ಶತ್ರುಘ್ನನೆಂಬ ಅನ್ವರ್ಥನಾಮವು ಸಾರ್ಥಕವಾಗುವುದು. ಅವನ ನಾಮಧೇಯದ ಯಥಾರ್ಥ ಅರ್ಥವು ಶತ್ರುನಿಗ್ರಹದಿಂದ ಸಾಬೀತಾಗುವಂತೆ ಮುನಿಹಿತವನ್ನು ಮಾಡೆಂದು ರಘುಪುಂಗವನು ಶತ್ರುಘ್ನನನ್ನು ಅಟ್ಟಿದನು (ಆ ಕಾರ್ಯಕ್ಕೆ ನಿಯೋಜಿಸಿದನು).

ಕ್ಷೇಮಾಯ = ಕ್ಷೇಮಕರಣಾಯ—ಅಸ್ಯ ಶತ್ರುಘ್ನಸ್ಯ ನಾಮ ಅರಿನಿಗ್ರಹಾಚ್ಛತ್ರು (ಶತ್ರು) ಹನನಾದ್ಧೇತೋಃ—ಶತ್ರೂನ್ ಹಂತೀತಿ ಶತ್ರುಘ್ನಃ. ಶತ್ರು + ಹನ್ + ಟಕ್ ಅಥವಾ ಕ ॥

**7. ಯಃ ಕಶ್ಚನ ರಘೂಣಾಂ ಹಿ ಪರಮೇಕಃ ಪರಂತಪಃ ।**
**ಅಪವಾದ ಇವೋತ್ಸರ್ಗಂ ವ್ಯಾವರ್ತಯಿತುಮೀಶ್ವರಃ ॥ ೭ ॥**

ರಘುಕುಲಜರು ಸಮರ್ಥರು, ವಂದನಾರ್ಹರು, ಆದರಣೀಯರು. ರಘುವಂಶದಲ್ಲಿ ಜನಿಸಿದವನು ಯಾರಾದರೇನು—ಅವನು ಪರಂತಪನೇ. ಮಹಾಶತ್ರುವಿನ ನಾಶಕಾರ್ಯದಲ್ಲಿ ಆತನು ದಕ್ಷನೇ (ಅರಿಹನನದಕ್ಷ). ಲವಣಾಸುರನು ಸಾಮಾನ್ಯನೇನಲ್ಲ. ಅಂಥವನ ಹನನಕ್ಕೆ ಶತ್ರುಘ್ನನು ಸಮರ್ಥನು. ಸಾಮಾನ್ಯ ಶಾಸ್ತ್ರದ ವ್ಯಾಪ್ತಿ ಅಲ್ಪವಾಗಿದ್ದರೆ ವಿಶೇಷ ಶಾಸ್ತ್ರಗಳ ಅರ್ಥವ್ಯಾಪ್ತಿ ಮಹತ್ತಾಗಿರುವುದು, ಪ್ರಬಲನಾದ ಶತ್ರುವನ್ನು ಉದಾ:—ರಾವಣನ ನಾಶಕ್ಕೆ ಪರಮಾತ್ಮನೇ ಬರಬೇಕಾಯಿತು. ಶ್ರೀರಾಮನು ಲವಣಾಸುರನನ್ನು ತಡೆಯಲು ಉಚ್ಚಾಟಿಸಲು ಯೋಗ್ಯನಾದ ಶತ್ರುಘ್ನನನ್ನೇ ಆರಿಸಿ ಆದೇಶವನ್ನಿತ್ತನು.

ಪರಾಚ್ಛತ್ರೂಸ್ತಾಪಯತೀತಿ = ಪರಂತಪಃ—"ದ್ವಿಷತ್ಪರಯೋಸ್ತಾಪೇ" ಇತಿ ಖಚ್ ಪ್ರತ್ಯಯಃ—ಖಚಿ ಹ್ರಸ್ವ ಹ ಇತಿ ಹ್ರಸ್ವಃ—ಪರಂ ಶತ್ರುಂ ವ್ಯಾವರ್ತಯಿತುಂ=ಬಾಧಿತುಂ ಈಶ್ವರಃ ಸಮರ್ಥಃ ॥

**8. ಅಗ್ರಜೇನ ಪ್ರಯುಕ್ತಾಶೀಃ ದಾಶರಥೀ ರಥೀ ।**
**ಯಯೌ ವನಸ್ಥಲೀಃ ಪಶ್ಯನ್ ಪುಷ್ಪಿತಾಃ ಸುರಭೀರಭೀಃ ॥ ೮ ॥**

ಅಗ್ರಜನ ಆಶೀರ್ವಾದವೆಂಬ ರಥವನ್ನು ಏರಿ ಅನುಜನಾದ ಶತ್ರುಘ್ನನು ಹೊರಟನು. ಅಗ್ರಜನ ಅನುಗ್ರಹಾಶೀರ್ವಾದಗಳೇ ಅವನಿಗೆ ವಜ್ರಕವಚವಾಗಿದ್ದಿತು. ತನ್ನ ಸೇನೆಯೊಂದಿಗೆ ರಥಾರೂಢನಾಗಿ ಕಾನನಾನ್ವಿತ ಭೂಮಿಯಲ್ಲಿ ಸಾಗಿದನು ಸುತ್ತಲೂ ಬೆಳೆದು

ನಿಂತಿರುವ ವೃಕ್ಷಗಳ ರಾಶಿ, ಪುಷ್ಪಿತವನರಾಜಿ, ಹೂಬಿಟ್ಟಿರುವ ಮರಗಳು, ಲತಾಕುಂಜಗಳು. ಅವುಗಳ ಮಧ್ಯೆ ಬೀಸುವ ಸುಗಂಧಯುತ ಮಾರುತ—ಅವನ ಮನಸಿಗೆ ಹಿತಕರವೆನಿಸಿತು. ಆ ಶೂರನು ಅವುಗಳನ್ನೆಲ್ಲಾ ನೋಡುತ್ತ ನೋಡುತ್ತ ಸಾಗಿದನು.

ಪ್ರಯುಕ್ತಾಶೀಃ = ಕೃತಾಶೀರ್ವಾದೋ—ಪುಷ್ಪಾಣಿ ಸಂಜಾತಾನಿ ಯಾಸಾಂ ತಾಃ = ಪುಷ್ಪಿತಾಃ ಸುರಭೀ—ಅಮೋದಮಾನಾವನಸ್ಥಲೀಃ ಪಶ್ಯನ್ ಯಯೌ—ಅಭೀಃ = ಅವಿದ್ಯಮಾನಾಭೀಃ ಯಸ್ಯ (ಬಹುವಚನ) ॥

**9. ರಾಮಾದೇಶಾನುಗಾ ಸೇನಾ ಶತ್ರುಘ್ನಾರ್ಥಸಿದ್ಧಯೇ ।**
**ಪಶ್ಚಾದಧ್ಯಯನಾರ್ಥಸ್ಯ ಧಾತೋರಧಿರಿವಾಭವತ್ ॥ ೯ ॥**

ಶ್ರೀರಾಮನ ಆದೇಶದಿಂದ ಆಗಮಿಸಿದ ಸೇನೆ ಶತ್ರುಘ್ನನೊಂದಿಗೆ ನಡೆಯಿತು. ಧಾತುವಿನೊಂದಿಗೆ ಉಪಸರ್ಗವು ಸೇರಿ ಅಧ್ಯಯನದಲ್ಲಿ ಪೂರ್ಣ ಅರ್ಥಸಿದ್ಧಿಯನ್ನು ಪಡೆಯುವಂತೆ ಆ ಸೇನೆಯು ಶತ್ರುಘ್ನನಿಗೆ ಸಹಕಾರಿಯಾಗಿತ್ತು. ಆದರೆ ಶತ್ರುಘ್ನನು ಧಾತು "ಇ"ಯಂತೆ ಸ್ವಯಂಶಕ್ತನು. ಅವನಿಗೆ ಸೇನೆಯ ("ಅಧಿ"ಯೆಂಬ ಉಪಸರ್ಗದ) ಅವಶ್ಯಕತೆಯಿರಲಿಲ್ಲ. "ಇಙ್ಧ್ಯಯನೇ" ಇತ್ಯಸ್ಯ ಧಾತೋಃ ಪಶ್ಚಾದಧಿರಧ್ಯುಪಸರ್ಗ ಇವ" ಉಪಸರ್ಗವು ಸೇರಿದರೆ ಅರ್ಥವು ಸ್ಪಷ್ಟವಾಗುವುದು. ಇದು ಅಧ್ಯಯನದ ದೃಷ್ಟಿಯಿಂದ ಮಾತ್ರ ಪ್ರಯೋಜನಕಾರಿಯೆನಿಸುವುದು.

ಧಾತೋಃ "ಇಙ್ಧ್ಯಯನೆ" ಇತ್ಯಸ್ಯ ಧಾತೋಃ ಪಶ್ಚಾದಧಿರಧ್ಯುಪಸರ್ಗ ಇವ—ಅರ್ಥಸಿದ್ಧಯೇ ಪ್ರಯೋಜನ ಸಾಧನಯೇತ್ಯೇಕತ್ರ—ಅನ್ಯತ್ರ ಅಭಿಧೇಯಸಾಧನಾಯ—ಅಭವತ್—"ಅಥೋಽಭಿಧೇಯ ಶೈವಸ್ತು ಪ್ರಯೋಜನನಿವೃತ್ತಿಷು" ಇತ್ಯಮರಃ

**10. ಆದಿಷ್ಟವರ್ತ್ಮಾ ಮುನಿಭಿಃ ಸ ಗಚ್ಛಂಸ್ತಪತಾಂ ವರಃ ।**
**ವಿರರಾಜ ರಥಪ್ರಷ್ಠೈರ್ವಾಲಖಿಲ್ಯೈರಿವಾಂಶುಮಾನ್ ॥ ೧೦ ॥**

ಮಹಾತೇಜಶ್ಶಾಲಿಯಾದ (ಘನತೇಜ) ಶತ್ರುಘ್ನನು ದೇದೀಪ್ಯಮಾನವಾದ ದಿವ್ಯ ರಥದಲ್ಲಿ ಕುಳಿತು ಮುನ್ನಡೆದನು. ಅವನ ಸೇನಾವಾಹಿನಿಯು ಹಿಂದಿನಿಂದ ಅನುಸರಿಸುತ್ತಾ ಬರುತ್ತಲಿತ್ತು. ಮುನಿಪುಂಗವರು ಶತ್ರುಘ್ನನ ರಥದ ಮುಂಭಾಗದಲ್ಲಿದ್ದು ದಾರಿದೀಪದಂತೆ ದಾರಿತೋರಿಸುತ್ತಾ ಮುಂದುವರಿದರು. ದೇವಾಂಶ ಸಂಭೂತರಾದ ವಾಲಖಿಲ್ಯರು ಅಂಶುಮಾನನಾದ ಸೂರ್ಯದೇವನ ರಥದ ಮುಂಭಾಗದಲ್ಲಿ ನಡೆದು ಹೋಗುವಂತೆ ಆ ಘನತೇಜರಾದ ಋಷಿಪುಂಗವರು ಶತ್ರುಘ್ನನ ರಥದ ಮುಂಭಾಗದಲ್ಲಿದ್ದು ದಾರಿತೋರುತ್ತ ಆ ವನಭೂಮಿಯಲ್ಲಿ (ಅರಣ್ಯಪ್ರದೇಶದಲ್ಲಿ) ಮುಂದೆ ಮುಂದೆ ಸಾಗುತ್ತಿದ್ದರು. ಆ ಪೂಜ್ಯರಾದ ಮುನಿಪುಂಗವರು ಸೂರ್ಯರಥದ ಮುಂದೆ ನಡೆವ ವಾಲಖಿಲ್ಯರ ಸಮೂಹದಂತೆ ಕಂಗೊಳಿಸಿದರು.

ರಥಪ್ರಷ್ಠೈಃ=ರಥಾಗ್ರಗಾಮಿಭಿಃ "ಪ್ರಷ್ಠೋಽಗ್ರಗಾಮಿನಿ" ಇತಿ ನಿಪಾತಃ—ವರಃ=ಶ್ರೇಷ್ಠಃ—ವಾಲಖಿಲ್ಯೈರ್ಮುನಿಭಿರಂಶುಮಾನ್=ಸೂರ್ಯ ಇವ ॥

**11. ತಸ್ಯ ಮಾರ್ಗವಶಾದೇಕಾ ಬಭೂವ ವಸತಿರ್ಯತಃ ।**
**ರಥಸ್ಥನೋತ್ಕಂಠಮೃಗೇ ವಾಲ್ಮೀಕೀಯೇ ತಪೋವನೇ ॥ ೧೧ ॥**

ಶತ್ರುಘ್ನನು ಚತುರ್ಬಲಸಮೇತ ವಾಲ್ಮೀಕಿಮಹರ್ಷಿಯ ದಿವ್ಯತಪೋವನವಿರುವ ಮಾರ್ಗವಾಗಿ ಬರುತ್ತಿದ್ದನು. ಆಗ ಅವನ ರಥಚಕ್ರದದನಿಗೆ ತಳ್ಳಂಕಗೊಂಡ (ಹೆದರಿದ) ಎರಳೆಗಳು (ಜಿಂಕೆಗಳು) ತಮ್ಮ ತಲೆಯನ್ನೆತ್ತಿ ಭಯದಿಂದ ನೋಡುತ್ತಿರುವ ದಿವ್ಯತಪೋವನದ ದಾರಿಯಾಗಿ ಬಂದು ಮುನಿಯ ಅತಿಥಿಯಾಗಿ ಒಂದು ಇರುಳನ್ನು ಆಶ್ರಮದ ಎಲೆಮನೆಯಲ್ಲಿ ಕಳೆದನು.

"ವೃದ್ಧಾಚ್ಛ" ಇತಥ ಪ್ರತ್ಯಯಃ (ಪಾಣಿನಿ) ತತ್ರೈಕಾಂ ರಾತ್ರಿಮುಷಿತ ಇತ್ಯರ್ಥಃ —"ವಸತೀ ರಾತ್ರಿ ವೇಶ್ಮನೋಃ" ಇತ್ಯಮರಃ ॥ ವಾಲ್ಮೀಕೀಯೋ = ವಾಲ್ಮೀಕಿ + ಛ = ಈಯ ॥

**12. ತಮೃಷಿಃ ಪೂಜಯಾಮಾಸ ಕುಮಾರಂ ಕ್ಲಾಂತವಾಹನಮ್ ।**
**ತಪಃಪ್ರಭಾವಸಿದ್ಧಾಭಿಃ ವಿಶೇಷಪ್ರತಿಪತ್ತಿಭಿಃ ॥ ೧೨ ॥**

ವಾಲ್ಮೀಕಿಮುನಿಯು ಶತ್ರುಘ್ನನನ್ನು ಆದರದಿಂದ ಬರಮಾಡಿ ಆತಿಥ್ಯನ್ನು ನೀಡಿದನು. ವಾಲ್ಮೀಕಿ ತನ್ನ ನಿಜ ತಪೋಬಲದಿಂದ, ಆರ್ಜಿಸಿದ ದಿವ್ಯಶಕ್ತಿಗಳಿಂದ ವಸ್ತುಚಯಗಳನ್ನು ಸೃಷ್ಟಿಮಾಡಿ ರಾಜೋಚಿತವಾದ ಸತ್ಕಾರವನ್ನು ಮಾಡಿದನು. ಆ ರಾಜಪುತ್ರನನ್ನು, ಅವನ ಬಳಲಿದ ಅಶ್ವ, ಪದಾತಿ, ಗಜಸೇನೆಯಿರುವ ಚತುರಂಗಬಲವನ್ನು ಅತಿಥಿಸತ್ಕಾರದಿಂದ ಪೂಜಿಸಿ ತಣಿಸಿದನು.

ಕ್ಲಾಂತವಾಹನಂ = ಶ್ರಾಂತಯುಗ್ಯಂ — ಪ್ರಭಾವಸಿದ್ಧಾಭಿರ್ವಿಶೇಷಪ್ರತಿಪತ್ತಿಭಿರುತ್ಕೃಷ್ಟಸಂಭಾವನಾಭಿಃ ॥

**13. ತಸ್ಯಾಮೇವಾಸ್ಯ ಯಾಮಿನ್ಯಾಂ ಅಂತರ್ವತ್ನೀ ಪ್ರಜಾವತೀ ।**
**ಸುತಾ ವಸೂತಸಂಪನ್ನೌ ಕೋಶದಂಡಾ ವಿವಕ್ಷಿತಿಃ ॥ ೧೩ ॥**

ಶತ್ರುಘ್ನನು ಉಳಿದುಕೊಂಡ ಅಂದಿನ ರಾತ್ರಿ ತುಂಬುಗರ್ಭಿಣಿ ಸೀತಾದೇವಿಯು ಅವಳಿಮಕ್ಕಳಿಗೆ ಜನ್ಮವಿತ್ತಳು. ಜಾನಕಿದೇವಿಯು ರತ್ನಗರ್ಭಳಾದ, ಸಂಪದ್ಭರಿತಳಾದ ಭೂದೇವಿಯು (ವಸುಂಧರೆಯು) ಕ್ಷಿತಿಯು) ಸಮಗ್ರವಾದ, ಕೋಶ (ಖಜಾನೆ) ಮತ್ತು ಸಂಪೂರ್ಣವಾದ (ಎಲ್ಲಾ ವಿಧದ) ಚತುರಂಗಸೇನೆಯನ್ನು ಒದಗಿಸುವಂತೆ, ಚರಿತ್ರಾರ್ಹರಾದ ಪುತ್ರದ್ವಯರನ್ನು ಪೆತ್ತಳು.

ಅಂತರಸ್ಯಾ ಅಸ್ತೀತ್ಯಂತರ್ವತ್ನೀ ಗರ್ಭಿಣೀ "ಅಂತರ್ವತ್ನೀ ಚ ಗರ್ಭಿಣೀ" ಇತ್ಯಮರಃ —ಅಂತರ್ವತ್ ಪತಿವತೋರ್ನುಕ್ ಇತಿ ಙೀಪ್, ನುಗಾಗಮಶ್ಚ —ಪ್ರಜಾವತೀ ಭ್ರಾತೃಜಾಯಾ ಸೀತಾ ॥

**14. ಸಂತಾನಶ್ರವಣಾತ್ ಭ್ರಾತುಃಸೌಮಿತ್ರಿಃ ಸೌಮನಸ್ಯವಾನ್ ।**
**ಪ್ರಾಂಜಲಿರ್ಮುನಿಮಾಮಂತ್ರ್ಯ ಪ್ರಾತರ್ಯುಕ್ತರಥೋ ಯಯೌ ॥ ೧೪ ॥**

• ಆ ಸುಮಿತ್ರಾಸೂನು (ಶತ್ರುಘ್ನನು) ಉಷಾಕಾಲದೊಳೆದ್ದು (ಪೊಳ್ತಿರೆಯೊಳು ಎದ್ದನು) ತನ್ನ ನಿತ್ಯಾಹ್ನಿಕಗಳನ್ನು ತಮಸಾನದಿಯಲ್ಲಿ ತೀರಿಸಿ, ವಾಲ್ಮೀಕಿಯ ಪದಕಮಲಗಳಿಗೆರಗಿ ಹೊರಡಲುದ್ಯುಕ್ತನಾದನು. ಅವನು ತನ್ನ ಭ್ರಾತೃವಿಗಾದ ಪುತ್ರಜನನ ವರ್ತಮಾನ

ವನ್ನು ಕೇಳಿ ಆನಂದಸಾಗರದಲ್ಲಿ ತೇಲಾಡಿದನು. ಶ್ರವಣಸುಖದ ಸವಿಯನ್ನು ಸವಿಯುತ್ತ ಇರುಳನ್ನು ಕಳೆದನು. ವಾಲ್ಮೀಕಿಮಹರ್ಷಿಯ ಅನುಮತಿಪಡೆದು ಅಣಿಗೊಳಿಸಿದ ತೇರನ್ನೇರಿ ವೈರಿವಧೆನಿಮಿತ್ತ, ತಳುವದೆ, ಕ್ಷಿಪ್ರಗತಿಯಲ್ಲಿ ವಿನತಾಪುತ್ರನಾದ ಗರುಡನಂತೆ ಮುಂದುವರಿದನು.

ಭ್ರಾತೃ=ಜ್ಯೇಷ್ಠಸ್ಯ—ಸೌಮನಸ್ಯವಾನ್=ಪ್ರೀತಿಮಾನ್—ಶತ್ರುಘ್ನಃ ಪ್ರಾತರ್ಯುಕ್ತರಥಃ—ಪ್ರಾಂಜಲಿಃ = ಕೃತಾಂಜಲಿಃ ॥

**15. ಸ ಚ ಪ್ರಾಪ ಮಧೂಪಘ್ನಂ ಕುಂಭೀನಸ್ಯಾಶ್ಚ ಕುಕ್ಷಿಜಃ ।**
**ವನಾತ್ಕರಮಿವಾದಾಯ ಸತ್ತ್ವರಾಶಿಮುಪಸ್ಥಿತಃ ॥ ೧೫ ॥**

ಶತ್ರುಧ್ವಂಸಕನಾದ ಮಹಾವೀರ ಶತ್ರುಘ್ನನು ತನ್ನ ಸತ್ತ್ವಾಳಿಯ (ಸತ್ತ್ವಾತಿಶಯದ) ಪ್ರತೀಕವಾದ ಚತುರಂಗಸೇನೆಸಹಿತ ಮಧುಪಘ್ನ ನಗರದ ಬಳಿಗೆ ಬಂದನು. ಮಧುವೆಂಬ ರಾಕ್ಷಸನು ಲವಣಾಸುರನ ಅಪ್ಪ (ತಂದೆ). ಅವನಿಂದ ಆವನ ರಾಜಧಾನಿಗೆ ಮಧೂಪಘ್ನ ನಗರವೆಂದು ಹೆಸರು, ಅದುವೇ ಈಗಿನ ಮಥುರಾನಗರ. ಅವನು ಬಂದ ವೇಳೆಗೆ ಸರಿಯಾಗಿ ಕಾಡಿಗೆ ಬೇಟೆಗೆಂದು ಹೋದ ಲವಣಾಸುರನು ಲೆಕ್ಕವಿಲ್ಲದಷ್ಟು ಪ್ರಾಣಿಗಳನ್ನು ಬೇಟೆಯಾಡಿ ಕಾಡಿನಿಂದ ಸತ್ತ ಮೃಗಗಳ ದೇಹವನ್ನು ಆಹಾರಾರ್ಥವಾಗಿ ಸಾಗಿಸುತ್ತಿದ್ದನು. ಅರಸನಾದ ಆತನಿಗೆ ಅವನ ಭೂಮಿಯು ಕಾಣಿಕೆ ಸಲ್ಲಿಸುವಂತೆ ಪ್ರಾಣಿಗಳನ್ನು ಒದಗಿಸಿತು ಎಂಬಂತೆ ತೋರುತ್ತಿತ್ತು. ಆ ದಡಿಗನು (ಲವಣಾಸುರನು) ರಾವಣನ ಸೋಸೆಯಾದ ಕುಂಭೀನಸಿ ಎಂಬ ರಕ್ಕಸಿಯ ಉದರದಲ್ಲಿ ಜನಿಸಿದನು. ಕಾನನದಿಂದ ಹಿಂದಿರುಗಿ ಬರುವಾಗ ಬಲಿಯನ್ನು ತರುವಂತೆ ಸಹಸ್ರಾರು ಪ್ರಾಣಿಗಳ ಕಳೇಬರವನ್ನು (ಪ್ರಾಣಿಬಲಿ) ಆಳುಕಾಳುಗಳಿಂದ ಹೊರಿಸಿ ತರುತ್ತಿದ್ದನು.

ಮಧೂಪಘ್ನಂ=ನಾಮ ಲವಣಪುರಂ—ಕುಂಭೀನಸೀ=ನಾಮ ರಾವಣಸ್ವಸಾ—ಕುಕ್ಷಿಜಃ = ಪುತ್ರೋ ಲವಣಾಖ್ಯ—ಸತ್ತ್ವಾನಾಂ = ಪ್ರಾಣಿನಾಂ ॥

**16. ಧೂಮಧೂಮ್ರೋವಸಾಗಂಧೀ ಜ್ವಾಲಾಬಭ್ರುಶಿರೋರುಹಃ ।**
**ಕ್ರವ್ಯಾದ್ಗಣಪರೀವಾರಶ್ಚಿತಾಗ್ನಿರಿವ ಜಂಗಮಃ ॥ ೧೬ ॥**

ಆ ರಕ್ಕಸರಾಜನು ಸುತ್ತಲೂ ಪ್ರಾಣಿಗಳ ಕಳೇಬರದಿಂದ ಆವರಿಸಿ ನಡೆದುಬರುವ ಚಿತೆಯಂತೆ ಕಾಣುತ್ತಿದ್ದನು. ಅವನ ಕೆಂಬಣ್ಣದ ದೇಹ ಸ್ವಲ್ಪ ಹೊಗೆ ಆವರಿಸಿದಂತೆ (ಕೆಂಪು ಮತ್ತು ಕಪ್ಪುಬಣ್ಣಮಿಶ್ರಿತ ದೇಹ. ಧೂಮ್ರವರ್ಣ (ಹೊಗೆಯ ಬಣ್ಣ) ಮತ್ತು ಕೆಂಬಣ್ಣಮಿಶ್ರಿತ ದೇಹದವ) ಅವನ ಸುತ್ತಲೂ ಹಸಿ ಮಾಂಸಾಹಾರಿಗಳಾದ ಸಹಸ್ರಾರು ದಡಿಗ ರಕ್ಕಸರು. ಅವರೆಲ್ಲರೂ ತಮ್ಮ ತಲೆಯ ಮೇಲೆ ಕಾಡ್ಕೋಣ, ಕಾಡಹಂದಿ ಮೊದಲಾದ ಪ್ರಾಣಿಗಳ ಹೊರೆಯನ್ನು ಆಹಾರಕ್ಕಾಗಿ ಹೊತ್ತುತರುತ್ತಿದ್ದರು. ಕೊಂದ ಪ್ರಾಣಿಗಳ ರಕ್ತದ ವಾಸನೆ, ಅವುಗಳ ಮಾಂಸದ, ಚರ್ಬಿಯ (ಕೊಬ್ಬಿನ) ಅಸಹ್ಯವಾಸನೆ ಮೂಗಿಗೆ ಬಡಿಯುತ್ತಿತ್ತು. ಆ ದುರ್ವಾಸನೆಯು ಆ ಧಾಂಡಿಗ ರಕ್ಕಸನಿಗೆ ಕೊಟ್ಟ ಕಾಣಿಕೆಯೋ ಎಂಬಂತಿತ್ತು.

ಅವುಗಳನ್ನೆಲ್ಲಾ ಸಾಗಿಸುತ್ತ, ಆ ಕರ್ಬುರನು ನಡೆದುಬರುವ ಜಂಗಮಚಿತೆಯಂತೆ ಕಾಣಿಸುತ್ತಿದ್ದನು. ಆ ರಕ್ಕಸರ ತಲೆಯ ಮೇಲೆ ಕಾಣುವ ಪ್ರಾಣಿಗಳ ದೇಹ, ಅವುಗಳ ರೋಮಕೂಪಗಳು, ರೋಮರಾಜಿ, ರಕ್ತದಿಂದ ತೊಯ್ದು, ತೊಟ್ಟಿಕ್ಕುತ್ತ, ರಕ್ತದ ಕುಂಡಿ ನಾಲಗೆಯಂತೆ ರಂಜಿಸುತ್ತಿದ್ದುವು. ಬೇಯಿಸದ ಹಸಿ, ಹಸನಾದ ಮಾಂಸಭಕ್ಷಕರಾದ ರಾಕ್ಷಸರು, ರಕ್ಕಸಗಣಗಳಿಂದ, ಒಡಗೂಡಿದ ಅವನೊಬ್ಬ ಬೃಹದಾಕಾರದ ರಾಕ್ಷಸ ಪೆಡಂಭೂತದಂತೆ, ಪೆರ್ಬಂಡೆಯಂತೆ ವಿಜೃಂಭಿಸುತ್ತಿದ್ದ, ಜಂಗಮಚಿತಾಗ್ನಿಯಂತೆ, ನಡೆದುಬರುವ ಸ್ಮಶಾನದ ಬೆಂಕಿಯಂತೆ ಕಾಣಿಸುತ್ತ ಅತ್ಯಂತ ಭಯಂಕರನಾಗಿ, ಬೀಭತ್ಸನಾಗಿ ಎಸೆದಿದ್ದನು.

ಧೂಮ ಇವ = ಧೂಮ್ರಃ = ಕೃಷ್ಣಲೋಹಿತವರ್ಣಃ—''ಧೂಮ್ರಧೂಮಲೌ ಕೃಷ್ಣಲೋಹಿತೇ'' ಇತ್ಯಮರಃ—ವಸಾಗಂಧೋಹ್ಯನ್ ಮೇದೋ ಗಂಧಃ—''ಹನ್ಮೇದಸ್ತು ವಪಾವಸಾ'' ಇತ್ಯಮರಃ—ಜ್ವಾಲಾ ಇವ ಬಭ್ರವಃ ಪಿಂಗಾಃ ಶಿರೋರುಹಾಃ ಕೇಶಾ ಯಸ್ಯ ಸ ತಥೋಕ್ತಃ—''ವಿಪುಲೇನ ಕುಲೇ ವಿಷ್ಣೌ ಬಭ್ರುಃ ಸ್ಯಾತ್ ಪಿಂಗಲೇ ತ್ರಿಷು'' ಇತ್ಯಮರಃ ॥

**17. ಅಪಶೂಲಂ ತಮಾಸಾದ್ಯ ಲವಣಂ ಲಕ್ಷ್ಮಣಾನುಜಃ ।**
**ರುರೋಧ ಸಂಮುಖೀನೋ ಹಿ ಜಯೋ ರಂಧ್ರಪ್ರಹಾರಿಣಾಮ್**
**॥ ೧೭ ॥**

ಶೂಲರಹಿತನಾದ ಆ ಘೋರರಾಕ್ಷಸನಾದ ಲವಣಾಸುರನನ್ನು ಲಕ್ಷ್ಮಣನ ತಮ್ಮನಾದ ಶತ್ರುಘ್ನನು ಕಂಡು ಕೂಡಲೇ ಅವನನ್ನು ಮುಖಾಮುಖಿಯಾಗಿ ಸಂಧಿಸಿದನು. ಯಾರು ಹಗೆಗಳ ಮರ್ಮವರಿತು, ಕಾಲವರಿತು ಕಾದುವರೋ, ವೈರಿಗಳನ್ನು ಆ ಕ್ಷಣವೇ ಹೊಡೆಯುವರೋ ಅವರಿಗೆ ಜಯವು ನಿಶ್ಚಯವು (ಶತಸ್ಸಿದ್ಧ). ಅವರನ್ನು ಜಯಲಕ್ಷ್ಮಿಯು ವರಿಸುವಳು. ಅವರಿಗೆ ಜಯವಲ್ಲದೆ ಸೋಲೆಂಬುದಿಲ್ಲ. ಅವನಿಗೀಗ ಲವಣಾಸುರನನ್ನು ವಧಿಸುವ ಮಾರ್ಗೋಪಾಯವು ಕಾಣಿಸಿತು. ಛಿದ್ರವು ಅಥವಾ ರಂಧ್ರವು ಲವಣನ ಮರಣದ ಮುಖದರ್ಶನವಾದಂತೆ ಶತ್ರುಘ್ನನ ಮನಸ್‌ಚಕ್ಷುವಿಗೆ (ಮನಸ್ಸಿನ ಕಣ್ಣಿಗೆ) ಗೋಚರಿಸಿತು. ಆಗ ಅಸಾಧ್ಯವು ಸಾಧ್ಯವಾಗುವುದು. ಇದರಲ್ಲಿ ಸಂಶಯವಿಲ್ಲ.

ಅಪಶೂಲಮಿತಿ—ಶತ್ರುಘ್ನೋಽಪಶೂಲಂ = ಶೂಲರಹಿತ—ರಂಧ್ರಪ್ರಹಾರಿಣಾಂ =ರಂಧ್ರಪ್ರಹಾರ ಶೀಲಾನಾಮ್—ಜಯಃ ಸಮ್ಮುಖೀನೋ ಹಿ ಸಮ್ಮುಖಸ್ಯ ದರ್ಶನೋ ಹಿ—''ಯಥಾ ಮುಖಸಮ್ಮುಖಸ್ಯ ದರ್ಶನಃ ಸಃ'' ಇತಿ ಖ ಪ್ರತ್ಯಯಃ—ಸಮ್ಮುಖೀನಃ= ಸಮ್ಮುಖ + ಖ = ಈನ—ಜಯೋ ರಂಧ್ರಪ್ರಹಾರಿಣಾಮ್ = ಹಗೆಯ ಮರ್ಮವರಿತು ಕಾದುವವರಿಗೆ ಜಯವು ನಿಶ್ಚಯವು.

**18. ನಾತಿಪರ್ಯಾಪ್ತಮಾಲಕ್ಷ್ಯ ಮತ್ಕುಕ್ಷೇರದ್ಯ ಭೋಜನಮ್ ।**
**ದಿಷ್ಟ್ಯಾ ತ್ವಮಸಿ ಮೇ ಧಾತ್ರಾ ಭೀತೇನೇವೋಪಪಾದಿತಃ ॥ ೧೮ ॥**

ಲವಣನು ಶತ್ರುಘ್ನನನ್ನು ಮೂದಲಿಸಿ ನುಡಿದನು : ''ಹೇ ಕ್ಷತ್ರಿಯರಾಜಕುಮಾರ

ನಾನು ಯಾರು ಎಂಬುದನ್ನು ನೀನು ಅರಿಯೆಯಾ. ಸೃಷ್ಟಿಯ ದಾತಾರನಾದ ಬ್ರಹ್ಮ ದೇವನು ಈ ದಿನ ನನ್ನ ಹೊಟ್ಟೆಗೆ ಆಹಾರವು ಸ್ವಲ್ಪ ಕೊರೆಯಿದೆ ಎಂಬುದನ್ನು ತಾನಾಗಿ ಗ್ರಹಿಸಿ ನನ್ನ ಭಯದಿಂದ ನಿನ್ನನ್ನು ಆಹಾರವಾಗಿ ಕಳುಹಿಸಿರುವನು. ಮಾನವನಾದ ನೀನು ಭಾಗ್ಯವಶದಿಂದ ನಿನ್ನ ಯಮನಾದ ನನ್ನ ಬಳಿಗೆ ತಾನಾಗಿ ಹುಡುಕಿಕೊಂಡು ನನ್ನ ಬಳಿಗೆ ಬಂದಿರುವಿ. ಇನ್ನು ನೀನು ನನ್ನ ಹಿಡಿತದಿಂದ ತಪ್ಪಿಸಲಾರೆ" ಎಂದು ನುಡಿಯುತ್ತಾ ಹಿರಿಹಿರಿಹಿಗ್ಗಿ ಅಟ್ಟಹಾಸದಿಂದ ಭೂತಬೇತಾಳನಂತೆ ನಕ್ಕನು. ಆ ನಗು ಸಿಡಿಲಿನ ಘರ್ಜನೆ ಯಂತೆ ಭೂಮಿ-ಅಂಬರಗಳಲ್ಲಿ ಮೊಳಗಿತು.

ಭುಂಜ್ಯತ ಇತಿ ಭೋಜನಮ್—ನಾತಿಪರ್ಯಾಪ್ತಮನತಿಸಮಗ್ರಮಾಲಾಕ್ಷ್ಯದೃಷ್ಟ್ಯಾ—ದಿಷ್ಟ್ಯಾ = ಭಾಗ್ಯೇನ ॥

19. ಇತಿ ಸಂತರ್ಜ್ಯ ಶತ್ರುಘ್ನಂ ರಾಕ್ಷಸಸ್ತಜ್ಜಿಘಾಂಸಯಾ ।
ಪ್ರಾಂಶುಮುತ್ಪಾಟಯಾಮಾಸ ಮುಸ್ತಾಸ್ತಂಭಮಿವ ದ್ರುಮಮ್ ॥ ೧೯ ॥

ಕೂಡಲೆ ಆ ದಡಿಗರಕ್ಕಸನಿಗೆ ಸಿಟ್ಟಿನ ಪಿತ್ತ ನಡುನೆತ್ತಿಗೇರಿತು. ಅವನು ಸುಮಿತ್ರೆಯ ಪುತ್ರನಾದ ಶತ್ರುಘ್ನನನ್ನು ಹೊಡೆದು ಉರುಳಿಸಲು ದೊಡ್ಡದೊಂದು ಬೃಹದಾಕಾರ ವಾದ ಕಾಡುಮರವನ್ನು ಮುಸ್ತೆಹುಲಿನ ಕಂತೆಯನ್ನು ಅಥವಾ ಮುಲ್ಲಂಗಿಯ ಕಂತೆ ಯನ್ನು ಕೀಳುವಂತೆ ತನ್ನ ತೋಳ್ಬಲದಿಂದ ಕಿತ್ತು ಹೊಡೆಯಲುದ್ಯುಕ್ತನಾದನು. ಅದನ್ನು ಕಿತ್ತು ಶತ್ರುಘ್ನನಿಗೆ ಗುರಿಯಿಟ್ಟು ಬಲವಾಗಿ ಎಸೆದನು. ಆ ಮರವು ವಾಯುವೇಗದಿಂದ ಶತ್ರುಘ್ನನ ಸಮ್ಮುಖಕ್ಕೆ ಬರುತ್ತಿತ್ತು.

ಜಿಘಾಂಸಯಾ = ಹಂತುಮಿಚ್ಛಯಾ—ಮುಸ್ತಾಸ್ತಂಭಮಿವ=ಅಕ್ಲೇಶೇನೋತ್ಪಾಟಯಾಮಾಸ ॥

20. ಸೌಮಿತ್ರೇರ್ನಿಶಿತರ್ಬಾಣೈಃ ಅಂತರಾ ಶಕಲೀಕೃತಃ ।
ಗಾತ್ರಂ ಪುಷ್ಪರಜಃ ಪ್ರಾಪ ನ ಶಾಖೀ ನೈರ್ಋತೇರಿತಃ ॥ ೨೦ ॥

ಆ ರಾಕ್ಷಸನು ಎಸೆದ ಮರವನ್ನು ಸ್ವಲ್ಪ ಅಂತರದಲ್ಲಿ ಶತ್ರುಘ್ನನು ನಿಶಿತಬಾಣಗಳನ್ನೆಸೆದು ಮರಳಿನ ಕಣದಂತೆ ಚೂರುಚೂರಾಗಿ ಲೀಲಾಜಾಲವಾಗಿ ಕತ್ತರಿಸಿ ಬಿಸುಟನು. ಅದರ ಕಾಂಡವಾಗಲಿ, ಗೆಲ್ಲು, ರೆಂಬೆಗಳು, ಶಾಖೋಪಶಾಖೆಗಳು ಲಕ್ಷ್ಮಣಾನುಜನ ದೇಹ ವನ್ನು ಸ್ಪರ್ಶಿಸಲೇ ಇಲ್ಲ. ಆದರೆ ವಾಯುವಿನ ಸಹಾಯದಿಂದ ಪುಷ್ಪರಜಗಳು, ಪುಷ್ಪ ಧೂಳಿ, ಪರಾಗರೇಣು (ಸುಮಧೂಳಿ ಸೋಂಕಿದುದು ಭರದೆ) ಅವನ ದೇಹವನ್ನು ಭರ ದಿಂದ ಸೋಂಕಿದುದು.

ನೈಋತೇರಿತೋ = ರಕ್ಷಃ ಪ್ರೇರಿತ — ಶಾಖ್ಯಂತರಾ = ಮಧ್ಯೇ — ಶತ್ರುಘ್ನಸ್ಯ = ಗಾತ್ರಂ ನ ಪ್ರಾಪ—ಕಿಂತು ಪುಷ್ಪರಜಃ ಪ್ರಾಪ ॥

21. ವಿನಾಶಾತ್ತಸ್ಯ ವೃಕ್ಷಸ್ಯ ರಕ್ಷಸ್ತಸ್ಮೈ ಮಹೋಪಲಮ್ ।
ಪ್ರಜಿಘಾಯ ಕೃತಾಂತಸ್ಯ ಮುಷ್ಟಿಂ ಪೃಥಗಿವ ಸ್ಥಿತಮ್ ॥ ೨೧ ॥

ತಾನು ಎಸೆದ ಮಹಾವೃಕ್ಷವು ನಾಶವಾದುದನ್ನು ನೋಡಿ ಖತಿಗೊಂಡು ಲವಣಾಸುರನು ಶತ್ರುವಿನ ನಾಶಕ್ಕಾಗಿ ಪೆರ್ಬಂಡೆಯೊಂದನ್ನು ಕಿತ್ತನು. ಆ ಬಂಡೆಕಲ್ಲನ್ನು ಎಸೆಯಲು ಅದು ಕೃತಾಂತನ (ಯಮನ) ಭದ್ರಮುಷ್ಟಿಯಂತೆ, ಅಂತಕನ ಕೈಯಿಂದ ಕಳಚಿಬಂದ ವಜ್ರಮುಷ್ಟಿಯಂತೆ ಪ್ರಚಂಡವೇಗದಿಂದ ಸಾಗುತ್ತ ಸೌಮಿತ್ರಿಯ ಅನುಜನ ಕಡೆಗೆ ಎರಗಿ ಅವನನ್ನು ಪುಡಿಗಟ್ಟಲು ಬರುತ್ತಲಿತ್ತು.

ಮಹೋಪಲಂ = ಮಹಾನ್ತಂ ಪಾಷಾಣಮ್—ಕೃತಾಂತಸ್ಯ=ಯಮಸ್ಯ—"ಮುಷ್ಟಿ" ಶಬ್ದೋ ದ್ವಿಲಿಂಗಃ—ಪ್ರಜಿಘಾಯ = ಪ್ರಹಿತವಾನ್—

22. ಐಂದ್ರಮಸ್ತ್ರಮುಪಾದಾಯ ಶತ್ರುಘ್ನೇನ ಸ ತಾಡಿತಃ ।
ಸಿಕತಾತ್ವಾದಪಿ ಪರಾಂ ಪ್ರಪೇದೇ ಪರಮಾಣುತಾಮ್ ॥ ೨೨ ॥

ಮರುಕ್ಷಣವೇ ಶತ್ರುಘ್ನನು ಐಂದ್ರಾಸ್ತ್ರವನ್ನು ತೊಟ್ಟು ಗುರಿಯಿಟ್ಟು ಎಸೆಯಲು ಆ ಬಂಡೆಕಲ್ಲು ಮರಳುಕಣಕ್ಕಿಂತ ಸಣ್ಣದಾದ ಕಣಕಣವಾಗಿ (ಅಣುಅಣುವಾಗಿ), ಚೂರು ಚೂರಾಗಿ, ಧೂಳಿಧೂಳಾಗಿ, ಚೂರ್ಣವಾಗಿ ಧರೆಯ ಮೇಲೆ ಹರಡಿಕೊಂಡಿತು.

ಶತ್ರುಘ್ನೇನೈಂದ್ರಮಿಂದ್ರದೇವತಾಕಮಸ್ತ್ರಮುಪಾದಾಯ—ತಾಡಿತೋ = ಅಭಿಹತಃ ಸನ್—ಸಿಕತಾತ್ವಾತ್ಸಿಕತಾಭಾವಾದಪಿ—ಪರಮಾಣುತಾಂ ಪ್ರಪೇದೇ ॥

23. ತಾಮುಪಾದ್ರವದುದ್ಯಮ್ಯ ದಕ್ಷಿಣಂ ದೋರ್ನಿಶಾಚರಃ ।
ಏಕತಾಲ ಇವೋತ್ಪಾತ ಪವನಪ್ರೇರಿತೋ ಗಿರಿಃ ॥ ೨೩ ॥

ಕೂಡಲೇ ರಕ್ಕಸನು ಪೆಡಂಭೂತದಂತೆ ತನ್ನ ಬಲಗೈಯನ್ನು ಮೇಲೆತ್ತಿ ಶತ್ರುಘ್ನನ ಮೇರೆದೆಯನ್ನು ತಿವಿಯಲು ಬಿರುಗಾಳಿಯಂತೆ ಓಡಿಬಂದನು. ಚಂಡಮಾರುತಕ್ಕೆ ಸಿಲುಕಿರುವ, ಒಂದೇ ಒಂದು ತಾಳೆಮರವನ್ನು ಆಂತಿರುವ ಪರ್ವತವು ರಭಸದಿಂದ ಬರುವಂತೆ ಕಂಡನು. ಬಲತೋಳನ್ನು ಮೇಲೆತ್ತಿ ಧಾವಿಸಿಬರುತ್ತಿರುವ ದೈತ್ಯನು ಏಕತಾಲದ್ರುಮದಿಂದ ವಿರಾಜಿತವಾದ (ಒಂದೇ ಒಂದು ತಾಳೆಮರವನ್ನು ನೆತ್ತಿಯಲ್ಲಿ ಹೊತ್ತಿರುವ ದೊಡ್ಡದೊಂದು ಗಿರಿ)ಯಂತೆ ತೋರ್ದನು. ವೀರಾವೇಶದಿಂದ ಮಾರಾಂತನು.

"ಕಕುದ್ದೋಷಣೀ" ಇತಿ ಭಗವತೋ ಭಾಷ್ಯಕಾರಸ್ಯ ಪ್ರಯೋಗದ್ದೋಷಶಬ್ದಸ್ಯ ನಪುಂಸಕತ್ವಂ ದೃಷ್ಟವ್ಯಮ್—ಭುಜಬಾಹೂಪ್ರವೇಷ್ಟೋ ದೋಃ ಇತಿ ಪುಲ್ಲಿಂಗಸಾಹಚರ್ಯಾತ್ ಪುಂಸತ್ವಂ ಚ—ತಥಾ ಚ ಪ್ರಯೋಗಃ—ದೋಷಂ ತಸ್ಯ ತಥಾ ವಿಧಸ್ಯ ಭಜತೇ" ಇತಿ ॥

24. ಕಾರ್ಷ್ಣೇನ ಪತ್ರಿಣಾ ಶತ್ರುಃ ಸಭಿನ್ನಹೃದಯಃ ಪತನ್ ।
ಆನಿನಾಯ ಭುವಃ ಕಂಪಂ ಜಹಾರಾಶ್ರಮವಾಸಿನಾಮ್ ॥ ೨೪ ॥

ಶತ್ರುಭಂಜಕನಾದ ಶತ್ರುಘ್ನನು ವಿಧಿಪೂರ್ವಕ ಮಂತ್ರಿಸಿ ವಿಷ್ಣುದೇವತಾಕವಾದ ವೈಷ್ಣವಾಸ್ತ್ರವನ್ನು ಬಿಲ್ಲಿಗೆ ಜೋಡಿಸಿ ಜೇಗೈದನು. ಆ ತೇಜಶ್ಶಾಲಿಯಾದ ತೇಜೋಮಯವಾದ ಮಹಾಸ್ತ್ರವು ಪ್ರಚಂಡವೇಗದಿಂದ ಬಂದು ಬರಸಿಡಿಲಿನಂತೆ ಶತ್ರುವಿನ ಎದೆಗೆ ಬಡಿಯಿತು. ಆ ನಿಶಿತಶರವು ಕೂಡಲೆ ಒಳಹೊಕ್ಕು ಅವನ ಹೃದಯವನ್ನು ಇಬ್ಭಾಗ

ಮಾಡಿತು. ಅವನ ಪ್ರಾಣವಾಯುವನ್ನು ಹೊರಗೆಳೆಯಿತು. ಅವನು ದೊಡ್ಡ ಪರ್ವತದವು ಉರುಳಿಬೀಳುವಂತೆ ಧರೆಗೆ ಬಿದ್ದು ಅಸುನೀಗಿದನು (ಗತಪ್ರಾಣನಾಗಿ, ಮಣ್ಣಾಂಗಟ್ಟಿ ಯಾಗಿ ಧರೆಯಲ್ಲಿ ಒರಗಿದನು). ಅವನು ಬಿದ್ದ ರಭಸಕ್ಕೆ ಭೂಮಿ ಒಂದು ಕ್ಷಣ ಕಂಪಿಸಿತು. ಆ ದೈತ್ಯನ ಅಂತ್ಯದೊಂದಿಗೆ ತಾಪಸಿಗಳ ನಡುಕವೂ, ಭಯವೂ ಅಂತ್ಯಗೊಂಡಿತು. ಅವರು ಭಯದಿಂದ ಮುಕ್ತರಾದರು.

ಕಾರ್ಷ್ಣೇನ = ವೈಷ್ಣವೇನ—''ಏಕವೇಷ ಪ್ರಜನಿತೋ ವಿಷ್ಣೋಸ್ತೇಜೋಮಯಃ ಶರಃ'' ಇತಿ—ವಿಷ್ಣುರ್ನಾರಾಯಣಃಕೃಷ್ಣಃ'' ಇತ್ಯಮರಃ—ಭಿನ್ನಹೃದಯಃ = ಪತನ್—ಭುವಃ ಕಂಪಮಾನಿನಾಯಾ ನೀತವಾನ್ ॥

**25.** ವಯಸಾಂ ಪಂಕ್ತಯಃ ಪೇತುಃ ಹತಸ್ಯೋಪರಿ ವಿದ್ವಿಷಃ ।
ತತ್ಪ್ರತಿದ್ವಂದ್ವಿನೋ ಮೂರ್ಧ್ನಿ ದಿವ್ಯಾಃ ಕುಸುಮವೃಷ್ಟಯಃ ॥ ೨೫ ॥

ಹೀಗೆ ಹತನಾಗಿ ಭೂತಳದಲ್ಲಿ ಬಿದ್ದಿರುವ ಆ ಖೂಳದೈತ್ಯನ ತಲೆಯ ಮೇಲೆ ಗಿಡುಗ, ಡೇಗೆ, ರಣಹದ್ದು ಮೊದಲಾದ ಸಹಸ್ರಾರು ಪಕ್ಷಿಗಳು ಎರಗಿದವು ಅಂದು. ಎದುರಾಳಿಯಾದ ವೀರವರ ಶತ್ರುಘ್ನನ ಶಿರದ ಮೇಲೆ ದೇವಲೋಕದ ದೇವತೆಗಳು ದೇವಸುಮಗಳನ್ನು ಸೂಸುತ್ತ ಹೂಮಳೆಗರೆದರು. ಆಗ ಪುಷ್ಪವೃಷ್ಟಿಯಾಯಿತು. ಭೂಭಾರವು ತಗ್ಗಿತು. ದಿಕ್ಕುಗಳು, ದಿಗಂತಗಳು ಬೆಳಗಿದುವು. ಪ್ರಶಸ್ತವಾದುವು. ಅಮಂಗಳವು ತೊಲಗಿತು. ದುಃಖದ ಕಾರ್ಮೋಡಗಳು ಚೆದರಿದುವು. ಆಶಾಜ್ಯೋತಿ ಉದಯಿಸಿ ಹೊರಹೊಮ್ಮಿತು (ತಮಸೋಮಾ ಜ್ಯೋತಿರ್ಗಮಯ ಎಂಬಂತೆ) ಜಗದ ಉದ್ದ ಅಗಲದಲ್ಲಿ.

ವಯಸಾಂ = ಪಕ್ಷಿಣಾಂ—ತತ್ಪ್ರತಿದ್ವಂದ್ವಿನಃ = ಶತ್ರುಘ್ನಸ್ಯ ಮೂರ್ಧ್ನಿ ತು ದಿವ್ಯಾಃ ಕುಸುಮವೃಷ್ಟಯಃ ಪೇತುಃ ॥

**26.** ಸ ಹತ್ವಾ ಲವಣಂ ವೀರಃ ತದಾ ಮೇನೇ ಮಹೌಜಸಃ ।
ಭ್ರಾತುಃ ಸೋದರ್ಯಮಾತ್ಮಾನಂ ಇಂದ್ರಜಿದ್ವಧಶೋಭಿನಃ ॥ ೨೬ ॥

ಲವಣಾಸುರನ ವಧೆಯನಂತರ ಆ ವೀರಪುಂಗವನಾದ ಶತ್ರುಘ್ನನು ಮಹಾಬಲನೂ, ಮಹಾತೇಜಸ್ವಿಯೂ ಆದ ಇಂದ್ರಜಿತ್‌ವಧಾಶೋಭಿತನಾದ ಲಕ್ಷ್ಮಣನನ್ನು ಹೆತ್ತ ತಾಯಿಯಾದ ಸುಮಿತ್ರೆಯ ಜಠರದಲ್ಲಿ ತಾನೂ ಜನಿಸಿದುದು ಸಾರ್ಥಕವಾಯಿತೆಂದು ಭಾವಿಸುತ್ತ ಪರಮಾನಂದಗೊಂಡನು. ಆ ಮಹೋಜಸನು ಒಡಹುಟ್ಟು ತಾನಾದೆನೆಂದು ಆ ವೀರವರನು ಮನದಲ್ಲಿ ಭಾವಿಸಿದನು ತಾವಿಬ್ಬರೂ ಒಂದೇ ತಾಯಿಯ ಮಕ್ಕಳು. ಸಮಾನ ಗೌರವವುಳ್ಳ ವೀರಪುತ್ರರೆಂಬ ಅಭಿಮಾನಕ್ಕೆ ಪಾತ್ರರಾದೆವೆಂದು ಮನದಲ್ಲಿ ನೆನೆದು ಹರ್ಷಗೊಂಡನು.

ಸ ವೀರಃ = ಶತ್ರುಘ್ನೋ — ಮಹೌಜಸೋ = ಮಹಾಬಲಸ್ಯೇಂದ್ರಜಿದ್ವಧೇನ ಶೋಭಿನೋ ಭ್ರಾತುಃ = ಲಕ್ಷ್ಮಣಸ್ಯ ಸಮಾನೋದರೇ ಶಯಿತಂ = ಸೋದರ್ಯಂ ಏಕೋದರಂ ಮೇನೇ—''ಸೋದರಾದ್ಯಃ ಇತಿ ಯ ಪ್ರತ್ಯಯಃ ॥

**27.** ತಸ್ಯ ಸಂಸ್ತೂಯಮಾನಸ್ಯ ಚರಿತಾರ್ಥೈಸ್ತಪಸ್ವಿಭಿಃ ।
ಶುಶುಭೇ ವಿಕ್ರಮೋದಗ್ರಂ ವ್ರೀಡಯಾವನತಂ ಶಿರಃ ॥ ೨೭ ॥

ಆ ಪೌರುಷಭೂಷಣನು ಮೇಲೆತ್ತಿದ ತಲೆಯಿಂದ ಶೋಭಿಸುತ್ತಿದ್ದನು, ಅವನು ಗರ್ವ ಬಾಹಿರನು, ನಿಃಸ್ಪೃಹನು, ಅಹಂಕಾರವರ್ಜಿತನು, ಮಧುರಾಕೃತಿಯ ಸೌಮ್ಯರೂಪನು. ತನ್ನ ಕೀರ್ತಿಗಾಥೆಯನ್ನು ಹಾಡುತ್ತಿರುವ ಚರಿತಾರ್ಥರಾದ (ಕೃತಾರ್ಥರಾದ) (ತಮ್ಮ ಉದ್ದೇಶದಲ್ಲಿ ಸಫಲತೆಯನ್ನು ಪಡೆದ) ತಪಸ್ವಿಗಳ ಕೀರ್ತಿಶ್ರವಣದಿಂದ, ವಿನಯದಿಂದ ಲಜ್ಜಿತನಾಗಿ, ವಿಕ್ರಮಕ್ಕೆ ಮೇಲೆತ್ತಿದ ತನ್ನ ತಲೆಯನ್ನು ನಸುಬಾಗಿ ನಿಂತನಾ ವೀರವರ ಶತ್ರುಘ್ನನು.

ಚರಿತಾರ್ಥೈಃ = ಕೃತಾರ್ಥೈಃ — ಕೃತಕಾರ್ಯೈಸ್ತಪಸ್ವಿಭಿಃ — ವಿಕ್ರಮೇಣೋದಗ್ರಮುನ್ನತಂ—ವ್ರೀಡಯಾ = ಲಜ್ಜಾವನತಂ = ನಮ್ರಂ ಶಿರಃ ಶುಶುಭೇ ॥

**28. ಉಪಕೂಲಂ ಸ ಕಾಲಿಂದ್ಯಾಃ ಪುರೀಂ ಪೌರುಷಭೂಷಣಃ ।**
**ನಿರ್ಮಮೇ ನಿರ್ಮಮೋಽರ್ಥೇಷು ಮಥುರಾಂ ಮಥುರಾಕೃತಿಂ**
**॥ ೨೮ ॥**

ಆ ವಿಕ್ರಮವೇ ಭೂಷಣವಾಗುಳ್ಳ, ಸುಂದರಾಕೃತಿಯ ಸುಮಿತ್ರಾನಂದನನು ಕಾಳಿಂದಿಯ ತಟದಲ್ಲಿ ಮಧುರಾಕೃತಿಯ ಸುಂದರವಾದ ಮಥುರಾನಗರವನ್ನು ನಿರ್ಮಿಸಿದನು. ಅವನು ಅರ್ಥಕ್ಕಾಗಲಿ (ಐಶ್ವರ್ಯಕ್ಕಾಗಲಿ) ವಿಷಯಸುಖಕ್ಕಾಗಲಿ ಅಪೇಕ್ಷಿಸಿದವನಲ್ಲ. ಅವುಗಳನ್ನು ಎಂದೂ ಬಯಸಿದವನಲ್ಲ. ನಿರ್ಮಲಚರಿತನಾದ ಲಕ್ಷ್ಮಣಾನುಜನು ಚರಿತ್ರಾರ್ಹವಾದ ಮಥುರಾಪಟ್ಟಣವನ್ನು ತನ್ನ ವಿಜಯದ ಸಂಕೇತವಾಗಿ, ಯಮುನಾ ನಗರದ ದಡದಲ್ಲಿ ಕಟ್ಟಿಸಿದನು.

ಅರ್ಥೇಷು = ವಿಷಯೇಷು—ನಿರ್ಮಮೋ = ನಿಃಸ್ಪೃಹಃ—ಮಧುರಾಕೃತಿಃ=ಸೌಮ್ಯರೂಪಃ ಸ ಶತ್ರುಘ್ನಃ—ಕಾಲಿಂದ್ಯಾ = ಯಮುನಾಯಾ—ಉಪಕೂಲಂ = ಕೂಲೇ—ಮಥುರಾಂ ನಾಮ ಪುರೀ ನಿರ್ಮಮೇ = ನಿರ್ಮಿತವಾನ್ ॥ ಅನುಪ್ರಾಸ ಶಬ್ದಾಲಂಕಾರಃ

**29. ಯಾ ಸೌರಾಜ್ಯಪ್ರಕಾಶಾಭಿಃ ಬಭೌ ಪೌರವಿಭೂತಿಭಿಃ ।**
**ಸ್ವರ್ಗಾಭಿಷ್ಯಂದ ವಮನಂ ಕೃತ್ವೇವೋಪನಿವೇಶಿತಾ ॥ ೨೯ ॥**

ಆ ಶತ್ರುಘ್ನನು ಕಟ್ಟಿಸಿದ ಮಥುರಾಪಟ್ಟಣವು ಇನ್ನೊಂದು ದೇವಲೋಕದ ಅಮರಾವತಿ ಪಟ್ಟಣದಂತೆ ಕಂಗೊಳಿಸುತ್ತಿತ್ತು. ಸ್ವರ್ಗದ ರಾಜಧಾನಿಯಾದ ಅಮರಾವತಿನಗರದಲ್ಲಿ ದೇವತೆಗಳ ಸಂಖ್ಯೆ ಜಾಸ್ತಿಯಾಗಿ ಅವರೆಲ್ಲರಿಗೆ ಪುನರ್ವಸತಿ ಕಲ್ಪಿಸಲು, ಸ್ಥಳದ ಅಭಾವವನ್ನು ಹೋಗಲಾಡಿಸಲು ದಿವಿಯಿಂದ ಭೂಮಿಗೆ ಇಳಿದ ಸುರರ ಇನ್ನೊಂದು ನಗರಿಯಂತೆ (ಮರಿ ಅಮರಾವತಿನಗರಿಯಂತೆ) ಕಂಗೊಳಿಸುತ್ತಿತ್ತು. ಆ ಸುಂದರವಾದ ಜನಪದವು ಐಶ್ವರ್ಯದಲ್ಲಿ ಮನುಷ್ಯನ ಆವಶ್ಯಕತೆಗಳನ್ನು ಈಡೇರಿಸುವುದರಲ್ಲಿ ಸುರನಗರಿಗೆ ಸಾಟಿಯಾಗಿತ್ತು.

ಸುರಾಜ್ಞಾಭಾವಃ = ಸೌರಾಜ್ಯಮ್ — ತೇನ ಪ್ರಕಾಶಾಭಿಃ = ಪ್ರಕಾಶಮಾನಾಭಿಃ—ವಿಭೂತಿಭಿರೈಶ್ವರ್ಯೈಃ—ಸ್ವರ್ಗಸ್ಯಾಭಿಷ್ಯಂದೋಽತಿರಿಕ್ತಜನಸ್ತಸ್ಯ—ಉಪನಿವೇಶಿತೋಪಸ್ಥಾಪಿತೇವ—ಅತ್ರ ಕೌಟಿಲ್ಯಃ—"ಭೂತಪೂರ್ವಮಭೂತಪೂರ್ವ ವಾ ಜನಪದಂ ಪರದೇಶಪ್ರವಾಹೇಣ ಸ್ವದೇಶಾಭಿಷ್ಯಂದ ವಮನೇನ ವಾ ನಿವೇಶಯೇತ್" ॥ ಇತಿ

**30. ತತ್ರ ಸೌಧಗತಃ ಪಶ್ಯನ್ ಯಮುನಾಂ ಚಕ್ರವಾಕಿನೀಮ್ ।**
**ಹೇಮಭಕ್ತಿಮತೀಂ ಭೂಮೇಃ ಪ್ರವೇಣೀಮಿವ ಪಿಪ್ರಿಯೇ ॥ ೩೦ ॥**

ಸುಮಿತ್ರಾನಂದನನಾದ ಮಹಾವೀರ ಶತ್ರುಘ್ನನು ತನ್ನ ಹೇಮಸಿಂಹಾಸನದಲ್ಲಿ ಕುಳಿತು ಮೇದಿನಿಯ ಜಡೆಯಂತೆ, ಹೊಳೆದು ಹರಿಯುತ್ತಿರುವ ಯಮುನಾನದಿಯನ್ನು ನೋಡಿ ಆನಂದಿಸಿದ. ಯಮುನೆಯ ಕಿನಾರೆಯಲ್ಲಿ ಚಕ್ರವಾಕಪಕ್ಷಿಗಳು ಓಡಾಡುತ್ತ ನದಿಗೆ ಹೆಚ್ಚಾದ ಶೋಭೆಯನ್ನು ಈಯುತ್ತಿದ್ದುವು. ಆ ಚಕ್ರವಾಕಪಕ್ಷಿಗಳು ಚಿನ್ನದ ಆಭರಣಗಳಂತೆ ಹೊಳೆಯುತ್ತ, ಕಂಗೊಳಿಸುತ್ತ ಯಮುನಾನದಿಯೆಂಬ ಜಡೆಗೆ ಹೇಮಾಭರಣ ರಚನೆಗಳಿಂದ ಸಿಂಗರಿಸಿದಂತೆ ಕಾಣಿಸುತ್ತ ಶತ್ರುಘ್ನನ ಮನಕ್ಕೆ ಆಹ್ಲಾದವನ್ನುಂಟು ಮಾಡಿದುವು. ಆ ಕೋಕವತಿ ಯಮುನೆಯನ್ನು ನೋಡಿ ಶತ್ರುಘ್ನನ ಮನವು ನಲಿಯಿತು.

ಸೌಧಗತಃ = ಹರ್ಮ್ಯಾರೂಢಃ—ಸ ಚಕ್ರವಾಕಿನೀಂ = ಚಕ್ರವಾಕವತೀಂ—ಹೇಮಭಕ್ತಿಮತೀಂ = ಸುವರ್ಣರಚನಾವತೀಂ — ಪ್ರವೇಣೀಂ = ವೇಣೀಮಿವ — "ವೇಣಿಃ ಪ್ರವೇಣೀ" ಇತ್ಯಮರಃ—ಪಶ್ಯನ್ ಪಿಪ್ರಿಯೇ = ಪ್ರೀತಃ—"ಪ್ರೀಙ್ ಪ್ರೀಣನೇ" ಇತಿ ಧಾತೋರ್ದೈವಾದಿಕಾಲ್ಲಿಟ್ ॥

**31. ಸಖಾ ದಶರಥಸ್ಯಾಪಿ ಜನಕಸ್ಯ ಚ ಮಂತ್ರಕೃತ್ ।**
**ಸಂಚಸ್ಕಾರೋಭಯಪ್ರೀತ್ಯಾ ಮೈಥಿಲೇಯೋ ಯಥಾವಿಧಿ ॥ ೩೧ ॥**

ಮಂತ್ರದ್ರಷ್ಟಾರನಾದ ವಾಲ್ಮೀಕಿಮುನಿವರನು (ವೈದಿಕಶಾಸ್ತ್ರನಿಪುಣನು, ಮಂತ್ರಕೃತನು, ಸಂಸ್ಕಾರಕ್ರಿಯಾಪ್ರವೀಣನು, ವೇದವೇತ್ತನು) ಮಿಥಿಲೆಯ ರಾಜಋಷಿಯಾದ ಜನಕಮಹಾರಾಜನ ಮತ್ತು ಕೋಸಲೇಶ್ವರನಾದ ದಶರಥನೃಪನ ಮಿತ್ರನು. ಆ ಮಹಾತ್ಮನು ಬಹಳ ಪ್ರೀತಿ ಆದರದಿಂದ ಮೈಥಿಲಿ ಸೀತಾದೇವಿಯ ಚೊಚ್ಚಲು ಮಕ್ಕಳ ಜನನಕ್ಕೆ ವ್ಯವಸ್ಥೆಗೊಳಿಸಿದನು. ಜನನೋತ್ಸವವಾದಬಳಿಕ ಆ ಅವಳಿಮಕ್ಕಳಿಗೆ ಜಾತಕರ್ಮಾದಿ ಕ್ರಿಯೆಗಳನ್ನು ಶಾಸ್ತ್ರವಿಧಿಗಳಿಗೆ ಅನುಸಾರ ಪ್ರೇಮದಿಂದ ನೆರವೇರಿಸಿದನು. ವಿಧ್ಯುಕ್ತವಾದ ರೀತಿಯಲ್ಲಿ ಸಂಸ್ಕಾರಗೈದನು.

ದಶರಥಸ್ಯ ಜನಕಸ್ಯ ಚ ಸಖಾ ಮಂತ್ರಕೃನ್ಮಂತ್ರದ್ರಷ್ಟಾ ಸ ವಾಲ್ಮೀಕಿಃ— "ಸುಕರ್ಮಪಾಪಮಂತ್ರಪುಣ್ಯೇಷು ಕೃಞಃ" ಇತಿ ಕ್ವಿಪ್ (ಪಾಣಿನಿ)—ಪ್ರೀತ್ಯಾ=ಸ್ನೇಹೇನ ಮೈಥಿಲೇಯೌ ಮೈಥಿಲೀ ಪುತ್ರೌ ಯಥಾವಿಧಿ = ಯಥಾಶಾಸ್ತ್ರಂ ಸಂಚಸ್ಕಾರ ಸಂಸ್ಕೃತವಾನ್—ಜಾತಕರ್ಮಾದಿಭಿರಿತಿ ಶೇಷಃ ॥

**32. ಸ ತೌ ಕುಶಲವೋನ್ಮೃಷ್ಟಗರ್ಭಕ್ಲೇದೌ ತದಾಖ್ಯಯಾ ।**
**ಕವಿಃ ಕುಶಲವಾವೇವ ಚಕಾರ ಕಿಲ ನಾಮತಃ ॥ ೩೨ ॥**

ಕವಿ ವಾಲ್ಮೀಕಿಯು ಕುಶದರ್ಭೆಯಿಂದಲೂ, ಗೋವಿನ ಬಾಲದ ಕೂದಲು (ಲವ) ದಿಂದ ಗರ್ಭಕ್ಲೇದವನ್ನು ಗರ್ಭೋಪದ್ರವಗಳನ್ನು ಪರಿಹರಿಸಿ ಕುಶಲಗೈದರು. ಹೀಗೆ ಕುಶಲವಗಳಿಂದ ಅವರ ಗರ್ಭದುಃಖವನ್ನು ಕಳೆದ ಕಾರಣ ಮಹರ್ಷಿಗಳು ಹಿರಿಯನನ್ನು

ಕುಶನೆಂದು, ಕಿರಿಯನನ್ನು ಲವನೆಂದು ಆ ವರಶಿಶುಗಳಿಗೆ ಆದಿಕವಿವರನು ನಾಮಕರಣ ಗೈದನು. ಆ ಶಿಶುದ್ವಯರು ಕುಶಲವರೆಂಬ ಹೆಸರಿನಿಂದ ಜಗದ್ವಿಖ್ಯಾತರಾದರು. ಇಕ್ಷ್ವಾಕು ವಂಶಕ್ಕೆ ಭೂಷಣಪ್ರಾಯರಾಗಿ ಪ್ರವರ್ಧಮಾನರಾದರು.

ಕುಶೈರ್ದರ್ಭೈರ್ಲವೈರ್ಗೋಪುಚ್ಛಲೋಮಭಿಃ — ''ಲವೋ ಲವಣಕಿಂಜಲ್ಕಪಕ್ಷ್ಮಗೋಪುಚ್ಛಲೋಮಸು'' ಇತಿ ವೈಜಯಂತೀ — ಉನ್‌ಸೃಷ್ಟೋ ಗರ್ಭಕ್ಲೇದೋ ಗರ್ಭೋಪದ್ರವೋ ಯಯೋಸ್ತೌಕುಶಲವೋನ್ಮೃಷ್ಟ ಗರ್ಭಕ್ಲೇದೌ ತೌ ಮೈಥಿಲೇಯೌ ತೇಷಾಂ ಕುಶಾನಾಂ ಚಲವಾನಾಂ ಚಾಖ್ಯಯಾ ನಾಮತೋ = ನಾಮ್ನಾ ಯಥಾ ಸಂಖ್ಯಂ ಕುಶಲವಾವೇವ ಚಕಾರ ಕಿಲ—ಕುಶೋನ್ಮೃಷ್ಟಃ ಕುಶಃ—ಲವೋನ್ಮೃಷ್ಟೋ ಲವಃ ॥

**33. ಸಾಂಗಂ ಚ ವೇದಮಧ್ಯಾಪ್ಯ ಕಿಂಚಿದುತ್ಕ್ರಾಂತಶೈಶವೌ ।**
**ಸ್ವಕೃತಿಂ ಗಾಪಯಾಮಾಸ ಕವಿಪ್ರಥಮಪದ್ಧತಿಮ್ ॥ ೩೩ ॥**

ಆ ಸೂರ್ಯಚಂದ್ರರಂತೆ ತೇಜಸ್ವಿಗಳಾದ ಶಿಶುಗಳು ತಮ್ಮ ಶೈಶವಾವಸ್ಥೆಯನ್ನು ಕಳೆದು ಬಾಲ್ಯಾವಸ್ಥೆಗೆ ಕಾಲಿಟ್ಟರು. ಆಗ ವಾಲ್ಮೀಕಿಮಹರ್ಷಿಗಳು ಸಕಾಲವೆಂದು ಅರಿತು ಉಪನಯನ ಮಾಡಿಸಿ (ಅವರ ಒಳಗಣ್ಣನ್ನು, ಮನಸ್ಸಿನ ಕಣ್ಣನ್ನು, ಜ್ಞಾನಚಕ್ಷುವನ್ನು, ತೆರೆಯಿಸುವರೆ) ವೇದ, ವೇದಾಂಗ, ಆಗಮಗಳ (ಶಿಕ್ಷಾ, ಜ್ಯೋತಿಷ, ವ್ಯಾಕರಣ) ಅಧ್ಯಯನವನ್ನು ಪ್ರಾರಂಭಿಸಿದರು. ಅದರ ಜೊತೆಗೆ ಕವಿಗಳಿಗೆಲ್ಲ ಬೀಜಮಂತ್ರದಂತಿರುವ ಅವರ ನಿಜಕೃತಿಯಾದ ರಾಮಾಯಣ ಆದಿಕಾವ್ಯದ ಮಹಾನ್ ಶ್ಲೋಕಗಳನ್ನು ಹಾಡಿಸಿದರು. ಶ್ರೀಮದ್ ರಾಮಾಯಣವು ಆ ವರಕವಿಯ ಪ್ರಪ್ರಥಮ ಪದ್ಧತಿಯ ನಿಜಕೃತಿ, ಕಾವ್ಯಜಗತ್ತಿನ ಕವಿತಾಶಕ್ತಿಯ. ಮೊತ್ತಮೊದಲಿನ ಕಾಣಿಕೆ (ಹೊತ್ತಿಗೆ, ಪುಸ್ತಕ). ಸರಸ್ವತಿಯ, ವಿದ್ಯಾಶಾರದೆಯ, ಸಕಲಭಾಷಾಸರಸ್ವತಿಯ ಮೊದಲ ಪ್ರಸಾದ (ಜ್ಞಾನ ಚೂರ್ಣ). ಅದು ಸಲುವುದು. ವಿಶ್ವದ (ಭಾರತದ) ಆದಿಕವಿ ವಾಲ್ಮೀಕಿ ಮಹಾಮುನಿಗಳಿಗೆ.

ಕವಿತಾಬೀಜಮಿತ್ಯರ್ಥಃ—ಸ್ವಕೃತಿಂ ಕಾವ್ಯಂ ರಾಮಾಯಣಾಖ್ಯಂ ಗಾಪಯಾಮಾಸ—ಗಾಪಯತೇರ್ಲಿಟ್—ಶಬ್ದಕರ್ಮತ್ವಾತ್ ''ಗತಿವೃದ್ಧಿ'' ಇತ್ಯಾದಿ ನಾದ್ವಿಕರ್ಮತ್ವಮ್ ॥

**34. ರಾಮಸ್ಯ ಮಧುರಂ ವೃತ್ತಂ ಗಾಯಂತೌ ಮಾತುರಗ್ರತಃ ।**
**ತದ್ವಿಯೋಗವ್ಯಥಾಂ ಕಿಂಚಿತ್ ಶಿಥಿಲೀಚಕ್ರತುಃ ಸುತೌ ॥ ೩೪ ॥**

ಆ ಇಬ್ಬರು ತೇಜಸ್ವಿಗಳಾದ ಬಾಲಸೂರ್ಯರು ತಮ್ಮ ಮಧುರವಾದ ಕಂಠದಿಂದ ರಾಮಕಥಾಸುಧೆಯನ್ನು ತಮ್ಮ ತಾಯಿಯ ಮುಂದೆ ಸುಶ್ರಾವ್ಯವಾಗಿ ಹಾಡುತ್ತಿದ್ದರು. ಅದನ್ನು ಕೇಳಿ ಸೀತಾಮಾತೆ ತನ್ನ ಪತಿವಿರಹದುಃಖವನ್ನು, ವಿಯೋಗವ್ಯಥೆಯನ್ನು (ವಿಯೋಗವ್ಯಥಾ) ಒಂದಿಷ್ಟು ಕಡಿಮೆ ಮಾಡಿಕೊಳ್ಳುತ್ತಿದ್ದಳು. ಆ ಚಿಣ್ಣರು ಮಧುರವಾಗಿ ಹಾಡುತ್ತ ಆಕೆಯ ವಿಯೋಗವ್ಯಥೆಯನ್ನು ಒಂದಿನಿಸು ಕಿರಿದುಗೈಯುತ್ತಿದ್ದರು. (ವಿರಹವೇದನೆ) ಶಿಥಿಲಗೊಳಿಸುತ್ತಿದ್ದರು.

ತದ್ವಿಯೋಗವ್ಯಥಾಂ ರಾಮವಿರಹವೇದನಾಂ ಕಿಂಚಿತ್ ಶಿಥಿಲೀಚಕ್ರತುಃ ॥

**35. ಇತರೇಽಪಿ ರಘೋರ್ವಂಶ್ಯಾಸ್ತ್ರಯಸ್ತ್ರೇತಾಗ್ನಿತೇಜಸಃ ।**
**ತದ್ಯೋಗಾತ್ಪತಿವತ್ನೀಷು ಪತ್ನೀಷ್ವಾಸನ್ ದ್ವಿಸೂನವಃ ॥ ೩೫ ॥**

ಉಳಿದ ಮೂವರು ತಮ್ಮಂದಿರು ಪವಿತ್ರವಾದ ತ್ರೇತಾಗ್ನಿಗಳಂತೆ, ಮೂರು ತರದ ಅಗ್ನಿಗಳಂತೆ ತೇಜಸ್ವಿಗಳಾದ ರಘುವಂಶಸಂಭೂತರಾದ ಲಕ್ಷ್ಮಣ, ಭರತ, ಶತ್ರುಘ್ನರು ತಮ್ಮ ತಮ್ಮ ಮಡದಿಯರಲ್ಲಿ ತಲಾ ಎರಡರಂತೆ ಗಂಡುಮಕ್ಕಳನ್ನು ಪಡೆದು ವಂಶವೃಕ್ಷವನ್ನು ಚಿಗುರಿಸಿ ವಿರಾಜಿಸಿದರು. ಶ್ರೀರಾಮನ ನಂತರದ ಮೂವರು ಅನುಜರು ಪರಿಶುದ್ಧವಾದ ತ್ರೇತಾಗ್ನಿಯಂತೆ (ಯಜ್ಞಾಗ್ನಿಯಂತೆ) ಮೂವರು ತೇಜಸ್ವಿಗಳು. ಅವರು ತಮ್ಮ ಸಹಧರ್ಮಿಣಿಯರಲ್ಲಿ ಇಬ್ಬಿಬ್ಬರು ಗಂಡುಮಕ್ಕಳನ್ನು ಪಡೆದರು. ಪತಿಪತ್ನಿಯರಾಗುವುದೂ ಯಜ್ಞಸಂಯೋಗವು. ಅಗ್ನಿಸಾಕ್ಷಿಯಾಗಿಯೇ ಪತಿಪತ್ನಿಯರ ಪಾಣಿಗ್ರಹಣವಾಗುವುದು. ಇದರಿಂದ ಶ್ರೀರಾಮಚಂದ್ರನ ಮೂವರು ತಮ್ಮಂದಿರೂ ಮೂರು ವಿಧದ ಅಗ್ನಿಗಳಂತೆ ಎಂದುದು ಅರ್ಥಪೂರ್ಣವಾದುದು. ಅವರ ಪತಿಗಳಿಂದ, ಅಧಿಕ ಯಶಸ್ಸು, ಶೋಭೆಪಡೆದ ಯಶವಂತರೂ, ಭಾಗ್ಯವಂತರೂ ಆದ ಅವರ ಪತ್ನಿಯರು ಪುತ್ರದ್ವಯದಿಂದ ಪ್ರಕಾಶಿಸಿದರು.

ತ್ರೇತೇತ್ಯಗ್ನಿತ್ರಯಃ ತೇಷಾಂ ತೇಜ ಇವ ತೇಜೋ ಏಷಾಂ ತೇ ತ್ರೇತಾಗ್ನಿತೇಜಸಃ —"ಪತಿವತ್ನೀಸಭರ್ತೃಕಾ" ಇತ್ಯಮರಃ—ಅನ್ತರ್ವತ್ ಪತಿತೋರ್ನುಕ್ ಇತಿ ಜೀಪ್ ಪ್ರತ್ಯಯೋನುಗಾಗಮಶ್ಚ (ಪಾಣಿನಿ)—ದ್ವೌ ದ್ವೌ ಸೂನೂ ಯೇಷಾಂ ತೇ ದ್ವಿಸೂನವ ಇತಿ ವಿಗ್ರಹಃ ॥

**36. ಶತ್ರುಘಾತಿನಿ ಶತ್ರುಘ್ನಃ ಸುಬಾಹೌ ಚ ಬಹುಶ್ರುತೇ ।**
**ಮಥುರಾವಿದಿಶೇ ಸೂನ್ವೋಃ ನಿದಧೇ ಪೂರ್ವಜೋತ್ಸುಕಃ ॥ ೩೬ ॥**

ಶತ್ರುಗಳಿಗೆ ಸಿಂಹಸ್ವಪ್ನನಾದ ಶತ್ರುಘ್ನನು ತನ್ನ ಅಣ್ಣನಾದ ರಘುರಾಮಚಂದ್ರನನ್ನು ಸೇರಿಕೊಳ್ಳಬೇಕೆಂದು ಉತ್ಸುಕನಾದನು. ಅವನು ಮಥುರಾ ಮತ್ತು ವಿದಿಶಾ ರಾಜ್ಯಗಳ ಆಧಿಪತ್ಯವನ್ನು ತನ್ನ ಇಬ್ಬರು ಮಕ್ಕಳಾದ ಶೂರವೀರರಾದ, ಘನಪ್ರತಾಪಿಗಳಾದ ಶತ್ರುಘಾತಿನಿ ಮತ್ತು ಸುಬಾಹು ಎಂಬವರನ್ನು ಅಧಿಪತಿಗಳಾಗಿ ನೇಮಿಸಿದನು. ಅವರು ವಿದ್ಯಾವಿಶಾರದರು, ರಾಜ್ಯವಿಚಕ್ಷಣರು, ನೀತಿಕೋವಿದರು (ಬಹುಶ್ರುತರು). ಅವರ ಕೈಗೆ ಒಪ್ಪಿಸಿ ಅವರನ್ನು ಅಧಿಪತಿಗಳನ್ನಾಗಿಮಾಡಿ ತಾನು ಅಯೋಧ್ಯಾನಗರಿಗೆ ಹೊರಟನು.

ಪೂರ್ವಜೋತ್ಸುಕೋ = ಜ್ಯೇಷ್ಠಪ್ರಿಯಃ—ತೇನಿಗರ್ವೋ = ನಿದಧೇ — ನಿಧಾಯ ಗತ ಇತ್ಯರ್ಥಃ ॥

**37. ಭೂಯಸ್ತಪೋ ವ್ಯಯೋ ಮಾ ಭೂದ್ವಾಲ್ಮೀಕೇರಿತಿ ಸೋಽತ್ಯಗಾತ್ ।**
**ಮೈಥಿಲೀತನಯೋದ್ಗೀತನಿಃಸ್ಪಂದಮೃಗಮಾಶ್ರಮಮ್ ॥ ೩೭ ॥**

ಹಿಂದಿರುಗಿ ಬರುವಾಗ ವಾಲ್ಮೀಕಿ ಋಷಿಯ ಆಶ್ರಮದ ದಾರಿಯಾಗಿ ಬಂದರೂ ಶತ್ರುಘ್ನನು ಆ ಮುನಿಕುಲವರನಿಗೆ ಅತಿಥಿಸತ್ಕಾರದ ಹೊರೆಯನ್ನು ಹೊರಿಸದೇ

ಹೊರಟನು. ಅಲ್ಲಿ ಆ ತಮಸಾ ನದಿಯ ಬಳಿಯಲ್ಲಿರುವ ವಾಲ್ಮೀಕಿ ಆಶ್ರಮದಲ್ಲಿ ಮೈಥಿಲಿಯ ತನಯರು ಶ್ರೀಮದ್ ರಾಮಾಯಣಮಹಾಕಾವ್ಯದ ಶ್ಲೋಕಗಳನ್ನು ಭಾವಪೂರ್ಣವಾಗಿ, ಸುಶ್ರಾವ್ಯವಾಗಿ ಹಾಡುತ್ತ ತಮ್ಮ ತಾಯಿಗೆ ಒಂದಿಷ್ಟು ಆನಂದವನ್ನು ತರುತ್ತಿದ್ದರು. ಅಲ್ಲಿ ಆ ಆಶ್ರಮದಲ್ಲಿ ಆ ಬಾಲಕರು ಸಮೂಹಗಾನ ಮಾಡುತ್ತಿದ್ದಾಗ ಜಿಂಕೆಗಳು ಅತ್ತಿತ್ತ ಅಗಲದೆ ಕಿವಿಗೊಟ್ಟು ಸ್ತಬ್ಧವಾಗಿ ಮಾನವರಂತೆ ಆಲಿಸುತ್ತಿದ್ದುವು. ಅಂತಹ ಎರಳೆಗಳ ಸಮೂಹದಿಂದ ನಿಬಿಡವಾಗಿರುವ ತಪೋವನ ಭೂಮಿಯನ್ನು ಪುಗದೆ, ಶತ್ರುಘ್ನನು ಅಯೋಧ್ಯೆಗೆ ಪಯಣಿಸಿದನು. ವಾಲ್ಮೀಕಿಮಹರ್ಷಿಯ ತಪಶ್ಶಕ್ತಿಯು ವ್ಯಯವಾಗದಂತೆ. ತಪಶ್ಶಕ್ತಿಗೆ ಕೇಡಾಗದಂತೆ ಜಾಗ್ರತ ವಹಿಸಿದ್ದನು.

ನಿಃಸ್ಪಂದಮೃಗಂ=ಗೀತಪ್ರಿಯತಯಾ ನಿಶ್ಚಲಹರಿಣಂ—ಭೂಯಃ = ಪುನರಪಿ—ಸಂವಿಧಾನಕರಣಾರ್ಥತಪೋಹಾನಿರ್ಮಾ ಭೂದಿತಿ ಹೇತೋಃ—ಅತ್ಯಗಾತ್—ಅತಿಕ್ರಮ್ಯಗತ ಇತ್ಯರ್ಥಃ ॥

**38. ವಶೀ ವಿವೇಶ ಚಾಯೋಧ್ಯಾಂ ರಥ್ಯಾ ಸಂಸ್ಕಾರಶೋಭಿನೀಮ್ ।**
**ಲವಣಸ್ಯ ವಧಾತ್ ಪೌರೈಃ ಈಕ್ಷಿತೋಽತ್ಯಂತಗೌರವಮ್ ॥ ೩೮ ॥**

ಲವಣಾಂತಕನು ಬರುವನೆಂದು ತಿಳಿದು ಅಯೋಧ್ಯೆಯ ನಾಗರಿಕರು ನಗರವನ್ನು ತಳಿರುತೋರಣಗಳಿಂದ ಸಿಂಗರಿಸಿದ್ದರು. ಮಹಾಕಾರ್ಯವೊಂದನ್ನು (ಲೋಕಕಲ್ಯಾಣ) ಸಾಧಿಸಿದ್ದರೂ ಶತ್ರುಘ್ನನು ಆತ್ಮಸಂಯಮಿಯಾಗಿದ್ದನು. ಅವನಿಗೆ ಜಂಬ ಲವಲೇಶವೂ ಇರಲಿಲ್ಲ (ಜಂಬದ ಕೋಳಿ—ಮನೆಮಾತು). ಅವನು ವಿಶಾಲವಾದ, ಕಲಾತ್ಮಕವಾಗಿ ಸಿಂಗರಿಸಲ್ಪಟ್ಟಿರುವ ರಾಜಬೀದಿಗಳಿಂದೊಪ್ಪುವ ಸುಂದರವಾದ ಸಾಕೇತನಗರವನ್ನು ಹೊಕ್ಕನು. ಲವಣನನ್ನು ಕೊಂದು ಮಹಾಶೂರನಾದ ಶತ್ರುಘ್ನನನ್ನು ಅಯೋಧ್ಯೆಯ ಪುರಜನರು (ಪೌರರು, ನಾಗರಿಕರು) ಅತ್ಯಂತ ಗೌರವದಿಂದ, ಉತ್ಸುಕರಾಗಿ ಈಕ್ಷಿಸಿದರು. ಅವನ ದರ್ಶನದಿಂದ ಅವರು ಪುಲಕಿತರಾದರು. ಅವರು ಲೋಕಕಂಟಕಿಯಾದ (ಭೂಭಾರಕನಾದ) ಲವಣಾಸುರನ ಸಾವನ್ನು ಬಯಸಿದ್ದರು.

ಪೌರೈಃ = ಪೌರಜನೈಃ—ರಥ್ಯಾ ಸಂಸ್ಕಾರೈಸ್ತೋರಣಾದಿಭಿಃ—ತಾಮಯೋಧ್ಯಾಂ ವಿವೇಶ ಚ ॥

**39. ಸ ದದರ್ಶ ಸಭಾಮಧ್ಯೇ ಸಭಾಸದ್ಭಿರುಪಸ್ಥಿತಮ್ ।**
**ರಾಮಂ ಸೀತಾಪರಿತ್ಯಾಗಾದಸಾಮಾನ್ಯಪತಿಂ ಭುವಃ ॥ ೩೯ ॥**

ಅವನು ಸೂರ್ಯವಂಶಪ್ರದೀಪನಾದ ಶ್ರೀರಾಮಚಂದ್ರನನ್ನು ಸಭಾಮಧ್ಯದಲ್ಲಿ ಕಂಡನು. ಶ್ರೀರಾಮಚಂದ್ರನು ಸಭ್ಯರಾದ ಪುರಜನರಿಂದ ಸೇವಿತನಾಗಿ, ಸಭಾಮಧ್ಯದಲ್ಲಿ ತನ್ನ ಆಸನದಲ್ಲಿ ಕುಳಿತಿದ್ದನು. ಅವನಿಜೆಯನ್ನು ತೊರೆದುದರಿಂದ ಅವನೀಗ ಸಾಮ್ರಾಜ್ಯಲಕ್ಷ್ಮಿಯಾದ ಭೂಕಾಂತೆಗೆ ಮಾತ್ರ ಪತಿಯಾಗಿ ಅವನಿಯನ್ನು ಪಾಲಿಸುತ್ತಿದ್ದನು. ಸೀತಾಪರಿತ್ಯಾಗದಿಂದ ಅವನೀಗ ಧರಣೀನಾಥನು ಮಾತ್ರ.

ಸಾಮಾನ್ಯಪತಿಂ = ಸಾಧಾರಣಪತಿಂ ॥

40. ತಮುಧ್ಯೆಸಂದತ್ರುಹತಂ ಲವಣಾಂತಕಮಗ್ರಜಃ ।
ಕಾಲನೇಮಿವಧಾತ್ಪ್ರೀತಃ ತುರಾಷಾಡಿವ ಶಾರ್ಙ್ಗಿಣಮ್ ॥ ೪೦ ॥

ಈ ಹಿಂದೆ ಶಾರ್ಙ್ಗಧನುಸ್ಸನ್ನು ಧರಿಸಿ ಶತ್ರುಗಳನ್ನು ಹನನಮಾಡಿದ ಮಹಾವಿಷ್ಣುವು ಲೋಕಕಂಟಕ ಕಾಲನೇಮಿಯೆಂಬ ಮಹಾದಾನವನನ್ನು ವಧಿಸಿ ಸ್ವರ್ಗಲೋಕವನ್ನು ಅವನ ಬಾಧೆಯಿಂದ ಮುಕ್ತಗೊಳಿಸಿದನು. ಆಗ ಶಾರ್ಙ್ಗಿಯಾದ ಮಹಾವಿಷ್ಣುವನ್ನು ಲೋಕಪಾಲಕನಾದ ಮಹೇಂದ್ರನು ಕೃತಜ್ಞತಾಪೂರ್ವಕವಾಗಿ ಅಭಿನಂದಿಸಿದನು. ಅದೇ ರೀತಿಯಲ್ಲಿ ಕಾಲನೇಮಿಯಂತೆ ಶಕ್ತಿಸಾಗರನಾದ ಲವಣಾಸುರನನ್ನು ಕೀರ್ತಿವಿಲಸಿತನಾದ, ಆಚಂದ್ರಾರ್ಕಕೀರ್ತಿಗೆ ಪಾತ್ರನಾದ ಶತ್ರುಘ್ನನು ವೈಷ್ಣವಾಸ್ತ್ರದಿಂದ ಸದೆಬಡಿದನು. ತನ್ನ ತಮ್ಮನ ಮಹತ್ಕಾರ್ಯದಿಂದ ಶತ್ರುವಿನ ವಧೆಯಿಂದ ಸಂತೋಷಗೊಂಡ ಶ್ರೀರಾಮನು ತನ್ನ ತಮ್ಮನನ್ನು ಒಲಿದು ಅಭಿನಂದಿಸಿದನು. ಆಗ ಲವಣಾಂತಕನು ತಲೆಬಾಗಿ (ಶಿರ ಬಾಗಿ) ತನ್ನ ಅಣ್ಣನನ್ನು ವಂದಿಸಿದನು.

ಪೂರ್ವಕಥೆ :—ಕಾಲನೇಮಿಯು ಹಿರಣ್ಯಕಶಿಪುವಿನ ಮಗನು. ಹರಿವಂಶದಲ್ಲಿ ಹಾಗೂ ವಾಯುಪುರಾಣದಲ್ಲಿ ಹೇಳುವಂತೆ ಆ ಅಸುರನು ಬಹಳ ಬಲಾಢ್ಯನು. ಅವನ ತಲೆಯ ಮೇಲೆ ಸೂರ್ಯನಂತೆ ಬೆಳಗುತ್ತಿರುವ ದಿವ್ಯಕಿರೀಟವಿತ್ತು. ಅವನು ದೇಹದ ಗಾತ್ರದಲ್ಲಿ ಮಂದರಗಿರಿಗೆ ಸಮಾನನಾಗಿದ್ದನು. ಬೆಳ್ಳಿಯ ವರ್ಣದ (ಧವಳ) ದೇಹವುಳ್ಳ ಆ ದೀರ್ಘ ದೇಹಿ, ನೂರು ತಲೆಗಳಿಂದ, ನೂರು ಬಾಯಿಗಳಿಂದ, ನೂರು ಕೈಗಳಿಂದ ವಿರಾಜಮಾನ ನಾಗಿ ನೂರು ಶಿಖರಗಳುಳ್ಳ ಪರ್ವತದಂತೆ ಅಭೇದ್ಯನಾಗಿದ್ದನು. ಅವನನ್ನು ಶಾರ್ಙ್ಗಧರ ನಾದ ಮಹಾವಿಷ್ಣುವು (ಶ್ರೀಹರಿಯು) ಸಂಹರಿಸಿದನು. (ಆಧಾರ : ಹರಿವಂಶಮಹಾ ಪುರಾಣ)

ಲವಣಾಂತಕಂ=ಲವಣಹಂತಾರಂ—ತುರಂ ವೇಗಂ ಸಹತ ಇತಿ ತುರಾಷಾಡಿಂದ್ರಃ— ಛಂದಸಿಸಹಃ—ಇತಿ ಣ್ವಿಪ್ರತ್ಯಯಾ ಸಹ ತೇರ್ಣಿ ಚಿಕ್ಯತೇ ಸಾಹಯತೇಃ ಕ್ವಿಪ್—ಅನ್ಯೇಷಾ ಮಪಿ ದೃಶ್ಯತೇ'' ಇತಿಪೂರ್ವಪದಸ್ಯ ದೀರ್ಘಃ ''ಸಹೇಃ ಸಾಡಃ ಸಃ'' ಇತಿ ಷತ್ವಮ್— (ಪಾಣಿನಿ)—ಶಾರ್ಙ್ಗಿಣಮುಪೇಂದ್ರಮಿವ ॥

41. ಸ ಪೃಷ್ಟಃ ಸರ್ವತೋ ವಾರ್ತಂ ಆಖ್ಯದ್ರಾಜ್ಞೇ ನ ಸಂತತಿಮ್ ।
ಪ್ರತ್ಯರ್ಪಯಿಷ್ಯತಃ ಕಾಲೇ ಕವೇರಾದ್ಯಸ್ಯ ಶಾಸನಾತ್ ॥ ೪೧ ॥

ಕ್ಷೇಮವನ್ನು ಕೇಳಿದಾಗ ಶತ್ರುಘ್ನನು ಎಲ್ಲವನ್ನು ವಿವರಿಸಿ ಹೇಳಿದನು. ತನ್ನ ಕಾರ್ಯ ಸಾಧನೆಯಲ್ಲಿ ತನಗಾದ ವಿಜಯದ ಪರಂಪರೆಯೆಲ್ಲವನ್ನೂ ಹೇಳಿದನು ಮಾತ್ರ. ಆದರೆ ಕುಶಲವರ ಜನನವಾರ್ತೆಯನ್ನು ಮಾತ್ರ ಹೇಳಲಿಲ್ಲ. ಸರಿಯಾದ ಕಾಲದಲ್ಲಿ, ಸರಿಯಾದ ಕಾಲವು ಒದಗಿಬಂದಾಗ ತಾನೆ ಅದನ್ನು ತಿಳಿಸುವೆನೆಂದು, ಮಕ್ಕಳನ್ನು ಶ್ರೀರಾಮನ ವಶಕ್ಕೆ ಕೊಡುವೆನೆಂದು ಆದಿಕವಿಯು ಶತ್ರುಘ್ನನಿಗೆ ಅರಿಕೆ ಮಾಡಿಕೊಂಡುದರಿಂದ, ಅದನ್ನು ತಿಳಿದು ಶತ್ರುಘ್ನನು ಅರುಹಲೇ ಇಲ್ಲ, (ಅದನೊರೆವೆನೆಂದು ಆದಿಕವಿ ಶಾಸಿದ ನೆಂದು).

ಸರ್ವತೋ ವಾರ್ತಂ ಕುಶಲಂ ರಾಜ್ಞೇ ರಾಮಾಯ—ಆಖ್ಯದಾಖ್ಯಾತವಾನ್—

ಚಕ್ಷಿಙೋ ಲಙ್—ಚಕ್ಷಿ ಙಃ ಖ್ಯಾಞ್ ಇತಿ ಖ್ಯಾಞ್ ಆದೇಶಃ—ಅಸ್ಯತಿವಕ್ತಿ—ಇತ್ಯಙ್—ಆತೋಲೋಪ ಇಟಿ ಚ'' ಇತ್ಯಾಕಾರಲೋಪಃ—ಖ್ಯಾತೇರ್ವಾ ಲಙ್ (ಪಾಣಿನಿ) ಕುತಃ—ಕಾಲೇಽವಸರೇ ಪ್ರತ್ಯಪರ್ಯಯಿಂಸ್ಮೃತ ಆದ್ಯಸ್ಯ ಕವೇರ್ವಾಲ್ಮೀಕೇಃ ಶಾಸನಾತ್ ॥

**42. ಅಥ ಜಾನಪದೋ ವಿಪ್ರಃ ಶಿಶುಮಪ್ರಾಪ್ತಯೌವನಮ್ ।**
**ಅವತಾರ್ಯಾಂಕ ಶಯ್ಯಾಸ್ಥಂ ದ್ವಾರಿ ಚಕ್ರಂದ ಭೂಪತೇಃ ॥ ೪೨ ॥**

ಹೀಗೆ ಕೆಲವು ಕಾಲ ಸಂದಿತು. ಒಂದಾನೊಂದು ದಿನ ಒಂದು ಅಕಾರ್ಯವು ಒಂದು ಗ್ರಾಮದಲ್ಲಿ ನಡೆಯಿತು. ಆ ಗ್ರಾಮದಲ್ಲಿದ್ದ ಬ್ರಾಹ್ಮಣ ಕುಟುಂಬದಲ್ಲಿ ಒಂದು ಮಗುವು ಅಕಾಲಮರಣಕ್ಕೆ ತುತ್ತಾಯಿತು. ಆ ಬ್ರಾಹ್ಮಣ ಶ್ರೇಷ್ಠನು ಮಗನ ಕಳೇಬರವನ್ನು ತೊಡೆಯ ಮೇಲಿಟ್ಟು ಭೂಪತಿಯ ಅರಮನೆಯ ಬಾಗಿಲೊಳು ಕುಳಿತು ಧರಣಿಸತ್ಯಾಗ್ರಹ ಹೂಡಿದನು. ಜಪ್ಪಯ್ಯ ಎಂದರೂ ಕುಳಿತಲ್ಲಿಂದ ಅಲ್ಲಾಡದೆ, ಅಪ್ರಾಪ್ತವಯಸಿನ ಬಾಲಕನು ದೈವಾಧೀನನಾದನೆಂದು ಗೋಳೋ ಎಂದು ಅಳತೊಡಗಿದನು.

ಅಪ್ರಾಪ್ತಯೌವನಮ್ = ಶಿಶುಮ್—ಮೃತಮಿತಿ ಶೇಷಃ—ಚಕ್ರಂದ = ಚುಕ್ರೋಶ ॥

**43. ಶೋಚನೀಯಾಸಿ ವಸುಧೇಯಾ ತ್ವಂ ದಶರಥಾಚ್ಚ್ಯುತಾ ।**
**ರಾಮಹಸ್ತಮನುಪ್ರಾಪ್ಯ ಕಷ್ಟಾತ್ಕಷ್ಟತರಂ ಗತಾ ॥ ೪೩ ॥**

ಆ ವಿಪ್ರೋತ್ತಮನು, ದಶರಥನ ಕಾಲದಲ್ಲಿ ಅಂತಹ ಆಪತ್ತುಗಳು (ಅಕಾಲಮರಣ) ಸಂಭವಿಸುತ್ತಿರಲಿಲ್ಲವೆನ್ನುತ್ತ ಗೋಗರೆಯುತ್ತಿದ್ದನು. ಶ್ರೀರಾಮನ ಕರಗತೆಯಾದಮೇಲೆ ವಸುಧೆಗೆ ದಿನದಿಂದ ದಿನಕ್ಕೆ ಅಧೋಗತಿಯು ಪ್ರಾಪ್ತವಾಗುತ್ತಿದೆ. ಕಷ್ಟಕಾಲವು ಒದಗುತ್ತಲಿದೆ, ಧರ್ಮವು ಚ್ಯುತವಾಗುತ್ತಲಿದೆ. ನಡೆಯಬಾರದ್ದು ಆಗಬಾರದ್ದು ಲೋಕದಲ್ಲಿ ಪ್ರಚಲಿತವಾಗುತ್ತಿದೆ. ಹೀಗೆಂದು ಹೇಳುತ್ತ ಮಗನನ್ನು ಕಳೆದುಕೊಂಡ ವಿಪ್ರನು ಗೋಳೋ ಎಂದು ಅಳುತ್ತ, ತನ್ನ ಮಗನ ಪ್ರಾಣವನ್ನು ತಂದುಕೊಡುವಂತೆ ಲೋಕಾಧ್ಯಕ್ಷನಾದ ಶ್ರೀರಾಮನಿಗೆ ಮೊರೆಯಿಟ್ಟನು.

**44. ಶ್ರುತ್ವಾ ತಸ್ಯ ಶುಚೋ ಹೇತುಂ ಗೋಪ್ತಾ ಜಿಹ್ರಾಯ ರಾಘವಃ ।**
**ನ ಹ್ಯಕಾಲಭವೋ ಮೃತ್ಯುರಿಕ್ಷ್ವಾಕು ಪದಮಸ್ಪೃಶತ್ ॥ ೪೪ ॥**

ಆ ದ್ವಿಜೋತ್ತಮನ ದುಃಖದ ಕಾರಣವನ್ನು ಕೇಳಿ ಮರ್ಯಾದಾಪುರುಷೋತ್ತಮನಾದ, ಲೋಕಧರ್ಮಾಧ್ಯಕ್ಷನಾದ, ಬ್ರಹ್ಮಸೃಷ್ಟಿಯ ಪಾಲಕನಾದ, ಸಮಾಜರಕ್ಷಕನಾದ, ಲೋಕ ವ್ಯವಸ್ಥಾಪಕನಾದ, ಶಾಸಕನಾದ, ಶಾಸನಕರ್ತೃವಾದ, ಲೋಕನಿಯಮಾಧ್ಯಕ್ಷನಾದ ಶ್ರೀರಾಮಚಂದ್ರನು ತನ್ನ ಮನದಲ್ಲಿ ನಾಚಿದನು. ತಲೆಯನ್ನು ತಗ್ಗಿಸಿದನು. ಇಕ್ಷ್ವಾಕು ರಾಷ್ಟ್ರವನ್ನು ಈತನಕ ಅಕಾಲಭವಮರಣ (ಸಾವು) ಸೋಂಕಿರಲಿಲ್ಲ. ನಿಜವೆಂಬುದನ್ನು ತಿಳಿದು ಅದರ ನಿವಾರಣೋಪಾಯದ ಬಗ್ಗೆ ಆಳವಾಗಿ ಚಿಂತಿಸಿದನು.

45 ಸುಮುಹೂರ್ತಾನ್ ಕ್ಷಮಸ್ವೇತಿ ದ್ವಿಜಮಾಶ್ವಾಸ್ಯ ದುಃಖಿತಮ್।
ಯಾನಂ ಸಸ್ಮಾರ ಕೌಬೇರಂ ವೈವಸ್ವತಜಿಗೀಷಯಾ ॥ ೪೫ ॥

ಧರ್ಮರಕ್ಷಕನಾದ ಆ ರಘುಕುಲೋತ್ತಮನು ಗೋಳಿಡುವ ವಿಪ್ರನನ್ನು ಕ್ಷಣಕಾಲ (ಒಂದು ಮುಹೂರ್ತ ಕಾಲ) ಸೈರಿಸುವುದೆಂದು ಸಮಜಾಯಿಸಿ ಸಂತಯಿಸಿದನು. ಆ ಬಳಿಕ ಆ ಮಾನವೇಂದ್ರನು ಕುಬೇರನ ವಶವಿರುವ ದೇವನೌಕೆಯಾವ ಪುಷ್ಪಕವನ್ನು ತನ್ನ ಮನದಲ್ಲಿ ನೆನೆದನು (ಧ್ಯಾನಿಸಿದನು) (ನೆನೆದನಾ ಕೌಬೇರಯಾನವನು) ಕೂಡಲೇ ವೈವಸ್ವತನಾದ ಯಮಧರ್ಮರಾಜನಲ್ಲಿಗೆ ಹೋಗಿ, ಅವನನ್ನು ಗೆದ್ದು ಮಗುವಿನ ಪ್ರಾಣವನ್ನು ಹಿಂದಕ್ಕೆ ತಂದುಕೊಡುವುದಾಗಿ ತನ್ನ ಮನದಲ್ಲಿ ನಿರ್ಧರಿಸಿದನು.

ವೈವಸ್ವತಜಿಗೀಷಯಾ = ಯಮನನ್ನು ಗೆಲ್ಲುವ ಇಚ್ಛೆಯಿಂದ—ವೈವಸ್ವತಸ್ಯಾಂತಕಸ್ಯ—ಜಿಗೀಷಯಾ = ಜೇತುಮಿಚ್ಛಯಾ—ಕೌಬೇರಂಯಾನಂ = ಪುಷ್ಪಕಂ ॥

46. ಅತ್ತ್ರಶಸ್ತ್ರಸ್ತದಧ್ಯಾಸ್ಯ ಪ್ರಸ್ಥಿತಃ ಸ ರಘೂದ್ವಹಃ ।
ಉಚ್ಚಚಾರ ಪುರಸ್ತಸ್ಯ ಗೂಢರೂಪಾ ಸರಸ್ವತೀ ॥ ೪೬ ॥

ಆ ರಘೂದ್ವಹನು ಅಸ್ತ್ರಶಸ್ತ್ರಸಜ್ಜಿತನಾಗಿ ದೇವರಥದಲ್ಲಿ ಕುಳಿತು ಯಾನವಮಾಡುತ್ತಾ ಹೊರಟನು. ಆಗ ಒಂದೆಡೆಯಲ್ಲಿ ವಾಗ್ದೇವಿ ಸರಸ್ವತಿಯು (ಬ್ರಹ್ಮನ ರಾಣಿ, ವಾಣಿ, ಗೀರ್ವಾಣಿ, ಸರ್ವರ ಅಂತರ್ವಾಣಿ) ಗೂಢರೂಪದಿಂದ ಹೀಗೆಂದು ನುಡಿದಳು. ಆ ಮಹೋದಯನು (ಮಹಾಭಾಗನು) ಅಶರೀರವಾಣಿಯೊಂದನ್ನು ಕಿವಿಗೊಟ್ಟು ಆಲಿಸಿದನು (ಆ ಬಳಿಕ ವ್ಯಗರೆದು ವಾಗ್ದೇವಿ).

ರಘೂದ್ವಹೋ = ರಾಮಃ—ತತ್ ಪುಷ್ಪಕಮಧ್ಯಾಸ್ಯ ಪ್ರಸ್ಥಿತಃ—ಗೂಢರೂಪಾ ಸರಸ್ವತ್ಯಶರೀರಾವಾಗುಚ್ಚಚಾರೋದ್ ಬಭೂವ ॥

47. ರಾಜನ್ ಪ್ರಜಾಸು ತೇ ಕಶ್ಚಿತ್ ಅಪಚಾರಃ ಪ್ರವರ್ತತೇ ।
ತಮನ್ವಿಷ್ಯ ಪ್ರಶಮಯೇ ಭವಿತಾಸಿ ತತಃ ಕೃತೀ ॥ ೪೭ ॥

ಹೇ ರಾಜನ್, ನಿನ್ನ ರಾಷ್ಟ್ರದಲ್ಲಿರುವ ಓರ್ವ ಪ್ರಜೆ ಅಪಚಾರವೆಸಗುತ್ತಲಿರುವನು. ನೀನು ಆತನನ್ನು ಕಂಡುಹಿಡಿದು ಅವನ ವರ್ಣಧರ್ಮ (ಚಾತುರ್ವರ್ಣ್ಯ) ವಿರೋಧ ಪ್ರವೃತ್ತಿಗಳನ್ನು (ಆಚಾರ ಧರ್ಮಗಳನ್ನು) (ಜಾತಿಸಂಕರವನ್ನು) ತಡೆಗಟ್ಟುವಲ್ಲಿ ಸಮರ್ಥನಾದರೆ ನಿನ್ನ ಕಾರ್ಯದಲ್ಲಿ ನೀನು ಕೃತಕೃತ್ಯನಾಗುವೆ. (ಜಯಶೀಲನಾಗುವೆ, ಯಶಸ್ವಿಯಾಗುವೆ).

ಕಶ್ಚಿದಪಚಾರೋ=ವರ್ಣಧರ್ಮವ್ಯತಿಕರಃ ಪ್ರವರ್ತತೇ—ತತಃ ಕೃತೀ=ಕೃತಕೃತ್ಯೋ—ಭವಿತಾಸಿ = ಭವಿಷ್ಯತಾ ॥

48. ಇತ್ಯಾಪ್ತವಚನಾದ್ರಾಮೋ ವಿನೇಷ್ಯನ್ ವರ್ಣವಿಕ್ರಿಯಾಮ್ ।
ದಿಶಃ ಪಪಾತ ಪತ್ರೇಣ ವೇಗನಿಷ್ಕಂಪ ಕೇತುನಾ ॥ ೪೮ ॥

ಈ ಪರಿಯಾಗಿ ನುಡಿದ ಆಕಾಶವಾಣಿಯ ಆಪ್ತವಚನವನ್ನು ಕೇಳಿ ಆ ರಘುಕುಲೋತ್ತಮನು, ವರ್ಣಾಶ್ರಮಧರ್ಮವನ್ನು ಮೀರಿ ನಡೆಯುತ್ತಿರುವ ವರ್ಣವಿಕ್ರಿಯನನ್ನು

ಕ್ರಾಂತಿಕಾರಕನನ್ನು ಕಂಡುಹಿಡಿಯಲು ಆ ದೇವರಥದಲ್ಲಿ ಕುಳಿತು ವೇಗವಾಗಿ ಸಂಚರಿಸ ತೊಡಗಿದನು. ನಾಲ್ಕು ಕಡೆಗೂ ರಥವನ್ನು ಹಾರಿಸಿ ವರ್ಣಾಪಚಾರಗೈಯುತ್ತಿರುವ ಅತಿಕ್ರಮಿಯನ್ನು ಅನ್ವೇಷಿಸುತ್ತ ಆ ರಘುಕುಲಪ್ರದೀಪನು ಹೊರಟನು. ಆಗಲಾ ವಿಮಾನದ ವೇಗಕ್ಕೆ ರಥದ ಮೇಲಿದ್ದ ಬಾವುಟವು ಅತ್ತಿತ್ತ ಅಲುಗಾಡದೆ, ತಟಪಟ ಎಂದು ಸದ್ದು ಮಾಡದೆ. ನಿಷ್ಕಂಪವಾಗಿಯೇ ಇತ್ತು, ಸ್ಥಿರವಾಗಿತ್ತು.

ವರ್ಣವಿಕ್ರಿಯಾಂ = ವರ್ಣಾಪಚಾರಂ—ಪತ್ರೇಣ = ವಾಹನೇನ ಪುಷ್ಪಕೇಣ—"ಪತ್ರವಾಹನಪಕ್ಷಯೋಃ" ಇತ್ಯಮರಃ—ದಿಶಾಃ ಪಪಾತ=ಧಾವತಿ ಸ್ಮ—ವಿನೇಷ್ಯನ್= ತಡೆಯುವ ಸಲುವಾಗಿ.

**49. ಅಥ ಧೂಮಾಭಿತಾಮ್ರಾಕ್ಷಂ ವೃಕ್ಷಶಾಖಾ ವಿಲಂಬಿನಮ್ ।**
**ದದರ್ಶ ಕಂಚಿದೈಕ್ಷ್ವಾಕಃ ತಪಸ್ಯಂತಮಧೋಮುಖಮ್ ॥ ೪೯ ॥**

ಆ ಬಳಿಕ ಇಕ್ಷ್ವಾಕುವಂಶ ಸ್ತಂಭವನು, ಒಂದು ಮರದ ಕೊಂಬೆಯೊಂದರಲ್ಲಿ ತಲೆಕೆಳಗಾಗಿ ಜೋತು, ಅಧೋಮುಖನಾಗಿ ತಪಸ್ಸು ಮಾಡುತ್ತಿರುವ ಓರ್ವ ನಾಗರಿಕನನ್ನು ಕಂಡು ಬಳಿ ಸಾರಿದನು. ಆ ತಾಪಸಿಯ ಕಣ್ಣುಗಳು ಬಳಿಯಲ್ಲಿರುವ ಯಜ್ಞದಿಂದೇಳುವ ಹೋಮಧೂಮದಿಂದ (ಹೊಗೆಯಿಂದ) ಕೆಂಪಾಗಿದ್ದುವು (ಕಿಸುಗಣ್ಣು). ಅವನು ಧೂಮಪಾನವನ್ನು ಮಾಡುತ್ತ ಅತ್ಯಂತ ಕಷ್ಟದಿಂದ ತಪಸ್ಸಾಧನೆಯನ್ನು ಮಾಡುತ್ತಿದ್ದನು. ಅವನು ಯಜ್ಞ ಕುಂಡದಿಂದ ಏಳುವ ಹೊಗೆಯನ್ನು ಕುಡಿಯುತ್ತ ದುಷ್ಕರವಾದ ತಪಸ್ಸನ್ನು ಆಚರಿಸುತ್ತಲಿದ್ದನು. ಅವನ ತಲೆಕೂದಲು ತೆಂಗಿನಕಾಯಿಯ ನಾರಿನಂತೆ ಜೋತುಬಿದ್ದಿತ್ತು.

"ಕೋಪದಾದಣ್" ಇತ್ಯಣ್ಕೃತೇ "ದಂಡಿನಾಯನ" ಇತ್ಯಾದಿ ನೋಕಾರಲೋಪ ನಿಪಾತಃ (ಪಾಣಿನಿ) ॥

**50. ಪೃಷ್ಟನಾಮಾನ್ವಯೋ ರಾಜ್ಞಾ ಸ ಕಿಲಾಚಷ್ಟಧೂಮಪಃ ।**
**ಆತ್ಮಾನಂ ಶಂಬುಕಂ ನಾಮ ಶೂದ್ರಂ ಸುರಪದಾರ್ಥಿನಮ್ ॥ ೫೦ ॥**

ರಾಘವನು ಕೋಪದಿಂದ ಆ ತಾಪಸಿಯ ಹೆಸರು ಕುಲ, ಗೋತ್ರ(ಪ್ರವರ)ಗಳನ್ನು ವಿಚಾರಿಸಿದನು. ಅವನು ತಾನು ಶಂಭುಕನೆಂಬ ಹೆಸರುಳ್ಳ ಶೂದ್ರಜಾತಿಯವನೆಂದು ಅಮರಪದವಿಯನ್ನು ಬಯಸಿ ಕಠಿಣ ತಪಸ್ಸಾಚರಿಸುವುದಾಗಿ ಹೇಳಿದನು.

ಧೂಮಂ ಪಿಬತೀತಿ ಧೂಮಪಃ—"ಸುಪಿ" ಇತಿ ಯೋಗವಿಭಾಗಾತ್ಕ ಪ್ರತ್ಯಯಃ—ಸುರಪದಾರ್ಥಿನಂ=ಸ್ವರ್ಗಾರ್ಥಿನಮ್ ಅನೇನಪ್ರಯೋಜನಮಪಿ ಪೃಷ್ಟಮಿತಿಜ್ಞೇಯಮ್

**51. ತಪಸ್ಯನಧಿಕಾರಿತ್ವಾತ್ ಪ್ರಜಾನಾಂ ತಮಘಾವಹಮ್ ।**
**ಶೀರ್ಷಚ್ಛೇದ್ಯಂ ಪರಿಚ್ಛಿದ್ಯ ನಿಯಂತಾ ಶಸ್ತ್ರಮಾದದೇ ॥ ೫೧ ॥**

ಈತನಿಗೆ ತಪಸ್ಸನ್ನು ಆಚರಿಸುವ ಹಕ್ಕು ಇರುವುದಿಲ್ಲ. ಇವನು ಸಮಾಜದ ಕಟ್ಟು ಕಟ್ಟಳೆಗಳನ್ನು ಮೀರುತ್ತಿರುವನು. ಇವನು ಶಾಸ್ತ್ರಾಧಾರದಂತೆ ತಪಸ್ಸಿಗೆ ಅನಧಿಕಾರಿ. ಇವನ ಧೋರಣೆಯಿಂದ, ವಿರುದ್ಧ ಕರ್ಮಾಚರಣೆಯಿಂದ ಜನರು ದುಃಖಿಗಳಾಗುತ್ತಿರು

ವರು. ಇವನಿಗೆ ತಕ್ಕ ಶಿಕ್ಷೆಯೆಂದರೆ ಮರಣದಂಡನೆಯೊಂದೇ ಎಂದು ಮಹಾರಾಜನಾದ ರಾಜಾರಾಮನು ತೀರ್ಮಾನಿಸಿ ಕೈಯಲ್ಲಿ ಶಸ್ತ್ರವನ್ನು ಧರಿಸಿದನು.

ಅಘಾವಹಂ=ದುಃಖಾವಹಂ—"ಶೀರ್ಷಚ್ಛೇದಾದಾದ್ಯಚ್ಚ" ಇತಿ ಯತ್ಪ್ರತ್ಯಯಃ–ಪರಿಚ್ಛಿದ್ಯ = ನಿಶ್ಚಿತ್ಯ—ನಿಯಂತಾ = ರಕ್ಷಕೋ (ರಾಮಃ) ॥

**52. ಸ ತದ್ವಕ್ತ್ರಂ ಹಿಮಕ್ಲಿಷ್ಟಕಿಂಜಲ್ಕಮಿವ ಪಂಕಜಮ್ ।**
**ಜ್ಯೋತಿಷ್ಕಣಾಹತಶ್ಮಶ್ರುಕಂಠನಾಲಾದಪಾತಯತ್ ॥ ೫೨ ॥**

ಹಿಮ ಸುರಿದು ನಾಶವಾಗಿರುವ ಜರಡು ತಾವರೆ ಹೂವು ನಾಳದಿಂದ ಪ್ರತ್ಯೇಕವಾಗಿ ಬೀಳುವಂತೆ ರಾಮಬಾಣಹತಿಗೆ, ರುಂಡವು ಕಂಠನಾಳದಿಂದ ಪ್ರತ್ಯೇಕಗೊಂಡು ಧರೆಗೆ ಉರುಳಿತು. ಕೆಲವೇ ಉಳಿದು ವಿಕಾರ ಹೊಂದಿದ ಕೂದಲಿರುವ ತಲೆ, ಕಿಡಿ ಸುಟ್ಟ ಮೀಸೆಯಿಂದ ಅಲಂಕೃತ ಮುಖಪದ್ಮವು ಅಂದು ಪತನಗೊಂಡಿತು. ಅವನ ಹೃದಯಪುಂಜದಿಂದ ದೇದೀಪ್ಯಮಾನವಾದ ಆತ್ಮಜ್ಯೋತಿಯು ನೆಲೆಯ ಕಡೆಗೆ ಅಯನ ಮಾಡುತ್ತ ಹೊರಟಿತು.

ಜ್ಯೋತಿಷ್ಕಣೈಃ = ಸ್ಫುಲಿಂಗೈರಾಹತಾನಿ — ಹಿಮಕ್ಲಿಷ್ಟಕಿಂಜಲ್ಕಂ ಪಂಕಜಮಿವ—ಕಂಠ ಏವ ನಾಲಂ ತಸ್ಮಾದಪಾತಯತ್ ॥

**53. ಕೃತದಂಡಃ ಸ್ವಯಂ ರಾಜ್ಞಾ ಲೇಭೇ ಶೂದ್ರಃ ಸತಾಂ ಗತಿಮ್ ।**
**ತಪಸಾ ದುಶ್ಚರೇಣಾಪಿ ನ ಸ್ವಮಾರ್ಗವಿಲಂಘಿನಾ ॥ ೫೩ ॥**

ರಾಷ್ಟ್ರಪತಿಯಾದ (ರಾಷ್ಟ್ರಾಧ್ಯಕ್ಷನಾದ), ಪ್ರಜಾರಕ್ಷಕನಾದ (ಪ್ರಜಾರಂಜಕನಾದ), ವಿಭು(ಪ್ರಭು) ಶ್ರೀರಾಮಚಂದ್ರನು ಸ್ವತಃ ದಂಡಿಸಿದುದರಿಂದ, ಆ ದಿವ್ಯಮಂಗಳತೇಜೋರೂಪವಾದ ಆತ್ಮಲಿಂಗವು ಭಗವಂತನ ದಿವ್ಯಧಾಮದ ಕಡೆಗೆ ಹೊರಟಿತು. ಸದ್ಗತಿಯನ್ನು (ಮೋಕ್ಷವನ್ನು) ಪಡೆಯಿತು. ದುಷ್ಕರವಾದ ತಪಸ್ಸಿನಿಂದ ಸಾಧ್ಯವಾಗದ ಅಮರ ಪದವಿಯು ರಾಮಬಾಣದಿಂದ ಸಾರ್ಥಕತೆಯನ್ನು ಪಡೆಯಿತು. ಏಕೆಂದರೆ ಅಂದಿನ ಸಾಮಾಜಿಕ ಕಟ್ಟಳೆಯನ್ನು (ಸಾಮಾಜಿಕ ವ್ಯವಸ್ಥೆಯನ್ನು) ಮೀರಿ ಆ ನಾಗರಿಕನು ಕಠಿಣವಾದ ತಪಸ್ಸನ್ನು ಆಚರಿಸುತ್ತಿದ್ದನು. ಆದುದರಿಂದ ಆತನು ದಂಡನೆಗೆ ಅರ್ಹನು. ರಾಜನಾದರೂ ಸ್ವೇಚ್ಛೆಯಿಂದ ನಡೆಯುವಂತಿಲ್ಲ.

ದುಶ್ಚರೇಣಾಪಿ = ಸ್ವಮಾರ್ಗವಿಲಂಘಿನಾ — ತಪಸಾ ನ ಲೇಭೇ—ಅತ್ರ ಮನುಃ "ರಾಜಭಿಕೃತದಂಡಾಸ್ತು ಕೃತ್ವಾ ಪಾಪಾನಿ ಮಾನವಾಃ—ನಿರ್ಮಲಾಃ ಸ್ವರ್ಗಮಾಯಾಂತಿ ಸಂತಃ ಸುಕೃತಿನೋ ಯಥಾ" ಇತಿ ॥

**54. ರಘುನಾಥೋಽಪಗಸ್ತ್ಯೇನ ಮಾರ್ಗೇ ಸಂದರ್ಶಿತಾತ್ಮನಾ ।**
**ಮಹೌಜಸಾ ಸಂಯುಯುಜೇ ಶರತ್ಕಾಲ ಇವೇಂದುನಾ ॥ ೫೪ ॥**

ಲೋಕಾಭಿರಾಮನಾದ ರಘುನಾಥನು ಅಂದು ಮಾರ್ಗಮಧ್ಯದಲ್ಲಿ ಕುಂಭಸಂಭವನಾದ ಸಾಗರವನ್ನು ಆಪೋಶನಮಾಡಿದ ಮಹಾತೇಜಸ್ವಿಗಳಾದ ಬ್ರಹ್ಮಋಷಿ ಅಗಸ್ತ್ಯರನ್ನು ಸಂಧಿಸಿದನು. ಅವರಿಬ್ಬರ ಚರಿತ್ರಾರ್ಹವಾದ ಭೇಟಿಯು ಷೋಡಶ ಕಲೆಯಿಂದ

ಒಪ್ಪುವ ರಾತ್ರಿಯು ರಾಜನಾದ ಚಂದ್ರಮನು ಶರತ್ಕಾಲವನ್ನು ಕೂಡಿಕೊಳ್ಳುವಂತೆ ಅಥವಾ ಮೋಡವಿಲ್ಲದ ತಿಳಿಯಾದ ಬಾನಿನಲ್ಲಿ ಶರತ್ಕಾಲದ ಸುಸಮಯ ಪೂರ್ಣತೇಜ ಚಂದ್ರಮನು ವಿರಾಜಿಸುವಂತೆ ಶೋಭಿಸಿತು. ಆ ತೆರನಾಗಿ ಆ ಇಬ್ಬರು ತೇಜಸ್ವಿಗಳು ಒಟ್ಟಾದರು. ಉಷಃಕಾಲದಲ್ಲಿ ಬಾಲಸೂರ್ಯನು ಮೂಡಣ ದಿಸೆಯಲ್ಲಿ ವಿರಾಜಿಸುವಂತೆ ಅಥವಾ ಪ್ರಸನ್ನವಾದ ಆಕಾಶವೂ ಪ್ರಶಸ್ತವಾದ ಸಾಗರವೂ ಒಂದಾಗುವಂತೆ ಭೇಟಿಯಾದರು.

ಮಾರ್ಗಸಂದರ್ಶಿತಾತ್ಮನಾ=ಮಹೌಜಸಾ—ಇಂದುನಾ ಶರತ್ಕಾಲ ಇವ ಸಮಯುಯುಜೇ = ಸಂಗತಃ—ಕ್ಷುಭ್ನಾದಿತ್ವಾಣ್ ಣತ್ವಾ ಭಾವಃ—

**55. ಕುಂಭಯೋನಿರಲಂಕಾರಂ ತಸ್ಮೈ ದಿವ್ಯಪರಿಗ್ರಹಮ್ ।**
**ದದೌ ದತ್ತಂ ಸಮುದ್ರೇಣ ಪೀತೇನೇವಾತ್ಮನಿಷ್ಕ್ರಯಮ್ ॥ ೫೫ ॥**

ಆ ಕೊಡದಲ್ಲಿ ಜನಿಸಿದ ಅಗಸ್ತ್ಯಮಹರ್ಷಿಗಳು ತಾನು ಅಂದು ಕೋಪದಿಂದ (ತನ್ನ ಆತ್ಮಬಲದಿಂದ) ಒಂದೇ ಗುಟುಕಿನಲ್ಲಿ ಕುಡಿದು ಅನಂತರ ಶಾಂತರಾಗಿ, ಸಾವಕಾಶವಾಗಿ ಆ ಸಾಗರದ ನೀರನ್ನು ಪುನಃ ಉಗುಳಿ ಯಥಾಸ್ಥಾನದಲ್ಲಿ ನೆಲೆಗೊಳಿಸಿದರು. ಅಂತಹ ಮಹಾತ್ಮರಾದ ಅಗಸ್ತ್ಯಮಹರ್ಷಿಗಳಿಗೆ ಉಪಕಾರದ ಕೊಡುಗೆಯಾಗಿ, ತನ್ನನ್ನು ಮುಕ್ತಿಗೊಳಿಸಿದ ನೆನಪಿಗಾಗಿ ರತ್ನಹಾರವೊಂದನ್ನು ಸಮುದ್ರರಾಜನು ಅರ್ಪಿಸಿದ್ದನು. ಅದನ್ನು ಬ್ರಹ್ಮಋಷಿಗಳಾದ ಅಗಸ್ತ್ಯರು ಭಗವಾನ್ ಶ್ರೀರಾಮಚಂದ್ರನು ಇತ್ತು ಕೃತಕೃತ್ಯರಾದ ಆ ರತ್ನಹಾರವು ದೇವತೆಗಳು, ಇಂದ್ರಾದಿ ಲೋಕಪಾಲಕರು ಧರಿಸಲು ಯೋಗ್ಯವಾದುದಾಗಿತ್ತು.

ಕುಂಭಯೋನಿ = ಅಗಸ್ತ್ಯಃ—ಪೀತೇನ ಸಮುದ್ರೇಣಾತ್ಮ ನಿಷ್ಕ್ರಯಮಿವಾತ್ಮಮೋಚನಮೂಲ್ಯಮಿವ ದತ್ತಮ್—ಅತ ಏವ ಪರಿಗ್ರಹ್ಯಾತ್ ಇತಿ ವ್ಯುತ್ ಪತ್ಯಾದಿವ್ಯಪರಿಗ್ರಹಃ—

**56. ತಂ ದಧನ್ ಮೈಥಿಲೀ ಕಂಠ ನಿರ್ವ್ಯಾಪಾರೇಣ ಬಾಹುನಾ ।**
**ಪಶ್ಚಾನ್ನಿವವೃತೇ ರಾಮಃ ಪ್ರಾಕ್ ಪರಾಸುರ್ದ್ವಿಜಾತ್ಮಜಃ ॥ ೫೬ ॥**

ಶ್ರೀರಾಮನು ಅಯೋಧ್ಯಾನಗರವನ್ನು ಪ್ರವೇಶಿಸುವ ಮೊದಲೇ ಆ ವಿಪ್ರೋತ್ತಮನ ಮಗನು ಜೀವಿತನಾಗಿದ್ದನು. ಶ್ರೀರಾಮನು ತನ್ನ ಸುಂದರವಾದ ಬಾಹುಗಳಲ್ಲಿ ಕುಂಭಸಂಭವರಾದ ಅಗಸ್ತ್ಯರು ಉಡುಗೊರೆಯಾಗಿ ಕೊಟ್ಟ ಆ ರತ್ನಹಾರವನ್ನು ಧರಿಸಿದ್ದನು. ಆ ಬಾಹುವಾದರೋ ಇದೀಗ ಸ್ನೇಹಮಯಿಯಾದ ಮೈಥಿಲಿಯ ಕಂಠಪ್ರದೇಶವನ್ನು (ಕುತ್ತಿಗೆಯನ್ನು) ಅಪ್ಪಿ ಸುತ್ತಿಕೊಳ್ಳುವ ತನ್ನ ಹಿಂದಿನ ವ್ಯಾಪಾರಕ್ಕೆ ಮಂಗಳವನ್ನು ಹಾಡಿತ್ತು. ಹೀಗೆ ಮೈಥಿಲೀ ಕಂಠ ನಿರ್ವ್ಯಾಪಾರ ಬಾಹುಗಳಲ್ಲಿ ಆ ಒಡವೆಯು ಅಲಂಕಾರವಾಗಿ ಎಸೆದಿತ್ತು.

ಮೈಥಿಲೀಕಂಠನಿರ್ವ್ಯಾಪಾರೇಣ ಬಾಹುನಾ — ಪರಾಸು = ಮೃತೋ—ಪ್ರಾಕ್ = ರಾಮಾತ್ ಪೂರ್ವ ॥

57. ತಸ್ಯ ಪೂರ್ವೋದಿತಾಂ ನಿಂದಾಂ ದ್ವಿಜಃ ಪುತ್ರಸಮಾಗತಃ ।
ಸ್ತುತ್ಯಾ ನಿವರ್ತಯಾಮಾಸ ತ್ರಾತುರ್ವೈವಸ್ವತಾದಪಿ ॥ ೫೭ ॥

ಆ ಬ್ರಾಹ್ಮಣೋತ್ತಮನು ಪುನಃ ಜೀವಿಸಿದ ತನ್ನ ಪುತ್ರನನ್ನು ಕೂಡಿಕೊಂಡು ತನ್ನ ಹಿಂದಿನ ತೆಗಳಿಕೆಯ ನುಡಿಗಳನ್ನು ಅಲ್ಲಗಳೆದನು. ಅವನು ನೃಪನಾದ ರಘುರಾಮಚಂದ್ರನು ಯಮಧರ್ಮರಾಯನನ್ನು ಸೋಲಿಸಿ ಪ್ರಾಣವನ್ನು ತರಬಲ್ಲನು, ಅವನ ಕಟ್ಟಳೆಗೆ ಕೃತಾಂತನೂ (ಅಂತಕ, ಯಮ) ಹೊರತಾಗಿಲ್ಲ. ಅವನ ಗುಣಗಾನ ಮಾಡುತ್ತ ನಲಿದನು.

ಪುತ್ರಸಮಾಗತಃ=ಪುತ್ರೇಣ ಸಂಗತೋ ದ್ವಿಜೋ—ತ್ರಾತುಃ = ರಕ್ಷಕಸ್ಯ—"ಭೀತ್ರಾರ್ಥಾನಾಂ ಭಯ ಹೇತುಃ" ಇತ್ಯಪಾದಾನತ್ ಪಂಚಮೀ—ಪೂರ್ವೋದಿತಾಂ = ಪೂರ್ವೋಕ್ತಾಂ—ನಿಂದಾಂ = ಸ್ತುತ್ಯಾ ನಿವರ್ತಯಾಮಾಸ ॥

58. ತಮಧ್ವರಾಯ ಮುಕ್ತಾಶ್ವಂ ರಕ್ಷಃ ಕಪಿನರೇಶ್ವರಾಃ ।
ಮೇಘಾಃ ಸಸ್ಯಮಿವಾಂಭೋಭಿರಭ್ಯವರ್ಷನ್ನುಪಾಯನೈಃ ॥ ೫೮ ॥

ರಾವಣ, ಕುಂಭಕರ್ಣ, ಇಂದ್ರಜಿತು, ಐರಾವಣ, ಮೈರಾವಣ ಮೊದಲಾದ ರಾಕ್ಷಸರನ್ನು ಬುಡಸಹಿತ (ಸಮೂಲ) ನಾಶಮಾಡಿ ಬಂದ ಬ್ರಹ್ಮಹತ್ಯಾಪಾಪದ ಪರಿಹಾರಾರ್ಥವಾಗಿ ರಘುಕುಲೋತ್ತಮನು ಅಶ್ವಮೇಧಯಾಗವನ್ನು ಕೈಕೊಂಡನು. ಭಾನುಕುಲಾವತಂಸನ ಕುದುರೆಯನ್ನು ಭರತಖಂಡದಲ್ಲಿರುವ ಛಪ್ಪನ್ನಾರು (56) ದೇಶಗಳನ್ನು ಸ್ವೇಚ್ಛೆಯಿಂದ ಸುತ್ತಿಬರಲು ಕಳುಹಿಸಿ ಅದರ ಬೆಂಗಾವಲಿಗೆ ತ್ರಿಲೋಕವೀರನಾದ ಶತ್ರುಘ್ನನು ಪಡೆಸಹಿತ ನಡೆದನು. ಆ ಶತ್ರುಘ್ನನ ಸೇನಾವಾಹಿನಿಯಲ್ಲಿ ಯಜ್ಞಭಂಜಕರಾದ ರಾಕ್ಷಸರೂ ಯಜ್ಞರಕ್ಷಕರಾಗಿ ಹೊರಟಿದ್ದರು. ಆ ಪಡೆಯಲ್ಲಿ ನರರು, ವಾನರರು, ಅಸುರರು ಎಲ್ಲಾ ವರ್ಗದ ಜನರೂ, ಸಮಸ್ತರೂ, ಶ್ರೀರಾಮಕಾರ್ಯಕ್ಕಾಗಿ, ಸಂಯುಕ್ತರಾಗಿ, (ಭೇದ ಭಾವ ಮರೆತು) ನಡೆದರು. ಮೋಡಗಳು (ಮೇಘಗಳು) ಸಸ್ಯಕೋಟಿಗೆ ಮಳೆಗರೆದು (ಅಂಬುರಾಶಿಯನ್ನು ಸುರಿದು), ಸಂತೋಷಪಡಿಸುವಂತೆ, ವಿವಿಧ ದೇಶದ (ಪ್ರದೇಶದ) ಅಧಿಪತಿಗಳು ಕಪ್ಪಕಾಣಿಕೆಗಳ ಸುರಿಮಳೆಗರೆದರು.

ಅಧ್ವರಾಯಾಶ್ವಮೇಧಾಯ ಮುಕ್ತಾಶ್ವಂ ತಂ ರಾಮಂ ರಕ್ಷಃ ಕಪಿನರೇಶ್ವರಾಃ = ಸುಗ್ರೀವವಿಭೀಷಣಾದಯೋ ರಾಜಾನಶ್ಚ—ಮೇಘಾ ಅಂಭೋಭಿಃ ಸಸ್ಯಮಿವ—ಉಪಾಯ ನೈರಭ್ಯವರ್ಷನ್ ॥

59. ದಿಗ್ಭ್ಯೋ ನಿಯಂತ್ರಿತಾಶ್ಚೈನಮಭಿಜಗ್ಮುರ್ಮಹರ್ಷಯಃ ।
ನ ಭೌಮಾನ್ಯೇವ ಧಿಷ್ಣ್ಯಾನಿ ಹಿತ್ವಾ ಜ್ಯೋತಿರ್ಮಯಾನ್ಯಪಿ ॥ ೫೯ ॥

ಆ ಅಶ್ವಮೇಧಯಜ್ಞದ ಸಾಂಗೋಪಾಂಗ ಕ್ರಿಯೆಗಳನ್ನು ನಡೆಸಲು ಅಧ್ವರ್ಯುಗಳು ಹೋತೃಗಳು, ಉದ್ಗಾತೃಗಳಾಗಿ ಕಾರ್ಯನಿರ್ವಹಿಸಲು ಜಗತ್ತಿನ ನಾಲ್ಕು ದಿಕ್ಕುಗಳಿಂದ ಋಷಿಮುನಿಗಳು ಆಗಮಿಸಿದರು. (ವಸಿಷ್ಠ, ವಾಮದೇವ, ಭಾರದ್ವಾಜ, ಗೌತಮ) ಭೂಮಿಯಿಂದ ಮಾತ್ರವಲ್ಲ ಮಹರ್ಷಿಗಳು ಆಕಾಶದಿಂದ, ನಕ್ಷತ್ರಲೋಕಗಳಿಂದ,

ಸಪ್ತರ್ಷಿಮಂಡಲದಿಂದ, ದಿವ್ಯಲೋಕಗಳಿಗೆ ಸಂಬಂಧಿಸಿದ ಅತ್ರಿ, ಅಂಗೀರಸ, ಪುಲಹ, ಪುಲಸ್ತ್ಯ, ಭೃಗು, ಕಾಶ್ಯಪ, ಬೃಹಸ್ಪತಿ, ನಾರದ ಮೊದಲಾದ ವೇದವೇತ್ತರಾದ ಬ್ರಹ್ಮರ್ಷಿಗಳ ಗಡಣ ಯಜ್ಞವೇದಿಯ ಬಳಿ ನೆರೆದಿತ್ತು. ಆ ಮಹರ್ಷಿಗಳಲ್ಲಿ ಕೆಲವರು ಆಕಾಶಕಾಯಗಳಾದ ನಕ್ಷತ್ರಗಳಲ್ಲಿ ಜ್ಯೋತಿರೂಪರಾಗಿ, ಜ್ಯೋತಿಃಸ್ವರೂಪರಾಗಿ ಕಾಣಿಸಿಕೊಳ್ಳುತ್ತಿರುವವರು.

ನಿಮಂತ್ರಿತಾ = ಆಹೂತಾ ಮಹರ್ಷಯಶ್ಚ ಸಂಬಂಧೀನಿಭೌಮಾನಿ ಧಿಷ್ಣ್ಯಾನಿ ಸ್ಥಾನಾನ್ಯೇವನ—ಧಿಷ್ಣ್ಯಂ ಸ್ಥಾನೇಗೃಹೇ ಭೇಽಗ್ನೌ'' ಇತ್ಯಮರಃ—ಕಿಂತು ಜ್ಯೋತಿರ್ಮಯಾನಿ=ನಕ್ಷತ್ರರೂಪಾಣಿ ಧಿಷ್ಣ್ಯಾನ್ಯಪಿ ಹಿತ್ವಾ ದಿಗ್ಭ್ಯ ಏನಂ ರಾಮಮಭಿಜಗ್ಮುಃ ॥

**60. ಉಪಶಲ್ಯನಿವಿಷ್ಟೈಸ್ತೈಃ ಚತುರ್ದ್ವಾರಮುಖೀ ಬಭೌ ।**
**ಅಯೋಧ್ಯಾ ಸೃಷ್ಟಲೋಕೇವ ಸದ್ಯಃ ಪೈತಾಮಹೀ ತನುಃ ॥ ೬೦ ॥**

ನಾಲ್ಕು ಮುಖಗಳುಳ್ಳ ಪಟ್ಟಣದಂತೆ ಕಾಣುತ್ತ, ನಾಲ್ಕು ಮಹಾದ್ವಾರಗಳುಳ್ಳ ಅಯೋಧ್ಯಾನಗರಿ ಆ ನಗರಿಯ ಹೊರಭಾಗದಲ್ಲಿರುವ ಬಯಲಿನಲ್ಲಿ (ಹೊರವಳಯದಲ್ಲಿ) ವಿರಚಿತವಾದ ಯಜ್ಞವೇದಿಕೆಯ ಬಳಿ ವೇದವೇತ್ತರಾದ ಸಹಸ್ರಾರು ಮಂದಿ ಬ್ರಹ್ಮರ್ಷಿಗಳು ಸಾಕ್ಷಾತ್ ಬ್ರಹ್ಮದೇವರಂತೆ (ಲೋಕಪಿತಾಮಹ) ಉಪಸ್ಥಿತರಾಗಿದ್ದರು. ಅವರು ತೆರೆದ ಬಾಯಿಯಿಂದ ರಾಗವಾಗಿ ಸಾಮವೇದ ಮಂತ್ರಗಳನ್ನು ಘೋಷಿಸುತ್ತಿದ್ದರೆ ಸ್ವತಃ ಸೃಷ್ಟಿಕರ್ತನೇ ಅಲ್ಲಿ ಕುಳಿತು ಸುತ್ತುಮುತ್ತಲಿನ ಸೃಷ್ಟಿಕಾರ್ಯವನ್ನು ಹೊಸತಾಗಿ ಮಾಡುವಂತೆ ತೋರುತ್ತಲಿತ್ತು. ಆ ಪಿತಾಮಹನ (ಬ್ರಹ್ಮದೇವರ) ತನುವಿನ ಸುತ್ತಮುತ್ತ ಹೊಸತಾಗಿ ಸೃಷ್ಟಿ ಜೀವಜಾಲಗಳು ಆವರಿಸಿ ಜನಿಸಿರುವಂತೆ ಭಾಸವಾಗುತ್ತಿತ್ತು.

ಚತ್ವಾರಿ ದ್ವಾರಾಣ್ಯೇವ ಮುಖಾನಿ ಯಸ್ಯಾಃ ಸಾ ಚತುರ್ದ್ವಾರ ಮುಖ್ಯಯೋಧ್ಯಾ—ಉಪಶಲ್ಯೇಶು ಗ್ರಾಮಾಂತೇಷು ನಿವಿಷ್ಟೈಃ—ಗ್ರಾಮಾಂತ ಉಪಶಲ್ಯಂಸ್ಯಾತ್'' ಇತ್ಯಮರಃ—ಸದ್ಯಃ ಸೃಷ್ಟಲೋಕಾಪಿತಾಮಹಸ್ಯೇಯಂ ಪೈತಾಮಹೀತನುಮೂರ್ತಿರಿವ—

**61. ಶ್ಲಾಘ್ಯಸ್ತ್ಯಾಗೋಽಪಿ ವೈದೇಹ್ಯಾಃ ಪತ್ಯುಃ ಪ್ರಾಗ್ವಂಶವಾಸಿನಃ ।**
**ಅನನ್ಯಜಾನೇಃ ಸೈವಾಸೀತ್ ಯಸ್ಮಾಜ್ಜಾಯಾ ಹಿರಣ್ಮಯೀ ॥ ೬೧ ॥**

ಪ್ರಾಗ್ವಂಶವಾಸಿತನಾದ ಹವಿರ್ಗೃಹದ ಪೂರ್ವಭಾಗದಲ್ಲಿ ಕಟ್ಟಿಸಿರುವ ಮನೆಯೊಂದರಲ್ಲಿ (ನಿಕೇತನ) ಯಜ್ಞದೀಕ್ಷಿತನಾದ ಶ್ರೀರಾಮಚಂದ್ರನು ವಾಸಿಸುತ್ತಲಿದ್ದನು. ಅದರಲ್ಲಿ ಹೇಮದಿಂದ ಸುವರ್ಣದಿಂದ ಮಾಡಲಾಗಿರುವ ತನ್ನ ಭಾರ್ಯೆ ಸೀತೆಯ ವಿಗ್ರಹದೊಂದಿಗೆ ವಾಸಿಸುತ್ತ ಅಶ್ವಮೇಧಯಾಗವನ್ನು ಅನುಚೂನವಾಗಿ ನಡೆಸುತ್ತಿದ್ದನು. (ಅಸಿಧಾರಾವ್ರತಮನಸ್ಕನಾಗಿ, ನಿಜವೈರಾಗ್ಯದಿಂದ ವಿಲಸಿತನಾಗಿ) ವೈದೇಹಿಯನ್ನು ಶ್ರೀರಾಮನು ಪರಿತ್ಯಾಗ ಮಾಡಿದರೂ ಈಗ ಆಕೆಯ ಹೊನ್ನಪುತ್ಥಳಿಯನ್ನು (ಹೊನ್ನ ಮೂರ್ತಿ) ವಿರಚಿಸಿ ಅದನ್ನು ತನ್ನ ಅರ್ಧಾಂಗಿಯಾಗಿ ಸ್ವೀಕರಿಸಿ ಯಜ್ಞವೇದಿಕೆಯ ಬಳಿಯ ಯಾಗಶಾಲೆಯಲ್ಲಿ ನೆಲೆಗೊಳಿಸಿದ್ದನು. ಆ ಸೀತಾವಿಗ್ರಹವನ್ನು, ಜೀವಂತಸತಿಯೆಂದೇ ಭಾವಿಸಿ ಎಲ್ಲಾ ಯಜ್ಞಕಾರ್ಯಗಳಲ್ಲಿ ಭಾಗವಹಿಸುತ್ತಲಿದ್ದನು.

ತಾನು ಎರಡನೆಯ ವಿವಾಹವಾಗದೆ ತನ್ನ ಪತಿನಿಷ್ಠೆಯನ್ನು ಮಾತ್ರ ತ್ಯಾಗಮಾಡದೆ ಮರ್ಯಾದಾಪುರುಷೋತ್ತಮನೆಂಬ ಪಾವನ ನಾಮಕ್ಕೆ ಒಳಗಾಗಿದ್ದನು. ಅನ್ಯಕಾಂತಾ ವ್ಯಸನರಹಿತನಾಗಿ ಚಿನ್ನದಿಂದ ರಚಿತವಾದ ಸೀತಾವಿಗ್ರಹವನ್ನೇ ತನ್ನ ಸತಿಯನ್ನಾಗಿ ಸ್ವೀಕರಿಸಿ ಸೀತಾಪರಿತ್ಯಾಗ ಮಾಡಿದ ತಪ್ಪು ಒಪ್ಪಾಗುವಂತೆ ಮಾನವಲೋಕವು ತನ್ನನ್ನು ಕ್ಷಮಿಸುವಂತೆ ನಡೆದುಕೊಂಡುದು ಶ್ಲಾಘ್ಯವೆನಿಸುತ್ತದೆ. ಗೃಹಸ್ಥಾಶ್ರಮ ಧರ್ಮದ ನಿಯಮದಂತೆ ಪತ್ನಿಯಿಂದ (ಜಾಯೆಯಿಂದ) ಒಡಗೂಡಿ ಅಶ್ವಮೇಧ ಅಧ್ವರದ ವಿಧಿ ವಿಧಾನಗಳನ್ನು ಕೈಗೊಂಡನು.

ವೈದೇಹ್ಯಾಸ್ತ್ಯಾಗೋಽಪಿ ಶ್ಲಾಘ್ಯೋ = ವರ್ಣ್ಯ ಏವ—ಯಸ್ಮಾತ್ ಪ್ರಾಗ್ವಂಶಃ ಪ್ರಾಚೀನಸ್ಥೂಣೋ = ಯಜ್ಞಶಾಲಾವಿಶೇಷಃ—ನಾಸ್ತ್ಯನ್ಯಾಜಾಯೋ ಯಸ್ಯ ತಸ್ಯಾನ್ಯ ಜಾನೇಃ—ಜಾಯಾಯಾ ನಿಙ್ ಇತಿ ಸಮಾಸಾಂತೋ ನಿಙಾದೇಶಃ (ಪಾಣಿನಿ)— ಹಿರಣ್ಮಯೀ = ಸೌವರ್ಣೀ "ದಂಡಿನಾಯನ" ಆದಿಸೂತ್ರೇಣ ನಿಪಾತೇಃ—(ಪಾಣಿನಿ)— ಸಾನಿಧ್ಯೈವಜಾಯಾ = ಪತ್ನ್ಯಾಸೀತ್—ಕವಿವಾಕ್ಯಮೇತತ್ ॥

62. ವಿಧೇರಧಿಕಸಂಭಾರಃ ತತಃ ಪ್ರವವೃತೇ ಮಖಃ ।
ಆಸನ್ಯತ್ರ ಕ್ರಿಯಾವಿಘ್ನಾ ರಾಕ್ಷಸಾ ಏವ ರಕ್ಷಿಣಃ ॥ ೬೨ ॥

ಹಾಗೆಂದು ಧರ್ಮಸೂತ್ರದಲ್ಲಿ ಹೇಳಿದೆ. ಶ್ರೀರಾಮನ ಸತಿತ್ಯಾಗವೂ ಶ್ಲಾಘ್ಯವೆನಿಸಿತು ಧರೆಯಲ್ಲಿ. ಶಾಸ್ತ್ರದಲ್ಲಿ ಹೇಳಿದುದಕ್ಕಿಂತ ಅಧಿಕವಾದ ಪ್ರಮಾಣ ಸಂಭಾರದಿನಸಿಗಳು (ಪದಾರ್ಥಗಳು) ಸಂಗ್ರಹವಾಗಿದ್ದುದು ಶ್ರೀರಾಮಚಂದ್ರನು ನಡೆಸುವ ಯಾಗದ ಒಂದು ವೈಶಿಷ್ಟ್ಯವಾಗಿತ್ತು. ಆ ಯಜ್ಞಕ್ಕೆ (ಆ ಮಖಕ್ಕೆ) ಯಾವ ವಿಘ್ನ, ಆತಂಕಗಳ ಭಯವಿರಲಿಲ್ಲ. ಏಕೆಂದರೆ ಯಜ್ಞಭಂಜಕರಾದ ರಾಕ್ಷಸರೇ ಅದರ ರಕ್ಷಕರಾಗಿ ಹೊಣೆಗಾರಿಕೆಯನ್ನು ಅರಿತು ಕಾರ್ಯವೆಸಗುತ್ತಿದ್ದರು. ಅವರು ಕರ್ತವ್ಯಬದ್ಧರಾಗಿ ಸಂತಸದಿಂದ ಓಡಾಡುತ್ತ ಕಾರ್ಯವೆಸಗುತ್ತಿದ್ದರು.

ಪ್ರವವೃತೇ=ಪ್ರವೃತ್ತಃ—ವಿಹನ್ಯಂತ ಏಭಿರಿತಿ ವಿಘ್ನಾಃ ಪ್ರತ್ಯೂಹಾಃ—ಘಞರ್ಥೇಕ ವಿಧಾನಮ್" ಇತಿಕಃ (ವಾರ್ತಿಕ) ಕ್ರಿಯಾವಿಘ್ನಾ ಅನುಷ್ಠಾನವಿಘಾತಕಾ ರಕ್ಷಸಾ ಏವ ರಕ್ಷಿಣೋ ರಕ್ಷಕಾ ಆಸನ್ ॥

63. ಅಥ ಪ್ರಾಚೇತಸೋಪಜ್ಞಂ ರಾಮಾಯಣಮಿತಸ್ತತಃ ।
ಮೈಥಿಲೇಯೌ ಕುಶಲವೌ ಜಗತುರ್ಗುರುಚೋದಿತೌ ॥ ೬೩ ॥

ಆದಿಕವಿ ವಾಲ್ಮೀಕಿಯು ವಿರಚಿಸಿದ ಛಂದೋಬದ್ಧವಾದ ಆದಿಕಾವ್ಯವಾದ ರಾಮಾಯಣವನ್ನು, ವಾಲ್ಮೀಕಿ ಮಹರ್ಷಿಯ ಶಿಷ್ಯರಾದ ಸೀತಾಮಾತೆಯ ಮಕ್ಕಳಾದ ಲವಕುಶರು, ಗುರ್ವಾಜ್ಞೆಯಂತೆ (ಪ್ರಾಚೇತಸರ ಆಜ್ಞೆಯಂತೆ, ಪ್ರಾಚೇತಸ = ಹುತ್ತದಲ್ಲಿ ಹುಟ್ಟಿರುವ) ಅಯೋಧ್ಯೆಯ ರಾಜಬೀದಿಗಳಲ್ಲಿ ಹಾಡುತ್ತ ಮುನ್ನಡೆಯುತ್ತಿದ್ದರು. ಆ ಮಕ್ಕಳು ಕಿನ್ನರದ್ವಯರಂತೆ, ಗಾಯನಗಂಧರ್ವರಾದ ತುಂಬುರು, ನಾರದರಂತೆ, ಇಂಪಾದ ಧ್ವನಿಮಾಧುರ್ಯದಿಂದ (ಕಂಠಮಾಧುರ್ಯದಿಂದ) ಎಲ್ಲರ ಮನಸ್ಸನ್ನು ತಣಿಸುತ್ತ ಬಂದರು. ವಾಲ್ಮೀಕಿಮಹರ್ಷಿಗೆ ಗೋಚರವಾದ ರಾಮಾಯಣವನ್ನು ಆ ಬಾಲಕರು,

ತಾಳಬದ್ಧವಾಗಿ, ಭಾವಶುದ್ಧಿಯಿಂದ ಹಾಡುತ್ತ, ತಮ್ಮ ರಾಗಮಾಧುರ್ಯದಿಂದ ಎಲ್ಲರ ತನುಮನಗಳನ್ನು ಸೂರೆ ಮಾಡುತ್ತ ಜನರನ್ನು ಆಕರ್ಷಿಸಿದರು. ಆ ಹಾಡನ್ನು ಕೇಳಿ ಅಯೋಧ್ಯಾನಗರದ ನಾಗರಿಕರು ಮೈಮರೆತರು. ಅವರು ಪರಿವರ್ತರಾದರು. ಅವರ ಮನಸ್ಸು ಪರಿವರ್ತನೆಯಾಯಿತು. (ರಾಮಾಯಣ = ರಾಮನ ಅಯನ). [ಶ್ರೀರಾಮನ ಪಯಣದ (ಪ್ರವಾಸದ) ಕಥೆ].

ಅಥಮೈಥಿಲೇಯೌ = ಮೈಥಿಲೀತನಯೌ—"ಸ್ತ್ರೀಭ್ಯೋ ಢಕ್" ಕುಶಲವೌ ಗುರುಣಾ ವಾಲ್ಮೀಕಿನಾ ಚೋದಿತೌ=ಪ್ರೇರಿತೌ ಸಂತೌ। ಪ್ರಾಚೇತಸೋ=ವಲ್ಮೀಕಿಃ—ಉಪಜ್ಞಾಯತ = ಇತ್ಯುಪಜ್ಞಾ—"ಆತಶ್ಚೋಪಸರ್ಗೇ"—ಇತಿ ಕರ್ಮಣ್ಯಙ್ ಪ್ರತ್ಯಯಃ (ಪಾಣಿನಿ) ಪ್ರಾಚೇತಸಸ್ಯೋಪಜ್ಞಾ = ಪ್ರಾಚೇತಸೋಪಜ್ಞಮ್ + "ಉಪಜ್ಞಾ ಜ್ಞಾನಮಾದ್ಯಂ ಸ್ಯಾತ್" ಇತ್ಯಮರಃ—ಉಪಜ್ಞೋಪಕ್ರಮಂ ತದದ್ಯಾಚಿಖ್ಯಾಸಾಯಾಮ್" ಇತಿ ನಪುಂಸಕತ್ವಮ್—(ಪಾಣಿನಿ)—ರಾಮಸ್ಯಾಯನಂ ಚರಿತಂ = ರಾಮಾಯಣಂ ರಾಮಾಯಣಾಖ್ಯಂ ಕಾವ್ಯಂ—ಪೂರ್ವಪದಸಂಜ್ಞಾಯಾಮಗಃ ಇತಿ ಣತ್ವಮ್—(ಪಾಣಿನಿ)—ಗಾಯಂತೌ—ಲಿಟ್ ॥

**64. ವೃತ್ತಂ ರಾಮಸ್ಯ, ವಾಲ್ಮೀಕೇಃ ಕೃತಿಸ್ತೌ ಕಿನ್ನರಸ್ವನೌ ।**
**ಕಿಂ ತದ್ಯೇನ ಮನೋ ಹರ್ತುಮಲಂ ಸ್ಯಾತಾಂ ನ ಶೃಣ್ವತಾಮ್**
**॥ ೬೪ ॥**

ಶ್ರೀಮದ್‌ರಾಮಾಯಣವು ಶ್ರೀಸೀತಾರಾಮರ ಪವಿತ್ರವಾದ ಜೀವನ ಚರಿತೆ. ಶ್ರೀರಾಮನ ವೃತ್ತಾಂತ. ಅದನ್ನು ಬರೆದವರು ಆದಿಕವಿ ವಾಲ್ಮೀಕಿಮಹರ್ಷಿಗಳು. ಅದನ್ನು ಸುಶ್ರಾವ್ಯವಾಗಿ ಹಾಡುವವರು ಕಿನ್ನರಕಂಠದ ಶ್ರೀರಾಮಚಂದ್ರನತನೂಭವರಾದ ಸೀತಾಪುತ್ರರಾದ ಲವಕುಶರು ಎಂದಮೇಲೆ ಅದರ ಮನೋಹರತೆಯನ್ನು ಗುಣಧರ್ಮವನ್ನು ಹೇಳುವುದೇನಿದೆ. ಅದು ಸುಶ್ರಾವ್ಯವಾದ ಮಹಾಕಾವ್ಯ. ಆ ಆವಳಿ ಮಕ್ಕಳು ಭಾವಪೂರ್ಣವಾಗಿ, ಅರ್ಥಗರ್ಭಿತವಾಗಿ ಹಾಡುತ್ತಿದ್ದರೆ (ಹಾಡುಗಬ್ಬ = ಗೇಯ) ದೇವಗಾನಸುಧೆಯು ಮಹಾಪೂರವೇ ಭೂಮಿಗಿಳಿದಂತೆ (ಇಳಿದು ಬಾ ತಾಯಿ, ಇಳಿದು ಬಾ—ಕವಿವರ ಬೇಂದ್ರೆ)

ರಾಮಸ್ಯ ವೃತ್ತಂ = ವರ್ಣ್ಯಮ್—ವಾಲ್ಮೀಕೇಃ ಕೃತಿಃ ಕಾವ್ಯಮ್ ಗೇಯಮಿತಿ ಶೇಷಃ—ಕಿನ್ನರಸ್ವನೌ=ಕಿನ್ನರಕಂಠೌ ಗಾಯಕೌ—ಶೃಣ್ವತಾಂ ಮನೋಹರ್ತುಮಲಂ=ಶಕ್ತೌ—ಸರ್ವಸರಸಮಿತ್ಯರ್ಥಃ ॥

**65. ರೂಪೇ ಗೀತೇ ಚ ಮಾಧುರ್ಯಂ ತಯೋಸ್ತಜ್ಜ್ಞೈರ್ನಿವೇದಿತಮ್ ।**
**ದದರ್ಶ ಸಾನುಜೋ ರಾಮಃ ಶುಶ್ರಾವ ಚ ಕುತೂಹಲೀ ॥ ೬೫ ॥**

ಸಂಗೀತಶಾಸ್ತ್ರಜ್ಞರು, ಗಮಕ ಕಲಾ ಪ್ರೌಢಿಮೆಯನ್ನು ಪಡೆದ ಕಲಾವಿದರು ಹೇಳಿದ ಮಾತಿಗೆ ತಲೆದೂಗಿ ಆ ಸಹೋದರರಿಬ್ಬರನ್ನೂ ತನ್ನ ಆಸ್ಥಾನಕ್ಕೆ ಬರಮಾಡಿಕೊಂಡನು. ಆ ನೃಪೋತ್ತಮನು, ಭಾರತದ ಸಾಮ್ರಾಟನಾದ ಶ್ರೀರಾಮಚಂದ್ರನು ತನ್ನ ಅನುಜರೊಂದಿಗೆ (ಸಾನುಜ) ಕುತೂಹಲದಿಂದ ಆಲಿಸುತ್ತ ಅವರನ್ನು ಈಕ್ಷಿಸುತ್ತ ಆ ಕಾವ್ಯಧಾರೆ

ಯನ್ನು ಕೇಳುತ್ತ, ಕೇಳುತ್ತ ಆನಂದಸಾಗರದಲ್ಲಿ ತೇಲಾಡಿದನು. ತಜ್ಞರು ನಿವೇದಿಸಿದ ಬಾಲಕರ ರೂಪು ಸುಮಧುರವಾದ ಕಂಠಮಾಧುರ್ಯ, ಮತ್ತು ಗೀತೆಗಳ ರಾಮಣೀಯ ತೆಯನ್ನು ಸ್ವತಃ ಆಲಿಸುತ್ತ, ಅನುಭವಿಸಿ ಸಂತಸವ ತಾಳ್ದನು. ಶ್ರೀರಾಮನ ಕಿವಿಗಳಿಗೆ ಅಮೃತಸೇಚನವಾಯಿತು. ಕರ್ಣರಸಾಯನವಾದುದು (ಕರ್ಣಪೀಯೂಷ ಮಾದುದು).

ರೂಪ ಇತಿ—ತೇ ಜಾನಯಂತೀತಿ ತಜ್ ಜ್ಞಾಃ, ತೈಸ್ತಜ್ಞೈರಭಿಜ್ಞೈರ್ನಿವೇದಿತಂ ತಯೋಃ=ಕುಶಲವಯೋ ರೂಪೇ ಆಕಾರೇ ಗೀತೇ ಚ ಮಾಧುರ್ಯಂ ರಾಮಣೀಯಕಂ ॥

**66. ತದ್ಗೀತಶ್ರವಣೈಕಾಗ್ರಾ ಸಂಸದಶ್ರುಮುಖೀ ಬಭೌ ।**
**ಹಿಮನಿಷ್ಯಂದಿನೀ ಪ್ರಾತಃ ನಿರ್ವಾತೇವ ವನಸ್ಥಲೀ ॥ ೬೬ ॥**

ಆ ಬಾಲಕರು ಹಾಡಿದ ರಾಮಾಯಣಮಹಾಕಾವ್ಯದ ಗೀತಶ್ರವಣವನ್ನು ಕೇಳಿದ ಅಯೋಧ್ಯೆಯ ಮಹಾಜನರು ಸ್ತಂಭೀಭೂತರಾಗಿ ಕಣ್ಣೀರಕೋಡಿ ಹರಿಸಿದರು. ತಮ್ಮಿಂದ ಸೀತಾದೇವಿಗಾದ ಅಪಾರ ಹಾನಿಯನ್ನು ಮನಗಂಡು ಅತ್ತರು. ಅವರ ಕಣ್ಣಿನಲ್ಲಿ ಶ್ರೀರಾಮನ ಪ್ರತಿಬಿಂಬದಂತಿರುವ ದಿವ್ಯಜೋಡಿ ಬಾಲಕರನ್ನು ಕಂಡು ಆನಂದಬಾಷ್ಪವು ತಾನಾಗಿ ಹೊರಹೊಮ್ಮಿತು. ಅಂತಃಕರಣವು ಕದಡಿ ಪುಲಕಿತವಾಯಿತು. ಹೇಗೆ ಬೆಳಗ್ಗಿನ ಜಾಮ ನಿರ್ವಾತದ ವನಭೂಮಿಯಲ್ಲಿ ಹಿಮವು (ಮಂಜು) ಸುರಿಯುವಂತೆ, ಅವರ ಕಣ್ಣಿಂದ ಆನಂದಬಾಷ್ಪವು ಜಿನುಗುತ್ತಲಿತ್ತು. ಕಣ್ಣೀರಿನಿಂದ ಕಪೋಲಗಳು ಒದ್ದೆಯಾದುವು. ಪ್ರಾತಃಕಾಲದಲ್ಲಿ ಕಾಡುಪ್ರದೇಶದಲ್ಲಿ ಗಾಳಿಯು ಬೀಸದಿರುವಾಗ ದಟ್ಟನೆ ಮಂಜು ಸುರಿಯುತ್ತಿದ್ದಂತೆ ಕಣ್ಣೀರು ಧಾರೆಧಾರೆಯಾಗಿ, ಹೊನಲು ಜೊನಲಾಗಿ ಹೊರ ಹರಿಯಿತು. ಸಂಸತ್ತಿನ ಸಭಾಭವನದಲ್ಲಿ ಮಂಡಿಸಿದ್ದ ಸಂಸತ್ಸದಸ್ಯರೆಲ್ಲರೂ ಬಾಷ್ಪ ಲೋಚನರಾದರು. ಶೋಕಾನಂದತುಂದಿಲರಾದರು. ಗಾನಸುಧೆಯಲ್ಲಿ ತಮ್ಮನ್ನು ತಾವೇ ಮರೆತರು. ಮಹದಾನಂದದ ಮಹಾಪೂರದಲ್ಲಿ ತೇಲಿ, ತೇಲಿಹೋದರು.

ತಯೋರ್ಗೀತಶ್ರವಣ ಏಕಾಗ್ರಾ ಽಽ ಸಕ್ತಾ—ನಿರ್ವಾತಾ = ವಾತಾರಹಿತಾ—ಆನಂದ ಪಾರವಶ್ಯನಿಷ್ಪಂದವಾಸ್ತ ಇತ್ಯರ್ಥಃ—

**67. ವಯೋವೇಷವಿಸಂವಾದಿ ರಾಮಸ್ಯ ಚ ತಯೋಸ್ತದಾ ।**
**ಜನತಾ ಪ್ರೇಕ್ಷ್ಯ ಸಾದೃಶ್ಯಂ ನಾಕ್ಷಿಕಂಪಂ ವ್ಯತಿಷ್ಠತ ॥ ೬೭ ॥**

ಅವರ ಮಧುರವಾದ ಗಂಧರ್ವಗಾನದಂತಹ ಹಾಡನ್ನು ಕೇಳಿದ ಅಯೋಧ್ಯೆಯ ಗ್ರಾಮಾಂತರ ಪ್ರದೇಶದ ಜನರು ವಿವಶರಾದರು. ತಮ್ಮ ರಾಜನನ್ನೇ ಹೋಲುವ ಬಾಲಕರು. ಸೊಬಗಿನಕಣಿಯಾದ, ದಿವ್ಯಕಣ್ಮಣಿಗಳು (ರೂಪವಂತರು) ದಿವ್ಯ ತೇಜಸ್ಸಿನಿಂದ ಒಪ್ಪುವ ಕುಶಲವರು. ಅವರ ಮಾತು ಶಬ್ದೋಚ್ಚಾರ, ಕಂಠಮಾಧುರ್ಯ ಎಲ್ಲವೂ ಶ್ರೀರಾಮನವೇ, ವಯಸ್ಸಿನ ಅಂತರ ಒಂದನ್ನು ಬಿಟ್ಟು. ಪ್ರೇಕ್ಷಣೀಯವಾದ ರೂಪು, ಜನರ ಮನಮನದಲ್ಲಿ (ಮನದ ಹಂದರದಲ್ಲಿ) ಅವರ ಬಗ್ಗೆ ಅನುಕಂಪ ಮೂಡಿತು, ಆ ಜನರು (ಲೋಗರು) ವಿಸ್ಮಯದಿಂದ ಭ್ರಮಿತರಾಗಿ ಕಣ್ಣೆವೆಮಿಡುಕದೆ ಆ ಬಾಲಕರಲ್ಲಿ ಶ್ರೀರಾಮಸಾದೃಶ್ಯವನ್ನು ಕಂಡು ಆ ರೂಪಸಾಮ್ರಾಜ್ಯವನ್ನು

(ವಿಶ್ವರೂಪನಸಂಜಾತರನ್ನು) (ಸಗುಣ ಬ್ರಹ್ಮನ ಸಂಗುಣಾದ್ವಯರನ್ನು, (ಚಿಣ್ಣರನ್ನು) ನೋಡುತ್ತ ತಮ್ಮನ್ನು ತಾವೇ ಮರೆತರು.

ಜನತಾ=ಜನಾನಾಂ ಸಮೂಹಃ—"ಗ್ರಾಮಜನಬಂಧುಸಹಾಯೇಭ್ಯಸ್ತಲ್" ಇತಿ ತಲ್ ಪ್ರತ್ಯಯಃ—ವಯೋವೇಷಾಭ್ಯಾಮೇವ—ವಿಸಂವಾದಿ = ವಿಲಕ್ಷಣಂ—ನಾಸ್ತ್ಯಕ್ಷಿ ಕಂಪೋ = ಯಸ್ಮಿನ್ ಕರ್ಮಣಿ ತದ್ಯಥಾ ತಥಾ ನ ಇರ್ಥಸ್ಯ ನ ಶಬ್ದಸ್ಯ ಬಹುವ್ರೀಹಿಃ— ವ್ಯತಿಷ್ಠತಾ ತಿಷ್ಠತ್—"ಸಮವಪ್ರವಿಭ್ಯಃ ಸ್ಥಃ" ಇತ್ಯಾತ್ಮನೇಪದಮ್ (ಪಾಣಿನಿ)

**68. ಉಭಯೋರ್ನ ತಥಾ ಲೋಕಃ ಪ್ರಾವೀಣ್ಯೇನ ವಿಸಿಷ್ಮಿಯೇ ।**
**ನೃಪತೇಃ ಪ್ರೀತಿದಾನೇಷು ವೀತಸ್ಪೃಹತಯಾ ಯಥಾ ॥ ೬೮ ॥**

ಜನತಾಜನಾರ್ಧನನಾದ ಶ್ರೀರಾಮನು 18,000 ಸುವರ್ಣನಾಣ್ಯಗಳನ್ನು ತರಿಸಿ ಆ ಬಾಲಕರ ಮುಂದಿಟ್ಟನು. ಶ್ರೀರಾಮನ ಉದಾರವಾದ ದಾನಬುದ್ಧಿಯನ್ನು ಕಂಡು ಆ ಜನ ಸಮೂಹವು ಮೆಚ್ಚಿ ತಲೆದೂಗಿತು (ಆಶ್ಚರ್ಯತುಂದಿಲರಾದರು). ಆದರೆ ಆ ಬಾಲಕರು ಆ ದಾನಗಳ ಬಗ್ಗೆ ನಿಃಸ್ಪೃಹರಾಗಿಯೇ ಇದ್ದರು. ಆ ಕುಮಾರರು ಚಿನ್ನವನ್ನು ಮಣ್ಣಿಗಿಂತ ಕಡೆಯದಾಗಿ ಕಂಡುದನ್ನು ಕಂಡು ಅಧಿಕಚಕಿತರಾದರು. ಜನರು "ಅಯ್ಯೋ ಪಾಪ, ಕಾಡಿನಲ್ಲಿ ವಾಸಿಸುವ ಈ ಋಷಿಬಾಲಕರಿಗೆ ಈ ಚಿನ್ನದ ನಾಣ್ಯದ ಅಗತ್ಯವೆಲ್ಲಿದೆ ? ಕಾಡಿನಲ್ಲಿ ವಿಪುಲವಾಗಿ ಸಿಗುವ ಗೆಡ್ಡೆಗೆಣಸುಗಳನ್ನು ತಿಂದು ಜೀವಿಸುವ ವನವಾಸಿಗಳು ಅವರು" ಎಂದು ಆಡಿಕೊಳ್ಳುತ್ತಿದ್ದರು. ಆದರೆ ಅದಕ್ಕೆ ಮಿಗಿಲಾಗಿ ಶ್ರೀರಾಮನ ಅಸಾಧಾರಣವಾದ, ಉದಾರವಾದ, ಅಲೌಕಿಕ ದಾನಬುದ್ಧಿ, ಮಕ್ಕಳ ಬಗ್ಗೆ ತೋರಿದ ಅಪಾರಪ್ರೀತಿ, ಆದರಗಳ ಬಗ್ಗೆ ವಿಸ್ಮಯಗೊಂಡಂತೆ, ಮಕ್ಕಳ ಗಾನನೈಪುಣ್ಯದ ಬಗ್ಗೆ, ಕಾವ್ಯಾರ್ಥದ ಬಗ್ಗೆ ಅಷ್ಟೊಂದು ಚಕಿತರಾಗಿರಲಿಲ್ಲ. (ಕೋಣಗೆ ವೀಣಾಗಾನವಿದೇತಕೆ, ವಾಣಿಕ್ಯವೇತಕೆ ಮರ್ಕಟಗೆ ಎಂಬಂತೆ)

ಪ್ರಾವೀಣ್ಯೇನ = ನೈಪುಣ್ಯೇನನ—ನವಿಸಿಷ್ಮಿಯೇ = ನ ವಿಸ್ಮಿತವಾನ್—ವೀತಸ್ಪೃಹ ತಯಾ = ನೈಃಸ್ಪೃಹ್ಯೇಣ ॥

**69. ಗೇಯೇ ಕೋನು ವಿನೇತಾ ವಾಂ ಕಸ್ಯ ಚೇಯಂ ಕೃತಿಃ ಕವೇಃ ।**
**ಇತಿ ರಾಜ್ಞಾ ಸ್ವಯಂ ಪೃಷ್ಟೌ ತೌ ವಾಲ್ಮೀಕಿಮಶಂಸತಾಮ್ ॥ ೬೯ ॥**

ಶ್ರೀರಘುರಾಮಚಂದ್ರನು ಅಂದು ಆ ಚಿಣ್ಣರೊಡನೆ "ಈ ಮಹಾಕಾವ್ಯದ ಕರ್ತೃವು ಯಾರು ? ಈ ಗೇಯಶಿಕ್ಷಕನಾರು ? (ಗಮಕಶಿಕ್ಷಕ, ಗಮಕಿ, ಗವಾಯಿ) ಎಂದು ಆ ಬಾಲಕರನ್ನು ಪ್ರೀತಿಯಿಂದ (ಬಲುಸಲಿಗೆಯಿಂದ) ಒಲಿದು ವಿಚಾರಿಸಿದನು. ಆಗಲಾ ಚಿಣ್ಣರು (ಕಣ್ಮಣಿಗಳು) ತಮ್ಮನ್ನು ವಿಚಾರಿಸಿದ ಕೋಸಲಾಧಿಪತಿಗೆ "ಭಗವಾನ್ ವಾಲ್ಮೀಕಿ ಮಹರ್ಷಿಗಳೆಂದು" (ಮಹಾಕವಿ ವಾಲ್ಮೀಕಿಭಗವತ್ಪಾದರೆಂದು) ಉತ್ತರ ವಿತ್ತರು.

ಗೇಯೇ = ಗೀತೇ—"ನು"ಶಬ್ದಃ ಪ್ರಶ್ನೇ—"ನು ಪೃಚ್ಛಾಯಾಂ ವಿತರ್ಕೇಚ" ಇತ್ಯಮರಃ—ವಿನೇತಾರು ಕವಿಂ ಚೇತ್ಯರ್ಥಃ—ಗೇಯೇ ಕೇನ ವಿನೀತೌ ವಾವಕ್ ಇತಿ ಪಾಠೇ "ವಾ" ಇತಿ ಯುಷ್ಮದರ್ಥಪ್ರತಿಪಾದಕಮವ್ಯಯಂ ದ್ರಷ್ಟವ್ಯಮ್ ॥

**70. ಅಥ ಸಾವರಜೋ ರಾಮಃ ಪ್ರಾಚೇತಸಮುಪೇಯಿವಾನ್ ।**
**ಊರೀಕೃತ್ಯಾತ್ಮನೋ ದೇಹಂ ರಾಜ್ಯಮಸ್ಮೈ ನ್ಯವೇದಯತ್ ॥ ೭೦ ॥**

ಆ ಬಳಿಕ ಸಾಕೇತಾಧಿಪತಿ ಶ್ರೀರಾಮಚಂದ್ರನು ತನ್ನ ಸಹೋದರರ ಸಮೇತ ವಾಲ್ಮೀಕಿಮಹರ್ಷಿಯ ತಪೋಭೂಮಿಗೆ ಭೇಟಿಯಿತ್ತನು. ವೈದೇಹಿಯನ್ನು ರಕ್ಷಿಸಿದುದಕ್ಕಾಗಿ, ತನ್ನ ಮಕ್ಕಳನ್ನು ಪೊರೆದುದಕ್ಕೆ ತನ್ನ ದೇಹವೊಂದನ್ನು ಬಿಟ್ಟು ಕೋಸಲ ಸಾಮ್ರಾಜ್ಯವನ್ನೇ ದಾನವಾಗಿ ಇತ್ತನು. ಆತ್ಮ ಮತ್ತು ಮನಸ್ಸು ಎರಡರಿಂದ ಒಡಗೂಡಿರುವ ತನ್ನ ದೇಹವನ್ನು ಅಶ್ವಮೇಧಯಾಗವು ಪೂರ್ತಿಯಾಗದೆ ದಾನವೀಯುವಂತಿರಲಿಲ್ಲ. ಹಾಗೆಂದು ಶಾಸ್ತ್ರದ ಕಟ್ಟಳೆಯಿಂದೆ. ಅದನ್ನರಿತ ರಘುಕುಲೋತ್ತುಂಗನು ತನ್ನ ಒಡಲೊಂದನ್ನು ಉಳಿದು ಸಮಸ್ತ ರಾಜ್ಯವನ್ನು ಮುನಿವರನ ಚರಣಕಮಲಗಳಿಗೆ ಅರ್ಪಿಸಿದನು.

ದೇಹಮಾತ್ಮನಂ ಊರೀಕೃತ್ಯ—ಆತ್ಮಾನಂ ಸ್ಥಾಪಯಿತ್ವೇತ್ಯರ್ಥಃ—ರಾಜ್ಯಮಸ್ಮೈ ಪ್ರಾಚೇತಸಾಯ ನ್ಯವೇದಯತ್ = ಸಮರ್ಪಿತವಾನ್ ॥

**71. ಸ ತಾ ವಾಖ್ಯಾಯ ರಾಮಾಯ ಮೈಥಿಲೇಯೌ ತದಾತ್ಮಜೌ**
**ಕವಿಃ ಕಾರುಣಿಕೋ ವವ್ರೇ ಸೀತಾಯಾಃ ಸಂಪರಿಗ್ರಹಮ್ ॥ ೭೧ ॥**

"ಹೇ ರಾಜನ್, ಇವರು ನಿನ್ನ ಧರ್ಮಪತ್ನಿಯಾದ ಸೀತಾದೇವಿಯ ಮಕ್ಕಳು, (ಮೈಥಿಲಿಯ) ನಿನ್ನ ಔರಸಸಂತರಾದ ಇವರನ್ನು, ಸಾಧ್ವಿ ಮೈಥಿಲಿಯನ್ನು ಸ್ವೀಕರಿಸಿ ಕಾಪಾಡುವುದು" ಹೀಗೆಂದು ಕರುಣಾಳುಗಳಾದ, ದಯಾಸಾಗರರಾದ, ಲೋಕವಿಖ್ಯಾತ ಆದಿಕವಿ ವಾಲ್ಮೀಕಿ ಮಹರ್ಷಿಗಳು ಕರಮುಗಿದು ಶ್ರೀರಾಮಚಂದ್ರನನ್ನು ಬೇಡಿಕೊಂಡರು. (ಸೀತೆಯನು ಪತಿಕರಿಪುದೆಂದು)

"ಪ್ರಯೋಜನಮ್" ಇತಿ ಠಞ್ (ಪಾಣಿನಿ)—"ಸ್ಯಾದ್ದಯಾಲುಃ ಕಾರುಣಿಕಃ" ಇತ್ಯಮರಃ—ಸ ಕವೀರಾಮಾಯ ತೌ ಮೈಥಿಲೇಯೌ ತದಾತ್ಮಜೌ=ರಾಮಸುತಾವಾಖ್ಯಾಯ ಸೀತಾಯಾಃ ಸಂಪರಿಗ್ರಹಂ ಸ್ವೀಕಾರಂ ವವ್ರೇ ಯಯಾಚೇ—ಕಾರುಣಿಕಃ=ಕರುಣಾ + ಠಞ್ = ಇಕ್ ॥

**72. ತಾತ ಶುದ್ಧಾಸಮಕ್ಷಂ ನಃ ಸ್ನುಷಾ ತೇ ಜಾತವೇದಸಿ ।**
**ದೌರಾತ್ಮ್ಯಾದ್ರಕ್ಷಸಸ್ತಾಂತು ನಾತ್ರತ್ಯಾಃ ಶ್ರದ್ದಧುಃ ಪ್ರಜಾಃ ॥ ೭೨ ॥**

ಕೋಸಲೇಂದ್ರನು "ಹೇ ತಾತ, (ಹೇ ಮಹರ್ಷಿ) ನಿನ್ನ ಸೊಸೆಯಾದ ಈಕೆ ಈ ಮೊದಲೇ ನನ್ನೆದುರಲ್ಲೇ ಅಂದು ಜಾತವೇದನಾದ ಅಗ್ನಿಯನ್ನು ಪ್ರವೇಶಿಸಿ ಪರಿಶುದ್ಧಳೆಂದು ವಿಶ್ವಕ್ಕೆ ತಿಳಿಯುವಂತಾಯಿತು. ಅವಳ ಸ್ತ್ರೀಧರ್ಮದ ಬಗ್ಗೆ ಯಾವ ಅನುಮಾನವೂ ನನಗಿಲ್ಲ. ಆದರೂ ನನ್ನ ಪ್ರಜೆಗಳಾದ ಈ ಅಯೋಧ್ಯೆಯ ಜನರು ಅವಳ ಪತಿವ್ರತಾ ಧರ್ಮದ ಬಗ್ಗೆ, ಸಚ್ಚಾರಿತ್ರ್ಯದ ಬಗ್ಗೆ ಇನ್ನೂ ಸಂಶಯಪಡುತ್ತಿರುವರು. ಏಕೆಂದರೆ ಸಾಧ್ವಿ ಮೈಥಿಲಿಯು ಈ ಹಿಂದೆ ವ್ಯಭಿಚಾರಿಯಾದ, ಅತ್ಯಾಚಾರಿಯಾದ, ದುರಾತ್ಮನಾದ,

(ಹೆಣ್ಣಿನ ಗುಲಾಮನಾದ) (ಪೊಣ್ಣುಕೋಟಿ, ಪೊಣ್ಣುಮರ್ಲೆ (ತೌಳವಗಾದೆ) ದುಷ್ಟ ರಾವಣನ ಬಂಧನದಲ್ಲಿ ಹಲವಾರು ತಿಂಗಳು ಇದ್ದವಳಪ್ಪೆ."

ತೇ ಸ್ನುಷಾ=ಸೀತಾನೋऽಸ್ಮಾಕಮ್ । ಅಕ್ಷ್ಣೋಃ=ಸಮೀಪಮ್—ಸಮಕ್ಷಮ್—ಅವ್ಯಯೀಭಾವೇ ಶರತ್ಪ್ರಭೃತಿಭ್ಯಃ "ಇತಿ ಸಮಾಸಾಂತಷ್ಟಚ್" (ಪಾಣಿನಿ—ಜಾತವೇದಸಿ = ವಹ್ನೌ—ಶುದ್ಧಾ—ಪ್ರಜಾಸ್ತಾಂ ಶ್ರದ್ಧಧುರ್ನ = ವಿಶಶ್ವಸುಃ ॥

**73. ತಾಃ ಸ್ವಚಾರಿತ್ರಮುದ್ದಿಶ್ಯ ಪ್ರತ್ಯಾಯಯತು ಮೈಥಿಲೀ ।**
**ತತಃ ಪುತ್ರವತೀಮೇನಾಂ ಪ್ರತಿಪತ್ಸ್ಯೇ ತ್ವದಾಜ್ಞಯಾ ॥ ೭೩ ॥**

ಆದುದರಿಂದ ಸೀತೆಯು ತನ್ನ ಚಾರಿತ್ರ್ಯವನ್ನು (ಸಚ್ಚಾರಿತ್ರ್ಯವನ್ನು) ಜನರು ವಿಶ್ವಾಸವಿಡುವಂತೆ ಯಾವುದಾದರೊಂದು ನಿದರ್ಶನದ ಮೂಲಕ ಕರಾರುವಾಕ್ಕಾಗಿ ಸಾಬೀತುಪಡಿಸಲಿ. ಹಾಗೆ ನೆಗಳಿದೊಡೆ ನಾನು ಸುತರೊಂದಿಗೆ ನಿಸ್ಸಂದೇಹವಾಗಿ (ನಿಸ್ಸಂಕೋಚವಾಗಿ) ಆಕೆಯನ್ನು ನಿಮ್ಮ ಆಜ್ಞೆಯಂತೆ ಪರಿಗ್ರಹಿಸುವೆನು. ನಿಮ್ಮ ಆಜ್ಞೆಯನ್ನು ಶಿರಸಾವಹಿಸಿ ಅದರಂತೆಯೇ ನಡೆಯುವೆನು" ಎಂದು ರಘುಕುಲಮೌಳಿ ಮುನಿವರನಿಗೆ ಮಾತುಕೊಟ್ಟನು.

ವಿಶ್ವಾಸಸ್ಯ ಬುದ್ಧಿರೂಪತ್ವಾತ್ "ಣೌಗಮಿರಬೋಧನೇ" ಇತಿ ಇಣೋಗಮ್ಯಾದೇಶೋ ನಾಸ್ತಿ (ಪಾಣಿನಿ)—ತತೋ = ನಂತರಂ—ಪ್ರತಿಪತ್ಸ್ಯೇ = ಸ್ವೀಕರಿಷ್ಯೇ ॥

**74. ಇತಿ ಪ್ರತಿಶ್ರುತೇ ರಾಜ್ಞಾ ಜಾನಕೀಮಾಶ್ರಮಾನ್ಮುನಿಃ**
**ಶಿಷ್ಯೈರಾನಾಯಯಾಮಾಸ ಸ್ವಸಿದ್ಧಿಂ ನಿಯಮೈರಿವ ॥ ೭೪ ॥**

ಈ ತೆರನಾಗಿ ಶ್ರೀರಾಮನು ಮಾತುಕೊಡಲು ವಾಲ್ಮೀಕಿ ಮಹರ್ಷಿಗಳು ತನ್ನ ಶಿಷ್ಯರನ್ನು ಆಶ್ರಮಕ್ಕೆ ಕಳುಹಿಸಿ ಸೀತಾದೇವಿಗೆ ಬರುವಂತೆ ಕರೆಕಳುಹಿಸಿದರು. ಅವರ ಅಮೂಲ್ಯವಾದ ತಪಃಶಕ್ತಿಯಿಂದ ಅಸಾಧ್ಯವೂ ಸಿದ್ಧಿಸುವುದು ಎಂಬುದರಲ್ಲಿ ಆಶ್ಚರ್ಯವೇನಿದೆ. ಸೀತೆಗೆ ಬಂದ ಸತ್ವಪರೀಕ್ಷೆಯು ನಿಯಮಗಳ ಸಿದ್ಧಿಯನ್ನೇ ಬಳಿಗೆ ಆಹ್ವಾನಿಸುವಂತೆ ಆದರ್ಶಸತಿಯಾದ ಸೀತಾದೇವಿಯನ್ನು ಅವರು ಇಂದು ಬರಮಾಡಿಕೊಂಡರು.

ಪ್ರತಿಶ್ರುತೇ = ಪ್ರತಿಜ್ಞಾತೇ—ಸ್ವಸಿದ್ಧಿಂ = ಸ್ವಾರ್ಥಸಿದ್ಧಿಂ—ನಿಯಮೈಸ್ತಪೋಭಿರಿವ—ಆನಾಯಯಾಮಾಸ ॥

**75. ಅನ್ಯೇದ್ಯುರಥ ಕಾಕುತ್ಸ್ಥಃ ಸನ್ನಿಪಾತ್ಯ ಪುರೌಕಸಃ ।**
**ಕವಿಮಾಹ್ವಾಯಯಾಮಾಸ ಪ್ರಸ್ತುತ ಪ್ರತಿಪತ್ತಯೇ ॥ ೭೫ ॥**

ತಾನು ಪ್ರಕೃತ ಪ್ರಸಂಗದಲ್ಲಿ ವಾಲ್ಮೀಕಿ ಮಹರ್ಷಿಗಳಿಗಿತ್ತ ವಚನದತ್ತ ವಚನದ ಸಾರಾಸಾರವನ್ನು ಶ್ರೀರಾಮನು ಕೂಡಲೇ ಅಯೋಧ್ಯಾ ನಗರಿಯ ಪುರಜನರಿಗೆ ಡಂಗುರದ ಮೂಲಕ ತಿಳಿಸಿದನು. ಸೀತೆಯ ಪರಿಶುದ್ಧತೆಯ ಸತ್ವಪರೀಕ್ಷೆಯ ಲಕ್ಷಣಗಳನ್ನು ಅವರೆಲ್ಲರೂ ತಿಳಿಯುವಂತೆ (ಮನಗಾಣುವಂತೆ) ಅವರೆಲ್ಲರೂ ಮರುದಿನ ಕ್ಲಪ್ತ ಕಾಲಕ್ಕೆ ಬಂದು ಸಭೆಸೇರುವಂತೆ ನಿಗದಿಪಡಿಸಿದನು. ಮಹಾಕವಿ ವಾಲ್ಮೀಕಿಯು ಸೀತಾಸಮೇತ ಬರುವಂತೆ ಆ ಮಹಾತ್ಮನು ಆಹ್ವಾನಿಸಿದನು.

ಅನ್ಯೇದ್ಯುರಸ್ಮಿನ್ನಹನಿ—ಪ್ರಸ್ತುತಪ್ರತಿಪತ್ತಯೇ = ಪ್ರಕೃತಕಾರ್ಯಾನುಸಂಧಾನಾಯ — ಪುರೋಕಸಃ = ಪೌರಾನ್ — ಸನ್ನಿಪಾತ್ಯ = ಮೇಲಯಿತ್ವಾ—ಕವಿಂ = ವಾಲ್ಮೀಕಿವನ್ ॥

**76. ಸ್ವರಸಂಸ್ಕಾರವತ್ಯಾಸೌ ಪುತ್ರಾಭ್ಯಾಮಥ ಸೀತಯಾ ।**
**ಋಚೇ ವೋದರ್ಚಿಷಂ ಸೂರ್ಯಂ ಸವಮಂ ಮುನಿರುಪಸ್ಥಿತಃ ॥ ೭೬ ॥**

ಆ ಬಳಿಕ ವಾಲ್ಮೀಕಿ ಋಷಿಯು ಸೀತೆಯು ಇಬ್ಬರು ಮಕ್ಕಳೊಂದಿಗೆ, ಸೀತಾಸಮೇತ ತೇಜೋಭಿರಾಮನನು ಸೇರಿದರು. ಸರಿಯಾದ ಸ್ವರಸಂಸ್ಕಾರಾದಿ ವಿಧಿವಿಧಾನಗಳಿಂದ (ಸ್ವರಉದಾತ್ತಶಬ್ದಸಂಸ್ಕಾರಗಳಿಂದ) (ಸ್ವರಶುದ್ಧಿಯಿಂದ) ಗಾಯತ್ರೀ ಮಂತ್ರವನ್ನು ಜಪಿಸಿ ಭಕ್ತನು ಸೂರ್ಯದೇವನನ್ನು ಆಹ್ವಾನಿಸಿದಾಗ ಗಾಯತ್ರಿಯು ವಿಶಿಷ್ಟವಾದ ಶಕ್ತಿಯಿಂದ ಸೂರ್ಯನು ತೊಳಗಿ ಬೆಳಗುವಂತೆ (ಪ್ರಜ್ವಲಿಸುತ್ತ ಪ್ರಕಾಶಿಸುವಂತೆ) ಅಂದು ಶ್ರೀರಾಮಚಂದ್ರನು ಪೂರ್ಣಚಂದ್ರತೇಜಸ್ವಿಯಾಗಿ ವಿರಾಜಿಸಿದನು. ಶ್ರೀರಾಮನ ಪುತ್ರ ಸಮನ್ವಿತಳಾದ ಸೀತೆಯೊಂದಿಗೆ, ಮಂತ್ರದ್ರಷ್ಟಾರರಾದ ಆದಿಕವಿ ವಾಲ್ಮೀಕಿಮಹರ್ಷಿಗಳಿಂದ ಆವೃತನಾಗಿ ಅವರ ಜೊತೆಯಲ್ಲಿ ಪ್ರಕಾಶದಿಂದ ರಾರಾಜಿಸುತ್ತ ಶೋಭಿಸಿದನು. (ಗಾಯತ್ರೀ ಮಂತ್ರಪರಿಪೂತಳಾದ, ಸಂಸ್ಕಾರಹೊಂದಿದ ಸವಿತೃನಂತೆ,(ಜಗಚಕ್ಷುವಿನಂತೆ) (ಸವಿತೃ = ಸೂರ್ಯ, ರವಿ)

ಅಥ ಸ್ವರ ಉದಾತ್ತಾದಿಃ—ಸಂಸ್ಕಾರಃ = ಶಬ್ದಶುದ್ಧಿಃ—ಪುತ್ರಾಭ್ಯಾಮ್ = ಉಪಲಕ್ಷಿತಯಾ—ಮುನಿರುಪಸ್ಥಿತ = ಉಪತಸ್ಥೇ ॥

**77. ಕಾಷಾಯಪರಿವೀತೇನ ಸ್ವಪದಾರ್ಪಿತ ಚಕ್ಷುಷಾ ।**
**ಅನ್ವಮೀಯತ ಶುದ್ಧೇತಿ ಶಾಂತೇನ ವಪುಷೈವ ಸಾ ॥ ೭೭ ॥**

ಕೆಂಪು ಬಣ್ಣದ ಒಂದು ಸಾಮಾನ್ಯವಾದ ಸೀರೆಯನ್ನುಟ್ಟು, ತನ್ನ ದೃಷ್ಟಿಯನ್ನು ಪಾದದೆಡೆಗೆ ತಿರುಗಿಸಿ, ತಲೆಯನ್ನು ತಿರುಗಿಸಿ, ತಲೆಯನ್ನು ಕೊಂಚ ತಗ್ಗಿಸಿ ಬರುತ್ತಿರುವ ಸಜ್ಜನ, ಸಾಧುಸ್ವರೂಪಗಳ ಸಾಕಾರ ಮೂರ್ತಿಯಾದ ವೈದೇಹಿಯನ್ನು ಆ ಅಯೋಧ್ಯೆಯ ಜನರು ಕಂಡು ತಮ್ಮ ತಲೆಯನ್ನು ನಾಚಿಕೆಯಿಂದ ತಗ್ಗಿಸಿದರು. ಆ ಶಾಂತಮೂರ್ತಿಯನ್ನು ಕಂಡೊಡನೆಯೆ ಅಯೋಧ್ಯೆಯ ನಾಗರಿಕರಿಗೆ ಅವಳು ಪರಿಶುದ್ಧಳೆಂಬ ಊಹೆ ಬಲವಾಗಿ ಮನದಲ್ಲಿ ಬೇರೂರಿತು.

ಕಾಷಾಯೇಣ = ರಕ್ತಂ ಕಾಷಾಯಂ=ತಪಸ್ವಿನ್ಯೋ ಹಿ ಕಾಷಾಯಂ ವಸ್ತ್ರಂ ಪರಿದಧತಿ —ಇತಿ ವಲ್ಲಭಃ—''ತೇನ ರಕ್ತಂ ರಾಗಾತ್'' ಇತ್ಯಣ್ (ಪಾಣಿನಿ) ತೇನ ಪರಿವೀತೇನ = ಸಂವೃತೇನ—ಶಾಂತೇನ = ಪ್ರಸನ್ನೇನ—ವಪುಷೈವ ಸಾ ಸೀತಾ ಶುದ್ಧಾ ಸಾಧ್ವೀತ್ಯನ್ವಮಾಯ ತಾನುಮಿತಾ—ಕಾಷಾಯಪರಿವೀತೇನ=ಕಾಷಾಯೇಣ ರಕ್ತಂ ಕಾಷಾಯಮ್— ಕಾಷಾಯ+ಅಣ್ = ಕಾಷಾಯ ಪರಿವೀತದಿಂದೆ.

**78. ಜನಾಸ್ತದಾಲೋಕಪಥಾತ್ ಪ್ರತಿಸಂಹೃತ ಚಕ್ಷುಷಃ ।**
**ತಸ್ಥುಃ ತೇಽವಾಙ್ಮುಖಾಃ ಸರ್ವೇ ಫಲಿತಾ ಇವ ಶಾಲಯಃ ॥ ೭೮ ॥**

ಆ ಜನರು ಸೀತೆಯನ್ನು ಕಂಡೊಡನೆ ನಮ್ರತೆಯಿಂದ ತಲೆಬಾಗಿದರು, ಸೀತಾಮಾತೆಯನ್ನು ನೋಡುತ್ತಿದ್ದ ಅವರ ನೇರವಾದ ದೃಷ್ಟಿಯನ್ನು ಕೂಡಲೇ ಹಿಂದಕ್ಕೆ ಸೆಳೆದು ನಾಚಿಕೆಯಿಂದ ಭೂಮಿಯತ್ತ ತಿರುಗಿಸಿ, ಭೂಮಿಯನ್ನು ನೋಡತೊಡಗಿದರು. ಅವರ ಬಾಗಿದ ತಲೆಗಳು, ಫಲಭರಿತವಾದ ಭಾರವಾದ ತೆನೆಗಳಿಂದ ಕೂಡಿ ಬಾಗಿರುವ ಭತ್ತದ ಪೈರಿನಂತೆ ಆ ಜನರು ಕಾಣಿಸಿದರು. ಅವರೆಲ್ಲರೂ ಫಲಿತ ಶಾಲಿಯಂತೆ ಆನತವದನರಾಗಿ ನಿಂದಿರ್ದರು.

ಆಲೋಕಪಥಾ = ದರ್ಶನಮಾರ್ಗಾತ್ — ಪ್ರತಿಸಂಹೃತಚಕ್ಷುಷೋ = ನಿವರ್ತಿತದೃಷ್ಟಯಃ—ಸರ್ವೇ = ಜನಾಃ—ಫಲಿತಾ ಶಾಲ್ಯ ಇವ ಅವಾಙ್ಮುಖಾಃ=ಅವನತಮುಖಾಸ್ತಸ್ಥುಃ—ಪ್ರತಿಸಂಹೃತಚಕ್ಷುಷಃ = ತಿರುಗಿಸುತಲಾ ಜನರು ಅಕ್ಷಿಯನು (ನಾಚಿಕೆಯಿಂದ)

**79. ತಾಂ ದೃಷ್ಟಿವಿಷಯೇ ಭರ್ತುಃ ಮುನಿರಾಸ್ಥಿತವಿಷ್ಟರಃ ।**
**ಕುರು ನಿಃಸಂಶಯಂ ವತ್ಸೇ ಸ್ವವೃತ್ತೇ ಲೋಕಮಿತ್ಯಶಾತ್ ॥ ೭೯ ॥**

ಉಚಿತಾಸನವನ್ನು ಸ್ವೀಕರಿಸಿದ ಬಳಿಕ ವಾಲ್ಮೀಕಿಮಹರ್ಷಿಗಳು "ಎಲೆ ಮಗಳೇ (ಹೇ ವತ್ಸೆ) ನಿನ್ನ ಪತಿಯು ಎದುರಿನಲ್ಲಿ ನಿನ್ನ ನಿಜಚರಿತೆಯ ವಿಷಯದಲ್ಲಿ ಲೋಕವನ್ನು ನಿಸ್ಸಂಶಯಗೊಳಿಸು. ನಿನ್ನ ಮೇಲೆ ಜನರು ಹೇರಿರುವ ಸುಳ್ಳು ಅಪವಾದಗಳ ಸರಮಾಲೆಗಳನ್ನು (ಕೀಮಾಯಣ) ಸಟೆಗೊಳಿಸು. ನಿನ್ನ ಸಚ್ಚಾರಿತ್ರ್ಯದ ಬಗ್ಗೆ ಪತಿ ಪರಾಯಣಳಾದ ನಿನ್ನ ಗುಣಶೀಲ ನಡತೆಗಳನ್ನು ಜನರು ದೂರದಿರುವಂತೆ, ಜನರು ನಿನ್ನನ್ನು ಪವಿತ್ರಳೆಂದು (ಪತಿವ್ರತೆಯೆಂದು) ನಂಬುವಂತೆ ಲೋಕದ ಜನರ ದೃಷ್ಟಿಯನ್ನು ತಿದ್ದು. ನಿನ್ನ ಪತಿಯ ಸಮಕ್ಷಮದಲ್ಲಿ ನಿನ್ನ ಸಚ್ಚಾರಿತ್ರ್ಯಗೆ ತಕ್ಕುದಾದ ಶ್ರೇಷ್ಠವಾದ (ಗಹನವಾದ) ನಿದರ್ಶನವನ್ನು ತೋರಿಸು (ತೋರಿಸಿ ಮುಕ್ತಳಾಗು)."

ಭರ್ತುರ್ದೃಷ್ಟಿವಿಷಯೇ = ಸಮಕ್ಷಂ—ಸ್ವವೃತ್ತೇ = ಸ್ವಚರಿತೇ ವಿಷಯೇ—ಲೋಕಂ ನಿಃಸಂಶಯಂ ಕುರು—ಇತಿ ತಾಂ ಸೀತಾಮಶಾಚ್ಛಾಸ್ತಿಸ್ಮ—ಭರ್ತುರ್ದೃಷ್ಟಿವಿಷಯೇ = ನಾಥನೆದುರಿಂದು.

**80. ಅಥ ವಾಲ್ಮೀಕಿಶಿಷ್ಯೇಣ ಪುಣ್ಯಮಾವರ್ಜಿತಂ ಪಯಃ ।**
**ಆಚಮ್ಯೋದೀರಯಾಮಾಸ ಸೀತಾ ಸತ್ಯಾಂ ಸರಸ್ವತೀಮ್ ॥ ೮೦ ॥**

ಪೃಥ್ವೀಜಾತೆಯು ಶುದ್ಧೋದಕವನ್ನು ವಾಲ್ಮೀಕಿಮಹರ್ಷಿಗಳ ಶಿಷ್ಯೋತ್ತಮನಿಂದ ಸ್ವೀಕರಿಸಿ ಆಚಮನ ಮಾಡಿ ಗಾಯತ್ರಿ ಮಂತ್ರವನ್ನು ಸ್ತುತಿಸಿ ಸತ್ಯಧರ್ಮನಿರೂಪಣೆ ಮಾಡಲು, ನಿದರ್ಶನ ತೋರಿಸಲು ಕಂಕಣಬದ್ಧಳಾಗಿ ಈ ತೆರನಾದ ಸತ್ಯವಾಕ್ಯಗಳನ್ನು ಉಚ್ಚರಿಸಿದಳು.

ಅಥ ವಾಲ್ಮೀಕಿಶಿಷ್ಯೇಣಾವರ್ಜಿತಂ ದತ್ತಂ ಪುಣ್ಯಂ ಪಯಃ ಆಚಮ್ಯ ಸೀತಾ ಸತ್ಯಾಂ ಸರಸ್ವತೀಂ ವಾಚಮುದೀರಯಾ ಮಾಸೋಚ್ಚಾರಯಾಮಾಸ—ಸತ್ಯಾಮ್ = ಸತ್ಯನಿಷ್ಠೆ—ಪಯಃ ಆಚಮ್ಯ = ಪುಣ್ಯಾಂಬುವಿಂದ ಆಚಮನಗೈದು (ನೀರನ್ನು ದೈಹಿಕ ಶುದ್ಧಿಗಾಗಿ ತುಸು ಸೇವಿಸಿ, (ಆಚಮನಮಾಡಿ).

**81. ವಾಙ್ಮನಃ ಕರ್ಮಭಿಃ ಪತ್ಯೌ ವ್ಯಭಿಚಾರೋ ಯಥಾ ನ ಮೇ।**
**ತಥಾ ವಿಶ್ವಂಭರೇ ದೇವಿ ಮಾಮಂತರ್ಧಾತುಮರ್ಹಸಿ ॥ ೮೧ ॥**

"ಹೇ ಭೂಮಾತೆ, ನೀನು ವಿಶ್ವಂಭರೆ, ನಾನು ಮನಸ್ಸು, ವಾಚಾ, ಕಾಯದಿಂದ ಅವ್ಯಭಿಚಾರಿಯಾಗಿದ್ದು ಪತಿಯಾದ ಕೋಸಲಾಧೀಶ ಶ್ರೀರಾಮಚಂದ್ರನನ್ನು ಮಾತ್ರ ಸೇವಿಸುತ್ತಲಿದ್ದರೆ ನೀನು ನಿನ್ನ ಭೂಗರ್ಭದಲ್ಲಿ ನನ್ನನ್ನು ಒಳಗಿರಿಸಿ ಕಾಪಾಡು, ತಾಯಿ. ನೀನಲ್ಲವೆ ವಿಶ್ವಾಧಾರೆ. ನಾನು ತ್ರಿಕರಣದಲ್ಲಿ ಶ್ರೀರಾಮನನ್ನು ಪತಿಯಾಗಿ ಹಗಲು ರಾತ್ರಿ ಅರ್ಚಿಸುತ್ತಿದ್ದರೆ, ನನ್ನನ್ನು ನಾನು ಅರ್ಪಿಸಿದ್ದರೆ, (ಅರ್ಪಣಾಭಾವದಿಂದ ನಡೆದಿದ್ದರೆ) ಹೇ ವಿಶ್ವಂಭರೇ, ದೇವಿ, ನೀನು ಜಗದಾಧಾರೆ. ನನ್ನನ್ನು ನಿನ್ನ ಒಡಲಲ್ಲಿ (ನಿನ್ನ ಗರ್ಭದಲ್ಲಿ) ಇರಿಸಿ ನನಗೆ ಇರಲು, ನಾನು ವಾಸಿಸಲು ಅವಕಾಶಕೊಡು.

ವಾಙ್ಮನಃ ಕರ್ಮಭಿಃ ಪತ್ಯೌ = ವಿಷಯೇ— ಮೇ ವ್ಯಭಿಚಾರಃ = ಮೇ ಸ್ಖಾಲಿತ್ಯಂ ನ ಯಥಾ ನಾಸ್ತಿ ಯದಿ ತಥಾ ತರ್ಹಿ—ವಿಶ್ವಂ ಬಿಭರ್ತೀತಿ—ವಿಶ್ವಂಭರಾ = ಭೂಮಿಃ —"ಸಂಜ್ಞಾಯಾಂ ಭೃತೃವೃಜಿ" ಇತ್ಯಾದಿನಾ— ಖಚ್ ಪ್ರತ್ಯಯಃ—ಅರುರ್ದ್ವಿಷತ್ ಇತ್ಯಾದಿನಾಮುಮಾಗಮಃ (ಪಾಣಿನಿ) ಮಾಮಂತರ್ಧಾತುಂ ಗರ್ಭೇ ವಾಸಯಿತುಮರ್ಹಸಿ

**82. ಏವಮುಕ್ತೇ ತಥಾ ಸಾಧ್ವ್ಯಾ ರಂಧ್ರಾತ್ ಸದ್ಯೋಽಭವಾದ್ಭುವಃ।**
**ಶಾತಹ್ರದಮಿವ ಜ್ಯೋತಿಃ ಪ್ರಭಾಮಂಡಲಮುದ್ಯಯೌ ॥ ೮೨ ॥**

ಆ ಸಾಧ್ವಿಯು (ಆ ಪತಿವ್ರತಾವನಿತೆಯು) ಈ ತೆರನಾಗಿ ನುಡಿಯಲು ಭೂಮಿಯು ತಾನಾಗಿ ಬಿರಿದು ಇಬ್ಭಾಗವಾಯಿತು. ಆ ಭೂರಂಧ್ರದಿಂದ ವಿದ್ಯುತ್ತಿನ ಪ್ರಕಾಶಮಾನವಾದ ಬೆಳಕಿನ ತೇಜಃಪುಂಜವು ಜ್ಯೋತಿರಾಶಿಯು (ಬೆಳಕಿನ ಮಹಾಪೂರವು) ಹೊರಹೊಮ್ಮಿತು. ಕಣ್ಣು ಕುಕ್ಕುವ, ಝಗಝಗಿಸುವ ವಿದ್ಯುತ್ ಪ್ರಭಾಮಂಡಲವು ಅಕ್ಷಿಗಳಿಗೆ ಗೋಚರವಾಯಿತು.

ಸಾಧ್ವ್ಯಾ = ಪತಿವ್ರತಯಾ—ರಂಧ್ರಾಚ್ಛಾತಹ್ರದಂ = ವೈದ್ಯುತಂ ಜ್ಯೋತಿರಿವ ಪ್ರಭಾಮಂಡಲಮುದ್ಯಯೌ ॥

**83. ತತ್ರ ನಾಗಫಣೋತ್ಕ್ಷಿಪ್ತೇ ಸಿಂಹಾಸನನಿಷೇದುಷೀ।**
**ಸಮುದ್ರರಶನಾ ಸಾಕ್ಷಾತ್ ಪ್ರಾದುರಾಸೀದ್ವಸುಂಧರಾ ॥ ೮೩ ॥**

ಆ ಪ್ರಭಾಮಂಡಲದ ಮಧ್ಯದಲ್ಲಿ ಸಾಕ್ಷಾತ್ ವಸುಂಧರೆಯು ಸಾಗರದಿಂದ ಆವರಿಸಲ್ಪಟ್ಟು, ಸಹಸ್ರ ಹೆಡೆಗಳುಳ್ಳ ನಾಗರಾಜನಾದ ಆದಿಶೇಷನ ವಿಶಾಲವಾದ ಹೆಡೆಯ ಸಿಂಹಾಸನದಲ್ಲಿ ಕುಳಿತಿದ್ದಳು. ಸಮುದ್ರವು ಮೇಖಲೆಯಾಗಿರುವ (ಒಡ್ಯಾಣ) ಭೂಮಾತೆಯು ಶೇಷನ ಹೆಡೆಗಳಲ್ಲಿರುವ ಮಣಿಗಳ ಕಾಂತಿಯಿಂದ ರಾರಾಜಿಸುತ್ತ, (ವಿಜೃಂಭಿಸುತ್ತ) ಸ್ಪಷ್ಟವಾಗಿ ಗೋಚರಿಸಿದಳು.

ನಾಗಫಣಾಃ = ನಾಗಸ್ಯ ಫಣಾಃ ತತ್ರ ಉತ್‌ಕ್ಷಿಪ್ತಂ ಚ ತತ್ ಸಿಂಹಾಸನಂ ಚ ತಸ್ಮಿನ್ ನಿಷೇದುಷೀ = ನಾಗರಾಜನ ಹೆಡೆಯ ಮಣಿಯ ಸಿಂಹಾಸನದೊಳು ಆಸೀನಳೆನಿಸಿ ॥

**84. ಸಾ ಸೀತಾಮಂಕಮಾರೋಪ್ಯ ಭರ್ತೃಪ್ರಣಿಹಿತೇಕ್ಷಣಾಮ್ ।**
**ಮಾಮೇತಿ ವ್ಯಾಹರತ್ಯೇವ ತಸ್ಮಿನ್ ಪಾತಾಲಮಭ್ಯಗಾತ್ ॥ ೮೪ ॥**

ಭೂದೇವಿಯು ಬಹಳ ಸಂಭ್ರಮದಿಂದ ತನ್ನ ತೊಡೆಯಲ್ಲಿ ತನ್ನ ಮಗಳಾದ ಸೀತಾದೇವಿಯನ್ನು ತನ್ನ ತೊಡೆಯಲ್ಲಿ ಕುಳ್ಳಿರಿಸಿಕೊಂಡು ಭೂಮಿಯ ಒಳಕ್ಕೆ, ಪಾತಾಳಕ್ಕೆ (ಪಾತಾಳಗತಳಾಗಿ) ಹೊರಟಳು. ಜಾನಕಿಯು ನೆಟ್ಟನೋಟದಿಂದ ತನ್ನ ಪತಿಯನ್ನು ನೋಡುತ್ತಾ, ಕೊನೆಯ ಸಲ ನೋಡುವೆನೋ ಎಂಬಂತೆ, ಕಣ್ಣರಳಿಸಿ, ದಿಟ್ಟಿಸಿ ಆ ಮಹಾಪುರುಷನನ್ನು ನೋಡುತ್ತಿದ್ದಳು. ಶ್ರೀರಾಮನಾದರೋ "ಓ ಬೇಡ, ಬೇಡ. ದಯಮಾಡಿ ಬೇಡ" ವೆಂದು, ಸೀತೆಯನ್ನು ಒಯ್ಯಬೇಡವೆಂದು ಮನಸಾರೆ ವಸುಂಧರೆಯನ್ನು ಪ್ರಾರ್ಥಿಸುತಲಿದ್ದನು. ಬಾರಿಬಾರಿಗೂ ಬಿನ್ನವಿಸುತ್ತಿದ್ದನು.

ಪ್ರಣಿಹಿತೇಕ್ಷಣಾಂ ದತ್ತ ದೃಷ್ಟಿಂ—ಸೀತಾಮಂಗಮಾರೋಪ್ಯ ತಸ್ಮಿನ್ ಭರ್ತರಿ—ಮಾಹರೇತಿ ವ್ಯಾಹರತಿ ವದತ್ಯೇವ—ವ್ಯಾಹರನ್ನವನಾದೃತ್ಯೇರ್ಥಃ—"ಷಷ್ಠೀ ಚಾನಾದರೇ" ಇತಿ ಸಪ್ತಮಿ—ಪಾತಾಲಮಭ್ಯಗಾತ್ ॥

**85. ಧರಾಯಾಂ ತಸ್ಯ ಸಂರಂಭಂ ಸೀತಾಪ್ರತ್ಯರ್ಪಣೈಷಿಣಃ ।**
**ಗುರುರ್ವಿಧಿಬಲಾಪೇಕ್ಷೀ ಶಮಯಾಮಾಸ ಧನ್ವಿನಃ ॥ ೮೫ ॥**

ಮರುಕ್ಷಣವೇ ಶ್ರೀರಾಮನು ಭಯಂಕರವಾದ ಕೋಪವನ್ನು ತಾಳಿ ಸೀತೆಯನ್ನು ಮರಳಿ ತರುವೆನೆಂದು ತನ್ನ ಕೋದಂಡವನ್ನು ತುಡುಕಿದನು. ಪೃಥ್ವೀಮಾತೆಯನ್ನು ಶಿಕ್ಷಿಸುವೆನೆಂದು ಕೋದಂಡವನ್ನು (ಬಿಲ್ಲನ್ನು) ಕೈಯಲ್ಲಿ ಹಿಡಿದನು. ಆಗ ಸಾಕ್ಷಾತ್ ಜಗತ್ತಿನ ಗುರುವಾದ ಲೋಕಪಿತಾಮಹನಾದ ಬ್ರಹ್ಮದೇವನು ಪ್ರತ್ಯಕ್ಷನಾಗಿ ವಿಧಿಯ ಆದೇಶವನ್ನು ಶ್ರೀರಾಮನಿಗೆ ಅರುಹಿದನು. (ವಿಧಿಯ ಅಪೇಕ್ಷೆಯನ್ನು) ಲೋಕಪಿತಾಮಹನೊಂದಿಗೆ ದೇವಾದಿದೇವತೆಗಳು, ಮರುತ್ಗಣಗಳು, ಆದಿತ್ಯನೂ ಕಾಣಿಸಿಕೊಂಡರು. ಸೃಷ್ಟಿಕರ್ತನಾದ ಬ್ರಹ್ಮನು ವಿಧಿನಿಯಮವನ್ನು ಮರ್ಯಾದಿಸಬೇಕೆಂದೂ ವೀರಬಾರದೆಂದು, ಕೋಪಿಸಬಾರದೆಂದು, ಶಾಂತನಾಗಬೇಕೆಂದು ಶ್ರೀರಾಮನಿಗೆ ಅರುಹಿದರು. ಶ್ರೀರಾಮನು ಕೂಡಲೇ ಸಂಯಮಿಯಾದನು. ವಿಧಿಯ ನಿಲುವಿಗೆ ಮರ್ಯಾದೆಯಿತ್ತನು, ಶ್ರೀರಾಮ ಪರಮಾತ್ಮನು.

ಧನ್ವಿನ = ಅಸ್ತ್ರಧನುಷಸ್ತಸ್ಯ ರಾಮಸ್ಯ—ಸಂರಂಭಂ ವಿಧಿಬಲಾಪೇಕ್ಷೀ = ದೈವಶಕ್ತಿದರ್ಶಿ—ಗುರು = ಗುರುಬ್ರಹ್ಮಾ—ಶಮಯಾಮಾಸ—ಅವಶ್ಯಂ ಭಾವೀ ವಿಧಿರಿತಿ ಭಾವಃ ॥

**86. ಋಷೀನ್ವಿಸೃಜ್ಯ ಯಜ್ಞಾಂತೇ ಸುಹೃದಶ್ಚ ಪುರಸ್ಕೃತಾನ್ ।**
**ರಾಮಃ ಸೀತಾಗತಂ ಸ್ನೇಹಂ ನಿದಧೇ ತದಪತ್ಯಯೋಃ ॥ ೮೬ ॥**

ಕೋಸಲೇಶ ಶ್ರೀರಘುರಾಮಚಂದ್ರನು, ವಿಧ್ಯುಕ್ತವಾಗಿ ಅಶ್ವಮೇಧ ಯಾಗವನ್ನು ಪೂರ್ಣಗೊಳಿಸಿ, ಋಷಿಗಳನ್ನು, ಅತಿಥಿಅಭ್ಯಾಗತರನ್ನು, ಪ್ರತಿಷ್ಠಿತ ನೆಂಟರಿಷ್ಟರನ್ನು ಸತ್ಕರಿಸಿ ಬೀಳ್ಕೊಂಡನು. ಸೀತೆಯಮೇಲಿನ ಪ್ರೀತಿಯನ್ನು ಇದೀಗ ತನ್ನ ಮುದ್ದುಮಕ್ಕಳ ಮೇಲೆ ತೋರಿದನು. ಅತ್ಯಂತ ಮಮತೆಯಿಂದ, ವಾತ್ಸಲ್ಯ, ಸೌಹಾರ್ದದಿಂದ ಜಗದಾನಂದಮೂರ್ತಿಗಳಾದ ಆ ಬಾಲಕರನ್ನು ಸಲಹುತ್ತ ರಾಜ್ಯವಾಳಿದನು.

ಪುರಸ್ಕೃತವಾನ್=ಪೂಜಿತವಾನ್—ಯುಧಾಜಿತ್ ಸುಹೃದಶ್ಚ ವಿಸೃಜ್ಯ ಸೀತಾಗತಂ ಸ್ನೇಹಂ ತದಪತ್ಯಯೋಃ ಕುಶಲವಯೋರ್ನಿದಧೇ ॥

**87. ಯುಧಾಜಿತಶ್ಚ ಸಂದೇಶಾತ್ ಸ ದೇಶಂ ಸಿಂಧುನಾಮಕಮ್ ।**
**ದದೌ ದತ್ತ ಪ್ರಭಾವಾಯ ಭರತಾಯ ಧೃತಪ್ರಜಃ ॥ ೮೭ ॥**

ಭರತನ ಮಾವನಾದ ಯುಧಾಜಿತ್ತಿನ ಸಂದೇಶದಂತೆ ಪ್ರಜಾಹಿತೈಷಿಯಾದ ಶ್ರೀರಾಮಚಂದ್ರನು ಸಿಂಧುದೇಶವನ್ನು (ಪಾಕಿಸ್ತಾನದ ಭೂಭಾಗ) ಭರತನಿಗೆ ಕೊಡುಗೆಯಾಗಿ ನೀಡಿದನು. ಅದರೊಂದಿಗೆ ತನ್ನಲ್ಲಿದ್ದ ಐಶ್ವರ್ಯದ ಒಂದು ಭಾಗವನ್ನು ಕೊಟ್ಟನು.

ಯುಧಾಜಿತೋ = ಭರತಮಾತುಲಸ್ಯ—ಸಂದೇಶಾತ್ಸಿಂಧುನಾಮಕಂ ದೇಶಂ ದತ್ತ ಪ್ರಭಾವಾಯ ದತ್ತೈಶ್ವರ್ಯಾಯ—ಭರತಾಯ ದದೌ ॥

**88. ಭರತಸ್ತತ್ರ ಗಂಧರ್ವಾನ್ ಯುಧಿ ನಿರ್ಜಿತ್ಯ ಕೇವಲಮ್ ।**
**ಆತೋದ್ಯಂ ಗ್ರಾಹಯಾಮಾಸ ಸಮತ್ಯಾಜಯದಾಯುಧಮ್ ॥**
**॥ ೮೮ ॥**

ಅಪ್ರತಿಮವೀರನಾದ ಭರತನು ಸಿಂಧುದೇಶದಲ್ಲಿ ದಾಂಧಲೆ ನಡೆಸುತ್ತಿದ್ದ ಗಂಧರ್ವರನ್ನು ನಿಖರವಾದ ಯುದ್ಧದಲ್ಲಿ ಸೋಲಿಸಿ ಅವರ ಆಯುಧಗಳನ್ನು ಕಸಿದುಕೊಂಡನು. (ಮುಟ್ಟುಗೋಲುಹಾಕು). ನಿರಾಯುಧರಾದ ಗಂಧರ್ವರಲ್ಲಿ ಮತ್ತೆ ಉಳಿದುದೆಂದರೆ ಅವರ ಗಾನವಿದ್ಯೆಯು ಸಾಧನವಾದ ಕೊಳಲು, ತುತ್ತೂರಿ ಮಾತ್ರ. ಗಾನವಿದ್ಯೆಯ ಸಾಧನಗಳಾದ ಕೊಳಲು, ಮದ್ದಳೆ, ಕಂಜೀರ ವೀಣೆ, ತಂಬೂರಿ ಇತ್ಯಾದಿಗಳು ಮಾತ್ರ ಅವರ ಸ್ವತ್ತುಗಳಾಗಿ ಉಳಿದುವು. ಅವರು ಶಸ್ತ್ರಗಳನ್ನು ಮುಟ್ಟದಂತೆ ಗಂಧರ್ವರಿಗೆ ಕಟ್ಟಪ್ಪಣೆಮಾಡಿದನು.

ಗಂಧರ್ವಾನ್ನಿರ್ಜಿತ್ಯ ಕೇವಲಮೇಕಮಾತೋದ್ಯಂ = ವೀಣಾಂ ತತಂ ವೀಣಾಧಿಕವಾದ್ಯಮಾನದ್ಧಂ ಮುರಜಾಧಿಕಂ—ವಂಶಾಧಿಕಂ ತು ಸುಷಿರಂ ಕಾಂಸ್ಯತಾಲಾಧಿಕಂ ಘನಮ್—ಚತುರ್ವಿಧಮಿದಂ "ವಾದ್ಯಂ ವಾದಿತ್ರಾ ತೋದ್ಯಾನಾಮಕಮ್" ಇತ್ಯಮರಃ—ಆಯುಧಂ ಸಮತ್ಯಾಜಯತ್ = ತ್ಯಾಜಿತವಾನ್ ॥

**89. ಸ ತಕ್ಷಪುಷ್ಕಲೌ ಪುತ್ರೌ ರಾಜಧಾನ್ಯೋಸ್ತದಾಖ್ಯಯೋಃ ।**
**ಅಭಿಷಿಚ್ಯಾಭಿಷೇಕಾರ್ಹೌ ರಾಮಾಂತಿಕಮಗಾತ್ಪುನಃ ॥ ೮೯ ॥**

ಭರತನು ಪ್ರಾಯಭರಿತರಾದ ತನ್ನ ಇಬ್ಬರು ಪುತ್ರರನ್ನು, ತಕ್ಷ ಎಂಬವನನ್ನು ತಕ್ಷಶಿಲೆಯಲ್ಲಿ ಮತ್ತು ಪುಷ್ಕಲನನ್ನು ಪುಷ್ಕಲಾವತಿಯಲ್ಲಿ ನೆಲೆಗೊಳಿಸಿದನು. ಅವರು ಅನುಕ್ರಮವಾಗಿ ಅಭಿಷಿಕ್ತರಾಗಿ ಆ ಎರಡು ರಾಜಧಾನಿಗಳ ಮೂಲಕ ಗಾಂಧಾರ ದೇಶವನ್ನು ಆಳತೊಡಗಿದರು. ಆ ಬಳಿಕ ಬಂಧುಪ್ರೇಮಿಯಾದ, ಭರತನು ಶ್ರೀರಾಮಪ್ರೇಮಾಕರ್ಷಿತನಾಗಿ ಶ್ರೀರಾಮನ ಬಳಿಗೆ ಹೊರಟುಹೋದನು (ಅಣ್ಣನನ್ನು ಬಿಟ್ಟಿರಲಾರದೆ) ತಕ್ಷಶಿಲಾ ನಗರವು ಮಣಿಕ್ಯಾಲ ಮತ್ತು ರಾವಲ್‌ಪಿಂಡಿಯ (ಇಸ್ಲಾಮಾಬಾದ್) ಬಳಿಯಲ್ಲಿದೆ. ಇದು ಸಿಂಧೂ ಮತ್ತು ಹಿಡಾಸ್ಪಸ್ ನದಿಗಳ ಮಧ್ಯದಲ್ಲಿದೆ. ಪುಷ್ಕಲಾವತಿ ಅಥವಾ ಪುಷ್ಕರಾವತಿ

ನಗರವು ಅಟೋಕ್ ನಗರದ ಬಳಿಯಲ್ಲಿ ಸಿಂಧೂನದಿಯ ಪಶ್ಚಿಮದಂಡೆಯಲ್ಲಿದೆ (ದಡದಲ್ಲಿ). ತಕ್ಷಶಿಲೆ ನಗರವು ವಿತಸ್ತಾ ನದಿಯ ದಡದಲ್ಲಿದೆ. ಇವು ಪುರಾಣಪ್ರಸಿದ್ಧ ನಗರಗಳು. ಅಲ್ಲಿ ಸುತ್ತಮುತ್ತಲಿನ ಜನರು ಸಾಲ್ವರು, ಸೌವೀರರು, ಶಿಬಿಗಳು, ಕುಳಿಂದರು, ತ್ರಿಗರ್ತರು ಇವೇ ಮೊದಲಾದ ಪಂಗಡಗಳು. ಅವರೆಲ್ಲರೂ ಯುದ್ಧಪ್ರಿಯರು (ಯುದ್ಧವೀರರು) (ಜಗಳಗಂಟರು).

ಸ ಭರತಃ—ಅಭಿಷೇಕಾರ್ಹೌ ತಕ್ಷಪುಷ್ಕಲೌ ನಾಮ ಪುತ್ರೌ ತದಾಖ್ಯಯೋಃ—ಪುಷ್ಕಲಂ ಪುಷ್ಕಲಾವತ್ಯಾಂ ತಕ್ಷಂ ತಕ್ಷಶಿಲಾಯಾಮಿತಿ—ಪುನಾರಾಮಾಂತಿಕಮಗಾತ್—ಪುಷ್ಕಲಾವತಿ = ಪೇಶಾವರ(ಪಾಕಿಸ್ತಾನದಲ್ಲಿದೆ).

**90. ಅಂಗದಂ ಚಂದ್ರಕೇತುಂ ಚ ಲಕ್ಷ್ಮಣೋಽಪ್ಯಾತ್ಮಸಂಭವೌ ।**
**ಶಾಸನಾದ್ರಘುನಾಥಸ್ಯ ಚಕ್ರೇ ಕಾರಾಪಥೇಶ್ವರೌ ॥ ೯೦ ॥**

ಲಕ್ಷ್ಮಣನು ತನ್ನ ಪುತ್ರರತ್ನರಾದ (ಆತ್ಮಸಂಭವನಾದ) ಚಂದ್ರಕೇತು ಮತ್ತು ಅಂಗದರೆಂಬ ಪುತ್ರದ್ವಯರನ್ನು ರಘುನಾಥನ ಶಾಸನದಂತೆ ಕಾರಾಪಥಾಧೀಶರನ್ನಾಗಿ ನೇಮಿಸಿದನು. ಚಂದ್ರಕೇತುವು ಉತ್ತರ ಮಲ್ಲಭೂಮಿಯನ್ನು ಚಂದ್ರಪುರ (ಇಂದಿನ ಚಾಂದ್‌ಪುರ)ವನ್ನು ರಾಜಧಾನಿಯನ್ನಾಗಿ ಮಾಡಿ ಆಳಿದನು. ಅಂಗದನು ಅಂಗದಪುರಿಯನ್ನು ರಾಜಧಾನಿಯನ್ನಾಗಿ (ಕೇಂದ್ರವಾಗಿ) ಮಾಡಿ ರಾಜ್ಯಪಾಳಿದನು

ರಘುನಾಥಸ್ಯ = ಶ್ರೀರಾಮಸ್ಯ—ಶಾಸನಾದಂಗದಂ ಚಂದ್ರಕೇತುಂ ಚ ತದಖ್ಯಾವಾತ್ಮಸಂಭವೌ = ಪುತ್ರೌ—ಕಾರಾಪಥೋ ನಾಮ ದೇಶಃ—ತಸ್ಯೇಶ್ವರೌ ಚಕ್ರೇ ॥

**91. ಇತ್ಯಾರೋಪಿತ ಪುತ್ರಾಸ್ತೇ ಜನನೀನಾಂ ಜನೇಶ್ವರಾಃ ।**
**ಭರ್ತೃಲೋಕಪ್ರಪನ್ನಾನಾಂ ನಿವಾಪಾನ್ವಿದಧುಃ ಕ್ರಮಾತ್ ॥ ೯೧ ॥**

ತಮ್ಮ ಮಕ್ಕಳಿಗೆ ಪಟ್ಟಕಟ್ಟಿ, ಅವರು ಕೋಸಲ ಸಾಮ್ರಾಜ್ಯದ ಅಧಿಪತಿಗಳನ್ನಾಗಿ (ರಾಜಪ್ರತಿನಿಧಿಗಳನ್ನಾಗಿ) ಮಾಡಿ ರಾಜ್ಯದ ಆಡಳಿತ ಸೂತ್ರವನ್ನು ಅವರ ಕೈಗೆ ಕೊಟ್ಟು ಆ ನಾಲ್ವರು ಸೋದರರು ನಿಶ್ಚಿಂತರಾಗಿದ್ದರು. ಮುಂದೆ ಕಾಲಗತಿಯಲ್ಲಿ ದಶರಥನ ಮೂವರು ರಾಣಿಯರು ಕೌಸಲ್ಯಾ, ಕೈಕೇಯಿ, ಮತ್ತು ಸುಮಿತ್ರೆಯರು ತಮ್ಮ ಭರ್ತೃವಿನ (ಪತಿಯ, ಗಂಡನ) ಲೋಕವನ್ನು ಸೇರಿದರು. ತಮ್ಮ ತಾಯಂದಿರು ಸ್ವರ್ಗಸ್ಥರಾದ ಬಳಿಕ ಆ ನಾಲ್ವರು ಸೋದರರು ಜೊತೆಗೂಡಿ ತಮ್ಮ ಮಾತೆಯರ ಔರ್ಧ್ವದೈಹಿಕಕ್ರಿಯೆಗಳನ್ನು (ಪಿಂಡೋದಕ) ಮಾಡಿದರು. ಶ್ರಾದ್ಧಾದಿ ಅಪರಕ್ರಿಯೆಗಳನ್ನು ಮಾಡಿದರು. ತಾವು ಕೇಶಮುಂಡನ (ಮುಂಡೆ ಬೋಳಿಸಿಕೊಂಡು, ತಂಡು ಕಂಬಳಿ ಹೊದೆದು — ಸರ್ವಜ್ಞ) ಮಾಡಿಕೊಂಡು ತಮ್ಮ ತಾಯಂದಿರಿಗೆ ಪುಣ್ಯಗತಿಯು ಪ್ರಾಪ್ತವಾಗುವಂತೆ ತಮ್ಮ ಪತಿಯ ಲೋಕವು ಪ್ರಾಪ್ತವಾಗುವಂತೆ, (ತರ್ಪಣಾದಿ, ಶಾಂತಿಕಾರ್ಯ,(ತಿಥಿ) ಅಪರಕರ್ಮಗಳನ್ನು ವಿಧಿವತ್ತಾಗಿ, ಕಡ್ಡಾಯವಾಗಿ ಕೈಗೊಂಡರು. (ಉತ್ತರಕ್ರಿಯೆಗೈದರು).

ಜನೇಶ್ವರಾ ರಾಮಾದಯೋ ಭರ್ತೃಲೋಕ ಪ್ರಪನ್ನಾನಾಂ ಸ್ವರ್ಯಾತಾನಾಂ—ಕ್ರಮಾನ್ನಿವಾಪಾನ್ ಶ್ರಾದ್ಧಾನ್ವಿದಧುಶ್ಚಕ್ರು—

**92. ಉಪೇತ್ಯ ಮುನಿವೇಷೋಽಥ ಕಾಲಃ ಪ್ರೋವಾಚ ರಾಘವಮ್ ।**
**ರಹಃ ಸಂವಾದಿನಂ ಪಶ್ಯೇತ್ ಆವಾಂ ಯಸ್ತ್ವಂ ತ್ಯಜೇರಿತಿ ॥ ೯೨ ॥**

ಮುಂದೆ ಒಂದುದಿನ ಮುನಿವೇಷದಿಂದ ಕಾಲನಾದ, ಯಮಧರ್ಮರಾಯನು (ಅಂತಕನು, ಮಸಣದೊಡೆಯನು) ಶ್ರೀರಾಮನನ್ನು ಕಾಣಲು ಅಯೋಧ್ಯೆಗೆ ಬಂದನು. "ನಾವು ಗುಟ್ಟಿನಲ್ಲಿ, ರಹಸ್ಯವಾಗಿ ಮಾತನಾಡುವ ವೇಳೆಯಲ್ಲಿ ಯಾರು ಅಡ್ಡಿಪಡಿಸುವರೋ [ಯಾರು ರಹಸ್ಯಕ್ಕೆ ಭಂಗ(ಸಂಚಕಾರ) ತರುವರೋ] ಯಾರು ಮಧ್ಯೆ ಬಾಯಿ ಹಾಕಿ ಮಾತನಾಡುವರೋ ಅಂತವರನ್ನು ನೀನು ತ್ಯಜಿಸಬೇಕಾಗುವುದು" ಎಂದು ಮೃತ್ಯುವು ಕೇಳಿಕೊಳ್ಳಲು ಶ್ರೀರಾಮನು "ಹಾಗೆಯೇ ಆಗಲಿ" ಎಂದು ಒಪ್ಪಿಗೆಯನ್ನಿತ್ತನು.

ಕಾಲೋ = ಅಂತಕೋ—ಮುನಿವೇಷಃ ಸನ್ನುಪೇತ್ಯ ರಾಘವಂ ಪ್ರೋವಾಚ—ಕಿಮಿತ್ಯಾಹ—ರಹಸ್ಯೇ = ಏಕಾಂತೇ—ಸಂವಾದಿನೌ = ಸಂಭಾಷಿಣಾ—ವಾಚಾಯಃ ಪಶ್ಯೇತ್—ರಹಸ್ಯಭಂಗಂ ಕುರ್ಯಾದಿತ್ಯರ್ಥಃ—ತಂತ್ಯಜೇರಿತಿ—ತಂತ್ಯಜೇಃ = ನೀನು ತ್ಯಜಿಸುವುದು—ರಹಃ ಸಂವಾದಿನೌ = ರಹಸಿ ಪರಿವಾದಿನೌ—

**93. ತಥೇತಿ ಪ್ರತಿಪನ್ನಾಯ ವಿವೃತಾತ್ಮಾ ನೃಪಾಯ ಸಃ ।**
**ಆಚಖ್ಯೌ ದಿವಮಧ್ಯಾಸ್ವ ಶಾಸನಾತ್ಪರಮೇಷ್ಠಿನಃ ॥ ೯೩ ॥**

ಆ ಬಳಿಕ ಅವರೀರ್ವರು ವಿಶ್ವವಿಭೂತಿಗಳು ರಹಸ್ಯವಾಗಿ, ಸಂಭಾಷಿಸಲು ಆರಂಭಿಸಿದರು. ಯಮನು ತನ್ನ ನಿಜಸ್ವರೂಪವನ್ನು ಶ್ರೀರಾಮನಿಗೆ ತೋರಿಸಿಕೊಂಡನು. "ಶ್ರೀರಾಮನಿಗೆ ಪರಮೇಷ್ಠಿಯಾದ. ಬ್ರಹ್ಮದೇವರ ಆಜ್ಞೆಯಂತೆ ನೀನು ನಿನ್ನ ಪರಮಧಾಮಕ್ಕೆ ಹಿಂದಿರುಗಬೇಕು. ನಿನ್ನ ಅವಧಿ ತೀರಿತು. ನಿನ್ನ ಅವತಾರದ ಉದ್ದೇಶವು ಈಡೇರಿದೆ. ನಿನ್ನ ಅವತಾರವು ಮುಗಿಯಿತು (ಕೊನೆಯ ಘಟ್ಟ). ಇದು ಬ್ರಹ್ಮ ಆಜ್ಞೆ. ಇದನ್ನು ನೀನು ಗೌರವಿಸಬೇಕು" ಎಂದು ಅರಿಕೆ ಮಾಡಿಕೊಂಡನು.

ವಿವೃತಾತ್ಮಾ = ಪ್ರಕಾಶಿತ ನಿಜಸ್ವರೂಪಃ ಸನ್ — ಪರಮೇಷ್ಠಿನೋ = ಪರಬ್ರಹ್ಮಣಃ—

**94. ವಿದ್ವಾನಪಿ ತಯೋರ್ದ್ವಾಸ್ಥಃ ಸಮಯಂ ಲಕ್ಷ್ಮಣೋಽಭಿನತ್ ।**
**ಭೀತೋ ದೂರ್ವಾಸಸಃ ಶಾಪಾತ್ ರಾಮಸಂದರ್ಶನಾರ್ಥಿನಃ ॥ ೯೪ ॥**

ಹೀಗೆ ಅವರು ಗೋಪ್ಯವಾಗಿ ಮಾತನಾಡುತ್ತಿದ್ದಾಗ ಕೋಪಕ್ಕೆ ಹೆಸರಾದ ದೂರ್ವಾಸ ಮಹರ್ಷಿಗಳು ಬಂದು ತಾನು ಕೂಡಲೇ ಶ್ರೀರಾಮನನ್ನು ಸಂದರ್ಶಿಸಬೇಕೆಂದು ಹಠ ಹಿಡಿದರು. ದ್ವಾರರಕ್ಷಕನಾದ ಲಕ್ಷ್ಮಣನು ಮಧ್ಯೆ ಪ್ರವೇಶಿಸಬಾರದೆಂದು ತಿಳಿದಿದ್ದರೂ ದೂರ್ವಾಸರ ಶಾಪದ ಭೀತಿಯಿಂದ, ದೂರ್ವಾಸರು ಬಂದ ವಿಷಯವನ್ನು ಕೂಡಲೇ ಅಣ್ಣನಿಗೆ ತಿಳಿಸಿದನು. ಯಮನ ನಿರ್ಬಂಧದಂತೆ ಶ್ರೀರಾಮನು ನಿಯಮವನ್ನು ಉಲ್ಲಂಘಿಸಿದ ತಪ್ಪಿಗೆ ಲಕ್ಷ್ಮಣನನ್ನು ತ್ಯಜಿಸಬೇಕು" (ಎಲ್ಲವೂ ಕಾಲಚೋದಿತ) ಇಲ್ಲವೇ ಲಕ್ಷ್ಮಣನಿಗೆ ಮರಣದಂಡನೆಯನ್ನು ವಿಧಿಸಬೇಕು.

ವಿದ್ವಾನಪಿ ಪೂರ್ವಶ್ಲೋಕೋಕ್ತಂ ಜಾನನ್ನಪಿ ರಾಮಸಂದರ್ಶನಾರ್ಥಿನೋ ದೂರ್ವಾಸಸೋ = ಮುನೇಃ ಶಾಪಾದ್ಭೀತಃ ಸನ್—ತಯೋಃ ಕಾಲ ರಾಮಯೋಃ ಸಮಯಮ್ ಸಂವಾದವಮ್—ಅಭಿನದ್ವಿಭೇದ ॥

**95. ಸ ಗತ್ವಾ ಸರಯೂತೀರಂ ದೇಹತ್ಯಾಗೇನ ಯೋಗವಿತ್ ।**
**ಚಕಾರಾವಿತಥಾಂ ಭ್ರಾತುಃ ಪ್ರತಿಜ್ಞಾಂ ಪೂರ್ವಜನ್ಮನಃ ॥ ೯೫ ॥**

ಮಹಾಸತ್ವಶಾಲಿಯಾದ, ಆತ್ಮಸಂಯಮಿಯಾದ ಲಕ್ಷ್ಮಣನು ಶ್ರೀರಾಮನ ಸತ್ಯ ವಚನವನ್ನು ತಾನೇ ಪಾಲಿಸಿದನು. ಶ್ರೀರಾಮನಿಗೆ ಆಜ್ಞಾಪಿಸಲು ಅವಕಾಶವನ್ನೇ ಕೊಡಲಿಲ್ಲ. ಅವನು ತಾನಾಗಿ ಸರಯೂ ನದೀ ತೀರಕ್ಕೆ ನಡೆದು ಅಲ್ಲಿ ಯೋಗದಲ್ಲಿ ನಿಂದನು. ಪ್ರಾಣವಾಯುವನ್ನು ಬಂಧಿಸಿ ಮರಣೋನ್ಮುಖನಾದನು. ಯೋಗಗತಿಯಿಂದ ತನ್ನ ಆತ್ಮವನ್ನು ದೇಹದಿಂದ ಪ್ರತ್ಯೇಕಿಸಿದನು. ಪ್ರಾಣವಾಯುವನ್ನು ಬ್ರಹ್ಮರಂಧ್ರದ ಮೂಲಕ ಹೊರಕ್ಕೆ ತಳ್ಳಿ ಆದಿಶೇಷನಾದ ಲಕ್ಷ್ಮಣನು ತನ್ನ ಪೂರ್ವ ರೂಪವಾದ ಹಾವಾಗಿ ಸರಯೂ ನದಿಗೆ ಹರಿದುಹೋದನು.

ಯೋಗವಿಯೋಗಮಾರ್ಗವೇದೀ ಸ ಲಕ್ಷ್ಮಣಃ ಸರಯೂ ತೀರಂಗತ್ವಾ ದೇಹತ್ಯಾಗೇನ ಪೂರ್ವಜನ್ಮನೋ ಭ್ರಾತುಃ ಪ್ರತಿಜ್ಞಾಮಪಿ ತಥಾಂ ಸತ್ಯಾಂಚಕಾರ—ಸರಯೂತೀರಂ= ಸರಯ್ವೋಃ ತೀರಮ್=ಸರಯೂ ನದೀತೀರವು—ಯೋಗಯಿತ್ = ಯೋಗವನ್ನು ಅರಿತವರು.

**96. ತಸ್ಮಿನ್ನಾತ್ಮಚತುರ್ಭಾಗೇ ಪ್ರಾಜ್ಞಾಕಮಧಿತಸ್ಥುಷಿ ।**
**ರಾಘವಃ ಶಿಥಿಲಂ ತಸ್ಥೌ ಭುವಿ ಧರ್ಮಸ್ತ್ರಿಪಾದಿವ ॥ ೯೬ ॥**

ಲಕ್ಷ್ಮಣನ ರೂಪದಲ್ಲಿದ್ದ ಪರಮಾತ್ಮನಾದ ಶ್ರೀರಾಮಚಂದ್ರನ ಆತ್ಮದ ನಾಲ್ಕು ಭಾಗದಲ್ಲಿ ಒಂದು ಭಾಗವು (ಚತುರ್ಥಭಾಗದಲ್ಲಿ ಒಂದು ಭಾಗವು) ಇದೀಗ ತನ್ನ ಸ್ವರ್ಗ ಧಾಮಕ್ಕೆ ವೈಕುಂಠಲೋಕಕ್ಕೆ (ಮೋಕ್ಷಧಾಮಕ್ಕೆ) ಹಿಂತೆರಳಲು ಶ್ರೀರಾಮನು ಮೂರು ಪಾದಗಳಿರುವ ಧರ್ಮದಂತೆ ಶಿಥಿಲನಾಗಿ ಭೂಮಿಯಲ್ಲಿ ಕಾಣಿಸಿಕೊಂಡನು. ನಾಲ್ಕು ಮಂದಿ ಸಹೋದರರು ಪರಮಾತ್ಮನ ಆತ್ಮದ ನಾಲ್ಕು ಭಾಗಗಳಂತೆ. ಶೇಷರೂಪಿಯಾದ ಲಕ್ಷ್ಮಣನು ತನ್ನ ಪರಮಧಾಮಕ್ಕೆ ತೆರಳಲು ಶ್ರೀರಾಮಚಂದ್ರನು ತನ್ನ ಆತ್ಮದ ಚತು ರ್ಭಾಗದಲ್ಲಿ ಒಂದು ಭಾಗವನ್ನು ಕಳೆದುಕೊಂಡನು. ಧರ್ಮವು ನಾಲ್ಕು ಪಾದಗಳಿಂದ ಭದ್ರವಾಗಿ ಚರಿಸುವುದೆಂದು ಶಾಸ್ತ್ರಗಳು ಸಾರುತ್ತಿವೆ, ಮೂರು ಪಾದಗಳಿರುವ ಧರ್ಮವು ಭದ್ರವಾಗಿ ಚರಿಸಲಾರದು. ಮುಗ್ಗರಿಸಿಬೀಳುವ ಸಾಧ್ಯತೆಯಿದೆ. ಇದೀಗ ಶ್ರೀರಾಮ ಚಂದ್ರನು ತನ್ನ ಪೂರ್ಣತೇಜಸ್ಸಿನ ¼ ಭಾಗವನ್ನು ಕಳೆದುಕೊಂಡು ಕಳೆಗುಂದಿದನು.

ಚತುರ್ಥೋಂ = ಭಾಗಶ್ಚತುರ್ಭಾಗಃ—ಆತ್ಮಚತುರ್ಭಾಗೇ ತಸ್ಮಿಂಲಕ್ಷ್ಮಣೇ ಪ್ರಾಜ್ ನಾಕಮಧಿತಸ್ಥುಷಿ ಪೂರ್ವಂ ಸ್ವರ್ಗಂ ಜಗ್ಮುಷಿ ಸತಿ ರಾಘವೋ = ರಾಮಃ ಭುವಿ ತ್ರಿಪಾದ್ಧರ್ಮ ಇವ—ಶಿಥಿಲಂ ತಸ್ಥೌ—ಪಾದಾಶ್ಚತ್ವಾರ್ಯಂಶಾಃ "ಇತ್ಯಮರಃ—ತ್ರಯಃ ಪಾದಾ ಯಸ್ಯ ಸೌ ತ್ರಿಪಾತ್—ಸಂಖ್ಯಾಸುಪೂರ್ವಸ್ಯ" ಇತ್ಯಕಾರಲೋಪಃ ಸಮಾಸಾಂತಃ (ಪಾಣಿನಿ) ತ್ರಿಪಾದಿವ = ಮೂರಡಿಯ ಧರ್ಮದೊಲು.

**97. ಸ ನಿವೇಶ್ಯ ಕುಶಾವತ್ಯಾಂ ರಿಪುನಾಗಾಂಕುಶಂ ಕುಶವ್ ।**
**ಶರಾವತ್ಯಾಂ ಸತಾಂ ಸೂಕ್ತೈಃ ಜನಿತಾಶ್ರುಲವಂ ಲವವ್ ॥೯೭॥**

ಶ್ರೀರಾಮಚಂದ್ರನು ತನ್ನ ಪರಮಧಾಮಕ್ಕೆ ತೆರಳುವ ಮುನ್ನ ತನ್ನ ಸಾಮ್ರಾಜ್ಯವನ್ನು ತನ್ನ ಇಬ್ಬರು ಮಕ್ಕಳಿಗೆ ಹಂಚಿಕೊಟ್ಟನು. ವೈರಿಗಳೆಂಬ ಮದಗಜಗಳಿಗೆ ಕುಶನು ಅಂಕುಶಪ್ರಾಯನಾಗಿದ್ದನು. ಅವನ ಪಾಲಿಗೆ ದಕ್ಷಿಣಕೋಸಲ ರಾಜ್ಯವು ಬಂದಿತು. ಅದರ ರಾಜಧಾನಿ ಕುಶಾವತಿನಗರ. ಕುಶಾವತಿಯನ್ನು ಕೇಂದ್ರವಾಗಿರಿಸಿ ವಿಂಧ್ಯಾಪರ್ವತಗಳ ತನಕ ಹರಡಿದ್ದ ಸಾಮ್ರಾಜ್ಯವನ್ನು ಕುಶನು ಧರ್ಮದಿಂದ ಪಾಲಿಸಿದನು.

ಲವನು ಬಹಳ ಬುದ್ಧಿವಂತನಾದ, ಯಶೋವಂತನಾದ ಮೇಧಾವಿ. ತನ್ನ ಮಾತುಗಳಿಂದ, ವಾತುಗಾರಿಕೆಯಿಂದ, ವಾಗ್ವಿಲಾಸದಿಂದ ಜನರ ಕಣ್ಣುಗಳಲ್ಲಿ ಕಣ್ಣೀರನ್ನು ಬರಿಸಬಲ್ಲ ಜಾಣತನ ಹೊಂದಿದ್ದನು. ಅವನು ಉತ್ತರಕೋಸಲದ ಅಧಿಪತಿ. ಶ್ರಾವಸ್ತಿ ಅಥವಾ ಶರಾವತಿಯನ್ನು ರಾಜಧಾನಿಯನ್ನು ಮಾಡಿಕೊಂಡು ಲವನು ನೇಪಾಳದ ತನಕ ಹರಡಿದ್ದ (ಉದಕಪ್ರತಸ್ಥೇ) ರಾಜ್ಯವನ್ನು ಯಶೋವಂತನಾಗಿ, ಆಯುಷ್ಮಂತನಾಗಿ, ಆಗಿನ ಯುಗಧರ್ಮಕ್ಕೆ ತಕ್ಕಂತೆ ಆಳಿದನು.

ರಿಪವ ಏವ ನಾಗಾ = ಗಜಾಸ್ತೇಷಾಮಂಕುಶಂ ನಿವಾರಕಂ ಕುಶಂ—ಸೂಕ್ತೈಃ = ಸಮೀಚೀನವಚನೈಃ ಸತಾಂ ಜನಿತಾ ಅಶ್ರುಲವಾ ಅಶ್ರುಲೇಶಾ ಯೇನ ತಂ—"ಶರಾದೀನಾಂ ಚ" ಇತಿ "ಶರ "ಕುಶ" ಶಬ್ದಯೋ ದೀರ್ಘಃ"

**98. ಉದಕ್ಪ್ರತಸ್ಥೇ ಸ್ಥಿರಧೀಃ ಸಾನುಜೋಽಗ್ನಿಪುರಃ ಸರಃ ।**
**ಅನ್ವಿತಃ ಪತಿವಾತ್ಸಲ್ಯಾತ್ ಗೃಹವರ್ಜಮಯೋಧ್ಯಯಾ ॥೯೮॥**

ಗೃಹಸ್ಥಾಶ್ರಮಧರ್ಮದ ವಿಧಿಯಂತೆ ಪವಿತ್ರಾಗ್ನಿಯನ್ನು ಲವನು ಮುಂದಕ್ಕೆ ಸಾಗಿಸಿದನು. ತನ್ನ ಅನುಜರಿಂದ ಒಡಗೂಡಿ ಉತ್ತರ ಕೋಸಲಕ್ಕೆ ನಡೆದನು. ಅವನ ಮೇಲಿನ ಅಧಿಕ ಪ್ರೇಮದಿಂದ ಅಯೋಧ್ಯೆಯ ಜನರು ತಮ್ಮ ಮನೆಮಠಗಳನ್ನು ತೊರೆದು ಸ್ಥಿರ ಬುದ್ಧಿಯುಳ್ಳವನಾದ ಧರ್ಮಾತ್ಮನಾದ ಲವನನ್ನು ಹಿಂಬಾಲಿಸಿದರು. ಪ್ರಜಾಹಿತೈಷಿಯಾದ ಲವನು ಶರಾವತಿ ನಗರವನ್ನು ಕೇಂದ್ರಬಿಂದುವನ್ನಾಗಿ ಮಾಡಿಕೊಂಡು ಪ್ರಜಾರಂಜಕನಾಗಿ ರಾಜ್ಯಭಾರ ಮಾಡಿದನು.

ಗೃಹಾನ್ ವರ್ಜಯಿತ್ವಾ = ಗೃಹವರ್ಜಮ್—ಪತೀವಾತ್ಸಲ್ಯಾ—ಅಯೋಧ್ಯಯಾನ್ವಿತೋಽನುಗತ ಉದಕಪ್ರತಸ್ಥೇ—ಉದಕ್‌ಪ್ರತಸ್ಥೇ = ಉತ್ತರಕ್ಕೆ ತೆರಳಿದನು—ಗೃಹವರ್ಜಮ್ = ಗೃಹವನ್ನು ತ್ಯಜಿಸಿ—ಸ್ಥಿರಧೀಃ ಸ್ಥಿರಾಧೀಃ ಯಸ್ಯ ಸಃ = ಸ್ಥಿರಬುದ್ಧಿಯುಳ್ಳವನು.

**99. ಜಗೃಹುಸ್ತಸ್ಯ ಚಿತ್ತಜ್ಞಾಃ ಪದವೀಂ ಹರಿರಾಕ್ಷಸಾಃ ।**
**ಕದಂಬಮುಕುಲಸ್ಥೂಲೈಃ ಅಭಿವೃಷ್ಟಾಂ ಪ್ರಜಾಶ್ರುಭಿಃ ॥೯೯॥**

ಶ್ರೀರಾಘವನು (ರಾಜಾರಾಮನು) ತನ್ನ ಮನೆಯಾದ ಅಯೋಧ್ಯಾನಗರವನ್ನು ತೊರೆಯುವುದೆಂಬುದನ್ನು ಅರಿತು ಅಯೋಧ್ಯೆಯ ಪುರಜನರು (ನಾಗರಿಕರು) ಕಟ

ಶ್ರೀಪ್ಪರು. ರಾಕ್ಷಸವರೇಣ್ಯರು ಅರಿತು ಕದಂಬ ವೃಕ್ಷದ ಸ್ಥೂಲವಾದ (ದಪ್ಪನಾದ) ಮೊಗ್ಗಿಗೆ ಸಮಾನಾದ, ದಪ್ಪನಾದ ಕಣ್ಣೀರ ಹನಿಗಳನ್ನು ಸುರಿಸುತ್ತಾ, ಹಿಂಬಾಲಿಸುತ್ತಾ ನಡೆದರು.

ಪ್ರಜಾಶ್ರುಭಿರಭಿವೃಷ್ಟಾಂ ತಸ್ಯ ರಾಮಸ್ಯ ಪದವೀಂ ಮಾರ್ಗಂ ಜಗೃಹುಃ—ತಸ್ಯ ಪದವೀಂ ಜಗೃಹುಃ = ಅನುಸರಿಸಿ ನಡೆದರು.

**100. ಉಪಸ್ಥಿತ ವಿಮಾನೇನ ತೇನ ಭಕ್ತಾನುಕಂಪಿನಾ ।**
**ಚಕ್ರೇ ತ್ರಿದಿವನಿಃಶ್ರೇಣಿಃ ಸರಯೂರನುಯಾಯಿನಾಮ್ ॥ ೧೦೦ ॥**

ಶ್ರೀರಾಮನು ಭಕ್ತಪರಾಧೀನನು, ದೀನಜನಮಂದಾರನು, ಸುಗುಣಗುಣ ವಿಸ್ತಾರನು, ಸರ್ವರಲ್ಲೂ ಅನುಕಂಪವುಳ್ಳವನು. ಅವನ ಇಹದ ಕೊನೆಯ ಗಳಿಗೆ ಇದೀಗ ಸಂಪ್ರಾಪ್ತವಾಗಿದೆ. ಅವನ ಎಣಿಕೆಯಂತೆ ಸುರಲೋಕದ ವಿಮಾನವು ಭೂಮಿಗಿಳಿಯಲು, ಶ್ರೀರಾಮನು ತನ್ನ ಸಹೋದರರೊಂದಿಗೆ ಹೋಗಿ ಪುಷ್ಪಕವಿಮಾನದಲ್ಲಿ ಉಪಸ್ಥಿತನಾದನು. (ಕುಳಿತನು). ತನ್ನ ಅನುಯಾಯಿಗಳಿಗೆ, ಭಕ್ತಜನರಿಗೆ ಸರಯೂ ನದಿಯಲ್ಲಿ ಸ್ನಾನಮಾಡಿ ಸ್ವರ್ಗಕ್ಕೇರುವ ಅನುಗ್ರಹವಿತ್ತನು. ಆದರಿಂದಾಗಿ ಸ್ವರ್ಗಕ್ಕೇರುವ ನೂಲೇಣಿಯಂತೆ ಸರಯೂನದಿಯು ಕಂಗೊಳಿಸಿತು. ಸಾಮಾನ್ಯ ಜನರು ದಿವಕೇರುವ (ಸಗ್ಗಕ್ಕೆ, ಸ್ವರ್ಗಕ್ಕೆ) ನೂಲೇಣಿಯಾಯಿತು ಪಾವನವಾದ ಸರಯೂ ನದಿಯು. ಅವರು ಆ ನದಿಯಲ್ಲಿ ಸ್ನಾನಮಾಡಿ ಪಾಪರಾಶಿಯನ್ನು ಕಳೆದುಕೊಂಡು ನೆಟ್ಟಗೆ (ತಡೆರಹಿತ) ಸ್ವರ್ಗಕ್ಕೇರಿದರು (ಸ್ವರ್ಗಕ್ಕೆ ನಡೆದರು).

ಉಪಸ್ಥಿತಂ = ಪ್ರಾಪ್ತಂ—ಸರಯೂಸ್ತ್ರಿದಿವ ನಿಃಶ್ರೇಣಿಃ ಸ್ವರ್ಗಾಧಿರೋಹಿಣೀ ಚಕ್ರೇ—"ನಿಃಶ್ರೇಣಿಸ್ತ್ವಧಿರೋಹಿಣೀ" ಇತ್ಯಮರಃ—ಚಕ್ರೇ ತ್ರಿದಿವನಿಃಶ್ರೇಣಿಃ = ಸಾರುವೊಡೆ ಒಂದೇಣಿಯೋಲ್ ಎಸಗಿದನು ಸರಯುವನು ಸಾರುವೊಡೆದಿವಕೆ (ದಿವ = ಸ್ವರ್ಗ).

**101. ಯದ್ಗೋಪ್ರತರಕಲ್ಪೋಽಭೂತ್ ಸಮ್ಮರ್ದಸ್ತತ್ರ ಮಜ್ಜನಾತ್ ।**
**ಅತಸ್ತದಾಖ್ಯಯಾ ತೀರ್ಥಂ ಪಾವನಂ ಭುವಿ ಪಪ್ರಥೇ ॥ ೧೦೧ ॥**

ಅಂದು ಆ ಅಯೋಧ್ಯೆಯ ಜನರ ಸಮೂಹವು ಬಹಳ ಉಲ್ಲಸಿತರಾಗಿ ಗೋಸಮೂಹದಂತೆ ಈಜಾಡುತ್ತಾ, ಮುಳುಗಾಡಿ ಸಂತಸದಿಂದ ಸರಯೂ ನದಿಯಲ್ಲಿ ಸ್ನಾನ ಮಾಡಿದರು. ಅಂದಿನ ಆ ವಿಶೇಷ ತರದ ಮಜ್ಜನದಿಂದ, ಜನರು ಮಾಡಿದ ಅಪೂರ್ವವಾದ ಸ್ನಾನದಿಂದ ಆ ತಾಣವು ಗೋಪ್ರತರ ತೀರ್ಥವೆಂದು ಜಗದ್ವಿಖ್ಯಾತವಾಯಿತು. ಗೋಪ್ರತರ ತೀರ್ಥವು ಭಾರತದ ಬಹಳ ಪವಿತ್ರವಾದ ಒಂದು ದಿವ್ಯಕ್ಷೇತ್ರ. ಆ ತಾಣದಲ್ಲಿ ಅಂದಿನ ದಿನ ಲಕ್ಷಾಂತರ ಮಂದಿ ಅಯೋಧ್ಯೆಯ ನಾಗರಿಕರು ಏಕಕಾಲದಲ್ಲಿ ಸ್ವರ್ಗಕ್ಕೇರಿದ ಪುರಾಣಪ್ರಸಿದ್ಧವಾದ ದಿವ್ಯಕ್ಷೇತ್ರ. ಅವರು ಶ್ರೀರಾಮನನ್ನು ಬಿಟ್ಟಿರಲಾರದೆ ಅವನನ್ನು ಅನುಸರಿಸಲು ನಿಯೋಜಿಸಿದ್ದರು. (ಪ್ರಾಣತ್ಯಾಗ, ಹರಿಕಿರಿ, ಆತ್ಮಹತ್ಯೆ)

ಅವರು ಹಿಂದಿರುಗಲು ಇಚ್ಛಿಸದೆ ನೀರಿನಲ್ಲಿ ಜಾನುವಾರುಗಳಂತೆ ಈಜಾಡುತ್ತಾ ಶ್ರೀರಾಮನ ಕರುಣೆಯಿಂದ ಸ್ವರ್ಗಕ್ಕೆ ನಡೆದರು.

ಗೋಪ್ರತರೋ = ಗೋಪ್ರತರಣಮ್—ಅತಸ್ತದಾಖ್ಯಯಾ = ಗೋಪ್ರತರಾಖ್ಯಯಾ—ಪಾವನಂ = ಶೋಧಕಂ—ತೀರ್ಥಂಭುವಿಪಪ್ರಥೇ—ಗೋಪ್ರತರಕಲ್ಪಃ = ಗೋಪ್ರತರದೋಲೊಗೆದಕತದೆ.

**102. ಸವಿಧುರ್ವಿಧುಧಾಂಶೇಷು ಪ್ರತಿಪನ್ನಾತ್ಮಮೂರ್ತಿಷು ।**
**ತ್ರಿದಶೀಭೂತಪೌರಾಣಾಂ ಸ್ವರ್ಗಾಂತರಮಕಲ್ಪಯತ್ ॥ ೧೦೨ ॥**

ನಿತ್ಯತೃಪ್ತನಾದ ಕಾರುಣ್ಯನಿಧಿ ಶ್ರೀರಘುರಾಮಚಂದ್ರನು ತನ್ನನ್ನೇ ನಂಬಿ ತನ್ನನ್ನು ಅನುಸರಿಸಿದ ಅಯೋಧ್ಯೆಯ ನಾಗರಿಕರೆಲ್ಲರಿಗೆ ದೇವಾಂಶಸಂಭೂತರಾಗುವಂತೆ, ದೇವತೆಗಳಾಗುವಂತೆ, (ಸುರರು, ಅಮರರಾಗುವಂತೆ) ಅನುಗ್ರಹಿಸಿದನು. ಸುಗ್ರೀವಾದಿ ಕಪಿನಾಯಕರು, ತಮ್ಮ ಪೂರ್ವರೂಪವನ್ನು ಹೊಂದಿ ದೇವತೆಗಳಾದರು, ದೇವೋತ್ತಮರಾದರು. ಇದರಿಂದ ಸ್ವರ್ಗಲೋಕವು ಭರ್ತಿಯಾಯಿತು. ಅಮರಾವತೀ ನಗರವು ಸಾಲದಾಗಲು ನೂತನ ಸುರರಾದ ಅಯೋಧ್ಯೆಯ ನಾಗರಿಕರಿಗಾಗಿ ಬೇರೊಂದು ನಾಕಲೋಕದ ಸೃಷ್ಟಿಯಾಯಿತು. ಹೊಸತಾದ ನೂತನ ನಗರಿಯ (ಉಪನಗರದ) ಸೃಷ್ಟಿಯಾಯಿತು. ಅವರೆಲ್ಲರೂ ಆ ದೇವನಗರಿಯ ದೇವಭವನದತ್ತ ಸಾಗಿದರು.

ವಿಭುಃ = ಪ್ರಭುಃ ಸ ರಾಮೋ—ತ್ರಿದಶೀಭೂತಾ = ದೇವಭುವನಂಗತಾ — ಯೇ ಪೌರಾಸ್ತೇಷಾಂ ನೂತನ ಸುರಾಣಾಂ ಸ್ವರ್ಗಾನ್ತರಮಕಲ್ಪಯತ್–ವಿಬುಧಾಂಶೇಷು ಪ್ರತಿಪನ್ನಾತ್ಮಮೂರ್ತಿಷು = ಅಯೋಧ್ಯೆಯ ನಾಗರಿಕರು ಶ್ರೀರಾಮನ ಮಹಿಮೆಯಿಂದ ದೇವತೆಗಳಾದರು. ಸ್ವರ್ಗಾಂತರಮ್ ಅಕಲ್ಪಯತ್ = ಅವರಿಗಾಗಿ ಬೇರೊಂದು ಸ್ವರ್ಗಲೋಕವನ್ನು ಸೃಷ್ಟಿಸಿದನು.

**103. ನಿರ್ವರ್ತ್ಯೈವಂ ದಶಮುಖಶಿರಶ್ಛೇದಕಾರ್ಯಂ ಸುರಾಣಾಂ ।**
**ವಿಷ್ವಕ್ಸೇನಃ ಸ್ವತನುಮವಿಶತ್ ಸರ್ವಲೋಕ ಪ್ರತಿಷ್ಠಾಮ್ ॥**
**ಲಂಕಾನಾಥಂ ಪವನತನಯಂ ಚೋಭಯಂ ಸ್ಥಾಪಯಿತ್ವಾ ।**
**ಕೀರ್ತಿಸ್ತಂಭದ್ವಯಮಿವ ಗಿರೌ ದಕ್ಷಿಣೇ ಚೋತ್ತರೇ ಚ ॥ ೧೦೩ ॥**

ದಶಕಂಠ ರಾವಣನ ತಲೆಗಳನ್ನು ತರಿದು ದೇವತೆಗಳ ಇಷ್ಟಾರ್ಥಗಳನ್ನು ಪೂರೈಸಿದನು. ಲೋಕಲೋಕೇಶ್ವರನಾದ, ವಿಶ್ವಕ್ಸೇನನಾದ ಮಹಾವಿಷ್ಣುವು ಸರ್ವಲೋಕದ ರಕ್ಷಕನು (ಅಧ್ಯಕ್ಷನು). ಸರ್ವಲೋಕಗಳಲ್ಲೂ ಪ್ರತಿಷ್ಠಿತನು. ಅವನು ಕೀರ್ತಿಸ್ತಂಭಗಳಂತೆ ಉತ್ತರದಲ್ಲಿ ಹನುಮಂತನನ್ನು, ದಕ್ಷಿಣದ ಗಿರಿಯಲ್ಲಿ ವಿಭೀಷಣನನ್ನು ನೆಲೆಗೊಳಿಸಿದನು. ವಿಭೀಷಣನನ್ನು ಸುವೇಲಾಗಿರಿಯಲ್ಲಿ, ಹನುಮಂತನನ್ನು ಉತ್ತರದ ಚಿತ್ರಕೂಟದಲ್ಲಿ (ಹಿಮಗಿರಿಯಲ್ಲಿ) ಕೀರ್ತಿಸ್ತಂಭಗಳಂತೆ ನೆಲೆಗೊಳಿಸಿ ತನ್ನ ಕಾರ್ಯಗಳನ್ನು ಸಮಾರೋಪಗೊಳಿಸಿ ತಾನು ತನ್ನ ಪರಮಧಾಮಕ್ಕೆ (ಮೋಕ್ಷಧಾಮಕ್ಕೆ, ಶ್ರೀವೈಕುಂಠಕ್ಕೆ) ನಡೆದನು. ಸಮಸ್ತ ಲೋಕವನ್ನು ಪೊರೆಯುವ, ಸರ್ವಲೋಕಾಶ್ರಯವಾದ, ಶಾಂತಾಕಾರದ, ಚತುರ್ಭುಜದ

ಸತ್ವಗುಣಕಾರಕವಾದ, ಶಂಖಚಕ್ರಗದಾಪದ್ಮಧಾರಿಯಾದ, ಕೋಟಿಸೂರ್ಯ ಪ್ರಕಾಶದ, ಮಂಗಳಕರವಾದ ಮಹಾವಿಷ್ಣುವೆಂಬ ದಿವ್ಯದೇಹವನ್ನು ಹೊಂದಿದನು. (ಲೋಕ ಸಮಸ್ತವ ಪೊರೆಯುವ ತನುವನು ಆ ಬಳಿಕಾತನು ಸೇರಿದನು.)

ವಿಶ್ವಕ್ಸೇನೋ = ವಿಷ್ಣುಃ—ದಶಮುಖಶಿರಶ್ಛೇದಕಾರ್ಯಂ ನಿರ್ವರ್ತ್ಯ ನಿಷ್ಪಾದ್ಯ—ಲಂಕಾನಾಥಂ = ವಿಭೀಷಣಂ ಪವನತನಯಂ ಹನೂಮಂತಂ ಚೋಭಯಂ ಕೀರ್ತಿಸ್ತಂಭದ್ವಯಮಿವ—ದಕ್ಷಿಣೇ ಗಿರೌ = ಚಿತ್ರಕೂಟೇ—ಚೋತ್ತರೇ ಗಿರೌ = ಹಿಮವತಿ—ಚಸ್ಥಾಪಯಿತ್ವಾ—ಸರ್ವಲೋಕಪ್ರತಿಷ್ಠಾಂ = ಸರ್ವಲೋಕಾಶ್ರಯಭೂತಾನಾಂ—ಸ್ವತನುಂ = ಸ್ವಮೂರ್ತಿಮ್—ನಿರ್ವತ್ಕ್ಯೈವಂ = ಇರಿಸಿದನು. ಪ್ರತಿಷ್ಠಾಪಿಸಿದನು.

# ಷೋಡಶಃ ಸರ್ಗಃ
# ಹದಿನಾರನೆಯ ಸರ್ಗ
## ಕುಮುದ್ವತೀ ಪರಿಣಯ

1. **ಅಥೇತರೇ ಸಪ್ತರಘುಪ್ರವೀರಾ**
**ಜ್ಯೇಷ್ಠಂ ಪುರೋಜನ್ಮತಯಾ ಗುಣೈಶ್ಚ ॥**
**ಚಕ್ರುಃ ಕುಶಂ ರತ್ನವಿಶೇಷಭಾಜಂ ।**
**ಸೌಭ್ರಾತ್ರಮೇಷಾಂ ಹಿ ಕುಲಾನುಸಾರಿ ॥ ೧ ॥**

ಶ್ರೀರಾಮಚಂದ್ರನು ತನ್ನ ಅವತಾರವನ್ನು ಪೂರ್ಣಗೊಳಿಸಿ ವೈಕುಂಠಧಾಮಕ್ಕೆ ತೆರಳಿದ ಬಳಿಕ, ಅವನ ಹಿರಿಯ ಪುತ್ರನಾದ ಕುಶನು ಆ ಬಳಿಕ ಪಟ್ಟವನ್ನೇರಿದನು. (ಜನ್ಮದೊಳು, ಗುಣದೊಳು ಜ್ಯೇಷ್ಠನಾದ ಕುಶನು) ಹಿರಿಯನಾದುದರಿಂದ ರತ್ನಾದಿ ವಿಶೇಷ ವಸ್ತುಗಳನ್ನು ಧರಿಸಲು ಅವನೇ ಯೋಗ್ಯನು. ಆದುದರಿಂದಲೇ ಅವನು ರತ್ನ ವಿಶೇಷ ಪಾತ್ರನು ಎಂದು ಭಾವಿಸಿ ರಘುವಂಶದಲ್ಲಿ ಜನಿಸಿದ ಉಳಿದ ಏಳುಮಂದಿ ರಾಜಶ್ರೇಷ್ಠರು. ಸಹೋದರವಾತ್ಸಲ್ಯದಿಂದ ಕುಲಾನುಗತವಾಗಿ ಬಂದ ಸಾಮ್ರಾಜ್ಯಪಟ್ಟವನ್ನು ಕಟ್ಟಿದರು. ಆ ರಘುಪ್ರವೀರರು ಲವ, ತಕ್ಷಕ, ಪುಷ್ಕರ, ಅಂಗದ, ಚಂದ್ರಕೇತು, ಶತ್ರುಘಾತಿ, ಸುಬಾಹು ಎಂಬವರು. ಇವರು ಶ್ರೀರಾಮಚಂದ್ರನ ಹಾಗೂ ಅವನ ಮೂವರು ಸಹೋದರರಾದ ಭರತ, ಶತ್ರುಘ್ನ, ಲಕ್ಷ್ಮಣರ ವೀರಪುತ್ರರು. ಅವರು ಸೌಭ್ರಾತ್ರಪ್ರೇಮವನ್ನು ತೋರಿ ಕುಶನ ಪಟ್ಟಾಭಿಷೇಕ ಮಹೋತ್ಸವವನ್ನು ವೈಭವದಿಂದ (ಬಹಳ ಅದ್ದೂರಿಯಿಂದ) ಒಗ್ಗಟ್ಟಿನಿಂದ ನಡೆಸಿ ಕಳೆಕಟ್ಟಿದರು. ವಂಶ ಶುಭೋದಯವನ್ನು ಬಯಸಿದರು.

ಪುರಃ ಪೂರ್ವಜನ್ಮ ಯಸ್ಯ ತಸ್ಯ ಭಾವಸ್ತತಾ ತಯಾ—ಗುಣೈಶ್ಚ ಜ್ಯೇಷ್ಠಂ ಕುಶಂ ರತ್ನವಿಶೇಷಭಾಜಂ = ತತ್ರತ್ಯಶ್ರೇಷ್ಠವಸ್ತುಭಾಗಿನಂ ಚಕ್ರುಃ—ತದುಕ್ತಮ್ ಜಾತೌದುತ್ಕೃಷ್ಟಂ ತದ್ರತ್ನಮಭಿಧೀಯತೇ ಇತಿ–ತಥಾಹಿಸುಭ್ರಾತೃಣಾಂಭಾವಃ ಸೌಭ್ರಾತ್ರಮ್—ಹಾಯನಾನ್ತ ಇತ್ಯಾದಿನಾ ಯುವಾದಿತ್ವಾದಣ್ ಪ್ರತ್ಯಯಃ (ಪಾಣಿನಿ) ಕುಲಾನುಸಾರಿ= ವಂಶಾನುಗತಂ ಹಿ—

2. **ತೇ ಸೇತುವಾರ್ತಾಗಜಬಂಧಮುಖ್ಯೈಃ ।**
**ಅಭ್ಯುಚ್ಛ್ರಿತಾಃ ಕರ್ಮಭಿರಪ್ಯವಂಧ್ಯೈಃ ।**
**ಅನ್ಯೋನ್ಯದೇಶ ವಿಭಾಗಸೀಮಾಂ ।**
**ವೇಲಾಂ ಸಮುದ್ರಾ ಇವ ನ ವ್ಯತೀಯುಃ ॥ ೨ ॥**

ಅವರೆಲ್ಲ ರಾಜಪ್ರಮುಖರು, ಮಂಡಲಾಧಿಪತಿಗಳು, ತಮ್ಮ ತಮ್ಮ ರಾಜ್ಯದ ಎಲ್ಲೆಯನ್ನು ಮೀರದೆ ರಾಜ್ಯಾಭಿವೃದ್ಧಿ ಕಾರ್ಯದಲ್ಲಿ ತನ್ಮಯರಾಗಿ ಇರುತ್ತಿದ್ದರು. ಪ್ರಜಾ

ರಕ್ಷಣೆ, ಗೋರಕ್ಷಣೆ, ಕೃಷಿ, ನೀರಾವರಿ, ವಾಣಿಜ್ಯ, ದುರ್ಗ, ಸೇತುವೆ, ಹೆದ್ದಾರಿಗಳ ನಿರ್ಮಾಣ, ನಿವೇಶನ ಹಂಚುವುದು, ಆನೆಗಳನ್ನು ಬಂಧಿಸಿ ಪಳಗಿಸುವುದು (ಖೆಡ್ಡಾ) ಇತ್ಯಾದಿ ರಾಜಕಾರ್ಯಗಳಲ್ಲಿ ಸದಾ ನಿರತರಾಗಿದ್ದರು. ಹೇಗೆ ಸಾಗರವು ತನ್ನ ಎಲ್ಲೆಯನ್ನು ದಾಟದಿರುವಂತೆ (ವೇಲೆಯನು ದಾಟದಿರುವಬ್ಧಿನೋಲು) ಅವರು ತಮ್ಮ ರಾಜ್ಯದ ಗಡಿಗಳನ್ನು ದಾಟದೆ ಅನ್ಯೋನ್ಯ ಪ್ರೀತಿಯಿಂದ ಕರ್ತವ್ಯನಿಷ್ಠರಾಗಿ ತಮ್ಮ ವಿಭಾಗದ ಸೀಮೆಗಳಲ್ಲಿ ಸುವ್ಯವಸ್ಥೆಯಿಂದ ರಾಜ್ಯಭಾರ ನಡೆಸುತ್ತಿದ್ದರು.

ಕೃಷಿಗೋರಕ್ಷಣಾದಿ—"ವಾರ್ತಾ, ಕೃಷ್ಯಾದ್ಯುದಂತಯೋಃ" ಇತಿ ವಿಶ್ವಃ–ಗಜಬಂಧ ಆಕರೇಭ್ಯೋಗಜಗ್ರಹಣಮ್—ತೇ ಮುಖ್ಯಂ ಪ್ರಧಾನಂಯೇಷಾಂ ತೈರಬಂಧ್ಯೈಃ ಸಫಲೈಃ ಕರ್ಮಭಿರಭ್ಯುಚ್ಛ್ರಿತಾಃ—ಪ್ರವಿಭಜ್ಯಂತ ಇತಿ ಪ್ರವಿಭಾಗಾಃ—ವೇಲಾಂ ಸಮುದ್ರಾಂ ಇವ—ನ ವ್ಯತೀಯುರ್ನಾತಿಚಕ್ರಮುಃ—ಅತ್ರ ಕಾಮಂದಕಿಃ ಕೃಷಿರ್ವಣಿಕಪಥೋದುರ್ಗಂ ಸೇತುಃ ಕುಂಜರಬಂಧನಂ—ಖನ್ಯಾಕರನಾದಾನಂ ಶೂನ್ಯಾನಾಂ ಚ ನಿವೇಶನಮ್=—ಅಷ್ಟವರ್ಗಮಿಮಂ ಸಾಧುಃ ಸ್ವಯಂ ವೃದ್ಧೋಽಪಿ ವರ್ಧಯೇತ್" ಇತಿ—ಸೇತು ವಾರ್ತಾ ಗಜಬಂಧಮುಖ್ಯೈಃ = ಸೇತುಬಂಧ, ಸೇತುನಿರ್ಮಾಣ. ವಾರ್ತಾಬಂಧ = ಕೃಷಿ. ಗಜಬಂಧ = ಆನೆಗಳನ್ನು ಸಾಧುಗೊಳಿಸುವುದು.

**3. ಚತುರ್ಭುಜಾಂಶಪ್ರಭವಃ ಸತೇಷಾಂ ।**
**ದಾನಪ್ರವೃತ್ತೇರನುಪಾರತಾನಾಮ್ ॥**
**ಸುರದ್ವಿಪಾನಾಮಿವ ಸಾಮಯೋನಿಃ ।**
**ಭಿನ್ನೋಽಷ್ಟಧಾ ವಿಪ್ರಸಸಾರವಂಶಃ ॥ ೩ ॥**

ಚತುರ್ಭುಜಗಳಿಂದ ಮೆರೆಯುತ್ತಿರುವ ಲೋಕಪಾಲಕನಾದ ಮಹಾವಿಷ್ಣುವಿನಿಂದ ಆ ಹರಿವಂಶಸಂಭವರು ಜನ್ಮತಳೆದಿದ್ದರು. ಮಹಾವಿಷ್ಣುವೇ ಎಂಟು ವಿಭಾಗವಾದಂತೆ ಸಕಲ ಸದ್ಗುಣಶೀಲರಾಗಿ ದಾನಾದಿ ವಿಷಯಗಳಲ್ಲಿ ಸಾಂತತ್ಯವನ್ನು ಪಡೆದು (ದಾನಪ್ರವೃತ್ತಿಯೊಳು ಸಾಂತತ್ಯವನು ಮೆರೆವ) ಭೂಭಾಗದಲ್ಲಿ ಯಶೋವಂತರಾಗಿ ದಾನಶೀಲರೆನಿಸಿ ಮೆರೆಯುತ್ತಿದ್ದರು. ಪವಿತ್ರವಾದ ಸಾಮವೇದದಿಂದ ಐರಾವತವೆಂಬ 8 ಸುರಗಜಗಳು ಹುಟ್ಟಿದುವು. ಅವುಗಳ ಮದಜಲವು ನಿರಂತರವೂ ಪ್ರವಾಹದಂತೆ ಪ್ರವಹಿಸುತ್ತಲಿರುವಂತೆ ರಘುವಂಶಜರ ದಾನಪ್ರವೃತ್ತಿಯು ಅಡೆತಡೆಗಳಿಲ್ಲದೆ ಮುಂದುವರಿಯುತ್ತಿತ್ತು. ಆ ಸುರಗಜದ ವಂಶದಲ್ಲಿ ಉದಿಸಿದ ಎಲ್ಲಾ ಗಜಗಳು ಮದೋದಕವನ್ನು ನಿರಂತರವೂ ಸುರಿಸಿ ದಾನಾದಿ ಸದ್ಗುಣಗಳಿಂದ ಮೆರೆಯುತ್ತ ಪ್ರಕೃತಿಗೆ ಸುಗಂಧವನ್ನು ಬೀರುತ್ತಿರುವಂತೆ ರಘುಪ್ರವೀರರು ದಾನ ಪ್ರವೃತ್ತಿಯಲ್ಲಿ ಸಾಂತತ್ಯವನ್ನು ಪಡೆದು ಜಗದ್ವಂದ್ಯರಾಗಿದ್ದರು.

ಚತುರ್ಭುಜೋ = ವಿಷ್ಣುಃ—ತೇ ಪ್ರಭವಾಃ = ಕಾರಣಾನಿ ಯಸ್ಯ ಸ ತಥೋಕ್ತಃ—ದಾನಂ ತ್ಯಾಗೋ ಮದಶ್ಚ—"ದಾನಂ ಗಜಮದೇ ತ್ಯಾಗೇ" ಇತಿ ವಿಶ್ವಃ—ಪ್ರವೃತ್ತಿರ್ವ್ಯಾಪರಃ—ಸಾಮಯೋನಿಃ = ಸಾಮವೇದಪ್ರಭವೋದಾನಪ್ರವೃತ್ತೇರನುಪಾರತಾನಾಂ—ಸುರದ್ವಿಪಾನಾಂ = ದಿಗ್ಗಜಾ ನಾಂವಂಶ ಇವ—ವಿಪ್ರಸಸಾರ = ವಿಸ್ತೃತೋ ಭೂತ್

ದ್ವೇ ಸಮಾನೀಯಂ ಪ್ರಜಾಪತಿಃ—ಹಸ್ತಾಭ್ಯಾಂ ಪರಿಗೃಹ್ಯಾರ್ಥ ಸಪ್ತ ಸಾಮಾನ್ಯಗಾಯತ
ಸೂರ್ಯಸ್ಯಾಂಡಕಪಾಲೇ—ಗಾಯಂತೋ ಬ್ರಹ್ಮಣಸ್ತಾ ಸಮಂತ್ರೇತಂಮತಂಗಜಾಃ ॥

4. ಅಥಾರ್ಧರಾತ್ರೇ ಸ್ತಿಮಿತಪ್ರದೀಪೇ ।
ಶಯ್ಯಾಗೃಹೇ ಸುಪ್ತಜನೇ ಪ್ರಬುದ್ಧಃ ॥
ಕುಶಃ ಪ್ರವಾಸಸ್ಥ ಕಲತ್ರವೇಷಾಂ ।
ಅದೃಷ್ಟಪೂರ್ವಾಂ ವನಿತಾಮಪಶ್ಯತ್ ॥ ೪ ॥

ಒಂದು ದಿನ ಮಧ್ಯರಾತ್ರಿಯು ಹೊತ್ತಿಗೆ ಕುಶಸಾರ್ವಭೌಮನು ಎಚ್ಚೆತ್ತನು. ಆಗ ಅರಮನೆಯದೀಪಗಳು ಮಂದವಾದ ಬೆಳಕನ್ನು ಬೀರುತ್ತಲಿದ್ದುವು. (ಸ್ತಿಮಿತಪ್ರದೀಪ ದೊಳು) ಪರಿಜನರು, ಪರಿಚಾರಕರು, ಸೇವಕರು, ಪುರಜನರು ಗಾಢನಿದ್ರೆಯಲ್ಲಿದ್ದರು. ಆ ಅರ್ಧರಾತ್ರಿಯು ಹೊತ್ತಿನಲ್ಲಿ ಎಚ್ಚೆತ್ತ ಭೂವರನು ಹಿಂದೆ ಕಂಡಿರದ ಸುಂದರಳಾದ ವನಿತೆಯೋರ್ವಳನ್ನು ಕಂಡನು. ಅವಳ ಪತಿಯು ಯಾವುದೋ ದೂರ ಊರಿಗೆ (ನಾಡಿಗೆ) ಪ್ರವಾಸಕ್ಕೆ ಹೋದಂತೆ ಅವಳುಟ್ಟ ಉಡುಗೆತೊಡುಗೆಗಳಿಂದ ಊಹಿಸಬಹುದಾ ಗಿತ್ತು. ಅಂತಹ ಪಥಿಕವನಿತೆಯನಂದು ಅದಿನ ನಡುರಾತ್ರಿಯಲ್ಲಿ ತನ್ನ ಶಯನಮಂದಿರ ದಲ್ಲಿ ಆ ರಾಜಸಿಂಹನು (ನರೇಂದ್ರನು) ಕಂಡನು.

ಅಥ ಅರ್ಧಂರಾತ್ರೇಽರ್ಧರಾತ್ರಃ—ಅರ್ಧಂನಪುಂಸಕಮ್ ಇತ್ಯೇಕದೇಶಸಮಾಸಃ—ರಾತ್ರ್ಯಾಹ್ನಾಹಾಃ ಪುಂಸಿ ಇತಿ ನಿಯಮಾತ್ ಪುಂಸತ್ವಮ್ ಅರ್ಧರಾತ್ರೇ = ನಿಶೀಥೇ ಸ್ತಿಮಿತ ಪ್ರದೀಪೇ ಸುಪ್ತಜನೇ=ಶಯ್ಯಾಗೃಹೇ ಪ್ರಬುದ್ಧ—ನತುಸುಪ್ತಃ-ಕುಶಃ ಪ್ರವಾಸ ಸ್ಥಕಲತ್ರವೇಷಾಂ = ಪ್ರೋಷಿತಭರ್ತೃಕಾವೇಷಾಮ್—ಅದೃಷ್ಟಾ ಪೂರ್ವಮಿತ್ಯದೃಷ್ಟ ಪೂರ್ವಾತಾಮ್—ಸುಪ್ಸುಪೇತಿ ಸಮಾಸಃ—ವನಿತಾಮಪಶ್ಯತ್ ॥

5. ಸಾ ಸಾಧು ಸಾಧಾರಣಪಾರ್ಥಿವರ್ದ್ಧೇಃ ।
ಸ್ಥಿತ್ವಾ ಪುರಸ್ತಾತ್ ಪುರುಹೂತಭಾಸಃ ॥
ಜೇತುಃ ಪರೇಷಾಂ ಜಯಶಬ್ದಪೂರ್ವಂ ।
ತಸ್ಯಾಂಜಲಿಂ ಬಂಧುಮತೋ ಬಬಂಧ ॥ ೫ ॥

ತನ್ನ ಐಶ್ವರ್ಯವನ್ನು, ರಾಜ್ಯಕೋಶವನ್ನು ಸಾಧುಸಜ್ಜನರ ಶ್ರೇಯಸ್ಸಿಗೆ ವಿನಿ ಯೋಗಿಸುವವನೂ, ಶೌರ್ಯ ಪರಾಕ್ರಮ ತೇಜದಲ್ಲಿ ಅಮಿತತೇಜನಾದ, ಇಂದ್ರನಿಗೆ ಸಮಾನನಾದವನೂ, ಬಂಧುವರ್ಗದಿಂದ ಮಿತ್ರವೃಂದದಿಂದ ಪರಿವೃತನಾಗಿ, ಸಹೋದರ ರಿಗೆ ಆಶ್ರಿತನೂ, ಬಂಧುಪ್ರೇಮಿಯೂ, ಪ್ರಜಾವತ್ಸಲನಾಗಿ ಮೆರೆಯುತ್ತಿರುವ ಕುಶ ಭೂಪಾಲನ ಎದುರಲ್ಲಿ ನಿಂತು ಬೊಗಸೆ ಕೈಮುಗಿದು: (ಬೊಗಸೆಕೈಮುಗಿದು) "ಹೇ ರಾಜನ್, ನೀನು ವಿಜಯಿಯಾಗು." ಎಂದು ನುಡಿಯುತ್ತ ವಿಜಯ ಶಬ್ದದಿಂದಲೇ ಮಾತ ನಾಡಲು ಪ್ರಾರಂಭಿಸಿದಳು. (ಉಪಕ್ರಮಿಸಿದಳು) ತನ್ನ ಕಾರ್ಯವೂ ಜಯವಾಗಲೆಂದು ಆಕೆಯ ಮನಸ್ಸಿನ ಅಂತರಾರ್ಥ (ಮನೋಭಿಪ್ರಾಯ)ವಾಗಿತ್ತು.

ಸಾಧುಂಸಾಧಾರಣ ಪಾರ್ಥಿವದ್ರ್ವೇಃ= ಸಜ್ಜನಸಾಧಾರಣ ರಾಜ್ಯಶ್ರಿಯಂ—ಪುರುಹೂತ ಭಾಸ = ಇಂದ್ರತೇಜಸಃ — ಪರೇಷಾಂ = ಶತ್ರೂಣಾಂ—ಯಥಾ ತಥಾಂಜಲಿಬಬಂಧ—

**6 ಅಥಾನಪೋಢಾರ್ಗಲಮಪ್ಯಗಾರಂ ।**
**ಛಾಯಾಮಿವಾದರ್ಶತಲಂ ಪ್ರವಿಷ್ಟಾಮ್ ॥**
**ಸವಿಸ್ಮಯೋ ದಾಶರಥೇಸ್ತನೂಜಃ ।**
**ಪ್ರೋವಾಚ ಪೂರ್ವಾರ್ಧವಿಸೃಷ್ಟತಲ್ಪಃ ॥ ೬ ॥**

ಆ ದಾಶರಥಿ ಪುತ್ರನು ಮಲಗಿದಲ್ಲಿಂದಲೇ, ದೇಹದ ಕೆಳಭಾಗವನ್ನು ಮಂಚದಲ್ಲಿಯೇ ಉಳಿದು ಎದ್ದು ಕುಳಿತು (ದೇಹಪೂರ್ವಾರ್ಧದಿಂದುಳಿದು ವರತಲ್ಪವನು) ವಿಸ್ಮಯದಿಂದ (ಅಚ್ಚರಿಗೊಂಡು) ಮಾತನಾಡಿಸಿದನು. ಬಾಗಿಲುಗಳು, ಅಗುಳಿಗಳು ತೆರೆಯದೆ ಮುಚ್ಚಿದ್ದರೂ, ಕನ್ನಡಿಯಲಿ ಬೆಳಕು ಪ್ರತಿಫಲಿಸಿಬಿಂಬವು ತೋರುವಂತೆ ತೋರುತ್ತ ಆ ಶೋಭಾಯಮಾನಳಾದ ಸ್ತ್ರೀಯು ರಾಜನ ಅಂತಃಪುರವನ್ನು ಪ್ರವೇಶಿಸಿದ್ದಳು.

ಪೂರ್ವಾರ್ಧೇನ=ಶರೀರ ಪೂರ್ವಭಾಗೇನ ವಿಸೃಷ್ಟತಲ್ಪಸ್ತ್ಯಕ್ತಶಯ್ಯೋ ದಶರಥೇಸ್ತನೂಜಃ=ಕುಶಃ—ಅನಪೋಢಾರ್ಗಲ ಮನುದ್ಘಾಟಿತ ವಿಷ್ಕಂಭಮಪಿ—"ತದ್ವಿಷ್ಕಂಭೋರ್ಗಲಂ ನನಾ" ಇತ್ಯಮರಃ—ಪ್ರವಿಷ್ಟಾಂತಾಂ ವನಿತಾಂ ಪ್ರೋವಾಚಾವದತ್" ಅನಪೋಢಾ ರ್ಗಲಮ್=ನ ಅಪೋಢಾ (ಅನಪೋಢಾ) ಅರ್ಗಲಯಸ್ಯ ತತ್=ಅರ್ಗಳವ ತೆಗೆಯದೆಯೆ—ಪೂರ್ವಾರ್ಧವಿಸೃಷ್ಟತಲ್ಪಃ = ಪೂರ್ವಾರ್ಧೇನ ವಿಸೃಷ್ಟಂ ತಲ್ಪ ಏನ ಸಃ = ದೇಹಪೂರ್ವಾರ್ಧದಿಂದುಳಿದು ವರತಲ್ಪವನು.

**7. ಲಬ್ಧಾಂತರಾ ಸಾವರಣೇಽಪಿ ಗೇಹೇ ।**
**ಯೋಗಪ್ರಭಾವೋ ನ ಚ ಲಕ್ಷ್ಯತೇ ತೇ ॥**
**ಬಿಭರ್ಷಿ ಚಾಕಾರಮನಿರ್ವೃತಾನಾಂ ।**
**ಮೃಣಾಲಿನೀ ಹೈಮಮಿವೋಪರಾಗಮ್ ॥ ೭ ॥**

ಅರಸನು "ಓ ಶುಭೆಯೆ, ನೀನಾರು ? ಬಾಗಿಲನು ಮುಚ್ಚಿರುವ ಈ ಅರಮನೆಯನ್ನು ನೀನು ಪ್ರವೇಶಿಸಿರುವೆ. ಆದರೂ ನಾನು ಯಾವ ವಿಶೇಷ ಮಹಿಮೆಗಳನ್ನಾಗಲೀ ಯೋಗ ಮಹಿಮೆಗಳನ್ನಾಗಲೀ ನಿನ್ನಲ್ಲಿ ಕಾಣದಿರುವೆನು. ನೀನು ಓರ್ವ ದುಃಖಿಯಂತೆ ಕಾಣಿಸುತ್ತಿರುವೆ. ಹಿಮದ ಬಾಧೆಗೆ ಒಳಗಾದ ತಾವರೆಯಂತೆ ನೀನು ದುಃಖಿಸುತ್ತಿರುವೆ. ನಿನ್ನ ದುಗುಡದ ಆಕೃತಿಯನ್ನು ನಾನಿಂದು ನೋಡುತ್ತಿರುವೆನು. ನಿನ್ನ ದುಗುಡದ ಕಾರಣವನ್ನು ನಾನು ಅರಿಯದಿರುವೆನು.

ಲಬ್ಧಾಂತರಾ=ಲಬ್ಧಾವಕಾಶಾ—ಯೋಗಪ್ರಭಾವಶ್ಚ ತೇನ ಲಕ್ಷ್ಯತೇ—ಮೃಣಾಲಿನೀ ಹೈಮಂ ಹಿಮಂಕೃತಮುಪರಾಗಮುಪದ್ರವಮಿವ—ಅನಿರ್ವೃತಾನಾಂ ದುಃಖಿತಾನಾಮಾಕಾರಂ ಬಿಭರ್ಷಿ ಚ—ನ ಹಿ ಯೋಗಿನಾಂ ದುಃಖಮಸ್ತೀತಿ ಭಾವಃ

**8. ಕಾ ತ್ವಂ ಶುಭೇ ಕಸ್ಯ ಪರಿಗ್ರಹೋ ವಾ ।**
**ಕಿಂ ವಾ ಮದ ಭ್ಯಾಗಮಕಾರಣಂ ತೇ ॥**

**ಆಚಕ್ಷ್ವ ಮತ್ವಾ ವಶಿನಾಂ ರಘೂಣಾಂ ।**
**ಮನಃ ಪರಸ್ತ್ರೀ ವಿಮುಖಪ್ರವೃತ್ತಿ ॥ ೮ ॥**

"ಓ ಶುಭಲಕ್ಷಣಳೇ, ನೀನಾರ ಪತ್ನಿ ? ನೀನು ಈ ನಿಶಿಯಲ್ಲಿ ನನ್ನ ಬಳಿಗೆ ಆಗಮಿಸಲು ಕಾರಣವೇನು ? ರಘುವಂಶಜರು ಸಂಯಮಿಗಳು. ಅನ್ಯಸ್ತ್ರೀಯರನ್ನು ತಮ್ಮ ಸಹೋದರಿಯರಂತೆ, ತಾಯಂದಿರಂತೆ (ನೀನಾರು ಓ ಶುಭೆಯೆ, ಯಾರ ಮನೆಯವಳು) ಕಾಣುವವರೆಂದು ಬಗೆದು ನೀನು ಬಂದಿರುವ ವಿಚಾರವನ್ನು ಹೇಳು. ರಘುಪ್ರವರರ ಮನಸ್ಸು ಪರಸ್ತ್ರೀ ವ್ಯಾಮೋಹದಿಂದ ವಿಮುಖವೆಂಬುದನ್ನು ಅರಿತು ಜಿತೇಂದ್ರಿಯರೆಂದು ತಿಳಿದು ನಿನ್ನ ಸಂಕಷ್ಟದ ವಿಷಯವನ್ನು ಮುಚ್ಚುಮರೆಯಿಲ್ಲದೆ ಹೇಳುವುದು" ಎಂದು ಪರದಾರಾಸಹೋದರನಾದ, ಉದಾರಗುಣಶೀಲನಾದ, ಉದಾತ್ತ ಚಿತ್ತದ ಆ ದಾಶರಥಿಯು ಪ್ರಶ್ನಿಸಿ ವಿಚಾರಿಸಿದನು.

ಕಿಂಚ, ಹೇ ಶುಭೇ, ತ್ವಂ ಕಾ ? ಕಸ್ಯ ವಾ ಪರಿಗ್ರಹಃ = ಪತ್ನಿ ? ತೇ ತವ ಮಂದಭಾಗಮು ಕಾರಣಂ ವಾ ಕಿಮ್—ವಶಿನಾಂ = ಜಿತೇಂದ್ರಿಯಾಣಾಂ—ಪರಸ್ತ್ರೀಷು = ವಿಷಯೇ—ವಿಮುಖಾ ಪ್ರವೃತ್ತಿರ್ಯಸ್ಯ—ಪರಿಗ್ರಹಃ = ಪತ್ನೀ ॥

**9. ತಮಬ್ರವೀತ್ಸಾ ಗುರುಣಾನವದ್ಯಾ ।**
**ಯಾ ನೀತ ಪೌರಾ ಸ್ವಪದೋನ್ಮುಖೇನ ॥**
**ತಸ್ಯಾಃ ಪುರಃ ಸಂಪ್ರತಿವೀತನಾಥಾಂ ।**
**ಜಾನೀಹಿ ರಾಜನ್ ಅಧಿದೇವತಾಂ ಮಾಮ್ ॥ ೯ ॥**

ಆಗ ಆ ದೋಷರಹಿತಳಾದ ಪರಮಪವಿತ್ರಳಾದ ನಾರೀಮಣಿಯು ಹೀಗೆಂದು ನುಡಿದಳು: "ಯಾವ ನಗರವು ಜನರಿಂದ ಕಿಕ್ಕಿರಿದು, ಕುಬೇರನ ನಗರವಾದ ಅಲಕಾವತಿಯಂತೆ ಅಥವಾ ಸುರರಾಜನಾದ ಇಂದ್ರನ ನಗರವಾದ ಅಮರಾವತಿಗೆ ಸಮಾನವಾದ ನಿನ್ನ ಪಿತನು ಆಳುತ್ತಿದ್ದ ಅಯೋಧ್ಯಾನಗರಿಯ ಅಧಿದೇವತೆಯು ನಾನು. ಆ ವೈಭವದ ನಗರದ ಪೌರರನ್ನು ಪರಮಕರುಣಾಳುವಾದ, ನಿನ್ನ ಪಿತನು ತನ್ನ ಜೊತೆಯಲ್ಲಿ ತನ್ನ ಪರಮಪದವಾದ ವಿಷ್ಣುಲೋಕಕ್ಕೆ (ವೈಕುಂಠ) ಕೊಂಡೊಯ್ದನೆಂದು (ಆವ ನಗರದೊಳಗಿಂದು ನಿಜ ಪದೋನ್ಮುಖಪಿತನು) ಇದರಿಂದ ಆ ನಗರವಿಂದು ಪ್ರಜಾಶೂನ್ಯವಾಗಿದೆ. ಅಂತಹ ಅನಾಥನಗರವಾದ ಅಯೋಧ್ಯಾನಗರದ ಅಧಿಷ್ಠಾತೃದೇವತೆಯು ನಾನು" ಎಂದು ಆ ಅಮರ್ತ್ಯವನಿತೆ ಈ ತೆರ ನುಡಿದು ತನ್ನ ಸಂಕಷ್ಟವನ್ನು ನಿವೇದಿಸಿಕೊಂಡಳು.

ಅನವದ್ಯಾ‌ಽದೋಷಾ—ಸ್ವಪದೋನ್ಮುಖೇನ=ವಿಷ್ಣುಪದೋನ್ಮುಖೇನ—ಗುರುಣಾ= ತ್ವತ್ಪಿತ್ರಾ—ಮಾಂ ಸಂಪ್ರತಿವೀತನಾಥಾಮನಾಥಾಂ ತಸ್ಯಾಃ ಪುರೋ ನಗರ್ಯಾ ಅಯೋಧ್ಯಾಯಾ ಅಧಿದೇವತಾಂ ಜಾನೀಹಿ—ನೀತಪೌರಾ = ನೀತಾಃ ಪೌರಾ ಯಸ್ಯಾಃ = ಪೌರರನ್ನು ತನ್ನೊಡನೆ ಕೊಂಡೊಯ್ದನು—ಸ್ವಪದೋನ್ಮುಖೇನ = ಸ್ವಸ್ಯ ಪದಮ್ ತಸ್ಮೈ ಉನ್ಮುಖಂ = ನಿಜಪದೋನ್ಮುಖಪಿತನು = ತನ್ನ ಪರಮಧಾಮವಾದ ವಿಷ್ಣುಲೋಕಕ್ಕೆ (ವೈಕುಂಠಕ್ಕೆ) ಹೋಗಲುದ್ಯುಕ್ತನಾದನು.

10. ವಸ್ವೌಕಸಾರಾಮಭಿಭೂಯ ಸಾಹಂ ।
ಸೌರಾಜ್ಯಬದ್ಧೋತ್ಸವಯಾ ವಿಭೂತ್ಯಾ ॥
ಸಮಗ್ರಶಕ್ತೌ ತ್ವಯಿ ಸೂರ್ಯವಂಶ್ಯೇ ।
ಸತಿ ಪ್ರಪನ್ನಾ ಕರುಣಾಮವಸ್ಥಾಮ್ ॥ ೧೦ ॥

ಸಂಪತ್ತು, ಐಶ್ವರ್ಯ, ಮಳೆ, ಬೆಳೆ, ಕಳೆಯಿಂದ ಅಂದು ತುಂಬಿ ಮೆರೆಯುತ್ತಿದ್ದ, ನಿತ್ಯವೂ ಅಲಕಾವತಿಯಂತೆ, ಇಂದ್ರನ ಅಮರಾವತಿಯಂತೆ, ವಿವಿಧ ವೈಭವ–ಉತ್ಸವಗಳಿಂದ ಮೆರೆದು ವಿಜೃಂಭಿಸಿ ರಾರಾಜಿಸುತ್ತಿದ್ದ ಅಯೋಧ್ಯಾನಗರವಿಂದು (ವೈಭವದ ಸುಭ್ರಮದ ಬದ್ಧೋತ್ಸವಂಗಳಲಿ) ದೀನಾವಸ್ಥೆಗೆ ಸಂದಿದೆ. ಜಗತ್ತಿನ ಸರ್ವಶ್ರೇಷ್ಠವಾದ ಸೂರ್ಯವಂಶದಲ್ಲಿ ನಿನ್ನಂತಹ ಪ್ರತಾಪಶಾಲಿಯಾದ ಶಕ್ತಿಸಂಪನ್ನನಾದ ರಾಜನ ಆಳ್ವಿಕೆಯಲ್ಲಿ ಇಂದ್ರನ ಅಮರಾವತೀ ನಗರವನ್ನು ಸಿರಿಸಂಪದದಲ್ಲಿ, ಐಶ್ವರ್ಯದಲ್ಲಿ ಮೀರಿಸಿ ನಿಂತಿರುವ ಕೀರ್ತಿಶಾಲಿಯಾದ ಮಹಾನಗರವಿಂದು ಬರಡಾಗಿದೆ. ಅನಾಥನಗರವೆನಿಸಿಕೊಂಡಿದೆ. ಇದರಿಂದ ಕಡುದೈನ್ಯತೆಯನ್ನು ಹೊಂದಿರುವ ನನ್ನನ್ನು ನೀನಿಂದು ಕಣ್ಣಾರೆ ನೋಡುತ್ತಿರುವೆ, "ಹೇ ವಿಶ್ವಬಂಧು" ಎಂದಳವಳು.

"ವಸ್ವೌಕಸಾರಾಽಲಕಾಪುರೀ—"ಅಲಕಾಪುರೀ ವಸ್ವೌಕಸಾರಾ ಸ್ಯಾತ್" ಇತಿ ಕೋಶಃ—ಅಥವಾ ಮಾನಸೋತ್ತರಶೈಲಶಿಖರವರ್ತಿನೀ ಶಕ್ರನಗರೀ—"ವಸ್ವೌಕಸಾರಾ ಶಕ್ರಸ್ಯ" ಇತಿ ವಿಷ್ಣುಪುರಾಣಾತ್—ತಾಮಭಿಭೂಯ=ತಿರಸ್ಕೃತ್ಯ—ಕರುಣಾಮವಸ್ಥಾಂ=ದೀನಾಂ ದಶಾಂ—ಪ್ರಪನ್ನಾ=ಪ್ರಾಪ್ತಾ—ವಸ್ವೌಕಸಾರಾಮ್=ವಸೂನಾಮ್ ಓಕಸ್ಯೇವ ಸಾರೋ ಯಸ್ಯಾಃ ಸಾ ತಾಮ್ ಓಕೈಃ ಸಾರಾ ಅಥವಾ ವಸುಮಯಾ ಓಕಾಂಸಿ ತೈಃ ಸಾರಾ=ವೈಭವದ ಅಲಕೆಯು, ಅಮರಾವತೀನಗರಿಯು ಇಳಿಕೆಗೈದು—

11. ವಿಶೀರ್ಣತಲ್ಪಾಟ್ಟಶತೋನಿವೇಶಃ ।
ಪರ್ಯಸ್ತಸಾಲಃ ಪ್ರಭುಣಾ ವಿನಾ ಮೇ ॥
ವಿಡಂಬಯತ್ಯಸ್ತನಿಮಗ್ನಸೂರ್ಯಂ ।
ದಿನಾಂತಮುಗ್ರಾನಿಲಭಿನ್ನಮೇಘಮ್ ॥ ೧೧ ॥

ಒಡೆದು ಚೂರುಚೂರಾದ ತಲ್ಪಾಟ್ಟಶತಗಳಿಂದ, ಹಾಸುಗಲ್ಲುಗಳಿಂದ, ಕೋಟೆ ಬುರುಜುಗಳಿಂದ (ಕೋಟೆಕೊತ್ತಲಗಳಿಂದ ಸುಲ್ತಾನ್ ಬತ್ತೇರಿಗಳಿಂದ) ಕುಸಿದು ಭೂಗತವಾಗುತ್ತಿರುವ, ನೂರಾರು ಸೌಧಗಳಿಂದ ಮಾರುಕಟ್ಟೆಗಳಿಂದ, ಮೇಲುಪ್ಪರಿಗೆಗಳು, ಕಲ್ಲಿನ ಪಾಗಾರಗಳಿಂದ (ಪಾಗಾರ=ಪ್ರಾಕಾರ) ಹಾಳುಬೀದಿಗಳಿಂದ, ಮುರಳುದಿಣ್ಣೆಗಳಿಂದ ಅಯೋಧ್ಯಾನಗರವು ಇಂದು ಪಾಳುಬಿದ್ದಿದೆ. ಒಂದು ಕಾಲದಲ್ಲಿ ವೈಭವದಿಂದ ಮೆರೆಯುತ್ತಿದ್ದ ನಗರವು ಕಾಲನ ವಜ್ರಹಿಡಿತಕ್ಕೆ (ವಜ್ರಮುಷ್ಟಿ) ಸಿಕ್ಕಿ ವಿನಾಶದತ್ತ ಸಾಗುತ್ತಿದೆ. ನಮ್ಮ ಸ್ವಾಮಿಯಾದ (ಜಗತ್ತಿನ ಸ್ವಾಮಿಯಾದ) (ವಿಶ್ವೇಶ್ವರ, ಸರ್ವೇಶ್ವರ, ಪರಮೇಶ್ವರ) ಶ್ರೀರಾಮಚಂದ್ರಪ್ರಭುವು ಪ್ರಸ್ಥಾನಕ್ಕೆ ತೆರಳಿದ ಬಳಿಕ, ಹೇಗೆ ಸೂರ್ಯದೇವನು ದಿನದ ಅಂತ್ಯದ ಭಾಗದಲ್ಲಿ ಪಶ್ಚಿಮ ದಿಶೆಯಲ್ಲಿ ಮುಳುಗುತ್ತಿರಲು, ಪ್ರಚಂಡ

ಹೊದ ಮಾರುತವು ಉಗ್ರವಾಗಿ ಬೀಸುತ್ತ ಬಂದು ಮೋಡಗಳ ಮಾಲೆಯನ್ನು ಚೂರು ಚೂರು ಮಾಡಿ ಓಡಿಸುವಂತೆ (ಪಸರಿಸುತ್ತ) ಸಂಧ್ಯಾಕಾಲವನ್ನು ಅಣಕಿಸುವಂತೆ ತೋರುತ್ತಿದೆ.

ತಲ್ಪಾನ್ಯಟ್ಟಾಲಿಕಾಃ—"ತಲ್ಪಂ ಶಯ್ಯಾಟ್ಟದಾರೇಷು" ಇತ್ಯಮರಃ—ಅಟ್ಟಾ ನಿಗೃಹಭೇದಃ—ಅಟ್ಟಂ ಭಕ್ತೇ ಚ ಶುಷ್ಕೇ ಚ ಕ್ಷೌಮೇಽತ್ಯರ್ಥೇ ಗೃಹಾಂತರೇ "ಇತಿ ವಿಶ್ವಃ—ವಿಶೀರ್ಣಾನಿ ತಲ್ಪಾನಾಮಟ್ಟಾನಾಂಚ ಶತಾನಿ ಯಸ್ಯ ಸ ತಥೋಕ್ತಃ—ಅಟ್ಟಾ ಕೌಮಾಃ—ಸ್ಯಾದಟ್ಟಃ ಕ್ಷೌಮಮಸ್ತ್ರೀಯಾಮ್"—ಇತ್ಯಮರಃ—ಈಷದಸಮಾಪ್ತಂ ವಿಶೀರ್ಣಾನಿ ವಿಶೀರ್ಣತಲ್ಪಾನ್ಯಟ್ಟಶತಾನಿ ಯಸ್ಯಾಂ ಸ ತಥೋಕ್ತಃ—ಪರ್ಯಸ್ತಸಾಲಃ = ಸ್ರಂತ ಪ್ರಾಕಾರಃ-"ಪ್ರಾಕಾರೋವರಣಃಸಾಲಃ" ಇತ್ಯಮರಃ-ಅಸ್ತನಿಮಗ್ನಸೂರ್ಯಮಸ್ತಾದ್ರಿ ಲೀನಾರ್ಕ—ವಿಡಂಬಯತ್ಯನುಕರೋತಿ—ವಿಶೀರ್ಣತಲ್ಪಾಟ್ಟಶತಃ = ವಿಶೀರ್ಣಾನಿ ತಲ್ಪಾನಾಮ್ ಅಟ್ಟಾನಾಂ ಶತಾನಿ ಯಸ್ಯ ಸಃ = ಉಡಿದು ಒಡೆದ ನೂರಾರು ಹಾಸುಗಲ್ಲುಗಳಿಂದ.

12. ನಿಶಾಸು ಭಾಸ್ವತ್ಕಲನೂಪುರಾಣಾಂ ।
ಯಃ ಸಂಚರೋಽಭೂದಭಿಸಾರಿಕಾಣಾಮ್ ॥
ನದನ್ಮುಖೋಲ್ಕಾವಿಚಿತಾಮಿಷಾಭಿಃ ।
ಸ ವಾಹ್ಯತೇ ರಾಜಪಥಃ ಶಿವಾಭಿಃ ॥ ೧೨ ॥

ಅಂದು ಆ ರಾಜಬೀದಿಗಳು ರಾತ್ರಿವೇಳೆ ರಸಿಕರಾದ ಅಭಿಸಾರಿಕೆಯರ (ಗಂಡಂದಿರನ್ನು ಮಿಂಡಂದಿರನ್ನು ಅರಸುತ್ತಿರುವ) ಕಾಲ್ಗೆಜ್ಜೆಗಳ (ಲಸಿತಕಲನೂಪುರದ) ನಾದದಿಂದ ಸೊಗಸು ಪಡೆದಿತ್ತು. (ರಸಿಕಾಭಿಸಾರಿಕೆಯು) ಆದರಿಂದು ಕೇಳುವವರಿಲ್ಲದೆ ಹೆಣ್ಣುನರಿಗಳು (ಬಳ್ಳುಗಳು) ಮೊಗವೆತ್ತಿ ಊಳಿಡುತ್ತ. ಅಪಶಕುನದ ದನಿಯನ್ನು ಲೋಕಕ್ಕೆ ಸಾರುವಂತೆ ಸಾರುತ್ತಿವೆ. ಅವುಗಳು ಹಸಿವೆಪೀಡಿತವಾಗಿ ಮಾಂಸದಾಶೆಯಿಂದ ರಾಜಪಥದಲ್ಲಿ ಚರಿಸುತ್ತ ತಮ್ಮ ಮೊಗವೆತ್ತಿ ಕೂಗುತ್ತಿರಲು, ಅವುಗಳ ಅಗಲವಾಗಿ ತೆರೆದ ಬಾಯಿಗಳ ಎಡೆಯಿಂದ ಗಟ್ಟಿಯಾದ ದನಿಯೊಂದಿಗೆ ಉಲ್ಕೆಗಳ (ಧೂಮಕೇತುಗಳ) ಬೆಳಕೂ ಹೊರ ಹೊಮ್ಮುತಲಿದ್ದು, ಅಂತಹ ಅನಿಷ್ಟ ಹಾಗೂ ಅಮಂಗಲಕರವಾದ ಪ್ರಾಣಿಗಳ ಆವಾಸಸ್ಥಾನವಾಗಿದೆ.

"ಕಾಂತಾರ್ಥಿನೀತು ಯಾಯಾತಿ ಸಂಕೇತಂ ಸಾಭಿಸಾರಿಕಾ "ಇತ್ಯಮರಃ—ಇತ್ಯಾದಿನಾ ಘಪ್ರತ್ಯಯಾಂತೋ ನಿಪಾತಃ (ಪಾಣಿನಿ) ಶಿವಾಭಿಃ = ಕ್ರೋಷ್ಟ್ರೀಭಿಃ—ವಾಹ್ಯತೇ = ಗಮ್ಯತೇ—ನದನ್ಮುಖೋಲ್ಕಾವಿಚಿತಾಮಿಷಾಭಿಃ = ನದದ್ಭ್ಯೋಮುಖೇಭ್ಯೋ ನಿರ್ಗತಾ ಉಲ್ಕಾಸ್ತಾಭಿಃ ವಿಚಿತಮ್ ಆಮಿಷಂ ಯಾಭಿಸ್ತಾಭಿಃ = ಕೂಗುತಿವೆ (ಊಳಿಡುವ) ಬಳ್ಳುಗಳಿಗೆ ಆವಾಸಸ್ಥಾನವಾಗಿದೆ. ಅವುಗಳ ದನಿಯೊಂದಿಗೆ ಅಮಂಗಳಕರವಾದ ಉಲ್ಕೆಗಳ ಬೆಳಕೂ ಹೊರಹೊಮ್ಮುತ್ತಲಿದೆ.

13. ಆಸ್ಫಾಲಿತಂ ಯತ್ಪ್ರಮದಾ ಕರಾಗ್ರೈಃ ।
ಮೃದಂಗಧೀರಧ್ವನಿಮನ್ವಗಚ್ಛತ್ ॥

ವನ್ಯೈರಿದಾನೀಂ ಮಹಿಷೈಸ್ತದಂಭಃ ।
ಶೃಂಗಾಹತಂ ಕ್ರೋಶತಿ ದೀರ್ಘಿಕಾಣಾಮ್ ॥ ೧೩ ॥

ಅಂದು ಪ್ರಮದೆಯರು, ಸುಂದರವನಿತೆಯರು ಅರಮನೆಯ ಕೊಳಗಳಲ್ಲಿ ಕ್ರೀಡಾ ವಿನೋದದಲ್ಲಿ, ನೀರಾಟವಾಡುತ್ತ (ಜಲ್ಲಾಟವಾಡುತ್ತ) ತಮ್ಮ ತುದಿಗೈಯತಾಡನಗಳಿಂದ ನೀರನ್ನು ಕಲಕುತ್ತಿದ್ದಾಗ ಮೃದಂಗದ ನಾದವು ಹೊರಹೊಮ್ಮುತ್ತಿತ್ತು. (ಪ್ರಮದೆಯರ ತುದಿಗೈಯ ತಾಡನಗಳಿಂದದು). ಆದರೆ ಇಂದು ಆ ಜಲಾಶಯಗಳಲ್ಲಿ ಕಾಡೆಮ್ಮೆ, ಕಾಡ್ಕೋಣ, ನೀರಾನೆ, ನೀರಹಂದಿ, ನೀರ್ಗುದುರೆಗಳು ನೀರನ್ನು ಹೊಕ್ಕು ಕೋಧೋನ್ಮತ್ತವಾಗಿ ಚೆಲ್ಲಾಟವಾಡುತ್ತ ದಾಂಧಲೆ ನಡೆಸುತ್ತಿವೆ. ಅವುಗಳು ತಮ್ಮ ಭಯಂಕರವಾದ ಕೋಡುಗಳನ್ನು ಕೊಂಬುಗಳನ್ನು, ದಂತಗಳನ್ನು) ನೀರಿಗೆ ಬಡಿದು ತಮ್ಮ ಕ್ರೋಧವನ್ನು, ಅಟ್ಟಹಾಸವನ್ನು, ಆಕ್ರೋಶವನ್ನು ಆಸ್ಫೋಟಿಸುತ್ತಿವೆ. ಆ ಸದ್ದು ರಾತ್ರಿವೇಳೆ ಅಳುವ ಧ್ವನಿಯಂತೆ ಬಹಳ ದೂರದ ತನಕ ಕೇಳಿಸುತ್ತಿದೆ.

ಯದಂಭಃ ಪ್ರಮದಾಕರಾಗ್ರೈರಾಸ್ಫಾಲಿತಂ ತಾಡಿತಂ ಸತ್—ಜಲಕ್ರೀಡಾಸ್ವಿತಿ ಶೇಷಃ—ಮೃದಂಗಾನಾಂ ಯೋ ಧೀರಧ್ವನಿಸ್ತಮನ್ವಗಚ್ಛದನ್ವಕರೋತ್—ವನ್ಯೈರ್ಮಹಿಷೈಃ ಶೃಂಗೈ ರ್ವಿಷಾಣೈರಾಹತಂ ಸತ್ಕ್ರೋಶತಿ—

14. ವೃಕ್ಷೇಶಯಾ ಯಷ್ಟಿನಿವಾಸಭಂಗಾನ್ ।
ಮೃದಂಗಶಬ್ದಾಪಗಮಾದಲಾಸ್ಯಾಃ ॥
ಪ್ರಾಪ್ತಾ ದವೋಲ್ಕಾಹತಶೇಷಬರ್ಹಾಃ ।
ಕ್ರೀಡಾಮಯೂರಾ ನವಬರ್ಹಿಣತ್ವಮ್ ॥ ೧೪ ॥

"ಹೇ ರಾಜನ್, ಅಂದಿನ ಕ್ರೀಡಾಮಯೂರಗಳು ಇಂದಿನ ವನಮಯೂರಗಳಾಗಿ ಪರಿವರ್ತನೆಗೊಂಡಿವೆ. ಉದ್ಯಾನಗಳಲ್ಲಿ ಮರಗಳಲ್ಲಿ ವಾಸಿಸುತ್ತ ನಾಟ್ಯಶಾಲೆಯ ಮೃದಂಗ ಶಬ್ದಗಳನ್ನು ಲಾಲಿಸುತ್ತ ಗರಿಕೆದರಿ ಹರ್ಷದಿಂದ ಕುಣಿಯುತ್ತಿದ್ದ ಸೋಗೆ ನವಿಲುಗಳು ಇಂದು ದನಿಯುಳಿದು, ಕಾಳ್ಗಿಚ್ಚಿನಿಂದ ಸುಟ್ಟು ಹೋಗಿ ಉಳಿದಿರುವ ಒಂದೆರಡು ಗರಿಗಳಿಂದ ಕುಣಿಯಲು (ವಾಸಯಷ್ಟಿಗಳಳಿಯಲು ಅಡವಿ ಮರಗಳನೇರಿ) ಇಚ್ಛೆಯಿಲ್ಲದೆ ಕಾಡುನವಿಲುಗಳಂತೆ, ಮರದ ಮೇಲೆ ಮಂಗಗಳಂತೆ ಓಡಾಡುತ್ತಿವೆ. ಈ ಹಿಂದೆ ಅವುಗಳಿಗೆ ಮದ್ದಳೆಯ ನಾದವು ಮೇಘನಾದದಂತೆ ಕುಣಿಯಲು ಸ್ಫೂರ್ತಿ ನೀಡುತ್ತಿತ್ತು. ಆ ಸಂತಸದ ಉಲ್ಲಾಸಕರವಾದ ಉತ್ಸವದ ವಾತಾವರಣವು ಇಂದು ಮಾಯವಾಗಿದೆ. ಅವರ ಪರಿಣಾಮವಾಗಿ ಕ್ರೀಡಾಮಯೂರಗಳು, ಕಾಡುಮಯೂರಗಳಾಗಿವೆ. ಕಾಡು ಕೋತಿಗಳಂತೆ ಅಣಕವಾಟವಾಡುತ್ತಿವೆ.

ಯಷ್ಟಿರೇವ ನಿವಾಸಃ ಸ್ಥಾನಂ ತಸ್ಯ ಭಂಗಾತ್—ವೃಕ್ಷೇ ಶೇರತ ಇತಿ ವೃಕ್ಷೇಶಯಾಃ—ಅಧಿಕರಣೇ ಶೇತೇ ಇತ್ಯಚ್‌ಪ್ರತ್ಯಯಃ—"ಶಯವಾಸವಾಸಿಷ್ವಕಾಲಾತ್" ಇತ್ಯಲುಕ್ ಸಪ್ತಮ್ಯಾಃ—(ಪಾಣಿನಿ) "ದವದಾವೌ ವನಾರಣ್ಯವಹ್ನೀ" ಇತ್ಯಮರಃ—ಕ್ರೀಡಾ ವನಮಯೂರತ್ವಂ ಪ್ರಾಪ್ತಾಃ—ವೃಕ್ಷೇಶಯಾ =ವೃಕ್ಷೇ ಶೇರತೇ ಇತಿ—ಅಲುಕ್ ಸಮಾಸ.

**15. ಸೋಪಾನಮಾರ್ಗೇಷು ಚ ಯೇಷು ರಾಮಾ ।**
**ನಿಕ್ಷಿಪ್ತವತ್ಯಶ್ಚರಣಾನ್ ಸರಾಗಾನ್ ॥**
**ಸದ್ಯೋಹತನ್ಯಂಕುಭಿರಸ್ರದಿಗ್ಧಂ ।**
**ವ್ಯಾಘ್ರೈಃ ಪದಂ ತೇಷು ನಿಧೀಯತೇ ವೋ ॥ ೧೫ ॥**

ಆ ರಾಮೆಯರು, ಅಭಿರಾಮೆಯರು, ರಮಣೀಯರಾದ ರಮಣಿಯರು, ನಾನಾ ವೇಷಭೂಷಣಗಳಿಂದ ಅಲಂಕೃತರಾದ ಕಾಮಿನೀಜನರು ತನ್ನ ಚರಣಕಮಲಗಳಿಗೆ ಲಾಕ್ಷಾರಸವನ್ನು ಹಚ್ಚಿ, ಅಲಂಕರಿಸಿಕೊಂಡು ಆ ಕೊಳಗಳ ಸುಂದರ ಸೋಪಾನಗಳಲ್ಲಿ ಓಡಾಡುತ್ತಿದ್ದರು. (ಸುಂದರಿಯರಲತಿಗೆಯ ಚೆನ್ನಡಿಗಳಿಂದೆಸೆವ) ಅವರ ಚೆನ್ನಡಿಯ ಅಲತಿಗೆಯ ಕೆಂಪಾದ ಗುರುತುಗಳು ಸೋಪಾನದ ಎಲ್ಲೆಡೆ ಎದ್ದು ಕಾಣಿಸುತ್ತಿದ್ದುವು. ಆದರೆ ಇಂದು ದೊಡ್ಡಹುಲಿ, ಚಿರತೆ, ತೋಳ, ಕರಡಿ, ಮುಸು, ಭುಸುಂಡಿಗಳು, ಹುಲ್ಲೆಗಳನ್ನದೆ ಕೊಂದು ನೆತ್ತರಿನ ಹೆಜ್ಜೆಯೊಳು ಆ ಸೋಪಾನಪಂಕ್ತಿಗಳಲ್ಲಿ ಓಡಾಡುತ್ತಿವೆ. ಆ ಕ್ರೂರಜಂತುಗಳ ನೆತ್ತರಿನ ಕೊಳೆಯ ಹೆಜ್ಜೆಗಳ ಗುರುತು ಕಾಣಿಸುತ್ತಿರುವ ಕೆರೆಗಳ ಮೆಟ್ಟಿಲುಗಳನ್ನು ನೋಡಬಹುದು.

ಸರಾಗಾಂಲ್ಲಾಕ್ಷಾರಸಾರ್ದ್ರಾಂಶ್ಚರಣಾನ್ನಿಕ್ಷಿಪ್ತವತ್ಯಃ—ಸದ್ಯೋಹತನ್ಯಂಕುಭಿರ್ಮಾರಿತ ಮೃಗೈರ್ವ್ಯಾಘ್ರೈರಸ್ರದಿಗ್ಧಂ ರುಧಿರಲಿಪ್ತಂ ಪದಂ ನಿಧೀಯತೇ ॥

**16. ಚಿತ್ರದ್ವಿಪಾಃ ಪದ್ಮವನಾವತೀರ್ಣಾಃ ।**
**ಕರೇಣುಭಿರ್ದತ್ತ ಮೃಣಾಲಭಂಗಾಃ ॥**
**ನಖಾಂಕುಶಾಘಾತವಿಭಿನ್ನಕುಂಭಾಃ ।**
**ಸಂರಬ್ಧಸಿಂಹಪ್ರಹೃತಂ ವಹಂತಿ ॥ ೧೬ ॥**

ಆನೆಯ ಹಿಂಡು ಪದ್ಮವನಗಳಿಗಿಳಿದು. ತಾವರೆಯ ದಂಟುಗಳನ್ನು ತಿನ್ನುವಂತೆ ಚಿತ್ರಿತವಾದ ಚಿತ್ರಗಳು, ಹೆಣ್ಣು ಆನೆಗಳು ಮೃಣಾಲಗಳನ್ನು ತಿನ್ನುವಂತೆ ಪ್ರತಿಪಾದಿತವಾದ ಚಿತ್ರಗಳು, ಹೀಗೆ ಗೋಡೆಗಳಲ್ಲಿ (ಅರಮನೆಯ ಗೋಡೆಗಳಲ್ಲಿ) ಚಿತ್ರಿತಚಿತ್ರಗಳ ಗತಿ ಅಧೋಗತಿಗೆ ಸಂದಿದೆ. ಆನೆಗಳ ವೈರಿಯಾದ ಸಿಂಹಗಳ, ಅಂಕುಶದಂತೆ ಚೂಪಾದ ಪಾದಗಳಲ್ಲಿರುವ ನಖಗಳ ಪ್ರಬಲವಾದ ಪ್ರಹಾರಗಳಿಗೆ ಬಲಿಯಾಗಿವೆ. ಆನೆಗಳ ಕುಂಭಸ್ಥಳವನ್ನು ಮತ್ತು ಕಪೋಲಗಳನ್ನು ತಮ್ಮ ಜಾತಿವೈರದಿಂದ, ಚಿತ್ರಿತವಾದ ಚಿತ್ರಗಳಾದರೂ ಸರಿಯೆ, ತಮ್ಮ ಪಾದಗಳಲ್ಲಿರುವ ನಖಾಯುಧದ ಹೊಡೆತದಿಂದ ಒಡೆದು ಕೆಡಹಿ ಚೂರು ಚೂರು ಮಾಡಿವೆ. (ಕುಂಭಗಳನಂಕುಶೋಪಮನಖಗಳಿಂದೊಡೆದು) ಹೀಗೆ ಆ ವರ್ಣಮಯ ಚಿತ್ರಗಳು ಇಂದು ಸಿಂಹಗಳ ದಾಳಿಗೆ ಬಲಿಯಾಗಿವೆ. ಕ್ರೂರವಾದ ಹೊಡೆತಕ್ಕೆ ಬಲಿಯಾದ ಹೆಣ್ಣಾನೆಗಳ ಕುಂಭಸ್ಥಲವು ಭಿನ್ನಗೊಂಡಿವೆ. ಒಡೆದು ಚೂರುಚೂರಾಗಿದೆ. ಎಲ್ಲವೂ "ಮರಳಿ ಮಣ್ಣಿಗೆ" ಎಂಬಂತೆ ಧೂಳಿಧೂಸರಿತವಾಗುತ್ತಿವೆ, ಮಣ್ಣಾಗುತ್ತಿದೆ.

ಕರೇಣುಭಿಃ = ಕರಿಣೀಭಿಃ—ಚಿತ್ರಗತಾಭಿರೇವ — "ಕರೇಣುರಿಭ್ಯಾಂ ಸ್ತ್ರೀನೇಭೇ" ಇತ್ಯಮರಃ—ನಖಾ ಏವಾಂಕುಶಾಸ್ತೇಷಾಮಾಘಾತೇ ಭಿನ್ನ ಕುಂಭಾ ಸನ್ತಃ—ಸಂರಬ್ಧಾ ಸಿಂಹಪ್ರಹೃತಂ = ಕುಪಿತಸಿಂಹ ಪ್ರಹಾರಂ ವಹನ್ತಿ ॥

17. ಸ್ತಂಭೇಷು ಯೋಷಿತ್ಪ್ರತಿಯಾತನಾನಾಂ ।
ಉತ್ಕ್ರಾಂತವರ್ಣಕ್ರಮಧೂಸರಾಣಾಮ್ ॥
ಸ್ತನೋತ್ತರೀಯಾಣಿ ಭವಂತಿ ಸಂಗಾತ್ ।
ನಿರ್ಮೋಕಪಟ್ಟಾಃ ಫಣಿಭಿರ್ವಿಮುಕ್ತಾಃ ॥ ೧೭ ॥

ಓ ಭೂರಮಣ (ಭೂರಮಾರಮಣ, ಭೂಕಾಂತ) ಈ ಹಿಂದೆ ರಾರಾಜಿಸುತ್ತಿದ್ದ ಮದನ ಕೈಗೊಂಬೆಗಳು. ಸ್ತಂಭಗಳು ಧೂಳಿನಿಂದ ಮಸುಕಾಗಿ ಮಲಿನವಾಗಿ ತೋರುತ್ತಿವೆ. ವಿಶೇಷವಾದ ವಿನ್ಯಾಸಗಳು ಅಳಿಸಿಹೋಗಿವೆ. ವರ್ಣರೇಖೆಗಳಳಿದು ಹೆಣ್ಣುಬೊಂಬೆಗಳ ಮೇಲ್ಭಾಗವು ಪೂರ್ಣ ಮಾಸಿಹೋಗಿವೆ. ಆದರೀಗಲಾದರೂ ಹಾವುಗಳು ಪೊರೆ ಕಳಚಿಬಿಟ್ಟುಹೋದ ಪೊರೆಗಳು ಆ ಗೊಂಬೆಗಳ ಎದೆಯ ಭಾಗವನ್ನು ಕಂಚುಕದಂತೆ (ರವಿಕೆಯಂತೆ) ಆವರಿಸಿ ಸುತ್ತಿಕೊಂಡಿರುವುದನ್ನು (ವಸ್ತ್ರದಂತೆ ಮೇಲುದ, ಮೇಲು ಬಟ್ಟೆ, ಶಾಲು) ನೀನಿಂದು ಪ್ರತ್ಯಕ್ಷವಾಗಿ ಕಾಣಬಹುದು (ಸ್ತನೋತ್ತರೀಯಾಣಿ).

ಉತ್ಕ್ರಾಂತವರ್ಣಕ್ರಮಾ = ವಿಶೀರ್ಣವರ್ಣವಿನ್ಯಾಸಾಸ್ತಾಶ್ಚ — ಧೂಸರಾಶ್ಚ = ಮಲಿನಾಸ್ತಾಸಾಂ—ಸ್ತಂಭೇಷು ಯೋಷಿತ್ ಪ್ರತಿಯಾತನಾನಾಂ = ಸ್ತ್ರೀ ಪ್ರತಿಕೃತೀನಾಂ ದಾರುಮಯೀಣಾಂ–ಫಣಿಭಿರ್ವಿಮುಕ್ತಾ ನಿರ್ಮೋಕಾ=ಕಂಚುಕಾ ಏವ ಪಟ್ಟಾಃ–"ಸಮೌ ಕಂಚುಕ, ನಿರ್ಮೋಕೌ" ಇತ್ಯಮರಃ—ಸಂಗಾತ್ ಸಕ್ತತ್ವಾತ್ ಸ್ತನೋತ್ತರೀಯಾಣಿ = ಸ್ತನಾಚ್ಛಾದನವಸ್ತ್ರಾಣಿ ಭವನ್ತಿ ॥

18. ಕಾಲಾಂತರಶ್ಯಾಮಸುಧೇಷು ನಕ್ತಂ ।
ಇತಸ್ತತೋ ರೂಢತೃಣಾಂಕುರೇಷು ॥
ತ ಏವ ಮುಕ್ತಾಗುಣಶುದ್ಧಯೋಽಪಿ ।
ಹರ್ಮ್ಯೇಷು ಮೂರ್ಚ್ಛಂತಿ ನ ಚಂದ್ರಪಾದಾಃ ॥ ೧೮ ॥

ಕಾಲವಶದಿಂದ ಉಪ್ಪರಿಗೆಯ ಮನೆಗಳು, ಮಹಾಮಂದಿರಗಳು, ರಾಜಭವನಗಳು, ಚಂದ್ರನಿಲಯಗಳು, ಮಹಲುಗಳು, ಚೈತ್ರ, ಕಾರ್ತಿಕಗೃಹಗಳು, ಚಂದ್ರಶಾಲೆ, ಗೋಶಾಲೆ, ವಿಹಾರಮಂದಿರಗಳು, ಬಾಲಭವನಗಳು, ಕಲಾಮಂದಿರಗಳು, ಸುಣ್ಣಬಣ್ಣ, ಡಿಸ್ಟೆಂಪರ್ ಹೊಳಪು (ಮೆರುಗು) ಅಳಿದುಹೋಗಿ ಕಪ್ಪಾಗಿವೆ. ನಶಿಸುತ್ತಿರುವ ಕಲ್ಲು ಕಟ್ಟಡಗಳ ಮೇಲೆಲ್ಲ ಹುಲ್ಲು, ಪಾರ್ಥೇನಿಯಮ್ ಪೊದೆಗಳು ದಟ್ಟವಾಗಿ ಬೆಳೆದು ಮುತ್ತಿಕೊಂಡಿವೆ. ಈ ಮೊದಲಿನ ಅಂದಚಂದಗಳೆಲ್ಲ ಮಂಗಮಾಯವಾಗಿ ಕಟ್ಟಡಗಳೇ ಕಣ್ಣೀರಿಡುವಂತೆ ಭಾಸವಾಗುತ್ತಿದೆ. ಚಂದ್ರನ ಕಾಂತಿಯು ಹೊನ್ನ (ಜೊನ್ನ) ಬೆಳದಿಂಗಳಲ್ಲಿ ಮುತ್ತಿನಂತೆ ಪ್ರಕಾಶಮಾನವಾಗಿ ಹೊಳೆಯುತ್ತಿದ್ದ ಕಟ್ಟಡಗಳು, ಗಂಡಿಗೋಪುರಗಳು ರಾತ್ರಿಹೊತ್ತು ಪ್ರತಿಬಿಂಬಿಸದೆ (ಪ್ರತಿಫಲನಹೊಂದದೆ) ಕಪ್ಪುಕಪ್ಪಾಗಿ ತೋರುವ ಗುಹೆಗಳ ತೆರೆದ ಬಾಯಿಯಂತೆ ತೋರುತ್ತಿವೆ ರಾತ್ರಿಹೊತ್ತು. ಇದೀಗ ಭಯದ ತಾಣವೆನಿಸಿದೆ (ಕೊಟ್ಟುಗಂದ್ಲೋಳಿ ಆಗು).

ಕಾಲೇತಿ = ಕಾಲಾಂತರೇಣ = ಕಾಲಭೇದವಶೇನ—ಶ್ಯಾಮಸುಧೇಷು = ಮಲಿನ

ಚೋರ್ಣೇಷ್ವಿತಸ್ತತೋರುಹತ್ಯ...ರೇಷು. ಹರ್ಮ್ಯೇಷು = ಗೃಹೇಷು ...
ರಾತ್ರೋ ಮುಕ್ತಾ ಗುಣಾನಾಂ=ಶುದ್ಧಿರಿವ ಶುದ್ಧಿಃ ಸ್ವಾಚ್ಛ್ಯಂ ಏಷಾಂ ತಾದೃಶಾ ಅಪಿ—
ತತಃ ಪೂರ್ವಂ ಯೇ

ಮುಖರ್ಭಾಂತಿ ಸ್ಮ ಏವ ಚಂದ್ರಪಾದಾಶ್ಚಂದ್ರರತ್ಮ್ಯಃ—"ಪಾದಾರಶ್ಮ್ಯಂಘ್ರಿ
ತುರ್ಯಾಂಶಾಃ" ಇತ್ಯಮರಃ—ನ ಮುಖ್ಯರ್ಭಾಂತಿ ॥

**19. ಆವರ್ಜ್ಯಶಾಖಾಃಸದಯಂ ಚ ಯಾಸಾಂ ।**
**ಪುಷ್ಪಾಣ್ಯುಪಾತ್ತಾನಿ ವಿಲಾಸಿನೀಭಿಃ ॥**
**ವನ್ಯೈಃ ಪುಲಿಂದೈರಿವ ವಾನರೈಸ್ತಾ ।**
**ಕ್ಲಿಶ್ಯಂತ ಉದ್ಯಾನಲತಾ ಮದೀಯಾಃ ॥ ೧೯ ॥**

ಅಂದಿನ ದಿನಗಳಲ್ಲಿ ವಿಲಾಸಿನಿಯರಾದ (ತುಂಬುಜವ್ವನೆಯರು) ಮಹಿಳೆಯರು ಆ ಪ್ರಮದವನಗಳಲ್ಲಿ ಪುಷ್ಪೋದ್ಯಾನಗಳಲ್ಲಿ ಉಲ್ಲಾಸಿತರಾಗಿ ಆನಂದದಿಂದ ವಿಹರಿಸುತ್ತ ರೆಂಬೆ, ಕೊಂಬೆ ಲತಾಮಂಟಪಗಳಲ್ಲಿ ತೂಗಿ, ಬಾಗಿ ಹೂಗಳನ್ನು ಕೊಯ್ಯುತ್ತಿದ್ದರು. ಮನೆಯ ಕಿಟಕಿಗಳಲ್ಲಿ ವನಿತೆಯರ ಮುಖಕಾಂತಿ ತೋರದಿಹುದು. ರಾತ್ರಿ ಹೊತ್ತು ದೀಪದ ಕಾಂತಿ, ಪರಿಮಳದ್ರವ್ಯಗಳ ಕಂಪು ಕಾಣಸಿಗದು. ವಸತಿ ಗೃಹಗಳ ಜನ ಶೂನ್ಯವಾಗಿ ಜೇಡ ಬಾವಲಿಗಳ (ಕಣ್ಣು ಕಪ್ಪಡಿ) ಕಾಡುಬೆಕ್ಕು, ಓತಿಕೇತಗಳ (ಹಾವುರಾಣಿ) ವಾಸಸ್ಥಾನವಾಗಿವೆ. ಜೇಡರಹುಳು ಅವ್ಯಾಹತವಾಗಿ ಬಲೆಗಳನ್ನು ಕಟ್ಟುತ್ತಲಿದ್ದು ಜೇಡರ ಬಲೆಗಳಿಂದ ತುಂಬಿ "ಬಿಕೋ" ಎನಿಸುತ್ತಿದೆ. ಜೀರುಂಡೆಗಳ ಕರ್ಕಶ ನಾದ ಬೇಸರ ಹುಟ್ಟಿಸುತ್ತಿದೆ. ಇದೀಗ ಹೂದೋಟಗಳು ಕಳೆಗಿಡಗಳಿಂದ, ಕಾಡುಗಿಡಗಳಿಂದ (ಕಾಟು = ಕಾಡು) ಆವರಿಸಿ ಹೋಗಿವೆ. ರಸವತ್ತಾದ ಫಲಗಳನ್ನು ಕೊಡುತ್ತಿದ್ದ ಮರಗಳಲ್ಲಿ ಕಾಡು ಕೋತಿಗಳು ನೆಲಸಿವೆ. ರಮ್ಯವಾದ ಉದ್ಯಾನಗಳಲ್ಲಿ ಕಾಡುಜನರು (ಅನಾಗರಿಕ ಜನರು) ಬೇಡರು, ಲಂಬಾಣಿಗಳು, ಹಕ್ಕಿಪಿಕ್ಕಿಯರು ಗೊತ್ತುಗುರಿಯಿಲ್ಲದೆ ಸಂಚರಿಸುತ್ತ ತಮ್ಮ ನಿವೇಶನಗಳನ್ನಾಗಿ ಆರಿಸಿಕೊಂಡಿರುವರು. ಅಂದಿನ ರಾಜೋದ್ಯಾನಗಳು ಇಂದಿನ ಕಾಡು ಸೀಮೆಯಾಗಿದೆ. ಕಾಡುಕೋತಿಗಳು, ಮುಸುಗಗಳು, ಸಿಂಗಳೀಕಗಳು ದಾಂಧಲೆ ನಡೆಸುತ್ತಿವೆ. ಕಿರಾತರು, ಪುಳಿಂದರು, ಶಬರರು, ಮ್ಲೇಚ್ಛಜನರೇ ಮೊದಲಾದವರ ವಾಸಸ್ಥಾನವಾಗಿ ಪರಿಣಮಿಸಿದೆ. ಅವರು ನಗರದ ನಾಶಕಾರ್ಯವನ್ನು ಸತತವಾಗಿ ಮುಂದುವರಿಸುತ್ತಲೇ ಇರುವರು.

ಸದಯು ಶಾಖಾ=ಲತಾವಯವಾನಾವರ್ಜ್ಯನಮಯ್ಯ ಯಾಸಾಂ ಲತಾನಾಂ ಪುಷ್ಪಾಣ್ಯುಪಾತ್ತಾನಿ = ಗೃಹೀತಾನಿ ತಾನಿ ತಾ ಮದೀಯ ಉದ್ಯಾನಲತಾಃ—ಪುಲಿಂದೈರ್ಮ್ಲೇಚ್ಛ ವಿಶೇಷೈರಿವ ವಾನರೈಃ—ಉಭಯೈರಪೀತ್ಯರ್ಥಃ—ಕ್ಲಿಶ್ಯಂತೇ=ಪೀಡಯಂತೇ—ಕ್ಲಿಶ್ನಾತೇ ಕರ್ಮಣಿ ಲಟ್—"ಮೇಧಾಕಿರಾತ ಶಬರ ಪುಲಿಂದಾ ಮ್ಲೇಚ್ಛ ಜಾತಯಃ" ಇತ್ಯಮರಃ ॥

**20. ರಾತ್ರಾವನಾವಿಷ್ಕೃತದೀಪಭಾಸಃ ।**
**ಕಾನ್ತಾಮುಖಶ್ರೀವಿಯುತಾ ದಿವಾಪಿ ॥**

**ತಿರಸ್ಕ್ರಿಯಂತೇ ಕ್ರಿಮಿಜಂತುಜಾಲೈಃ ।**
**ವಿಚ್ಛಿನ್ನಧೂಮಪ್ರಸರಾ ಗವಾಕ್ಷಾಃ ॥ ೨೦ ॥**

ರಾತ್ರಿಕಾಲದಲ್ಲಿ ಗವಾಕ್ಷಗಳು ದೀಪದ ಬೆಳಕನ್ನು ಚೆಲ್ಲುತ್ತಾ, ಧರೆಗಿಳಿದ ನಕ್ಷತ್ರ ಲೋಕದಂತೆ ಪ್ರಕಾಶಮಾನವಾಗಿ ತೋರುತ್ತಿದ್ದುವು. ಹಗಲು ಹೊತ್ತಿನಲ್ಲಿ ಸುಂದರಿಯರಾದ ಕಾಂತೆಯರ ಮುಖಚಂದ್ರನ ಕಾಂತಿ ಆ ಕಿಟಿಕಿಗಳ ಮೂಲಕ ಹೊರಹೊಮ್ಮುತ್ತಲಿತ್ತು. ಆದರಿಂದು ತದ್ವಿರುದ್ಧ ಎಂಬಂತೆ ಆ ಗವಾಕ್ಷಗಳು ಅವುಗಳನ್ನು ತೋರದೆ, ರಾತ್ರಿದೀಪ ಕಾಂತಿಯನ್ನು ಕಾಣಿಸದೆ ಜೇಡರಬಲೆ ಹಣೆದುಕೊಂಡಿದೆ. ಕಂಪು ಹೊಗೆಯೂ ತಡೆದು ಜೇಡರಹುಳು ಬಲೆಗಟ್ಟುತ್ತಲಿದೆ. (ಬಲೆಗಳ ಜಾಲ) ಕ್ರಿಮಿಗಳು, ಹುಳಹುಪ್ಪಟೆಗಳು ತಮ್ಮ ಖಾಯಂ ವಾಸಸ್ಥಾನವನ್ನಾಗಿ, ವಸತಿಕೇಂದ್ರವನ್ನಾಗಿ ಮಾಡಿಕೊಂಡು ವಿಜೃಂಭಿಸುತ್ತ ಹಳೆಯ ಕಾಲದ (ಓಬೀರಾಯನ ಕಾಲದ) ಸೆರೆಮನೆಯಂತೆ ಕಾಣಿಸುತ್ತಿದೆ. ವನಿತೆಯರು ಹೂಗಳನ್ನು ಆಯುತ್ತಿದ್ದ ಉದ್ಯಾನವನದಲ್ಲಿ ಅಂಕೆಯಿಲ್ಲದ ಕಪಿಗಳು ಕಿರಾತರಂತೆ ಸಂಚರಿಸುತ್ತಿವೆ.

ರಾತ್ರಾವನಾ ವಿಷ್ಕೃತದೀಪಭಾಸಃ—ದೀಪಪ್ರಭಾಶೂನ್ಯಾ ಇತ್ಯರ್ಥಃ—ದಿವಾಪಿದಿವ ಸೇऽಪಿಕಾಂತಾಮುಖಾನಾಂ ಶ್ರಿಯಾ=ಕಾಂತ್ಯಾವಿಯುಂತಾ=ರಹಿತಾ ವಿಚ್ಛಿನ್ನೋ ನಷ್ಟೋ ಧೂಮಪ್ರಸರೋ ಯೇಷಾಂತೇ ಗವಾಕ್ಷಾಃ ಕ್ಷಮಿತಂತು ಜಾಲೈರ್ಲೂತಾ ತಂತುವಿತಾನೈಃ—ತಿರಸ್ಕ್ರಿಯಂತೇ=ಛಾದ್ಯಂತೇ ॥

**21. ಬಲಿಕ್ರಿಯಾವರ್ಜಿತಸೈಕತಾನಿ ।**
**ಸ್ನಾನೀಯಸಂಸರ್ಗಮನಾಪ್ನುವಂತಿ ॥**
**ಉಪಾಂತವಾನೀರಗೃಹಾಣಿದೃಷ್ಟ್ವಾ ।**
**ಶೂನ್ಯಾನಿ ದೂಯೇ ಸರಯೂಜಲಾನಿ ॥ ೨೧ ॥**

ಸರಯೂ ನದಿಯ ಪವಿತ್ರ ಜಲವನ್ನು ನಾನು ನೋಡುತ್ತಿರಲು ದುಃಖವು ತಾನಾಗಿ ಉಮ್ಮಳಿಸಿ(ಉಕ್ಕಿ) ಬರುತ್ತಿದೆ, ಸರಯೂ ನದಿಯ ಮರಳು ದಿಂಡೆಯ ಮೇಲೆ ಬಲಿಯ ಕುರುಹುಗಳಿಲ್ಲ. ಬಲಿಕ್ರಿಯಾದಿಗಳು ನಡೆಯುತ್ತಿಲ್ಲ. ಅವಭೃತ ಸ್ನಾನ ಮಾಡುವಾಗ ಉಪಯೋಗಿಸಿದ ಪರಿಮಳದ್ರವ್ಯವು, ಸ್ನಾನಚೂರ್ಣವು ಆ ನೀರಿನಲ್ಲಿಲ್ಲ. (ನೀರಿನೊಳು ಪರಿಮಳ ದ್ರವ್ಯವಿಲ್ಲ) ಹಿಂದೆ ರಘುನೃಪರು ಅಶ್ವಮೇಧ, ವಿಶ್ವಜಿತ್, ಪುತ್ರಕಾಮೇಷ್ಟಿ ಮೊದಲಾದ ಮಹಾಮಹಾ ಯಜ್ಞಗಳನ್ನು ನಡೆಸಿ ಯೂಪಸ್ತಂಭಗಳನ್ನು ನೆಟ್ಟಿದ್ದರು. ಯಜ್ಞವೇದಿಗಳನ್ನು ನೆಟ್ಟಿದ್ದರು. ಅವುಗಳನ್ನಿಂದು ಕಾಣಲಾರೆವು. ಆ ಪೂಜೋಪಕರಣಗಳೊಂದೂ ಇಲ್ಲ. ಸರಯೂತೀರದಲ್ಲಿ ಬಳಿಯ ಮನೆಗಳಲ್ಲಿ, ಬೆತ್ತದಮನೆಗಳಲ್ಲಿ ಓವರು ಯಜ್ಞದೀಕ್ಷಿತರು, ಅಗ್ನಿಹೋತ್ರಿಗಳು ಯಾರೂ ಇಲ್ಲದೆ ಪರಿತ್ಯಜಿಸಿದ ವಾನೀರಗೃಹಗಳಾಗಿವೆ. ನಿತ್ಯವೂ ಸ್ನಾನಮಾಡುವ ಜನರಿಂದ ಕಿಕ್ಕಿರಿದ ಸರಯೂ ನದಿಯು ಜನಶೂನ್ಯವಾಗಿದೆ. ಇದನ್ನು ನೋಡಿ ನನಗೆ ಅಳುಬರುತ್ತಿದೆ. ಉತ್ಪ್ರೇಕ್ಷೆಯಲ್ಲ. ಹೌದೋ ಅಲ್ಲವೋ ಎಂಬುದನ್ನು ಪ್ರತ್ಯಕ್ಷವಾಗಿ ನೋಡಿ ತಿಳಿಯಬಹುದು.

ವಲಿಕ್ರಿಯೇತಿ—ವಲಿಃ ಪೂಜೋಪಹಾರಃ ಸ್ಯಾತ್'' ಇತಿ ಶಾಶ್ವತಃ—ವಲಿಕ್ರಿಯಯಾ ವರ್ಜಿತಾನಿ ಸೈಕತಾನಿ ಯೇಷಾಂ ತಾನಿ ಸ್ನಾನೀಯಾನಿ ಸ್ನಾನಸಾಧನಾನಿ ಚೂರ್ಣಾದೀನಿ ಕೃತ್ಯಲ್ಯುಟೋಬಹುಲಮ್—ಇತಿಕರಣೇ ನೀಯಪ್ರತ್ಯಯಃ — ಶೂನ್ಯಾನಿ ರಿಕ್ತಾನ್ಯಾಪಾಂತೇಷು ದೃಷ್ಟ್ವಾ ದೂಯೇ=ಪರಿತಪ್ಯೇ—

**22. ತದರ್ಹಸೀಮಾಂ ವಸತಿಂ ವಿಸೃಜ್ಯ ।**
**ಮಾಮಭ್ಯುಪೈತುಂ ಕುಲರಾಜಧಾನೀಮ್ ॥**
**ಹಿತ್ವಾ ತನುಂ ಕಾರಣ ಮಾನುಷೀಂ ತಾಂ ।**
**ಯಥಾ ಗುರುಸ್ತೇ ಪರಮಾತ್ಮಮೂರ್ತಿಮ್ ॥ ೨೨ ॥**

ಆದುದರಿಂದ ಹೇ ರಾಜನ್, ನೀನು ನೆಲಸಿರುವ ಈ ಕುಶಾವತೀನಗರವನ್ನು ತ್ಯಜಿಸಿ ನಿನ್ನ ಕುಲರಾಜಧಾನಿಯಾಗಿರುವ, ಪಿತೃಪಿತಾಮಹರ (ಪೂರ್ವಜರ) ನಗರಿಯಾದ ಅಯೋಧ್ಯೆಯಲ್ಲಿ ನೆಲಸು. ಹೇಗೆ ನಿನ್ನ ಪಿತನು ಮಾನವ ಕಲ್ಯಾಣಕ್ಕಾಗಿ (ಲೋಕಕಲ್ಯಾಣ ಜನರಕಲ್ಯಾಣ) ಮಾನವನಾಗಿ ಜನಿಸಿ (ಅವತರಿಸಿ) ಮಾನವಮಹಾಮೂರ್ತಿಯೆನಿಸಿ, (ದುಷ್ಟಮರ್ದನ ಶಿಷ್ಟರ ಸಂರಕ್ಷಕನು) ರಾವಣಾದಿಗಳನ್ನು ನಿಗ್ರಹಿಸಿ ಕೊನೆಗೆ ಮಾನವ ದೇಹವನ್ನು ತ್ಯಜಿಸಿ ತನ್ನ ಶಾಶ್ವತದೇಹವಾದ, ಪರಮಾತ್ಮನ ರೂಪವನ್ನು ಸೇರಿದಂತೆ, ಪರಮಾತ್ಮನಾದ ಮಹಾವಿಷ್ಣುರೂಪವನ್ನು ತಳೆದಂತೆ, ನೀನು ಅಯೋಧ್ಯೆಯನ್ನು ಸೇರಿ ರಾಜ್ಯಭಾರವನ್ನು ನಡೆಸುವುದು. ನೀನು ನನ್ನ ಬಳಿಗೆ ಬಂದು ಕಾರ್ಯೋನ್ಮುಖನಾಗುವುದು ಎಂದು ಆ ಪುರದ ಅಧಿದೇವತೆ ಭಿನ್ನವಿಸಿದಳು.

ವಸತಿಂ = ಕುಶವತೀಂ—ವಿಸೃಜ್ಯ ಕುಲರಾಜಧಾನೀಮಯೋಧ್ಯಾಂ ಮಾಮಭ್ಯುಪೇತುಮರ್ಹಸಿ—ಕಥಮಿವ ?—ತೇ ಗುರುಃ ಪಿತಾ ರಾಮಸ್ತಾಂ ಪ್ರಸಿದ್ಧಾಂ ಕಾರಣವಶಾನ್ಮಾನುಷೀಂ ತನುಂ ಮಾನುಷಮೂರ್ತಿಂ ಹಿತ್ವಾ ಪರಮಾತ್ಮಮೂರ್ತಿಮ್ ಯಥಾ ವಿಷ್ಣುಮೂರ್ತಿಮಿವ ॥

ಕಾರಣಮಾನುಷೀಂ ತನುಮ್ = ಕಾರಣೇನ ಲವಣ, ರಾವಣವಧಾದಿ ರೂಪೇಣ ಗೃಹೀತಾಂ ತನುಮ್ = ಹೇಗೆ ನಿನ್ನ ಪಿತನು ಮಾನವಕಲ್ಯಾಣಕ್ಕಾಗಿ ರಾವಣಾದಿಗಳ ವಧಾರ್ಥವಾಗಿ ಮಾನವಮೂರ್ತಿಯಾಗಿ ಜನಿಸಿದನೋ—ಕುಲರಾಜಧಾನೀಮ್ = ಕುಲಕ್ರಮೇಣ ವಂಶಪಾರಂಪರ್ಯಾ ರಾಜ್ಞಾಧೀಯಂತೇ ಸ್ಥೀಯಂತೇಽಸ್ಯಾಮ್ ತಾಮ್—

**23. ತಥೇತಿ ತಸ್ಯಾಃ ಪ್ರಣಯಂ ಪ್ರತೀತಃ ।**
**ಪ್ರತ್ಯಗ್ರಹೀತ್ ಪ್ರಾಗ್ರಹರೋ ರಘೂಣಾಮ್ ॥**
**ಪೂರಪ್ಯಭಿವ್ಯಕ್ತಮುಖಪ್ರಸಾದಾ ।**
**ಶರೀರಬಂಧೇನ ತಿರೋಬಭೂವ ॥ ೨೩ ॥**

ರಘುವರರೊಳು ಉತ್ತಮನಾದ ಕುಶಭೂಪತಿಯು ಸಂತೋಷದಿಂದ ಅಂತಾಗಲೆಂದು ಒಪ್ಪಿದನು. ತನ್ನ ಮನಸ್ಸಿನ ಅಭಿಲಾಷೆಯು ನೆರವೇರಿದುದನ್ನು ತಿಳಿದು ಆ ನಗರ ದೇವತೆಯು ತನ್ನ ಮಾನವರೂಪವನ್ನು ತ್ಯಜಿಸಿ ದೇಹಬಂಧನವನ್ನು ಕಳಚಿಕೊಂಡು, ತನ್ನ

ದೇವತೆಯು ದಿವ್ಯ ರೂಪವನ್ನು (ದೈವ ಸ್ವರೂಪ, ದೇವಸ್ವರೂಪ) ಧರಿಸಿ ಅದೃಶ್ಯಳಾದಳು. ಆ ನದೀದೇವತೆಯ ಮುಖಬಿಂಬವು ಆನಂದದ ಬೆಳಕು ಹೊರಹೊಮ್ಮಿ ತ್ರಿದ್ಯುತೆಯೋ ಕಣ್ಮರೆಯಾದಳು.

ರಘೂಣಾಂ ಪ್ರಾಗ್ರಹರಃ—ಪುರಃ ಪ್ರಣಯಂ ಯಾಂಚಾಂ ಪ್ರತೀತೋ ಹೃಷ್ಟಃ ಸನ್—ಪ್ರತ್ಯಗ್ರಹೀತ್ =ಸ್ವೀಕೃತವಾನ್—ಪುರಾಧಿದೇವತಾಪ್ಯಭಿವ್ಯಕ್ತಮುಖಪ್ರಸಾದಾ ಸತೀ—ಶರೀರಬಂಧೇನ = ಶರೀರಯೋಗೇನ ಕರಣೇನ ತಿರೋಭೂಪಾನ್ತರ್ದಧೇ—ಮಾನವಂ ರೂಪಂ ವಿಹಾಯ ದೈವಂ ರೂಪಮಂಗ್ರಹೀದಿತ್ಯರ್ಥಃ—ಅಂತರ್ದಧ ಇತ್ಯರ್ಥಃ—ಪ್ರಾಗ್ರಹರಃ = ಶ್ರೇಷ್ಠಃ = ಶ್ರೇಷ್ಠನು—ಶರೀರಬಂಧೇನ ತಿರೋಬಭೂವ = ದೇಹ ಸಮೇತ ಮಾಯವಾದನು.

**24.** ತದದ್ಭುತಂ ಸಂಸದಿ ರಾತ್ರಿವೃತ್ತಂ ।
ಪ್ರಾತರ್ದ್ವಿಜೇಭ್ಯೋ ನೃಪತಿಃ ಶಶಂಸ ॥
ಶ್ರುತ್ವಾ ತ ಏನಂ ಕುಲರಾಜಧಾನ್ಯಾ ।
ಸಾಕ್ಷಾತ್ಪತಿತ್ವೇ ವೃತಮಭ್ಯನಂದನ್ ॥ ೨೪ ॥

ಮರುದಿನ ಉದಯಕಾಲದಲ್ಲಿ ಆ ನೃಪವರನು ಸಚಿವರು ಪುರೋಹಿತರು ಸಾಧು ಸಂತರು ದ್ವಿಜೋತ್ತಮರೇ ಮೊದಲಾದವರು ನೆರೆದಿರುವ ಸಭೆಯಲ್ಲಿ ರಾತ್ರಿಯಲ್ಲಿ ನಡೆದ ಅದ್ಭುತವಾದ ವಿಷಯವನ್ನು ಕೂಲಂಕಷವಾಗಿ ಬಹಿರಂಗಪಡಿಸಿದನು. ಕುಲರಾಜಧಾನಿಯಾದ ಅಯೋಧ್ಯೆಯ ನಗರದೇವತೆಯೇ ತಾನೇ ಬಂದು ಕುಶಭೂಪತಿಯನ್ನು ವರಿಸಿದಳು ಎಂದು ಹೇಳುತ್ತ ಆ ಹಿತೈಷಿಗಳು ಶುಭಕೋರಿ ಭೂಪತಿಯನ್ನು ಅಭಿನಂದಿಸಿದರು. ರಾಜನ ಸದಭಿಪ್ರಾಯವನ್ನು ಸರ್ವಾನುಮತದಿಂದ ಅನುಮೋದಿಸಿದರು.

ಕುಶಸ್ತದದ್ಭುತಂ ರಾತ್ರಿವೃತ್ತಾಂತಮ್—ದ್ವಿಜೇಭ್ಯಃ ಶಶಂಸ—ಅತ್ರಗಾರ್ಗ್ಯಃ—ದೃಷ್ಟ್ವಾ ಸ್ವಪ್ನಂ ಶೋಭನಂ ನೈವ ಸುಪ್ಯಾತ್ಪಶ್ಚಾದ್ದೃಷ್ಟೋ ಯಃ ಸಪಾಕಂ ವಿಧತ್ತೇ—ಶಂಸೇದಿಷ್ಟಂ ತತ್ರ ಸಾಧುದ್ವಿಜೇಭ್ಯಸ್ತೇ ಚಾಶೀರ್ಭಿಃ ಪ್ರೀಣಯೇಯುರ್ನರೇಂದ್ರಮ್—ಇದಮಪಿ ಸ್ವಪ್ನತುಲ್ಯಮಿತಿ ಭಾವಃ—ಅಭ್ಯನಂದನ್ = ಅಭಿನಂದಿಸು ॥

**25.** ಕುಶಾವತೀಂ ಶ್ರೋತ್ರಿಯಸಾತ್ ಸ ಕೃತ್ವಾ ।
ಯಾತ್ರಾನುಕೂಲೇಽಹನಿ ಸಾವರೋಧಃ ।
ಅನುದ್ರುತೋ ವಾಯುರಿವಾಭ್ರವೃಂದೈಃ ।
ಸೈನ್ಯೈರಯೋಧ್ಯಾಭಿಮುಖಃ ಪ್ರತಸ್ಥೇ ॥ ೨೫ ॥

ಆ ಬಳಿಕ ಕುಶಭೂಪಾಲನು ಕುಶಾವತೀನಗರವನ್ನು ವೈದಿಕ ಸಂಸ್ಕಾರಪಡೆದ ವಿಪ್ರರಲ್ಲಿ ಶ್ರೇಷ್ಠರಾದ ಶ್ರೋತ್ರಿಯರಿಗೆ ದಾನವಾಗಿಕೊಟ್ಟನು. (ಜನ್ಮನಾ ಬ್ರಾಹ್ಮಣೋ ಜ್ಞೇಯಃ ಸಂಸ್ಕಾರೌ ದ್ವಿಜ ಉಚ್ಯತೇ । ವಿದ್ಯಯಾ ಯಾತಿ ವಿಪ್ರತ್ವಂ, ತ್ರಿಭಿಃ ಶ್ರೋತ್ರಿಯ ಉಚ್ಯತೇ) ಅನಂತರ ಯಾತ್ರೆಗೆ ಅನುಕೂಲವಾದ ಶುಭತಿಥಿ ಶುಭಯೋಗದಲ್ಲಿ(ಯಾತ್ರಾನುಕೂಲವಹ ಶುಭತಿಥಿಯೊಳು) ಅಯೋಧ್ಯೆಗೆ ಸೇನಾಸಮೇತ ಹೊರಟನು. ಅವನೊಂದಿಗೆ

ಅವನ ಅಂತಃಪುರಸ್ತ್ರೀಯರೂ, ಪರಿವಾರದವರೂ ಹೊರಟರು. ಹೇಗೆ ಆಕಾಶಮಾರ್ಗ ದಲ್ಲಿ ಸಾಗುತ್ತಿರುವ ವಾಯುದೇವನ ಜೊತೆಗೂಡಿ ಮೋಡಗಳ ಹಿಂಡು ಹೋಗುವಂತೆ ಸಮಸ್ತ ಸೇನೆ, ರಾಣಿವಾಸದವರು, ಪರಿಚಾರಕರು ರಾಜನನ್ನು ಅನುಸರಿಸಿ ಅಯೋಧ್ಯೆಗೆ ತೆರಳಿದರು.

ಶ್ರೋತ್ರಿಯೇಷು = ಛಾನ್ದಸೇಷ್ವಧೀನಾಂ—ಶ್ರೋತ್ರಿಯನ್‌ಸಾತ್—ತದಧೀನವಚನೇ —ಇತಿ ಸಾತಿಪ್ರತ್ಯಯಃ=ಶ್ರೋತ್ರಿಯಂಶ್ಛಂದೋಽಧೀತೇ ಇತಿ ನಿಪಾತಃ(ಪಾಣಿನಿ)— "ಶ್ರೋತ್ರಿಯಶ್ಛಾಂದಸೌ ಸಮೌ" ಇತ್ಯಮರಃ—ವಾಯೋರಭ್ರವೃಂದೈರಿವ—ಸೈನ್ಯೈ ರನುದ್ರುತೋಽನುಗತಃ ಸನ್, ಅಯೋಧ್ಯಾಭಿಮುಖಂ ಪ್ರತಸ್ಥೇ—

26. ಸಾಕೇತುಮಾಲೋಪವನಾ ಬೃಹದ್ಭಿಃ ।
ವಿಹಾರಶೈಲಾನುಗತೇವ ನಾಗೈಃ ॥
ಸೇನಾರಥೋದಾರಗೃಹಾ ಪ್ರಯಾಣೇ ।
ತಸ್ಯಾಭವಜ್ಜಂಗಮರಾಜಧಾನೀ ॥ ೨೬ ॥

ಅಯೋಧ್ಯೆಯ ಕಡೆಗೆ ಹೊರಟಿರುವ ಅವನ ಮಹಾಸೇನೆಯು ನಡೆದುಹೋಗು ತ್ತಿರುವ ಮಹಾನಗರದಂತೆ, ಜಂಗಮನಗರದಂತೆ ಕಾಣುತ್ತಿತ್ತು. ಆ ಸೇನೆಯ ಬಾವುಟ ಗಳು, ಧ್ವಜಪತಾಕೆಗಳು ಉಪವನದಂತೆ, ಸೇನೆಯ ಪೇರಾನೆಗಳು ವಿಹಾರಶೈಲಗಳು (ಕ್ರೀಡಾಪರ್ವತಗಳು, ಆಟದ ಅದ್ರಿಗಳು), ನಯನಮನೋಹರವಾದ, ಚೆಲುವಾದ ರಥ ಗಳೇ, ಸುಂದರವಾದ ಉಪ್ಪರಿಗೆ ಮನೆಗಳು (ವಿಧಾನಸೌಧಗಳು, ಸಭಾಭವನಗಳು, ರಾಷ್ಟ್ರ ಪತಿ-ರಾಜಭವನಗಳು, ಸಚಿವಾಲಯಗಳು) ಎಂಬಂತೆ ಕಂಗೊಳಿಸುತ್ತಾ ಆ ಮಹಾಸೇನಾ ಸಾಗರವು ಜಂಗಮರಾಜಧಾನಿಯಂತೆ, ಸಂಚರಿಸುವ (ಸಂಚಾರಿಣೀ) ಮಹಾನಗರದಂತೆ ಕಣ್ಣುಗಳಿಗೆ ಇಂಬಾಗಿ ಕಂಡಿತು.

ಬೃಹದ್ಭಿರ್ನಾಗೈರ್ಗಜೈರ್ವಿಹಾರಶೈಲೈಃ=ಕ್ರೀಡಾಶೈಲೈರನುಗತೇವ ಸ್ಥಿತಾ—ರಥಾ ಏವೋದಾರ ಗೃಹಾಯ ಸ್ಯಾಸಾಃ—ಜಂಗಮರಾಜಧಾನೀ, ಸಂಚಾರಿಣೀ ನಗರೀವ ॥

27. ತೇನಾತಪತ್ರಾಮಲಮಂಡಲೇನ ।
ಪ್ರಸ್ಥಾಪಿತಃ ಪೂರ್ವನಿವಾಸಭೂಮಿಮ್ ॥
ಬಭೌ ಬಲೌಘಃ ಶಶಿನೋದಿತೇನ ।
ವೇಲಾ ಮುದನ್ವಾನಿವ ನೀಯಮಾನಃ ॥ ೨೭ ॥

ಮಂಡಲಾಕಾರದಲ್ಲಿ ಹೊಳೆಯುತ್ತಿರುವ ಬೆಳ್ಗೊಡೆಯು ಕೆಳಗೆ ರಾರಾಜಿಸುತ್ತಿರುವ ಕುಶಭೂಪತಿಯು ಉದಯಿಸುತ್ತಿರುವ ಚಂದಿರನಂತೆ ಎಸೆಯುತ್ತ ತನ್ನ ಸೇನಾಸಾಗರ ವನ್ನು ಅಯೋಧ್ಯೆಯ ಕಡೆಗೆ ಮುನ್ನಡೆಸುತ್ತಿದ್ದನು. (ಉದಯಿಸಿದ ಚಂದಿರನು ಮೊರೆವ ವಾರಾಶಿಯನು) ಚಂದಿರನು ಉದಯಿಸಿದ ಕೂಡಲೇ ಕಡಲು ಮೊರೆಯುತ್ತ ದೊಡ್ಡ ದೊಡ್ಡ ತೆರೆಗಳನ್ನು ಎಬ್ಬಿಸುತ್ತಾ, ಘರ್ಜಿಸುತ್ತಾ ಕಡಲ ಕಿನಾರೆಯ ಕಡೆಗೆ, ಸಮುದ್ರವೇ ನುಗ್ಗಿಬರುವಂತೆ, ದಾಶರಥಿಯು ತನ್ನ ಸೇನಾಸಾಗರವನ್ನು ತನ್ನ ಪೂರ್ವಜರ ವಾಸಸ್ಥಾನದ

ಕಡೆಗೆ ಕೊಂಡೊಯ್ದನು. ತನ್ನ ಮೂಲಬಲಸಮೂಹವನ್ನು ಅಲ್ಲಿ ನೆಲೆಗೊಳಿಸಲು, ತ್ವರಿತ ಗತಿಯಿಂದ, ಬಾನ ಪಥದಲ್ಲಿ ಸಾಗುವ ಸೂರ್ಯದೇವನಂತೆ ಸಾಗಿದನು.

ಆತಪತ್ರಮೇವಾಮಲಂ ಮಂಡಲಂ=ಬಿಂಬಂ ಯಸ್ಯಂ ತೇನ—ಉದಕಮಸ್ಯಾಸ್ತೀತ್ಯು ದನ್‌ವಾನ್ ಉದಧಿರಿವ—''ಉದನ್ವಾನುದಧೌ ಚ'' ಇತಿ ನಿಪಾತನಾತ್ಸಾಧುಃ—ವೇಲಾಂ ನೀಯಮಾನಃ ಇವ=ತೆರೆಗಳನ್ನು ಎಬ್ಬಿಸುವ ಕಡಲಕಿನಾರೆಗೆ ಮುನ್ನುಗ್ಗುವ ಸಾಗರದಂತೆ ದಾಶರಥಿಯು ಕಂಡನು.

28. ತಸ್ಯ ಪ್ರಯಾತಸ್ಯ ವರೂಥಿನೀನಾಂ |
ಪೀಡಾಮಪರ್ಯಾಪ್ತವತೀವ ಸೋಢುಂ ||
ವಸುಂಧರಾ ವಿಷ್ಣುಪದಂ ದ್ವಿತೀಯಂ |
ಅಧ್ಯಾರುರೋಹೇವರಜಶ್ಛಲೇನ || ೨೮ ||

ಕಂಶನ ಸೇನಾವಾಹಿನಿಯು ಮುಂದುಮುಂದಕೆ ನಡೆಯಿತು. ಆನೆ, ಕುದುರೆ, ರಥ, ಪದಾತಿಗಳ ಪದಹತಿಯಿಂದ ಎದ್ದ ಧೂಳು ಆಕಾಶಪಥವನ್ನೇರತೊಡಗಿತು. ವಸುಂಧರೆಯು (ಭೂದೇವಿಯು) ಆ ಸೇನಾನಿಕರದ ಪದಹತಿಯ ಪೀಡೆಯನ್ನು ಸಹಿಸಲಾರದೆ ಹುಡಿಯ (ಧೂಳಿನ) ರೂಪವನಾಂತು (ತಾನಿಂದು ಭೂದೇವಿ ಹುಡಿಯ ರೂಪವನಾಂತು) ಎರಡ ನೆಯ ವಿಷ್ಣುಪದವಾದ ಆಕಾಶಪಥವನ್ನು ಸೇರ್ದಳು. (ಭೂಗೋಳ ಖಗೋಳವಾಯಿತು)

ವರೂಥಿನೀನಾಂ ಸೇನಾನಾಂ ಕರ್ತ್ರೀಣಾಂ ''ಕರ್ತೃಕರ್ಮಣೋಃ ಕೃತಿಃ'' ಇತಿ ಕರ್ತರಿ ಷಷ್ಠೀ—ವಸುಂಧರಾರಜಶ್ಛಲೇನ ದ್ವಿತೀಯಂ ವಿಷ್ಣುಪದಮಾಕಾಶಮಧ್ಯಾರುರೋಹೇವ ಉತ್ಪ್ರೇಕ್ಷಾಲಂಕಾರ ||

29. ಉದ್ಯಚ್ಛಮಾನಾಗಮನಾಯ ಪಶ್ಚಾತ್ |
ಪುರೋ ನಿವೇಶೇ ಪಥಿ ಚ ವ್ರಜಂತೀ ||
ಸಾ ಯತ್ರ ಸೇನಾ ದದೃಶೇ ನೃಪಸ್ಯ |
ತತ್ರೈವ ಸಾಮಗ್ರ್ಯಮತಿಂ ಚಕಾರ || ೨೯ ||

ಆ ಮನುಜಕುಲಉದ್ಧಾರಕನ, ಮನುಕುಲರಕ್ಷಕನ, ಸೇನಾವಾಹಿನಿಯ ಮುಂಚೂಣಿ, (ಅಗ್ರಭಾಗದಲ್ಲಿ) ಮಧ್ಯ ಅಥವಾ ಅಂತ್ಯದ ವಿಭಾಗವನ್ನು ನೋಡಿದರೆ ಅದರ ಪ್ರತಿ ಯೊಂದು ವಿಭಾಗವೂ ಪರಿಪೂರ್ಣವಾದ ಸೇನೆಯಂತೆ ಕಾಣುತ್ತಿತ್ತು. ಅಂತಹ ಅಪರಿ ಮಿತ ಸೇನೆಯ ಸೇನಾಪ್ರವಾಹ ಅದಾಗಿತ್ತು. ಪ್ರಯಾಣಮಾರ್ಗದಲ್ಲಿ ಮೊದಲು ಪುರ ದಿಂದ (ರಾಜಧಾನಿಯಿಂದ) ಹೊರಮಾಡುವ, ನಡುನಡುವೆ ಮಾರ್ಗಾಂತರದಲ್ಲಿ ಬೀಡು ಬಿಟ್ಟು ಉಳಿಯುವಲ್ಲಿ, ಎಲ್ಲಿ ನೋಡಿದರಲ್ಲಿ ನೋಟಕರಿಗೆ ಆ ಸೇನೆ ಪರಿಪೂರ್ಣವೆನುವಂತೆ (ಪರಿಪೂರ್ಣವೆನುವವೊಲು) ತೋರುತ್ತಿತ್ತು. ನೋಟಕರ ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತಿತ್ತು.

ಉದ್ಯಚ್ಛಮಾನೋದ್ಯೋಗಂ ಕುರ್ವತೀ--ಸಮುದಾಙ್ಭ್ಯೋಯಮೋಽಗ್ರಂಥೇ—

ಇತ್ಯಸ್ಯ ಸಕರ್ಮಕಾಧಿಕಾರತ್ವಾದಾತ್ಮನೇಪದವರ್ (ಪಾಣಿನಿ) ಪಥಿ ಚ ವ್ರಜಂತೀ ನೃಪಸ್ಯ ಸೇನಾ ಯತ್ರ ಪಶ್ಚಾತ್ ಪುರೋಮಧ್ಯೇ ವಾ ದದೃಶೇ ತತ್ರೈವ ಸಾಮಗ್ರ್ಯವಂತಿಂ= ಕೃತ್ಸ್ನತಾ ಬುದ್ಧಿಂ ಚಕಾರ—ಅಪರಿಮಿತಾ ತಸ್ಯ ಸೇನೇತ್ಯರ್ಥಃ ॥

**30.** **ತಸ್ಯ ದ್ವಿಪಾನಾಂ ಮದವಾರಿಸೇಕಾತ್ ।**
**ಖುರಾಭಿಘಾತಾಚ್ಚ ತುರಂಗಮಾಣಾಮ್ ॥**
**ರೇಣುಃ ಪ್ರಪೇದೇ ಪಥಿಪಂಕಭಾವಂ ।**
**ಪಂಕೋsಪಿರೇಣುತ್ವಮಿಯಾಯನೇತುಃ** ॥ ३० ॥

ಆ ಮಹಾ ಸೇನಾನಾಯಕನ, ಮಹಾನೇತಾರನ ಸೇನಾವಾಹಿನಿಯಲ್ಲಿರುವ ಅಸಂಖ್ಯಾತ ಮದಗಜಗಳು ಸುರಿಸಿದ ಮದಜಲಧಾರೆಯಿಂದ ಭೂಮಿಕೆಸರಾಯ್ತು. ಆದರೆ ಕುದುರೆಗಳ ಪಾದಾಘಾತಕ್ಕೆ, ಕುದುರೆಗಳ ಗೊರಸಿನ ಹೊಡೆತಕ್ಕೆ ಸಿಕ್ಕಿ ಕೆಸರಾದ ಮಣ್ಣು ಧೂಳಾಗಿ ಪರಿವರ್ತನೆಗೊಂಡಿತು. ಹೀಗೆಯೇ ಧೂಳು ತುಂಬಿದದಾರಿಯಲ್ಲಿ ಗಜಸೇನೆಯೇ ನಡೆಯುತ್ತಿರಲು, ದಾರಿಸಾಗುತ್ತಿರಲು. ಕೆಸರಾಗಿ ಪರಿಣಮಿಸಿತು. ಹೀಗೆ ಪರಿಮಿಡಿಯಿಂದ ಧೂಳು ಕೆಸರಾಯ್ತು, ಕೆಸರುಧೂಳಾಗಿ ಪರಿಣಮಿಸಿತು. (ಕೆಸರುಧೂಳಾದತ್ತು ಪರಿಮಿಡಿ ಯೊಳು).

ನೇತುಸ್ತಸ್ಯ ಕುಶಸ್ಯ ದ್ವಿಪಾನಾಂ ಮದವಾರಿಭಿಃ ಸೇಕಾತ್ತು, ರಂಗಮಾಣಾಂಖುರಾಭಿ ಘಾತಾಚ್ಚ ಯಥಾಸಂಖ್ಯಂ ಪಥಿರೇಣಾರಜಃ ಪಂಕಭಾವಂ ಪರಿಕತಾಂ ಪ್ರಪೇದೇ ॥

**31.** **ಮಾರ್ಗೈರ್ಷಿಣೀಸಾಕಟಕಾಂತರೇಷು ।**
**ವೈಂಧ್ಯೇಷು ಸೇನಾ ಬಹುಧಾವಿಭಿನ್ನಾ ॥**
**ಚಕಾರ ರೇವೇವ ಮಹಾವಿರಾವಾ ।**
**ಬದ್ಧಪ್ರತಿ ಶ್ರುಂತಿ ಗುಹಾಮುಖಾನಿ** ॥ ३० ॥

ಆ ಮಹಾಸೇನೆಯು ಕವಲುಗಳಾಗಿ ಒಡೆದು ವಿಂಧ್ಯಾಪರ್ವತ ಸಾಲಿನ ನಿತಂಬ ಪ್ರದೇಶದ ಕಣಿವೆಗಳ ಮೂಲಕ ಮಾರ್ಗವನ್ನರಸುತ್ತ ಮಹಾನಾದವನ್ನು ಮಾಡುತ್ತ ಮುಂದುವರಿಯಿತು. ನರ್ಮದಾನದಿಯು (ರೇವಾನದಿಯು) ವಿಂಧ್ಯ, ಕಟಕ, ಕಾಂತಾರ ವನ್ನು ಪ್ರವಹಿಸುತ್ತಿರಲು ಮಹಾರವಗೈದು ಮುಂದುವರಿಯುತ್ತಿರಲು ಆ ನಾದ ವಿಂಧ್ಯಾ ಪರ್ವತದ ಗಿರಿಗರ್ವರಗಳಲ್ಲಿ, ಗುಹೆಗಳಲ್ಲಿ ಮಾರ್ದನಿಯಾಗಿ (ಪ್ರತಿಧ್ವನಿ) ಬಹುದೂರ ಕೇಳಿಸುತ್ತಿರುವುದು. ಆದರಂತೆಯೇ ಆ ರಾಜನ ಮಹಾಸೇನೆಯು ವಿವಿಧ ಪಂಗಡಗಳಾಗಿ ರೇವಾನದಿಯಂತೆ ಮಹಾಶಬ್ದದಿಂದ ವಿಜೃಂಭಿಸುತ್ತ(ರೇವೆಯಪೋಲುರವಗೈದು ಸೇನೆ ನಡೆದು) ವಿಂಧ್ಯಾಟವಿಯಲ್ಲಿ ಮುಂದೆ ಮುಂದೆ ನಡೆಯಿತು. ಆ ಸೇನೆಯ ಅಮಿತಶಬ್ದವು. ವಿಂಧ್ಯಾ ಟವಿಯ ಗವಿಗಳಲ್ಲಿ ಪ್ರತಿಧ್ವನಿ ಕೇಳಿಸುತ್ತಿತ್ತು.

ವೈಂಧ್ಯೇಷು = ವಿಂಧ್ಯಾಸಂಬಂಧಿಷು—ಕಟಕಾಂತರೇಷು = ನಿತಂಬಾವಕಾಶೇಷು— "ಕಟಕೋ ಸ್ತ್ರೀನಿತಂಬೋsದ್ರೇಃ" ಇತ್ಯಮರಃ—ಗುಹಾಮುಖಾನಿಬದ್ಧ ಪ್ರತಿಶ್ರುಂತಿ = ಪ್ರತಿಧ್ವನಿಮಂತಿಚಕಾರಾಕರೋತ್ ॥

32. ಸ ಧಾತುಭೇದಾರುಣಯಾನನೇಮಿಃ ।
ಪ್ರಭುಃ ಪ್ರಯಾಣಧ್ವನಿಮಿಶ್ರತೂರ್ಯಃ ॥
ವ್ಯಲಂಘಯತ್ ವಿಂಧ್ಯಮುಪಾಯನಾನಿ ।
ಪಶ್ಯನ್ ಪುಲಿಂದೈಃ ಉಪಪಾದಿತಾನಿ ॥ ೩೨ ॥

ಆ ರಾಜನ ರಥವು ಮುಂದುವರಿಯುತ್ತಿದ್ದಾಗ ರಥಚಕ್ರದ ನೇಮಿಯು ಗೈರಿಕಾದಿ ಧಾತುಗಳನ್ನು ಪುಡಿಗೈದು ಸಾಗುತ್ತಿರಲು ಕೆಂಬಣ್ಣವನ್ನು (ಅರುಣಬಣ್ಣವನ್ನು) ಹೊಂದಿತು. ಅವನ ಸೇನೆಯ ವಾದ್ಯರವವು (ತೂರ್ಯರವ) ಆ ಮಹಾದಂಡಿನ ವಿವಿಧ ರವದೊಡನೆ ಒಟ್ಟುಸೇರಿ ರೂಪುಗೊಂಡ ಮಹಾಧ್ವನಿಯೊಂದಿಗೆ ಆ ನೃಪಶ್ರೇಷ್ಠನು ಪಯಣಿಸಿದನು. ಆಗ ಆ ವಿಂಧ್ಯಾಟವಿಯ ಪುಳಿಂದರು, ಕಿರಾತರು, ಕಾಡು ಬೇಡರು, ಲಂಬಾಣಿಗಳು, ಬೇಡರಾಜರು, ಕಾಣಿಕೆಗಳ ಸಮೇತ ಅಲ್ಲಲ್ಲಿ ಬಂದು ಆ ರಘುಪ್ರವೀರನ ದರ್ಶನ ಪಡೆಯಲು ಕಾತುರರಾಗಿ ಬಂದರು. ಆ ರಘುಶ್ರೇಷ್ಠನು ವಿಂಧ್ಯಾ ಪರ್ವತವನ್ನು ಒರೇ ನೋಡಿ ತೃಪ್ತಿಪಟ್ಟಂತೆ, ಆ ಪುಳಿಂದರು ನೀಡಿದ ವಸ್ತುಗಳನ್ನು ನೋಡಿ ಸಂತೃಪ್ತಿಗೊಂಡನು.

ಧಾತೂನಾಂ = ಗೈರಿಕಾದೀನಾಂ ಭೇದೇನಾರುಣಾಯಾನನೇ ಮಿಃ = ರಥ ಚಕ್ರಧಾರಾ ಯಸ್ಯ ಪ್ರಯಾಣೇ ಯೋ ಧ್ವನ್ಯಃ ಕ್ಷ್ವೇಡಹೇಷಾದಯಃ ತನ್ಮಿಶ್ರಾಣಿತೂರ್ಯಾಣಿಯಸ್ಯ ಸ್ವಂ ವಿಧಃ—ಉಪಪಾದಿತಾನಿ = ಸಮರ್ಪಿತಾನ್ಯುಪಾಯನಾನಿ — ಉಪಾಯನಾನಿ ಪಶ್ಯನ್ = ಒರೇ ನೋಡಿ ನೋಟ ಮಾತ್ರದಿಂದ ತೃಪ್ತಿಗೊಂಡನು.

33. ತೀರ್ಥೇ ತದೀಯೇ ಗಜಸೇತುಬಂಧಾತ್ ।
ಪ್ರತೀಪಗಾಮುತ್ತರತೋಽಸ್ಯ ಗಂಗಾಮ್ ॥
ಅಯತ್ನಬಾಲವ್ಯಜನೀ ಬಭೂವುಃ ।
ಹಂಸಾ ನಭೋಲಂಘನಲೋಲಪಕ್ಷಾಃ ॥ ೩೩ ॥

ಆ ಮಹಾವೀರನು (ಕುಶಭೂಪತಿ) ಪವಿತ್ರವಾದ ವಿಂಧ್ಯಾತೀರ್ಥಕ್ಕೆ ಬಂದು ಅಲ್ಲಿ ಗಂಗಾನದಿಯನ್ನು, ಆನೆಗಳನ್ನು ನದಿಯಲ್ಲಿ ಸಾಲುಸಾಲಾಗಿ ನಿಲ್ಲಿಸಿ ರಚಿಸಿದ ಗಜ ಸೇತುವೆಯ ಮೂಲಕ ದಾಟಲೆಳಸಿದನು. ಆ ಪ್ರದೇಶದಲ್ಲಿ ಗಂಗಾನದಿಯು ಪಶ್ಚಿಮಕ್ಕೆ ಪ್ರವಹಿಸುತ್ತಾ ಬಹು ಸುಂದರವಾಗಿ ಕಾಣಿಸುತ್ತಿದ್ದಳು. ಆ ದೊರೆಯು ಆ ದೇವನದಿಗೆ ವಂದಿಸಿ ಗಜಸೇತುವೆಯ ಮೂಲಕ ದಾಟಲೆಳಸಿದನು. ಅವನು ಅಲ್ಲಿ ವಿಂಧ್ಯಾವಾಸಿನೀ ದೇವಿಯನ್ನು ಪೂಜಿಸಿದನು. ಅವನು ಗಜಸೇತುವಿನಿಂದ ದಾಟುತ್ತಿರಲು ಆ ಜಾಹ್ನವಿಯಲ್ಲಿ ವಿಹರಿಸುತ್ತಿದ್ದ ಹಂಸ ಪಕ್ಷಿಗಳು ಗಗನ ಮಾರ್ಗಕ್ಕೆ ಹಾರುತ್ತ ಚಾಮರದಂತೆ ಶೋಭಿಸುತ್ತ ಯತ್ನವಿಲ್ಲದೆ, ತಮಗೆ ಅರಿವಿಲ್ಲದೆ ಚಾಮರಸೇವೆಗೈದುವು. ಗಗನಲಂಘನಲೋಲಪಕ್ಷಗಳ ದೆಸೆಯಿಂದ ಹಂಸಪಕ್ಷಿಗಳು ತಾವೇತಾವಾಗಿ ಏನೇನು ಪ್ರಯತ್ನವಿಲ್ಲದೆ ಚಾಮರಗಳು ತಾವಾದುವು. ಭುವನಪತಿಗೆ ಸೇವೆಯನ್ನು ಸಲ್ಲಿಸಿದುವು ಎಂಬಂತೆ ನಭೋಮಂಡಲದಲ್ಲಿ ಹಾರಾಡುತ್ತ ಚೀರಾಡುತ್ತ ಸಹಸ್ರಾರು ಹಂಸಪಕ್ಷಿಗಳು ಚಾಮರದಂತೆ ತಮ್ಮ ಅಗಲವಾದ

[illegible]ಗಳನ್ನು ಬಿಟ್ಟು ಬೀಸುತ್ತ ಚಾಮರಸೇವೆಸಲ್ಲಿ[illegible] ಆ [illegible] ನೋಟವು ಕಣ್ಮನಗಳನ್ನು ತಣಿಸಿದುವು. ಕಣ್ಣಿಗೆ ಹಬ್ಬವನ್ನು ಮಾಡಿದುವು.

ನಭೋಲಂಘನೇನ ಲೋಲಪಕ್ಷಾ ಹಂಸಾ ಅಯತ್ನೇನ ವಾಲವ್ಯಜನೀಬಭೂವು=ಶ್ಚಾಮರಾಣ್ಯಭೂವನ್—ತದೀಯೇ ತೀರ್ಥೇ = ಪವಿತ್ರವಾದ ವಿಂಧ್ಯ ತೀರ್ಥಕ್ಕೆ ಬಂಧಂ ಅದನ್ನು ದಾಟಿ (ವಿಂಧ್ಯವಾಸಿನಿ ದೇವಿ ವಿಂಧ್ಯತೀರ್ಥದ ಅಧಿಷ್ಠಾತೃದೇವತೆ. ಅಲ್ಲಿ ಈ ಹಿಂದೆ ಭಗೀರಥನು ಸಗರಪುತ್ರರಿಗೆ ಅರ್ಘ್ಯಕೊಟ್ಟ ಸ್ಥಳ. ಅವರ ತಿಥಿ, ಶ್ರಾದ್ಧ (ಬೊಜ್ಜ= ಗ್ರಾಮ್ಯ ವಚನ) ಅಪರಕಾರ್ಯಗಳನ್ನು ನಡೆಸಿದ ಪವಿತ್ರ ಸ್ಥಳ.

**34. ಸ ಪೂರ್ವಜಾನಾಂ ಕಪಿಲೇನ ರೋಷಾತ್ ।**
**ಭಸ್ಮಾವಶೇಷೀಕೃತವಿಗ್ರಹಾಣಾಮ್ ॥**
**ಸುರಾಲಯಪ್ರಾಪ್ತಿನಿಮಿತ್ತಮಂಭಃ ।**
**ತ್ರೈಸ್ರೋತಸಂ ನೌಲುಲಿತ ವವಂದೇ ॥ ೩೪ ॥**

ಆ ಭೂವರನು (ಭೂವಧೂವರನು) ನಲವಿಂದ ನೌಲುಲಿತ ಗಂಗೆಯನ್ನು ಅಲ್ಲಿ ವಂದಿಸಿದನು. ಅಲ್ಲಿ ಈ ಹಿಂದೆ ಕಪಿಲಮುನಿಯ ತೀಕ್ಷ್ಣಕೋಪಕ್ಕೆ ಒಳಗಾಗಿ ಅವನ ಪೂರ್ವಜರಾದ ಸಗರಪುತ್ರರು ಭಸ್ಮಾವಶೇಷಿಗಳಾಗಿ (ಮುಕ್ತಿಯಿಲ್ಲದೆ) ಪತಿತರಾಗಿ ಬಿದ್ದಿದ್ದರು. ಅವರ ಉದ್ಧಾರಕ್ಕಾಗಿ (ಆತ್ಮೋದ್ಧಾರಕ್ಕಾಗಿ) ಅವರು ಸ್ವರ್ಗಸೇರುವಂತೆ ಮಾಡಲು ತ್ರಿಪಥಗಾಮಿನಿಯಾದ ದೇವಗಂಗಾನದಿಯನ್ನು ಆಕಾಶಮಾರ್ಗದಿಂದ ಭೂಮಿಗಿಳಿಯುವಂತೆ ಪ್ರಾರ್ಥಿಸಿದನು. ಆ ಭಾಗೀರಥಿಯು ತನ್ನ ಮಹಾಮಹಿಮೆಯಿಂದ(ದಿವ್ಯಮಹಿಮೆ)ಮಾನವರೆಲ್ಲರ ಪಾಪರಾಶಿಯನ್ನು ತಾನು ಹೊತ್ತು ನಿತ್ಯವೂ ನಡೆಯುವವಳು. ತನ್ನಲ್ಲಿ ಮಿಂದವರನ್ನು ಪವಿತ್ರರನ್ನಾಗಿ ಮಾಡಬಲ್ಲ ಅಘನಾಶಿನಿ. ಅಂತಹ ಪಾವನ ನದಿಯಾದ ದೇವಗಂಗಾನದಿಯನ್ನು ಆ ಮಾನವಾಧೀಶನು ಮನಸಾರೆ ವಂದಿಸಿದನು. (ನೌಲುಲಿತ ಗಂಗೆಯನ್ನು ವಂದಿಸಿದನು).

ಕಪಿಲೇನ=ಮುನಿನಾ—ರೋಷಾದ್ ಭಸ್ಮಾವಶೇಷೀಕೃತಾ ವಿಗ್ರಹಾದೇಹಾ ಯೇಷಾಂ ತೇಷಾಂ—ನೌಭಿರ್ಲುಲಿತಮ್=ಕ್ಷುಭಿತಮ್—ತ್ರಿಸ್ರೋತಸ ಇದಂ=ತ್ರೈಸ್ರೋತಸಮ್—ಗಾಂಗಮಂಭೋವವಂದೇ ॥

**35. ಇತ್ಯಧ್ವನಃ ಕೈಶ್ಚಿದಹೋಭಿರಂತೇ ।**
**ಕೂಲಂ ಸಮಾಸಾದ್ಯ ಕುಶಃ ಸರಯ್ವಾಃ ॥**
**ವೇದಿಪ್ರತಿಷ್ಠಾನ್ ವಿತತಾಧ್ವರಾಣಾಂ ।**
**ಯೂಪಾನಪಶ್ಯತ್ ಶತಶೋ ರಘೂಣಾಮ್ ॥ ೩೫ ॥**

ಹೀಗೆಯೇ ಕೆಲವೊಂದುದಿನ ಪಯಣಿಸಿ ರಾಜನಾದ, ರಾಜಶ್ರೇಷ್ಠನಾದ ಕುಶ ಭೂಪಾಲನು ಸರಯೂ ನದೀತೀರವನ್ನು ಸೇರಿದನು. ಆ ನದಿಯು ವಿಶಾಲವಾದ ಕ್ಷೇತ್ರದಲ್ಲಿ ರಘುನೃಪರು ಪ್ರತಿಷ್ಠಾಪನ ಮಾಡಿರುವ ನೂರಾರು ವೇದಿಮಧ್ಯದೊಳಿರುವ ಯಜ್ಞ ಸ್ತಂಭಗಳನ್ನು ಈಕ್ಷಿಸಿ ಮುದಪಡೆದನು. ಆ ನೂರಾರು ಯಜ್ಞ ಸ್ತಂಭಗಳು ಚೌಕಾಕಾರದ

ಯಜ್ಞವೇದಿಕೆಗಳ ಮಧ್ಯದಲ್ಲಿ ಕಂಗೊಳಿಸುತ್ತ ಹಿಂದಿನ ರಾಜರು ನಡೆಸಿದ ಅಧ್ವರಗಳ ಸವಿನೆನಪನ್ನು ಸ್ಮೃತಿಪಟಲಕ್ಕೆ ತರುವ ಜ್ವಲಂತಸಾಕ್ಷಿಗಳಾಗಿದ್ದುವು (ಶತಶತಸ್ತಂಭಗಳನೀಕ್ಷಿಸಿದನು).

ಸಮಾಸಾದ್ಯ ವಿತತಾಧ್ವರಾಣಾಂ = ವಿಸ್ತೃತಮಖಾನಾಂ—ವೇದಿಃ ಪ್ರತಿಷ್ಠಾಸ್ಪದಂ ಯೇಷಾಂ ತಾನ್—ಯೂಪಾಂಛತಶೋಽಪಶ್ಯತ್—ವೇದಿಪ್ರತಿಷ್ಠಾನ್=ವೇದಿಃಪ್ರತಿಷ್ಠಾ (ಸ್ಥಾನಂ) ಯೇಷಾಂ ತಾನ್ = ರಘುನೃಪರು ಪ್ರತಿಷ್ಠಾಪಿಸಿದವೇದಿಮಧ್ಯದೊಳೆಸೆವ ಯಜ್ಞಸ್ತಂಭಗಳನು.

**36.** **ಅಧೂಯಶಾಖಾಃ ಕುಸುಮದ್ರುಮಾಣಾಂ ।**
**ಸ್ಪೃಷ್ಟ್ವಾ ಚ ಶೀತಾನ್ ಸರಯೂತರಂಗಾನ್ ॥**
**ತಂ ಕ್ಲಾಂತಸೈನ್ಯಂ ಕುಲರಾಜಧಾನ್ಯಾಃ ।**
**ಪ್ರತ್ಯುಜ್ಜಗಾಮೋಪವನಾಂತವಾಯುಃ** ॥ ೩೬ ॥

ಆಗ ಸರಯೂನದಿಯ ತರಂಗಗಳಮೇಲಿನಿಂದ ತುಂತುರುಹನಿಗಳಿಂದ ಕೂಡಿದ ತಂಪಾದ ಗಾಳಿಯು ಬೀಸಿತು. ಆ ಮಾರುತನು ಕುಲರಾಜಧಾನಿಯತ್ತಣಿಂದ, ಮಹಾನಗರವಾದ ಅಯೋಧ್ಯೆಯ ಉಪವನಗಳ ಕಡೆಯಿಂದ, ಪುಷ್ಪಗಳ ಸೌಗಂಧದಿಂದ ಕೂಡಿ, ಮರಗಿಡಗಳ ರೆಂಬೆ, ಕೊಂಬೆ (ಶಾಖೋಪಶಾಖೆಗಳನ್ನು) ಮೆಲ್ಲಮೆಲ್ಲನೆ ಅಲುಗಿ ನಲುಗಾಡಿಸುತ್ತಾ, ತಂಪಾದ (ಶೈತ್ಯವಾದ) ಸುರಭಿಯುಕ್ತವಾದ ಆ ಸಮೀರನು ಕುಶಭೂಪಾಲನನ್ನು ಎದುರುಗೊಳ್ಳುವಂತೆ ಹೋಗಿ ಸ್ಪರ್ಶಿಸಿದನು. ಅವನ ಮತ್ತು ಪಯಣದಿಂದ ಆಯಾಸಗೊಂಡ ಸೈನಿಕರನ್ನು ಆ ತಂಪಾದ, ಹಿತಕರವಾದ ನಿರ್ಮಲವಾದ ಮಾರುತವು ತೀಡಿ ಅವರ ಆಯಾಸವನ್ನು ಒಂದು ಅರೆಕ್ಷಣದಲ್ಲಿ ಹೋಗಲಾಡಿಸಿ ಪುನರುಜ್ಜೀವನ, ಪುನಶ್ಚೇತನಗೊಳಿಸಿತು. (ಆ ಧೂತ, ತರು, ಪುಷ್ಪಗಂಧವನು)

ಶೀತಾನ್ ಸರಯೂ ತರಂಗಾಶ್ಚ ಸ್ಪೃಷ್ಟ್ವಾ—ಅನೇನ ಶೈತ್ಯೋಕ್ತಿಃ—ಪ್ರತ್ಯುಜ್ಜಗಾಮ = ಸರಯೂ ನದಿ ತೀರವನ್ನು ಸೇರಿ, ಮುಂದಕ್ಕೆ ನಡೆದು.

**37.** **ಅಥೋಪಶಲ್ಯೇ ರಿಪುಮಗ್ನಶಲ್ಯಃ ।**
**ತಸ್ಯಾಃ ಪುರಃ ಪೌರಸಖಃ ಸ ರಾಜಾ ॥**
**ಕುಲಧ್ವಜಸ್ತಾನಿ ಚಲಧ್ವಜಾನಿ ।**
**ನಿವೇಶಯಾಮಾಸ ಬಲೀಬಲಾನಿ** ॥ ೩೭ ॥

ಅವನು ತನ್ನ ವೈರಿಗಳ ಕಠಿಣವಾದ ಎದೆಯಲ್ಲಿ ಶಲ್ಯವನ್ನು ನೆಟ್ಟ ಮಹಾವೀರನು. ದರ್ಪದಿಂದ ಮೆರೆಯುವ ಅರಿರಾಯರ ನಿಷ್ಠುರವಾದ ಹೃದಯದಲ್ಲಿ ಭಲ್ಲೆಯ ನೆಟ್ಟವನು. ಆದುದರಿಂದ ಅವನು ರಿಪುಮಗ್ನಶಲ್ಯನೆಂಬ ಅಭಿಧಾನಕ್ಕೆ ಪಾತ್ರನು. ಯೋಗ್ಯತೆಯಿಂದ ಅರ್ಹತೆಯನ್ನು ಪಡೆದಿರುವ ತ್ರಿಲೋಕವೀರನು. ಅವನು ತನ್ನ ಸ್ವಂತಬಲದಿಂದ ನಶಿಸಿಹೋಗುತ್ತಿದ್ದ ಪುರಾತನ ರಾಜಧಾನಿಯಾದ ಸಾಕೇತನಗರದಲ್ಲಿ ತನ್ನ ಕುಲಧ್ವಜವನ್ನು ನೆಟ್ಟು ವಿಜೃಂಭಿಸಿದನು (ಸ್ತುತ್ಯನಾದವನು.) ಅಮಿತಬಲನಾದ, ತೇಜೋವಿಲಸಿತ

ನಾದ, ಕುಶಮಹಾರಾಜನು ತನ್ನ ಪುರದಲ್ಲಿ ಸೌಮ್ಯತೆಯಲ್ಲಿ ಪೌರಸಖನು.(ಮನೆಮಗನಂತೆ) ತನ್ನ ಪ್ರಜೆಗಳ ಸನ್ಮಿತ್ರನು. ತನ್ನ ಸೇನಾವಾಹಿನಿಯನ್ನು ನಗರದ ಹೊರಭಾಗದಲ್ಲಿ-ಹೊರವಲಯದಲ್ಲಿರುವ ಉಪವನಗಳಲ್ಲಿ ನೆಲೆಗೊಳಿಸಿ ಪುರಪ್ರವೇಶ ಮಾಡಿದನು. ಅವನು ರಿಪು ಮಗ್ನಶಲ್ಯನು. ನಗರೋಪ ಶಲ್ಯದೊಳು ಅಮಿತಬಲನಾದ ಆ ಅಧಿರಾಜನು ಚಂಚಲ ಧ್ವಜರಾಜಿಯಿಂದ ಎಸೆವ ತನ್ನ ಮಹಾಸೇನೆಯನ್ನು ನಗರದ ಹೊರಬಾಗಿಲಲ್ಲಿ ನಿಲ್ಲಿಸಿ ತಾನು ಪುರಪ್ರವೇಶಗೈದ ಕುಲಧ್ವಜನು. ಅಂತಹವರ ನೃಪನಾದ ಕುಶನು ಪ್ರಜೆಗಳೆಲ್ಲರ ಸನ್ಮಿತ್ರನೆನಿಸಿದನು. ಉಚ್ಚ-ನೀಚವೆಂಬ ಭೇದವಿಲ್ಲದವನು.

"ಶಲ್ಯಂ ಶಂಕೌಶರೇವಂಶೇ" ಇತಿ ವಿಶ್ವಃ—ಪೌರಾಣಾಂ ಸಖಾ ಪೌರಸಖಃ—ಕುಲಸ್ಯ ಧ್ವಜಾಶ್ಚಿಹ್ನಭೂತೋ—ಬಲೀ ಸ ರಾಜಾ ಚಲಾಶ್ಚಲಂತೋ ವಾ ಧ್ವಜಾ ಯೇಷಾಂ ತಾನಿ—ಬಲಾನಿ = ಸೈನ್ಯಾನಿ ಉಪಶಲ್ಯೇ ಗ್ರಾಮಾಂತೇ—"ಗ್ರಾಮಾಂತ ಉಪಶಲ್ಯಂ ಸ್ಯಾತ್" ಇತ್ಯಮರಃ—ನಿವೇಶಯಾಮಾಸ—ರಿಪುಮಗ್ನ ಶಲ್ಯಃ = ರಿಪುಷುಮಗ್ನಂ ಶಲ್ಯಂ ಯಸ್ಯ = ವೈರಿಗಳ ಎದೆಯಲ್ಲಿ ಬಾಣವನ್ನು ನೆಟ್ಟವನು (ಶಲ್ಯ = ಶೂಲ, ಭಲ್ಲೆ, ಭರ್ಜಿ, ಬಾಣ, ಶರ).

**38.** **ತಾಂ ಶಿಲ್ಪಿ ಸಂಘಾಃ ಪ್ರಭುಣಾ ನಿಯುಕ್ತಾಃ ।**
**ತಥಾಗತಾಂ ಸಂಭೃತ ಸಾಧನತ್ವಾತ್ ॥**
**ಪುರಂ ನವೀಚಕ್ರುರಪಾಂ ವಿಸರ್ಗಾನ್ ।**
**ಮೇಘಾ ನಿದಾಘ ಗ್ಲಪಿತಾಮಿವೋರ್ವೀಮ್** ॥ ೩೮ ॥

ಪ್ರಭುವಿನ ಆಜ್ಞೆಯಿಂದ ನಿಯುಕ್ತರಾದ ಶಿಲ್ಪಿಗಳು ದಕ್ಷತೆಯಿಂದ ನವನಿರ್ಮಾಣ ಕಾರ್ಯವನ್ನು ಕೈಗೊಂಡರು. ವಿನಾಶದ ಪಥದಲ್ಲಿ (ಅಂಚಿನಲ್ಲಿ) ಮುಂದುವರಿಯುತ್ತಿದ್ದ ನಗರವು, ಪುರಾತನ ಕಾಲದ ಅಯೋಧ್ಯೆಯು ಒಂದು ಹೊಸ ನೂತನ ನಗರವಾಗಿ ರೂಪುಗೊಂಡು ತಲೆಯೆತ್ತಿತು. ಬೇಸಿಗೆ ಕಾಲದಲ್ಲಿ ಸುಟ್ಟುಹೋದ ಪ್ರಕೃತಿಯನ್ನು ವರ್ಷಕಾಲದಲ್ಲಿ ಬೀಳುವ ಮಳೆಯು ಸೃಷ್ಟಿಯನ್ನು ನವೀಕರಿಸುವಂತೆ, ಹೊಸತುಗೈಯ್ಯುವಂತೆ, ಮೇಘವು ಮಳೆಗರೆದು ಬೀಜವು ಮೊಳೆತು ಬೆಳೆ ಬೆಳೆಯುವಂತೆ, ಪ್ರಭು ನಿಯೋಜಿತ ಶಿಲ್ಪಿಗಳು ನಗರವನ್ನು ನವೀಕರಿಸಿದರು. ನೂತನ ನಗರವನ್ನು ಹುಟ್ಟುಹಾಕಿದರು. (ಸೃಷ್ಟಿಸಿದರು) ನಿರ್ಮಾಣಗೈದರು, (ಪ್ರಭುನಿಯೋಜಿತ ಶಿಲ್ಪಿಸಂಘದವರು).

ವಿಸರ್ಗಾ ಜಲಸೇಕಾನ್ನಿದಾಘಗ್ಲಪಿತಾಂ=ಗ್ರೀಷ್ಮ ತಪ್ತಾಮುರ್ವೀಮಿವ—ನವೀಚಕ್ರುಃ ಪರಿಪೂರಯಾಂಚಕ್ರುಃ—ತಥಾಗತಾಂ = ವಿನಾಶದ, ಸರ್ವನಾಶದ ಅಂಚಿನಲ್ಲಿದ್ದ.

**39.** **ತತಃ ಸಪರ್ಯಾಂ ಸಪಶೂಪಹಾರಾಂ ।**
**ಪುರಃ ಪರಾರ್ಧ್ಯಪ್ರತಿಮಾಗೃಹಾಯಾಃ ॥**
**ಉಪೋಷಿತೈಃ ವಾಸ್ತುವಿಧಾನವಿದ್ಭಿಃ ।**
**ನಿರ್ವರ್ತಯಾಮಾಸ ರಘುಪ್ರವೀರಃ** ॥ ೩೯ ॥

ಆ ಬಳಿಕ ಆ ರಘು ಶ್ರೇಷ್ಠನು ವಾಸ್ತುಶಿಲ್ಪಶಾಸ್ತ್ರದಲ್ಲಿ ಹೇಳಿರುವ ರೀತಿಯಲ್ಲಿ ಗೃಹ

ಪ್ರವೇಶ ಮಾಡುವ ಪೂರ್ವಸಿದ್ಧತೆಯ ಕಾರ್ಯದಲ್ಲಿ, ವಾಸ್ತುಶಿಲ್ಪಶಾಸ್ತ್ರದಲ್ಲಿ ಪ್ರವೀಣರಾದ ವಾಸ್ತುವೇತ್ತರನ್ನು ಕರೆದು ಪಶುಬಲಿ ಸಮರ್ಪಣಕಾರ್ಯವನ್ನು, ದೇವತಾರ್ಚನೆಯನ್ನು ಮಾಡಿಸಿ ಅದರ ಪ್ರತ್ಯಕ್ಷದರ್ಶಿಯಾಗಿದ್ದು ತಾನು ಈಕ್ಷಿಸಿದನು. ಅಯೋಧ್ಯೆಯು ಪರಮಪವಿತ್ರವಾದ ಅನೇಕ ದೇಗುಲಗಳಿಂದ, ಗುಡಿಗೋಪುರಗಳಿಂದ ರಾಜಭವನಗಳಿಂದ ಎಸೆಯುತ್ತ ಪ್ರಕಾಶಿಸಿತು. ಬಹು ಅಮೂಲ್ಯವಾದ, ದೇವತಾವಿಗ್ರಹಗಳು, ಆ ದೇವಮಂದಿರಗಳಲ್ಲಿ, ಪ್ರತಿಷ್ಠಾನಗೊಂಡುವು. ಆ ನಗರದ ಉದಾರಪೋಷಕನಾದ ಕುಶನು (ವರದೇವತಾಯತನದಿಂದ ಎಸೆವ ನಗರವನು) ದಕ್ಷತೆಯಿಂದ ಎಲ್ಲ ಕೆಲಸಗಳನ್ನು ನಡೆಸಿ ದೇವತಾರ್ಚನೆ, ಪೂಜಾವಿಧಿಗಳು ನಡೆಯುವಂತೆ ವ್ಯವಸ್ಥೆಗೊಳಿಸಿ ಕೃತಕೃತ್ಯನಾದನು. ಅಯೋಧ್ಯಾನಗರದ ಪುನರ್ನಿರ್ಮಾಣ ಕಾರ್ಯವು ಯಥಾವತ್ತಾಗಿ ನಡೆಯಿತು.

ರಘುಪ್ರವೀರಃ = ಕುಶಃ—ಪ್ರತಿಮಾ = ದೇವತಾಪ್ರತಿಕೃತಯಃ–ಅರ್ಚಾ ಇತ್ಯರ್ಥಃ — ಪರಾರ್ಧ್ಯಪ್ರತಿಮಾಗೃಹಾಯಾಃ = ಪ್ರಶಸ್ತ ದೇವತಾಯತನಾಯಾಃ — ಭವಿತವ್ಯಂ ವೃತ್ತೇರಣ್ಯಸ್ತ ಕರ್ತ್ರಾ ಪ್ರಯೋಜ್ಯತ್ವೇನ ತನ್ನಿರ್ದೇಶಾತ್ಪ್ರಯೋಗಾನ್ತರಸ್ಯಾಪೇಕ್ಷಿತತ್ವಾತ್ —ಪರಾರ್ಧ್ಯ ಪ್ರತಿಮಾಗೃಹಾಯ = ಪರಾರ್ಧ್ಯಾನಿ ಪ್ರತಿಮಾಗೃಹಾಣಿ ಯಸ್ಯಾಃ = ವರದೇವತಾ ಮಂದಿರಗಳಿಂದ ನವೀಕರಿಸಿ—ಸಪರ್ಯಾಂ ನಿರ್ವರ್ತಯಾಮಾಸ = ಜೀರ್ಣೋದ್ಧಾರ ಮಾಡಿಸಿ, ದೇವತಾರ್ಚನೆ ಮಾಡಿಸಿ — ವಾಸ್ತುವಿಧಾನವಿದ್ಭಿಃ = ವಾಸ್ತುವಿಧಿವೇತ್ತರು, ಶಿಲ್ಪಿಗಳು (ಕಲ್ಲುಕಟ್ಟಿಗರು, ಒಡ್ಡರು),

**40. ಯಸ್ಯಾಃ ಸ ರಾಜೋಪಪದಂ ನಿಶಾಂತಂ ।**
**ಕಾಮೀವ ಕಾಂತಾ ಹೃದಯಂ ಪ್ರವಿಶ್ಯ ॥**
**ಯಥಾರ್ಹಮನ್ಯೈರನುಜೀವಿಲೋಕಂ ।**
**ಸಂಭಾವಯಾಮಾಸ ಯಥಾ ಪ್ರಧಾನವ್ ॥ ೪೦ ॥**

ಕಾಮಿಯಾದವನು ತನ್ನ ಕಾಮಿನಿಯ (ಕಾಂತೆಯ) ಹೃದಯವನ್ನು ಹುಗುವಂತೆ (ಪ್ರವೇಶಿಸುವಂತೆ) ಪ್ರೇಮಿಯಾದವನು ತನ್ನ ಪ್ರೇಯಸಿಯ (ನಲ್ಲಳ, ಕಾದಲಳ) ಹೃದಯಮಂದೇಗುಲವನ್ನು ಹೊಗುವಂತೆ ಆ ರಾಜೇಂದ್ರನು ಆಗ ತಾನೇ ಹೊಸತಾಗಿ ನಿರ್ಮಿಸಿದ ರಾಜಗೃಹಗಳನ್ನು ಪ್ರವೇಶಿಸಿದನು. (ಕಾಮಿ ಹೋಗುವಂದದೊಳು, ಕಾಮಿನಿಯ ಹೃದಯವನು) ರಾಜಪದವಿ ಪೂರ್ವಕ ರಾಜಭವನಗಳನ್ನು, ನಿಶಾಂತಗಳನ್ನು ಪ್ರಧಾನರೇ ಮೊದಲಾದ ಅಧಿಕಾರಿಗಳಿಗೆ. ಆಶ್ರಿತರಿಗೆ, ಪ್ರಜಾಪ್ರಮುಖರಿಗೆ, ಉಚಿತವಾದ ರೀತಿಯಲ್ಲಿ ರಾಜೋಚಿತವಾದ ರೀತಿ ಪ್ರಶಸ್ತಿ, ಸಂಭಾವನೆಗಳನಿತ್ತು ಸಂಭಾವಿಸಿದನು. ಮನ್ನಣೆಯಿತ್ತು ಗೌರವಿಸಿ ಮನ್ನಿಸಿದನು. ಹೀಗೆ ಆ ರಾಮಸೂನು ಪುರಾತನ ರಾಜಧಾನಿಯಾದ ಅಯೋಧ್ಯೆಯಲ್ಲಿ ಆಡಳಿತೆಯನ್ನು ಪುನರಾರಂಭಿಸಿದನು.

ರಾಜೋಪಪದಂ ರಾಜಶಬ್ದ ಪೂರ್ವಂನಿಶಾಂತವನ್—ರಾಜಭವನಮಿತ್ಯರ್ಥಃ — "ನಿಶಾಂತಂ ಭವನೋಪಸೋಃ" ಇತಿ ವಿಶ್ವಃ—ಕಾಮೀಕಾಂತ ಹೃದಯಮಿವಪ್ರವಿಶ್ಯ–ಯಥಾರ್ಹಂ = ವಯೋಚಿತಂ—ಸಂಭಾಯಯಾಮಾಸ ॥

41. ಸಾ ಮಂದುರಾಸಂ ಶ್ರಯಿಭಿಸ್ತುರಂಗೈಃ ।
ಶಾಲಾವಿಧಿಸ್ತಂಭಗತೈಶ್ಚ ನಾಗೈಃ ॥
ಪೂರಾಬಭಾಸೇ ವಿಪಣಿಸ್ಥ ಪಣ್ಯಾ ।
ಸರ್ವಾಂಗನದ್ಧಾಭರಣೇವ ನಾರೀ ॥ ೪೧ ॥

ಆ ಮಹಾನಗರದಲ್ಲಿ ವ್ಯವಸ್ಥಿತ ರೀತಿಯಲ್ಲಿ ಎಲ್ಲಾ ವಸ್ತುನಿಚಯವನ್ನು ಅಣಿಗೊಳಿಸಿದರು. ಕುದುರೆಲಾಯದಲ್ಲಿ ಅಶ್ವಗಳನ್ನು, ಗಜಶಾಲೆಗಳಲ್ಲಿ ಆನೆಗಳನ್ನು ಕಟ್ಟಿದರು. ವಸ್ತುಚಯಗಳಿಂದ ಅಂಗಡಿಬೀದಿಗಳು ಅಣಿಗೊಂಡು ಎಸೆದುವು. ಹೇಗೆ ಹದಿಹರೆಯದ ಸುಂದರಳಾದ ಸ್ತ್ರೀಯು ನಾನಾ ವಿಧದ ಆಭರಣಮಾಲೆಗಳನ್ನು ಆಯಾಯ ಅಂಗಗಳಲ್ಲಿ (ಸರ್ವಾಂಗಗಳಲ್ಲಿ) ಸಿಂಗರಿಸಿಕೊಂಡು ಶೋಭೆವಡೆದು ತೋರುವಂತೆ (ತನ್ನ ತನುಕಾಂತಿಯನ್ನು ತಾನು ಪೆಚ್ಚಿಸಿಕೊಳ್ಳುವಂತೆ ಆ ಪುರಾಂಗನೆಯು ಅಣಿಗೊಂಡು ಪ್ರಕಾಶಮಾನವಾಗಿ ಶೋಭಿಸಿದಳು (ಅಣಿಗೊಂಡ ಪುರವೆಸೆದುದಾಭರಣಮೆಯ್ಯೊಳು ಅಣಿಗೊಂಡೆಸೆವ ನಾರಿವೊಲು).

ವಿಪಣಿಸ್ಥಾನಿ ಪಣ್ಯಾನಿ=ಕ್ರಯವಿಕ್ರಯಾರ್ಹವಸ್ತೂನಿ ಯಸ್ಯಾಃಸಾ—"ವಿಪಣಿ ಪಣ್ಯ ವೀಥಿಕಾ" ಇತ್ಯಮರಃ—ಸಾಪೂಃ ಅಯೋಧ್ಯಾ—ಮಂದುರಾ ಸಂಶ್ರಯಿಭಿರಶ್ವಶಾಲಾ ಸಂಶ್ರಯಣಶೀಲೈಃ—"ವಾಜಿಶಾಲಾ ತು ಮಂದುರಾ" ಇತ್ಯಮರಃ—ಜಿದೃಕ್ಷಿ ಇತ್ಯಾದಿನೇನಿಪ್ರತ್ಯಯಃ (ಪಾಣಿನಿ) ತುರಂಗೈರಶ್ವೈಃ—ಸರ್ವಾಂಗೇಷು ಸದ್ಧಾನ್ಯಾಭರಣಾನಿ ಯಸ್ಯಾಃ ಸಾ ನಾರೀವ—ಅವಭಾಸೇ ॥

42. ವಸನ್ ಸ ತಸ್ಯಾಂ ವಸತೌ ರಘೂಣಾಂ ।
ಪುರಾಣಶೋಭಾಮಧಿರೋಪಿತಾಯಾಮ್ ॥
ನ ಮೈಥಿಲೇಯಃ ಸ್ಪೃಹಯಾಂಬಭೂವ ।
ಭರ್ತ್ರೇ ದಿವೋ ನಾಪ್ಯಲಕೇಶ್ವರಾಯ ॥ ೪೨ ॥

ಮಿಥಿಲೆಯರಾಜ, ಜನಕ ಮಹಾರಾಜ, ಸೀತೆ ಜನಕನಂದಿನಿ. ಆ ಸೀತಾಸುತನು (ಆ ಮೈಥಿಲೇಯನು) ಪೂರ್ವಶೋಭೆಯನ್ನಾಂತು ಮೆರೆಯುತ್ತಲಿರುವ ತನ್ನ ಹಿರಿಯರ ರಾಜಧಾನಿಯಲ್ಲಿ ದೇವೇಂದ್ರನ ಭೋಗವನ್ನು ಇಳಿಕೆಗೆಯ್ಯುತ್ತಾ, ಕುಬೇರನ ಸಿರಿಯನ್ನು ಬಯಸದೆ ಸಮಸ್ತಭೋಗ ಐಶ್ವರ್ಯದಿಂದ ರಾರಾಜಿಸುವ ಅಯೋಧ್ಯಾನಗರಿಯಲ್ಲಿ, ತನ್ನ ಹಿರಿಯರ ವಸತಿಗೃಹಗಳಲ್ಲಿ ವಾಸಿಸುತ್ತಾ ಭುವನದೊಳು ಅಪೂರ್ವ ಶೋಭೆಯಿಂದ ಮೆರೆಯುತ್ತಿದ್ದನು.

ಸ ಮೈಥಿಲೇಯಃ ಕುಶಃ—ಪುರಾಣಶೋಭಾಂ = ಪೂರ್ವಶೋಭಾಮ್ = ಪೂರ್ವಶೋಭೆಯನ್ನಾಂತು—ದಿವೋಭರ್ತ್ರೇದೇವೇಂದ್ರಾಯ ತಥ್ಯಾಲಕೇಶ್ವರಾಯ ಕುಬೇರಾಯಾಪಿ ನ ಸ್ಪೃಹಯಾಂಬಭೂವ—ತಾವಪಿ ನ ಗಣಯಾಮಾಸೇತ್ಯರ್ಥಃ—"ಸ್ಪೃಹೇರೀಪ್ಸಿತಃ "ಇತಿ ಸಂಪ್ರದಾನತ್ವಾಚ್ಚನುಥೀಂ ॥

**43.** **ಅಥಾಸ್ಯ ರತ್ನಗ್ರಥಿತೋತ್ತರೀಯಂ।**
**ಏಕಾಂತಪಾಂಡುಸ್ತನಲಂಬಿಹಾರಮ್ ||**
**ನಿಃಶ್ವಾಸ ಸಹಾರ್ಯಾಂಶುಕಮಾಜಗಾಮ |**
**ಘರ್ಮಃಪ್ರಿಯಾವೇಶಮಿವೋಪದೇಷ್ಟುಮ್** || ೪೩ ||

ಅಂದು ಗ್ರೀಷ್ಮಕಾಲವು (ಬೇಸಿಗೆ) ಸಂಪ್ರಾಪ್ತವಾಯಿತು. ಅಂದಿನ ಗ್ರೀಷ್ಮಕಾಲದಲ್ಲಿ ಸ್ತ್ರೀಯರು ಬರೀಮುತ್ತಿನ ಹಾರವನ್ನು ಧರಿಸುತ್ತ ಬಹಳ ಅಲ್ಪವಾದ (ಲಂಗ, ಧಾವಣಿ, ನೈಟಿ, ಮ್ಯಾಕ್ಸಿ) ಬಟ್ಟೆಯ ಮೇಲುದವನ್ನು ಧರಿಸಿ ಶೋಭಿಸುತ್ತಿದ್ದರು. ರೇಷ್ಮೆಬಟ್ಟೆಯು ತೀರಾ ತೆಳುವಾಗಿದ್ದು ಬಾಯಿಯ ಉಸಿರಿನಿಂದ (ಶ್ವಾಸೋಚ್ಛ್ವಾಸದಿಂದ) ಹಾರಿ ಹೋಗುವುದೋ ಎಂಬಂತೆ ತೋರುತ್ತಿತ್ತು. ಅಂದಿನ ಆ ಗ್ರೀಷ್ಮಕಾಲವು ಇನ್ನೂ ಸುಖ ಸಂಸಾರಕ್ಕೆ ಕಾಲಿಡದ ಕುಶ ಸಾರ್ವಭೌಮನಿಗೆ, ನಾಯಿಕೆಯು ವೇಷವನ್ನು ಧರಿಸಿ ಉಪದೇಶಿಸಲು ಬಂದಂತೆ ಕಂಡಿತು. ಸಂಪೂರ್ಣ ಮಾಹಿತಿಯನ್ನು ನೀಡಲು ಬಂದಂತೆ ಗ್ರೀಷ್ಮ ಋತುವು ಸಂಪ್ರಾಪ್ತವಾಯಿತು. ಗ್ರೀಷ್ಮದ ಸೆಕೆಯನ್ನು ತಾಳಲಾರದೆ ರಮಣೀಮಣಿಯರು ಬರೀ ಮುತ್ತನ್ನು ಪೋಣಿಸಿರುವ, ಮುತ್ತಿನಂಬರದಿಂದ ಸಜ್ಜಾಗುತ್ತಿದ್ದರು. ಹೆಚ್ಚಿನ ಬಟ್ಟೆಬರೆಗಳನ್ನು ಧರಿಸದೆ, ಕುತ್ತಿಗೆಯಲ್ಲಿ ಉದ್ದವಾದ ಮಾಲೆಗಳನ್ನು (ಮುತ್ತಿನ ಹಾರಗಳನ್ನು) ಧರಿಸಿ ಎಂತವಾದ ಉಡುಪನ್ನು ಉಟ್ಟು ಅಂದವಾಗಿ ತೋರುತ್ತಿದ್ದರು. (ನಿರಾಭರಣಸುಂದರಿಯರು) (ಮುತ್ತಿನಂಬರದಿಂದ, ಮಣಿಯ ಹಾರಗಳಿಂದ).

ನಿಃಶ್ವಾಸಹಾರ್ಯಾಣ್ಯತಿಸೂಕ್ಷ್ಮಾಣ್ಯಂಶುಕಾನಿ ಯತ್ರ ತಮ್—ಏವಂ ಶೀತಲಗ್ನಾಯಾಂ ಪ್ರಿಯಾಯಾ ವೇಷಃ=ನೇಪಥ್ಯಮುಪದೇಷ್ಟುಮಿವ—ಘರ್ಮೋಗ್ರೀಷ್ಮ ಆಜಗಾಮ—ಘರ್ಮ = ಬೇಸಿಗೆಕಾಲ, ಗ್ರೀಷ್ಮಋತು. ಪ್ರಿಯಾವೇಶಮಿವೋಪದೇಷ್ಟುಮ್ = ನಾಯಿಕೆಯ ವೇಷವನ್ನು ಕುಶನಿಗುಪದೇಶಿಪೊಲು (ಉಪದೇಶಿಸಲು ಬಂದಂತೆ).

**44.** **ಅಗಸ್ತ್ಯಚಿಹ್ನಾದಯನಾತ್ ಸಮೀಪಂ।**
**ದಿಗುತ್ತರಾ ಭಾಸ್ವತಿ ಸನ್ನಿವೃತ್ತೇ ||**
**ಆನಂದಶೀತಾಮಿವ ಬಾಷ್ಪವೃಷ್ಟಿಂ।**
**ಹಿಮಸ್ರುತಿಂ ಹೈಮವತೀಂ ಸಸರ್ಜ** || ೪೪ ||

ಭಾಸ್ಕರನು (ಸೂರ್ಯದೇವನು) ಅಗಸ್ತ್ಯ ಮಹರ್ಷಿಯ ಚಿಹ್ನೆಯಾದ ಭೂಮಧ್ಯ ರೇಖೆಯನ್ನು (ಅಯನ ಮಾರ್ಗವನ್ನು) ದಾಟಿ ಉತ್ತರ ದಿಕ್ಕಿಗೆ ಸರಿದನು. ಆಗ ಉತ್ತರ ದಿಶಾ ವನಿತೆ ಸೂರ್ಯದೇವನು ತನ್ನತ್ತ ಬರುವುದನ್ನು ಕಂಡು ತನ್ನ ಪ್ರಿಯನ ಸಮಾಗಮವನ್ನು ಬಯಸಿ ನಲಿದು ತಂಪಾದ ಆನಂದಭಾಷ್ಪವನ್ನು ಸುರಿದಳೋ ಎಂಬಂತೆ ಹಿಮಾಲಯ ಗಿರಿಶ್ರೇಣಿಯಿಂದ ಹಿಮವಾರಿಯು (ಹಿಮಜಲ, ಮಂಜು ಜಲವಾಹಿನಿ) ಇಳಿದುಬಂತು (ಹರಿದುಬಂತು) (ಹಿಮವಾರಿ ತುಹಿನಗಿರಿಯಿಂದಿಳಿದಿತು).

ಅಗಸ್ತ್ಯಶ್ಚಿಹ್ನಂ ಯಸ್ಯ ತಸ್ಮಾದಯನಾನ್ಮಾರ್ಗಾದ್ದಕ್ಷಿಣಾ ಯನಾದ್ಭಾಸ್ವತಿ ಸಮೀಪಂ ಸನ್ನಿವೃತ್ತೇ ಸತಿ—ಉತ್ತರಾದಿಕ್—ಆನಂದಶೀತಾಂ ಬಾಷ್ಪವೃಷ್ಟಿಮಿವ—ಹೈಮವತೀಂ

=ಹಿಮವತ್ ಸಂಬಂಧಿನೀಮ್—ಹಿಮಸ್ಮೃತಿಂ=ಹಿಮನಿಷ್ಯಂದಂ—ಅಗಸ್ತ್ಯಚಿಹ್ನಾದಯನಾತ್ = ಭಾಸ್ಕರನು (ಸೂರ್ಯದೇವನು) ಅಗಸ್ತ್ಯ ಮಹರ್ಷಿಯ ಚಿಹ್ನೆಯಾದ ಭೂಮಧ್ಯರೇಖೆಯನ್ನು ದಾಟಿ (ಉತ್ತರದಿಕ್ಕಿಗೆ ಸರಿದನು).

**45. ಪ್ರವೃದ್ಧತಾಪೋ ದಿವಸೋಽತಿಮಾತ್ರಂ ।**
**ಅತ್ಯರ್ಥಮೇವ ಕ್ಷಣದಾ ಚ ತನ್ವೀ ॥**
**ಉಭೌ ವಿರೋಧಕ್ರಿಯಯಾ ವಿಭಿನ್ನೌ ।**
**ಜಾಯಾಪತೀ ಸಾನುಶಯಾ ವಿವಾಸ್ತಾಮ್ ॥ ೪೫ ॥**

ಆ ನಡು ಬೇಸಿಗೆಯಕಾಲದ ಹಗಲು ಬಹಳ ದೀರ್ಘವಾಗಿ ಸುಟ್ಟು ಉರಿವಂತೆ ತೋರುತ್ತಿತ್ತು. ಆದರೆ ರಾತ್ರಿಕಾಲವಾದರೋ ಸೊರಗಿ ಕೃಶವಾಂತ, ತೆರದೆ ತೋರುತ್ತಲಿತ್ತು. ಸಣ್ಣದಾದ ಇರುಳು ಒಂದಕ್ಕೊಂದು ವಿರೋಧವಾಗಿರುವಂತೆ ಭಾಸವಾಗುತ್ತಿತ್ತು. ಪ್ರಣಯಕಲಹದಲ್ಲಿ ನಿರತರಾದ ದಂಪತಿಗಳು, ಪರಸ್ಪರ ವಿರೋಧಭಾವವನ್ನು ತಳೆದು ಜಗಳಾಡುತ್ತ, ಆ ಬಳಿಕ ಕಷ್ಟದಿಂದ ರಾತ್ರಿಕಾಲವನ್ನು ನವೆಯುತ್ತ ಕಳೆಯುವಂತೆ (ಕಾಲ ಕಳೆವಂತೆ) ಆ ಬೇಸಿಗೆ ಕಾಲದ ಹಗಲು ಮತ್ತು ಇರುಳು ಸೊಗಯಿಸಿದುವು, (ಹೀಗೆ ಪೆರ್ಚಿ ನವೆವ ದಂಪತಿಗಳೋಲು).

ಅತಿಮಾತ್ರಂ = ಪ್ರವೃದ್ಧತಾಪೋ ದಿವಸಃ—ವಿರೋಧಕ್ರಿಯಯಾ ಪ್ರಣಯಕಲಹಾದಿನಾ ವಿರೋಧಾಚರಣೇನ—ಸಾನುಶಯೌ=ಸಾನುತಾಪೌ—ಜಾಯಾಪತೀ = ದಂಪತೀ ಇವ ॥

**46. ದಿನೇ ದಿನೇ ಶೈವಲವಂತ್ಯಧಸ್ತಾತ್ ।**
**ಸೋಪಾನಪರ್ವಾಣಿವಿಮುಂಚ ದಂಭಃ ॥**
**ಉದ್ದಂಡಪದ್ಮಂ ಗೃಹದೀರ್ಘಿಕಾಣಾಂ ।**
**ನಾರೀನಿತಂಬದ್ವಯಸಂ ಬಭೂವ ॥ ೪೬ ॥**

ಪಾಚಿಗಟ್ಟಿದ ಕ್ರೀಡೋದ್ಯಾನಗಳಲ್ಲಿ (ಪ್ರಮೋದವನಗಳಲ್ಲಿ) ಇರುವ ಕೊಳಗಳ ನೀರು ಒಂದೊಂದೇ ಮೆಟ್ಟಿಲುಗಳ ಅಂತರದಲ್ಲಿ ಕೆಳಗಿಳಿಯುತ್ತಾ ಹೋಗಿ (ಬಿಸಿಲಿನ ತಾಪದಿಂದ) ಕೊನೆಗೆ ವನಿತೆಯರ ನಿತಂಬದ ಎತ್ತರಕ್ಕೆ ಕೊಳದ ನೀರಿನ ಮಟ್ಟ ನಿಂತಿತು. ಹಾವಸೆ ಮಾತ್ರ ಉಳಿದಿರುವ ಮೆಟ್ಟಿಲುಗಳಿರುವ ಕೊಳಗಳು ನೀರಿಲ್ಲದೆ ಬಡವಾಗಿ ವಿಹಾರಯೋಗ್ಯವಾಗಿರಲಿಲ್ಲ (ಬತ್ತಿದುವು ದಿನದಿನಕೆ ಕೊಳದ ನೀರು).

ದಿನೇದಿನೇ = ಪ್ರತಿದಿನಂ—ಶೈವಲವಂತ್ಯಧಸ್ತಾದ್ಧ್ಯಾನಿ ಸೋಪಾನಾನಾಂ ಪರ್ವಾಣಿ ಭಂಗಯಸ್ತಾನಿ ವಿಮುಂಚತ್—ಅತ ಏವ ಉದ್ದಂಡಪದ್ಮಂ ಗೃಹದೀರ್ಘಿಕಾಣಾಮಂಭಃ—ವಿಹಾರಯೋಗ್ಯಮಭೂದಿತ್ಯರ್ಥಃ—ಪ್ರಮಾಣೇ ದ್ವಯಸಚ್ ಇತಿ ದ್ವಯ ಸಚ್ ಪ್ರತ್ಯಯಃ (ಪಾಣಿನಿ)—ಉದ್ದಂಡಪದ್ಮಂ = ಉದ್‌ಗತ ದಂಡಾನಿ ಪದ್ಮಾನಿ ಯತ್ರ (ಬಹು) ತತ್ ॥

47. ವನೇಷು ಸಾಯಂತನಮಲ್ಲಿಕಾನಾಂ ।
ವಿಜೃಂಭಣೋದ್ಗಂಧಿಷು ಕುಡ್ಮಲೇಷು ॥
ಪ್ರತ್ಯೇಕನಿಕ್ಷಿಪ್ತಪದಃ ಸಶಬ್ದಂ ।
ಸಂಖ್ಯಾಮಿವೈಷಾಂ ಭ್ರಮರಶ್ಚಕಾರ ॥ ೪೭ ॥

ಸಂಜೆಯ ಹೊತ್ತಿನಲ್ಲಿ ಅಲ್ಲಿಯ ಉಪವನಗಳಲ್ಲಿ ಮಲ್ಲಿಗೆಯ ಮೊಗ್ಗುಗಳು ಅರಳಿ ಘಮಘಮಿಸುತ್ತಿವೆ. ಆ ಹೂಗಳ ಮಕರಂದ ಪಾನಮಾಡಿ ತನ್ನ ಉದರಪೋಷಣೆ ಮಾಡುವ ತುಂಬಿಗಳು ಹೂಗಳನ್ನು ತೆರೆದು ಒಳ ಪ್ರವೇಶಿಸುತ್ತಿವೆ. ಆ ಗ್ರೀಷ್ಮಋತುವಿನ ಪ್ರಾರಂಭಕಾಲದಲ್ಲಿ ಹೂಗಳು ಅಲ್ಪಪ್ರಮಾಣದಲ್ಲಿ ಮಕರಂದ ಹೊಂದಿರುವುದನ್ನು ಕಂಡು, ತಮಗೆ ಹೊಟ್ಟೆಹೊರೆಯಲು ಸಾಕಾಗುವಷ್ಟು ಇಲ್ಲವೆಂದು ತಿಳಿದು ತುಂಬಿಗಳು (ಅಳಿಗಳು) ಜೋರಾಗಿ ಝೇಂಕರಿಸುತ್ತಾ ಪ್ರತಿಯೊಂದು ಹೂವನ್ನೂ ಮೊರೆಮೊರೆದು ಎಣಿಸುವಂತೆ ತೋರುವುದು (ಅಳಿ ಮೊರೆಮೊರೆದು ಹೂವುಗಳ ಎಣಿಸುವೊಲು ತೋರುತಿಹುದು).

ವನೇಷು ವಿಜೃಂಭಣೇನ = ವಿಕಾಸೇನೊ ದ್ಗಂಧಿಷೂತ್ಕಟಸೌರಭೇಷು—ಗಂಧಸ್ಯ ಇತ್ಯಾದಿನಾ ಸಮಾಸಾಂತ ಇಕಾರಾದೇಶ (ಪಾಣಿನಿ) ಮಕರಂದಲೋಭಾದಿತ್ಯರ್ಥಃ—ಭ್ರಮರ ಏಷಾಂ ಕುಡ್ಮಲಾನಾಂ ಸಂಖ್ಯಾಂಗಣನಾಂ ಚಕಾರೇವ—ಸಾಯಂತಮಲ್ಲಿಕಾನಾಮ್ = ಸಾಯಂಕಾಲದಲ್ಲಿ ಅರಳುವ ಮಲ್ಲಿಗೆ ಹೂಗಳು.

48. ಸ್ವೇದಾನುವಿದ್ಧಾರ್ದ್ರನಖಕ್ಷತಾಂಕೇ ।
ಭೂಯಿಷ್ಠಸಂದಷ್ಟಶಿಖಂ ಕಪೋಲೇ ॥
ಚ್ಯುತಂ ನ ಕರ್ಣಾದಪಿ ಕಾಮಿನೀನಾಂ ।
ಶಿರೀಷಪುಷ್ಪಂ ಸಹಸಾ ಪಪಾತ ॥ ೪೮ ॥

ಇರುಳು ಕಾಳಗದಲ್ಲಿ (ಸ್ಮರನ ಕದನದಲ್ಲಿ) ತಮ್ಮ ಪುರುಷರೊಡನೆ ಬೆರೆತಿರುವ ಕಾಮಿನಿಯರ ಬೆವರಿಳಿವ ಕಪೋಲಗಳು ನಖಕ್ಷತಗಳ ಗುರುತಿನಿಂದ (ಹೊಸ ಉಗುರು ಕಲೆ ಮೆರೆವ ಬೆವರಿಂದ ಕಪೋಲದೊಳು) ಮೆರೆಯುತ್ತ ಕಿವಿಯಲ್ಲಿ ಧರಿಸಿದ ಶಿರೀಷ ಪುಷ್ಪಗಳು ಉದುರುತ್ತ ಕೆಳಕ್ಕೆ ಬೀಳುತ್ತಲಿದ್ದರೂ ಕೆಳಗೆ ಬೀಳದೆ ಬೆವರಿಗೆ ಅಂಟಿಕೊಂಡು, ಮಹಿಳೆಯರ ಅಂದಚಂದವನ್ನು ಮತ್ತೂ ಹೆಚ್ಚಿಸಿದೆ. ಕಿವಿಯಿಂದ ಜಾರಿಬೀಳುತ್ತಿರುವ ನವಶಿರೀಷಪುಷ್ಪಗಳ ಕೇಸರಗಳು ಬೆವರಿಗೆ ಅಂಟಿಕೊಂಡು ನೆಲಕ್ಕೆ ತಟ್ಟನೆ ಉರುಳಿ ಬೀಳದೆ ಅಂಟಿಕೊಂಡಿವೆ. ಉರುಳಿಬೀಳದಿದೆ.

ಸ್ವೇದಾನುವಿದ್ಧಮಾರ್ದ್ರಂ ನೂತನಂ ನಖಕ್ಷತಮಂಕೋ ಯಸ್ಯ ತಸ್ಮಿನ್ ಕಾಮಿನೀನಾಂ ಕಪೋಲೇ ಭೂಯಿಷ್ಠಮತ್ಯರ್ಥಂ ಸಂದಷ್ಟಶಿಖಂ ವಿಶ್ಲಿಷ್ಟ ಕೇಸರಮ್, ಅತ ಏವ ಕರ್ಣಾಚ್ಯುತಮಪಿ—ಶಿರೀಷಪುಷ್ಪಂ ಸಹಸಾ ನ ಪಪಾತ—ಸ್ವೇದಾನುವಿದ್ಧ = ಸ್ವೇದೇನ ಅನುವಿದ್ಧಮ್ ಆರ್ದ್ರನಖಕ್ಷತಮ್—ಅಂಕಃ ಯಸ್ಯ (ಬಹು) ತಸ್ಮಿನ್ = ಕಾಮಿನಿಯರ ಬೆವರಿಳಿಯುವ ಕಪೋಲಗಳು, ನಖಕ್ಷತಗಳ ಗುರುತಿನಿಂದ, ಕಿವಿಯಲ್ಲಿ ಧರಿಸಿದ ನವಶಿರೀಷ ಸುಮವು.

49. ಯಂತ್ರಪ್ರವಾಹೈಃ ಶಿಶಿರೈಃ ಪರೀತಾನ್ ।
ರಸೇನ ಧೌತಾನ್ ಮಲಯೋದ್ಭವಸ್ಯ ॥
ಶಿಲಾವಿಶೇಷಾನಧಿಶಯ್ಯ ನಿನ್ಯುಃ ।
ಧಾರಾಗೃಹೇಷ್ವಾತಪಮೃದ್ಧಿಮಂತಃ ॥ ೪೯ ॥

ಜಲಯಂತ್ರಧಾರೆಗಳಿಂದ ಸಜ್ಜಾಗಿರುವ ಜಲಧಾರಾಗೃಹಗಳಲ್ಲಿ ವಾಸಿಸುವ ಧನಿಕರು ತಂಪಾದ ಹವೆಯನ್ನು ಬಯಸಿ ಶೀತಲಸ್ಫಟಿಕಶಿಲಾತಲಗಳಲ್ಲಿ ವಿರಮಿಸುವರು. (ಚಂದನ ರಸದ ತೊಯ್ದು ಶೀತಲ ಶಿಲಾತಲದೊಳಂದು) ಚಂದನ ರಸವು ಜಿನುಗುತ್ತಿರುವ ಶಿಲಾ ತಲ್ಪಗಳಲ್ಲಿ ಮಲಗಿ ಬೇಸಗೆಯ ಬೇಗೆಯನ್ನು (ತಾಪವನ್ನು) ಈ ಪರಿಯಾಗಿ ಕಳೆಯುವರು ಹಣವಂತರು.

ಧಾರಾಗೃಹೇಷು= ಯಂತ್ರಧಾರಾಗೃಹೇಷು=ಜಲಧಾರಾ ಗೃಹಗಳು—ಶಿಶಿರೈ ಯಂತ್ರ ಪ್ರವಾಹೈ=ಯಂತ್ರಸಂಚಾರಿತ ಸಲಿಲಪೂರೈಃ—ಪರೀತಾನ್=ವ್ಯಾಪ್ತಾನ್—ಮಲಯೋದ್ಭವಸ್ಯ ರಸೇನ=ಚಂದನೋದಕೇನ—ಧೌತಾನ್ ಕ್ಷಲಿತಾಂ ಚಿಲಾವಿಶೇಷಾ=ನ್ಮಣಿಮಯಶಾಸನಾನ್ಯಧಿಶಯ್ಯ ॥

50. ಸ್ನಾನಾರ್ದ್ರಮುಕ್ತೇಷ್ವನುಧೂಪವಾಸಂ ।
ವಿನ್ಯಸ್ತ ಸಾಯಂತನಮಲ್ಲಿಕೇಷು ॥
ಕಾಮೋ ವಸಂತಾತ್ಯಯ ಮಂದವೀರ್ಯಃ ।
ಕೇಶೇಷು ಲೇಭೇ ಬಲಮಂಗನಾನಾಮ್ ॥ ೫೦ ॥

ಪ್ರೇಮ, ಕಾಮ, ಅನುರಾಗದ ಅಧಿದೇವತೆಯಾದ ಮನ್ಮಥನು (ರತಿರಾಜನು) ಮಧುಮಾಸದ ಅಂತ್ಯದಲ್ಲಿ ಬಲಗುಂದಿಮಂದವೀರ್ಯನಾದನು. ಆದರೂ ಸ್ಮರನು ತನ್ನ ಪಟ್ಟು ಬಿಡಲಿಲ್ಲ. ಅವನು ಕಾಮಿನಿಯರ ಕೇಶರಾಶಿಯಲ್ಲಿ ಮರಳಿಬಲಗೊಂಡನು. ಅಂದಿನ ದಿನಗಳಲ್ಲಿ ವನಿತೆಯರು ಸ್ನಾನಮಾಡಿ ಬಿಚ್ಚಿರುವ ಮುಡಿಯನ್ನು ಧೂಪಧೂಮಕ್ಕೆ ತೆರೆದು ಘಮಘಮಿಸುವ ಸಂಜೆಮಲ್ಲಿಗೆ ಮುಡಿದು ಅಂದವಾಗಿ ಕಾಣತೊಡಗಿದರು (ಸಂಜೆಮಲ್ಲಿಗೆ ಮುಡಿದು ಪೆಣ್ಗಳಿರಲು). ಇದರಿಂದ ಅವರ ಪುರುಷರು ಹೆಚ್ಚು ಆಕರ್ಷಿತರಾದರು. ಅವರ ಮನಸ್ಸು ವಿಕಸಿತವಾಯಿತು. ಇದರಿಂದ ಅಂಗಜನ ಮಹಿಮೆ ಹೆಚ್ಚು ಪರಿಣಾಮಕಾರಿಯಾಯಿತು. ಆ ರತಿರಾಜನ ಶೃಂಗಾರದ ಆಯುಧವೇ ಆ ಯುವತಿಯರ ಕೇಶರಾಶಿಯೆನಿಸಿತು. ಆ ಸ್ತ್ರೀಯರ ಕುರುಳಿನಲ್ಲಿ ರತಿ ಪ್ರಿಯನಾದ ಅನಂಗನು (ಸ್ಮರನು) ನೆಲಸಿದನು (ವನಿತೆಯರ ಕುರುಳಿನೊಳು ಬಲಗೊಂಡನು).

ವಸಂತಸ್ಯಾತ್ಮಸಹಕಾರಿಣೋಽತ್ಯಯೇನಾತಿಕ್ರಮೇಣ — ಮಂದವೀರ್ಯೋ = ಅತಿ ದುರ್ಬಲಃ ಕಾಮಃ—ಧೂಪಸಂಚಾರಣಾರ್ಥಃ, ತೇಷು—ಅನುಧೂಪವಾಸಂ = ಧೂಪವಾಸನಾನಂತರಂ ವಿನ್ಯಸ್ತಾಃ ಸಾಯಂತವ ನವಮಲ್ಲಿಕಾ ಯೇಷು ತೇಷು—ಅಂಗನಾನಾಂ ಕೇಶೇಷು ಬಲಂ ಲೇಭೇ—ತೈರುದ್ದೀಪಿತ ಇತ್ಯರ್ಥಃ—ಸ್ನಾನಾರ್ದ್ರಮುಕ್ತೇಷು = ಸ್ನಾನೇನ ಆರ್ದ್ರಾ ಚ ತೇ ಮುಕ್ತಾಶ್ಚ ತೇಷು = ತೊಯ್ದು ಶೀತಲ ಶಿಲಾತಲದೊಳು ॥

51. ಅಪಿಂಜರಾ ಬದ್ಧರಜಃ ಕಣತ್ವಾತ್ ।
ಮಂಜರ್ಯುದಾರಾ ಶುಶುಭೇಽರ್ಜುನಸ್ಯ ॥
ದಗ್ಧ್ವಾಽಪಿ ದೇಹಂ ಗಿರೀಶೇನ ರೋಷಾತ್ ।
ಖಂಡೀಕೃತಾಜ್ಯೇವ ಮನೋಭವಸ್ಯ ॥ ೫೧ ॥

ಅರ್ಜುನ ವೃಕ್ಷಗಳು ಹೂಬಿಟ್ಟು ರಂಜಿಸುತ್ತಿವೆ. ಕುಸುಮರೇಣುವಿನಿಂದ ಕೆಂಪಾದ ಬಣ್ಣವು ತಳೆದ ಪುಷ್ಪಮಂಜರಿಯನ್ನು ನೋಡುತ್ತಿರಲು ಕಾಮನ ಮುರಿದ ಧನುಸ್ಸು ಇಲ್ಲಿದೆ ಎಂಬ ಭಾವನೆ ಮನಸ್ಸಿಗೆ ಹರಿದುಬರುತ್ತಿದೆ. ಅಂದು ಗಿರೀಶನು (ಗಿರಿಜಾಶಂಕರನಾದ ಶಿವನು) ಮನೋಭವನಾದ ಕಾಮನನ್ನು ಸುಟ್ಟು ಬೂದಿಮಾಡಿ ಅನಂಗನನ್ನಾಗಿ, ದೇಹವಿಲ್ಲದವನನ್ನಾಗಿ ಮಾಡಿದನು. ಆ ಅನಂಗನ ದೇಹ ಹೋದರೂ ಅವನ ಕಾರ್ಯಕ್ಕೆ ಚ್ಯುತಿ ಇಲ್ಲ, ಆ ಪರಶಿವನು ತನ್ನ ಕೋಪದಿಂದ ಹರಿದೊಗೆದ ಮೌರ್ವಿಯಂತೆ (ಬಿಲ್ಲಿನ ಹಗ್ಗದಂತೆ) (ಬಿಲ್ಲಿನನಾರಿ, ಸಿಂಜಿನಿ) ಹಳದಿ, ಕೆಂಪು, ಬಣ್ಣದಿಂದ ಒಪ್ಪುವ ಅರ್ಜುನ ವೃಕ್ಷದ ಕುಸುಮರಾಜಿಗಳು ಕಂಗೊಳಿಸುತ್ತಲಿವೆ.

ಬದ್ಧರಜಃ ಕಣತ್ವಾದ್ವ್ಯಯಾಪ್ತರಜಃ ಕಣತ್ವಾದಾಪಿಂಜರೋಧಾರಾ ಪ್ರಾದೀಯಸೀ ಅರ್ಜುನಸ್ಯ=ಕಕುಭವೃಕ್ಷಸ್ಯ "ಇಂದ್ರದ್ರುಃ ಕಕುಭೋಽರ್ಜುನಃ" ಇತ್ಯಮರಃ—ಮಂಜರೀ —ದೇಹಂ ಧಗ್ಧ್ವಾಪಿರೋಷಾದ್ ಗಿರೀಶೇನ ಗಿರಿರಸ್ತ್ಯಸ್ಯ ನಿವಾಸತ್ವೇನ ನ ಗಿರಿಶಸ್ತೇನ —ಲೋಮಾದಿತ್ವಾಚ್ಛಪ್ರತ್ಯಯಃ—ಗಿರೌ ಶೇತ ಇತಿ ವಿಗ್ರಹೇತು" ಗಿರೌ ಶೇತೇಽರ್ಜಃ" (ವಾರ್ತಿಕ) ಇತ್ಯಸ್ಯ ಛನ್ದಸಿ ವಿಧಾನಾಲ್ಲೋಕೇ ಪ್ರಯೋಗಾನುಪಪಾತ್ತಿಃ ಸ್ಯಾತ್— ತಸ್ಮಾತ್ ಪೂರ್ವೋಕ್ತಮೇವ ವಿಗ್ರಹವಾಕ್ಯಂ ಸ್ಯಾಯ್ಯಮ್—ಆಪಿಂಜರಾ = ಈಷತ್ಪಿಂಗಲವರ್ಣಾ = ಕುಸುಮರೇಣುವಿನಿಂದ ಕೆಂಬಣ್ಣ ತಳೆದ ॥

52. ಮನೋಜ್ಞಗಂಧಂ ಸಹಕಾರಭಂಗಂ ।
ಪುರಾಣಶೀಧುಂ ನವಪಾಟಲಂ ಚ ॥
ಸಂಬಧ್ನತಾ ಕಾಮಿಜನೇಷು ದೋಷಾಃ ।
ಸರ್ವೇ ನಿದಾಘಾವಧಿನಾ ಪ್ರಮೃಷ್ಟಾಃ ॥ ೫೨ ॥

ಇದೀಗ ಚೈತ್ರಕಾಲವು ಆಗಮಿಸಿದೆ. ಚೈತ್ರನೃಪನು ಬೇಸಗೆಯಕಾಲದಲ್ಲಿ ಕಾಮಿಗಳಿಗೆ ಉಂಟಾದ ತೊಂದರೆಗಳನ್ನು, ದೋಷಗಳನ್ನು ಪರಿಹರಿಸಲು ಮೂರು ಹೊಸಬಗೆಯ ಅಸ್ತ್ರಗಳಿಂದ ಸಜ್ಜಾಗಿ ಬಂದಿರುವನು. ಒಂದೆಡೆಯಲ್ಲಿ ಮಾವು ಹೂಬಿಟ್ಟು ಕಂಪಾದ ಸುವಾಸನೆ ಸುತ್ತಲೂ ಬೀರಿದೆ. ಮಾವಿನ ಹೊಸ ತಳಿರು ಕೆಂಪಾಗಿ, ತಂಪಾಗಿ, ಕಂಪಾಗಿ ಶೋಭಿಸುತ್ತ ಕಾಮಿಗಳ ಹೃದಯತಾಪವನ್ನು ಪರಿಹರಿಸಲು ಶಕ್ತವಾಗಿದೆ. ಮನೋಜ್ಞವಾದ ಸುವಾಸನೆಯು ಕಂಪು ಕಾಮಿಗಳನ್ನು ತಟ್ಟಿ ಎಚ್ಚರಿಸುತ್ತಿದೆ. ಹಳೆಯಕಾಲದ ಮಳಿ ಹೆಂಡ (ಮದಿರೆ, ಮದ್ಯ, ಕಳ್ಳು) ಬೀರ್, ವೈನ್, ವಿಸ್ಕಿ, ದ್ರಾಕ್ಷಾರಸ ಇತ್ಯಾದಿ ಕಾಮಿಗಳ ಸ್ವರ್ಗದಬಾಗಿಲನ್ನೇ ತೆರೆದಿವೆ ಎನ್ನುವಂತಿವೆ. (ಮಾಂವಳಿರ ಕುಪೆರೆದು ಹಳೆಯ ಕಳ್ಳನು ಸುರಿದು). ಇವುಗಳ ಜೊತೆಗೆ ಗ್ರೀಷ್ಮ ಕಾಲದ ದೋಷವನ್ನು ಪರಿಹರಿಸಲು ನವಪಾಟಲ ಹೂಗಳ ಗಿಡಗಳು ಹೂಬಿಟ್ಟಿವೆ. ಕೆಂಪಾದ ರತ್ನದಂತಹ ಪಾದರಿ ಹೂಗಳು ಚೈತ್ರಋತುವು

ಗ್ರೀಷ್ಮಕಾಲದ ಎಲ್ಲಾದೋಷಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ ಕಾಮಿಗಳಿಗೆ ಸಹಕಾರ ವಿತ್ತಿದೆ. ಪ್ರಕೃತಿಯು ಎಲ್ಲವು ಮಂಗಳಕರವಾಗಲೆಂದು ಸಹಕಾರನೀಡಿದೆ. ಇವೆಲ್ಲವೂ ಕಾಮನೃಪನು ಕಾಮಿಗಳಿಗೆ (ಪ್ರೇಮಿಗಳಿಗೆ) ಕೊಟ್ಟಿರುವ ಉಡುಗೊರೆಯಾದ ಸುವಸ್ತು ಗಳು. ಅವುಗಳ ಸವಿಯನ್ನು "ಬಲ್ಲವರು ಬಲ್ಲರು, ಎಲ್ಲರೇನ್ ಬಲ್ಲರಯ್ಯ" ಎಂಬಂದು ಅನುಭವಿಗಳ ಅನುಭವದ ಚಾಟುಮಾತು, ತಿಳಿಯಿತೇ.

ಮನೋಜ್ಞಗಂಧಮಿತಿ ಸರ್ವತ್ರ ಸಂಬಧ್ಯತೇ—ಸಹಕಾರ ಭಂಗಂ ಚೂತ ಪಲ್ಲವ ಖಂಡಮ್—ಪುರಾಣಂ ವಾಸಿತಂ ಶೀರತೇಽನೇನೇತಿ ಶೀದುಃ ಪಕ್ವೇಕ್ಷುರಸಪ್ರಕೃತಿಕಃ ಸುರಾ ವಿಶೇಷನ್ನಮ್ —"ಪಕ್ವೈರಿಕ್ಷುರಸೈರಸ್ತ್ರೀಶೀಧುಃ ಪಕ್ವರಸಃ ಶಿವಃ" ಇತಿ ಯಾದವಃ— ನವಂ ಪಾಟಲಾಯಾಃ ಪುಷ್ಪಂ ಪಾಟಲಂ ಚ ಸಂಬಧ್ನತಾ—ಅವಧಿಸ್ತ್ರವಧಾನೇ ಸ್ಯಾತ್ ಸೀಮ್ನಿಕಾಲೇ ಬಿಲೇಪಿ ಚ" ಇತಿ ವಿಶ್ವಃ—ದೋಷಾಸ್ತ್ರಾಪಾದಯ ಪ್ರವೃತ್ಯಪ್ರಾ=ಪರಿ ಹೃತಾಃ ॥

53. ಜನಸ್ಯ ತಸ್ಮಿನ್ ಸಮಯೇ ವಿಗಾಢೇ ।
ಬಭೂವತು ದ್ವಾರ್ವ ಸವಿಶೇಷಕಾಂತೌ ॥
ತಾಪಾಪನೋದಕ್ಷಮ ಪಾದಸೇವೌ ।
ಚ ಚೋದಯಸ್ಥೌ ನೃಪತಿಃ ಶಶೀ ಚ ॥ ೫೩ ॥

ಗ್ರೀಷ್ಮಕಾಲವು ಮುಂದುವರಿದಿದೆ. ಅಂದಿನ ಬೇಸಿಗೆ ಕಾಲದ ಕಠಿಣವಾದ ದಿನಗಳಲ್ಲಿ ಭೋಗಿಜನರ ಕಾಮಿತಾರ್ಥವನ್ನು ಸಲ್ಲಿಸುವವರೆಂದರೆ ಒಬ್ಬನು ಇಳಾಧೀಶನಾದ ಕುಶ ಸಾರ್ವಭೌಮನು. ಇನ್ನೊಬ್ಬನೆಂದರೆ ಉಡುರಾಜನಾದ ಚಂದ್ರಮ (ತಾರಾಪತಿ) ತನ್ನ ತಂಪಾದ ಶೀತರಶ್ಮಿಗಳಿಂದ, ಅಮೃತಕಿರಣಗಳಿಂದ ಜನರತಾಪವನ್ನು (ಬೇಗೆಯನ್ನು) ತಣಿಸಬಲ್ಲವರು. ಆ ರಾಜೇಂದುಶೇಖರನು ತನ್ನ ಪಾದಸೇವಾನಿರತರಾದ ಪ್ರಜೆಗಳ ತಾಪತ್ರಯವನ್ನು, ಕಷ್ಟಕಾರ್ಪಣ್ಯಗಳನ್ನು, ಬಡತನದ ಸಂಕಷ್ಟವನ್ನು ತನ್ನ ಅಪಾರವಾದ ಅಷ್ಟೈಶ್ವರ್ಯದಿಂದ, ಉದಾರವಾದ ದಾನಾದಿಕ್ರಿಯೆಗಳಿಂದ ಪರಿಹರಿಸಬಲ್ಲನು. ಅವನೇ ಅವನು ಭೂಲೋಕಾಧಿಪತಿ (ಅಯೋಧ್ಯಾಧಿಪತಿ) ದಾನಶೂರನಾದ ಕುಶಭೂಪತಿ. ಇನ್ನೊಬ್ಬ ಆಕಾಶದಲ್ಲಿ, ಉಡುನಾಥನಾದ, ಬೆಳಕಿನ ಲೋಕದ ಅಧಿಪತಿಯಾದ ಚಂದ್ರನು. ಒಬ್ಬನು ಭೂಮಿಯಲ್ಲಿ, ಇನ್ನೊಬ್ಬನು ಆಕಾಶದಲ್ಲಿ. ಹೀಗೆ ಅವರಿಬ್ಬರು ಅಂದಿನ ಬೇಸಗೆಯ ಕಠಿಣವಾದ ದಿನಗಳಲ್ಲಿ ಸಮಯಕ್ಕೊದಗುವ ಲೋಕಬಾಂಧವರು. ಪರಮ ಪ್ರಿಯರು ಅವರಿಬ್ಬರೇ. (ಉದಯಸ್ಥ ಭೂನಾಥ, ಉಡುನಾಥರು (ರೋಹಿಣೀಪತಿ).

ವಿಗಾಢೇ = ಕಠಿಣೇ — ತಾಪಾಪನೋದಕ್ಷಮಾಯೋಗ್ಯಪಾದಯೋರಂಗ್ರ್ಯೋಃ ಪಾದಾನಾಂ ರಶ್ಮೀನಾಂ ಚ ಸೇವಾಯಯೋಃ ತೌ—ಸಮಯೇ ವಿಗಾಢೇ = ಬೇಸಿಗೆಯು ಮುಂದುವರಿದ ಆ ಕಠಿಣಸಮಯದೊಳು.

54. ಅಥೋರ್ಮಿಲೋಲೋನ್ಮದರಾಜಹಂಸೇ ।
ರೋಧೋಲತಾಪುಷ್ಪವಹೇ ಸರಯ್ವಾಃ ॥

ವಿಹರ್ತುಮಿಚ್ಛಾ ವನಿತಾಸಖಸ್ಯ ।
ತಸ್ಯಾಂಭಸಿ ಗ್ರೀಷ್ಮಸುಖೇ ಬಭೂವ ॥ ೫೪ ॥

ಒಂದು ದಿನ ಆ ವಿನಯಶೀಲನಾದ ಆ ರಾಜಾಧಿರಾಜನು, ರಾಜಹಂಸಗಳಿಂದ, ತೆರೆಗಳ ಮಾಲೆಗಳಿಂದಲೂ, ನದಿಯ ಕಿನಾರೆಯಲ್ಲಿ ಲತಾ ಪುಷ್ಪಗಳಿಂದ ಸುಂದರವಾಗಿ ತೋರುವ ಸರಯೂ ನದಿಯಲ್ಲಿ ಇನಿಯರಾದ, ಸುಂದರವನಿತೆಯರ ಜೊತೆಯಲ್ಲಿ ಜಲಕ್ರೀಡೆಯಾಡಲು ಮನವಮಾಡಿದನು. ಊರ್ಮಿಮಾಲಾಮೋದಮದಹಂಸಕುಲವೆಸೆವ ಗ್ರೀಷ್ಮ ಕಾಲದಲ್ಲಿ ಸುಖವನ್ನೀವ, ತುಂಪುತುಂಪಾದ, ಶೀತಲವಾದ ಸರಯೂ ನದಿಯಲ್ಲಿ ಜಲಕೇಳಿಗೆ (ವಿಹರಿಸಲು) ಮನಮಾಡಿ ವನಿತೆಯರನ್ನು ಬರಮಾಡಿಕೊಂಡನು. (ಗ್ರೀಷ್ಮಸುಖಕರವೆನಿಸುವ ಸರಯುವಿನೊಳು).

ಅಥೋರ್ಮಿಷು ಲೋಲಾಃ=ಸತೃಷ್ಣಾ ಉನ್ಮದಾರಾಜಹಂಸಾ ಯಸ್ಮಿಂಸ್ತಸ್ಮಿನ್— ''ಲೋಲಶ್ಚಲತೃಷ್ಣಯೋಃ'' ಇತ್ಯಮರಃ—ಗ್ರೀಷ್ಮೇಷು ಸುಖೇ=ಸುಖಕರೇ ಸರಯ್ವಾ ಅಂಭಸಿ=ಪಯಸಿ ತಸ್ಯ ಕುಶಸ್ಯ ವನಿತಾಸಖಸ್ಯ—ವಿಹರ್ತುಮಿಚ್ಛಾ ಬಭೂವ—ವಿಹಿತೋಪಕಾರ್ಯಮ್ = ವಿಹಿತಾ ಉಪಕಾರ್ಯಾ ಯಸ್ಯಾಃ (ಬಹು) ತಾವತ್ ॥

55. ಸ ತೀರಭೂಮೌ ವಿಹಿತೋಪಕಾರ್ಯಾಂ ।
ಆನಾಯಿಭಿಃ ತಾಮಪಕೃಷ್ಟ ನಕ್ರಾಮ್ ॥
ವಿಗಾಹಿತುಂ ಶ್ರೀಮಹಿಮಾನರೂಪಂ ।
ಪ್ರಚಕ್ರಮೇ ಚಕ್ರಧರಪ್ರಭಾವಃ ॥ ೫೫ ॥

ಕ್ರೀಡಾಸಕ್ತನಾದ ಆ ರಾಜೇಂದ್ರನು ತನ್ನ ಅಂತಸ್ತಿಗೆ, ಘನತೆ, ಗೌರವಕ್ಕೆ ತಕ್ಕಂತೆ ಅದ್ದೂರಿಯಿಂದ (ವೈಭವದಿಂದ) ಸಕಲಸಿದ್ಧತೆಗಳನ್ನು ನಡೆಸಿದನು. ಸರಯೂ ನದಿಗಳ ಮಡುವಿನಲ್ಲಿ ಮೊಸಳೆಗಳು (ನೆಗಳೆ, ನಕ್ರಗಳು) ಇರಬಹುದೆಂಬ ಶಂಕೆಯಿಂದ ಮೊಗವೀರರನ್ನು (ಬೆಸ್ತರು, ಧೀವರರು, ಮೀನುಗಾರರು) ಕರೆಸಿ, ಬಲೆಗಳಿಂದ ಹಿಡಿಸಿ ನದಿಯನ್ನು ಅಪಾಯ ರಹಿತವನ್ನಾಗಿ ಮಾಡಿದನು. ತನ್ನ ಪ್ರಭಾವದಲ್ಲಿ, ಪ್ರತಾಪದಲ್ಲಿ ಚಕ್ರಧರನಾದ ಶ್ರೀಹರಿಗೆ ಸಮಾನನಾದ ಆ ದೊರೆಯು ವಿಹಿತವಾದ ಕಾರ್ಯದಲ್ಲಿ ಕಾರ್ಯೋನ್ಮುಖನಾದನು. ಸರಯೂ ನದೀತೀರದಲ್ಲಿ ಡೇರೆಗಳು, ಗುಡಾರಗಳು (ಪಟಗೃಹಗಳು) ತಲೆಯೆತ್ತಿದುವು. ವೈಭವದ ಜಲಕೇಳಿಯನ್ನು ಆ ಮಹಿಮಾನ್ವಿತನು ಕೈಗೊಂಡನು.

ಚಕ್ರಧರಪ್ರಭವೋ = ವಿಷ್ಣುತೇಜಾಃ—ಆನಯೋ ಜಾಲಮೇಷಾಮಸ್ತೀತ್ಯಾಯಿನೋ=ಜಾಲಿಕಾಃ—''ಜಾಲಮಾನಾಯಃ'' ಇತಿ ನಿಪಾತಃ (ಪಾಣಿನಿ)—''ಆನಾಯಃ ಪುಂಸಿ ಜಾಲಂ ಸ್ಯಾತ್'' ಇತ್ಯಮರಃ—ತೈಃ ಅಪಕೃಷ್ಟನಕ್ರಮಪನೀತಗ್ರಾಹಾಂ ॥

56. ಸಾ ತೀರಸೋಪಾನಪಥಾವತಾರಾತ್ ।
ಅನ್ಯೋನ್ಯಕೇಯೂರವಿಘಟ್ಟನೀಭಿಃ ॥
ಸನೂಪುರಕ್ಷೋಭ ಪದಾಭಿರಾಸೀತ್ ।
ಉದ್ವಿಗ್ನಹಂಸಾ ಸರಿದಂಗನಾಭಿಃ ॥ ೫೬ ॥

ಸರಯೂ ನದಿಯ ತೀರದಲ್ಲಿರುವ ಸೋಪಾನಪಂಕ್ತಿಗಳನ್ನು (ಮೆಟ್ಟಿಲುಗಳ ಸಾಲನ್ನು) ಏರುತ್ತ ಇಳಿಯುತ್ತಲಿರುವ ನೂರಾರು ಮಂದಿ ಅಂತಃಪುರಸ್ತ್ರೀಯರ ಕಾಲ್ಗೆಜ್ಜೆಗಳ, ಪದ ಮಂಜರಿಗಳ ಕಾಲ್ಕಡಗಗಳ ಧ್ವನಿಯಿಂದ ಬೆದರಿದ ಸರಯುವಿನ ಹಂಸಗಳು ಮೆಲ್ಲಮೆಲ್ಲನೆ ತಮ್ಮ ಬಿಳಿದಾದರೆಕ್ಕೆಗಳನ್ನು ಬಿಚ್ಚಿ ಬಾನೆತ್ತರಕ್ಕೆ ಹಾರಿಹೋದವು. ಆ ಸ್ತ್ರೀಯರ ಅನ್ಯೋನ್ಯಕೇಯೂರ ಘರ್ಷಣೆಯಿಂದ, ಪದಹತಿಯ ನೂಪುರಕ್ಷೋಭೆಯಿಂದ ಸರಯೂ ನದಿಯ ನೀಲಜಲದಲ್ಲಿ ಈಜುತ್ತಿದ್ದ ರಾಜಹಂಸಗಳು ಪುರ್ರೆಂದು ಬಾನಿಗೇರಿದುವು.

ಕೇಯೂರವಿಘಟ್ಟನೀಭಿಃ = ಸನ್ನದ್ಧಾಂಗದ ಸಂಘರ್ಷಿಣೀಭಿಃ ಸನೂಪುರಕ್ಷೋಭಾಣಿ ಸ ನೂಪುರಸ್ಖಲನಾನಿ ಪದಾನಿಯಾಸಾ ತಾಭಿರಂಗನಾಭಿರ್ಹೇತುಭಿ ರುದ್ವಿಗ್ನಹಂಸಾಭೀತ ಹಂಸಾऽऽಸೀತ್—ಉದ್ವಿಗ್ನ = ಭೀತಾ ॥

57. ಪರಸ್ಪರಾಭ್ಯುಕ್ಷಣತತ್ಪರಾಣಾಂ ।
ತಾಸಾಂ ನೃಪೋ ಮಜ್ಜನರಾಗದರ್ಶೀ ॥
ನೌಸಂಶ್ರಯಃ ಪಾರ್ಶ್ವಗತಾಂ ಕಿರಾತೀಂ ।
ಉಪಾತ್ತಬಾಲವ್ಯಜನಾಂ ಬಭಾಷೇ ॥ ೫೭ ॥

ಅಂತಃಪುರವನಿತೆಯರ ನೀರಾಟವನ್ನು ಈಕ್ಷಿಸಲು ಅರಸನು ಸುಂದರವಾದೊಂದು ದೋಣಿಯಲ್ಲಿ ಕುಳಿತನು. ಪಕ್ಕದಲ್ಲಿ ಕಿರಾತಿನಿಯೊರ್ವಳು (ಬೇಡಸ್ತ್ರೀ, ಕಿರಾತಸ್ತ್ರೀ) ಚಾಮರ ಬೀಸುತ್ತ ನಿಂತಿದ್ದಳು. ನಾರಿಯರು ಒಬ್ಬರ ಮುಖಕ್ಕೆ ಒಬ್ಬರು ನೀರನ್ನು ಎರಚುತ್ತ ಜಲಕ್ರೀಡೆಯ ಅಂದವನ್ನು ಹೆಚ್ಚಿಸಿದರು. ವಿಹಾರನೌಕೆಯಲ್ಲಿ ಕುಳಿತ ಅರಸನು ಅಕ್ಕರೆಯಿಂದ ಈಕ್ಷಿಸುತ್ತ ಚಾಮರ ಬೀಸುವ ಓರ್ವಳೊಡನೆ ಈ ತೆರನಾಗಿ ನುಡಿದನು.

ಬಾಲವ್ಯಜನಾಂ = ಗೃಹೀತಚಾಮರಾಂ ಕಿರಾತೀಂ = ಚಾಮರಗ್ರಹಿಣೀ ಬಭಾಷೇ—ಕಿರಾತಸ್ತ್ವಲ್ಪವಪುಷಾಂತರೇ–ಸ್ತ್ರಿಯಾಂ ಚಾಮರವಾಹಿನ್ಯಾಂ ಮ್ಲೇಚ್ಛಜಾತ್ಯಂತರೇ ದ್ವಯೋಃ ''ಇತಿ ಕೇಶವಃ ॥

58. ಪಶ್ಯಾವರೋಧೈಃ ಶತಶೋ ಮದೀಯೈಃ ।
ವಿಗಾಹ್ಯಮಾನೋ ಗಲಿತಾಂಗರಾಗೈಃ ॥
ಸಂಧ್ಯೋದಯಃ ಸಾಭ್ರ ಇವೈಷ ವರ್ಣಂ ।
ಪುಷ್ಯತ್ಯನೇಕಂ ಸರಯೂಪ್ರವಾಹಃ ॥ ೫೮ ॥

''ಎಲೆ ಪುಳಿಂದಿನಿಯೆ, ನೋಡು. ನನ್ನ ಅಂತಃಪುರದ ನೂರಾರುಮಂದಿ ಅಂಗನೆಯರು (ಯುವತಿಯರು) ವಿಹಾರಿಯುತ್ತಿರಲು ಅವರ ಮೈಗೆಲೇಪಿಸಿದ ಗಂಧಾದಿ ಅಂಗರಾಗಗಳು, ಲೇಪನಗಳು ಸರಯೂ ನದಿಯ ಪ್ರವಾಹದಲ್ಲಿ ಮಿಶ್ರವಾಗಿ (ಸಮ್ಮಿಶ್ರವಾಗಿ) ಅನೇಕ ವರ್ಣಗಳಲ್ಲಿ ಹರಿಯುತ್ತಿದೆ. ಸಂಧ್ಯಾಕಾಲದಲ್ಲಿ (ಸಂಜೆಯ ವೇಳೆ) ಮೇಘಮಾಲೆಗಳು, ಸೂರ್ಯರಶ್ಮಿಯ ಪ್ರತಿಫಲನದಿಂದ ವಿವಿಧ ಬಣ್ಣವಾಂತು ನಯನಮನೋಹರವಾಗಿ ಕಂಗೊಳಿಸುವಂತೆ ಸರಯೂ ನದಿಯುವಾರಿಯು ಹಳದಿ, ಬಿಳಿ, ಕೆಂಪು ಮೊದಲಾದ ಬಣ್ಣಗಳಿಂದ ವಿವಿಧತೆಯನ್ನಾಂತು ಕಂಗೊಳಿಸುತ್ತಿದೆ.

ಸಾಭ್ರೈಃ=ಸಮೇಘೈಃ ಸಂಧ್ಯೋದಯೈಃ=ಸಂಧ್ಯಾವಿರ್ಭಾವ ಇವ ಅನೇಕಂ=ನಾನಾವಿಧಂ ವರ್ಣಂ ರಕ್ತಪೀತಾದಿಕಂ ಪುಷ್ಯತಿ ಪಶ್ಯ—ವಾಕ್ಯಾರ್ಥಃ ಕರ್ಮ—ಅವರೋಧೈಃ=ಅಂತಃಪುರಸ್ತ್ರೀಭಿಃ ॥

59. ವಿಲುಪ್ತಮಂಗಃ ಪುರಸುಂದರೀಣಾಂ ।
ಯದಂಜನಂ ನೌಲುಲಿತಾಭಿರದ್ಭಿಃ ॥
ತದ್ಬಧ್ನತೀಭಿರ್ಮದರಾಗಶೋಭಾಂ ।
ವಿಲೋಚನೇಷು ಪ್ರತಿಮುಕ್ತಮಾಸೀತ್ ॥ ೫೯ ॥

ಅಂತಃಪುರ ಸ್ತ್ರೀಯರ ಸುಂದರವಾದ ಕಣ್ಣಿನ ಕಾಡಿಗೆಯನ್ನು ಕೊಂಡುದಕ್ಕೆ ಬದಲಾಗಿ ನೌಲುಲಿತ ಸರಯೂ ನದಿಯ ತೆರೆಗಳಮಾಲೆ (ವೀಚಿಮಾಲೆ) ಸತಿಯರ ಕಣ್ಣಿಗೆ ಮಂದರಾಗ ಶೋಭೆಯನ್ನು ಪ್ರತಿಯಾಗಿ ಕೊಟ್ಟಿತು. ಅವರ ಕಣ್ಣುಗಳು ಮಂದಿಸಿ ಕೆಂಪಾದಂತೆ ಜಲಕೇಳಿ ಲೀಲೆಯು ಪರಿಣಾಮಬೀರಿತು. ವೀಚಿಮಾಲೆಗಳು ಪ್ರತಿಯಾಗಿ ಅರ್ಪಿಸಿದುವು. ಉಡುಗೊರೆಯಾಗಿ ನೀಡಿದುವು ಎಂಬಂತೆ, ಮಂದರಾಗ ಶೋಭಿತವಿಲೋಚನರಾಗಿ, ತಾಮ್ರಲೋಚನರಾಗಿ, ನಸುಗೆಂಪಾದ ಕಣ್ಣುಗಳಿಂದ ಚೆಲ್ವಾಗಿ ಬಲು ಮುದ್ದಾಗಿ ಸೊಗಸಾಗಿ, ಇಂಬಾಗಿ ಶೋಭಿಸಿದರು. (ತಾಮ್ರಾಕ್ಷಿಯರು).

ನೌಲುಲಿತಾಭಿಃ = ನೌಕ್ಷುಭಿತಾಭಿರದ್ಭಿಃರಂತಃಪುರಸುಂದರೀಣಾಂ—ಯದಂಜನಂ = ಕಜ್ಜಲಂ = ಕಾಡಿಗೆ—ಮದೇನಯಾರಾಗಶೋಭಿತಾಂ ಬಧ್ನತೀಭಿ = ಘಟಯಂತೀಭಿರದ್ಭಿರಾಸಾಂ ಪ್ರತಿಮುಕ್ತಂ=ಪ್ರತ್ಯರ್ಪಿತಂ ॥

60. ಏತಗುರುಶ್ರೋಣಿಪಯೋಧರತ್ವಾತ್ ।
ಆತ್ಮಾನಮುದ್ವೋಢುಮಶಕ್ನುವತ್ಯಃ ॥
ಗಾಢಾಂಗದೈರ್ಬಾಹುಭಿರಪ್ಸುಬಾಲಾಃ ।
ಕ್ಲೇಶೋತ್ತರಂ ರಾಗವಶಾತ್ ಪ್ಲವಂತೇ ॥ ೬೦ ॥

ಕ್ರೀಡಾಭಿಸಕ್ತರಾದ ಆ ಮಾನಿನಿಯರು (ಕಾಮಿನಿಯರು) ತಮ್ಮ ಪೀನಪಯೋಧರಗಳ ಮತ್ತು ಗುರುನಿತಂಬದ ಭಾರದಿಂದ, ಆಭಾರವನ್ನು ಹೊರಲಾರದೆ ಬಳಲುತ್ತ ಜಲರಾಶಿಯಲ್ಲಿ ಈಜಾಡುತ್ತಿರುವುದನ್ನು ನೋಡು. ಎಲೌಬಾಲೆ, ಅವರ ಬಾಹುವಲ್ಲಿಗೆ ಗಾಢವಾಗಿ ಬಂಧಿಸಿರುವ ಕೇಯೂರ (ಅಂಗದ)ಗಳು ಸಲೀಸಾಗಿ ಈಜಾಡಲು ಬಿಡುತ್ತಿಲ್ಲ ವಾದರೂ ರಾಗೋಲ್ಲಾಸದಿಂದ ಕ್ರೀಡಾಸಕ್ತರಾಗಿ ಈಜಾಡುತ್ತಿರುವರು. ರಾಗವಶರಾಗಿ, ಬಹಳ ಸಂತಸದಿಂದ ಅತಿ ಪ್ರಯತ್ನದಿಂದ, ಕಷ್ಟಪಟ್ಟು, ಎಲ್ಲರ ಜೊತೆಯಲ್ಲಿ ಮುದ್ದಾನೆಗಳಂತೆ ಈಜಾಡುತ್ತಲೇ ಇರುವರು. (ಅತಿಯತ್ನದಿಂದೆಂತೋರಾಗವಶರು).

ಗುರು = ದುರ್ವಹಂ—ಏತಾ ಬಾಲಾ ಗಾಢಾಂಗದೈಃ = ಶ್ಲಿಷ್ಟಾಂಗದೈರ್ಬಾಹುಭಿಃ ಕ್ಲೇಶೋತ್ತರಂ = ದುಃಖಪ್ರಾಯಂ ಯಥಾ ತಥಾರಾಗವಶಾತ್ = ಕ್ರೀಡಾಭಿನಿವೇಶಪಾರತಂತ್ರ್ಯಾತ್—ಕ್ಲೇಶೋತ್ತರಂ = ಕ್ಲೇಶಃ ಉತ್ತರಃ ಯಸ್ಮಿನ್ (ಕರ್ಮಣಿ) ತದ್ಯಥಾ, ಸ್ಯಾಯಂತ್ರಥಾ = ಅತಿಯತ್ನದಿಂದೆಂತೋ.

**61. ಅಮೀ ಶಿರೀಷ ಪ್ರಸವಾವತಂಸಾಃ**
**ಪ್ರಭ್ರಂಶಿನೋ ವಾರಿವಿಹಾರಿಣೀನಾಮ್ ॥**
**ಪಾರಿಪ್ಲವಾಃ ಸ್ರೋತಸಿ ನಿಮ್ನಗಾಯಾಃ ।**
**ಶೈವಾಲಲೋಲಾಂಶ್ಛಲಯಂತಿ ಮೀನಾನ್ ॥ ೬೧ ॥**

ನೀರಾಟಕೆಳಸಿರುವ ಈ ರಮಣಿಯರು ಅಲ್ಲೋಲಕಲ್ಲೋಲವಾಗಿರುವ ಸರಯೂ ನದಿಯ ನಿರ್ಮಲ ವಾರಿಯಿಂದ ಕಿವಿಗಳಲ್ಲಿ ಧರಿಸಿರುವ ಶಿರೀಷವೆಂಬ ಕಿವಿಯ ಆಭರಣವು ಶಿರೀಷಾವತಂಸ (ನೀಲಿಬಣ್ಣದ) ಕಿವಿಯಿಂದ ಜಾರಿ ನೀರಿನ ಪ್ರವಾಹದಲ್ಲಿ ಹಿಂದಕ್ಕೂ ಮುಂದಕ್ಕೂ ಪ್ರವಹಿಸುತ್ತಲಿರುವುದು. ಆಗ ನೀರಿನಲ್ಲಿರುವ ಮೀನುಗಳು ಆ ಶಿರೀಷಾವತಂಸವನ್ನು ಶೈವಾಲವೆಂದು ಬಗೆದು ಅದನ್ನು ತಿನ್ನಲು ಬಾಯ್ತೆರೆದು ಓಡೋಡಿಬರುತ್ತಿರುವುದನ್ನು ನೋಡು, ತರಳೆ. ಶೈವಾಲ ಪ್ರಿಯ, ಶೈವಾಲ ಭ್ರಮಾಲೋಲವಾದ ಮೀನುಗಳ ಹಿಂಡು ಆ ಕಡೆ, ಈ ಕಡೆ ನೀರಲ್ಲಿ ಓಡಾಡುತ್ತಿರುವುದನ್ನು ನೋಡು.

ಅಮೀ ಇತಿ–ವಾರಿವಿಹಾರಿಣೀನಾಮಾಸಾಂ ಪ್ರಭ್ರಂಶಿನೋ ಭ್ರಷ್ಟಾ ನಿಮ್ನಗಾಯಾಃ ಸ್ರೋತಸಿ ಪಾರಿಪ್ಲವಾಶ್ಚಂಚಲಾ—"ಚಂಚಲಂ ತರಲಂ ಚೈವ ಪಾರಿಪ್ಲವ ಪರಿಪ್ಲವೇ" ಇತ್ಯಮರಃ—ಅಮೀ ಶಿರೀಷಪ್ರಸವಾ ಏವಾವತಂಸಾಃ=ಕರ್ಣಭೂಷಾ ಶೈವಾಲಲೋಲಾ=ಜಲನೀಲಿಪ್ರಿಯಾನ್—"ಜಲನೀಲೀತುಶೈವಾಲಮ್" ಇತ್ಯಮರಃ—ಮೀನಾಂಶ್ಛಲಯಂತಿ=ಪ್ರಾದುರ್ಭಾವಯನ್ತಿ—ಶೈವಾಲಪ್ರಿಯತ್ವಾಚ್ಛಿರೀಷೇಷು=ಶೈವಾಲಭ್ರಮಾತ್ ಪ್ರಾದುರ್ಭಾವಯಂತೀತ್ಯರ್ಥಃ ॥

**62. ಆಸಾಂ ಜಲಾಸ್ಫಾಲನತತ್ಪರಾಣಾಂ ।**
**ಮುಕ್ತಾಫಲಸ್ಪರ್ಧಿಷು ಶೀಕರೇಷು ॥**
**ಪಯೋಧರೋತ್ಸರ್ಪಿಷು ಶೀರ್ಯಮಾಣಃ ।**
**ಸಂಲಕ್ಷ್ಯತೇನಚ್ಛಿದುರೋಽಪಿ ಹಾರಃ ॥ ೬೨ ॥**

ಆ ಚೆಲುವೆಯರು ಒಬ್ಬರಿಗೊಬ್ಬರು ನೀರೆರಚುತ್ತಾ, ಅತ್ಯಂತ ಸಂತಸದಿಂದ ಆಟವಾಡುತ್ತ ಕ್ರೀಡಾನಿರತರಾಗಿರುವರು. ಹೀಗೆ ಆಸಕ್ತರಾಗಿ ಆಟವಾಡುತ್ತಿರಲು ನೀರಿನ ಸತತವಾದ ಒತ್ತಡದಿಂದ ಆ ವಾಮನೇತ್ರೆಯರು ತಮ್ಮ ಕೊರಳಲಿರುವ ತೋರಮುತ್ತಿನ ಹಾರವು (ನವಮೌಕ್ತಿಕ ಮಾಲೆ) ಹರಿದಿದ್ದರೂ ಗಮನಿಸದೆ, ಚಾರುಸ್ತನಮಂಡಲದ ಮೇಲೆ ಉದುರುತ್ತಿರುವ ನೀರ ತುಂತುರು ಹನಿಗಳನ್ನು ಮುತ್ತುಗಳೆಂದೇ ಭ್ರಮಿಸಿ ತಮ್ಮ ಚೆಲ್ಲಾಟವನ್ನು ಮುಂದುವರಿಸಿ ಆನಂದದಿಂದ ಕಾಲಕಳೆಯುತ್ತಲಿರುವರು.

ಜಲಸ್ಯಾಸ್ಫಾಲನ ತತ್ಪರಾಣಾಮ್ ಸಕ್ತಾನಾಮಾಸಾಂಸ್ತ್ರೀಣಾಂ ಮುಕ್ತಾಫಲಸ್ಪರ್ಧಿಷು ಮೌಕ್ತಿಕಾನುಕಾರಿಷು ಪಯೋಧರೇಷು ಸ್ತನೇಷೂತ್ಸರ್ಪನ್ತ್ಯುತ್ಪತಂತಿ ಯೇ ತೇಷು ಶೀಕರೇಷು=ಶೀಕರಾಣಾಂ ಮಧ್ಯೇಶೀರ್ಯಮಾಣೋಗಲನ್ ಹಾರೋತ ಏವ ಛಿದುರಃ ಸ್ವಯಂಭಿನ್ನೋಽಪಿ ನ ಸಂಲಕ್ಷ್ಯತೇ—"ವಿದಿಭಿದಿಚ್ಛಿದೇಃ ಕುರಚ್" ಇತಿ ಕುರಚ್ ಪ್ರತ್ಯಯಃ (ಪಾಣಿನಿ) ಛಿದುರಃ=ಛಿದ್ + ಉರಚ್ = (ಮುತ್ತಿನ ಹಾರ) ಹರಿದಿದ್ದರೂ, ತುಂಡಾಗಿದ್ದರೂ ॥

**63. ಆವರ್ತಶೋಭಾ ನತನಾಭಿಕಾಂತೇ ।**
**ಭಂಗೋಭ್ರುವಾಂ ದ್ವಂದ್ವಚರಾಃ ಸ್ತನಾನಾಮ್ ॥**
**ಜಾತಾನಿರೂಪಾವಯವೋಪಮಾನಾ ।**
**ನ್ಯದೂರವರ್ತೀನಿ ವಿಲಾಸಿನೀನಾಮ್ ॥ ೬೩ ॥**

"ಹೇ ಷೋಡಶಿ, ಈ ವಿಲಾಸಿನಿಯರು ತಮ್ಮ ರೂಪಲಾವಣ್ಯದಿಂದ ಬೆಡಗುಬಿನ್ನಾಣದಿಂದ, ಅಂಗಾಂಗಗಳ ನಿಜಕಾಂತಿಯಿಂದ, ರೂಪ ಸಾದೃಶ್ಯದಿಂದ ಸರಯೂ ನದಿದೇವತೆಯಂತೆಯೇ ಕಾಣಿಸುತ್ತಿರುವರು. ಅವರ ಚಲಿಸುವ, ಕದಕದಿಸುತ್ತಿರುವ ಚಾರುಸ್ತನ ಮಂಡಲಗಳು ನದಿಯುದಡದಲ್ಲಿರುವ ಅತ್ತಿತ್ತ ಚಲಿಸುತ್ತಿರುವ (ಪುಳಿನಸ್ಥಳದಲ್ಲಿರುವ ಜೋಡಿ ಚಕ್ರವಾಕ ಪಕ್ಷಿಗಳಿಗೆ ಎಣೆಯಾಗಿರುವುವು.) ಅವರ ಆಳವಾದ ಸುಳಿನಾಭೀಕಮಲವು ನದಿಯಲ್ಲಿ ಸುರುಳಿಸುರುಳಿಯಾಗಿ ಸುತ್ತುತ್ತಿರುವ ನೀರಸುಳಿಯಂತೆ, ಭ್ರಮೆಹುಟ್ಟಿಸುತ್ತಲಿವೆ. ಬಾಗಿದ ಬಿಲ್ಲಿನಂತಿರುವ ಹುಬ್ಬುಗಳು ನದಿಯನೀರಿನ ಅಲೆಗಳನ್ನು ಪ್ರತಿಸಿಧಿಸುತ್ತಿವೆ. (ಪ್ರತಿಬಿಂಬಿಸುತ್ತಿವೆ.)

ವಿಲಾಸಿನೀನಾಂ=ವಿಲಸನ ಶೀಲಾನಾಮ್ ಸ್ತ್ರೀಣಾಮ್—"ವೌಕಷಲಸತ್ಥಕಸ್ರಂಭಃ" ಇತಿ ಧಿನುಣ್ ಪ್ರತ್ಯಯಃ—ರೂಪಾವಯವಾನಾಮುಪಮೇಯಾನಾಂ—ನತನಾಭಿಕಾಂತೇ=ನಿಮ್ನನಾಭೀ ಶೋಭಾಯಾ ಆವರ್ತಶೋಭಾ—"ಸ್ಯಾದಾವರ್ತೋಽಂಭಸಾಂಭ್ರಮಃ" ಇತ್ಯಮರಃ—ಭ್ರುವಾಂಭಂಗಸ್ತರಂಗಃ—ಸ್ತನಾನಾಂ ದ್ವಂದ್ವಚರಾಶ್ಚಕ್ರವಾಕಾಃ—"ಉಪಮಾನಮ್" ಇತಿ ಸರ್ವತ್ರಸಂಬಧ್ಯತೇ ॥

**64. ತೀರಸ್ಥಲೀಬರ್ಹಿಭಿರುತ್ಕಲಾಪೈಃ ।**
**ಪ್ರಸ್ನಿಗ್ಧಕೇಕೈರಭಿನಂದ್ಯಮಾನಮ್ ॥**
**ಶ್ರೋತ್ರೇಷು ಸಂ ಮೂರ್ಛತಿ ರಕ್ತಮಾಸಾಂ ।**
**ಗೀತಾನುಗಂ ವಾರಿಮೃದಂಗ ವಾದ್ಯಮ್ ॥ ೬೪ ॥**

ರಮಣಿಯರ ಸವಿಯುಲಿಯ ಹಾಡುಗಳು, ಆ ಹಾಡಿಗೆ ತಕ್ಕಂತೆ, ಕೈಯಿಂದ ನೀರನ್ನು ಬಡಿಯುತ್ತಲಿದಾಗ, ತಾಳಬದ್ಧವಾದ ಶಬ್ದದಿಂದ ಉಂಟಾಗುವ ನೀರಮದ್ದಳೆಯದನಿ (ನೀರಮದ್ದಳೆಯ ವಾದ್ಯರವ) ಇದನ್ನು ಕೇಳಿ ಸರಯೂ ತೀರದಲ್ಲಿ ಅತ್ತಿತ್ತ ಓಡಾಡುವ ನವಿಲುಗಳು ಮೇಘದನಿಯೆಂದು (ಸಿಡಿಲಿನ ಘರ್ಜನೆಯೆಂದು) ಭ್ರಮಿಸಿ ಗರಿಕೆದರಿ ಕೇಕೆ ದನಿಯ ನಾದವನ್ನು ಮಾಡುತ್ತಾ "ತೈಯಥಾತಕಾ"ವೆಂದು ಕುಣಿಯಲಾರಂಭಿಸಿರುವುದನ್ನು ಕಾಣಬಹುದು. ಆ ಮಯೂರಗಳು ತಮ್ಮ ಮಧುರವಾದ ಜೇನ್ದನಿಯ ಕೇಕೆಯಿಂದ (ಜೇನ್ದನಿಯ ಕೇಕೆಯೊಳು ಹೊಗಳುತಿರಲು) ಸ್ತ್ರೀಯರನ್ನು ಅಭಿನಂದಿಸಿ ಹೊಗಳುತ್ತಿರುವುವೋ ಎಂಬಂತೆ ನನ್ನ ಮನಸ್ಸಿಗೆ ಭಾಸವಾಗುತ್ತಿದೆ. ಅವುಗಳ ಹೃದಯವನ್ನು ಘನವಾಗಿ ಘರ್ಜಿಸುವಂತೆ ಸ್ಫುರಿಸಿದೆ. ಕೇಕಾನಾದವನ್ನು ಮಾಡುವಂತೆ.

ಉತ್ಕಲಾಪೈರುಚ್ಚಬರ್ಹೈಃ ಪ್ರಸ್ನಿಗ್ಧಾಃ ಮಧುರಾಃ ಕೇಕಾ ಯೇಷಾಂ ತೈಃ—ಸ್ಥಿತೈ ಬರ್ಹಿವರ್ಯಮೂರೈರಭಿನಂದ್ಯಮಾನಂ ರಕ್ತಂ ಶ್ರವ್ಯಂ ಗೀತಾನುಗಂ ಗೀತಾನುಸಾರಿ—

ಆಸಾಂಸ್ತ್ರೀಣಾಂ ಸಂಬಂಧಿ—ಪಾರ್ಯೇವ ಮೃದಂಗಸ್ತಸ್ಯ ವಾದ್ಯಂ=ವಾದ್ಯಧ್ವನಿಃ ಶ್ರೋತ್ರೇಷು ಸಂಪಸ್ಪೃಶತಿ=ವ್ಯಾಪ್ನೋತಿ ॥

65. ಸಂದಷ್ಟವಸ್ತ್ರೇಷ್ವಬಲಾನಿತಂಬೇ ।
ಷ್ವಿಂದುಪ್ರಕಾಶಾಂತರಿತೋಡುತುಲ್ಯಾಃ ॥
ಅವಿಸಾಜಲಾಪೂರಿತ ಸೂತ್ರಮಾರ್ಗಾ ।
ಮೌನಂ ಭಜಂತೇ ರಶನಾಕಲಾಪಾಃ ॥ ೬೫ ॥

ಅಬಲೆಯರ ನಿತಂಬ ಪ್ರದೇಶವಲ್ಲಿ, ಒಡಾಣ್ಯಕ್ಕೆ ಅಂಟಿಕೊಂಡಿರುವ ರೇಷ್ಮೆಬಟ್ಟೆಗಳು ಹೊಳೆಯುತ್ತ ಚಂದ್ರನ ಬೆಳದಿಂಗಳ ಪ್ರಕಾಶವನ್ನು ಪ್ರತಿಬಿಂಬಿಸುತ್ತಿದೆ. ಮೇಖಲೆಯ ಸೂತ್ರದಲ್ಲಿರುವ, ಅಂತರಅಂತರದಲ್ಲಿರುವ ಸುಂದರವಾದ ಮುತ್ತುಗಳ ಚಿಕ್ಕಚಿಕ್ಕರಂಧ್ರದಲ್ಲಿರುವ ನೀರಹನಿಗಳು ತುಂಬಿಹೊರಬರುತ್ತ, ಮಂದವಾದ ನಕ್ಷತ್ರದ ಕಾಂತಿಯನ್ನು ಹೋಲುತ್ತಿದೆ. ಮಿಣುಕುಗಿರುವ ತಾರೆಗಳಂತೆ (ನಕ್ಷತ್ರಗಳಂತೆ) ತೋರುತ್ತಿವೆ. (ಜೊನ್ನದೊಳು ಮಿಣುಕುಗಿರುವ ತಾರೆಗಳೊಲು) ಜಲಪೂರಿತ ಸೂತ್ರಮಾರ್ಗದ ರಶನಾಕಲಾಪಗಳು ಮೌನವನ್ನು ತಳೆದಿವೆ. ಕಾರಣ ನೀರಾಟದ ಸದ್ದುಗದ್ದಲಗಳು ನಿಂತ ಪರಿಣಾಮವಾಗಿ ಜಲಕ್ರೀಡೆಯ ಕಾಲದಲ್ಲಿ ಸಂದಷ್ಟವಾದ ರೇಶ್ಮೆದುಕೂಲವು ಇಂದುಪ್ರಭಾಸಾಮ್ಯತೆಯನ್ನು ಪ್ರದರ್ಶಿಸುತ್ತಾ ಚಂದ್ರಪ್ರಕಾಶದಂತೆ ಚೆಲುವಾಗಿ ಶೋಭಿಸುತ್ತಿದೆ. (ನೀರೊಳಗದ್ದಿರುವ ರಶನಾಕಲಾಪಗಳು, ಮೌನವನು ತಳೆದಿಹವು ಸದ್ದಿಲ್ಲಲು).

ಸಂದಷ್ಟವಸ್ತ್ರೇಷು=ಜಲಸಂಶ್ಲಿಷ್ಟ, ವಸ್ತ್ರೇಷ್ವಬಲಾನಾಂ ನಿತಂಬೇಷ್ವಧಿಕರಣೇಶು—ಇಂದುಪ್ರಕಾಶೇನ = ಜ್ಯೋತ್ಸ್ನಯ್ಯಾನ್ತರಿತಾನ್ಯಾ ವೃತ್ತನಿಯಾಸ್ಯುಡೂನಿ = ನಕ್ಷತ್ರಾಣಿ ತತ್ತುಲ್ಯಾಃ—ಮುಕ್ತಾಮಯತ್ವಾದಿತಿ ಭಾವಃ—ಅವಿಗಾಜಲಾ ಪೂರಿತ ಸೂತ್ರಮಾರ್ಗಾಃ =ನಿಶ್ಚಲಾ ಇತ್ಯರ್ಥಃ—ರಶನಾ ಏವ ಕಲಾಪಾ ಭೂಷಾಃ—"ಕಲಾಪೋ ಭೂಷಣೇ ಬರ್ಹೇ" ಇತ್ಯಮರಃ—ಮೌನಮ್ = ನಿಃಶಬ್ದಮ್ ಮಿತ್ಯರ್ಥಃ—ಭಜಂತೇ ॥

66. ಏತಾಃ ಕರೋತ್ಕ್ಷೀಡಿತವಾರಿಧಾರಾಃ ।
ದರ್ಪಾತ್ ಸಖೀಭಿರ್ವದನೇಷು ಸಿಕ್ತಾಃ ॥
ವಕ್ರೇ ತರಾಗ್ರ್ಯೈಲಕೈಸ್ತರುಣ್ಯಃ ।
ಚೂರ್ಣಾರುಣಾನ್ ವಾರಿಲವಾನ್ ವಮಂತಿ ॥ ೬೬ ॥

ಹರ್ಷದಿಂದ ಬೀಗಿದ ಸಖಿಯರು ಬೊಗಸೆನೀರನ್ನು ಒಬ್ಬರಿಗೊಬ್ಬರು ಎರಚುತ್ತಾ ಚೆಲ್ಲಾಟವಾಡಿ ಕ್ರೀಡಿಸುತ್ತಿರುವರು. ಅವರು ತಮಗೆ ಎದುರಾದವರ ಆನನಕ್ಕೆ ನೀರನ್ನು ಎರಚಿ ಪೀಡಿಸುತ್ತಾ ಆನಂದಿಸುವರು. ಆಗ ಕುಂಕುಮಮಿಶ್ರಿತ, ಕೆಂಪಾದ (ಅರುಣಬಣ್ಣದಿಂದ) ನೀರಿನ ಕಣಜಾಲಗಳು ತರುಣಿಯರ ಸರಳರೇಖೆಯಂತಿರುವ ಕೇಶರಾಶಿಯ ಮೂಲಕ (ಸರಲಾಲಕಾಗ್ರದಿಂ) ರಮ್ಯವಾಗಿ ಹರಿದು ಕೆಳಗಿಳಿಯುವುದು.

ವಾರಿಧಾರಾ = ಯಾಭಿಸ್ತಾಃ — ವಕ್ರೇತರಾಗ್ರ್ಯೈರ್ಜಲ ಸೇಕಾದೃಜ್ವಗ್ರೈರಲಕೈಃ

ಕರಣೈಃಶ್ರೂಣೈಃ ಕುಂಕುಮಾದಿ ಭರಣಾನ್ನಾರೀಲ ಸಾನಂದಕಬಿಂದೂನ್ವ ಮಂತ್ರಿ = ವರ್ಷಂತಿ.

**67. ಉದ್ಬಂಧಕೇಶಶ್ಚ್ಯುತಪತ್ರಲೇಖೋ ।**
**ವಿಶ್ಲೇಷಿ ಮುಕ್ತಾಫಲಪತ್ರವೇಷ್ಟಃ ॥**
**ಮನೋಜ್ಞ ಏವ ಪ್ರಮದಾಮುಖಾನಾಂ ।**
**ಅಂಭೋವಿಹಾರಾಕುಲಿತೋಽಪಿ ವೇಷಃ** ॥ ೬೭ ॥

ಆ ಪ್ರಮದೆಯರು (ವೈಯಾರಿನಾರಿಯರು) ಜಲರಾಶಿಯಲ್ಲಿ ಕ್ರೀಡಿಸಿದ (ವಿಹರಿಸಿದ) ಪರಿಣಾಮವಾಗಿ ಬಹುಮನೋಜ್ಞವಾಗಿ ಕಂಡರು. ಅವರ ಕೇಶಪಂಕ್ತಿಗಳು ಬಿಚ್ಚಿ, ಸಡಿಲವಾಗಿ ಕಾಣಿಸಿದುವು. ಕಿವಿಯಾಭರಣಗಳಾದ ಪವುಸೆಲತೆಗಳು ಅಳಿಸಿ ಹೋಗಿದ್ದುವು. ನೀರಾಟದಾಯಾಸಕೆ ತಂತ್ರಾದರೇನು ಅವರು ಸಹಜ ಸುಂದರಿಯರೇ (ನಿರಾಭರಣಸುಂದರಿಯರು) ಅವರ ವೇಷಭೂಷಣಗಳು ಪುಟಕ್ಕಿಟ್ಟ ಅಪರಂಜಿ ಚಿನ್ನದಂತೆ ಅತ್ಯಂತಸಾಜೂಕಾಗಿ, ಸುಂದರವಾಗಿ ಕಾಣಿಸಿತು. ಮೊಗದ ಅಂದವು ಹೊಸ ಚೆಲುವನಾಂತುದು, ಮುತ್ತಿನ ಓಲೆಗಳು (ಮುಕ್ತಾಫಲಪತ್ರವೇಷ್ಟ) ಸಡಿಲವಾಗಿದ್ದುವು. ಹಣೆಯ ತಿಲಕ, ಮುಖಕ್ಕೆ ಹಚ್ಚಿದ ಪದ್ಮರಾಗ, ಕಣ್ಣಿನ ಕಾಡಿಗೆ, ಕಿವಿಯ ಪತ್ರಲೇಖೆ ಎಲ್ಲವೂ ವಿಕೃತವಾದ ರೀತಿಯಲ್ಲಿ ರಮ್ಯತೆಯನ್ನು ಪಡೆದಿತ್ತು. (ವಿವಿಧತೆಯಲ್ಲಿ ಏಕತೆ ಎಂಬಂತೆ) ಹೇಗಿದ್ದರೂ ಸುಂದರಿಯರು ಸುಂದರಿಯರೇ. ಅಲ್ಲವೇ.

ಉದ್ಬಂಧಾ ಉದ್ಭ್ರಷ್ಟಾಃ ಕೇಶಾ ಯಸ್ಮಿನ್ ಸಃ—ಚ್ಯುತಪತ್ರಲೇಖಃ = ಕ್ಷರಿತ ಪತ್ರರಚನಃ—ಮುಕ್ತಾಫಲಪತ್ರವೇಷ್ಟಾ=ಮುಕ್ತಾಮಯ ತಾಡಂಕಾ ಯಸ್ಮಿನ್ ಸಃ—ಏವಮಂಭೋವಿಹಾರಾಕುಲಿತೋಽಪಿಪ್ರಮದಾಮುಖಾ ನಾಂ ವೇಷೋ ನೇಪಥ್ಯಂ ಮನೋಜ್ಞ ಏವ—ರಮ್ಯಾಣಾಂ ವಿಕೃತಿರಪಿ=ಶ್ರಿಯಂ ತನೋತೀತಿ ಭಾವಃ ॥

**68. ಸ ನೌವಿಮಾನಾದವತೀರ್ಯ ರೇಮೇ ।**
**ವಿಲೋಲಹಾರಃ ಸಹ ತಾಭಿರಪ್ಸು ॥**
**ಸ್ಕಂಧಾವಲಗ್ನೋದ್ಧೃತ ಪದ್ಮಿನೀಕಃ ।**
**ಕರೇಣುಭಿರ್ವನ್ಯ ಇವ ದ್ವಿಪೇಂದ್ರಃ** ॥ ೬೮ ॥

ಚೆಲುವಿನಂತಹ ಆಕಾರದ ವಿಹಾರ ದೋಣಿಯಿಂದ ಇಳಿದು ಕಿಲಾಡಿ ಕುಶನು ಜಲಕ್ರೀಡಾಸಕ್ತನಾಗಿ, ಜಲಕೇಳಿಯಾಡುತ್ತಿರುವ ನವತರುಣಿಯರ ಬಳಗವನ್ನು ಸೇರಿದನು. ಅವನ ಕತ್ತಿನಲ್ಲಿ ಉದ್ದವಾದ ಮಾಲೆಯು ಪಿವಶಾನದಂತೆ, (ಉಯ್ಯಾಲೆಯಂತೆ) ಅತ್ತಿತ್ತ ಓಲಾಡುತ್ತ (ಜೂಗಾಡುತ್ತ) ಸುಂದರವಾಗಿ ಕಾಣುತ್ತಿತ್ತು, ಮಹದಾಕೃತಿಯ ಒಂಟಿಸಲಗವೊಂದು, ತಾವರೆಯಕೊಳಕ್ಕೆ ನುಗ್ಗಿ ತನ್ನ ಸೊಂಡಿಲಿನಲ್ಲಿ ಕಮಲವೊಂದನ್ನು ಹಿಡಿದು ತನ್ನ ಸಹವರ್ತಿಗಳಾದ ಕರಿಣಿಗಳ (ಹೆಣ್ಣಾನೆಗಳ) ಸಮೂಹವನ್ನು ಸೇರಿಕೊಳ್ಳುವಂತೆ ಕುಶಮಹೀಶನು ತನ್ನ ರಾಣಿಯರ ಮಧ್ಯೆ ಮಂಡಿತನಾಗಿ ರಾರಾಜಿಸಿದನು. ಮುದಿಸಿದ ತನ್ನ ಸ್ಕಂಧ ಭಾಗದಲ್ಲಿ ತಾವರೆ ಹೂವಿನಿಂದ ಅಲಂಕೃತಗೊಂಡು ಹೆಣ್ಣಾನೆಗಳ ಗುಂಪನ್ನು

ಸೇರಿದ ಗಂಡಾನೆಯಂತೆ, ಗಜರಾಜನು ಇವನು ಎಂಬಂತೆ (ದ್ವಿಪೇಂದ್ರ ಇವ) ತೋರ್ದನು.

ನೌರ್ವಿಮಾನಮಿವ=ನೌವಿಮಾನವತ್—ತಸ್ಮಾದವತೀರ್ಯ ವಿಲೋಲಹಾರಃ ಸನ್ ತಾಭಿಃಸ್ತ್ರೀಭಿಃ ಸಹಕರೇಣುಭಿಃ ಸಹಸ್ಕಂದಾವಲಗ್ನೋ ದ್ವೃತಪದ್ಮಿಸಂತ್ಪಾಟಿತ ನಲಿನೀ ಯಸ್ಯ ಸ ತಥೋಕ್ತಃ ಸನ್—ನದ್ಯೃತಶ್ಚ ಇತಿಕಪ್ರತ್ಯಯಃ (ಪಾಣಿನಿ) ನೌವಿಮಾನಾನ್ = ನೌವಿ ಮಾನಾಮಿವ (ಉಪಮಿತಕರ್ಮ) ತಸ್ಮಾತ್ = ಬೆಲೂನಿನಂತಹ ಆಕಾರದ ದೋಣಿ ಯಲ್ಲಿ ಕುಳಿತು.

69. ತತೋ ನೃಪೇಣಾನುಗತಾಃ ಸ್ತ್ರಿಯಸ್ತಾಃ ।
ಭ್ರಾಜಿಷ್ಣುನಾ ಸಾತಿಶಯಂ ವಿರೇಜುಃ ॥
ಪ್ರಾಗೇವ ಮುಕ್ತಾನಯನಾಭಿರಾಮಾಃ ।
ಪ್ರಾಪ್ಯೇಂದ್ರನೀಲಂ ಕಿಮುಕೋನ್ಮಯೂಖಮ್ ॥ ೬೯ ॥

ಸಮಸ್ತ ಶುಭಚಿಹ್ನೆಗಳಿಂದ ಶುಭಗುಣಗಣಗಳಿಂದ ಪರಿಪೂರ್ಣನಾದ ಪುರುಷಸಿಂಹ ನಾದ ಬಲಾಢ್ಯನಾದ ಕುಶಮಹಾರಾಜನು ಲಾವಣ್ಯವತಿಯರಾದ ತರುಣಿಯರ ತಂಡವನ್ನು ಸೇರಿದನು. ಮೊದಲೇ "ಪೊರ್ಲಕಂಟ್‌ದ" ಸುಂದರಿಯರು (ನವಮನ್ಮಥಾಕಾರೆಯರು) ಇದೀಗ ಜವ್ವನಿಗನಾದ ಸೌಂದರ್ಯದಲ್ಲಿ ಮನ್ಮಥನಂತೆ ತೋರುವ ಇಳಾಧಿಪತಿಯು ಜೊತೆಗೂಡಲು, ನವರತ್ನಗಳ ಮಧ್ಯೆ ಇಂದ್ರನೀಲಮಣಿಯು ಸೇರಿರಲು ಆ ರತ್ನ ಮಾಲೆಯ ಶೋಭೆಯು ಅಧಿಕಗೊಳ್ಳುವಂತೆ ಆ ಸ್ತ್ರೀಯರ ಶೋಭೆ ರಾಜದರ್ಶನದಿಂದ ಅಧಿಕಗೊಂಡಿತು. ಅವರು ಅಧಿಕವಾದ ಕಣ್ಣುಕೋರೈಸುವ ಸೌಂದರ್ಯದಿಂದ, ರೂಪಮಾ ರಾಶಿಯಿಂದ ವಿರಾಜಿಸಿದರು.

ತತ್ರೋ ಭ್ರಾಜಿಷ್ಣುನಾ = ಪ್ರಕಾಶಶೀಲೇನ—ಭುವಶ್ಚ ಇತಿ ಚಕಾರಾದಿ ಷ್ಣುಚ್ (ಪಾಣಿನಿ)—ನೃಪೇಣಾನುಗತಾಃ ಸಂಗತಾಸ್ತಾಃ ಸ್ತ್ರಿಯಃ ಸಾತಿಶಯಂ ಯಥಾ ತಥಾ ವಿರೇಜುಃ—ಪ್ರಾಗೇವ ಇಂದ್ರಂ ನೀಲಯೋಗಾತ್ ಪೂರ್ವಮೇವ—ಕೇವಲಾ ಅಪೀ ತ್ಯರ್ಥಃ—ಮುಕ್ತಾಮಣಯೋ ನಯನಾಭಿರಾಮಾಃ—ಭ್ರಾಜಿಷ್ಣುನಾ (ಭಾಜ್ + ಇಷ್ಣುಚ್) = ಪ್ರಕಾಶನಶೀಲೇನ = ಸಾತಿಶಯಕಾಂತಿಯಿಂದ.

70. ವರ್ಣೋದಕೈಃ ಕಾಂಚನಶೃಂಗಮುಕ್ತೈಃ ।
ತಮಾಯತಾಕ್ಷ್ಯಃ ಪ್ರಣಯಾದಸಿಂಚನ್ ॥
ತಥಾಗತಃ ಸೋಽತಿತರಾಂ ಬಭಾಸೇ ।
ಸಧಾತುನಿಷ್ಯಂದ ಇವಾದ್ರಿರಾಜಃ ॥ ೭೦ ॥

ಪ್ರಣಯಾರ್ಥಿಯಾದ ರಾಜನು ತಮ್ಮ ಬಳಿಯಲ್ಲಿ ಬಂದು ಸೇರಲು ಆ ಉತ್ಸವದ ತೀವ್ರತೆ (ಪ್ರಖರತೆ) ಹೆಚ್ಚಿತು. ಆ ಆಯತಾಕ್ಷಿಯರು (ಅಗಲವಾದ ಬೊಗಸೆಗಣ್ಣು ಗಳಿಂದ, ಉದ್ದವಾದ ಹುಬ್ಬಿನಿಂದ) ಚಿನ್ನದಿಂದ ರಚಿತವಾದ (ಕನಕಮಯ) ಜೀರ್ಕೊ ಳವಿಯಿಂದ (ಜಲಕೇಳಿಯುತ್ರ, ಓಕುಳಿಯಾಡಲು) ಬಣ್ಣಬಣ್ಣದ ನೀರನ್ನು ಸಾರ್ವಭೌಮ

ಕುಶನ ದೇಹದ ಮೇಲೆ ಎರಚಿ ಆನಂದಿಸಿದರು. (ಓಕುಳಿಯಾಡಿದರು) ಹೀಗೆ ಜಲಕೇಳಿ ಮುಂದುವರಿಯಲು ಆ ರಾಜನು ಧಾತುನಿಷ್ಯಂದ ಗಿರಿರಾಜನಂತೆ, ತೊಳಗಿ ಬೆಳಗಿದನು. ಆ ಸ್ಥಿತಿಯಲ್ಲಿ ಅತ್ಯಂತ ಸುಂದರನಾಗಿ ತೋರ್ದನು. ಕುಂಕುಮವಾದಿ ವರ್ಣೋದಕದಿಂದ ಸಿಕ್ತನಾಗಿ (ಬಣ್ಣದ ನೀರಿನಿಂದ ಒದ್ದೆಯಾಗಿ) ಕುಶನು ಪರ್ವತರಾಜನಾದ ಹಿಮಾಲಯನಂತೆ) ಗೈರಿಕಾದಿಧಾತುಮಿಶ್ರಿತ ನದಿಯ ನೀರು ಗಿರಿಯ ಅಗ್ರಭಾಗದಿಂದ ರಭಸದಿಂದ ಝರಿಯಂತೆ ಕೆಳಗಿಳಿದು ಬರಲು (ಸಧಾತುನಿಷ್ಯಂದ ಇವಾದ್ರಿರಾಜ) ಪರ್ವತರಾಜನು ಕಂಗೊಳಿಸುವಂತೆ ಕಣ್ಣಿಗೆ ಮನೋಹರವಾಗಿ ಕಂಡನು.

ತಂ ಕುಶಮ್—ಪ್ರಯುಕ್ತಾಃ ಕಾಂಚನಸ್ಯ ಶೃಂಗೈರ್ಮುಕ್ತಾ ನಿತ್ಯೈರ್ವರ್ಣೋದಕೈಃ ಕುಂಕುಮವಾದಿ ವರ್ಣದ್ರವ್ಯ ಸಹಿತೋದಕೈಃ ಪ್ರಣಯಾತ್ ಸ್ನೇಹಾದ ಸಿಂಚನ್—ಸಧಾತುನಿಷ್ಯಂದೋ = ಗೈರಿಕದ್ರವ್ಯಯುಕ್ತೋಽದ್ರಿರಾಜ ಇವ—ಕಾಂಚನಗಂಗಾ = ಚಿನ್ನದಿಂದ ರಚಿತವಾದ ಚಿಕ್ಕೊಳವೆ—ಅದ್ರಿರಾಜ = ಹಿಮಾಲಯ ಪರ್ವತ.

**71.** **ತೇನಾವರೋಧಪ್ರಮದಾಸಖೇನ ।**
**ವಿಗಾಹಮಾನೇನ ಸರಿದ್ವರಾಮ್ ತಾಮ್ ॥**
**ಆಕಾಶಗಂಗಾರತಿರಪ್ಸರೋಭಿಃ ।**
**ವೃತೋ ಮರುತ್ವಾನನುಯಾತಲೀಲಃ** ॥ ೭೧ ॥

ಸರಯೂ ತರಂಗಿಣಿಯಲ್ಲಿ ಅಂತಃಪುರದ ಸುಂದರಯುವತೀಸಖೀ ಜನರೊಂದಿಗೆ ತನ್ನ ಮನಸ್ಸು ತಣಿಯುವ ತನಕ ಜಲಕ್ರೀಡೆಯಾಡಿದ ಕುಶಸಾರ್ವಭೌಮನು ಆಕಾಶಗಂಗೆಯಲ್ಲಿ ದೇವಸ್ತ್ರೀಯರಾದ ಅಪ್ಸರೆಯರೊಂದಿಗೆ ಜಲಕ್ರೀಡೆಯಾಡುತ್ತಿರುವ (ಅಪ್ಸರಾವೃತನೆನಿಸುತಾಕಾಶಗಂಗೆಯೊಳು) ದೇವರಾಜನಾದ ದೇವೇಂದ್ರನಂತೆ ಶೋಭೆವಡೆದು ಕಂಗೊಳಿಸುತ್ತಿದ್ದನು.

ಆಕಾಶಗಂಗಾಯಾಂ ರತಿಃ—ಕ್ರೀಡಾ ಯಸ್ಯ ಸೋಽಪ್ಸರೋಭಿರ್ವೃತ ಆವೃತೋ ಮರುತ್ವಾನಿಂದ್ರಾಽನುಯಾತಲೀಲೋಽನುಕೃತಶ್ರೀಃ — ಅಭೂದಿತಿ ಶೇಷಃ — ಆಕಾಶಗಂಗಾ = ಆಕಾಶಗಂಗೆ, ದೇವಗಂಗೆ— ಮರುತ್ವಾನ್ = ಇಂದ್ರ, ಮಘವಾನ್ ॥

**72.** **ಯತ್ಕುಂಭಯೋನೇರಧಿಗಮ್ಯ ರಾಮಃ ।**
**ಕುಶಾಯ ರಾಜ್ಯೇನ ಸಮಂ ದಿದೇಶ ॥**
**ತದಸ್ಯ ಜೈತ್ರಾಭರಣಂ ವಿಹರ್ತುಃ ।**
**ಅಜ್ಞಾತಪಾತಂ ಸಲಿಲೇ ಮಮಜ್ಜ** ॥ ೭೨ ॥

ಶ್ರೀರಾಮಚಂದ್ರನು ಅಂದು ತನ್ನ ಔರಸಪುತ್ರನಾದ ಕುಶನಿಗೆ ಭಾರತ ಸಾಮ್ರಾಜ್ಯದ ಯುವರಾಜ ಪದವಿಯನ್ನು ಇತ್ತಾಗ (ಪಟ್ಟಾಭಿಷೇಕ) ಅದರ ಜೊತೆಯಲ್ಲಿ ಅಪಾರ ಮಹಿಮೆಯುಳ್ಳ ಜೈತ್ರಭೂಷಣವೆಂಬ ಹೇಮಭೂಷಣವೊಂದನ್ನು ಕೊಡುಗೆಯಾಗಿ ಕೊಟ್ಟನು. ಆ ಒಡವೆಯು ಬ್ರಹ್ಮಋಷಿಯಾದ, ಕೊಡದಲ್ಲಿ ಜನಿಸಿದ ಅಗಸ್ತ್ಯ ಮಹರ್ಷಿಯು ರಾಮನಿಗೊಲಿದು ಅಂದು ಇತ್ತ ದಿವ್ಯಾಭರಣ. ಆ ಆಭರಣವು (ಜೈತ್ರ

ಭೂಷಣವೆನುವ ಆ ತೊಡವು ನೀರಿನೊಳು) ಕುಶನಿಗೆ ಅರಿವಿಲ್ಲದೆಯೇ ಜಲಕ್ರೀಡೆಯಾಡು ವಾಗ ಸರಯೂ ನದಿಯ ಪವಿತ್ರ ಜಲದಲ್ಲಿ ಜಾರಿಬಿದ್ದಿತು. ಅದು ಅಯೋಧ್ಯೆಯ ಸಾಮ್ರಾಜ್ಯದಷ್ಟೇ ಬೆಲೆಯುಳ್ಳ, ಅಪಾರ ಮಹಿಮೆಯುಳ್ಳ ಉಡುಗೊರೆ. ಕುಂಭ ಸಂಭವನ ಉದಾರ ಕೊಡುಗೆ.

ಕುಂಭಯೋನೇರಗಸ್ತ್ಯಾದಧಿಗಮ್ಯ ಪ್ರಾಪ್ಯ—ರಾಜ್ಯ ಸಮಮೂಲ್ಯವಿತ್ಯರ್ಥಃ—ಸಲಿಲೇ ವಿಹರ್ತುಃ ಕ್ರೀಡಿತುರಸ್ಯ—ತಚ್ಚೈತ್ರಾಭರಣಂ ಜಯಶೀಲಮಾಭರಣ ಮಜ್ಞಾತ ಪಾತೇ ಸತ್—ಮಮಜ್ಜ ಮಪ್ರೋಢ — ಜೈತ್ರಾಭರಣಮ್ = ಜೈತ್ರಭೂಷಣವೆನುವ ಆಭರಣ ವಿಶೇಷ.

73. ಸ್ನಾತ್ವಾ ಯಥಾಕಾಮಮಸೌ ಸದಾರಃ ।
ತೀರೋಪಕಾರ್ಯಾಂ ಗತಮಾತ್ರ ಏವ ॥
ದಿವ್ಯೇನ ಶೂನ್ಯಂ ವಲಯೇನ ಬಾಹುಂ ।
ಅಪೋಢನೇಪಥ್ಯ ವಿಧಿರ್ದದರ್ಶ ॥ ೭೩ ॥

ಮನವೆಳಸಿದಂತೆ ತನ್ನ ಕಾಂತೆಯರೊಡನೆ ನೀರಾಟದೊಳು ನಲಿದು ಮಿಂದು (ನೀರಾಟ ದೊಳು ಕುಶನು ನಲಿದು ಮಿಂದು) ಸರಯೂ ತೀರದಲ್ಲಿ ವಿರಚಿಸಿರುವ ಪಟನಿಲಯಕೆ (ಡೇರೆ, ಶಿಬಿರ) ತೆರಳಿದನು. ಅಲ್ಲಿ ಬಟ್ಟೆಬರೆಗಳನ್ನು, ಉಡುಗೆತೊಡುಗೆಗಳನ್ನು ತೊಡು ತ್ತಿರಲು (ಕೃತಾಲಂಕಾರಕ್ರಿಯ) ಶೂನ್ಯವಾಗಿರುವ ಬರಿ ತೋಳನು ಕಂಡನು. ವಿಧಿಯ ಪ್ರಸಾದದಂತಿರುವ ಬಳೆಯು ಕಳೆದು ಹೋದುದನ್ನು ಆಗತಾನೇ ಅರಿತುಕೊಂಡನು.

ಯಥಾಕಾಮಂ ಯಥೇಚ್ಛಂ ಸ್ನಾತ್ವಾ ವಿಗಾಹ್ಯ—ಏವಾಪೋಢಾನೇಪಥ್ಯವಿಧಿರಕೃತ ಪ್ರಸಾಧನ ಏವ ದಿವ್ಯೇನ ವಲಯೇನ ಶೂನ್ಯಂ ಬಾಹುಂ ದದರ್ಶ—ತೀರೋಪ ಕಾರ್ಯಾಮ್ = ಪಟನಿಲಯಕೆ ಬಂದು ಅಪೋಢ = (ಉಪೋದ) = ಬಟ್ಟೆಗಳ ತೊಡು ಮದು.

74. ಜಯಶ್ರಿಯಃ ಸಂವನನಂ ಯತಸ್ತತ್ ।
ಅಮುಕ್ತಪೂರ್ವಂ ಗುರುಣಾ ಚ ಯಸ್ಮಾತ್ ॥
ಸ್ನೇಹೇsಸ್ಯ ನಭ್ರಂಶಮತೋ ನ ಲೋಭಾತ್ ।
ಸತುಲ್ಯ ಪುಷ್ಪಾಭರಣೋ ಹಿ ಧೀರಃ ॥ ೭೪ ॥

ಆ ಕೈಬಳೆಯು ಗುರುಗಳಾದ ಅಗಸ್ತ್ಯರು ಶ್ರೀರಾಮಚಂದ್ರನಿಗೆ ಇತ್ತ ದಿವ್ಯಾಭರಣ ಶ್ರೇಯೋಭಿವೃದ್ಧಿಕಾರಕ, ಜಯವನ್ನು ಕೊಡತಕ್ಕ, ವಶೀಕರಣ ಗುಣವುಳ್ಳ ಹೇಮ ಕಂಕಣ. ಅವನ ಪಿತೃ ಶ್ರೀರಾಮಚಂದ್ರನು ಧರಿಸಿದುದರಿಂದ ಅದನ್ನು ತಾನು ಕಳೆದುಕೊಂಡೆ ನಲ್ಲಾ ಎಂದು ಅವನು ಬಲು ನೊಂದುಕೊಂಡನು. (ತಂದೆ ಧರಿಸಿರ್ದುದನು ಜಯವಶೀ ಕರಣವನು) ಆದರೆ ಲೋಭದಿಂದ, ಪಿಸುಣತನದಿಂದ, ದುರಾಸೆಯಿಂದ ಸರ್ವಥಾ ಚಿಂತಿಸ ಲಿಲ್ಲ. ಯಾಕೆಂದರೆ ಧೀರನಾದವನು, ಬುಧನಾದವನು ಒಂದು ಹೂವನ್ನು ಮತ್ತು ಹೊನ್ನಿನ ಆಭರಣವನ್ನು ಸಮಾನದೃಷ್ಟಿಯಿಂದ ನೋಡುವನು. ಹೀಗಿರಲು ಮಹಾ

ಪ್ರಾಜ್ಞನಾದ, ಸ್ಥಿತಪ್ರಜ್ಞನಾದ ಸ್ಥಿರಬುದ್ಧಿಯು, ಬುಧನಾದ ಕುಶನಿಗೆ ಹೂವೇನು ? ತೊಡವೇನು ? ಎರಡೂ ಒಂದೇ (ಹೊನ್ನು, ಮಣ್ಣು ಎರಡೂ ಒಂದೇ).

ತದಾಭರಣಂ ಸಂಯಶ್ರಿಯಃ ಸಂವನನಂ=ವಶೀಕರಣಮ್–"ವಶಕ್ರಿಯಾಸಂವನನಮ್" ಇತ್ಯಮರಃ—ಆ ಮುಕ್ತ್ರಪೂರ್ವಂ ಪೂರ್ವಮಾಮುಕ್ತಮ್—ಧೃತಮಿತ್ಯರ್ಥಃ—ಸುಪ್ಸು ಪೇತಿ ಸಮಾಸಃ—ತಸ್ಯ ಸಃ—ತುಲ್ಯಪುಷ್ಪಾ=ಹೂವೇನು ಆಭರಣವೇನು, ಎರಡೂ ಒಂದೇ. (ಲೋಭರಹಿತನು).

75. ತತಃ ಸಮಾಜ್ಞಾಪಯದಾಶು ಸರ್ವಾನ್ ।
ಅನಾಯಿನಸ್ತದ್ವಿಚಯೇನದೀಷ್ಣಾನ್ ॥
ವಂಧ್ಯಶ್ರಮಾಸ್ತೇ ಸರಯೂಂ ವಿಗಾಹ್ಯ ।
ತಮೂಚುರಮ್ಲಾನಮುಖಪ್ರಸಾದಾಃ ॥ ೭೫ ॥

ಈಜುವುದರಲ್ಲಿ ಪರಿಣತರಾದ ಬೆಸ್ತರನ್ನು ಕರೆಸಿ ಆ ಒಡವೆಯನ್ನು ಭರದಿಂದ ಅರಸಲು ಅರಸನು ಆಜ್ಞಾಪಿಸಿದನು. ಆ ಕುಶಲರಾದ ಚದುರ ಬೆಸ್ತರು ಸರಯೂವಿನಲ್ಲಿ ಮುಳುಗಿ, ಹುಡುಕಾಡಿದರು. ಅವರು ನಿಷ್ಫಲ ಪರಿಶ್ರಮಿಗಳಾದ ದಡಕ್ಕೆ ಮರಳಿದರು. ಆದರೆ ಹೇಮಕಂಕಣ ಮಾತ್ರ ದೊರಕಲಿಲ್ಲ. ಪರಿಶ್ರಮ ಹೊಂದಿದ ಗಂಭೀರಮುಖದಿಂದ ಪ್ರಕಾಶಿಸುವ ಅವರು ತಮ್ಮ ರಾಜನ ಬಳಿಗೆ ತೆರಳಿ ತಮ್ಮ ನಿಷ್ಫಲಯತ್ನದ ಬಗ್ಗೆ ವರದಿ ಮಾಡಿದರು (ನಿಷ್ಫಲಪರಿಶ್ರಮರು).

ನದ್ಯಾಂ ಸ್ನಾಂತಿಕೌಶಲೇನೇತಿ ನದೀಷ್ಣಾಃ—ತಾನ್—ಸುಪಿ ಇತಿ ಯೋಗವಿಭಾಗಾತ್ಕ ಪ್ರತ್ಯಯಃ—"ನಿನದೀಭ್ಯಾಂ ಸ್ನಾತೇಃ ಕೌಶಲೇ" ಇತಿ ಷತ್ವಮ್—ಸರ್ವಾನಾಯಿನೋ ಜಾಲಿಕಾನ್ ಸ್ವಸ್ಯಾಭರಣಸ್ಯ ವಿಚಯೇಽನ್ವೇಷಣೇ ನಿಮಿತ್ತ ಆಶುಸಮಾಜ್ಞಾಪಯದಾದಿ ದೇಶ—ತ ಅನಾಯಿನಃ ಸರಯೂಂ ವಿಗಾಹ್ಯ—ವಿಲೋಡ್ಯ ವಂಧ್ಯ ಶ್ರಮಾ=ವಿಫಲ ಪ್ರಯಾಸಾಸ್ಸಂತಾಪಿ—ನದೀಷ್ಣಾನ್ = ನದಿಯಲ್ಲಿ ಮುಳುಗಿ ಅರಸುವ ಜಾಣರು. ಮೊಗ ವೀರ ಬಾಂಧವರು.

76. ಕೃತಪ್ರಯತ್ನೋ ನ ಚ ದೇವಲಬ್ಧಂ ।
ಮಗ್ನಂಪಯಸ್ಯಾಭರಣೋತ್ತಮಂ ತೇ ॥
ನಾಗೇನ ಲೌಲ್ಯಾತ್ ಕುಮುದೇನ ನೂನಂ ।
ಉಪಾತ್ತಮಂತರ್ಹ್ರದವಾಸಿನಾ ತತ್ ॥ ೭೬ ॥

"ಹೇ ದೇವ ನಾವು ಸರ್ವವಿಧದ ಪ್ರಯತ್ನದಿಂದ ಆ ಉತ್ತಮ ಆಭರಣದ ಶೋಧನ ಕಾರ್ಯವನ್ನು ನಡೆಸಿದರೂ ಸಿಗದೆ ಪರಾಙ್ಮುಖರಾದೆವು. ಅದು ದೊರಕದಿರಲು ಬಹುಶಃ ಸರಯೂವಿನ ಆಳವಾದ ಮಡುವಿನಲ್ಲಿ ನಾಗರಾಜನಾದ ಕುಮುದನು ದುರಾಶೆಯಿಂದ ಅದನ್ನು ಒಯ್ದು ತನ್ನ ಬಳಿಯಲ್ಲಿ ಇಟ್ಟುಕೊಂಡಿರಬಹುದು. ಹೀಗೆಂದು ನಾವು ಸಂಶಯ ಪಡಲು ಅವಕಾಶವಿದೆ" ಎಂದು ಆ ಗಂಗಾಮಂತಸ್ಥರು ವಿತರ್ಕಿಸಿ ನುಡಿದರು.

ಹೇ ದೇವಃ ಪ್ರಯತ್ನಃ ಕೃತಃ—ಪಯಸಿ ಮಗ್ನಂ ತ ಆಭರಣೋತ್ತಮಂ ನ ಚ ಲಬ್ಧಮ್—ಕಿಂತು ತದಾಭರಣಮಂತರ್ಹ್ರದವಾಸಿನಾ ಕುಮುದೇನ = ಕುಮುದಾಖ್ಯೇನ ನಾಗೇನ = ಪನ್ನಗೇನ ಲೌಲ್ಯಾಲ್ಲೋಭಾದುಪಾತ್ತಂ ಗೃಹೀತಮ್—ಉಪಾತ್ತಮ್ = ಗೃಹೀತಮ್—ನೂನಂ = ನೂನಂ ವಿತರ್ಕೇ ನಿಶ್ಚಯೇ ವಾ ॥

77. **ತತಃ ಸ ಕೃತ್ವಾ ಧನುರಾತತಜ್ಯಂ ।**
**ಧನುರ್ಧರಃ ಕೋಪವಿಲೋಹಿತಾಕ್ಷಃ ॥**
**ಗಾರುತ್ಮತಂ ತೀರಗತಸ್ತರಸ್ವೀ ।**
**ಭುಜಂಗನಾಶಾಯ ಸಮಾದದೇಽಸ್ತ್ರಮ್ ।** ॥ ೭೭ ॥

ಬಳಿಕ ಆ ಮಹಾಧನುರ್ಧರನಾದ, ಮಹಾಬಲವಂತನಾದ ಕುಶನು ಕೋಪದಿಂದ ಕೆಂಪಾದ ಕಣ್ಣುಳ್ಳವನಾಗಿ (ಕೋಪಾರುಣಾಂಬಕನು) ನದೀತೀರಕ್ಕೆ ನಡೆದನು. ಅವನು ಬಿಲ್ಲಿಗೆ ಸಿಂಜನಿಯನ್ನು ಜೋಡಿಸಿದನು. ಧನುಷ್ಟಂಕಾರಮಾಡಿ ಬಿಲ್ಲಿನ ಹಗ್ಗವನ್ನು ಮಿಡಿದನು. ಆ ಉರಗನನ್ನು ಬಗ್ಗುಬಡಿಯಲು (ಕೊಲಲೆಂದು) ಬಿಲ್ಲನೇರಿಸಿ ನಿಂದು ಗಾರುಡಾಸ್ತ್ರವನು ಭರದಿಂದ ಸೆಳೆದನು. ಗರುಡದೇವತಾಕವಾದ ಅಸ್ತ್ರವನ್ನು ಜೋಡಿಸಿ ಆ ಭುಜಗನ (ಸರ್ಪರಾಜನ) ನಾಶಕ್ಕೆ ಅಣಿಯಾಗಿ ನಿಂತನು.

ಗಾರುತ್ಮತಂ ಗರುತ್ಮದ್ದೇವತಾಕ ಮಂತ್ರಂ ಸಮಾದದೇ—ಕೋಪ = ಕೋಪಾದ್ ವಿಶೇಷೇಣ ಲೋಹಿತೇ ಅಕ್ಷಿಣೀಯಸ್ಯ (ಬಹು) ಸಃ ॥

78. **ತಸ್ಮಿನ್ ಹ್ರದಃ ಸಂಹಿತಮಾತ್ರ ಏವ ।**
**ಕ್ಷೋಭಾತ್ ಸಮಾವಿದ್ಧ ತರಂಗಹಸ್ತಃ ॥**
**ರೋಧಾಂಸಿ ನಿಘ್ನನ್ನವಪಾತಮಗ್ನಃ ।**
**ಕರೀವ ವನ್ಯಃ ಪರುಷಂ ರರಾಸ** ॥ ೭೮ ॥

ತೊಡುವುದೇ ತಡ. ಕೂಡಲೇ ಆ ಕಣೆಯು ಅತಿರಭಸದಿಂದ ಚಲಿಸುತ್ತ ತೆರೆಕೈಗಳನ್ನು ಬಡಿದು ಕದಡಿ ಉತ್ಪಾತವನ್ನುಂಟುಮಾಡಿತು. ನದಿಯ ನೀರು ಅಲ್ಲೋಲ ಕಲ್ಲೋಲವಾಯಿತು. ಕೊಳ್ಳದಲ್ಲಿ ಬಿದ್ದ ಒಂದು ದೊಡ್ಡ ಕಾಡಾನೆಯಂತೆ ಭೋರ್ಗರೆದು ಘರ್ಜಿಸಿತು. ಪರುಷರವಂಗೈದು ಸಿಡಿಲಂತೆ ಭೋರ್ಗರೆಯಿತು.

ಸಮಾವಿದ್ಧಾಃ=ಸಂಘಟ್ಟಿತಾಸ್ತರಂಗಾ ಏವ ಹಸ್ತಾ ಯಸ್ಯ ಸಃ।ರೋಧಾಂಸಿ ನಿಘ್ನನ್ ಪಾತಯನ್—ಅವಪಾತೇಗಜಗ್ರಹಣಗರ್ತೇ ಮಗ್ನಃ ಪತಿತಃ—ಅವಪಾತಸ್ತು ಹಸ್ತ್ಯರ್ಥೇ ಗರ್ತಶ್ಛನ್ನಸ್ತೃಣಾದಿನಾ'' ಇತಿ ಯಾದವಃ—ಸಮಾವಿದ್ಧಾಃ ತರಂಗಾ—ಏವ ಹಸ್ತಾ ಯಸ್ಯ (ಬಹು) ಸಃ = ತೆರೆಕೈಗಳಿಂದ ಅವಪಾತ ಮಗ್ನಃ (ಸಪ್ತಮೀ ತತ್ಪುರುಷ) ಕೊಳ್ಳದಲ್ಲಿ ಬಿದ್ದಿರುವ ॥

79. **ತಸ್ಮಾತ್ ಸಮುದ್ರಾದಿವ ಮಥ್ಯಮಾನಾತ್ ।**
**ಉದ್ವೃತ್ತ ನಕ್ರಾತ್ ಸಹಸೋನ್ಮಮಜ್ಜ ॥**

**ಲಕ್ಷ್ಮ್ಯೇವ ಸಾರ್ಧಂ ಸುರರಾಜವೃಕ್ಷಃ ।**
**ಕನ್ಯಾಂ ಪುರಸ್ಕೃತ್ಯ ಭುಜಂಗರಾಜಃ ॥ ೭೯ ॥**

ಸರಯೂ ನದಿಯು ಕೊತಕೊತನೆ ಕುದಿಯತೊಡಗಿತು. ಮೊಸಳೆಗಳು ಕ್ಷೋಭೆಗೊಂಡುವು. ಸಮುದ್ರಮಂಥನಕಾಲದಲ್ಲಿ ಮಹಾಲಕ್ಷ್ಮೀದೇವಿಯೊಂದಿಗೆ (ಲಕ್ಷ್ಮೀ ಕ್ಷೀರಸಾಗರರಾಜತನಯೇ । ಸೌಂದರ್ಯಮುದ್ರಾಂಕಿತೇ ॥) ಮೇಲಕ್ಕೆದ್ದು ಬರುತ್ತಿರುವ ಸುರರಾಜತರುವಾದ ಪಾರಿಜಾತ, ಕಲ್ಪವೃಕ್ಷದುತೆ, ಕುಗೊಳಿಸುತ್ತ ಸರ್ಪರಾಜನಾದ ಕುಮುದನು ಪತ್ನಿಸಮೇತ ಮೇಲಕ್ಕೆದಿದನು. ಕನ್ಯೆಯಾದ ತನ್ನ ತಂಗಿ ಕುಮುದಿನಿಯನ್ನು ಮುಂದಿಟ್ಟುಕೊಂಡು, ಕ್ಷೋಭೆಗೊಂಡ ಸರಯೂ ನದಿಯ ಆಳವಾದ ಮಡುವಿನಿಂದ ಆ ಭುಜಂಗರಾಜನು. ಮೂಡಿಬಂದನು.

ಲಕ್ಷ್ಮ್ಯಾ ಸಾರ್ದಂ ಸುರರಾಜಸ್ಯೇಂದ್ರಸ್ಯ ವೃಕ್ಷಃ=ಪಾರಿಜಾತ ಇವ ಕನ್ಯಾಂ ಪುರಸ್ಕೃತ್ಯ ಭುಜಂಗರಾಜಃ=ಕುಮುದಃ ಸಹಸೋನ್ಮಮಜ್ಜ ॥ ಉದ್‌ವೃತ್ತನಕ್ರಾತ್ = ಉದ್‌ವೃತ್ತಾ ನಕ್ರಾ ಯಸ್ಮಿನ್ (ಬಹು) ಸ್ಮಾತ್—ಕ್ಷುಭಿತನಕ್ರಾಕುಲವೆ = ಕ್ಷೋಭೆಗೊಂಡ ಮೊಸಳೆಗಳು—ಕನ್ಯಾಮ್ = ಕನ್ಯೆಯಾದ ತನ್ನ ತಂಗಿಯನ್ನು ॥

**80. ವಿಭೂಷಣಪ್ರತ್ಯುಪಹಾರಹಸ್ತಂ ।**
**ಉಪಸ್ಥಿತಂ ವೀಕ್ಷ್ಯ ವಿಶಾಂಪತಿಸ್ತಮ್ ॥**
**ಸೌಪರ್ಣಮಸ್ತ್ರಂ ಪ್ರತಿಸಂಜಹಾರ ।**
**ಪ್ರಹ್ವೇಷ್ವನಿರ್ಬಂಧರುಷೋಹಿ ಸಂತಃ ॥ ೮೦ ॥**

ವಿಭೂಷಣ ಪ್ರತ್ಯುಪಹಾರಹಸ್ತನಾಗಿ, ಕೈಯಲ್ಲಿ ಅಮೂಲ್ಯವಾದ ಆಭರಣವನ್ನು ಹಿಡಿದು ಅದನ್ನು ಮರಳಿಕೊಡಲು ಬಂದಿರುವ, ಕೈಜೋಡಿಸಿ ನಮಸ್ಕರಿಸುತ್ತಿರುವ ಕುಮುದನನ್ನು ಕಂಡ ಕುಶನು ತನ್ನ ಶ್ರೇಷ್ಠವಾದ ಸುಪರ್ಣಾಸ್ತ್ರವನ್ನು ಹಿಂದಕ್ಕೆ ಸೆಳೆದುಕೊಂಡನು. ಒಂದು ಕ್ಷಣ ರುದ್ರನಂತೆ ಕ್ರೋಧೋದ್ರಿಕ್ತನಾದ ಕುಶನು ಅತ್ಯಂತ ಶಾಂತನಾಗಿ ತೋರ್ದನು. ಸದ್ಗುಣವುಳ್ಳ ಮಹಾಪುರುಷರು ದೀನದಲಿತರ ಮೇಲೆ ಕರುಣೆ ತೋರುವರು. ಶರಣಾಗತರನ್ನು ರಕ್ಷಿಸಲು ಮುಂದಾಗುವರು. ಅವರ ಕೋಪ ಕ್ಷಣಿಕ. ಅವರು ನಿಷ್ಕಾರಣವಾಗಿ ರಕ್ತಪಾತಮಾಡಲಾರರು. ಅವರ ಕೋಪ ಹಿಡಿತದಲ್ಲಿರುವುದು. ಅವರು ದಯಾ ಶೀಲರು. ಹಂತಕರಲ್ಲ (ಕೊಲೆಗಡುಕರಲ್ಲ) ಜೀವರಕ್ಷಕರು.

"ದ್ವೌ ವಿಶೌ ವೈಶ್ಯಮನುಜೌ" ಇತ್ಯಮರಃ—ವಿಶಾಂಪತಿಃ=ಮನುಜಪತಿಃ (ಕುಶಃ)—ವಿಭೂಷಣಾ (ಪ್ರತ್ಯುಪಹಾರಃ)—ವಿಭೂಷಣಂ ಪ್ರತ್ಯುಪಹರತಿ ಪ್ರತ್ಯರ್ಪಯತೀತಿ ವಿಭೂಷಣಪ್ರತ್ಯುಪಹಾರಃ—ಕರ್ಮಣ್ಯಮ್ (ಪಾಣಿನಿ) ವಿಭೂಷಣಪ್ರತ್ಯುಪಹಾರೋ—ಪ್ರತಿಸಂಜಹಾರ—ಪ್ರಹ್ವೇಷು ನಮ್ರೇಷ್ವನಿರ್ಬಂಧರುಷೋಽನಿಯತಕೋಪಾ ಹಿ= ಸದ್ಗುಣವುಳ್ಳವರು ಒಮ್ಮೆ ಕೋಪಾವಿಷ್ಟರಾದರೂ ಬೇಗನೇ ಶಾಂತರಾಗಿ, ಅನುಕಂಪ ತೋರುವರು.

81\. ತ್ರೈಲೋಕ್ಯಪ್ರಭವಂ ಪ್ರಭಾವಾತ್ ।
ಕೃಶಂ ದ್ವಿಷಾಮಂಕುಶ ಮಸ್ತ್ರವಿದ್ವಾನ್ ॥
ಮಾನೋನ್ನತೇನಾಪ್ಯಭಿವಂದ್ಯ ಮೂರ್ಧ್ನಾ ।
ಮೂರ್ಧಾಭಿಷಿಕ್ತಂ ಕುಮುದೋ ಬಭಾಷೇ ॥ ೮೧ ॥

ಮಾನಧನನಾದ ಕುಮುದನು ಗೌರವದಿಂದೆತ್ತಿರುವ ತನ್ನ ತಲೆಯನ್ನು ತುಸು ಬಾಗಿ ಮೂರು ಲೋಕದ ಸ್ವಾಮಿಯಾದ ಶ್ರೀರಾಮನ (ಮಹಾವಿಷ್ಣುವಿನ) ಜ್ಯೇಷ್ಠಪುತ್ರನಾದ ಕುಶನನ್ನು ಆದರಪೂರ್ವಕ ವಂದಿಸಿದನು. ಆ ಕುಶನಾದರೋ ಅಸ್ತ್ರವಿದರಲ್ಲಿ ಶ್ರೇಷ್ಠನು. ಸಕಲ ದಿವ್ಯಾಸ್ತ್ರಗಳನ್ನು ಬಲ್ಲ ಅಜೇಯವೀರನು. ಮೂರ್ಧಾಭಿಷಿಕ್ತನಾದ (ಪಟ್ಟಾಭಿಷಿಕ್ತನಾದ) ವೈರಿಕುಲಕ್ಕೆ ಅಂಕುಶಪ್ರಾಯನಾದ ಆ ಕುಶಭೂಪತಿಯೊಡನೆ ಈ ತೆರನಾಗಿ ಉಸುರಿದನು.

ಅಸ್ತ್ರಂ ವಿದ್ವಾನಸ್ತ್ರವಿದ್ವಾನ್=ಶಸ್ತ್ರಪಂಡಿತ—ನ ಲೋಕ ಇತ್ಯಾದಿನಾ ಷಷ್ಠೀಸಮಾಸ ನಿಷೇಧಃ—ದ್ವಿತೀಯಾಶ್ರಿತಾ —ಇತ್ಯತ್ರ ಗಮ್ಯಾದೀನಾಮುಪಸಂಖ್ಯಾನಾ ದ್ವಿತೀಯಾ" ಇತಿ ಯೋಗವಿಭಾಗಾದ್ವಾಸಮಾಸಃ (ಪಾಣಿನಿ)—ಗಾರುಡಾಸ್ತ್ರಮಹಿಮಾಭಿಜ್ಞ ಇತ್ಯರ್ಥಃ ತ್ರಯೋಲೋಕಾಸ್ತ್ರೈಲೋಕ್ಯಮ್—ಚಾತುರ್ವರ್ಣ್ಯಾದಿತ್ವಾತ್ ಸ್ವಾರ್ಥೇ ಷ್ಯಞ್ ಪ್ರತ್ಯಯಃ—ತ್ರೈಲೋಕ್ಯನಾಥೋ ರಾಮಃ ಪ್ರಭವೋ ಜನಕೋ ಯಸ್ಯ ತಮ್—ಅತ ಏವ ಪ್ರಭಾವಾದ್ದ್ವಿಷಾಮಂ ಕುಶಂ ನಿವಾರಕಂ ಮೂರ್ಧಾಭಿಷಿಕ್ತಂ=ರಾಜಾನಂ—ಮಾನೋನ್ನತೇನಾಪಿ ಮೂರ್ಧ್ನಾಭಿವಂದ್ಯ ಪ್ರಣಮ್ಯ ಬಭಾಷೇ ॥

82\. ಅವ್ಯಕ್ತಾಯಾಂತರಮಾನುಷಸ್ಯ ।
ವಿಷ್ಣೋಃ ಸುತಾಖ್ಯಾಮಪರಾಂ ತನುಂ ತ್ವಾಮ್ ॥
ಸೋಽಹಂ ಕಥಂ ನಾಮ ತವಾಚರೇಯಂ ।
ಆರಾಧನೀಯಸ್ಯ ಧೃತೇರ್ವಿಘಾತಮ್ ॥ ೮೨ ॥

"ಹೇಪರಂತಪ, ಹೇ ಮಹಾಬಾಹು (ಹೇ ಮಹಾಭಾಗ). ಸುರರ ಕಾರ್ಯಕ್ಕಾಗಿ ಮಾನವಾಕೃತಿಯನ್ನು ತಳೆದ ಶಾಶ್ವತನಾದ ಮಹಾವಿಷ್ಣುವಿನ ಬೇರೊಂದು ರೂಪು ನೀನು. ಮೂರುಲೋಕದ ಸ್ವಾಮಿಯಾದ ಮಹಾವಿಷ್ಣುವಿನ ಲೀಲೆಯಿಂದ ಉದ್ಭವಿಸಿದ ಮಗನಾಗಿ ಜನಿಸಿರುವ ನಿನ್ನನ್ನು ತಿಳಿದಿರುವ ನಾನು ಉಪೇಕ್ಷಿಸಲು ಹೇಗೆ ಸಾಧ್ಯ ? ನೀನು ಎಲ್ಲರಿಗೂ ಪೂಜ್ಯನು. ಮೂರುಲೋಕಗಳಿಗೂ ಆದರಣೀಯನು. ಸತ್ಯಪರಾಕ್ರಮಿಯು. ನಿನ್ನ ಸಂತೋಷಕ್ಕೆ ಅಡ್ಡಿಯನ್ನು ಒಡ್ಡಲು ನಾನು ಹೇಗೆ ಇಚ್ಛಿಸಲಿ ? ಸರ್ವಥಾ ಇಚ್ಛಿಸಲಾರೆನು."

"ಓದನಾನ್ತರಸ್ತಂಡುಲ" ಇತಿ ವತ್ ಕಾರ್ಯಾಂತರಃ ಕಾರ್ಯಾರ್ಥಃ—ಸ್ಥಾನಾತ್ಮೀಯಾನ್ ಯಂತಾದರ್ಥ್ಯರಂಧ್ರಾಂತರ್ಯೋಷು ಚಾನ್ತರಮ್" ಇತಿ ಶಾಶ್ವತಃ-ಸಜಾನನ್ನಹಮಾರಾಧನೀಯಸ್ಯೋಪಾಸ್ಯಸ್ಯ ತವ ಧೃತೇಃ ಪ್ರೀತೇಃ—ಧೃಪ್ರೀತೌ" ಇತಿ ಧಾತೋಃ ಸ್ತ್ರೀಯಾಂ ಕ್ತಿನ್—ವಿಘಾತಂ ಕಥಂ ನಾಮಾಚರೇಯಮ್—ಅಸಂಭಾವಿತಮಿತ್ಯರ್ಥಃ—

ಕಾರ್ಯಾಂತರಮಾನುಷಸ್ಯ ವಿಷ್ಣೋಃ = ನರರೂಪವನ್ನು ತಳೆದು ಮಹಾವಿಷ್ಣುವು ಸುರರ ಕಾರ್ಯಕ್ಕಾಗಿ.

83. ಕರಾಭಿಘಾತೋತ್ಥಿತಕಂದುಕೇಯಂ ।
ಆಲೋಕ್ಯ ಬಾಲಾತಿಕುತೂಹಲೇನ ॥
ಹೃದಾತ್ಪತಜ್ಜ್ಯೋತಿರಿವಾಂತರಿಕ್ಷಾತ್ ।
ಆದತ್ತ ಜೈತ್ರಾಭರಣಂ ತ್ವದೀಯಮ್ ॥ ೮೩ ॥

ಈ ಕನ್ಯೆಯು ಆಟವಾಡುತ್ತಿರಲು ಚೆಂಡನ್ನು ಮೇಲಕ್ಕೆಸೆದಳು. ಅದನ್ನು ಪುನಃ ಹಿಡಿಯಲು ಕಾತುರಳಾಗಿ ಮೇಲಕ್ಕೆ ನೋಡುತ್ತಿರಲು, ಆಕಾಶದಿಂದ ಪತನವಾಗುತ್ತಿರುವ ನಕ್ಷತ್ರಪುಂಜದಂತೆ ಪ್ರಕಾಶಮಾನವಾಗಿ ಹೊಳೆಯುತ್ತಿರುವ ಈ ನಿನ್ನ ದಿವ್ಯಾಭರಣವು (ಜೈತ್ರಾಭರಣವು) ಅತ್ಯಂತ ರಭಸದಿಂದ ಕೆಳಕ್ಕೆ ಬೀಳುತ್ತಿರುವುದನ್ನು ಕೌತುಕದಿಂದ ಕಂಡು ಅದನ್ನು ಒಡನೆಯೇ ತನ್ನೆರಡು ಕೈಗಳಲ್ಲಿ ಹಿಡಿದು ಎತ್ತಿಕೊಂಡಳು.

ಕರಾಭಿಘಾತೇನೋತ್ಥಿತ ಊರ್ಧ್ವಂಗತ ಕಂದುಕೋ ಯಸ್ಯಾಃ ಸಾಕಂದುಕಾರ್ಥಾಮೂರ್ಧ್ವಂ ಪಶ್ಯಂತೀತ್ಯರ್ಥಃ—ಇಯಂ ಬಾಲಾ ಅಂತರಿಕ್ಷಾಜ್ಜ್ಯೋರಿಕ್ಷಾಜ್ಜ್ಯೋತಿರ್ನಕ್ಷತ್ರಮಿವ—''ಜ್ಯೋತಿರ್ಭದ್ಯೋ ತದ್ದೃಷ್ಟಿಷು'' ಇತ್ಯಮರಃ—ಹೃದಾತ್ಪತತ್ತ್ವದೀಯಂ ಜೈತ್ರಾಭರಣ ಮಾಲೋಕ್ಯ—ಅತಿಕುತೂಹಲೇನಾತ್ಯಂತಕೌತುಕೇನ—ಆದತ್ತ=ಗೃಹ್ಣಾತ್—ಕರಾಭಿಘಾತೋ ಕರಾಭಿಘಾತೇನ ಕಂದುಕೋ ಯಸ್ಯಾಃ (ಬಹು) ಸಾ=ಕೈಚೆಂಡಿನಾಟದಲಿ, ಚೆಂಡನು ಮೇಲಕ್ಕೆಸೆದು, ಮೊಗವೆತ್ತಿ ಚೆಂಡನ್ನು ನೋಡುತ್ತಿರಲು.

84. ತದೇತದಾಜಾನುವಿಲಂಬಿನಾ ತೇ ।
ಜ್ಯಾಘಾತರೇಖಾ ಕಿಣಲಾಂಛನೇನ ॥
ಭುಜೇನ ರಕ್ಷಾ ಪರಿಘೇಣ ಭೂಮೇಃ ।
ಉಪೈತು ಯೋಗಂ ಪುನರಂ ಸಲೇನ ॥ ೮೪ ॥

ನೀನು ಆಜಾನುಬಾಹು. ಜಗದರಕ್ಷಣೆಗಾಗಿ ಮೊಣಕಾಲನ್ನು ಮುಟ್ಟುತ್ತಿರುವ ದೀರ್ಘಬಾಹುಗಳು ಅಗುಳಿಯಂತೆ (ಪರಿಘದಂತೆ) ಇದ್ದು ಭೂಮಿಯನ್ನು ಎಲ್ಲಾ ಕಾಲದಲ್ಲೂ ರಕ್ಷಿಸಲು ಶಕ್ತವಾಗಿವೆ. ಬಿಲ್ಲಿನಜ್ಯಾಘಾತದಿಂದ ಜಡ್ಡುಗಟ್ಟಿರುವ ಆ ನಿನ್ನ ಭುಜವು, ಆ ದಿವ್ಯಾಭರಣವನ್ನು ಸ್ಥಿರವಾಗಿ ಅಲಂಕರಿಸಿಕೊಂಡಿರಲಿ. ಮಹಾಭಾಗ್ಯಶಾಲಿಯಾದ, ಶೌರ್ಯವೀರ್ಯಧುರಂಧರನಾದ ನಿನ್ನ ಭುಜವಲಯವನ್ನು ಮಹಾಯೋಗದಿಂದ ಇದು ಸ್ಥಿರವಾಗಿ ಅಲಂಕರಿಸುವಂತಾಗಲಿ.

ಕಿಣಂ = ಚಿಹ್ನಂ—ಪರಿಘೇಣ = ರಕ್ಷಾರ್ಗಲೇನ—ಪರಿಘೋ ಯೋಗಭೇದಾಸ್ತ್ರಮುದ್ಗರೇಽರ್ಗಲಘಾತಯೋಃ'' ಇತ್ಯಮರಃ—ಅಂಸಲೇನ = ಬಲವತಾ—ಏತ್ತೈರ್ವಿಶೇಷಣೈರ್ಮಹಾಭಾಗ್ಯಶೌರ್ಯಧುರಂಧರತ್ವಬಲವತ್ತ್ವಾದಿಗಮ್ಯತೇ — ಆಜಾನುವಿಲಂಬಿನಾ= ನಿಡುತೋಳುಗಳು.

85. ಇಮಾಂ ಸ್ವಸಾರಂ ಚ ಯವೀಯಸೀಂ ಮೇ ।
ಕುಮುದ್ವತೀಂ ನಾರ್ಹಸಿ ನಾನುಮಂತುಮ್ ॥
ಆತ್ಮಾಪರಾಧಂ ನುದತೀಂ ಚಿರಾಯ ।
ಶುಶ್ರೂಷಯಾ ಪಾರ್ಥಿವಪಾದಯೋಸ್ತೇ ॥ ೮೫ ॥

"ಹೇ ಪಾರ್ಥಿವ ರಾಜನೆ, ಹೇ ಕ್ಷತ್ರಿಯಕುಲೋತ್ತಮನೆ, ಇವಳು ನನ್ನ ಅಕ್ಕರೆಯ ತಂಗಿ. ಅವಳಿಂದು ತಾನು ಗೈದ ಆತ್ಮಾಪರಾಧಕ್ಕೆ ಪ್ರತಿಯಾಗಿ ನಿನ್ನ ಸಹಧರ್ಮಿಣಿಯಾಗಿದ್ದು, ನಿನ್ನ ಚರಣಸೇವೆಯನ್ನು, ಜೀವನಪರ್ಯಂತ ಮಾಡಿ, ಆ ಅಪರಾಧವನ್ನು ಹೋಗಲಾಡಿಸಲು ಬಯಸಿರುವಳು. ಇವಳನ್ನು (ಈ ಕುಮುದ್ವತಿಯನ್ನು ಎನ್ನ ಅಕ್ಕರೆಯ ತಂಗಿಯನ್ನು) ನಿನ್ನ ಅರ್ಧಾಂಗಿಯಾಗಿ ಸ್ವೀಕರಿಸಿ ಪತಿಕರಿಸು. ಇವಳು ಸಕಲಗುಣಸಂಪನ್ನಳು, ನಿನಗೆ ತಕ್ಕ ಮಡದಿ" ಎಂದನು.

ತೇ ತವ ಪಾದಯೋಶ್ಚಿರಾಯ=ಶುಶ್ರೂಷಯಾ ಪರಿಚರ್ಯಯಾ—"ಶುಶ್ರೂಷಾ ಶ್ರೋತುಮಿಚ್ಛಾಯಾಂ ಪರಿಚರ್ಯಾಪ್ರದಾನಯೋಃ" ಇತಿ ವಿಶ್ವಃ—ಆತ್ಮಾಪರಾಧಮಾಭರಣಗ್ರಹಣರೂಪಂ ನುದತೀಮ್—"ಆಶಂಸಾಯಾಂ ಭೂತವಚ್ಚ" ಇತಿ ಚಕಾರಾದ್ವರ್ತಮಾನಾರ್ಥೇ ಶತೃಪ್ರತ್ಯಯಃ — ಅಚ್ಛ್ಯೋರ್ನದ್ಯೋರ್ನುಮ್ ಇತ್ಯಸ್ಯ ವೈಕಲ್ಪಿಕತ್ವಾನ್ನುಮ್ ಭಾವಃ—ಸ್ವಸಾರಂ=ಭಗಿನೀಂ—ನುದತೀಂ=ಅಪರಾಧವನ್ನು ಕಳೆದುಕೊಳ್ಳಲು.

86. ಇತ್ಯೂಚಿವಾನುಪಹೃತಾಭರಣಃ ಕ್ಷಿತೀಶಂ ।
ಶ್ಲಾಘ್ಯೋ ಭವಾನ್ ಸ್ವಜನ ಇತ್ಯನುಭಾಷಿತಾರಮ್ ॥
ಸಂಯೋಜಯಾಂ ವಿಧಿವದಾಸ ಸಮೇತಬಂಧುಃ ।
ಕನ್ಯಾಮಯೇನ ಕುಮುದಃ ಕುಲಭೂಷಣೇನ ॥ ೮೬ ॥

ಈ ತೆರನುಡಿದು ಆ ನಾಗರಾಜನಾದ ಕುಮುದನು ಜೈತ್ರಭೂಷಣವೆಂಬ ಆಭರಣವನ್ನು ನಲವಿನಿಂದ ಕುಶಸಾರ್ವಭೌಮನಿಗೆ ಒಪ್ಪಿಸಿದನು. ಅವನ ಹಿತನುಡಿಗಳನ್ನು ಆ ರಾಜಶೇಖರನು ಪರ್ಯಾಲೋಚಿಸಿ "ಹೇ ನಾಗರಾಜ ನೀನೆಮಗೆ ಗೌರವದ ಸ್ವಜನಬಂಧು. ನಮ್ಮ ಆದರದ ನೆಂಟನು. ನಮಗೆ ಮಾನ್ಯನು" ಎಂದು ಆತ್ಮೀಯವಾಗಿ ನುಡಿದು ಗೌರವಿಸಿದನು. ಆ ಬಳಿಕ ಕುಮುದನು. ಆ ಒಡವೆಯೊಂದಿಗೆ, ನಾಗಕುಲಭೂಷಣಳೂ ಸ್ತ್ರೀಯರ ಕುಲಕ್ಕೆ ಅಲಂಕಾರಳಾದ (ಕುಲಭೂಷಣೆಯನ್ನು) ಕುಮುದ್ವತಿಯನ್ನು ಅನುರೂಪನಾದ ಕುಶಚಕ್ರೇಶ್ವರನಿಗೆ, ವಿಧಿಪೂರ್ವಕ, ಬಂಧುಜನಸಮೇತ, ವಿವಾಹಮಾಡಿಕೊಟ್ಟು ಕೃತಕೃತ್ಯನಾದನು. ಸತ್ಪಾತ್ರನಿಗೆ ಧಾರೆಯೆರೆದು ಕನ್ಯಾದಾನಮಾಡಿ ಕೃತಾರ್ಥನಾದನು.

ಉಪಹೃತಾಭರಣಃ = ಪ್ರತ್ಯರ್ಪಿತಾಭರಣಃ—ಹೇ ಕುಮುದಃ ಭವಾನ್ ಶ್ಲಾಘ್ಯಃ ಸ್ವಜನೋ = ಬಂಧುಃ—ಸಮೇತಬಂಧು = ಯುಕ್ತಬಂಧುಃ—ಕನ್ಯಾಮಯೇನ = ಕನ್ಯಾರೂಪೇಣ—ಕುಲಸ್ಯೋಭೂಷಣೇನ ವಿಧಿವತ್ಸಂಯೋಜಯಾಮಾಸ—ನ ಕೇವಲಂ ತದೀಯಮೇವ—ಕಿಂತು ಸ್ವಕೀಯಮಪಿ ಭೂಷಣಂ ತಸ್ಮೈ ದತ್ತವಾನಿತಿ ಧ್ವನಿಃ—ಸಮೇತಬಂಧುಃ = ಸಮೇತಾಃ ಬಂಧವೋ ಯಸ್ಯ (ಬಹು) ಸಃ ॥

87. ತಸ್ಯಾಃ ಸ್ಪೃಷ್ಟೇ ಮನುಜಪತಿನಾ ಸಾಹಚರ್ಯಾಯ ಹಸ್ತೇ |
ಮಾಂಗಲ್ಯೋರ್ಣಾವಲಯಿನಿ ಪುರಃ ಪಾವಕಸ್ಯೋಚ್ಛಿಖಸ್ಯ ||
ದಿವ್ಯಸೂರ್ಯಧ್ವನಿರುದಚರತ್ ವ್ಯಶ್ನುವಾನೋ ದಿಗಂತಾನ್ |
ಗಂಧೋದಗ್ರಂ ತದನುವವೃಷುಃ ಪುಷ್ಪಮಾಶ್ಚರ್ಯಮೇಘಾಃ
|| ೮೭ ||

ಅಂದು ಕುಶ-ಕುಮುದ್ವತಿಯರ ವಿವಾಹಸಮಾರಂಭವು ವೈದಿಕ ಪದ್ಧತಿಯಿಂದ ಬಹಳ ವೈಭವದಿಂದ ನಡೆಯಿತು. ಸಾಹಚರ್ಯ, ಪ್ರಾಜಾಪತ್ಯವಿವಾಹಸೂಚಿತವಾಗಿ ಮಾಂಗಲ್ಯಾವಲಯ "ಕೌತುಕ" ಸೂತ್ರವನ್ನು (ಕೌತುಕಧಾರಣಾ ವಿಧಿ) ತನ್ನ ಪವಿತ್ರ ಪಾಣಿಯಿಂದ ಹಿಡಿದು ಕುಮುದ್ವತಿಯ ಜೊತೆಯಲ್ಲಿ ಕುಶಭೂಪತಿಯು ಹಿಡಿದು ಉರಿಯುತ್ತಿರುವ ಪವಿತ್ರಾಗ್ನಿಯ ಜ್ವಾಲೆಯ ಎದುರು ನಿಂದಿರ್ದನು. ವಿವಾಹದ ಎಲ್ಲಾ ವಿಧಿವಿಧಾನಗಳು ಕ್ರಮಪತ್ತಾಗಿ ನಡೆದುವು. ಅಗ್ನಿಸಾಕ್ಷಿಯಾಗಿ ಪಾವಕನೆದುರು ಕುಮುದನ ತಂಗಿಯ ಕೈಯನ್ನು ಹಿಡಿದು ನಿಂದಿರಲು, ದಿಗಂತದ ಕೊನೆಯ ತನಕ ಕೇಳುವಂತೆ ದೇವತೆಗಳ ಮಂಗಳತೂರ್ಯಧ್ವನಿ ಆಕಾಶಮಂಡಲದಲ್ಲಿ ವ್ಯಾಪಿಸಿತು. ವಿಶೇಷ ತರದ ಮೋಡಗಳು ಅಮರರು ಶುಭಸೂಚಕವಾಗಿ ಆಕಾಶದಲ್ಲಿ ನಿಯೋಜಿಸಿದರು. ದೇವತೆಗಳು ಆ ಮೋಡಗಳ ಮೂಲಕ ನವವಧೂವರರ ಶಿರದ ಮೇಲೆ ಸುಗಂಧಪೂರಿತ ಹೂಮಳೆಗರೆದರು.

ಸಾಹಚರ್ಯಾಯ = ಸಹಧರ್ಮಾಚರಣಾಯೇತ್ಯರ್ಥಃ —ಮಾಂಗಲ್ಯಾ=ಮಂಗಲೇ ಸಾಧುರ್ಯಾ ಊರ್ಣಾಮೇಷಾದಿಲೋಮ—"ಊರ್ಣಾಮೇಷಾದಿಲೋಮ್ನಿ ಸ್ಯಾತ್" ಇತ್ಯಮರಃ—ಅತ್ರ ಲಕ್ಷಣಯಾ ತನ್ನಿರ್ಮಿತಂ ಸೂತ್ರಮುಚ್ಯತೇ—ದಿವ್ಯಸ್ತೂರ್ಯಧ್ವನಿ ರುದಚರದುತ್ಥಿತಃ—ಮೇಘಾ ಗಂಧೇನೋದಗ್ರಮುತ್ಕಟಂ ಪುಷ್ಪಂ ಪುಷ್ಪಾಣಿ—ಆಶ್ಚರ್ಯ ಶಬ್ದಸ್ಯ—ರೌದ್ರಂ ತೂಗ್ರಮಭಿರಾತ್ರಿಷು—ಚತುರ್ದಶ—ಇತ್ಯಮರವಚನಾ ತ್ರಿಲಿಂಗತ್ವಮ್-ಸಾಹಚರ್ಯಾಯ=ಧರ್ಮಸಾಹಚರ್ಯಾಯ=ಧರ್ಮಪರಿಪಾಲನೆಗಾಗಿ.

88. ಇತ್ಥಂ ನಾಗಸ್ತ್ರಿಭುವನಗುರೋರೌರಸಂ ಮೈಥಿಲೇಯಂ |
ಲಬ್ಧ್ವಾ ಬಂಧುಂ ತಮಪಿ ಚ ಕುಶಃ ಪಂಚಮಂ ತಕ್ಷಕಸ್ಯ ||
ಏಕಃ ಶಂಕಾಂ ಪಿತೃವಧರಿಪೋರತ್ಯಜದ್ವೈನತೇಯಾತ್ |
ಶಾಂತವ್ಯಾಲಾಮವನಿಮಪರಃ ಪೌರಕಾಂತಃ ಶಶಾಸ || ೮೮ ||

ಇಂತು ನಾಗರಾಜನಾದ ಕುಮುದನು ಮೂರುಲೋಕದ ಗುರುವಾದ ಜಗತ್ತಿನ ಸ್ವಾಮಿಯಾದ ಮಹಾವಿಷ್ಣುವಿನ ಅಂಶದಿಂದ ಜನಿಸಿದ ಶ್ರೀರಾಮಚಂದ್ರನ ಔರಸಪುತ್ರ (ಧರ್ಮಪತ್ನಿಯಲ್ಲಿ ಜನಿಸಿದ) ಮೈಥಿಲೇಯ ಕುಶನ ಬಂಧುತ್ವವನ್ನು ಪಡೆದು ಧನ್ಯನಾದನು. ನಾಗರಾಜನಾದ ಕುಮುದನು ತಕ್ಷಕನ ಪೌತ್ರನ ಪೌತ್ರನು. ಅಥವಾ ಐದನೆಯ ಸಂತತಿಯವನು (ಐದನೆಯ ತಲೆಮಾರಿನವನು) ತಕ್ಷಕನನ್ನು ಸರ್ಪಜಾತಿಯ ವೈರಿಯಾದ ವಿನತಾ ಪುತ್ರ (ವೈನತೇಯನು) ಗರುಡನು ವಧಿಸಿದ್ದನು. ಇದೀಗ ಕುಮುದನು ತನ್ನ ಮುತ್ತಾತನನ್ನು ವಧಿಸಿದ ರಿಪು ಗರುಡನ ಭಯವನ್ನು ತೊರೆದು ಸುಖಿಸಿದನು. ಅದೇ ರೀತಿಯಲ್ಲಿ

ನಾಗರಾಜನ ಆಜ್ಞೆಯಿಂದ ವ್ಯಾಲರು ಶಾಂತಮುಖರಾಗಿದ್ದರು. ಕಂಸನ ಸಾಮ್ರಾಜ್ಯವು ಸರ್ಪಭಯರಹಿತವಾಗಿದ್ದಿತು. ಅಂತಹ ಸರ್ಪಭಯವಿರದ ಸಾಮ್ರಾಜ್ಯವನ್ನು ಕಂಸನು ಜನಮನರಂಜಕನಾಗಿ ಆಳಿದನು.

ತ್ರಯಾಣಾಂ=ಭುವನಾನಾಂ ಸಮಾಹಾರಸ್ತ್ರಿಭುವನಮ್—ತದ್ಧಿತಾರ್ಥ—ಇತ್ಯಾದಿನಾ= ತತ್ಪುರುಷಃ (ಪಾಣಿನಿ)—''ಪಾತ್ರ್ಯಾದ್ಯಂ ತ್ರೈರನೇಕರ್ಥೌದ್ವಿಗುರ್ಲಕ್ಷ್ಯಾನುಸಾರತಃ'' ಇತಿ ಯಾಜ್ಞವಲ್ಕ್ಯಃ—ಮೈಥಿಲೇಯಃ=ಕಂಸಂ—ವೈನತೇಯಃ=ಗರುಡಾತ್—ಶಾಂತವ್ಯಾಲಾಂ ಕುಮುದಾಜ್ಞಯಾಭೀತಸರ್ಪಭಯಾಮವನಿಮಂತ ಏವ ಪೌರಕಾಂತಃ = ಪೌರಪ್ರಿಯಃ ಸನ್—ಶಶಾಸ ॥

॥ ಭದ್ರಂ । ಶುಭಂ । ಮಂಗಳಂ ॥

# ಸಪ್ತದಶಃ ಸರ್ಗಃ

# ಹದಿನೇಳನೆಯ ಸರ್ಗ

## ಅತಿಥಿರಾಜ್ಯಭಾರ ವರ್ಣನೆ

**1. ಅತಿಥಿಂ ನಾಮ ಕಾಕುತ್ಸ್ಥಾತ್ ಪುತ್ರಂ ಪ್ರಾಪ ಕುಮುದ್ವತೀ ।**
**ಪಶ್ಚಿಮಾದ್ಯಾಮಿನೀಯಾಮಾತ್ ಪ್ರಸಾದಮಿವ ಚೇತನಾ ॥ ೧ ॥**

ಕಕುತ್ಸ್ಥವಂಶೋದ್ಭವನಾದ ಕಾಕುತ್ಸ್ಥನೆಂದೇ ಹೆಸರುಪಡೆದ ವಸುಮತೀಶ್ವರನಾಗಿ ಅಸಮಕೀರ್ತಿಯನ್ನು ಪಡೆದ ಕುಶಮಹಾರಾಜನಿಂದ ಕುಮುದ್ವತೀ ದೇವಿಯು ಅತಿಥಿಯೆಂಬ ಆತ್ಮಜನನ್ನು ಪೆತ್ತಳು. ರಾತ್ರಿಯ ನಾಲ್ಕನೆಯ ಪ್ರಹರದಲ್ಲಿ (ಯಾಮದಲ್ಲಿ) ಎಲ್ಲಾ ವಿಜ್ಞಾನಗಳೂ, ಶಾಸ್ತ್ರಗಳೂ, ಸುಪ್ರಸನ್ನತೆಯ ಚೇತನವ ಪಡೆವಂತೆ, ಸಮಸ್ತ ಜಗತ್ತಿಗೆ ಮಂಗಳಕರನಾದ ಅತಿಥಿಯೆಂಬ ಹೆಸರಿನ ಪುತ್ರರತ್ನನನ್ನು ಪಡೆದು ಪಾವನಳಾದಳು. ಬ್ರಾಹ್ಮೀಮುಹೂರ್ತದಲ್ಲಿ ಅಥವಾ ಉಷಃಕಾಲದಲ್ಲಿ ಗ್ರಹಣಶಕ್ತಿಯು (ಬುದ್ಧಿ ಕೌಶಲವು) ಅಧಿಕವಾಗಿರುವಂತೆ, ಚೇತನದ ಪ್ರಸಾದವು ಅಧಿಕವಾಗಿರುವಂತೆ, ಎಲ್ಲಾ ಶಾಸ್ತ್ರಗಳ ಚಿಂತನೆಗೆ, ಧೀಃಶಕ್ತಿಯ ಪ್ರಚೋದನೆಗೆ ಪ್ರಶಸ್ತವಾದ ಸಮಯವು. ("ಬ್ರಾಹ್ಮೇ ಮುಹೂರ್ತ ಉತ್ಥಾಯ ಚಿಂತಯೇದಾತ್ಮನೋ ಹಿತಮ್"—ಮನು). ಕಾಲಭೇದದಲ್ಲೂ ವಿಶ್ವಚೇತನದ ಏರುಪೇರು ವಿದಿತವಾಗುವುದು. (ಯಾಮಿನಿಯ ಆ ಕಡೆಯ ಯಾಮದೊಳು, ಚೇತನವು ಸುಪ್ರಸನ್ನತೆಯ ಪಡೆವಂತೆ).

ಚೇತನಾ = ಬುದ್ಧಿಃ ಪಶ್ಚಿಮಾದಂತ್ಯಾದ್ಯಾಮಿನ್ಯಾರಾತ್ರೇರ್ಯಾಮಾತ್ ಪ್ರಹರಾತ್ "ದ್ವೌ ಯಾಮ ಪ್ರಹರೌ ಸಮೌ" ಇತ್ಯಮರಃ–ಸರ್ವೇಷಾಂ ಬುದ್ಧಿವೈಶದ್ಯಂ ಭವತೀತಿ ಪ್ರಸಿದ್ಧಿಃ—ಕಾಕುತ್ಸ್ಥಾತ್ = ಕಕುತ್ಸ್ಥವಂಶೋದ್ಭವನಾದ ಕುಶಭೂಪಾಲ—ಯಾಮಿನೀ ಯಾಮಾತ್ = ಯಾಮಿನಿಯ ಆ ಕಡೆಯ ಯಾಮದಲ್ಲಿ—ಪ್ರಸಾದಮಿವ ಚೇತನಾ = ಚೇತನವು ಸುಪ್ರಸನ್ನತೆಯ ಪಡೆವಂತೆ ॥

**2. ಸ ಪಿತುಃ ಪಿತೃಮಾನ್ ವಂಶಂ ಮಾತುಶ್ಚಾನುಪಮದ್ಯುತಿಃ ।**
**ಅಪುನಾತ್ಸವಿತೇವೋಭೌ ಮಾರ್ಗಾವುತ್ತರದಕ್ಷಿಣೌ ॥ ೨ ॥**

ಅವನು ಆ ಉತ್ತಮನಾದ ತಂದೆಗೆ ತಕ್ಕ ಪುತ್ರನು. ತನ್ನ ಸದ್ಗುಣಗಳ ಪ್ರಕಾಶದಿಂದ, ಅದಮ್ಯಚೇತನದಿಂದ, ಸೂರ್ಯದೇವನಂತೆ ತೋರಿ ಬೆಳಗುತ್ತ, ತಾಯಿಯ ಹಾಗೂ ತಂದೆಯ ಉಭಯವಂಶಕ್ಕೂ ಗೌರವ, ಸಂತಸ ಮತ್ತು ಬೆಳಕನ್ನು ತಂದಿತ್ತನು. (ಅನುಪಮ ದ್ಯುತಿಯುತನು) ಹೇಗೆ ಸವಿತಾರನಾದ ಸೂರ್ಯದೇವನು ಉತ್ತರಾಪಥ ಮತ್ತು ದಕ್ಷಿಣಾಪಥಗಳನ್ನು ತನ್ನ ಪ್ರಕಾಶದಿಂದ ಬೆಳಗಿಸುವಂತೆ, ಪವಿತ್ರಗೊಳಿಸುವಂತೆ ಆ

ಬಾಲಕನು ತನ್ನ ಅಮಿತತೇಜಸ್ಸಿನಿಂದ ತಾಯಿಯ ಮತ್ತು ತಂದೆಯ, ಎರಡೂ ವಂಶವನ್ನು ಬೆಳಗಿಸಿದನು (ಹೊಳೆಹೊಳೆವ ಸವಿತಾರನವನು).

ಪ್ರಶಂಸಾರ್ಥೇ ಮತುಪ್—ಸುಶಿಕ್ಷಿತ ಇತ್ಯರ್ಥಃ—ಅನುಪಮದ್ಯುತಿಃ ಸವಿತುಶ್ಚೇದಂ ವಿಶೇಷಣಮ್—ಸೋಽತಿಥಿಃ ಪಿತುಃ ಕುಶಸ್ಯ ಮಾತುಃ ಕುಮುದ್ವತ್ಯಾಶ್ಚ ವಂಶವನ್—ಸವಿತಾ—ಉತ್ತರದಕ್ಷಿಣಾವುಭೌ ಮಾರ್ಗಾವಿವ—ಅಪುನಾತ್=ಪವಿತ್ರೀಕೃತವಾನ್—ಓತ್ಯ ಮಹಾನ್=ಶ್ರೇಷ್ಠನಾದ ತಂದೆಯನ್ನು ಪಡೆದ.

**3. ತಮಾದೌ ಕುಲವಿದ್ಯಾನಾಂ ಅರ್ಥಮರ್ಥವಿದಾಂವರಃ ।**
**ಪಶ್ಚಾತ್ಪಾರ್ಥಿವಕನ್ಯಾನಾಂ ಪಾಣಿಮಗ್ರಾಹಯತ್ಪಿತಾ ॥ ೩ ॥**

ಆ ರಾಜಮೌಳಿ ತನ್ನ ಸುಪುತ್ರನಿಗೆ ಮೊದಲು (ಪ್ರಪ್ರಥಮವಾಗಿ) ಉತ್ತಮ ವಿದ್ಯಾಭ್ಯಾಸವನ್ನು ಗ್ರಹಣಮಾಡುವಂತೆ ಮಾಡಿದನು. ಆ ಬಳಿಕ ಯಥೋಚಿತವಾದ, ಕುಲೋಚಿತವಾದ, ರಾಜಕುಮಾರನಿಗೆ ವಿದ್ಯಾಭ್ಯಾಸದಲ್ಲಿ ಯಶಸ್ವಿಯಾದಬಳಿಕ ಪಾಣಿಗ್ರಹಣ ಮಾಡಿಸಿದನು. ಮೊದಲು ತನ್ನ ಸತ್ಪುತ್ರನನ್ನು ವಿವಿಧ ಶಾಸ್ತ್ರಗಳ (ವೇದ, ಆಗಮ) ತತ್ತ್ವಶಾಸ್ತ್ರಗಳ, ಅರ್ಥಶಾಸ್ತ್ರದ, ವಿಜ್ಞಾನವಿದ್ಯೆಗಳ ಅರ್ಥಗ್ರಹಣ ಹಾಗೂ ಧನುರ್ವೇದಾದಿವಿದ್ಯೆಗಳ ಪ್ರಯೋಗಗಳಲ್ಲಿ ಕೋವಿದನನ್ನಾಗಿ ಮಾಡಿ, ಅನಂತರ ಪಾರ್ಥಿವ ಕನ್ಯೆಯರ ಕರಗ್ರಹಣ ಮಾಡಿಸಿದನು. ರಾಜೋಚಿತವಾದ ಸಮಸ್ತ ವಿದ್ಯೆಗಳನ್ನು ಗುರುಮುಖೇನ ಕಲಿತು ಅತಿಥಿರಾಜಕುಮಾರನು ವಿದ್ಯಾಪಾರಗನೆನಿಸಿದನು. ಧನುರ್ವಿದ್ಯೆಯನ್ನು ಕಲಿತು ಅಸ್ತ್ರಪಾರಂಗತನು ತಾನಾದನವನು.

ಅರ್ಥಾಂಛಬ್ದಾರ್ಥನ್ಯಾದರಸಂಗ್ರಹಾದಿಕ್ರಿಯಾಪ್ರಯೋಜನಾನಿ ಚ ವಿದನ್ತೀತ್ಯರ್ಥವಿದಃ ತೇಷಾಂ ವರಃ=ಶ್ರೇಷ್ಠಃ ಪಿತಾಕುಶಃ–ಕುಲವಿದ್ಯಾನಾಮಾನ್ವೀಕ್ಷಿಕೀ ತ್ರಯೀ ವಾರ್ತಾ ದಂಡ ನೀತೀನಾಮರ್ಥಮಭಿಧೇಯಮಗ್ರಾಹಯದ್ಬೋಧಯತ್–ಪಶ್ಚಾತ್ ಪಾರ್ಥಿವ ಕನ್ಯಾನಾಂ ಪಾಣಿಮಗ್ರಾಹಯತ್ =ಸ್ವೀಕಾರಿತವಾನ್—ಉದವಾಹಯದಿತ್ಯರ್ಥಃ—ಗ್ರಹೇರ್ಣ್ಯನ್ತಸ್ಯ ಸರ್ವತ್ರ ದ್ವಿಕರ್ಮಕತ್ವಮಸ್ತೀತ್ಯುಕ್ತಂ ಪ್ರಾಕ್—ಅರ್ಥವಿದಾಂವರಃ =ಅರ್ಥವಿದ್ಯರನು = ಅರ್ಥಕೋವಿದನು. (ಅರ್ಥ = ಶಬ್ದಾರ್ಥ, ಹಣಕಾಸು, ಅರ್ಥಿಕ) ಅರ್ಥ = ಅರ್ಥಶಾಸ್ತ್ರ).

**4. ಜಾತ್ಯಸ್ತೇನಾಭಿಜಾತೇನ ಶೂರಃ ಶೌರ್ಯವತಾ ಕುಶಃ ।**
**ಅಮನ್ಯತೈಕಮಾತ್ಮಾನಮನೇಕಂ ವಶಿನಾವಶೀ ॥ ೪ ॥**

ಮಹಾನಮಾಧೀಶನಾದ, ಶೂರನಾದ, ಕುಲೀನನಾದ ಕುಶನು ತನ್ನಂತೆ ಶೂರನಾದ ಉನ್ನತನಾದ ಪುತ್ರರತ್ನನನ್ನು, ತನ್ನ ಆತ್ಮಜನಾದ ಅತಿಥಿಯನ್ನು ಪಡೆದ ತಾನೀಗ ಇಬ್ಬರಾದಂತೆ (ತನ್ನ ಆತ್ಮವೇ ಎರಡಾದಂತೆ) ಎಂದು ತಿಳಿದುಕೊಂಡನು. ಮನೋಹರ ಚಿತ್ತನಾದ ಕುಶನು ಶೌರ್ಯಸಾಹಸಧನನಾದ, ಸರ್ವಗುಣಗ್ರಾಹಿಯಾದ, ಸರ್ವರನ್ನು ವಶಮಾಡಬಲ್ಲ ಸುಪುತ್ರನನ್ನು ಪಡೆದು ತಾನು ಏಕಾಂಗಿಯಾಗಿದ್ದವನು ಇದೀಗ ಒಂದಕ್ಕಿಂತ ಹೆಚ್ಚಾದಂತೆ, ಅನೇಕನಾದಂತೆ, ಭಾವಿಸಿಕೊಂಡನು. ಏಕ ಆತ್ಮನು ಅನೇಕಾತ್ಮನಾದಂತೆ.

ಜಾತೌ ಭವೋ ಜಾತ್ಯಃ=ಕುಲೀನಃ ಶೂರೋ ವಶೀ ಕುಶೋಽಭಿಜಾತೇನ=ಕುಲೀನೇನ—"ಅಭಿಜಾತಃ ಕುಲೀನಃ ಸ್ಯಾತ್" ಇತ್ಯಮರಃ–ಕರಣೇನ=ಏಕಮಹಾತ್ಮಾನಮ್ ಏಕೋ ನ ಭವತೀತ್ಯನೇಕಸ್ತ್ವಮ್—ಸರ್ವಗುಣಸಾಮರ್ಥ್ಯದಾತ್ಮಜಮಾತ್ಮನ ಏವ ರೂಪಾಂತರಮಮಂಸ್ತೇತ್ಯರ್ಥಃ—ಜಾತ್ಯಃ ಜಾತೋ—ಸಾಧು=ಕುಲೀನನು. ಉತ್ತಮನು. ಪುರುಷ ಶ್ರೇಷ್ಠನು.

**5. ಸ ಕುಲೋಚಿತಮಿಂದ್ರಸ್ಯ ಸಾಹಾಯಕಮುಪೇಯಿವಾನ್ ।**
**ಜಘಾನ ಸಮರೇ ದೈತ್ಯಂ ದುರ್ಜಯಂ ತೇನ ಚಾವಧಿ ॥ ೫ ॥**

ಆ ಕುಶನು ವಂಶಪಾರಂಪರ್ಯವಾಗಿ ಬಂದ ಕಟ್ಟಳೆಯನ್ನು ವಿಚಾರದಾದನು. ಒಮ್ಮೆ ಅಮರಾಧಿಪತಿಯಾದ ಇಂದ್ರನು ಅಸುರಾಧಿಪತಿಯಾದ ದುರ್ಜಯಾಸುರನ ಪೀಡೆಯನ್ನು ಸಹಿಸಲಾರದೆ ತನ್ನ ಸಹಾಯಕ್ಕೆ ಬರುವಂತೆ ಮಾನವರೊಡೆಯನಾದ (ಮಾನವೇಂದ್ರನಾದ) ಕುಶಸಾರ್ವಭೌಮನನ್ನು ಕೇಳಿಕೊಂಡನು. ಅನ್ವಯಂದ ಪದ್ಧತಿಯಂತೆ ಕುಶನು ವಜ್ರಿಯ ಆಹ್ವಾನವನ್ನು ಸ್ವೀಕರಿಸಿ ಅಮರಾವತಿಗೆ ನಡೆದು ದೈತ್ಯನ ಉಪಟಳವನ್ನು ಹತ್ತಿಕ್ಕಿದನು. ಮುಂದೆ ನಡೆದ ಘೋರಸಂಗ್ರಾಮದಲ್ಲಿ ವೈರಿಯಾದ, ಜಯಿಸಲು ಅಸಾಧ್ಯವಾದ, ಲೋಕಕಂಟಕನಾದ, ದುರ್ಜಯಾಸುರರನ್ನು ವಧಿಸಿ ಅವನ ಕೈಯಿಂದ ತಾನೂ ಹತನಾದನು. ಹೀಗೆ ಕುಶನಿಗೆ ವೀರಗತಿಯು (ವೀರಸ್ವರ್ಗವು) ಪ್ರಾಪ್ತವಾಯಿತು.

ಸಹಾಯಕಂ=ಸಹಕಾರಿತ್ವಮ್—"ಯೋಪಧಾತ್"ಇತ್ಯಾದಿನಾ ವುಞ್—(ಪಾಣಿನಿ)—ಉಪೇಯಿವಾನ್=ಪ್ರಾಪ್ತಃ ಸನ್ ಸಮರೇನಾಮಂತೋಽರ್ಥತಶ್ಚ ದುರ್ಜಯಂ ದೈತ್ಯಂ ಜಘಾನಾವಧೀತ್—ತೇನ ದೈತ್ಯೇನ—ಅವಧಿಹತಶ್ಚ "ಲುಙಿ ಚ" ಇತಿ ಹನೋವಧಾದೇಶ ॥

**6. ತಂ ಸ್ವಸಾ ನಾಗರಾಜಸ್ಯ ಕುಮುದಸ್ಯ ಕುಮುದ್ವತೀ ।**
**ಅನ್ವಗಾತ್ ಕುಮುದಾನಂದಂ ಶಶಾಂಕಮಿವ ಕೌಮುದೀ ॥ ೬ ॥**

ನಾಗರಾಜನಾದ ಕುಮುದನ ತಂಗಿ ಕುಮುದ್ವತಿ ಪತಿಗೆ ವೀರಸ್ವರ್ಗ ಪ್ರಾಪ್ತವಾದುದನ್ನು ತಿಳಿದು ತಾನು ಆಗಿನ ಕಾಲದಲ್ಲಿದ್ದ ಅನ್ವಯವಾಗಿ ಬಂದ ಸತಿಸಹಗಮನ ಪದ್ಧತಿಯಂತೆ ದೇಹತ್ಯಾಗಮಾಡಿದಳು. ತನ್ನ ಪತಿಯ ದಾರಿಯನ್ನು ಹಿಡಿದು ಸತಿಯಾದಳು. ಲೋಕದಲ್ಲಿ ಸತಿ ಕುಮುದ್ವತಿ ಎಂಬ ಅನ್ವರ್ಥನಾಮಕ್ಕೆ ಪಾತ್ರಳಾದಳು. ಚಂದ್ರನನ್ನು ಅನುಸರಿಸುವ ಬೆಳದಿಂಗಳಂತೆ (ಜೊನ್ನದಂತೆ) ಸತಿ ಕುಮುದ್ವತಿ ಕುಶನನ್ನು ಅನುಸರಿಸಿ ಹೊರಟೇಬಿಟ್ಟಳು, ಕುಮುದ (ನೈದಿಲೆ, ಲಿಲ್ಲಿಹೂಗಳು) ಅಥವಾ ನೈದಿಲೆ ಹೂಗಳು ಆನಂದಕಂದರನಾದ ಚಂದ್ರಮನನ್ನು ಅನುಸರಿಸುವ ಜ್ಯೋತ್ಸ್ನದಂತೆ (ಬೆಳದಿಂಗಳಂತೆ) ಪತಿವ್ರತೆಯಾದ ಕುಮುದ್ವತಿಯು ತನ್ನ ತ್ರಿಲೋಕಕಲ್ಯಾಣಕಾರಕನಾದ, ಜನಹಿತೈಷಿಯಾದ, ಲೋಕಬಂಧುವಾದ, ಬಡವರ ಸಿಂಧುವಾದ ತನ್ನ ಪ್ರಾಣಪತಿಯನ್ನು ಅನುಸರಿಸಿ ನಡೆದಳು. ನೈದಿಲೆಹೂ ಚಂದ್ರನು ಅಸ್ತಮಿಸಲು ತಾನೂ ಮುದುಡಿಕೊಳ್ಳುತ್ತದೆ. ಚಂದ್ರನು ಉದಯಿಸಲು ಅರಳುತ್ತದೆ.

ಕುಮುದ್ವತೀಂ = ಕುಶಪತ್ನೀಂ—ಕುಮುದಾನಂದಂ = ಶಶಾಂಕಂ—ಕೌಮುದೀ = ಜ್ಯೋತ್ಸ್ನೇವ—ಕುಃ ಪೃಥ್ವೀ ತಸ್ಯಾಮಂತ್ ಪ್ರೀತೀ—ಸ್ತೈವಾನಂದೋ ಯಸ್ಯೇತಿ ಕುಮುದಾನಂದಃ—ಪರಾನಂದೇನ=ಸ್ವಯಮಾನಂದತೀತ್ಯರ್ಥಃ ॥

7. ತಯೋರ್ದಿವಸ್ಪತೇರಾಸೀದೇಕಃ ಸಿಂಹಾಸನಾರ್ಧಭಾಕ್ ।
ದ್ವಿತೀಯಾಪಿ ಸಖೀಶಚ್ಯಾಃ ಪಾರಿಜಾತಾಂಶಭಾಗಿನೀ ॥ ೭ ॥

ರವಿಕುಲ(ಇನಕುಲ, ಖದ್ಯೋತಕುಲ)ತಿಲಕನಾದ ಕುಶಚಕ್ರೇಶ್ವರನು ಅಂದು ಆ ದಿವಸ್ಪತಿಯಾದ, ಅಮರರಿಗೆ ಒಡೆಯನಾದ ಮಹೇಂದ್ರನ ಅರ್ಧಸಿಂಹಾಸನವನ್ನು ಪಡೆಯಲು ಅರ್ಹನಾದರೆ ಅವನ ಅರ್ಧಾಂಗಿ, ಮಹಾರಾಣಿ ಕುಮುದ್ವತೀದೇವಿಯು, ಇಂದ್ರನ ಸಹಧರ್ಮಿಣಿಯಾದ ಇಂದ್ರಾಣಿಯು ಧರಿಸುವ ಪಾರಿಜಾತ ಹೂವಮಾಲೆಯ ಅಂಶಭಾಗಿನಿಯಾದಳು. ಅವಳು ಶಚೀದೇವಿಯ ಪ್ರಿಯಸಖಿಯೆನಿಸಿದಳು. ಹೀಗೆ ಅವರಿಗೆ ಸ್ವರ್ಗಲೋಕವು ಪ್ರಾಪ್ತವಾದುದು ಮಾತ್ರವಲ್ಲದೆ. ಅವರು ನಾಕಲೋಕದ ಪ್ರಥಮಮರ್ಯಾದೆಗೆ ಪಾತ್ರರಾದರು.

ದಿವಸ್ಪತೇರಿಂದ್ರಸ್ಯ — ಸಿಂಹಾಸನಾರ್ಧಂ = ಸಿಂಹಾಸನಸ್ಯೈಕದೇಶಃ — ಶಚ್ಯಾ = ಇಂದ್ರಾಣ್ಯಾಃ—ಪಾರಿಜಾತಾಂಶಸ್ಯ—ಭಾಗಿನೀ = ಗ್ರಾಹಿಣೀ "ಸಂಪೃಚ" ಇತ್ಯಾದಿನಾ ಭಜೇರ್ವಿ ನುಣ್ ಪ್ರತ್ಯಯಃ—ಸಖ್ಯಾಸೀತ್—ಕಸ್ಕಾದಿತ್ವಾದ್ವಿ ವಸ್ಪತಿಃ ಸಾಧುಃ ॥

8. ತದಾತ್ಮಸಂಭವಂ ರಾಜ್ಯೇ ಮಂತ್ರಿವೃದ್ಧಾಃ ಸಮಾದಧುಃ ।
ಸ್ಮರಂತಃ ಪಶ್ಚಿಮಾಮಾಜ್ಞಾಂ ಭರ್ತುಃ ಸಂಗ್ರಾಮಯಾಯಿನಃ ॥ ೮ ॥

ಊರ್ಧ್ವಲೋಕದಲ್ಲಿ ನಡೆಯುವ ಸಮರದಲ್ಲಿ ಭಾಗವಹಿಸಲು ಹೊರಟಾಗ, ಕುಶಭೂವರನು ತನ್ನ ಇಚ್ಛೆಯನ್ನು ಪ್ರಕಟಿಸಿದ್ದನು. ಅದನ್ನು ನೆನೆದು ವೃದ್ಧಮಂತ್ರಿಗಳು ತಮ್ಮ ಭರ್ತನಿನ ಕೊನೆಯ ಆಜ್ಞೆಯನ್ನು ಶಿರಸಾವಹಿಸಿ ಮುಂದಿನ ಕಾರ್ಯದಲ್ಲಿ ಪ್ರವೃತ್ತರಾದರು. ಅವರು ಕುಶಭೂಪಾಲನ ಆತ್ಮಸಂಭವನಾದ (ಔರಸಪುತ್ರನಾದ) ಅತಿಥಿಕುಮಾರನನ್ನು ಪಟ್ಟದಲ್ಲಿ ಕುಳ್ಳಿರಿಸಿ ಅಭಿಷೇಕಕಾರ್ಯಕ್ಕೆ ಬೇಕಾದ ಸಿದ್ಧತೆಗಳನ್ನು ಭರದಿಂದ ಮಾಡತೊಡಗಿದರು. ಅದನ್ನು ತಿಳಿದು ಕುಶಪುತ್ರನ ಪಟ್ಟಾಭಿಷೇಕೋತ್ಸವವನ್ನು ನೆನೆದು ಸಾಕೇತದ ಜನರು ನಲಿದರು.

ಆವಶ್ಯಕಾರ್ಥೇಣಿನಿಃ — "ಅಕೇನೋರ್ಭವಿಷ್ಯದಾಧಮರ್ಣ್ಯಯೋಃ" ಇತಿ ಷಷ್ಠೀನಿಷೇಧಃ—ಭರ್ತುಃ=ಸ್ವಾಮಿನಃ ಕುಶಸ್ಯ ಪಶ್ಚಿಮಾಮಂತಿಮಾಮಾಜ್ಞಾಂ ವಿಪರ್ಯಯೇ ಪುತ್ರೋಽಭಿಷೇಕ್ತವ್ಯ ಇತ್ಯೇವಂ ರೂಪಾಂ—ಸಮಾದಧುರ್ನಿದಧುಃ—ಭರ್ತುಃ ಪಶ್ಚಿಮಾಮ್ ಆಜ್ಞಾಮ್ = ಕುಶನ ಕೊನೆಯ ಆಣತಿ (ಆಜ್ಞೆ).

9. ತೇ ತಸ್ಯ ಕಲ್ಪಯಾಮಾಸುರಭಿಷೇಕಾಯ ಶಿಲ್ಪಿಭಿಃ ।
ವಿಮಾನಂ ನವಮುದ್ವೇದಿ ಚತುಃಸ್ತಂಭಪ್ರತಿಷ್ಠಿತಮ್ ॥ ೯ ॥

ಆ ಹಿರಿಯರಾದ ಕುಲಸಚಿವರು ಕುಶಲಕೋವಿದರಾದ ಶಿಲ್ಪಶಾಸ್ತ್ರಜ್ಞರನ್ನು ಭರದಿಂದ ಕರೆಸಿ ಅತಿಥಿಯ ಪಟ್ಟಾಭಿಷೇಕಕ್ಕೆ ಬೇಕಾದ ಉನ್ನತವಾದ ವೇದಿಯಿಂದ ಎಸೆವ (ಅಭಿನ

ಪ್ರೋನ್ನತವೇದಿಯಿಂದೆಸೆವ) (ಭದ್ರಾಸನದಿಂದೆಸೆವ) ನಾಲ್ಕು ಸ್ತಂಭಗಳ ಮೇಲೆ ನಿಂತಿರುವ ನವವಿಮಾನಮಂಟಪವನ್ನು (ವಿಮಾನ) ಕಟ್ಟಿಸಿದರು.

ಶಿಲ್ಪಿಭಿರುದ್ವೇದಿ=ಉನ್ನತವೇದಿಕಂ-ಚತುಃಸ್ತಂಭಪ್ರತಿಷ್ಠಿತಂ=ಚತುರ್ಷು ಸ್ತಂಭೇಷು ಪ್ರತಿಷ್ಠಿತಂ—ನವವಿಮಾನಂ=ಮಂಡಪಂ, ಮಂಟಪವಮ್—ಕಲ್ಪಯಾಮಾಸು=ಕಾರಯಾಮಾಸು—ಉದ್ವೇದಿ = ಎತ್ತರದ ಪೀಠ, ಎತ್ತರದ ಆಸನ.

**10. ತತ್ರೈನಂ ಹೇಮಕುಂಭೇಷು ಸಂಭೃತೈಸ್ತೀರ್ಥವಾರಿಭಿಃ ।**
**ಉಪತಸ್ಥುಃ ಪ್ರಕೃತಯೋ ಭದ್ರಪೀಠೋಪವೇಶಿತಮ್ ॥ ೧೦ ॥**

ಅಲ್ಲಿ ಆ ರಾಜ್ಯಾಭಿಷೇಕಮಂಟಪದಲ್ಲಿ ಹೇಮದಿಂದ, ಕ್ಷೀರವೃಕ್ಷದ ಹಲಗೆಗಳಿಂದ ವಿರಚಿಸಿರುವ ಭದ್ರಪೀಠದಲ್ಲಿ ಯುವರಾಜಕುಮಾರನನ್ನು ಕುಳ್ಳಿರಿಸಿ ತಾವೆಲ್ಲರೂ ಸಭೆ ಸೇರಿದರು. ಮಂತ್ರಿಗಳು, ಕುಲಪುರೋಹಿತರು, ಪಾಳಯಗಾರರು, ಮಾಂಡಳಿಕ ರಾಜಾಧಿರಾಜರು, ಸಾಮಂತರು, ಸೀಮಂತರು ಅಭಿವಾದನಗೈದರು. ಮಾನಿನಿಯರು ಹೇಮಕುಂಭಗಳಲ್ಲಿ ಭಾರತದೇಶದ ಪ್ರಧಾನ ನದಿಗಳ ಪವಿತ್ರಜಲ(ಗಂಗಾ, ಯಮುನಾ, ಕಾವೇರಿ, ಸಿಂಧು, ಬ್ರಹ್ಮಪುತ್ರ, ನರ್ಮದಾ, ಗೋದಾವರಿ, ನೇತ್ರಾವತಿ)ವನ್ನು ವಾದ್ಯಘೋಷದಲ್ಲಿ ಹೊತ್ತುತಂದರು. ಅಭಿಷೇಕಕಾಲದಲ್ಲಿ ವೇದಘೋಷದೊಂದಿಗೆ ಗಂಗಾಜಲದ ಪ್ರೋಕ್ಷಣೆಗಾಗಿ (ಸಿಂಪಡಿಸಲು) ರಾಜಪುರೋಹಿತರು ವ್ಯವಸ್ಥಿತರಾಗಿ ನಿಂತಿದ್ದರು (ಉಪಸ್ಥಿತರಾಗಿದ್ದರು).

ಹೇಮಕುಂಭೇಷು, ಸಂಭೃತೈಃ=ಸಂಗ್ರಹೀತೈಸ್ತೀರ್ಥವಾರಿಭಿಃ-ಕರಣೈಃ ಪ್ರಕೃತಯೋ ಮಂತ್ರೀಣಾಂ ಉಪತಸ್ಥುಃ—ಭದ್ರಪೀಠ= ಭದ್ರಾಸನ—ಏನಮ್ ಉಪತಸ್ಥುಃ=ಕಾಯು, ನಿರೀಕ್ಷಿಸು—ಅಭಿಷಿಂಚನ್ = ಚಿಮುಕಿಸು, ಸಿಂಪಡಿಸು,

**11. ನದದ್ಭಿಃ ಸ್ನಿಗ್ಧಗಂಭೀರಂ ತೂರ್ಯೈರಾಹತಪುಷ್ಕರೈಃ ।**
**ಅನ್ವಮೀಯತಕಲ್ಯಾಣಂ ತಸ್ಯಾವಿಚ್ಛಿನ್ನಸಂತತಿ ॥ ೧೧ ॥**

ಆಗ ಎಲ್ಲಾ ವಾದ್ಯಗಳು ಏಕಕಾಲದಲ್ಲಿ ಮಧುರಗಂಭೀರನಾದದಿಂದ ಸುಸ್ವರಗೈದುವು. ಅತಿಥಿರಾಜೇಂದ್ರನ ಜೀವಿತಕಾಲವು ಏರಿಳಿತಗಳಿಲ್ಲದೆ ಅವಿಚ್ಛಿನ್ನಕಲ್ಯಾಣಪರಂಪರೆಯನ್ನು ಅನುಭವಿಸುತ್ತಿರಲಿ ಎಂದು ಗಾನಸುಧೆಯು ಮಂದ್ರರವವು ಘೋಷಿಸುತಿದ್ದುವು (ಮುಂದ ವಿಚ್ಛಿನ್ನಕಲ್ಯಾಣದ ಪರಂಪರೆಯು). ನಾನಾತರದ ಸುಪುಷ್ಕರವಾದ, ವಾದ್ಯಗಳ ಮತ್ತು ಸಂಗೀತದ ಉಪಕರಣಗಳ ಮುಖದಿಂದ (ಢಕ್ಕೆ, ಡಮರುಗ, ಡೋಲು, ಮೃದಂಗ, ತಮಟೆ, ಭೇರಿ, ಚೆಂಡೆ, ಜಾಗಟೆ, ಶಂಖ, ವೀಣೆ, ಪಿಟೀಲು, ತಂಬೂರಿ, ಸರಸ್ವತಿವೀಣೆ, ಕೊಳಲು, ಭಜಂತ್ರಿ, ಜಲತರಂಗ, ನಾಗಸ್ವರ, ಬ್ಯಾಂಡು, ವಾದ್ಯ, ಸಿತಾರ್, ಘಟಮ್, ಮೋರ್ಚಾ ಇತ್ಯಾದಿ) ಹೊರಡುವ ಮಧುರಗಂಭೀರವಾದ, ತಾಳಬದ್ಧವಾದ ನಾದಗಳು ಲೋಕಕ್ಕೆ ಅತಿಥಿಯ ಭವಿಷ್ಯವು ಕಲ್ಯಾಣಪರಂಪರೆಗಳಿಂದ, ಸಂತಸಸೌಭಾಗ್ಯಗಳಿಂದ, ಸಂಖದ ರಸಕಾರಂಜಿಯಾಗಿ, ಸುಖಿಸುಪುತ್ರಗಳಿಂದ, ಷಡ್ಗುಣೈಶ್ವರ್ಯಗಳಿಂದ ವಿಂಳಿತವಾಗಿರಲೆಂದು ಜಗತ್ತಿಗೆ ಸಾರುತ್ತಿದ್ದುವು. ಅಂಬಾರಿ ಆನೆಗಳ ಸೊಂಡಿಲುಗಳಿಂದ ಹೊರಡುವ

ತೂರ್ಯನಾದವು (ಆಹತಸುಪುಷ್ಕರಮುಖೋದ್ಭೂತ, ಮಧುರ, ಗಂಭೀರರವ) ಎಲ್ಲೆಡೆ ಕೇಳಿಸುತ್ತ ಕಳೆ ಏರಿಸುತ್ತಿತ್ತು.

ಆಹತಂ ಪುಷ್ಕರಂ ಮುಖಂ ಯೇಷಾಂ ತೌ—"ಪುಷ್ಕರಂ ಕರಿಹಸ್ತಾಗ್ರೇ ವಾದ್ಯಭಾಂಡ ಮುಖೇಽಪಿ ಚ" ಇತ್ಯಮರಃ—ಸ್ನಿಗ್ಧಂ ಮಧುರಗಂಭೀರಂ ಚ—ಅವಿಚ್ಛಿನ್ನಸಂತತ್ಯ ವಿಚ್ಛಿನ್ನಪಾರಂಪರ್ಯಂ ॥

**12. ದೂರ್ವಾಯವಾಂಕುರಪ್ಲಕ್ಷತ್ವಗಭಿನ್ನಪುಟೋತ್ತರಾನ್ ।**
**ಜ್ಞಾತಿವೃದ್ಧೈಃ ಪ್ರಯುಕ್ತಾನ್ ಸ ಭೇಜೇ ನೀರಾಜನಾವಿಧೀನ್ ॥ ೧೨ ॥**

ಮಾವಿನಚಿಗುರು (ಬಾಲಪಲ್ಲವ) ಅಶ್ವತ್ಥದ ಎಳೆತೊಗಟೆ (ಚಿಗುರಿನಿಂದಾಲದೆಳೆತೊಗಟೆಯಿಂದಾ), ಬಾರ್ಲಿಯ ಅಂಕುರ, ದೂರ್ವೆ ಮೊದಲಾದ ಪವಿತ್ರವಸ್ತುಗಳಿಂದ ಸಿದ್ಧಗೊಳಿಸಿದ ನೀರಾಜನವನ್ನು ರಾಜನ ವೃದ್ಧಬಂಧುಗಳು ಎತ್ತಿದುದನ್ನು (ನೀರಾಜನವಿಧಿ) ಆ ಸ್ನೇಹಮಯನಾದ ಅರಸುಕುಮಾರನು ಅರ್ತಿಯಿಂದ, ಭಕ್ತಿಯಿಂದ ಸ್ವೀಕರಿಸಿದನು. ಆ ಬಳಿಕ ಹಿರಿಯರು, ಸುಗಂಧಾಕ್ಷತೆಯನ್ನು ಅರಸನತಲೆಯ ಮೇಲೆ ಚೆಲ್ಲಿದರು. ಮುತ್ತೈದೆಯರು ರಾಗವಾಗಿ ಹಾಡುತ್ತ ಪಂಚಾರತಿಯನ್ನೆತ್ತಿದರು (ಆಣೆಗೈದ ನೀರಾಜನವ ಕೊಂಡು)

ದೂರ್ವಾಶ್ಚ ಯವಾಂಕುರಾಶ್ಚ ಪ್ಲಕ್ಷತ್ವಚಶ್ಚ ಅಭಿನ್ನಪುಟಾಃ ಪಲ್ಲವಾಶ್ಚೋತ್ತರಾಣಿ ಪ್ರಧಾನಾನಿ ಯೇಷಾಂ ತಾನ್—ಅಭಿನ್ನಪುಟಾನಿ ಮಧೂಕಪುಷ್ಪಾಣೀತಿ ಕೇಚಿತ್—ಕಮಲಾನೀತ್ಯನ್ಯೇನ್ನೀರಾಜಸವಿಧೀನ್ಭೇಜೇ—ನೀರಾಜನವಿಧಿ = ಐದು ತರ ಪ್ರಥಮಂ ದೀಪಮಾಲಯಾ—ದ್ವಿತೀಯಂ ಸೋದಕಾಬ್ಜೇನ ತೃತೀಯಂ ದೌತವಾಸಸಾ ಚೂತಾಶ್ವತ್ಥಾದಿಪತ್ರೈಶ್ಚ ಚತುರ್ಥಂ ಪರಿಕೀರ್ತಿತಾ—ಪಂಚಮಂ ಪ್ರಣಿಪಾತೇನ ಯಥಾ ವಿಧಿ ॥

**13. ಪುರೋಹಿತಪುರೋಗಾಸ್ತಂ ಜಿಷ್ಣುಂ ಜೈತ್ರೈರಥರ್ವಭಿಃ ।**
**ಉಪಚಕ್ರಮಿರೇ ಪೂರ್ವಮಭಿಷೇಕ್ತುಂ ದ್ವಿಜಾತಯಃ ॥ ೧೩ ॥**

ಅಭಿಷೇಕದ ಪೂರ್ವದಲ್ಲಿ ಪುರೋಹಿತರ ನೇತೃತ್ವದಲ್ಲಿ ದ್ವಿಜೋತ್ತಮರು ತೀರ್ಥಜಲವನ್ನು ಪ್ರೋಕ್ಷಣೆಮಾಡುತ್ತ ಯುದ್ಧದಲ್ಲಿ ಜಯವನ್ನು ಹಾರೈಸಿ ಅಥರ್ವವೇದದ ಮಂತ್ರಸೂಕ್ತಗಳನ್ನು ಉಚ್ಚರಿಸಿದರು. ಯುದ್ಧದಲ್ಲಿ ಜಯಶೀಲನಾಗುವಂತೆ ಜಿಷ್ಣುವಾದ, ಮಹೇಂದ್ರನಂತೆ ಸೋಲರಿಯದ, ಪರಾಕ್ರಮಶಾಲಿಯಾದ ಅತಿಥಿಗೆ ಜಯವ ತಂದೀಯುವ ಅಥರ್ವ ಮಂತ್ರಗಳನ್ನು ಅವರು ಪಠಿಸಿದರು.

ಪುರೋಹಿತಪುರೋಗಾಃ=ಪುರೋಹಿತಪ್ರಮುಖಾ—ಜಿಷ್ಣು=ಜಯಶೀಲು—ಜೈತ್ರೈರ್ಜಯಶೀಲು—ಜೈತ್ರೈರಥರ್ವಭಿಃ = ವಿಜಯಿಯಾಗುವಂತೆ ಹಾಡುವ ಅಥರ್ವಮಂತ್ರ ರೀತಿಗಳು.

**14. ತಸ್ಯೌಘಮಹತೀ ಮೂರ್ಧ್ನಿ ನಿಪತಂತೀ ವ್ಯರೋಚತ ।**
**ಸಶಬ್ದಮಭಿಷೇಕಶ್ರೀರ್ಗಂಗೇವ ತ್ರಿಪುರದ್ವಿಷಃ ॥ ೧೪ ॥**

ಅತಿಥಿಮಹಾರಾಜನ ಅಭಿಷೇಕ ಓಘವು ಪರ್ಚಿದಂದು. ವೇದಘೋಷದೊಡನೆ ಬೆರೆತುಬರುವ ಅತಿಥಿಯ ಶಿರದ ಭಾಗದಿಂದ (ಮೂರ್ಧ್ನಿಯಿಂದ) ಇಳಿದುಬರುವ ಹಾಲು ಬೆರೆತ ಪವಿತ್ರಜಲಧಾರೆಯು ಅಂದು ತ್ರಿಪುರಾರಿಯಾದ, ತ್ರಿಪುರವಿಧ್ವಂಸಕನಾದ ಶಿವನ ತಲೆಯಲ್ಲಿ ರವಗೈಯುತ್ತಾ ಬೀಳ್ವ ಧವಳಗಂಗಾಪ್ರವಾಹದ ಹೋಲಿಕೆಯನ್ನು ತಾಳಿತು. ಜಟಾಜೂಟಧರನಾದ ಪರಶಿವನ ಜಡೆಯಿಂದ ಶಬ್ದಗೈಯುತ್ತಾ ಇಳಿದುಬರುವ ದೇವ ಗಂಗೆಯ ಪ್ರವಾಹದಂತೆ ಕಂಡಿತು. ಗಂಗೆಯು ಮೇಲಿಂದ ಬಹಳ ರಭಸದಿಂದ ಧುಮುಕು ತ್ತಿರಲು ಶಿವನು ಕೆದರಿದ ತನ್ನ ಕೇಶಪಾಶದಲ್ಲಿ ಅವಳನ್ನು ಸೆರೆಹಿಡಿದು ತಡೆದನು. ಅನಂತರ ಭಗೀರಥನ ಪ್ರಾರ್ಥನೆಯಂತೆ ಹರನು ಹರಿಯಬಿಟ್ಟನು. ಧವಳಕಾಂತಿಯಿಂದೊಪ್ಪುವ ಪವಿತ್ರಗಂಗಾಪ್ರವಾಹವು (ಹಿಮಜಲವು) ಹರಿಯತೊಡಗಿತು.

ನಿಪತನ್ನೋಘಮಹಃ = ಮಹಾಪ್ರವಾಹಾ —ಅಭಿಷಿಚ್ಯತೇಽನೇನೇತ್ಯಭಿಷೇಕೋ ಜಲಮ್—ಸಮೃದ್ಧಿಸ್ತ್ರಿಪುರದ್ವಿಷಃ ಶಿವಸ್ಯ, ಮೂರ್ಧ್ನಿ=ನಿಪತಂತೀ ಗಂಗೇವ—ತ್ರಯಾಣಾಂ ಪುರಾಣಾ ದ್ವೇಷ್ಟೇತಿ ವಿಗ್ರಹಃ ॥

**15. ಸ್ತೂಯಮಾನಃ ಕ್ಷಣೇ ತಸ್ಮಿನ್ ಅಲಕ್ಷ್ಯತ ಸಬಂದಿಭಿಃ ।**
**ಪ್ರವೃದ್ಧ ಇವ ಪರ್ಜನ್ಯಃ ಸಾರಂಗೈರಭಿನಂದಿತಃ ॥ ೧೫ ॥**

ಮಂದಿಮಾಗಧರು ಆಪ್ತಜನರು ಪುರೋಹಿತ ವೃಂದವು ಸ್ತುತಿಸುತ್ತಿರಲು, ಅತಿಥಿ ಸಾರ್ವಭೌಮನು ವರ್ಧಿಸುವ ಆನಂದದಿಂದ ರಂಜಿಸುತ್ತಿದ್ದನು. ಆ ರಾಜೇಂದ್ರನು ಆ ಭೂಕುಲಲಲಾಮನು ಮಳೆಗಾಲದಲ್ಲಿ ಎದ್ದುಬರುವ ಮೋಡದಂತೆ ತೋರುತ್ತಿದ್ದನು. ಆ ಜನರ ಸ್ತುತಿಗಾನವು (ಉದ್ಘೋಷವು) ಮುಗಿಲುಮುಟ್ಟುತ್ತಿರಲು ಆ ಅತಿಥಿಕ್ಷಿತಿಪಾಲನು ಜಿಂಕೆಗಳ ವೃಂದವು ನಲಿಯುತ್ತಿರಲು (ಸಾರಂಗವೃಂದ), ಚಾತಕಪಕ್ಷಿಗಳು (ಚಕ್ರವಾಕಪಕ್ಷಿಗಳು) ಶಬ್ದಿಸುತ್ತಾ (ರವಗೈಯುತ್ತಿರಲು), ಮಳೆಗಾಲದಲ್ಲಿ ಪರ್ಜನ್ಯವನ್ನು (ಮೋಡವನ್ನು) ಕಂಡು (ಮಳೆಯನ್ನು ಕಂಡು) ಅಭಿನಂದಿಸುವಂತೆ, ಅವುಗಳಿಂದ ಅಭಿವಂದ್ಯನಾಗಿರ್ದ ಪರ್ಜನ್ಯನಂತೆ, ಅತಿಥಿಮಹಾರಾಜನು ವಿರಾಜಿಸುತ್ತಿದ್ದನು.

ತಸ್ಮಿನ್ ಕ್ಷಣೇಽಭಿಷೇಕಕಾಲೇ—ಪರ್ಜನ್ಯೋ = ಮೇಘ ಇವ—ಜೈತ್ರರಥರ್ವಭಿಃ = ವಿಜಯಿಯಾಗುವಂತೆ ಹಾಡುವ ಅಥರ್ವಮಂತ್ರಗೀತೆಗಳು,

**16. ತಸ್ಯ ಸನ್ಮಂತ್ರಪೂತಾಭಿಃ ಸ್ನಾನಮದ್ಭಿಃ ಪ್ರತೀಚ್ಛತಃ ।**
**ವವೃಧೇ ವೈದ್ಯುತಸ್ಯಾಗೇರ್ವೃಷ್ಟಿಸೇಕಾದಿವ ದ್ಯುತಿಃ ॥ ೧೬ ॥**

ಆ ನೃಪತಿಯ ಕಾಂತಿಯು ಸನ್ಮಂತ್ರತೋಯಗಳಿಂದ ಅಭಿವರ್ಧಿಸಿತು. ಪಟ್ಟಾಭಿಷಿಕ್ತನಾದ ಅತಿಥಿಕ್ಷಿತಿಪಾಲನ ತೇಜಸ್ಸು, ಕಾಂತಿ, ಸನ್‌ಮಂತ್ರಪೂರಿತ ತೀರ್ಥಜಲಧಾರೆಯಿಂದ ಪರ್ಚಿತು, ಅಧಿಕಗೊಂಡಿತು. ಇನ್ನೂ ಅಭಿವೃದ್ಧಿಗೊಂಡಿತು. ಮೋಡದಿಂದ ಹೊರ ಹೊಮ್ಮುವ ವಿದ್ಯುತ್ ಕಾಂತಿ (ಮಿಂಚು, ಕೋಲ್ಮಿಂಚು) ಮಳೆ ಸುರಿಯಲು ಆರಂಭವಾದೊಡನೆಯೇ (ಮಳೆಯ ಸೇಕದಿಂದ ಮಳೆನೀರಿನ ಅಭಿಷೇಕದಿಂದ) ಇನ್ನಷ್ಟು ಬೆಳಗುವಂತೆ, ಆ ರಾಜೇಂದ್ರನು ಅಭಿಷೇಕಾನಂತರ ಮಂತ್ರಪೂತಜಲಧಾರೆಯಿಂದ ಅಧಿಕಕಾಂತಿ

ಯಿಂದ, ಪೊಸಪೊಗರಿನಿಂದ, ದಿವ್ಯವಾದ ತೇಜದಿಂದ ತೊಳಗಿ ಬೆಳಗಿದನು. (ವೃಷ್ಟಿ ಸೇಕೋತ್ಕರದೊಳು ಆ ವೈದ್ಯುತಾಗಿ ತಾನು ಪೆರ್ಚುವೋಲ್) ಆವತೇಜಸ್ಸು, ಅಂದರೆ ಧೀಃ ಶಕ್ತಿ (ಮಾನಸಿಕ ಶಕ್ತಿ) ಹಾಗೂ ದೇಹಕಾಂತಿ, ದೇಹಬಲ ಎರಡೂ ಉತ್ಕರ್ಷವನ್ನು ಪಡೆಯಿತು.

ಸನ್ಮಂತ್ರೈಃ ಪೂತಾಭಿಃ=ಶುದ್ಧಾಭಿರದ್ಭಿಃ ಸ್ನಾನಂ ಪ್ರತೀಚ್ಛತಃ ಕುರ್ವತಸ್ತಸ್ಯ ವೃಷ್ಟಿಸೇಕಾತ್—ವಿದ್ಯುತೋಽಯಂ ವೈದ್ಯುತಃ—ದ್ಯುತಿರ್ವವೃಧೇ ॥

**17. ಸ ತಾವದಭಿಷೇಕಾಂತೇ ಸ್ನಾತಕೇಭ್ಯೋ ದದೌ ವಸು ।**
**ಯಾವತೈಷಾಂ ಸಮಾಪ್ಯೇರನ್ ಯಜ್ಞಾಃ ಪರ್ಯಾಪ್ತದಕ್ಷಿಣಾಃ ॥ ೧೭ ॥**

ಪಟ್ಟಾಭಿಷೇಕದ ನಂತರ (ಪಟ್ಟಾಭಿಷೇಕದ ಅಂತ್ಯದಲ್ಲಿ) ಆ ನರಪತಿಯು ಸ್ನಾತಕರಿಗೆ, ಗೃಹಸ್ಥರಾದ ಬ್ರಾಹ್ಮಣಶ್ರೇಷ್ಠರಿಗೆ ಭೂರಿದಕ್ಷಿಣೆಗಳನ್ನು ದಾನಾದಿಗಳನ್ನು ಮಾಡಿ ತಣಿದನು. ಅವನ ಮನಸ್ಸು ಹರ್ಷದಿಂದ ನಲಿಯಿತು. ಅವರು ಬಯಸುವ (ಅವರು ಇಚ್ಛಿಸುವ) ಅಗತ್ಯವಿರುವ ಅವರ ಯಜ್ಞಕಾರ್ಯಗಳಿಗೆ ತಕ್ಕುದಾದ ಧನಧಾನ್ಯಸಿರಿಸಂಪತ್ತನ್ನು, ಬೇಕಾದ ಸಮಸ್ತವಸ್ತುನಿಚಯವನ್ನು ದಕ್ಷಿಣೆಯಾಗಿ ಹಂಚಿದನು. ಪರಂಪರೆಯಿಂದ ಬಂದ ಕ್ರಮಗಳನ್ನು ಅನುಸರಿಸಿ ಯಜ್ಞಸಮಾಪ್ತಿಗೊಳಿಸಿದನು.

ಸೋಽತಿಥಿರಭಿಷೇಕಾಂತೇ ಸ್ನಾತಕೇಭ್ಯೋ=ಗೃಹಸ್ಥೇಭ್ಯಸ್ತಾವತ್ತಾವತ್ಪರಿಮಾಣಂ—ವಸು=ಧನಂ—ದದೌ—ಯಾವತಾ=ವಸುನಾ ಸ್ನಾತಕೇಭ್ಯ=ಗೃಹಸ್ಥೇಭ್ಯಃ=ಗೃಹಸ್ಥರಿಗೆ (ಮನೆಮಂದಿಗೆ), ಸ್ನಾತಕರಿಗೆ.

**18. ತೇ ಪ್ರೀತಮನಸಸ್ತಸ್ಮೈ ಯಾಮಾಶಿಷಮುದೈರಯನ್ ।**
**ಸಾ ತಸ್ಯ ಕರ್ಮನಿರ್ವೃತ್ತೈಃ ದೂರಂ ಪಶ್ಚಾತ್ಕೃತಾ ಫಲೈಃ ॥ ೧೮ ॥**

ಪ್ರೀತಿಮಾನಸರಾದ ಆ ಸ್ನಾತಕರು (ಗೃಹಸ್ಥರು) ತಮ್ಮ ದೊರೆಯನ್ನು ಹರಸಿ, ಆಶೀರ್ವದಿಸಿದುದರಿಂದ ದೊರೆತ ಪುಣ್ಯಫಲವು ಮೀಸಲಾಗಿ ಸೇರ್ಪಡೆಯಾಯಿತು. ಆ ರಾಜಶ್ರೇಷ್ಠನು ತನ್ನ ಹಿಂದಿನ ಜನ್ಮದಲ್ಲಿ (ಪೂರ್ವಜನ್ಮದಲ್ಲಿ) ಪುಣ್ಯಫಲದ ಮೊತ್ತವು ಅಧಿಕವಾಗಿತ್ತು. ಸಂಪ್ರೀತರಾದ ಋಷಿಮುನಿಗಳ, ಬ್ರಾಹ್ಮಣಸಜ್ಜನರ ಆಶೀರ್ವಾದದ ಫಲವನ್ನು ಮೀರಿಸಿತ್ತು. ಆ ನಿವೃತ್ತಿಫಲಗಳ ಸಹಾಯದಿಂದ ಅವನು ಇಕ್ಷ್ವಾಕು ಸಾಮ್ರಾಜ್ಯಕ್ಕೆ ಅಧಿಪತಿಯಾಗಿ ಜನಿಸಿದನು. ಈಗ ಮಾಡಿದ ಪುಣ್ಯಕರ್ಮವು ಈಗಲೇ ಫಲ ಕೊಡದು. ಮುಂದೆ ಕೊಡಬಲ್ಲುದು (ಅದು ಕಟ್ಟಿಟ್ಟ ಬುತ್ತಿ ಸರ್ವಜ್ಞ). ಆದ್ದರಿಂದ ಅದರ ಸತ್ಫಲಗಳೆಲ್ಲವೂ ಮುಂದಿನ ಜನ್ಮಕ್ಕೆ ಮೀಸಲಾಗಿರಿಸಿದಂತೆ ಎಂದು ತಿಳಿಯಬಹುದಾಗಿದೆ.

ಯಾಮಾಶಿಷಮುದೈರಯನ್=ವ್ಯಾಹರನ್—ಕರ್ಮನಿರ್ವೃತ್ತೈಃ=ಪೂರ್ವಪುಣ್ಯನಿಷ್ಪನ್ನೈಃ—ಪಶ್ಚಾತ್ ಕೃತಾ—ಸ್ವಫಲದಾನಸ್ಯ ತದಾನೀಮನವಕಾಶಾತ್ಕಾಲಾಂತರೋದ್ವೀಕ್ಷಣಂ ನ ಚಕಾರೇತ್ಯರ್ಥಃ ॥

**19. ಬಂಧಃಚ್ಛೇದಂ ಸ ಬದ್ಧಾನಾಂ ವಧಾರ್ಹಾಣಾಮವಧ್ಯತಾಮ್ |**
**ಧುರ್ಯಾಣಾಂ ಚ ಧುರೋ ಮೋಕ್ಷಂ ಅದೋಹಂ ಚಾದಿಶದ್ಗವಾಮ್**
**|| ೧೯ ||**

ಆ ಊರ್ವೀಶ್ವರನು ತಾನು ಪಟ್ಟವೇರಿದ ದಿನದ ನೆನಪಿಗಾಗಿ ಸೆರೆಮನೆಯಲ್ಲಿದ್ದ ಸೆರೆಯಾಳುಗಳನ್ನು ಬಿಡಿಸಿ ಅವರನ್ನು ಸ್ವತಂತ್ರಗೊಳಿಸಿದನು. ಬಂದಿಗಳನ್ನು ವಧಾರ್ಹರಾದ, ನೇಣುಗಂಬವನ್ನು ಏರತಕ್ಕವರಿಗೆ ಬಂಧಛೇದಮಾಡಿ ಅವರನ್ನು ಮುಕ್ತಗೊಳಿಸಿದನು. ಜೀತದಾಳುಗಳನ್ನು ಸ್ವತಂತ್ರಗೊಳಿಸಿದನು. ಶಾಸನಗಳ ಮೂಲಕ ದಾಸತ್ವದಿಂದ ಜೀತಮುಕ್ತರನ್ನಾಗಿ ಮಾಡಿದನು. ದೊಡ್ಡಿಗಳಲ್ಲಿ, ಗೋಶಾಲೆಗಳಲ್ಲಿ ಬಂದಿಸಲ್ಪಟ್ಟ ಅನಾಡಿ ತುರುಮಂದೆಯನ್ನು ಬಿಟ್ಟುಬಿಟ್ಟನು. ಹಸುಗಳನ್ನು ಪೂರ್ಣವಾಗಿ ಹಾಲು ಕರೆಯದಂತೆ, ಕರುಗಳಿಗೆ ಹಾಲು ಕೊಡುವಂತೆ, ಎತ್ತುಗಳನ್ನು ನೊಗಕ್ಕೆ ಕಟ್ಟದಂತೆ, ಹೇರನ್ನು ಒಯ್ಯದಂತೆ, ಭಾರವಾದ ವಸ್ತುಗಳನ್ನು ಒಯ್ಯದಂತೆ, ಅವುಗಳ ಜೀವನಮಾರ್ಗವನ್ನು ಸುಗಮಗೊಳಿಸಿದನು. ಪಶುವಧೆಯನ್ನು, ಗೋವದೆಯನ್ನು ನಿಷೇಧಿಸಿದನು. ಹೀಗೆ ಪಶುಪಕ್ಷಿ ಮೃಗಗಳಿಗೆ (ಜಾನುವಾರುಗಳಿಗೆ, ಚತುಷ್ಪಾದಿಗಳಿಗೆ) ತನ್ನ ಪಟ್ಟಾಭಿಷೇಕದ ಕುರುಹಾಗಿ ಸ್ವಾತಂತ್ರ್ಯದ ವಾತಾವರಣವನ್ನು, ಮುಕ್ತವಾತಾವರಣವನ್ನು ಪ್ರಚುರಗೊಳಿಸಿದನು. ಹೀಗೆ ಅತಿಥಿಸಾರ್ವಭೌಮನು ಉದಾರಗುಣಗಳನ್ನು ಪ್ರತಿಪಾದಿಸಿದ ವಿಶ್ವಮಾನವ ಸಾಮ್ರಾಟನೆನಿಸಿ ಭೂಮಂಡಲದಲ್ಲಿ ವಿರಾಜಿಸಿಧನು (ಅಹಿಂಸಾ ಪರಮೋ ಧರ್ಮಃ).

ಬದ್ಧಾನಾಂ = ಬಂಧಚ್ಛೇದಂ ವಧಾರ್ಹಾಣಾಮವಧ್ಯತಾಮ್—ತೇಷಾಂ ಧುರೋ ಭಾರಾನ್ ಮೋಕ್ಷಂ ಗವಾಮದೋಹಂ ವತ್ಸಾನಾಂ ಪಾನಾರ್ಥೇ ದೋಹನಿವೃತ್ತಿಂ ಚಾದಿಶದಾದಿದೇಶ—ಬಂಧಚ್ಛೇದಂ ಸಬದ್ಧನಾಮ್ = ಕೈದಿಗಳ ಬಿಡುಗಡೆ.

**20. ಕ್ರೀಡಾಪತತ್ರಿಣೋಽಪ್ಯಸ್ಯ ಪಂಜರಸ್ಥಾಃ ಶುಕಾದಯಃ |**
**ಲಬ್ಧಮೋಕ್ಷಾಸ್ತದಾದೇಶಾದ್ಯಥೇಷ್ಟಗತಯೋ ಭವನ್ || ೨೦ ||**

ಅಂದು ಪಂಜರದ ಗಿಣಿ (ಶುಕ) ಪಿಕ, ಬುಲ್‌ಬುಲ್, ಸಾರಿಕಾದಿಪಕ್ಷಿಗಳಿಗೆ ಬಿಡುಗಡೆಯ ದಿನವಾಗಿತ್ತು. ಅವುಗಳಿಗೆ ರಜಾದಿನವಾಗಿತ್ತು. ಅರಸನ ಘೋಷಣೆಯಿಂದ ಮೃಗಾಲಯದಲ್ಲಿ ಸಂಗ್ರಹಿಸಿದ ಹುಲಿ, ಕರಡಿ, ಸಿಂಹ, ಶಾರ್ದೂಲ, ತೋಳ, ಕಾಡೆಮ್ಮೆ, ಕಾಡುಕೋಣ, ಕತ್ತೆಕಿರುಬ, ಅಡ್ಡಬಲಿಪ, ಹಾವು, ಮುಂಗುಸಿ, ಮುಸುವ, ಮಂಗ, ಗೊರಿಲ್ಲಾ, ಕಾಡುಮನುಷ್ಯ (ಚಿಂಪಾಂಜಿ), ಒಂಟೆ, ಜೀಬ್ರಾ, ಜಿರಾಫೆ. ಘೇಂಡಾಮೃಗ, ಆನೆ, ಮರಿಯಾನೆ, ಅಂಬಾರಿ ಆನೆ, ಪಟ್ಟದಾನೆ, ನಾನಾಜಾತಿಯ ಕುದುರೆಗಳು, ಕಡವು, ಜಿಂಕೆ, ಯಾಕ್, ಕಸ್ತೂರಿಮೃಗ, ಜೀಬ್ರಾ, ಜಿರಾಫೆ, ಉಷ್ಟ್ರಪಕ್ಷಿ, ಕಂಗಾರೂ ಮೊದಲಾದ ನಾನಾ ದೇಶವಿದೇಶಗಳ ಮೃಗಪಕ್ಷಿ, ಜಲಚರಗಳನ್ನು (ನೀರುಹಂದಿ, ನೀರಾನೆ, ನೀರುಹಾವು, ಕಾಳಿಂಗಸರ್ಪ) ರಾಜಾಜ್ಞೆಯಿಂದ ಬಿಡುಗಡೆ(ಮುಕ್ತ)ಗೊಳಿಸಿದನು. ನೃಪಮನ ಆಟದ (ಕ್ರೀಡೆಯ) ಮೃಗಬೇಟೆಗೆ ಅಗತ್ಯವೆನಿಸಿರ್ದ ಡೇಗೆ, ಹದ್ದು, ಪಾರಿವಾಳಗಳನ್ನು ಅರಸನ ಆಜ್ಞೆಯಿಂದ ಬಿಡುಗಡೆಗೊಂಡು ಅವು ಸ್ವೇಚ್ಛೆಯಿಂದ ಅಂತರಿಕ್ಷದಲ್ಲಿ (ಬಾನಬಯಲಲ್ಲಿ)

ಆತಂಕವಿಲ್ಲದೆ ಹಾರಾಡಿದುವು (ವಿಶ್ವವನ್ಯಪ್ರಾಣಿಸಂರಕ್ಷಣೆ ದಿನಾಚರಣೆ—ಜನಜಾಗೃತಿ ಆಂದೋಲನಕೆ ನಾಂದಿ ಹಾಡಿದ ಆರ್ಯಜ್ಯೇಷ್ಠ).

ಪಂಜರಸ್ಥಾಃ = ಶುಕಾದಯಃ—ಕ್ರೀಡಾಪತತ್ರಿಣೋऽಪಿ ತದಾದೇಶಾತ್ತಸ್ಯಾತಿಥೇಃ = ಶಾಸನಾತ್—ಲಬ್ಧಮೋಕ್ಷಾಃ ಸಂತೋ ಯಥೇಷ್ಟಂ ಗತಿರ್ಯೇಷಾಂ ತೇ ಸ್ವೇಚ್ಛಾಚಾರಿಣೋऽಭವನ್ ॥

**21. ತತಃ ಕಕ್ಷ್ಯಾಂತರನ್ಯಸ್ತಂ ಗಜದಂತಾಸನಂ ಶುಚಿ ।**
**ಸೋತ್ತರಚ್ಛದಮಧ್ಯಾಸ್ತ ನೇಪಥ್ಯಗ್ರಹಣಾಯ ಸಃ ॥ ೨೧ ॥**

ಆ ಬಳಿಕ ಧೀರೋದಾತ್ತಗುಣಸಂಭೂತನಾದ ಕಕುತ್ಸ್ಥವಂಶೋದ್ಧಾರಕನು(ಭಾರತದ ಕಿರೀಟಸಾಮ್ರಾಟನು) ಆನೆಯ ಹೊಳೆಹೊಳೆವ, ಬಿಳಿಯ ದಂತದಿಂದ ವಿರಚಿತವಾಗಿರುವ ಭದ್ರಾಸನದಲ್ಲಿ ನೇಪಥ್ಯಕ್ಕಾಗಿ, ಉಪ್ಪರಿಗೆಯ ಕಕ್ಷ್ಯಾಂತರದಲ್ಲಿರುವ ಒಳಅಂಗಳದಲ್ಲಿರುವ, ಒಳಹಜಾರದಲ್ಲಿ (ಕಕ್ಷ್ಯಾಂತರನ್ಯಸ್ತ ಶುದ್ಧೇಭದಂತಾಸನದೊಳು) ಕುಳಿತನು. ದಂತದಿಂದ ನಿರ್ಮಿತವಾದ ಆ ಭದ್ರಪೀಠದ ಮೇಲೆ (ಗಜದಂತಾಸನ) ಶುಭ್ರವಾದ ಒಂದು ಬಟ್ಟೆಯನ್ನು ಹಾಸಿದ್ದರು. ಆದರ ಮೇಲೆ ಅತಿಥಿಭೂಪೋತ್ತಮನು ಮಂಡಿಸಿದನು. ರಾಜ ಪೋಷಾಕುಗಳನ್ನು ಪಡೆಯಲು, ತನ್ನ ಅಲಂಕಾರದ ದಿವ್ಯಾಭರಣಗಳನ್ನು ಧರಿಸಲು, ಸಿಂಗರಿಸಿಕೊಳ್ಳಲು, ತನ್ನ ಸೇವಕರಿಂದ ಸಿಂಗರಿಸಿಕೊಳ್ಳಲು, ಆ ನೇಪಥ್ಯಗೃಹದಲ್ಲಿ ಮಂಡಿಸಿದ್ದನು (ಉಪಸ್ಥಿತನಾಗಿದ್ದನು).

ನೇಪಥ್ಯಗ್ರಹಣಾಯ=ಪ್ರಸಾಧನಸ್ವೀಕರಾಯ—ಕಕ್ಷ್ಯಾಂತರಂ ಹರ್ಮ್ಯಾಂಗಣವಿಶೇಷಃ—"ಕಕ್ಷ್ಯಾಪ್ರಕೋಷ್ಠೇ ಹರ್ಮ್ಯಾದೇಃ" ಇತ್ಯಮರಃ—ಶುಚಿ = ನಿರ್ಮಲಂ—ಸೋತ್ತರಚ್ಛದಮಾಸ್ತರಣಸಹಿತಂ ಗಜದಂತಸ್ಯಾಸನಂ = ಪೀಠಮಧ್ಯಾಸ್ತ — ತತ್ರೋಪವಿಷ್ಟ ಇತ್ಯರ್ಥಃ—ನೇಪಥ್ಯಗ್ರಹಣಾಯ=ರಾಜನಿಗೆ ರಾಜಯೋಗ್ಯವಾದ ಆವರಣ, ಭೂಷಣಾದಿಗಳನ್ನು ಧರಿಸಲು ಶೃಂಗರಿಸಲು, ಬಟ್ಟೆಬರೆ, ಉಡುಗೆತೊಡುಗೆ.

**22. ತಂ ಧೂಪಶ್ಯಾನಕೇಶಾಂತಂ ತೋಯನಿರ್ಣಿಕ್ತಪಾಣಯಃ ।**
**ಆಕಲ್ಪಸಾಧನೈಸ್ತೈಸ್ತೈಃ ಉಪಸೇದುಃ ಪ್ರಸಾಧಕಾಃ ॥ ೨೨ ॥**

ಪವಿತ್ರಸ್ನಾನದ ತರುವಾಯ ಪ್ರಸಾಧಕರು, ನೇಪಥ್ಯಕಾರರು. ತೋಯನಿರ್ಣಿಕ್ತಹಸ್ತರು (ನೀರಿನಿಂದ ತೊಳೆದ ಅಂಗೈಯುಳ್ಳ=ನಿರ್ಮಲಹಸ್ತರು) ರಾಜನ ಕೇಶದ ಕೊನೆಗಳನ್ನು ಧೂಪದ ಹೊಗೆಯಿಂದ ಒಣಗುವಂತೆ, ಶೋಭಿತಗೊಳ್ಳುವಂತೆ ಮಾಡಿದರು. ಆ ಬಳಿಕ ಅಲಂಕಾರಕರ್ತರು ಅರಸನನ್ನು ನಾನಾವಿಧವಾದ ಅಲಂಕಾರದ ಸಾಮಗ್ರಿಗಳಿಂದ ಸಿಂಗರಿಸ ತೊಡಗಿದರು. (ಅಡಿಯಿಂದ ಮುಡಿಯ ತನಕ) (ಆಕಲ್ಪಸಾಧನಗಳಿಂದ).

ತೋಯೇನ ನಿರ್ಣಿಕ್ತಾ ಪಾಣಯಃ ಕ್ಷಾಲಿತಹಸ್ತಾ, ಪ್ರಸಾಧಕಾ=ಅಲಂಕರ್ತಾರೋ. ಧೂಪೇನ = ಗಂಧದ್ರವ್ಯಧೂಪೇನ ಕೇಶಾಂ ತಂ = ಶೋಷಿತಕೇಶಪಾಶಾಂತಂ—ಸಾಧನೈ ಗಂಧಮಾಲ್ಯಾದಿಭಿಃ ಉಪಸೇದುರುಪತಸ್ಥುಃ—ಅಲಂ ಚ ಕ್ರುರಿತ್ಯರ್ಥಃ—ಪ್ರಸಾಧಕಾಃ = ಪ್ರಸಾಧಕರು, ಅಲಂಕಾರಮಾಡುವವರು—ಧೂಪಶ್ಯಾನಕೇಶಾನ್ತಮ್ = ಧೂಪೇನ

ಆಶ್ಯಾನಾಃ ಕೇಶಾಂತಾ ಯಸ್ಯ (ಬಹು) ತಮ್—ಸದ್ಧೂಪಶೋಷಿತಕಚಾಗ್ರಸನಂ = ಧೂಪದ ಹೊಗೆಯಿಂದ ತಲೆಕೂದಲನ್ನು ಒಣಗುವಂತೆ ಮಾಡಿ—ಆಕಲ್ಪಸಾಧನೈಃ = ಆಕಲ್ಪಸ್ಯ (ನೇಪಥ್ಯಸ್ಯ) ಸಾಧನಾನಿ (ಷ.ತ.) ತೈಃ—ಉಪಸೇದುಃ = ಉಪ + ಸದ್ + ಲಿಟ್ ಪ್ರ. ಬಹು. = ಸಿಂಗರಿಸತೊಡಗಿದ್ದರು.

23. ತೇऽಸ್ಯ ಮುಕ್ತಾಗುಣೋನ್ನದ್ಧಂ ಮೌಲಿಮಂತರ್ಗತಸ್ರಜಮ್ ।
ಪ್ರತ್ಯೂಪುಃ ಪದ್ಮರಾಗೇಣ ಪ್ರಭಾಮಂಡಲಶೋಭಿನಾ ॥ ೨೩ ॥

ಆ ಭೂಷಣಕಲಾನಿಪುಣರು (ಪ್ರಸಾಧಕರು) ಪುಷ್ಪಮಾಲೆಯಿಂದ ಕೂಡಿದ ಮುತ್ತಿನ ಮಾಲೆಯನ್ನು ನೃಪತಿ ತಲೆಯ ಕೇಶರಾಶಿಯಲ್ಲಿ ಅಳವಡಿಸಿದರು. ಆ ಬಳಿಕ ಹೊಳೆಹೊಳೆವ ಸುಪ್ರಭಾಮಂಡಲದ, ಪದ್ಮರಾಗವನ್ನು ಚೆಲ್ಲುತ್ತಿರುವ ಮಾಣಿಕ್ಯಭೂಷಣವನ್ನು ಕಲಾತ್ಮಕವಾಗಿ ಪೋಣಿಸಿ ಇರಿಸಿದರು. ಇದರಿಂದ ರಾಜನ ಶಿರೋಭೂಷಣವು (ಮೌಲಿಯು) ರಾರಾಜಿಸಿತು. ಮೌಲಿಯು ಪದ್ಮರಾಗಪ್ರಭಾಮಂಡಲಿಯಿಂದ ಶೋಭಿಸಿತು. ಮಾಣಿಕ್ಯದ ಕಾಂತಿಯು ಸುತ್ತಲೂ ಸ್ಫುರಿಸುತ್ತ ಹೊರಸೂಸಿತು (ಹೊಳೆಹೊಳೆವ ಸುಪ್ರಭಾ ಮಂಡಲದ).

ತೇ ಪ್ರಸಾಧಕಾ=ಮುಕ್ತಾಗುಣೇನ ಮೌಕ್ತಿಕಸರೇಣೋನ್ನದ್ಧಮನ್ತರ್ಗತಸ್ರಜಮಸ್ಯಾತಿಥೇರ್ಮೌಲಿಂ—ಪ್ರಭಾಮಂಡಲಶೋಭಿನಾ ಪದ್ಮರಾಗೇಣ = ಮಾಣಿಕ್ಯೇನ ಪ್ರತ್ಯೂಪುಃ = ಪ್ರತಿ + ವಪು + ಲಿಟ್ = ಪ್ರ. ಬಹು. = ಅಲಂಕರಿಸು—ಅಂತರ್ಗತಸ್ರಜಮ್ = ಅಂತರ್ಗತಾಸ್ರಕ್‌ಯಸ್ಯ (ಬಹು) ತಮ್ = ಪುಷ್ಪಮಾಲಿಕೆಗೆ, ಮುತ್ತು, ಪದ್ಮರಾಗವನ್ನು ಚೆಲ್ಲುತ್ತಿರುವ ಮಾಣಿಕ್ಯಗಳನ್ನು ಪೋಣಿಸು.

24. ಚಂದನೇನಾಂಗರಾಗಂ ಚ ಮೃಗನಾಭಿಸುಗಂಧಿನಾ ।
ಸಮಾಪಯ್ಯೈತತಶ್ಚಕ್ರುಃ ಪತ್ರಂ ವಿನ್ಯಸ್ತರೋಚನಮ್ ॥ ೨೪ ॥

ಅವರು ಮೊದಲು ದೇಹಕ್ಕೆ ತೊಡೆಯಲು (ಹಚ್ಚಲು) ಬೇಕಾದ ಮೃಗನಾಭಿಸೌಗಂಧ (ಕಸ್ತೂರಿ)ದೊಡಮೆರೆದ, ಘಮಘಮಿಸುವ ಕಸ್ತೂರಿಯು ಬೆರೆತಿರುವ ಗಂಧದ ಶುಭಕರವಾದ ಅಂಗರಾಗವನ್ನು ತಯಾರಿಸಿ ಲೇಪಿಸಿದರು. ಆ ಬಳಿಕ ಅಮಲಗೋರೋಚನದಿಂದ ಪತ್ರ (ಎಲೆ ಆಕಾರದ ಚಿತ್ರಗಳು) ರಚನೆಗಳನ್ನು ಆ ನೃಪನ ದೇಹದಲ್ಲಿ ಮೂಡಿಸಿದರು. ಆ ರಾಜಕುಲತಿಲಕನಿಗೆ ಸರ್ವಶ್ರೇಷ್ಠವಾದ ಕಸ್ತೂರಿತಿಲಕವನ್ನಿಟ್ಟರು.

ಮೃಗನಾಭ್ಯಾ ಕಸ್ತೂರಿಕಯಾ ಸುಗಂಧಿನಾ=ಚಂದನೇನ ಅಂಗರಾಗಮಂಗವಿಲೇಪನಂ ಸಮಾಪಯ್ಯ=ಸಮಾಪ್ಯತತೋऽನಂತರಂ ವಿನ್ಯಸ್ತಾರೋಚನಾ=ಗೋರೋಚನಾ ಯಸ್ಮಿಂಸ್ತತೌ ಪತ್ರಂ ಪತ್ರರಚನಂ ಚಕ್ರುಃ—ಸಮಾಪ್ಯ = ಸಂಪಾದ್ಯ = ಸಂಪೂರ್ಣಗೊಳಿಸಿ—ಪತ್ರಮ್=ಪತ್ರರಚನಾಮ್–ತಿಲಕಮ್=ತಿಲಕ–ವಿನ್ಯಸ್ತರೋಚನಮ್=ಚಂದನ ಮತ್ತು ಹಳದಿ ಬಣ್ಣದ ಅಂಗರಾಗದಿಂದ—ಮೃಗನಾಭಿಸುಗಂಧಿನಾ=ಮೃಗನಾಭ್ಯಾಃ ಶೋಭನೋ ಗಂಧೋऽಸ್ಯಾಸ್ತೀತಿ ತೇನ = ಮೃಗನಾಭಿಸೌಗಂಧದೊಡಮೆರೆದ = ಕಸ್ತೂರಿಸುಗಂಧಮಿಶ್ರಣಂಗೈದು.

**25. ಅಮುಕ್ತಾಭರಣಃ ಸ್ರಗ್ವೀ ಹಂಸಚಿಹ್ನದುಕೂಲವಾನ್ ।**
**ಆಸೀದತಿಶಯಪ್ರೇಕ್ಷ್ಯಃ ಸ ರಾಜ್ಯಶ್ರೀವಧೂವರಃ ॥ ೨೫ ॥**

ಆ ರಾಜಕುಲತಿಲಕನು ಮಾಣಿಕ್ಯಮಾಲೆಯನ್ನು ಕೊರಳಲ್ಲಿ ಧರಿಸಿದನು. ಪುಷ್ಪಹಾರದಿಂದ ಶೋಭೆಗೊಂಡನು. ಹಂಸಚಿತ್ರವಿರುವ ಅಪ್ಪಟ ರೇಷ್ಮೆಯ ನವದುಕೂಲವನ್ನು ಉಟ್ಟು ರಾಜ್ಯಶ್ರೀಯ ಕೈಹಿಡಿಯಲು ಹೊರಟಿರುವ ಶ್ರೇಷ್ಠನಾದ ವರನಂತೆ (ಮದುಮಣಿಗ) ಶೋಭಿಸಿದನು. ಸಕಲಾವನಿಯ ರಾಜ್ಯಲಕ್ಷ್ಮೀವಧೂವರನಾದ ಅತಿಥಿಯು ಲಾವಣ್ಯಾತಿಶಯದಿಂದ ಪ್ರೇಕ್ಷಿತನಾಗಿ ಸರ್ವಜನರ ಕಣ್ಮನಗಳನ್ನು, ಹೃದಯವನ್ನು ತನ್ನತ್ತ ಸೆಳೆದನು. (ರಾಜ್ಯಲಕ್ಷ್ಮೀವಧೂವರನು)

ಅಮುಕ್ತಾಭರಣಃ=ಅಸಂಚಿತಾಭರಣಃ—ಸ್ರಜೋಽಸ್ಯ ಸಂತೀತಿ ಸಗ್ವಿ—"ಅಸ್ಮಾಯಾಮೇಧಾಸ್ರಜೋವಿನಿಃ". ಇತಿ ವಿನಿಪ್ರತ್ಯಯಃ (ಪಾಣಿನಿ)—ಹಂಸಾಹ್ವಮಸ್ಯೇತಿ ಹಂಸಚಿಹ್ನಂ ಯದ್ದುಕೂಲಂ ತದ್ವಾನ್—ಅತ್ರ ಬಹುವ್ರೀಹಿಣೈವಾರ್ಥಸಿದ್ಧೇರ್ಮತವಾನರ್ಥಕ್ಯೇಪಿ—ಹಂಸಚಿಹ್ನದುಕೂಲವಾನ್ = ಹಂಸಶ್ಚಿಹ್ನಮಸ್ಯೇತಿ ಹಂಸಚಿಹ್ನಂ = ಹಂಸಚಿಹ್ನಂ ದುಕೂಲಮಸ್ಯಾಸ್ತೀತಿ ತದ್ವಾನ್ = ಹಂಸಚಿಹ್ನೆ ಗಳುಳ್ಳ ರೇಷ್ಮೆಬಟ್ಟೆಯನ್ನು ತೊಟ್ಟು (ಹಂಸಚಿಹ್ನಾಂಬರವ್).

**26. ನೇಪಥ್ಯದರ್ಶಿನಶ್ಛಾಯಾ ತಸ್ಯಾದರ್ಶೇ ಹಿರಣ್ಮಯೇ ।**
**ವಿರರಾಜೋದಿತೇ ಸೂರ್ಯೇ ಮೇರೌ ಕಲ್ಪತರೋರಿವ ॥ ೨೬ ॥**

ತಾನು ಬಹುವಿಧದ ಅಲಂಕಾರವನ್ನು ಮಾಡಿಕೊಂಡು ಅತಿಥಿಭೂವರತಿಲಕನು ಕನಕಮಯದ ದರ್ಪಣದಲ್ಲಿ (ಕನಕಮಯ ದರ್ಪಣದೊಳ್) ತನ್ನ ಪಡಿನೆಳಲನ್ನು ನೋಡಿದನು. ಹೀಗೆ ನೋಡುತ್ತಿರಲು ಸುವರ್ಣಮೇರುಪರ್ವತವೇ ಸಿಂಹಾಸನಸ್ಥಾನವಾಗಿರುವ ಸೂರ್ಯದೇವನು ಚಿನ್ನಬಣ್ಣದಿಂದ ಝಗಝಗಿಸುತ್ತ ಜಗತ್ತನ್ನು ಬೆಳಗುವ ಸೂರ್ಯದೇವನು ಉದಿಸಿಬರುತ್ತಿರಲು, ಅದರ ಬೆಳಕಿನಲ್ಲಿ ಮೇರುಗಿರಿಯ ಮಧ್ಯದಲ್ಲಿರುವ, ಮುತ್ತುರತ್ನ, ಮಾಣಿಕ್ಯದಿಂದಲೂ ಸುವರ್ಣದಿಂದಲೂ ಅಲಂಕೃತವಾದ ದೇವತರುವಾದ, ಕೇಳಿದ್ದನ್ನು ಕೊಡುವ ಕಲ್ಪತರು(ಕಲ್ಪವೃಕ್ಷ)ವಿನಂತೆ ರಮಣೀಯನಾಗಿ, ನವಯೌವನಕಾಂತಿಯಿಂದ ಚೆಲುವಾಗಿ ಕಂಡನು. ಇನಬಿಂಬವು ಕನಕಮಯದರ್ಪಣದಂತೆ, ಕಲ್ಪವೃಕ್ಷವು ಚಿನ್ನಾಭರಣ ಮುತ್ತುಮಾಣಿಕ್ಯಗಳ ಹಾರತುರಾಯಿಗಳಿಂದ ಬಹುವಿಧ ಅಲಂಕೃತನಾದ ಅತಿಥಿಮಹಾರಾಜನಿಗೆ ಸಾಟಿಯಾದುದು. ಚಿನ್ನದ ಮೇರುಪರ್ವತದ ಮೇಲ್ಭಾಗದಿಂದ ನವಸೂರ್ಯನು ಉದಿಸಿಬರಲು, ಇನಬಿಂಬವು ಕೆಂಪು, ಹಳದಿ ಬಣ್ಣದಿಂದ ರಮಣೀಯವಾಗಿ ತೋರುವುದು. ಸುವರ್ಣಮೇರುಪರ್ವತದಂತೆ ತೋರುವ ಸುರಕುಜದ ಪಡಿನೆಳಲಂತೆ ಆ ಮಹೀರಮಣನು ಭೂತಳದಲ್ಲಿ ಪ್ರಕಾಶಿಸುತ್ತ ಎಸೆದಿರ್ದನು.

ಹಿರಣ್ಮಯೇ = ಸೌವರ್ಣ—ಆದರ್ಶೇ ದರ್ಪಣೇ ನೇಪಥ್ಯದರ್ಶಿನೋ ವೇಷಂ ಪಶ್ಯತಸ್ತಸ್ಯಾತಿಥೇಶ್ಛಾಯಾ=ಪ್ರತಿಬಿಂಬಮ್ — ಉದಿತೇ ಸೂರ್ಯೇ=ದರ್ಪಣಕಲ್ಪೇ ಮೇರೌ ಯಃ ಕಲ್ಪತರುಸ್ತಸ್ಯ ಛಾಯೇವ—ವಿರರಾಜ—ತಸ್ಯ ಸೂರ್ಯಸಂಕ್ರಾಂತಬಿಂಬಸ್ಯ ಸಂಭವಾತ್—"ಮೇರೌ" ಇತ್ಯುಕ್ತಮ್ ॥

**27. ಸ ರಾಜಕಕುದವ್ಯಗ್ರಪಾಣಿಭಿಃ ಪಾರ್ಶ್ವವರ್ತಿಭಿಃ ।**
**ಯಯಾವುದೀರಿತಾಲೋಕಃ ಸುಧರ್ಮಾನವಮಾಂ ಸಭಾಮ್ ॥ ೨೭ ॥**

ಬೆಳ್ಗೊಡೆಯೇ ಮೊದಲಾದ ಛತ್ರಚಾಮರಗಳನ್ನು, ವಂಶಪ್ರಧಾನವಾದ ಚಿಹ್ನೆ, ಇವೇ ಮೊದಲಾದ ರಾಜಚಿಹ್ನೆಗಳನ್ನು ಧರಿಸಿದ (ರಾಜಕಕುದಂ ಹಿಡಿದ) ವಂದಿಮಾಗಧರು, ರಾಜನ ಉಭಯಪಾರ್ಶ್ವದಲ್ಲಿ ನಿಂತು ಕೀರ್ತಿಸುತ್ತಿರಲು, ಘೋಷಿಸುತ್ತಿರಲು, ಜಯ ಜಯಕಾರ ಮಾಡುತ್ತಿರಲು ಅತಿಥಿಮಹೀಪತಿಯು ಸಡಗರದಿಂದ ಒಡ್ಡೋಲಗಶಾಲೆಯನ್ನು ಪ್ರವೇಶಿಸಿದನು. ಆ ಸಭಾಮಂದಿರವು ದೇವಲೋಕವಾದ ಅಮರಾವತಿಯಲ್ಲಿರುವ, ಮಹೇಂದ್ರನ ಒಡ್ಡೋಲಗಶಾಲೆಯಾದ ಸುಧರ್ಮಾ ಎಂದು ಹೆಸರಿರುವ ಸಭಾಮಂದಿರಕ್ಕೆ ಸಮಾನವಾಗಿತ್ತು. ವೈಭವದಲ್ಲಿ ಅದಕ್ಕೆ ಸಮಾನವಾಗಿರುವ ಇಲ್ಲವೆ ಕಡಿಮೆಯಲ್ಲದ ಆ ಒಡ್ಡೋಲಗಶಾಲೆಯನ್ನು ಅತಿಥಿಮಹಾರಾಜನು ಸಡಗರದಿಂದ ಪ್ರವೇಶಿಸಿದನು.

ಸೋಽತಿಥಿಃ ರಾಜಕಕುದಾನಿ ರಾಜಚಿಹ್ನಾನಿ ಛತ್ರಚಾಮರಾದೀನಿ—"ಪ್ರಾಧಾನ್ಯೇ ರಾಜಲಿಂಗೇ ಚ ವೃಷಾಂಕೇ ಕಕುದೋಽಸ್ತ್ರಿಯಾಮ್" ಇತ್ಯಮರಃ—ಪಾರ್ಶ್ವವರ್ತಿಭಿ ಜನೈರುದೀರಿತಾಲೋಕ ಉಚ್ಚಾರಿತ ಜಯಶಬ್ದಃ—"ಆಲೋಕೋ ಜಯಶಬ್ದಃ ಸ್ಯಾತ್" ಇತಿ ಹಲಾಯುಧಃ–ಸುಧರ್ಮಯಾ=ದೇವಸಭಯಾ–ಅನವಮಾಮನ್ಯೂನಾಂ ಸಭಾಮಾಸ್ಥಾನೀಂ ಯಯೌ—"ಸ್ಯಾತ್ಸುಧರ್ಮಾದೇವಸಭಾ" ಇತ್ಯಮರಃ—ರಾಜಕಕುದ = ರಾಜಚಿಹ್ನೆ (ಚಾಮರ, ಬೆಳ್ಗೊಡೆ), ಆಲೋಕ = ಜಯಕಾರ, ಕೀರ್ತಿಘೋಷ— ಸುಧರ್ಮಾ = ಇಂದ್ರನ ದರ್ಬಾರ್ ಹಾಲ್, ಒಡ್ಡೋಲಗಶಾಲೆ, ಓಲಗಶಾಲೆ.

**28. ವಿತಾನಸಹಿತಂ ತತ್ರ ಭೇಜೇ ಪೈತೃಕಮಾಸನಮ್ ।**
**ಚೂಡಾಮಣಿಭಿರುದ್ಘೃಷ್ಟ ಪಾದಪೀಠಂ ಮಹೀಕ್ಷಿತಾಮ್ ॥ ೨೮ ॥**

ಆ ರಾಜಕುಲಮೌಳಿಯು ಆ ಸಭಾಮಂದಿರದಲ್ಲಿ ವಂಶಪಾರಂಪರ್ಯದಿಂದ ಬಂದ ರತ್ನಸಿಂಹಾಸನವನ್ನು ಏರಿ ಕುಳಿತನು. ಅವನ ಕಾಲುಗಳು ಈ ಹಿಂದೆ ನೃಪಶಿರೋರತ್ನಗಳು ಉಜ್ಜುರುವ (ನೃಪಶಿರೋರತ್ನಂಗಳುಜ್ಜುರುವ) ಆನುವಂಶಿಕವಾಗಿ ಬಂದಿರುವ ಮಣಿ ಪಾದಪೀಠದ ಮೇಲೆ ಮಂಡಿಸಿದ್ದುವು. ಆಶ್ರಿತರಾಜರು ತಾವು ತಲೆಬಾಗಿ ವಂದಿಸಿದಾಗ ಅವರ ಕಿರೀಟದಲ್ಲಿರುವ ಶಿರೋರತ್ನಗಳು, ಅವರು ಧರಿಸಿದ ಚೂಡಾರತ್ನಗಳು ಮಹಾಕ್ಷಿತೀಶ್ವರನಾದ ಅತಿಥಿಯು ಪಾದಪೀಠವನ್ನು ಸೋಂಕಿ ಉಜ್ಜುರುವ ಕಲೆಗಳು ಇದೀಗ ಅತ್ಯಂತ ಸ್ಪಷ್ಟವಾಗಿ ಗೋಚರಿಸತೊಡಗಿದುವು.

ವಿತಾನೇನೋಲ್ಲೋಚೇನ ಸಹಿತಮ್—"ಅಸ್ತ್ರೀವಿತಾನಮುಲ್ಲೋಚಃ" ಇತ್ಯಮರಃ—ಮಹೀಕ್ಷಿತಾಂ ರಾಜ್ಞಾಂ ಚೂಡಾಮಣಿಭಿಃ ಶಿರೋರತ್ನೈರುದ್ಘೃಷ್ಟಮುಲ್ಲಿಖಿತಂ ಪಾದಪೀಠಂ ಯಸ್ಯ ತತ್ ಪಿತುರಿದಂ ಪೈತೃಕಮ್—ಆಸನಂ = ಸಿಂಹಾಸನಂ ಭೇಜೇ— ಪೈತೃಕಮ್ = ಪೂರ್ವಜರ—ಉದ್ಘೃಷ್ಟಪಾದಪೀಠ = ಉದ್ಘೃಷ್ಟಂ ಪಾದಪೀಠಂ ಯಸ್ (ಬಹು) ತತ್ = ಉಜ್ಜುರುವ (ಉಲ್ಲೋಚದಿಂದ ಮೆರೆಯುವ) ಆ ಪಾದಪೀಠದಿಂದ.

**29. ಶುಶುಭೇ ತೇನ ಚಾಕ್ರಾಂತಂ ಮಂಗಲಾಯತನಂ ಮಹತ್ ।**
**ಶ್ರೀವತ್ಸಲಕ್ಷಣಂ ವಕ್ಷಃ ಕೌಸ್ತುಭೇನೈವ ಕೈಶವಮ್ ॥ ೨೯ ॥**

ಅತಿಥಿಭೂವರನು ಮಹೋನ್ನತವಾದ ಶ್ರೀವತ್ಸನಾಮಂದ ಒಡ್ಡೋಲಗಸಭಾಭವನದಲ್ಲಿ ಶುಭವುಹೂರ್ತ, ಶುಭವೇಳೆಯಲ್ಲಿ ಮಂಗಳಕರವಾದ ಸಿಂಹಪೀಠದಲ್ಲಿ ವಿರಾಜಿಸಿದನು. ಅವನಿಂದ ಶ್ರೇಷ್ಠವಾದ ಆ ಪೂರ್ವಜರ ಓಲಗಶಾಲೆಯು ಕಳೆಯೇರಿತು. ಕ್ಷೀರಸಾಗರದಲ್ಲಿ ಮಲಗಿರುವ ಶ್ರೀಹರಿಯ(ಶ್ರೀ ಕೇಶವನ) ವಿಶಾಲವಾದ ವಕ್ಷಃಸ್ಥಲದಲ್ಲಿ ಕೌಸ್ತುಭಮಣಿಯು ಶೋಭಿಸುವಂತೆ, ಶ್ರೀವತ್ಸನಾಮಂದ ಶುಭಕರವಾದ, ಶುಭಸ್ಥಾನವಾದ, ಮಂಗಳಕರವಾದ ಸಭಾಭವನದಲ್ಲಿ ಅತಿಥಿಭೂವಧೂವರನು ಪೂರ್ಣಚಂದ್ರನ ತೇಜದಲ್ಲಿ ಎಸೆದನು. ವಿಶಾಲವಾದ ಸಾಮ್ರಾಜ್ಯದ ಸಂಕೇತದಂತೆಸೆವ, ಸಕಲಶುಭಚಿಹ್ನೆಗಳಿಂದ ಕೂಡಿದ ಆ ಸಭಾಭವನವು ಕೌಸ್ತುಭಾಕ್ರಾಂತವಾದ ಶ್ರೀಹರಿಯ ವಕ್ಷಃಸ್ಥಲಕೆಣೆಯೆನಿಸಿ ಮೆರೆಯುತ್ತಲಿತ್ತು. ಶ್ರೀಹರಿಯ ವಕ್ಷಃಸ್ಥಲದಲ್ಲಿ, ಶ್ರೀವತ್ಸವೆಂಬ ಮಂಗಳಕರವಾದ ಗುರುತು (ಶ್ರೀವತ್ಸಲಾಂಛನ) ಶುಭಸಂಕೇತ. ಅದೇ ರೀತಿಯಲ್ಲಿ ದರ್ಪಣ (ಗಾಜಿನ ಕನ್ನಡಿ), ಶಂಖ, ಸ್ವಸ್ತಿಕ, ಚಕ್ರ, ಬೆಳ್ಗೊಡೆ, ಗದಾ, ಪದ್ಮ, ನಂದ್ಯಾವರ್ತವೆಂಬ ಖಡ್ಗ, ಬಸವ (ನಂದಿ), ಚಾಮರಯುಗ್ಮ, ಪೂರ್ಣಕುಂಭಗಳು, ವಿಶೇಷಲಕ್ಷಣವ ಶುಭಚಿಹ್ನೆಗಳು. ಕಮಲದ ಹೂ ಅರವಿಂದ. ಉಚ್ಚೈಃಶ್ರವಸ್ಸು ಎಂಬ ಕುದುರೆ, ಕಾಮಧೇನು, ಕಲ್ಪವೃಕ್ಷ, ಐರಾವತ ಇಂದ್ರನ ಚಿಹ್ನೆಗಳು (ಕೌಸ್ತುಭಾಕ್ರಾಂತಮಾದಾ ಹರಿಯ ವಕ್ಷಕೆಣೆಮಂದು)

"ಶ್ರೀವತ್ಸೋ=ನಾಮಗೃಹವಿಶೇಷಃ ತಲ್ಲಕ್ಷಣಂ ಶ್ರೀವತ್ಸರೂಪಮ್"-"ಶ್ರೀವತ್ಸನಂದ್ಯಾವರ್ತಾದಿ ವಿಚ್ಛೇದಾ ಬಹವೋ ದ್ವಯೋಃ" ಇತಿ ಸಜ್ಜನಃ—ಮಂಪದರ್ಶಿಕಂ ಮಂಗಲಾಯತನಂ = ಮಂಗಲಗೃಹಂ ಸಭಾರೂಪಮ್—ಕೌಸ್ತುಭೇನ = ಮಣಿನಾಽಽಕ್ರಾಂತಂ =ಶ್ರೀವತ್ಸಲಕ್ಷಣಮ್–ಕೇಶವಸ್ಯೇದಂ ಕೇಶವಮ್–ವಕ್ಷ ಇವ ಶುಶುಭೇ—ಮಂಗಲಾಯತನಮ್ = ಶುಭಕರವಾದ, ಮಂಗಳನಾಮದ ಒಡ್ಡೋಲಗಶಾಲೆಯಲ್ಲಿ—ಕೌಸ್ತುಭ = ಮಹಾವಿಷ್ಣುವಿನ ಕೌಸ್ತುಭರತ್ನ.

**30. ಬಭೌ ಭೂಯಃ ಕುಮಾರತ್ವಾದಾಧಿರಾಜ್ಯಮವಾಪ್ಯ ಸಃ ।**
**ರೇಖಾಭಾವಾದುಪಾರೂಢಃ ಸಾಮಗ್ರ್ಯಮಿವ ಚಂದ್ರಮಾ ॥ ೩೦ ॥**

ಬಾಲ್ಯ ಕಳೆದೊಡನೆಯೇ ಅತಿಥಿನೃಪನು ಅಧಿರಾಜನೆನಿಸಿದನು. ಸಕಲಸಾಮ್ರಾಜ್ಯಕ್ಕೆ ಅಧಿಪತಿಯೆನಿಸಿ ಸ್ವತಂತ್ರವಾಗಿ, ಅಧಿಕಾರಸೂತ್ರವನ್ನು ತಾನೇ ಧರಿಸಿಕೊಂಡು ಮೇದಿನೀಪತಿಯೆನಿಸಿ ಆಳತೊಡಗಿದನು. ಅವನು ಯುವರಾಜನಾಗಿ ಇರದೆ ಒಮ್ಮೆಗೇ ಅಧಿರಾಜನಾದನು. ಬಾಲಚಂದ್ರನು, ತನ್ನ ಬಾಲ್ಯಚಂದ್ರತ್ವವನ್ನು ಕಳೆದೊಡನೆಯೇ, ಅರ್ಧಚಂದ್ರನಾಗದೆ ಒಮ್ಮೆಗೇ ಪೂರ್ಣಚಂದ್ರನಾಗಿ, ಪೂರ್ಣತೇಜಸ್ಸಿನಿಂದ ಬೆಳಗಿದನು. ಇಂದುಮಂಡಲದಂತೆ. ಬಾಲ್ಯ, ಕೌಮಾರ್ಯ, ಯೌವನ, ಪ್ರೌಢ, ವಾರ್ಧಕ್ಯಾದಿ ಅವಸ್ಥೆಗಳು, ನೈಸರ್ಗಿಕವಾಗಿ, ಪ್ರಕೃತಿದತ್ತವಾಗಿ, ಅನುಕ್ರಮವಾಗಿ ಬರತಕ್ಕ ಅವಸ್ಥೆಗಳು.

ಸೋಽತಿಥಿಃಕುಮಾರತ್ವಾದ್ಬಾಲ್ಯಾದ್ಭೂಯೋ=ಯೌವರಾಜ್ಯಮವಾಪ್ಯೈವಾನನ್ತರಮ್—ಅಧಿರಾಜಸ್ಯ ಭಾವಃ=ಅಧಿರಾಜ್ಯಂ ಮಹಾರಾಜ್ಯಮವಾಪ್ಯ—ರೇಖಾಭಾವಾದರ್ಧೇಂ

ದುತ್ತಮಮಾಪ್ಯೈವ ಸಾಮಗ್ರ್ಯಮುಪಾರೂಢಃ ಪೂರ್ಣತಾಂ ಗತಶ್ಚಂದ್ರಮಾ ಇವ ಬಭೌ ಇತಿ ವ್ಯಾಖ್ಯಾನಮ್—ಅಧಿರಾಜ್ಯಮ್ = ಅಧಿಕೋ ರಾಜ್ಞಾಮ್ ಅಧಿರಾಜಃ (ಪ್ರಾದಿ ತತ್ಪು.) ತಸ್ಯ ಭಾವಃ ತತ್ ॥

**31.** **ಪ್ರಸನ್ನಮುಖರಾಗಂ ತಂ ಸ್ಮಿತಪೂರ್ವಾಭಿಭಾಷಿಣಮ್ ।**
**ಮೂರ್ತಿಮಂತಮಮನ್ಯಂತ ವಿಶ್ವಾಸಮನುಜೀವಿನಃ ॥ ೩೧ ॥**

ಪ್ರಸನ್ನಮುಖರಾಗದಿಂದ, ಪ್ರಸನ್ನವದನನಾಗಿ, ಮಂದಸ್ಮಿತನಾಗಿ, ನಯವಿನಯಾದಿ ಗುಣಗಳಿಂದ ಮುಗುಳುನಗುತ್ತಾ ಆ ರಾಜಾಧಿರಾಜನು ಸಕಲ ಸಾಮಂತರಾಜರೊಡನೆ, ಬಂಧು ಜನರೊಡನೆ ಮತ್ತು ಪ್ರಜೆಗಳೊಡನೆ, ಸೇವಕರೊಡನೆ ಆತ್ಮೀಯತೆಯಿಂದ ಮಾತಾಡುತ್ತಿದ್ದನು. ತಾನೊಬ್ಬ ಸಾಮಾನ್ಯ ಮನುಷ್ಯನಂತೆ ವಿನೀತನಾಗಿ, ನಿರ್ಮಲ ಚಿತ್ತದಿಂದ ಸಂಭಾಷಿಸುತ್ತ, ಯೋಗಕ್ಷೇಮವನ್ನು ವಿಚಾರಿಸುತ್ತ ಆತ್ಮೀಯ ಭಾವನೆ ಯಿಂದಲೇ ವ್ಯವಹರಿಸುತ್ತಿದ್ದನು. ಅನುಜೀವಿಗಳು, ಆರ್ತಜನರು, ಅನಾಥರು, ವೃದ್ಧರು, ಬಡಬಗ್ಗರು, ದೀನದಲಿತರು, ದಿಕ್ಕಿಲ್ಲದ, ಬಾಳಲ್ಲಿ ಕಂಗೆಟ್ಟ ಜನರು ಆತನಲ್ಲಿ ನಂಬುಗೆಯುಳ್ಳ ವ್ಯಕ್ತಿಯೆನಿಸಿದ್ದನು. ಮೂರ್ತಿವೆತ್ತ ಆತ್ಮಬಂಧುವು (ಹಿರಿಯಣ್ಣ, ದೊಡ್ಡಣ್ಣ) ತಮ್ಮ ಪಾಲಿಗೆ ಇರುವನೆಂದೇ ಎಲ್ಲರಲ್ಲೂ ಆತ್ಮವಿಶ್ವಾಸ ತುಂಬತಕ್ಕವನು ತಾನಾಗಿದ್ದನು. ಆತನು ಸದಾ ಸೌಮ್ಯಚಿತ್ತನು, ಸ್ಮಿತಪೂರ್ವಭಾಷಣನನು. ಅಂತಹ ಉದಾತ್ತ, ಉದಾರಗುಣಪುರುಷೋತ್ತಮನಾದ ಅತಿಥಿಭೂಭುಜನು (ವಿಶ್ವಕುಟುಂಬಿ) ಇಳೆಯನ್ನು ಪಾಲಿಸುತ್ತಿದ್ದನು.

ಪ್ರಸನ್ನೋ ಮುಖರಾಗೋ=ಮುಖಕಾಂತಿರ್ಯಸ್ಯ ತಂ ಸ್ಮಿತಪೂರ್ವಂ—ಮೂರ್ತಿ ಮಂತಂ=ವಿಗ್ರಹವಂತಂ—ವಿಶ್ವಾಸಂ ವಿಸ್ರಂಭಮನ್ಯಂತ—"ಸಮೌ ವಿಸ್ರಂಭ ವಿಶ್ವಾಸೌ" ಇತ್ಯಮರಃ—ಪ್ರಸನ್ನಮುಖರಾಗಮ್ = ಪ್ರಸನ್ನಃ ಮುಖರಾಗಃ ಯಸ್ಯ (ಬ.ವ್ರೀ.) ಸ ತಮ್ = ಸೌಮ್ಯಮುಖರಾಗನನು, ಸ್ಮಿತಪೂರ್ವಭಾಷಣನನು = ಸಹಜರೀತಿಯಲ್ಲಿ ಮಾತಾಡುವವನು.

**32.** **ಸ ಪುರಂ ಪುರುಹೂತಶ್ರೀಃ ಕಲ್ಪದ್ರುಮನಿಭಧ್ವಜಮ್ ।**
**ಕ್ರಮಮಾಣಶ್ಚಕಾರ ದ್ಯಾಂ ನಾಗೇನೈರಾವತೌಜಸಾ ॥ ೩೨ ॥**

ಆ ಅತಿಥಿಚಕ್ರಾಧೀಶ್ವರನು ಪುರುಹೂತನಾದ ಇಂದ್ರನ ದೇಹಕಾಂತಿಯನ್ನು, ತೇಜಸ್ಸನ್ನು ಪಡೆದು (ಪುರುಹೂತಶ್ರೀ) ಮೆರೆಯುತ್ತಿದ್ದನು. ಇಂದ್ರನ ಅಮರಾವತಿ ಯಂತೆ, ಸಾಕೇತಪುರವು ಧ್ವಜಪತಾಕೆಗಳಿಂದ ಪರಿಶೋಭಿತವಾಗಿ ಸುರಲೋಕದಂತೆ (ದಿವಿಯಂತೆ) ಕಾಣುತ್ತಿತ್ತು. ಇಂದ್ರನ ಐರಾವತದಂತೆ ಇರುವ ಪಟ್ಟದಾನೆಯನ್ನೇರಿ (ಅಂಬಾರಿ ಆನೆಯನ್ನೇರಿ) ಅತಿಥಿಧರಾಧೀಶನು ಸಾಕೇತಪುರವನ್ನು ಪ್ರದಕ್ಷಿಣೆ ಮಾಡಲು ಹೊರಟನು. ಪಟ್ಟಾಭಿಷಿಕ್ತನಾದ ಅವನು ಎಲ್ಲಾ ವಿಧದಿಂದಲೂ ಐರಾವತವನ್ನೇರಿ ಬರುವ ಇಂದ್ರನನ್ನೇ (ಸುರೇಂದ್ರನನ್ನೇ, ದಿವಿಜರೊಡೆಯ, ಅಮರೇಂದ್ರನನ್ನೇ) ಹೋಲುತ್ತಿದ್ದನು. ಪುರಜನರು ತಮ್ಮ ರಾಜನ ದರ್ಶನದಿಂದ ಪುಲಕಿತರಾದರು, ಸಂತುಷ್ಟ ರಾದರು.

ಪುರುಹೂತಶ್ರೀಃ ಸೋऽತಿಥಿಃ—ನಾಗೇನ = ಕುಂಜರೇಣ—"ಕ್ರಮಮಾಣಶ್ಚರನ್—ಅನುಪಸರ್ಗಾದ್ವಾ" ಇತಿ ವೈಕಲ್ಪಿಕಮಾತ್ಮನೇಪದಮ್—(ಪಾಣಿನಿ)—ಸ್ವರ್ಗಲೋಕಸದೃಶೀಂ ಚಕಾರೇತ್ಯರ್ಥಃ—"ದ್ಯೌಃ ಸ್ವರ್ಗಸುರವರ್ತ್ಮನೋಃ" ಇತಿ ವಿಶ್ವಃ—ಪುರು ಕ್ರಮಮಾಣಃ ಕ್ರಮು = ಆತ್ಮನೇ ಪದ.

**33. ತಸ್ಯೈಕಸ್ಯೋಚ್ಛ್ರಿತಂ ಛತ್ರಂ ಮೂರ್ಧ್ನಿ ತೇನಾಮಲತ್ವಿಷಾ ।**
**ಪೂರ್ವರಾಜವಿಯೋಗೌಷ್ಮ್ಯಂ ಕೃತ್ಸ್ನಸ್ಯ ಜಗತೋ ಹೃತಮ್ ॥ ೩೩ ॥**

ಅತಿಥಿ ಇಳಾಧಿನಾಥನ ತಲೆಯ ಮೇಲೆ ಹಿಡಿದಿರುವ ಬೆಳ್ಗೊಡೆಯು ವಿಶಾಲವಾದ ಜಗತ್ತಿಗೆ ಆಶ್ರಯವನ್ನು ಕೊಡಲು ತಕ್ಕುದಾಗಿತ್ತು. ಅದರ ನೆರಳಲ್ಲಿ ಜಗತ್ತಿನ ಎಲ್ಲಾ ದೇಶದ ರಾಜರೂ ತಮ್ಮ ತಾಪತ್ರಯಗಳನ್ನು (ಸಂತಾಪಗಳನ್ನು) ಕಳೆದುಕೊಂಡು ನೆಮ್ಮದಿಯಿಂದ ರಾಜ್ಯಭಾರ ನಡೆಸಬಹುದಾಗಿತ್ತು. ಅದರ ಕಾಂತಿಯು ವಿಕೀರ್ಣವು, ಪಸರುವಿಕೆಯು ಬಹಳ ದೂರದ ತನಕ ಹರಡಿತ್ತು. ಅಂತಹ ಮಹತ್ವವನ್ನೂ ಆಧಿಕ್ಯವನ್ನೂ ಹೊಂದಿತ್ತು. ಜಗದೇಕಚಕ್ರವರ್ತಿಯ ಶ್ರೇಯಸ್ಸಿಗೆ, ಕೀರ್ತಿಗೆ, ಯಶಸ್ಸಿಗೆ ತಕ್ಕುದಾಗಿತ್ತು. ಎಲ್ಲರೂ ಆಶ್ರಯವನ್ನು ಪಡೆಯುವ ಬಲುಮೆ, ಒಲುಮೆ ಹಾಗೂ ಗರಿಮೆಯನ್ನು ಪಡೆದಿತ್ತು. ವಿಶ್ವವೈಶಾಲ್ಯಭಾವನೆಯ ಕೇಂದ್ರಬಿಂದುವಾಗಿತ್ತು, ನೆಲೆಮನೆಯಾಗಿತ್ತು. ನೆಲೆಯು, ಸೆಲೆಯುತವರ್ಮನೆಯಾಗಿತ್ತು. ಭಾರತೀಯ ಸಂಸ್ಕೃತಿಯ ಪ್ರತೀಕವಾಗಿತ್ತು. ಔನ್ನತ್ಯಕ್ಕೆ ತಕ್ಕುದಾಗಿತ್ತು. ಕುಶನ ವಿಯೋಗದಿಂದ ನೊಂದ ಜನತೆಗೆ ಅತಿಥಿ ಭೂಪತಿಯು ಸಾಂತ್ವನವನ್ನೂ, ನೆಮ್ಮದಿಯನ್ನೂ ತಂದಿತ್ತನು. ಲೋಕದ ಜನರ ಬೇಗೆ, ಬೇಸರವನ್ನು ದೂರೀಕರಿಸಲು ಶಕ್ತನಾಗಿದ್ದನು. ಅವರು ಅತಿಥಿಯ ಮುಖದರ್ಶನದಿಂದ, ಮುಖಾವಲೋಕನದಿಂದ ಕುಶಸಾರ್ವಭೌಮನ ಅಗಲಿಕೆಯ ದುಃಖವನ್ನು ಮರೆತರು (ಜಗದ ಉರವಣೆಯ ಬೇಗೆಯನು).

ಮೂರ್ಧ್ನಿ ಛತ್ರಮುಚ್ಛ್ರಿತಮುನ್ನಮಿತಮ್ — ವಿಯೋಗೇನ = ಯದೌಷ್ಮ್ಯಂ ಸಂತಾಪಸ್ತದ್ಧೃತಂ ನಾಶಿತಮ್—ಅತ್ರ ಛತ್ರೋನ್ನಮನ—ಸಂತಾಪಹರಣಲಕ್ಷಣಯೋಃ ಕಾರಣಕಾರ್ಯಯೋರ್ಭಿನ್ನದೇಶತ್ವಾದಸಂಗತಿರಲಂಕಾರಃ — ತದುಕ್ತಮ್ —"ಕಾರ್ಯಕಾರಣಯೋರ್ಭಿನ್ನದೇಶತ್ವೇ ಸತ್ಯಸಂಗತಿಃ"—ಇತಿ ॥ ಪೂರ್ವರಾಜವಿಯೋಗೌಷ್ಮ್ಯಂ = ಪೂರ್ವೇಷಾಂ ರಾಜ್ಞಾಂ ವಿಯೋಗೇನ (ಜನಿತಮ್) ಔಷ್ಮ್ಯಂ = ಕುಶಭೂಪತಿಯ ವಿಯೋಗದಿಂದ ನೊಂದ ಜನತೆಗೆ ಸಾಂತ್ವನ ತಂದಿರುವ—

**34. ಧೂಮಾದಗ್ನೇಃ ಶಿಖಾ ಪಶ್ಚಾದುದಯಾ ಮಂಶವೋ ರವೇ ।**
**ಸೋऽತೀತ್ಯ ತೇಜಸಾಂ ವೃತ್ತಿಂ ಸಮಮೇವೋತ್ಥಿತೋ ಗುಣೈಃ ॥ ೩೪ ॥**

ಆ ಮನುಜಕುಲೋತ್ತಮನು ತಾನು ಪಟ್ಟವೇರಿದೊಡನೆಯೆ ಸಾಮ್ರಾಟನಲ್ಲಿರಬೇಕಾದ ಎಲ್ಲಾ ಗುಣಗಳಿಂದ ಪರಿಪೂರ್ಣನಾಗಿ ಪೂರ್ಣತೇಜದಿಂದ ಬೆಳಗತೊಡಗಿದನು. ಅಗ್ನಿಯು ಚೆನ್ನಾಗಿ ಉರಿಯಬೇಕಾದರೆ, ಪ್ರಜ್ವಲಿಸಬೇಕಾದರೆ ಮೊದಲು ಹೊಗೆಯು ಅಥವಾ ಧೂಮವನ್ನು ಹರಡಿಸುವುದು, ಇದು ಅಗ್ನಿಯ ಸ್ವಾಭಾವಿಕವಾದ ಗುಣ. ಅದೇ ರೀತಿ

ಯಲ್ಲಿ ಭಗವಾನ್ ಸೂರ್ಯದೇವನು ಉದಯಕಾಲದಲ್ಲಿ ಸೌಮ್ಯನಾಗಿ ಬೆಳಕನ್ನು ಬೀರುತ್ತ ಆ ಬಳಿಕ ಚಂಡಪ್ರಚಂಡನಾಗಿ, ಅತ್ಯಂತಪ್ರಖರತೆಯಿಂದ ನೇಸರು ತೊಳಗಿ ಬೆಳಗುವುದು. ಆದರೆ ಅತಿಥಿಸಾರ್ವಭೌಮನು ಅವುಗಳ ವೃತ್ತಿಗಳನ್ನು ಅಥವಾ ಗುಣ ಧರ್ಮಗಳನ್ನು ಅತಿಕ್ರಮಿಸುತ್ತ ಪಟ್ಟವೇರಿದೊಡನೆಯೇ ಅಖಿಲ ಗುಣಗಳಿಂದ ಮಹಾನವಾ ಗ್ರೇಸರನಲ್ಲಿ ರಾಷ್ಟ್ರನಾಯಕರಲ್ಲಿ (ರಾಷ್ಟ್ರಪುರುಷನಲ್ಲಿ) ಇರಬೇಕಾದ ದಯೆ, ಔದಾರ್ಯ, ಪ್ರತಾಪ, ಶೌರ್ಯ, ಧೈರ್ಯಸಾಹಸ, ಚಾಣ್ಮೆ, ಶಾಸ್ತ್ರಜ್ಞಾನ, ಅರ್ಥಜ್ಞಾನ, ತಂತ್ರಜ್ಞಾನ, ವಿಷಯಜ್ಞಾನ, ಸಮಯಪ್ರಜ್ಞೆ, ಮುಂದಾಲೋಚನೆ, ಭಕ್ತಿ, ಜ್ಞಾನ, ಸ್ನೇಹ, ಪ್ರೀತಿ ಅನುಕಂಪಾದಿ ಕಷ್ಟಸಹಿಷ್ಣುತೆ, ನಿರ್ಮಲಚಿತ್ತ, ಇಂದ್ರಿಯನಿಗ್ರಹ ಸದ್ಗುಣಗಳ ಪ್ರತೀಕವೇ (ಗುಣನಿಧಿಯೇ) ಆಗಿ ಉದಯಿಸಿದನು (ತದ್ವೃತ್ತಿಯನು ಅತಿಕ್ರಮಿಸುತ ಉದಯಿ ಸಿದನು).

ಅಗ್ನೇರ್ಧೂಮಾತ್ ಪಶ್ಚಾತ್—ಅನಂತರಮಿತ್ಯರ್ಥಃ—ಶಿಖಾ=ಜ್ವಾಲಾ—ರವೇರು ದಯಾತ್ ಪಶ್ಚಾದನಂತರವಂಶವಃ—ಸೋऽತಿಥಿಸ್ತಜಸಾಮಗ್ನ್ಯಾದೀನಾಂ ವೃತ್ತಿಂ ಸ್ವಭಾವಮಮತೀತ್ಯ ಗುಣೈಃ ಸಮಂ ಸಹ ಏವ—ಉತ್ಥಿತ = ಉದಿತಃ—ಅಪೂರ್ವಮಿದ ಮಿತ್ಯರ್ಥಃ ॥

**35. ತಂ ಪ್ರೀತಿವಿಶದೈರ್ನೇತ್ರೈಃ ಅನ್ವಯುಃ ಪೌರಯೋಷಿತಃ ।**
**ಶರತ್ಪ್ರಸನ್ನೈರ್ಜ್ಯೋತಿರ್ಭಿರ್ವಿಭಾವರ್ಯ ಇವ ಧ್ರುವಮ್ ॥ ೩೫ ॥**

ಪ್ರೀತಿ, ಪ್ರೇಮವಿಷಯದ ಆ ಲೋಕನೇತ್ರೆಯರು, ವಿಶಾಲಾಕ್ಷಿಯರು, ಪ್ರೀತಿಗೌರವ ಕಟಾಕ್ಷದ ಚೆಲುವೆಯರಾದ ಆ ಪುರವನಿತೆಯರು (ಪ್ರಸನ್ನಚಿತ್ತರಾಗಿ, ಪ್ರಸನ್ನವದನೆಯ ರಾಗಿ) (ಪ್ರೀತಿವಿಶದಾಲೋಕನೇತ್ರೆಯರು) ಅವನನ್ನು ಎಲ್ಲೆಡೆಯಲ್ಲೂ, ಎಲ್ಲಾ ಕಡೆಯಿಂದಲೂ, ನಾಲ್ಕು ದಿಕ್ಕುಗಳಿಂದಲೂ, (ನಾಲ್ಕು ನಿಟ್ಟನಿಂದಲೂ) ಅನುಸರಿಸಿದರು. ಆ ಚೆಲುವಿನ, ನಲವಿನ, ಗೆಲವಿನ, ಒಲವು ಬೀರುವ ಉತ್ಪಲಾಕ್ಷಿಯರು (ಚದುರೆಯರು) ಶರತ್ಕಾಲದ ನಕ್ಷತ್ರಗಳಿಂದ ಕೂಡಿದ ರಾತ್ರಿಕಾಲವು (ಯಾಮಿನಿಯು, ರಾತ್ರಿಯೆಂಬ ಹೆಣ್ಣು) (ಬೆಳಕಿನ) ಪ್ರಭಾವಲಯದಿಂದ ಪ್ರಫುಲ್ಲಿತವಾದ ಧ್ರುವನಕ್ಷತ್ರವನ್ನು ಅನುಸರಿಸು ವಂತೆ ಅಪೌರಾಂಗನೆಯರು ಪ್ರಸನ್ನಚಿತ್ತರಾಗಿ ತಮ್ಮ ಕಡೆಗಣ್ಣಿನ ಕೊನೆಯಲ್ಲಿ ಮೋಹ ರಸವನ್ನು ಬೀರುವ ಬೆಳಕನ್ನು ಬೀರುತ್ತ ನಲವಿಂದ ಅರಸನನ್ನು ಅನುಸರಿಸಿದರು.

ಪ್ರೀತ್ಯಾ ವಿಶದೈಃ ಪ್ರಸನ್ನೈರ್ನೇತ್ರೈಃ ಕರಣೈಸ್ತಮತಿಥಿಮ್—ಶರದಿ ಪ್ರಸನ್ನೈ ರ್ಜ್ಯೋತಿರ್ಭಿರ್ನಕ್ಷತ್ರೈರ್ವಿಭಾವರ್ಯೋ=ರಾತ್ರಯೋ ಧ್ರುವಮಿವ—ಧ್ರುವಪಾಶಬದ್ಧ ತ್ವಾತ್ತಾರಾಚಕ್ರಸ್ಯೇತ್ಯರ್ಥಃ—ನೇತ್ರೈಃ ಪ್ರೀತಿವಿಶದೈಃ ಅನ್ವಯುಃ = ಪ್ರೀತಿವಿಶದಾಲೋಕ ನೇತ್ರೆಯರು ಪ್ರೀತಿಯಿಂದ ನೋಡಿದರು, ಅವನನುಸರಿಸಿದರು.

**36. ಅಯೋಧ್ಯಾದೇವತಾಶ್ಚೈನಂ ಪ್ರಶಸ್ತಾಯತನಾರ್ಚಿತಾಃ ।**
**ಅನುದಧ್ಯುರನುಧ್ಯೇಯಂ ಸಾಂನಿಧ್ಯೈಃ ಪ್ರತಿಮಾಗತೈಃ ॥ ೩೬ ॥**

ಅಯೋಧ್ಯೆಯ ವಿಸ್ತಾರವಾದ ದೇವಮಂದಿರಗಳಲ್ಲಿರುವ ನಿರ್ಗುಣಾಕಾರದ ದೇವತೆಗಳ ಸಗುಣರೂಪದಿಂದ ಆಯಾಯ ವಿಗ್ರಹದಲ್ಲಿ ತಾವು ಪ್ರತಿಷ್ಠಿತರಾದರು. ಅವನು ನಡೆಸಿದ ಪ್ರಶಸ್ತ್ಯಾಯತನದ ಅರ್ಚನೆಯನ್ನು ಸ್ವೀಕರಿಸಿ ತಮ್ಮ ಶಕ್ತಿಗನುಗುಣವಾದ ಅನುಗ್ರಹ ಗಳನ್ನು ಪ್ರಜೆಗಳ ಸರ್ವತೋಮುಖವಾದ ಅಭಿವೃದ್ಧಿಗಾಗಿ ಒಲಿದು ಅನುಗ್ರಹಿಸಿದರು. ಆ ದೇವತೆಗಳು ಕ್ಷಾಮ, ಡಾಮರ, ಕ್ಷೋಭೆ, ವಿಪ್ಲವ, ಕ್ರಾಂತಿ ಮೊದಲಾದ ದುಷ್ಟಶಕ್ತಿ ಗಳಿಂದ ಜನರಿಗೆ ಸಂಪೂರ್ಣ ರಕ್ಷಣೆಯನ್ನು ಒದಗಿಸಿದುವು. ಈ ರೀತಿಯಲ್ಲಿ ಆ ಸದ್ಬುದ್ಧಿಯ ರಾಜನನ್ನು ಸಾಕೇತದೇವತೆಗಳು ಬೆಂಬಲಿಸಿದುವು. ಆ ದೇವತೆಗಳು ತಮ್ಮ ಸಾನ್ನಿಧ್ಯವಾದ ದೇವಮಂದಿರಗಳಲ್ಲಿ ಅನುಗ್ರಹಿಸಲು ನೆಲೆನಿಂತಿದ್ದರು. ಪ್ರಕೃತಿಯಲ್ಲಿರುವ ಪಂಚಭೂತಗಳ ಸಾಮರಸ್ಯದಿಂದ ಮಾನವನ ಕಲ್ಯಾಣವಾಗುವುದು ಸಹಜವಷ್ಟೆ.

ಸಾಂನಿಧ್ಯೈಃ = ಸನ್ನಿಧಾನೈಃ—ಅನುದಧ್ಯುರನುಜಗೃಹುಃ—ಅನುಧ್ಯಾನಮನುಗ್ರಹಃ ಇತ್ಯುತ್ಪಲಮಾಲಾಯಾಮ್—ತದನುಗ್ರಹಬುದ್ಧ್ಯಾ ಸನ್ನಿದಧುರಿತ್ಯರ್ಥಃ ॥

**37. ಯಾವನ್ನಾಶ್ಯಾಯತೇ ವೇದಿರಭಿಷೇಕಜಲಾಪ್ಲುತಾ ।**
**ತಾವದೇವಾಸ್ಯ ವೇಲಾಂತಂ ಪ್ರತಾಪಃ ಪ್ರಾಪ ದುಃಸಹಃ ॥ ೩೭ ॥**

ಅಭಿಷೇಕಜಲದಿಂದ ಒದ್ದೆಯಾದ ವೇದಿಯು ಪೂರ್ಣವಾಗಿ ಒಣಗುವ (ಆರುವ) ಮೊದಲೇ ಆ ಲೋಕವಂದ್ಯನಾದ, ಮಹಾಧನುರ್ಧರನಾದ ರಾಜರಾಜನ ತಡೆಯಲಸದಳ ವಾದ (ದುಸ್ಸಹವಾದ) ಪ್ರತಾಪಾದಿ ಗುಣಗಳ ತೇಜೋಕಾಂತಿಯು ನಾಲ್ಕುಸಾಗರ ಪರ್ಯಂತ ಪಸರಿಸಿತು (ಆಪೂವೇಲಾಂಬರು ಬಿಡದೆ ಪರಿದಿರ್ದುದತ್ತ) ಹರಡಿತು (ಪರಿದಿರ್ದುದು). ಆ ಮಹಾನ್ ಚಕ್ರವರ್ತಿಯು ದೇಶದಲ್ಲಿ ಆರ್ಥಿಕ ಭದ್ರತೆ ನೆಲಸಿತ್ತು. ಆ ಪಾರ್ಥಿವನ ಸೈನಿಕಶಕ್ತಿಯು ಅಭೇದ್ಯವಾಗಿತ್ತು. ಅವನ ತಳ್ಳಿಗೆ ಬರುವ ತಾಕತ್ತು ಅರಿರಾಯರಿಗಿರಲಿಲ್ಲ. ಅಭಿಷೇಕಜಲವು ವೇದಿಯ ಭೂಮಿಯಲ್ಲಿ ಆರುವ ಮೊದಲೇ ಅವನ ಶೌರ್ಯ, ಧೈರ್ಯ, ಪ್ರತಾಪಾದಿಗಳ ಕೀರ್ತಿದುಂದುಭಿ ನಾಲ್ಕು ಸಮುದ್ರಗಳ ಪರ್ಯಂತ ಮುಟ್ಟಿತು. ಆತನ ಸುಪ್ರತಿಷ್ಠಿತ ಕೀರ್ತಿದ್ಯುತಿ ವಿಸ್ತರಿಸಿತು.

ಅಭಿಷೇಕಜಲೈರಾಪ್ಲುತಾಸಿಕ್ತಾವೇದಿರಭಿಷೇಕವೇದಿಃ — ಯಾವನ್ನಾಶ್ಯಾಯತೇ ನ ಶುಷ್ಯತಿ—ಕರ್ತರಿ ಲಟ್—ತಾವದೇವಾಸ್ಯ ರಾಜ್ಞೋ ದುಃಸಹಃ ಪ್ರತಾಪೋ—ವೇಲಾಂತಂ = ವೇಲಾಪರ್ಯಂತಂ—ಪ್ರಾಪ—ಅಭಿಷೇಕಜಲಾಪ್ಲುತಾ = ಅಭಿಷೇಕಜಲೈಃ ಪ್ಲುತಾ (ತೃ.ತತ್ಪು.) ॥

**38. ವಸಿಷ್ಠಸ್ಯ ಗುರೋರ್ಮಂತ್ರಾಃ ಸಾಯಕಾಸ್ತಸ್ಯ ಧನ್ವಿನಃ ।**
**ಕಿಂ ತತ್ಸಾಧ್ಯಂ ಯದುಭಯೋಃ ಸಾಧಯೇಯುರ್ನ ಸಂಗತಾಃ ॥ ೩೮ ॥**

ರಾಜಗುರುಗಳಾದ, ಮಂತ್ರದ್ರಷ್ಟಾರರಾದ ದೇವಋಷಿ ವಸಿಷ್ಠಮಹರ್ಷಿಗಳ, ಆಶೀರ್ವಾದದ ಬಲವು, ಮಂತ್ರಶಕ್ತಿಯೂ, ಮಂತ್ರಾಲೋಚನೆ (ಮಂತ್ರಾಲೋಚನೆ ಆಲೋಚನಾಸಾಮರ್ಥ್ಯ (ಮುತ್ಸದ್ದಿತನ), ಸಲಹೆ, ಸೂಚನೆ, ಮಾರ್ಗದರ್ಶನ ಆ ಲೋಕ ವಂದ್ಯನಾದ ಅತಿಥಿಮಹಾರಾಜನ ಬೆಂಬಲಕ್ಕಿರಲು ಇನ್ನು ಹೇಳುವುದು ಏನಿದೆ ? ಅವನಿಗೆ ಜಯವಲ್ಲದೆ ಅಪಜಯವಿಲ್ಲ, ಅವನಿಗೆ ಅಸಾಧ್ಯವಾದುದು ಲೋಕದಲ್ಲಿ ಯಾವುದು ಇದೆ ?

(ಯಾವುದೂ ಇತರಿಲ್ಲ) ಶಸ್ತ್ರವಿದ್ಯಾಪಾಂಡಿತ್ಯವುಳ್ಳ (ಶಸ್ತ್ರಪಂಡಿತನಾದ) ಅವನ ಬಾಣಾವಳಿಗೆ (ಸಾಯಕದ) ಎದುರು ನಿಲ್ಲುವ. ಮಾರ್ವಲೆತು ನಿಲ್ಲುವ ಎದೆಗಾರಿಕೆ ಯಾರಿಗಿದೆ. ಈರೇಳು ಹದಿನಾಲ್ಕು ಲೋಕಗಳೂ ನಡುಗಿಸುವ ಶಸ್ತ್ರವಿದ್ಯೆ ಅವನಿಗೆ ಸಿದ್ಧಿಸಿತ್ತು. ಅವನು ಅಪಾರವೀರ್ಯನು. ಸಾಮ್ರಾಜ್ಯವೆಂಬ ನೌಕೆಯನು ನಡೆಸಬಲ್ಲ ಕರ್ಣಧಾರನು. ಅವನಿಗೆ ಎಲ್ಲವೂ ಸಾಧ್ಯವಾಗಿತ್ತು. ಆ ರಾಜನ ಬಿಲ್ಲಿನಿಂದ ಹೊರಡುವ ನಾರಾಚಗಳ ಜೊತೆಗೆ ಪರಮಜ್ಞಾನಿಗಳಾದ ವಸಿಷ್ಠರ ಜ್ಞಾನವಾಹಿನಿಯಿರಲು (ಜ್ಞಾನಗಂಗಾ, ಚಿಂತನಗಂಗಾ) ಅವರ ಆಲೋಚನೆಗಳು ಬೆರೆತಿರಲು (ಆ ಉಭಯರೂ ಒಂದಾಗಿರಲು) ಆ ರಾಜನು ಸಾಧಿಸಲ್ಕರಿದು ಆವುದಿದೆ ? ಸೈನಿಕಶಕ್ತಿಯೊಂದಿಗೆ (ಮಾನವಸಂಪತ್ತು) ಜ್ಞಾನಸಂಪನ್ನರ ಮಾರ್ಗದರ್ಶನದಿಂದ (ಇಂದ್ರಬೃಹಸ್ಪತಿಯರಂತೆ) ಜಗತ್ತಿನ ಕಲ್ಯಾಣ ಸಾಧ್ಯ. ಸಮಾಜದ ನಾಲ್ಕು (ಘಟಕಗಳು) ಪ್ರಧಾನವಿಭಾಗದ ಜನರು ಸಾಮರಸ್ಯದಿಂದ ಬೆರೆತಿದ್ದರೇನೆ ದೇಶದ ಕಲ್ಯಾಣ, ಸರ್ವತೋಮುಖ (ಆರ್ಥಿಕ, ಸಾಮಾಜಿಕ) ಅಭಿವೃದ್ಧಿ ಸಾಧ್ಯವೆನಿಸುವುದು. (ಆ ಧನುರ್ಧರನ ನಾರಾಚಗಳ್ ಸರಿಯೆ) ಗುರೋರ್ವಸಿಷ್ಠಸ್ಯ ಮಂತ್ರಾಃ—ಧನ್ವಿನಸ್ತಸ್ಯ ತಿಥೇ ಸಾಯಕಾಃ—ಇತ್ಯುಭಯೋ ಸಂಗತಾಃ ಸಂತೋ ಯತ್ ಸಾಧ್ಯಂ ನ ಸಾಧಯೇಯುಸ್ತಾದೃಕ್ ಸಾಧ್ಯಮ್ ಕಿಮ್—ತೇಷಾಮಸಾಧ್ಯಂ ನಾಸ್ತೀತಿ ಭಾವಃ—ಮಂತ್ರಾ= ಮಂತ್ರಾಲೋಚನೆ, ಸಲಹೆ, ಸೂಚನೆ.

**39. ಸ ಧರ್ಮಸ್ಥಸಖಃ ಶಶ್ವತ್ ಅರ್ಥಿಪ್ರತ್ಯರ್ಥಿನಾಂ ಸ್ವಯಮ್ ।**
**ದದರ್ಶಸಂ ಶಯುಚ್ಛೇದ್ಯಾನ್ ವ್ಯವಹಾರಾನತಂದ್ರಿತಃ ॥ ೩೯ ॥**

ಅವನಿಗೆ ಧರ್ಮಶಾಸ್ತ್ರಗಳ ಜ್ಞಾನ ಕರತಲಾಲಕವಾಗಿತ್ತು. ವಾದಿಪ್ರತಿವಾದಿಗಳ ಗಂಭೀರ ರೀತಿಯ ಅತ್ಯಂತ ಸೂಕ್ಷ್ಮವಾದ ವಿಚಾರಗಳನ್ನು ಸ್ವತಃ ಪರಿಶೀಲಿಸುತ್ತಿದ್ದನು. ಸಂಶಯಗ್ರಸ್ತವಾದ ವಿಷಯವನ್ನು (ವ್ಯವಹಾರ ಸ್ವಯಂ ಪಶ್ಯೇತ) ತಾನೇ ವಿಚಾರಿಸಿ ಪಕ್ಷಪಾತರಹಿತ ನ್ಯಾಯವನ್ನು ನೀಡುತ್ತಿದ್ದ ಧರ್ಮದೊರೆಯವನು. ಎಷ್ಟೇ ಕಷ್ಟಕರವಾದರೂ ಕಗ್ಗಂಟುಗಳಾದರೂ ಅವನು ಭೇದಿಸದೆ ಬಿಡುತ್ತಿರಲಿಲ್ಲ. ಅಂತಹ ವಿಚಾರ ವಿಚಕ್ಷಣನು. ನ್ಯಾಯಾಧೀಶರ ಶಿರೋಮಣಿ ತಾನಾಗಿ ದಕ್ಷತೆಯಿಂದ ತೀರ್ಮಾನಿಸುವ ಚಾಕಚಕ್ಯತೆಯನ್ನು ಹೊಂದಿದ ಧರ್ಮದರ್ಶಿ.

ಧರ್ಮೇ ತಿಷ್ಠಂತೀತಿ ಧರ್ಮಸ್ಥಾಃ ಸಭ್ಯಾಃ—"ರಾಜ್ಞಾ ಸಭಾಸದಃ ಕಾರ್ಯಾರಿಪೌ, ಮಿತ್ರೇ ಚ ಯೇ ಸಮಾಃ" ಇತ್ಯುಕ್ತಲಕ್ಷಣಾಃ ತೇಷಾಂ ಸಖಾಧರ್ಮಸ್ಥ ಸಖಃ—ಅತಂದ್ರಿತೋಽನಲಸಃ ಸ ನೃಪಃ ಶಾಶ್ವತ್—ಪ್ರತ್ಯರ್ಥಿನಾಂ=ತದ್ವಿರೋಧಿನಾಂ ಚ ಸಂಶಯಚ್ಛೇದ್ಯಾನ್ = ಸಂಶಯಾದ್ಧೇತೋಶ್ಛೇದ್ಯಾನ್ ಪರಿಚ್ಛೇದ್ಯಾನ್—ಸಂದಿಗ್ಧತ್ವಾದವಶ್ಯ ನಿರ್ಣೇಯಾನಿತ್ಯರ್ಥಃ ವ್ಯವಹಾರಾ ನೃಣಾ ದಾನಾದಿ ವಿವಾದಾನ್—ಸ್ವಯಂ ದದರ್ಶನಂ ಸಂದಧೌ—ಧರ್ಮಸ್ಥಸಖಃ = ಧರ್ಮೇ ತಿಷ್ಠಂತೀತಿ ಧರ್ಮಸ್ಥಾಃ (ಉಪಪದತತ್ಪು.) ತೇಷಾಂ ಸಖಾ (ಷ.ತತ್ಪು.) = ಧರ್ಮಾತ್ಮ ಅರ್ಥಿ—ಪ್ರತ್ಯರ್ಥಿನಾಮ್ = ವಾದಿ, ಪ್ರತಿವಾದಿಗಳು—ಸಂಶಯುಚ್ಛೇದ್ಯಾನ್ = ಸಂಶಯಗ್ರಸ್ತವಾದ ವಿಷಯವನ್ನು ಭೇದಿಸು, ದಕ್ಷತೆಯಿಂದ ತೀರ್ಮಾನ ನೀಡು.

**40. ತತಃ ಪರಮಭಿವ್ಯಕ್ತ ಸೌಮನಸ್ಯ ನಿವೇದಿತೈಃ ।**
**ಯುಯೋಜ ಪಾಕಾಭಿಮುಖೈಃ ಭೃತ್ಯಾನ್ ವಿಜ್ಞಾಪನಾ ಫಲೈಃ ॥ ೪೦ ॥**

ರಾಜ್ಯವ್ಯವಹಾರದರ್ಶನಾನಂತರ ಆ ರಾಜೇಂದ್ರನು ತನ್ನ ಭೃತ್ಯರ ಇಷ್ಟಾರ್ಥವೇನೆಂದು ಸೌಮನಸ್ಯಭಾವದಿಂದ ಕೇಳಿ ತಿಳಿದುಕೊಳ್ಳುವನು. ಕೂಡಲೇ ಆ ಸೇವಕರ ಕೋರಿಕೆಗಳ ಇಷ್ಟಾರ್ಥಸಿದ್ಧಿಯನ್ನು ನೆರವೇರಿಸಿಕೊಟ್ಟು ಅವರ ಬೇಡಿಕೆಗಳು ಒಡನೊಡನೆಯೆ ಫಲಪಡೆವುವು. "ಪಾರ್ಕಲಾಂ—ನಾಳೆ ನೋಡೋಣ, ಮುಂದೆ ನೋಡೋಣ" ಎಂದು ಹೇಳಿ ತಳ್ಳಿಹಾಕುತ್ತಿರಲಿಲ್ಲ. ಸುಮನಸಭಾವನೆಯಿಂದ ಪ್ರಸಾದಹಸ್ತದಿಂದ ಅವರ ಕಾಮನೆಗಳನ್ನು ವಿಜ್ಞಾಪನೆಗಳು ಫಲಕೊಡುತ್ತಿದ್ದುವು. ಹೂ ಮೊಗ್ಗು ಫಲ ಬಿಟ್ಟಂತೆ, ಗಂಗಾಜಲದ ಸೆಲೆಯಂತೆ. ಅಂತರ್ಜಲ ಕಾರಂಜಿಯಂತೆ.

ತತಃಪರಂ ವ್ಯವಹಾರದರ್ಶನಾನಂತರಂ ಭೃತ್ಯಾನನುಜೀವಿನಃ—ಅಭಿವ್ಯಕ್ತಂ ಮುಖಪ್ರಸಾದಾದಿಲಿಂಗೈಃ ಸ್ಫುಟೀಭೂತಂ ಯತ್ ಸೌಮನಸ್ಯಂ ಸ್ವಾಮಿನಃ ಪ್ರಸನ್ನತ್ವಂ ತೇನ ನಿವೇದಿತೈಃ ಸೂಚಿತೈಃ—ಅತ್ರ ಬೃಹಸ್ಪತಿಃ—"ನಿಯುಕ್ತಃ ಕರ್ಮನಿಷ್ಪತ್ತೌ ವಿಜ್ಞಪ್ತೌ ಚ ಯದೃಚ್ಛಯಾ—ಭೃತ್ಯಾಂದನ್ಯೈರ್ಮಾನಯುಂಸ್ತು ನವೋಪ್ಯಾಕ್ಷೋಭ್ಯತಾಂ ವ್ರಜೇತ್" ಇತಿ—ಕವಿಶ್ಚ ವದಯತಿ "ಅಕ್ಷೋಭ್ಯ" ಇತಿ ಅತ್ರ ಸೌಮನಸ್ಯ ಫಲಯೋಜನಾದಿಭಿರ್ನೃಪಸ್ಯ ವೃಕ್ಷಸಮಾಧಿರ್ಧ್ವನ್ಯತ ಇತ್ಯನುಸಂಧೇಯಮ್—ಅಭಿವ್ಯಕ್ತ = ಅಭಿವ್ಯಕ್ತಂ ಸೌಮನಸ್ಯಮ್ (ಕರ್ಮ) ಪಾಕಾಭಿಮುಖೈಃ = ಬೇಡಿಕೆಗಳನ್ನು ಈಡೇರಿಸಿಕೊಡುವ ವಿಜ್ಞಾಪನಾಫಲೈ ಯುಯೋಜ=ಅವರಕೋರಿಕೆಗಳು ಒಡನೆಯೇ ಫಲಪಡೆದುವು.

**41. ಪ್ರಜಾಸ್ತದ್ಗುರುಣಾ ನದ್ಯೋ ನಭಸೇನವಿವರ್ಧಿತಾ ।**
**ತಸ್ಮಿಂಸ್ತು ಭೂಯಸೀಂ ವೃದ್ಧಿಂ ನಭಸ್ಯೇತಾ ಇವಾಯಯುಃ ॥ ೪೧ ॥**

ಅಂದು ಶ್ರಾವಣಮಾಸದ ನದಿಗಳಂತೆ ಕುಶಭೂಪಾಲನಿಂದ ಪ್ರಜೆಗಳನ್ನು ಪೂರ್ಣವಾದ ಸಂತುಷ್ಟಿಯನ್ನು ಪಡೆದಿದ್ದರು. ಆದರೆ ಇಂದು ಕುಶಪುತ್ರನಿಂದ ಅಧಿಕಸಂಪತ್ತನ್ನು ತುಷ್ಟಿ, ಪುಷ್ಟಿಯನ್ನು ಪಡೆದರು. ಭಾದ್ರಪದಮಾಸದಲ್ಲಿ ಅದೇ ನದಿಗಳು ಉಕ್ಕಿಹರಿದು ಅಮಿತ ವೃದ್ಧಿಯನ್ನು ಪಡೆದು ಸಂಪತ್ತು, ಸಮೃದ್ಧಿಯು ಅಧಿಕಗೊಂಡು ಪ್ರಜೆಗಳಿಗೆ ಅಧಿಕ ತೃಪ್ತಿ ನೀಡುವುದು. ಜನರು ಸಂತುಷ್ಟರಾಗಿರುತ್ತಿದ್ದರು. ಅತಿಥಿಯ ರಾಜ್ಯಭಾರಕಾಲದಲ್ಲಿ ಇನ್ನೂ ಹೆಚ್ಚಿನ ವೃದ್ಧಿಯನ್ನು ಪಡೆದು, ಜಲಪ್ರವಾಹದಿಂದ ತುಂಬಿತುಳುಕುವ ಭಾದ್ರಪದ ತೊರೆಗಳಂತೆ ವಿರಾಜಿಸಿದರು (ಪ್ರಕಾಶಿಸಿದರು). ಪ್ರಜೆಗಳನ್ನು ತಂದೆಯಂತೆ, ಹೆತ್ತ ಮಕ್ಕಳನ್ನು ತಾಯಿಯು ಪೋಷಿಸುವಂತೆ ಪೊರೆಯುತ್ತಿದ್ದನು.

ನಭಸಾ = ಶ್ರಾವಣಮಾಸೇನ—ವಿವರ್ಧಿತಾಃ ತಸ್ಮಿನ್ನತಿಥೌ ತು ನಭಸ್ಯೇ=ಭಾದ್ರಪದೇ ಮಾಸೇ ತಾ ಇವ ನದ್ಯ ಇವ ಭೂಯಸೀಂ ವೃದ್ಧಿಮಭ್ಯುದಯಮಾಯಯುಃ—ಪ್ರಜಾಪೋಷಣೇನ ಪಿತರಮತಿಶಯಿತವಾನಿತ್ಯರ್ಥಃ—

**42. ಯದುವಾಚ ನ ತನ್ಮಿಥ್ಯಾ ಯದ್ದದೌ ನ ಜಹಾರ ತತ್**
**ಸೋಽಭೂತ್ ಭಗ್ನವ್ರತಃ ಶತ್ರೂನ್ ಉದ್ಧೃತ್ಯ ಪ್ರತಿರೋಪಯನ್**
**॥ ೪೨ ॥**

ಅವನು ಏನನ್ನು ನುಡಿಯುತ್ತಿದ್ದನೋ (ಭರವಸೆ ನೀಡುತ್ತಿದ್ದನೋ) ಅವುಗಳೆಲ್ಲವೂ ಸತ್ಯವಾಕ್ಯಗಳು. ಇತರ ರಾಜಕಾರಣಿಗಳಂತೆ ಅವನು ಅನೃತವನ್ನು, ಸುಳ್ಳನ್ನು, ಪೊಳ್ಳು ಮಾತುಗಳನ್ನು ನುಡಿಯುವ ಹೊಣೆಗೇಡಿ ರಾಜಕಾರಣಿಯಲ್ಲ. ಹೇಳಿದ ಮಾತಿನಂತೆ ನಡೆಯುವ ಮನೋಗುಣವನ್ನು ಹೊಂದಿರುವ ಮಹಾನುಭಾವನು (ನಯವಂಚಕನಲ್ಲ). ದಾನಾದಿ ವಿಷಯಗಳಲ್ಲಿ ಮಿಥ್ಯಾಭಾಷಿತನಾಗಿರಲಿಲ್ಲ. ಕೊಟ್ಟುದನ್ನು ಹಿಂದಕ್ಕೆ ಪಡೆಯುತ್ತಿರಲಿಲ್ಲ. ಶತ್ರುಗಳನ್ನು ಉಚ್ಚಾಟಿಸಿದ ಬಳಿಕ ಅವರನ್ನು ಹಾಗೆಯೇ ಪುನಃ ಸಂಸ್ಥಾಪನೆ (ನೆಲೆಗೊಳಿಸು)ಗೊಳಿಸುತ್ತಿದ್ದನು. ಅವರನ್ನು ನೆಲೆಗೊಳಿಸುವಾಗ ಅವನು ವ್ರತಗೇಡಿಯಾಗುತ್ತಿದ್ದನು (ಮರಳಿ ವ್ರತಗೇಡಿಯಾಗುವನು). ಶತ್ರುಗಳನ್ನು ಸೋಲಿಸಿದ ಬಳಿಕ ಅವನು ದೌರ್ಜನ್ಯ, ಭಯೋತ್ಪಾದನೆ, ಹತಗೊಳಿಸುವುದು, ವಧಿಸುವುದು ಮೊದಲಾದ ದುಷ್ಟ ಮಾರ್ಗದಲ್ಲಿ ವರ್ತಿಸದೆ ಪ್ರಕೃತಿಪ್ರೀತ್ಯರ್ಥವಾದ ಋಜುಮಾರ್ಗದಲ್ಲಿ ನಡೆದು (ವಿವಾಹ ಸಂಬಂಧ, ದೇಹಸಂಬಂಧ ಬೆಳಸು) ಉದಾತ್ತ ರೀತಿಯಲ್ಲಿ ಕಾಣುತ್ತಿದ್ದನು. (ಸೇಡಿಗೆ ಸೇಡು ಇಲ್ಲ, ಘಾತಕನು ಪ್ರತಿಘಾತಕನು ಸಲ್ಲ, ಒದೆತಕ್ಕೆ ಒದೆ ಸಲ್ಲದು) ಹೀಗೆ ಶತ್ರುಗಳಲ್ಲಿಯೂ ಮಿತ್ರಭಾವನೆಯನ್ನು ತೋರುವ ಬಹುದೊಡ್ಡಗುಣವನ್ನು ಹೊಂದಿರುವ ಉದಾತ್ತ ಗುಣ ಸಂಪನ್ನನು. ಹೀಗೆಶತ್ರುಗಳನ್ನು ಮರಳಿ ನೆಲೆಗೊಳಿಸುವ ವ್ರತಸ್ಥನು ತಾನಾಗಿದ್ದನು. ಮಾನವೀಯ ಮೌಲ್ಯಗಳಿಗೆ ಬೆಲೆಕೊಡುವ ಮಹಾತ್ಮನು ತಾನಾಗಿದ್ದನು.

ಯದ್ವಾಕ್ಯಂ ದಾನತ್ರಾಣಾದಿವಿಷಯಮುವಾಚ ತನ್ನಮಿಥ್ಯಾಽನೃತಂ ನಾಭೂತ್—
ಸ್ಥಾಪಯನ್ ಭಗ್ನವತೋ ಭಗ್ನನಿಯಮೋಽಭೂತ್ ॥

**43. ವಯೋರೂಪವಿಭೂತೀನಾಮೇಕೈಕಂ ಮದಕಾರಣಮ್ ।**
**ತಾನಿ ತಸ್ಮಿನ್ ಸಮಸ್ತಾನಿ ನ ತಯೋತ್ಸಿಷಿಚೇ ಮನಃ ॥ ೪೩ ॥**

ಯೌವನ, ಸೌಂದರ್ಯ, ಐಶ್ವರ್ಯ, ವಯಸ್ಸು, ರೂಪು, ವಿಭೂತಿ, ಪ್ರಭುತ್ವ, ಅಧಿಕಾರಾದಿಗುಣಗಳು (ಅಂತಸ್ತು, ಮೇಲುಕೀಳು, ಉಚ್ಚನೀಚಭಾವನೆ, ವರ್ಣಭೇದ (ಕರಿಯ, ಬಿಳಿಯ) ಒಂದೊಂದೂ ಮದಹೇತು ಕಾರಕಗಳು. ಅಹಂಕಾರವನ್ನು ಮಾನವನಲ್ಲಿ ಸಹಜವಾಗಿ ಉತ್ಪತ್ತಿಮಾಡಲು ಶಕ್ತವಾದವುಗಳು. ಆದರೆ ನಾಲ್ಕು ವಿಧದ ಮುಖ್ಯ ಗುಣಗಳಾದ ವಯಸ್ಸು, ರೂಪ, ಐಶ್ವರ್ಯ, ಪ್ರಭುತ್ವ ಇವು ಒಂದೊಂದೂ ಮಾನವನನ್ನು ಗರ್ವ, ಅಹಂಕಾರಪ್ರವೃತ್ತಿಗಳ ಕಡೆಗೆ ತಳ್ಳಲು ಶಕ್ತಿಯನ್ನು ಪಡೆದಿರುತ್ತವೆ. ಅವು ಸಮ್ಮೋಹನಕಾರಕವು. ಆ ಮನುಜೇಂದ್ರನಾದ ಅತಿಥಿನರಪತಿಯು ಆ ನಾಲ್ಕು ಗುಣಗಳು ಒಳಗೆ ನೆರೆದಿದ್ದರೂ ಮಧುರಭಾವನೆಯಿಂದ ಮಿಳಿತಗೊಂಡು (ಮುಪ್ಪುರಿಗೊಂಡು) ಮಧುರಭಾವನೆಗಳನ್ನು ಹೊರಹೊಮ್ಮುತ್ತ ಕೆಲಸಮಾಡುತ್ತಿದ್ದುವು. ಮದಹೇತುಕಾರಕಗಳಾದ ದುಷ್ಟಶಕ್ತಿಗಳನ್ನು ತನ್ನ ಜ್ಞಾನವೆಂಬ, ವಿವೇಕವೆಂಬ ಖಡ್ಗದಿಂದ ಕತ್ತರಿಸಿ, ದಮನಮಾಡಿ, ತನ್ನನ್ನು ತಾನು ಹತೋಟಿಯಲ್ಲಿ(ನಿಯಂತ್ರಣದಲ್ಲಿ) ಇಟ್ಟುಕೊಂಡು ಮೆರೆಯುತ್ತಿದ್ದ, ಇಂದ್ರಿಯನಿಗ್ರಹವಿದ್ದ ಮಹಾಪುರುಷನವನು. ಆ ಸಮಸ್ತಗುಣಗಳು (ವಿರುದ್ಧಗುಣಗಳು) ಅವನ ಮನವನ್ನು ಕದಡದೆ ಇದ್ದುವು. ಸಮಸ್ತ ಮಾನವಜಾತಿಯು

ಕಲ್ಯಾಣವೇ ಆತ್ಮಕಲ್ಯಾಣವೆಂದು ಭಾವಿಸಿದ, ಜನಸೇವೆಯೇ ಜನಾರ್ದನನ ಸೇವೆಯೆಂದು ಭಾವಿಸಿದ ಜಿತೇಂದ್ರಿಯನಾದ ವಿಶುದ್ಧಾತ್ಮನವನು.

ವಯೋರೂಪವಿಭೂತೀನಾಂ ಯೌವನಸೌಂದರ್ಯೈಶ್ವರ್ಯಾಣಾಂ ಮಧ್ಯೆ ಏಕೈಕಂ ಮದಕಾರಣಂ ಮದಹೇತುಃ—ಮಿಲಿತಾನಿತಿ ಶೇಷಃ—ತಸ್ಮಾತಿಥೇರ್ಮನೋತ್ಸೇಷಿಚೇ ಸ ಜಗರ್ವ—ಅತ್ರ ವಯೋರೂಪಾದೀನಾಂ ಗರ್ವಹೇತುತ್ವಾನ್ಮದಸ್ಯ ಚ ಮದಿರಾಕಾರ್ಯತ್ವೇನಾತ್ಮಾರಕತ್ವಾನ್ಮದಶಬ್ದೇನ ಗರ್ವೋ ಲಕ್ಷ್ಯತ ಇತ್ಯಾಹುಃ-ಐಶ್ವರ್ಯರೂಪಕಾರಣ್ಯಾ ಕುಲವಿದ್ಯಾಬಲೈರಪಿ—ಇಷ್ಟಲಾಭಾದಿ ನಾನ್ಯೇಷಾವಜ್ಞಾ ಗರ್ವ ಈರಿತಃ—ಮದಸತ್ತ್ವಾನಂದಸಮ್ಮೋಹಃ ಸಂಭೇದೋ ಮದಿರಾಕೃತಃ—ಮದಕಾರಣಮ್=ಮದಹೇತುಮಂಪ್ರದು = ಅಹಂಕಾರಗರ್ವಗಳಿಗೆ ಕಾರಣವಾಗು.

**44. ಇತ್ಥಂ ಜನಿತ ರಾಗಾಸು ಪ್ರಕೃತಿಷ್ವನುವಾಸರಮ್ ।**
**ಅಕ್ಷೋಭ್ಯಃ ಸ ನವೋಽಪ್ಯಾಸೀತ್ ದೃಢಮೂಲ ಇವ ದ್ರುಮಃ ॥ ೪೪ ॥**

ಹೊಸತಾಗಿ ನೆಟ್ಟ ಗಿಡವು ತನ್ನ ಬೇರುಗಳನ್ನು ನೆಲದಲ್ಲಿ ಪಸರಿಸುತ್ತ, ಬೇರುಗಳನ್ನು ದೃಢವಾಗಿ ಬೇರೂರುತ್ತ ನೆಟ್ಟಗೆ ನಿಲ್ಲುವಂತೆ, ಆ ಮನುಕುಲೇಂದ್ರನು ತನ್ನ ಸದ್ಗುಣಗಳಿಂದ, ತನ್ನ ತಾತ್ತ್ವಿಕಜ್ಞಾನದಿಂದ, ವ್ಯವಹಾರಜ್ಞಾನದಿಂದ. ತನ್ನ ಧ್ಯೇಯಧೋರಣೆಗಳಿಂದ, ಪ್ರೀತಿವಿಶ್ವಾಸದಿಂದ, ಜನರ ಮನಸ್ಸನ್ನು ಗೆದ್ದನು. ಅವರ ಅಂತರಾಳದಲ್ಲಿ ಅಚ್ಚಳಿಯದೆ ನೆಲೆನಿಂತನು. ಅವನು ವೈರಿಗಳಿಗೆ ಅಕ್ಷೋಭ್ಯನಾಗಿ, ಅಲುಗಾಡದವನಾಗಿ, ಅಜೇಯನಾಗಿ ಸ್ಥಾಣುವಿನಂತೆ (ಸ್ಥಿರನಾಗಿ) ದೃಢವಾಗಿ ಜನಾನುರಾಗಿ, ಜನಪ್ರಿಯನಾಗಿ "ಸರ್ವೇ ಜನಾಃ ಸುಖಿನೋಭವಂತು" "ಸರ್ವ ಸನ್ಮಂಗಳಾನಿ ಭವಂತು", ಲೋಕೋಪಕಾರಿಯಾಗಿ ಕ್ರಿಯಾತ್ಮಕವಾಗಿ ಕಾರ್ಯಪ್ರವೃತ್ತ ಸಾಕೇತಸಿಂಹಾಸನದಲ್ಲಿ ಅಧಿಕಾರಾರೂಢನಾಗಿ ಮೆರೆಯುತ್ತಿದ್ದನು.

ಪ್ರಕೃತಿಷು = ಪ್ರಜಾಸು—ಜನಿತರಾಗಾಸು=ಸತೀಷು ಸ ರಾಜಾ ನವೋಽಪಿ—ದೃಢಮೂಲೋ ದ್ರುಮ ಇವ—ಅಕ್ಷೋಭ್ಯೋಽಪ್ರಧೃಷ್ಯ ಆಸೀತ್—ಜನಿತರಾಗಾಸು = ಜನಿತಃ ರಾಗಃ ಯಾಸಾಮ್ (ಬ.ವ್ರೀ.) ತಾಸು = ಜನಜನಿತರಾಗದಿಂದ—ಅಕ್ಷೋಭ್ಯ= ಕ್ಷೋಭೆಗೊಳ್ಳದ.

**45. ಅನಿತ್ಯಾಃ ಶತ್ರವೋ ಬಾಹ್ಯಾ ವಿಪ್ರಕೃಷ್ಟಾಶ್ಚ ತೇ ಯತಃ**
**ಅತಃ ಸೋಽಭ್ಯಂತರಾನ್ನಿತ್ಯಾನ್ ಷಟ್‌ಪೂರ್ವಮಜಯದ್ರಿಪೂನ್ ॥ ೪೫ ॥**

ಬಾಹ್ಯಶತ್ರುಗಳು ಅನಿತ್ಯರು ಮತ್ತು ಬಹಳ ದೂರದಲ್ಲಿದ್ದಾರೆ. ಆದರೆ ಆಂತರಿಕ ಶತ್ರುಗಳು ಒಳಗೇ ಇದ್ದು ನಿತ್ಯರಾಗಿದ್ದಾರೆ. ಆ ರಾಜಶೇಖರನು ಮೊತ್ತಮೊದಲು ಒಳಗಿರುವ ನಿಜಶತ್ರುಗಳಾದ ಕಾಮ, ಕ್ರೋಧ, ಮೋಹ, ಲೋಭ, ಮದ, ಮತ್ಸರ ವೆಂಬ ಆರುಮಂದಿ ಅತಿಹತ್ತಿರದಲ್ಲಿರುವ ನಿತ್ಯಶತ್ರುಗಳನ್ನು ದಮನಮಾಡಿ (ಹಿಡಿಗೈದು) ಗೆದ್ದನು. ಅವರನ್ನು ಜಯಿಸಿ ತನ್ನ ಹತೋಟಿಯಲ್ಲಿಟ್ಟುಕೊಂಡನು. ದೂರದಲ್ಲಿರುವ

ಅಪರೂಪದ ಶತ್ರುಗಳನ್ನು ಗೆಲ್ಲಬೇಕಾದರೆ ಮೊದಲು ಈ ಅಂತರ್ವರ್ಗಖರಾದ ತನ್ನ ಒಳಗಿರುವ ಶತ್ರುಗಳನ್ನು ಗೆಲ್ಲಲೇಬೇಕು. ಈ ಮನಸ್ಸಿನ ಅಥವಾ ಮಾನಸಿಕ ಶತ್ರುಗಳನ್ನು ಗೆಲ್ಲಲು ವಿಶಿಷ್ಟವಾದ ಮನೋನಿರ್ಧಾರ, ದೃಢತೆ, ನಿಶ್ಚಿತ ವಿಷಯಜ್ಞಾನ ಇರಬೇಕು. ಇವರನ್ನು (ಇಂದ್ರಿಯಶತ್ರುಗಳನ್ನು) ಮೊದಲು ಗೆದ್ದು ಅನಂತರದ ದೂರದ, ಬಾಹ್ಯ ಪ್ರಪಂಚದ ಶತ್ರುಗಳನ್ನು ಗೆಲ್ಲಲು ಬಯಸಿದನು.

ಯತೋ ಬಾಹ್ಯಾಃ ಶತ್ರವಃ ಪ್ರತಿನೃಪಾ ಅನಿತ್ಯಾಃ ದ್ವಿಷಂತಿಸ್ತ್ರಿಹ್ಯಂತಿ ಚೇತ್ಯರ್ಥಃ ಕಿಂ ಚ ತೇ ಬಾಹ್ಯಾ ವಿಪ್ರಕೃಷ್ಟಾದೂರಸ್ಥಾಶ್ಚ—ಅತಃ ಸೋಽಭ್ಯಂತರಾನನ್ತರ್ವರ್ತಿನೋ ನಿತ್ಯಾಞ್ ಷಡ್ರಿಪೂನ್ ಕಾಮಕ್ರೋಧಾದೀನ್—ಪೂರ್ವಮಜಯತ್–ಷಡ್ರಿಪೂನ್=ಆರು ಮಂದಿ ವೈರಿಗಳು (ಕಾಮ. ಕ್ರೋಧ, ಲೋಭ, ಮೋಹ, ಮದ (ಅಹಂಕಾರ), ಮತ್ಸರ)

46. ಪ್ರಸಾದಾಭಿಮುಖೇ ತಸ್ಮಿನ್ ಚಪಲಾಪಿ ಸ್ವಭಾವತಃ ।
ನಿಕಷೇ ಹೇಮರೇಖೇವ ಶ್ರೀರಾಸೀದನಪಾಯಿನೀ ॥ ೪೬ ॥

ಸ್ವಭಾವದಲ್ಲಿ ಲಕ್ಷ್ಮಿಯು (ಶ್ರೀಯು) ಚಂಚಲಸ್ವಭಾವದವಳಾಗಿದ್ದರೂ ಪ್ರಸಾದಾಭಿಮುಖನಾದ, ಬೇಡಿದವರಿಗೆ ಇಲ್ಲವೆನ್ನುವ ಗುಣವಿಲ್ಲದ, ತನ್ನ ತ್ರಾಣವಿಾರಿ ದಾನಮಾಡಬಲ್ಲ ಧರ್ಮದರ್ಶಿಯಾದ ದಾನಶೂರನಾದ ಅತಿಥಿಸಾರ್ವಭೌಮನಲ್ಲಿ ಐಶ್ವರ್ಯದೇವತೆಯಾದ ಮಹಾಲಕ್ಷ್ಮಿಯು ಒರಗಲ್ಲಿನಲ್ಲಿ (ನಿಕಷದಲ್ಲಿ) ಸ್ವರ್ಣರೇಖೆಯು ನೆಲೆನಿಂತಂತೆ ನಿಂತಿದ್ದಳು. ನಿಕಷದಲ್ಲಿ ಹೇಮರೇಖೆಯು ಸುಸ್ಥಿರವಾಗಿ ನೆಲಸಿದಂತೆ ಅಣಿಮಾದಿ ಅಷ್ಟ ಐಶ್ವರ್ಯಗಳು, ಧನಸಂಪತ್ತು, ಪರರ ಇಷ್ಟಾರ್ಥಸಿದ್ಧಿಗೆ, ತನುಮನಧನವನ್ನು ಅರ್ಪಿಸುವ ಮನೋಬುದ್ಧಿಯುಳ್ಳ ಆ ಭೂವರನಲ್ಲಿ ಧನಲಕ್ಷ್ಮಿಯು ಸ್ಥಿರವಾಗಿ, ಶಾಶ್ವತವಾಗಿ ನೆಲಸಿರ್ದಳು. ಅವನ ವರದಹಸ್ತವು ಎಂದೂ ಬರಡಾಗಿರುತ್ತಿರಲಿಲ್ಲ. ದಾನವೂ ಆ ಮಹಾಶಯನಿಗೆ (ದಾನಚಿಂತಾಮಣಿ) ಒಂದು ಕಾಯಕವಾಗಿತ್ತು.

ಸ್ವಭಾವತಶ್ಚಪಲಾ ಚಂಚಲಾಪಿ ಶ್ರೀಃ ಪ್ರಸಾದಾಭಿಮುಖೇ ತಸ್ಮಿನ್ನೃಪೇ—ನಿಕಷೇ= ನಿಕಷೋಪಲೇ—ಹೇಮರೇಖೇವ ಅನಪಾಯಿನೀ ಸ್ಥಿರಾऽऽಸೀತ್—ನಿಕಷೇ ಹೇಮರೇಖೇವ= ಒರೆಗಲ್ಲಿನಲ್ಲಿ ನಿಂತ ಸ್ವರ್ಣರೇಖೆಯಂತೆ (ಸ್ಪಷ್ಟವಾಗಿ ಕಾಣು).

47. ಕಾತರ್ಯಂ ಕೇವಲಾ ನೀತಿಃ ಶೌರ್ಯಂ ಶ್ವಾಪದಚೇಷ್ಟಿತಮ್ ।
ಅತಃ ಸಿದ್ಧಿಂ ಸಮೇತಾಭ್ಯಾಂ ಉಭಾಭ್ಯಾಮನ್ವಿಯೇಷ ಸಃ ॥ ೪೭ ॥

ಶೌರ್ಯವರ್ಜಿತವಾದ ನೀತಿಯು ಭೀರುತ್ವವನ್ನು ಹೊಂದುವುದು. ಅದು ಭಯದ ಮೂಲ. ಕೇವಲ ಶೌರ್ಯವು, ಧೈರ್ಯಾಧಿಗುಣಗಳು ಪಾಶವಿಕ ಶಕ್ತಿಗಳಾಗಬಹುದು. ಅದು ಪಶುಚೇಷ್ಟೆಯಂತೆ. ಬೆಕ್ಕಿಗೆ ಆಟ, ಇಲಿಗೆ ಪ್ರಾಣಸಂಕಟವೆಂಬಂತೆ. ವ್ಯಾಘ್ರಾದಿಗಳ ನ್ಯಾಯದಂತೆ. (ಚತುಷ್ಪಾದಿಗಳ ನೀತಿಯಂತೆ) (ಹುಲಿ, ಕರಡಿ, ತೋಳಗಳ ನ್ಯಾಯದಂತೆ ಕಾಡುನೀತಿ ಅರಣ್ಯನೀತಿ) (ಪರಪೀಡಕಾರಕ. ಪರಹಿಂಸೆಯ ದ್ಯೋತಕ) ನಯವಾದ ಜಾತಿಯೊಂದಿಗೆ ಶೌರ್ಯವು ಸಮರಸವಾಗಿ ಬೆರೆತಿರಲು ಸಿದ್ಧಿಯನ್ನು ಪಡೆಯುವುದು.

ಶಾಶ್ವತವಾದ ಜಯವನ್ನು ಪಡೆಯಬಲ್ಲುದು. ಪ್ರಜೆಗಳ ಕಲ್ಯಾಣಕ್ಕೆ ಪೂರಕವಾದುದು. ಆದುದರಿಂದ ಅತಿಥಿಭೂವರನು ಶೌರ್ಯವು ಸೇರಿರುವ ನೀತಿಯನ್ನು ಅನುಸರಿಸುತ್ತಿದ್ದನು.

ಕೇವಲಾ ಶೌರ್ಯವರ್ಜಿತಾ ನೀತಿಃ—ಕಾತರ್ಯಂ=ಭೀರುತ್ವಂ—ಶೌರ್ಯಂ ಕೇವಲಮ್ ಇತ್ಯನುಷಜ್ಯನೀಯಮ್—ಕೇವಲಂ ನೀತಿರಹಿತಂ ಶೌರ್ಯಂ ಶ್ವಾಪದಚೇಷ್ಟಿತಮ್—"ವ್ಯಾಘ್ರಾದಯೋ ವನಚರಾಃ ಪಶವಃ ಶ್ವಾಪದಾಮತಾಃ" ಇತಿ ಹಲಾಯುಧಃ—ಸಮೇತಾಭ್ಯಾಂ = ಸಂಗತಾಭ್ಯಾಮುಭಾಭ್ಯಾಂ = ನೀತಿಶೌರ್ಯಾಭ್ಯಾಂ ಸಿದ್ಧಿಂ = ಜಯಪ್ರಾಪ್ತಿಮ್—ಕಾತರ್ಯಂ = ಶೌರ್ಯ ಮತ್ತು ನೀತಿಮಾರ್ಗ ಎರಡೂ ಸೇರಿರುವ ರಾಜ್ಯಶಾಸ್ತ್ರ (ರಾಜಕಾರಣ, ರಾಜಕೀಯ).

**48. ನ ತಸ್ಯ ಮಂಡಲೇ ರಾಜ್ಞೋ ನ್ಯಸ್ತಪ್ರಣಿಧಿದೀಧಿತೇಃ ।**
**ಅದೃಷ್ಟಮಭವತ್ಕಿಂಚಿತ್ ವ್ಯಭ್ರಸ್ಯೇವ ವಿವಸ್ವತಃ ॥ ೪೮ ॥**

ವಿವಸ್ವತನಾದ (ಸವಿತೃ, ಸವಿತಾರನಾದ) ಸೂರ್ಯದೇವನು ಮೋಡಗಳಿಲ್ಲದ ಬಾನಲ್ಲಿ ಸಂಚರಿಸುತ್ತ, ಜಗತ್ತಿನ ಮೇಲಿರುವ ಎಲ್ಲವನ್ನು ತಿಳಿದುಕೊಳ್ಳುವಂತೆ ಆ ರಾಜಾಧಿರಾಜನು ತನ್ನ ಸಾಮ್ರಾಜ್ಯದ ಎಲ್ಲಾ ವಿಚಾರಗಳನ್ನು, ವರ್ತಮಾನಗಳನ್ನು ಪ್ರಚಲಿತ ವಿಚಾರಗಳನ್ನು ರಾಜಕೀಯ ಬೆಳಕುಗಳೆಂಬ, ರಾಜಕೀಯ ರಶ್ಮಿಗಳೆಂಬ ಚಾರರ (ಗೂಢಚಾರರ) ಮೂಲಕ ತಿಳಿದುಕೊಳ್ಳುತ್ತಿದ್ದನು. ಪ್ರಪಂಚದ ಎಲ್ಲಾ ಮೂಲೆಗಳಿಂದಲೂ ಚಾರರೆಂಬ ಚಕ್ಷುಗಳ ಮೂಲಕ (ಕಣ್ಣುಗಳ ಮೂಲಕ) ದಿನದಿನದ ಬೆಳವಣಿಗೆಗಳನ್ನು ಅರಿತುಕೊಳ್ಳುತ್ತಿದ್ದನು. ಜ್ಞಾನಿಗಳು ವೇದ, ಶಾಸ್ತ್ರಗಳ ಮೂಲಕ ವಿಷಯಗಳನ್ನು ತಿಳಿದುಕೊಳ್ಳುತ್ತಾರೆ. ಆದುದರಿಂದ ಶಾಸ್ತ್ರಗಳು, ವೇದಗಳು ಚಕ್ಷುಗಳಿದ್ದಂತೆ, ಕಣ್ಣುಗಳಿದ್ದಂತೆ (ನಯನ, ಲೋಚನ). ಅದೇ ರೀತಿಯಲ್ಲಿ ಗುಪ್ತಚಾರರು ಆ ಪ್ರದೇಶಗಳಲ್ಲಿ ಸಂಚರಿಸಿ, ರಾಜಧಾನಿಗೆ ಯಥಾಸ್ಥಿತಿಯ (ನೈಜ) ಚಿತ್ರವನ್ನು ಒದಗಿಸುವರು. ಅವರು ಸಂಗ್ರಹಿಸಿದ ವಿಷಯದ ಮೇಲೆ ಬೆಳಕನ್ನು ಬೀರುವ ಪ್ರಕಾಶಕರು. ಆದುದರಿಂದ ಚಾರರೆಂಬ ಕಣ್ಣುಗಳಿಂದ ರಾಜನು ತನ್ನ ಸಾಮ್ರಾಜ್ಯದ ಸರ್ವವಿಷಯಗಳನ್ನು ನೋಡಿ ತಿಳಿದುಕೊಳ್ಳುತ್ತಿದ್ದನು. ಎಲ್ಲವನ್ನು ನೋಡಿ ತಿಳಿದುಕೊಳ್ಳಲು ಸಮರ್ಥನಾಗುತ್ತಿದ್ದನು. ಸದಾ ಎಚ್ಚರನಾಗಿರುತ್ತಿದ್ದನು.

ನ್ಯಸ್ತಾ ಸರ್ವತಃ ಪ್ರಹಿತಾಃ ಪ್ರಣಿಧಯಶ್ಚರಾ ಏವ ದೀಧಿತಯೋ ರಶ್ಮಯೋ ಯಸ್ಯ ತಸ್ಯ—"ಪ್ರಣಿಧಿಃ ಪ್ರಾರ್ಥನೇ ಚರೇ" ಇತಿ ಶಾಶ್ವತಃ—ತಸ್ಯ ರಾಜ್ಞಃ—ವ್ಯಭ್ರಸ್ಯ = ನಿರ್ಮೇಘಸ್ಯ ವಿವಸ್ವತಃ = ಸೂರ್ಯಸ್ಯೇವ—ಮಂಡಲಸ್ಯ ವಿಷಯೇ ಕಿಂಚಿದಲ್ಪಮಪ್ಯದೃಷ್ಟ—ಮಜ್ಞಾತಂ ನಾಮವನ್ನಾಸೀತ್—

**49. ರಾತ್ರಿಂದಿವವಿಭಾಗೇಷು ಯದಾದಿಷ್ಟಂ ಮಹೀಕ್ಷಿತಾಮ್ ।**
**ತತ್ಸಿಷೇವೇ ನಿಯೋಗೇನ ವಿಕಲ್ಪಪರಾಙ್ಮುಖಃ ॥ ೪೯ ॥**

ಆ ಮನುಕುಲಪ್ರದೀಪನ ಅರಸನ ಕರ್ತವ್ಯದಲ್ಲಿ ಎಂದೂ ಪರಾಙ್ಮುಖನಾಗದೆ ಸದಾ ಎಚ್ಚರಿಕೆಯಿಂದಲೇ ಇದ್ದನು. ಹಗಲು ಅಥವಾ ರಾತ್ರಿ, ದಿನದ ೧೫ ಮುಹೂರ್ತದಲ್ಲಿ

ಶಾಸ್ತ್ರದಲ್ಲಿ ಹೇಳಿದ (ಶಾಸ್ತ್ರಪ್ರಮಾಣಸಿದ್ಧಿದರ್ಶನಾತ್) ನಿಬಂಧನೆಗೆ ಅನುಸಾರವಾಗಿ ನಡೆದುಕೊಳ್ಳುತ್ತ ತನ್ನ ವಿಶಾಲವಾದ ಸಾಕೇತಸಾಮ್ರಾಜ್ಯದ ಎಲ್ಲಾ ವಿಭಾಗಗಳನ್ನು ಬಹುದಕ್ಷತೆಯಿಂದ ನೋಡಿಕೊಳ್ಳುತ್ತಿದ್ದನು. ಹೀಗೆ ವಿವಿಧ ರಾಜಕೀಯಚಟುವಟಿಕೆಗಳಲ್ಲಿ ಭಾಗವಹಿಸುತ್ತ ಮಾನಸಿಕ ಹಾಗೂ ದೈಹಿಕ ಆಯಾಸವನ್ನು ಪರಿಗಣಿಸದೆ ಕರ್ತವ್ಯ ನಿಷ್ಠೆಯಿಂದ ಶ್ರದ್ಧೆ ಪ್ರಾಮಾಣಿಕತೆಯಿಂದ ತನ್ನ ಕಾರ್ಯಗಳನ್ನು ಹಗಲೂ ರಾತ್ರಿ ನಿರ್ವಹಿಸುತ್ತಿದ್ದನು.

ಇದರಿಂದ ಮನಸ್ಸಿನ ಸಂಶಯನಿವಾರಣೆ, ಬಲಾಬಲಗಳ ಪರೀಕ್ಷೆ, ಸಾಮಂತರಾಜರ ಮನೋಗತ (ಹಂಚ್ಚಾರು) ಅವರ ಆಶೋತ್ತರಗಳು, ಪ್ರಜಾಪರಿಪಾಲನೆ, ನ್ಯಾಯಾಂಗದ ಪರಿಶೀಲನೆ. ಕಾರ್ಯಾಂಗದ ನಿರ್ವಹಣೆ, ವಿವಿಧ ಯೋಜನೆಗಳ (ಪಂಚವಾರ್ಷಿಕ, ದ್ವೈವಾರ್ಷಿಕ) ಪರಿಶೀಲನೆ, ಇಂತಹ ಹಲವಾರು ದೇಶೀಯ (ಪ್ರಾದೇಶಿಕ) ಸ್ವತಃ ಪರಿಶೀಲಿಸಿ ದಿಟ್ಟವಾದ, ದೃಢವಾದ ಕ್ರಮಗಳನ್ನು ಕೈಕೊಂಡು ಪ್ರಜಾರಂಜಕನೆನಿಸಿದನು. ಹಗಲುರಾತ್ರಿ (ಅಹೋರಾತ್ರಿ) ತನ್ನ ಪ್ರಜೆಗಳಿಗಾಗಿ ಕಾರ್ಯನಿರ್ವಹಿಸುತ್ತಿದ್ದನು. ಕರ್ತವ್ಯಲೋಪವೆಸಗದೆ ಮನುಮೊದಲಾದ ಮಾನವಧರ್ಮ (ವಿಶ್ವಮಾನವಧರ್ಮ, ವಿಶ್ವಭಾರತಿ, ಬೃಹದ್‌ಭಾರತ) ಪ್ರವರ್ತಕರಂತೆ ವಿವಿಧ ನಿಯೋಗಗಳನ್ನು ರಚಿಸಿ (ವಾರ್ಷಿಕ, ದ್ವೈವಾರ್ಷಿಕ, ಪಂಚವಾರ್ಷಿಕ, ದಶವಾರ್ಷಿಕ ಯೋಜನೆಗಳು) ವಿವಿಧ ಉಪಾಯಗಳಿಂದ ಕಾರ್ಯವನ್ನು ನಿರ್ವಹಿಸುತ್ತಿದ್ದನು.

ಅವ್ಯಯಾಸ್ತತ್ವಾದವ್ಯಯಯತ್ನಮ್—ಅತ್ರ ಷಷ್ಠ್ಯರ್ಥಲಕ್ಷಣಯಾ ರಾತ್ರಿದಿವಮಿತಿ—ಅಹೋರಾತ್ರಯೋರಿತ್ಯರ್ಥಃ ತಯೋರ್ವಿಭಾಗಾ ಅಂಶಾಃ "ಮಹೀಕ್ಷಿತಾಂ ರಾಜ್ಞಾಂ—"ಇದಮಸ್ಮಿನ್ ಕಾಲೇ ಕರ್ತವ್ಯಮ್" ಇತಿ ಮನ್ವಾದಿಭಿರುಪದಿಷ್ಟಂ ರಾಜಾ ವಿಕಲ್ಪಪರಾಙ್ಮುಖಃ = ಸಂಶಯರಹಿತಃ ಸನ್—ನಿಯೋಗೇನ = ನಿಶ್ಚಯೇನ ನಿಷೇವೇ—ಅತ್ರ ಕೌಟಿಲ್ಯಃ—"ಕಾರ್ಯಾಣಾಂ ಯೇನ ನಾನ್ಯೇನೇತಿ ನಿಯೋಗಃ—ಅನೇನ ಅನ್ಯೇನ ವೇತಿ ವಿಕಲ್ಪಃ—ಅನೇನ ಚೇತಿ ಸಮುಚ್ಚಯಃ" ಇತಿ—ರಾತ್ರಿಂದಿವವಿಭಾಗೇಷು = ರಾತ್ರೌ ದಿವಾ ವ (ದ್ವಂದ್ವ) ತಯೋಃ ವಿಭಾಗಃ (ಷ.ತತ್ಪು.) ತೇಷು ॥

**50. ಮಂತ್ರಃ ಪ್ರತಿದಿನಂ ತಸ್ಯ ಬಭೂವ ಸಹ ಮಂತ್ರಿಭಿಃ ।**
**ಸ ಜಾತು ಸೇವ್ಯಮಾನೋಽಪಿ ಗುಪ್ತದ್ವಾರೋ ನ ಸೂಚ್ಯತೇ ॥ ೫೦ ॥**

ಆ ಭೂಪರನು ಪ್ರತಿದಿನವೂ ತನ್ನ ಆಪ್ತಮಂತ್ರಿಗಳೊಡನೆ ವಿಚಾರವಿನಿಮಯ ಮಾಡಿಕೊಳ್ಳುತ್ತಿದ್ದನು. ರಾಷ್ಟ್ರದ ವಿದ್ಯಮಾನಗಳ ಬಗ್ಗೆ ಕೈಗೊಳ್ಳಬೇಕಾದ ಕಾರ್ಯಕ್ರಮಗಳ ಬಗ್ಗೆ, ಪ್ರಚಲಿತ ವಿಚಾರಗಳ ಬಗ್ಗೆ ಮಂತ್ರಾಲೋಚನೆ ನಡೆಸುತ್ತಿದ್ದನು. ಎಷ್ಟೋ ವೇಳೆ ಭಿನ್ನಾಭಿಪ್ರಾಯಗಳು ತಲೆದೋರುತ್ತಿದ್ದರೂ ರಾಜನೀತಿಶಾಸ್ತ್ರಜ್ಞರಾದ ಭೃಗು, ಶುಕ್ರ, ಬೃಹಸ್ಪತಿ, ಕಾಮಂದಕರು ಹಾಕಿಕೊಟ್ಟ ರೂಪರೇಷೆಗಳನ್ನು ಮನದಲ್ಲಿಟ್ಟು ಸಮಸ್ಯೆಗಳ ನಿವಾರಣೋಪಾಯಗಳನ್ನು ಕಂಡುಕೊಳ್ಳುತ್ತಿದ್ದನು. ಕೌಟಿಲ್ಯ ಮೊದಲಾದ ಅರ್ಥಶಾಸ್ತ್ರಜ್ಞರಿಂದ ಸಾರವತ್ತಾದ ವಿಷಯಗಳನ್ನು ತಿಳಿದು ಕಾರ್ಯೋನ್ಮುಖನಾಗುತ್ತಿದ್ದನು. ಸುಖೀರಾಜ್ಯವನ್ನು ಕಟ್ಟುವ (ಪ್ರಜಾರಾಜ್ಯ) ತನ್ನ ದಿವ್ಯಕಲ್ಪನೆಯಲ್ಲಿ ಸದಾ

ಜಾಗರೂಕನಾಗಿದ್ದನು. ಚರ್ಚೆಗಳು ಎಷ್ಟೇ ಬಿಸಿಯಾದ ವಾತಾವರಣದಲ್ಲಿ ನಡೆದರೂ ಗೋಪ್ಯವಾಗಿಯೇ ನಡೆಯುತ್ತಿದ್ದುವು. ವರ್ತಮಾನವು ಹೊರಗೆ ಹರಡದಂತೆ ಆ ದ್ವಾರಗಳನ್ನು ಅಲ್ಲಲ್ಲೇ ಮುಚ್ಚಿದ್ದುದರಿಂದ, ಹೊರಹೊರಡುವ ಸೂಚನೆಗಳೇ ಇರಲಿಲ್ಲ. ವಿಪ್ಲವ, ಬಂಡಾಯ, ಸಂಘರ್ಷ, ಕ್ಷಿಪ್ರಕ್ರಾಂತಿಗಳಿಗೆ ಅವಕಾಶವಿರಲಿಲ್ಲ.

ತಸ್ಯ ರಾಜ್ಞಃ ಪ್ರತಿದಿನಂ ಮಂತ್ರಿಭಿಃ ಸಹ ಮಂತ್ರೋ=ವಿಚಾರೋ ಬಭೂವ—ಸಮಂತ್ರಃ ಸೇವ್ಯಮಾನೋಽಪ್ಯನ್ವಹಮಾವರ್ತ್ಯಮಾನೋಽಪಿ ಜಾತು ಕದಾಚಿದಪಿ ನ ಸೂಚ್ಯತೇ=ನ ಪ್ರಕಾಶ್ಯತೇ ತತ್ರ ಹೇತುಃ ಗುಪ್ತದ್ವಾರ ಇತಿ—ಸಂವೃತೇಂಗಿತಾಕಾರಾದಿ ಜ್ಞಾನಮಾರ್ಗ ಇತ್ಯರ್ಥಃ ಪ್ರತಿದಿನಂ ಸೇವ್ಯಮಾನೋಽಪಿ = ಉಪಾಸ್ಯಮಾನೋಽಪಿ = ವಿಚಾರವಿನಿಮಯಮಾಡಿಕೊಳ್ಳುವ—ನಸೂಚ್ಯತೇ = ಅತಿಗೋಪ್ಯವಾಗಿರು = ಗುಟ್ಟು ರಟ್ಟಾಗದಿರು.

**51. ಪರೇಷು ಸ್ವೇಷು ಚ ಕ್ಷಿಪ್ತೈಃ ಅವಿಜ್ಞಾತ ಪರಸ್ಪರೈಃ ।**
**ಸೋಽಪಸರ್ಪೈರ್ಜಜಾಗಾರ ಯಥಾ ಕಾಲಂ ಸ್ವಪನ್ನಪಿ ॥ ೫೧ ॥**

ಆ ರಾಜನು ದೇಶದ ಆಗುಹೋಗುಗಳನ್ನು, ವಿವಿಧ ಸನ್ನಿವೇಶಗಳನ್ನು, ವಿದ್ಯಮಾನಗಳನ್ನು ಚಾರರೆಂಬ ತನ್ನ ಚಕ್ಷುಗಳಿಂದ, ಶ್ರವಣೇಂದ್ರಿಯಗಳಿಂದ ತಿಳಿದುಕೊಳ್ಳುತ್ತಿದ್ದನು ಪಶುವು ವಾಸನೆಯಿಂದ, ಬ್ರಾಹ್ಮಣನು ವೇದಗಳ ಮೂಲಕ, ಶಾಸ್ತ್ರಜ್ಞನು ಶಾಸ್ತ್ರಗಳ ಮೂಲಕ ಹಾಗೆಯೇ ರಾಜನು ಗೂಢಚಾರರನ್ನು (ಗುಪ್ತದಳ) ನೇಮಿಸಿ ವಿಷಯಗಳ ಸರಿಯಾದ ಜ್ಞಾನವನ್ನು ಪಡೆಯುತ್ತಿದ್ದನು. ಆ ನೃಪನು ರಾತ್ರಿಹೊತ್ತು, ಯುಕ್ತಕಾಲದಲ್ಲಿ ನಿದ್ರಿಸುತ್ತಿದ್ದನು. ಆದರೆ ಹೀಗೆ ನಿದ್ರಾಮುದ್ರಿತನಾಗಿದ್ದರೂ (ನಿದ್ರೆಯಲ್ಲಿದ್ದರೂ) (ಯೋಗನಿದ್ರೆಯಲ್ಲಿದ್ದಂತೆ) ಎಚ್ಚರವಾಗಿರುತ್ತಿದ್ದನು. ಅದು ಹೇಗೆ ಸಾಧ್ಯವೆಂದರೆ ತನ್ನ ಸ್ವಜನರ ಮತ್ತು ಪರರ ಮಧ್ಯೆ ಗೂಢಚಾರರನ್ನು ಕಳುಹಿಸುತ್ತ, ವರದಿಗಳನ್ನು, ವಿವರಗಳನ್ನು, ಸರಿಯಾದ ಮಾಹಿತಿಗಳನ್ನು ಪಡೆಯುತ್ತಿದ್ದನು. ಆ ಗೂಢಚಾರರು ಒಬ್ಬರಿಗೊಬ್ಬರು ಪರಿಚಿತರಲ್ಲ. ಒಬ್ಬರನ್ನೊಬ್ಬರು ಅರಿಯದವರು. ಅವರು ವಿಷಯಸಂಗ್ರಹ ಮಾಡಿ (ಪ್ರಚಲಿತ ವಿಷಯ) ರಾಜನಿಗೆ ಕರಾರುವಾಕ್ಕಾಗಿ ತಿಳಿಸುತ್ತಿದ್ದರು.

ಯಥಾ ಕಾಲ ಮುಕ್ತಕಾಲಾನಾತಿಕ್ರಮೇಣ ಸ್ವಪನ್ನಪಿ ಸೋಽತಿಥಿಃ ಪರೇಷು ಶತ್ರುಷು ಸ್ವೇಷು ಸ್ವಕೀಯೇಷು ಚ ಮಾತ್ಯಾದಿತೀರ್ಥೇಷ್ವಿತಿ ಶೇಷಃ—ಕ್ಷಿಪ್ತೈಃ ಪ್ರಹಿತೈರವಿಜ್ಞಾತಾಃ ಪರಸ್ಪರೇ ಯೇಷಾಂ ತೈಃ—ಅನ್ಯೋನ್ಯಾ ವಿಜ್ಞಾತೈರಿತ್ಯರ್ಥಃ—"ಅಪಸರ್ಪೈಶ್ಚರೈಃ—ಅಪಸರ್ಪಶ್ಚರಃ ಸ್ಪಶಃ" ಇತ್ಯಮರಃ—ಜಜಾಗಾರ=ಬುದ್ಧವಾನ್—ಅತ್ರ ಕಾಮಂದಕಃ "ಚಾರಾನ್ವಿಚಾರಯೇತ್ತೀರ್ಥೇಷ್ವಾತ್ಮನಶ್ಚ ಪರಸ್ಯ ಚ ಪಾಷಾಂಡ್ಯಾದೀನ ವಿಜ್ಞಾತಾ ನಾನ್ಯೋನ್ಯಮಿತರೈರಪಿ" ಇತಿ—ಅಪಸರ್ಪ = ಗೂಢಚಾರ—ಜಜಾಗಾರ = ಎಚ್ಚರದಿಂದಿರು, ಜಾಗರಣೆಮಾಡು.

**52. ದುರ್ಗಾಣಿದುರ್ಗ್ರಹಾಣ್ಯಾಸನ್ ತಸ್ಯ ರೋದ್ಧುರಪಿ ದ್ವಿಷಾಮ್ ।**
**ನ ಹಿ ಸಿಂಹೋ ಗಜಾಸ್ಕಂದೀ ಭಯಾದ್ಗಿರಿಗುಹಾಶಯಃ ॥ ೫೨ ॥**

ಆ ದೊರೆಯು ದುರ್ಭೇದ್ಯವಾದ ದುರ್ಗಗಳನ್ನು ಹೊಂದಿದ್ದು ಶತ್ರುನಿರ್ಭೀತನಾಗಿ ಅನಿರೋಧಕನಾಗಿದ್ದನು(ದುರ್ಭೇದ್ಯದುರ್ಗಗಳನಾಂತಿಹನು).ಅವನು ಅಂತಹ ಅಭೇದ್ಯ ವಾದ ಗಿರಿದುರ್ಗಗಳಲ್ಲಿ ವಾಸಿಸುತ್ತಿದ್ದುದು ಯಾರ ಭೀತಿಯಿಂದಲೂ ಅಲ್ಲ. ಅದು ಸ್ವಾಭಾವಿಕವಾದ ರಾಜಗೃಹಗಳು ಅವನು ಜಗದೇಕವೀರ (ತ್ರಿಲೋಕವೀರ). ಸ್ವಯಂ ಪರಾಕ್ರಮಿ. ಮೃಗರಾಜನಾದ ಸಿಂಹವು ಗಿರಿಗಹ್ವರಗಳಲ್ಲಿ ಸಂಚರಿಸುವ ಆನೆಗಳನ್ನು ಕೊಲ್ಲು ಅಧಟನ್ನು ಹೊಂದಿದ್ದರೂ ಅದು ನಿದ್ರಿಸುವುದು ಪರ್ವತವಲಯದಲ್ಲಿರುವ ಗುಹೆಗಳಲ್ಲಿ. ಅದು ಅದರ ನಿಸರ್ಗದತ್ತವಾದ, ಪ್ರಕೃತಿದತ್ತವಾದ, ಸಹಜಸುಂದರವಾದ, ಸ್ವಾಭಾವಿಕ ವಾದ ವಾಸಸ್ಥಾನ (ತಾವು, ಮನೆ). ಅದು ಆನೆಯ ಅಥವಾ ಘೇಂಡಾಮೃಗದ ಅಥವಾ ಇತರ ಯಾವುದೇ ಪ್ರಾಣಿಯ ಭಯದಿಂದ, ಭೀತಿಯಿಂದ ಗುಹೆಯನ್ನು ಪ್ರವೇಶಿಸಿ ನಿದ್ರಿಸುವುದಲ್ಲ.

ದ್ವಿಷಾಂ ರೋದ್ಧಾರೋಧಕಸ್ಯಾಪಿ ನ ತಂ ಸ್ವಯಂ ರೋಧ್ಯಸ್ಯೇತ್ಯರ್ಥಃ—ತಸ್ಯ ರಾಜ್ಞೋ ದುರ್ಗಾಣಿ ಪರೈರ್ದುರ್ಧರ್ಷಾಣಿ ದುರ್ಗಾಣಿ ಮಹಿದುರ್ಗಾದೀನ್ಯಾಸನ್—ನ ಚ ನಿರ್ಭೀತಸ್ಯ ಕಿಂ ದುರ್ಗೈರಿತಿ ಪಂಕ್ತ್ಯಮಿತ್ಯರ್ಥಾಂತರನ್ಯಾಸಮುಖೇನಾಹ—ನಹೀತಿ—ಗಜಾನಾಸ್ಕಂದತಿ, ಹಿನಸ್ತೀತಿ ಗಜಾಸ್ಕಂದಿಸಿಂಹೋ ಭಯೋದ್ದೇಶೋಽ—ಗಿರಿಗುಹಾಸು ಶೇತ ಇತಿ ಗಿರಿಗುಹಾಶಯೋನಹಿ, ಕಿಂತು ಸ್ವಭಾವ ಏವೇತಿ ಶೇಷಃ "ಅಧಿಕರಣೇ ಶೇತೇ" ಇತ್ಯಚ್ ಪ್ರತ್ಯಯಃ ॥

53. ಭವ್ಯಮುಖ್ಯಾಃ ಸಮಾರಂಭಾಃ ಪ್ರತ್ಯವೇಕ್ಷ್ಯಾ ನಿರತ್ಯಯಾಃ ।
ಗರ್ಭಶಾಲಿಸಧರ್ಮಾಣಃ ತಸ್ಯ ಗೂಢಂ ವಿಪೇಚಿರೇ ॥ ೫೩ ॥

ಅವನದು ಧರ್ಮಸಾಮ್ರಾಜ್ಯ. ಪ್ರಜೆಗಳ ಕಲ್ಯಾಣಕ್ಕಾಗಿ ಅವನು ಕೈಗೊಳ್ಳುವ ಎಲ್ಲಾ ಯೋಜನೆಗಳು ಬಹಳ ಗೂಢವಾಗಿರುತ್ತಿದ್ದುವು (ಸುವಿಚಾರಯುತ). ಅವುಗಳು ಪೂರ್ಣ ಗೊಂಡಾಗಲೇ ಕಾರ್ಯರೂಪಕ್ಕೆ ಬಂದಾಗಲೇ, ಅದರ ಪ್ರಯೋಜನ ಪಡೆಯುತ್ತಿದ್ದಾ ಗಲೇ, ಜನರು ಅದರ ಮಹತ್ವವನ್ನು ಅರಿತುಕೊಳ್ಳುತ್ತಿದ್ದರು. ಭತ್ತದ ಪೈರು ರಹಸ್ಯ ದಲ್ಲಿ ಗರ್ಭತಳೆದು, ಒಳಗಿಂದೊಳಗೆ ಪರಿಪಕ್ವವಾಗಿ ತೆನೆಯು ಮಾಗಿದಾಗ ಜನರು ಒಯ್ದು (ಕೈಲ್ ಮುಹೂರ್ತ) ಅದನ್ನು ಉಪಯೋಗಿಸುವರು. ಆತನೇ ಸುವಿಚಾರಯುತ ವಾದ, ನೃಪನ ಮಂಗಳ(ಸನ್ಮಂಗಳ)ಪ್ರದವಾದ ಕಾರ್ಯಗಳು, ಯೋಜನೆಗಳು(ಅಭಿವೃದ್ಧಿ ಯೋಜನೆಗಳು) ರಹಸ್ಯದಲ್ಲಿ ಜನ್ಮತಳೆದು ಫಲಕಾರಿಯಾದಾಗಲೇ ಗರ್ಭದೊಳೆ ಪಣ್ತ ಶಾಲಿವನದಂತೆ (ಭತ್ತದ ಕದಿರು, ಭತ್ತದ ಪೈರು. ಗೋದಿ, ರಾಗಿ, ಜೋಳನವಣೆ) ಭತ್ತದ ತೆನೆ, ಭತ್ತವು ಮಾಗುವುದು. ಹೊರನೋಟಕ್ಕೆ ತಿಳಿಯುತ್ತಿರಲಿಲ್ಲ (ಗೂಢ ಪ್ರಕಾಶು). ಯೋಜನೆಯು ಪೂರ್ಣಗೊಂಡಾಗ, ಅದರ ಮಹತ್ವದ ಅರಿವು ಉಂಟಾಗು ತ್ತಿತ್ತು. ಗಂಧಸಾಲಿ ಅಕ್ಕಿಯನ್ನು ಬೇಯಿಸಿ ಉಂಡಾಗ ಅದರ ಮಧುರತೆ (ಉಂಡವನಿಗೆ) ಅರಿವಾಗುವುದಷ್ಟೆ.

ಭವ್ಯಮುಖ್ಯಾಃ = ಕಲ್ಯಾಣಪ್ರಧಾನಾಃ—ಪ್ರತ್ಯಕ್ಷವೇಕ್ಷಾಂ "ಏತಾವತ್ ಕೃತಮೇತಾ ವತ್ ಕರ್ತವ್ಯಮ್" ಇತ್ಯನುಸಂಧಾನೇನ ವಿಚಾರಣೀಯಾಃ—ಅತ ಏವ ನಿರತ್ಯಯಾ

ನಿರ್ಬಾಧಾ ಗರ್ಭೇಽಭ್ಯಂತರೇ ಪಚ್ಯತೇಯೇ ಶಾಲಯಸ್ತೇಷಾಂ ಸಧರ್ಮಾಣಃ—ಅತಿ ನಿಗೂಢಾ ಇತ್ಯರ್ಥಃ—ತಸ್ಯ ರಾಜ್ಞಃ ಸಮಾರಭ್ಯಂತ ಇತಿ ಸಮಾರಂಭಾಃ ಕರ್ಮಾಣಿ ಗೂಢಪ್ರಕಾಶಂ ವಿಪೇಚಿರೇ ಫಲಿತಾ ಇತ್ಯರ್ಥಃ—"ಫಲಾನುಮೇಯಾಃ ಪ್ರಾರಂಭಾಃ" ಇತಿಭಾವಃ—ಭವ್ಯಮುಖ್ಯಾ = ಅಭಿವೃದ್ಧಿಕಾರ್ಯಗಳು ಗೂಢವಾಗಿದ್ದು, ಅವುಗಳ ಮಹತ್ವ ಕಾರ್ಯಗತವಾದಮೇಲೆ ಪೂರ್ಣ ತಿಳಿಯಲು ಸಾಧ್ಯ (ಅಕ್ಕಿ ಒಳಗೆ ಬೆಂದಮೇಲೆ ಆ ಬಳಿಕ ಹೊರಗೆ ಬೇಯುವಂತೆ).

**54.** **ಅಪಥೇನ ಪ್ರವವೃತೇನ ಜಾತೂಪಚಿತೋಽಪಿ ಸಃ ।**
**ವೃದ್ಧೌ ನದೀಮುಖೇನೈವ ಪ್ರಸ್ಥಾನಂ ಲವಣಾಂಭಸಃ ॥ ೫೪ ॥**

ತಾನು ಅದು ಎಷ್ಟು ಮಹತ್ತರವಾದ ಏಳಿಗೆಯನ್ನು ಪಡೆದರೂ ಅವನು ಪಾಪ ಮಾರ್ಗದಲ್ಲಿ ಕಾಲಿಡುತ್ತಿರಲಿಲ್ಲ. ಆ ಅತಿಥಿಭೂಪರನು ಸಾಗರನಂತೆ (ಉಪ್ಪುನೀರಿನ ಕಡಲಿನಂತೆ) ಏರಿಳಿತಗಳು ನದೀ ಮುಖಜದ ಮೂಲಕವಲ್ಲದೆ ಬೇರೆ ದಾರಿಯಿಂದ ಹೊರ ಸೂಸದಿರುವುದು. ಸಮುದ್ರವು ನೀರಿನ ಅಬ್ಬರ. ಉಬ್ಬರ ಕಾಲದಲ್ಲಿ ಕ್ಷೋಭೆಗೊಂಡಾಗಲೂ (ಕೋಪಗೊಂಡಾಗಲೂ) ಮಳೆಗಾಲದಲ್ಲಿ ನೀರಿನ ಪ್ರವಾಹವು ಅಧಿಕವಾಗಿ ನದಿಯು ಉಕ್ಕಿಹರಿಯುತ್ತಿದ್ದಾಗ, ನೆರೆಬಂದಾಗ (ಪ್ರವಾಹಬಂದಾಗ) ಮತ್ತು ಬಹಳ ವೇಗದಿಂದ ಬರುತ್ತಿದ್ದರೂ ಅದನ್ನು ಸಾಪದಾನದಿಂದ ಸ್ವೀಕರಿಸಿ, ಭರದ ಸಮಯದಲ್ಲಿ ನದೀಮುಖದಿಂದಲ್ಲದೆ ಬೇರೆ ಮಾರ್ಗದಿಂದ ಹೊರಗಟ್ಟದೆ ಇರುವುದು. ಅದೇ ರೀತಿಯಲ್ಲಿ ಅತಿಥಿಸಾರ್ವಭೌಮನು ತನ್ನ ವೈರಿಗಳು ಎಷ್ಟೇ ದುಷ್ಟರಾದರೂ (ನೀಚರಾದಾಗ್ಯೂ) ಯುದ್ಧಧರ್ಮವನ್ನು ಅನುಸರಿಸಿ ದಾಳಿಮಾಡುತ್ತಿದ್ದನು. ಅಹಿತರ ದಮನಕಾರ್ಯವನ್ನು) ಸಾಧಿಸುವಲ್ಲಿ ತಪ್ಪುದಾರಿಯಲ್ಲಿ (ಪಾಪಮಾರ್ಗ) ನಡೆಯದೆ (ಸಮಯಸಾಧಕತನ, ಕುಹಕಕರ್ಮ, ಕುಪಥ) ಉದಾತ್ತಪಥದಲ್ಲಿ ಸಾಗುತ್ತಿದ್ದ ಮಾನವಪುರುಷೋತ್ತಮನವನು (ಅಡಿಯಿಡನು ಅಪಥದೊಳು).

ಅಪಥೇ ನೇತಿ—ಸೋಽತಿಥಿರುಪಚಿತೋಽಪಿ ವೃದ್ಧಿಂಗತೋಽಪಿ—ಕುಮಾರ್ಗೇಣ ಪ್ರವವೃತೇ ನ ಪ್ರವೃತ್ತಃ—ಮರ್ಯಾದಾಂ ನ ಜಹಾವಿತ್ಯರ್ಥಃ—ತಥಾ ಹಿ ಲವಣಾಂಭಸೋ=ಲವಣಸಾಗರಸ್ಯ ವೃದ್ಧೌ ಪೂರೋತ್ಪೀಡೇ ಸತ್ಯಾಂ ನದೀಮುಖೇನೈವ ನದೀಪ್ರವೇಶಮಾರ್ಗೇಣೈವ ಪ್ರಸ್ಥಾನಂ ನಿಃಸರಣಮ್ ॥

**55.** **ಕಾಮಂ ಪ್ರಕೃತಿವೈರಾಗ್ಯಂ ಸದ್ಯಃ ಶಮಯಿತುಂ ಕ್ಷಮಃ ।**
**ಯಸ್ಯ ಕಾರ್ಯಃ ಪ್ರತೀಕಾರಃ ಸ ತನ್ನೈವೋದಪಾದಯತ್ ॥ ೫೫ ॥**

ಪ್ರಕೃತಿವೈರಾಗ್ಯವನು ಅವನು ಆ ಕ್ಷಣದಲ್ಲೇ ಉಪಶಮನಗೊಳಿಸಲು (ಹಿಮ್ಮೆಟ್ಟಿಸಲು) ಸಮರ್ಥನು. ದಂಗೆ, ಕ್ಷೋಭೆ, ನಿಸರ್ಗದ (ದೈವದ) ಉತ್ಪಾತ, ದುರಾಕ್ರಮಣ ಮೊದಲಾದ ಹಾನಿಕಾರಕ ಸಂದರ್ಭಗಳಲ್ಲೂ ಅವನು ಋಜುಮಾರ್ಗವನ್ನು ಅನುಸರಿಸುತ್ತಿದ್ದನು. ಅವನು ಕ್ಷಮಾಶೀಲನಾದುದರಿಂದ ಪ್ರತೀಕಾರಭಾವನೆಯಿಂದ ಕಾರ್ಯವನ್ನು

ಕೈಗೊಳ್ಳದೆ "ಸರ್ವೇ ಜನಾಸುಖಿನೋ ಭವಂತು" ಎಂಬ ವೇದವಾಕ್ಯದಂತೆ, ಎಲ್ಲರಿಗೂ ಸುಖವಾಗಲಿ ಎಂಬಂತೆ, ಸಾಧುವಾದ ಶಮ, ದಮ, ಅಹಿಂಸೆಗಳಿಂದ ಕೂಡಿದ ಉದಾತ್ತ ಧ್ಯೇಯಧೋರಣೆಗಳಿಂದ ತಲೆದೋರಿದ (ತಲೆ ಎತ್ತಿರುವ) ವಿಪ್ಲವ, ಉತ್ಪಾತಗಳನ್ನು (ವಿಪತ್ತು, ಕ್ಲೇಶ) ಎದುರಿಸುತ್ತ, ಅನ್ಯಾಯವನ್ನು ನ್ಯಾಯದಿಂದಲೇ ಎದುರಿಸುತ್ತ ಅಂತಿಮಜಯವನ್ನು ಹೊಂದುತ್ತಿದ್ದನು. ಅವನಿಗೆ ಸಾಧ್ಯವಾದ, ತ್ಯಾಜ್ಯವಾದ ನೀಚ (ದುರ್ಮಾರ್ಗ) ಮಾರ್ಗದಲ್ಲಿ ನಡೆಯದೆ ಕಷ್ಟಕರವಾದ, ತ್ಯಾಗದ, ಉದಾತ್ತದ, ದಯೆಯ (ಕರುಣೆಯ) ನ್ಯಾಯಸಮ್ಮತವಾದ ಮಾರ್ಗದಲ್ಲಿ ನಡೆಯುತ್ತಿದ್ದ ಯಶೋವಂತನವನು, ಪ್ರಜಾರಂಜಕನವನು.

ಪ್ರಕೃತಿವೈರಾಗ್ಯಂ=ಪ್ರಜಾವಿರಾಗವಶ್ ದೈವಾದುತ್ಪನ್ನಮಿತಿ ಶೇಷಃ—ಸದ್ಯಃ ಕಾಮಂ ಸಮ್ಯಕ್ ಶಮಯಿತುಂ ಪ್ರತಿಕರ್ತುಂ ಕ್ಷಮಃ=ಶಕ್ತಃ ಸ ರಾಜಾ ಯಸ್ಯ ಪ್ರಕೃತಿವೈರಾಗ್ಯಸ್ಯ ಪ್ರತೀಕಾರಃ ಕಾರ್ಯಃ ಕರ್ತವ್ಯಃ—ಅನರ್ಥಹೇತುತ್ವಾದಿತ್ಯರ್ಥಃ—ಉತ್ಪನ್ನಪ್ರತೀಕಾರಾದನುತ್ಪಾದನಂ ವರಮಿತಿ ಭಾವಃ—

**56. ಶಕ್ಯೇಷ್ವೇವಾಭವದ್ಯಾತ್ರಾ ತಸ್ಯ ಶಕ್ತಿಮತಃ ಸತಃ ।**
**ಸಮೀರಣಸಹಾಯೋಽಪಿ ನಾಂಭಃ ಪ್ರಾರ್ಥೀ ದವಾನಲಃ ॥ ೫೬ ॥**

ಅಧಿಕಬಲನಾದರೂ ತಾನು ಗೆಲ್ಲಲು ಸಾಧ್ಯವಿದ್ದವರ ಮೇಲೆ ದಂಡಯಾತ್ರೆಗೆ (ದಿಗ್ವಿಜಯಕ್ಕೆ) ತೆರಳುತ್ತಿದ್ದನು. ತನ್ನ ತೋಳ್ಬಲ ತೋರಲು ಕಾಲುಕೆದರಿ ಯುದ್ಧಕ್ಕೆ ಹೋಗುತ್ತಿರಲಿಲ್ಲ. ದಾವಾನಲನು (ಬೆಂಕಿಯು) ಪವನನ ಸಹಾಯದಿಂದ ಕಾಳ್ಗಿಚ್ಚಾಗಿ ಕಾಡನ್ನು ಸುಟ್ಟು ಬಿಡಲುಬಲ್ಲುದು. ತೃಣಕಾಷ್ಠಾದಿಗಳನ್ನು ಲಯಮಾಡಬಲ್ಲುದು. ಆದರೆ ಅದು (ದಾವಾನಲನು) ಜಲದಹನಕ್ಕೆ ಬಯಸುವುದಿಲ್ಲ. ನೀರಿನ ಸಹಾಯವಿಲ್ಲದೇ ಕಾಡನ್ನು ಪೂರ್ಣವಾಗಿ ತನ್ನ ಸ್ವಂತ ಶಕ್ತಿಯಿಂದ (ವಾಯುವಿನ ಸಹಾಯದಿಂದ) ಸುಟ್ಟು ಹೆಟ್ಟಡಗಿಸಬಲ್ಲುದು (ದಹಿಸಬಲ್ಲುದು). ನೀರನ್ನು ಪ್ರಾರ್ಥಿಸುವುದಿಲ್ಲ. ಕಾಳ್ಗಿಚ್ಚನು ನಂದಿಸಲು ನೀರಿನ ಸಹಾಯ ಬೇಕಾಗಿಲ್ಲ. ನೀರಿನ ಸಹಾಯ ಬೇಕೆಂದಾದರೆ ತನಗೆ ಶಣಿಸಲು, (ನಂದಿಸಲು) ಸಾಧ್ಯವಿಲ್ಲವೆಂದಾಯಿತು. ಮಾರಣೆಯವನ ಸಾನ್ನಿಧ್ಯ ಅಗತ್ಯವಿದೆ ಎಂದಾಯಿತು. ಸಮಾನಬಲರಾದವರು ಯುದ್ಧಮಾಡಿದರೆ ಸುಂದೋಪಸುಂದರಂತೆ ಇಬ್ಬರೂ ನಾಶವಾಗುವರು—ಆಕ್ರಮಣಕಾರಿ ಹಾಗೂ ಎದುರಾಳಿ. ಇದು ಆತ್ಮಘಾತದ, ಅನರ್ಥಕಾರಕವಾದ ಕಾರ್ಯವೈಖರಿಯ (ಕಾರ್ಯನಿರ್ವಹಣೆಯ) ಉದಾಹರಣೆ. ಅಧಿಕಬಲರೊಡನೆ ಸಂಧಿ, ಸಂಧಾನ, ಮಾತುಕತೆಯ ಮೂಲಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕೆಂದು ಕೌಟಿಲ್ಯರ ಅಭಿಮತ. ಅಧಿಕಬಲರೊಡನೆ ಯುದ್ಧ ಸಲ್ಲ (ಅನಿಲನ ಸಹಾಯ ತನಗಿದ್ದರೂ ಜಲದಹನಕೆಳಸನು ದಾವಾನಲನು ತಾನು).

ಶಕ್ತಿಮಂತಃ=ಶಕ್ತಿಸಂಪನ್ನಸ್ಯಾಪಿ ಸ ತಸ್ಯಸ್ಯ ರಾಜ್ಞಃ ಶಕ್ಯೇಷು=ಶಕ್ತಿವಿಷಯೇಷು ಸ್ವಸ್ಮಾದ್ಧೀನವಲೇಷ್ವೇವ ವಿಷಯೇ ಯಾತ್ರಾ=ದಂಡಯಾತ್ರಾಽಭವತ್—ತಥಾ ಹಿ—ಸಮೀರಣಸಹಾಯೋಽಪಿ ಅಂಭಃ ಪ್ರಾರ್ಥೀ ಜಲಾನ್ವೇಷೀ ನ—ಕಿಂತು ತೃಣಕಾಷ್ಠಾದಿ ಕಮೇವಾನ್ವಿಷ್ಯತೀತ್ಯರ್ಥಃ—ಅತ್ರ ಕೌಟಿಲ್ಯಃ—"ಸಮಜ್ಯಾಯೋಭ್ಯಾಂ ಸಂದಧೀತ, ಹೀನೇನ ವಿಗೃಹ್ಣೀಯಾತ್" ಇತಿ ॥

**57. ನ ಧರ್ಮಮರ್ಥಕಾಮಾಭ್ಯಾಂ ಬಬಾಧೇ ನ ಚ ತೇನ ತೌ ।**
**ನಾರ್ಥಂ ಕಾಮೇನ ಕಾಮಂ ವಾ ಸೋಽರ್ಥೇನ ಸದೃಶಸ್ತ್ರಿಷು ॥ ೫೭ ॥**

ಆ ನೃಪನು ತನ್ನ ಧರ್ಮವನ್ನು ನ್ಯಾಯಯುತವಾದ ಕರ್ತವ್ಯನಿಷ್ಠೆಯನ್ನು ಅರ್ಥಕ್ಕಾಗಿ (ಹಣದಾಸೆಗಾಗಿ), ಕಾಮಕ್ಕಾಗಿ, ತನ್ನ ಸ್ವಾರ್ಥಕಾಮನೆಗಾಗಿ, ದೇಹಸುಖಕ್ಕಾಗಿ ಬಿಟ್ಟವನಲ್ಲ. ಧರ್ಮದಪಥದಲ್ಲಿ, ಸದ್ಧರ್ಮಿಯಾಗಿ ದೃಢತರ ವಿಶ್ವಾಸದಿಂದ ನಡೆದು ಧರ್ಮವನ್ನು ಪಾಲಿಸುತ್ತಿದ್ದನು. ನ್ಯಾಯಧರ್ಮದಿಂದ ರಾಜ್ಯವಾಳುತ್ತಿದ್ದನು. ಇದರಿಂದ ಅವನಿಗೆ ಅರ್ಥಕಾಮಗಳು ಧರ್ಮದಿಂದಲೇ ದೊರೆಯುತ್ತಿದ್ದುವು. ಕಾಮವು ಅವನ ಕಾರ್ಯಗಳನ್ನು ಹಾಳುಮಾಡುತ್ತಿರಲಿಲ್ಲ. ಕಾಮವನ್ನು ಅರ್ಥದಿಂದ, ಅರ್ಥವನ್ನು ಕಾಮದಿಂದ ಅವುಗಳೆರಡನ್ನು ಧರ್ಮವು ಬಾಧಿಸದ ರೀತಿಯಲ್ಲಿ ಧರ್ಮಪಥದ ಮೇಲೆ ಪಡೆಯುತ್ತಿದ್ದನು. ಅಂದರೆ ಧರ್ಮವಿಲ್ಲದ ಅರ್ಥವಿಲ್ಲ, ಧರ್ಮವಿಲ್ಲದ ಕಾಮವಿಲ್ಲ ಎಂಬಂತೆ, ಅವನು ಆ ಮೂರನ್ನು ನ್ಯಾಯವಾದ, ಋಜುವಾದ, ಉತ್ತಮವಾದ (ಸತ್ಯವಾದ) ಮಾರ್ಗದಲ್ಲಿ ನಡೆದು ಸಾಧಿಸುತ್ತಿದ್ದನು (ಧರ್ಮ, ಅರ್ಥ, ಕಾಮ—ತ್ರಿಷು ವರ್ಗೇಷು). ಅವನು ಜಡತೆಯಿಂದ, ಆಲಸದಿಂದಲಾದರೂ ಯಾವುದನ್ನೂ ಕಡೆಗಣಿಸುತ್ತಿರಲಿಲ್ಲ. ಅಷ್ಟು ಮಾತ್ರವಲ್ಲ ಯಾರನ್ನೂ (ದುರ್ಬಲವರ್ಗದವರನ್ನೂ) ಕಡೆಗಣಿಸುತ್ತಿರಲಿಲ್ಲ. (ಜನಹಿತ, ಜನಪರಧೋರಣೆ—ಸಮಷ್ಟಿಯಲ್ಲಿ ಸುಖ—ಸಮತಾವಾದ—ಸಮಾಜವಾದ—ಸರ್ವೋದಯ) (ವಿಶ್ವಭ್ರಾತೃತ್ವ). ಧರ್ಮ, ಅರ್ಥ, ಕಾಮವನ್ನು ಸಮಾನದೃಷ್ಟಿಯಿಂದ ನೋಡುತ್ತ, ಎಲ್ಲರ ಹಿತವನ್ನು ಸಾಧಿಸುತ್ತ ತನ್ನ ಸ್ವಾರ್ಥಸಾಧನೆಗಳನ್ನು, ಐಹಿಕಭೋಗಲಾಲಸೆಯನ್ನು ಬದಿಗೊತ್ತಿ ಶಿಸ್ತಿನಿಂದ ಸದ್ಧರ್ಮದಿಂದ ಆಳುತ್ತಿದ್ದನು.

ನ ಧರ್ಮಮಿತಿ—ಸ ರಾಜಾ—ಅರ್ಥಕಾಮಾಭ್ಯಾಂ ಧರ್ಮಂ ನ ಬಬಾಧೇ=ನ ನಾಶಿತವಾನ್—ತೇನ ಧರ್ಮೇಣಾಂ ಚ ತಾವರ್ಥಕಾಮೌ ನ—ಅರ್ಥ=ಕಾಮೇನ ಕಾಮಂ ವಾಽರ್ಥೇನ ನ ಬಬಾಧೇ—ಏಕತ್ರೈವಾಸಕ್ತೋ ನಾಭೂದಿತ್ಯರ್ಥಃ—ಕಿಂತು ತ್ರಿಷು=ಧರ್ಮಾರ್ಥಕಾಮೇಷು ಸದೃಶಸ್ತುಲ್ಯವೃತ್ತಿಃ—ಅಭೂದಿತ್ಯರ್ಥಃ ॥

**58. ಹೀನಾನ್ಯನುಪಕರ್ತೄಣಿ ಪ್ರವೃದ್ಧಾನಿ ವಿಕುರ್ವತೇ ।**
**ತೇನ ಮಧ್ಯಮಶಕ್ತೀನಿ ಮಿತ್ರಾಣಿ ಸ್ಥಾಪಿತಾನ್ಯತಃ ॥ ೫೮ ॥**

ಹೀನರಾದ, ಕ್ಷೀಣರಾದ ಮಿತ್ರವರ್ಗದವರಿಂದ ಉಪಕಾರವು ಸಿಗದು. ಮಿತ್ರರನ್ನು ತನಗಿಂತಲೂ ಅಧಿಕರನ್ನಾಗಿ, ಬಲಾಢ್ಯರನ್ನಾಗಿಸಿದರೆ ಅವರು ತನಗೆ ವಿರುದ್ಧವಾಗಿ ತಲೆ ಎತ್ತಿ ನಿಲ್ಲಬಹುದು. ತರಲೆ, ತಕರಾರು ಮಾಡಬಹುದು, ಬಂಡಾಯ ಹೂಡಬಹುದು, ಸಂಚು ಹೂಡಬಹುದು, ಅಪಕೃತಿ ಮಾಡಬಹುದು—ಈ ಎಲ್ಲಾ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ವಿವೇಕಿಯಾದ ಆ ಅರಸನು ಸಮಹೃದಯರಾದ ತನ್ನ ಆಪ್ತಸ್ಥಿತಿಯಲ್ಲಿಟ್ಟಿದ್ದನು (ಮಧ್ಯಮಸ್ಥಿತಿಯಲ್ಲಿರಿಸಿದನು). ಮೇಲೂ ಅಲ್ಲ, ಕೆಳಗೂ ಅಲ್ಲ, ಹೀನರಾಗಿಸಲೂ ಇಲ್ಲ. ಮಧ್ಯಮಶಕ್ತಿಯಲ್ಲಿ ಸ್ಥಾಪಿತರನ್ನಾಗಿ, ಮಧ್ಯಮಶಕ್ತಿಸಂಪನ್ನರಾಗಿ ಮಾಡಿ ನೈಪುಣ್ಯದಿಂದ (ಚಾಕಚಕ್ಯತೆಯಿಂದ) ರಾಜ್ಯಭಾರ ಮಾಡುತ್ತಿದ್ದನು.

ಪ್ರವೃದ್ಧಾನ್ಯತಿಸಮೃದ್ಧಾನಿ ಹಿ ವಿಕುರ್ವತೇ ವಿರುದ್ಧಂ ಚೇಷ್ಟಂತೇ—ಅಪಕುರ್ವತ ಇತ್ಯರ್ಥಃ—"ಅಕರ್ಮಕಾಚ್ಚ" ಇತ್ಯಾತ್ಮನೇಪದಮ್ (ಪಾ.ಸೂ.) ಅತಃ ಕಾರಣಾತ್ತೇನ ರಾಜ್ಞಾ ಮಿತ್ರಾಣಿ ಸುಹೃದಃ—"ಮಿತ್ರಂ ಸುಹೃದಿ ಮಿತ್ರೋಽರ್ಕೇ" ಇತಿ ವಿಶ್ವಃ—ಮಧ್ಯಮಶಕ್ತೀನಿ ನಾತಿ ಕ್ಷೀಣಾನ್ಯಪ್ರೀತಾನಿ ಯಥಾ ಸ್ಯಾತ್ತಥಾ ಸ್ಥಾಪಿತಾನಿ ॥

**59. ಪರಾತ್ಮನೋಃ ಪರಿಚ್ಛಿದ್ಯ ಶಕ್ತ್ಯಾದೀನಾಂ ಬಲಾಬಲಮ್ ।**
**ಯಯಾವೇಭಿರ್ಬಲಿಷ್ಠಶ್ಚೇತ್ಪರಸ್ಮಾದಾಸ್ತ ಸೋಽನ್ಯಥಾ ॥ ೫೯ ॥**

ಅವನು ದಂಡಯಾತ್ರೆಗೆ ಹೋಗಬೇಕಾದರೆ, ಯುದ್ಧ ಮಾಡಬೇಕಾದರೆ ಶತ್ರುವಿನ ಬಲಾಬಲಗಳನ್ನು, ಶಕ್ತಿಸಾಮರ್ಥ್ಯಗಳನ್ನು ಅರಿತುಕೊಂಡು ಆ ಬಳಿಕ ಕಾರ್ಯೋನ್ಮುಖನಾಗುತ್ತಿದ್ದನು. ಶತ್ರುವಿನ ಕೋಟೆಗಳು, ಶಕ್ತಿಕೇಂದ್ರಗಳು, ದುರ್ಗಗಳು (ಕೋಟೆ ಕೊತ್ತಳಗಳು), ಸೇನಾಬಲ, ಮಿತ್ರರ ಬಲ, ಅವಧಿಜ್ಞಾನ (ಸಮಯಸಂದರ್ಭ, ಕಾಲಜ್ಞಾನ), ಪ್ರಾದೇಶಿಕ ವಿಚಾರಗಳು, ಎಲ್ಲವನ್ನೂ ಸಂಗ್ರಹಿಸಿ, ಕೂಲಂಕಷವಾಗಿ ಪರಿಶೀಲಿಸಿ (ಶಕ್ತಿಯು ದೇಶಕಾಲಾದೀನಾಂ ಎಂಬಂತೆ) ತನಗೆ ಎದುರಿಸಲು ಸಾಮರ್ಥ್ಯವಿದ್ದರೇ ದಿಗ್ವಿಜಯಕ್ಕೆ ಹೊರಡುತ್ತಿದ್ದನು. ಇಲ್ಲದಿದ್ದರೆ ಸಂಧಿ, ಸಂಧಾನ, ದಾನ. ಉಡುಗೊರೆ, ಮಾತುಕತೆ, ಮಿತ್ರತ್ವದ, ಬಂಧುತ್ವದ, ಸ್ನೇಹಸಂಪಾದನೆ, ಇವೇ ಮೊದಲಾದ ಇತರ ಮಾರ್ಗೋಪಾಯದಿಂದ (ವಿಧಿವಿಧಾನಗಳಿಂದ) ಕಾರ್ಯಸಾಧನೆ ಮಾಡಿಕೊಳ್ಳುವ ಚಾಣಾಕ್ಷಪ್ರಭು ತಾನಾಗಿದ್ದನು (ಅಲ್ಲದಿರೆ ತಾಂ ಸುಮ್ಮನಿಹನು, ಕಿಮ್ಮನಿಹನು).

ಶಕ್ತ್ಯಾದೀನಾಂ = ಶಕ್ತಿದೇಶಕಾಲಾದೀನಾಂ ಬಲಾಬಲಂ ನ್ಯೂನಾಧಿಕಭಾವಂ—ಪರಿಚ್ಛಿದ್ಯ = ನಿಶ್ಚಿತ್ಯ = ಪರಿಗಣಿಸಿ (ಬಲಾಬಲಗಳನ್ನು).

**60. ಕೋಶೇನಾಶ್ರಯಣೀಯತ್ವಮಿತಿ ತಸ್ಯಾರ್ಥಸಂಗ್ರಹಃ ।**
**ಅಂಬುಗರ್ಭೋ ಹಿ ಜೀಮೂತಶ್ಚಾತಕೈರಭಿನಂದ್ಯತೇ ॥ ೬೦ ॥**

ಯಾರಿಗೆ ಆಶ್ರಯ ನೀಡಬೇಕಾದರೂ ಕೋಶವಿದ್ದರೇನೆ ಸಾಧ್ಯ. ಹಣವಿಲ್ಲದಿದ್ದರೆ ಸಹಾಯಮಾಡುವುದು ದುಸ್ತರವೇ ಸರಿ. (ಕೋಶ = ಹಣದ ಭಂಡಾರ, ಖಜಾನೆ). ಹಣವಿದ್ದರೇನೇ ಮಾನವನು (ರಾಜನು) ಪೂಜ್ಯನಾಗುವನು. ಇದು ಸ್ವಯಂವೇದ್ಯ. ಚಾತಕ ಪಕ್ಷಿಗಳು ಜಲಗರ್ಭಹೊಂದಿರುವ ಜೀಮೂತಗಳನ್ನು (ಜೀಮೂತ = ಮೋಡ = ಮೇಘ) ಮಾತ್ರ ಅಭಿನಂದಿಸುತ್ತಿವೆ. ನೋಡಿ ತಕತಕನೆ ನಲಿಯುತ್ತಿವೆ, ಕುಣಿಯುತ್ತಿವೆ. ಕಲಕಲನಾದ ಮಾಡುತ್ತಿವೆ. ಭಂಡಾರದಿಂದಲೇ ರಾಜನು ಲೋಕಮಾನ್ಯ(ಲೋಕಪೂಜ್ಯ)ನಾಗುತ್ತಾನೆ. ಪೂಜಿಸಲ್ಪಡುತ್ತಾನೆ, ಭಜನೀಯನಾಗುತ್ತಾನೆ (ಹಣವಿಲ್ಲದವನೊಬ್ಬ ಹೆಣವೇ ಸರಿ ಎಂದು ದಾಸರು ಹಾಡಿದ್ದಾರೆ). ಆದುದರಿಂದ ಆ ಮಹನೀಯನಾದ ರಾಜನು ದ್ರವ್ಯಸಂಪಾದನೆ ಮಾಡಿದನು, ಅರ್ಥವನ್ನು ಗಳಿಸಿದನು, ಸಂಚಯಮಾಡಿದನು. ಅಣಿಮಾದಿ ಅಷ್ಟೈಶ್ವರ್ಯಗಳಿಂದ, ನವರತ್ನಗಳಿಂದ (ವಜ್ರ, ಮಾಣಿಕ್ಯ, ಗೋಮೇಧಿಕ, ಪಚ್ಚೆ, ಕೆಂಪು, ನೀಲ, ಮುತ್ತು ರತ್ನಗಳು) ನಿಧಿಗಳಿಂದ, ಸುವರ್ಣ, ಬೆಳ್ಳಿ, ತಾಮ್ರ, ಪಂಚಲೋಹ ಮೊದಲಾದ ಅಮೂಲ್ಯ ಲೋಹಗಳಿಂದ, ನಾಣ್ಯಗಳಿಂದ, ಅವನ ಖಜಾನೆಯು ಎಲ್ಲಾ ಕಾಲದಲ್ಲೂ

ಭರ್ತಿಯಾಗಿರುತ್ತಿತ್ತು. ಅದು ವೈಭವದ ನೆಲೆಯಾಗಿತ್ತು. ಸಾಕೇತವು ಎರಡನೆಯ ಅಲಕಾವತಿಯೆನಿಸಿತ್ತು (ಅಲಕ = ಕುಬೇರನ ರಾಜಧಾನಿ).

ಕೋಶೇನಾರ್ಥಚಯೇನ—ಆಶ್ರಣೀಯತ್ವಂ = ಭಜನೀಯತ್ವಮ್—ಇತಿ ಹೇತೋಸ್ತಸ್ಯ ರಾಜ್ಞಃ ಕರ್ತುಃ ಅರ್ಥಸಂಗ್ರಹಃ—ನ ತು ಲೋಭಾದಿತ್ಯರ್ಥಃ—ತಥಾ ಹಿ ಅಂಬುಗರ್ಭೋ ಯಸ್ಯ ಸೋಽಂಬುಗರ್ಭಃ—ಜೀವನಸ್ಯ ಜಲಸ್ಯ ಮೂತಃ ಪುಟಬಂಧೋ ಜೀಮೂತೋ = ಮೇಘಃ—ಚಾತಕೈರಭಿನಂದ್ಯತೇ = ಸೇವ್ಯತೇ—ಅತ್ರ ಕಾಮಂದಕಃ "ಧರ್ಮಹೇತೋಸ್ತಥಾಽರ್ಥಾಯ ಭೃತ್ಯಾನಾಂ ರಕ್ಷಣಾಯ ಚ—ಆಪದರ್ಥಂ ಚ ಸಂರಕ್ಷ್ಯಃ ಕೋಶೋ ಧರ್ಮವತಾ ಸದಾ" ಇತಿ ॥

**61. ಪರಕರ್ಮಾಪಹಃ ಸೋಽಭೂದುದ್ಯತಃ ಸ್ವೇಷು ಕರ್ಮಸು ।**
**ಆವೃಣೋದಾತ್ಮನೋ ರಂಧ್ರಂ ರಂಧ್ರೇಷು ಪ್ರಹರನ್ ರಿಪೂನ್ ॥ ೬೧ ॥**

ಯುದ್ಧಕಾಲದಲ್ಲಿ ರಾಜನಾದವನು ಪರರಾಜರ ಕಾರ್ಯಗಳನ್ನು, ಕೆಲಸಗಳನ್ನು (ಕರ್ಮಾಂಗಗಳನ್ನು) ಕೆಡಿಸುವನು. ತನ್ನದಾದ ಆತ್ಮಕರ್ಮಗಳನ್ನು ಅಭಿವೃದ್ಧಿಗೊಳಿಸುವನು, ಹೆಚ್ಚಿಸುವನು. ಪರರ ಕೊರೆಗಳನ್ನು, ಛಿದ್ರಗಳನ್ನು, ದುರ್ಬಲತೆಗಳನ್ನು ಕಂಡು ಸದೆಬಡಿಯುತ್ತ, ತನ್ನ ರಂಧ್ರಗಳನ್ನು ತೋರದೆ ಮುಚ್ಚುವನು. ತನ್ನ ನ್ಯೂನತೆಗಳನ್ನು, ಕೊರತೆಗಳನ್ನು ತೋರದಿರುವನು, ಬಹಿರಂಗಪಡಿಸನು. ವಿದ್ಯೆಯನ್ನು ವಿದ್ಯೆಯಿಂದ, ವಿಜ್ಞಾನವನ್ನು ವಿಜ್ಞಾನದಿಂದ ಎದುರಿಸುವನು.

ಸೇನೆ, ವಾರ್ತೆ, ರಹದಾರಿ, ದುರ್ಗ, ಸೇತುವೆ, ಕೃಷಿ, ಕೃಷಿ ಉತ್ಪನ್ನ, ದ್ರವ್ಯ, ಗಜ, ಇವುಗಳನ್ನು ತಾನು ಅಭಿವೃದ್ಧಿಗೊಳಿಸಿ ವೈರಿರಾಜರ ಚೇತನವನ್ನು ನಾಶಗೊಳಿಸುವನು. ಕೂರ್ಮವು (ಆಮೆಯು) ವೈರಿಗಳನ್ನು ಕಂಡಾಗ, ತನ್ನ ರಕ್ಷಣೆಗಾಗಿ ಅಂಗಾಂಗಗಳನ್ನು ಒಳಕ್ಕೆ ಸೆಳೆದುಕೊಳ್ಳುವುದು. ಅದರಂತೆ ರಾಜನೂ ತನ್ನ ಆತ್ಮರಕ್ಷಣೆ ಮಾಡಿಕೊಳ್ಳುವನು (ರಂಧ್ರಂ ರಂಧ್ರೇಷು ಪ್ರಹರನ್).

ಸ ರಾಜಾ ಪರೇಷಾಂ=ಕರ್ಮಣಿ ಸೇತುವಾರ್ತಾದೀನ್ಯಪಹನ್ತೀತಿ=ಪರಕರ್ಮಾಪಹಃ ಸನ್—ಅನ್ಯೇಷ್ವಪಿ ದೃಶ್ಯತೇ "ಇತ್ಯಪಿ ಶಬ್ದಸಾಮರ್ಥ್ಯಾದ್ಧನ್ತೇರ್ಡಪ್ರತ್ಯಯಃ" (ಪಾಣಿನಿ)—ಕಿಂಚ ರಿಪೂನ್ ರಂಧ್ರೇಷು ಪ್ರಹರನ್ನಾತ್ಮನೋ ರಂಧ್ರಂ ವ್ಯಸನಾಧಿಕಮಾವೃಣೋತ್=ಸಂವೃತಾನ್—ಅತ್ರ ಮನುಃ "ನಾಸ್ಯ ಛಿದ್ರಂ ಪರೋ ವಿದ್ಯಾದ್ವಿದ್ಯಾಚ್ಛಿದ್ರಂ ಪರಸ್ಯ ತು—ಗೂಹೇತ್ಕೂರ್ಮ ಇವಾಂಗಾನಿ ರಕ್ಷೇದ್ವಿವರಮಾತ್ಮನಃ" ಇತಿ ॥

**62. ಪಿತ್ರಾ ಸಂವರ್ಧಿತೋ ನಿತ್ಯಂ ಕೃತಾಸ್ತ್ರಃ ಸಾಂಪರಾಯಿಕಃ ।**
**ತಸ್ಯ ದಂಡವತೋ ದಂಡಃ ಸ್ವದೇಹಾನ್ನ ವ್ಯಶಿಷ್ಯತ ॥ ೬೨ ॥**

ಆ ಮಾನವಾಗ್ರಣಿಯು ತನ್ನ ಸೇನೆಯನ್ನು ತನ್ನ ದೇಹದಂತೆ ಕಾಪಾಡಿಕೊಂಡಿದ್ದನು. ಅವರಿಗೆ ಯುದ್ಧವಿದ್ಯೆಯಲ್ಲಿ ಸದಾ ತರಬೇತಿ ಕೊಡುತ್ತಿದ್ದನು. ಚತುರಂಗಸೇನೆಯು ಸದಾ ಯುದ್ಧಕ್ಕೆ ಸನ್ನದ್ಧವಾಗಿ ಯುದ್ಧಸಿದ್ಧತೆಯಲ್ಲಿರುತ್ತಿತ್ತು. ಯುದ್ಧವು ಅನಿವಾರ್ಯ

ವೆಂದು ತಿಳಿದು ಯುದ್ಧಸಾಮರ್ಥ್ಯವನ್ನು ತನ್ನ ತಂದೆಯ ಕಾಲದಿಂದ ಅಧಿಕಗೊಳಿಸುತ್ತ ಬಂದಿರುತ್ತ ಯುದ್ಧದ ಪಂಥಾಹ್ವಾನವನ್ನು, ಸವಾಲನ್ನು ಎದುರಿಸುವ ಶಕ್ತಿ ಪಡೆದಿತ್ತು. ಶಸ್ತ್ರಾಗಾರವು ಶಸ್ತ್ರಾಸ್ತ್ರಗಳಿಂದ ತುಂಬಿರುತ್ತಿತ್ತು. ಸೈನಿಕರು ನಿತ್ಯವೂ ಯುದ್ಧಕಲೆಯನ್ನು ರೂಢಿಗೊಳಿಸಿಕೊಳ್ಳುತ್ತಿದ್ದರು. ತನ್ನ ತಂದೆಯ ಕಾಲದಿಂದ ನಿತ್ಯವೂ ಅಭಿವೃದ್ಧಿಪಡೆದ ಅಸ್ತ್ರಗಳಲ್ಲಿ ಶಿಕ್ಷಣಪಡೆದ ಶಿಸ್ತುಬದ್ಧವಾದ ಸೇನೆಯನ್ನು ಆ ರಾಜಕುಲತಿಲಕನು, ತನ್ನ ಶರೀರವೆಂದೇ ತಿಳಿದು ತನ್ನ ದೇಹವನ್ನು ಹೇಗೆ ಅನ್ನಪಾನಾದಿಗಳಿಂದ ಕಾಪಾಡಿಕೊಳ್ಳುವಂತೆ ರಕ್ಷಿಸುತ್ತಾ ಬರುತ್ತಿದ್ದನು. ತನ್ನ ದೇಹಕ್ಕಿಂತ ಅನ್ಯವೆಂದು ಎಂದೂ ಭಾವಿಸಿರಲಿಲ್ಲ. ರಾಜನ ಮೂಲಬಲವು ಸ್ವದೇಹದಂತೆ ಎಂದು ತಿಳಿದು ರಕ್ಷಿಸುವುದು. ಯುದ್ಧಕಾಲದಲ್ಲಿ ಶಸ್ತ್ರಾಭ್ಯಾಸ ಸಲ್ಲದು. ಮನೆ ಹೊತ್ತಿ ಉರಿಯುವಾಗ ಬಾವಿ ತೋಡಿದರು ಎಂಬಂತೆ (ದಂಡನು ಉರುದಂಡ ಸಂಪನ್ನನೃಪನು).

ದಂಡೋ ದಮಃ ಸೈನ್ಯಂ ವಾ, ತದ್ವತೋ ದಂಡವತೋ=ದಂಡಸಂಪನ್ನಸ್ಯ ತಸ್ಯ ರಾಜ್ಞಃ ಪಿತ್ರಾ ಕುಶೇನ ನಿತ್ಯಂ ಸಂವರ್ಧಿತಃ ಪುಷ್ಟಃ ಕೃತಾಸ್ತ್ರಃ ಶಿಕ್ಷಿತಾಸ್ತ್ರಃ— ಸಂಪರಾಯೋ = ಯುದ್ಧಮ್—"ಯುದ್ಧಾಯತ್ಯೋಃ ಸಂಪರಾಯಃ" ಇತ್ಯಮರಃ— "ಶದರ್ಹತಿ" ಇತಿ ಟಕ್‌ಪ್ರತ್ಯಯಃ (ಪಾಣಿನಿ)—ದಂಡಃ = ಸೈನ್ಯಮ್—"ದಂಡೋ ಯಮೇ ಮಾನಭೇದೇ ಲಗುಡೇದಮಸೈನ್ಯಯೋಃ" ಇತಿ ವಿಶ್ವಃ—ಸ್ವದೇಹೇಪಿ ವಿಶೇಷಣಾನಿ ಯೋಜ್ಯಾನಿ—ಮೂಲಬಲಂ ಸ್ವದೇಹಮಿವಾರಕ್ಷಾದಿತ್ಯರ್ಥಃ ॥

**63. ಸರ್ಪಸ್ಯೇವ ಶಿರೋರತ್ನಂ ನಾಸ್ಯ ಶಕ್ತಿತ್ರಯಂ ಪರಃ ।**
**ಸ ಚಕರ್ಷ ಪರಸ್ಮಾತ್ತದಯಸ್ಕಾಂತ ಇವಾಯಸಮ್ ॥ ೬೩ ॥**

ಸರ್ಪದ ಶಿರೋರತ್ನದಂತೆ ಆ ರಾಜನ ಮೂರು ತರದ (ಶಕ್ತಿತ್ರಯಗಳಾದ) ಶಕ್ತಿಗಳಾದ ಪ್ರಭಾವ, ಉತ್ಸಾಹ, ಮಂತ್ರ ಇವುಗಳನ್ನು ಪರರಾಯರು ಅಪಹರಿಸಲು ಶಕ್ತರಾಗಿರಲಿಲ್ಲ (ಅನ್ಯರು ಅಪಹರಿಸದಿಹರು). ಆದರೆ ಅತಿಥಿಮಹಾರಾಜನು ಅನ್ಯರಾಜರಿಂದ ಆ ಶಕ್ತಿತ್ರಯಗಳನ್ನು, ಸೂಜಿಗಲ್ಲು ಉಕ್ಕನ್ನು ಸೆಳೆದುಕೊಳ್ಳುವಂತೆ ಆಕ್ರಮಿಸಿ ಸೆಳೆದುಕೊಳ್ಳಲು (ಎಳೆದುಕೊಳ್ಳಲು) ಶಕ್ತನಾಗಿದ್ದನು. ಅವನನ್ನು ಜಗತ್ತಿನ ಯಾವೊಬ್ಬ ರಾಜನೂ ಗೆಲ್ಲಲು (ಜಗ್ಗಲು) ಅವನ ಸ್ವತಂತ್ರವನ್ನು ಹತ್ತಿಕ್ಕಲು (ಕಬಳಿಸಲು) ಸಮರ್ಥನಾಗಿರಲಿಲ್ಲ. ಅವನ ಶಕ್ತಿಸಾಮರ್ಥ್ಯಗಳು ಸರ್ಪದ ಶಿರೋರತ್ನದಂತೆ. ಅತ್ಯಂತ ಗೂಢ, ಅತ್ಯಂತ ಶ್ರೇಷ್ಠ. ಅದನ್ನು ಮುಟ್ಟುವ ಅಥವಾ ಒಯ್ಯುವ ಶಕ್ತಿ (ಎದೆಗಾರಿಕೆ) ಯಾವ ಪಾರ್ಥಿವನಿಗೂ ಇರಲಿಲ್ಲ. ಅಯಸ್ಕಾಂತವು ಉಕ್ಕನ್ನು, ಕಬ್ಬಿಣವೇ ಮೊದಲಾದ ಲೋಹಗಳನ್ನು ಸುಲಭವಾಗಿ ಸೆಳೆದುಕೊಳ್ಳಬಹುದು (ಚುಂಬಕಪಾಷಾಣ, ಚುಂಬಕಪಾಷಾಣ, ಅಯಸ್ಕಾಂತ ಇತ್ಯಾದಿ).

ಸರ್ಪಸ್ಯ ಶಿರೋರತ್ನಮಿವ—ಅಸ್ಯ ರಾಜ್ಞಃ ಶಕ್ತಿತ್ರಯಂ ಪರಃ ಶತ್ರುರ್ನ ಚಕರ್ಷ— ಸ ತು ಪರಸ್ಮಾತ್ ಶತ್ರೋಃ—ತತ್ ಶಕ್ತಿತ್ರಯಮ್—ಅಯಸ್ಕಾಂತೋ ಮಣಿವಿಶೇಷ ಆಯಸಂ ಲೋಹವಿಕಾರಮಿವ ಚಕರ್ಷ ॥

64. ವಾಪೀಷ್ವಿವ ಸ್ರವಂತೀಷು ವನೇಷೂಪವನೇಷ್ವಿವ ।
ಸಾರ್ಥಾಃ ಸ್ವೈರಂ ಸ್ವಕೀಯೇಷು ಚೇರುರ್ವೇಶ್ಮಸ್ವಿವಾದ್ರಿಷು ॥ ೬೪ ॥

ಅಂದಿನ ಭಾರತದೇಶದ ನಾಡಿನಲ್ಲಿ ವರ್ತಕರು ತಮ್ಮ ವಾಣಿಜ್ಯವೃತ್ತಿಗಾಗಿ (ವ್ಯಾಪಾರಕ್ಕಾಗಿ) ಅವರು ಪರ್ವತಪ್ರದೇಶಗಳಲ್ಲಿ ತಮ್ಮ ಸ್ವಂತ ಊರುಮನೆಗಳಲ್ಲಿ ಸಂಚರಿಸುವಂತೆ ರಾಜಾರೋಷವಾಗಿ ಸಂಚರಿಸಿದರು. ದಟ್ಟವಾದ ಕಾಡುಗಳಲ್ಲಿ ಅವರ ಉದ್ಯಾನವನಗಳಲ್ಲಿ ಸಂಚರಿಸಿದಂತೆ, ಗಾಳಿಸೇವನೆಗೆ ಹೊರಟಂತೆ, ಯಾವ ಅಡ್ಡಿ ಆತಂಕ ಗಳಿಲ್ಲದೆ, ಕಳ್ಳಕಾಕರ, ದರೋಡೆಕೋರರ, ಡಕಾಯಿತರ, ಠಕ್ಕರ, ಕಾಡುಕಳ್ಳರ, ಕಿಸೆಗಳ್ಳರ, ಗಂಟುಮೂಟೆ ಕಳ್ಳರ ಕಾಟವಿಲ್ಲದೆ ಚೇತೋಹಾರಿಯಾಗಿ, ನೆಮ್ಮದಿಯಿಂದ (ಆನಂದದಿಂದ) ಸಂಚರಿಸುತ್ತಿದ್ದರು. ಅವರು ನದಿಕಾಲುವೆಗಳನ್ನು ನೌಕೆಗಳ, ದೋಣಿಗಳ ಸಹಾಯದಿಂದ ದಾಟಿ ವ್ಯಾಪಾರ ನಡೆಸುವಾಗಲೂ ಅಷ್ಟೇ ಸುಲಭವಾಗಿ, ತಮ್ಮ ಹಿತ್ತಿಲಲ್ಲಿರುವ ಆಳವಾದ ಬಾವಿಗಳಲ್ಲಿ, ಭರದಿಂದ ಸರಸರನೆ ಬಹುಸುಲಭವಾಗಿ ನೀರನ್ನು ಸೇದಿದಂತೆ, ಅಥವಾ ಕೆರೆ, ಹಳ್ಳ, ಕೊಳ್ಳದಿಂದ ಮರಗಿಡಗಳಿಗೆ ನೀರು ಹಾಯಿಸಿದಂತೆ, ಅಥವಾ ಸಣ್ಣ ಕೈತೋಡನ್ನು ದಾಟಿದಂತೆ, ಹೆಚ್ಚಿನ ಪರಿಶ್ರಮವಿಲ್ಲದೆ, ಗುದ್ದಾಟವಿಲ್ಲದೆ, ತಮ್ಮ ದಂಧೆಗಳನ್ನು, ವ್ಯಾಪಾರಸಾಪಾರಗಳನ್ನು, ಆರ್ಥಿಕ ವಹಿವಾಟುಗಳನ್ನು, ಯಾವ ಅಡೆತಡೆಗಳಿಲ್ಲದೆ ಸ್ವತಂತ್ರವಾಗಿ ನಿರ್ವಹಿಸುತ್ತಿದ್ದರು. ಆರಾಮವಾಗಿ ಚರಿಸುತ್ತಿದ್ದರು (ವನೇಷು ವೈರಾಗ್ಯ ಭಾವಾತ್, ಅದ್ರಿಷು ಹೇಮಭಾವಾತ್, ವಾಪಿಷು ಗೃಹಭಾವಾತ್ ॥) ಸ್ವತಂತ್ರಮನೋ ಧರ್ಮದಿಂದ ವಾಣಿಜ್ಯವ್ಯವಹಾರಗಳನ್ನು ನಡೆಸುತ್ತಿದ್ದರು ಅಂದಿನ ಆ ಹೊನ್ನಯುಗದಲ್ಲಿ. "ವಾಪೀ ತು ದೀರ್ಘಿಕಾ" ಇತ್ಯಮರಃ—ವನೇಷ್ವರಣ್ಯೇಷು—ಉಪವನೇಷ್ವಾರಾಮೇಷ್ವಿವ—"ಆರಾಮಃ ಸ್ಯಾದುಪವನಮ್" ಇತ್ಯಮರಃ—ಅದ್ರಿಷು ಸ್ವಕೀಯೇಷು ವೇಶ್ಮಸ್ವಿವ—ಸಾರ್ಥಾವಣಿಕ್‌ಪ್ರಭೃತಯಃ ಸ್ವೈರಂ=ಸ್ವೇಚ್ಛಯಾ ಚೇರುಶ್ಚರಂತಿ ಸ್ಮ॥

65. ತಪೋ ರಕ್ಷನ್ಸವಿಘ್ನೇಭ್ಯಸ್ತಸ್ಕರೇಭ್ಯಶ್ಚ ಸಂಪದಃ ।
ಯಥಾ ಸ್ವಮಾಶ್ರಮೈಶ್ಚಕ್ರೇ ವರ್ಣೈರಪಿ ಷಡಂಶಭಾಕ್ ॥ ೬೫ ॥

ಆ ನೃಪನು ತನ್ನ ನಾಡಿನ ಜನರ, ನಾಲ್ಕು ವರ್ಣಾಶ್ರಮಗಳಿಗೆ ಸೇರಿದ ಜನರ ಧನಕನಕ ವಸ್ತುವಾಹನಗಳನ್ನು ಕಳ್ಳಕಾಕರಿಂದ ರಕ್ಷಿಸುತ್ತಿದ್ದನು. ಅದಕ್ಕೆ ಪ್ರತಿಯಾಗಿ ಸಮಾಜದ ನಾಲ್ಕು ವಿಭಾಗದ ಜನರಿಂದ ತಮ್ಮ ಉತ್ಪತ್ತಿಯ ಆರನೆಯ ಒಂದಂಶವನ್ನು ಅವನು ತೆರಿಗೆಯಾಗಿ ಸ್ವೀಕರಿಸುತ್ತಿದ್ದನು. ಅದು ಅಲ್ಲದೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದವರಿಂದಲೂ, ತಪಸ್ಸುಗಳನ್ನು ಆಚರಿಸುವ ಋಷಿಮುನಿಗಳಿಂದಲೂ ಅವರನ್ನು ಯಾರೂ ಹಿಂಸೆಗೊಳಿಸದಂತೆ ನೋಡಿದುದಕ್ಕೆ ಪ್ರತಿಯಾಗಿ ಅವರ ತಪೋಧನದ ⅙ ಭಾಗವನ್ನು (ಷಡ್ಭಾಗದಲ್ಲಿ ಒಂದು ಭಾಗ) ಸ್ವೀಕರಿಸುತ್ತಿದ್ದನು. ಧರ್ಮಪ್ರಭುವಾದ ಅತಿಥಿಯು ಕರ್ತವ್ಯನಿಷ್ಠೆಯಿಂದ ಸದಾ ಜಾಗರೂಕನಾಗಿ, ತಾನು ನಿಷ್ಠಾತನಾಗಿ, ಪ್ರಜಾಕ್ಷೇಮಾಭಿವೃದ್ಧಿಯಲ್ಲಿ ಮುದದಿಂದ ಧರ್ಮವೆಂಬ ತಪವನ್ನಾಚರಿಸುತ್ತ, ಎಲ್ಲರನ್ನು ರಕ್ಷಿಸುತ್ತ, ಎಲ್ಲರನ್ನು ಈಕ್ಷಿಸುತ್ತ, ಎಲ್ಲರ ಐಸಿರಿಯನ್ನು ಹೆಚ್ಚಿಸುತ್ತ, ಪ್ರಜಾರಂಜಕನಾಗಿ ಪ್ರಜಾಪಾಲನೆಯನ್ನು ಮಾಡುತ್ತಿದ್ದನು. (ಅವಿಶ್ವಕಂಟಕಂಬಿ ಆ ಪರದಾರ ಸೋದರನು).

ಷಷ್ಠೇಭ್ಯಸ್ತಸ್ಕರೇಭ್ಯಃ ರಕ್ಷನ್ — ತಸ್ಕರೇಭ್ಯಃ ಷಡ್ವರ್ಗೇಭ್ಯಃ ರಕ್ಷನ್ — ಆಶ್ರಮೈರ್ಬ್ರಹ್ಮಚರ್ಯಾದಿಭಿರ್ವರ್ಣೈರಪಿ=ಬ್ರಾಹ್ಮಣಾದಿಭಿಶ್ಚ ಯಥಾಖ್ಯಂ ಸ್ವವನತಿಕ್ರಮ್ಯ ಷಡಂಶಭಾಕ್ ಚಕ್ರೇ—ಯಥಾಕ್ರಮಮಾಶ್ರಮೈಸ್ತಪಸೋ ವರ್ಣೈಃ ಸಂಪದಾಂ ಚ ಷಷ್ಠಾಂಶಭಾಕ್ಕೃತ ಇತ್ಯರ್ಥಃ—ಷಷ್ಠೋಂಽಶಃ ಷಡಂಶಃ "ಸಂಖ್ಯಾ" ಶಬ್ದಸ್ಯ ವೃತ್ತಿವಿಷಯೇ ಪೂರಣಾರ್ಥತ್ವ ಮುಕ್ತಂ ಪ್ರಾಕ್—ಯಥಾ ಸ್ವಂ ಷಡಂಶಭಾಕ್=ಜನರ ಉತ್ಪತ್ತಿಯ ಆರನೆಯ ಒಂದಂಶವನ್ನು ಸ್ವೀಕರಿಸುತ್ತಿದ್ದನು.

66. ಖನಿಭಿಃ ಸುಷುವೇ ರತ್ನಂ ಕ್ಷೇತ್ರೈಃ ಸಸ್ಯಂ ವನೈರ್ಗಜಾನ್ ।
ದಿದೇಶ ವೇತನಂ ತಸ್ಮೈ ರಕ್ಷಾ ಸದೃಶಮೇವ ಭೂಃ ॥ ೬೬ ॥

ಆ ಭೂದೇವತೆಯು (ಭೂಮಾತೆಯು, ಭೂಕಾಂತೆಯು) ತನ್ನನ್ನು ರಕ್ಷಿಸುತ್ತಿರುವ ರಾಜನಿಗೆ ತನ್ನಲ್ಲಿರುವ ಗಣಿಗಳಲ್ಲಿನ ಅಮೂಲ್ಯವಾದ ಮಾಣಿಕ್ಯಾದಿ ರತ್ನಗಳನ್ನು ವೇತನ ರೂಪದಲ್ಲಿ ಒಪ್ಪಿಸುತ್ತಿದ್ದಳು (ಗಣಿಯಿಂದ ರತ್ನವನು). ಆ ಭೂದೇವಿಯು ಆ ರಾಜ ಕುಲತಿಲಕನಿಗೆ ತನ್ನನ್ನು ಸಂರಕ್ಷಿಸುತ್ತಿರುವುದಕ್ಕೆ ಕ್ಷೇತ್ರಗಳಲ್ಲಿ (ಗದ್ದೆಗಳಲ್ಲಿ) ಬೆಳೆಯು ತ್ತಿರುವ ಬತ್ತ ರಾಗಿ ಗೋಧಿ ಮೊದಲಾದ ಸಸ್ಯಾದಿ ಬೆಳೆಗಳನ್ನು ಕಾಣಿಕೆಯಾಗಿ ಸಮರ್ಪಿಸು ತ್ತಿದ್ದಳು. ಕಾನನಗಳಲ್ಲಿ ಬೆಳೆಯುವ ವನಸ್ಪತಿಗಳನ್ನು, ಕಾಡುತ್ಪತ್ತಿಗಳನ್ನು, ಮರಮಟ್ಟು ಗಳನ್ನು ತನ್ನನ್ನು ರಕ್ಷಿಸುವ ಹೊಣೆಗಾರಿಕೆಯನ್ನು ಹೊತ್ತಿರುವ ಭಾನುಕುಲತಿಲಕನಿಗೆ ಪ್ರತಿಯಾಗಿ ಕೊಡುತ್ತಿದ್ದಳು. ಅಲ್ಲದೆ ತನ್ನ ಮಹಾಕಾಂತಾರಗಳಿಂದ ಸೇನೆಗೆ ಬೇಕಾದ ಆನೆಗಳನ್ನು ತಾನು ಅವನಿಗೆ ಮುದದಿಂದ ಉಡುಗೊರೆಯಾಗಿ ಈಯುತ್ತಿದ್ದಳು. ಈ ತೆರನಾಗಿ ಭರತಭೂಮಾತೆಯು ತನ್ನಲ್ಲಿ ಉತ್ಪತ್ತಿಯಾಗುವ ವಿವಿಧ ವಸ್ತುಗಳನ್ನು ಅವನ ಉದಾತ್ತಸೇವೆಗೆ ವೇತನದಂತೆ (ಸಂಬಳ) ಅಥವಾ ಪ್ರಸಾದದಂತೆ ಇಲ್ಲವೆ ತೀರ್ಥ ದಂತೆ ಕೊಡುತ್ತಿದ್ದಳು (ಸಂರಕ್ಷಣಾನುಗುಣ ವೇತನವನು). ಆಭಾರತಮಾತೆ

ಭೂರ್ಭೂಮಿಸ್ತಸ್ಮೈ ರಾಜ್ಞೇ ರಕ್ಷಾಸದೃಶಂ ರಕ್ಷಣಾನುರೂಪಮೇವ ವೇತನಂ ಭೃತಿಂ ದಿದೇಶ ದದೌ—ಕಥಮ್ ? "ಖನಿಭಿರಾಕರೈಃ—ಖನಿಃ ಸ್ತ್ರೀಯಾಮಾಕರಃ ಸ್ಯಾತ್"— ಇತ್ಯಮರಃ—ರತ್ನಂ ಮಾಣಿಕ್ಯಾದಿಕಂ ಸುಷುವೇಽಜೀಜನತ್ ! ಕ್ಷೇತ್ರೈಃ ಸಸ್ಯಮ್— ವನೈರ್ಗಜಾನ್ ಹಸ್ತಿನಃ ಸುಷುವೇ ॥ ರತ್ನಮ್, ಸಸ್ಯಮ್ = (ಜಾತಾವೇಕವಚನಂ) ಗಣಿಯಿಂದ ರತ್ನವನು, ಹೊಲದಿಂದ ಸಸ್ಯವನು.

67. ಸ ಗುಣಾನಾಂ ಬಲಾನಾಂ ಚ ಷಣ್ಣಾಂ ಷಣ್ಮುಖವಿಕ್ರಮಃ ।
ಬಭೂವ ವಿನಿಯೋಗಜ್ಞಃ ಸಾಧನೀಯೇಷು ವಸ್ತುಷು ॥ ೬೭ ॥

ಆ ರಾಜೋತ್ತಮನು ಬಲಪರಾಕ್ರಮಗಳಲ್ಲಿ ಆರು ಮುಖಗಳಿರುವ ಶಿವಪುತ್ರನಾದ ಷಣ್ಮುಖನಿಗೆ (ಕಾರ್ತಿಕೇಯ ಮಹಾಸ್ವಾಮಿಗೆ) ಸರಿಯಾದವನು. ಆತನು ಷಣ್ಮುಖನಂತೆ ವೀರವಿಕ್ರಮನು, ಕಾರ್ತಿಕೇಯ ಸ್ವಾಮಿಯ ಸಾಮರ್ಥ್ಯವನ್ನು ಹೊಂದಿದ ಆ ಕ್ಷತ್ರಿಯ ಕುಲಾವತಂಸನು ರಾಜಕೀಯಶಾಸ್ತ್ರದ ಪರಮತಂತ್ರಗಳನ್ನು (ಪರಮರಹಸ್ಯಗಳನ್ನು) ತಿಳಿದ ಚಾಣಾಕ್ಷನು. ಆರು ರಾಜಕೀಯ ಗುಣಗಳಾದ ಸಂಧಿ, ವಿಗ್ರಹ, ಯಾನ, ಆಸನ,

ದ್ವೈಧ, ಆಶ್ರಯ ಇವುಗಳ ಜೊತೆಗ ಆರು ವಿಧದ ಸೈನಿಕಬಲಗಳಾದ ಮೌಲ, ಭೃತ, ಸುಹೃತ್, ಶ್ರೇಣಿ, ದ್ವಿಪದ, ಆಟವಿಕ ಇವುಗಳನ್ನು ಹೊಂದಿದ್ದನು. ಇವುಗಳನ್ನು ತಳೆದು ವಿವೇಕದಿಂದ, ಬುದ್ಧಿವಂತಿಕೆಯಿಂದ, ಕುಶಲತೆಯಿಂದ ವಸ್ತುಗಳನ್ನು, ಅರ್ಥವನ್ನು ಹಣಕಾಸು) ಸಾಧಿಸುವ ಚತುರನು. ಸಾಧಿಸಿದ ವಸ್ತುಗಳ ಉಪಯೋಗವನ್ನು ಅರಿತು ಉಪಯೋಗಿಸುವನಾ ರಾಜಮೌಳಿ. ಹಿಂದುಮುಂದು ಯೋಚಿಸಿ ಕಾರ್ಯಪ್ರವೃತ್ತನಾಗು ತ್ತಿದ್ದ ಸೂರ್ಯವಂಶಿ.

ಸ ರಾಜಾಷಣ್ಣಾಂ ಗುಣಾನಾಂ ಸಂಧಿವಿಗ್ರಹಾದೀನಾಂ ಬಲಾನಾಂ ಮೂಲಭೃತ್ಯಾದೀನಾಂ ಚ ಸಾಧನೀಯೇಷು ವಸ್ತುಷು ಸಾಧ್ಯೇಷ್ವರ್ಥೇಷು ವಿನಿಯೋಗಂ ಜಾನಾತೀತಿ ವಿನಿಯೋಗಸ್ಯಜ್ಞ ಇತಿ ವಾ ವಿನಿಯೋಗಜ್ಞಃ—ಷಣ್ಮುಖವಿಕ್ರಮಃ = ಷಣ್ಮುಖವದ್ ವಿಕ್ರಮೋ ಯಸ್ಯ (ಬಹು) ಸಃ = ಷಣ್ಮುಖನ ಪರಾಕ್ರಮದವನು—ಷಣ್ಣಾಂ ಗುಣಾನಾಂ ವಿನಿಯೋಗಜ್ಞಃ = ಸಂಧಿ, ವಿಗ್ರಹ, ಯಾನ, ಆಸನ, ದ್ವೈಧ, ಆಶ್ರಯ = ಆರು ರೀತಿಯ ರಾಜನೀತಿ ಕ್ರಮಗಳನ್ನು, ರಾಜನೀತಿ ತಂತ್ರಗಳನ್ನು (ಗುಣಗಳನ್ನು) ತಿಳಿದ ರಾಜನೀತಿ ಕುಶಲನು. ಷಣ್ಣಾಂ ಬಲಾನಾಮ್ = ಆರು ರೀತಿಯ ಸೇನಾಬಲ, ಭೃತಮೌಲ ಸುಹೃತ, ಶ್ರೇಣಿ, ದ್ವಿಪದ ಮತ್ತು ಆಟವಿಕ ಎಂಬ ಆರು ವಿಧದ ಸೇನಾಬಲಗಳು.

**68. ಇತಿ ಕ್ರಮಾತ್ ಪ್ರಯುಂಜಾನೋ ರಾಜನೀತಿಂ ಚತುರ್ವಿಧಾಮ್ ।**
**ಆತೀರ್ಥಾದಪ್ರತೀಘಾತಂ ಸ ತಸ್ಯಾಃ ಫಲಮಾನಶೇ ॥ ೬೮ ॥**

ಆ ರಾಜನೀತಿಕೋವಿದನು ಚತುರ್ವಿಧ (ನಾಲ್ಕು ತೆರನಾದ) ರಾಜನೀತಿಗಳಾದ ಸಾಮ, ದಾನ, ಭೇದ, ದಂಡ ಇವುಗಳನ್ನು ಅನುಕ್ರಮವಾಗಿ ಅನುಸರಿಸುತ್ತ ೧೮ ವಿಧದ ರಾಜಕೀಯ ತೀರ್ಥಸ್ಥಾನಗಳಲ್ಲಿ ಸಿದ್ಧಿಯನ್ನು ಪಡೆದನು. ಆ ೧೮ ತೀರ್ಥಗಳು (ತೀರ್ಥರು) ಯಾವುವೆಂದರೆ ೧. ಮಂತ್ರಿ, ೨. ಪುರೋಹಿತ, ೩. ಯುವರಾಜ, ೪. ಸೇನಾಪತಿ, ೫. ದ್ವಾರಪಾಲ, ೬. ಅಂತರ್ವೇಶಿಕ, ೭. ಕಾರ್ಯಾಧ್ಯಕ್ಷ, ೮. ಕೋಶಾಧ್ಯಕ್ಷ, ೯. ಅರ್ಥ ವಿನಿಯೋಜಕ, ೧೦. ಪ್ರದೇಷ್ಟಾ, ೧೧. ನಗರಾಧ್ಯಕ್ಷ, ೧೨. ಕಾರ್ಯನಿರ್ಮಾಣಕೃತ್, ೧೩. ಧರ್ಮಾಧ್ಯಕ್ಷ, ೧೪. ಸಭಾಧ್ಯಕ್ಷ, ೧೫. ದಂಡಪಾಲ, ೧೬. ದುರ್ಗಪಾಲ, ೧೭. ರಾಷ್ಟ್ರಾಂತಪಾಲ, ೧೮. ಆಟವೀಪಾಲ—ಇವೇ ಮೊದಲಾದ ೧೮ ತೀರ್ಥರು. ಈ ಹದಿನೆಂಟು ವಿಧದ ಜನಸಮುದಾಯದಲ್ಲಿ ತನ್ನ ಮಂತ್ರಾಲೋಚನೆಯ ಸಾಮರ್ಥ್ಯ ದಿಂದ ಯಾವ ಅಡೆತಡೆಗಳಿಲ್ಲದೆ ಫಲಸಿದ್ಧಿಯನ್ನು ಪಡೆದು ಸುಖದ ಸಗ್ಗದ ಕಡೆಗೆ ತನ್ನ ನಾಡನ್ನು ಒಯ್ದನು (ಸುಖೀರಾಜ್ಯ, ರಾಮರಾಜ್ಯ, ಧರ್ಮಸಾಮ್ರಾಜ್ಯ).

ಸಾಮಾದ್ಯುಪಾಯೈರಿತಿ ಶೇಷಃ—ರಾಜನೀತಿಂ=ದಂಡನೀತಿಂ ಕ್ರಮಾತ್ ಸಾಮಾದಿ ಕ್ರಮಾದೇವ ಪ್ರಯುಂಜಾನಃ ಸ ರಾಜಾ—ಆತೀರ್ಥನ್ ಮಂತ್ರ್ಯಾದ್ಯಷ್ಟಾದಶಾತ್ಮಕ ತೀರ್ಥಪರ್ಯಂತಮ್—ಯೋ ನೌ ಜಲಾವತಾರೇ ಚ ಮಂತ್ರ್ಯಾದ್ಯಷ್ಟಾದಶಸ್ವಪಿ— "ಪುಣ್ಯಕ್ಷೇತ್ರೇ ತಥಾ ಪಾತ್ರೇ ತೀರ್ಥಂ ಸ್ಯಾತ್" ಇತಿ ಹಲಾಯುಧಃ—ಮಂತ್ರ್ಯಾದಿಷು ಯುಮುದ್ದಿಶ್ಯ ಯ ಉಪಾಯಃ ಪ್ರಯುಜ್ಯತೇ, ಸ ತಸ್ಯ ಫಲತೀರ್ಥ್ಯಃ—ಚತ್ವಾರಃ ಉಪಾಯಾಃ = ಸಾಮ, ದಾನ, ಭೇದ, ದಂಡ ಎಂಬ ಚತುರೋಪಾಯಗಳು.

**69. ಕೂಟಯುದ್ಧವಿಧಿಜ್ಞೋಽಪಿ ತಸ್ಮಿನ್ ಸನ್ಮಾರ್ಗಯೋಧಿನಿ ।**
**ಭೇಜೇಽಭಿಸಾರಿಕಾವೃತ್ತಿಂ ಜಯಶ್ರೀರ್ವೀರಗಾಮಿನೀ ॥ ೬೯ ॥**

ಕೂಟಯುದ್ಧದಲ್ಲಿ, ಮೋಸದ, ಕಪಟಯುದ್ಧ ತಂತ್ರದಲ್ಲಿ (ಗೆರಿಲ್ಲಾ ಯುದ್ಧತಂತ್ರ) ಪರಿಣತನಾಗಿದ್ದರೂ ಅತಿಥಿಸಾರ್ವಭೌಮನು ಧರ್ಮಯುದ್ಧಮಾರ್ಗದಲ್ಲೇ ಸಮರಗೈಯುತ್ತಿರುವನೆಂದು ತಿಳಿದ ಜಯಲಕ್ಷ್ಮಿಯು ಅವನ ಬಳಿಗೆ ಅಭಿಸಾರಿಕೆಯಂತೆ ತಾನಾಗಿ ಹೋಗುತ್ತಿದ್ದಳು. ಅತಿಥಿಮಹೀಪತಿಗೆ ವಿಜಯವಲ್ಲದೆ ಅಪಜಯ ಎಂದೂ ಸಂಭವಿಸುತ್ತಿರಲಿಲ್ಲ. ಸಾಕ್ಷಾತ್ ವಿಜಯಲಕ್ಷ್ಮಿಯು (ವಿಜಯಶ್ರೀ) ಧರ್ಮಾತ್ಮನಾದ ಆ ಮಹಾವೀರನನ್ನು ತನ್ನ ಪ್ರಿಯಕರನನ್ನಾಗಿ ಆರಿಸಿ ಅವನ ಬಳಿಗೆ ತಾನಾಗಿ ಹೋಗಿ ದರ್ಶನ ನೀಡುತ್ತಿದ್ದಳು. ಅವನ ಆ ವೀರಶ್ರೀಯು ಭುಜಯುಗಗಳಲ್ಲಿ ತಾನಾಗಿ ನೆಲಸುತ್ತಿದ್ದಳು. ಅವನಿಗೆ ಕದನದಲ್ಲಿ ಸೋಲೇ ಉಂಟಾಗುತ್ತಿರಲಿಲ್ಲ. ಅವನು ಅಜೇಯ, ಅಪ್ರಮೇಯ (ನಾದ್ವಿತೀಯ). ವಿಜಯಲಕ್ಷ್ಮಿಯು ಅಭಿಸಾರಿಕಾವೃತ್ತಿಯನ್ನು ತಾನಾಗಿ ತಳೆದಳು (ಅಭಿಸಾರಿಕಾವೃತ್ತಿಯನು ತಾಂ ತಳೆದಳೆಂದು).

ಕೂಟಯುದ್ಧವಿಧಿಜ್ಞೋಽಪಿ ಕಪಟಯುದ್ಧಪ್ರಕಾರಾಭಿಜ್ಞೋಽಪಿ ಸನ್ಮಾರ್ಗೇಣ ಯೋಧಿನಿ ಧರ್ಮಯೋದ್ಧರಿ ತಸ್ಮಿನ್ನತಿಥೌ ವೀರಗಾಮಿನೀ ಜಯಶ್ರೀರಭಿಸಾರಿಕಾವೃತ್ತಿಂ ಭೇಜೇ— "ಕಾಂತಾರ್ಥಿನೀ ತು ಯಾ ಯಾತಿ ಸಂಕೇತಂ ಸಾಽಭಿಸಾರಿಕಾ" ಇತ್ಯಮರಃ—ಗಂಧದ್ವಿಪ = ಗಜರಾಜ.

**70. ಪ್ರಾಯಃ ಪ್ರತಾಪಭಗ್ನತ್ವಾದರೀಣಾಂ ತಸ್ಯ ದುರ್ಲಭಃ ।**
**ರಣೋ ಗಂಧದ್ವಿಪಸ್ಯೇವ ಗಂಧಭಿನ್ನಾನ್ಯದಂತಿನಃ ॥ ೭೦ ॥**

ಧನುರ್ವಿದ್ಯೆಯ ಸಾಕಾರಮೂರ್ತಿಯಾದ ಅವನ ಶಸ್ತ್ರಜಾಲಕ್ಕೆ ಹೆದರಿ ಅರಿಸೇನೆಯು ನಿಟ್ಟೋಟದಿಂದ ಓಡುತ್ತಿರಲು ಅವನಿಗೆ ಸರಿಯಾದ ಕಾಳಗಕ್ಕೆ, ನಿಖರಕಾಳಗಕ್ಕೆ ಅವಕಾಶವೇ ಸಿಗುತ್ತಿರಲಿಲ್ಲ. ಮದಗಜವನ್ನು ಮದಗಜವು ಮಾತ್ರ ಎದುರಿಸುವುದಲ್ಲದೆ ಉಳಿದ ಸಾಮಾನ್ಯ ಗಜಗಳು ಮದೋದಕದ ಪರಿಮಳವನ್ನು ಆಘ್ರಾಣಿಸುತ್ತಾ ನಾಗಾಲೋಟದಿಂದ ಓಡಿಹೋಗುವುದುಂಟು. ಮಹಾರಥಿಯಾದ ಅತಿಥಿಯೊಡನೆ ಹೋರಾಡಲು ಸಮರ್ಥರಾದವರು ಮಾತ್ರ ನಿಲ್ಲುತ್ತಿದ್ದರೇ ವಿನಹ ಎಲ್ಲಾ ರಾಜರು ನಿಲ್ಲುವುದಂತೂ ಸಾಧ್ಯವಿಲ್ಲ. ಅವನು ತನ್ನ ಸಮರದುರ್ಲಭವಾದ ಅತಿತೇಜದಿಂದ ಅರಿಗಳೋಡುತ್ತಿದ್ದರಲ್ಲದೆ ಮಾರ್ಮಲೆತು ನಿಲ್ಲುವ "ದಮ್ಮು" ಇರಲಿಲ್ಲ. ಸಮರ್ಥರಾಗಿರಲಿಲ್ಲ. ಭಗ್ನಹೃದಯರಾಗಿ ಕಾಲಿಗೆ ಬುದ್ಧಿ ಹೇಳಿ ಪಲಾಯನಮಂತ್ರ ಪಠಿಸುತ್ತಿದ್ದರು.

ಪ್ರತಾಪೇನಾತಿತೇಜಸೈವ—ಗಂಧೇನ ಮದಗಂಧೇನೈವ ಭಿನ್ನಾ=ಭಗ್ನಾ ಅನ್ಯೇ ದಂತಿನೋ ಯೇನ ತಸ್ಯ ಗಂಧದ್ವಿಪಸ್ಯೇವ—ಪ್ರಾಯಃ ಪ್ರಾಯೇಣ ರಣೋ ದುರ್ಲಭಃ—ಖಲರ್ಥಯೋಗೇಽಪಿ ಶೇಷವಿವಕ್ಷಾಯಾಂ ಷಷ್ಠೀವಿಧೀಯತೇತ್ಯುಕ್ತಮ್ ॥

**71. ಪ್ರವೃದ್ಧೌ ಹೀಯತೇ ಚಂದ್ರಃ ಸಮುದ್ರೋಽಪಿ ತಥಾವಿಧಃ ।**
**ಸ ತು ತತ್ಸಮವೃದ್ಧಿಶ್ಚ ನ ಚಾಭೂತ್ತಾವಿವ ಕ್ಷಯೀ ॥ ೭೧ ॥**

ಅವನು ಸಾಗರ, ಚಂದ್ರಮರಂತೆ ವೃದ್ಧಿಯನ್ನು ಹೊಂದುತ್ತಿದ್ದನು. ಆದರೆ ಅವುಗಳಂತೆ ಕ್ಷಯವನ್ನು ಹೊಂದುತ್ತಿರಲಿಲ್ಲ (ಕುಗ್ಗುತ್ತಿರಲಿಲ್ಲ). ಸಮುದ್ರಕ್ಕೂ ಪರಿಮಿತಗಳಿವೆ. ಭರತ ಇಳಿತಗಳಿಂದು ಪ್ರವಾಹಗಳು ವ್ಯತ್ಯಾಸಹೊಂದುತ್ತಿವೆ. ಭರತದ ವೇಳೆ ಉಬ್ಬುತ್ತ, ಇಳಿದ ವೇಳೆ ಕುಗ್ಗುತ್ತಿವೆ. ಕ್ಷೀರಸಾಗರದಲ್ಲಿ ಉದಿಸಿದ ಚಂದ್ರಮನು ಶುಕ್ಲಪಕ್ಷದ ಕಾಲದಲ್ಲಿ ವೃದ್ಧಿಯನ್ನು ಹೊಂದಿ ಹುಣ್ಣಿಮೆಗೆ ಪೂರ್ಣಗೋಳ್ಕವನು. ಅನಂತರ ೧೫ ದಿವಗಳಲ್ಲಿ (ಕೃಷ್ಣಪಕ್ಷ) ಕ್ಷೀಣಿಸುವನು (ಬೆಳೆಬೆಳೆದು ಉಬ್ಬಿರುವ ಚಂದಿರನು ಕುಗ್ಗುವನು). ಆದರೆ ಅತಿಥಿಮಹಾರಾಜನ ಏರು ಒಂದೇ ತೆರನಾಗಿತ್ತು. ಅವನು ಸಮುದ್ರದ ನೀರು ಭರತದಲ್ಲಿ ಕಂಡಂತೆ. ಅಥವಾ ಶುಕ್ಲಪಕ್ಷದ ಚಂದ್ರಮನಂತೆ ಅಭಿವೃದ್ಧಿಹೊಂದುತ್ತಿದ್ದುದು ಮಾತ್ರ. ಅವನ ಕಾಂತಿ, ತೇಜಸ್ಸು, ಓಜಸ್ಸು, ವರ್ಚಸ್ಸು ಕಂದಿ ಕುಂದಿದ್ದು ಕ್ಷೀಣಿಸುವುದಾಗಲೀ ಮಬ್ಬಾದುದು ಆಗಲಿ ಇಲ್ಲವೇ ಇಲ್ಲ, ಅವನು ಹಿಗ್ಗುವನು, ಆದರೆ ಕುಗ್ಗದಿಹನು (ಉಬ್ಬುವನು ಅವರಂತೆ ಕುಗ್ಗದಿಹನು) (ಪೆರ್ಚುವನು).

ಪ್ರವೃದ್ಧೌ ಸತ್ಯಾಂ ಚಂದ್ರೋ ಹೀಯತೇ ಸಮುದ್ರೋಽಪಿ ತಥಾ ವಿಧಶ್ಚಂದ್ರವದೇವ ಪ್ರವೃದ್ಧೌ ಹೀಯತೇ—"ಪ್ರವೃದ್ಧ" ಇತಿ ವಾ ಪಾಠಃ—ಸ ರಾಜಾ ತು ತಾಭ್ಯಾಂ ಚಂದ್ರ ಸಮುದ್ರಾಭ್ಯಾಂ ಸಮಾವೃದ್ಧಿರ್ಯಸ್ಯ ಸ ತತ್ಸಮವೃದ್ಧಿಶ್ಚಾಭೂತ್—ತೌ ಚಂದ್ರ ಸಮುದ್ರಾ ವಿವಕ್ಷಯಾ. "ಜಿದೃಕ್ಷಿ" ಇತ್ಯಾದಿನೇ ನಿಪ್ರತ್ಯಯಃ—ನಾಭೂತ್ ॥

**72. ಸಂತತಸ್ತಸ್ಯಾಭಿಗಮನಾತ್ ಅತ್ಯರ್ಥಂ ಮಹತಃ ಕೃಶಾಃ ।**
**ಉದಧೇರಿವ ಜೀಮೂತಾಃ ಪ್ರಾಪುರ್ದಾತೃತ್ವಮರ್ಥಿನಃ ॥ ೭೨ ॥**

ಕಡುಬಡವರಾದ ಸಾಹಿತಿಗಳು, ನಾಡೋಜರು. ವಿಬುಧಜನರು, ಪಂಡಿತವರೇಣ್ಯರು, ವಿದ್ವಾಂಸರು, ವಿದ್ಯಾಸಾಗರರು, ವಾಚಸ್ಪತಿಗಳು, ವಿದ್ವಜ್ಜನರು, ಶಾಸ್ತ್ರಜ್ಞರು, ವಿಜ್ಞಾನಿಗಳು ಅವನ ಬಳಿಗೆ ಯಾಚಕರಾಗಿ, ಅತಿಥಿಗಳಾಗಿ, ಆರ್ಥಿಕ ಸಹಾಯವನ್ನು ಅಪೇಕ್ಷಿಸಿ ಬರುತ್ತಿದ್ದರು. ಆ ಜಗದೊಡೆಯನು ಅವರೆಲ್ಲರಿಗೂ ಅವರವರ ಯೋಗ್ಯತೆಗೆ ತಕ್ಕಂತೆ ಆಶ್ರಯವನಿತ್ತು ಪ್ರೋತ್ಸಾಹಿಸುತ್ತಿದ್ದನು. ಅವನು ಸಾಗರದೆಡೆಗೆ ಓಡೋಡಿಬರುತ್ತಿರುವ (ಬಳಿಸಾರುವ) ಬರಡಾದ, ಒಣಮೋಡಗಳಂತೆ. ಆ ಮೋಡಗಳು ಕಡಲಿನೆಡೆಗೆ ಬಂದು ತೇವಭರಿತವಾಗಿ ಘನಮೇಘಗಳಾಗಿ (ನೀರಿನ ಗರ್ಭಧರಿಸಿ, ಘನೀಕರಿಸಿ) ಹಿಂದಿರುಗುವುದು ಸಹಜವಷ್ಟೆ. ಅವನೆಡೆಗೆ ಬಂದ ಯಾರೂ ದಾತೃತ್ವವನ್ನು ಪಡೆಯದೆ, ಬರಿಗೈಯಲ್ಲಿ ಹಿಂದಿರುಗುತ್ತಿರಲಿಲ್ಲ. ಅವನು ದೀನದಲಿತರ ಉದ್ಧಾರಕನು. ವಿದ್ಯಾಪಕ್ಷಪಾತಿ. (ಅಕ್ಷರ ಬಂಧು) ಇದು ಆ ಮಹೀಪಾಲನ ವೈಶಿಷ್ಟ್ಯ (ಕಡಲೆಡೆಗೈತಂದ ಮೋಡದೊಲು ತಾವೆ ದಾತೃತ್ವವನು ಪಡೆದು).

ಅತ್ಯರ್ಥಂ ಕೃಶಾ=ದರಿದ್ರಾ ಅತ ಏವಾರ್ಥಿನೋ ಯಾಚನಶೀಲಾಃ ಸಂತೋ ವಿದ್ವಾಂಸೋ ಮಹತಸ್ತಸ್ಯ ರಾಜ್ಞೋಽಭಿಗಮನಾತ್ =ಉದಧೇರಭಿಗಮನಾಜ್ಜೀಮೂತಾ ಇವ—ದಾತೃತ್ವಂ ಪ್ರಾಪುಃ ಅರ್ಥಿಷು ದಾನಭೋಗಪರ್ಯಾಪ್ತಂ ಧನಂ ಪ್ರಾಪುರಿತ್ಯರ್ಥಃ-

**73. ಸ್ತೂಯಮಾನಃ ಸ ಜಿಹ್ರಾಯ ಸ್ತುತ್ಯಮೇವ ಸಮಾಚರನ್ ।**
**ತಥಾಽಪಿ ವವೃಧೇ ತಸ್ಯ ತತ್ಕಾರಿದ್ವೇಷಿಣೋ ಯಶಃ ॥ ೭೩ ॥**

ಅವನು ಸ್ತೋತ್ರಾರ್ಹವಾದ ಕೆಲಸಗಳನ್ನೇ ಮಾಡುತ್ತಿದ್ದನು. ಇದರಿಂದ ಸ್ತೋತ್ರಾರ್ಹನಾದ ಅವನ ಗುಣಕೀರ್ತನೆಗಳನ್ನು ಜನರು ಹಾಡಿಪಾಡಿ ಹೊಗಳುತ್ತಿದ್ದರು ಅವುಗಳನ್ನು ಆ ಹೊಗಳಿಕೆಯ ನುಡಿಗಳನ್ನು ಕಿವಿಯಾರೆ ಕೇಳಿದ ಆ ರಾಜಕುಲತಿಲಕನು ನಾಚುತ್ತಿದ್ದನು (ಹೊಗಳತಿರಲು ನಾಚು ತುದು). ಗುಣವಂತರು ತಮ್ಮನ್ನು ಯಾರಾದರೂ ಹೊಗಳಿದರೆ ಲಜ್ಜಿತರಾಗುವರು. ಆ ಹೊಗಳಿಕೆಯ ನುಡಿಗಳನ್ನು ಕೇಳಲಾರದ ಜನರು (ಮತ್ಸರಿಗಳು) ಇಚ್ಛಿಸದಿದ್ದರೂ ಅವನ ಸತ್ಕೀರ್ತಿ ಜಗದ್ವ್ಯಾಪಿಯಾಗಿ, ಎಲ್ಲೆಡೆಗಳಲ್ಲೂ ದಿಗಂತ ವಿಶ್ರಾಂತವಾಗಿ ಹರಡಿತು. ಕೀರ್ತಿಯೆಂಬ ವೃಕ್ಷವು ಕಲ್ಪವೃಕ್ಷದಂತೆ ಬೆಳೆಯುತ್ತಲೇ ಇತ್ತು.

ಸ್ತುತ್ಯಂ ಸ್ತೋತ್ರಾರ್ಹಮೇವ ಯತ್ನಾದೇವ ಸಮಾಚರನ್ನತ ಏವ ಸ್ತೂಯಮಾನಃ ಸನ್ ಜಿಹ್ರಾಯ=ಲಲಜ್ಜ—ತಥಾಽಪಿ ಹೀನಸತ್ತ್ವೇಽಪಿ ತತ್ಕಾರಿಣಃ ಸ್ತೋತ್ರಕಾರಿಣೋ ದ್ವೇಷ್ಟೀತಿ ತತ್ಕಾರಿದ್ವೇಷ್ಟ್ರಸ್ತಸ್ಯ ರಾಜ್ಞೋ ಯಶೋ ವವೃಧೇ—"ಗುಣಾಢ್ಯಸ್ಯ ಸತಃ ಪುಂಸಃ ಸ್ತುತೌ ಲಜ್ಜೈವ ಭೂಷಣಮ್" ಇತಿ ಭಾವಮ್ ॥

**74. ದುರಿತಂ ದರ್ಶನೇನ ಘ್ನಂಸ್ತತ್ತ್ವಾರ್ಥೇನ ನುದಂಸ್ತಮಃ ।**
**ಪ್ರಜಾಃ ಸ್ವತಂತ್ರಯಾಂ ಚಕ್ರೇ ಶಶ್ವತ್ಸೂರ್ಯ ಇವೋದಿತಃ ॥ ೭೪ ॥**

ಆ ರಾಜೇಂದ್ರನು ಉದಿಸಿಬರುವ ಬಾಲಸೂರ್ಯನಂತೆ ಪ್ರಕಾಶಮಾನನು. ಬರೇ ನೋಟಮಾತ್ರದಿಂದ ಪಾಪರಾಶಿಯನ್ನು ತೊಡೆಯಬಲ್ಲ ಕಪಿಲಮಹರ್ಷಿಗಳಂತೆ ಪರಿಶುದ್ಧಾತ್ಮನು. ಅವನ ದರ್ಶನವಾದರೆ ಸಾಕು. ಜನರು ತಮ್ಮನ್ನು ತಾವು ತಿದ್ದಿಕೊಂಡು ಸತ್ಪಥದಲ್ಲಿ ನಡೆಯುತ್ತಿದ್ದರು. ಅವನಿದ್ದಲ್ಲಿ ಅನ್ಯಾಯ, ಅಧರ್ಮ ನೆಲಸದು. ಅವನು ಪ್ರಜೆಗಳ ತಂದೆಯಂತೆ. ಅವನು ತತ್ತ್ವಾರ್ಥದ ದಿವ್ಯಜ್ಞಾನಸಂಪದದಿಂದ ಜ್ಞಾನ ಸೂರ್ಯನೇ ಆಗಿದ್ದನು. ಜನರ ಅಂಧತೆಯನ್ನು ಹೋಗಲಾಡಿಸಲು ಸಮರ್ಥನಾಗಿದ್ದನು. ಜನರು ಬುದ್ಧಿಜೀವಿಗಳಾಗಿ, ನ್ಯಾಯಧರ್ಮದಲ್ಲಿ ನಡೆಯುವ ಹಂಬಲ ಹೊಂದಿದ್ದರು. ಉದಯರವಿಯಂತೆ, ಜನರನ್ನು ತಮೋಗುಣದಿಂದ ಬಿಡುಗಡೆಮಾಡಿಸು. ಪಥದಲ್ಲಿ ನಡೆಯುವಂತೆ ಮಾಡಿದನು. ಅವರೂ ಆತ್ಮಜ್ಞಾನಪಡೆದು ಸುಜನರಾದರು. ಇದೆಲ್ಲವೂ ಸತ್ಸಂಗದ ಪರಿಣಾಮ (ಜನರೆಲ್ಲರನು ಆತ್ಮವಶರೆನಿಸಿದನು). ಅವರು ಸ್ವತಂತ್ರವಾದ ಚಿತ್ತ ವೃತ್ತಿಯಿಂದ ಶೋಭಿಸುತ್ತ ಉತ್ತಮಪ್ರಜೆಗಳಾಗಿ ಬಾಳಿದರು. ಅವರು ಸ್ವತಂತ್ರರಾದರೂ ಅವನಿಗೆ ಅಧೀನರಾಗಿ ಎಂದೂ ದಂಗೆ ಏಳದೆ ಕ್ರಾಂತಿ, ವಿಪ್ಲವ (ಕಾಟಕಾಯಿ)ಗಳಿಗೆ ಎಡೆಮಾಡದೆ ರಾಜನ ಕ್ಷೇಮಾಭ್ಯುದಯವನ್ನು ಬಯಸುತ್ತಿದ್ದರು. ಕಳವು ಕೊಲೆ ಸುಲಿಗೆ ಅತ್ಯಾಚಾರಗಳಿಲ್ಲ. ಲಂಚಾವತಾರಕ್ಕೆ ಎಡೆಯಿಲ್ಲ, ದಬ್ಬಾಳಿಕೆಯ ಮಾತೇ ಇಲ್ಲ. ಅವನ ಬರೇ ಅವಲೋಕನವೇ ಸಾಕು, ಜನರು ರಾಜಭಕ್ತಿಯಿಂದ (ರಾಜನ ಭಯದಿಂದ) ತಮ್ಮ ಕೆಟ್ಟ ಭಾವನೆಗಳಿಗೆ ತಿಲಾಂಜಲಿ ಕೊಡುತ್ತಿದ್ದರು. ಜನರು ಪರಿಶುದ್ಧರಾಗಿ, ದೇಶಕ್ಕೆ, ರಾಜನಿಗೆ, ಜನತೆಗೆ, ಕೇಡುಬಗೆಯದೆ ಐಕ್ಯಮತ್ಯದಿಂದ. ಒಂದೇ ತಾಯಿಯ ಮಕ್ಕಳಂತೆ, ಸ್ವತಂತ್ರರಾಗಿ ಜೀವನ ಸಾಗಿಸುತ್ತಿದ್ದರು, ಐಕ್ಯವೇ ಅವರ ಮಂತ್ರ. ಅದರಿಂದ ಸ್ವತಂತ್ರ. ಐಕ್ಯಗಾನವ ರಾಷ್ಟ್ರ ಹಾಡುತ್ತಿತ್ತು. ಸೌಜನ್ಯಾದಿ ಗುಣಗಳಿಂದ ರಾಜನೂ, ಪ್ರಜೆಗಳೂ

ತಂದೆಮಕ್ಕಳಂತೆ ಬಾಳಿದರು (ಕಟ್ಟೆರಕದ ಸಂಬಂಧ). ಅಲ್ಲಿ ಸತ್ಯವಲ್ಲದೆ ಅನೃತವು ಸುಳಿಯದು. ಅಲ್ಲಿ ಬೆಳಕಲ್ಲದೆ ಕತ್ತಲೆಯಿಲ್ಲ. ಸ್ವರ್ಗವಲ್ಲದೆ ನರಕ ಇರದು, ಅಂತಹ ಆದರ್ಶ ರಾಜನೀತಿಯನ್ನು ಪ್ರಜೆಗಳೂ, ಆಳರಸರೂ ಅನುಸರಿಸಿ ಅದರ ಸತ್ಫಲಗಳನ್ನು ಉಂಡು ಕೃತಾರ್ಥರಾದರು (ಜನರೆಲ್ಲರನು ಆತ್ಮವಶರೆನಿಸಿದನು).

ಉದಿತಃ ಸೂರ್ಯ ಇವ—ದರ್ಶನೇನ ದುರಿತಂ ಘ್ನನ್ನಿವರ್ತಯನ್—ತಥಾ ಚ ಸ್ಮರ್ಯತೇ—"ಅಗ್ನಿಚಿತ್ ಕಪಿಲಾ ಸತ್ರಿರಾಜಾ ಭಿಕ್ಷುರ್ಮಹೋದಧಿಃ" ದೃಷ್ಟಮಾತ್ರಾಃ ಪುನನ್ತ್ಯೇತೇ ತಸ್ಮಾತ್ ಪಶ್ಯೇತನಿತ್ಯಶಃ—ತಮೋಽಜ್ಞಾನಂ ಧ್ವಾಂತಂ ಚ ನುದನ್ ಶಶ್ವತ್ ಪ್ರಜಾಃ ಸ್ವತುತ್ರ್ಯಂ ಚಕ್ರೇ ಸ್ವಾಧಿನಾಶ್ಚಕಾರ—ನುದಂಸ್ತಮಃ=ಅಜ್ಞಾನವನ್ನು ತೊಡೆದುಹಾಕಿ. ಪ್ರಜಾಃ ಸ್ವತಂತ್ರಯಾಂ ಚಕ್ರೇ = ಸ್ವಾಧಿನಾಶ್ಚಕಾರ = ಜನರೆಲ್ಲರು ಸ್ವತಂತ್ರವಾದ ಚಿತ್ತ ವೃತ್ತಿಯಿಂದ ಶೋಭಿಸುತ್ತ ಉತ್ತಮ ಪ್ರಜೆಗಳಾಗಿ ಬಾಳಿದರು.

**75. ಇಂದೋರಗತಯಃ ಪದ್ಮೇ ಸೂರ್ಯಸ್ಯ ಕುಮುದೇಂಽಶವಃ ।**
**ಗುಣಾಸ್ತಸ್ಯ ವಿಪಕ್ಷೇಽಪಿ ಗುಣಿನೋ ಲೇಭಿರಂತರಮ್ ॥ ೭೫ ॥**

ಇದೊಂದು ವಿಪರ್ಯಾಸ. ವಿಶ್ವವನ್ನು ಬೆಳಗುವ ಸೂರ್ಯನಿಂದ ಒಂದು ನೈದಿಲೆ ಹೂವನ್ನು ಅರಳಿಸಲು ಸಾಧ್ಯವಿಲ್ಲ. ಅಂತೆಯೇ ಜಗತ್ತನ್ನು ಬೆಳಗುವ ಚಂದ್ರಮನು ಒಂದು ತಾವರೆಹೂವನ್ನು ಅರಳಿಸುವ ಸಾಮರ್ಥ್ಯವನ್ನು ಪಡೆದಿರುವುದಿಲ್ಲ. ಚಂದ್ರನ ಕಿರಣ ತಾವರೆಮೊಗ್ಗಿನ ಒಳಗಡೆ ಹೋಗಲು ಸಮರ್ಥವಾಗಿಲ್ಲ. ಅಂತೆಯೇ ಸೂರ್ಯನ ಕಿರಣ ನೈದಿಲೆಯ ಕುಟ್ಮಲದ ಒಳಪುಗದು. ಇದು ಸೃಷ್ಟಿಯ ನಿಯಮ. ಆಯಾಯ ಕೆಲಸಕ್ಕೆ ಅವರವರೇ ಅರ್ಹರು. ಸೂರ್ಯನ ಕಾಂತಿ ಮಾತ್ರ ತಾವರೆಯನ್ನು ಅರಳಿಸಬಲ್ಲುದು. ಚಂದ್ರನ ಬೆಳಕಿನಲ್ಲಿ ನೈದಿಲೆ (ಕನ್ನೈದಿಲೆ) ನಲಿವುದು. ಸೂರ್ಯನ ಬೆಳಕು ಅರವಿಂದವನ್ನು ವಿಕಸಿಸುವುದು. ಆದರೆ ಅತಿಥಿಸಾಮ್ರಾಟನು ಗುಣನಿಧಿ (ಗುಣಪಯೋನಿಧಿ); ಗುಣಸಾಗರನು. ಸದ್ಗುಣಗಳ ಆಗರ. ವಿದ್ಯಾವಲ್ಲಭನು. ಸುಗುಣಿ. ಸದ್ಗುಣಸಾಂದ್ರನು. ಅವನ ಸದ್ಗುಣಗಳಿಗೆ ಲೋಕದಲ್ಲಿ ತಲೆಬಾಗದವರೇ ಇಲ್ಲ. ಅವನ ವೈರಿಗಳೂ ಅವನ ಸದ್ಗುಣಗಳಿಗೆ ಮೆಚ್ಚಿ ತಲೆಬಾಗುತ್ತಿದ್ದರು. ಅವನು ಧರ್ಮವಿಜಯಿ (ಧರ್ಮಚಕ್ರ). ಭಾರತದ ಧರ್ಮಪತಾಕೆಯನ್ನು ವೈರಿಗಳ ಎದೆಯಲ್ಲಿ ನೆಟ್ಟು ಧರ್ಮವಿಜಯವನ್ನು ಸಾಧಿಸಿದ ಧೀಮಂತ ದೊರೆ. ಅದು ಅಹಿಂಸೆಯ, ಸತ್ಯದ, ಋಜುಮಾರ್ಗಗಳಿಂದ (ರಕ್ತದ ಕಾಲುವೆ ಹರಿಸದೆ) ಕಪಟ, ಕುತಂತ್ರ, ಪರಹಿಂಸೆ, ಪರಪೀಡನೆಗಳಿಂದ ಅಲ್ಲ. ದಬ್ಬಾಳಿಕೆಯಿಂದ ಅಲ್ಲವೇ ಅಲ್ಲ ತ್ಯಾಗಪ್ರೇಮಗಳಿಂದ, ಆಧ್ಯಾತ್ಮಸಿದ್ಧಾಂತಗಳಿಂದ.

ಇಂದೋರಂಶವಃ ಪದ್ಮೇಽಗತಯಃ — ಪ್ರವೇಶರಹಿತಾ ಇತ್ಯರ್ಥಃ — ಸೂರ್ಯಸ್ಯಾಂಶವಃ ಕುಮುದೇಽಗತಯಃ—ಗುಣಿನಸ್ತಸ್ಯ ಗುಣಾಸ್ತು ವಿಪಕ್ಷೇ ಶತ್ರಾವಪ್ಯಂತರಮವಕಾಶಂ ಲೇಭಿರೇ=ಪ್ರಾಪುಃ—

**76. ಪರಾಭಿಸಂಧಾನಪರಂ ಯದ್ಯಪ್ಯಸ್ಯ ವಿಚೇಷ್ಟಿತಮ್ ।**
**ಜಿಗೀಷೋರಶ್ವಮೇಧಾಯ ಧರ್ಮ್ಯಮೇವ ಬಭೂವ ತತ್ ॥ ೭೬ ॥**

ತನ್ನ ಸಾರ್ವಭೌಮತ್ವವನ್ನು ರಕ್ಷಿಸುವುದಕ್ಕೆ, ದೇಶದ ಸಮಸ್ತ ಮಾಂಡಲಿಕ ಅರಸರನ್ನು ಒಂದೇ ಬೆಳ್ಗೊಡೆಯ ಅಡಿಗೆ ತರಲು ಅವನು ವಿಶ್ವಜಿತ್, ಅಶ್ವಮೇಧ, ವಾಜಪೇಯ ಮೊದಲಾದ ಯಾಗಗಳನ್ನು (ಕ್ರತುಗಳನ್ನು) ಕೈಕೊಂಡನು. ಅವನು ಅಂತಹ ಸಾಹಸ ಉದ್ಯಮಕ್ಕೆ ಧರ್ಮದ ಹೆಸರಿನಲ್ಲಿ ಕೈಯಿಕ್ಕಿದನು. ಅದನ್ನು ಧರ್ಮಶಾಸ್ತ್ರಗಳೂ ಸಾರುತ್ತಿವೆ. ಇದರಿಂದ ಕೊಬ್ಬಿದ ವೈರಿರಾಜರನ್ನು ಹತೋಟಿಗೆ ತರಲು ಸಾಧ್ಯವಾಗಿತ್ತು. ಅದೊಂದು ಧರ್ಮಸಮ್ಮತವಾದ (ಸರ್ವಸಮ್ಮತವಾದ) ತೆರೆದಿಟ್ಟ ದಾರಿ. ಶತ್ರುವು ವಂಚನಾಶೀಲನು. ಇವನು ಸಂಧಾನಪರನು. ವೈರಿರಾಜರ ಠಕ್ಕುತೌಳಿಗೆ (ಅಹಂಗೆ) ಅವಕಾಶವಿರಲಿಲ್ಲ. ಅವರ ಮಹತ್ವಾಕಾಂಕ್ಷೆಗೆ ಕೂಡಲೇ ತೆರಬೀಳುತ್ತಿತ್ತು (ಕೊಡಲಿಪೆಟ್ಟು). ಅವನ ದಿಗ್ವಿಜಯದ ರಣಕಹಳೆ ದಿಗಂತವಿಶ್ರಾಂತವಾದುದು. ದಿಗಂತಗಳ ತನಕ ಕೇಳಿಸುತ್ತಿತ್ತು. ಅವರು ಕಪ್ಪಕಾಣಿಕೆಗಳನ್ನು ಕೊಟ್ಟು ಕೈಮುಗಿದು ತೆಪ್ಪಗೆ ಅವನನ್ನು ಹಿಂಬಾಲಿಸಿದರು. ಹೀಗೆ ಲೋಕಶಾಂತಿ (ವಿಶ್ವಶಾಂತಿ) ನೆಲೆಗೊಂಡಿತು (ವಿಜಯಪ್ರಯತ್ನಗಳಿಂದ) (ಸದ್ಧರ್ಮಸಿದ್ಧಿಯೊಳು ಸಂದು).

ಅಶ್ವಮೇಧಾದ್ಯಃ=ಜಿಗೀಷೋರಸ್ಯ ವಿಚೇಷ್ಟಿತಂ=ದಿಗ್ವಿಜಯರೂಪಂ ಯದ್ಯಪಿ ಪರಾಭಿಸಂಧಾನ ಪರಂ=ಶತ್ರುವಂಚನಪ್ರಧಾನಂ ತಥಾಽಪಿ ತದ್ಧರ್ಮ್ಯಂ=ಧರ್ಮಾದನಪೇತಮೇವ —ಧರ್ಮ ಪಥ್ಯರ್ಥನ್ಯಾಯಾದನಪೇತೆ" ಇತಿ ಯತ್ಪ್ರತ್ಯಯಃ ॥

**77. ಏವಮುದ್ಯನ್ ಪ್ರಭಾವೇಣ ಶಾಸ್ತ್ರನಿರ್ದಿಷ್ಟವರ್ತ್ಮನಾ ।**
**ವೃಷೇವ ದೇವೋ ದೇವಾನಾಂ ರಾಜ್ಞಾಂ ರಾಜಾ ಬಭೂವ ಸಃ ॥ ೭೭ ॥**

ಶಾಸ್ತ್ರದಲ್ಲಿ ಕಾಣಿಸಿರುವ ನಿರ್ದಿಷ್ಟಪಥದಲ್ಲಿ (ಮಾರ್ಗದಲ್ಲಿ) ನಡೆದು ತನ್ನ ಪರಮ ಪ್ರತಾಪದಿಂದ, ಪರಮಪ್ರಭಾವದಿಂದ ಅಭಿವೃದ್ಧಿಯನ್ನು ಹೊಂದಿ ದೇವತೆಗಳಿಗೆ ದೇವನಾದ ವಾಸವನಂತೆ (ಇಂದ್ರನಂತೆ) ರಾಜರಾಜೇಶ್ವರನೆನಿಸಿದನು. ಅವನು ಅಗಣಿತಸೇನಾ ಬಲದಲ್ಲಿ ಮತ್ತು ಕೋಶಬಲದಲ್ಲಿ (ಅರ್ಥಬಲ, ಐಶ್ವರ್ಯಬಲ) ಜಗದ ಉದ್ದಗಲದಲ್ಲಿ ಅಗ್ರಸ್ಥಾನವನ್ನು ಪಡೆದನು. ರಾಜರೆಲ್ಲರ ಅಧಿರಾಜನೆನಿಸಿ ಪೃಥ್ವೀಶ್ವರ (ಪೃಥ್ವೀವಲ್ಲಭ) ನೆನಿಸಿದನು (ರಾಜರಾಜೇಶ್ವರನು ಆದನು ಸಮಂತು). ದೇಶದ ಮೂಲೆಮೂಲೆಗಳಲ್ಲಿ ಸುಭಿಕ್ಷೆ, ತುಷ್ಟಿ, ಪುಷ್ಟಿ ನೆಲಸಿತು. ಸುವರ್ಣಭೂಮಿ ಭಾರತಮಾತೆ. (ಜೇನು ಸುರಿವ, ಹಾಲು ಹರಿವ ದಿವ್ಯ ಭೂಮಿಗಿಳಿಯಿತೋ ಎಂಬಂತೆ).

ಏವಂ ಶಾಸ್ತ್ರನಿರ್ದಿಷ್ಟವರ್ತ್ಮನಾ ಶಾಸ್ತ್ರೋಪದಿಷ್ಟಮಾರ್ಗೇಣ ಪ್ರಭಾವೇಣ=ಕೋಶದಂಡಜೇನ ತೇಜಸಾ—"ಸಪ್ರಭಾವಃ ಪ್ರತಾಪಶ್ಚ ಯತ್ತೇಜಃ ಕೋಶದಂಡಜಂ" ಇತ್ಯಮರಃ—ಉದ್ಯನ್ನುದ್ಯಂ ಜಾನಃ ಸಃ—ವೃಷಾ=ವಾಸವೋ ದೇವಾನಾಂ ದೇವೋ ದೇವ ದೇವ ಇವ—ರಾಜ್ಞಾಂ ರಾಜರಾಜೋ ಬಭೂವ ॥

**78. ಪಂಚಮಂ ಲೋಕಪಾಲಾನಾಮೂಚುಃ ಸಾಧರ್ಮ್ಯಯೋಗತಃ ।**
**ಭೂತಾನಾಂ ಮಹತಾಂ ಷಷ್ಠಮಷ್ಟಮಂ ಕುಲಭೂಭೃತಾಮ್ ॥ ೭೮ ॥**

ಈ ಜಗತ್ತಿನ ಲೋಕಪಾಲರಾಗಿ ನಾಲ್ಕು ಮಂದಿ ಲೋಕಪಾಲರಿರುವುದು ಸರಿಯಷ್ಟೆ. ಇಂದ್ರ, ವರುಣ, ಕುಬೇರ ಮತ್ತು ಯಮ ಎಂಬವರೇ ಇವರು. ಈ ವಿಷಯವನ್ನು ಶಾಸ್ತ್ರಗಳು ಲೋಕಕ್ಕೆ ಸಾರುತ್ತಿವೆ. ಈಗ ಜನರು ಅತಿಥಿನೃಪನನ್ನು ಐದನೆಯ ಲೋಕ ಪಾಲನೆಂದು ಘೋಷಿಸಿ ಕರೆಯತೊಡಗಿದರು. ಅದು ಅಲ್ಲದೆ ಪಂಚಮಹಾಭೂತ— ಆಕಾಶ, ಭೂಮಿ, ಅಪ, ತೇಜ, ವಾಯು ಎಂಬವುಗಳು. ಅವುಗಳು ಜನರಿಗೆ ಆಧಾರ ವಾದವುಗಳು. ಜಗತ್ತಿಗೆ, ಜಗತ್ತುನಿರ್ಮಾಣಕಾರ್ಯಕ್ಕೆ, ಜಗದ ಶ್ರೇಯೋಭಿವೃದ್ಧಿಗೆ ಮೂಲಭೂತವಾದವುಗಳು. ಹಾಗೆಯೇ ಜನರು ತಮ್ಮ ಸಾರ್ವಭೌಮನು ಆರನೆಯ ಮಹಾಭೂತನೆಂದು, ಅವನು ವಿಧಾತನ ಸೃಷ್ಟಿಗೆ ಕಾರಣಭೂತನೆಂದು, ಜಗತ್ತಿಗೆ ಕಾರಣ ವಾದ ಮಹಾಚೇತನವೆಂದು ತಿಳಿದು ಕರೆಯತೊಡಗಿದರು. ಅದಕ್ಕೆ ಕಾರಣ ಬೇರೆ ಹೇಳ ಬೇಕಾಗಿಲ್ಲ. ಆ ರಾಜನ ಪ್ರಜಾವಾತ್ಸಲ್ಯ, ಅವನು ಪ್ರಜೆಗಳ ಶ್ರೇಯೋಭಿವೃದ್ಧಿಗೆ ತನ್ನ ತನು, ಮನ, ಧನವನ್ನು ಮುಡುಪಾಗಿಟ್ಟು, ಪ್ರಜಾಕುಟುಂಬಿಯಾಗಿ ಪ್ರಜಾಕೋಟಿಯನ್ನು ಮಕ್ಕಳಂತೆ ಸಲಹುತ್ತಿದ್ದನು.

ಅಂತೆಯೇ ಲೋಕದ ಸಮಸ್ತಜನರು ಅವನನ್ನು ಎಂಟನೆಯ ಕುಲಪರ್ವತವೆಂಬ ಹೆಸರಿನಿಂದ ಕರೆಯತೊಡಗಿದರು. ನ್ಯಾಯಧರ್ಮದಲ್ಲಿ ನಡೆಯುತ್ತಿದ್ದ ಆ ಭೂಭುಜನು ಕುಲಪರ್ವದಂತೆ, ಅಚಲನಾಗಿದ್ದನು. ಅವನು ಮೇರುಸದೃಶನು. ಅವನು ಇಟ್ಟ ದಿಟ್ಟ ಹೆಜ್ಜೆಯು ಅಚಲವಾದುದು. ಧರ್ಮಪಥದಲ್ಲಿ ನಡೆಯುವ ಮಹಾತ್ಮನು ಅವನು. ಲೋಕವಿಖ್ಯಾತ ಕುಲಪರ್ವತಗಳು ಒಟ್ಟು ಏಳು—ಮಹೇಂದ್ರ ಮಲಯ, ಸಹ, ಶಕ್ತಿ ಮಾನ್, ಋಕ್ಷ, ವಿಂಧ್ಯಾ ಮತ್ತು ಪಾರಿಯಾತ್ರ ಎಂಬವುಗಳು. ಆ ಪರ್ವತಸಾಲುಗಳು ಭೂಮಿಯನ್ನು ಪಲ್ಲಾಯಿಸದಂತೆ (ಹೊತ್ತು), ಸಮತೋಲನ ಸ್ಥಿತಿಯಲ್ಲಿರಿಸುತ್ತವೆ. ಭೂಮಿಯ ಗುರುತ್ವಾಕರ್ಷಣೆಯನ್ನು ಕಾಪಾಡುತ್ತವೆ. ಅಂತೆಯೆ ಭೂಮಿಪಾಲಕನಾದ, ಆ ಲೋಕಹಿತೈಷಿಯು ಜನರ ಹೃದಯದಲ್ಲಿ ಕುಲಶೈಲದಂತೆ ನಿಂತು ಅವರ ಪೋಷಕನೂ, ದಾತಾರನೂ. (ರಕ್ಷಕನೂ) ಆಗಿದ್ದನು. ಭೂಭಾರವನ್ನು ಹೊರತಕ್ಕವನು. ರಾಜ್ಯಭಾರ ವನ್ನು ಕುಲಪರ್ವತದಂತೆ ಹೊತ್ತ ರಾಜಯೋಗಿ (ಕರ್ಮಯೋಗಿ). ಆದುದರಿಂದ ಪ್ರಜಾ ಕೋಟಿ (ಜನರು, ಜನತೆ) ಅವನನ್ನು ಎಂಟನೆಯ ಕುಲಶೈಲನೆಂಬ ಅನ್ವರ್ಥನಾಮದಿಂದ ಕರೆಯುತ್ತಿದ್ದುದು ಸಮಂಜಸವೆನಿಸುತ್ತಿದೆ. ತನ್ನ ಸಾಧರ್ಮ್ಯಯೋಗದಿಂದ ಅತಿಥಿ ಭೂಮಿಪಾಲನನ್ನು ಐನೆಯ ಲೋಕಪಾಲನೆಂದು, ಆರನೆಯ ಮಹಾ ಭೂತನೆಂದು, ಎಂಟನೆಯ ಕುಲಪರ್ವತವೆಂದು ಗಣಿಸಿದರು ಲೋಕದವರೆಂದು.

ಸಾಮ್ಯಯೋಗತೋಽಯಥಾ ಕ್ರಮಂ ಲೋಕಸಂರಕ್ಷಣಪರೋಪಕಾರ ಭೂಧಾರಣ ರೂಪಸಮಾನ ಧರ್ಮತ್ವಬಲಾಲ್ಲೋಕಪಾಲಾನಾಮಿಂದ್ರಾದೀನಾಂ ಚತುರ್ಣಾಂ ಪಂಚಮಮೂಚುಃ—ಮಹತಾನಾಂ ಭೂತಾನಾಂ ಪೃಥಿವ್ಯಾದೀನಾಂ ಪಂಚಾನಾಂ ಷಷ್ಠ ಮೂಚುಃ—ಕುಲಭೂಭೃತಾಂ ಕುಲಾಚಲಾನಾಂ ಮಹೇಂದ್ರಮಲಯಾದೀನಾಂ ಸಪ್ತಾ ನಾಮಷ್ಟಮಮೂಚುಃ ॥

79. ದೂರಾಪವರ್ಜಿತಚ್ಛತ್ರೈಸ್ತಸ್ಯಾಜ್ಞಾಂ ಶಾಸನಾರ್ಪಿತಾಮ್ ।
ದಧುಃ ಶಿರೋಭಿರ್ಭೂಪಾಲಾ ದೇವಾ ಪೌರಂದರೀಮಿವ ॥ ೭೯ ॥

ಪುರಂದರನ (ದೇವೇಂದ್ರನ) ಆಜ್ಞೆಯನ್ನು ದೇವಾದಿದೇವತೆಗಳು ತಮ್ಮ ತಲೆಯಲ್ಲಿ ಅಂತು ತಮ್ಮ ಬೆಳ್ಗೊಡೆಗಳನ್ನು ಬದಿಗೊತ್ತಿ ಅನುಸರಿಸುವಂತೆ (ದೇವೇಂದ್ರನಾಜ್ಞೆಯನು ತಳೆದಪರದೇತಂತು) ಅತಿಥಿಸಾರ್ವಭೌಮನ (ಆ ಭೂಪಾಲನ) ಶಾಸನವನ್ನು ಅಂಗೀಕರಿಸಿ ಮಾಂಡಲಿಕರಾಜರು ಪಾಲಿಸಿದರು. ಅವರು ತಮ್ಮ ತಲೆಯನ್ನು ತುಸು ತಗ್ಗಿಸಿ ಅವನ ಆಣತಿಯಂತೆ ಹಿಂಬಾಲಿಸಿದರು. ತಮ್ಮ ಶ್ವೇತಚ್ಛತ್ರಗಳನ್ನು ಬದಿಗೆ ಸರಿಸಿದರು. ಅವನ ಹಿರಿಮೆಗೆ, ಅಧಿಕಾರಕ್ಕೆ ತಲೆಬಾಗಿದರು.

ದೇವಾಃ ಪೌರಂದರೀಂ = ಮೈಂದ್ರೀಮಾಜ್ಞಾಮಿವ — ದೂರಾಪವರ್ಜಿತಚ್ಛತ್ರೈ = ದೂರಾತ್ ಪರಿಹೃತಾತಪತ್ರೈಃ ಶಿರೋಭಿರ್ದಧುಃ ॥

80. ಯಮೃತ್ವಿಜಃ ಸ ತಥಾನರ್ಚ ದಕ್ಷಿಣಾಭಿರ್ಮಹಾಕ್ರತೌ ।
ಯಥಾ ಸಾಧಾರಣೀಭೂತಂ ನಾಮಾಸ್ಯ ಧನದಸ್ಯ ಚ ॥ ೮೦ ॥

ಆ ರಾಜನು ಅಶ್ವಮೇಧಾದಿ ಮಹಾಕ್ರತುಗಳನ್ನಾಚರಿಸಿ ಋತ್ವಿಜರಿಗೆ ಧನವನ್ನು ದಾನಮಾಡಿ ಧನದನೆಂಬ ಹೆಸರಿಗೆ ಪಾತ್ರನಾದನು. ಧನದನೆಂಬ ಹೆಸರು ಕುಬೇರನ ಅಂಕಿತನಾಮ. ಕುಬೇರನು ಧನದ ರಕ್ಷಕನು. ಆದರೆ ಅತಿಥಿಭೂಪಾಲನು ಧನವನ್ನು ಸಂಗ್ರಹಿಸಿ ಯೋಗ್ಯರಾದವರಿಗೆ (ಪಾತ್ರರಾದವರಿಗೆ) ದಕ್ಷಿಣೆಯಾಗಿ ಹಂಚುತ್ತಿದ್ದನು. ಅವನು ಯಾಚಕವೃಂದಕ್ಕೆ ದಾನಮಾಡುವವನು. ಬರಿಯ ಕೋಶಾಧ್ಯಕ್ಷನಲ್ಲ, ಬರಿಯ ಖಜಾಂಚಿಯಲ್ಲ, ರಕ್ಷಕನೂ ಹೌದು, ದಾನಿಯೂ ಹೌದು. ಧನಸಂರಕ್ಷಕನಾದ ಮಹಾದಾನಿ. ಆದುದರಿಂದ ಮಹಾಪಾತ್ರನಾದ ಅವನು ಧನದನೆಂಬ, ಕುಬೇರನೆಂಬ ಅಂಕಿತನಾಮದ ವ್ಯಾಪಕಾರ್ಥಕ್ಕೆ ಅರ್ಹನಾಗಿದ್ದ ಮಹಾಭಾಗನು. ಹೀಗೆ ಲೋಕದಲ್ಲಿ ಇಬ್ಬರು ಧನದರಾದರು. ಒಬ್ಬ ಭೂಲೋಕದಲ್ಲಿ (ಅತಿಥಿಮಹಾರಾಜ), ಇನ್ನೊಬ್ಬ ಯಕ್ಷಲೋಕದಲ್ಲಿ (ಊರ್ಧ್ವಲೋಕದಲ್ಲಿ) (ಕುಬೇರ).

ಮಹಾಕ್ರತಾವಶ್ವಮೇಧೇ—ಋತ್ವಿಜೋ = ಯಾಜಕಾನ್ ದಕ್ಷಿಣಾಭಿಸ್ತಥಾನರ್ಚಾರ್ಚಯಾಮಾಸ—ಅರ್ಚತೇರ್ಭೌವಾದಿಕಾಲ್ಲಿಟ್—ಯಥಾಽಸ್ಯ ರಾಜ್ಞೋ ಧನದಸ್ಯ ಚ ನಾಮ ಸಾಧಾರಣೀಭೂತಮೇಕೀಭೂತಮ್—ಉಭಯೋರಪಿ ಧನದಸಂಜ್ಞಾ ಯಥಾ ಸ್ಯಾತ್ತಥೇತ್ಯರ್ಥಃ—ಧನಂ ದಯತೇ ರಕ್ಷತೀತಿ ಕರ್ಮಣಾ ಧನದ ಇತಿ ಕಥ್ಯತೇ—ಧನಂ ದದಾತೀತಿ ಧನದಃ—ಧನದ=ಧನಂ ದಯತಿ ರಕ್ಷತಿ—ಧನದ—(ದದೌ)=ದಕ್ಷಿಣೆಕೊಡು.

81. ಇಂದ್ರಾದ್ವೃಷ್ಟಿರ್ನಿಯಮಿತಗದೋದ್ರೇಕವೃತ್ತಿರ್ಯಮೋಽಭೂ ।
ದ್ಯಾದೋನಾಥಃ ಶಿವಜಲಪಥಾ ಕರ್ಮಣೇ ನೌಚರಾಣಾಮ್ ॥
ಪೂರ್ವಾಪೇಕ್ಷೀತದನು ವಿದಧೇ ಕೋಶವೃದ್ಧಿಂ ಕುಬೇರಃ ।
ತಸ್ಮಿನ್ ದಂಡೋಪನತಚರಿತಂ ಭೇಜಿರೇ ಲೋಕಪಾಲಾಃ ॥ ೮೧ ॥

ಇಂದ್ರನು ಕಾಲಕಾಲಕ್ಕೆ ಮಳೆ ಸುರಿಸಿದನು. ಯಮನು ರೋಗರುಜಿನಗಳನ್ನು

ತಡೆದನು. ಯಾದೋನಾಥನಾದ ವರುಣನು ಸಾಗರಗಳ ಜಲಮಾರ್ಗವನ್ನು, ಅಂಬು ಪಥವನ್ನು ನಾವಿಕರಿಗೆ ಸುಗಮಗೊಳಿಸಿದನು. ಇದರಿಂದ ಜಹಜಂಗಳು, ನೌಕೆಗಳು, ದೋಣಿಗಳು ಯಾವ ಭಯ ಆತಂಕವಿಲ್ಲದೆ ಸಾಗರದ ಶಿವ (ಮಂಗಳಕರವಾದ) ಜಲರಾಶಿ ಯಲ್ಲಿ ಓಡಾಡುತ್ತ ವಾಣಿಜ್ಯ, ವಿಹಾರಗಾರಿಕೆ, ಮುತ್ತುರತ್ನಗಳ, ರಾಸಾನಿಯಕ ವಸ್ತುಗಳ ವ್ಯಾಪಾರಮಾಡುತ್ತ (ಆಮದು, ರಫ್ತು) ದೇಶದ ಐಶ್ವರ್ಯವನ್ನು ಹೆಚ್ಚಿಸಿದವು. ಭಾರತವು ವಿಶ್ವದ ಕೇಂದ್ರವೆನಿಸಿತು. ಅತಿಥಿಯ ಪೂರ್ವಜರಾದ, ಜಗದ್‌ವಂದ್ಯರಾದ ಮಹಾಮಹಿಮಾನ್ವಿತರಾಗಿ ಶ್ರೇಷ್ಠತೆಯನ್ನು ವಿಶ್ವದಾದ್ಯಂತ ಪಡೆದ ರಘುರಾಮರ ಶ್ರೇಷ್ಠತೆಯನ್ನು, ಇಕ್ಷ್ವಾಕುವಂಶದ ಕುಲಗೌರವವನ್ನು ಸ್ಮರಿಸಿ ಧನಾಧ್ಯಕ್ಷನಾದ ಕುಬೇರನು (ಧನದನು) ಕೋಶವೃದ್ಧಿಯನ್ನು ಗೈದನು.

ಇದರಿಂದ ಆ ನಾಲ್ಕು ಮಂದಿ ಲೋಕಪಾಲಕರು ಅವರ ಸೇನೆಗಳ ಸಮೇತ (ಸಿಬ್ಬಂದಿ) ಬಲಾನ್ವಿತನಾದ ಅತಿಥಿಕ್ಷಿತಿಪಾಲನಿಗೆ ಋಣಿಗಳಂತೆ ಅಥವಾ ಶರಣುಬಂದವರಂತೆ, ನಡೆದರು. ಅವನ ಆಜ್ಞಾಪಾಲಕರರಿತೆ ಲೋಕಪಾಲಕರೆಲ್ಲರು ಲೋಕಾಭಿವೃದ್ಧಿಯನ್ನು ಗೈದರು. ಲೋಕಕಲ್ಯಾಣಗೈದರು. ವಿಶ್ವಕಲಾಣವಂಗೈದರು. ಭರತಖಂಡವು ಭೂಸ್ವರ್ಗ ವಾಗಿ ಮೆರೆಯಿತು.

ಇಂದ್ರಾದ್ವೃಷ್ಟಿರಭೂತ್—ಯಮೋ ನಿಯಮಿತಾ=ನಿವಾರಿತಾ ಗದಸ್ಯ ರೋಗಸ್ಯೋ ದ್ರೇಕವಿಮವೃತ್ತಿರ್ಯೇನ ಸೋಽಭೂತ್-ಯಾದೋನಾಥೋ=ವರುಣೋ ನೌಚರಾಣಾಂ ನಾವಿಕಾನಾಂ ಕರ್ಮಣೇ ಸಂಚರಾಯ ಶಿವಜಲಪಥಃ=ಸುಚರಜಲಮಾರ್ಗೋಽಭೂತ್ —ಕುಬೇರಃ ಕೋಶವೃದ್ಧಿಂ—''ದಂಡೋಪನತಸ್ಯ ಶರಣಾಗತಸ್ಯ ಚರಿತಂ ವೃತ್ತಿಂ ಭೇಜಿರೇ—ದುರ್ಬಲೋ ಬಲವತ್ಸೇವೀ ವಿರುದ್ಧಾಚ್ಛಂಕಿತಾದಿಭಿಃ-''ವರ್ತೇತ ದಂಡೋ ಪನತೋ ಭರ್ತಯೇಂವಮಸ್ಥಿತಃ'' ಇತಿ ಕೌಟಿಲ್ಯಃ—ಯಾದೋನಾಥ = ಯಾದಸಾಂ ನಾಥಃ (ಷ. ತತ್ಪು). = ವರುಣ—ಪೂರ್ವಾಪೇಕ್ಷೀ = ಮೊದಲ ಮೂರುಮಂದಿ ಲೋಕ ಪಾಲರಾದ ಇಂದ್ರ, ವರುಣ, ಯಮರನ್ನು ಗೌರವಿಸಿ—ಪೂರ್ವಾಪೇಕ್ಷೀ=ರಘುರಾಮಾದಿ ಮಾಜ್ಞಃ = ಅತಿಥಿಯ ಪೂರ್ವಜರಾದ ರಘುರಾಮಾದಿಗಳನ್ನು ಗೌರವಿಸುತ್ತ ನಡೆದು.

॥ ಶ್ರೀ ಮಹಾಮಂಗಲಂ – ನಮೋ ಶಾರದಾಂಬ ॥
॥ ಶ್ರೀ ಕೃಷ್ಣಾಯ ಪರಬ್ರಹ್ಮಣೇ ನಮಃ ॥

# ಅಷ್ಟಾದಶಃ ಸರ್ಗಃ
# ಹದಿನೆಂಟನೆಯ ಸರ್ಗ
## ವಂಶಾನುಕ್ರಮ (ವಂಶವೃಕ್ಷ)

1. **ಸ ನೈಷಧಸ್ಯಾರ್ಥಪತೇಃ ಸುತಾಯಾಂ ।**
**ಉತ್ಪಾದಯಾಮಾಸ ನಿಷಿದ್ಧಶತ್ರುಃ ॥**
**ಅನೂನಸಾರಂ ನಿಷಧಾನ್ನಗೇಂದ್ರಾತ್ ।**
**ಪುತ್ರಂಯಮಾಹುರ್ನಿಷಧಾಖ್ಯಮೇವ** ॥ ೧ ॥

ನಿಷಿದ್ಧಶತ್ರುನಿವಾರಿತರಿಪುವಾದ ಅತಿಥಿಮಹಾರಾಜನು ನಿಷಧರಾಜಪುತ್ರಿಯನ್ನು ಲಗ್ನವಾದನು. ನಿಷಧರಾಜನು ಅರ್ಥಪತಿಯೆಂಬಾತನು. ನಿಷಧರಾಜ್ಯವು ಹಿಮಾಲಯ ಪರ್ವತಶ್ರೇಣಿಯಲ್ಲಿದೆ. ಅಲ್ಲಿ ಹಿಮವಾಹಿನಿಯಾದ ಅಲಕನಂದಾನದಿ, ಕಲಕಲನಾದದಿಂದ ಹರಿಯುತ್ತಲಿದೆ. ನಿಷಧಪರ್ವತದಿಂದ ಆ ದೇಶಕ್ಕೆ ಆ ಹೆಸರು ಬಂದಿದೆ. ಇಂದಿನ ಕುಮೋನ್ ರಾಜ್ಯವೇ ಅಂದಿನ ನಿಷಧರಾಜ್ಯವಾಗಿತ್ತು. ಅತಿಥಿಗೆ ಜನಿಸಿದ ಪುತ್ರನು ಅನ್ಯೂನಸಾರನಾದ, ಭುಜಬಲನೆನಿಸಿದ ನಿಷಧನೆಂಬವನು. ಅತಿಥಿಯು ಸೂನುವಿಗೆ ನಿಷಧ ನೆಂದೇ ಹೆಸರಿಟ್ಟರು. ನಗೇಂದ್ರನಾದ (ಪರ್ವತರಾಜನಾದ) ನಿಷಧ ಪರ್ವತದ ನೆನಪಿಗಾಗಿ. ಅವನು ನಿಷಧ ಪರ್ವತದಂತೆ ಗಟ್ಟಿಮುಟ್ಟಾದವನು. ಶಕ್ತಿ, ವೀರ್ಯಸಂಪನ್ನನು. ಆ ಹೆಸರಿಗೆ ತಕ್ಕವನು.

ನಿಷಿದ್ಧ ಶತ್ರುರ್ನಿವಾರಿತರಿಪುಃ—ಸೋಽತಿಥಿರ್ನೈಷಧಸ್ಯ ನಿಷಧದೇಶಾಧೀಶ್ವರಸ್ಯಾರ್ಥ ಪತೇಃ ರಾಜ್ಞಃ ಸುತಾಯಾಂ ನಿಷಧಾನ್ನಿಷದಾಖ್ಯಾನ್ನಗೇಂದ್ರಾತ್ಪರ್ವತಾತ್—ಅನೂನ ಸಾರಂ = ಅನ್ಯೂನಬಲಂ—ಪುತ್ರಮುತ್ಪಾದಯಾಮಾಸ—ಯಂ ಪುತ್ರಂ ನಿಷಧನಾಮ ಮೇವಾಹುಃ ॥

2. **ತೇನೋರುವೀರ್ಯೇಣ ಪಿತಾ ಪ್ರಜಾಯೈ ।**
**ಕಲ್ಪಿಷ್ಯಮಾಣೇನ ನನಂದ ಯೂನಾ ॥**
**ಸುವೃಷ್ಟಿಯೋಗಾದಿವ ಜೀವಲೋಕಃ ।**
**ಸಸ್ಯೇನ ಸಂಪತ್ತಿಫಲೋನ್ಮುಖೇನ** ॥ ೨ ॥

ಬಲಶಾಲಿಯಾದ ನಿಷಧನಂತಹ ಪುತ್ರನನ್ನು ಪಡೆದು ಅತಿಥಿನೃಪನು ಸುಪ್ರೀತ ನಾದನು. ಅವನು ಪ್ರಜೆಗಳ ಸಂರಕ್ಷಣೆಮಾಡಲು ಯೋಗ್ಯನಾಗಿದ್ದನು. ಜನರ ಸಂರಕ್ಷಣೆ ಯಲ್ಲಿ, ಉರುವೀರ್ಯಪರಾಕ್ರಮದಲ್ಲಿ ಸಮರ್ಥನಾದ ಯುವಕನಾಗಿ, ಯೌವನದ ಕಾಂತಿ ಯಿಂದ ಶೋಭಿಸುತ್ತಿರುವ ನಿಷಧನಿಂದ ಅವನ ಪಿತನು ನಲಿದನಂದು. ಸರಿಯಾಗಿ ಕಾಲ ಕಾಲಕ್ಕೆ (ಸುವೃಷ್ಟಿಯೋಗದೊಳು) ಮಳೆ ಬರಲು ಫಲೋನ್ಮುಖಿಯಾಗಿ ಬೆಳೆಯನ್ನು

ಕೊಡುವಂತೆ ಧರಣಿಯು ಸಸ್ಯಶ್ಯಾಮಲತೆಯಿಂದ ಶೋಭಿಸುವಂತೆ ಅವನದು ಜೀವಲೋಕ ಸ್ಫುರಿಸಿತು. ಬಾನಲ್ಲಿ ದೇವತೆಗಳು, ಇಳೆಯಲ್ಲಿ ಜನರು ನಲಿದರು. ಇಳೆಯೆಲ್ಲ ಬೆಳೆಯಿಂದ ಸೊಂಪೇರಿ, ತಂಪೇರಿ, ಕಂಪೇರಿ ಬೆಳಕಾಯಿತು. ಜೇನು ಸುರಿವ, ಹಾಲು ಹರಿವ ದಿವು ಭೂಮಿಗಿಳಿದಂತೆ. ಅಭಿವೃದ್ಧಿಯ ಪಥದಲ್ಲಿ ಭಾರತದೇಶ ಸಾಗಿತು. ಸಸ್ಯವೇ ದೇಶದ ನಿಜವಾದ ಸಂಪದವಲ್ತೆ. ಸಸ್ಯವೇ ಜೀವಲೋಕದ ಜೀವ ಎಂಬುದು ಲೋಕೋಕ್ತಿ.

ಉರುವೀರ್ಯೇಣಾತಿ=ಪರಾಕ್ರಮೇಣ—ಅತ ಏವ ಪ್ರಜಾಯ್ಯೈ=ಲೋಕರಕ್ಷಣಾರ್ಥ—ಸುವೃಷ್ಟಿಯೋಗಾತ್ಸುಪತಿಫಲೋನ್ಮುಖೇನ=ಪಾಕೋನ್ಮುಖೇನ—ಸಸ್ಯೇನ ಜೀವಲೋಕ ಇವ ॥

3. ಶಬ್ದಾದಿ ನಿರ್ವಿಶ್ಯ ಸುಖಂ ಚಿರಾಯ ।
ತಸ್ಮಿನ್ ಪ್ರತಿಷ್ಠಾಪಿತ ರಾಜಶಬ್ದಃ ॥
ಕೌಮುದ್ವತೇಯಃ ಕುಮುದಾವದಾತೈಃ ।
ದ್ಯಾಮರ್ಜಿತಾಂ ಕರ್ಮಭಿರಾರುರೋಹ ॥ ೩ ॥

ಕುಮುದ್ವತಿಯ ಸತ್ಪುತ್ರನಾದ ಅತಿಥಿಮಹಾರಾಜನು ಬಹುಕಾಲ ಇಳೆಯನ್ನು ಆಳಿದನು. ಶಬ್ದಸ್ಪರ್ಶಾದಿ ಇಂದ್ರಿಯಸುಖವನ್ನು ಅನುಭವಿಸಿದ ಸಂಸಾರಸಾರೋದಯನು. ಮುಪ್ಪು ಆಡಸಲು ಸಾಮ್ರಾಜ್ಯದ ಭಾರವನ್ನು ಮಗನಾದ ನಿಷಧನಿಗೆ ಒಪ್ಪಿಸಿ ತಾನು ರಾಜಪದವಿಯನ್ನು ಸಾರ್ಥಕಗೊಳಿಸಿದನು. ತಾನು ಅಶ್ವಮೇಧಾದಿಯಾಗ, ನಾನಾ ದಾನಾದಿಸತ್ಕರ್ಮಗಳಿಂದ ಗಳಿಸಿದ ಪುಣ್ಯಫಲದಿಂದ ವಿರಾಜಮಾನನಾಗಿ ಸ್ವರ್ಗಲೋಕವನ್ನು ಅಡರಿದನು. ಅವನ ಕೀರ್ತಿ ಬಿಳಿಯ ತಾವರೆಯಂತೆ (ಪುಂಡರೀಕದಂತೆ) ದಶದಿಶೆಗಳಲ್ಲಿ, ದಿಕ್ಕುದಿಕ್ಕುಗಳಲ್ಲಿ ಪ್ರಕಾಶಿಸಿತು. ಅವನು ನಾಕಲೋಕಕ್ಕೆ ಸಂದನು (ಪಂಚತ್ವವನ್ನು ಹೊಂದಿದನು).

ಶಬ್ದಾದಿ = ಶಬ್ದಸ್ಪರ್ಶಾದಿ ಇಂದ್ರಿಯಸುಖ—ಸುಖಂ = ಸುಖಸಾಧನಂ—ವಿಷಯವರ್ಗ = ನಿರ್ವಿಷಯೋಪಭುಜ್ಯ ಚಿರಾಯ—ತಸ್ಮಿನ್ ನಿಷಧಾಖ್ಯೇ ಪುತ್ರೇ, ಪ್ರತಿಷ್ಠಾಪಿತ ರಾಜ ಶಬ್ದೋ = ದತ್ತರಾಜ್ಯಃ ಸನ್ ಕುಮುದಾವದಾತೈ=ನಿರ್ಮಲೈಃ ಕರ್ಮಭಿರಶ್ವಮೇಧಾದಿಭಿ ರರ್ಜಿತಾಂ=ಸಂಪಾದಿತಾಂ ದ್ಯಾಂ ಸ್ವರ್ಗಮ್—ಆರುರೋಹ ॥

4. ಪೌತ್ರಃ ಕುಶಸ್ಯಾಪಿ ಕುಶೇಶಯಾಕ್ಷಃ ।
ಸಸಾಗರಾಂ ಸಾಗರಧೀರಚೇತಾಃ ॥
ಏಕಾತಪತ್ರಾಂ ಭುವಮೇಕವೀರಃ ।
ಪುರಾರ್ಗಲಾ ದೀರ್ಘಭುಜೋ ಬುಭೋಜ ॥ ೪ ॥

ಕುಶನ ಮೊಮ್ಮಗನಾದ (ಕುಶಪೌತ್ರ) ಕುಶೇಶಯಾಕ್ಷನು ಏಕೈಕವೀರನು. ಅಸಹಾಯ ಶೂರನು. ಕಮಲದ ಹೂವಿನಂತಹ ಕಣ್ಣುಳ್ಳವನು. ಅವನು ಸಮುದ್ರಗಂಭೀರಚಿತ್ತನು. ಸಮುದ್ರದಂತೆ ವಿಶಾಲವಾದ ಹೃದಯವುಳ್ಳವನು. ಪುರದ ಅಗುಳಿಯಂತಿರುವ ದೀರ್ಘ ಭುಜನು. ಒಂದೇ ಒಂದು ಬೆಳ್ಗೊಡೆಯ ನೆರಳಿನಲ್ಲಿ ಸಪ್ತಸಮುದ್ರವನ್ನು ಆವರಿಸಿರುವ

ವಿಶಾಲವಾದ ಭೂಮಂಡಲವನ್ನು ಆಳಿದನು. ಅವನನ್ನು ವಿಹರಿಸಿದ ಚಕ್ರವರ್ತಿಗಳು ಧರೆಯಲ್ಲಿ ಎಲ್ಲೂ ಇರಲಿಲ್ಲ ಎಂದರೆ ಅತಿಶಯೋಕ್ತಿ ಎನಿಸಲಾರದು (ಏಕಾತಪತ್ರದಿಂದ).

ಪೌತ್ರ ಇತಿ—ಕಂಶೇಶಯಾಕ್ಷಃ=ಶತಪತ್ರಲೋಚನಃ—"ಶತಪತ್ರಂ ಕಂಶೇಶಯಂಮ್" ಇತ್ಯಮರಃ—ಸಾಗರಧೀರಚೇತಾಃ = ಸಮುದ್ರಗಂಭಿರಚಿತ್ತ—ಏಕವೀರೋ=ಅಸಹಾಯ ಶೂರಃ—ಪುರಸ್ಯಾರ್ಗಲಾ = ಕಪಾಟವಿಷ್ಕಂಭಃ—"ತದ್ವಿಷ್ಕಂ ಭೋಽರ್ಗಲಂನನಾ"—ಇತ್ಯಮರಃ—ತದ್ವದ್ದೀರ್ಘಭುಜಃ ಕಂಶಸ್ಯ ಪೌತ್ರೋ ನಿಷಧೋಽಪಿ ಸ ಸಾಗರಾ ಮೇಕಾತಪತ್ರಾಂ ಭುವಂ ಬುಭೋಜ ಪಾಲಯಾಮಾಸ—"ಭುಂಜೋಽನವನೇ" ಇತಿ ನಿಯಮಾತ್ ಪರಸ್ಮೈಪದಮ್—(ಪಾಣಿನಿ) ಬುಭೋಜ = (√ಭುಂಜ್+ಲಿಟ್, ಪ್ರ.ಏ.) ಪಾಲಯಾಮಾಸ = ವಸುಂಧರೆಯನ್ನು ಆಳಿದನು ಪುರಾರ್ಗಲಾದೀರ್ಘಭುಜಃ = ಪುರಸ್ಯ ಅರ್ಗಲಾ (ಷ. ತತ್ಪು.) ಪುರಾರ್ಗಳ ದೀರ್ಘಭುಜನು.

5. ತಸ್ಯಾನಲೌಜಾಸ್ತನಯಸ್ತದಂತೇ ।<br>
ವಂಶಶ್ರಿಯಂ ಪ್ರಾಪ ನಲಾಭಿಧಾನಃ ॥<br>
ಯೋನಡ್ವಲಾನೀವ ಗಜಃ ಪರೇಷಾಂ ।<br>
ಬಲಾನ್ಯಮೃದ್ನಾನ್ನಲಿನಾಭವಕ್ತ್ರಃ ॥ ೫ ॥

ಆ ಕಂಶೇಶಯಾಕ್ಷನ ಬಳಿಕ ಅವನ ಅನ್ವಯಶ್ರೀಯನ್ನು ಇಳಾಧೀಶ್ವರನಾಗಿ ಅನುಭವಿಸಿದವನೆಂದರೆ ನಳನೆಂಬ ನಾಮಧೇಯುಂದ ದೊರೆ. ಅವನಿಗೆ ರಾಜ್ಯಲಕ್ಷ್ಮಿಯು ಪ್ರಾಪ್ತಳಾದಳು. ಅವನು ಇನವಂಶಶ್ರೀಯನ್ನು ಬೆಳಗಿದನು. ತಾವರೆಮೊಗದ ಚೆಲುವ ನವನು. ಪದ್ಮಪತ್ರಾಕ್ಷನು, ನಳಿನನಾಭನಾದ ಮಹಾ ವಿಷ್ಣುವಿನಂತೆ ಮುಖಸೌಂದರ್ಯ ವುಳ್ಳವನು. ಬಲದಲ್ಲಿ ಭೀಮಬಲನು. ಮದ್ದಾನೆಯೊಂದು ನಡ್ವಲವನ್ನು ಅಥವಾ ಬಿದಿರ ಮೆಳೆಯನ್ನು ಲಟಲಟನೆ ಮುರಿಯುವಂತೆ ವೈರಿಬಲವನ್ನು ಚಿಂದಿಮಾಡಿ ಬಿಸುಟವನು. ಅವನ ದಾಳಿಗೆ ವೈರಿಸೇವೆ ತತ್ತರಿಸಿತು. ಅವನು ನಿಷಧರಾಜ್ಯವೆಂಬ ಕೆರೆಯಲ್ಲಿ ಹುಟ್ಟಿರುವ ಜೊಂಡುಹುಲ್ಲನ್ನು ಕಾಡಾನೆಯೊಂದು ತೊತ್ತಳದುಳಿವಂತೆ ತುಳಿದು ವೈರಿ ಬಲವನ್ನು ನಿಗ್ರಹಿಸಿದ ಮಹಾವೀರ, ಅಮಿತಪ್ರತಾಪಿ.

ನಲಾಭಿಧಾನೋ=ನಲಾಖ್ಯಸ್ತಸ್ಯ ನಿಷಧಸ್ಯ ತನಯಸ್ತಸ್ಯ ನಿಷಧಸ್ಯಾಂತೇಽವಸಾನೇ ವಂಶಶ್ರಿಯಂ = ರಾಜ್ಯಲಕ್ಷ್ಮೀಂ ಪ್ರಾಪ—ನಲಿನಾಭವಕ್ತ್ರೋ ಯೋ=ನಲಃ—ಗಜೋ ನಡ್ವಲಾನಿ=ನಡಪ್ರಾಯಸ್ಥಲಾನೀವ-"ನಡಶಬ್ದಾದ್ ಡ್ವಲಚ್" ಇತಿ ಡ್ವಲಚ್ ಪ್ರತ್ಯಯ, (ಪಾಣಿನಿ)—ಪರೇಷಾಂ=ಬಲಾನ್ಯಮೃದ್ನಾನ್ಮರ್ದ—ಅನಲೌಜಾಃ = ಅನಲಸ್ಯ ಓಜ ಇವ ಓಜೋ ಯಸ್ಯ (ಬಹು.) ಸಃ = ಅಗ್ನಿಯ ತೇಜವುಳ್ಳ ಮಹಾನುಭಾವನು—ನಲಿನಾಭವಕ್ತ್ರಃ = ತಾವರೆಮೊಗದವನು, ನಲಿನಸ್ಯ ಆಭಾ ಇವ ಆಭಾ ಯಸ್ಯ ತತ್ ನಲಿನಾಭಂವಕ್ತ್ರಂ ಯಸ್ಯ ಸಃ ॥

6. ನಭಶ್ಚ ಗೀತಯಶಾಃ ಸ ಲೇಭೇ ।<br>
ನಭಸ್ತಲಶ್ಯಾಮತನುಂ ತನೂಜಮ್ ॥

**ಖ್ಯಾತಂ ನಭಃ ಶಬ್ದಮಯೇನ ನಾಮ್ನಾ।**
**ಕಾಂತಂ ನಭೋ ಮಾಸಮಿವ ಪ್ರಜಾನಾಮ್ ॥ ೬ ॥**

ಆ ಮಹಾನಳಭೂಪತಿಗೆ ಮಹಾಯಶಶ್ಶಾಲಿಯಾದ ಪುತ್ರನೋರ್ವನು ಜನಿಸಿದನು. ಅವನ ಕೀರ್ತಿಯನ್ನು ಆಕಾಶಗಾಮಿಗಳಾದ ಗಂಧರ್ವರು ನಭದಲ್ಲಿ ಹಾಡುತ್ತಿದ್ದರು (ನಭಶ್ಚರಸುತಯಶನು). ಅವನು ಆಕಾಶಬಣ್ಣದವನು. ಆಕಾಶದಂತೆ ನೀಲಕಾಯನು. ಮಹಾಯಶನು. ಶ್ರೇಷ್ಠವಾದ ಶ್ರಾವಣಮಾಸದಂತೆ (ನಭೋಮಾಸ = ಶ್ರಾವಣಮಾಸ) ಎಲ್ಲರ ಒಲುಮೆ, ಬಲುಮೆ, ನಲ್ಮೆಯ ಚಿಲುಮೆಯನ್ನು ಗಳಿಸಿದ ಮಹಾಯಶನು. ಅವನು ಭೂವಲಯದಲ್ಲಿ ನಭನಾಮದಿಂದ ಶೋಭಿಸಿದನು.

ನಭಶ್ಚರೈರ್ಗಂಧರ್ವಾದಿಭಿರ್ಗೀತಯಶಾಃ ಸ ನಲೋ ನಭಸ್ತಲಶ್ಯಾಮತನುಂ ನಭಶಬ್ದಮಯೇನ ನಾಮ್ನಾ ಖ್ಯಾತಮ್—ನಭಃ ಶಬ್ದಸಂಜ್ಞಕಮಿತ್ಯರ್ಥಃ—ನಭೋಮಾಸಮಿವ = ಶ್ರಾವಣಮಾಸಮಿವ—ಪ್ರಜಾನಾಂ ಕಾಂತಂ ಪ್ರಿಯಮ್ ತನೂಜಂ ಪುತ್ರಂ ಲೇಭೇ ॥ ನಭಶ್ಚರೈಃ=ನಭಸಿ ಚರನ್ತಿ (ಉಪಪದ ತತ್ಪು.) ಇತಿ ತೇನ ನಭಶ್ಚರಾಃ ಗಂಧರ್ವಾದಯಃ ತೈಃ । ಗೀತಯ—ಯಶಾಃ = ಗೀತಂ ಯಶೋ ಯಸ್ಯ (ಬಹು.) ಸಃ = ಅವನ ಕೀರ್ತಿಯನ್ನು ಗಂಧರ್ವರು ಅಂಬರದಲ್ಲಿ ಹಾಡುತ್ತಿದ್ದರು. ನಭೋಮಾಸಮ್=ಶ್ರಾವಣಮಾಸ.

**7. ತಸ್ಮೈ ವಿಸೃಜ್ಯೋತ್ತರಕೋಸಲಾನಾಂ ।**
**ಧರ್ಮೋತ್ತರಸ್ತತ್ಪ್ರಭವೇ ಪ್ರಭುತ್ವಮ್ ॥**
**ಮೃಗೈರಜರ್ಯಂ ಜರಸೋಪದಿಷ್ಟಂ ।**
**ಅದೇಹಬಂಧಾಯ ಪುನರ್ಬಬಂಧ ॥ ೭ ॥**

ಧರ್ಮಪ್ರಧಾನನಾದ ಆ ನಳಮಹಾರಾಜನು ಸಮರ್ಥನಾದ ನಭನಾಮದ ತನ್ನ ಪ್ರಭವ(ತನ್ನ ಕುಮಾರನಾದ)ನಿಗೆ ತನ್ನ ರಾಜ್ಯಾಧಿಪತ್ಯದ ಆಡಳಿತಸೂತ್ರವನ್ನು ಹಸ್ತಾಂತರಿಸಿದನು. ನಭದಿಂದಲೇ ಎಲ್ಲಾ ತತ್ತ್ವಗಳೂ ಉದಿಸಿಬಂದುವು. ಭೂಮ್ಯಾದಿ ಪಂಚಭೂತಗಳು (ಜಲ, ಅಗ್ನಿ, ವಾಯು, ತೇಜ) ಎಲ್ಲವೂ ಆಕಾಶದಿಂದಲೇ ಉದಿಸಿದುವು (ಆಕಾಶ ತತ್ಪು.) ವಾರ್ಧಕ್ಯವು ಬಂದೊದಗಲು (ಜರೆ) ಆ ರಾಜಕುಲಮೌಳಿಯು ತನ್ನ ಮನಸ್ಸಿನ ಕೇಂದ್ರ ಬಿಂದುವಾದ, ಹೆಮ್ಮೆಯ ಪುತ್ರನಾದ ನಭಕುಮಾರನಲ್ಲಿ ಎಲ್ಲವನ್ನಿರಿಸಿ ತಾನು ಲೌಕಿಕಜೀವನದಿಂದ ನಿವೃತ್ತಿಹೊಂದಲು ಬಯಸಿದನು. ಜರಾಮರಣಬದ್ಧವಾದ ಈ ದೇಹವನ್ನು ಈಡಾಡಿ (ಬಂಧನ) ಮುಕ್ತಿಯನ್ನು ಪಡೆಯಲು ತಪಸಿಗೆ ಹೊರಟನು. ಜರೆ (ಮುಪ್ಪು) ಬಂದಿತೆಂದು ಜಿಂಕೆಗಳ ಸ್ನೇಹವನ್ನು ಬೆಳೆಸಲು ಕಾಡಿಗೆ ನಡೆದನು. ಈ ದೇಹಸಂಬಂಧವನ್ನು (ಹುಟ್ಟುವಿಕೆಯನ್ನು), ಅನುರಾಗಬಂಧನವನ್ನು ಕಳೆದುಕೊಳ್ಳಲು ಅರಣ್ಯಕ್ಕೆ ನಡೆದನು. ದೇಹಸಂಬಂಧದಿಂದ (ಸಂಸಾರ ಬಂಧನದಿಂದ) ಶಾಶ್ವತವಾಗಿ ನಿವೃತ್ತಿಹೊಂದಲು ಬಯಸಿ ತಪಸಿಗೆ ನಡೆದನು.

ಧರ್ಮೋತ್ತರೋ = ಧರ್ಮಪ್ರಧಾನಃ—ನಲಃ ಪ್ರಭವೇ ಸಮರ್ಥಾಯ ತಸ್ಮೈ ನಭಸೇ ತದುತ್ತರ ಕೋಸಲಾನಾಂ ಪ್ರಭುತ್ವಮಾಧಿಪತ್ಯಂ ವಿಸೃಜ್ಯ=ದತ್ತ್ವಾ ಜರಸಾ ಜರಯೋಪದಿಷ್ಟಮ್ — ವಾರ್ಧಕೇ ಚಿಕೀರ್ಷಿತಮಿತ್ಯರ್ಥಃ — ಮೃಗೈರಜರ್ಯಂ ತೈಃ

ಸತಸಂಗತಮ್ । "ಅಜರ್ಯಂ ಸಂಗತಮ್" ಇತಿ ನಿಪಾತಃ (ಪಾಣಿನಿ) ಪುನಃ ದೇಹ ಬಾಧಾಯ ಪುನರ್ದೇಹಸಂಬಂಧನಿವೃತ್ತಯೇ ಬಬಂಧ—ಮೋಕ್ಷಾರ್ಥಂ ವನಂ ಗತ ಇತ್ಯರ್ಥಃ ॥

**8. ತೇನ ದ್ವಿಪಾನಾಮಿವ ಪುಂಡರೀಕೋ ।**
**ರಾಜ್ಞಾಮಜಯ್ಯೋಽಜನಿ ಪುಂಡರೀಕಃ ॥**
**ಶಾಂತೇ ಪಿತರ್ಯಾಹೃತ ಪುಂಡರೀಕಾ ।**
**ಯಂ ಪುಂಡರೀಕಾಕ್ಷಮಿವ ಶ್ರಿತಾ ಶ್ರೀಃ ॥ ೮ ॥**

ನಭನಿಗೆ ಪುಂಡರೀಕನೆಂಬ ಪುತ್ರಶ್ರೇಷ್ಠನು ಜನಿಸಿದನು. ಅವನು ದಕ್ಷಿಣದಿಶಾಭಾಗದಲ್ಲಿ ನೆಲಸಿರುವ ಪುಂಡರೀಕವೆಂಬ ದಿಗ್ಗಜದಂತೆ ಅಜೇಯನು. ಅರಸರೊಳು ಉತ್ತಮನು. ಪುಂಡರೀಕವೆಂಬ ಬಿಳಿಯ ಬಣ್ಣದ ತಾವರೆ ಹೂವನ್ನು ಕೈಯಲ್ಲಿ ಹಿಡಿದು ಮಹಾಲಕ್ಷ್ಮಿಯು ಸರ್ವಗುಣಸಂಪನ್ನನಾದ ಜಗತ್ತಿನ ಸ್ವಾಮಿಯಾದ ಪುಂಡರೀಕಾಕ್ಷನಾದ ಮಹಾವಿಷ್ಣುವಿನ ಬಳಿಸಾರಿದಂತೆ ರಾಜ್ಯಲಕ್ಷ್ಮಿಯೂ ಆ ನಭಕುಮಾರನ ಬಳಿಸಾರ್ದಳು. ತನ್ನ ತಂದೆಯು ಇಹಲೋಕವ್ಯಾಪಾರವನ್ನು ತ್ಯಜಿಸಿದ ಬಳಿಕ ಪುಂಡರೀಕನು ಪಟ್ಟವೇರಿ ಅಧಿಕಾರಸೂತ್ರವನ್ನು ಕೈಯಲ್ಲಿ ಧರಿಸಿ ಪೃಥ್ವಿಯನ್ನು ಸುಸೂತ್ರವಾಗಿ ಆಳಿದನು.

ದಿಗ್ಗಜವಿಶೇಷ ಇವ—ರಾಜ್ಞಾಮಜಯ್ಯೋಃ = ಜೇತುಮಶಕ್ಯಃ—ಕ್ಷಯ್ಯಜಯ್ಯೌ ಶಕ್ಯಾರ್ಥೇ "ಇತಿ ನಿಪಾತನಾತ್ಸಾಧುಃ"—(ಪಾಣಿನಿ) ಪುಂಡರೀಕಃ ಪುಂಡರೀಕಾಖ್ಯಃ ಪುತ್ರೋ ಜನಿ = ಜನಿತಃ—ಆಹೃತ ಪುಂಡರೀಕಾ = ಗೃಹೀತ ಶ್ವೇತಪದ್ಮಾ ಶ್ರೀರ್ಯಂ = ಪುಂಡರೀಕಂ ಪುಂಡರೀಕಾಕ್ಷಂ ವಿಷ್ಣುಮಿವ ಶ್ರಿತಾ — ದ್ವಿಪಾನಾಮಿವ ಪುಂಡರೀಕಃ = ಪುಂಡರೀಕದಿಗ್ಗಜದಂತೆ.

**9. ಸ ಕ್ಷೇಮಧನ್ವಾನಮಮೋಘಧನ್ವಾ ।**
**ಪುತ್ರಂ ಪ್ರಜಾಕ್ಷೇಮವಿಧಾನದಕ್ಷಮ್ ॥**
**ಕ್ಷ್ಮಾಂ ಲಂಭಯಿತ್ವಾ ಕ್ಷಮಯೋಪಪನ್ನಂ ।**
ವನೇ ತಪಃ ಕ್ಷಾಂತತರಶ್ಚಚಾರ ॥ ೯ ॥

ಪಿತನಾದ ಅಮೋಘಧನ್ವನೂ ತಪಕ್ಕೆಂದು ಅರಣ್ಯಕ್ಕೆ ನಡೆದನು. ಅವನ ಪುತ್ರನು ಕ್ಷೇಮಧನ್ವನು. ತನ್ನ ಹೆಸರಿಗೆ ತಕ್ಕಂತೆ ಪ್ರಜೆಗಳ ಕ್ಷೇಮಕ್ಕಾಗಿ ತನ್ನ ಸರ್ವಸ್ವವನ್ನು ತ್ಯಾಗಮಾಡಬಲ್ಲ ಪ್ರಜಾಕ್ಷೇಮ ಸಂರಕ್ಷಣಕ್ಷಮನನು. ಪ್ರಜಾಕ್ಷೇಮದಲ್ಲಿ ಆ ಕುಮಾರನು ದಕ್ಷನು, ಪರಿಣತನು. ಪ್ರತಿಯೊಂದು ಕಾರ್ಯದಲ್ಲೂ ವಿಲಂಬ ತೋರಿಸದೆ ಪ್ರಜಾಕಲ್ಯಾಣಕ್ಕಾಗಿ ತನ್ನ ತನುಮನಧನವನ್ನು ಅರ್ಪಿಸುವ ಅನುಕಂಪಪೂರ್ಣಮನೋಬುದ್ಧಿಯುಳ್ಳವನು. ಪ್ರಜಾರಕ್ಷಣೆಯ ಭಾರವನ್ನು ಮಗನೊಳಿರಿಸಿ ಪಿತನಾದ ಪುಂಡರೀಕನು (ಅಮೋಘಧನ್ವ) ಆತ್ಮಕಲ್ಯಾಣಸಾಧನೆಗೆ. ಸದ್ದುಗದ್ದಲವಿಲ್ಲದ ಶಾಂತಿಸನ್ಮಾರ್ಗಗಳ ಧಾಮವೆನಿಸುವ ಪುಣ್ಯಾಶ್ರಮಗಳ ತಾಣವಾದ ವನಕ್ಕೆ ನಡೆದನು. ತಪವನೆಸಗಲು ನಿಸರ್ಗ ಮಾತೆಯ ಮಡಿಲಿಗೆ ನಡೆದನು. ಪೂರ್ವಜರ ಪಥದಲ್ಲಿ ಸಾಗಿದನು.

ಅಮೋಘಂ ಧನುರ್ಯಸ್ಯ ಸೋಽಮೋಘಧನ್ವಾ—"ಧನುಷಶ್ಚ" ಇತ್ಯನಙ ಆದೇಶಃ ಸಮಾಸಾಂತಃ—ಕ್ಷೇಮವಿಧಾನೇ ದಕ್ಷಂ ಕ್ಷಮಯೋಪಪನ್ನಂ=ಕ್ಷಾಂತಿಯುಕ್ತಂ ಕ್ಷೇಮಂ ಧನುರ್ಯಸ್ಯ ತಂ ಕ್ಷೇಮಧನ್ವಾನಾಂ ನಾಮ ಪುತ್ರಮ್—"ವಾಸಂಜ್ಞಾಯಾಮ್" ಇತ್ಯನಙ ಆದೇಶಃ(ಪಾಣಿನಿ) ಕ್ಷಮಾಂ ಲಂಬಯಿತ್ವಾ=ಪ್ರಾಪಯ್ಯ—ಲಭೇರ್ಗತ್ಯರ್ಥತ್ವಾತ್ ಕರ್ಮಕತ್ವಮ್—ಕ್ಷಾಂತತರೋಽತ್ಯಂತಸಹಿಷ್ಣುಃ ಸನ್ವನೇ ತಪಶ್ಚಚಾರ—ಅಮೋಘ ಧನ್ವಾ=ಅಮೋಘಂ ಧನುರ್ಯಸ್ಯ (ಬಹು.) ಸಃ ॥

10. ಅನೀಕಿನೀನಾಂ ಸಮರೇಽಗ್ರಯಾಯೀ ।
ತಸ್ಯಾಪಿ ದೇವಪ್ರತಿಮಃ ಸುತೋಽಭೂತ್ ॥
ವ್ಯಶ್ರೂಯತಾನೀಕಪದಾವಸಾನಂ ।
ದೇವಾದಿನಾಮತ್ರಿದಿವೇಽಪಿ ಯಸ್ಯ ॥ ೧೦ ॥

ದೇವಸದೃಶನಾದ ಕ್ಷೇಮಧನ್ವನಿಗೆ ದೇವಸದೃಶನಾದ ಪುತ್ರನು ಜನಿಸಿದನು. ಅವನೇ ಪ್ರಖ್ಯಾತನಾದ ದೇವಾನೀಕನು. ಅವನು ಯುದ್ಧದಲ್ಲಿ ಮುಂಚೂಣಿಯಲ್ಲಿ (ಸೇನೆಯ ಅಗ್ರಭಾಗದಲ್ಲಿ) ನಿಂತು ಸೇನೆಯನ್ನು ನಡೆಸಬಲ್ಲ ಧೀಮಂತ ಪಾರ್ಥಿವಾಗ್ರಣಿ. ಅವನ ಕೀರ್ತಿ ಸ್ವರ್ಗ, ಮರ್ತ್ಯ, ಪಾತಾಳ ಎಂಬ ಮೂರು ಲೋಕಗಳಲ್ಲಿ ವ್ಯಾಪಿಸಿ ಅವನು ವಿಶ್ರುತನಾಗಿದ್ದನು. ದೇವಲೋಕದಲ್ಲೂ ಅವನು ಪ್ರಖ್ಯಾತನಾಗಿದ್ದನು. ಅಂತಹ ಸೀಮಾಪುರುಷನು (ಧೀಮಂತಪುರುಷನು) ದೇವಾನೀಕನು. ದೇವಪ್ರತಿಮೆಯಂತೆ ಪೂಜಿಸಬೇಕಾದ ದೇವಮಾನವ, ಗುಣೈಕಸಿಂಧು (ಗುಣರತ್ನಚೂಡಾಮಣಿ), ಮೇರುಸದೃಶ ವ್ಯಕ್ತಿ.

ತಸ್ಯ ಕ್ಷೇಮಧನ್ವನೋಽಪಿ ಸಮರೇ—ಅನೀಕಿನೀನಾಂ ಚಮೂನಾಮಗ್ರಯಾಯೀ ದೇವಪ್ರತಿಮಃ ಇಂದ್ರಾದಿಕಲ್ಪಃ ಸುತೋಽಭೂತ್—ಅನೀಕಪದಾವಸಾನಮನೀಕ ಶಬ್ದಾಂತಂ ದೇವಾದಿದೇವ ಶಬ್ದ ಪೂರ್ವಂ ಯಸ್ಯ ನಾಮ:ದೇವಾನೀಕ ಇತಿ ನಾಮಧೇಯಂ ತ್ರಿದಿವೇ=ಸ್ವರ್ಗೇಽಪಿ ವ್ಯಶ್ರೂಯತ=ವಿಶ್ರುತಮ್–ಅನೀಕಪದಾವಸಾನಂ ದೇವಾದಿನಾಮ = ದೇವಾನೀಕಮ್—ವ್ಯಶ್ರೂಯತ = ವಿ + √ಶ್ರು (ಕರ್ಮವಾಚ್ಯ) ಲಙ್ ॥

11. ಪಿತಾಸಮಾರಾಧನತತ್ಪರೇಣ ।
ಪುತ್ರೇಣ ಪುತ್ರೀ ಸ ಯಥೈವ ತೇನ ॥
ಪುತ್ರಸ್ತಥೈವಾತ್ಮಜವತ್ಸಲೇನ ।
ಸ ತೇನ ಪಿತ್ರಾ ಪಿತೃಮಾನ್ ಬಭೂವ ॥ ೧೧ ॥

ಕ್ಷೇಮಧನ್ವನ ಆತ್ಮಭವನಾದ ದೇವಾನೀಕನು ಸಾಮಾನ್ಯ ಪುತ್ರನಲ್ಲ—ಪುತ್ರರತ್ನನು. ಅವನು ತಂದೆಯ ಶುಶ್ರೂಷೆ ಯೋಗಕ್ಷೇಮವನ್ನು ಓರ್ವ ಪುತ್ರಿಯಂತೆ ನೋಡುತ್ತ ಆದರ್ಶಸುತನೆನಿಸಿದನು (ಅವನು ಮಗನೂ ಹೌದು ಮಗಳೂ ಹೌದು). (ಗಂಡಿಗೆ ಗಂಡು, ಹೆಣ್ಣಿಗೆ ಹೆಣ್ಣು ಎಂಬಂತೆ) ಅಂತಹ ಯೋಗ್ಯಪುತ್ರನಿಗೆ ಕ್ಷೇಮಧನ್ವನು ದಯಾಳುವಾದ, ಮಾತೃಹೃದಯವುಳ್ಳ ತಂದೆಯೂ ಆಗಿದ್ದನು. ಅವನು ಪರಿಪೂರ್ಣನಾದ—ಆದರ್ಶ ತಂದೆ. ಉತ್ತಮನಾದ ಮಗನಿಗೆ ಉತ್ತಮನಾದ ತಂದೆ. ಅವರೀರ್ವರ ಬಾಂಧವ್ಯ ಅತ್ಯಂತ

ನಿಕಟವಾದುದೂ (ಮಧುರವಾದುದೂ). ಪ್ರೀತಿನಿರ್ಭರ ಪಿತ. ಸೇವಾತತ್ಪರ ಪುತ್ರ. ಎಂತಹ ಸಾಮರಸ್ಯ (ಹಲವರೇಕೆ, ಒಬ್ಬ ಸಾಕು ಕುಲಕೆ ರತುನನು ಎಂಬಂತೆ).

ಸ ಪಿತಾ=ಕ್ಷೇಮಧನ್ವಾ ಸಮಾರಾಧನತತ್ಪರೇಣ=ಶುಶ್ರೂಷಾತತ್ಪರೇಣತೇನ ಪುತ್ರೇಣ ಯಥೈವ ಪುತ್ರೀಬಭೂವ ತಥೈವ ಸ ಪುತ್ರೋ=ದೇವಾನೀಕ ಆತ್ಮಜವತ್ಸಲೇನ ತೇನ ಪಿತ್ರಾಪಿ ತೃಮಾನ್ ಬಭೂವ—ಲೋಕೇ ಪಿತೃತ್ವಪುತ್ರತ್ವಯೋಃ ಫಲಮನಯೋರೇವ ಸೀದಿತ್ಯರ್ಥಃ—ಪಿತೃಮಾನ್=ಪ್ರಶಸ್ತಪಿತೃಕಃ ॥

12. ಪೂರ್ವಸ್ತಯೋರಾತ್ಮಸಮೇ ಚಿರೋಢಾಂ ।
ಆತ್ಮೋದ್ಭವೇ ವರ್ಣಚತುಷ್ಟಯಸ್ಯ ॥
ಧುರಂ ನಿಧಾಯೈಕನಿಧಿರ್ಗುಣಾನಾಂ ।
ಜಗಾಮ ಯಜ್ವಾ ಯಜಮಾನಲೋಕಮ್ ॥ ೧೨ ॥

ಆ ಗುಣನಾಮ ಏಕನಿಧಿಯಾದ ಕ್ಷೇಮಧನ್ವನು ತನ್ನ ಆತ್ಮಭವನ ಕೈಗೆ ದಿಗಂತದ ತನಕ ಹರಡಿರುವ ವಿಶಾಲವಾದ ಭಾರತಸಾಮ್ರಾಜ್ಯವನ್ನು ದೇವಾನೀಕನ ಕೈಗಿತ್ತು ತಾನು ತ್ಯಾಗಿಗಳು, ವಿರಕ್ತಗಳು, ಸಮಾಜಸೇವಾ ಧುರಂಧರರು,ಯಜ್ಞಯಾಗಾದಿಗಳನ್ನು ಮಾಡಿದ ಪುಣ್ಯಫಲದಿಂದ ದೊರೆಯುವ ಸ್ವರ್ಗಲೋಕಕ್ಕೆ (ಪುಣ್ಯಲೋಕಕ್ಕೆ) ತೆರಳಿದನು. ಆ ಗುಣ ನಿಧಿಯಾದ ಪುತ್ರವರೇಣ್ಯನು ಚತುರ್ವರ್ಣದ ಜನರಿರುವ ಪ್ರಜಾಕೋಟಿಗೆ ಯಜಮಾನ ನಾಗಿ ನಿಂತನು. ಪ್ರಜಾರಕ್ಷಕನಾಗಿ, ಪ್ರಜಾಪಾಲಕನಾಗಿ, ಪ್ರಜಾರಂಜಕನಾಗಿ, ಪ್ರಜೆಗಳ ವಿಭುವಾಗಿ, ಪ್ರಭುವಾಗಿ ಭೂಲೋಕದಲ್ಲಿ ರಂಜಿಸಿದನು.

ಆತ್ಮೋದ್ಭವೇ=ಪುತ್ರೇ ದೇವಾನೀಕೇ ಚಿರೋಢಾಂ=ಚಿರಂ ಧೃತಾಂ ವರ್ಣಚತುಷ್ಟಯಸ್ಯ ಧುರಂ ರಕ್ಷಾಭಾರಂ=ನಿಧಾಯ ಯಜಮಾನಲೋಕಂ ಯಜ್ವ ಲೋಕಂ ನಾಕಂ ಜಗಾಮ—ಯಜಮಾನಲೋಕಂ = ಯಜಮಾನಾನಾಂ (ಊರ್ಧ್ವ) ಲೋಕಮ್ = ಯಜ್ಞಯಾಗ ಮಾಡಿದವರಿಗೆ ಸಿಗತಕ್ಕ ನಾಕಲೋಕ.

13. ವಶೀಸುತಸ್ತಸ್ಯ ವಶಂ ವದತ್ವಾತ್ ।
ಸ್ವೇಷಾಮಿವಾಸೀದ್ವಿಷತಾಮಪೀಷ್ಟಃ ॥
ಸಕೃದ್ವಿವಿಗ್ನಾನಪಿ ಹಿ ಪ್ರಯುಕ್ತಂ ।
ಮಾಧುರ್ಯಮೀಷ್ಟೇ ಹರಿಣಾನ್ ಗ್ರಹೀತುಮ್ ॥ ೧೩ ॥

ಆ ನೃಪಕುಮಾರಕನು (ದೇವಾನೀಕ) ಜಿತೇಂದ್ರಿಯನು. ತನ್ನನ್ನು ಅಂದರೆ ತನ್ನ ಇಂದ್ರಿಯಂಗಳನ್ನು ಗೆದ್ದವನು. ಗುಣಭೂಷಣನು (ಗುಣಾಭರಣನು). ಸಾಹಸವಿಕ್ರಮನು. ತನ್ನ ಇನಿದಾದ ಮಾಧುರ್ಯಪೂರ್ಣವಾದ ಮಾತಿನಿಂದ ತನ್ನವರನ್ನು, ತನ್ನ ವೈರಿ ಗಳನ್ನು ತನ್ನವರನ್ನಾಗಿ ಮಾಡಿಕೊಂಡಿದ್ದನು. ಮಾತಿನಿಂದಲೆ ಇಹವು ಮಾತಿನಿಂದದಲೆ ಪರವು ಮಾತೆ ಮಾಣಿಕವು ಸರ್ವಜ್ಞ ಎಂಬಂತೆ. ಮಾತು ಬಲ್ಲವನಿಗೆ ಜಗಳವಿಲ್ಲ, ಊಟ ಬಲ್ಲವನಿಗೆ ರೋಗವಿಲ್ಲವೆಂಬ ನುಡಿಮುತ್ತಿನಂತೆ, ಅವನು ಮಾತಿನ ಮೋಡಿಯಿಂದ ಎಲ್ಲರನ್ನೂ (ವಿಶ್ವವನ್ನೇ) ವಶಮಾಡಿಕೊಂಡ ಧೀಮಂತನು (ಖಡ್ಗಕ್ಕಿಂತ ಲೇಖನಿ

ವಿಂಗಿಲು ಎಂಬಂತೆ). ಮಧುರವಾದ, ಮಾಧುರ್ಯನಾದ ಹೊಮ್ಮುವ ಅದ್ಭುತಗಾನದಿಂದ ಕಾಡಿನ ಸಾಧುಪ್ರಾಣಿಗಳಾದ ಜಿಂಕೆವಿಂಡು ಮೊದಮೊದಲು ಅಂಜಿ ಓಡಿದರೇನಾಯಿತು. ಆಮೇಲೆ ತಾನಾಗಿ ವಶವಾಗಿ ಬಳಿಗೆ ಬರದಿಹುದೆ ? ಅಂತೆಯೇ ಮಾನವರೆಲ್ಲರನ್ನು ತನ್ನ ಅಂಕಿತವಲ್ಲಿಟ್ಟುಕೊಂಡು ಸುಸಾಂಗವಾಗಿ ನಾಡನ್ನು ಆಳತೊಡಗಿದನು. ಎಲ್ಲರ ಹಿತವನ್ನು ಸಾಧಿಸಿ ತನ್ನ ಬದುಕನ್ನು ಸಾರ್ಥಕಗೊಳಿಸಿದ ಮಹಾನ್ ನೇತಾರನು (ಮಹಾನ್ ನಾಯಕ).

ತಸ್ಯ=ದೇವಾನೀಕಸ್ಯ ವಶೀ=ಸಮರ್ಥಃ ಸುತೋಽಹೀನಗುರ್ನಾಮೇತಿ ವಕ್ಷ್ಯಮಾಣ ನಾಮಕಃ—ವಶಂ ವಶಕರಂ ಮಧುರಂ ವದತೀತಿ ವಶಂವದಃ—"ಪ್ರಿಯವಶೇವದಃ ಖಚ್" ಇತಿ ಖಚ್ ಪ್ರತ್ಯಯಃ (ಪಾಣಿನಿ) ತಸ್ಯ ಭಾವಸ್ತ ತತ್ತ್ವಮ್—ಅರ್ಥಾರ್—ದೇವಾನೀಕ ನಿರ್ಧಾರಣಂ ಲಭ್ಯತೇ—ತಥಾ ಹಿ—ಪ್ರಯುಕ್ತವಚಶ್ಚಾರಿತಂ ಮಾಧುರ್ಯಂ ಸಕೃದೇಕವಾರಂ ವಿವಿಗ್ನಾನ್ ಹರಿಣಾನ್ ಗ್ರಹೀತುಂ ವಶೀ ಕರ್ತುರ್ಭೀಷ್ಟೇ=ಶಕ್ನೋತಿ—ವಶಂ ವದತ್ವಾತ್ = ವಶಂ ವದತೀತಿ ವಶಂವದಃ—ತಸ್ಯಭಾವಃ, ತತ್ತ್ವಮ್, ತಸ್ಮಾತ್= ಇನಿದಾದ ಮಾಧುರ್ಯದ ಮಾತುಗಳಿಂದ, ವಿವಿಗ್ನಾನ್ = ಭೀತಾನ್ = ಭಯಗ್ರಸ್ತ ||

14. ಅಹೀನಗುರ್ನಾಮ ಸಗಾಂ ಸಮಗ್ರಾಂ |
ಅಹೀನಬಾಹುದ್ರವಿಣಃ ಶಶಾಸ ||
ಯೋ ಹೀನಸಂಸರ್ಗಪರಾಙ್ಮುಖತ್ವಾತ್ |
ಯುವಾಪ್ಯನರ್ಥೈರ್ವ್ಯಸನೈರ್ವಿಹೀನಃ || ೧೪ ||

ಆ ದೇವಾನೀಕನ ಸುತನು ಅಹೀನಗು ಎಂಬ ಸದ್ಗುಣಿ. ಅವನು ತನ್ನ ಯೌವನದಲ್ಲಿ ಸದ್ವರ್ತದಿಂದ, ದುಷ್ಟವ್ಯಸನಗಳಿಂದ ದೂರವಿದ್ದು, ಸ್ವಚ್ಛವಾದ ಆಡಳಿತೆಯನ್ನು ಜನರಿಗೆ ಕೊಟ್ಟವನು. ಅವನು ಮೌಲ್ಯಾಧಾರಿತ ರಾಜಕಾರಣಿ. ಸತ್ಕರ್ಮಗಳಿಂದ ಜನಮನಗಳನ್ನು ಗೆದ್ದ ಮಹಾನುಭಾವನು. ಅವನು ಅಹೀನಭುಜಬಲವಿಕ್ರಮನು. ಅನಂತ ವೀರ್ಯ, ಕಾರ್ಯದಕ್ಷ. ಕೆಟ್ಟ ಗುಣಗಳು ಅವನನ್ನು ಸೋಂಕುವಂತಿಲ್ಲ. ಹೀನಸಂಗತ್ಯಾಗದಿಂದ, ಅರ್ಥವ್ಯಸನ, ಹೆಣ್ಣು, ಜೂಜು, ಕುಡಿತ, ಮಣ್ಣಿಗೆ ಆಸೆಪಡದೆ ತ್ಯಾಗಬುದ್ಧಿಯಿಂದ ಮಹೀತಲಸಮಸ್ತವನ್ನು ಬಹುಕಾಲ ಆಳಿದನು. ಹೇಗೆ ನಾಗೇಂದ್ರನಾದ ಆದಿಶೇಷನು ಧರೆಯನ್ನು ತನ್ನ ಹೆಡೆಯಮೇಲೆ ಆಧರಿಸಿ ನಿಂತಂತೆ ಅಹೀನಗು ರಾಜಕುಮಾರನು ತನ್ನ ಬಾಹುಬಲದಿಂದ ನಿರಾತಂಕವಾಗಿ ಆಳುತ್ತಿದ್ದನು. ಅಂದಿನ ಭಾರತವು ಭೂಸ್ವರ್ಗವಾದ ದೇವರಾಜ್ಯವಾಗಿತ್ತು.

"ದ್ರವಿಣಂ ಕಾಂಚನಂ ವಿತ್ತಂ ದ್ರವಿಣಂ ಚ ಪರಾಕ್ರಮಃ"—ಇತಿ ವಿಶ್ವಃ—ಹೀನಸಂಪರ್ಗಪರಾಙ್ಮುಖತ್ವಾನ್ನೀಚಸಂಸರ್ಗವಿಮುಖತ್ವಾದ್ಧೇತೋರ್ಯುವಾಽಪ್ಯನರ್ಥೈರನರ್ಥಕರೈರ್ವ್ಯಸನೈಃ=ಪಾನದ್ಯೂತಾದಿಭಿರ್ವಿಹೀನೋ ರಹಿತೋ ಯೋಽಹೀನಗುರ್ನಾಮ ಸ ಪೂರ್ವೋಕ್ತೋ ದೇವಾನೀಕಸುತಃ ಸಮಗ್ರಾಂ=ಸರ್ವಾಂಗಾಂ ಭುವಂ ಶಶಾಸ ||

ಅಹೀನಗುಃ = ಅಧಿಕತೇಜಾಃ—ಅಹೀನಬಾಹುಬಲಂ ದ್ರವಿಣಂ ಯಸ್ಯ (ಬಹು.) ಸಃ = ಭುಜಬಲವಿಕ್ರಮನು—ಅಹೀನಗುಃ = ಅಹೀನಾಮ್ ಇನಃ (ಷ. ತತ್ಪು). ಅಹೀನಃ,

ತಸ್ಯೇವ ಬಾಹುರ್ದ್ರೂಪಿಣಂ ಯಸ್ಯ (ಬಹು.) ಸಃ = ಬಾಹುಬಲದಿಂದ ನಾಗರಾಜನಂತೆ ಬಲಯುತನು (ಸ್ವಶಕ್ತಿಯಿಂದ ಆಳುತ್ತಿದ್ದನು).

**15. ಗುರೋಃ ಸ ಚಾನಂತರಮಂತರಜ್ಞಃ ।**
**ಪುಂಸಾಪುಮಾನಾದ್ಯ ಇವಾವತೀರ್ಣಃ ।**
**ಉಪಕ್ರಮೈರಸ್ಖಲಿತೈಶ್ಚತುರ್ಭಿಃ ।**
**ಚತುರ್ದಿಗೀಶಃ ಚತುರೋ ಬಭೂವ** ॥ ೧೫ ॥

ಅಹೀನಗು ಚಕ್ರವರ್ತಿ ವಿಚಾರವಾದಿ, ಮನೋವಿಜ್ಞಾನಿ. ಇತರರ ಅಭಿಪ್ರಾಯವನ್ನು ಹೇಳದೆಯೇ ತಟ್ಟನೆ ಊಹಿಸಬಲ್ಲನು. ಪಾರದರ್ಶಕಗುಣವುಳ್ಳ ಮಹಾತ್ಮನು. ಸರಿಯಾದ ನಿಟ್ಟಿನಲ್ಲಿ ಹೊಸ ಹೆಜ್ಜೆಯಿಟ್ಟು, ಇತರರನ್ನೂ ನಡೆಸಬಲ್ಲ ಪುರುಷಸಿಂಹ(ರಾಜಸಿಂಹ)ನು. ಅವನನ್ನು ಜಯಶ್ರೀ ಬಿಟ್ಟಿರಲಾರಳು. ಅವನಿಗೆ ಅಪಜಯದ ಸೋಂಕು ತಟ್ಟದು. ಪೂರ್ವಭಾವಿ ವಿಚಾರಚತುರನು (ವಿಚಕ್ಷಣನು, ಚಾಣಾಕ್ಷನು) ಚತುರ್ವರ್ಗವನ್ನು ಧರ್ಮಪಥದಲ್ಲಿ ಮುನ್ನಡೆಸಿ ಸುಖೀರಾಜ್ಯದತ್ತ ನಡೆಸಿದ ಸತ್ವಶಾಲಿಯಾದ ರಾಜಕಾರಣಿ. ಮಂತ್ರಿಗಳ ಪರೀಕ್ಷೆ, ಧರ್ಮಪರೀಕ್ಷೆ, ಅಧಿಕಾರವರ್ಗದ ಪರೀಕ್ಷೆ ನಡೆಸಬಲ್ಲ ಅಂತರಜ್ಞ. ಧರ್ಮಪದ, ಅರ್ಥಪದ, ಕಾಮಪದಗಳಲ್ಲಿ ಜನರು ಭಾಗವಹಿಸುವಂತೆಮಾಡಿ ಅವರನ್ನು ಸಂತುಷ್ಟರನ್ನಾಗಿ, ತೃಪ್ತರನ್ನಾಗಿ ಮಾಡಿ ಚತುರೋಪಾಯದಿಂದ ಧರೆಯನ್ನು ಪಾಲಿಸಿದ ಮಹಾಚತುರ. ಆದಿಪುರುಷನಾದ ವಿಷ್ಣುವಿನಂತೆ ಅವತರಿಸಿ ಆದಿಮೂಲನಾದ ಮಹಾವಿಷ್ಣುವೋ ಎಂಬಂತೆ ಗುಣಗ್ರಾಹಿಯಾದ, ಕೀರ್ತಿಶೇಷನಾದ ಭಾರತದ ಘನ ಸಾಮ್ರಾಟ.

ಪುಂಸಾಮಂತರಜ್ಞೋ=ವಿಶೇಷಜ್ಞಶ್ಚತುರೋ=ನಿಪುಣಃ—ಅವತೀರ್ಣೋ = ಭುವಂ ಪ್ರಾಪ್ತ ಆದ್ಯಃ ಪುಮಾನ್ ವಿಷ್ಣುರಿವ—ಅಸ್ಖಲಿತೈರಪ್ರತಿಹತೈಶ್ಚತುರ್ಭಿರುಪಕ್ರಮೈಃ =ಸಾಮಾದ್ಯುಪಾಯೈಃ—ಸಾಮಾದಿಭಿರುಪಕ್ರಮೈಃ'' ಇತಿ ಮನುಃ—ಚತುರ್ದಿಗೀಶಶ್ಚತಸೃಣಾಂ ದಿಶಾಮೀಶೋ ಬಭೂವ'' ಅಂತರಜ್ಞಃ=ಅಂತರಂ ಜಾನಾತೀತಿ (ಉಪಪದತತ್ಪು.) = ಪುರುಷರ ಅಂತರ್ಯವನು ತಿಳಿದವನು. ಚತುರ್ಭಿಃ ಉಪಕ್ರಮೈಃ = ಸಾಮ ಧಾನ, ಭೇದ, ದಂಡಗಳೆಂಬ ಚತುರೋಪಾಯಗಳನ್ನು ಬಲ್ಲ ರಾಜ್ಯಾಡಳಿತಚತುರ.

**16. ತಸ್ಮಿನ್ ಪ್ರಯಾತೇ ಪರಲೋಕಯಾತ್ರಾಂ ।**
**ಜೇತರ್ಯರೀಣಾಂ ತನಯಂ ತದೀಯಮ್ ॥**
**ಉಚ್ಚೈಃಶಿರಸ್ತ್ವಜ್ಜಿತ ಪಾರಿಯಾತ್ರಾಂ ।**
**ಲಕ್ಷ್ಮೀಃ ಸಿಷೇವೇ ಕಿಲ ಪಾರಿಯಾತ್ರಮ್** ॥ ೧೬ ॥

ಅಹೀನಗು ರಾಜನು ಪರಲೋಕಯಾತ್ರೆಯನ್ನು ಮಾಡಲು ಅವನ ಪುತ್ರನಾದ ಪಾರಿಯಾತ್ರನನ್ನು ರಾಜ್ಯಲಕ್ಷ್ಮಿಯು ಬಳಿಸಾರ್ದಳು. ಅವನ ಸಾಮ್ರಾಜ್ಯವು ಪಾರಿಯಾತ್ರ ಪರ್ವತಪ್ರದೇಶವನ್ನು ಒಳಗೊಂಡಿತ್ತು. ಅವನು ತನ್ನ ಮಸ್ತಕೋನ್ನತಿಯಿಂದ ಬಹಳ ಎತ್ತರದ ಆ ಪಾರಿಯಾತ್ರಪರ್ವತಶಿಖರದಂತೆ ರಾರಾಜಿಸುತ್ತ, ಸುತ್ತುಮುತ್ತಲಿನ

ಪ್ರದೇಶವಾದ ಸಿವಾಲಿಕ್ ಪರ್ವತಶ್ರೇಣಿಯ ತನಕ ರಾಜ್ಯವನ್ನು ವಿಸ್ತರಿಸಿ ಪಾರಿಯಾತ್ರ ವಿಜೇತನೆನಿಸಿದನು. ಅವನು ಕರೂಷ, ಮಾಲವ, ಪಾರಿಯಾತ್ರರ ಅಧಿರಾಜನೆನಿಸಿ ಆಳ್ದನು. ಅದರಿಂದ ಅವನಿಗೆ ಪಾರಿಯಾತ್ರನೆಂಬ ಅನ್ವರ್ಥನಾಮು ಸರಿದೂಗುತ್ತಿದ್ದು, ಸಾರ್ಥಕ ವೆನಿಸುತ್ತಿದೆ. ಪಾರಿಯಾತ್ರಪರ್ವತಪ್ರದೇಶಕ್ಕೆ ಸುಂದರ ಪರ್ವತವಲಯವು ಸೇರಿದೆ. ಅಲ್ಲಿ ಹಿಮಾಲಯದ ಒಳ್ಳೆಯ ಮರಮಟ್ಟುಗಳು, ದೇವದಾರು ಇತ್ಯಾದಿ ವೃಕ್ಷಗಳು ವಿಪುಲ ವಾಗಿ ಬೆಳೆಯುತ್ತಿವೆ. ಆ ಪಾರಿಯಾತ್ರನು ಸಕಲ ಪುರುಷಲಕ್ಷಣದಿಂದ ಶೋಭಿಸುತ್ತ, ತನ್ನ ಮಸ್ತಕೋನ್ನತಿಯಿಂದ ಸ್ವತಃ ಇವನೇ ಪಾರಿಯಾತ್ರನೋ ಎಂಬಂತೆ ಬಹುಶ್ರುತನಾಗಿ ದ್ದನು. ಇನ್ನು ಕೆಲವು ಪುರಾಣಗಳ ಆಧಾರದಂತೆ ಪಶ್ಚಿಮವಿಂಧ್ಯಾಪರ್ವತಸಾಲಿಗೆ ಸೇರಿದ ಅರಾವಳೀ ಪರ್ವತಸಾಲಿಗೆ ಪಾರಿಯಾತ್ರವೆಂಬ ಹೆಸರೂ ಬಂದಿರುವುದನ್ನು ನಾವು ಇಲ್ಲಿ ಸ್ಮರಿಸಬಹುದಾಗಿದೆ.

ಅರೀಣಾಂ ಜೇತರಿ ತಸ್ಮಿನ್ನಹೀನಗೌ ಪಲೋಕಯಾತ್ರಾಂ ಪ್ರಯಾತೇ ಪ್ರಾಪ್ತೇ ಸತಿ—ಉಚ್ಚೈಃಶಿರಸ್ತ್ವಾದುನ್ನತಶಿರಸ್ಕತ್ವಾಜ್ಜಿತಃ ಪಾರಿಯಾತ್ರಃ ಕುಲಶೈಲವಿಶೇಷೋ ಯೇನ ತಂ ಪಾರಿಯಾತ್ರಂ=ಪಾರಿಯಾತ್ರಾಖ್ಯಂ ತದೀಯಂ ತನಯಂ ಲಕ್ಷ್ಮೀಃ=ರಾಜ್ಯ ಲಕ್ಷ್ಮೀಃ ಸಿಷೇವೇ ಕಿಲ ॥

ಉದಾರಶೀಲಃ = ಉದಾರಂ ಶೀಲಂ ಯಸ್ಯ (ಬಹು.) ಸಃ=ಉದಾರ ಗುಣಯುತನು. ಜಿತಾರಿಪಕ್ಷಃ = ಜಿತಃ ಅರೀಣಾಂ ಪಕ್ಷಃ ಯೇನ (ಬಹು.) ಸಃ = ವೈರಿಗಳನ್ನು ಗೆದ್ದವನು. ಶಾಲೀನತಾ = ಸಜ್ಜನತಾ = ಶಾಲೀನತೆಯುಳ್ಳಾತವನು = ಸಜ್ಜನ, ಸುಜನ.

17\. ತಸ್ಯಾಭವತ್ಸೂನುರುದಾರಶೀಲಃ ।
ಶಿಲಃ ಶಿಲಾಪಟ್ಟವಿಶಾಲವಕ್ಷಾಃ ॥
ಜಿತಾರಿಪಕ್ಷೋಽಪಿ ಶಿಲೀಮುಖೈರ್ಯಃ ।
ಶಾಲೀನತಾಮವ್ರಜದೀಡ್ಯಮಾನಃ ॥ ೧೭ ॥

ಆ ಪಾರಿಯಾತ್ರನ ಮಗನೇ ಉದಾರಚರಿತನಾದ, ಯುದ್ಧಕಲೆಯಲ್ಲಿ ನಿಷ್ಣಾತನಾದ ಶಿಲನು. ಶಿಲಾಫಲಕದಂತಹ, ಅಗಲವಾದ ಎದೆಯುಳ್ಳವನು. ಅಂಗಸೌಷ್ಠವದಿಂದ ಎದ್ದುಕಾಣುವ ಪ್ರಕೃತಿಯುಳ್ಳವನು. ಗಟ್ಟಿಮುಟ್ಟಾದ ದೇಹದವನು. ತನ್ನ ಬಾಣಾವಳಿಯಿಂದ (ಬಾಣಮುಖದಿಂದ, ಶಿಲೀಮುಖದಿಂದ) ವೈರಿಗಳನ್ನು (ಅರಿಗಣವನ್ನು) ಗೆಲ್ದವನು. ಆದರೆ ಸಜ್ಜನಿಕೆಗೆ, ಉದಾರಗುಣಕ್ಕೆ, ಸೌಜನ್ಯತೆಗೆ ಹೆಸರಾದ ಉದಾರಶೀಲನು. ತನ್ನ ಗುಣಾವಳಿಗಳನ್ನು ಹೊಗಳುವವರಿಗೆ ಕೇಳಿದ್ದನ್ನು ಕೊಡತಕ್ಕವನು. ಶಾಲೀನತೆಯನ್ನು ತೋರತಕ್ಕವನು. ಲಜ್ಜಾಶೀಲನು. ನಾಚಿಕೆಯ ಸ್ವಭಾವದವನು. ಸಜ್ಜನಬಂಧು. ಸಾತ್ವಿಕರ ಸಿಂಧು. (ಸ್ವರ್ಗವೆನಿಸಿದ) ಭಾರತದ ಮಹಾಜನಸಾಮ್ರಾಟನು.

ಉದಾರಶೀಲೋ=ಮಹಾವೃತ್ತಃ "ಶೀಲಂ ಸ್ವಭಾವೇ ಸದ್ವೃತ್ತೇ" ಇತ್ಯಮರಃ— ಶಿಲಾಪಟ್ಟವಿಶಾಲವಕ್ಷಾಃ. ಶಿಲಃ=ಶಿಲಾಖ್ಯಃ ಸೂನುರಭವತ್—ಯಃ ಸೂನುಃ ಶಿಲೀ ಮುಖೈರ್ಬಾಣೈಃ—"ಅಲಿಬಾಣೌ ಶಿಲೀಮುಖೌ" ಇತ್ಯಮರಃ ॥ ಜಿತಾರಿಪಕ್ಷೋಽಪೀಡ್ಯ ಮಾನಃ ಸ್ತೂಯಮಾನಃ ಸನ್—ಶಾಲೀನತಾಮಧೃಷ್ಟತಾಂ ಲಜ್ಜಾಮವ್ರಜದಗಚ್ಛತ್ ॥

ಸ್ಯಾದಧೃಷ್ಟೇತು ಶಾಲೀನ" ಇತ್ಯಮರಃ—"ಶಾಲೀನಕೌಪೀನೇ ಅಧೃಷ್ಟಾಕಾರ್ಯಯೋಃ" ಇತಿ ನಿಪಾತಃ (ಪಾಣಿನಿ)—ಉದಾರಶೀಲಃ=ಉದಾರಂ ಶೀಲಂ ಯಸ್ಯ (ಬಹು.) ಸಃ = ಉದಾರಗುಣಯುತನು—ಜಿತಾರಿಪಕ್ಷಃ = ಜಿತಃ ಅರೀಣಾಂ ಪಕ್ಷಃ ಯೇನ (ಬಹು.) ಸಃ = ವೈರಿಗಳ ಗೆದ್ದವನು. ಶಾಲೀನತಾ = ಸಜ್ಜನತಾ = ಶಾಲೀನತೆಯು ನಾಂತವನು = ಸಜ್ಜನ = ಸುಜನ, ಸುಶೀಲ.

18. ತಮಾತ್ಮಸಂಪನ್ನಮನಿಂದಿತಾತ್ಮಾ ।
ಕೃತ್ವಾ ಯುವಾನಂ ಯುವರಾಜಮೇವ ॥
ಸುಖಾನಿ ಸೋಽಭುಂಕ್ತ ಸುಖೋಪರೋಧಿ ।
ವೃತ್ತಂ ಹಿ ರಾಜ್ಞಾಮುಪರುದ್ಧವೃತ್ತಮ್ ॥ ೧೮ ॥

ಆ ಪಾರಿಯಾತ್ರನು ಸುಖೋಪಭೋಗಕ್ಕೆ ಎಳಸಿ ರಾಜ್ಯಪದವಿಯನ್ನು ತ್ಯಾಗಮಾಡಿದನು. ವಿನೀತಾತ್ಮನಾದ, ಔರಸಪುತ್ರನಾದ ಶಿಲಕುಮಾರನಿಗೆ ಯುವರಾಜಪಟ್ಟಾಭಿಷೇಕ ಮಾಡಿ ಅಧಿಕಾರಸೂತ್ರವನ್ನು ಅವನ ಕೈಯಲ್ಲಿರಿಸಿದನು. ಕ್ಷತ್ರಿಯರ ವೃತ್ತಿಯು ರೈತ ಕಾರ್ಮಿಕರಂತೆ ಕಷ್ಟಕಾರ್ಪಣ್ಯಕ್ಕಾಗಿ ಲೋಕದಲ್ಲಿ ಜನಿಸಿದವರು. ರಾಜಪದವಿಯು ಸುಖೋಪರೋಧವಾದುದು. ಸುಖವಿಘ್ನಕಾರಕವು ಎಷ್ಟೋ ಕೆಲಸಗಳನ್ನು ಪ್ರಜಾರಕ್ಷಕನಾದ ರಾಜನು ಸ್ವಯಂ ಆರಂಭಿಸಬೇಕಾಗಿದೆ (ಸ್ವಯಂ ಆರಭತೇ ಕರ್ಮಮ್). ಅಧಿಕಾರಿಗಳನ್ನು ಹತೋಟಿಯಲ್ಲಿಡಬೇಕಾದುದು ರಾಜನ ಆದ್ಯಕರ್ತವ್ಯ. ಹೀಗಿರುತ್ತ ರಾಜನು ವೃದ್ಧಿಸಂಪನ್ನನಾದ (ಬುದ್ಧಿಸಂಪನ್ನನಾದ) ಮಗನಿರಲು ತಾನು ವಿಷಯೋಪಭೋಗಗಳಿಗೆ ಮನಸ್ಸುಮಾಡಿ ರಾಜನು ಮಾಡಬೇಕಾದ ಕರ್ತವ್ಯಗಳಿಗೆ ತಿಲಾಂಜಲಿಯನಿತ್ತನು. ತಾನು ರಾಗಭೋಗಮಗ್ನನಾದನು. ವಿಷಯೋಪಭೋಗಗಳಿಗೆ ಬಲಿಯಾದವನಿಂದ ಯಾರೂ ಹೆಚ್ಚಿನದನ್ನು ಪಡೆಯಲು ಸಾಧ್ಯವಿರದು. ಆದರೆ ಯೋಗ್ಯ ಪುತ್ರನಿಗೆ ಆಧಿಪತ್ಯವನ್ನು, ಪ್ರಜಾಪಾಲನೆಯ ಹೊರೆಯನ್ನು ವಹಿಸಿಕೊಟ್ಟು ತಾನು ನಿಶ್ಚಿಂತೆಯಿಂದ ಸುಖಭೋಗಗಳ ಕಡೆಗೆ, ಸ್ತ್ರೀಲೋಲುಪನಾಗಿ, ಸೌಂದರ್ಯೋಪಾಸಕನಾಗಿ, ಮನೋರಂಜನೆಯ ಕಡೆಗೆ ತಿರುಗಿದನು.

ಅನಿಂದಿತಾತ್ಮಾಽಗರ್ಹಿತಸ್ವಭಾವಃ ಸ ಪಾರಿಯಾತ್ರಃ—ಆತ್ಮಸಂಪನ್ನಂ=ಬುದ್ಧಿಸಂಪನ್ನಮ್—ಆತ್ಮಾ ಯತ್ನೋ ಸ್ವಭಾವೋ ಬ್ರಹ್ಮವರ್ಷ್ಮ ಚ" ಇತ್ಯುಭಯತ್ರಾಪ್ಯಮರಃ—ಯುವಾನಂ—ಶಿವಾರ್ಥಂ "ಯುವರಾಜ" ಶಬ್ದಕರಣಮಿತ್ಯಾಶಂಕ್ಯಾನ್ಯಥಾ ಸುಖೋಪಭೋಗೋ ದುರ್ಲಭ ಇತ್ಯಾಹ—ಹಿಯಸ್ಮಾದ್ರಾಜ್ಞಾಂ ವೃತ್ತಂ=ಪ್ರಜಾಪಾಲನಾದಿರೂಪಂ ಸುಖೋಪರೋಧಿಬಹುಲತ್ವಾತ್ಸುಖಪ್ರತಿಬಂಧಕಮ್—ಅತ ಏವ ಉಪರುದ್ಧವೃತ್ತಮ್—ಉಪರುದ್ಧಸದೃಶಮಿತ್ಯರ್ಥಃ—ಉಪರುದ್ಧಃ ಕಾರಾದಿ ಬದ್ಧಃ—ಉಪರುದ್ಧಸ್ಯ ಸ್ವಯಮೂಢಭಾರಸ್ಯ ಸುಖಂ ನಾಸ್ತೀತಿ ಭಾವಃ—ಕೃತ್ವಾ ಯುವಾನಂ ಯುವರಾಜಮೇವ=ಯುವರಾಜನಿಗೆ ರಾಜ್ಯಭಾರವನ್ನು ವಹಿಸಿ ತಾನು ಸುಖಲೋಲುಪನಾದನು.

19. ತಂ ರಾಗಬಂಧಿಷ್ವತಿತೃಪ್ತಮೇವ ।
ಭೋಗೇಷು ಸೌಭಾಗ್ಯವಿಶೇಷಭೋಗ್ಯಮ್ ॥

**ವಿಲಾಸಿನೀ ನಾಮ ರತಿ ಕ್ಷಮಾಪಿ ।**
**ರಾಜಾ ವೃಥಾ ಮತ್ಸರಿಣೀ ಜಹಾರ ॥ ೧೯ ॥**

ಆ ಪಾರಿಯಾತ್ರನು ಬೆಡಗಿನ ವಿಲಾಸಿಯರ, ಸೌಂದರ್ಯವತಿಯರ ಸಂಪರ್ಕವನ್ನು ಬೆಳೆಸಿ, ರತಿಸುಖವನ್ನು ಪಡೆಯುತ್ತಾ, ಮುಂದುವರಿಯುತ್ತಿದ್ದಂತೆ ಜರೆಯು ಅವನನ್ನು ಆವರಿಸಿಕೊಂಡಳು. ವೃದ್ಧಾಪ್ಯ(ಮುದಿತನ)ವು ಅವನನ್ನು ಆಗಲೇ ಹೊಂದಿತ್ತು. (ಮುದಿವರಡ, ಮುದಿಜರಡ) ಜರೆಯು ರತಿ ಸಾಮರ್ಥ್ಯವನ್ನು ಪಡೆಯದೆ ರತಿಯನ್ನು ಮಾತ್ಸರ್ಯದಿಂದ ಕಡೆಗಣಿಸುವಳು. ಆದುದರಿಂದ ವೃದ್ಧಾಪ್ಯದ ದೆಸೆಯಿಂದ ರಾಗ ವರ್ಧಕ ಸುಖವನ್ನು ಅವನು ಅನುಭವಿಸದಾದನು. ಅವನು ಅತೃಪ್ತನಾಗಿ ಪೂರ್ಣರತಿಯ ಸಾಮರ್ಥ್ಯಪಡೆಯದೆ ಹೊರಗುಳಿದನು. ಅವನ ಮನಸ್ಸು ಬೆಡಗಿಯರ ಸೊಬಗಿನ ಬಗ್ಗೆ ಯೋಚಿಸುತ್ತಲೇ ಇತ್ತು. ಅವನು ಹತಾಶನಾಗಿ ನಪುಂಸಕನಂತೆ, ಪೂರ್ಣತೃಪ್ತಿ ಪಡೆಯದೆ ಭೋಗಸಾಮ್ರಾಜ್ಯದ ಹೊರಗುಳಿದನು.

ರಾಗಂ ಬಧ್ನಂತೀತಿ ರಾಗಬಂಧಿನಃ–ರಾಗಪ್ರವರ್ತಕಾ ಇತ್ಯರ್ಥಃ—"ತೇಷು ಭೋಗೇಷು ವಿಷಯೇಷ್ವವಿತೃಪ್ತ ಏವ ಸಂತಂ ಕಿಂಚಿತಿವಿಲಾಸಿನೀನಾಂ ಭೋಕ್ತ್ರೀಣಾಂ ಸೌಭಾಗ್ಯ ವಿಶೇಷೇಣ = ಸೌಂದರ್ಯಾತಿಶಯೇನ ಹೇತುನಾ ಭೋಗ್ಯಂ = ಭೋಗಾರ್ಹಮ್"— "ಚಜೋಃ ಕುಘಿಣ್ಯತೋಃ" ಇತಿ ಕುತ್ವಮ್—ತಂ ಪಾರಿಯಾತ್ರಂ ಕ್ಷಮಾನಭವತೀತ್ಯ ರತಿಕ್ಷಮಾಪಿ—ಅತ ಏವ ವೃಥಾ ಮತ್ಸರಿಣೀರತಿಕ್ಷಮಾಸು—ವಿಲಾಸಿನೀಷ್ವಿತ್ಯರ್ಥಃ"— ಜರಾಜಹಾರ ವಶೀಚಕಾರ ॥

**20. ಉನ್ನಾಭ ಇತ್ಯುದ್ಗತನಾಮಧೇಯಃ ।**
**ತಸ್ಯಾ ಯಥಾರ್ಥೋನ್ನತನಾಭಿರಂಧ್ರಃ ॥**
**ಸುತೋऽಭವತ್ಪಂಕಜನಾಭಕಲ್ಪಃ ।**
**ಕೃತ್ಸ್ನಸ್ಯ ನಾಭಿರ್ನೃಪಮಂಡಲಸ್ಯ ॥ ೨೦ ॥**

ಅವನ ಪುತ್ರನೇ ಮಾನವರಲ್ಲಿ ಪ್ರಖ್ಯಾತನಾದ ಉನ್ನಾಭನೆಂಬವನು ಅಯೋಧ್ಯೆಯ ರತ್ನಸಿಂಹಾಸನವನ್ನೇರಿದನು. ಆ ಉನ್ನಾಭನು ಆಳವಾದ, ಅಗಲವಾದ, ಉನ್ನತ ಹಾಗೂ ಗಂಭೀರ ಐಶ್ವರ್ಯದ್ಯೋತಕವಾದ ನಾಭಿಪ್ರದೇಶದಿಂದ ರಾರಾಜಿಸುತ್ತ ದ್ವಾದಶರಾಜ ಮಂಡಲದಿಂದ ಶೋಭಿಸುತ್ತ ಪ್ರಖ್ಯಾತನಾದ ಪುತ್ರಶ್ರೇಷ್ಠ. ಪರಮಾತ್ಮನಾದ ಮಹಾ ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮದೇವರು ಅವತರಿಸಿದರು. ಮಹಾವಿಷ್ಣುವಿನ ಪಂಕಜ ನಾಭಿಕಲ್ಪವು ಉತ್ಪತ್ತಿಯ ಪ್ರಧಾನಕೇಂದ್ರ. ಅಂತೆಯೇ ಸುಂದರವಾದ ಹೊಕ್ಕಳಿನಿಂದ ಶೋಭಿಸುತ್ತಲಿದ್ದ ಉನ್ನಾಭನು ಸರ್ವಶ್ರೇಷ್ಠನಾದ ಮಹಾವಿಷ್ಣುವಿನಂತೆ, ರಾಜ ಸಮೂಹಕ್ಕೆ, ಪಾರ್ಥಿವವಂಶಕ್ಕೆ, ನವಗ್ರಹಗಳ ಮಧ್ಯೆ ವಿರಾಜಿಸುವ ಸೂರ್ಯದೇವನಂತೆ, ತಿಲಕಪ್ರಾಯನಾಗಿ ಮೆರೆಯುತ್ತಿದ್ದನು.

ತಸ್ಯ ಶಿಲಾಖ್ಯಸ್ಯ–ಉನ್ನಾಭ ಇತ್ಯುದ್ಗತನಾಮಧೇಯಃ=ಪ್ರಸಿದ್ಧನಾಮಕಃ–ಯಥಾರ್ಥಂ =ಯಥಾ ತಥೋನ್ನತಂ ನಾಭಿರಂಧ್ರಂ ಯಸ್ಯ ಸಃ–ಗಂಭೀರನಾಭಿರಿತ್ಯರ್ಥಃ–ತದುಕ್ತಮ್ —ಸ್ವರಃ ಸತ್ವಂ ಚ ನಾಭಿಶ್ಚ ಗಾಂಭೀರ್ಯಂ ತ್ರಿಷು ಶಸ್ಯತೇ—ಪಂಕಜನಾಭ ಕಲ್ಪೋ

ವಿಷ್ಣುಸದೃಶಃ ಕೃತ್ಸ್ನಸ್ಯ ನೃಪಮಂಡಲಸ್ಯ ನಾಭಿಃ ಪ್ರಧಾನಮ್—"ನಾಭಿಪ್ರಧಾನೇ ಕಸ್ತೂರೀಮದೇऽಪಿ ಕ್ವಚಿದೀರಿತಃ" ಇತಿ ವಿಶ್ವಃ ಸಂತೋऽಭವತ್—"ಅಚ್ ಪ್ರತ್ಯಯಂನ್ವ ಪೂರ್ವಾತ್ಸಾಮಲೋಮ್ನಃ" ಇತ್ಯತ್ರಾಜಿತಿ ಯೋಗವಿಭಾಗಾದಂನ್ನಾಭವಜ್ರನಾಭಾ ದಯಃ ಸಿದ್ಧಾಃ (ಪಾಣಿನಿ) ॥

**21. ತತಃಪರಂ ವಜ್ರಧರಪ್ರಭಾವಃ ।**
**ತದಾತ್ಮಜಃ ಸಂಯತಿ ವಜ್ರಘೋಷಃ ॥**
**ಬಭೂವ ವಜ್ರಾಕರಭೂಷಣಾಯಾಃ ।**
**ಪತಿಃ ಪೃಥಿವ್ಯಾಃ ಕಿಲ ವಜ್ರನಾಭಃ** ॥ ೨೧ ॥

ಅವನ ಬಳಿಕ (ಉನ್ನಾಭನನಂತರ) ಅವನ ಸಂತನಾದ (ಸಂಪುತ್ರನಾದ) ವಜ್ರನಾಭನು ಇಳಾಮಂಡಲಕ್ಕೆ ಈಶನಾದನು. ಅವನು ತನ್ನ ಹೆಸರಿಗೆ ತಕ್ಕಂತೆ ಕೈಯಲ್ಲಿ ವಜ್ರಾಯುಧ ವನ್ನು ಹಿಡಿದ (ಧುರಧರರೆಯೊಳಗ್ರಮಪ್ಪ ವಜ್ರಧರನು) ಸ್ವಯಂ ಇಂದ್ರನಂತೆ ತೇಜ ಸ್ವಿಯು ಸಂಗ್ರಾಮದಲ್ಲಿ ವಜ್ರಘೋಷೋ ಅಶನಿತುಲ್ಯಧ್ವನಿಯಿಂದ ಮೆರೆಯುತ್ತ ಮೇಘ ಘರ್ಜನೆಯಿಂದ ಸಿಂಹನಾದಮಾಡುತ್ತ, ಹಾವಳಿಮಾಡಬಲ್ಲ ರಾಜಕಂಠೀರವನು. ಅವನ ರಣರಂಗದ ಬೊಬ್ಬೆ ಮೇಘದ ಘರ್ಜನೆಯಂತೆ, ಸಿಡಿಲಿನ ಧ್ವನಿಯಂತೆ, ಸಿಂಹದ ಆರ್ಭಟೆ ಯಂತೆ, ಗಜರಾಜನ ಘೀಳಿನಂತೆ, ಕುದುರೆಗಳ ಹೇಷಾರವದಂತೆ, ವೈರಿಗಳ ಎದೆಯನ್ನು ನಡುಗಿಸಬಲ್ಲ(ತಳಮಳಗೊಳಿಸಬಲ್ಲ) ಸಾಮರ್ಥ್ಯಪಡೆದ ಮಂಸಂಕುಲಸಾರ್ವಭೌಮನವನು. ಅವನು ವಜ್ರಕ್ಕೆ ಆಕರವೆನಿಸಿದ ಈ ವಸುಂಧರೆಯನ್ನು (ವಜ್ರಾಕರಾಭರಣ ಶೋಭಿತ ವಸುಂಧರೆಯು) ಹಲಕಾಲ ಆಳಿದನು. ಇಂದ್ರಸಾಮರ್ಥ್ಯದಿಂದ (ಇಂದ್ರತೇಜದಿಂದ) ಮೆರೆಯುತ್ತಲಿದ್ದ ಆ ದೊರೆಯು ಲ್ಲಿ ರಾಜರಲ್ಲಿ ಅಗ್ರಸ್ಥಾನಪಡೆದ ಪ್ರಭಾವಿತನಾದ ವಜ್ರನಾಭನಾಮಾಂಕಿತನು ತಾನಾಗಿಮೆರೆದನು.

ತತಃಪರಂ ವಜ್ರಧರಪ್ರಭಾವ=ಇಂದ್ರತೇಜಃ ಸಂಯತಿ=ಸಂಗ್ರಾಮೇ ವಜ್ರಘೋ ಷೋऽಶನಿತುಲ್ಯಧ್ವನಿರ್ವಜ್ರಣಾಭೋ ನಾಮ ತಸ್ಯೋನ್ನಾಭಸ್ಯಾತ್ಮಜೋ ವಜ್ರಾಣಾಂ ಹೀರಕಾಣಾ ಮಾಕರಾಃ ಖನಯ ಏವ ಭೂಷಣಾನಿ ಯಸ್ಯಾಸ್ತಸ್ಯಾಃ ಪೃಥಿವ್ಯಾಃ ಪತಿ ರ್ಬಭೂವ ಕಿಲ ಖಲು—"ವಜ್ರಂತ್ವಸ್ತ್ರೀಕುಲಿಶಶಸ್ತ್ರಯೋಃ—ಮಣಿವೇಧೇ ರತ್ನಭೇದೇऽ ಪ್ಯಶನಾವಾಸನಾಂತರೇ" ಇತಿ ಕೇಶವಃ ॥

**22. ತಸ್ಮಿನ್ ಗತೇ ದ್ಯಾಂ ಸುಕೃತೋಪಲಬ್ಧಾಂ ।**
**ತತ್ಸಂಭವಂ ಶಂಖಣಮರ್ಣವಾಂತಾ ॥**
**ಉತ್ಖಾತಶತ್ರುಂ ವಸುಧೋಪತಸ್ಥೇ ।**
**ರತ್ನೋಪಹಾರೈಃ ಉದಿತೈಃ ಖನಿಭ್ಯಃ** ॥ ೨೨ ॥

ಆ ವಜ್ರನಾಭನು ಮೇದಿನಿಯಲ್ಲಿ ತಾನು ಸದ್ಧರ್ಮದಿಂದ, ಸತ್ಕರ್ಮಗಳಿಂದ ಸಂಪಾದಿಸಿದ ಪುಣ್ಯಫಲವನ್ನು ಅನುಭವಿಸಲು (ಉಣ್ಣಲು) ಸುರಲೋಕಕ್ಕೆ ತೆರಳಿದನು.

ಅವನ ಸೂನು (ಉನ್ನಾಭನ ಮಗನು) ಶಂಖಣನೆಂಬುವನು ನಾಲ್ಕು ಸಮುದ್ರದಿಂದ ಆವರಿಸಲ್ಪಟ್ಟ ಧರಾವನಿತೆಯನ್ನು ಆಳತೊಡಗಿದನು. ಅವನು ಮಹಾವೀರ್ಯನು. ಶತ್ರುಮರ್ದನನು. ಶತ್ರುಗಳನ್ನು ಬೇರುಸಹಿತ ಕಿತ್ತುಬಿಸಾಡಬಲ್ಲ (ಉತ್ಖಾತಶತ್ರುವನು) ಸಾಮರ್ಥ್ಯವುಳ್ಳ ಪುರುಷಸಿಂಹನು. ಅವನನ್ನು ವಸುಂಧರೆಯು ತನ್ನಲ್ಲಿರುವ (ತನ್ನ ಗನಿಗಳಲ್ಲಿರುವ) ರತ್ನ, ಖನಿಜ (ಲೋಹ) ಎಲ್ಲವನ್ನೂ ಅರ್ಪಿಸಿ ಸೇವಿಸತೊಡಗಿದಳು. ಆಕರೋದಿತ ರತ್ನಹಾರಗಳನು ಅರ್ಪಿಸುತ ಸಮುದ್ರವೇಷ್ಟಿತೆಯಾದ ಆ ಧರಾವನಿತೆ ಸೇವಿಸುತ್ತಿದ್ದಳು.

ಸುಕೃತೋಪಲಬ್ಧಾಂ ಸುಧರ್ಮಾರ್ಜಿತಾಂಧ್ಯಾಂ ಸ್ವರ್ಗಗತೇ ಸತಿ—ಉತ್ಖಾತಶತ್ರು ಮುದ್ವೃತಶತ್ರುಂ ಶಂಖಣನಾಮ ತತ್ಸಂಭವಂ ತದಾತ್ಮಜಮರ್ಣವಾಂತಾ ವಸುಧಾ ಖನಿಭ್ಯ=ಆಕರೇಭ್ಯ ಉದಿತೈ=ರುತ್ಪನ್ನೈರತ್ನೋಪಹಾರ್ಯೈರುತ್ಕೃಷ್ಟವಸ್ತುಸಮರ್ಪಣೈಃ—ಉಪತಸ್ಥೇ=ಸಿಷೇವೇ—ಜಾತೌ ಜಾತೌ ಯದುತ್ಕೃಷ್ಟಂ ತದ್ರತ್ನಮಭಿಧೀಯತೇ ॥

23. ತಸ್ಯಾವಸಾನೇ ಹರಿದಶ್ವಧಾಮಾ ।
ಪಿತ್ರ್ಯಂ ಪ್ರಪೇದೇ ಪದಮಶ್ವರೂಪಃ ॥
ವೇಲಾತಟೇ ಷೂಷಿತಸೈನಿಕಾಶ್ವಂ ।
ಪುರಾ ವಿದೋ ಯಂ ವ್ಯುಷಿತಾಶ್ವಮಾಹುಃ ॥ ೨೩ ॥

ಶಂಖಣನ ಬಳಿಕ ಸೂರ್ಯನಂತೆ ತೇಜಸ್ಸುಳ್ಳ ಅವನ ಪುತ್ರನಾದ ವ್ಯುಷಿತಾಶ್ವನು ಪಟ್ಟವೇರಿದನು. ಆ ಪುತ್ರನು ಅಶ್ವಿನೀದೇವತೆಗಳಂತೆ ಬಹಳ ಸುಂದರನು. ಸೂರ್ಯದೇವನು ಸಪ್ತಾಶ್ವನು. ಹರಿದ್ (ಹರಿತ್ತು = ಹಸುರು ವರ್ಣದ) ವರ್ಣದ ಅಶ್ವಗಳಿಂದ ವಿರಾಜಮಾನನಾಗಿರುವಂತೆ ಅವನು ಸಪ್ತಸಾಗರಗಳನ್ನು ತನ್ನ ಅಶ್ವಬಲದಿಂದಲೇ ದಾಟಿದನು. ತನ್ನ ಅಶ್ವಗಳನ್ನು (ಅಶ್ವಸೇನೆ, ಅಶ್ವಸಮೂಹ) ಸಮುದ್ರದ ದಡದಲ್ಲಿ (ಕಿನಾರೆಯಲ್ಲಿ) ಇರಿಸಿದುದರಿಂದ ಪುರಾಣಕೋವಿದರು, ಚರಿತ್ರಗಾರರು ಆ ರಾಜೇಂದ್ರನನ್ನು ವ್ಯುಷಿತಾಶ್ವನೆಂದೇ ಕರೆದರು. ಅವನು ಭೂವಲಯದಲ್ಲಿ ವ್ಯುಷಿತಾಶ್ವನೆಂದೇ ವಿಖ್ಯಾತನಾದನು. ಆ ಹೆಸರು ಜನಜನಿತವಾಯಿತು. (ವ್ಯುಷಿತಾಶ್ವನೆಂದೊರೆದರು ಆ ಪುರಾವಿದರು.)

ತಸ್ಯ ಶಂಖಣಸ್ಯಾವಸಾನೇಽನ್ತೇ ಹರಿದಶ್ವಧಾಮಾ=ಸೂರ್ಯತೇಜಾಃ-ಅಶ್ವಿನೋರಿವ ರೂಪಮಸ್ಯೇತ್ಯಶ್ವಿರೂಪೋಽತಿಸುಂದರಃ—ತತ್ಪುತ್ರ ಇತಿ ಶೇಷಃ—"ಪಿತ್ರ್ಯಮ್" ಇತಿ ಸಂಬಂಧಿಪದಸಾಮರ್ಥ್ಯಾತ್—ಪಿತ್ರ್ಯಂ ಪದಂ ಪ್ರಪೇದೇ—ವೇಲಾತಟೇ ಷೂಷಿತಾ =ನಿವಿಷ್ಟಾಃ ಸೈನಿಕಾ ಅಶ್ವಾಶ್ಚ ಯಸ್ಯ ತಮ್—ಅನ್ವರ್ಥನಾಮಾನಮಿತ್ಯರ್ಥಃ—ಯಂ ಪುತ್ರಂ ಪುರಾವಿದೋ=ವೃದ್ಧಾ ವ್ಯುಷಿತಾಶ್ವಮಾಹುಃ ॥

24. ಆರಾಧ್ಯ ವಿಶ್ವೇಶ್ವರಮೀಶ್ವರೇಣ ।
ತೇನ ಕ್ಷಿತೇರ್ವಿಶ್ವಸಹೋ ವಿಜಜ್ಞೇ ॥
ಪಾತುಂ ಸಹೋ ವಿಶ್ವಸಖಃ ಸಮಗ್ರಾಂ ।
ವಿಶ್ವಂಭರಾಮಾತ್ಮಜಮೂರ್ತಿರಾತ್ಮಾ ॥ ೨೪ ॥

ಮೇದಿನೀಪತಿಯಾದ ವೃಷಿತಾಶ್ವನು ಕಾಶಿಯಲ್ಲಿ ಪ್ರಪಂಚದ ದೈವವಾದ ಕಾಶೀ ವಿಶ್ವೇಶ್ವರನನ್ನು ತ್ರಿಕರಣಪೂರ್ವಕವಾಗಿ ಅರ್ಚಿಸಿ (ಆರಾಧಿಸಿ) ಮೆಚ್ಚಿಸಿ ಓರ್ವ ಶಕ್ತಿ ಶಾಲಿಯಾದ ಪುತ್ರನನ್ನು ಪಡೆದನು. ಅವನು ವಿಶ್ವಂಭರನಾದ ಪಶುಪತಿಯಂತೆ ವಿಶಾಲ ಮನೋಭಾವನೆಯುಳ್ಳ ವಿಶ್ವಸಹನೆಂಬವನು. ಇಡೀ ಜಗತ್ತಿನ ಮಿತ್ರನು. ವಿಶ್ವಸಖನಾದ ವಿಶ್ವಸಹನು (ವಿಶ್ವಪ್ರೇಮಿ, ವಿಶ್ವಮಿತ್ರ, ವಿಶ್ವಕುಟುಂಬಿ). ಅವನು ಸಮಗ್ರ ಜಗತ್ತನ್ನು ಸಮರ್ಥನಾಗಿ ಆಳಿದನು (ವಿಶ್ವಸಂರಕ್ಷಣಸಮರ್ಥನಾದವನು). ಆತ್ಮರೂಪಿಯಾದ, ಅಂತಹ ವಿಶಾಲಹೃದಯದ ಪುತ್ರನನ್ನು ಪಡೆದು ವೃಷಿತಾಶ್ವನು ಧನ್ಯನೆನಿಸಿದನು.

ತೇನ ಕ್ಷಿತೇರೀಶ್ವರೇಣ=ವೃಷಿತಾಶ್ವೇನ ವಿಶ್ವೇಶ್ವರಂ=ಕಾಶೀಪತಿಮಾರಾಧ್ಯೋಪಾಸ್ಯ ವಿಶ್ವಸಹೋ ನಾಮ ವಿಶ್ವಸಖಃ ಸಮಗ್ರಾಂ ಸರ್ವಾಂ=ವಿಶ್ವಂಭರಾಂ=ಭೂಮಿಂ ಪಾತುಂ =ರಕ್ಷಿತುಂ ಸಹತೆ ಇತಿ ಸಹಃಕ್ಷಮಃ—ಪಚಾದ್ಯಚ್—ಆತ್ಮಜಮೂರ್ತಿಃ = ಪುತ್ರ ರೂಪ್ಯಾತ್ಮಮೂ ಸ್ವಯಮೇವ—"ಆತ್ಮಾ ವೈ ಪುತ್ರನಾಮಾಸಿ" ಇತಿ ಶ್ರುತೇಃ—ವಿಜಜ್ಞೇ =ಸುಷುವೇ—ವಿಪೂರ್ವೋ ಜನಿರ್ಗರ್ಭವಿಮೋಚನೇ ವರ್ತತೇ ಯಥಾಹ ಭಗವಾನ್ ಪಾಣಿನಿ "ಸಮಾಂ ಸಮಾಂ ವಿಜಾಯತೇ" ಇತಿ ॥

25. ಅಂಶೇ ಹಿರಣ್ಯಾಕ್ಷರಿಪೋಃ ಸ ಜಾತೇ ।
ಹಿರಣ್ಯನಾಭೇ ತನಯೇ ನಯಜ್ಞಃ ॥
ದ್ವಿಷಾಮಸಹ್ಯಃ ಸುತರಾಂ ತರೂಣಾಂ ।
ಹಿರಣ್ಯರೇತಾ ಇವ ಸಾನಿಲೋಽಭೂತ್ ॥ ೨೫ ॥

ಆ ವಿಶ್ವಸಹ ಮಹಾರಾಜನಿಗೆ ಹಿರಣ್ಯಾಕ್ಷನನ್ನು ಶಿಕ್ಷಿಸಿದ (ಹಿರಣ್ಯಾಕ್ಷರಿಪು) ಮಹಾ ವಿಷ್ಣುವಿನ ಅಂಶದಿಂದ ಓರ್ವ ಪುತ್ರನು ಜನಿಸಿದನು. ಅವನೇ ನಯಜ್ಞನೂ, ನೀತಿವಂತ ನಾದ, ವಿಶ್ವವಿಖ್ಯಾತನಾದ ಹಿರಣ್ಯನಾಭನು. ಹಿರಣ್ಯರೇತನಾದ ಅಗ್ನಿಯಂತೆ ಮಹಾ ತೇಜಸ್ವಿ. ರಾಜ್ಯಶಾಸ್ತ್ರಪರಿಣತನು. ಮಹಾರಾಜಕಾರಣಿ. ಅವನು ಆ ಪ್ರಜೇಶ್ವರನು, ಜನನಾಯಕನು, ತನ್ನ ವೈರಿಗಳಿಗೆ ಅಭೇದ್ಯನು. ಮರಗಿಡಗಳನ್ನು ವಾಯುವಿನ ಸಹಾಯ ದಿಂದ ಅಗ್ನಿಯು ಸುಡುವಂತೆ ವೈರಿಗಳನ್ನು ಸುಡಬಲ್ಲ ಅತುಳಪರಾಕ್ರಮಿ ಕೌಟಿಲ್ಯನಂತೆ ಮಹಾ ತಂತ್ರಜ್ಞ, ಜಟಿಲವಾದ ರಾಜನೀತಿಶಾಸ್ತ್ರ ವಿಶಾರದ, ಅರ್ಥಶಾಸ್ತ್ರಕೋವಿದ.

ನಯಜ್ಞೋ=ನೀತಿಜ್ಞಃ—ಹಿರಣ್ಯಾಕ್ಷರಿಪೋರ್ವಿಷ್ಣೋರಂಶೇ—ತರೂಣಾಂ ಸಾನಿಲೋ ಹಿರಣ್ಯರೇತಾ ಹುತಭುಗಿವ—ದ್ವಿಷಾಂ ಸುತರಾಮಸಹ್ಯೋಽಭೂತ್ ॥

26. ಪಿತಾ ಪಿತೄಣಾಮನೃಣಸ್ತಮಂತೇ ।
ವಯಸ್ಯನಂ ತಾನಿ ಸುಖಾನಿ ಲಿಪ್ಸುಃ ॥
ರಾಜಾ ನಮಾಜಾನುವಿಲಂಬಿಬಾಹುಂ ।
ಕೃತ್ವಾ ಕೃತೀ ವಲ್ಕಲವಾನ್ ಬಭೂವ ॥ ೨೬ ॥

ಋಷಿಋಣ, ದೇವಋಣ, ಪಿತೃಋಣ (ಗೋತ್ರಋಣ, ಬೀಜಋಣ, ಕ್ಷೇತ್ರಋಣ, ಸಮಾಜಋಣ, ದೇಶಋಣ) ಮುಕ್ತನಾದ (ಮುಕ್ತಪಿತೃಋಣನು) ವಿಶ್ವಸಹ

ಚಕ್ರವರ್ತಿಯು ಶಾಶ್ವತವಾದ ಸುಖವನ್ನು ಬಯಸಿದನು. ಸಂಸಾರದಿಂದ ಮುಕ್ತನಾಗಲು, ನಿವೃತ್ತಿಹೊಂದಲು, ಪ್ರಪಂಚದಿಂದ ಮುಕ್ತನಾಗಲು ನಿರ್ಧರಿಸಿದನು. ತನ್ನ ಔರಸಪುತ್ರನಾದ ಭಾಗ್ಯಸಂಪನ್ನನಾದ, ದೀರ್ಘವಾದ ಬಾಹುದಂಡಗಳಿಂದ ಶೋಭಿಸುತ್ತಿರುವ ತಾರುಣ್ಯರಸಾಲನಾದ ಹಿರಣ್ಯನಾಭನನ್ನು ರಾಜನನ್ನಾಗಿ ಮಾಡಿದನು. ತಾನು ಕೃತಕೃತ್ಯನಾಗಿ, ವಲ್ಕಲಾಂಬರಧಾರಿಯಾಗಿ ಕಾಡಿಗೆ ನಡೆದನು. ಮೋಕ್ಷಚಿಂತನೆ ಮಾಡಲು (ಕೈವಲ್ಯ) ಮುಮುಕ್ಷುವಾಗಲು ಸನ್ಯಾಸಾಶ್ರಮವನ್ನು ಸ್ವೀಕರಿಸಿ ವಲ್ಕಲವನ್ನು ಧರಿಸಿ ಅರಣ್ಯಕ್ಕೆ ನಡೆದನು.

ಪಿತೄಣಾಮನೃಣಃ = ನಿವೃತ್ತಪಿತೃಋಣ ಇತ್ಯರ್ಥಃ—ಪ್ರಜಯಾಪಿತೃಭ್ಯಃ—ಇತಿ ಶ್ರುತೇಃ—ಅತ ಏವ ಕೃತೀ—ಕೃತಕೃತ್ಯ ಇತ್ಯರ್ಥಃ—ವಾರ್ಧಕೇಽನನ್ಯಾನ್ಯವಿನಾಶಾನಿ ಸುಖಾನಿ ಲಿಪ್ಸು—ಮುಮುಕ್ಷುರಿತ್ಯರ್ಥಃ—ಆಜಾನುವಿಲಂಬಿಬಾಹುಂ=ದೀರ್ಘಬಾಹುಮ್—ಭಾಗ್ಯಸಂಪನ್ನಮಿತಿಭಾವಃ—ವಲ್ಕಲವಾನ್ ಬಭೂವ—ವನಂ ಗತ ಇತ್ಯರ್ಥಃ ॥

27. ಕೌಸಲ್ಯ ಇತ್ಯುತ್ತರಕೋಸಲಾನಾಂ ।
ಪತ್ಯುಃ ಪತಂಗಾನ್ವಯಭೂಷಣಸ್ಯ ॥
ತಸ್ಯೌರಸಃ ಸೋಮಸುತಃ ಸುತೋಽಭೂತ್ ।
ನೇತ್ರೋತ್ಸವಃ ಸೋಮ ಇವ ದ್ವಿತೀಯಃ ॥ ೨೭ ॥

ಸೂರ್ಯವಂಶಾಭರಣನಾದ ಹಿರಣ್ಯನಾಭನು ಉತ್ತರಕೋಸಲವನ್ನು ಧರ್ಮದಿಂದ ಆಳುತ್ತ, ಸೋಮರಸದಿಂದ ದೇವತೆಗಳನ್ನು ತೃಪ್ತಿಪಡಿಸಿದ ರಾಜಕುಲತಿಲಕನು ಅವನಿಗೆ ಕೌಸಲ್ಯನೆಂಬ ಪುತ್ರರತ್ನನು ಜನಿಸಿದನು. ಅವನಿಗೆ ನೇತ್ರೋತ್ಸವ ಮಾಡಬಲ್ಲ, ಕಣ್ಣಿಗೆ ಹಬ್ಬವನ್ನುಂಟುಮಾಡಬಲ್ಲ ಆನಂದದ ಖನಿಯಾದ ಪುತ್ರರತ್ನನವನು. ಅವನು ಎರಡನೆಯ ಚಂದ್ರನಂತೆ, ಅಥವಾ ಸೋಮನೊಲು ದಾರಿದೀಪವಾಗಿದ್ದನು. ನಯನಾನಂದಕರನಾದ ಕುಲಪುತ್ರನಿಂದ ಆ ರಾಜತಿಲಕನು ಸಂಸಾರಸುಖದ ತುದಿಯನ್ನೇರಿ ಆನಂದಸಾಗರದಲ್ಲಿ ತೇಲಾಡುತ್ತಿದ್ದನು (ಓಲಾಡುತ್ತಿದ್ದನು.)

ಪತಂಗಾನ್ವಯಭೂಷಣಸ್ಯ = ಸೂರ್ಯವಂಶಾಭರಣಸ್ಯ ಸೋಮಸುತಃ = ಸೋಮಂ ಸುತವತಃ—ಯಜ್ವನ ಇತ್ಯರ್ಥಃ—ಸೋಮೇಸು ಸುಞಃ ಇತಿ ಕ್ವಿಪ್—ಸೋಮಶ್ಚಂದ್ರ ಇವ—ನೇತ್ರೋತ್ಸವೋ = ನಯನಾನಂದಕರಃ—ಔರಸೋ ಧರ್ಮಪತ್ನೀಜಃ—ಪೂಷಾ, ಪತಂಗ, ಖಗೌ, ಮಾರ್ತಾಂಡ = ಸೂರ್ಯದೇವನ ಹೆಸರುಗಳು.

28. ಯಶೋಭಿರಾಬ್ರಹ್ಮಸಭಂ ಪ್ರಕಾಶಃ ।
ಸ ಬ್ರಹ್ಮಭೂಯಂ ಗತಿಮಾಜಗಾಮ ॥
ಬ್ರಹ್ಮಿಷ್ಠಮಾಧಾಯ ನಿಜೇಽಧಿಕಾರೇ ।
ಬ್ರಹ್ಮಿಷ್ಠಮೇವ ಸ್ವತನುಪ್ರಸೂತಮ್ ॥ ೨೮ ॥

ಆ ಕೌಸಲ್ಯನೃಪನು ಮಹಾ ಮೇಧಾವಿ. ವೇದವೇದಾಂಗಪಾರಂಗತನು, ಬ್ರಹ್ಮವಿದ್ಯಾಸಾಗರನು ಅವನು ಬ್ರಹ್ಮಜ್ಞನು ಬ್ರಹ್ಮಯಜ್ಞ, ತಪೋಯಜ್ಞಸ್ವಾಧ್ಯಾಯನಿಷ್ಠನು.

ಅವನ ವಿದ್ವತ್ತು, ಬ್ರಹ್ಮವಿದ್ಯೆಯ ಕೀರ್ತಿ ಲೋಕಪಿತಾಮಹನಾದ (ಚತುರ್ಮುಖ) ಬ್ರಹ್ಮನ ಬ್ರಹ್ಮಸಭೆಯಲ್ಲಿ ಹರಡಿತು. ಅಂತಹ ವೇದಾಭ್ಯಾಸಿಯಾದ (ತತ್ತ್ವಶಾಸ್ತ್ರಜ್ಞ) ವೇದವೇತ್ತನಾದ, ಬ್ರಹ್ಮವಿದ್ಯಾಪಾರಂಗತನಾದ ಕ್ಷಿತಿಪತಿಯು ತನ್ನ ಒಬ್ಬನೇ ಒಬ್ಬ ಆತ್ಮಭವನಾದ ಬ್ರಹಿಷ್ಠನೆಂಬವನನ್ನು ಪ್ರಜೇಶ್ವರನನ್ನಾಗಿ ಮಾಡಿ ತಾನು ವೇದಾಧ್ಯಯನದಲ್ಲಿ ಕಾಲವನ್ನು ಕಳೆಯತೊಡಗಿದನು. ತನ್ನ ಪ್ರಿಯಪುತ್ರನನ್ನು ಸಮಸ್ತಸಾಮ್ರಾಜ್ಯದ ಸ್ವಾಧಿಕಾರದೊಳಿರಿಸಿ (ಸ್ವಾಧಿಕಾರದೊಳಿರಿಸುತ್ತಾ ಸ್ವಾತ್ಮಜನನು) ತಾನು ಬ್ರಹ್ಮಗತಿಗೈದಿದನು. ಬ್ರಹ್ಮೈಕ್ಯನಾಗಲು ಬ್ರಹ್ಮನಲ್ಲಿ ಒಂದಾಗಲು ತೆರಳಿದನು. ಆ ಬ್ರಹ್ಮವಿದನು ಸಕಲಮಂತ್ರಶಾಸ್ತ್ರ, ತಂತ್ರಶಾಸ್ತ್ರಕೋವಿದನು. ಬ್ರಹ್ಮವರ ಸಭೆಗೆಯಶೋವಂತನಾಗಿ ತೆರಳಿದನು—ಅವನನ್ನು ಬ್ರಹ್ಮಸಭೆಯಲ್ಲಿ (ಬ್ರಹ್ಮಲೋಕದಲ್ಲಿ) ಬ್ರಹ್ಮವಿದರು ಸ್ವಾಗತಿಸಿದರು.

ಪ್ರಕಾಶಃ=ಪ್ರಸಿದ್ಧಃ—ಬ್ರಹ್ಮವನ್ತಂ ಬ್ರಹಿಷ್ಠವತ್—"ಬ್ರಹ್ಮ"ಶಬ್ದಾನ್ಮತುಮನ್ತಾದಿಷ್ಠನ್ ಪ್ರತ್ಯಯೇ—"ವಿನ್ಮತೋರ್ಲುಕ್ ಇತಿ ಮತುಪೋಲುಕ್—"ನಸ್ತದ್ಧಿತೇ" ಇತಿಟಿಲೋಪಃ (ಪಾಣಿನಿ)–ಆಧಾಯ=ನಿಧಾಯ–ಬ್ರಹ್ಮಣೋಭಾವೋ ಬ್ರಹ್ಮಭೂಯಂ ಬ್ರಹ್ಮತ್ವಂ=ತದೇವ ಗತಿಸ್ತಾಮಾಜಗಾಮ–ಮುಕ್ತೋಽಭೂದಿತ್ಯರ್ಥ—'ಸ್ಯಾದ್ ಬ್ರಹ್ಮಭೂಯಂ ಬ್ರಹ್ಮತ್ವಮ್" ಇತ್ಯಮರಃ—ಭುವೋ ಭಾವೇ ಕ್ಯಪ್ ॥

29. **ತಸ್ಮಿನ್ ಕುಲಾಪೀಡನಿಭೇ ವಿಪೀಡಂ ।**
**ಸಮ್ಯಙ್ ಮಹೀಂ ಶಾಸತಿ ಶಾಸನಾಂಕಾಮ್ ॥**
**ಪ್ರಜ್ಞಾಶ್ಚಿರಂ ಸುಪ್ರಜಾಸಿ ಪ್ರಜೇಶೇ ।**
**ನನಂದುರಾನಂದಜಲಾವಿಲಾಕ್ಷ್ಯಃ** ॥ ೨೯ ॥

ಆ ಪ್ರಜೇಶ್ವರನು ಕುಲಶೇಖರನು. ವಿಗತಪೀಡನಾಗಿ ಶಾಸನಾಂಕಿತ ಮಹಿಯನ್ನು ಆಳಿದನು. ಅವನ ಆಳ್ವಿಕೆಯಲ್ಲಿ ಪ್ರಜೆಗಳು ಆನಂದವರ್ಧನರಾದರು. ಅವನು ಪ್ರಜ್ಞಾವಂತನಾದ ನರೇಶ್ವರನು. ಯಾವ ತರದ ಪೀಡೆಗಳಾಗಲಿ, ಕ್ಷೋಭೆಗಳು, ತಲೆದೋರುತ್ತಿರಲಿಲ್ಲ. ಕಾಲಕಾಲಕ್ಕೆ ಸರಿಯಾಗಿ ಮಳೆ, ಬೆಳೆ ಆಗುತ್ತಿತ್ತು. ಅಶನ, ವಸನ, ವಸತಿಗೆ ಕೊರತೆಯಿರಲಿಲ್ಲ. ಆಕ್ರಮಣದ, ದರೋಡೆ ಕಳ್ಳತನದ ಭಯವಿರಲಿಲ್ಲ. ಆ ರಾಜವಂಶಭೂಷಣನು ಪ್ರಜಾಕೋಟಿಗೆ ಒಂದಲ್ಲ ಒಂದು ವಿಧದ ಆಮೋದವನ್ನು (ಸುಖಸಂತೋಷವನ್ನು) ಒದಗಿಸುತ್ತಲೇ ಇದ್ದನು, ಅವನು ಸುಪ್ರಜನು. ಪ್ರಜಾವತ್ಸಲನಾದ ಅವನ ಶಾಸನಕ್ಕೆ ಅಧೀನರಾಗಿ ಜನರು ಸುಪ್ರಜೆಗಳಾಗಿ ಬಾಳಿದರು. ಅವನ ಒಳ್ಪಿನ ಆಳ್ವಿಕೆಯಿಂದ ಸುಖವಾಂತ ಜನರು ಹರ್ಷಾಶ್ರುಗಳನ್ನು, ಆನಂದಬಾಷ್ಪಗಳನ್ನು ಸುರಿಸಿ ಆನಂದಿಸಿದರು. ಆನಂದಬಾಷ್ಪವನ್ನು ಸುರಿಸುವುದೊಂದೇ ಎಡರಲ್ಲದೆ (ಕಷ್ಟವಲ್ಲದೆ) ಅವರಿಗೆ ಬೇರಾವ ಕಷ್ಟಗಳೂ ಅವನ ಆಳ್ವಿಕೆಯಲ್ಲಿ ಇರಲಿಲ್ಲ (ಸಂತಸದ ಕಣ್ಣೀರು).

ಕುಲಾಪೀಡನಿಭೇ = ಕುಲಶೇಖರತುಲ್ಯೇ—"ವೈಕಕ್ಷಕಂ ತು ತತ್—ಯತಿರ್ಯಗ್ವಿಕ್ಷಿಪ್ತಮುರಸಿ ಶಿಖಾಸ್ವಾಪೀಡಶೇಖರೌ" ಇತ್ಯಮರಃ—ಸುಪ್ರಜಾಸಿ = ಸತ್ ಸಂತಾನವತಿ—ತಸ್ಮಿನ್ ಪ್ರಜೇಶ್ವರೇ ಬ್ರಹಿಷ್ಠೇ—ಶಾಸನಾಂಕಾಂ=ಶಾಸನಚಿಹ್ನಾಂ—ಮಹೀಂ ವಿಪೀಢಂ

ನಿರ್ಬಾಧಂ ಯಥಾ ತಥಾ ಸಮ್ಯಕ್ ಶಾಸತಿ ಸತಿ—ಆನಂದಜಲಾವಿಲಕ್ಷ್ಯ=ಆನಂದಬಾಷ್ಪಾಕುಲನೇತ್ರಾಃ ಪ್ರಜಾಶ್ಚಿರಂ ನನಂದುಃ ॥

**30.** **ಪಾತ್ರೀಕೃತಾತ್ಮಾ ಗುರುಸೇವನೇನ ।**
**ಸ್ಪಷ್ಟಾಕೃತಿಃ ಪತ್ರರಥೇಂದ್ರಕೇತೋಃ ॥**
**ತಂ ಪುತ್ರಿಣಾಂ ಪುಷ್ಕರಪತ್ರನೇತ್ರಃ ।**
**ಪುತ್ರಃ ಸಮಾರೋಪಯದಗ್ರಸಂಖ್ಯಾಮ್** ॥ ೩೦ ॥

ಆ ರಾಜಕುಲತಿಲಕನಿಗೆ ಪುತ್ರನೆಂಬ ಹೆಸರಿನ ಒಬ್ಬ ಶ್ರೇಷ್ಠನಾದ ಮಗನು ಜನಿಸಿದನು. ಪುತ್ರನೆಂಬ ನಾಮಧೇಯದ ಆ ಪುತ್ರನು ಪಿತೃಶುಶ್ರೂಷೆ, ಗುರುಸೇವೆ ಮೊದಲಾದ ಸದ್ಗುಣಗಳಿಗೆ ಹೆಸರಾದವನು. ಪತ್ರರಥ ನಾದಗರುಡನೇ ವಾಹನವಾಗಿಯುಳ್ಳ ಪದ್ಮಪತ್ರಾಕ್ಷನಾದ ಮಹಾವಿಷ್ಣುವಿನಂತೆ ಸುಂದರವಾದ ದೇಹ, ಸುಂದರ ಮುಖ, ಸುಂದರ ಪುಷ್ಕರನಯನಗಳಿಂದ ಕೂಡಿ ಸೌಂದರ್ಯದ ಸಾಕಾರಮೂರ್ತಿಯಂತಿದ್ದ ಆ ರಾಜಕುಮಾರನಾದ ಪುತ್ರನೆಂಬವನು, ಅಂತಹ ಉತ್ತಮನಾದ ಪುತ್ರರತ್ನನನ್ನು (ವರಪುತ್ರನನ್ನು) ಪಡೆದ ಬ್ರಹ್ಮಿಷ್ಠನು ಬಹಳ ಅದೃಷ್ಟಶಾಲಿ, ಪುತ್ರವಂತರಲ್ಲಿ ಶ್ರೇಷ್ಠರಾದ ಮಕ್ಕಳನ್ನು ಪಡೆದವರಲ್ಲಿ ಅತ್ಯಂತ ಭಾಗ್ಯಶಾಲಿಯೆಂದೆನಿಸಿ ಅಗ್ರಪಂಕ್ತಿಯಲ್ಲಿ ಮೆರೆಯುತ್ತ ವಿರಾಜಿಸುತ್ತಿದ್ದನು.

ಗುರುಸೇವನೇನ ಪಿತ್ರಾದಿಶುಶ್ರೂಷಯಾ ಪಾತ್ರೀಕೃತಾತ್ಮಾ=ಯೋಗ್ಯೀಕೃತಾತ್ಮಾ—ಯೋಗ್ಯಭಾಜನಯೋಃ ಪಾತ್ರಮ್ ಇತ್ಯಮರಃ—ಪತ್ರರಥೇಂದ್ರಕೇತೋಃ=ಗರುಡಧ್ವಜಸ್ಯ ಸ್ಪಷ್ಟಾಕೃತಿಃ=ಸ್ಪಷ್ಟವಪುಃ—"ಆಕೃತಿಃ ಕಥಿತಾ ರೂಪೇ ಸಾಮಾನ್ಯ ವಪುಷೋರಪಿ" ಇತಿ ವಿಶ್ವಃ—ಪುಷ್ಕರಪತ್ರನೇತ್ರಃ=ಪದ್ಮದಲಾಕ್ಷ—ಪುತ್ರಃ ಪುತ್ರಾಖ್ಯೋ ರಾಜಾ—ಯದ್ವಾ "ಪುತ್ರ" ಶಬ್ದ ಆವರ್ತನೀಯಃ—ಪುತ್ರಃ, ಪುತ್ರಾಖ್ಯಃ ಪುತ್ರ, ಸುತಃ—ಗುರುಸೇವನೇನ ಪಾತ್ರೀ ಕೃತಾತ್ಮಾ= ಪಿತ್ರಾದಿಸೇವೆಯಿಂ ಅರ್ಹತೆಯಾಂತವನು.

**31.** **ವಂಶಸ್ಥಿತಿಂ ವಂಶಕರೇಣ ತೇನ ।**
**ಸಂಭಾವ್ಯ ಭಾವೀ ಸ ಸಖಾ ಮಘೋನಃ ॥**
**ಉಪಸ್ಪೃಶನ್ ಸ್ಪರ್ಶನಿವೃತ್ತಲೌಲ್ಯಃ ।**
**ತ್ರಿಪುಷ್ಕರೇಷು ತ್ರಿದಶತ್ವಮಾಪ** ॥ ೩೧ ॥

ತನ್ನ ವಂಶದ ಬೆಳವಣಿಗೆಗೆ (ಏಳ್ಗೆಗೆ, ಅಭಿವೃದ್ಧಿಗೆ) ಯೋಗ್ಯನಾದ ಪುತ್ರನನ್ನು, ಪುತ್ರಶ್ರೇಷ್ಠನನ್ನು ಪಡೆದು ತಾನು ಪಿತೃ, ಪಿತ, ಋಷಿ, ದೇವ ಮತ್ತು ತನ್ನನ್ನು ಹೊತ್ತು ಪೊರೆದ ದೇಶದ ಋಣದಿಂದ ಮುಕ್ತಿಯನ್ನು ಪಡೆದನೆಂದು ಬ್ರಹ್ಮಿಷ್ಠನೃಪಾಲನು ಭಾವಿಸಿ ಪರಮಾತ್ಮನ ಭಕ್ತಿಯಲ್ಲಿ ಆಸರೆಯನ್ನು ಪಡೆದನು. ತನ್ನ ಪುತ್ರನು ತನ್ನ ವಂಶವನ್ನು ಬೆಳಗುವ ವಂಶೋದ್ಧಾರಕನೆಂದು ಅರಿತು ವಿಷಯತೃಷ್ಣೆಯಿಂದ, ಇಂದ್ರಿಯಸುಖಭೋಗಗಳಿಂದ, ಶಬ್ದ, ಸ್ಪರ್ಶ ಮೊದಲಾದ ಸುಖಸಾಧನಗಳಿಂದ ನಿವೃತ್ತಿಯನ್ನು ಬಯಸಿ

ಯೋಗಾಭ್ಯಾಸವನು ಅನುಷ್ಠಾನಗೈದು (ಅಷ್ಟಾಂಗಯೋಗಮಾರ್ಗ) ಯೋಗಿಪುಂಗವನಾದನು. ಮೂರು ಪ್ರಖ್ಯಾತವಾದ ಪುಷ್ಕರಗಳಲ್ಲಿ ಸ್ನಾನಮಾಡಿ ಪುನೀತನಾದನು. ಮೂರು ಪ್ರಖ್ಯಾತ ಪುಣ್ಯಕ್ಷೇತ್ರಗಳಾದ ಕುರುಕ್ಷೇತ್ರ, ಗಯಾ, ಪ್ರಭಾಸ ಪುಣ್ಯಕ್ಷೇತ್ರಗಳಲ್ಲಿ ತೀರ್ಥಸ್ನಾನಮಾಡಿ ದೇವತೆಗಳ ಒಡೆಯನಾದ ಇಂದ್ರನಿಗೆ ಮಘವಂತನಾದ ಮಹೇಂದ್ರನಿಗೆ ಸಮಾನವಾದ ಆತ್ಮೋತ್ಕರ್ಷವನ್ನು ಪಡೆದನು. ವಾಸವನ ಸಖ್ಯತೆಗೆ ಅರ್ಹತೆಯನ್ನು ಪಡೆದು ಎರಡನೆಯ ಇಂದ್ರನಂತೆ ಶೋಭಿಸಿದನು (ಪ್ರಕಾಶಿಸಿದನು).

ಸ್ಪೃಶ್ಯಂತ ಇತಿ ಸ್ಪರ್ಶಾವಿಷಯಾಃ—ನಿವೃತ್ತಲೌಲ್ಯೋ = ನಿವೃತ್ತತೃಷ್ಣಃ ಭಾವೀ= ಭವಿಷ್ಯನ್—ವಂಶಕರೇಣ = ವಂಶಪ್ರವರ್ತಕೇನ—ತೇನ ಪುತ್ರೇಣ ವಂಶಸ್ಥಿತಿಂ ಕುಲಪ್ರತಿಷ್ಠಾಂ—ಸಂಭಾವ್ಯ = ಸಂಪಾದ್ಯ—ತ್ರಿಷು ಪುಷ್ಕರೇಷು = ತೀರ್ಥವಿಶೇಷೇಷು—ದಿಕ್‌ಸಂಖ್ಯೇ ಸಂಜ್ಞಾಯಾಮ್ ಇತಿ ಸಮಾಸಃ (ಪಾಣಿನಿ)—ಉಪಸ್ಪೃಶನ್ = ಸ್ನಾನಂ ಕುರ್ವನ್—ತ್ರಿದಶತ್ವಮ್ = ದೇವಭೂಯಮಾಪ—ವಂಶಸ್ಥಿತಿ=ವಂಶದ ಸ್ಥಿರತೆಯನ್ನು ಕಾಪಾಡು—ವಂಶಕರೇಣ = ವಂಶವು ಮುಂದುವರಿಯುವಂತೆ ನೋಡು.

32. ತಸ್ಯ ಪ್ರಭಾನಿರ್ಜಿತ ಪುಷ್ಪರಾಗಂ ।
ಪೌಷ್ಯಾಂ ತಿಥೌ ಪುಷ್ಯಮಸೂತಪತ್ನೀ ॥
ತಸ್ಮಿನ್ನಪುಷ್ಯನ್ನುದಿತೇ ಸಮಗ್ರಾಂ ।
ಪುಷ್ಟಿಂ ಜನಾಃ ಪುಷ್ಯ ಇವ ದ್ವಿತೀಯೇ ॥ ೩೨ ॥

ಆ ಪುತ್ರ (ಪುತ್ರಾಖ್ಯ), ಸಾಮ್ರಾಟನ ಸಾಮ್ರಾಜ್ಞಿಯು ಪುಷ್ಯ ಅಥವಾ ಪುಷ್ಯಾಖ್ಯನೆಂಬ ಪುತ್ರನನ್ನು ಪಡೆದಳು. ಆ ಪುತ್ರನು ಪುಷ್ಯರಾಗಮಣಿಯು ಪುಷ್ಯಪೂರ್ಣಿಮೆಯಂದು ಹೆಚ್ಚಿನ ಪ್ರಭೆಯಿಂದ ಪ್ರಕಾಶಿಸುವಂತೆ, ಕಾಂತಿಯಿಂದ ಕಂಗೊಳಿಸುತ್ತಿದ್ದನು. ಆ ಮಗುವು ಭಾಗ್ಯಶಾಲಿ ಪುಷ್ಯಪೌರ್ಣಿಮೆಯಂದು ದೇಶವು ಫಲಭರಿತವಾಗುವಂತೆ, ವ್ರತವನ್ನು ಆಚರಿಸುವವರ ವ್ರತನೇಮಗಳು ಸಿದ್ಧಿಯಾಗುವಂತೆ, ಆ ಪುತ್ರನು ಎರಡನೆಯ ಪುಷ್ಯ ನಕ್ಷತ್ರದಂತೆ ಕಂಗೊಳಿಸುತ್ತ, ಜನಮನವನ್ನು ಗೆದ್ದನು, ಜನನದಾರಭ್ಯದಿಂದ ಜನರು ಸಂತೋಷಭರಿತರಾದರು. ಧರೆಯು ವಿಪುಲವಾದ, ಸರ್ವತೋಮುಖವಾದ, ಸಮಗ್ರ ಅಭಿವೃದ್ಧಿ ಸಂಪತ್ಸಮೃದ್ಧಿಯಿಂದ ಆ ನಾಡು ಕಳೆಗೊಂಡಿತು.

ತಸ್ಯೇತಿ—ತಸ್ಯ ಪುತ್ರಾಖ್ಯಸ್ಯ ಪತ್ನೀ ಪೌಷ್ಯಾಂ=ಪುಷ್ಯನಕ್ಷತ್ರಯುಕ್ತಾಯಾಂ ಪೌರ್ಣಮಾಸ್ಯಾಂ ತಿಥೌ—"ಪುಷ್ಯಯುಕ್ತಾ ಪೌರ್ಣಮಾಸೀ ಪೌಷೀ" ಇತ್ಯಮರಃ—ನಕ್ಷತ್ರೇಣ ಯುಕ್ತಃ ಕಾಲಃ ಇತ್ಯಣ್ ಪ್ರತ್ಯಯಃ—ಟಿಡ್ಢಾಣ್ಞ್" ಇತ್ಯಾದಿ ಙೀಪ್ (ಪಾಣಿನಿ)—ಪುಷ್ಪರಾಗೋ ಮಣಿವಿಶೇಷೋ ಯೇನ ತಂ ಪುಷ್ಯಂ ಪುಷ್ಯಾಮಸೂತ್ ದ್ವಿತೀಯೇ ಪುಷ್ಯೇ ಪುಷ್ಯನಕ್ಷತ್ರ ಇವ ತಸ್ಮಿನ್ನುದಿತೇ—ಸಮಗ್ರಾಂ ಪುಷ್ಟಿಂ ವೃದ್ಧಿಮಪುಷ್ಯನ್—ತಸ್ಯ ಪ್ರಭಾನಿರ್ಜಿತಪುಷ್ಪರಾಗಂ = ತನ್ನ ಪ್ರಭೆಯಿಂದ ಪುಷ್ಯರಾಗ (ಮಣಿಯ) ಪ್ರಭೆಯನ್ನು ಕಾಂತಿಯನ್ನು ಮೀರಿ.

33. ಮಹೀಂ ಮಹೇಚ್ಛಃ ಪರಿಕೀರ್ಯ ಸೂನೌ ।
ಮನೀಷಿಣೇ ಜೈಮಿನಯೇಽರ್ಪಿತಾತ್ಮಾ ॥
ತಸ್ಮಾತ್ ಸ ಯೋಗಾದಧಿಗಮ್ಯ ಯೋಗಂ ।
ಅಜನ್ಮನೇಽಕಲ್ಪತ ಜನ್ಮಭೀರುಃ ॥ ೩೩ ॥

ಮುಂದೆ ಮಹಿಯನ್ನು ಆ ಮಹೀಶನು ತನ್ನ ಆತ್ಮಜನಾದ ಪುಷ್ಯನೊಳು ಇರಿಸಿ ತಾನು ಬ್ರಹ್ಮವಿದನಾದ, ಯೋಗಶಾಸ್ತ್ರವಿಶಾರದನಾದ ಜೈಮಿನಿ ಮುನಿಯ ಕೈಂಕರ್ಯವನ್ನು ಸ್ವೀಕರಿಸಿ ಯೋಗಾಭ್ಯಾಸಿಯಾದನು. ಜರಾಮರಣ, ಜನ್ಮಭಯದಿಂದ ಮುಕ್ತಿಯನ್ನು ಪಡೆಯಲು ನಿರ್ಧರಿಸಿ ಆ ಜನ್ಮಭೀರುವು (ಸಂಸಾರಭೀರುವು) ಯೋಗವಿದ್ಯೆಯನ್ನು ಯೋಗಾಚಾರ್ಯನಾದ (ರಾಜಯೋಗಿ) ಜೈಮಿನಿ ಆಚಾರ್ಯನ ಮೂಲಕ ಪಡೆದನು. ಜೈಮಿನಿ ಪತಂಜಲಿಯೋಗದ (ಅಷ್ಟಾಂಗಯೋಗದ) ಎಲ್ಲಾ ಅಂಗಗಳನ್ನು (ಮಜಲು ಗಳನ್ನು) ಪರಿಪೂರ್ಣವಾಗಿ ಉಪದೇಶಿಸಿದನು. ಕುಂಡಲಿನೀವಿದ್ಯೆ, ಸಮಾಧಿ ಬ್ರಹ್ಮವಿದ್ಯೆ, ಧ್ಯಾನಮಾರ್ಗ ಇವೇ ಮೊದಲಾದ ಸೂಕ್ಷ್ಮವಿಚಾರಗಳನ್ನು ಗುರುಮುಖದಿಂದ ತಿಳಿದು ಮಹಾಯೋಗಿಯಾದನು. ಜನ್ಮನಿವೃತ್ತಿಯನ್ನು ಪಡೆದನು. ಹೀಗೆ ಸುಷುಮ್ನಾನಾಡಿಯ ಮೂಲಕ, ಬ್ರಹ್ಮರಂಧ್ರವನ್ನು ಸೇರಿ ಪ್ರಾಣವಾಯುವನ್ನು ಹೊರಗೆಡಹಿ ಶಿವೈಕ್ಯನಾದನು. ಹೀಗೆ ಪುತ್ರನೃಪನು ಮುಕ್ತಿಭೂಷಿತನಾದನು. ಜೀವನ್ಮುಕ್ತನಾದಿ ಮುಕ್ತಿಲೋಕವನ್ನು ಸಾರ್ದನು.

ಮಹೇಚ್ಛೋ=ಮಹಾಶಯಃ—"ಮಹೇಚ್ಛಸ್ತು ಮಹಾಶಯಃ" ಇತ್ಯಮರಃ—ಜನ್ಮ ಭೀರುಃ=ಸಂಸಾರಭೀರುಃ—ಪರಿಕೀರ್ಯ = ವಿಸೃಜ್ಯ—ಮನೀಷಿಣೋ— ಬ್ರಹ್ಮವಿದ್ಯಾ ವಿದುಷೇ — ಸಯೋಗಾದ್ಯೋಹಿನಸ್ತಸ್ಮಾಜ್ಜೈಮಿನೇರ್ಯೋಗಂ ಯೋಗವಿದ್ಯಾಮಧಿ ಗಮ್ಯಾಜನ್ಮನೇ, ಜನ್ಮನಿವೃತ್ತಯೇ, ಮೋಕ್ಷಾಯಾ ಕಲ್ಪತ ಸಮಪದ್ಯತ—ಪರಿಕೀರ್ಯ = ವಿತೀರ್ಯ(ಆತ್ಮಜನೊಳು) ಇರಿಸಿ—ಮಹೇಚ್ಛಃ = ತಾನು ಬ್ರಹ್ಮವಿದನಾಗಿ—ಜನ್ಮ ಭೀರು = ಜರಾಮರಣದ ಕೋಟಲೆಯಿಂದ ಪಾರಾಗಲು—ಅಜನ್ಮನೇ ಅಕಲ್ಪತ = ಜನ್ಮ ರಹಿತನಾಗಿ (ಜೀವನ್ಮುಕ್ತ).

34. ತತಃಪರಂ ತತ್ಪ್ರಭವಃ ಪ್ರಪೇದೇ
ಧ್ರುವೋಪಮೋ ಯೋ ಧ್ರುವಸಂಧಿರುರ್ವೀಂ ॥
ಯಸ್ಮಿನ್ನಭೂಜ್ಜ್ಯಾಯಸಿ ಸತ್ಯಸಂಧೇ ।
ಸಂಧಿರ್ಧ್ರುವಃ ಸಂನಮತಾಮರೀಣಾಮ್ ॥ ೩೪ ॥

ಆ ನೃಪತಿಗೆ ಪುತ್ರನಾಗಿ ಜನಿಸಿದನು ಪುತ್ರರತ್ನನಾದ, ಸತ್ಯಸಂಧ್ಯನೂ, ಸತ್ಯಪ್ರತಿಜ್ಞ ನೆಂದು ಪ್ರಖ್ಯಾತನಾದ ಧ್ರುವಸಂಧಿಯೆಂಬವನು. ಅವನು ಉತ್ತಾನಪಾದನ ಪುತ್ರನಾದ ಧ್ರುವನಂತೆ ಪ್ರಖ್ಯಾತನು, ವಿಶ್ವವಿಖ್ಯಾತನು, ಅಚಲನು, ಸತ್ಯಪರಾಕ್ರಮಿ, ಉಪಮಾತೀತ ನಾದ ರಾಜನು. ತನ್ನ ವೈರಿಗಳನ್ನು ತನ್ನ ಹತೋಟಿಯಲ್ಲಿಟ್ಟಿದನು. ಅವರು ಅವನ ಎದುರು ತಲೆ ಎತ್ತಿ ನಿಲ್ಲಲು ಶಕ್ತರಾಗಿರಲಿಲ್ಲ. ಸಂಧಿ ಮೊದಲಾದ ಆರು ಉಪಾಯಗಳಿಂದ

ಶತ್ರುಗಳನ್ನು ಮಣಿಸಿ ತನ್ನ ವಜ್ರಮುಷ್ಟಿಯಲ್ಲಿರಿಸಿ ರಾಜ್ಯವಾಳಿದ ರಾಜಗಂಭೀರ ರಾಜತೇಜ, ರಾಜಮಾರ್ತಾಂಡ. ಅವರು ಅವನ ಎದುರು ತಲೆ ಎತ್ತಿ ನಿಲ್ಲಲು ಶಕ್ತರಾಗಿರಲಿಲ್ಲ. ಅಂತಹ ಸತ್ವಶಾಲಿ ಧ್ರುವಸಂಧಿ ಸಾಮ್ರಾಟನು. ಅವನ ಕಾಲದಲ್ಲಿ ಸಾಮ್ರಾಜ್ಯದ ಎಲ್ಲೆಡೆಗಳಲ್ಲೂ ಶಾಂತಿಸುಭಿಕ್ಷೆ ನೆಲಸಿತ್ತು.

ತತಃಪರಂ ಸ ಪುಷ್ಯಃ ಪ್ರಭವಃ ಕಾರಣಂ ಯಸ್ಯ ಸ = ತತ್ಪ್ರಭವಃ = ತದಾತ್ಮಜ ಇತ್ಯರ್ಥಃ — ಧ್ರುವೇಣೌತ್ತಾನಪಾದಿನೋಪಮೇಯಃ — ಧ್ರುವಔತ್ತಾನಪಾದಿನೋಪಮೇಯಃ — "ಧ್ರುವಔತ್ತಾನಪಾದಿಃ ಸ್ಯಾತ್" — ಇತ್ಯಮರಃ — ಸತ್ಯಸಂಧೇ = ಸತ್ಯಪ್ರತಿಜ್ಞೇ — ತತ್ ಪ್ರಭವಃ = ಅವನಿಂದ ಹುಟ್ಟಿದ — ಧ್ರುವೋಪಮೇಯ = ಧ್ರುವನಿಗೆ ಸಾಟಿಯಾದ.

35. ಸುತೇ ಶಿಶಾವೇವ ಸುದರ್ಶನಾಖ್ಯೇ ।
ದರ್ಶಾತ್ಯಯೇಂದುಪ್ರಿಯದರ್ಶನೇ ಸಃ ॥
ಮೃಗಾಯತಾಕ್ಷೋ ಮೃಗಯಾವಿಹಾರೀ ।
ಸಿಂಹಾದವಾಪದ್ವಿಪದಂ ನೃಸಿಂಹಃ ॥ ೩೫ ॥

ರಾಜಕುಲತಿಲಕನಾದ ಧ್ರುವಸಂಧಿಯು ಮಾನವ ಶ್ರೇಷ್ಠನು. ಪುರುಷಸಿಂಹನಾದ ನರೇಂದ್ರನು. ಉಗ್ರನರಸಿಂಹನಂತೆ ಮಹಾಬಲನು (ವಜ್ರಾಂಗನು). ಜಿಂಕೆಯಂತೆ ಮನೋಹರವಾದ ಕಣ್ಣುಳ್ಳ (ಮೃಗನೇತ್ರನು) ಆಯತಾಂಬಕನು. ಅವನ ಪುತ್ರನು ಸುದರ್ಶನನು ಇನ್ನೂ ಬಾಲಕನಾಗಿದ್ದಾಗಲೇ ತಂದೆಯಾದ ಧ್ರುವಸಂಧಿಯು ಮೃಗಯಾ ವಿಹಾರಕ್ಕೆ (ಮೃಗಬೇಟೆಗೆ) ಕಾಡಿಗೆ ತೆರಳಿದನು. ದುರದೃಷ್ಟದಿಂದ ಆ ರಾಜನು ಸಿಂಹ ಬೇಟೆಯಲ್ಲಿ ಮಗ್ನನಾಗಿದ್ದಾಗ, ಒಂದು ವ್ಯಗ್ರವಾದ ಸಿಂಹದ ದಾಳಿಗೆ ಸಿಲುಕಿ ಅಪಮೃತ್ಯುವಿಗೆ ಬಲಿಯಾದನು. ಕೃಷ್ಣಪಕ್ಷವು ಕಳೆದು ಪಾಡ್ಯದ ದಿನ ಅಥವಾ ಬಿದಿಗೆಯ ದಿನ ತೋರುವ ಚಂದ್ರನಂತೆ ಬಾಲಕನಾದ ಸುದರ್ಶನನು ವಂಶವೆಂಬ ಆಕಾಶದಲ್ಲಿ ಪ್ರಿಯ ದರ್ಶನನಾಗಿ, ಜನರ ಆಶಾಜ್ಯೋತಿಯಾಗಿ ಎಳೆಯನಾದ ಸುದರ್ಶನನು ವಂಶದ ಹಸುರಿನ ಚಿಗುರಾಗಿ, ವಂಶದ ಉಸಿರಾಗಿ ಶೋಭಿಸುತ್ತಿದ್ದನು (ದರ್ಶಾತ್ಯಯೇಂದುವೊಲು ಪ್ರಿಯದರ್ಶನಾದವನು).

ನೃಸಿಂಹ = ಪುರುಷಶ್ರೇಷ್ಠ — ದರ್ಶಾತ್ಯಯೇಂದುಪ್ರಿಯದರ್ಶನೇ — ಪ್ರತಿಪಚಂದ್ರನಿಭೇ — ಸಿಂಹಾದ್ವಿಪದಂ ಮರಣಮವಾಪತ್ — ವ್ಯಸನಾಸಕ್ತಿರನರ್ಥಾವಹೇತಿ ಭಾವಃ — ದರ್ಶಾತ್ಯಯೇಂದುಪ್ರಿಯದರ್ಶನೇ = ಅಮಾವಾಸ್ಯೆ ಕಳೆದಬಳಿಕ ಉದಿಸುವ ಪಾಡ್ಯದ ಚಂದ್ರನಂತೆ.

36. ಸ್ವರ್ಗಾಮಿನಸ್ತಸ್ಯ ತಮೈಕಮತ್ಯಾತ್ ।
ಅಮಾತ್ಯವರ್ಗಃ ಕುಲತಂತುಮೇಕಮ್ ॥
ಅನಾಥದೀನಾಃ ಪ್ರಕೃತೀರವೇಕ್ಷ್ಯ ।
ಸಾಕೇತನಾಥಂ ವಿಧಿವಚ್ಚಕಾರ ॥ ೩೬ ॥

ಧ್ರುವಸಂಧಿಯು ಇಹಲೋಕಯಾತ್ರೆಯನ್ನು ಮುಗಿಸಿ ಅಮರಲೋಕಕ್ಕೆ ತೆರಳಿದ ಬಳಿಕ ಅಮಾತ್ಯರೆಲ್ಲಾ ಒಟ್ಟುಸೇರಿ ಭವಿಷ್ಯದ ಬಗ್ಗೆ ಚರ್ಚಿಸಿದರು. ರಾಜನಿಲ್ಲದೆ ತಬ್ಬಲಿಗಳಾಗಿರುವ ಪುರಜನರ, ಪ್ರಜೆಗಳ ದೇಶದ ಕಷ್ಟವನ್ನು ನೆನೆದು ವಂಶದ ಒಂದೇ ಒಂದು ತಂತು ಉಳಿದಿರುವುದನ್ನು ಮನಗಂಡು ಆ ಬಾಲಕನಾದ ಸುದರ್ಶನನನ್ನು ವಿಧ್ಯುಕ್ತರೀತಿಯಲ್ಲಿ ರಾಜ್ಯಪಟ್ಟಾಭಿಷೇಕಮಾಡಿ ಪಟ್ಟಗಟ್ಟಿದರು. ಕುಲದ ಏಕಮಾತ್ರ ತಂತುವಾಗಿರುವ. ವಂಶವನ್ನು ವಿಸ್ತರಿಸುವ ಒಂದೇ ಒಂದು ದಾರವಾಗಿರುವ (ವಂಶದ ಕುಡಿ) ವಂಶದ ಆಶಾಕಿರಣವಾಗಿರುವ ಬಾಲಕ ಸುದರ್ಶನನನ್ನು ಪಟ್ಟದಲ್ಲಿ ಕುಳ್ಳಿರಿಸಿ, ಹಿರಿಯರಾದ ಸಚಿವರು ರಾಜ್ಯದ ಆಡಳಿತೆಯನ್ನು ಯಥಾವತ್ತಾಗಿ ನಡೆಸುತ್ತಿದ್ದರು.

ಅನಾಥಾ=ನಾಥಹೀನಾ ಅತ ಏವ ದೀನಾಃ ಶೋಚ್ಯಾಃ ಪ್ರಕೃತಿಃ = ಪ್ರಜಾ—ಕುಲತಂತುಂ = ಕುಲಾವಲಂಬನಮೇಕಾಮದ್ವಿತೀಯಂ—ಸಾಕೇತನಾಥಮಯೋಧ್ಯಾಧೀಶ್ವರಂ—ಅನಾಥದೀನಾಃ = ತಬ್ಬಲಿಗಳಿರುವ.

37. **ನವೇಂದುನಾ ತನ್ನಭಸೋಪಮೇಯಂ ।**
**ಶಾವೈಕಸಿಂಹೇನ ಚ ಕಾನನೇನ ॥**
**ರಘೋಃ ಕುಲಂ ಕುಡ್ಮಲಪುಷ್ಕರೇಣ ।**
**ತೋಯೇನ ಚಾಪ್ರೌಢನರೇಂದ್ರಮಾಸೀತ್** ॥ ೩೭ ॥

ರಘುಕುಲವು ಅಂದು ಬಾಲನೃಪನಾದ ಸುದರ್ಶನನಿಂದ ಈ ತೆರನಾಗಿ ಕಾಣಿಸುತ್ತಿತ್ತು. ಒಂದೇ ಒಂದು ಸಿಂಹಶಾಬಕನಿಂದ ಶೋಭಿಸುವ ಕಾಡಿನಂತೆ (ಸಿಂಹಶಾಬಕದಿಂದಲೆಸೆವ ಕಾನನದಂತೆ) ಅಥವಾ ಬಾಲಶಶಿಯಿಂದ ಎಸೆಯುವ ನೀಲಾಕಾಶದಂತೆ, ಅಥವಾ ಒಂದೇ ಒಂದು ತಾವರೆಯ ಮೊಗ್ಗಿನಿಂದ ಮೆರೆಯುತ್ತಿರುವ ಸರೋವರದಂತೆ (ಕಮಲಕುಟ್ಮಲ ಕಲಿತ ವರ ಸರೋವರದಂತೆ) ಅಪ್ರಾಪ್ತವಯಸ್ಕನಾದ ಆ ಬಾಲಕನೃಪನಿಂದ ಸೂರ್ಯವಂಶವು ಎಸೆದಿತ್ತು. ಅಮಾವಾಸ್ಯೆಯು ಕಳೆದ ಶುಕ್ಲಪಕ್ಷದ ಮೊದಲನೆಯ ದಿನವಾದ ಪಾಡ್ಯದಂದು ಅಥವಾ ಬಿದಿಗೆಯಂದು ವಿಶಾಲವಾದ ಬಾನಲ್ಲಿ (ಗಗನದಲ್ಲಿ. ಅಂಬರದಲ್ಲಿ) ಬಾಲಚಂದ್ರಮನಂತೆ ಆ ಶಿಶುವು ತೋರುತ್ತಿದ್ದನು. ಮೂಡಿಬರುವ ಆಶಾಕಿರಣದಂತೆ, ಆಶಾಜ್ಯೋತಿಯೆಂಬಂತೆ ಕುಲವೆಂಬ ಆಕಾಶದಲ್ಲಿ ಆ ಬಾಲಸೂರ್ಯನು ಕಂಗೊಳಿಸುತ್ತಿದ್ದನು.

ನವೇಂದುನಾ = ಬಾಲಚಂದ್ರೇಣ—ನಭಸಾ = ವ್ಯೋಮ್ನಾ—ಶಾಬಃ = ಶಿಶುರೇಕಃ ಸಿಂಹೋ ಯಸ್ಮಿನ್—"ಪೃಥುಕಃ, ಶಾವಕಃ, ಶಿಶುಃ" ಇತ್ಯಮರಃ—ನವೇಂದ್ವಾದ್ಯುಪಮಾನೇನ ತಸ್ಯ ವರ್ಧಿಷ್ಣುತಾ ಶೌರ್ಯಶ್ರೀಮತ್ತ್ವಾನಿ ಸೂಚಿತಾನಿ ॥

38. **ಲೋಕೇನ ಭಾವೀ ಪಿತುರೇವ ತುಲ್ಯಃ ।**
**ಸಂಭಾವಿತೋ ಮೌಲಿಪರಿಗ್ರಹಾತ್ ॥**
**ದೃಷ್ಟೋ ಹಿ ವೃಣ್ವನ್ ಕಲಭಪ್ರಮಾಣೋಽ ।**
**ಪ್ಯಾಶಾಃ ಪುರೋ ವಾತಮವಾಪ್ಯ ಮೇಘಃ** ॥ ೩೮ ॥

ಮುಕುಟಧಾರಣೆ ಮಾಡಿಕೊಂಡ ತಂದೆಯನ್ನು ಹೋಲುವ ಆ ಬಾಲಕ ಸಾಮ್ರಾಟನನ್ನು ತಮ್ಮ ಹಿಂದಿನ ಸಾಮ್ರಾಟನಂತೆಯೇ ಸಾಮ್ರಾಜ್ಯದ ಸಮಸ್ತ ಪ್ರಜೆಗಳು ಗೌರವಾದರ ದಿಂದ ಕಂಡರು. ಪಟ್ಟಾಭಿಷಿಕ್ತನಾಗಿ ಸಮಸ್ತ ಜವಾಬ್ದಾರಿಯನ್ನು ವಹಿಸಿಕೊಂಡು ಕುಲ ಸಚಿವರ ಸಹಾಯದಿಂದ ನಡೆಸುವನೆಂದು ತಿಳಿದ ಜನರು ಮುಂದೆ ತನ್ನ ತಂದೆಯಂತೆಯೇ ಸಮರ್ಥನಾಗಿ ರಾಜ್ಯಭಾರವನ್ನು ನಡೆಸಬಲ್ಲನೆಂದು ತಿಳಿದು ಅವರು ಹರ್ಷಿತರಾದರು. ಒಂದು ಮರಿಯಾನೆ ಗಾತ್ರದ ಮೋಡವೊಂದು ಮುಂಗಾಳಿಯು ಜೋರಾಗಿ ಬೀಸುತ್ತಿ ರಲು ಚತುರ್ದಿಕ್ಕುಗಳಲ್ಲಿ ಚುರುಕಾಗಿ ಓಡಾಡಿ ಗೋಚರಿಸದೇನು? ಅದರಂತೆ ರಾಜ್ಯದ ಆಡಳಿತಸೂತ್ರವನ್ನು ಕೈಯಲ್ಲಿ ಧರಿಸಿ ಹಿರಿಯರಾದ ಮಂತ್ರಿಗಳ ಸಹಾಯದಿಂದ ಪರಿಣಾಮಕಾರಿಯಾಗಿ ರಾಜ್ಯಾಡಳಿತೆಯನ್ನು ಆ ಬಾಲಕ ನರೇಶ್ವರನು ಚಾಲನೆಯಿತ್ತು ನಡೆಸತೊಡಗಿದನು.

ಮೌಲಿ ಪರಿಗ್ರಹಾತ್ = ಕಿರೀಟ ಸ್ವೀಕಾರಾದ್ಧೇತೋಃ—ಲೋಕೇನ = ಜನೇನ ಸಂಭಾವಿತಸ್ತರ್ಕಿತಃ—ಕಲಭಪ್ರಮಾಣಃ ಕಲಭಮಾತ್ರೋಽಪಿ ಮೇಘಃ ॥

39. ತಂ ರಾಜವೀಥ್ಯಾಮಧಿಹಸ್ತಿ ಯಾಂತಂ ।
ಆಧೋರಣಾಲಂಬಿತಮಗ್ರ್ಯವೇಶಮ್ ॥
ಷಡ್ವರ್ಷದೇಶೀಯಮಪಿ ಪ್ರಭುತ್ವಾತ್ ।
ಪ್ರೈಕ್ಷಂತ ಪೌರಾಃ ಪಿತೃಗೌರವೇಣ ॥ ೩೯ ॥

ಮೌಲಿಪರಿಗ್ರಹಾತ್ ಕಿರೀಟಸ್ವೀಕಾರಾದ್ಧೇತೋಃ—ಲೋಕೇನ = ಜನೇನ ಸಂಭಾವಿತ ಸ್ತರ್ಕಿತಃ—ಕಲಭಪ್ರಮಾಣಃ ಕಲಭಮಾತ್ರೋಽಪಿ ಮೇಘಃ ॥

ಚಾರುವೇಷವ ಧರಿಸಿ ಪಟ್ಟದಾನೆಯನ್ನೇರಿ. ರಾಜಬೀದಿಯಲ್ಲಿ ಬರುತ್ತಿರುವ ಆರು ವರ್ಷದ ರಾಜಕುಮಾರನನ್ನು (ಷಡ್ವರ್ಷದರಸನನು) ಕಂಡು ಸಾಕೇತದ ಪುರಜನರು ನಲಿದರು. ಸುದರ್ಶನನ ತಂದೆಯ ಮೇಲೆ ತೋರುತ್ತಿದ್ದ ಗುರುಭಾವನೆ, ಒಡೆಯನೆಂಬ ಗೌರವಾದರಗಳನ್ನು ತೋರುತ್ತಿದ್ದರು. ಪ್ರಭುತ್ವವನ್ನು ವಹಿಸಿದ ರಾಜಸೂನುವು ಪಟ್ಟದಾನೆಯನ್ನೇರಿ ಬೆಳ್ಗೊಡೆಯ ನೆರಳಲ್ಲಿ ಬರುತ್ತ ಪ್ರಜೆಗಳಿಗೆ ತನ್ನ ದರ್ಶನದಿಂದ ಮೋದವೀಯುತ್ತಿದ್ದನು.

ರಾಜವೀಥ್ಯಾಂ=ರಾಜಮಾರ್ಗೇಽಧಿಹಸ್ತಿ ಹಸ್ತಿನಿ-ವಿಭಕ್ತ್ಯರ್ಥೇಽವ್ಯಯೀಭಾವಃ—ಯಾಂತಂ ಗಚ್ಛಂತಮ್—ಆಧೋರಣಾಲಂಬಿತಂ ಶಿಶುತ್ವಾತ್ಸಾದಿನಾ ಗೃಹೀತಮಗ್ರ್ಯ ವೇಶಮುದಾರನೇಪಥ್ಯಂ ಷಡ್ವರ್ಷಾಣಿ ಭೂತಃ ಷಡ್ವರ್ಷಃ—"ತದ್ಧಿತಾರ್ಥ" ಇತ್ಯಾದಿನಾ ಸಮಾಸಃ (ಪಾಣಿನಿ)—"ತಮಧೀಷ್ಟೋ ಭೃತೋ ಭೂತೋ ಭಾವೀ ಇತ್ಯಧಿಕಾರೇ —ಚಿತ್ತವೃತ್ತಿನಿತ್ಯಮ್" ಇತಿ ತದ್ಧಿತಸ್ಯ ಲುಕ್— ಷಡ್ವರ್ಷದೇಶೀಯ = ಆರು ವರ್ಷದ ಅರ್ಭಕ—ರಾಜವೀಥ್ಯಾಮ್ = ರಾಜಬೀದಿಯಲ್ಲಿ—ಅಧಿಹಸ್ತಿ=ಆನೆಯ ಮೇಲೆ (ಅಂಬಾರಿ ಯಲ್ಲಿ) ಆಧೋರಣಾಲಂಬಿತ = ಮಾವುತನಿಂದ ಸಹಾಯಮಾಡಲ್ಪಟ್ಟ— ಅಗ್ರ್ಯ ವೇಷಮ್ = ಚಾರುವೇಷವ ತಳೆದು—ಪ್ರಭುತ್ವಾತ್ = ಪ್ರಭುತ್ವವನ್ನು (ದೊರೆತನ) ವಹಿಸಿದ.

**40. ಕಾಮಂ ನ ಸೋಽಕಲ್ಪತ ಪೈತೃಕಸ್ಯ।**
**ಸಿಂಹಾಸನಸ್ಯ ಪ್ರತಿಪೂರಣಾಯ॥**
**ತೇಜೋ ಮಹಿಮ್ನಾ ಪುನರಾವೃತಾತ್ಮಾ।**
**ತದ್ವ್ಯಾಪ ಚಾಮೀಕರ ಪಿಂಜರೇಣ ॥ ೪೦ ॥**

ಹಿರಿಯರು ಕುಳಿತುಕೊಂಡು ರಾಜ್ಯಭಾರವಮಾಡಿದ ವಂಶಪಾರಂಪರ್ಯವಾಗಿ ಬಂದಿರುವ ಹೇಮಸಿಂಹಾಸನದಲ್ಲಿ ಕುಳಿತು ರಾಜ್ಯವಾಳತೊಡಗಿದನು. ಚಿಕ್ಕಬಾಲಕನಾದುದರಿಂದ ಸಿಂಹಾಸನವನ್ನು ಪೂರ್ಣವಾಗಿ ತುಂಬದೆ ಇದ್ದರೂ ತನ್ನ ದೇಹದ ಕಾಂತಿಯಿಂದ ವಂಶ ಗೌರವ, ಪ್ರಜೆಗಳ ಪರಿಪೂರ್ಣವಾದ ಬೆಂಬಲದ ಮಹತ್ವದಿಂದ ಅವನು ಪೂರ್ಣನೆಂದೇ ಕಂಡನು. ಅಪೂರ್ಣನಾಗಿ ಕಾಣಿಸಿಕೊಳ್ಳಲಿಲ್ಲ. ಸುವರ್ಣವು ತನ್ನ ನಿಜಮಹಿಮೆಯನ್ನು ತೋರುವಂತೆ ಪುಟವಿಟ್ಟ ಚಿನ್ನವು, ಸ್ವರ್ಣಪುತ್ಥಳಿಯು ಹೇಮಕಾಂತಿಯು ಸ್ಪಷ್ಟವಾಗಿ ಎದ್ದು ತೋರುವಂತೆ. ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು ಎಂಬಂತೆ, ಆ ಪುತ್ರನು ತನ್ನ ಹಿರಿಯರ ಸ್ಥಳವಲ್ಲಿ ಕುಳಿತು ಕಾರ್ಯಗೌರವವನ್ನು ಎಲ್ಲರ ಸಹಕಾರದಿಂದ ನಡೆಸುತ್ತ ಆ ಸ್ಥಾನಕ್ಕೆ ಯೋಗ್ಯನೆನಿಸಿತುಬಿರ್ದನು.

ಸ ಸುದರ್ಶನಃ ಪೈತೃಕಸ್ಯ ಸಿಂಹಾಸನಸ್ಯ ಕಾಮಂ=ಸಮ್ಯಕ್ ಪ್ರತಿ ಪೂರಣಾಯ ನಾಕಲ್ಪತ —ಚಾಮೀಕರಪಿಂಜರೇಣ ಕನಕಗೌರೇಣತೇಜೋಮಹಿಮ್ನಾ=ಪುನಸ್ತೇಜಃ ಸಂಪದಾತ್ಮಾ ವೃತಾತ್ಮಾ= ವಿಸ್ತಾರಿತ ದೇಹಃ ಸನ್, ತತ್ ಸಿಂಹಾಸನಂ ವ್ಯಾಪ=ವ್ಯಾಪ್ತವಾನ್॥

**41. ತಸ್ಮಾದಧಃ ಕಿಂಚಿದಿವಾವತೀರ್ಣಾ।**
**ವಸಂ ಸ್ಪೃಶಂತೌ ತಪನೀಯಪೀಠಮ್ ॥**
**ಸಾಲಕ್ತಕೌ ಭೂಪತಯಃ ಪ್ರಸಿದ್ಧೈಃ।**
**ವವಂದಿರೇ ಮೌಲೀಭಿರಸ್ಯ ಪಾದೌ ॥ ೪೧ ॥**

ಆ ಬಾಲಭೂಪಾಲನು (ಸುದರ್ಶನ) ಹರಿಪೀಠದಲ್ಲಿ ಕುಳ್ಳಿರಲು ಅಲಂಕೃತವಾದ ಮುಕುಟಗಳನ್ನು ಧರಿಸಿದ ಮುಕುಟಮಣಿಗಳು, ಮುಕುಟಧರರಾದ ಸಾಮಂತರಾಜರು (ಉನ್ನತಕಿರೀಟಧರಧರಾಧಿಪರು) ಬಂದು ಅಲತಿಗೆಯ ಗುರುತುಗಳಿರುವ ಬಾಲಕಾಲ್ಗಳಿಗೆ ಭಯಭರಿತ ಭಕ್ತಿಯಿಂದ ಎರಗಿದರು. ಆ ಬಾಲಕನ ಪುಟ್ಟ ಕಾಲ್ಗಳು (ಕುರುಕಾಲುಗಳು, ಛೋಟಾಕಾಲುಗಳು) ಜೋತಾಡುತ್ತಾ ಕನಕಮಯ ಕಾಲ್ಮಣೆಯನ್ನು ಸೋಂಕದಿದ್ದರೂ ಸ್ಥಾನಗೌರವಕ್ಕೆ ಬೆಲೆಯಿತ್ತು ಆಶ್ರಿತರಾಜರು ಅಲತಿಗೆಯ ಲೇಪಿಸಿದ ಅಡಿಗಳಿಗೆ ಎರಗಿ ನಮಸ್ಕರಿಸಿದರು.

ತಸ್ಮಾತ್ಸಿಂಹಾಸನಾದಪಾದಾನಾತ್ ಅಧೋಽಧೋದೇಶಂ ಪ್ರತಿ ಕಿಂಚಿದಿವಾವತೀರ್ಣಾ ವೀಷಲ್ಲಂ ಬೌತಪನೀಯ ಪೀಠಂ=ಕಾಂಚನಪೀಠಮಸಂಸ್ಪೃಶನ್ತೌ ಅಲ್ಪಕತ್ವಾದವ್ಯಾಪ್ತೌ ಸಾಲಕ್ತಕೌ=ಲಾಕ್ಷಾರಸಾಪಸಿಕ್ತಾವಸ್ಯ ಸುದರ್ಶನಸ್ಯ ಪಾದೌ ಭೂಪತಯಃ ಪ್ರಸಿದ್ಧೈರುನ್ನತೈರ್ಮೌಲಿಭಿ=ರ್ಮುಕುಟೈರ್ವವಂದಿರೇ ॥

42. ಮಣೌ ಮಹೀನೀಲ ಇತಿ ಪ್ರಭಾವಾತ್ ।
ಅಲ್ಪಪ್ರಮಾಣೇऽಪಿ ಯಥಾ ನ ಮಿಥ್ಯಾ॥
ಶಬ್ದೋ ಮಹಾರಾಜ ಇತಿ ಪ್ರತೀತಃ ।
ತಥೈವ ತಸ್ಮಿನ್ ಯುಯುಜೇऽರ್ಭಕೇऽಪಿ ॥ ೪೨ ॥

ಇಂದ್ರನೀಲಮಣಿಯು (ಕೋಹಿನೂರು ವಜ್ರ) ಗಾತ್ರದಲ್ಲಿ ಚಿಕ್ಕದಾದರೂ ಮಹತ್ತಾದ ಪ್ರಕಾಶವನ್ನು ಬೀರಿ ಪ್ರಭಾವಿತವಾಗುವಂತೆ (ಚಿಕ್ಕದಾದರೂ ರಕ್ಷ ಅಮಿತತೇಜವ ತಳೆದು) ಸಿಂಹಾಸನದಲ್ಲಿ ಕುಳಿತು ಮಹಾರಾಜನಂತೆ ಶೋಭಿಸುತ್ತ ಮಹಾರಾಜನಲ್ಲಿರ ಬೇಕಾದ ಎಲ್ಲಾ ಗುಣಗಳನ್ನು ಸೂಕ್ಷ್ಮರೂಪದಲ್ಲಿ ಪಡೆದಿದ್ದನು. ಮಹಾರಾಜನೆಂಬ ಶಬ್ದಕ್ಕೆ ಶಕ್ಯವನಾಗಿ ಅರ್ಹನಾಗಿ ಕಂಡನು. ತಾನು ಕಿರಿಯನಾದರೂ ಅಮಿತ ತೇಜವ ತಳೆದು ತಂದೆಯಾದ ಅಳಿದ ಮಹಾರಾಜನಂತೆ ಅವರ ಪ್ರತೀಕವಾಗಿ, ಸಣ್ಣ ಪ್ರತಿಬಿಂಬವಂತೆ ಎಸೆದಿರ್ದನು.

ಅಲ್ಪಪ್ರಮಾಣೇऽಪಿ ಮಣೌ=ಮಿಂದ್ರನೀಲೇ ಪ್ರಭಾವಾತ್ತೇಜಿಷ್ಠತ್ವಾದ್ದೇತೋರ್ಮಹಾನೀಲ ಇತಿ ಶಬ್ದೋ ಯಥಾ ಮಿಥ್ಯಾ=ನಿರರ್ಥಕೋ ನ ತಥೈವಾರ್ಭಕೇ=ಶಿಶಾವಪಿ ತಸ್ಮಿನ್ ಸುದರ್ಶನೇ ಪ್ರತೀತಃ=ಪ್ರಸಿದ್ಧೋ ಮಹಾರಾಜ ಇತಿ ಶಬ್ದೋ ನ ಮಿಥ್ಯಾ ಯಯುಜೇ —ಮಹಾನೀಲ = ಇಂದ್ರನೀಲ—ಪ್ರತೀತ = ಪ್ರಸಿದ್ಧ—ಯುಯುಜೇ = ಎಸೆದನಲ್ತೆ.

43. ಪರ್ಯಂತಸಂಚಾರಿತ ಚಾಮರಸ್ಯ ।
ಕಪೋಲಲೋಲೋಭಯಕಾಕಪಕ್ಷಾತ್ ॥
ತಸ್ಯಾನನಾದುಚ್ಚರಿತೋ ವಿವಾದಃ ।
ಚಸ್ಖಾಲವೇಲಾಸ್ವಪಿ ನಾರ್ಣವಾನಾಮ್ ॥ ೪೩ ॥

ಆ ಬಾಲನೃಪನು, ಚಾಮರಗಳನ್ನು ಹಿಡಿದು ಪರಿಚಾರಕರು ಇಕ್ಕೆಲದಲ್ಲಿ ನಿಂತು ಬೀಸುತ್ತಿರಲು. ಕೆನ್ನೆಯಲ್ಲಿ ಕೂದಲಿನ ಗೊಂಚಲುಗಳಾದ ಕಾಕಪಕ್ಷಗಳು ಅಲುಗಾಡುತ್ತಾ ಇರಲು ರತ್ನಸಿಂಹಾಸನದಲ್ಲಿ ಕುಳಿತು ರಾಜಾಜ್ಞೆಯನ್ನು ಆದೇಶಿಸುತ್ತಿದ್ದನು (ಬಿತ್ತರಿಸುತ್ತಿದ್ದನು.) ಅವನ ಬಾಯಿಯಿಂದ ಹೊರಬರುತ್ತಿದ್ದ ಮಾತುಗಳು ರಾಜ್ಯಶಾಸನದಂತೆ (ಕಾನೂನುಗಳಂತೆ) ಎಡೆತಡೆಗಳಿಲ್ಲದೆ ಕಡಲದಂಡೆಯು ತನಕ ಭಂಗವಿಲ್ಲದೆ ಮುಟ್ಟುತ್ತಿದ್ದುವು. ಸಾಗರಗಳೇ ಮೇರೆಯಾಗಿರುವ ಧರಿತ್ರಿಯ (ಭರತಖಂಡದ) ಉದ್ದಗಲದಲ್ಲಿ ಆ ಬಾಲಕನ ಆಣತಿನುಡಿಗಳು ಅಡ್ಡಿ ಆತಂಕಗಳಿಲ್ಲದೆ, ನಿರ್ವಿಘ್ನತೆಯಿಂದ ಚರಿಸುತ್ತಿದ್ದುವು. ಚಪಲ ಬುದ್ಧಿಯು ಬಾಲಕರಿಗೆ ಪ್ರಕೃತಿದತ್ತವಾದರೂ (ದೈವದತ್ತ) ಜನರು ಅದು ರಾಜಾಜ್ಞೆಯೆಂದೇ ಭಾವಿಸಿ ಮಹತ್ವವೀಯುತ್ತಿದ್ದರು. (ಆ ಮುಖೋತ್ಪನ್ನವಾದ ಆಣತಿಯ ನುಡಿಗಳವು).

ಪರ್ಯನ್ತಯೋಃ=ಪಾರ್ಶ್ವಯೋಃ ಸಂಚಾರಿತೇ ಯಸ್ಯ ತಸ್ಯ ಬಾಲಸ್ಯ ಸಂಬಂಧಿನ ಕಪೋಲಯೋರ್ಲೋಲಾವುಭೌ ಕಾಕಪಕ್ಷೌ ಯಸ್ಯ ತಸ್ಯಾದಾನನಾದುಚ್ಚರಿತೋ ವಿವಾದೋ=ವಚನವರ್ಣಾನಾಂ ವೇಲಾಸ್ವಪಿನಚಸ್ಖಾಲ—ಚಪಲಸಂಸರ್ಗೇऽಪಿಮಹಾನ್ತೋ ನ ಚಲನ್ತೀತಿ ಧ್ವನಿಃ — ಉಭಯಂಕಾಕಪಕ್ಷಾದಿತ್ಯತ್ರ— "ವೃತ್ತಿವಿಷಯೇ ಉಭಯ

ಪುತ್ರ" ಇತಿ ವತ್ "ಉಭ" ಶಬ್ದಸ್ಥಾನೇ "ಉಭಯಂಶಬ್ದಪ್ರಯೋಗಃ" ಇತ್ಯುಕ್ತಂ ಪ್ರಾಕ್—ಪರ್ಯನ್ತಃ ಚಾಮರಸ್ಯ= ಇಕ್ಕೆಲದಲ್ಲಿ ಚಾಮರವನ್ನು ಬೀಸುತ್ತಿರೆ—ಕಪೋಲಃ ಲೋಲೋ ಭಯಕಾಕಪಕ್ಷಾತ್ = ಕಪೋಲಯೋಃ ಲೋಲೌ ಉಭೌ ಕಾಕಪಕ್ಷೌ ಯಸ್ಯ= ಕೆನ್ನೆಯೊಳು ಜೋಲ್ದಿಳಿದ ಕಾಕಪಕ್ಷಗಳು ಅಲುಗುತಿರಲು (ಲೋಲ)—ವಿವಾದ = ಮಾತುಕತೆ— ಅರ್ಣವಾನಾಂ ಚಸ್ಖಾಲವೇಲಾಸ್ವಪಿ = ಕಡಲದಂಡೆಯು ತನಕ ಭಂಗಗೊಳ ದಿಹವು.

44. ನಿರ್ವರ್ತ್ತಜಾಂಬೂನದಪಟ್ಟಶೋಭೇ ।
ನ್ಯಸ್ತಂ ಲಲಾಟೇ ತಿಲಕಂ ದಧಾನಃ ॥
ತೇನೇವ ಶೂನ್ಯಾನ್ಯರಿಸುಂದರೀಣಾಂ ।
ಮುಖಾನಿ ಸ ಸ್ಮೇರ ಮುಖಶ್ಚಕಾರ ॥ ೪೪ ॥

ಅಭಿಷೇಕ ಸಮಯ, ಕನಕಪಟ್ಟಬಂಧವು ಹಣೆಯಲ್ಲಿ ಶೋಭಿಸುತ್ತಿರಲು, ಹಣೆಯಲ್ಲಿ ಶುಭಸೂಚಕರವಾದ ತಿದ್ದಿಟ್ಟ ತಿಲಕವು ಸಿಂಗಾರವಾಗಿ ಕಾಣುತ್ತಿರಲು, ಆ ಯುವರಾಜನು (ನಗುಮುಖಿನಾಗಿ) ನಗುತ್ತಲೇ ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದನು (ಕನಕಪಟ್ಟ ದೊಳೆಸೆವ ಫಾಲಫಲಕದೊಳವನು). ಹೀಗೆ ಕಾರ್ಯವೆಸಗುತ್ತ ವೈರಿನೃಪರ ಸುಂದರಿ ಯರಾದ ಪತ್ನಿಯರ (ಅರ್ಧಾಂಗಿಯರ) ಮುಖಕಮಲದೊಳಿದ್ದ ತಿಲಕವನ್ನು ಅಳಿಸಿ (ತಿಲಕವನು ತಿದ್ದಿಟ್ಟ ಆ ಸ್ಮೇರಮುಖನು) ಅವರಿಗೆ ವೈಧವ್ಯದೀಕ್ಷೆಯ ನ್ನಿತ್ತನು. ಅವನನ್ನು ಎದುರಿಸಿದ ಅರಿನೃಪರು ಸೋಲನ್ನು ಅನುಭವಿಸಿದರು (ಸೋಲುಂಡರು). ಅವರಿಗೆ ಅವನು ಮೃತ್ಯುದಂಡವನ್ನಿತ್ತನು. ಅವರಿಗೆ ಮರಣವಲ್ಲದೆ ಬೇರೆ ಗತಿಯೇ ಇರಲಿಲ್ಲ.

ಸ್ಮೆರಮುಖಃ = ಸ್ಮಿತಮುಖಃ—ಅರಿಸುಂದರೀಣಾಂ ಮುಖಾನಿ ತೇನೈವ ತಿಲಕೇ ನೈವ ಶೂನ್ಯಾನಿ ಚಕಾರ—ಶತ್ರುವರ್ಗಮವಧೀದಿತಿ ಭಾವಃ ॥

45. ಶಿರೀಷಪುಷ್ಪಾಧಿಕಸೌಕುಮಾರ್ಯಃ ।
ಖೇದಂ ಸ ಯಾಯಾದಪಿ ಭೂಷಣೇನ ॥
ನಿತಾಂತಗುರ್ವೀಮಪಿ ಸೋಽನುಭಾವಾತ್ ।
ಧುರಂ ಧರಿತ್ರ್ಯಾ ಬಿಭರಾಂ ಬಭೂವ ॥ ೪೫ ॥

ಆ ಯುವರಾಜನು ಕೋಮಲಾಂಗನು ಕೋಮಲವಾದ ಅವಯವಗಳನ್ನು ಹೊಂದಿ ದ್ದನು. ಶಿರೀಷಪುಷ್ಪಕ್ಕಿಂತಲೂ ಅಧಿಕ ಕೋಮಲವಾದ ದೇಹವುಳ್ಳ ಆ ಬಾಲಕನೃಪನು ತನ್ನ ವಯಸ್ಸಿಗೆ ತಕ್ಕಂತೆ ಕೆಲವೇ ಬಂಗಾರದ ಒಡವೆಗಳನ್ನು ಧರಿಸಿರುವನು. ಭಾರವಾದ ಒಡವೆವಸ್ತುಭೂಷಣಗಳನ್ನು ಧರಿಸಿದೊಡನೆಯೇ ಬಳಲುವ ಸ್ವಭಾವದ ಕೋಮಲ ಕಾಯನು. ಅನುಭಾವವಶದಿಂದ ಅನುಮಿಶಿಕವಾಗಿ ಬಲುಭಾರವಾದ ಧಾರಣಿಯ (ರಾಜ್ಯ) ಭಾರವೆಂಬ ಹೊರೆಯನ್ನು ಹೊತ್ತಿದ್ದನು. ಆದರೆ ಅವನಲ್ಲಿ ಹುದುಗಿದ್ದ ಪ್ರಕೃತಿ ದತ್ತವಾದ (ಅಂತಃಶಕ್ತಿ, ಹುಟ್ಟುಗುಣ) ಮಹಾಗುಣಗಳ ದೆಸೆಯಿಂದ ಅಂತಹ ಬಲು

ಭಾರವಾದ ಹೊಣೆಗಾರಿಕೆಯನ್ನು ಎಳೆತನದಿಂದ ಹೊತ್ತಿದ್ದನು. ಆಟೋಟಗಳಲ್ಲಿ ಭಾಗ ವಹಿಸತಕ್ಕ ಬಾಲಕನಿಗೆ ಎಂತಹ ಹೊಣೆಗಾರಿಕೆಯ ಕೆಲಸ. ಎಲ್ಲವೂ ವಿಧಿನಿಯಮ.

ಶಿರೀಷಪುಷ್ಪಾಧಿಕಸೌಕುಮಾರ್ಯ = ಕೋಮಲಾಂಗ ಇತ್ಯರ್ಥಃ—ಖೇದಂ = ಶ್ರಮಂ —ಅನುಭಾವಾತ್ = ಸಾಮರ್ಥ್ಯಾತ್ = ಬಿಭರಾಂ ಬಭೂವ = ಬಭಾರ—''ಭೀಹ್ರೀ ಭೃಹುವಾಂ ಶ್ಲುವಚ್ಚ'' ಇತಿ ವಿಕಲ್ಪಾದಾಮ್ ಪ್ರತ್ಯಯಃ ॥

**46. ನ್ಯಸ್ತಾಕ್ಷರಾಮಕ್ಷರಭೂಮಿಕಾಯಾಂ ।**
**ಕಾರ್ತ್ಸ್ನ್ಯೇನ ಗೃಹ್ಣಾತಿ ಲಿಪಿಂ ನ ಯಾವತ್ ॥**
**ಸರ್ವಾಣಿ ತಾವತ್ ಶ್ರುತವೃದ್ಧಯೋಗಾತ್ ।**
**ಫಲಾನ್ಯುಪಾಯುಂಕ್ತ ಸ ದಂಡನೀತೇಃ** ॥ ೪೬ ॥

ಹಲಗೆಯಲ್ಲಿ ಬರೆದುಕೊಟ್ಟ ಅಖಿಲ ಅಕ್ಷರಗಳನ್ನು ಕಲಿತುಕೊಳ್ಳುವಷ್ಟರಲ್ಲಿ, ಅವನು ಪರಿಣತರಾದ ಹಿರಿಯರ ಸಹಾಯದಿಂದ ದಂಡನೀತಿಶಾಸ್ತ್ರ, ರಾಜ್ಯಶಾಸ್ತ್ರ, ರಾಜನೀತಿಶಾಸ್ತ್ರ, ಅರ್ಥಶಾಸ್ತ್ರ ಮೊದಲಾದ ಕ್ಲಿಷ್ಟಕರವಾದ ಶಾಸ್ತ್ರಜ್ಞಾನವನ್ನು ಬಹಳ ಬೇಗನೇ ನಿರಾಯಾಸವಾಗಿ ಅರಿತುಕೊಂಡನು. ಲಿಪಿಜ್ಞಾನ, ಕಾಗುಣಿತ ಮೊದಲಾದ ಅಕ್ಷರಾಭ್ಯಾಸದ ವಿವಿಧ ವಿಚಾರಗಳನ್ನು ತಿಳಿದುಕೊಳ್ಳಲು ಬೇಕಾದ ಅವಧಿಯಲ್ಲಿ (ಅದೇ ಸಮಯದಲ್ಲಿ) ಆ ಸುದರ್ಶನನು ಜ್ಞಾನನಿಧಿಗಳಾದ ವೃದ್ಧರ ದಿವ್ಯಸನ್ನಿಧಿಯಲ್ಲಿ (ಸಾನ್ನಿಧ್ಯದಲ್ಲಿ) ದಂಡನೀತಿಶಾಸ್ತ್ರದ ಸಮಸ್ತ ವಿಚಾರಗಳನ್ನು ಅರಿತುಕೊಂಡು ರಾಜನೀತಿಶಾಸ್ತ್ರ ಸಾರವಿಚಕ್ಷಣನೆನಿಸಿದನು ಜ್ಞಾನವೃದ್ಧರ ದಿವ್ಯ ಸನ್ನಿಧಿಯೊಳವನು.

ಅಕ್ಷರಭೂಮಿಕಾಯಾಮಕ್ಷರಲೇಖನಸ್ಥಲೇ ನ್ಯಸ್ತಾಕ್ಷರಾಂ ರಚಿತಾಕ್ಷರಪಂಕ್ತಿರೇಖಾನ್ಯಾಸಾಂ ಲಿಪಿಂ ಪಂಚಾಶದ್ವರ್ಣಾತ್ಮಿಕಾಂ ಮಾತೃಕಾಂ ಕಾರ್ತ್ಸ್ನ್ಯೇನ ಯಾವನ್ನ ಗೃಹ್ಣಾತಿ ಸ ಸುದರ್ಶನ ಸ್ತಾವಚ್ಛ್ರುತವೃದ್ಧಯೋಗಾದ್ವಿದ್ಯಾವೃದ್ಧಸಂಸರ್ಗಾನ ಸರ್ವಾಣಿ ದಂಡನೀತೇ = ರ್ದಂಡ ಶಾಸ್ತ್ರಸ್ಯ ಫಲಾನ್ಯುಪಾಯುಂಕ್ತಾನ್ವಭೂತ್—ಅಕ್ಷರ ಭೂಮಿಕಾ= ಅಕ್ಷರ ಬರೆಯುವ ತಖ್ತೆ.

**47. ಉರಸ್ಯ ಪರ್ಯಾಪ್ತನಿವೇಶಭಾಗಾ ।**
**ಪ್ರೌಢೀಭವಿಷ್ಯಂತಮುದೀಕ್ಷಮಾಣಾ ॥**
**ಸಂಜಾತಲಜ್ಜೇವ ತಮಾತಪತ್ರ ।**
**ಚ್ಛಾಯಾಚ್ಛಲೇನೋಪಜುಗೂಹ ಲಕ್ಷ್ಮೀ** ॥ ೪೭ ॥

ಆ ಬಾಲಕನ ಎದೆಯಲ್ಲಿ ಒರಗಲು ಅಲ್ಪಾವಕಾಶವಿರುವುದು ಎನ್ನುವುದನ್ನು ಅರಿತು ರಾಜ್ಯಲಕ್ಷ್ಮಿಯು ಬೆಳ್ಗೊಡೆಯ ನೆಳಲನ್ನು ಅಪ್ಪಿಕೊಳ್ಳುವ ನೆವನದಲ್ಲಿ ಅಪ್ಪಿಕೊಂಡಳು. ಬೆಳ್ಗೊಡೆಯ ನೆರಳು ಇನ್ನೊಂದು ರೂಪವಾಗಿರುವಳು ರಾಜ್ಯಲಕ್ಷ್ಮಿಯು ಪ್ರೌಢಾಂಗನೆ. ಪ್ರೌಢಾಂಗನೆಯರು ಪ್ರೌಢಪುರುಷರನ್ನೇ ಬಯಸುವುದು ಲೋಕರೂಢಿ ಅಥವಾ ಲೋಕ ಧರ್ಮ. ಹೀಗಾಗಿ ಇನ್ನೂ ಬಾಲ್ಯಾವಸ್ಥೆಯಲ್ಲಿರುವ, ಪ್ರೌಢಾವಸ್ಥೆಗೆ ಕಾಲಿಡಲು ಇನ್ನೂ ಕಾಲಾವಕಾಶವಿದೆಯೆಂಬುದನ್ನು ಅರಿತು, ಅಂಗಸೌಷ್ಠವವಿಲ್ಲದ ಆ ಬಾಲರಾಜನನ್ನು

ಅಪ್ಪಿ ಆಲಿಂಗಿಸಲು ಇಷ್ಟಪಡದೆ ಬೆಳ್ಗೊಡೆಯ ನೆರಳಿನ ಜೊತೆಯಲ್ಲಿ (ಮರೆಯಲ್ಲಿ) ಲಜ್ಜಿತಳಾಗಿ(ನಾಚಿ) ಆ ಬಾಲಕನನ್ನು ರಾಜ್ಯಶ್ರೀಯು ಅಪ್ಪಿಕೊಂಡಳು.

ಅತ ಏವ ಪ್ರೌಢೀಭವಿಷ್ಯಂತಂ=ವರ್ಧಿಷ್ಯಮಾಣಮುದೀಕ್ಷಮಾಣಾ ಪ್ರೌಢವಪುಷ್ಮಾನ್ ಭವಿಷ್ಯತೀತಿ ಪ್ರತೀಕ್ಷಮಾಣಾ ಲಕ್ಷ್ಮೀಃ ಸಂಜಾತಲಜ್ಜೇನ=ಸಾಕ್ಷಾದಾಲಿಂಗಿತುಂ ಲಜ್ಜತೇವ ತಂ ಸುದರ್ಶನಮ್–ಆತಪತ್ರಚ್ಛಾಯಾಚ್ಛಲೇನೋಪಜಂಗೂಹಾಲಿಲಿಂಗ–ಛತ್ರಚ್ಛಾಯಾ ಲಕ್ಷ್ಮೀರೂಪೇತಿ ಪ್ರಸಿದ್ಧಿಃ ಪ್ರೌಢಾಂಗನಾಯಾಃ ಪ್ರೌಢಪುರುಷಾಲಾಭೇ ಲಜ್ಜಾ ಭವತೀತಿ ಧ್ವನಿಃ—ಅಪರ್ಯಾಪ್ತನಿವೇಶಭಾಗಾ = ಅವನ ಎದೆಯಲ್ಲಿ ಅಲ್ಪ ಅವಕಾಶವಿರುವುದೆಂದು ಅರಿತು.

48. ಅನಶ್ನುವಾನೇವ ಯುಗೋಪಮಾನಂ ।
ಅಬದ್ಧಮೌರ್ವೀಕಿಣಲಾಂಛನೇನ ॥
ಅಸ್ಪೃಷ್ಟಖಡ್ಗತ್ಸರುಣಾಪಿ ಚಾಸೀತ್ ।
ರಕ್ಷಾವತೀ ತಸ್ಯ ಭುಜೇನ ಭೂಮಿಃ ॥ ೪೮ ॥

ಆ ಭರತಭೂಮಂಡಲಕ್ಕೆ (ಭಾರತ) ಅಪ್ರಾಪ್ತವಯಸ್ಕನಾದ ಆ ಬಾಲಕನು ಅಧಿಪತಿಯಾಗಿ ರಕ್ಷಿಸತೊಡಗಿದನು. ಆ ಬಾಲರಾಜನ ಭುಜಮಾತ್ರದಿಂದ ಇಳೆಯು ಸುರಕ್ಷಿತವಾದುದು ನಿಜವಾದರೂ ಆ ಬಾಹುಯುಗಗಳು ನೊಗದ ಹೋಲಿಕೆಯಿರದವುಗಳು, ಅಪ್ರಬುದ್ಧವಾದವುಗಳು, ಸಾದೃಶ್ಯವನ್ನು ಹೊಂದಿರದವುಗಳು. ಅಪ್ರಾಪ್ತವಯಸ್ಸಿನ, ಎಳೆಯ ಬಾಲಕನಾದುದರಿಂದ, ಮೌರ್ವಿಯ ಸೆಳೆತದಿಂದ ಜಡ್ಡುಗಟ್ಟಿದ, ಒರಟಾದ ಗುರುತುಗಳೊಂದೂ ಇರದ ಬಾಲಭುಜಗಳು. ಹರಿತವಾದ ಖಡ್ಗದ ಹಿಡಿಯ ಸೋಂಕನ್ನು ಕಾಣದ ಮುಗ್ಧ ಕೈಗಳು. ಹೀಗಿದ್ದರೂ ಬಾಲಪ್ರಭು ಸುದರ್ಶನನಿಂದ ಸಾಕೇತರಾಜ್ಯದ ಒಡೆತನವು ರಾಜಾರೋಪವಾಗಿ, ಅಡೆತಡೆಗಳಿಲ್ಲದೆ ಭರದಿಂದ ಸಾಗುತ್ತಿತ್ತು. ಒಳಗಿನ ಹೊರಗಿನ ವೈರಿಭಯವಿರದ ಜನತೆ ತಮ್ಮ ವೃತ್ತಿಮಾಧ್ಯಮಗಳನ್ನು ಸಾಗಿಸುತ್ತಿದ್ದರು. ನೀರಾವರಿ, ಗೃಹಕೈಗಾರಿಕೆ, ಕೃಷಿ ಮೊದಲಾದ ಅಭಿವೃದ್ಧಿ ಕಾರ್ಯಗಳು ನಿರಂತರ ಸಾಗುತ್ತಿದ್ದವು.

ಯುಗೋಪಮಾನಂ=ಯುಗಸಾದೃಶ್ಯಮನಶ್ನುವಾನೇನಾ=ಪ್ರಾಪ್ನುವತಾ—ಅಬದ್ಧಂ ಮೌರ್ವೀ ಕಿಣೋ = ಜ್ಯಾಘಾತಗ್ರಂಥಿರೇವ ಲಾಂಛನಂ ಯಸ್ಯ ತೇನ—ಅಸ್ಪೃಷ್ಟಃ ಖಡ್ಗತ್ಸರುಃ=ಖಡ್ಗಮುಷ್ಟಿರ್ಯೇನ ತೇನ—"ತ್ಸರುಃ ಖಡ್ಗಾದಿಮುಷ್ಟೌ ಸ್ಯಾತ್" ಇತ್ಯಮರಃ—ಸುದರ್ಶನಸ್ಯ ಭುಜೇನ ಭೂಮಿಾರಕ್ಷಾವಸ್ಯಾಸೀತ್—ಶಿಶೋರಪಿ ತಸ್ಯ ತೇಜಸ್ವಾದೃಗಿತ್ಯರ್ಥಃ--ಯುಗೋಪಮಾನಂ ವಾನೇವ = (ಅನಶ್ನುವಾನೇನ) = ಯುಗ = ನೊಗ, ನೊಗದ ಹೋಲಿಕೆಯಿಂದ—ಅಬದ್ಧಮೌರ್ವೀಕಿಣಲಾಂಛನೇನ = ಹೆದೆಯ ಕಿಣಮಿಣವಿರದ—ಕಿಣ = ಉಜ್ಜಿ ಆದ ಗಾಯ, ದಡ್ಡುಗಟ್ಟಿದ.

49. ನ ಕೇವಲಂ ಗಚ್ಛತಿ ತಸ್ಯ ಕಾಲೇ ।
ಯಯುಃ ಶರೀರಾವಯವಾ ವಿವೃದ್ಧಿಮ್ ॥

**ವಂಶ್ಯಾಗುಣಾಃ ಖಲ್ವಪಿ ಲೋಕಕಾಂತಾಃ ।**
**ಪ್ರಾರಂಭಸೂಕ್ಷ್ಮಾಃ ಪ್ರಥಿಮಾನಮಾಪುಃ ॥ ೪೯ ॥**

ಕಾಲ ಕಳೆದಂತೆಲ್ಲ (ಕಾಲಚಕ್ರ ಉರುಳಿದಂತೆ) ಸುದರ್ಶನನು ಬೆಳೆದು ದೊಡ್ಡವ ನಾದನು. ದೇಹದ ಅಂಗಾಂಗಗಳು ಸಾಮರಸ್ಯದಿಂದ ಬೆಳೆದು ಶೋಭಿಸುತ್ತ ಎಸೆದುವು. ಅವನು ಜನಪ್ರಿಯನಾಗಿ ಅನ್ವಯದ ಎಲ್ಲಾ ಗುಣಗಳನ್ನು ಪಡೆದು (ಜನಮನಃಪ್ರಿಯ ನೆನಿಸಿದ ಅನ್ವಯದ ಗುಣಗಳಿಂ) ಸಕಲಲೋಕವನ್ನು ಗೆಲ್ಲಬಲ್ಲ, ಲೋಕಾಧಿಪತಿಯಾಗುವ, ಅಸಾಧಾರಣಸಾಮರ್ಥ್ಯವನ್ನು ಪಡೆದಿದ್ದನು. ಬಾಲ್ಯದಲ್ಲಿ ಅತಿ ಸೂಕ್ಷ್ಮವಾಗಿ ಕಾಣಿಸಿ ಕೊಂಡ ಗುಣಗಳಿಂದು (ವಟವೃಕ್ಷದ ಬೀಜವು ಮರವಾಗಿ ಕಾಣಿಸಿಕೊಂಡಂತೆ) ಶರೀರಾವ ಯವಗಳ ಜೊತೆಗೆ ವಿಕಾಸಹೊಂದುತ್ತ ಜನರ ಕಣ್ಮನಗಳನ್ನು ತಣಿಸಲು ಶಕ್ತವಾದುವು. ಸುದರ್ಶನನು ಅಕ್ಷರಶಃ ಪ್ರಿಯದರ್ಶನನಾದನು. ಶೌರ್ಯ, ಔದಾರ್ಯಗಳಿಂದ ಜನಪ್ರಿಯ ನಾದ ಪೃಥ್ವೀಪತಿಯಾದನು (ಪೃಥ್ವೀವಲ್ಲಭನಾದನು).

ಕಾಲೇ ಗಚ್ಛತಿ ಸತಿ ತಸ್ಯ ಕೇವಲಂ ಶರೀರವಯವಾ ಏವ ವಿವೃದ್ಧಿಂ=ಪ್ರಸಾರಂ ನ ಯಯುಃ—ಕಿಂತು ವಂಶೇ ಭವಾವಂಶ್ಯಾಲೋಕಕಾಂತಾ=ಜನಪ್ರಿಯಾಃ ಪ್ರಾರಂಭ=ಆದೌ ಸೂಕ್ಷ್ಮಾಸ್ತಸ್ಯ ಗುಣಾಃ ಶೌರ್ಯೌದಾರ್ಯಾದಯೋಽಪಿ ಪ್ರಥಿಮಾನಂ ಪೃಥುತ್ವಮಾಪುಃ ಖಲು॥ ವಂಶ್ಯಗುಣಾಃ = ಅನ್ವಯದ ಗುಣ—ಆರಂಭಸೂಕ್ಷ್ಮಾಃ = ಮೊಳಕೆಯು ಕುಡಿ, ಬೆಳೆಯು ಸಿರಿ—ಲೋಕಕಾಂತಾ = ಜನಮನ ನಾಯಕ (ಜನಮನಮಂದಾರ) —ಪ್ರತಿ ಮಾನಮಾಪುಃ = ಬೆಳೆಬೆಳೆದು ಶೋಭಿಸುತಲೆಸೆದು.

**50. ಸ ಪೂರ್ವಜನ್ಮಾಂತರದೃಷ್ಟಪಾರಾಃ ।**
**ಸ್ಮರನ್ನಿವಾಕ್ಲೇಶಕರೋ ಗುರೂಣಾಮ್ ॥**
**ತಿಸ್ರಸ್ತ್ರಿವರ್ಗಾಧಿಗಮಸ್ಯ ಮೂಲಂ ।**
**ಜಗ್ರಾಹ ವಿದ್ಯಾಃ ಪ್ರಕೃತೀಶ್ಚ ಪಿತ್ರ್ಯಾಃ ॥ ೫೦ ॥**

ಪೂರ್ವಜನ್ಮದಲ್ಲಿ (ಹಿಂದಿನ ಜನ್ಮಗಳಲ್ಲಿ) ತಾನು ಅಭ್ಯಾಸಮಾಡಿ ತಿಳಿದುಕೊಂಡುದನ್ನು (ತಾಂ ಪೂರ್ವಜನ್ಮದೊಳು ಕೊನೆಗಂಡುದನ್ನಿಂದು) ಪುನಃ ಇಹಜನ್ಮದಲ್ಲಿ ಆಚಾರ್ಯರು ಹೇಳಿದ ಕೂಡಲೇ, ಅವರಿಗೆ ಯಾವ ವಿಧವಾದ ತೊಂದರೆಯನ್ನೂ ಕೊಡದೆ ಕೂಡಲೇ ಗ್ರಹಿಸಿಕೊಳ್ಳುತ್ತಿದ್ದನು. ಪೂರ್ವಜನ್ಮದ ಸಂಸ್ಕಾರದ ಬಲದಿಂದ (ಜನ್ಮವಿಶೇಷೇ ದೃಷ್ಟ ಪಾರಾ) (ವಿದ್ಯಾತ್ರಯವ) ತಾನು ತಿಳಿದುಕೊಂಡ ವಿದ್ಯೆಯು ಇನ್ನೊಂದು ಕೊನೆಯನ್ನು, ತಾನು ಮುಟ್ಟಿದ ವಿದ್ಯೆಯೆಂಬ ಸಾಗರದ ದಡವನ್ನು ಮತ್ತೊಮ್ಮೆ ಅವಲೋಕನಮಾತ್ರ ದಿಂದ ತಿಳಿದುಕೊಳ್ಳುವ ಮೇಧಾಶಕ್ತಿಯನ್ನು ಪಡೆದಿದ್ದನು. ಎಲ್ಲವೂ ಅವನ ಸ್ಮರಣ ಶಕ್ತಿಯಲ್ಲಿದ್ದಂತೆ ಭಾಸವಾಗುತ್ತಿತ್ತು (ಬೀಜಾಂಕುರನ್ಯಾಯ). ಗುರುಗಳನ್ನು ಬಳಲಿಸದೇ ಅವನು ಧರ್ಮ, ಅರ್ಥ, ಕಾಮಗಳೆಂಬ ತ್ರಿವಿಧ ಪುರುಷಾರ್ಥಗಳ ಸಾಧನೆಗೆ ಅವಶ್ಯವಾದ ಸಾಧನ, ಮೂರು ವಿಜ್ಞಾನಗಳನ್ನು ಅಂದರೆ ಮೂರು ವಿದ್ಯೆಗಳನ್ನು ಕೃಷಿ (ವಾಣಿಜ್ಯ), ದಂಡನೀತಿ, ಅರ್ಥಶಾಸ್ತ್ರಗಳೆಂಬ ಮೂರು ವಿಜ್ಞಾನಗಳನ್ನು (ಮೂರು ವೇದಗಳನ್ನು) ತಿಳಿದುಕೊಂಡೂ ತ್ರಿವಿದ್ಯಾಪಾರಾವಾರನಾದನು (ವರ್ಗ ಮೂರರ ಮೂಲವೆನುವ

ಮುಂಬಿಚ್ಚಿಯನು) (ವಾರ್ತಾ, ದಂಡನೀತಿ, ಅರ್ಥಶಾಸ್ತ್ರ) (ಮನುಶಾಸ್ತ್ರ, ಮಾನವ ಧರ್ಮಶಾಸ್ತ್ರ, ವಾಣಿಜ್ಯಶಾಸ್ತ್ರ).

ತನ್ನ ತಂದೆಗೆ ಸಂಬಂಧಿಸಿದ, ಪ್ರಜೆಗಳಿಗೆ ಸಂಬಂಧಿಸಿದ, ಪ್ರಕೃತಿಗೆ ಸಂಬಂಧಿಸಿದ ವಿಷಯಗಳ ವಿಷಯಜ್ಞಾನಪಡೆದ ವಿವೇಕಶಾಲಿಯಾದ ದೊರೆಯಾಗಿ ರಂಜಿಸಿದನು. ವರ್ಗ ಮೂರರ (ಧರ್ಮ, ಅರ್ಥ, ಕಾಮ) ಮೂಲವೆನಿಪ ಮೂರು ವಿದ್ಯೆಯನ್ನು ಗಳಿಸಿ ಅದರ ಜೊತೆಗೆ ಜನರ ಅಧೀನತೆಯನ್ನೂ ಪಡೆದನು. ಆಡಳಿತೆಯನ್ನು ಸ್ವಯಂ ತಾನೇ ನಿರ್ವಹಿಸಿ ಆಡಳಿತದ ಸೂತ್ರವನ್ನು ಹಿರಿಯರಿಂದ ತಾನೇ ಪಡೆದು ಸ್ವತಂತ್ರಪ್ರಭುವಾಗಿ (ನಿರಂಕುಶ ಪ್ರಭುವಾಗಿ) ಆಳತೊಡಗಿದನು.

ಸ ಸುದರ್ಶನಃ ಪೂರ್ವಸ್ಮಿನ್ ಜನ್ಮಾಂತರೇ = ಜನ್ಮವಿಶೇಷೇ ದೃಷ್ಟಪಾರಾಃ— ತ್ರಯಾಣಾಂ ಧರ್ಮಾರ್ಥಕಾಮಾನಾಂ ವರ್ಗಸ್ತ್ರಿವರ್ಗಃ—ಅತ್ರ ಕೌಟಿಲ್ಯಃ—"ಧರ್ಮಾಧರ್ಮೌ ತ್ರಯ್ಯಾಮರ್ಥಾನರ್ಥೌ ವಾರ್ತಾಯಾಂ ನಯಾನಯೌ ದಂಡನೀತ್ಯಾಮ್" ಇತಿ ಗುರೂಣಾಂ ಕ್ಲೇಶಕರಃ = ಗುರುಗಳಿಗೆ ಕಷ್ಟಕೊಡದೆ, ಬಳಲಿಸದೆ—ತಿಸ್ರಃ ವಿದ್ಯಾಃ = ಮೂರು ವಿದ್ಯೆಗಳು—ಪಾರಂಗತ = ಪಾಂಡಿತ್ಯಪಡೆದ ಪಂಡಿತ—ಸ್ಮರನ್ನಿವ = ಪೂರ್ವ ಜನ್ಮದಲ್ಲಿ ಕಲಿತ—ಪ್ರಕೃತೀಃ = ಪ್ರಜೆಗಳು.

**51. ವ್ಯೂಹ್ಯ ಸ್ಥಿತಃ ಕಿಂಚಿದಿವೋತ್ತರಾರ್ಧಂ ।**
**ಉನ್ನದ್ಧ ಚೂಡೋಽಂಚಿತ ಸವ್ಯಜಾನುಃ ॥**
**ಆಕರ್ಣಮಾಕೃಷ್ಟ ಸ ಬಾಣಧನ್ವಾ।**
**ವ್ಯರೋಚತಾಸ್ತ್ರೇಷು ವಿನೀಯಮಾನಃ ॥ ೫೧ ॥**

ಧನುರ್ವಿದ್ಯಾಭ್ಯಾಸದ ಅವಧಿಯಲ್ಲಿ ಆ ವೀರಬಾಲಕನು, ಧನುರ್ವಿದ್ಯೆಯನ್ನು ಗುರು ಮುಖೇನ ಕಲಿತನು. ತನ್ನ ದೇಹದ ಮೇಲ್ಭಾಗವನ್ನು (ಎದೆಯನ್ನು) ವಿಸ್ತಾರವಾಗಿ ಹರಡಿಸಿಕೊಂಡು (ಮೈಯ ಮೊದಲರ್ಧವನು ಹಸರಿಸುತಲೊಂದಿನಿಸು) ಎಡಕಾಲನ್ನು ಒಂದು ಹೆಜ್ಜೆ ಮುಂದಕ್ಕಿರಿಸಿ ನಿಂದಿರುತ್ತ, ಒಂದಿನಿಸು ಕಿರಿದುಮಾಡಿ ಬಾಗಿದ ಎಡಮೊಣಕಾಲುಗಳಿಂದ ಶೋಭಿಸುತ್ತ ಧನುರ್ವಿದ್ಯೆಗೆ ತಕ್ಕ ರೀತಿಯಲ್ಲಿ ನಿಂದಿರ್ದು ಶೋಭಾಯಮಾನವಾಗಿ ಕಾಣುತ್ತಿದ್ದನು. ಆ ಕುಮಾರನು ಮೇಲಕ್ಕೆತ್ತಿ ತನ್ನ ಜುಟ್ಟು ಕಟ್ಟಿ, ಎಡಗೈಯಲ್ಲಿ ಬಿಲ್ಲನ್ನು ಹಿಡಿದು, ಬಾಣವೊಂದನ್ನು ಬಿಲ್ಲಿಗೆ ಜೋಡಿಸಿ ಹಿಡಿದು ಆಕರ್ಣಾಂತವಾಗಿ ಎಳೆದುನಿಂತಿರುವ ವೀರೋಚಿತ (ವೀರವಿಕ್ರಮ) ರೀತಿಯಲ್ಲಿ, ಭಾವ ಭಂಗಿಯಲ್ಲಿ ಬಹು ಸೊಗಸಾಗಿ, ಇಂಬಾಗಿ, ಶೋಭಾಯಮಾನವಾಗಿ ಮೈದಳೆದು ನಿಂತಿದ್ದನು.

ವ್ಯೂಹೇತಿ ಸಃ—ಅಸ್ತ್ರೇ=ಧನುರ್ವಿದ್ಯಾಯಾಂ ವಿನೀಯಮಾನಃ=ಶಿಕ್ಷ್ಯಮಾಣೋಽತ ಏವ. ಉತ್ತರಾರ್ಧಂ ಪೂರ್ವಕಾಯಂ ಕಿಂಚಿದಿವ ವ್ಯೂಹ್ಯ=ವಿಸ್ತಾರ್ಯ ಸ್ಥಿತಃ—ಉನ್ನದ್ಧ ಚೂಡ=ಊರ್ಧ್ವಮುತ್ಕೃಷ್ಯ ಬದ್ಧಕೇಶಃ—ಅಂಚಿತಮಾಕುಂಚಿತಂ ಸವ್ಯಂ ಯಸ್ಯ ಸ ಆಕರ್ಣಮಾಕೃಷ್ಟಂ ಸಬಾಣಂ ಧನುರ್ಧನ್ವಾಯೇನ ತಥೋಕ್ತಃ ಸನ್—ವ್ಯರೋಚತಾ =ಶೋಭತ—ಉತ್ತರಾರಾರ್ಧಂ ವ್ಯೂಹ್ಯ=ಬಾಲರಾಜನು ಬಾಲಯೋಧನಾಗಿ ಬಿಲ್ಲುವಿದ್ಯೆ

ಅಭ್ಯಾಸಿಸುತ್ತ ಅಸ್ತ್ರವನ್ನು ಎದೆಯನ್ನು ಅಗಲಿಸಿ (ಅರಳಿಸಿ) —ಉನ್ನದ್ಧ ಚೂಡಃ = ಮೇಲಕ್ಕೆ ಎತ್ತಿಕಟ್ಟಿದ ಜುಟ್ಟು—ಅಂಚಿತಜಾನುಃ = ಎಡದ ಮೊಣಕಾಲು ತುಸುಬಾಗಿ ನಿಂತ ವೀರೋಚಿತ ಶೈಲಿ (ಧನುರ್ವಿದ್ಯಾಭ್ಯಾಸದ ಅವಸರದಲ್ಲಿ).

52. ಅಥ ಮಧುವನಿತಾನಾಂ ನೇತ್ರನಿರ್ವೇಶನೀಯಂ ।
ಮನಸಿಜತರುಪುಷ್ಪಂ ರಾಗಬಂಧಪ್ರವಾಲಮ್ ॥
ಅಕೃತಕವಿಧಿಸರ್ವಾಂಗೀಣಮಾಕಲ್ಪಜಾತಂ ।
ವಿಲಸಿತ ಪದಮಾದ್ಯಂ ಯೌವನಂ ಸ ಪ್ರಪೇದೇ ॥ ೫೨ ॥

ಆ ಸುದರ್ಶನಾಖ್ಯನು ಯೌವನದ ಹೊಸ್ತಿಲಿಗೆ ಕಾಲಿಟ್ಟನು. ಸುಂದರಿಯರಾದ ಹೆಣ್ಣುಗಳು ತಮ್ಮ ಕಡೆಗಣ್ಣಿನ ನೋಟದಿಂದ ಬಾರಿಬಾರಿಗೂ ಕುಡಿಯಲೆಳಸುವ ಜೇನಿನಂತೆ ಇರುವ, ಅಮಲೇರಿಸುವ (ಮಧುರವಾದ ಮಧುರಸ) ತಾರುಣ್ಯದ ಕಾಲ. ಮನೋಭವ ನಾದ ಕಾಮದೇವನ ಹೂ ಬಿಟ್ಟಿರುವ ಮರವಿದು (ರಾಗವೆನುವ ಚಿಗುರೊಳೆಸೆವ ಮನಸಿಜತರುಸುಮವಿದು). ರಾಗವೆಂಬ ಪ್ರವಾಲಗಳಿಂದ, ರಾಗವೆನುವ ಚಿಗುರೆಲೆಗಳಿಂದ ಎಸೆವ ವೈಭವದ ತರುವೆಂಬ ತನುವಿದು. ಎಸೆವ ಸ್ಮರನ ತರುವಿದು. ನಿಸರ್ಗದತ್ತವಾದ (ಪ್ರಕೃತಿದತ್ತವಾದ) ಕೃತಕವಲ್ಲದ ಅವಯವಗಳೆಂಬ (ಅಂಗಾಂಗಗಳೆಂಬ) ಆಭರಣಗಳ ಸಮೂಹವಿದು. ಇಂತಹ ಸಾಮರಸ್ಯದಿಂದ ಕೂಡಿದ ಮೊತ್ತಮೊದಲನೆಯ ವಿಲಾಸದಂತೆ ತೋರುವ ಸರ್ವಾಂಗೀಣ ಸೌಂದರ್ಯವಿದು (ಸರ್ವಾಂಗಗಳಲ್ಲಿ ಹರಡಿರುವ). ಇದು ಕಲ್ಪನೆಗೆ ಮೀರಿದ ಸೊಬಗುವಡೆದ ಸುಂದರ ದೇಹ. ಶಬ್ದಗಳಿಗೆ, ವರ್ಣನೆಗೆ, ವಾಕ್ಯಗಳಿಗೆ, ಪದಗಳಿಗೆ ಮೀರಿದ ಅಲೌಕಿಕ ಪುರುಷಸೌಂದರ್ಯ. ರಸದಿಂದ ಕೂಡಿದ ಮಧುರವಾದ ಫಲವಿದು. ಅದೊಂದು ಪ್ರೇಮದ ಅಂಕುರ (ಪ್ರೇಮಾಂಕುರ) ಮುಂದೆ ಪ್ರವರ್ಧಿಸುವ ಹೆಚ್ಚುಗಾರಿಕೆಯನ್ನು ಪಡೆದು ನಾನಾವಿಧದ ಆಟಪಾಟಗಳನ್ನು, ಕ್ರೀಡೆಗಳನ್ನಾಡಲಿರುವ, ಯೌವನದಿಂದೊಪ್ಪುವ ಸುಂದರಬಂಧುರಕಾಯವಿದು, ಹೀಗೆ ಪುರುಷಸೌಂದರ್ಯದ ಸಾಕಾರಮೂರ್ತಿಯಾಗಿ ಸುದರ್ಶನನೃಪನು ಎಸೆದಿರ್ದನು.

ನೇತ್ರೈರ್ನಿರ್ವೇಶನೀಯಂ=ಭೋಗ್ಯಮ್=ನೇತ್ರಪೇಯಮಿತ್ಯರ್ಥಃ—"ನಿರ್ವೇಶೋಭೃತಿ ಭೋಗಯೋಃ" ಇತ್ಯಮರಃ—ಮಧುಕ್ಷೌದ್ರಮ್—ರಾಗಬಂಧೋಽನುರಾಗ ಸಂತಾನ ಏವ ಪ್ರವಾಲಃ ಪಲ್ಲವೋ ಯಸ್ಯ ತತ್—ಮನಸಿಜ ಏವ ತರುಸ್ತಸ್ಯ ಪುಷ್ಪಂ=ಪುಷ್ಪ ಭೂತಮ್— "ಸರ್ವಾಂಗಂ ವ್ಯಾಪ್ನೋತೀತಿ ಸರ್ವಾಂಗೀಣಮ್—ತತ್ಸಾರ್ವಾದೇಃ" ಇತ್ಯಾದಿನಾ ಖಪ್ರತ್ಯಯಃ — ಆಕಲ್ಪಜಾತಮಾಭರಣಸಮೂಹಭೂತಮ್ — ಆದ್ಯಂ ವಿಲಸಿತಂ ಪದಂ ವಿಲಾಸಸ್ಥಾನಂ ಯೌವನಂ ಪ್ರಪೇದೇ—ನೇತ್ರನಿರ್ವೇನೀಯಂ ಮಧು= (ಹೆಣ್ಣುಗಳು ಒಲಿದು) ಕಣ್ಣಿಂದ ಈಂಟಿನಲಿವ ಮಧುವಿದು—ಮನಸಿಜತರುಪುಷ್ಪಂ = ಮನಸಿಜತರು ಸುಮವಿದು—ಅಕೃತವಿಧಿ = ಕೃತಕವಲ್ಲದ, ನೈಸರ್ಗಿಕ ಅಥವಾ ನಿಸರ್ಗ ದತ್ತವಾದ, ವಿಧಿವಿಧಾನಗಳಿಂದ ರೂಪುಗೊಂಡ—ಅಕಲ್ಪಜಾತಂ = ಸರ್ವಾಂಗಸುಂದರ, ಸುಂದರಮೂರ್ತಿ.

53. ಪ್ರಕೃತಿರಚನಾಭ್ಯೋ ದೂತಿಸಂದರ್ಶಿತಾಭ್ಯಃ ।
ಸಮಧಿಕತರರೂಪಾಃ ಶುದ್ಧಸಂತಾನಕಾಮ್ಯೈಃ ॥
ಅಧಿವಿವಿದುರಮಾತ್ಯೈಃ ಅಹೃತಾಸ್ತಸ್ಯ ಯೂನಃ ।
ಪ್ರಥಮಪರಿಗೃಹೀತೇ ಶ್ರೀಭುವೌ ರಾಜಕನ್ಯಾಃ ॥ ೫೩ ॥

ಶುದ್ಧಸಂತಾನವನ್ನು ಬಯಸಿದ ಮಂತ್ರಿಗಳು, ಪುರೋಹಿತರು ಬೇರೆ ಬೇರೆ ಅರಸರ ಪುತ್ರಿಯರ ಪ್ರತಿಕೃತಿಗಳನ್ನು (ಚಿತ್ರಪಟ, ರೇಖಾಚಿತ್ರ) ಕಳುಹಿಸುವಂತೆ ಕೇಳಿಕೊಂಡರು. ಆಗ ಬೇರೆ ಬೇರೆ ದೇಶಗಳ ರಾಜಪುತ್ರಿಯರ ಪ್ರತಿಕೃತಿಗಳನ್ನು ತಂದು ದೂತಿಯರು ತೋರಿಸಲು ಆ ತರುಣ ನೃಪನು ಅವರಲ್ಲಿ ಉತ್ತಮರಾದವರನ್ನು ಆರಿಸಿಕೊಂಡನು. ಹೀಗೆ ಲಗ್ನವು ನಿಶ್ಚಯವಾಗಲು ದೂತಿಯರು ತೋರಿಸಿದ ಚಿತ್ರಪಟಗಳಿಂದಲೂ ಚೆಲುವೆಯರಾದ ಅರಸುಕುಮಾರಿಯರ ಕೈಹಿಡಿಯಲು ಸಿದ್ಧತೆಯು ಭರದಿಂದ ನಡೆಯಿತು. ಆದರೆ ಆ ರಾಜಕುಮಾರಿಯರೆಲ್ಲರೂ ಈ ಮೊದಲೇ ನೃಪನು ಭೂ ಮತ್ತು ಶ್ರೀ ಎಂಬ ಈರ್ವರುಗಳ ಕರಪಿಡಿದುದರಿಂದ ಅವರೆಲ್ಲ ಆ ಈರ್ವರು ವನಿತೆಯರ ಸವತಿಯರಾಗ ಬೇಕಾಯಿತು. ಭೂಕಾಂತೆ (ಭೂವನಿತೆ) ಮತ್ತು ರಾಜ್ಯಲಕ್ಷ್ಮಿ ಅಥವಾ ಐಶ್ವರ್ಯಲಕ್ಷ್ಮಿ (ಶ್ರೀ, ರಾಜ್ಯಶ್ರೀ) ಎಂಬವರೇ ಆ ಈರ್ವರು ಈ ಮೊದಲೇ ಪ್ರೀತಿಯಿಂದ ಕರಪಿಡಿದ ವನಿತೆಯರು. ಅವರೆಲ್ಲರ ಪತಿಯಾಗಿ ರೂಪಮನ್ಮಥನಾದ ರವಿಕುಲಸಾಮ್ರಾಟನು ಇಂದ್ರನ ಭೋಗಸಾಮ್ರಾಜ್ಯವನ್ನು ಭೂಮಿಯಲ್ಲಿ ಅನುಭವಿಸಲು ಆರಂಭಿಸಿದನು. ಯುವಕನಾದ ಸುಂದರ್ಶನ ಸಾರ್ವಭೌಮನು ದಾಂಪತ್ಯಸುಖವನ್ನು ಅನುಭವಿಸಲು ಆರಂಭಿಸಿದನು.

ಪ್ರತಿಕೃತೀತಿ—ದೂತಿಭಿಃ ಕನ್ಯಾಪರೀಕ್ಷಣಾರ್ಥಪ್ರೇಷಿತಾಭಿಃ ಸಂದರ್ಶಿತಾಭ್ಯೋ = ಧೂತಿಸಂದರ್ಶಿತಾಭ್ಯಃ ಪ್ರತಿಕೃತೀನಾಂ = ತೂಲಿಕಾದಿ ಲಿಖಿತಕನ್ಯಾಪ್ರತಿಮಾನಾಂ ರಚನಾಭ್ಯೋ = ವಿನ್ಯಾಸೇಭ್ಯಃ—"ಪಂಚಮೋ ವಿಭಕ್ತಿ" ಇತಿ ಪಂಚಮಿ—ಸಮಧಿಕತರ ರೂಪಾಃ ಚಿತ್ರನಿರ್ಮಾಣಾದಪಿ ರಮಣೀಯನಿರ್ಮಾಣಾ ಇತ್ಯರ್ಥಃ—ಆತ್ಮನಾ ಸಪತ್ನೀ ಭಾವಂ ಚಕ್ರುರಿತ್ಯರ್ಥಃ—ಕೃತಸಾಪತ್ನಿಕಾಧ್ಯೂಢಾಧಿವಿನ್ನಾ" ಇತ್ಯಮರಃ ॥

## ಏಕೋನವಿಂಶಃ ಸರ್ಗಃ
## ಹತ್ತೊಂಬತ್ತನೆಯ ಸರ್ಗ

### ಅಗ್ನಿವರ್ಣಮಹಾರಾಜನ ಶೃಂಗಾರಲೀಲೆ

**1. ಅಗ್ನಿವರ್ಣಮಭಿಷಿಚ್ಯ ಸ ರಾಘವಃ ।**
**ಸ್ವೇ ಪದೇ ತನಯಮಗ್ನಿತೇಜಸಮ್ ॥**
**ಶಿಶ್ರಿಯೇ ಶ್ರುತವತಾಮ ಪಶ್ಚಿಮಃ ।**
**ಪಶ್ಚಿಮೇ ವಯಸಿ ನೈಮಿಷಂ ವಶೀ** ॥ ೧ ॥

ಅಗ್ನಿತೇಜನಾದ ಸುದರ್ಶನನ ಪುತ್ರ ಅಗ್ನಿವರ್ಣನು ಅಗ್ನಿಯಂತೆ ತೇಜಸ್ವಿ. ಮಹಾತೇಜೋವಂತನು. ಸುದರ್ಶನ ಮಹಾರಾಜನು ತನ್ನ ಇಳಿ ವಯಸ್ಸಿನಲ್ಲಿ (ಅಪರ ವಯಸ್ಸಿನಲ್ಲಿ) (ಪಶ್ಚಿಮವಯಸ್ಸಿನಲ್ಲಿ) ಸಾಮ್ರಾಜ್ಯವನ್ನು ಮಗನಿಗೆ ವಹಿಸಿಕೊಟ್ಟನು. ಪಟ್ಟಾಭಿಷೇಕಗೈದು ತಾನು ಆರ್ಯರ ವೈದಿಕ ಪದ್ಧತಿಯಂತೆ ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿ ನೈಮಿಷಾರಣ್ಯಕ್ಕೆ ನಡೆದನು. ಅವನು ವೇದವಿದನು, ವೇದಶಾಸ್ತ್ರನಿಪುಣನು. ತನ್ನ ವಾರ್ಧಕ್ಯದಲ್ಲಿ ಸಂಸಾರವನ್ನು ತ್ಯಾಗವಮಾಡಿ, ವೇದವಿದರ, ಬುದ್ಧಿಜೀವಿಗಳ ಸಂಸರ್ಗ ಬಯಸಿ ತಪಸ್ಸಿಗೆಂದು, ಸೂತ ಪುರಾಣಿಕರು ಮಹಾಭಾರತವನ್ನು ಋಷಿಮುನಿಗಳಿಗೆ ಉಪದೇಶಿಸಿದ ಮಹಾಪವಿತ್ರಕ್ಷೇತ್ರವಾದ ನೈಮಿಷಾರಣ್ಯಕ್ಕೆ ಆ ರಘುವಂಶೋದ್ಭವನು ತೆರಳಿದನು. ಆ ದಿವ್ಯಕ್ಷೇತ್ರದಲ್ಲಿ ಶೌನಕಾದಿ ಮಹಾಮುನಿಗಳು ತಪಸ್ಸುಮಾಡಿ ಆತ್ಮಜ್ಞಾನ ಪಡೆದಿದ್ದರು. ಪಶ್ಚಿಮದ ವಯಸಿನೊಳು ಶ್ರುತವಿದರ ಪಶ್ಚಿಮನು ತಪೋಭೂಮಿಯಾದ ನೈಮಿಷಾರಣ್ಯವನ್ನು ಮೋಕ್ಷಕಾಂಕ್ಷಿಯಾಗಿ ತೆರಳಿದನು.

ಶ್ರುತವತಾಂ = ಶ್ರುತಸಂಪನ್ನಾನಾಮ್—ಪಶ್ಚಿಮೇ ವಯಸಿ = ವಾರ್ಧಕೇ ಸ್ವೇ—ಪದೇ = ಸ್ಥಾನೇ—ನೈಮಿಷಂ = ನೈಮಿಷಾರಣ್ಯಂ—ಶಿಶ್ರಿಯೇ = ಶ್ರಿತವಾನ್—ಅಗ್ನಿತೇಜಸಮ್ = ಅಗ್ನಿಯಂತೆ ತೇಜಸ್ವಿ—ಶ್ರುತವತಾಮ್ ಅಪಶ್ಚಿಮಃ = ವೇದವೇತ್ತನು ಅಪರ ವಯಸಿನಲ್ಲಿ (ಪಶ್ಚಿಮೇ ವಯಸಿ).

**2. ತತ್ರ ತೀರ್ಥಸಲಿಲೇನ ದೀರ್ಘಿಕಾಃ ।**
**ತಲ್ಪಮಂತರಿತ ಭೂಮಿಭಿಃ ಕುಶೈಃ ॥**
**ಸೌಧವಾಸಮುಟಜೇನ ವಿಸ್ಮೃತಃ ।**
**ಸಂಚಿಕಾಯ ಫಲನಿಃಸ್ಪೃಹಸ್ತಪಃ** ॥ ೨ ॥

ಅವನು ಭೂಮಿಯ ಮೇಲೆ ಹರಡಿದ ಪವಿತ್ರವಾದ ಕುಶದರ್ಭೆಯ ಹಾಸಿನಲ್ಲಿ ಮಲಗಿದನು. ಅವನು ತನ್ನ ಹಾಸನ್ನು (ತಲ್ಪವನ್ನು) ದರ್ಭೆಹುಲ್ಲಿನಿಂದ ತಯಾರಿಸಿದನು.

ಮೃದುವಾದ (ಮೆದುವಾದ) ಹಂಸತೂಲಿಕಾತಲ್ಪದಲ್ಲಿ ಮಲಗಿ ನಿದ್ರೆಮಾಡುವ ಸ್ವಭಾವದ ಆ ನರೇಶ್ವರನು ಐಹಿಕಸೌಖ್ಯಗಳನ್ನು ಮರೆತು ಪಾರಮಾರ್ಥಿಕ ಸುಖವನ್ನು ಮಾತ್ರ ಬಯಸಿದನು. ತನ್ನ ಆತ್ಮವನ್ನು ಪರಮಾತ್ಮನಲ್ಲಿ ಅನುಸಂಧಾನಮಾಡಿ (ಒಂದು ಮಾಡಿ, ಒಂದುಗೂಡಿಸಿ) ಆ ವಿಶ್ವಾತ್ಮನಲ್ಲಿ ಲಯಮಾಡಲು ಆತ್ಮಚಿಂತನೆ ಮಾಡಿದನು. ನಗರದ ಉದ್ಯಾನವನದಲ್ಲಿರುವ ಜಲಾಶಯದಲ್ಲಿ ಜಲಕೇಳಿಯಾಡುತ್ತಿದ್ದ ಆ ಮಹೀವಲ್ಲಭನು ಇದು ನೈಮಿಷಾರಣ್ಯದ ಕೆರೆಗಳಲ್ಲಿ ತೀರ್ಥಸ್ನಾನಮಾಡಿ ನಾಮೋಚ್ಚಾರಣೆ ಮಾಡುತ್ತ (ಸಹಸ್ರನಾಮಪಾರಾಯಣ, ನಾಮಸ್ಮೃತಿ) ಭಗವಂತನ ಧ್ಯಾನದಲ್ಲಿ ತಲ್ಲೀನ(ಸಮಾಧಿ) ನಾಗುತ್ತಿದ್ದನು. ಅವನು ಸಾಂಸಾರಿಕ ಬಂಧಗಳನ್ನು (ಕಟ್ಟುಗಳನ್ನು) ಹೃದಯಗ್ರಂಥಿ ಗಳನ್ನು ಒಂದೊಂದಾಗಿ ಸಡಿಲಿಸುತ್ತಾ ಬಂದನು. ಮಾಯಾಮೋಹಗಳ ಕಟ್ಟನ್ನು, ಆತ್ಮ ಜ್ಞಾನವೆಂಬ ಹರಿತವಾದ ಕತ್ತಿಯಿಂದ ಕತ್ತರಿಸಿ ಆತ್ಮಸಿದ್ಧಿಯನ್ನು (ನೈಷ್ಕರ್ಮ್ಯಸಿದ್ಧಿ ಯನ್ನು, ಅದ್ವೈತಸಿದ್ಧಿಯನ್ನು) ಪಡೆದು ಸಿದ್ಧಪುರುಷನಾದನು.

ಎಲೆಮನೆಯಲ್ಲಿ, ಎಲೆಮರೆಯ ಕಾಯಿಯಂತೆ, ವಾಸಮಾಡುತ್ತ ಸೌಧಗಳ ವಾಸವನ್ನು ಮರೆತನು. ಪರಿವಾರದಲ್ಲಿದ್ದವನು—ಇಂದು ಒಂಟಿಸಲಗನಂತೆ, ರಾಜಋಷಿಯಂತೆ (ಯತಿ ಯಂತೆ, ಸಂತನಂತೆ. ಪಾದ್ರಿಯಂತೆ, ಶಿವಶರಣನಂತೆ, ಹರಿದಾಸ, ಶಿವದಾಸ, ಸಿದ್ಧ. ಬುದ್ಧ, ತೀರ್ಥಂಕರನಂತೆ) (ಪರಮಯೋಗಿ, ಜೋಗಿ, ಫಕೀರ) ಏಕಾಂಗಿಯಾದನು. (ಸರ್ವಸಂಗಪರಿತ್ಯಾಗಿ) ಆ ತಪೋಭೂಮಿಯೇ ಅವನ ರಾಜ್ಯ. ಆ ಪರ್ಣಕುಟೀರವೇ ಅರಮನೆಯಾಯಿತು. ಸಾರಸಪ್ತ ವ್ಯಸನಗಳನ್ನು ತ್ಯಜಿಸಿ ಆತ್ಮಧ್ಯಾನದಲ್ಲಿ ತನ್ನ ಕರಣ ಗಳನ್ನು ಬಿಗಿದನು. ಅವನಿಗೆ ಬೇರಾವ ಫಲಾಪೇಕ್ಷೆಯೂ ಇರಲಿಲ್ಲ. ಅವುಗಳನ್ನೆಲ್ಲಾ ಪೂರ್ತಿ (ಸಾರಾಸಗಟು) ಮರೆತೇಬಿಟ್ಟನು. ಬಿಡುಗಡೆ ಅಥವಾ ಮೋಕ್ಷದ ಚಿಂತನೆಯೇ ಅವನ ಗುರಿಸಾಧನೆಯಾಗಿತ್ತು. ಅವನು ಸಾಧುಸಂತರ, ದಿವ್ಯ ಜೀವನ ನಡೆಸಿ ಮಹಾತ್ಮ ನಾದನು. ಪರಮಪುರುಷಾರ್ಥವನ್ನು ಪಡೆದು ಧನ್ಯನಾದನು.

ತೀರ್ಥಸಲಿಲೇಸ ದೀರ್ಘಿಕಾ = ವಿಹಾರವಾಪೀ—ತಲ್ಪಂ = ಶಯ್ಯಾ—ಉಟಜೇನ = ಪರ್ಣಶಾಲಯಾ—ಸೌದವಾಸಂ ವಿಸ್ಮೃತೋ=ವಿಸ್ಮೃತವಾನ್—ಫಲೇ=ಸ್ವರ್ಗಾದಿಫಲೇ —ಸಂಚಿಕಾಯ = ಸಂಚಿತವಾನ್—ದೀರ್ಘಿಕಾ = ಆಯತಾಕಾರದ ಕೆರೆ—ತೀರ್ಥಸಲಿಲೇಸ = ಪವಿತ್ರಜಲದಲ್ಲಿ, ಸಂಚಿಕಾಯ = ಸಾರಸಂಚಿತ (ಅಭಿಲಾಷೆಗಳನ್ನು) ಫಲಾನಿ ಸ್ಪೃಹಃ = ಪೂರ್ಣ ತ್ಯಜಿಸಿ.

3\. ಲಬ್ಧಪಾಲನವಿಧೌ ನ ತತ್ಸುತಃ ।
ಖೇದಮಾಪ ಗುರುಣಾ ಹಿ ಮೇದಿನೀ ॥
ಭೋಕ್ತುಮೇವ ಭುಜನಿರ್ಜಿತದ್ವಿಷಾ ।
ನ ಪ್ರಸಾಧಯಿತುಮಸ್ಯ ಕಲ್ಪಿತಾ ॥ ೩ ॥

ಸುದರ್ಶನಪುತ್ರನಾದ ಅಗ್ನಿವರ್ಣನು ರೂಪಗುಣಸಂಗನ್ನನು. ತನ್ನ ತಂದೆಯಿಂದ ಯಥಾವತ್ತಾಗಿ (ಅನುವಂಶಿಕ. ಪಿತ್ರಾರ್ಜಿತ) ಬಂದ ಭಾರತ ಸಾಮ್ರಾಜ್ಯದ ಸುಖ ಭೋಗಗಳನ್ನು ಮಾತ್ರ ಬಯಸಿದನು. ನಾಣ್ಯದ ಇನ್ನೊಂದು ಮುಖವನ್ನು ನೋಡಲೇ

ಇಲ್ಲಿ. ಸಂಕಷ್ಟಗಳನ್ನು, ಖೇದಗಳನ್ನು, ಕ್ಲೇಶಗಳನ್ನು, ವಿಪ್ಲವಗಳನ್ನು ಅವುಗಳ ಪಾಡಿಗೆ ಬಿಟ್ಟುಬಿಟ್ಟನು. ಕರ್ತವ್ಯವಿಮುಖನಾಗಿ ತನ್ನ ದೇಹಸುಖದ ಕಡೆಗೆ ಮಾತ್ರ ದೃಷ್ಟಿ ಯಿಟ್ಟು ಅವುಗಳಿಗೆ ಕೋಡಂಗಿಯಂತೆ ನಡೆಯುತ್ತಿದ್ದನು. ಪ್ರಜಾಪಾಲನೆಯ ಬಗ್ಗೆ ಕುರುಡನಾಗಿ (ಕುಂಟನಾಗಿ) ನಾಸ್ತಿಕನಂತೆ ವರ್ತಿಸುತ್ತಿದ್ದನು. ಸುದರ್ಶನಮಹಾರಾಜ ನಾದರೋ ತನ್ನ ಭುಜಬಲಸಾಮರ್ಥ್ಯದಿಂದ ವೈರಿರಾಜರನ್ನು ದಮನ ಮಾಡಿದ್ದನು. ರಾಜ್ಯದಲ್ಲಿ ಶಾಂತಿ ನೆಲೆಗೊಳ್ಳುವಂತೆ ಶ್ರಮವಹಿಸಿದ್ದನು. ಇದೀಗ ಪಟ್ಟಾಭಿಷಿಕ್ತನಾದ ಯುವಕನಾದ ದೊರೆ ಬರೀ ತಾರುಣ್ಯದ ಸುಖಲಾಲಸೆಗಳಲ್ಲಿ (ಹೆಣ್ಣಿನ ಶೋಕಿ) ಕಾಮುಕತನದಲ್ಲಿ (ವ್ಯಭಿಚಾರದಲ್ಲಿ) ತನ್ನ ತನು, ಮನ, ಧನವನ್ನು ಸವೆಯಿಸತೊಡಗಿದನು. ಆ ರಾಜ್ಯವು ಅವನಿಗೆ ವರಪ್ರಸಾದವಾಗಿ ಸಿಕ್ಕಿದಂತೆ ಭಾವಿಸಿ ಕರ್ತವ್ಯಗಳನ್ನು ಮರೆತು ಶೃಂಗಾರದಲ್ಲಿ (ದೇಹಶೃಂಗಾರ) ಕಾಮಲಾಲಸೆಯಲ್ಲಿ ಮನವ ನೂಕಿದನು. ಅವನಿಗೆ ರಾಜ್ಯದ ಶ್ರೇಯೋಭಿವೃದ್ಧಿಯ ಕುರಿತು ಕಿಂಚಿತ್ತೂ ಚಿಂತೆಯೇ ಇರಲಿಲ್ಲ. ಮಂತ್ರಿ ಪ್ರಷಾರಿಗಳ (ಮಂತ್ರಿಪುಂಡರ) ಕೈಗೆ ಕೊಟ್ಟು (ಅಧಿಕಾರವನ್ನು ತಾನು ನಿಶ್ಚಿಂತನಾಗಿ ದ್ದನು. ಕಾಡುಮೇಡುಗಳಲ್ಲಿ ಮುಳ್ಳುಗಿಡಗಳಿರುವಂತೆ, ಕಂಟಕಪ್ರಾಯರಾದ ಶತ್ರುಗಳು ಪಾರ್ಥೇನಿಯಂ ಗಿಡಗಳಂತೆ ಪೆಚ್ಚಿಕೊಂಡರು.

ತತ್ಸುತಃ = ಸುದರ್ಶನಪುತ್ರೋಽಗ್ನಿ ವರ್ಣೋ—ಲಬ್ಧಪಾಲನವಿಧೌ = ಲಬ್ಧಸ್ಯ, ರಾಜ್ಯಸ್ಯ ಪಾಲನಕರ್ಮಣಿ—ಖೇದಂನಾಪ = ಅಕ್ಲೇಶೇನಾ ಪಾಲಯದಿತ್ಯರ್ಥಃ— ಗುರುಣಾ = ಪಿತ್ರಾ—ಭೋಕ್ತುಮೇವ ಕಲ್ಪಿತಾ—ಪ್ರಸಾದಯಿತುಂ ನ– ಪ್ರಸಾದಕಂಟಕ ಶೋಧನಮ್ — ಅಲಂಕೃತಿಧ್ವನ್ಯತೇ — ಭುಜನಿರ್ಜಿತದ್ವಿಷಾ = ತೋಳ್ಬಲದೊಳು ಅಯ್ಯನು ಗೆಲಿದ ಇಳೆಯು.

**4.** **ಸೋಽಧಿಕಾರಮಭಿಕಃ ಕುಲೋಚಿತಂ ।**
**ಕಾಶ್ಚನ ಸ್ವಯಮವರ್ತಯತ್ಸಮಾಃ ॥**
**ಸನ್ನಿವೇಶ್ಯ ಸಚಿವೇಷ್ವತಃ ಪರಂ ।**
**ಸ್ತ್ರೀವಿಧೇಯನವಯೌವನೋಽಭವತ್** ॥ ೪ ॥

ಆ ರಾಜಪುರುಷನು ಕುಲೋಚಿತವಾದ ಸಾಮ್ರಾಜ್ಯದ ಅಧಿಕಾರವನ್ನು ತನ್ನ ಯೌವನದಲ್ಲಿ, ವಿಷಯಾಸಕ್ತನಾಗಿ ಸ್ತ್ರೀಯರಿಗೆ ವಿಧೇಯನಾಗಿ (ಗುಲಾಮನಾಗಿ) ತನ್ನ ಬುದ್ಧಿಶಕ್ತಿಯನ್ನು ಸ್ವಲ್ಪಮಟ್ಟಿಗೆ ಉಪಯೋಗಿಸಿ ರಾಜ್ಯದ ಆಡಳಿತೆಯನ್ನು ನಡೆಸಿದನು. ಹೀಗೆ ದಿನಗಳು ಕಳೆದಂತೆ ರಾಜ್ಯಾಡಳಿತೆಯ ಬಗ್ಗೆಯಿದ್ದ ಅಭಿರುಚಿಯನ್ನು. ಜನಾನುರಾಗ ವನ್ನು ಕಳೆದುಕೊಂಡು ಸ್ತ್ರೀಲಂಪಟನಾಗಿ ತರುಣಿಯರ ಗುಲಾಮನಾಗಿ (ಕೈಗೊಂಬೆ ಯಾಗಿ) ಲಂಗುಲಗಾಮಿಲ್ಲದೆ ವ್ಯವಹರಿಸತೊಡಗಿದನು. ಕಡೆಗೆ ಸಾಮ್ರಾಜದ ರಾಜ್ಯ ಕಾರ್ಯಗಳನ್ನೆಲ್ಲಾ (ಆಡಳಿತಸೂತ್ರಗಳನ್ನೆಲ್ಲಾ) ಮಂತ್ರಿಗಳಿಗೆ ವಹಿಸಿಕೊಟ್ಟು ತಾನು. ಸ್ತ್ರೀದರ್ಬಾರು ನಡೆಸುತ್ತಾ, ನಿಶ್ಚಿಂತನಾಗಿ, ಹೆಸರಿಗೆ ಮಾತ್ರ ದೊರೆಯಾಗಿದ್ದನು (ಬರಬರುತ್ತಾ ರಾಯರ ಕುದುರೆ ಕತ್ತೆಯಾಯಿತು. ಎಂಬಂತೆ) ತಾನು ತನ್ನ ಪೂರ್ಣ

ಸಮಯವನ್ನು (ರಾತ್ರಿಹಗಲು ಎಂಬ ಭೇದವಿಲ್ಲದೆ) ತರುಣಿಯರ ಮಧ್ಯದಲ್ಲಿ ಕಳೆಯ ತೊಡಗಿದನು.

ಅಭೀಕಃ = ಕಾಮುಕಃ–"ಕಮ್ರಃ ಕಾಮಯಿತಾಽಭೀಕಃ ಕಮನಃ ಕಾಮನೋಽಭಿಕಃ" ಇತ್ಯಮರಃ— ಕುಲೋಚಿತಮಧಿಕಾರಂ = ಪ್ರಜಾಪಾಲನಂ—ಸಂನಿವೇಶ್ಯ = ನಿಧಾಯ—ಸ್ತ್ರೀವಿಧೇಯಃ = ಸ್ತ್ರೀಯ ಅಧೀನಃ ॥

5\. ಕಾಮಿನೀಸಹಚರಸ್ಯ ಕಾಮಿನಃ ।
ತಸ್ಯ ವೇಶ್ಮಸು ಮೃದಂಗನಾದಿಷು ॥
ಋದ್ಧಿಮಂತಮಧಿಕರ್ದ್ಧಿರುತ್ತರಃ ।
ಪೂರ್ವಮುತ್ಸವಮಪೋಹದುತ್ಸವಃ ॥ ೫ ॥

ಆ ರಾಜೇಂದುಶೇಖರನು ಕಾಮುಕನಾಗಿ ಕಾಮಿನಿಯರ, ರಸಿಕವನಿತೆಯರ ಸಮೂಹದಲ್ಲಿ ತಿರುಗಾಡುತ್ತಾ, ಚಂದ್ರನಂತೆ ಪ್ರಕಾಶಿಸುತ್ತಿದ್ದನು. ಸೌಧಗಳಲ್ಲಿ, ಹರ್ಮ್ಯಗಳಲ್ಲಿ ರಾಜಭವನದಲ್ಲಿ ಸದಾ ಹಬ್ಬದ, ವೈಭವದ, ಉತ್ಸವದ ವಾತಾವರಣವೇ. ಯಾವಾಗಲೂ ನೃತ್ಯ ಸರಸ ಸಂಗೀತ ಗೋಷ್ಠಿಗಳು, ಹಾಸ್ಯಚಟಾಕಿಗಳು, ಛದ್ಮವೇಷಗಳು, ಮೃದಂಗದ ಶಬ್ದವು, ನಾದತರಂಗವು ಅನವರತ ಸಾಗರದ ಭೋರ್ಗರೆವ ನಾದದಂತೆ ಕೇಳಿಬರುತ್ತಿತ್ತು. ಕುಡಿತ (ಪಾನಕೂಟ) ಮೋಜುಗಾರಿಕೆ, ಜಲಕ್ರೀಡೆ, ವಿಹಾರ, ಸಡಗರದ ಭೋಜನಕೂಟ (ಚಂದ್ರನ ಬೆಳಕಿನಲ್ಲಿ), ಆಟೋಟಗಳಲ್ಲದೆ ಬೇರೆ ಯಾವ ವಿಷಯಕ್ಕೂ ಪ್ರವೇಶವೇ ಇರಲಿಲ್ಲ. ಒಂದು ಉತ್ಸವ ಕಳೆದ ಕೂಡಲೇ ಇನ್ನೊಂದು ದೊಡ್ಡ ಸಡಗರದ ಉತ್ಸವಕ್ಕೆ ತಳಪಾಯ ಹಾಕುತ್ತ ವಿನೋದ, ಉತ್ಸವದಲ್ಲೆ ಕಾಲಹರಣ ಮಾಡುತ್ತಲಿದ್ದನು. ಅವನ ಜೀವನವೇ ಒಂದು ಉತ್ಸವವೋ ಎಂಬಂತೆ ತೋರುತ್ತಿತ್ತು (ಉತ್ಸವದ ಸಂತೆ, ಮಂದುವೆ ಮಾರ್ಕೆಟ್ ಎಂಬ ತೆರದಿ). ಅವನು ಕಾಮುಕರಲ್ಲೂ ಅತಿಕಾಮುಕನಾಗಿ (ಕಾಮುಕಾಚಾರ್ಯ, ವನಿತಾಪ್ರಿಯ) ಅತಿಕಾಮಿಯಾದಿ ಕಾಮಲೀಲೆಯ ಎಲ್ಲಾ ಮುಖಗಳನ್ನು (ವಿಕೃತಕಾಮ) ಕಾಣಲು ತವಕಿಸುತ್ತಿದ್ದನು.

ಕಾಮಿನೀಸಹಚರಸ್ಯ = ಕಾಮಿನಸ್ತಸ್ಯ— ಮೃದಂಗನಾದಿಷು = ಮೃದಂಗನಾದವತ್ಸು —ಋದ್ಧಿಮಂತಂ = ಸಾಧನಸಂಪನ್ನಂ—ಉತ್ತರೋತ್ತರಾಧಿಕಾ ॥

6\. ಇಂದ್ರಿಯಾರ್ಥಪರಿಶೂನ್ಯಮಕ್ಷಮಃ ।
ಸೋಢುಮೇಕಮಪಿ ಸ ಕ್ಷಣಾಂತರಮ್ ॥
ಅಂತರೇವ ವಿಹರನ್ ದಿವಾನಿಶಂ ।
ನ ವ್ಯಪೈಕ್ಷತ ಸಮುತ್ಸುಕಾಃ ಪ್ರಜಾಃ ॥ ೬ ॥

ಆ ರಾಜಕುಮಾರನು ಇಂದ್ರಿಯಗಳ ದಾಸನಾಗಿ, ಭೋಗಸಾಮ್ರಾಜ್ಯದಲ್ಲಿ ವಿಹರಿಸುತ್ತಾ, ಸ್ತ್ರೀಯರಿಗೆ ಅಧೀನನಾಗಿ, ಸ್ತ್ರೀಯರ ವಶದಲ್ಲೇ ಇರುತ್ತಿದ್ದನು. ಅಂಗನೆಯ ಸರಸ ಕೇಳಿಕೂಟದಲ್ಲಿ ರತಿಕಲಾ(ಪ್ರೇಮಕಲಾ)ಸಾಮ್ರಾಜ್ಯದಲ್ಲಿ, ಸ್ವಚ್ಛಂದವಾಗಿ ವಿಹರಿಸುತ್ತಾ, ಅವರ ಜೊತೆಯಲ್ಲಿಯೇ ಇದ್ದು ಕಾಮಾಂಧನಾಗಿ, ಮದಾಂಧನಾಗಿ ವಿಹರಿಸುತ್ತಿದ್ದನು.

ಅವನ ದರ್ಶನಾಪೇಕ್ಷಿಗಳಾಗಿ ಬಂದ ಪ್ರಜೆಗಳಿಗೆ, ಮಂತ್ರಿವೃದ್ಧಿಗಳಿಗೆ ಅವನು ದರ್ಶನ ವನ್ನೀಯದೆ ಸ್ತ್ರೀಲೋಲನಾಗಿ, ಮೆಯ್ಗೊಟ್ಟವನ್ನು ಬಯಸಿ ಅಂಕೆತಪ್ಪಿದ ಕಪಿಯಂತೆ ಅಂತಃಪುರದ ಒಳಗೇ ವ್ಯವಹರಿಸುತ್ತಾ ಉಪೇಕ್ಷೆಯಿಂದ ವರ್ತಿಸುತ್ತಿದ್ದನು. ಅವನಿಗೆ ರತಿಸುಖ ಸಾಮ್ರಾಜ್ಯದ ಸುಖವಲ್ಲದೆ ಇತರ ದಾರ್ಶನಿಕ ಸುಖಗಳಿಗೆ ತಿಲಾಂಜಲಿಯ ನ್ನಿತ್ತನು. ಶಬ್ದಾದಿವಿಷಯಸುಖಕ್ಕೆ ಮಾರುಹೋಗಿ ಚಿತ್ತಭ್ರಮಣೆ ಹೊಂದಿ ಒಂದು ಕ್ಷಣ ವಾದರೂ ಸ್ತ್ರೀಯರನ್ನು ಬಿಟ್ಟಿರಲಾರದೆ ಕಾಮಮೋಹಿತನಾಗಿ, ಇಂದ್ರಿಯಗಳ ದಾಸನಾಗಿ ಲೈಂಗಿಕ ಕ್ರಿಯೆಯಲ್ಲಿ ಮುಳುಗಿ ಏಳುತ್ತಿದ್ದನು, ಒಂದು ಸುಖವನ್ನು ಪಡೆದು, ಅದ ಕ್ಕಿಂತಲೂ ಅಧಿಕಸುಖಕ್ಕೆ, ರಸವತ್ತಾದ ಸುಖವನ್ನು ಬಯಸಿ ಅದರ ಬಗ್ಗೆ ಉತ್ಸುಕನಾಗಿ ರಾತ್ರಿ ಕಂದರ್ಪನ ಕ್ರೀಡೆಯಲ್ಲಿ (ಆಟದಲ್ಲಿ) ಭೋಗಿಯಾಗಿ, ಭೋಗಪರವಶನಾಗಿ ಪಶು ಜೀವನ ನಡೆಸುತ್ತಿದ್ದನು. ಅವನ ಮಹಿಮಾಟುಗಳಿಗೆ ಲಘುಗರಿಂದ ಮಾರ್ಗದರ್ಶನ ಪಡೆ ಯುತ್ತಾ ಕಾಮಚಿಂತನೆಯಲ್ಲೇ ಕಾಲಹರಣಮಾಡುತ್ತಿದ್ದನು. ಸ್ತ್ರೀಲಂಪಟನಾಗಿ ಒಂದು ಕ್ಷಣವಾದರೂ ಇಂದ್ರಿಯಗಳಿಗೆ ವಿರಾಮ ಕೊಡದೆ ಕಾಮಮೋಹಿತನಾಗಿದ್ದನು.

ಇಂದ್ರಿಯಾರ್ಥಪರಿಶೂನ್ಯಂ = ಶಬ್ದಾದಿವಿಷಯರಹಿತ — ಕ್ಷಣಾನ್ತರಂ = ಕ್ಷಣಭೇದಂ — ಸೋಢುಮಕ್ಷಮೋಽಶಕ್ತಃ — ದಿವಾನಿಶಮನ್ತರೇವ— ಸಮುತ್ಸುಕಾ = ದರ್ಶನಾ ಕಾಂಕ್ಷಿಣೀ — ಪ್ರಜಾ ನ ವ್ಯಪೈಕ್ಷತ = ನಾಪೇಕ್ಷಿತವಾನ್ — ಇಂದ್ರಿಯಾರ್ಥಾಃ—ಸ್ರಕ್ ಚಂದನವನಿತಾದಯಃ — ದಿವಾನಿಶಂ = ದಿವಾ ಚ ನಿಶಾ ಚ ದಿವಾನಿಶಂ—ಇಂದ್ರಿಯಾರ್ಥ ಪರಿಶೂನ್ಯ= ಶಬ್ದಾದಿವಿಷಯಸುಖಶೂನ್ಯಮೇವ ಏಕಕ್ಷಣ ಅಂತರಮನಾದರೂಸಹಿಸದೆ ॥

7. ಗೌರವಾದ್ಯದಪಿ ಜಾತು ಮಂತ್ರಿಣಾಂ ।
ದರ್ಶನಂ ಪ್ರಕೃತಿಕಾಂಕ್ಷಿತಂ ದದೌ ॥
ತದ್ಗವಾಕ್ಷವಿವರಾವಲಂಬಿನಾ ।
ಕೇವಲೇನ ಚರಣೇನ ಕಲ್ಪಿತಮ್ ॥ ೭ ॥

ಕರ್ತವ್ಯಚ್ಯುತನಾದ (ಕರ್ತವ್ಯಭ್ರಷ್ಟನಾದ) ಅಗ್ನಿವರ್ಣನೃಪನು ತನ್ನ ಪ್ರಜೆಗಳಿಗೆ ದರ್ಶನವನ್ನು (ಭೇಟಿ) ನೀಡುತ್ತಿರಲಿಲ್ಲ. ಎಂದಾದರೊಂದು ದಿನ ತನ್ನ ಮಂತ್ರಿಗಳ, ಅಧಿಕಾರಿಗಳ ಮಾಡಿಗೆ ಬೆಲೆಕೊಟ್ಟು ವಿಚಿತ್ರವಾದ ರೀತಿಯಲ್ಲಿ ದರ್ಶನವನ್ನು ಪ್ರಜೆಗಳಿಗೆ ನೀಡುತ್ತಿದ್ದನು. ತಾನು ಗವಾಕ್ಷದ ಬಳಿ ಕುಳಿತಿದ್ದು ತನ್ನೊಂದು ಕಾಲನ್ನು ಮಾತ್ರ ಕಿಟಕಿಯ ಮೂಲಕ ಹೊರಚಾಚಿ ಕುಳಿತು ತಾನು ವಿರಹಪೀಡಿತನಾಗಿ ಯೋಚಿಸುತ್ತಾ ಕುಳಿತಿರುತ್ತಿದ್ದನು. ತನ್ನ ದರ್ಶನಾಕಾಂಕ್ಷಿತರಾದ ಪ್ರಜೆಗಳಿಗೆ ಕಾಲನ್ನು ತೋರಿಸುತ್ತಿದ್ದನೇ ಹೊರತು ಮುಖ ತೋರಿಸುತ್ತಿರಲಿಲ್ಲ. ಪ್ರಜೆಗಳಾದರೋ ಅಲ್ಲಿಗೆ ಬಂದು ರಾಜನ ಕಾಲಿಗೆ ಕೈಮುಗಿದು ಹಿಂದಿರುಗುತ್ತಿದ್ದರು. ವಿಷಯಲಂಪಟನಾದ ಅಗ್ನಿವರ್ಣನಿಗೆ ಸ್ತ್ರೀಭಿಕ್ಷೆ ಯಲ್ಲದೆ, ವನಿತಾಪ್ರಣಯವಲ್ಲದೆ ಬೇರಾವುದೂ ರುಚಿಸುತ್ತಿರಲಿಲ್ಲ. ಭೋಗವಸ್ತುವಿನ ದಾಹ ಅವನ ದೇಹವನ್ನು ಸುಡುತ್ತಿತ್ತು. ಹೃದಯವು ಕಾತರಿಸುತ್ತಿತ್ತು. ಮನವು ತುಡಿಯುತ್ತಿತ್ತು. ಹೆಣ್ಣು ಎಂಬ ಎರಡಕ್ಷರವಲ್ಲದ ಅವನ ತಲೆಯಲ್ಲಿ ಬೇರೆ ಯಾವುದೂ ಹೊಳೆಯುತ್ತಿರಲಿಲ್ಲ.

ಜಾತು ಕದಾಚಿತ್ ಮಂತ್ರಿಣಾಂ ಗೌರವಾದನುರೋಧಾದ್ಧೇತೋಃ — ಪ್ರಕೃತಿಭಿಃ= ಪ್ರಜಾಭಿಃ — ಯದಪಿ ದರ್ಶನಂ ದದೌ ತದಪಿ ಗವಾಕ್ಷವಿವರಾವಲಂಬಿನಾ ಕೇವಲೇನ ಚರಣೇನ = ಚರಣಮಾತ್ರೇಣ ಕಲ್ಪಿತಂ=ಸಂಪಾದಿತಮ್ ನ ತು ಮುಖಾವಲೋಕನ ಪ್ರದಾನೇನೇತ್ಯರ್ಥಃ—ಪ್ರಕೃತಿಕಾಂಕ್ಷಿತಂ = ತನ್ನ ದರ್ಶನವನ್ನು ಅಪೇಕ್ಷಿಸುವ ಪ್ರಜೆಗಳಿಗೆ ಆತ್ಮದರ್ಶನವನ್ನು ಅನುಗ್ರಹಿಸದೆ— ದರ್ಶನಂ ದದೌ = ದರ್ಶನವೀಯಲು, ಮೊಗ ತೋರಿಸು — ಗವಾಕ್ಷವಿವರಾವಲಂಬಿನಾ = ಗವಾಕ್ಷದ ಮೂಲಕ ತನ್ನೊಂದು ಬೂಟು ಕಾಲನ್ನು ತೋರಿಸುತ್ತಾ.

**8. ತಂ ಕೃತ ಪ್ರಣತಯೋಽನುಜೀವಿನಃ ।**
**ಕೋಮಲಾತ್ಮನಖರಾಗರೂಷಿತಮ್ ॥**
**ಭೇಜಿರೇ ನವದಿವಾಕರಾತಪ ।**
**ಸ್ಪೃಷ್ಟ ಪಂಕಜ ತುಲಾಧಿರೋಹಣಮ್ ॥ ೮ ॥**

ಮೂಡುತ್ತಿರುವ ಸೂರ್ಯನ ಕೆಂಪಾದ ಬಿಸಿಲಿನ ಕಾಂತಿಯಲ್ಲಿ ಅರಳಿದ ತಾವರೆಯೋ ಎಂಬಂತೆ ಅವನ ಪಾದಗಳು ತೋರುತ್ತ ಎಸೆದಿದ್ದುವು. ಆ ರಾಜನ ಕೆಂಪಾದ ಪಾದಗಳು ತನ್ನ ಎಳೆಯ ಉಗುರುಗಳ ಪೊಗರಿನಿಂದ ಥಳಥಳನೆ ಮಿರುಗುತಲಿದ್ದುವು. ಅವನ ಸೇವಕರು ಭಯಭರಿತ ಭಕ್ತಿಯಿಂದ, ವಿಶೇಷವಾದ ತಮ್ಮ ರಾಜನ ಶ್ರೀಪಾದಗಳಿಗೆ ನಮಿಸುತ್ತ ಪೂಜ್ಯಭಾವನೆಯಿಂದ, ನಮ್ರತೆಯಿಂದ ನಡೆದುಕೊಳ್ಳುತ್ತಿದ್ದರು. ಅವರು ಸೇವಾತತ್ಪರರಾಗಿರುತ್ತಿದ್ದರು.

ಕೋಮಲೇನ = ಮೃದುಲೇನಾತ್ಮನಖಾನಾಂ—ರೂಷಿತಮ್ = ಛುರಿತಮ್ — ಅತ ಏವ ದಿವಾಕರಾತಪೇನ ಸ್ಪೃಷ್ಟಂ = ವ್ಯಾಪ್ತಂ ಯತ್ ಪಂಕಜಂ—ಕೃತಪ್ರಣತಯಃ = ಕೃತನಮಸ್ಕಾರಾಃ — ಭೇಜಿರೇ = ಸಿಷೇವಿರೇ = ಸೇವೆಸಲ್ಲಿಸುತ್ತಿದ್ದರು — ಕೋಮಲಾತ್ಮನಖರಾಗರೂಷಿತಮ್ = ಫಳಫಳಿಸುವ ತನ್ನ ಎಳೆಯುಗುರ ಕಾಂತಿಯಿಂದ (ಪೊಗರಿನೊಳು) — ನವದಿವಾಕರಾತಪ, ಸ್ಪೃಷ್ಟಪಂಕಜತುಲಾಧಿರೋಹಣಮ್ = ಮೂಡುವ ಎಳೆ ನೇಸರಿನ ಕೆಂಬಿಸಿಲಕಾಂತಿಯಲಿ ಬಿರಿವ (ಅರಳುವ) ತಾವರೆಹೂವಿನಂತೆ ತೋರುತ ಎಸೆದಿರಲು—ಕೃತಪ್ರಣತಯಃ = ತಲೆಬಾಗಿವಂದಿಸು.

**9. ಯೌವನೋನ್ನತವಿಲಾಸಿನೀಸ್ತನ ।**
**ಕ್ಷೋಭಲೋಲಕಮಲಾಶ್ಚ ದೀರ್ಘಿಕಾಃ ॥**
**ಗೂಢಮೋಹನಗೃಹಾಸ್ತದಂಬುಭಿಃ ।**
**ಸವ್ಯಗಾಹತ ವಿಗಾಢಮನ್ಮಥಃ ॥ ೯ ॥**

ಆ ಕಾಮುಕನು ಯೌವನೋನ್ನತ ಕುಚಲಕ್ಷ್ಮಿಯಿಂದ ರಾರಾಜಿಸುವ ವಿಲಾಸಿನಿಯರ, ಮತ್ತಕಾಶಿನಿಯರ, ಪ್ರಮದೆಯರ, ಪ್ರಮದೆಯರ ಗಡಣದೊಂದಿಗೆ ಜಲಕ್ರೀಡೆಯಲ್ಲಿ ನಿರತನಾಗಿರುತ್ತಿದ್ದನು. ಉನ್ಮತ್ತರಾದ ಆ ಯುವತಿಯರ ಕುಚಾಗ್ರದಿಂದ ಅತ್ತಿತ್ತ ಅಲುಗುವ ತಾವರೆಹೂಗಳು, ಕ್ಷೋಭೆವಡೆದು ಚಂಚಲಬುದ್ಧಿಯು. ಅಲೆಅಲೆಯಾಗಿ ಚಲಿಸು

ತ್ತಿರುವ ಜಲರಾಶಿಯಲ್ಲಿ ಆ ರಾಜನು ಚೆಲ್ಲಾಟವಾಡುತ್ತಿದ್ದನು. ಆ ಕೆರೆಯ ಬಳಿಯಲ್ಲಿ ಕಾಮ ಸುಖವನ್ನು (ರತಿಸುಖವನ್ನು) ಬಯಸಿದಾಗ (ಗೂಢಗೃಹಗಳಿಗೆ) ಮೋಹನ ಗೃಹಗಳಿಗೆ (ಗುಟ್ಟಿನ ಮನೆಗಳು, ವಿಹಾರಗೃಹಗಳು, ಶಯನಗೃಹಗಳು, ಶೃಂಗಾರಗೃಹಗಳು) ತೆರಳಿ ತನ್ನ ದಾಹವನ್ನು (ಕಾಮುಕ್ಕವೆಯನ್ನು, ಬಾಯಾರಿಕೆ, ನೀರಡಿಕೆ) ತೀರಿಸಿಕೊಳ್ಳುತ್ತಿದ್ದನು. ಆ ಕೃತಕ ಮೋಹನ ಗೃಹಗಳು, ಮಂಟಪಗಳನ್ನು ಆ ಕಮಲಾಕರದ ನೀರಿನ ಅಡಿಭಾಗ ದಲ್ಲಿಯೇ ರಚಿತವಾಗಿರುತ್ತಿದ್ದವು. ಆ ಗಾಢಮನ್ಮಥನು ಆ ಪ್ರೌಢಮಂದನನು ವರ ನಾರಿಯರೊಂದಿಗೆ (ವಾರನಾರಿಯರೊಂದಿಗೆ) ಸ್ತ್ರೀಲಂಪಟನಾಗಿ ಸುರತಸುಖವನ್ನು ಅನು ಭವಿಸುತ್ತ ಚಂಚಲಚಿತ್ತನಾಗಿ, ಹೆಂಗಸರ ಗುಲಾಮನಾಗಿ, ಬುದ್ಧಿಹೀನನಾಗಿ, ದೀರ್ಘ ಕಾಮುಕನಾಗಿ ಯೌವನವನ್ನು ಕಳೆಯುತ್ತಿದ್ದನು. ಆಯುಷ್ಯವನ್ನು ನಾಶಮಾಡುತ್ತಿದ್ದನು.

ವಿಗಾಢಮನ್ಮಥ = ಪ್ರೌಢಮನ್ಮಥ—ಲೋಲಾನಿ = ಚಂಚಲಾನಿ ಮೋಹನಗೃಹಾಣಿ = ಸುರತಭವನಾನಿ—ಯೌವನೋನ್ನತವಿಲಾಸಿನೀ—ಕ್ಷೋಭಲೋಲಕಮಲ = ಸ್ತ್ರೀಯರ ಈಜಿನಿಂದ ಕ್ಷೋಭೆಗೊಂಡ, ಅಲ್ಲೋಲಕಲ್ಲೋಲವಾಗಿ ಕಂಪಿಸುವ ಕಮಲಗೃಹಗಳು— ಗೂಢಮೋಹನ ಗೃಹ=ಗುಟ್ಟಿನ ವೇಶ್ಯಾವಾಟಿಕೆ=ಗೂಢಾ ಅದೃಶ್ಯಾ ಮೋಹನಗೃಹಾ, ಸುರತಗೃಹಾ ಯಾಸು ತಾಃ ॥

**10. ತತ್ರ ಸೇಕಹೃತಲೋಚನಾಂಜನೈಃ ।**
**ಧೌತರಾಗಪರಿಪಾಟಲಾಧರೈಃ ॥**
**ಅಂಗನಾಸ್ತಮಧಿಕಂ ವ್ಯಲೋಭಯನ್ ।**
**ಅರ್ಪಿತ ಪ್ರಕೃತಕಾಂತಿಭಿರ್ಮುಖೈಃ** ॥ ೧೦ ॥

ಆ ಅಂಗನೆಯರು ನೀರಾಟದೊಳು, ಅಧಿಕವಾದ ಶ್ರಮದಿಂದ ಬಳಲಿದರು. ಕಣ್ಣಿನ ಕಾಡಿಗೆಯು ನೀರಲ್ಲಿ ತೊಳೆದುಹೋಯಿತು. ಕೆಳತುಟಿಗೆ ಹಚ್ಚಿದ ಕೆಂಬಣ್ಣವು (ಲಾಕ್ಷಾ ರಸವು) ಅಳಿಸಿಹೋಗಿ ಅವರು ನೈಜಕಾಂತಿಯಿಂದ ಕಂಗೊಳಿಸಿದರು. ಅವರು ಮುಖಕ್ಕೆ ಬಳಿದ ಅಂಗರಾಗವು ತೊಳೆದು ಅವರು ಪ್ರಕೃತಿದತ್ತವಾದ, ಸಹಜಸೌಂದರ್ಯದಿಂದ ಶೋಭಿಸುತ್ತ ಆ ರಾಜನಲ್ಲಿ ಆ ಅರಸಿಯರು (ನವಜವ್ವನೆಯರು) ಹೆಚ್ಚಿನ ಮೋಹವನ್ನು ಉಂಟುಮಾಡಿದರು. ಆ ಅರಸನು ಅವರಲ್ಲಿ ಅಧಿಕಮೋಹಗೊಂಡು ಅವರ ಜೊತೆಯಲ್ಲಿ ಹೆಂಡ ಕುಡಿದ ಕೋತಿಯಂತೆ ಕುಣಿಯಲಾರಂಭಿಸಿದನು.

ಲೋಚನಾಂಜನಂ = ನೇತ್ರಕಜ್ಜಲಂ—ರಾಗದ್ರವ್ಯಂ = ಲಾಕ್ಷಾದಿ—"ಗುಣೇ ಶುಕ್ಲಾ ದಯಃ ಪುಂಸಿ" ಇತ್ಯಮರಃ—ಅತ ಏವಾರ್ಪಿತ ಪ್ರಕೃತಕಾಂತಿಭಿಃ—ಅಪಿ ಚ ಪ್ರಕೃತಿ ಕಾಂತಿಭಿಃ = ಅರ್ಪಿತಾ, ದತ್ತಾ, ಪ್ರಕೃತಿಃ ಸಹಜಕಾಂತಿಶೋಭಾ ಏಭ್ಯಸ್ತಾನಿ—ಧೌತ ರಾಗಾಪಾಟಲಾಧರೈಃ = ಧೌತರಾಗಾಃ ಪರಿಪಾಟಲಾ ಅಧರಾ ಏಷಾಂ ತೈಃ ॥

**11. ಘ್ರಾಣಕಾಂತಮಧುಗಂಧಕರ್ಷಿಣೀಃ ।**
**ಪಾನಭೂಮಿರಚನಾಃ ಪ್ರಿಯಾಸಖಃ ॥**
**ಅಭ್ಯಪದ್ಯತ ಸ ವಾಸಿತಾಸಖಃ ।**
**ಪುಷ್ಪಿತಾಃ ಕಮಲಿನೀರಿವ ದ್ವಿಪಃ** ॥ ೧೧ ॥

ಗಂಡಾನೆಯು ಹೆಣ್ಣಾನೆಗಳ ಹಿಂಡಿನ ಜೊತೆಯಲ್ಲಿ ಮೋದದಿಂದ ಮುದವಾಂತು ಅರಳಿದ ಅರವಿಂದಗಳಿರುವ, ಹೂಗಳ ಸುವಾಸನೆಯಿಂದ ಘಮಘಮಿಸುತ್ತಿರುವ ಸರೋವರವನ್ನು ಕ್ರೀಡಿಸಲು ಪ್ರವೇಶಿಸುವಂತೆ ಅಗ್ನಿವರ್ಣಮಹಾರಾಜನು ತನ್ನ ಅಂತಃಪುರದ ಅರಸಿಯರ ಜೊತೆಯಲ್ಲಿ ಪಾನವಾಟಿಕೆಗಳನ್ನು ಪ್ರವೇಶಿಸಿದನು. ಆ ಪಾನವಾಟಿಕೆಯು (ಪಾನಭೂಮಿಯು) ದ್ರಾಕ್ಷಾರಸದ ಸುವಾಸನೆಯಿಂದ ಕಂಪುವಡೆದು ಅರಳಿದ ಕೆಂದಾವರೆಯಿಂದ ತುಂಬಿರುವ ಜಲಾಶಯವು, ಸೌರಭ ಸೂಸುವಂತೆ ಮೆರೆಯುತ್ತಿತ್ತು. ಗಂಡಾನೆಯು ಕರಿಣಿಗಳ ಸಮೂಹದೊಂದಿಗೆ ಜಲಾಶಯವನ್ನು ಪ್ರವೇಶಿಸುವಂತೆ ಆ ಭೂಪನು ಕಾಮಾಂಧನಾಗಿ ಮತ್ತಕಾಶಿನಿಯರೊಂದಿಗೆ ಪ್ರೌಢನಾರಿಯರ ಜೊತೆಯಲ್ಲಿ ಜಲಕೇಳಿಗಾಗಿ (ನೀರಾಟವಾಡಲು) ಮಧುಗಂಧಭರಿತವಾದ ಪಾನಶಾಲೆಗಳನ್ನು ಪ್ರವೇಶಿಸಿದನು.

ರಚ್ಯಂತ ಇತಿ ರಚನಾಃ—ಪಾನಭೂಮ್ಯ ಏವ ರಚನಾಃ—ವಾಸಿತಾ ಸಖಃ=ಕರಿಣೀ ಸಹಚರ = ಹೆಣ್ಣಾನೆಯನ್ನು ಅನುಸರಿಸುವ ಗಂಡಾನೆಯಂತೆ— ಪಾನಭೂಮಿರಚನಾ = ರಚನಾ ಪದಂ ಮದ್ಯೋನಿರ್ವಾಣಸೂಚಕಂ ||

**12. ಸಾತಿರೇಕಮದಕಾರಣಂ ರಹಃ |**
**ತೇನ ದತ್ತಮಭಿಲೇಷು ರಂಗನಾಃ ||**
**ತಾಭಿರಪ್ಯುಪಹೃತಂ ಮುಖಾಸವಂ |**
**ಸೋಽಪಿ ಬದ್ಧಕುಲತುಲ್ಯದೋಹದಃ** || ೧೨ ||

ಪಾನಮತ್ತೆಯರಾದ ಆ ವನಿತೆಯರು ಆ ರಾಜನು ತನ್ನ ಬಾಯಲ್ಲಿ ತುಂಬಿ ಮುಕ್ಕಳಿಸಿರುವ (ಎಂಜಲು) ಮಧುವನ್ನು ಕುಡಿಯಲು ಬಯಸಿದರು. ಆಗಲಾ ಪಾನಲೋಲನು ತನ್ನ ಬಾಯಲ್ಲಿ ತುಂಬಿರುವ ಮಧುರಸವನ್ನು ತನ್ನ ಪ್ರೀತಿಯ ಕಾಣಿಕೆಯಾಗಿ ಗುಟುಕು ಗುಟುಕಾಗಿ ಇತ್ತು ಅವರನ್ನು ಕಾಮಿಸಿದನು. ಪಾನಮತ್ತನಾದ ಆ ನರೇಶ್ವರನು ಆ ವಾರನಾರಿಯರಿಗೆ ಹಿತವಾಗುವ ಅನೇಕ ರೀತಿಯ ಚೇಷ್ಟೆಗಳನ್ನು ತೋರಿ ಅವರನ್ನು ಸಂತಸಪಡಿಸಿದನು. ಅವನು ಮೋದವಾಂತು, ಮುದವಾಂತು ಬಕುಳವೃಕ್ಷದಂತೆ ಸಮದೋಹದನಾಗಿ ಉದ್ರೇಕಗೊಂಡು ಮುಖಮದಿರೆಯನ್ನು ಗುಟ್ಟಿನೊಳಗಿತ್ತು ಆ ಸತಿಯರೊಂದಿಗೆ ಕ್ರೀಡಿಸುತ್ತ ಆ ಅಂಗನೆಯರ ಆನನದ ಆಸವಾಂಬುವನು ಹೀರಿ ಉನ್ಮತ್ತನಾಗಿ ತೃಪ್ತಿಪಟ್ಟು ಸುಖಿಸಿದನು (ಸ್ವರ್ಗಕ್ಕೆ ಮೂರೇ ಗೇಣು ಎಂಬಂತೆ).

ರಹೋ ರಹಸಿ ಸಾ ತಿರೇಕಸ್ಯ ಸಾತಿಶಯಸ್ಯ ಮದಸ್ಯ ಕಾರಣಂ ತೇನಾಗ್ನಿವರ್ಣೇನ ದತ್ತಂ ಮುಖಾಸವಮಭಿಲೇಷುಃ ತುಲ್ಯದೋಹದಸ್ಯ=ಸಾಭಿಲಾಷಃ—ಅಥ ದೋಹದಮ್ —ಇಚ್ಛಾಕಾಂಕ್ಷಾಸ್ಪೃಹೇ ಹಾ ಲಟ್'' ಇತ್ಯಮರಃ—ದತ್ತಂ—ರಹ = ಗುಟ್ಟಿನೊಳಗಿತ್ತುದನು—ಮುಖಾಸವ = ಮುಖಮದಿರೆ—ಸಾತಿರೇಕಮದಕಾರಣಮ್ = ಉನ್ಮತ್ತಮದದಿಂದಾಗಿ, ಬಕುಲತುಲ್ಯದೋಹದಃ = ಬಕುಳ ವೃಕ್ಷದಂತೆ ಕಾಮಿನಿಯರ ಬಯಕೆ ಪೂರೈಸಿ.

**13. ಅಂಕಮಂಕಪರಿವರ್ತನೋಚಿತೇ ।**
**ತಸ್ಯ ನಿನ್ಯತುರಶೂನ್ಯತಾಮುಭೇ ॥**
**ವಲ್ಲಕೀ ಚ ಹೃದಯಂಗಮಸ್ವನಾ ।**
**ವಲ್ಗುವಾಗಪಿ ಚ ವಾಮಲೋಚನಾ ॥ ೧೩ ॥**

ಅವನ ತೊಡೆಯು (ಅಂಕವು) ಎಂದೂ ಶೂನ್ಯವಾಗಿರುತ್ತಿರಲಿಲ್ಲ. ಒಂದೋ ಸುಂದರಾಂಗಿಯರು ಮಧುರವಾಗಿ ಮಾತಾಡಬಲ್ಲ, ಅವನ ಹೃದಯವನ್ನು ಮೃದುವಾದ ಮಾತಿನಿಂದ ತಣಿಸಬಲ್ಲ ಕಾಮಿನಿಯರು ಕುಳಿತಿರುತ್ತಿದ್ದರು. ಇಲ್ಲವೆ ಹೃದಯವನ್ನು ಮಿಡಿಯಬಲ್ಲ ವೀಣೆಯು ತೊಡೆಯನ್ನು ಅಲಂಕರಿಸಿಕೊಂಡಿರುತ್ತಿತ್ತು. ಆ ಮಹಾರಾಜನ ತೊಡೆಯಲ್ಲಿ ಕುಳಿತು ಸಂಗೀತದ ಮಧುರ ಸುಸ್ವನಗಳಲ್ಲಿ ನುಡಿಸಬಲ್ಲ ವೀಣಾಪಾಣಿಗಳಾದ ಯುವತಿಯರು ವೀಣೆಯನ್ನು ಬಾರಿಸುತ್ತ ಅವನ ಹೃದಯತಂತಿಯನ್ನು ಮೀಟುತ್ತಿದ್ದರು. ಅವನು ಗಾನದ ಗುಂಗಿನಲ್ಲಿ ಮೈಮರೆಯುತ್ತಿದ್ದನು ಕೋಡುಂಗಿಯಂತೆ ಉಬ್ಬುತ್ತಿದ್ದನು.

ಅಂಕಪರಿವರ್ತನೋಚಿತೇ = ಉತ್ಸಂಗವಿಹಾರಾರ್ಹೇ — ಹೃದಯಂಗಮಸ್ವನಾ = ಮನೋಹರಧ್ವನಿ—ರ್ವಲ್ಲಕೀ = ವೀಣಾ ಚ—ವಲ್ಗು=ವಾಚ್ ಮಧುರಭಾಷಿಣೀ ವಾಮಲೋಚನಾ ಕಾಮಿನ್ಯಪಿ ಚ ಹೃದಯಂ ಗಚ್ಛತೀತಿ=ಹೃದಯಂಗಮಃ—ಅಂಕಮಂಕಪರಿವರ್ತನೋಚಿತೇ = ಅವನ ತೊಡೆಗಳಿಗೆ ಪುರಸೊತ್ತೇ ಇರಲಿಲ್ಲ (ವಿರಾಮ) (ಚಕ್ರಾರಪಂಕ್ತಿಯಂತೆ) ವಲ್ಗುವಾಕ್ = ಪ್ರಿಯಂವದ = ಜೇನ್‌ಸವಿಮಾತು.

**14. ಸ ಸ್ವಯಂ ಪ್ರಹತಪುಷ್ಕರಃ ಕೃತೀ ।**
**ಲೋಲಮಾಲ್ಯವಲಯೋ ಹರನ್ಮನಃ ॥**
**ನರ್ತಕೀರಭಿನಯಾತಿಲಂಘಿನೀಃ ।**
**ಪಾರ್ಶ್ವವರ್ತಿಷು ಗುರುಷ್ವಲಜ್ಜಯತ್ ॥ ೧೪ ॥**

ಆ ಸುಂದರ ನರ್ತಕಿಯರು ನರ್ತಿಸುತ್ತಿರಲು ಹಾರ, ಕೇಯೂರಗಳ, ಕಾಲ್ಗೆಜ್ಜೆಗಳು, ಪದಮಂಜರಿಗಳು ಅಲುಗುತ್ತ, ಗಲಗಲ ಸದ್ದುಮಾಡುತ್ತಿದ್ದುವು. ಆಗ ಸ್ತ್ರೀಯರ ಗಮನ ಸೆಳೆಯಲು ಆ ಕುಶಲಿಯಾದ ವಿಲಾಸಿರಾಜೇಂದ್ರನು ಒಂದು ಉಪಾಯ ಹೂಡಿ ಮೃದಂಗವನ್ನು, ತಬ್ಲಾವಾದನಗೈಯುತ್ತಿದ್ದವನ ಕೈಯಿಂದ ಕಸಿದುಕೊಂಡು, ತಾನೇ ನುಡಿಸಿ ತನ್ನ ಕೈಚಳಕವನ್ನು ತೋರುತ್ತಿದ್ದನು. ರಸಿಕನಾದ ಆ ದೊರೆಯು ಮೃದಂಗವಾದನಗೈಯುತ್ತಿರಲು ಒಮ್ಮೊಮ್ಮೆ ಆ ನರ್ತಕಿಯರು ತಾಳತಪ್ಪಿ ತಪ್ಪು ಹೆಜ್ಜೆಹಾಕಿ ಕುಣಿಯುತ್ತಿದ್ದರು, ತಮ್ಮ ಆಚಾರ್ಯರ ಎದುರಲ್ಲಿ ಅಭಿನಯವ ತಪ್ಪಿದುದರಿಂದ ಅವರು ನಾಚಿ ಸಿಗ್ಗಾಗಿ ಹೋದರು.

ಪ್ರಹತಪುಷ್ಕರೋ = ವಾದಿತವಾದ್ಯಮುಖೋ — ಲೋಲಾನಿ ಮಾಲ್ಯಾನಿ — ಅಭಿನಯಾತಿಲಂಗಿನೀಃ—ಅಭಿನಯೇಷು ಸ್ಖಲನ್ತೀರಿತ್ಯರ್ಥಃ—ನರ್ತಕೀರ್ವಿಲಾಸಿನೀಃ— "ನರ್ತಕೀಲಾಸಿಕೇ ಸಮೇ" ಇತ್ಯಮರಃ—ಪಾರ್ಶ್ವವರ್ತಿಷು—ಅಲಜ್ಜಯತ್ ಪಾರ್ಶ್ವವರ್ತಿಷು = ಅವನ ಬದಿಯಲ್ಲಿ (ಪಾರ್ಶ್ವದಲ್ಲಿ) ಕುಳಿತರು—ಅಲಂಘಯತ = ಸೋತು ನಾಚು.

15. ಚಾರುನೃತ್ಯವಿಗಮೇ ಚ ತನ್ಮುಖಂ ।
ಸ್ವೇದಭಿನ್ನತಿಲಕಂ ಪರಿಶ್ರಮಾತ್ ॥
ಪ್ರೇಮದತ್ತವದನಾನಿಲಃ ಪಿಬನ್ ।
ಅತ್ಯಜೀವದಮರಾಲಕೇಶ್ವರೌ ॥ ೧೫ ॥

ನಾಟ್ಯವು ತುಂಬಾ ಹೊತ್ತು ಮುಂದುವರಿದು ಆ ಪದ್ಮಗಂಧಿಯರು ಆಯಾಸಗೊಂಡು ದಣಿದಿರಲು ಅವರ ಸುಂದರಾನನದಲ್ಲಿ ಬೆವರುಹನಿ ಮೂಡಿತು. ಇದರಿಂದ ಅವರ ತಿಲಕವು ನಸು ಅಳಿಸಿಹೋಯಿತು. ಆಗ ಆ ವರಾನನೆಯರನ್ನು ಹೆಚ್ಚಾದ ಪ್ರೀತಿಯಿಂದ ಮುದ್ದಿಗೈದನು. ಉನ್ಮತ್ತನಾದ ಆ ಮಹೀಪಾಲನು ಅವರ ಕೆಂದಾವರೆಯ ಹೋಲುವ ಮುಖವನ್ನು ಬಾಯಿಯಿಂದ ಗಾಳಿಯನ್ನು ಊದುತ್ತ ಮುದ್ದಿಸಿ ತನ್ನ ಜಾಣತನದಿಂದ ಅವರ ತಿಲಕಗಳನ್ನು ಪೂರ್ಣ ಅಳಿಸಿದನು. ಹೀಗೆ ನವನವೀನವಾದ ವಿಧಿವಿಧಾನಗಳಿಂದ ರಸಿಕ ಮನೋವೃತ್ತಿಯ ಆ ರಾಜನು ಮಾರನಾಟವನ್ನು ಆಡುತ್ತ ಅಮರಾವತಿಯ ಒಡೆಯನಾದ ಇಂದ್ರನನ್ನೂ, ಅಲಕಾವತಿಯ ಒಡೆಯನಾದ ಯಕ್ಷರೊಡೆಯನಾದ ಕುಬೇರನನ್ನೂ ಮೀರಿಸಿ ಭೋಗಸಾಮ್ರಾಜ್ಯದ ಅವಿಭಕ್ತ ಸಾಮ್ರಾಟನಾದನು.

ಪರಿಶ್ರಮಾನ್ನರ್ತನ=ಪ್ರಯಾಸಾತ್ಸ್ವೇದೇನ ಭಿನ್ನತಿಲಕಂ=ವಿಶೀರ್ಣತಿಲಕಂ—ತನ್ಮುಖಂ = ನರ್ತಕೀಮುಖಂ ಪ್ರೇಮ್ಣಾ ದತ್ತ ವದನಾನಿಲಃ = ಪ್ರವರ್ತಿತ ಮುಖಮಾರುತಃ— ಅಮರಾಣಾಮಲಕಾಯಾಶ್ಚೇಶ್ವರಾವಿಂದ್ರಕುಬೇರೌ—ಪ್ರೇಮದತ್ತವದನಾನಿಲಃ=ಪ್ರೇಮ ದತ್ತವದನಾನಿಲಃ = ಪ್ರೇಮ್ಣಾ ದತ್ತೋ ವದನಾನಿಲೋ ಯಸ್ಮೈ ತತ್—ನೃತ್ಯವಿಗತೇ = ನಾಟ್ಯಾವಸಾನದೊಳು.

16. ತಸ್ಯ ಸಾವರಣದೃಷ್ಟಸಂಧಯಃ ।
ಕಾಮ್ಯವಸ್ತುಷು ನ ವೇಷುಸಂಗಿನಃ ॥
ವಲ್ಲಭಾಭಿರುಪಸೃತ್ಯ ಚಕ್ರಿರೇ ।
ಸಾಮಿಭುಕ್ತವಿಷಯಾಃ ಸಮಾಗಮಾಃ ॥ ೧೬ ॥

ಆ ವಿಷಯಲಂಪಟನಾದ ಇಳಾನಾಥನು ಹೊಸ ಹೊಸ ಕಾಮಸುಖಗಳ ಬಗ್ಗೆ, ಹೊಸ ಕಾಮಸೂತ್ರಗಳನ್ನು ನಿಯೋಜಿಸುತ್ತ ಯೋಚಿಸತೊಡಗಿದನು. ಈ ಹಿಂದಿನ ಅರಸಿಯರ ಸಂಗ ಅವನಿಗೆ ರುಚಿಸಲಿಲ್ಲ. ಅವನು ನವತರುಣಿಯರ, ನವವಲ್ಲಭೆಯರ ಸಂಪರ್ಕ ಬೆಳೆಸ ತೊಡಗಿದನು. ಅವರ ದೇಹಸುಖವನ್ನು ಬಯಸತೊಡಗಿದನು. ನವನರ್ತಕಿಯರು ಸಾಲು ಸಾಲಾಗಿ ಅವನ ಅರಮನೆಗೆ ಬರತೊಡಗಿದರು. "ಎಲ್ಲಾ ಬಿಟ್ಟ ಮಗ ಭಂಗಿ ನಟ್ಟ" ಎಂಬಂತೆ ಆ ಮಹಾರಾಜನಿಗೆ ನಾಚಿಕೆ, ಮರ್ಯಾದೆಯ ಗಸಣೆಯೇ ಇರಲಿಲ್ಲ. ಸ್ವತಃ ಅವನೇ ಅಥವಾ ಅವನ ಪರಿಚಾರಕರ ಮೂಲಕ ಉಪಪತಿಯರನ್ನು, ನವಬಾಲೆಯರನ್ನು ಆಕರ್ಷಿಸಿ ಅವರೊಂದಿಗೆ ಸಮಾಗಮ ನಡೆಸುತ್ತಿದ್ದನು. ಆಗ ಅವನ ಹಿಂದಿನ ಉಪ ಪತ್ನಿಯರು ಅವರ ಗುಟ್ಟಿನ ಜಾಗಕ್ಕೆ ಮತ್ಸರದಿಂದ ಭೇಟಿಕೊಟ್ಟು ಕಾಮಸುಖಕ್ಕೆ ಅಡ್ಡಿ ಮಾಡುತ್ತಿದ್ದರು. ಇದರಿಂದ ಅವನಿಗೆ ವಿಷಯೋಪಭೋಗದ ಅರ್ಧಸುಖವು ಮಾತ್ರ

ಲಭಿಸುತ್ತಿತ್ತು. ಪಶುಗಳು ಗಟಗಬನೆ ಮುಕ್ಕುವಂತೆ, ಅಥವಾದ ಅಜೀರ್ಣವಾದವನಂತೆ ಆ ನರೇಶನು ತೃಪ್ತಿಹೊಂದದೆ ಚಡಪಡಿಸುತ್ತಿದ್ದನು. ಪಶುಬುದ್ಧಿಯ ಆ ನರೇಂದ್ರನು ಜಾನುವಾರುಗಳಂತೆ ವಿಷಯಸುಖಗಳ ಬಗ್ಗೆ ಮೆಲುಕುಹಾಕುತ್ತ, ಆಳವಾಗಿ ಯೋಚಿಸುತ್ತ ಸಮಯ ಕಳೆಯುತ್ತಿದ್ದನು.

ಸಂಧಯಃ = ಸಾಧನಾನಿ—ಸಮಾಗಮಾಃ = ಸಂಗಮಾ—ಸಾವರಣಾಃ=ಪ್ರೇಯಸೀಭಿಃ—ಸಾವಿಭುಕ್ತವಿಷಯಾ = ಅರ್ಧೋಪಭುಕ್ತೇಂದ್ರಿಯಾರ್ಥಾಶ್ಚಕ್ರಿರೇ—ಇತಃ ಸ್ವಯಮುಪಸೃತ್ಯ ವಿಶೇಷಾರ್ಥೀ ತತ್ರ ಸ್ಥಿತೋಽನುಪಜಾಪಂ ಸ್ವಯಂ ಸಂಧೇಯಃ'' ಇತಿ ವಾತ್ಸ್ಯಾಯನಃ—ಅನ್ಯತ್ರ ಗತಾ ಕಥಂಚಿತ್ ಸಂಧಾಯ ಪುನರುಪಗಮಾಯಾರ್ಧೋಪಭೋಗೇನಾನಿ ವೃತ್ತೇ ತೃಷ್ಣಾಂ ಚಕ್ರುರಿತ್ಯರ್ಥಃ—ನವೇಷು ಸಂಗಿನಃ = ಹೊಸಶೋಕಿ—ಹೊಸ ವಿಧಿವಿಧಾನಗಳನ್ನು ಅರಸಿ ಕಾಮತೃಪ್ತಿಗೊಳಿಸು (ಹೊಸ ತಾರೆಯರನ್ನು ಆಕರ್ಷಿಸು).

17. ಅಂಗುಲೀಕಿಸಲಯಾಗ್ರತರ್ಜನಂ ।
ಭ್ರೂವಿಭಂಗಕುಟಿಲಂ ಚ ವೀಕ್ಷಿತಮ್ ॥
ಮೇಖಲಾಭಿರಸಕೃಚ್ಚ ಬಂಧನಂ ।
ವಂಚಯನ್ ಪ್ರಣಯಿನೀರವಾಪ ಸಃ ॥ ೧೭ ॥

ಆ ರಾಜನ ಪ್ರೇಯಸಿಯರು ತಮ್ಮನ್ನು ವಂಚಿಸಿ, ಬೇರೆ ವಲ್ಲಭೆಯರ, ಪ್ರಣಯಿನಿಯರ ಬಳಿಗೆ ಹೋಗುವ ರಾಜನನ್ನು ಕಂಡು ತಮ್ಮ ಚೆಂದಳಿರಪೋಲಿರುವ ತುದಿಬೆರಳುಗಳಿಂದ ಹೋಗಬೇಡವೆಂದು ಬೆದರಿಸತೊಡಗಿದರು. ಆ ರಾಜನು ಆ ನಲ್ಲೆಯರ ಹುಬ್ಬುಗಂಟಿಕ್ಕಿದ ಕುಡಿನೋಟದ ಉರಿಯನ್ನು ಸಹಿಸಬೇಕಾಯಿತು. ಆ ಬಾಲೆಯರ ಸಿಟ್ಟಿಗೆ ಪಾತ್ರನಾಗಿ ಅನೇಕ ಸಲ ಸಮಾಗಮವನ್ನು ಬಯಸಿ ಆ ಪ್ರಗಲ್ಭೆಯರ ಕಟಿಬಂಧಕ್ಕೆ ಅಥವಾ ಮೇಖಲೆಯ ಬಂಧನಕ್ಕೆ ಒಳಗಾದನು. ಹದ ತಪ್ಪಿದ ಕಾಮಪಿಪಾಸೆಯಿಂದ ಅವನು ಉನ್ಮತ್ತೆಯರಿಗೆ ಸೆರೆಯಾಳಿನಂತೆ, ಅವರ ಮೇಖಲೆಯ ಸೆರೆಯನ್ನನುಭವಿಸುತ್ತಿದ್ದನು. ಅವರೊಡನೆ ಚಾಟುವ್ಯಾಪಾರವನ್ನು ಸಾಗಿಸುತ್ತ ಕಾಮಲೀಲೆಯಲ್ಲಿ ಮುಳುಗಿ ಏಳುತ್ತ, ಕುರುಡನಂತೆ ಕರ್ತವ್ಯಭ್ರಷ್ಟನಾಗಿ ಸಮಯವನ್ನು ದುಂದುವ್ಯಯ ಮಾಡತೊಡಗಿದನು.

ಪ್ರಣಯಿನೀಃ=ಪ್ರೇಯಸೀರ್ವಂಚಯನ್ನನ್ಯತ್ರ ಗಚ್ಛನ್—ಭ್ರೂವಿಭಂಗೇನ ಭ್ರೂಭೇದೇನ ಕುಟಿಲಂ ವಕ್ರಂ ವೀಕ್ಷಿತಂ ವೀಕ್ಷಣಂ—ಅಸಕೃತ್ = ಅಸಕೃದಿತಿ ಸರ್ವತ್ರ ಸಂಬಧ್ಯತೇ ॥

18. ತೇನ ದೂತಿವಿದಿತಂ ನಿಷೇದುಷಾ ।
ಪೃಷ್ಠತಃ ಸುರತವಾರರಾತ್ರಿಷು ॥
ಶುಶ್ರುವೇ ಪ್ರಿಯಜನಸ್ಯ ಕಾತರಂ ।
ವಿಪ್ರಲಂಭಪರಿಶಂಕಿನೋ ವಚಃ ॥ ೧೮ ॥

ಆ ರಾಜವಹೌಳಿಯಲ್ಲಿ ಅನುರಕ್ತರಾಗಿ ಮೋಹಪರವಶರಾದ ಅವನ ನವೀನ ಹೆಂಡಿರು ಅವನ ಸಮಾಗಮವನ್ನು ಬಯಸಿ ಕಾತುರರಾಗಿ ಅವನ ಬರವನ್ನು ನಿರೀಕ್ಷಿಸುತ್ತ ವಿರಹ ವೇದನೆಯಿಂದ ಸಂಕಟಪಡುತ್ತ ಅವನ ಬಗ್ಗೆ ಮಾತನಾಡುತ್ತಿದ್ದರು. ಆ ಸ್ತ್ರೀಲಂಪಟನು ಅಂದಿನ ಸುರತಸುಖದ ರಾತ್ರಿಯಲ್ಲಿ ಅವರಿಗೆ ಗೊತ್ತಿಲ್ಲದಂತೆಯೇ ಶಯ್ಯಾಗಾರವನ್ನು ಪ್ರವೇಶಿಸಿ ಅವರ ಬೆನ್ನಹಿಂದೆಯೇ ಇಟ್ಟಿರುವ ಉಚಿತಾಸನದಲ್ಲಿ ಮೆಲ್ಲನೆ ಕುಳಿತು ಅವರ ವಿರಹಸಲ್ಲಾಪಗಳನ್ನು ಆಲಿಸುತ್ತ ಸಂತಸಗೊಳ್ಳುತ್ತಿದ್ದನು. ತನ್ನ ಮನದಲ್ಲೇ ಹಿಗ್ಗು ತ್ತಿದ್ದನು (ಹಿಗ್ಗಿ ಹೀರೆಕಾಯಿ ಆಗು, ಸೋತು ಸೋರೆಕಾಯಿ ಆಗು—ಆಡುಮಾತು). ಆ ಚಪಲಚೆನ್ನಿಗರಾಯನು ಆ ಶೃಂಗಾರನಿಲಯಕ್ಕೆ ಬರುವುದನ್ನು ಪರಿಚಾರಿಕೆಯರು ಮಾತ್ರ ತಿಳಿದಿದ್ದರು. ಅವನ ಪ್ರಿಯಜನರು (ಕಾದಲೆಯರು, ವಿರಹ ಶಂಕಿನಿಯರು) ಅರಿಯದೆ ದೈನ್ಯಾವಸ್ಥೆಯಿಂದ ವಿರಹಪೀಡಿತರಾಗಿ ಅವನ ದರ್ಶನಕಾತರರಾಗಿ ಅಲಾಪಿಸು (ವಿಲಪಿಸು)ತ್ತಿದ್ದರು.

ಸುರತವಾರರಾತ್ರಿಷು = ಸುರತಸ್ಯ ವಾರೋಽವಸರೋ ಯಾಸು ತಾಶ್ಚ ತಾರಾತ್ರಯಶ್ಚ ತಾಸು। ಅಸ್ಯಾಃ ಸುರತವಾರೋಽಸ್ಯಾಂ ರಾತ್ರಾವಿತಿ—ಪ್ರವೃತ್ತಃ ಪ್ರಿಯಜನಸ್ಯ ಪಶ್ಚಾದ್ಭಾಗೇ ನಿಷೇದುಷಾ ತೇನಾಗ್ನಿವರ್ಣೇನ ವಿಪ್ರಲಂಭಪರಿಶಂಕಿನೋ ವಿರಹಶಂಕಿನಃ —ಪ್ರಿಯಶ್ಚಾಸೌ ಜನಶ್ಚ=ಪ್ರಿಯಜನಃ—ತಸ್ಯ ಕಾತರಂ ವಚಃ ''ಪ್ರಿಯಾ ನಯನೇನ ಮಾಂ ಪಾಹಿ'' ಇತ್ಯೇವಮಾದಿ ದೀನವಚನಂ ಶುಶ್ರುವೇ ॥

19. **ಲೌಲ್ಯಮೇತ್ಯ ಗೃಹಿಣೀ ಪರಿಗ್ರಹಾತ್ ।**
**ನರ್ತಕೀಷ್ವಸುಲಭಾಸು ತದ್ವಪುಃ ॥**
**ವರ್ತತೇ ಸ್ಮ ಸ ಕಥಂಚಿದಾಲಿಖನ್ ।**
**ಅಂಗುಲೀಕ್ಷರಣಸನ್ನವರ್ತಿಕಃ** ॥ ೧೯ ॥

ಸ್ತ್ರೀಲೋಲನಾದ ಆ ರಾಜನನ್ನು ಅರಸಿಯರು ತಾವಿರಿಸಿಕೊಂಡು ಅವನ ಅಂಗಸಂಗ ವನ್ನು ಬಯಸಿ ಅವರನ್ನು ವೇಶ್ಯಾವೃತ್ತಿಗೆಳೆಯಲು ಬಯಸಿ ಅವರ ನರ್ತನದ ಅವಧಿ ಮುಗಿದಿದ್ದರೂ ಅವರನ್ನು ಹೋಗಗೊಡದೆ ಒಂದಲ್ಲ ಒಂದು ವಿಧದಿಂದ ಅಡ್ಡಿಪಡಿಸು ತ್ತಿದ್ದನು. ಇದೀಗ ಅನವಮೋಹನಾಕಾರೆಯರ ವಿವಿಧ ಅಂಗಾಂಗಗಳ, ವಿವಿಧ ಭಾವ ಭಂಗಿಗಳಲ್ಲಿ ಅವರ ಚಿತ್ರವನ್ನು ಬರೆಯುತ್ತಾ ಕುಳಿತಿರುತ್ತಿದ್ದನು. ಸುರತಕ್ರಿಯೆಯಿಂದ ಬಳಲಿದ ಅವನ ಕೈಬೆರಳುಗಳು ಬೆವರುತ್ತಿದ್ದುವು. ಇದರಿಂದ ಅವನ ಕೈಯಲ್ಲಿ ಹಿಡಿದ ಕುಂಚವು ತಾನಾಗಿ ಜಗುಳುತ್ತಿತ್ತು. ಕೈಯ ಕುಂಚವು ತಾನೇತಾನಾಗಿ ಬಿದ್ದುಹೋದರೂ ಆ ವಿಲಾಸಿಯು ವಿರಮಿಸನು. ಅವನ ಬೆರಳುಗಳಲ್ಲಿಯೂ ನರಬಲವೇ ಇರಲಿಲ್ಲ. ಹೀಗೆ ದುರ್ಲಭರಾದ ನರ್ತಕಿಯರಲ್ಲಿ ಅನುರಕ್ತನಾದ ಆ ವಿಷಯಮನ್ಮಥನು ಅವರನ್ನು ಹೋಗ ಗೊಡದೆ ಕುಂಟುನೆವನಗಳನ್ನು "ಒಡ್ಡುತ್ತಾ ವೇಳೆಗಳೆಯುತ್ತಿದ್ದನು.

ಗೃಹಿಣೀಪರಿಗ್ರಹಾದ್ರಾಜ್ಞೀಭಿಃ = ಸಮಾಗಮಾದ್ಧೇತೋರ್ನರ್ತಕೀಷು — ಲೌಲ್ಯ ಮೌತ್ಸುಕ್ಯಮೇತ್ಯ=ಪ್ರಾಪ್ಯ—ಅಂಗುಲ್ಯೋಃ ಕ್ಷರಣೇನ ಸ್ವೇದನೇನ ಸನ್ನವಾರ್ತಿಕೋ= ವಿಗಲತಶಲಾಕಃ—ವಪುಸ್ತದ್ವಪುರಾಲಿಖನ್ ಕಥಂಚಿದ್ವರ್ತತೇ ಸ್ಮಾವರ್ತತ—ಅಂಗುಲೀ

ಕ್ಷರಣಾಪನ್ನವರ್ತಿಕಃ = ಅಂಗುಲೀನಾಂ ಕ್ಷರಣೇನ ಸ್ವೇದೇನ ಸತ್ರಾ ಪಾತಿತಾ ತೂಲಿಕಾ ಯಸ್ಯ ಸಃ—ಗೃಹಿಣೀಪರಿಗ್ರಹಾತ್ = ಅರಸಿಯರು ತಾವಿರಿಸಿಕೊಂಡು.

**20. ಪ್ರೇಮಗರ್ವಿತವಿಪಕ್ಷಮತ್ಸರಾತ್ ।**
**ಆಯತಾಚ್ಚ ಮದನಾನ್ಮಹೀಕ್ಷಿತಮ್ ॥**
**ನಿನ್ಯುರುತ್ಸವವಿಧಿಚ್ಛಲೇನ ತಂ ।**
**ದೇವ್ಯ ಉಜ್ಝಿತರುಷಃ ಕೃತಾರ್ಥತಾಮ್** ॥ ೨೦ ॥

ಆ ರಾಜನ ಸವತಿಯರು ತಮ್ಮಲ್ಲಿ ಅನುರಕ್ತನಾಗಿರುವನೆಂದು, ತಮ್ಮನ್ನೇ ರಾಜನು ಹೆಚ್ಚು ಮೆಚ್ಚಿರುವನೆಂದು ಬಿಂಕದಿಂದ, ಹೆಮ್ಮೆಯಿಂದ, ಒಣಪ್ರತಿಷ್ಠೆಯಿಂದ ಬೀಗಿ ಹೋಗಿದ್ದರು. ಅಂಗಜವಿಕಾರದಿಂದ ಬಳಲಿದ ಆ ಮಹಿಳೆಯರು ಅರಸನನ್ನು ತಮ್ಮ ಬಳಿಗೆ ಬರುವಂತೆ ಹಬ್ಬ, ಹರಿದಿನ, ಉತ್ಸವಗಳ ವಿಶೇಷ ಸಮಾರಂಭಗಳ ನೆವನ ಒಡ್ಡಿ ಆಮಂತ್ರಿಸುತ್ತಿದ್ದರು. ಆ ಬಳಿಕ ತಮ್ಮ ಇನಿಯನಿಂದ ತಮ್ಮ ಇಷ್ಟಾರ್ಥವನ್ನು (ಅಂಗಜ ತೃಷೆಯನ್ನು) ಪೂರೈಸಿಕೊಳ್ಳುತ್ತಿದ್ದರು. ಆದರೆ ಆ ಕಾಮನ ಅರಗಿಣಿಯರು ಸವತಿ ಮತ್ಸರದಿಂದ ಅರಸನು ಇತರ ಸ್ತ್ರೀಯರನ್ನು ಮೋಹಿಸದಂತೆ ಬಹಳ ಪ್ರಯತ್ನಿಸು ತ್ತಿದ್ದರು. ಆದರೆ ಆ ರಾಜನ ಬುದ್ಧಿ ಡೊಂಕೇ, ನಾಯಿಬಾಲದಂತೆ, ಓಟೆಯಲ್ಲಿ ಹಾಕಿದಾಗ ಮಾತ್ರ ಸರಿ. ಒಂದು ಹೂವಿನಿಂದ ಇನ್ನೊಂದು ಹೂವಿಗೆ ಹಾರುವ ಪತಂಗದಂತೆ, ಇಲ್ಲವೇ ಕಾಮವೆಂಬ ಬೆಂಕಿಗೆ ಬೀಳುವ ಹಾತೆಯಂತೆ.

ಉತ್ಸವವಿಧಿಚ್ಛಲೇನ = ಮಹೋತ್ಸವಕರ್ಮವ್ಯಾಜೇನ—ಕೃತೋಽರ್ಥಃ ಪ್ರಯೋಜನಂ ಯೇನ ಸ ಕೃತಾರ್ಥಃ--ತಸ್ಯ ಭಾವಂ ಕೃತಾರ್ಥತಾಂ ನಿನ್ಯುಃ—ತೇನ ಸ್ವಮನೋರಥಂ—ಪ್ರೇಮಗರ್ವಿತ ವಿಪಕ್ಷಮತ್ಸರಾತ್=ಸವತಿಯರು ಬಿಂಕದಿಂದ ರಾಜನು ತಮ್ಮನ್ನೇ ಮೆಚ್ಚಿರುವನೆಂದು ಬಗೆದು ಸವತಿಮತ್ಸರದಿಂದ.

**21. ಪ್ರಾತರೇತ್ಯಪರಿಭೋಗಶೋಭಿನಾ ।**
**ದರ್ಶಿತೇನ ಕೃತಖಂಡನವ್ಯಥಾ ॥**
**ಪ್ರಾಂಜಲಿಃ ಪ್ರಣಯಿನೀಃ ಪ್ರಸಾದಯನ್ ।**
**ಸೋಽದುನೋತ್ ಪ್ರಣಯಮಂಥರಃ ಪುನಃ** ॥ ೨೧ ॥

ಬೆಳಗಿನ ಜಾಮಕ್ಕೆ ಸರಿಯಾಗಿ ಆ ವನಿತಾಪ್ರಿಯನಾದ ಮಹಾರಾಜನು ತನ್ನ ಅರಸಿಯರ ನಿಲಯಕ್ಕೆ ಹಿಂದಿರುಗಿದನು (ವನಿತಾಸುಪ್ರಭಾತದ ಆರಂಭ). ಆಗ ತಮಗೆ ಮೋಸ ಮಾಡಿ, ಇತರ ವಧುಗಳ ಸಂಪರ್ಕದಲ್ಲಿದ್ದು ಹಿಂದಕ್ಕೆ ಬಂದ ತಮ್ಮ ಜೊತೆಗಾರನಾದ ತಮ್ಮ ಸ್ವಾಮಿಯನ್ನು (ಅಷಾಢಭೂತಿ) ಅಲಕ್ಷ್ಯಭಾವದಿಂದ ಆ ಮಹಿಳೆಯರು ಕಂಡರು. ಅವರು ಕೋಪಿಸಿಕೊಂಡಿರುವುದನ್ನು ಅರಿತ ಆ ನರೇಂದ್ರನು ಅವರಿಗೆ ಕೈಜೋಡಿಸಿ ನಮಸ್ಕರಿಸಿ ಕ್ಷಮಾಯಾಚನೆ ಬೇಡಿದನು (ಸಮಯಸಾಧಕತನ). ಹಿಂದಿನ ರಾತ್ರಿಯಲ್ಲಿ ನರ್ತಕಿಯರೊಂದಿಗೆ ಅವನು ನಡೆಸಿದ ಕೇಳಿಯ ರತಿಚಿಹ್ನೆಗಳನ್ನು ಅವರು ಕಣ್ಣಾರೆ ಕಂಡು

ಸಹಿಸದೆ ರೊಚ್ಚಿಗೆದ್ದರು. ತಮ್ಮ ಪ್ರಾಣಪತಿಯ ಪ್ರಣಯಚಿಹ್ನೆಗಳಿಂದ ಅವರ ಕಾಮೋನ್ಮಾದ ಮತ್ತಷ್ಟು ಪ್ರಜ್ವಲಿಸಿತು. ಮಿತಿಮೀರಿದ ಮೋಜುಗಾರಿಕೆಯಿಂದ (ಸುಖಾಪೇಕ್ಷೆಯಿಂದ) ದುರ್ವ್ಯಸನಪೀಡಿತನಾದ ಆ ಮಹಾರಾಜನ ಕಣ್ಣುಗಳು ತೇಜರಹಿತವಾಗಿ, ಕಾಂತಿಹೀನವಾಗಿದ್ದುವು. ಆತನು ಆಲಸ್ಯ ಹೊಂದಿದ್ದು ಓರ್ವ ಬೆಪ್ಪುತಕ್ಕಡಿಯಂತೆ ಮಂಕಾಗಿದ್ದನು. ತೇಜೋವಿಹೀನನಾಗಿ ಕಳೆಗುಂದಿದ್ದನು. ಪರಿಸ್ಥಿತಿ ಹೀಗಿದ್ದರೂ ಅವನ ದೇಹದಲ್ಲಿ ಬೇರೂರಿದ್ದ ಪ್ರಣಯಕಲಹದ (ಬೇಟದ) ಚಿಹ್ನೆಗಳನ್ನು ಕಂಡು ಆ ವನಿತೆಯರು ಮೋಹಪರವಶರಾದರು. ಆ ಕುರುಹುಗಳನ್ನು ನೋಡುತ್ತ ನೋಡುತ್ತ ಅವರ ಮನಸ್ಸಿಗೆ ಬಲುಬಗೆಯ ನೋವು ಉಂಟಾಯಿತು.

ಪರಿಭೋಗಶೋಭಿನಾ = ದರ್ಶನೇನಹೇತುನಾ—"ಜ್ಞಾತೇಽನ್ಯಾಸಂಗವಿಕೃತೇ ಖಂಡಿತೇರ್ಷ್ಯಾಕಷಾಯಿತಾ" ಇತಿ—ಪ್ರಸಾದಯುಸ್ತ್ರತಾಪಿ ಪ್ರಣಯಮುಖರಃ—ಪುನರದುನೋತ್ = ಪರ್ಯತಾಪಯತ್—ಕೃತಖಂಡನವ್ಯಥಾಃ = ಕೃತಾ ಸಂಪಾದಿತಾ ಖಂಡನವ್ಯಥಾ ಅನ್ಯಾಂಗನಾ ಸಂಗಚಿಹ್ನಜ್ಞಾನೋತ್ಪನ್ನಾ ಪೀಡಾ ಯಾಸಾಂ ತಾಃ—ಪರಿಭೋಗಿಶೋಭಿನಾದರ್ಶಿತೇನ = ಪರಿಭೋಗಶೋಭಿತನ ದರ್ಶನದೊಳು ಅರಸಿಯರು, ರತಿಚಿಹ್ನೆಗಳ ದರ್ಶನದಿಂದ ಕೆರಳಿದ—ಪ್ರಣಯಮುಖರಃ = ಅನಿತರೊಳೆ ಮರಳಿದನು ಗಣಿಕೆಯರ ಮೋಹಜಾಲದ ಒಂದು ಅಲಿಸಿಕೆಯೊಳ್ ಅವನು.

**22.** **ಸ್ವಪ್ನಕೀರ್ತಿತವಿಪಕ್ಷಮಂಗನಾಃ ।**
**ಪ್ರತ್ಯಭೈತ್ಸುರವದಂತ್ಯ ಏವ ತತ್ ॥**
**ಪ್ರಚ್ಛದಾಂತಗಲಿತಾಶ್ರುಬಿಂದುಭಿಃ ।**
**ಕ್ರೋಧಭಿನ್ನವಲಯೈ ರ್ವಿವರ್ತನೈಃ** ॥ ೨೨ ॥

ಆ ಬಳಿಕ ಒಂದೇ ಹಾಸಿನಲ್ಲಿ ಮಲಗಿದ್ದರೂ ಅವರ ಕೋಪತಾಪಗಳು ತಣ್ಣಗಾಗಲಿಲ್ಲ. ಆ ಕಾಮುಕನೃಪನು ಕನಸಿನಲ್ಲೂ (ಹಿಂದಿನ ದಿನದ) ಸಪತ್ನಿಯರ ಹೆಸರನ್ನು ಅಸ್ಪಷ್ಟವಾಗಿ ಕೂಗಿ ಕರೆಯುತ್ತಿದ್ದನು. ಇದರಿಂದ ಅವರನ್ನು ಕೆಣಕಿದಂತಾಯಿತು. ಆ ನೃಪನು ಕೆಲವೊಮ್ಮೆ ತನ್ನ ಸ್ತ್ರೀಯರ ಹೆಸರುಗಳನ್ನು ತಪ್ಪುತಪ್ಪಾಗಿ ಉಚ್ಚರಿಸುತ್ತಿದ್ದನು. ಆ ಸ್ತ್ರೀಲೋಲನು ತಮ್ಮ ವಿರೋಧಿಗಳಿಗೆ ಹೆಚ್ಚು ಪ್ರಿಯನಾಗಿ, ಅವರ ವಶನಾಗಿರುವುದನ್ನು ಅರಿತು ಆ ಪ್ರೌಢೆಯರ ಕಣ್ಣುಗಳಿಂದ ಬಿಸಿಯಾದ ಬಾಷ್ಪಬಿಂದುಗಳು ಉದುರಿದುವು. ಅದರಿಂದ ಅವರು ಹೊದೆದ ಹಾಸು ಕಣ್ಣೀರಿನಿಂದ ಸ್ವಲ್ಪಮಟ್ಟಿಗೆ ಒದ್ದೆಯಾಯಿತು. ಆ ಪ್ರಮದೆಯರು ತಮ್ಮ ಕೋಪವನ್ನು ಈ ತೆರನಾಗಿ ಪ್ರಕಟಿಸಿದರು. ಅರಸನು ತನಿನಿದ್ರೆಯಲ್ಲಿ ಹೊರಳಾಡುತ್ತಾ ಗಟ್ಟಿಯಾಗಿ ಇತರ ಸ್ತ್ರೀಯರ ಹೆಸರನ್ನು ಕೂಗಿ ಕರೆಯುತ್ತಿದ್ದನು. ಆಗ ಈ ವಿಲಾಸಿನಿಯರು ತಾವು ಬೆನ್ನುಹಾಕಿ ಮುಖ ತಿರುಗಿಸಿ ಮಲಗಿ ನಿದ್ರಿಸುತ್ತಿದ್ದರು. ಅವರು ಸಿಟ್ಟಿನಿಂದ ಪಿಟ್ಟೆಂದು ಮಾತಾಡದೆ ತಮ್ಮ ಪಾಡಿಗೆ ಹುಸಿನಿದ್ದೆ ಬರುವವರಂತೆ ನಟಿಸಿ ಮಲಗಿರುತ್ತಿದ್ದರು. ಸಾಲದುದಕ್ಕೆ ಭಗ್ನಮನೋರಥರಾದ ಆ ಮಹಿಳೆಯರು ಕಟಕ್, ಕಟಕ್ ಎಂದು ತಮ್ಮ ಗಾಜಿನ ಬಳೆಗಳನ್ನು ಬೇಕೆಂತಲೇ ಒಡೆದುಕೊಳ್ಳುತ್ತ ತಮ್ಮ ಕ್ರೋಧವನ್ನು, ಕೋಪತಾಪವನ್ನು ತೋರಿಸಿಕೊಳ್ಳುತ್ತಿದ್ದರು.

ಸ್ವಪ್ನೇ ಕೀರ್ತಿತೋ ವಿಪಕ್ಷಃ = ಸಪತ್ನೀಜನೋ ಯೇನ ತಂ—ಭಿನ್ನಾನಿ = ಭಗ್ನಾನಿ—ವಲಯಾನಿ ಯೇಷಾಂ ತೈರ್ವಿವರ್ತನೈಃ ಪರಾಙ್ಮುಖಲುಂಠನೈಃ—ಪ್ರತ್ಯಭೈತ್ಸುಃ=ಪ್ರತಿಚಕ್ರುಃ—ಸ್ವಪ್ನಕೀರ್ತಿತ ವಿಪಕ್ಷಮಂಗನಾ = ಕನಸಿನಲ್ಲಿ ತನ್ನ ಜೊತೆಗಾತಿಯರ ಹೆಸರನ್ನು ಕನವರಿಸಿ ಕರೆವಾತನನ್ನು.

**23. ಕ್ಲೃಪ್ತ ಪುಷ್ಪಶಯನಾಲ್ಲತಾಗೃಹಾ ।**
**ನೇತ್ಯದೂತಿಕೃತಮಾರ್ಗದರ್ಶನಃ ॥**
**ಅನ್ವಭೂತ್ಪರಿಜನಾಂಗರತ್ನಂ ।**
**ಸೋಽವರೋಧಭಯವೇಪಥೂತ್ತರವತ್ ॥ ೨೩ ॥**

ಆ ಕಾಮಪಿಪಾಸು ಅಗ್ನಿವರ್ಣನು ಅಂತಃಪುರಕ್ಕೆ ಹೋಗುವ ಮಾರ್ಗಮಧ್ಯೆ ತನ್ನ ಗೌರವಾರ್ಥವಾಗಿ ವಿರಚಿತವಾಗಿರುವ ಪುಷ್ಪಶಯನಾಲಂಕಾರ, ಲತಾಗೃಹಗಳನ್ನು, ಬಳ್ಳಿ ಮೋಡಗಳನ್ನು ನೋಡುತ್ತ ಆನಂದತುಂದಿಲನಾಗಿ ಪರಿಚಾರಕರ ಜೊತೆಯಲ್ಲಿ, ಅವರ ಮಾರ್ಗದರ್ಶನದಲ್ಲಿ ಹೋಗುತ್ತಲಿದ್ದನು. ಹೀಗೆ ನೋಡುತ್ತ ಆ ಪರಿಜನ ಅಂಗನೆಯರ ಅಂಗಸಂಗದಲ್ಲಿ ಕ್ರೀಡಾಮನೋರಥನಾಗಿ ಹೂಹಾಸಿಗೆಯಲ್ಲಿ ಬೆರೆಯುತ್ತ, ಈ ವಿಷಯವು ರಟ್ಟಾದರೆ, ತನ್ನ ಪಟ್ಟಮಹಿಷಿಯರಿಗೆ ತಿಳಿದರೆ ಏನು ಗತಿಯೆಂದು ನಡುಗುತ್ತ ಅವರ ಸುಖವನ್ನು ಸವಿದನು. ಮುಂದೆ ತನ್ನ ತೇಜೋಭಂಗವಾಗಬಹುದೆಂದು ಬಗೆದು ಥರಥರನೆ ನಡುಗಿದನು.

ದೂತಿಭಿಃ ಕೃತಮಾರ್ಗದರ್ಶನಃ ಸನ್—ಅವರೋಧಾದಂತಃಪುರಜನಾದ್ಭಯೇನ—ಪರಿಜನಾಂಗನಾರತಂ ದಾಸೀರತಮನ್ವಭೂತ್—ಪರಿಜನಶ್ಚಾಸಾವಂಗನಾ ಚೇತಿ ವಿಗ್ರಹಃ—ಕ್ಲೃಪ್ತಪುಷ್ಪಶಯನಾಂಲ್ಲತಾಗೃಹಾನ್=ಕ್ಲೃಪ್ತಾನಿ ಪುಷ್ಪಾಣಾಂ ಶಯನಾನಿ ಯೇಷಾಂ ತಾಲ್ಲಂತಾಗೃಹಾನೇತ್ಯ ಗತ್ವಾ॥ ದೂತಿಕೃತಮಾರ್ಗದರ್ಶನಃ = ದೂತಿಯರು ತೋರಿಸಿದ ಬಳ್ಳಿವನೆ ದಾರಿಯನು.

**24. ನಾಮವಲ್ಲಭಜನಸ್ಯ ತೇ ಮಯಾ ।**
**ಪ್ರಾಪ್ಯ ಭಾಗ್ಯಮಪಿ ತಸ್ಯ ಕಾಂಕ್ಷ್ಯತೇ ॥**
**ಲೋಲುಪಂ ನನು ಮನೋ ಮಮೇತಿ ತಂ ।**
**ಗೋತ್ರವಿಸ್ಖಲಿತಮೂಚುರಂಗನಾಃ ॥ ೨೪ ॥**

ಅವನ ಪ್ರತಿಯೊಬ್ಬ ರಾಣಿಯರೂ ಹೀಗೆ ಅನ್ನುತ್ತಿದ್ದರು: "ಹೇ ಪ್ರಿಯಕರ, ನೀನು ನನ್ನನ್ನು, ನಿನ್ನ ಅನುರಾಗಕ್ಕೆ ಪ್ರಿಯಳಾದ ಪ್ರೇಯಸಿಯ (ಮನೋವಲ್ಲಭೆಯ) ಹೆಸರಿನಿಂದ ಸಂಬೋಧಿಸಿ ಕರೆದೆಯಲ್ಲವೆ ? ಭಾಗ್ಯವಂತಳಾದ ಆಕೆಯ ಹೆಸರು ಹಿಡಿದು, ನೀನು ನನ್ನನ್ನು ಕೂಗಿ ಕರೆದುದರಿಂದ ಅವಳ ಭಾಗ್ಯವೆಲ್ಲವೂ ಇನ್ನುಮುಂದೆ ನನ್ನದಾಗಲಿ. ಅವರ ಗೋತ್ರ, ಪ್ರವರ, ಅನ್ವಯ, ನಾಮಧೇಯಕ್ಕೆ ನಾವು ಪಾತ್ರರಾದಂತಾಯಿತು, ಆದರಿಂದ ನನ್ನ ಮನಸ್ಸಿನ ಆಕಾಂಕ್ಷೆಗಳು, ಇಷ್ಟಗಳು, ಮನೋರಥಗಳು ನಿನ್ನಿಂದ ಫಲಿಸಲಿ. ನಮ್ಮ ಕಟ್ಟಾಸೆಗಳು, ನಿನ್ನಿಂದ ಬೇಗನೆ ನೆರವೇರಲಿ" ಎಂದು ಪ್ರಣಯಕಾಂಕ್ಷಿತರಾಗಿ ನುಡಿಯುತ್ತ

ಲಿದ್ದರು. ಅವನು ಇತರ ಹೆಣ್ಣುಗಳ ಹೆಸರನ್ನೆತ್ತಿ ಆ ಅರಸಿಯರನ್ನು ಕರೆಯುತ್ತ, ಅವರನ್ನು ಸ್ಮರಿಸುತ್ತ ಚಡಪಡಿಸುತ್ತಿದ್ದನು (ಬಾಯಿ ಚಪ್ಪರಿಸುತ್ತಿದ್ದನು). ಅವನು ಹೂವಿಂದ ಹೂವಿಗೆ ಹಾರುವ ದುಂಬಿಯಂತೆ, ಅಥವಾ ಕಾಮಾಗ್ನಿಗೆ ಹಾರುವ ಪತಂಗದಂತೆ ಕಾಮದ ಸುಳಿಯಲ್ಲಿ ಸಿಕ್ಕಿ ತೊಳಲಾಡುತ್ತಿದ್ದನು. ಅತಿಯಾದ ಸ್ತ್ರೀಮೋಹವು ಅನರ್ಥಕ್ಕೆ ಕಾರಣವಷ್ಟೆ, ಅತಿಭೋಗಿಯಾಗಿ ತನ್ನ ಗೋರಿಯನ್ನು ತಾನೇ ತೋಡಿಕೊಳ್ಳ ತೊಡಗಿದನು.

ವಲ್ಲಭಜನಸ್ಯ= ಪ್ರಿಯಜನಸ್ಯ—"ಗೋತ್ರಂ ನಾಮ್ನಿ ಕುಲೇಽಚಲೇ" ಇತಿ ಯಾದವಃ—ತನ್ನಾಮಲಾಭೇ ಸತಿ ತದ್ಭಾಗ್ಯಮಪಿ ಕಾಂಕ್ಷ್ಯತೇ ಮನಃ—ಲೋಲುಪಂ = ವಿಷಯ ಲೋಲುಪ, ಇಂದ್ರಿಯಗಳ ದಾಸಾನುದಾಸ.

25. ಚೂರ್ಣಬಭ್ರು ಲುಲಿತಸ್ರಗಾಕುಲಂ ।
ಛಿನ್ನಮೇಖಲಮಲಕ್ತಕಾಂಕಿತಮ್ ॥
ಉತ್ಥಿತಸ್ಯ ಶಯನಂ ವಿಲಾಸಿನಃ ।
ತಸ್ಯ ವಿಭ್ರಮರತಾನ್ಯಪಾವೃಣೋತ್ ॥ ೨೫ ॥

ಇದೀಗ ಬೆಳಗಾಯಿತು. ಆ ರತಿರಾಜನು (ವಿಷಯಮನ್ಮಥನು) ತನ್ನ ಶಯನಾಗಾರವನ್ನು ಬಿಟ್ಟು ಬೇರೆಡೆಗೆ ನಡೆದಿರುವನು. ಆ ವಿಲಾಸಿನಿಯು ನಡೆಸಿದ ನಾನಾ ರೀತಿಯ ರತಿಕ್ರೀಡೆಗಳನ್ನು ಆ ಶಯನಾಗಾರಗಳೇ, ಜೀವಂತಸಾಕ್ಷಿಗಳಾಗಿ ಉಳಿದಿವೆ. ಅಲ್ಲಿ ಪರಿಮಳಯುಕ್ತವಾದ ಕುಂಕುಮಮುಖಚೂರ್ಣಗಳು, ಅರಶಿನದ ಚೂರ್ಣಗಳು, ಹರಿದ ಹೂಸರಗಳು (ಹೂಮಾಲೆಗಳು), ಕಿತ್ತುಹೋದ ಮೇಖಲೆಗಳು (ಗಲಿತಮೇಖಲೆಗಳು), ಅಲತಿಕೆಯ ಗುರುತುಗಳು (ಸ್ತ್ರೀಯರ ಕಾಲಿನ ಗುರುತುಗಳು) ಅವನ ರತಿಕೇಳಿಗಳನ್ನು, ಲಂಪಟತ್ವವನ್ನು ರತಿರಹಸ್ಯಗಳನ್ನು ಕುರುಹುಗಳಾಗಿ ಜಗತ್ತಿಗೆ ಸಾರುತ್ತಿದ್ದುವು. ಅವನ ಪಶುಜೀವನದ ಸುಕೇತಗಳಾಗಿ (ನಿದರ್ಶನಗಳಾಗಿ) ಆ ಶಯ್ಯೆಗಳಲ್ಲಿ ಉಳಿದಿದ್ದು ಅವನ ರಹಸ್ಯಜೀವನದ ನೈಜಚಿತ್ರವನ್ನು ಜಗತ್ತಿಗೆ ಸಾರುತ್ತಿದ್ದುವು.

ಚೂರ್ಣೈರ್ಬಭ್ರು=ಚೂರ್ಣೈರ್ವ್ಯಾನತಕರಣೈರಘೋಮುಖಾವಸ್ಥಿತಾಯಾಃ ಸ್ತ್ರಿಯಾಶ್ಚಿಕುರಗಲಿತೈಃ ಕುಂಕುಮಾದಿಭಿರ್ಬಭ್ರು ಪಿಂಗಲಮ್—ಛಿನ್ನಮೇಖಲಂ ಹರಿವಿಕ್ರಮಕರಣೈಃ = ಗಲಿತಮೇಖಲಮಿತ್ಯರ್ಥಃ—ಉತ್ಥಿತಸ್ಯ—ಶಯನಾದಿತಿ ಭಾವಃ—ವಿಭ್ರಮರತಾನಿ = ಲೀಲಾರತಾನಿ—ಉತ್ಥಿತಸ್ಯ ಶಯನಂ=ಅವನು ಬಿಟ್ಟಿರುವ ಹಾಸುಮಂಚಗಳು (ನೃಪನುಳಿದ ತಲ್ಪಮಂದು).

26. ಸ ಸ್ವಯಂ ಚರಣರಾಗಮಾದಧೇ ।
ಯೋಷಿತಾಂ ನ ಚ ತಥಾ ಸಮಾಹಿತಃ ॥
ಲೋಭ್ಯಮಾನನಯನಃ ಶ್ಲಥಾಂಶುಕೈಃ ।
ಮೇಖಲಾ ಗುಣಪದೈಃ ನಿತಂಬಿಭಿಃ ॥ ೨೬ ॥

ಆ ನರೇಂದ್ರನು ತನ್ನ ವಲ್ಲಭಜನರನ್ನು ಸಮಾಧಾನಪಡಿಸಲು ತಾನೇ ಅವರ ಕಾಲುಗಳಿಗೆ, ಅವರ ಅಡಿದಾವರೆಯ ಬಳಿಯಲ್ಲಿ ಸಿಂಗರಿಸುತ್ತಾ ಕುಳಿತಿರುವನು. ಆದರೆ ಆ ಕಾಮಿ ದೊರೆಯ ದೃಷ್ಟಿ ಮಾತ್ರ ಆದರ ಕಡೆಗೆ ಇರದೆ ಸಡಿಲವಾದ ವಸ್ತ್ರದಿಂದ ಅವೃತವಾದ ಕಟಿ, ನಿತಂಬ, ಜಘನ, ಪೊರವಾರ, ಕರಭೋರುಗಳ ಕಡೆಗೆ ಹರಿದಿತ್ತು.

ಸ್ವಯಮೇವ ಯೋಷಿತಾಂ ಚರಣಯೋ ರಾಗಂ = ಲಾಕ್ಷಾರಸಮಾದಧೇऽರ್ಪಯಾಮಾಸ—ಕಿಂಚ, ಶ್ಲಥಾಂ ಶುಕ್ಯೈಃ— ಪ್ರಿಯಾಂಗಸ್ಪರ್ಶಾದಿತಿ ಭಾವಃ—ನಿತಂಬಬಿಂಬನಿತಂಬವದ್ಭಿರ್ಮೇಖಲಾಗುಣವದ್ಭಿರ್ಜಘನ್ಯೈಃ—"ಪಶ್ಚಾನ್ನಿತಂಬಃ ಸ್ತ್ರೀಕಟ್ಯಾಃ ಕ್ಲೀಬೇ ತು ಜಘನಂ ಪುರಃ" ಇತ್ಯಮರಃ—ಲೋಭ್ಯಮಾನನಯನಃ = ಆಕೃಷ್ಯಮಾಣದೃಷ್ಟಿಃ ಸನ್—ಶ್ಲಥಾಂ ಶುಕ್ಯೈಃ = ಸಡಿಲಾದ ಬಟ್ಟೆಯಿಂದ ಅವೃತವಾದ.

**27. ಚುಂಬನೇ ವಿಪರಿವರ್ತಿತಾಧರಂ ।**
**ಹಸ್ತರೋಧಿರಶನಾವಿಘಟ್ಟನೇ ॥**
**ವಿಘ್ನಿತೇಚ್ಛಮಪಿ ತಸ್ಯ ಸರ್ವತೋ ।**
**ಮನ್ಮಥೇಂಧನಮಭೂತ್ ವಧೂರತಮ್** ॥ ೨೭ ॥

ಪ್ರಿಯರಾದ ಅಂಗನೆಯರ ಸ್ಪರ್ಶಸುಖವನ್ನು ಬಾರಿಬಾರಿಗೂ (ಒಂದಲ್ಲ ಒಂದು ರೀತಿಯಿಂದ) ಬಯಸುತ್ತ ಸಮಯ ಕಳೆಯುತ್ತಲಿದ್ದನು. ಆ ಕಾಮದಾಸನು (ಆ ಕಾಮಮೋಹಿಯು) ಸುರತಸುಖವನ್ನು ಬಯಸಿ ತನ್ನ ವಧೂಜನರ ಬಳಿ ಸಾರಿ ಪೀಡಿಸುತ್ತಿದ್ದನು. ಆಗಲಾ ಕಾಂತೆಯರು ತಮ್ಮನ್ನು ಚುಂಬಿಸಲು ಬಂದಾಗ ತುಟಿಗಳನ್ನು ಬಿಯ್ಯಾರದಿಂದ ಓರೆಮಾಡುತ್ತ ತಡೆಯುತ್ತಿದ್ದರು. ಬಟ್ಟೆಯನ್ನು ಸೆಳೆಯದಂತೆ (ವಿವಸ್ತ್ರಗೊಳಿಸದಂತೆ, ಕಳಚದಂತೆ) ತಮ್ಮ ಕೈಯಿಂದ ಅವನಿಪನ ಕೈಯನ್ನು ನೂಂಕುತ್ತಿದ್ದರು. ಆದರೆ ಆತನ ಅಂಗಜಮನೋವೃತ್ತಿಯ ಇಂಧನವು (ಬೆಂಕಿಯು) ಇನ್ನೂ ಹೆಚ್ಚುತ್ತಿತ್ತೇ ವಿನಹ ಎಳ್ಳಷ್ಟೂ ಕಡಿಮೆಯಾಗುತ್ತಿರಲಿಲ್ಲ. ಹೀಗೆ ಅಗ್ನಿವರ್ಣನು ಅತಿಕಾಮಿಯಾಗಿ ಸ್ವಚ್ಛಂದವಾಗಿ ಕಾಮಲೋಕದಲ್ಲಿ (ಪ್ರೇಮಲೋಕದಲ್ಲಿ) ವಿಹರಿಸುತ್ತ ಕಾಮವಿಕಾರಕ್ಕೊಳಗಾದನು, ಪುರುಷಮೃಗವಾದನು.

ವಿಪರಿವರ್ತಿತಾಧರಂ = ಪರಿಹೃತೋಷ್ಠಮ್—ರಶನಾಯಾ ವಿಘಟ್ಟನೇ = ಗ್ರಂಥಿವಿಸ್ರಂಸನೇ ಪ್ರಸಕ್ತೇ ಸತಿ ಹಸ್ತಂ ರುಣಾದ್ಧಿ ವಾರಯತೀತಿ ಹಸ್ತರೋಧಿ—ಇತ್ಥಂ ಸರ್ವತಃ = ಸರ್ವತ್ರ ವಿಘ್ನಿತೇಚ್ಛಂ = ಪ್ರತಿಹತಮನೋರಥಮಪಿ ವಧೂನಾಂ ರತಂ = ಸುರತಂ ತಸ್ಯಾಗ್ನಿವರ್ಣಸ್ಯ ಮನ್ಮಥೇಂಧನಂ ಕಾಮೋದ್ದೀಪನಮಭೂತ್—ಮನ್ಮಥೇಂಧನ = ಅಂಗಜಮನೋ ವೃತ್ತಿಯ ಇಂಧನ ಅಥವಾ ಬೆಂಕಿ (ಅಗ್ನಿ).

**28. ದರ್ಪಣೇಷು ಪರಿಭೋಗದರ್ಶಿನೀಃ ।**
**ನರ್ಮಪೂರ್ವಮನುಪೃಷ್ಠಸಂಸ್ಥಿತಃ ॥**
**ಛಾಯಯಾ ಸ್ಮಿತಮನೋಜ್ಞಯಾ ವಧೂಃ ।**
**ಹ್ರೀನಿಮೀಲಿತ ಮುಖೀಶ್ಚಕಾರ ಸಃ** ॥ ೨೮ ॥

ಓರ್ವ ಬೆಡಗಿನ ಸಿಂಗಾರಿಯು ದರ್ಪಣದ ಬಳಿ ನಿಂತು ಹಿಂದಿನ ದಿನದ ರಾತ್ರಿಯ ಭೋಗದ ಅಂಕಿತಗಳನ್ನು (ಚೆಲ್ಲಾಟದ ಗುರುತುಗಳನ್ನು) ನೋಡುತ್ತಲಿದ್ದಾಗ ಆ ಭೂಪತಿಯು ಅವಳ ಬೆನ್ನಹಿಂದೆ ಮೆಲ್ಲನೆ ಬಳಿಸಾರಿ ನಿಂತಿದ್ದನು. ನಗೆಯಿಂದ ಚೆಲುವಾದ ತನ್ನ ಪಡಿನೆಳಲು ಆ ಕನ್ನಡಿಯಲ್ಲಿ ಪ್ರತಿಫಲಿಸಿದುದನ್ನು ಕಂಡು ಆ ಬಾಲೆ ನಸುನಾಚಿ ತನ್ನ ತಲೆಯನ್ನು ಭರದೆ ತಗ್ಗಿಸಿದಳು.

ದರ್ಪಣೇಷು ಪರಿಭೋಗದರ್ಶಿನೀಃ=ಸಂಭೋಗಚಿಹ್ನಾನಿ ಪಶ್ಯನ್ತೀರ್ವಧೂರ್ನರ್ಮಪೂರ್ವಂ=ಪರಿಹಾಸಪೂರ್ವಂ—ಅನುಪೃಷ್ಠಂ ತಾಸಾಂ ಪೃಷ್ಠಭಾಗೇ ಸಂಸ್ಥಿತಃ ಸ್ಮಿತೇನ ಮನೋಜ್ಞಯಾ—ಪರಿಭೋಗದರ್ಶಿನೀ=ಭೋಗದ ಗುರುತುಗಳನ್ನು ಕನ್ನಡಿಯಲ್ಲಿ ನೋಡುತ್ತಿದ್ದಾಗ.

**29.** **ಕಂಠಸಕ್ತಮೃದುಬಾಹುಬಂಧನಂ ।**
**ನ್ಯಸ್ತಪಾದತಲಮಗ್ರಪಾದಯೋಃ ॥**
**ಪ್ರಾರ್ಥಯಂತ ಶಯನೋತ್ಥಿತಂ ಪ್ರಿಯಾಃ ।**
**ತಂ ನಿಶಾತ್ಯಯ ವಿಸರ್ಗಚುಂಬನಮ್ ॥ ೨೯ ॥**

ಆ ಅವನಿಪನು ರತಿರಹಸ್ಯಗಳನ್ನು ಅರಿಯಲು (ಕೋಕಶಾಸ್ತ್ರ) ವಿಶ್ವಪ್ರಯತ್ನ ನಡೆಸಿದನು. ವಾತ್ಸ್ಯಾಯನ ಮಹರ್ಷಿಗಳು ಹೇಳಿರುವ ಧೇನುಕಬಂಧ, ಕರಿಪದಾಖ್ಯಬಂಧ, ಹರಿವಿಕ್ರಮಬಂಧ ಮೊದಲಾದ ವಿಪರೀತ ಭಂಗಿಗಳು, ಅವುಗಳ ಜೊತೆಗೆ ಸ್ಥಿತರತ, ಅವಲಂಬಿತಕರತ, ಸಂಘಾಟಕ, ಗೋಯೂಥಿಕ, ವಿಪರಿಷ್ವಕ, ಅಧೋರತ ಮೊದಲಾದ ರತಿರತಬಂಧಗಳಲ್ಲಿ ಪ್ರಯೋಗಗಳನ್ನು ನಡೆಸುತ್ತಾ ವಿಲಾಸೀಜೀವನವನ್ನು ಮುಂದುವರಿಸಿದನು. ಭೋಗಸಾಮ್ರಾಜ್ಯದಲ್ಲಿ ಬಾಹ್ಯಪ್ರಪಂಚದ ಗೊಡವೆಯಿಲ್ಲದೆ ವಿಹರಿಸುತ್ತಿದ್ದನು. ರಾತ್ರಿ ಕಳೆದು ಬೆಳಕು ಹರಿದಾಗ ಆ ದಯಿತೆಯರು, ಹಾಸಿಗೆಯನ್ನು ಬಿಟ್ಟು ಏಳುವ ತಮ್ಮ ರತಿಪ್ರಿಯನಾದ (ರತಿರಾಜನಾದ) ಇನಿಯನಿಂದ ಅಗಲಿಕೆಯ ಕೊನೆಯ ಗಳಿಗೆಯ ಚುಂಬನವನ್ನು ಬೇಡಿದರು. ಅವರು ತಮ್ಮ ನಳಿತೋಳುಗಳಿಂದ ತಮ್ಮೊಡನೆ ರಾತ್ರಿ ನಲಿದು, ಸುಖಿಸಿದ ಪ್ರಿಯತಮನ ಕೊರಳನ್ನು ಬಿಗಿದಾಗಿ ಅಪ್ಪಿಕೊಂಡು ತುದಿಗಾಲಲಿ ನಿಂದು ಬೇಡುತ್ತಿದ್ದರು. ಅವರು ತಮ್ಮ ಕಾದಲನ ತುದಿಗಾಲನ್ನು ತಮ್ಮ ತುದಿಗಾಲಿನಿಂದ ಮೆಟ್ಟುತ್ತಾ, ಗಳಸ್ಯಕಂಠಸ್ಯ ಎಂಬಂತೆ ಕಟ್ಟೆರಕದಿಂದ ಅನ್ಯೋನ್ಯವಾಗಿ ಬೆಸೆದು ಒಂದೇ ದೇಹವೆಂಬಂತೆ ತೋರುತ್ತ (ಒಂದೇ ಆತ್ಮವೆಂಬಂತೆ) ಅಗಲಿಕೆಯ ಚುಂಬನವನ್ನು ಯಾಚಿಸುತ್ತಿದ್ದರು.

ಕಂಠಸಕ್ತಂ ಕಂಠಾರ್ಪಿತಂ ಮೃದುಬಾಹುಬಂಧನಂ ಯಸ್ಮಿಂಸ್ತತ್—ಅಗ್ರಪಾದಯೋಃ =ಸ್ವಕೀಯಯೋರ್ನ್ಯಸ್ತೇ ಪಾದತಲೇ ಯಸ್ಮಿಂಸ್ತತ್ ॥

**30.** **ಪ್ರೇಕ್ಷ್ಯ ದರ್ಪಣತಲಸ್ಥಮಾತ್ಮನೋ ।**
**ರಾಜವೇಷಮತಿಶಕ್ರಶೋಭಿನಮ್ ॥**

**ಪಿಪ್ರಿಯೇನ ಸ ತಥಾ ಯಥಾ ಯುವಾ ।**
**ವ್ಯಕ್ತಲಕ್ಷ್ಮಪರಿಭೋಗಮಂಡನಮ್ ॥ ೩೦ ॥**

ಆ ವಿಲಾಸಿರಾಜನು (ಸಕಲರತಿಕಲಾವಲ್ಲಭನು) ಶುಭ್ರವಾದ ಬಟ್ಟೆಯನ್ನು ಧರಿಸಿ ಸಾಕ್ಷಾತ್ ಮಹೇಂದ್ರನನ್ನು ನಾಚಿಸುವ ಶೋಭೆಯಿಂದ ಬೆಡಗುವಡೆದು ತನ್ನ ಸೊಬಗನ್ನು ನಿಲುಗನ್ನಡಿಯಲ್ಲಿ ನೋಡುತ್ತ ನಿಂದಿದ್ದನು. ಆದರೆ ಅದರಿಂದಲೂ ಅವನಿಗೆ ಪೂರ್ಣ ತೃಪ್ತಿಯಾಗಲಿಲ್ಲ. ಅವನು ತನ್ನ ದೇಹದಲ್ಲಾದ ಪ್ರಣಯಕಾಲದ ಪರಿಭೋಗಲಕ್ಷ್ಮ ಮಂಡನದ ಗುರುತುಗಳನ್ನು ಕಂಡು ಮೋದಗೊಂಡು ಉಬ್ಬಿ ಪುಲಕಿತಗೊಂಡನು. (ಆ ರಸಿಕ ಚಕ್ರವರ್ತಿ) ತನ್ನ ಬದುಕು ಸಾರ್ಥಕವಾಯಿತೆಂದು (ಬದುಕು ಬಂಗಾರವಾಯಿತೆಂದು), ತನ್ನ ಇಷ್ಟಾರ್ಥ ಕೈಗೂಡಿತೆಂದು ತಿಳಿದು ಮನ್ಮಥಕೇಳಿಯನ್ನೇ ಧ್ಯಾನಿಸುತ್ತಿದ್ದನು. ಚಿಂತನೆ ಮಾಡುತ್ತಿದ್ದನು.

ಯಥಾ ತಥಾ ಶೋಭಮಾನಮತಿಶಕ್ರಶೋಭಿನಂ ದರ್ಪಣತಲಸ್ಥಂ ದರ್ಪಣಸಂಕ್ರಾನ್ತಮ್—ಆತ್ಮನೋ ರಾಜವೇಷಂ=ಪ್ರೇಕ್ಷ್ಯ, ತಥಾ—ವ್ಯಕ್ತಲಕ್ಷ್ಮ=ಪ್ರಕಟಚಿಹ್ನಂ —ಪರಿಭೋಗಮಂಡನಂ = ಪ್ರೇಕ್ಷ್ಯ ಪಿಪ್ರಿಯೇ ॥

**31. ಮಿತ್ರಕೃತ್ಯಮುಪದಿಶ್ಯ ಪಾರ್ಶ್ವಗಾಃ ।**
**ಪ್ರಸ್ಥಿತಂ ತಮನವಸ್ಥಿತಂ ಪ್ರಿಯಾಃ ॥**
**ವಿದ್ಮಹೇ ಶಠಪಲಾಯನಚ್ಛಲಾ ।**
**ನ್ಯಂಜಸೇತಿರುರುಧುಃ ಕಚಗ್ರಹೈಃ ॥ ೩೧ ॥**

ಆ ಮನುಜನಾಥನು ತಟ್ಟನೆ ಇನ್ನೋರ್ವಳನ್ನು ನೆನೆದು, ಅವಳ ಕೂಟವನ್ನು ನೆನೆದು, ಆ ತನ್ನ ಪ್ರಿಯೆಗೆ ಸಹಾಯಮಾಡುವ ಒಂದು ನೆವಹಿಡಿದು ಮೆಲ್ಲಮೆಲ್ಲನೆ ಅವರಿಗೆ ತಿಳಿಯದಂತೆ ನುಸುಳಿಹೋಗಲು ಯತ್ನಿಸಿದನು. ಅದನ್ನು ತಿಳಿದ ಆ ಕಾಮುಮದೋನ್ಮತ್ತೆಯರು ಹೇಳದೆ ಕೇಳದೆ ಪಲಾಯನಮಾಡುತ್ತಿರುವ ಪ್ರಿಯಕರನನ್ನು (ನಲ್ಲನನ್ನು) ಮುಟ್ಟಿ ಹಿಡಿದು ಎಳೆದು ತಂದು "ಎಲೈ ಮಂದನನೇ (ಮೋಹನಾಂಗನೇ), ನಿನ್ನ ಬೇಡದ ರಹಸ್ಯವನ್ನು ನಾವು ಬಲ್ಲೆವು. ಹೇ ಶಠನೆ, ಹೇ ದಾಕ್ಷಿಣ್ಯಶೂನ್ಯನೆ (ಮೋಸಗಾರನೆ), ನಮ್ಮನ್ನು ತೊರೆದು ನಮ್ಮ ಬಳಿಯಿಂದ ಅತ್ತಿತ್ತ ಹೋಗದಿರು. ನೀನು ಎಲ್ಲಿಗೆ ನಡೆದಪೆಯೆಂಬುದನ್ನು ನಾವು ಬಲ್ಲೆವು. ನೀನು ನಿನ್ನ ಠಕ್ಕುತೌಳಿಯನ್ನು ತೋರದೆ ಸಭ್ಯನಾಗಿ, ಸಾಚಾತನದಿಂದ ವರ್ತಿಸು" ಎಂದು ಆ ವಿಲಾಸಿನಿಯರು (ಪ್ರೌಢನಾರಿಯರು) ಗದರಿಸಿ ನುಡಿಯುತ್ತಾ ಆ ರಾಜನ ತಲೆಕೂದಲನ್ನು ಹಿಡಿದು (ಜೂಲುನಾಯಿಮರಿಯನ್ನು ಎಳೆದು ತಂದಂತೆ) ಎಳೆದು ಬಲಾತ್ಕಾರದಿಂದ ಮಂಚದ ಬಳಿಗೆ (ಶಯ್ಯೆಯ ಬಳಿಗೆ) ಆ ಕಾಮುಕನೃಪನನ್ನು ಎಳೆತಂದರು.

ಮಿತ್ರಕೃತ್ಯಂ = ಸುಹೃತ್‌ಕಾರ್ಯಂ—ಅಪದಿಶ್ಯ=ವ್ಯಾಜೀಕೃತ್ಯ—ಹೇ ಶಠ, ಹೇ ಗೂಢವಿಪ್ರಿಯಕಾರಿನ್—"ಗೂಢವಿಪ್ರಿಯಕೃಚ್ಛಠಃ" ಇತಿ ದಶರೂಪಕೇ—"ತತ್ತ್ವೇತ್ಯದ್ಧಾಂಜಸಾದ್ವಯಮ್" ಇತ್ಯಮರಃ—ವಿದ್ಮಹೇ=ಜಾನೀಮಃ—ಕಚಗ್ರಹೈಃ=ಕೇಶಾಕರ್ಷಣೈಃ—

ಅನವಸ್ಥಿತಂ = ಚಂಚಲಂ = ಚಂಚಲವಾದ, ಒಂದಲ್ಲ ಒಂದು ವಿಧದಿಂದ ನೆವನ ಹೇಳಿ ಜಾರುವುದು.

**32. ತಸ್ಯ ನಿರ್ದಯರತಿಶ್ರಮಾಲಸಾಃ ।**
**ಕಂಠಸೂತ್ರಮಪದಿಶ್ಯ ಯೋಷಿತಃ ॥**
**ಅಧ್ಯಶೇರತ ಬೃಹದ್ಭುಜಾಂತರಂ ।**
**ಪೀವರಸ್ತನವಿಲುಪ್ತಚಂದನಮ್ ॥ ೩೨ ॥**

ಆ ಅತಿಕಾಮಿಯಾದ ನರೇಂದ್ರನನ್ನು ಆ ಪೀನಪಯೋಧರೆಯರು "ಕಂಠಸೂತ್ರ"ವೆಂಬ ಅಪ್ಪುಗೆಯಿಂದ ಖುಷಿಪಡಿಸಿ ನಿದ್ದೆಗೈದರು. ಆ ಚತುರೆಯರಾದ ಚಾರುಯುವತಿಯರು ಆ ಅತಿಕಾಮಿಯಾದ (ದೀರ್ಘಕಾಮಿಯಾದ) ರಾಜನು ನಡೆಸಿದ ಮನ್ಮಥಲೀಲೆಯಿಂದ (ನಿರ್ದಯರತಿಯಿಂದ) ದಣಿದು, ಬಳಲಿಕೆಯ ಆಯಾಸದಿಂದ ಗಾಢವಾಗಿ ನಿದ್ದೆಹೋದರು. ಆ ಪೀನಪಯೋಧರೆಯರು (ಕುಂಭಕುಚೆಯರು) ತಮ್ಮ ಬಾಹುಯುಗಗಳನ್ನು ಆ ಜನಪನ ಕಂಠಪ್ರದೇಶದಲ್ಲಿ ಚಾಚಿ "ಕಂಠಸೂತ್ರ" ವಿಧಾನದ ಅಪ್ಪುಗೆಯಿಂದ ಮೋದವಾಂತು ಮೈಮರೆತು ಶಯನಿಸಿದರು. ಆ ರಾಜರಾಜನ ವಿಶಾಲವಾದ ಎದೆಯ ಮೇಲೆ, ಪರಿರಂಭಣ ವ್ಯಾಜದಿಂದ, ನಲವಿಂದ ಪೀವರಸ್ತನಮಂಡಲವನ್ನು ಹರಡಿ ಮಲಗಿದರು. ಅದರ ಪರಿಣಾಮವಾಗಿ ಆ ಜನಪನ ವಿಶಾಲ ಎದೆ ಹಾಗೂ ಬೃಹತ್ ಭುಜಾಂತರಗಳಿಗೆ ಲೇಪಿಸಿರುವ ಗಂಧ, ಚಂದನ, ಕಸ್ತೂರೀಲೇಪನ(ಕರ್ದಮ)ವೆಲ್ಲವೂ ಮಾಸಿಹೋದುದು.

ನಿರ್ದಯರತಿಶ್ರಮೇಣಾಲಸಾ = ನಿಶ್ಚೇಷ್ಟಾ — ಕಂಠಸೂತ್ರಮಾಲಿಂಗನವಿಶೇಷಮುಪದಿಶ್ಯ = ವ್ಯಾಜೀಕೃತ್ಯ—ವಿಲುಪ್ತಚಂದನಂ = ಪ್ರಮೃಷ್ಟಾಂಗರಾಗಂ ॥

**33. ಸಂಗಮಾಯ ನಿಶಿಗೂಢಚಾರಿಣಾಂ ।**
**ಚಾರದೂತಿಕಥಿತಂ ಪುರೋಗತಾಃ ॥**
**ವಂಚಯಿಷ್ಯಸಿ ಕುತಸ್ತಮೋವೃತಃ ।**
**ಕಾಮುಕೇತಿ ಚಕೃಷುಸ್ತಮಂಗನಾಃ ॥ ೩೩ ॥**

ಆ ಕಾಮಾಂಧನು (ಮದಾಂಧನು) ಬೇರೆ ಅಂಗನೆಯರ ಸಂಗಸುಖವನ್ನು ಬಯಸಿ ಯಾರಿಗೂ ತಿಳಿಯದಂತೆ, ಮಧ್ಯರಾತ್ರಿಯ ಸಮಯ, ದಟ್ಟವಾದ ಕತ್ತಲಲ್ಲಿ ಆ ವಾರನಾರಿಯರ ಮನೆಗಳಿಗೆ ಸಾರಿಹೋಗಲು ಹವಣಿಸುತ್ತಿದ್ದನು. ಈ ವಿಷಯವನ್ನು ಗೂಢಚಾರಿಣಿಯರ ಮೂಲಕ ತಿಳಿದ ಅರಸಿಯರು ಅವನನ್ನು ಹೋಗದಂತೆ ಅರ್ಧದಾರಿಯಲ್ಲಿ ತಡೆಗಟ್ಟಿದರು. ಅವರು "ಎಲೈ ಪ್ರಿಯಕರನೆ, ಈ ಕಾರ್ಗತ್ತಲಲ್ಲಿ, ಪ್ರಪಂಚವೆಲ್ಲವೂ ಮೈಮರೆತು ಮಲಗಿರಲು ಗಾಢರಾತ್ರಿಯಲ್ಲಿ ನೀನೊರ್ವನೇ ಎಲ್ಲಿಗೆ ಹೊರಟೆ ? ನಮ್ಮನ್ನು ವಂಚಿಸಿ ವಿಟಪುರುಷನಂತೆ ಇತರ ಅಂಗನೆಯರೆಡೆಗೆ ಸಾಗುತ್ತಿರುವೆಯಾ ? ಯಾರೂ ಅರಿಯದವೋಲು ವಿಲಾಸಕೆಂದು ಹೋಗುತ್ತಿರುವೆಯಾ ? ನಮ್ಮ ದೇವರ ಗುಟ್ಟು ನಾವೆಲ್ಲ ಬಲ್ಲವರೇ, ನಡೆ ನಡೆ, ನಮ್ಮ ಶಯ್ಯಾಗಾರಕ್ಕೆಂದು" ಅವನನ್ನು ಬಲಾತ್ಕಾರದಿಂದ ಎಳೆದುಕೊಂಡು ಬಂದರು.

**ಸಂಗಮಾಯೇತಿ**—ಸಂಗಮಾಯ = ಸುರತಾರ್ಥಂ—ಗೂಢಮಜ್ಞಾತಂ ಚರತೀಪ್ಸಿತಗೃಹಂ ಪ್ರತಿಗಚ್ಛತೀತಿ—ಚರಂತೀತಿ ಚಾರಾ ಗೂಢಚಾರಿಣ್ಯಯಃ—ಚಾರಾಶ್ಚ ತಾ ದೂತ್ಯಶ್ಚ ಚಾರದೂತಯಃ—ಹೇ ಕಾಮುಕಃ । ತಮಸಾವ್ಯತೋ ಗೂಢಃ ಸನ್ ಕಂತೋ ಮಂಚಯಿಷ್ಯಸೀತಿ ॥

**34. ಯೋಷಿತಾಮುಡುಪತೇರಿವಾರ್ಚಿಷಾಂ ।**
**ಸ್ಪರ್ಶನಿರ್ವೃತಿಮಸಾವವಾಪ್ನುವನ್ ॥**
**ಆರುರೋಹ ಕುಮುದಾಕರೋಪಮಾಂ ।**
**ರಾತ್ರಿಜಾಗರಪರೋ ದಿವಾಶಯಃ** ॥ ೩೪ ॥

ರಾತ್ರಿ ಇಡೀ ಜಾಗರಣೆಯಲ್ಲಿ ಆ ಕಾಮುಕನೃಪನು ಸ್ತ್ರೀಸ್ಪರ್ಶಸುಖದಲ್ಲಿ ತನ್ಮಯನಾಗಿ ಸುಖಿಸುತ್ತ ಮೋದವಡೆಯುತ್ತಿದ್ದನು. ರಾತ್ರಿ ಜಾಗರಣೆ, ಹಗಲು ಕುಂಭಕರ್ಣ ನಿದ್ದೆಯಲ್ಲಿದ್ದು ಗೊರಕೆ ಹೊಡೆಯುತ್ತ ಲೋಕಾಭಿರಾಮವಾಗಿ ನಿದ್ರಿಸುತ್ತಲಿದ್ದನು. ಹೇಗೆ ನೈದಿಲೆಯು ಹೂಗಳಿಂದ ಕಂಗೊಳಿಸುವ ಕೊಳವು ಚಂದ್ರನ ಬೆಳಕಿನಲ್ಲಿ ನಳನಳಿಸಿ ಮೋದವಡೆದು ಶೋಭಿಸುತ್ತ, ಹಗಲುಹೊತ್ತಿನಲ್ಲಿ, ಸೂರ್ಯನ ಬೆಳಕು ಹರಡಿರುವಾಗ ನೈದಿಲೆಹೂಗಳು ಮುಚ್ಚಿಕೊಂಡು, ನಿದ್ರಿಸಿರುವಂತೆ ಕೊಳವು ಕಂಗೊಳಿಸುವಂತೆ ಅದೇ ರೀತಿಯಲ್ಲಿ ಅಗ್ನಿವರ್ಣ ಮನುಜೇಂದ್ರನು ರಾತ್ರಿ ಎಚ್ಚರವಿದ್ದು ಸ್ತ್ರೀಯರ ಸ್ಪರ್ಶಸುಖದಿಂದ ಪುಲಕಿತನಾಗಿ, ಹಗಲು ನಿದ್ದೆಯಲ್ಲಿದ್ದು ನೈದಿಲೆಯ ಕೊಳದಂತೆ ನಿಶ್ಚೇಷ್ಟಿತನಾಗಿ, ಅಚೇತನನಾಗಿ, ಕ್ರಿಯಾಶೂನ್ಯನಾಗಿ ತೋರುತ್ತಿದ್ದನು. ರಾತ್ರಿ ಜಾರುಕು, ಹಗಲು ಮರುಕು. ಜೀವನವೆಲ್ಲಾ ಹರಕುಮುರುಕು.

ಉಡುಪತೇರಿಂದೋರರ್ಚಿಷಾಂ ಭಾಸಾಮಿವ—"ಜ್ವಾಲಾಭಾಸೋ ನಪುಂಸ್ಯರ್ಚಿಃ" ಇತ್ಯಮರಃ–ಯೋಷಿತಾಂ ಸ್ಪರ್ಶನಿರ್ವೃತಿ=ಸ್ಪರ್ಶಸುಖಮವಾಪ್ನುವನ್–ಕಿಂಚ ರಾತ್ರಿಷು ಜಾಗರಪರಃ — ದಿವಾದಿವಸೇಷು ಶೇತೇ ಸ್ವಪಿತೀತಿ ದಿವಾಶಯಃ — ಕುಮುದಾಕರಸ್ಯೋಪಮಾಂ ಸಾಮ್ಯಮ್—ಉಡುಪತೇರಿ ವಾರ್ಚಿಷಾಂ = (ಉಡುಪತಿ) ಚಂದ್ರನ ಶೀತಲಕಿರಣದಂತೆ.

**35. ವೇಣುನಾ ದಶನಪೀಡಿತಾಧರಾ ।**
**ವೀಣಯಾ ನಖಪದಾಂಕಿತೋ ರುಃ ॥**
**ಶಿಲ್ಪಕಾರ್ಯ ಉಭಯೇನ ವೇಜಿತಾಃ ।**
**ತಂ ವಿಜಿಹ್ಮನಯನಾ ವ್ಯಲೋಭಯನ್** ॥ ೩೫ ॥

ಆ ರಾಜನ ಪೀಡನೆಯಿಂದ ಆ ನರ್ತಕಿಯರು ನಾನಾ ರೀತಿಯ ಮದನಚೇಷ್ಟೆಗಳಿಗೆ ಒಳಗಾದರು. ಅವರ ಕೆಳದುಟಿಯು ಹಲ್ಲುಗಳ ಕಡಿತದಿಂದ (ದಶನಪೀಡನೆಯಿಂದ) ನೋಯುತ್ತಲಿತ್ತು. ಇದರಿಂದ ಅವರು ಕೊಳಲನ್ನು ಸರಿಯಾದ ರೀತಿಯಲ್ಲಿ ವಾದನ ಮಾಡಲಾರದೆ ಹೋದರು. ಆ ಗಾಯಕಿಯರು ವೀಣೆಯನ್ನು ನುಡಿಸೋಣವೆಂದು ಬಗೆದರೆ, ಅವನ ನಖಕ್ಷತಗಳಿಂದ ಊರುಗಳು ಗಾಯಗೊಂಡು ಪೀಡನೆಗೆ ಒಳಗಾಗಿದ್ದವು.

ಇದರಿಂದ ಆ ಶಿಲ್ಪಕಾರ್ಯಕರ್ತೆಯರು ತಪ್ಪುತಪ್ಪಾಗಿ ನುಡಿಸುತ್ತ ತಮ್ಮ ವಿದ್ಯೆಯಲ್ಲಿ ಸಾಗುತ್ತಿದ್ದರು. ಅವರ ಸಂಕಟದ ಮರ್ಮವನ್ನರಿತ ಆ ರಾಜನು ಮುಸುಮುಸು ಎಂದು ರಾಜಾರೋಷವಾಗಿ ನಗುತ್ತ ಸಂತಸಪಡುತ್ತಿದ್ದನು. ಅವನಿಗೆ ಬಹಳ ಖುಷಿಯೋ ಖುಷಿ. ಬೆಕ್ಕಿಗೆ ಆಟ ಇಲಿಗೆ ಪ್ರಾಣಸಂಕಟವೆಂಬಂತೆ.

ಪ್ರೀಡಿತಾಧರಾ = ದಷ್ಟೌಷ್ಠಾಃ (ದಷ್ಟೋಷ್ಠಾಃ)—ನಖಪದೈರ್ನಖಕ್ಷತೈರಂಕಿತೋರವಶ್ಚಿಹ್ನಿತೋತ್ಸಂಗಾಃ—ವ್ರಣಿತಾಧರೋರಃತ್ವಾದಕ್ಷಮಾ ಇತ್ಯರ್ಥಃ—ವೇಜಿತಾಃ = ಪೀಡಿತಾಃ — ವಿಜಿಹ್ಮನಯನಾಃ = ಕುಟಿಲದೃಷ್ಟಯಃ—ದಶನಧರಾ = ದಶನಪೀಡಿತ ಕೆಳತುಟಿ.

**36.** **ಅಂಗಸತ್ತ್ವವಚನಾಶ್ರಯಂ ಮಿಥಃ ।**
**ಸ್ತ್ರೀಷು ನೃತ್ಯಮುಪಧಾಯ ದರ್ಶಯನ್ ॥**
**ಸ ಪ್ರಯೋಗನಿಪುಣೈಃ ಪ್ರಯೋಕ್ತೃಭಿಃ ।**
**ಸಂಜಘರ್ಷ ಸಹಮಿತ್ರಸನ್ನಿಧೌ ॥ ೩೬ ॥**

ನಾಟ್ಯಾಭಿನಯಕಲೆಯು ಆಂಗಿಕ, ವಾಚಿಕ ಮತ್ತು ಸಾತ್ತ್ವಿಕ ಎಂಬ ಮೂರು ವಿಧ. ಆಂಗಿಕ—ಅಂಗಾಂಗಗಳ ಚಲನೆಯ ಮೂಲಕ, ವಾಚಿಕ—ಹಾಡುವಿಕೆಯ ಮೂಲಕ, ಸಾತ್ತ್ವಿಕ ಅಂದರೆ ಅಂತರಂಗದ ಭಾವನೆಗಳನ್ನು, ರಸಭಾವಗಳನ್ನು ಅಭಿನಯದ ಮೂಲಕ ಅಭಿವ್ಯಕ್ತಿಗೊಳಿಸುವುದು (ಪ್ರಕಟಿಸುವುದು). ಇದರ ಮರ್ಮವನ್ನು ನರ್ತಕಿಯರಿಂದ ಅರಿತು, ಆ ಕ್ರೀಡಾಲೋಲನಾದ ನೃಪನು ಆ ವಿಚಾರವಾಗಿ ನಾಟ್ಯಾಚಾರ್ಯರೊಡನೆ, ನಾಟ್ಯಪ್ರಯೋಗನಿಪುಣರೊಡನೆ ತರ್ಕಿಸುತ್ತಾ ತನ್ನ ಬುದ್ಧಿಪರಿಣತೆಯನ್ನು ಬಹಳ ದಿಮಾಕಿನಿಂದ ತೋರುತ್ತಲಿದ್ದನು. ಅವರನ್ನು ಸಂಘರ್ಷಕ್ಕೆ ಎಳೆದು ಗೆಲ್ಲಲು ಎಳಸುತ್ತಿದ್ದನು. ಅವರೊಡನೆ ಪೈಪೋಟಿ ನಡೆಸಲು ತಾನೂ ಪರಿಣತಿ ಹೊಂದಿದ ಕಲಾಗಾರನಂತೆ ನಾಟ್ಯವಾಡುತ್ತಾ ತನ್ನ ಬಂಡವಾಳವನ್ನು ಪ್ರದರ್ಶಿಸುತ್ತ ಕ್ರೀಡಿಸುತ್ತಿದ್ದನು.

ವಚನಂ ಗೇಯಂ ಚಾಶ್ರಯಃ ಕಾರಣಂ ಯಸ್ಯ ತದಂಗಸತ್ತ್ವವಚನಾಶ್ರಯಮ್—ಆಂಗಿಕ, ಸಾತ್ತ್ವಿಕ, ವಾಚಿಕರೂಪೇಣ ತ್ರಿವಿಧಮಿತ್ಯರ್ಥಃ—ಸಮಿತ್ರಸನ್ನಿಧೌ = ಸಹಚರ ಸಮಕ್ಷಂ—ಪ್ರಯೋಗೇ = ಅಭಿನಯೇ—ಸಂಘರ್ಷಃ = ಪರಾಭಿಭವೇಚ್ಛಾ—ವಾಚಿಕ = ಮಾತಿನ ಮೂಲಕ (ಮೌಖಿಕ) ಉಪಧಾಯ = ತಿಳಿಸು.

**37.** **ಅಂಸಲಂಬಿಕುಟಜಾರ್ಜುನಸ್ರಜಃ ।**
**ತಸ್ಯ ನೀಪರಜಸಾಂಗರಾಗಿಣಃ ॥**
**ಪ್ರಾವೃಷಿ ಪ್ರಮದ ಬರ್ಹಿಣೇಷ್ವಭೂತ್ ।**
**ಕೃತ್ರಿಮಾದ್ರಿಷು ವಿಹಾರವಿಭ್ರಮಃ ॥ ೩೭ ॥**

ಶೃಂಗಾರಶೀಲನಾದ ಆ ದೊರೆಯು ವರ್ಷಾರಂಭಕಾಲದಲ್ಲಿ (ಮಳೆಗಾಲದ ಆರಂಭದಲ್ಲಿ) ತನ್ನ ಸ್ತ್ರೀಯರ ಗಡಣದೊಂದಿಗೆ ವಿಹಾರಕ್ಕೆಂದು ಹೋಗುತ್ತಿದ್ದನು. ಅವನು ತನ್ನ ಕೊರಳಲ್ಲಿ ಕುಟಜ, ಅರ್ಜುನ ಪುಷ್ಪಗಳ ಉದ್ದುದ್ದ ಮಾಲೆಗಳನ್ನು ಧರಿಸಿ ಅಂದವಾಗಿ

ಕಾಣುತ್ತಿದ್ದನು. ನೀಪ, ಕದಂಬಪುಷ್ಪಗಳ ಕುಸುಮರಾಗದಿಂದ ಘಮಘಮಿಸುತ್ತ ಕೃತಕ ಕಾಂತಾರಗಳ, ಉದ್ಯಾನಗಳಲ್ಲಿ, ಪುಷ್ಪೋದ್ಯಾನಗಳಲ್ಲಿ ಕೃತಕ ಪರ್ವತಗಳಲ್ಲಿ ವಿಹರಿಸುತ್ತ ವಿಹಾರವಿಭ್ರಮಚಿತ್ತನಾಗಿ ರತಿಕೇಳಿಗಳಸುತ್ತ ಆನಂದದಿಂದ ಕಾಲಕಳೆಯುತ್ತಿದ್ದನು. ಆ ಪ್ರಮದವನಗಳಲ್ಲಿರುವ ಮಣಿಕೃತಕಶೈಲಗಳಲ್ಲಿ ಗರಿಕೆದರಿ ನಲಿಯುತ್ತಿರುವ ಗಂಡು ನವಿಲುಗಳು, ಹೆಣ್ಣುನವಿಲುಗಳ ಕೇಕಾರವವನ್ನು ಮನಸದಣಿಯ ಕೇಳುತ್ತ ವಿಹರಿಸಿದನು. ಆ ಪಕ್ಷಿನಿಕರಗಳು ವಿಹಾರಿಗಳಿಗೆ ಆನಂದದ ಸುಗ್ಗಿಯನ್ನು ತಂದೊಡ್ಡುತ್ತಿದ್ದುವು.

ಕುಟಜಾನಾಮರ್ಜುನಾನಾಂ = ಕಕುಭಾನಾಂ—ನೀಪಾನಾಂ = ಕದಂಬಕುಸುಮಾನಿ—ಪ್ರಮದಬರ್ಹಿಣೇಷು = ಉನ್ಮತ್ತಮಯೂರೇಷು — ವಿಹಾರವಿವ ವಿಭ್ರಮೋ = ವಿಲಾಸೋ—ಕೃತ್ರಿಮಾದ್ರಿಷು=ಕ್ರೀಡಾಶೈಲೇಷು ವಿಹಾರವಿಭ್ರಮ=ವಿಹರಿಸು, ಓಡಾಡು, ಸಂತಸದ ನಡಿಗೆ.

**38.** ವಿಗ್ರಹಾಚ್ಚ ಶಯನೇ ಪರಾಙ್ಮುಖೀಃ ।
ನಾನುನೇತುಮಬಲಾಃ ಸ ತತ್ವರೇ ॥
ಆಚಕಾಂಕ್ಷ ಘನಶಬ್ದವಿಕ್ಲವಾಃ ।
ತಾ ವಿವೃತ್ಯ ವಿಶತೀರ್ಭುಜಾಂತರಮ್ ॥ ೩೮ ॥

ಶಯನಾಗಾರದಲ್ಲಿ ಶೃಂಗಾರಮಂಚದಲ್ಲಿ ಪವಡಿಸಿ ಪ್ರಣಯಕಲಹದಲ್ಲಿ ನೊಂದು ಕೋಪಗೊಂಡು ಮೊಗದಿರುಹಿದ ಓಪಳನ್ನು ಆ ಶೃಂಗಾರತಿಲಕನು ಸಂತಯಿಸದೆ ಸುಮ್ಮನಿರುತ್ತಿದ್ದನು. ಅದಕ್ಕೆ ಕಾರಣವನ್ನು ಅವನು ಅರಿತಿದ್ದನು. ಆ ವರ್ಷಾರಂಭಕಾಲದಲ್ಲಿ ಕೇಳಿಬರುವ ಗುಡುಗುಡು ಎಂಬ ಗುಡುಗಿನ ಶಬ್ದ, ಅವರೊಂದಿಗೆ ಕಣ್ಣುಮುಚ್ಚುವಂತೆ ಮಾಡುವ ಕೋಲ್ಮಿಂಚಿನ ಬೆಳಕು ಇವುಗಳಿಂದ ಭಯಗೊಂಡು ಆ ಕಾದಲೆಯರು ರಾಜನ ವಿಶಾಲವಾದ ಎದೆಯಲ್ಲಿ ಆಸರೆಯನ್ನು ಪಡೆಯಲು ಬರುವರೆಂಬುದನ್ನು ಆ ಮದನ ಕುಲತಿಲಕನು ಅರಿತು ಸುಮ್ಮನಿದ್ದನು (ಕಿಮ್ಮನಿದ್ದನು).

ವಿಗ್ರಹಾತ್ ಪ್ರಣಯಕಲಹಾಚ್ಛಯನೇ ಪರಾಙ್ಮುಖೀರಬಲಾ ಅನುನೇತುಂ ನ ತತ್ವರೇ ನತ್ವರಿತವಾನ್—ಘನಶಬ್ದೇನ ಘನಘರ್ಜಿತೇನ ವಿಕ್ಲವಾಶ್ಚಕಿತಾಃ— ಸ್ವಯಮೇವಾಭಿಮುಖೀಭೂಯ ಭುಜಾಂತರಂ ವಿಶತೀಃ ಪ್ರವಿಶಂತೀಃ—ವಿಗ್ರಹಾತ್ = ಪ್ರಣಯಕಲಹ.

**39.** ಕಾರ್ತಿಕೀಷು ಸವಿತಾನಹರ್ಮ್ಯಭಾಕ್ ।
ಯಾಮಿನೀಷು ಲಲಿತಾಂಗನಾಸಖಃ ॥
ಅನ್ವಭುಂಕ್ತ ಸುರತಶ್ರಮಾಪಹಾಂ ।
ಮೇಘಮುಕ್ತವಿಶದಾಂ ಸ ಚಂದ್ರಿಕಾಮ್ ॥ ೩೯ ॥

ಕಾರ್ತಿಕಮಾಸದ ಶುಭರಾತ್ರಿಗಳಲ್ಲಿ ಶೋಭೆವಡೆದ ಲಲಿತಾಂಗನೆಯರ ಸಮೂಹದಲ್ಲಿ ರಾರಾಜಿಸುವ ಹರ್ಮ್ಯಾಗ್ರಗಳಲ್ಲಿ ನಿರ್ಮಿತವಾದ ಮಾಮಿಯಾನಾಗಳಲ್ಲಿ (ಸವಿತಾನ ಸೌಧಗಳಲ್ಲಿ) ಆ ಮದನಾಸಕ್ತನು ವಿಹರಿಸುತ್ತಿದ್ದನು. ಹಿಮನಿವಾರಣಾರ್ಥ ಅಂತಹ ಮಾಮಿಯಾನಾಗಳನ್ನು ವಿಶೇಷ ರೀತಿಯಲ್ಲಿ ರಚಿಸಿದ್ದರು. ಕಾಂತೆಯರ ಸಂಗಮದ ಸುರತದ

ಆಯಾಸವನ್ನು ಶರತ್ಕಾಲದ ಮೋಡರಹಿತ ಬಾನಲ್ಲಿ ಬೆಳಗುತ್ತಿರುವ ಚಂದ್ರಮನ ಶುಭ್ರ ಬೆಳದಿಂಗಳಲ್ಲಿ, ಅಂದಿನ ನಿಶಾಕಾಲದಲ್ಲಿ ಅರಸಿಯರ ಜೊತೆಯಲ್ಲಿ ಪರಿಹರಿಸಿಕೊಳ್ಳುತ್ತಿರುವನು.

ಕಾರ್ತಿಕಸ್ಯೇಮಾಃ = ಕಾರ್ತಿಕ್ಯಃ—ಯಾಮಿನೀಷು = ನಿಶಾಸು—ಹಿಮವಾರಣಾರ್ಥ = ಸವಿತಾನಮುಕ್ತ್ವಮ್—ಲಲಿತಾಂಗನಾಸಖಃ—ಸುರತಶ್ರಮಾಪಹಾಂ ಮೇಘಮುಕ್ತ್ಯಾ ಚ ಸಾ ವಿಶದಾ ಚ ತಾಮ್—ಚಂದ್ರಿಕಾಮನ್ವಭುಂಕ್ತ—ಕಾರ್ತಿಕೀಷು ಯಾಮಿನೀಷು = ಕಾರ್ತಿಕಮಾಸದ ಶುಭರಾತ್ರಿಗಳಲ್ಲಿ, ಶುಭ್ರವಾದ ರಾತ್ರಿಗಳಲ್ಲಿ.

40. ಸೈಕತಂ ಚ ಸರಯೂಂ ವಿವೃಣ್ವತೀಂ ।
ಶ್ರೋಣಿಬಿಂಬಮಿವ ಹಂಸಮೇಖಲಮ್ ॥
ಸ್ವಪ್ರಿಯಾವಿಲಸಿತಾನುಕಾರಿಣೀಂ ।
ಸೌಧಜಾಲವಿವರೈಃ ವ್ಯಲೋಕಯತ್ ॥ ೪೦ ॥

ರಾತ್ರಿ ಕಾಲದಲ್ಲಿ ಕಾಂತಾಸಂಗಪರಿವೃತನಾದ ಆ ನೃಪನು ಸೌಧಗಳಲ್ಲಿ ಕುಳಿತು ಗವಾಕ್ಷಗಳ ಮೂಲಕ ಸುಂದರ ಯುವತಿಯರ ಊರುಗಳಂತೆ ನಳನಳಿಸುವ ಗಂಗಾ ಸರಯೂ ನದಿಯ ಪುಳಿನಸ್ಥಳಗಳನ್ನು ನೋಡಿ ಆನಂದಿಸುತ್ತಿದ್ದನು. ಆ ನದಿಯು ಕಿನಾರೆಯು ಆತನ ದೃಷ್ಟಿಗೆ ಕಾಂತಾವಿಲಾಸವನ್ನು ಅನುಕರಿಸುವಂತೆ ತೋರುತ್ತಿತ್ತು. ದೇವಗಂಗಾನದಿಯುಪುಳಿನಸ್ಥಳಗಳಲ್ಲಿ ಓಡಾಡುವ ರಾಜಹಂಸಗಳು (ಅರಸಂಚೆಗಳು) ಕಟಿಯೆಡೆಯ ಮೇಖಲೆಯಂತೆ ಕಣ್ಗೆ ಹಬ್ಬವನ್ನು ಮಾಡುತ್ತಿತ್ತು. ಅವುಗಳು ಸ್ತ್ರೀಯರ ಪೂರವಾರದಂದವನ್ನು ತೋರುತ್ತಿದ್ದುವು. ಸರಯುವಿನ ಸುಂದರ ಚಲನವು ನಿತಂಬಿನಿಯರ ಚಲನವಲನವನ್ನು ಅನುಕರಿಸುವಂತೆ ಕಂಡಿತು. ಮಂದಾನಿಲನ ಸ್ಪರ್ಶದಿಂದ ಕ್ಷೀರ ಸಾಗರವನ್ನು ಪೋಲುವ ಆ ಸುಂದರ ಜಲರಾಶಿಯು ತೆರೆತೆರೆಗಳಾಗಿ ವಿಭಜಿಸಿ ತಿಂಗಳ ಬೆಳಕಿನಲ್ಲಿ (ಚಂದ್ರನ ಶೀತಲ ಬೆಳಕಿನಲ್ಲಿ) ಸುಂದರ ರಮಣಿಯರ ಚಲನವಲನದ ರಮಣೀಯ ಪೆಂಪನ್ನು ತೋರುವಂತೆ, ಅಬಲಾಜನದ ಸೌಂದರ್ಯವಾರಾಶಿಯನು ಆ ನಿರ್ಮಲಜಲರಾಶಿಯಲ್ಲಿ ಕಂಡು ಆ ಜನಪನು ಸೇವಿಸಿದನು.

ಕಿಂಚ, ಹಂಸಾ ಏವ ಮೇಖಲಾ ಯಸ್ಯ ತತ್ ಸೈಕತಂ=ಪುಲಿನಂ ಶ್ರೋಣಿಬಿಂಬಮಿವ ವಿವೃಣ್ವತೀಮ್—ಅತ ಏವ ಸ್ವಪ್ರಿಯಾ ವಿಲಸಿತಾನ್ಯನುಕರೋತೀತಿ ತದ್ವಿಧಾಂ ಸರಯೂಮ್—ಶ್ರೋಣಿಬಿಂಬಮೇವ ಸೈಕತಂ ಪ್ರಕಟಯಂತಿ ಹಂಸಾ ಏವ ಮೇಖಲಾ ಯಸ್ಯಾಸ್ತಾಂ ಸ್ವಸ್ಯ ಪ್ರಿಯಾಣಾಂ ವಿಲಸಿತಮನುಕರೋತೀತಿ ತಾದೃಶೀ ಸರಯೂಂ ಸ ನೃಪೋ ಗವಾಕ್ಷರಂಧ್ರೈರದ್ರಾಕ್ಷೀತ್ "ಸ್ತ್ರೀಯೋ ಶ್ರೋಣಿಬಿಂಬಾದಿಕಂ ಭರ್ತ್ರೇ ಪ್ರಕಟಯನ್ತೀತಿ" ದಿನಕರಃ ॥

41. ಮರ್ಮರೈರಗುರುಧೂಪಗಂಧಿಭಿಃ ।
ವ್ಯಕ್ತಹೇಮರಶನೈಸ್ತಮೇಕತಃ ॥

**ಜಹ್ರುರಾಗ್ರಥನಮೋಕ್ಷಲೋಲುಪಂ ।**
**ಹೈಮನೈರ್ನಿವಸನೈಃ ಸುಮಧ್ಯಮಾಃ ॥ ೪೧ ॥**

ಇದೀಗ ಹೇಮಂತಕಾಲ ಸನ್ನಿಹಿತವಾಗಿದೆ. ಆ ಕುಸುಮಮಧ್ಯಮೆಯರಾದ, ಸುಂದರವಾದ ನಡುವಿನಿಂದ ವಿಲಸಿತವಾಗಿ ಶೋಭಿಸುತ್ತಿರುವ ತರುಣಿಯರ, ಪ್ರಮದೆಯರ ವೃಂದ ಅವನ ಸುತ್ತ ಸಮೆದಿದ್ದರು, ಸೇರಿದ್ದರು. ಅವರು ರೇಷ್ಮೆವಸ್ತ್ರದಿಂದ ತಮ್ಮ ದೇಹದ ಮಧ್ಯಭಾಗವನ್ನು ಅಲಂಕರಿಸಿಕೊಂಡು ರಾರಾಜಿಸುತ್ತಿದ್ದರು. ಆ ವಿಲಾಸಿ ನೃಪವರನು ಏಕವಸ್ತ್ರಧಾರಿಗಳಾದ ಆ ಯುವತಿಯರ ನೀವಿಯನ್ನು (ನೀವಿ = ಸೀರೆ) ಕಳಚುವುದರಲ್ಲಿ ವಿಶೇಷಾಸಕ್ತಿಯನ್ನು ತೋರುವ ಹುಡುಗಾಟದ ಆಟವನ್ನು ಆಡುತ್ತ ಅವರಿಗೆ ಕಿರುಕುಳ ಕೊಡುತ್ತ, ಕಮಂಗಿಯಂತೆ ಮಂಗಚೇಷ್ಟೆ ತೋರುತ್ತ, ವಿಲಾಸೀ ಜೀವನದಲ್ಲಿ ಮುಳುಗಿದ್ದನು. ಆ ಬಟ್ಟೆಯ ಮರ್ಮರ ರವ, ಅಗರುಚಂದನದ ಹೊಗೆಯ ಸುವಾಸನೆಯು ಕಂಪು ಅಂದಿನ ಆ ಮಾಗಿಯ ಕಾಲದಲ್ಲಿ ಅವನ ರಸಿಕತೆಗೆ, ಸ್ತ್ರೀಲೋಲುಪತೆಗೆ ಕಳೆಕಟ್ಟುವಂತೆ ಮಾಡುತ್ತಿತ್ತು. ಅವರ ಉಡುಪುಗಳ ಗಂಟುಗಳನ್ನು ಸಡಿಲಗೊಳಿಸಿದಾಗ ಕನಕಮೇಖಲೆಯು ನಿತಂಬಬಿಂಬದ ಮೇಲೆ ಶೋಭಿಸುತ್ತಿರುವುದನ್ನು (ಹೇಮಮಯ ಮೇಖಲೆಯ ಹೊಳೆಹೊಳೆವ ಸಿರಿಯನ್ನು) ಕಂಡು ಹಿರಿಹಿರಿ ಹಿಗ್ಗುತ್ತ ತೃಪ್ತಿಪಡೆದನು. ಹಾಗೆಯೇ ನೀವೀವಿಮೋಚನಾಸಕ್ತನಾಗಿ ತನ್ನ ಹುಡುಗಾಟಿಕೆಯ ವಿಲಾಟವನ್ನು ಮುಂದುವರಿಸಿದನು. ಇಂದ್ರಿಯ ದಾಸನಾದ ಆ ನೃಪೋತ್ತಮನು ತನ್ನ ತುಡುಗುಣ ಆಟಗಳಲ್ಲಿ ಲೀನನಾಗಿ ಪ್ರಪಂಚವನ್ನೇ ಮರೆಯುತ್ತಿದ್ದನು.

“ಸಂಸ್ಕಾರವಿಶೇಷಾಚ್ಛಬ್ದಾಯಮಾನೈಃ—” ಅಥ ಮರ್ಮರಃ” ಸ್ವನಿತೇ ವಸ್ತ್ರಪರ್ಣಾನಾಮ್” ಇತ್ಯಮರಃ — ಅಗುರುಧೂಪಗಂಧಿಭಿರ್ವ್ಯಕ್ತಹೇಮರಶನೈರ್ಲೋಲಾಲ್ಲಕ್ಷ್ಯಮಾಣಕನಕಮೇಖಲಾಗುಣೈರ್ಹೈಮನೈರ್ಹೇಮನ್ತೇ ಭವೈಃ ॥ “ಸರ್ವ ತ್ರಾಣ್ ಚ ಲೋಪಶ್ಚ” (ಪಾಣಿನಿ) ಇತಿ । “ಹೇಮನ್ತ ಶಬ್ದಾದಣ್‌ಪ್ರತ್ಯಯಸ್ತಲೋಪಶ್ಚ— ನಿವಸನೈರಂಶುಕೈಃ ಸುಮಧ್ಯಮಾಃ ಸ್ತ್ರೀಯಃ ಏಕತೋ ನಿತಂಬೈಕದೇಶ ಆಗ್ರಥನ ಮೋಕ್ಷಯೋರ್ನೀವೀಬಂಧವಿಸ್ರಂಸನಯೋರ್ಲೋಲುಪಮಾಸಕ್ತಂ ತಂ ಜಹ್ರುರಾಚಕೃಷುಃ ॥

**42. ಅರ್ಪಿತಸ್ತಿಮಿತದೀಪದೃಷ್ಟಯೋ ।**
**ಗರ್ಭವೇಶ್ಮಸು ನಿವಾತಕುಕ್ಷಿಷು ॥**
**ತಸ್ಯ ಸರ್ವಸುರತಾಂತರಕ್ಷಮಾಃ ।**
**ಸಾಕ್ಷಿತಾಂ ಶಿಶಿರರಾತ್ರಯೋ ಯಯುಃ ॥ ೪೨ ॥**

ಅಂದಿನ ಆ ಶಿಶಿರ ಋತುವಿನ (ಚಳಿಗಾಲದ) ರಾತ್ರಿಗಳಲ್ಲಿ ಸುರತಸುಖದಿಂದ ಯಥೇಚ್ಛವಾದ ಆನಂದವನ್ನು ಆ ಭೂವರನು ಹೊಂದಿದನು. ಆ ತಂಪಾದ, ಶೀತಲವಾದ ಚಳಿಗಾಲದ ರಾತ್ರಿಗಳಲ್ಲಿ ಅಂತಃಪುರದ ಒಳಕೊಠಡಿಗಳಲ್ಲಿ (ಗರ್ಭವೇಶ್ಮಸು) ಅನಿಲನ (ಗಾಳಿಯ) ಆಂದೋಳನವಿರದ ಎಡೆಗಳಲ್ಲಿ ಆ ನರಪತಿಯು ತನ್ನ ನಾನಾ ರೀತಿಯ ಹಿಡಿತವಿಲ್ಲದ, ಲಂಗುಲಗಾಮಿಲ್ಲದ, ಸ್ವಚ್ಛಂದವಾದ, ನಾಚಿಕೆಯಿಲ್ಲದ ಮದನಲೀಲೆಗಳನ್ನು

ಮುಂದುವರಿಸಿದನು. ಆ ಚಳಿಗಾಲದ ರಾತ್ರಿಗಳೇ ಅವನ ಸುರತಲೀಲೆಯ ಅಚಲ ಸಾಕ್ಷಿಗಳೋ ಎಂಬಂತೆ ಅಂತಃಪುರದಲ್ಲಿ (ಅಂತಃಪುರದ ಅಂತರಂಗಲೀಲೆಗಳು) ರಾತ್ರಿ ಹೊತ್ತು ದೀಪಗಳು ಉರಿಯುತ್ತಲೇ ಇದ್ದುವು. ಅವನ ವೈವಿಧ್ಯಮಯವಾದ ಕಾಮ ಲೀಲೆ(ಅನಂಗಲೀಲೆ)ಗಳನ್ನು ಈಕ್ಷಿಸುತ್ತಲಿರುವ, ಯುವಕನ ದೀವಟಿಗಳು ಇವು ಎಂಬಂತೆ ಮೂಕಸಾಕ್ಷಿಗಳಾಗಿ ದೀಪಗಳು ಉರಿಯುತ್ತಲಿದ್ದುವು. ಅವನ ಎಲ್ಲ ಕೃತಿಗಳನ್ನು (ತುದಿ ಮೊದಲಿಲ್ಲದ) ಅವಲೋಕಿಸುತ್ತಲಿದ್ದುವು.

ನಿವಾತಾ = ವಾತರಹಿತಾಃ—ಗರ್ಭವೇಶ್ಮಸು ಗೃಹಾನ್ತಗೃಹೇಷ್ವರ್ಪಿತಾ = ದತ್ತಾಃ ಸ್ತಿಮಿತಾ ನಿವಾತತ್ವಾನ್ನಿಶ್ಚಲಾ ದೀಪಾ ಏವ ದೃಷ್ಟಯೋಯೋಭಿಸ್ತಾಃ—ಶಿಶಿರರಾತ್ರಂ ಯಸ್ತಸ್ಯಾಗ್ನಿವರ್ಣಸ್ಯ—ಸಾಕ್ಷಿತಾಂ ಯಯುಃ = ಮೂಕಸಾಕ್ಷಿಗಳು.

**43. ದಕ್ಷಿಣೇನ ಪವನೇನ ಸಂಭೃತಂ ।**
**ಪ್ರೇಕ್ಷ್ಯ ಚೂತಕುಸುಮಂ ಸಪಲ್ಲವಮ್ ॥**
**ಅನ್ಯೋನ್ಯಪುರವಧೂತವಿಗ್ರಹಾಃ ।**
**ತಂ ದುರುತ್ಸಹವಿಯೋಗಮಂಗನಾಃ ॥ ೪೩ ॥**

ಇದೀಗ ವಸಂತಋತುವಿನ ಆಗಮನದ ಪುಣ್ಯಕಾಲ ಸನ್ನಿಹಿತವಾಗಿದೆ. ಜೀವಜಗತ್ತು ಬದಲಾಗುವ ಕಾಲ. ನವ ಅರುಣೋದಯ ಬಾನೆಲ್ಲಾ ತುಂಬಿ ಕೋಡಿಹರಿಯುತ್ತಿದೆ. ಆಗ ಬಂತ್ಕೆ ಬಂತ್ಕೆ ತೆಂಕಣಗಾಳಿ ಎಂಬಂತೆ ಜೀವರಾಶಿಗಳಲ್ಲಿ ನವಚೇತನ ತುಂಬುತ್ತ ಭರದಿಂದ ಬೀಸತೊಡಗಿತು ಮಲಯಮಾರುತ. ಶ್ರೀಗಂಧದ ಮರಗಳು ನಿಬಿಡವಾಗಿ ಬೆಳೆದಿರುವ ಮಲಯಪರ್ವತದತ್ತಣಿಂದ ಮಲಯಮಾರುತವು ಬೀಸುತ್ತಬಂತು. ಜಗಕೆ ಹರುಷವ ತಂತು (ತಂದಿತು). ಮಾವಿನ ಹೂಗಳನ್ನು, ಮಾವಿನ ಎಳೆಚಿಗುರುಗಳನ್ನು ತಟ್ಟುತ್ತ, ಮೆದುವಾಗಿ ಸ್ಪರ್ಶಿಸುತ್ತ, ನಯವಾಗಿ ಸವರುತ್ತ, ನವುರಾಗಿ ಉಸಿರಾಡುತ್ತ, ನವಚೇತನ ತುಂಬುತ್ತ ಬಂದಿತದೋ ತೆಂಕಣಗಾಳಿ. ಆಗ ಮಧುರಪ್ರಣಯದ ಕಲಹದಲ್ಲಿ ಕೋಪಗೊಂಡ ಆ ರಾಜನ ರಾಣಿಯರು ಇದೀಗ ತಮ್ಮ ದೀರುದುಂಬಿತನವನ್ನು ಬಿಟ್ಟು ತಮ್ಮ ಗಂಡನೊಡನೆ (ಪತಿರಾಯ) ರಾಜಿಮಾಡಿಕೊಳ್ಳಲು ಕಾತರರಾಗಿ ಬಂದಿರಬಂತೆ ಭರದಿಂದ ಬಳಿಸಾರ್ದರು. ಬಹುಶಃ ಅವರಲ್ಲಿ ವಿರಹದ ಉರಿ ಕಾಣಿಸಿಕೊಂಡಿರಬೇಕು. ಋತುರಾಜನಾದ ವಸಂತನ ಮಹಿಮೆಯಲ್ಲದೆ ಮತ್ತೇನು? ಆ ರತಿಕಲಾಕೋವಿದೆಯರು, ಸ್ಮರನ ಅರಗಿಣಿಯರು ಅಗ್ನಿವರ್ಣನೆಂಬ ಮನ್ಮಥರಾಜನ ಬಳಿಗೆ ನಲಿಯುತ್ತ ಸ್ಮರನ ದೀಪಾಗ್ನಿಗಳಂತೆ ಬಂದು ಮುಂಡಿಸಿದರು. ಅವನಿಂದ, ಅವನ ಕೀಟಲೆಗಳಿಂದ ದೂರವಿರ ಬಯಸಿದವರು ದೂರವಿರಲು ಸಾಧ್ಯವಾಗದೆ ಅವನ ಸನ್ನಿಧಾನವನ್ನು ಬಯಸಿಬಂದುದು ಆಶ್ಚರ್ಯವಲ್ಲವೆ? ಆ ಶೃಂಗಾರಪ್ರಿಯನು ತನ್ನ ಪ್ರಣಯಜೀವನದ ಡೊಂಬರಾಟವನ್ನು, ವಿಲಾಸೀಜೀವನವನ್ನು ಅಡೆತಡೆಗಳಿಲ್ಲದೆ ಮುಂದುವರಿಸಿದನು.

ಅಂಗನಾ ದಕ್ಷಿಣೇನ ಪವನೇನ ಮಲಯಾನಿಲೇನ ಸಂಭೃತಂ ಜನಿತಂ=ಸಪಲ್ಲವಂ ಚೂತ ಕುಸುಮಂ ಪ್ರೇಕ್ಷ್ಯ—ಅವಧೂತವಿಗ್ರಹಾಸ್ತ್ಯಕ್ತವಿರೋಧಾಸತ್ತೋದೇರಂತ್ಸಹವಿಯೋಗಂ

=ಮಃ ಸಪೋ ವಿರಹಂ—ತದ್ವಿರಹಮುಸಹಮಾನಾಃ—ಸವಲ್ಲವಚೂತಕಂಸಂಪಂ=ಮಾವಿನ ಎಳೆ ಚಿಗುರು (ಮಾವಿನೆಳೆನೆಸೆಗೊನೆ) ಹೂ ಮೊಗ್ಗು ಸಹಿತ.

**44. ತಾಃ ಸ್ವಮಂಕಮಧಿರೋಪ್ಯ ದೋಲಯಾ ।**
**ಪ್ರೇಂಖಯನ್ ಪರಿಜನಾಪವಿದ್ಧಯಾ ॥**
**ಮುಕ್ತರಜ್ಜು ನಿಬಿಡಂ ಭಯಚ್ಛಲಾತ್ ।**
**ಕಂಠಬಂಧನಮವಾಪ ಬಾಹುಭಿಃ ॥ ೪೪ ॥**

ಆ ಮದನತಿಲಕನು (ಶೃಂಗಾರಶೀಲನು) ನವಯುವತಿಯರನ್ನು ಕರೆದುಕೊಂಡು ಉಯ್ಯಾಲೆಯಿದ್ದೆಡೆಗೆ ನಡೆದನು. ಅಲ್ಲಿ ತೂಗುಯ್ಯಾಲೆಯಲ್ಲಿ ಕುಳಿತು ತನ್ನ ತೊಡೆಯ ಮೇಲೆ ಅರಸಿಯರನ್ನು ಕುಳ್ಳಿರಿಸಿಕೊಂಡನು. ಪರಿಜನರು, ಪರಿಚಾರಿಕೆಯರು, ಸಖೀಜನರು ಉಯ್ಯಾಲೆಯನ್ನು ತೂಗುತ್ತಲಿದ್ದರು. ಹೀಗೆ ಅವನ ಉಯ್ಯಾಲೆಯ ಆಟ ಸಾಗಿತು. ಉಯ್ಯಾಲೆಯನ್ನು ಬಿರುಸಾಗಿ ಬೀಸಿದುದರ ಪರಿಣಾಮವಾಗಿ ವೇಗ ಹೆಚ್ಚಿತು. ಆಗ ಅವರ ಭಾರದಿಂದ ಉಯ್ಯಾಲೆ ಹಗ್ಗ ಹರಿದಂತಾಯಿತು. "ಬಿದ್ದರೆ ಏನು ಗತಿ ?" (ಭೂಮಿಯೇ ಗತಿ.) ಇದರಿಂದ ಭಯಭೀತರಾದ ಆ ಅಬಲೆಯರು ತಮ್ಮ ರಕ್ಷಕನಂತಿದ್ದ ಇಳಾಧಿನಾಥನನ್ನು ಹೆದರಿ ತಬ್ಬಿಬ್ಬಾಗಿ ತಮ್ಮ ನಿಡಿದಾದ ತೋಳ್ಗಳನ್ನು ಚಾಚಿ ಆ ರಾಜನ ಕೊರಳನ್ನು ಬಿಗಿಯಾಗಿ ಅಪ್ಪಿಕೊಂಡರು (ತೋಳ್ಗಳನೆಸೆದು ಕೊರಳನಪ್ಪುವರು). ಇದರಿಂದ ಆ ನರೇಶನಿಗೆ ಅಪ್ಪುಗೆಯ ಸುಖ ಅನಾಯಾಸವಾಗಿ ತಾನಾಗಿ ಸಿಗುವಂತಾಯಿತು.

ಸುಪ್ರೇಷಿತಯಾ ದೋಲಯಾ ಮುಕ್ತರಜ್ಜು=ತ್ಯಕ್ತದೋಲಾಸೂತ್ರಂ ಯಥಾ ತಥಾ ಪ್ರೇಂಕ್ಷಯಂಶ್ಚಾಲಯನ್ ಭಯಚ್ಛಲಾತ್ಪತನಭಯಾಭಿಷಾದ್ಬಾಹುಭಿರಂಗನಾಭುಜೈರ್ನಿಬಿಡಂ ಕಂಠಬಂಧನಮವಾಪ ಪ್ರಾಪ ॥

**45. ತಂ ಪಯೋಧರನಿಷಿಕ್ತಚಂದನೈಃ ।**
**ಮೌಕ್ತಿಕಗ್ರಥಿತ ಚಾರುಭೂಷಣೈಃ ॥**
**ಗ್ರೀಷ್ಮವೇಷವಿಧಿಭಿಃ ಸಿಷೇವಿರೇ ।**
**ಶ್ರೋಣಿಲಂಬಿಮಣಿಮೇಖಲೈಃ ಪ್ರಿಯಾಃ ॥ ೪೫ ॥**

ಗ್ರೀಷ್ಮಕಾಲ ಪದಾರ್ಪಣಮಾಡಿದೆ (ಉದಯಿಸಿದೆ). ಅಂದಿನ ಆ ಬೇಸಗೆಯ ದಿನಗಳಲ್ಲಿ ಕುಂಭಕುಚೆಯರಾದ ಆ ಪ್ರಣಯಸಖಿಯ ಮನದ ನಲ್ಲೆಯರು ಚಂದನವ ತೊಡೆದಿರುವ ಪಯೋಧರಗಳಿಂದ ಸೊಗಸುವಡೆದು ಸುತ್ತಲೂ ಪರಿಮಳದ ಕಂಪನ್ನು ಹರವುತ್ತ ಅವನೆಡೆಗೆ ಬಂದರು. ಆ ಅಬಲೆಯರು ತಮ್ಮ ಸ್ತನಮಂಡಲಗಳಲ್ಲಿ ಮುತ್ತಿನಾಭರಣವನ್ನು ಧರಿಸಿದ್ದರು. ಕಾಮನ ಹಬ್ಬದ ಕಾಮದೇವತೆಗಳಂತೆ ರಾರಾಜಿಸುವ ಅಗ್ನಿವರ್ಣನ ಪ್ರಿಯೆಯರು ತಮ್ಮ ನಿತಂಬಪ್ರದೇಶದಲ್ಲಿ ಚಾರುಭೂಷಣವಾದ ಮಣಿಮೇಖಲೆ ಕಾಂಚೀಧಾಮದಿಂದ ಭೂಷಿತರಾಗಿ ಕಾಲ್ಗೆಜ್ಜೆಗಳ ಮಂಜುಳನಾದ ಬೀರುತ್ತ ತಮ್ಮ ನಲ್ಲನೆದುರು ಸುಳಿದಾಡಿದರು. ಆ ಬಿನ್ನಾಣಗಿತ್ತಿಯರು "ಕಾಲಕ್ಕೆ ತಕ್ಕ ಕೋಲ" ಎಂಬಂತೆ ವಿಂತವಾದ ಬಟ್ಟೆಯುಟ್ಟು ದಟ್ಟಪುಷ್ಪವಾದ ತಮ್ಮ ಅಂಗಾಂಗಗಳ ಪ್ರದರ್ಶನಗೈದು ತಮ್ಮ

ಇನಿಯನಿಗೆ ರಸಕವಳವನ್ನು ಉಣಬಡಿಸಿದರು. ಅವರ ಗ್ರೀಷ್ಮಕಾಲದ ವೇಷಭೂಷಣಗಳನ್ನು ಕಂಡು ಆ ನೃಪಸೂನು ನೆಲದಿಂದ ಅಟ್ಟಕ್ಕೇರಿದನು. ಅಟ್ಟದಿಂದ ನಭಕ್ಕೆ (ಅಂಬರಕ್ಕೆ) ಏರಿದನು (ಲಗ್ಗೆ ಇಟ್ಟನು). ಸಂತಸದ ನೌಕೆಯಲ್ಲಿ ತೇಲುತ್ತಾ ಹೋದನು. ಆ ಚತುರೆಯರು (ಏಣಾಕ್ಷಿಯರು) ಸವಿಮಾತುಗಳನ್ನಾಡುತ್ತ, ಕುಡಿನೋಟಗಳನ್ನು ಬೀರುತ್ತ, ಚಾಟು ವಚನಗಳನ್ನು ಎಸೆಯುತ್ತ ಚೆಲ್ಲಾಟವಾಡಿದರು.

ಪ್ರಿಯಾಃ ಪಯೋಧರೇಷು = ಸ್ತನೇಷು ನಿಷಿಕ್ತಮುಕ್ಷಿತಂ ಚಂದನಂ ಯೇಷಾಂ ತೈಃ —ಮೌಕ್ತಿಕೈರ್ಗ್ರಥಿತಾನಿ ಪ್ರೋತಾನಿ ಚಾರುಭೂಷಣಾನಿ ಯೇಷಾಂ ತೈಃ—ಶ್ರೋಣಿ ಲಂಬಿನ್ಯೋ ಮಣಿಮೇಖಲಾ = ಮರಕತಾದಿ ಮಣಿಯುಕ್ತ ಕಟಿಸೂತ್ರಾಣಿ ಯೇಷಾಂ ತಾದೃಶೈರ್ಗ್ರೀಷ್ಮವೇಷವಿಧಿಭಿ = ರುಷ್ಣಕಾಲೋಚಿತ ನೇಪಥ್ಯವಿಧಿನ್ಯೈಃ — ಮೌಕ್ತಿಕ ಭೂಷಣೈಃ = ಮುತ್ತಿನಾಭರಣಗಳ.

46. ಯತ್ಸಲಗ್ನಸಹಕಾರಮಾಸವಂ ।
ರಕ್ತ ಪಾಟಲಸಮಾಗಮಂ ಪಪೌ ॥
ತೇನ ತಸ್ಯ ಮಧುನಿರ್ಗಮಾತ್ ಕೃಶಃ ।
ಚಿತ್ತಯೋನಿರಭವತ್ ಪುನರ್ನವಃ ॥ ೪೬ ॥

ಆ ಮದನಾಂಗವಲ್ಲಭನು (ಲಲಿತಾಂಗವಲ್ಲಭನು) ಚೈತ್ರಮಾಸವು ಕಳೆದುಹೋಗಲು ಅವನ ಕ್ರೀಡೋಲ್ಲಾಸವು ಕುಂಠಿತವಾಯಿತು. (ಬರಬರುತ್ತಾ ರಾಯನ ಕುದುರೆ ಕತ್ತೆಯಾಯಿತು.) ಆದರೆ ಅವನ ಮಧುಪಾನಪ್ರವೃತ್ತಿಯು ಪುನಃ ಅವನಲ್ಲಿ ನವಶಕ್ತಿಯನ್ನು (ಕಾಮಶಕ್ತಿ) ಕುದುರಿಸಿತು. ಅವನು ಮಧು, ಮದ್ಯ (ಹೆಂಡ, ಸಾರಾಯಿ) ಮೊದಲಾದ ವಿವಿಧ ಜಾತಿಯ ಮದ್ಯಗಳನ್ನು ಸೇವಿಸುತ್ತ ಕ್ರೀಡಾಪಟುವಿನಂತೆ ಸಜ್ಜಾದನು. ಆಸವಗಳಿಗೆ ಕೆಂಪಾದ ಪಾಟಲಕುಸುಮ ಹಾಗೂ ಘಮಘಮಿಸುವ ಮಾವಿನ ಹೂ, ಮಾವಿನ ಚಿಗುರುಗಳನ್ನು ಬೆರಸಿ ಕುಡಿದು ತನ್ನ ಓಜಸ್ಸನ್ನು ಹೆಚ್ಚಿಸಿಕೊಂಡು ನವಶಕ್ತಿಸಂಪನ್ನನಾದನು. ಅವನು ಈ ವಾಜೀಕರಣ ವಿಧಾನದಿಂದ ಉದ್ದೀಪನಗೊಂಡು ಶಕ್ತಿಚೇತನಗಳನ್ನು ಪಡೆದು ರೇಸಿನ ಕುದುರೆಯಂತೆ ಶಕ್ತಿಸಂಪನ್ನನಾದನು. ಮಂದವೀರ್ಯನಾದ ಅವನು ಮಧುಪಾನದಿಂದ ಚಿತ್ತವಿಕಾರ ಹೊಂದಿದನು. ಆದರೆ ದೇಹದಲ್ಲಿ ಬಲವಿರದಿದ್ದರೂ ಮನಸ್ಸು ಮಾತ್ರ ಪುನರ್ನವವಾಗಿ, ಪುನಶ್ಚೇತನಗೊಂಡು, ಪ್ರಬಲಗೊಂಡು, ಅತ್ಯಂತ ಶಕ್ತಿಯುತವಾಗಿ ಕೆಲಸಮಾಡತೊಡಗಿತು, ಕಾಮವಿಕಾರಗಳು, ಸ್ತ್ರೀಲಂಪಟರ ಸ್ವಾಭಾವಿಕ ಗುಣಧರ್ಮಗಳು ಅದೊಂದೇ. ಅವನ ಕಾಮಪ್ರವೃತ್ತಿ ಪುನಃ ಪ್ರಬಲವಾಯಿತು, ಜಾಗೃತವಾಯಿತು.

ಸೋSಗ್ನಿವರ್ಣೋ ಲಗ್ನಃ ಸಹಕಾರಶ್ಚೂತಪಲ್ಲವೋ ರಕ್ತಪಾಟಲಸ್ಯ = ಪಾಟಲಕುಸುಮಸ್ಯ ಸಮಾಗಮೋ ಯಸ್ಮಿ ತಮಾಸವಂ=ಮದ್ಯ ಪಪೌ–ಇತಿ ಯತ್ತೇನಾಸವಪಾನೇನ = ಮಧುನಿರ್ಗಮಾದ್ವಸಂತಾಪಗಮಾತ್ ಕೃಶೋ ಮಂದವೀರ್ಯಸ್ತಸ್ಯ ಚಿತ್ತಯೋನಿಃ =ಕಾಮಃ ಪುನರ್ನವಃ ಪ್ರಬಲೋSಭವತ್ ॥

**47. ಏವಮಿಂದ್ರಿಯಸುಖಾನಿ ನಿರ್ವಿಶನ್ ।**
**ಅನ್ಯಕಾರ್ಯವಿಮುಖಃ ಸ ಪಾರ್ಥಿವಃ ॥**
**ಆತ್ಮಲಕ್ಷಣನಿವೇಶನಾನ್ಯತೂನ್ ।**
**ಅತ್ಯವಾಹಯದನಂಗವಾಹಿತಃ** ॥ ೪೭ ॥

ಹೀಗೆ ಇಂದ್ರಿಯಸುಖಗಳಿಗೆ ವಶನಾಗಿ (ಅಧೀನನಾಗಿ), ಮೈಮರೆತು ಶಬ್ದಾದೀನನಾಗಿ, ಪಂಚೇಂದ್ರಿಯಗಳಾದ ಕಣ್ಣು, ಕಿವಿ, ಮೂಗು, ನಾಲಗೆ, ಚರ್ಮ ಇವುಗಳ ಚಪಲತೆಗೆ ಬಲಿಯಾಗಿ ದಿನಗಳನ್ನು ಕಳೆದನು. ಕಾಮವ್ಯವಹಾರದಲ್ಲಿ ತಿಂಗಳುಗಳು, ಋತುಗಳು ಉರುಳಿದುವು. ವರ್ಷಗಳು ಪಲಾಯನ ಮಾಡಿದುವು. ಅನಂಗಲೀಲೆಯಲ್ಲಿ, ಕಾಮ ಮೋಹಿತನಾಗಿ, ತನ್ನ ಮೇಳದ ಸ್ತ್ರೀಯರ ಸ್ಮರಣೆಯಲ್ಲದೆ, ಕರ್ತವ್ಯದ ಕರೆಗೆ ಓ ಕೊಡದೆ ವಿಮುಖನಾಗಿದ್ದನು. ಪಾರ್ಥಿವನಾದ (ಕ್ಷತ್ರಿಯನಾದ) ರಾಜನಾದ ತನ್ನ ಕರ್ತವ್ಯಗಳಿಗೆ ಅಂಧನಾಗಿ ಸೌಂದರ್ಯೋಪಾಸಕನಾಗಿ ಕಾಲಹರಣಮಾಡುತ್ತಿದ್ದನು. ಕಾಮಪ್ರೇರಿತನಾಗಿ, ಅನ್ಯಕಾರ್ಯಗಳಿಗೆ ವಿಮುಖನಾಗಿ ಎಚ್ಚರವಿಲ್ಲದೆ ಇರುತ್ತಿದ್ದನು. ತನ್ನ ಮೈಮೇಲೆ ಧರಿಸಿದ ಕುಟಜಾದಿ ಪುಷ್ಪಮಾಲಿಕೆಗಳಿಂದ, ಅರ್ಜುನ, ಬಕುಳ ಹೂಗಳಿಂದ, ಸ್ತ್ರೀಯರ ವೇಷ ಭೂಷಣಾದಿಗಳಿಂದ ಋತುಭೇದವನ್ನು ಜ್ಞಾಪಿಸಿಕೊಳ್ಳುತ್ತ ಉಂಡಾಡಿಗುಂಡನಂತೆ ಆಯುಸ್ಸೆಂಬ ನಂದಾದೀಪವನ್ನು ಬೇಗಬೇಗನೇ ಉರಿಸುತ್ತಲಿದ್ದನು. ಅಗ್ನಿವರ್ಣನಲ್ಲಿ ಕಾಮ ವಾಸನೆ ಉಳಿಯಿತೇ ವಿನಹ ದೇಹವು ಸವೆದುಹೋಯಿತು. ಭೂತಪ್ರೇತಗಳು ಸೇರಿದ ಮನೆಯು ಉರಿದುಹೋಗುವಂತೆ ಆಯುಸ್ಸೆಂಬ ಬತ್ತಿಯು ಎಣ್ಣೆಯು ತೀರಿದಾಗ ನಂದಿಹೋಗುವಂತೆ ಅಪಮೃತ್ಯುವಿಗೆ ಬಲಿಯಾಗಲು ಸಿದ್ಧನಾದನು (ಜೀವನ ಎಕ್ಕ ಹುಟ್ಟಿಹೋಯಿತು).

ಏವಮನಂಗವಾಹಿತಃ = ಕಾಮಪ್ರೇರಿತೋಽನ್ಯಕಾರ್ಯವಿಮುಖಃ ಸ ಪಾರ್ಥಿವ ಇಂದ್ರಿಯಾಣಾಂ — ಸುಖಾನಿ = ಸುಖಕರಾಣಿ—ಶಬ್ದಾದೀನಿ—ಅಯಮೃತುರಿದಾನೀಂ = ವರ್ತತ ಇತಿ ಜ್ಞಾಪಿತಾನ್ = ಆತ್ಮಲಕ್ಷಣಾ ನಿವೇದಿತಾನಿ ॥

**48. ತಂ ಪ್ರಮತ್ತಮಪಿ ನ ಪ್ರಭಾವತಃ ।**
**ಶೇಕುರಾಕ್ರಮಿತುಮನ್ಯಪಾರ್ಥಿವಾಃ ।**
**ಆಮಯಸ್ತು ರತಿರಾಗಸಂಭವೋ ।**
**ದಕ್ಷಶಾಪ ಇವ ಚಂದ್ರಮಕ್ಷಿಣೋತ್** ॥ ೪೮ ॥

ಅತಿಮದೋನ್ಮತ್ತನಾಗಿ, ತಾನು ಮಾಡಬೇಕಾದ ರಾಜನ ಕರ್ತವ್ಯಗಳಿಗೆ ವಿಮುಖನಾಗಿ ಕೋಸಲದೇಶದ ಆಡಳಿತೆಯನ್ನು ಗಾಳಿಗೆ ತೂರಿ ತನ್ನ ಪ್ರಭಾವದಿಂದ ನಿಜಮಹಿಮೆಯಿಂದ ಚಕ್ರವರ್ತಿಸ್ಥಾನದಲ್ಲಿದ್ದ ಗೌರವದಿಂದ (ಸ್ಥಾನದ ಗೌರವದಿಂದ) ಅಗ್ನಿವರ್ಣನು ಧೂಳೀ ಪಟನಾಗದೆ ಇತರ ರಾಜರ ಆಕ್ರಮಣಕ್ಕೊಳಗಾಗದೆ ಉಳಿದಿದ್ದನು. ಇದು ಒಂದು ಆಶ್ಚರ್ಯವೇ (ಆಭಾಸ). ಆದರೆ ಲಂಗುಲಗಾಮಿಲ್ಲದ ಕಾಮಲೀಲೆಯಿಂದ ಭೋಗ ಭವರೋಗಕ್ಕೆ ತುತ್ತಾಗಿ ಸೊರಗುತ್ತಾ, ಕ್ಷೀಣಿಸುತ್ತಾ, ಕ್ಷಯಿಸುತ್ತಾ ಬಳಲುತ್ತಾ ಬಂದನು. ಅವನು ಅತ್ಯಂತ ಭಯಂಕರವಾದ ರಾಜಯಕ್ಷ್ಮರೋಗಕ್ಕೆ ಬಲಿಯಾದನು (ರಾಜಯಕ್ಷ್ಮ

= ಕ್ಷಯರೋಗ). ಕ್ಷಯರೋಗವು ರೋಗಗಳ ರಾಜ. ಅದು ಒಮ್ಮೆ ಅಂಟಿಕೊಂಡರೆ ಆ ವ್ಯಕ್ತಿಯ ಗತಿ ತೀರಿತು.

ಪೂರ್ವೇತಿಹಾಸ:—ಈ ಹಿಂದೆ ದಕ್ಷನ ಶಾಪಕ್ಕೆ ಒಳಗಾಗಿ ಚಂದ್ರನು ಕ್ಷಯರೋಗ ಪೀಡಿತನಾದ ಕತೆಯಿದೆ. ದಕ್ಷಪ್ರಜಾಪತಿಗೆ ಅಶ್ವಿನೀ, ಭರಣಿ ಮೊದಲಾದ ೨೭ ಮಂದಿ ನಕ್ಷತ್ರಪುತ್ರಿಯರಿದ್ದರು. ಅವರೆಲ್ಲರನ್ನು ದಕ್ಷನು ಓಷಧೀ ಈಶನಾದ, ಸಾತ್ವಿಕಗುಣಶೇಖರನಾದ ಚಂದ್ರನಿಗೆ ಲಗ್ನಮಾಡಿಕೊಟ್ಟನು. ಅಂದಿನಿಂದ ಚಂದ್ರನು ತಾರಾಪತಿಯಾದನು. ಆದರೆ ಚಂದ್ರನು ಬಹಳ ಚಂಚಲಸ್ವಭಾವದವನು. ಅವನು ತನ್ನ ಎಲ್ಲಾ ತಾರಾಪತ್ನಿಯರೊಂದಿಗೆ ಒಂದೇ ರೀತಿಯಲ್ಲಿ ವರ್ತಿಸದೆ ರೋಹಿಣಿಯನ್ನೇ ಹೆಚ್ಚು ಪ್ರೀತಿಸುತ್ತ, ಅವಳ ಮನೆಯಲ್ಲಿ ತಿಂಗಳಿಗೆ ೪ ದಿನ ಇರುತ್ತಿದ್ದನು. ಈ ಪಕ್ಷಭೇದಬುದ್ಧಿಯನ್ನು ಸಹಿಸಲಾರದೆ ತಾರಾಪುತ್ರಿಯರು ಮಹಾಕೋಪಿಷ್ಠನಾದ ತಮ್ಮ ಅಪ್ಪನಾದ ದಕ್ಷಪ್ರಜಾಪತಿಗೆ ವರದಿ ಮಾಡಿದರು. ಅವನು ಚಂದ್ರನಿಗೆ ಬುದ್ಧಿ ಹೇಳಿದರೂ ಅವನು ಕೇಳದೆಹೋದನು. ಇದರಿಂದ ರೊಚ್ಚಿಗೆದ್ದ ದಕ್ಷಬ್ರಹ್ಮನು ಚಂದ್ರನಿಗೆ ಕ್ಷಯಿಸೆಂದು ಶಪಿಸಿದನು. ಅಂದಿನಿಂದ ಚಂದ್ರನು ಕ್ಷಯರೋಗಪೀಡಿತನಾದನು. ಇದರಿಂದ ಸಸ್ಯಗಳಿಗೆ ಕೆಡುಕು, ಮಾನವನ ಬುದ್ಧಿಗೆ ಕೇಡು, ಅಲ್ಲದೆ ಸಾಗರದ ಸಮತೋಲನ ತಪ್ಪಿತು. ಇದನ್ನು ಮನಗಂಡು ದೇವತೆಗಳೆಲ್ಲಾ ಸಭೆ ಸೇರಿ ಪ್ರಜಾಪತಿಗೆ ಮೊರೆಯಿಟ್ಟರು. ಆಗ ದಕ್ಷನು ಮರುಶಾಪವಿತ್ತು ೧೫ ದಿನ ಕ್ಷೀಣಿಸುವಂತೆಯೂ, ೧೫ ದಿನ ವರ್ಧಿಸುವಂತೆಯೂ ಅನುಗ್ರಹಿದಸಿದನು. ಹೀಗೆ ಶುಕ್ಲಪಕ್ಷ, ಕೃಷ್ಣಪಕ್ಷಗಳಾದುವು. ಸೃಷ್ಟಿಯ ಸಮತೋಲನವನ್ನು ಕೆಡದಂತೆ ಕಾಪಾಡಿದ,

ಪ್ರಮತ್ತಂ ವ್ಯಸನಾಸಕ್ತಮಪಿ ತಂ ನೃಪಂ ಪ್ರಭಾವತೋಽನ್ಯಪಾರ್ಥಿವಾಃ ಆಕ್ರಮಿತುಂ ಮಭಿಭವಿತುಂ ನ ಶೇಕುರ್ನ ಶಕ್ತಾಃ—ರತಿರಾಗಸಂಭವ ಆಮಯೋ=ವ್ಯಾಧಿಸ್ತು=ಕ್ಷಯರೋಗ ಇತ್ಯರ್ಥ—ದಕ್ಷಸ್ಯ = ದಕ್ಷಪ್ರಜಾಪತೇಃ ಶಾಪಶ್ಚಂದ್ರಮಿವ—ಅಕ್ಷಿಣೋದ ಕರ್ಷಯತ್—ಶಾಪೋಽಪಿ ರತಿರಾಗಸಂಭವ ಇತಿ—ಅತ್ರ ದಕ್ಷಃ ಕಿಲಾನ್ಯಾಃ ಸ್ವಕನ್ಯಾ ಉಪೇಕ್ಷ್ಯ ರೋಹಿಣ್ಯಾಮೇವ ರಮಮಾಣಂ ರಾಜಾನಂ ಸೋಮಂ ಶಶಾಪ—ದಕ್ಷಶಾಪ ಇವ ಚಂದ್ರಂ = ರೋಹಿಣ್ಯಾಮೇವ ರಮಮಾಣಾಯ ಚಂದ್ರಾಯ ಕ್ಷಯರೋಗೀ ಭವೇದಿ ದಕ್ಷಃ ಶಾಪಂ ದದಾವಿತ್ಯಾಗಮಃ—ಸುತಾ ಪರಿತ್ಯಾಗಾ ದಕ್ಷಃ ಶಶಿನಂ ಕ್ಷಯೀ ಭವೇತಿ ಶಶಾಪೇತಿ ಪ್ರಸಿದ್ಧಂ ॥

49. ತಸ್ಯ ಪಾಂಡುವದನಾಲ್ಪಭೂಷಣಾ ।
ಸಾವಲಂಬಗಮನಾ ಮೃದುಸ್ವನಾ ॥
ರಾಜಯಕ್ಷ್ಮಪರಿಹಾನಿರಾಯಯೌ ।
ಕಾಮಯಾನಸಮವಸ್ಥಯಾ ತುಲಾಮ್ ॥ ೪೯ ॥

ರತಿರಾಗಪ್ರಿಯನಾದ ಅಗ್ನಿವರ್ಣನು ತನಗಾಗುತ್ತಿರುವ ಕೇಡನ್ನು ಪೂರ್ಣವಾಗಿ ತಿಳಿಯದಿದ್ದನು. ಆ ನೃಪನು ವೈದ್ಯರ ಮಾತಿಗೆ ಕಿವಿಕೊಡದೆ ಅವಿಧೇಯನಾಗಿ ವರ್ತಿಸುತ್ತ ಇಂದ್ರಿಯಗಣಗಳ ದಾಸನಾಗಿ ವಿಷಯಸುಖದತ್ತ ಮನಸ್ಸನ್ನು ಹರಿಸುತ್ತ ಕ್ಷಯರೋಗಿಯಾದನು. ಅವನು ಸ್ತ್ರೀಸಂಗವ್ಯಸನವನ್ನು ಪ್ರಾಣಹೋದರೂ ಬಿಡನು. ಕುಡಿತ, ಹೆಣ್ಣು,

ಜೂಜು, ಧೂಮಪಾನ, ಗಾಂಜಾ, ಅಫೀಮು ಸೇವನೆ ಈ ದುಶ್ಚಟಗಳಿಂದ ಮಾನವದೇಹ ಮೊಬ ಮನೆಯು ಮುರಿದ ಮನೆಯಾಗುವುದು ಸಹಜವಷ್ಟೆ. ಮಾನವನು ಇಂದ್ರಿಯ ಗುಲಾಮನಾಗಿ, ಅವುಗಳ ವಶನಾಗಿ ತನ್ನ ವಿವೇಕವನ್ನು ಕಳೆದುಕೊಂಡು ಪಶುವಿನಂತೆ ವರ್ತಿಸುವನು. ಅವುಗಳ ಸೆಳೆತಕ್ಕೆ ಸಿಕ್ಕಿ ಸರ್ವನಾಶದತ್ತ ಧಾವಿಸುವನು. ವ್ರತ, ನಿಯಮ, ಸಜ್ಜನರ ಸಹವಾಸ, ಕರ್ತವ್ಯನಿಷ್ಠೆ ಇವುಗಳು ಮಾನವನನ್ನು ಸರಿದಾರಿಗೆ ಒಯ್ಯುವುವು. ದುಷ್ಟಶಕ್ತಿಗಳ ಹಿಡಿತಕ್ಕೆ ಸಿಕ್ಕಿ ಕರ್ಪೂರಕ್ಕೆ ಬೆಂಕಿ ತಗಲಿದಂತೆ ಕರಗುತ್ತಾ ಬಂದನು. ಎಣ್ಣೆ ಆರಿದ ದೀಪದಂತೆ, ಕಳೆಗುಂದುತ್ತಾ ಬಂದನು. ಆದರೆ ಕಾಮಪ್ರವೃತ್ತಿಯಿಂದ ಹಿಂದಿರುಗುವುದು ಮಾತ್ರ ಸಾಧ್ಯವಾಗದ ಮಾತು, ದುಸ್ಸಾಧ್ಯವೆನಿಸಿತು. ಅವನನ್ನು ಇಂದ್ರಿಯ ಗಣಗಳು ಬಲಾತ್ಕಾರವಾಗಿ ಸೆಳೆದೊಯ್ಯುತೊಡಗಿದುವು. ಮರಣದ ಬಾಗಿಲಿಗೆ. ಅವುಗಳ ಸೆಳೆತ ಮಹಾಸಾಗರದ ಮಹಾಪ್ರವಾಹದಂತೆ, ಅವನಿಗೆ ಮರಣವೊಂದೇ ಬಿಡುಗಡೆಯ ಹಾದಿ. ಮರಣವೇ ಮಹಾನವಮಿ. ಅದುವೇ ವಿಜಯದಶಮಿ. ಸರ್ವದುಃಖೋಪಶಮನ. ಶಾಂತಂ ಪಾಪಂ. ಅಮೃತಂಗಮಯ.

"ವಚನೇ ಸ್ಥಿತ ಆಶ್ರವಃ" ಇತ್ಯಮರಃ—ಅವಿಧೇಯ ಇತ್ಯರ್ಥಃ—ತತ್ ಸಂಗಸ್ಯ ವಸ್ತುಸಂಗವಸ್ತು ಸ್ತ್ರೀಮದ್ಯಾದಿಕಂ ವಸ್ತ್ಯನಾ ತ್ಯಜತ್—ಇಂದ್ರಿಯಗಣಃ ಸ್ವಾದುಭಿರ್ವಿಷಯೈರ್ಹೃತಸ್ತು = ಹೃತಶ್ಚೇತಸ್ತೇಭ್ಯೋ ದುಃಖಂ ಕೃಚ್ಛ್ರೇಣ ನಿವಾರ್ಯತೇ—ಭಿಷಜಾಂ ಅನಾಶ್ರವಃ = ವೈದ್ಯರ ಮಾತಿಗೆ ಕಿವಿಗೊಡದೆ.

**50. ತಸ್ಯ ಪಾಂಡುವದನಾಲ್ಪಭೂಷಣಾ ।**
**ಸಾವಲಂಬಗಮನಾ ಮೃದುಸ್ವನಾ ॥**
**ರಾಜಯಕ್ಷ್ಮಪರಿಹಾನಿರಾ ಯಯೌ ।**
**ಕಾಮಯಾನ ಸಮವಸ್ಥಯಾ ತುಲಾಮ್ ॥ ೫೦ ॥**

ಕಾಮುಕಾವಸ್ಥೆಗೆ ಅಧೀನನಾದ ಆ ನೃಪನು ಭೀಕರವಾದ ಕ್ಷಯರೋಗಕ್ಕೆ ಬಲಿಯಾದನು. ಅವನ ಮೊಗವು ಕಳೆಗುಂದಿ ಬೆಳ್ಪಡರಿತು. ದೇಹದಲ್ಲಿ ಒಂದು ತೊಟ್ಟು ರಕ್ತವಿಲ್ಲ, ಬೆಳ್ಪಾಂತಮುಖ, ಕ್ಷೀಣವಾದ ದೇಹ, ಕುಗ್ಗಿದ ದನಿ. ಇನ್ನೊಬ್ಬರ (ಸಹಚರರ) ಸಹಾಯದಿಂದ ಅತ್ತಿತ್ತ ಮೆಲ್ಲನೆ ನಡೆಯುವನು. ಮರುಕ್ಷಣವೇ ಮೈಬಿಸಿ, ಮೈಬೆವರುವುದು. ಕೆಮ್ಮು, ಗೂರಲು (ಉಬ್ಬಸದಿಂದ), ಆಯಾಸ, ದಣಿವು ತಲೆದೋರುವುದು. ಅವನು ಈಗ ಅವನ ಅರಮನೆಯ ಅರಗಿಣಿಯರಿಗೆ ಬೇಡವಾಗಿದ್ದಾನೆ. ಅಲ್ಪಭೂಷಣದಿಂದ ಅಲಂಕೃತನಾಗಿ, ದೇಹಸೌಂದರ್ಯದ ಕಡೆಗೆ ಕಡಿಮೆ ಲಕ್ಷಿತನಾಗಿ, ಮೊದಲಿನ ಲವಲವಿಕೆ ಇಲ್ಲದೆ ಕ್ಷಯರೋಗಪೀಡಿತನಾಗಿ, ಪರಾವಲಂಬಿಯಾಗಿ, ಕಾಮಜ್ವರಪೀಡಿತನಾಗಿ, ಓರ್ವ ಕಾಮಿಯಂತೆ ತೋರುತ್ತ, ಕಾಮಿಯಂತೆ ಕೊರಗುತ್ತ, ಮಹಾರೋಗದ ಉಲ್ಬಣಾವಸ್ಥೆಯಿಂದ ಬಳಲುತ್ತ, ತೊಳಲುತ್ತ. ಮರಣದ ಮಂಟಪವನ್ನು ದಾಪುಕಾಲಿಟ್ಟು ಪ್ರವೇಶಿಸುತ್ತಿದ್ದನು. ಹೀಗಿದ್ದರೂ ಅವನಿಂದ ಕಾಮಲಾಲಸೆ, ಕಾಮದ ವಾಸನೆ ಬೆನ್ನುಬಿಡದು. ಅವನಿಗೆ ಅಂಟಾದಿ ಅಂಟಿಕೊಂಡೇ ಸಾಗುತ್ತಿದೆ. ಬೆನ್ನುಹಿಡಿದ ಬೇತಾಳನಂತೆ (ಬ್ರಹ್ಮರಾಕ್ಷಸನಂತೆ).

ತಸ್ಯ ರಾಜ್ಞಃ ಪಾಂಡುವದನಾ—ಅಲ್ಪಭೂಷಣಾ=ಪರಿಮಿತಾಭರಣಾ—ಮೃದುಸ್ವನಾ

=ಹೀನಸ್ವರಾ—ರಾಜ್ಞಃ ಸೋಮಸ್ಯ ಯಕ್ಷ್ಮಾ ರಾಜಯಕ್ಷ್ಮಾ=ಕ್ಷಯರೋಗಃ—ಪರಿಹಾನಿಃ = ಕ್ಷೀಣಾವಸ್ಥಾ ಸಾ—ಕಾಮಯತೇ ವಿಷಯಾನಿಚ್ಛತಿ ಕಾಮಯಾನಃ—ಕಾಲಕೃತೋ ವಿಶೇಷೋಽವಸ್ಥಾ—"ವಿಶೇಷಃ ಕಾಲಿಕೋಽವಸ್ಥಾ" ಇತ್ಯಮರಃ—ಪಾಂಡುವದನಾ = ಬೆಳ್ಪಡರಿದ ಮುಖದವನು—ತುಲ್ಯಯೋಗಿತಾ = ನಿಯತಾನಾಂ ಸಕೃದ್ಧರ್ಮಃ ಸಾ ಪುನಸ್ತುಲ್ಯಯೋಗಿತಾ ಇತಿ ಕಾವ್ಯಪ್ರಕಾಶೇ ॥

**51.** **ವ್ಯೋಮಪಶ್ಚಿಮಕಲಾಸ್ಥಿತೇಂದು ವಾ ।**
**ಪಂಕಶೇಷಮಿವ ಘರ್ಮಪಲ್ವಲಮ್ ॥**
**ರಾಜ್ಞಿ ತತ್ಕುಲಮಭೂತ್ ಕ್ಷಯಾತುರೇ ।**
**ವಾಮನಾರ್ಚಿರಿವ ದೀಪಭಾಜನಮ್** ॥ ೫೧ ॥

ಕ್ಷಯರೋಗಪೀಡಿತನಾದ ಅಗ್ನಿವರ್ಣ ಮಹಾರಾಜನು ಇದೀಗ ಅಸ್ತಂಗತನಾಗುತ್ತಿರುವ ಚಂದ್ರನಂತೆ, ರಘುಕುಲವೆಂಬ ನಿರ್ಮಲಾಕಾಶದಲ್ಲಿ ಪಶ್ಚಿಮದಿಗಂತವನ್ನು ಸೇರಿ ಮುಳುಗುತ್ತಲಿರುವ ಚಂದ್ರನಂತೆಯಿದ್ದನು. ಆ ಚಂದ್ರನು ಕ್ಷೀಣಿಸಿದ ಚಂದ್ರ. ತನ್ನ ಕೊನೆಯ ಕಲೆ ಮಾತ್ರ ಉಳಿದುಕೊಂಡಿರುವ ಚಂದ್ರಬಿಂಬ. ಅಂತಹ ಶಶಿಯಿಂದ ಎಸೆವ ಬಾನಿನಂತೆ ಸೂರ್ಯಕುಲವು ತನ್ನ ಅದೃಷ್ಟಲಕ್ಷ್ಮಿಯನ್ನು ಕಳೆದುಕೊಂಡು ಹೀನಾವಸ್ಥೆಯನ್ನು ಹೊಂದಿದೆ. ಇದೀಗ ಸೂರ್ಯಕುಲಕ್ಕೆ ಪರ್ವಕಾಲ ಬಂದಿದೆ. ಜನರು ಚಿಂತಾಸಕ್ತರಾಗಿದ್ದಾರೆ. ರಘುಕುಲದ ಮಣಿದೀಪವು ಕುಂಠಿತವಾದ ಜ್ಯೋತಿಯಿಂದ, ವಾಮನ ಜ್ಯೋತಿಯಿಂದ, ಬೆಳಗುತ್ತಿದೆ. ಅದರ ಮುನ್ನಿನ ತೀಕ್ಷ್ಣಪ್ರಭೆ ಕಂದಿದೆ, ಕುಂದಿದೆ, ಕಾಂತಿಹೀನವಾಗುತ್ತಾ ಬಂದಿದೆ, ಬೇಸಿಗೆಯ ಕಾಲದಲ್ಲಿ ಕೆಸರು ಮಾತ್ರ ಉಳಿದಿರುವ ಪೆರ್ಮಡುವಿನಂತೆ. ಸೂರ್ಯನ ಪ್ರಖರವಾದ ಬಿಸಿಲಿನಿಂದ ನೀರು ಬತ್ತಿಹೋದ ಕಾಸಾರದಂತೆ, ಬರೀ ಕೆಸರಿನಿಂದ ತುಂಬಿರುವ ಜಲಾಶಯದಂತೆ, ರಘುವಂಶವು ಇಂದು ನಿರ್ವೀರ್ಯವಾಗಿದೆ. ಅನಂತಚೈತನ್ಯದ ಸಾಗರವಾದ ಮಹಾವಂಶವು ಶೋಷಿತವಾಗಿದೆ, ಬರಡಾಗಿದೆ. ಸೂರ್ಯವಂಶವೆಂಬ ಲತೆಯು ಬತ್ತಿ ಒಣಗುತ್ತಿದೆ. ಮಹಾವಟವೃಕ್ಷವು ಒಣಗಿಹೋಗುತ್ತಲಿದೆ. ಜಲಾಶಯವು ಬತ್ತಿಹೋಗಿ ಉಳಿದುದೆಂದರೆ ಕೆಸರು ಮಾತ್ರ. ದೀಪದ ಬೆಳಕು ನಂದಿಹೋದ ಮೇಲೆ (ಆರಿಹೋದ) ಬರೀ ದೀಪದ ಪಾತ್ರೆ (ಬುರುಡೆ, ಬುಡ್ಡಿ) ಮತ್ತಷ್ಟು ಕರಕಲು ಬತ್ತಿ ಮಾತ್ರ.

ತತ್ಕುಲಂ = ರಘುಕುಲಂ ಪಶ್ಚಿಮಕಲಾಯಾಂ ಸ್ಥಿತ ಇಂದುರ್ಯಸ್ಮಿಂಸ್ತತ್ಕಲಾವಶಿಷ್ಟೇಂದು ವ್ಯೋಮಪಾವ್ಯೋಮೇವ—"ವಾ" ಶಬ್ದ ಇವಾರ್ಥೇ—ಯಥಾಹ ದಂಡೀ—"ಇವ ಬದ್ವಾ ಯಥಾ ಶಬ್ದಾ" ಇತಿ—ಪಂಕಶೇಷಂ ಘರ್ಮಪಲ್ವಲಮಿವ ವಾಮನಾರ್ಚಿರಲ್ಪಶಿಖಂ = ದೀಪಭಾಜನಂ ದೀಪಪಾತ್ರಮಿವಾಭೂತ್ ॥

**52.** **ಬಾಢಮೇಷ ದಿವಸೇಷು ಪಾರ್ಥಿವಃ ।**
**ಕರ್ಮ ಸಾಧಯತಿ ಪುತ್ರಜನ್ಮನೇ ॥**
**ಇತ್ಯದರ್ಶಿತರುಜೋಽಸ್ಯ ಮಂತ್ರಿಣಃ ।**
**ಶಶ್ವದೂಚುರಘಶಂಕಿನೀಃ ಪ್ರಜಾಃ** ॥ ೫೨ ॥

ಆಪ್ತಮಂತ್ರಿಗಳು, ಪುರಪ್ರಮುಖರು (ವರಿಷ್ಠರು) ರಾಜನ ರೋಗದ ವಿಚಾರವನ್ನು ಪ್ರಜೆಗಳಿಗೆ ತಿಳಿಸದೆ ಗೂಢವಾಗಿಯೇ ಇರಿಸಿದರು. ಜನರು ಭಯಗೊಳ್ಳಬಹುದೆಂದು ಹೆದರಿ ಸತ್ಯವಿಷಯವನ್ನು ಬಹಿರಂಗಪಡಿಸದೆ ಅತ್ಯಂತ ಗೂಢವಾಗಿರಿಸಿದರು. ಆದರೂ ಜನರು ಸಂಶಯಗೊಂಡಿದ್ದರು. ಭವಿಷ್ಯದಲ್ಲಿ ಅನರ್ಥವು ಕಾದಿದೆಯೆಂದು ಅವರು ಶಂಕಿತರಾಗಿದ್ದರು. ರಾಜನು ಪುತ್ರಾರ್ಥಿಯಾಗಿ, ಪುತ್ರೋದಯಕ್ಕಾಗಿ ನಾನಾವಿಧದ ಯಾಗಗಳನ್ನೂ, ವಿವಿಧ ಧರ್ಮಕಾರ್ಯಗಳನ್ನೂ, ಭಗವಂತನ ಪೂಜೆ, ಆರಾಧನೆಗಳನ್ನು ಹಮ್ಮಿಕೊಂಡಿರುವನೆಂಬ ಸಂತೋಷಕರವಾದ ವಿಷಯವನ್ನು ರಾಜನ ಹಿತಚಿಂತರು ಬಹಿರಂಗಪಡಿಸಿದರು. ಪ್ರಜೆಗಳು (ಪ್ರಜಾಲೋಕವು) ಮಾತ್ರ ತಮ್ಮ ಮಹಾರಾಜನಿಗೆ ಅನಿಷ್ಟವು ಖಂಡಿತವಾಗಿ ಭವಿಷ್ಯದಲ್ಲಿ ಕಾದಿದೆಯೆಂದು ಅರಿತು ಭಯಗ್ರಸ್ತರಾಗಿದ್ದರು. ಆದರೂ ಸಿಂಹಾಸನದ ಹಿತಚಿಂತರು ತಾವು ಹೇಳುವುದೇ ಪರಮಸತ್ಯವೆಂಬ ವದಂತಿಗಳನ್ನು ಹರಡುತ್ತಲೇ ಇದ್ದರು.

ಪುತ್ರಜನ್ಮನೇ = ಪುತ್ರೋದಯಾರ್ಥ—ಮಂತ್ರಿಣೋಽಘಶಂಕಿನೀರ್ವ್ಯಸನೀರ್ವ್ಯಸನ ಶಂಕಿನೀಃ ಪ್ರಜಾಃ ಶಶ್ವದೂಚುಃ—ಅಥ ಶಂಕಿನೀಃ ಪ್ರಜಾಃ = ಮೃತ ಇತ್ಯಧಶಂಕಿನೀಃ ಪಾಪಂ ಚಿಂತಯಂತೀ ಪ್ರಜಾಲೋಕಾನ್—ಅಥ ಶಂಸಿನೀಃ—ಮೃತ ಇತ್ಯಧಂ ಪಾಪಂ ಶಂಸತೀತಿ ತಾದೃಶೀಃ ॥

53. ಸತ್ಯನೇಕವನಿತಾ ಸಖೋಽಪಿ ಸನ್ ।
ಪಾವನೀಮನವಲೋಕ್ಯ ಸಂತತಿಮ್ ॥
ವೈದ್ಯರತ್ನಪರಿಭಾವಿನಂ ಗದಂ ।
ನ ಪ್ರದೀಪ ಇವ ವಾಯುಮತ್ಯಗಾತ್ ॥ ೫೩ ॥

ಆ ವನಿತಾಪ್ರಿಯನು ಅನೇಕಮಂದಿ ವನಿತೆಯರ ಸಖನು ತಾನಾಗಿದ್ದರೂ ಅವಳ ಸಂತಾನವನ್ನು ಕಾಣದೇ ಇರುತ್ತಿದ್ದನು. ಮುದ್ದುಕಂದನ ವದನಾರವಿಂದವನ್ನು ನೋಡದೇ ಇದ್ದನು. ಅವನ ವಂಶವೃಕ್ಷವು ಒಣಗುತ್ತಲಿತ್ತು. ಅದು ಚಿಗುರದೆ ಗೋತ್ರವು ಪಾವನವಾಗಲಾರದು. ಅವನ ಪೂರ್ವಿಕರು, ಪಿತೃದೇವತೆಗಳು, ಪುತ್ರಪೌತ್ರರು ಕೊಡುವ ಜಲದಿಂದ (ಅರ್ಘ್ಯದಿಂದ) ಅಲ್ಲವೆ ಪಾವನವಾಗುವುದು? ಸಂತಸಗೊಳ್ಳುವುದು? ಮಹಾಪ್ರಬಲವಾದ, ಅತ್ಯಂತ ಕಠಿಣವಾದ ಕ್ಷಯರೋಗವನ್ನು ವೈದ್ಯರು ತಮ್ಮ ದಿವ್ಯ ಔಷಧಿಯಿಂದ ತಡೆಯದಾದರು. ಆದರೂ ರಾಜವೈದ್ಯರು ಆ ಘೋರ ವಿಪತ್ಕಾರಕ ರೋಗದೊಂದಿಗೆ ಸೆಣಸಾಡುತ್ತಲೇ ಇದ್ದರು. ಅದರ ವೇಗವು ದಿನದಿಂದ ದಿನಕ್ಕೆ ಹೆಚ್ಚುತ್ತಲೇ ಇತ್ತು. ಪ್ರಾಣವು ಸಂದಿಗ್ಧಸ್ಥಿತಿಯಲ್ಲಿತ್ತು. ಗಾಳಿಗೊಡ್ಡಿದ ದೀಪದಂತೆ ಅರಸನ ಪ್ರಾಣಜ್ಯೋತಿಯು ಅಸ್ಥಿರವಾಗಿತ್ತು. ಗಾಳಿಯು ವಿಪರೀತವಾಗಿ ಬೀಸುವಲ್ಲಿ ದೀಪವು ನಂದಿಹೋಗುವುದು ಸ್ವಾಭಾವಿಕವಷ್ಟೆ. ಅಂತೆಯೇ ಅರಸನ ಮರಣವು ಖಚಿತವಾಗಿತ್ತು.

ಪಾವನೀಂ=ಪಿತೃಣ್ಯಮೋಚನೀಂ ಸಂತತಿಮನವಲೋಕ್ಯ-ಪ್ರದೀಪೋ ವಾಯುಮಿವ —ನಾತ್ಯಗಾನ್ನಾತಿ ಚಕ್ರಾಮ ॥

54. ತಂ ಗೃಹೋಪವನ ಏವ ಸಂಗತಾಃ ।
ಪಶ್ಚಿಮಕ್ರತುವಿದಾ ಪುರೋಧಸಾ ॥
ರೋಗಶಾಂತಿಮುಪದಿಶ್ಯ ಮಂತ್ರಿಣಃ ।
ಸಂಭೃತೇ ಶಿಖಿನಿ ಗೂಢಮಾದಧುಃ ॥ ೫೪ ॥

ಅಗ್ನಿವರ್ಣನ ಪ್ರಾಣಜ್ಯೋತಿಯು ಗಾಳಿಗೊಡ್ಡಿದ ದೀಪದಂತೆ ನಂದಿಹೋಯಿತು. ಆ ರವಿಕುಲದ ಸೂರ್ಯನು ಅಸ್ತಂಗತನಾದನು (ದುರ್ಗಾಸ್ತಮಾದನು). ಅರಸನು ಮರಣವನ್ನು ಅಪ್ಪಿದನು. ಸಿಂಹಾಸನದ ಹಿತಚಿಂತಕರು ವಿಷಯವನ್ನು ಗುಟ್ಟಿನಲ್ಲಿರಿಸಿ ರಾಜಪುರೋಹಿತರ ಮಾರ್ಗದರ್ಶನದಲ್ಲಿ ಮುಂದಿನ ಕ್ರಮಗಳನ್ನು ಕೈಗೊಂಡರು. ಅಗ್ನಿವರ್ಣನ ಕಳೇಬರವನ್ನು ಅರಮನೆಯ ಉದ್ಯಾನದಲ್ಲಿ ಅಗ್ನಿಗಾಹುತಿಮಾಡಿದರು. ಅರಮನೆಯಲ್ಲಿ ಶೋಕಜ್ವಾಲೆಯು ಉದ್ಭವಿಸಿತು. ಅಗ್ನಿಸಂಸ್ಕಾರಾದಿ ಕಾರ್ಯಗಳು, ರೋಗ ಶಾಂತಿಯ ನೆಪದಿಂದ ಅರಮನೆಯ ಹಿತಚಿಂತಕರು ಗುಟ್ಟಿನಲ್ಲಿ ನಡೆಸಿದರು. ಆ ಗೃಹಾರಾಮದೊಳು ಭುಗ್ಗನುರಿದ ಅಗ್ನಿಯಲ್ಲಿ (ಅಗ್ನಿನಾರಾಯಣನಿಗೆ) ರಾಜನ ದೇಹ ಕ್ಷಣಾರ್ಧದಲ್ಲಿ ಉರಿದು ಭಸ್ಮೀಭೂತವಾಯಿತು. ಅರಸನ ಅಪರಕ್ರಿಯೆಗಳನ್ನು ವಿಧಿವತ್ತಾಗಿ (ಪಶ್ಚಿಮಕ್ರತು, ಅಂತ್ಯೇಷ್ಟಿ, ಶಾಂತಿಕರ್ಮ) ಗೋಪ್ಯವಾಗಿಯೇ ನಡೆಸಿದರು.

ಪಶ್ಚಿಮಕ್ರತುವಿದಾಽನ್ತ್ಯೇಷ್ಟಿವಿಧಿಜ್ಞೇನ ಪುರೋಧಸಾ—ಸಂಗತಾಃ = ಸಮೇತಾ—ಗೃಹೋಪವನ ಏವ=ಗೃಹಾರಾಮ ಏವ—"ಆರಾಮಃ ಸ್ಯಾದುಪವನಮ್" ಇತ್ಯಮರಃ—ರೋಗಶಾಂತಿಮುಪದಿಶ್ಯ ಶಾಂತಿಕರ್ಮವ್ಯಪದಿಶ್ಯ ತಮಗ್ನಿವರ್ಣಸಂಭೃತೇ ಸಮಿದ್ಧೇ ಶಿಖಿನ್ಯವತಾ ಗೂಢಮಪ್ರಕಾಶಮದಧುರ್ನಿದಧುರ್ನಿದಧುಃ ॥

55. ತೈಃ ಕೃತಪ್ರಕೃತಿಮುಖ್ಯಸಂಗ್ರಹೈಃ ।
ಆಶು ತಸ್ಯ ಸಹಧರ್ಮಚಾರಿಣೀ ॥
ಸಾಧುದೃಷ್ಟಶುಭಗರ್ಭಲಕ್ಷಣಾ ।
ಪ್ರತ್ಯಪದ್ಯತ ನರಾಧಿಪಶ್ರಿಯಮ್ ॥ ೫೫ ॥

ಅಗ್ನಿವರ್ಣ ಮಹಾರಾಜನ ಸಹಧರ್ಮಚಾರಿಣಿಯಾದ ಓರ್ವ ಪಟ್ಟಮಹಿಷಿಯು ಗರ್ಭಿಣಿಯಾಗಿರುವ ವಿಚಾರವು ತಿಳಿದುಬರಲು ಅರಮನೆಯ ಹಿತೈಷಿಗಳು, ಊರ ಪ್ರಮುಖರನ್ನು (ಪ್ರಭೃತಿಗಳು, ವರಿಷ್ಠರು, ಪ್ರತಿಷ್ಠಿತರು, ನಾಗರಿಕ ಹಿರಿಯರು) ಕರೆದು, ಮಂತ್ರಿಜನರೆಲ್ಲರೂ ಸೇರಿ ಮುಂದಿನ ಕಾರ್ಯದ ಬಗ್ಗೆ ಯೋಚಿಸಿದರು. ಅವರೆಲ್ಲರ ಸಮಾಲೋಚನೆಯಂತೆ ಗರ್ಭಚಿಹ್ನೆಯನ್ನು ಹೊಂದಿರುವ ರಾಣಿಗೇ ಪಟ್ಟವನ್ನು ಕಟ್ಟಿ ಅವಳ ಹೆಸರಿನಲ್ಲಿ ರಾಜ್ಯದ ಆಡಳಿತೆಯನ್ನು ನಡೆಸತೊಡಗಿದರು.

ಆಶುಃ ಶೀಘ್ರಂ ಕೃತಃ ಪ್ರಕೃತಿಮುಖ್ಯಾನಾಂ = ಪೌರಜನಪ್ರಧಾನಾನಾಂ ಸಂಗ್ರಹಃ ಸನ್ನಿಪಾತನಂ—ಸಾಧು = ನಿಪುಣಂ—ದೃಷ್ಟಶುಭಗರ್ಭಲಕ್ಷಣಾ = ಪರೀಕ್ಷಿತಶುಭಗರ್ಭ ಚಿಹ್ನಾ—ನರಾಧಿಪಶ್ರಿಯಂ ಪ್ರತ್ಯಪದ್ಯತ = ರಾಜ್ಯಲಕ್ಷ್ಮೀಂ ಪ್ರಾಪ ॥

56. ತಸ್ಯಾಸ್ತಥಾ ವಿಧನರೇಂದ್ರವಿಪತ್ತಿಶೋಕಾತ್ ।
ಉಷ್ಣೈರ್ವಿಲೋಚನಜಲೈಃ ಪ್ರಥಮಾಭಿತಪ್ತೇ ॥

**56. ನಿರ್ವಾಪಿತಃ ಕನಕಕುಂಭಮುಖೋಜ್ಝಿತೇನ ।**
**ವಂಶಾಭಿಷೇಕವಿಧಿನಾ ಶಿಶಿರೇಣ ಗರ್ಭಃ ॥ ೫೬ ॥**

ಆ ಮಹಾರಾಜ್ಞಿಯು (ಮಹಾರಾಣಿ, ಪಟ್ಟಮಹಿಷಿ, ಪಟ್ಟರಾಣಿ) ಗತಿಸಿದ ಮಹಾರಾಜನಿಗಾಗಿ ಸುರಿಸಿದ ಬಿಸಿಯಾದ ಕಣ್ಣೀರಿನಿಂದ ಅವಳ ಹೊಟ್ಟೆಯೊಳಗಿರುವ ಗರ್ಭವು ತಪ್ತವಾಯಿತು. ಆಗ ಗರ್ಭಾಂಕುರಕ್ಕೂ ಕಣ್ಣೀರಿನ ಬಿಸಿಯು (ಶಾಖ) ತಟ್ಟಿ ಬೆಚ್ಚಗಾಯಿತು. ಆದರೆ ಊರ ಪ್ರಮುಖರ ಸಹಕಾರದಿಂದ ಮುಂದೆ ನಡೆದ ಮಹಾರಾಜ್ಞಿಯ ಪಟ್ಟಾಭಿಷೇಕ ಮುಹೂರ್ತದಲ್ಲಿ ಕನಕಕುಂಭಗಳಿಂದ ಧಾರೆಯೆರೆದ ಪವಿತ್ರವಾದ ಅಭಿಷೇಕ ಉದಕದಿಂದ ಆ ಶಾಖವು ತಣ್ಣಗಾಯಿತು. ವಂಶಕ್ಕೆ ಬಂದ ವಿಪತ್ತು (ಕೇಡು) ತಾನಾಗಿ ಹಿಂದೆ ಸರಿಯಿತು. ಆ ಮಹಾರಾಣಿಯು ರಾಜ್ಯದ ಅಧಿಕಾರಸೂತ್ರವನ್ನು ಕೈಯಲ್ಲಿ ಧರಿಸಿ ಕಾರ್ಯ ನಿರ್ವಹಿಸತೊಡಗಿದಳು. ಮಹಾರಾಣಿಯು ಆಳ್ವಿಕೆಯನ್ನು ಪ್ರಜಾಕೋಟಿ ಪ್ರತಿಭಟಿಸಲಿಲ್ಲ. ರಾಜ್ಯದಲ್ಲಿ ವಿಪ್ಲವ, ಬಂಡಾಯ, ಸಂಘರ್ಷ (ಕಾಟಕಾಯಿ, ಕ್ರಾಂತಿ, ರಕ್ತಪಾತ) ತಲೆಯೆತ್ತಲಿಲ್ಲ. ಸಾಮ್ರಾಜ್ಯದ ಉದ್ದಗಲದಲ್ಲಿ ಶಾಂತಿ, ಸಮೃದ್ಧಿ, ಸುಭಿಕ್ಷೆ ನೆಲಸಿತು.

ಶೋಕಸ್ತಸ್ಮಾದುಷ್ಣೈರ್ವಿಲೋಚನಜಲೈಃ ಪ್ರಥಮಾಭಿತಪ್ತಸ್ತಸ್ಯಾ ಗರ್ಭಃ ಕನಕಕುಂಭಾನಾಂ ಮುಖೈರ್ದ್ವಾರೈರುಜ್ಝಿತೇನ—ಶಿಶಿರೇಣ ಶೀತಲೇನ—ವಂಶಾಭಿಷೇಕವಿಧಿನಾ= ಲಕ್ಷಣಯಾಽಭಿಷೇಕಜಲೇನ—ನಿರ್ವಾಪಿತ = ಆಪ್ಯಾಯಿತ ॥

**57. ತಂ ಭಾವಾರ್ಥಂ ಪ್ರಸವಸಮಯಾಕಾಂಕ್ಷಿಣೀನಾಂ ಪ್ರಜಾನಾಂ ।**
**ಅಂತರ್ಗೂಢಂ ಕ್ಷಿತಿರಿವ ನಭೋ ಬೀಜಮುಷ್ಟಿಂ ದಧಾನಾ ॥**
**ಮೌಲೈಃ ಸಾರ್ಧಂ ಸ್ಥವಿರಸಚಿವೈಃ ಹೇಮಸಿಂಹಾಸನಸ್ಥಾ ।**
**ರಾಜ್ಞೀ ರಾಜ್ಯಂ ವಿಧಿವದಶಿಷದ್ ಭರ್ತುರವ್ಯಾಹತಾಜ್ಞಾ ॥ ೫೭ ॥**

ಆ ಮಹಿಳೆಯು ತನ್ನ ಗರ್ಭದಲ್ಲಿ ಆ ರಾಜನ ವಂಶದ ಏಳಿಗೆಯನ್ನು ಸಾಧಿಸುವ ವಂಶದ ಚಿಗುರನ್ನು (ಕುಡಿ, ಅಂಕುರ, ಬೀಜಾಂಕುರ, ಮೊಳಕೆ) ಹೊಂದಿ ರಘುವಂಶದ ಕೀರ್ತಿ ವೈಭವದಿಂದ ಮೆರೆಯುತ್ತಿದ್ದ ಹೇಮಸಿಂಹಾಸನದಲ್ಲಿ ಕುಳಿತು ಆಪ್ತರಾದ ವೃದ್ಧಮಂತ್ರಿಗಳ ಸಹಾಯದಿಂದ ಪತಿಯ ರಾಜ್ಯವನ್ನು ಆಗಿನ ಕಾಲದ ಪದ್ಧತಿಯಂತೆ (ಶಾಸ್ತ್ರಾಧಾರಿತ) ಆಳುತ್ತಬಂದಳು. ಶ್ರಾವಣಮಾಸದಲ್ಲಿ ರೈತನು ಬಿತ್ತಿರುವ ಒಂದು ಹಿಡಿಬೀಜವನ್ನು ಭೂಮಾತೆ ತನ್ನ ಹೊಟ್ಟೆಯಲ್ಲಿ ಗೂಢವಾಗಿ ಧರಿಸಿರುವಂತೆ ಆ ರಾಜಮಾತೆ ತನ್ನ ವಂಶದ ಗರ್ಭವನ್ನು ತನ್ನ ಉದರದಲ್ಲಿ ತಳೆದಿದ್ದಳು. ಅವಳ ಪ್ರಸವಸಮಯವನ್ನು ಪ್ರಜೆಗಳು ಅತ್ಯಂತ ಕುತೂಹಲದಿಂದ ನಿರೀಕ್ಷಿಸುತ್ತಿದ್ದರು. ಅವರು ಗರ್ಭಫಲದ ಬಗ್ಗೆ ಚಿಂತಿತರಾಗಿದ್ದರು.

ಪ್ರಸವೋ = ಗರ್ಭಮೋಚನಮ್—"ಸ್ಯಾದುತ್ಪಾದೇ ಫಲೇ ಪುಷ್ಪೇ ಪ್ರಸವೋ ಗರ್ಭಮೋಚನೇ—" ಇತ್ಯಮರಃ—"ಭಾವೋ ಲೀಲಾಕ್ರಿಯಾಚೇಷ್ಟಾ ಭೂತ್ಯಭಿಪ್ರಾಯಜಂತುಷು" ಇತಿ ಯಾದವಃ—ಕ್ಷಿತಿರಂತರ್ಗೂಢಂ ನಭೋಬೀಜಮುಷ್ಟಿಮಿವ—ಶ್ರಾವಣಮಾಸ್ಯುಪ್ತೋ ಬೀಜಮುಷ್ಟಿರಿತಿ ಭಾವಃ—ಮುಷ್ಟಿಶಬ್ದೋ ದ್ವಿಲಿಂಗಃ—"ಅಕ್ಲೀಬೌ ಮುಷ್ಟಿಮುಸ್ತಕೌ" ಇತಿ ಯಾದವಃ—ಅಂತರ್ಗೂಢಮಂತರ್ಗತಂ—ಗರ್ಭಂ ದಧಾನಾ

ಹೇಮಸಿಂಹಾಸನಸ್ಥಾ ಽವ್ಯಾಹತಾಜ್ಞಾ ರಾಜ್ಞೀ ಮೌಲ್ಯೈರ್ಮೂಲೇ ಭವ್ಯೈರ್ಮೂಲಾದಾ
ಗತ್ಯೈರ್ವಾ ಸ್ಥವಿರಸಚಿವ್ಯೈರ್ವೃದ್ಧಾಮಾತ್ಯೈಃ ಸಾರ್ಧಂ ಭರ್ತೂರಾಜ್ಯಂ ವಿಧಿವದ್ವಿ
ಧ್ಯೆರ್ಹವನ್। ಆಶಿಷಟ್ಬಾಸ್ತಿ ಸ್ಮ॥

ಇತಿ ಮಹಾಕವಿ ಶ್ರೀ ಕಾಳಿದಾಸ ವಿರಚಿತ
॥ "ರಘುವಂಶ" ಮಹಾಕಾವ್ಯ ಸಮಾಪ್ತಮ್ ॥

ಇದುಸಕಲ ಭುವನಾಧೀಶ, ಭೂವೈಕುಂಠವೆನಿಪ ಉಡುಪಿಕ್ಷೇತ್ರಾಧೀಶ ಶ್ರೀಕೃಷ್ಣ ಪರಮಾತ್ಮನ ಶ್ರೀಪಾದಕಮಲಗಳನ್ನು ನಿತ್ಯವೂ, ಭಕ್ತಿ, ಜ್ಞಾನ, ವೈರಾಗ್ಯದಿಂದ ಆರಾಧಿಸುವ ಸಕಲವೇದಶಾಸ್ತ್ರಪಾರಾವಾರ "ಅದ್ವೈತವೇದಾಂತಿ", "ಖಂಡಿತವಾದಿ" ಬಿರುದಾಂಕಿತ ದಕ್ಷಿಣ ಕನ್ನಡ ಜಿಲ್ಲಾ, ಬಂಟ್ವಾಳ ತಾಲೂಕು ಪಾಣೆಮಂಗಳೂರು ಹೋಬಳಿ ನಿವಾಸಿಯಾಗಿರ್ದ ನಂದಾವರ, ವೇದಬ್ರಹ್ಮ ಶ್ರೀ ಬಾಬುರಾಯರ ತನುಜಾತ, ಮಹಾ ಸಾಧ್ವಿ, ಪತಿವ್ರತೆ, ನಖಶಿಖಾಂತ ನಯವಿನಯ, ಸೌಹಾರ್ದ, ಔದಾರ್ಯ, ಸೌಶೀಲ್ಯ, ಸೌಜನ್ಯಾದಿ ಗುಣವಿಭೂಷಿತೆ, ಪವಿತ್ರಾತ್ಮೆ, ಕುಟುಂಬಸೇವಾದುರಂಧರೆ, ಸಕಲಭಾಗ್ಯಶ್ರೀ ವಿರಾಜಿತೆ, ಮಹಾಸತಿ,ಶ್ರೀಮತಿ ಗೌರಮ್ಮಾಂಬಿಕೆಯು ಗರ್ಭಸಂಜಾತ,ಕಾಶ್ಯಪಗೋತ್ರಭವ, ಸಂಸ್ಕೃತಭಾಷಾಭೂಷಣ, ವ್ಯಾಕರಣಶಾಸ್ತ್ರವಿಚಕ್ಷಣ, ಪದವಾಕ್ಯಪಾರಾವಾರ, ಕನ್ನಡ ಶಬ್ದಸಾಗರಬಿರುದಾಂಕಿತ (ಮಂಗಳೂರು ಮಹಾನಗರ) ಬೋಳಾರ ಗೋಪಾಲರಾಯ ಚೂಡಾಮಣಿ ವಿರಚಿತ, ಕಾಳಿದಾಸ ಪ್ರಣೀತ ಶ್ರೀ ರಘುವಂಶ ಮಹಾಕಾವ್ಯವೆಂಬ "ರಘುವಂಶಹೃದಯಕೌಸ್ತುಭ" (ಹೃದಯಸೌರಭ, ಹೃದಯಪ್ರಕಾಶಿನಿ) ಎಂಬಸಮಗ್ರ ಗದ್ಯವ್ಯಾಖ್ಯಾನ ಗ್ರಂಥವನ್ನು ಶ್ರೀಶಾರದೆಯು ಕರುಣದಿಂದ ಬರೆದು, ಕರ್ನಾಟಕ ಮಾತೆಯು ಚರಣಕಮಲಗಳಿಗೆ ಅರ್ಪಿಸಿ, ಯಶಸ್ವಿಯಾಗಲೆಂದು, ಸ್ತುತಿಸಿ, ಧ್ಯಾನಿಸಿ, ಪ್ರಾರ್ಥಿಸಿ, ಸಮಸ್ತ ಕನ್ನಡಿಗರ (ನಾಲ್ಕು ಕೋಟಿ ಕನ್ನಡಿಗರ) ಮುಂದಿಡುತ್ತಿರುವೆನು.

"ಶ್ರೀ ಕೃಷ್ಣಾರ್ಪಣಮಸ್ತು"

ವಿಶ್ವಮಾನವ ಸಂದೇಶಃ

"ಕೃಣ್ವಂತೋ ವಿಶ್ವಮಾರ್ಯಂ"

॥ ಮಾನವ ಕುಲಂ ಒಂದೇ ವಲಂ ॥

॥ ಓ ನನ್ನ ಚೇತನ ಆಗು ನೀ ಸನಾತನ ॥

॥ ಸಂಪೂರ್ಣಂ ॥

॥ ಧರ್ಮಕ್ಷೇತ್ರೇ ಕುರುಕ್ಷೇತ್ರೇ = ಕ್ಷೇತ್ರೇಕ್ಷೇತ್ರೇ ಕುರು ಧರ್ಮಂ ॥

—ಗೀತಾ

॥ ಭದ್ರಂ ಶುಭಂ ಮಂಗಳಂ ॥

—ಸಮಾಪ್ತಿ—